# ಸಾಹಿತ್ಯದರ್ಪಣ

[ವಿಶ್ವನಾಥಕವಿರಾಜನಸಂಸ್ಕೃತಗ್ರಂಥದ ಅನುವಾದ]

ಲೇಖಕ :

ಡಾ|| ಟಿ. ಜಿ. ಸಿದ್ಧಪ್ಪಾರಾಧ್ಯ, ಎಂ. ಎ., ಪಿಎಚ್. ಡಿ.
ಸಂಸ್ಕೃತಾಧ್ಯಾಪಕ
ಮಾನಸಗಂಗೋತ್ರಿ, ಮೈಸೂರು.



ಮುದ್ರಕರು :

ಹೇಮಾ ಪ್ರಿಂಟರ್ಸ್,
ರಾಮಾನುಜಾರೋಡ್, ಮೈಸೂರು.

# ಸಾಹಿತ್ಯದರ್ಪಣ

(ವಿಶ್ವನಾಥಕವಿರಾಜನ ಸಂಸ್ಕೃತಗ್ರಂಥದ ಅನುವಾದ)


ಅನುವಾದಕ :

ಡಾ|| ಟಿ ಜಿ ಸಿದ್ಧಪ್ಪಾರಾಧ್ಯ, ಎಂ.ಎ., ಪಿಎಚ್.ಡಿ.

ಸಂಸ್ಕೃತಾಧ್ಯಾಪಕ

ಮಾನಸಗಂಗೋತ್ರಿ, ಮೈಸೂರು.



ಬೆಲೆ : ೧೦ ರೂ.

# ವಿಷಯಾನುಕ್ರಮಣಿಕೆ

# ಭೂಮಿಕೆ

---

ಮಹಾಕವಿ, ಕವಿರಾಜ ಎಂದು ಮುಂತಾದ ಬಿರುದುಗಳನ್ನು ಪಡೆದು ಸುಪ್ರಸಿದ್ಧನೆನಿಸಿದ ವಿಶ್ವನಾಥನ ಜಾತಿ ಕಾಲಗಳನ್ನು ತಿಳಿಯಲು ಸಾಕಷ್ಟು ಸ್ಪಷ್ಟವಾದ ಪ್ರಮಾಣಗಳು ಸಿಕ್ಕಿಲ್ಲ. ಆದರೂ ಅವನ ಬಗ್ಗೆ ತಿಳಿಯಲು ಅಷ್ಟು ಹೆಚ್ಚು ಕಷ್ಟವಿರುವಂತೆ ಕಾಣುವುದಿಲ್ಲ. ಸಾಹಿತ್ಯದರ್ಪಣದ ಹಸ್ತಲಿಖಿತಪ್ರತಿ ಒಂದರಲ್ಲಿ ಪ್ರಥಮ ಪರಿಚ್ಛೇದದಲ್ಲಿ 'ಅತ್ರ ಹಿ ವಿಭಾವನಾವಿಶೇಷೋಕ್ತಿಮೂಲಸ್ಯ ಸಂದೇಹಸಂಕರಾಲಂಕಾರಸ್ಯ ಸ್ಫುಟತ್ವಂ' ಎಂಬ ಪಂಕ್ತಿಯ ಬದಲು 'ಅತ್ರ ಜಯಂತಭಟ್ಟೇನೋಕ್ತಂ' ಎಂಬ ಹೆಚ್ಚಿನ ಪಾಠವು ಕಂಡುಬಂದಿದೆ. ಈ ಜಯಂತಭಟ್ಟನು ಕ್ರಿ. ಶ. ೧೨೯೪ ರಲ್ಲಿ ಕಾವ್ಯಪ್ರಕಾಶಕ್ಕೆ ದೀಪಿಕೆ ಎಂಬ ಟೀಕೆಯೊಂದನ್ನು ಬರೆದು ಮುಗಿಸಿದನೆಂದು ತಿಳಿದು ಬಂದಿದೆ. ಹೀಗೆ ಇವನು ತನ್ನ ಗ್ರಂಥದಲ್ಲಿ ಜಯಂತಭಟ್ಟನ ವಿಚಾರದಲ್ಲಿ ಹೇಳಿರುವಂತೆಯೇ ಅಲ್ಲಾಉದ್ದೀನನ ವಿಚಾರದಲ್ಲೂ ಹೇಳಿಕೊಂಡಿರುವನು.

> ಸಂಧೌ ಸರ್ವಸ್ವಹರಣಂ ವಿಗ್ರಹೇ ಪ್ರಾಣನಿಗ್ರಹಃ ।
> ಅಲ್ಲಾಉದ್ದೀನನೃಪತೌ ನ ಸಂಧಿರ್ನ ಚ ವಿಗ್ರಹಃ ॥

ಈ ಅಲ್ಲಾಉದ್ದೀನನು ಪ್ರಖ್ಯಾತನಾದ ಖಿಲ್ಜಿವಂಶಕ್ಕೆ ಸೇರಿದವನೆಂದು ಇತಿಹಾಸದಿಂದ ತಿಳಿದುಬರುತ್ತದೆ. ಇವನು ಕ್ರಿ. ಶ. ೧೩೧೬ ರಲ್ಲಿ ಸತ್ತುಹೋದನು. ಇದಲ್ಲದೆ ಗೋವಿಂದಠಾಕುರನೆಂಬುವನು ಕ್ರಿ. ಶ. ೧೫ನೇ ಶತಮಾನದ ಪೂರ್ವಾರ್ಧದಲ್ಲಿ ಬರೆದಿರುವ ಕಾವ್ಯಪ್ರದೀಪವೆಂಬ ಗ್ರಂಥದಲ್ಲಿ ಇವನ ವಿಚಾರವಾಗಿ ಬರೆದಿರುವನು. 'ತದದೋಷೌ ಶಬ್ದಾರ್ಥೌ' ಎಂಬ ಕಾರಿಕೆಯನ್ನು ವ್ಯಾಖ್ಯಾನ ಮಾಡುವಾಗ ಅವನು 'ಅವಾಂತರಂ ತು' ಎಂಬಲ್ಲಿ ದರ್ಪಣಕಾರನ ಮತವನ್ನು ಉದ್ಧರಿಸಿರುವನು. ಇದರಿಂದಲೂ, ಸಾಹಿತ್ಯದರ್ಪಣದಲ್ಲಿ ಅಲ್ಲಾಉದ್ದೀನರಾಜನ ಬಗ್ಗೆ ಸ್ಪಷ್ಟವಾದ ಹೇಳಿಕೆ ಬಂದಿರುವುದರಿಂದಲೂ ವಿಶ್ವನಾಥನ ಕಾಲವು ಕ್ರಿ. ಶ. ೧೪ನೇ ಶತಮಾನದ ಕೊನೆ ಇರಬೇಕೆಂದು ತೋರುತ್ತದೆ.

ಮೊದಲನೆಯ ಮತ್ತು ಹತ್ತನೆಯ ಪರಿಚ್ಛೇದಗಳ ಕೊನೆಯಲ್ಲಿ ಸಾಹಿತ್ಯಾರ್ಣವಕರ್ಣಧಾರ, ಧ್ವನಿಪ್ರಸ್ಥಾಪನಪರಮಾಚಾರ್ಯ, ಕವಿಸೂಕ್ತಿರತ್ನಾಕರ, ಅಷ್ಟಾದಶಭಾಷಾವಾರವಿಲಾಸಿನೀಭುಜಂಗ, ಸಾಂಧಿವಿಗ್ರಹಿಕ, ಮಹಾಪಾತ್ರ ಎಂಬ ಬಿರುದುಗಳು ವಿಶ್ವನಾಥನಿಗೆ ಇದ್ದುವೆಂದು ಹೇಳಿರುವುದರಿಂದ ಇವನು ಯಾವನೋ ಒಬ್ಬ ರಾಜನ ಆಶ್ರಯದಲ್ಲಿ ಮಂತ್ರಿಸ್ಥಾನವನ್ನು ಅಲಂಕರಿಸಿದ್ದನೆಂದು ತಿಳಿದುಬರುವುದು. ಆಚಾರ್ಯನೆಂಬ ವಿಶೇಷಣದಿಂದ ಇವನು ಬ್ರಾಹ್ಮಣವಂಶಕ್ಕೆ ಸೇರಿದ್ದನೆಂದು ಕಂಡುಬರುವುದು. ಸಂಧಿವಿಗ್ರಹಗಳನ್ನು ನಿರ್ಣಯಿಸುವ ಅಧಿಕಾರದಲ್ಲಿ ಬ್ರಾಹ್ಮಣನನ್ನೇ ರಾಜನು ನೇಮಿಸುವನೆಂದು ದೇವಲ, ಮನು, ನಾರದಸ್ಮೃತಿಗಳು ತಿಳಿಸುವೆ. ಇವನು ಸಾಹಿತ್ಯ

ಸಾಗರದಲ್ಲಿ ಓಡಾಡಲು ವಿಮರ್ಶಕರಿಗೆ ಹಡಗಿನಂತೆ ಸಹಾಯಕನಾಗಿದ್ದನೆಂಬ ಅಂಶವು ಸಾಹಿತ್ಯದರ್ಪಣದಿಂದಲೇ ಸ್ಪಷ್ಟಪಡುವುದು. ಇವನು ಧ್ವನಿಪ್ರಸ್ಥಾನವನ್ನು ಎತ್ತಿ ಹಿಡಿದು ಧ್ವನಿಕಾರನ ಮತವನ್ನು ಪೂರ್ಣವಾಗಿ ಗೌರವಿಸಿ ಪ್ರಶಂಸಿಸಿರುವುದರಿಂದ ಇವನಿಗೆ ಧ್ವನಿಪ್ರಸ್ಥಾಪನಪರಮಾಚಾರ್ಯನೆಂಬ ಹೆಸರು ಅನ್ವರ್ಥವೆನಿಸಿದೆ. ಹಾಗೆಯೇ ಕವಿಸೂಕ್ತಿರತ್ನಾಕರ ಎಂಬ ವಿಶೇಷಣವೂ ಸಾರ್ಥಕವೆನಿಸಿ ಇವರಿಗೆ ಅನ್ವಯಿಸುತ್ತದೆ. ಕವಿಗಳ ಅಮೃತವಾಕ್ಯಗಳಿಗೆ ಸಾಹಿತ್ಯದರ್ಪಣವು ಸಮುದ್ರದಂತೆ ಘನಗಂಭೀರವಾದ ಆದರ್ಶವೆನಿಸಿದೆ. ಹದಿನೆಂಟು ಭಾಷೆಗಳಲ್ಲಿ ಇವನು ಚೆನ್ನಾಗಿ ಪಳಗಿದ್ದು ಅವುಗಳ ಸೌಂದರ್ಯವನ್ನು ಸೂಕ್ಷ್ಮದೃಷ್ಟಿಯಿಂದ ಅರಿತು ಅವೆಲ್ಲದರಲ್ಲೂ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಲು ಸಮರ್ಥನಾಗಿದ್ದುದರಿಂದ ಇವನಿಗೆ ಅಷ್ಟಾದಶಭಾಷಾವಾರವಿಲಾಸಿನೀಭುಜಂಗ ಎಂಬ ವಿಶೇಷಣವು ಸೊಗಸಾಗಿ ಅನ್ವಯಿಸುತ್ತದೆ. ಸಾಂಧಿವಿಗ್ರಹಿಕ, ಮಹಾಪಾತ್ರ ಎಂಬ ವಿಶೇಷಣಗಳಿಂದ ಇವನು ರಾಜಕಾರ್ಯಧುರೀಣನೆಂದೂ, ಸಂಧಿವಿಗ್ರಹಗಳ ವ್ಯವಸ್ಥಾಪಕನಾಗಿದ್ದನೆಂದೂ, ದಾನವೇ ಮೊದಲಾದ ಷಡ್ವರ್ಗಗಳಿಗೆ ಸತ್ಪಾತ್ರನಾಗಿದ್ದನೆಂದೂ ತಿಳಿದುಬರುತ್ತದೆ. 'ಶ್ರೀಮನ್ನಾರಾಯಣಚರಣಾರವಿಂದಮಧುವ್ರತ' ಎಂಬ ವಿಶೇಷಣದಿಂದ ಇವನು ನಾರಾಯಣನೆಂಬ ಮಹಾಗುರುವಿನ ಶಿಷ್ಯನಾಗಿದ್ದನೆಂದೂ, ಅವನ ಪಾದಸೇವೆಯಲ್ಲಿ ದುಂಬಿಯಂತೆ ಅನನ್ಯಭಕ್ತಿಯಿಂದ ನಿರತನಾಗಿದ್ದನೆಂದೂ, ಅವನ ಕೃಪಾಸ್ಪದನಾದುದರಿಂದ ತಾನು ಉತ್ತಮವಾದ ಸಾಹಿತ್ಯಸೇವೆಯನ್ನು ಸಲ್ಲಿಸಿರುವನೆಂದೂ ತಿಳಿದುಬರುತ್ತದೆ.

ಸಾಹಿತ್ಯದರ್ಪಣದ ಹತ್ತನೆಯ ಪರಿಚ್ಛೇದದ ಕೊನೆಯಲ್ಲಿ ಇವನು ತನ್ನ ಬಗ್ಗೆ ಮುಂದೆ ತಿಳಿಸಿರುವ ರೀತಿಯಲ್ಲಿ ಹೇಳಿಕೊಂಡಿದ್ದಾನೆ.

ಶ್ರೀಚಂದ್ರಶೇಖರಮಹಾಕವಿಚಂದ್ರಸೂನು—
ಶ್ರೀವಿಶ್ವನಾಥಕವಿರಾಜಕೃತಂ ಪ್ರಬಂಧಮ್ ।
ಸಾಹಿತ್ಯದರ್ಪಣಮಮುಂ ಸುಧಿಯೋ ವಿಲೋಕ್ಯ
ಸಾಹಿತ್ಯತತ್ತ್ವಮಖಿಲಂ ಸುಖಮೇವ ವಿತ್ತ ॥

"ಎಲೈ ಪಂಡಿತರೇ! ನೀವು ಚಂದ್ರಶೇಖರನೆಂಬ ಮಹಾಕವಿಶ್ರೇಷ್ಠನ ಮಗನಾದ ವಿಶ್ವನಾಥನೆಂಬ ಕವಿರಾಜನು ರಚಿಸಿರುವ ಸಾಹಿತ್ಯದರ್ಪಣವೆಂಬ ಪ್ರಬಂಧವನ್ನು ಆಮೂಲಾಗ್ರವಾಗಿ ಪರಿಶೀಲಿಸಿ ಇದರಿಂದ ಕಾವ್ಯದ ಸಮಗ್ರಸ್ವರೂಪವನ್ನು ಸ್ಪಷ್ಟವಾಗಿ ತಿಳಿದು ಸುಖಿಸಿ" ಎಂದು ಹೇಳಿಕೊಂಡಿರುವನು. ಇದರಿಂದ ಕಾವ್ಯದಲ್ಲಿ ತಿಳಿಯಬೇಕಾದ ವಿಷಯಗಳೆಲ್ಲವೂ ಸಾಹಿತ್ಯದರ್ಪಣದಲ್ಲಿ ಅಡಕವಾಗಿವೆ ಎಂಬ ಅಂಶವು ಸ್ಪಷ್ಟಪಡುವುದು. ಇದು ಎಲ್ಲಾ ವಿಷಯಗಳನ್ನೊಳಗೊಂಡಿರುವ ಪ್ರಯುಕ್ತ ಬೇರೆ ಎಲ್ಲಾ ಅಲಂಕಾರಿಕಗ್ರಂಥಗಳಿಗಿಂತಲೂ ಅತಿಶ್ರೇಷ್ಠವಾದುದೆಂಬ ಅಂಶವು ಮನವರಿಕೆಯಾಗುವುದು. ಒಂದು ಗ್ರಂಥವು ನಿಜವಾಗಿಯೂ ಸ್ವಾರಸ್ಯವಾಗಿದ್ದು ಎಲ್ಲಾ ಅಂಶಗಳಿಂದೊಡಗೂಡಿ ಪೂರ್ಣವಾಗಿದ್ದರೆ ಆ ಬಗೆಯ ಗ್ರಂಥಗಳ ಇತಿಹಾಸದಲ್ಲಿ ಅದರ

ಸ್ಥಾನವನ್ನು ಗ್ರಂಥಕರ್ತನೇ ತಿಳಿಸುವುದು ಸೂಕ್ತವೆನಿಸುತ್ತದೆ. ಆದ್ದರಿಂದ ಅಷ್ಟೊಂದು ಆತ್ಮವಿಶ್ವಾಸದಿಂದ ವಿಶ್ವನಾಥನು ತನ್ನ ಕೃತಿಯ ಪೂರ್ಣತೆಯನ್ನು ಇಲ್ಲಿ ತಿಳಿಸಿದ್ದು ಯುಕ್ತವೆನಿಸಿದೆ. ವಿಶ್ವನಾಥನು ತನ್ನ ಕೃತಿಯನ್ನು ಹೀಗೆ ಪ್ರಶಂಸಿರುವನು.

ಯಾವತ್ಪ್ರಸನ್ನೇಂದುನಿಭಾನನಾ ಶ್ರೀರ್ನಾರಾಯಣಸ್ಯಾಂಗಮಲಂಕರೋತಿ ।
ತಾವನ್ಮನಃ ಸಂಮದಯನ್ಕವೀನಾಮೇಷ ಪ್ರಬಂಧಃ ಪ್ರಥೀತೋಽಸ್ತು ಲೋಕೇ ॥

ತನ್ನ ಗ್ರಂಥವು ಚಿರಸ್ಥಾಯಿಯಾಗಿರಲೆಂದು ಕವಿರಾಜನು ಪ್ರಾರ್ಥಿಸುತ್ತಾನೆ. "ನಿರ್ಮಲಚಂದ್ರನಂತೆ ಮುಖವುಳ್ಳ ಲಕ್ಷ್ಮಿಯು ನಾರಾಯಣನಲ್ಲಿ ನೆಲೆಸಿ ಎಲ್ಲಿಯವರೆಗೆ ಶೋಭಿಸುತ್ತಿರುವಳೋ ಅಲ್ಲಿಯವರೆಗೂ ಸಾಹಿತ್ಯದರ್ಪಣವು ಕವಿಗಳಿಗೆ ತಿಳಿಯಬೇಕಾದ ವಿಷಯವನ್ನು ತಿಳಿಸುತ್ತಲೇ ಲೋಕದಲ್ಲಿ ಶೋಭಿಸಲಿ" ನಾರಾಯಣನಿಗೆ ಲಕ್ಷ್ಮಿಯನ್ನು ಕಂಡರೆ ಎಷ್ಟು ಸಂತೋಷವಾಗುವುದೋ ಅಷ್ಟೇ ಸಂತೋಷವನ್ನು ಕವಿಗಳು ಸಾಹಿತ್ಯದರ್ಪಣದಿಂದ ಅನುಭವಿಸುವರೆಂದು ಇದರಿಂದ ತಿಳಿಯುತ್ತದೆ.

ಇವನು ಸಾಹಿತ್ಯದರ್ಪಣ, ರಾಘವವಿಲಾಸ, ಚಂದ್ರಕಲಾನಾಟಿಕೆ, ಕುವಲಯಾಶ್ವಚರಿತ, ಪ್ರಶಸ್ತಿರತ್ನಾವಳೀ, ನೃಸಿಂಹವಿಜಯ ಇಷ್ಟನ್ನು ಬರೆದಿರುವನು. ಇವುಗಳಲ್ಲಿ ಸಾಹಿತ್ಯದರ್ಪಣವು ಸರ್ವಾಲಂಕಾರಗ್ರಂಥಗಳಿಗಿಂತಲೂ ಉತ್ತಮವಾದ ಪ್ರಮಾಣ ಗ್ರಂಥವೆನಿಸಿದ್ದು ಸಾಹಿತ್ಯಜಿಜ್ಞಾಸುಗಳಿಗೆ ಅತ್ಯಂತ ಉಪಯುಕ್ತವಾಗಿದೆ. ಇದರಲ್ಲಿ ಕಾವ್ಯರಚನೆಗೂ, ಕಾವ್ಯದ ಆಸ್ವಾದನೆಗೂ ಆವಶ್ಯಕವಾದ ಅಂಗಗಳೆಲ್ಲವೂ ಅಡಗಿವೆ. ಕಾವ್ಯಸ್ವರೂಪವನ್ನು ನಿರೂಪಿಸುವುದರಿಂದ ಆರಂಭವಾಗಿ ಗ್ರಂಥವು ಶಬ್ದಾರ್ಥಾಲಂಕಾರಗಳ ವಿವೇಚನೆಯಿಂದ ಕೊನೆಗಾಣುತ್ತದೆ. ಕಾವ್ಯವೆಂದರೆ ಶಬ್ದವೇ? ಅರ್ಥವೇ? ಅಥವಾ ಶಬ್ದಾರ್ಥಗಳೆರಡೂ ಸೇರಿ ಕಾವ್ಯವೆನಿಸುತ್ತವೆಯೇ? ಎಂಬ ಚರ್ಚೆ ಪ್ರಥಮ ಪರಿಚ್ಛೇದದಲ್ಲಿ ಸ್ವಾರಸ್ಯವಾಗಿ ಬಂದಿದೆ. ಆ ಬಗ್ಗೆ ಸಾಕಷ್ಟು ಚರ್ಚೆ ನಡೆದು ರಸಾತ್ಮಕವಾದ ವಾಕ್ಯವೇ ಕಾವ್ಯವೆಂದು ನಿರ್ಣಯವಾಗಿದೆ. ಅಲ್ಲಿಂದ ಮುಂದೆ ವಾಕ್ಯದ ಸ್ವರೂಪವನ್ನು ವಿವೇಚಿಸಲಾಗಿದೆ. ಆ ವಾಕ್ಯದಲ್ಲಿ ರಸವು ಹೇಗೆ ಅಭಿವ್ಯಕ್ತವಾಗುತ್ತದೆಂಬುದನ್ನು ಮುಂದೆ ಕೂಲಂಕಷವಾಗಿ ನಿರೂಪಿಸಲಾಗಿದೆ. ಅಲ್ಲಿಂದ ಮುಂದೆ ಕಾವ್ಯದಲ್ಲಿ ಎಷ್ಟು ಬಗೆಗಳಿವೆ ಎಂಬುದನ್ನು ತಿಳಿಸಿ ಉತ್ತಮಕಾವ್ಯವೆನಿಸಲು ಆವಶ್ಯಕವೆನಿಸಿದ ವ್ಯಂಜನಾವೃತ್ತಿಯನ್ನು ಸ್ಥಾಪಿಸಿ ಅದರ ಪ್ರಯೋಜನವನ್ನು ನಿರೂಪಿಸಲಾಗಿದೆ. ಅಲ್ಲಿಂದ ಮುಂದೆ ಆರನೆಯ ಪರಿಚ್ಛೇದದಲ್ಲಿ ದೃಶ್ಯಶ್ರವ್ಯಕಾವ್ಯಗಳ ಸ್ವರೂಪವನ್ನು ಅವುಗಳ ವಿಭಾಗದೊಡನೆ ಬಿಡಿಸಿ ಕೂಲಂಕಷವಾಗಿ ತಿಳಿಸಲಾಗಿದೆ. ಮುಂದೆ ದೋಷಗಳ ಸ್ವರೂಪವನ್ನು ತಿಳಿಸಿ ಕಾವ್ಯದಲ್ಲಿ ಗುಣಗಳ ಸ್ಥಾನಮಾನವನ್ನು ವಿವೇಚಿಸಲಾಗಿದೆ. ಈ ಬಗೆಯ ಗುಣಗಳಿಗಾಶ್ರಯವಾದ ಕಾವ್ಯಶೈಲಿ ಹೇಗಿರಬೇಕೆಂಬುದನ್ನು ನವಮಪರಿಚ್ಛೇದದಲ್ಲೂ, ಶಬ್ದಾರ್ಥಾಲಂಕಾರಗಳು ಹೇಗೆ-ವಾಕ್ಯವನ್ನು ಅಲಂಕರಿಸಬೇಕೆಂಬುದನ್ನು ಕೊನೆಯ ಪರಿಚ್ಛೇದದಲ್ಲೂ ಸ್ಪಷ್ಟಪಡಿಸಲಾಗಿದೆ.

ಹೀಗೆ ಸಾಹಿತ್ಯಕ್ಷೇತ್ರಕ್ಕೆ ಸಂಬಂಧಿಸಿದ ಯಾವ ವಿಷಯವನ್ನೂ ಕೊಂಚವೂ ಬಿಡದೆ ಎಲ್ಲವನ್ನೂ ಸೂಕ್ತವಾಗಿ ಯುಕ್ತರೀತಿಯಲ್ಲಿ ಸೇರಿಸಿರುವುದರಿಂದ ಸಾಹಿತ್ಯ ದರ್ಪಣವು ಜಿಜ್ಞಾಸುಗಳಿಗೆ ದರ್ಪಣದಂತೆ ಮಾರ್ಗದರ್ಶಕವೆನಿಸಿದೆ. ದರ್ಪಣವನ್ನು ನೋಡಿದವನಿಗೆ ತನ್ನ ಸೌಂದರ್ಯದಲ್ಲಿ ವಿಶ್ವಾಸವು ಹುಟ್ಟುತ್ತದೆ. ಅಂತವನು ಎಲ್ಲರಲ್ಲೂ ವ್ಯವಸ್ಥೆಯಿಂದಲೂ ನೆಮ್ಮದಿಯಿಂದಲೂ ವ್ಯವಹರಿಸಬಲ್ಲನು. ಕನ್ನಡಿಯನ್ನು ನೋಡದೆ ಮನೆಯಿಂದ ಹೊರಗೆ ಹೊರಟವನು ತನ್ನ ಮುಖವು ಹೇಗಿದೆಯೋ ಎಂದು ಸಂಶಯ ಪಡುತ್ತ ಜನರೊಡನೆ ಮಾತನಾಡುವಾಗ ಅಧೈರ್ಯದಿಂದ ಹಿಂದಕ್ಕೆ ಸರಿಯುವನು. ಅವನಿಗೆ ವ್ಯವಹಾರದಲ್ಲಿ ನೈಪುಣ್ಯವೂ, ಉತ್ಸಾಹವೂ ಸಹಜವಾಗಿ ತೊಲಗುತ್ತವೆ. ಹಾಗೆ ಸಾಹಿತ್ಯದರ್ಪಣವನ್ನು ನೋಡದೆ ವ್ಯವಹರಿಸುವ ಜಿಜ್ಞಾಸುಗಳಿಗೆ ಕಾವ್ಯದ ಸೌಷ್ಟ ಗಳನ್ನು ಒಡಿಸಲು ಅವಕಾಶ, ಸೌಲಭ್ಯಗಳು ದೊರೆಯದೇ ಆ ಕಡೆಗೂ ಈ ಕಡೆಗೂ ಅವ್ಯವಸ್ಥೆಯಿಂದ ಓಲಾಡುತ್ತ, ಸಂದೇಹಪ್ರವೃತ್ತಿಯು ಹೆಚ್ಚುವುದು. ಕೆಲವು ಅಲಂಕಾ ರಿಕಗ್ರಂಥಗಳಲ್ಲಿ ಅಲಂಕಾರಶಾಸ್ತ್ರದ ಕೆಲಕೆಲವು ಸಮಸ್ಯೆಗಳ ವಿವೇಚನ ಮಾತ್ರವೇ ಬಂದಿರುವುದರಿಂದ ಅಲ್ಲಿ ಎಲ್ಲದರ ವಿವೇಚನೆಯೂ ದೊರೆಯುವಂತಿಲ್ಲ. ಎಷ್ಟೋ ಗ್ರಂಥ ಗಳಲ್ಲಿ ದೃಶ್ಯಕಾವ್ಯಗಳ ಬಗ್ಗೆ ವಿವೇಚನೆಯೇ ಇರುವುದಿಲ್ಲ. ಕೆಲವುಕಡೆ ವ್ಯಂಜನಾ ವ್ಯಾಪಾರದ ಬಗ್ಗೆ ಸಾಕಷ್ಟು ಸ್ಥಾಪನೆಯೇ ಬಂದಿರುವುದಿಲ್ಲ. ಕೆಲವು ಗ್ರಂಥಗಳಲ್ಲಿ ಕೇವಲ ಅಲಂಕಾರಗಳ ವಿವೇಚನೆಮಾತ್ರವೇ ಬಂದಿದ್ದು ಇತರ ವಿಷಯಗಳೇ ಇರುವುದಿಲ್ಲ. ಸಾಹಿತ್ಯದರ್ಪಣದಲ್ಲಾದರೋ ಯಾವುದನ್ನೂ ಬಿಟ್ಟಿಲ್ಲ. ಇಲ್ಲಿ ಇರುವ ವಿಷಯಗಳ್ ಎಲ್ಲಾ ಗ್ರಂಥಗಳಲ್ಲೂ ಒಟ್ಟಿಗೆ ಇಲ್ಲದಿದ್ದರೂ ಬೇರೆ ಬೇರೆಯಾಗಿಯಾದರೂ ಬಂದಿವೆ. ಇಲ್ಲಿ ಇಲ್ಲದ ವಿಷಯಗಳು ಬೇರೆ ಎಲ್ಲಿಯೂ ಬಂದಿಲ್ಲ. ಹೀಗೆ ಇರುವುದರಿಂದಲೇ ಕವಿರಾಜನು ಸಾಹಿತ್ಯದರ್ಪಣವನ್ನು ಪರಿಪೂರ್ಣವಾದ ಆಲಂಕಾರಿಕಗ್ರಂಥವೆಂದು ವಿಶ್ವಾಸದಿಂದ ಹೇಳಿಕೊಂಡಿರುವನು.

## ಕೃತಜ್ಞತಾನಿವೇದನ

ಸಾಹಿತ್ಯದರ್ಪಣವೆಂಬ ಮಹಾಗ್ರಂಥವನ್ನು ಅನುವಾದ ಮಾಡಿ ಅದರ ಮುದ್ರಣಕ್ಕೆ ಬಹಳ ಕ್ಲೇಶಪಡುತ್ತಿರುವ ಸಮಯದಲ್ಲಿ ಹಿಂದೆ ೧೦೦ ರೂಗಳ ಉದಾರ ಸಹಾಯವನ್ನು ನೀಡಿ ಪ್ರೋತ್ಸಾಹಿಸಿದ್ದ ಶ್ರೀ ಎಚ್. ಎಸ್. ಪಾಳೆಯಗಾರ್, ಐ.ಎ.ಎಸ್. ಅವರನ್ನು ನೋಡುವ ಸದವಕಾಶವುಂಟಾಯಿತು. ಅವರು ನನ್ನ ಸಾಹಿತ್ಯ ಚಟುವಟಿಕೆಗಳನ್ನು ಕೇಳಿ ಬಹಳ ಸಂತೋಷಪಟ್ಟು ಸಾಹಿತ್ಯದರ್ಪಣದ ಮುದ್ರಣಕ್ಕೆ ೫೦೦ ರೂಗಳ ಉದಾರಸಹಾಯವನ್ನು ನೀಡಿ ಪ್ರೋತ್ಸಾಹಿಸಿರುವರು. ಅವರಿಗೆ ನನ್ನ ಹೃತ್ಪೂರ್ವಕವಾದ ಕೃತಜ್ಞತೆಯನ್ನು ಸೂಚಿಸುವ ಮೊದಲು ಅವರ ಪರಿಚಯವನ್ನು ಕನ್ನಡಜನತೆಗೆ ತಿಳಿಯಪಡಿಸುವುದು ಉಚಿತವೆಂದು ಭಾವಿಸುತ್ತೇನೆ.

ಶ್ರೀ ಎಚ್. ಎನ್. ಪಾಳೆಯಗಾರ್ ಅವರು ಮೈಸೂರು ದೇಶದ ರೆವಿನ್ಯೂ ಇಲಾಖೆಯಲ್ಲಿ ಅವಿಶ್ರಾಂತವಾಗಿ ದುಡಿದ ಆದರ್ಶ ಕರ್ಮಯೋಗಿಗಳು. ಪ್ರಾಮಾಣಿಕತೆ, ನ್ಯಾಯತತ್ಪರತೆ, ಧರ್ಮನಿಷ್ಠೆ, ಸಾತ್ತ್ವಿಕತೆ, ಸರಳತನ, ಸತ್ಯನಿಷ್ಠೆ, ಇವು ಇವರ ಜೀವನದಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿರುವ ಸದ್ಗುಣಗಳು. ಇವರು ಶಕ್ತರೂ ಭಕ್ತರೂ ಆಗಿ ಸೇವೆಯನ್ನು ಸಲ್ಲಿಸಿದ ಉತ್ತಮಾಧಿಕಾರಿಗಳು. ನಿರ್ಮಲಹೃದಯರಾದ್ದರಿಂದ ಇವರು ಯಾರಿಗೂ ಹಿಂಸೆಯನ್ನು ಮಾಡದೆ ಎಲ್ಲರ ಪ್ರೇಮಾದರಗಳಿಗೂ ಪಾತ್ರರಾಗಿರುವರು. ಶಕ್ತರಾದ್ದರಿಂದ ತಮ್ಮಲ್ಲಿಗೆ ಬಂದ ನೊಂದಜನರ ನೋವನ್ನು ಪರಿಹರಿಸಿ ಅವರಿಗೆ ಅನುಕೂಲ ಮಾಡುತ್ತಿರುವರು. ಇವರ ದಕ್ಷತೆ ಮತ್ತು ಸಾತ್ತ್ವಿಕತೆಗಳನ್ನು ನೋಡಿ ಮೈಸೂರು ಶ್ರೀಮನ್ಮಹಾರಾಜರವರು ಇವರನ್ನು ಹುಜೂರು ಸೆಕ್ರೆಟರಿಗಳನ್ನಾಗಿ ನೇಮಿಸಿಕೊಂಡರು. ಅಲ್ಲಿ ಇವರು ತಮ್ಮ ಕಾಯಕವನ್ನು ಸತ್ಯಶುದ್ಧವಾದ ರೀತಿಯಲ್ಲಿ ಪ್ರಾಮಾಣಿಕತೆಯಿಂದ ನಡೆಸಿ ಈಗ ನಿವೃತ್ತರಾಗಿರುವರು. ಇವರ ಅಧಿಕಾರದ ಅವಧಿಯಲ್ಲಿ ಮೈಸೂರು ಸಂಸ್ಕೃತ ಮಹಾಪಾಠಶಾಲೆಯ ಸಮಿತಿಯ ಅಧ್ಯಕ್ಷರಾಗಿ ಸಂಸ್ಕೃತಪಾಠಪ್ರವಚನಕ್ಕೆ ಹೆಚ್ಚಿನ ಸೌಕರ್ಯಗಳನ್ನು ಕಲ್ಪಿಸಿ ಪಂಡಿತರನ್ನು ವಿಶೇಷಸನ್ಮಾನಗಳಿಂದ ಪ್ರೋತ್ಸಾಹಿಸುತ್ತಿದ್ದರು.

ಬಿ.ಎ.ಎಸ್. ಪದವೀಧರರಾದರೂ ಇವರು ಸರಳಮನೋಭಾವದಿಂದ "ಪ್ರಜಾಹಿತೇ ಸುಖಂ ರಾಜ್ಯಂ" ಎಂಬ ಚಾಣಕ್ಯನ ಹಿತವಚನದಂತೆ ಸಾರ್ವಜನಿಕಹಿತವನ್ನೇ ತಮ್ಮ ಗಮನದಲ್ಲಿ ಇಟ್ಟುಕೊಂಡು ವ್ಯವಹರಿಸುತ್ತಿರುವರು. ಇದೇ ಇವರ ಬಾಳಿನ ಉಸಿರಾಗಿ ಪರಿಣಮಿಸಿದ್ದರಿಂದ ಇವರನ್ನು ಮೈಸೂರು ಕೃಷ್ಣರಾಜೇಂದ್ರಮಿಲ್ಲಿನಲ್ಲಿ ಉನ್ನತಾಧಿಕಾರಿಗಳನ್ನಾಗಿ ಅಲ್ಲಿನ ವ್ಯವಸ್ಥಾಪಕಮಂಡಲಿಯವರು ನೇಮಿಸಿಕೊಂಡಿರುವರು. ಅಲ್ಲಿಯೂ ಇವರು ಸೌಮ್ಯಸ್ವಭಾವದಿಂದಲೂ ನ್ಯಾಯಪ್ರಿಯತೆಯಿಂದಲೂ ದಕ್ಷತೆಯಿಂದಲೂ ಕಾರ್ಮಿಕರೊಡನೆ ಸೌಜನ್ಯಸಹಕಾರಗಳ ದಿವ್ಯಆದರ್ಶವನ್ನು ಆಚರಿಸುತ್ತ ಎಲ್ಲರ ಪ್ರೀತಿಗೌರವಗಳನ್ನು ಸಂಪಾದಿಸಿರುವರು. ಇವರನ್ನು ಕಂಡರೆ ನನಗೆ ತಂದೆಯಂತೆ ಪೂಜ್ಯಭಾವನೆ ಇದೆ. ತಂದೆಯವರು ಸಂಸ್ಕೃತಮಹಾಗ್ರಂಥಗಳ ಜ್ಞಾನಭಂಡಾರವನ್ನು ಸೋದರಸೋದರಿಯರು ತಿಳಿಯುವಂತೆ ಅನುವಾದಮಾಡಬೇಕೆಂದು ಮಾಡಿದ್ದ ಸುಗ್ರೀವಾಜ್ಞೆಯನ್ನು ಶ್ರದ್ಧೆಯಿಂದ ನಡೆಸುತ್ತಿರುವ ಕಾಲದಲ್ಲಿ ಅವರಂತೆಯೇ ಆಪ್ತರೂ ಪೂಜ್ಯರೂ ಆದ ಶ್ರೀ ಎಚ್. ಎನ್. ಪಾಳೆಯಗಾರ್ ಅವರು ನನಗೆ ದೊರೆತು ಉದಾರಸಹಾಯದಿಂದ ಪ್ರೋತ್ಸಾಹಿಸಿ ಜ್ಞಾನಯಜ್ಞವನ್ನು ಮುಂದುವರಿಸಿಕೊಟ್ಟದ್ದರಿಂದ ಅವರನ್ನು ಪೂಜ್ಯಪಿತೃವರ್ಯರಂತೆಯೇ ನಿತ್ಯವೂ ಸ್ಮರಿಸುತ್ತಿರುವೆನು. ಪರಮೇಶ್ವರನು ಅವರನ್ನೂ ಅವರ ಕುಟುಂಬವರ್ಗದವರನ್ನೂ ಸುಖವಾಗಿರಿಸಿ ಅವರಿಂದ ಇನ್ನೂ ಹೆಚ್ಚಿನ ಕಲ್ಯಾಣಕಾರ್ಯಗಳನ್ನು ಮಾಡಿಸಿಕೊಳ್ಳಲೆಂದು ಅನನ್ಯಭಕ್ತಿಯಿಂದ ಅವನಲ್ಲಿ ಪ್ರಾರ್ಥಿಸಿದ್ದೇನೆ.

ಟಿ. ಜಿ. ಸಿದ್ಧಪ್ಪಾರಾಧ್ಯ

॥ ಶ್ರೀಗುರವೇ ನಮಃ ॥

# ಸಾಹಿತ್ಯದರ್ಪಣ

## ಪ್ರಥಮಪರಿಚ್ಛೇದ

ಗ್ರಂಥಾರಂಭೇ ನಿರ್ವಿಘ್ನೇನ ಪ್ರಾರಿಪ್ಸಿತಪರಿಸಮಾಪ್ತಿಕಾಮೋ ವಾಙ್ಮಯಾಧಿಕೃತತಯಾ ವಾಗ್ದೇವತಾಯಾಃ ಸಾಮ್ಮುಖ್ಯಮಾಧತ್ತೇ—

ಶರದಿಂದುಸುಂದರರುಚಿಶ್ಚೇತಸಿ ಸಾ ಮೇ ಗಿರಾಂ ದೇವೀ ।
ಅಪಹೃತ್ಯ ತಮಃ ಸಂತತಮರ್ಥಾನಖಿಲಾನ್ ಪ್ರಕಾಶಯತು ॥

ಪ್ರಾರಂಭಿಸಿದ ಗ್ರಂಥವನ್ನು ನಿರ್ವಿಘ್ನವಾಗಿ ಮುಗಿಸುವ ಇಚ್ಛೆಯಿಂದ ಸಾಹಿತ್ಯ ಪ್ರಪಂಚದಲ್ಲಿ ಹೆಚ್ಚು ವ್ಯಾಪಿಸಿರುವ ವಾಗ್ದೇವಿಯನ್ನು ಕವಿಯು ಗ್ರಂಥಾರಂಭದಲ್ಲಿ ಸ್ತುತಿಸುತ್ತಾನೆ.

ಶರತ್ಕಾಲದ ಚಂದ್ರನಂತೆ ಸುಂದರವಾಗಿ ಶೋಭಿಸುತ್ತಿರುವ ಆ ವಾಗ್ದೇವಿಯು ನನ್ನ ಮನಸ್ಸಿನ ಅಜ್ಞಾನವನ್ನು ತೊಲಗಿಸಿ ತಿಳಿಸಬೇಕಾದ ಅಂಶಗಳೆಲ್ಲವನ್ನೂ ಪ್ರಕಾಶಗೊಳಿಸಲಿ.

ಅಸ್ಯ ಗ್ರಂಥಸ್ಯ ಕಾವ್ಯಾಂಗತಯಾ ಕಾವ್ಯಫಲೈರೇವ ಫಲವತ್ತ್ವಮಿತಿ ಕಾವ್ಯಫಲಾನ್ಯಾಹ—

ಚತುರ್ವರ್ಗಫಲಪ್ರಾಪ್ತಿಃ ಸುಖಾದಲ್ಪಧಿಯಾಮಪಿ ।
ಕಾವ್ಯಾದೇವ ಯತಸ್ತೇನ ತತ್ಸ್ವರೂಪಂ ನಿರೂಪ್ಯತೇ ॥

ಚತುರ್ವರ್ಗಫಲಪ್ರಾಪ್ತಿರ್ಹಿ ಕಾವ್ಯತೋ ರಾಮಾದಿವತ್ಪ್ರವರ್ತಿತವ್ಯಂ ನ ರಾವಣಾದಿವದಿತ್ಯಾದಿಕೃತ್ಯಾಕೃತ್ಯಪ್ರವೃತ್ತಿನಿವೃತ್ತ್ಯುಪದೇಶದ್ವಾರೇಣ ಸುಪ್ರತೀತೈವ. ಉಕ್ತಂ ಚ

ಧರ್ಮಾರ್ಥಕಾಮಮೋಕ್ಷೇಷು ವೈಚಕ್ಷಣ್ಯಂ ಕಲಾಸು ಚ ।
ಕರೋತಿ ಕೀರ್ತಿಂ ಪ್ರೀತಿಂ ಚ ಸಾಧುಕಾವ್ಯನಿಷೇವಣಮ್ ॥ ಇತಿ.

ಈ ಗ್ರಂಥವು ಕಾವ್ಯದ ವಿಷಯವನ್ನೇ ತಿಳಿಸುವುದರಿಂದ ಕಾವ್ಯಕ್ಕೆ ಅಂಗವೆನಿಸಿದ್ದು ಕಾವ್ಯದಿಂದ ಉಂಟಾಗಬಹುದಾದ ಫಲಗಳೇ ಈ ಗ್ರಂಥಕ್ಕೂ ಫಲವೆನಿಸುತ್ತವೆ ಎಂದು ಭಾವಿಸಿ ಕಾವ್ಯಫಲಗಳನ್ನು ಇಲ್ಲಿ ತಿಳಿಸುತ್ತಾನೆ.

ಮನುಷ್ಯನಾಗಿ ಹುಟ್ಟಿದವನು ಸಾಧಿಸಬೇಕಾದ ನಾಲ್ಕು ಫಲಗಳು ಕಾವ್ಯದಿಂದಲೇ ಅನಾಯಾಸವಾಗಿ ಜನಸಾಮಾನ್ಯರೆಲ್ಲರಿಗೂ ದೊರಕುತ್ತವೆ. ಆದ್ದರಿಂದಲೇ ಅದರ ಸ್ವರೂಪವನ್ನು ಇಲ್ಲಿ ತಿಳಿಸಲಾಗುವುದು. ಕಾವ್ಯದಿಂದ ನಾಲ್ಕು ಪುರುಷಾರ್ಥಗಳು ದೊರೆಯಬೇಕಾದರೂ "ರಾಮ ಮೊದಲಾದ ಸಜ್ಜನರಂತೆ ವರ್ತಿಸಬೇಕೇ ಹೊರತು

ರಾವಣ ಮೊದಲಾದ ದುರ್ಜನರಂತೆ ವರ್ತಿಸಬಾರದು." ಹೀಗೆ ಬೋಧಿಸುತ್ತ ಮಾಡ ಬೇಕಾದ ಸತ್ಕಾರ್ಯದಲ್ಲಿ ಒಬ್ಬನು ಪ್ರವರ್ತಿಸುವಂತೆಯೂ, ಮಾಡಬಾರದ್ದರಿಂದ ಹಿಂಜರಿ ಯುವಂತೆಯೂ ಉಪದೇಶಿಸುವ ಮೂಲಕವೇ ಆಗಬೇಕೆಂಬುದು ಸ್ಪಷ್ಟಪಡುತ್ತದೆ. ಹಾಗೆಯೇ ಬೇರೆಕಡೆಗಳಲ್ಲೂ ಒಳ್ಳೆಯ ಕಾವ್ಯದ ಆಸ್ವಾದನವು ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲೂ ಅರವತ್ತನಾಲ್ಕು ಕಲೆಗಳಲ್ಲೂ ಪೂರ್ಣಪರಿಚಯವನ್ನುಂಟುಮಾಡುವು ದಲ್ಲದೆ ಯಶಸ್ಸನ್ನೂ ಸಂತೋಷವನ್ನೂ ದೊರಕಿಸುತ್ತದೆ.

ಕಿಂ ಚ ಕಾವ್ಯಾದ್ಧರ್ಮಪ್ರಾಪ್ತಿರ್ಭಗವನ್ನಾರಾಯಣಚರಣಾರವಿಂದಸ್ತವಾದಿನಾ, 'ಏಕಃ ಶಬಃ ಸುಪ್ರಯುಕ್ತಃ ಸಮ್ಯಕ್ ಜ್ಞಾತಃ ಸ್ವರ್ಗೇ ಲೋಕೇ ಕಾಮಧುಗ್ಭವತಿ' ಇತ್ಯಾದಿವೇದವಾಕ್ಯೇಭ್ಯಶ್ಚ ಸುಪ್ರಸಿದ್ಧೈವ. ಅರ್ಥಪ್ರಾಪ್ತಿಶ್ಚ ಪ್ರತ್ಯಕ್ಷಸಿದ್ಧಾ. ಕಾಮ ಪ್ರಾಪ್ತಿಶ್ಚ ಅರ್ಥದ್ವಾರೈವ. ಮೋಕ್ಷಪ್ರಾಪ್ತಿಶ್ಚ ಏತಜ್ಜನ್ಯಧರ್ಮಫಲಾನನುಸಂಧಾನಾತ್, ಮೋಕ್ಷೋಪಯೋಗಿವಾಕ್ಯೇ ವ್ಯುತ್ಪತ್ತ್ಯಾಧಾಯಕತ್ವಾಚ್ಚ, ಚತುರ್ವರ್ಗಪ್ರಾಪ್ತಿರ್ಹಿ ವೇದಶಾಸ್ತ್ರೇಭ್ಯೋ ನೀರಸತಯಾ ದುಃಖಾದೇವ ಪರಿಣತಬುದ್ಧೀನಾಮೇವ ಜಾಯತೇ. ಪರಮಾನಂದಸಂದೋಹಜನಕತಯಾ ಸುಖಾದೇವ ಸುಕುಮಾರಬುದ್ಧೀನಾಮಪಿ ಪುನಃ ಕಾವ್ಯಾದೇವ.

ಕಾವ್ಯದಿಂದ ಧರ್ಮವು ದೊರಕುತ್ತದೆ ಎಂಬುದು ಭಗವಂತನ ಪಾದಾರವಿಂದಗಳ ಸ್ತುತಿಯಿಂದಲೂ, "ಒಂದು ಶಬ್ದವನ್ನು ಸ್ಪಷ್ಟವಾಗಿ ಪ್ರಯೋಗಿಸಿ ಅದರ ಅರ್ಥವನ್ನು ಚೆನ್ನಾಗಿ ತಿಳಿದರೆ ಅದು ಸ್ವರ್ಗದಲ್ಲೂ ಇಲ್ಲಿಯೂ ನಮ್ಮ ಇಷ್ಟಾರ್ಥಗಳನ್ನು ಸಲ್ಲಿಸುತ್ತದೆ" ಎಂದು ತಿಳಿಸುವ ವೇದವಾಕ್ಯಗಳ ಆಧಾರದಿಂದಲೂ ಸ್ಪಷ್ಟಪಡುವುದು. ಕಾವ್ಯದಿಂದ ಹಣವು ದೊರಕುವುದೆಂಬುದು ಎಲ್ಲರಿಗೂ ತಿಳಿದೇ ಇದೆ. ಇದರಿಂದಲೇ ಕಾಮ=ಇಷ್ಟಾರ್ಥ ಲಾಭವೂ ಆಗಬೇಕಾಗಿದೆ. ಇವುಗಳಿಂದ ನಡೆಯಬೇಕಾದ ಧರ್ಮವನ್ನು ಆಚರಿಸುತ್ತಲೇ ಅದರ ಫಲವನ್ನು ಮನಸ್ಸಿನಲ್ಲೂ ಬಯಸದೆ ಇರುವುದರಿಂದಲೂ, ಮೋಕ್ಷದ ಸ್ವರೂಪವನ್ನು ತಿಳಿಸುವ ವಾಕ್ಯದ ಪರಿಚಯವನ್ನು ಮಾಡಿಸಿಕೊಡುವುದರಿಂದಲೂ ಕಾವ್ಯದಿಂದ ಮೋಕ್ಷವು ದೊರಕಲಿರುವುದು. ವೇದಶಾಸ್ತ್ರಗಳು ನೀರಸವಾದ್ದರಿಂದ ಪಕ್ವವಾದ ಬುದ್ಧಿಯುಳ್ಳವರಿಗೆ ಮಾತ್ರವೇ ನಾಲ್ಕು ಪುರುಷಾರ್ಥಗಳನ್ನು ಕ್ಲೇಶದಿಂದ ದೊರಕಿಸುತ್ತವೆ. ಕಾವ್ಯ ವಾದರೋ ಆನಂದಪರಂಪರೆಯನ್ನು ಒದಗಿಸುವುದರಿಂದ ಕೋಮಲವಾದ ಬುದ್ಧಿಯುಳ್ಳ ವರಿಗೂ ಸಹ ಅನಾಯಾಸವಾಗಿ ನಾಲ್ಕು ಪುರುಷಾರ್ಥಗಳನ್ನು ದೊರಕಿಸುತ್ತದೆ.

ನನು ತರ್ಹಿ ಪರಿಣತಬುದ್ಧಿಭಿಃ ಸತ್ಸು ವೇದಶಾಸ್ತ್ರೇಷು ಕಿಮಿತಿ ಕಾವ್ಯೇ ಯತ್ನಃ ಕರಣೀಯ ಇತ್ಯಪಿ ನ ವಕ್ತವ್ಯಮ್, ಕಟುಕೌಷಧೋಪಶಮನೀಯಸ್ಯ ರೋಗಸ್ಯ ಸಿತ ಶರ್ಕರೋಪಶಮನೀಯತ್ವೇ ಕಸ್ಯ ವಾ ರೋಗಿಣಃ ಸಿತಶರ್ಕರಾಪ್ರವೃತ್ತಿಃ ಸಾಧೀಯಸೀ ನ ಸ್ಯಾತ್.

ಕಿಂ ಚ ಕಾವ್ಯಸ್ಯೋಪಾದೇಯತ್ವಂ ಅಗ್ನಿಪುರಾಣೇಽಪ್ಯುಕ್ತಮ್—

ನರತ್ವಂ ದುರ್ಲಭಂ ಲೋಕೇ ವಿದ್ಯಾ ತತ್ರ ಸುದುರ್ಲಭಾ।

ಕವಿತ್ವಂ ದುರ್ಲಭಂ ತತ್ರ ಶಕ್ತಿಸ್ತತ್ರ ಸುದುರ್ಲಭಾ ॥ ಇತಿ. 'ತ್ರಿವರ್ಗ ಸಾಧನಂ ನಾಟ್ಯಮ್' ಇತಿ ಚ. ವಿಷ್ಣುಪುರಾಣೇಽಪಿ

ಕಾವ್ಯಾಲಾಪಾಶ್ಚ ಯೇ ಕೇಚಿದ್ಗೀತಕಾನ್ಯಖಿಲಾನಿ ಚ।

ಶಬ್ದಮೂರ್ತಿಧರಸ್ಯೈತೇ ವಿಷ್ಣೋರಂಶಾ ಮಹಾತ್ಮನಃ ॥ ಇತಿ. ತೇನ ಹೇತುನಾ ತಸ್ಯ ಕಾವ್ಯಸ್ಯ ಸ್ವರೂಪಂ ನಿರೂಪ್ಯತೇ. ಏತೇನ ಆಧೇಯಂ ಚ ಪ್ರದರ್ಶಿತಮ್.

ಕಾವ್ಯದಿಂದ ಅನಾಯಾಸವಾಗಿ ಪುರುಷಾರ್ಥಗಳು ದೊರಕುವುದಾದರೆ ಪಕ್ವವಾದ ಬುದ್ಧಿಯುಳ್ಳವರು ವೇದಶಾಸ್ತ್ರಗಳನ್ನು ತೊರೆದು ಕಾವ್ಯವನ್ನು ಏಕೆ ಓದಬೇಕು ? ಎಂದು ಕೇಳುವುದಾದರೆ ಅದೂ ಸಹ ಹೊಂದುವುದಿಲ್ಲ. ಕಹಿಯಾದ ಔಷಧದಿಂದ ವಾಸಿಯಾಗುವ ರೋಗವು ಕಲ್ಲುಸಕ್ಕರೆಯಿಂದಲೇ ವಾಸಿಯಾಗುವುದಾದರೆ ಯಾವ ರೋಗಿಗೆ ಅಂತಹ ಸಕ್ಕರೆಯಿಂದಲೇ ರೋಗವನ್ನು ತೊಲಗಿಸಿಕೊಳ್ಳುವುದೇ ಉತ್ತಮವಾದ ಮಾರ್ಗವೆನಿಸ ಲಾರದು ? ಇದೂ ಅಲ್ಲದೆ ಕಾವ್ಯವು ಎಲ್ಲರಿಗೂ ಆದರಣೀಯವೆಂಬ ಅಂಶವನ್ನು ಅಗ್ನಿ ಪುರಾಣವೂ ಸಹ ತಿಳಿಸಿವೆ. "ಲೋಕದಲ್ಲಿ ಮನುಷ್ಯಜನ್ಮವನ್ನು ಪಡೆಯುವುದೇ ಕಷ್ಟ. ಅದರಲ್ಲೂ ವಿದ್ಯೆಯನ್ನು ತಿಳಿಸುವುದು ಇನ್ನೂ ಕಷ್ಟ. ಅದರಲ್ಲೂ ಕವನವನ್ನು ಮಾಡುವುದು ಮತ್ತೂ ಕಷ್ಟ. ಅದರಲ್ಲೂ ಕವನವನ್ನು ಸ್ವಾರಸ್ಯವಾಗಿಮಾಡುವುದು ತುಂಬ ಕಷ್ಟವೇ ಸರಿ." ಹೀಗೆ ಅದು ತಿಳಿಸಿ "ಧರ್ಮ ಅರ್ಥ ಕಾಮಗಳ ಸಂಪಾದನೆಗೆ ನಾಟ್ಯವು ಸಾಧನ ವೆನಿಸಿದೆ" ಎಂದೂ ಹೇಳಿವೆ. "ರಾಗತಾಳಗಳಿಗೆ ಹೊಂದುವಂತಹ ಕಾವ್ಯಗಳು ಯಾವುವು ಇವೆಯೋ ಹಾಗೆಯೇ ಸಮಸ್ತಗೀತೆಗಳೂ ಶಬ್ದಸ್ವರೂಪನೂ ಮಹಾಪುರುಷನೂ ಆದ ವಿಷ್ಣುವಿನ ಅಂಶಗಳೆನಿಸಿವೆ ಎಂದು ವಿಷ್ಣುಪುರಾಣವು ತಿಳಿಸಿದೆ. ಈ ಕಾರಣದಿಂದ ಕಾವ್ಯದ ಸ್ವರೂಪವನ್ನು ಇಲ್ಲಿ ತಿಳಿಸಲಾಗುವುದು. ಇದರಿಂದ ಕಾವ್ಯದಲ್ಲಿ ತಿಳಿಸಬೇಕಾದ ವಿಷಯವು ಯಾವುದೆಂಬುವನ್ನೂ ತಿಳಿಸಿದಂತಾಯಿತು.

ತತ್ಕಿಂಸ್ವರೂಪಂ ತತ್ಕಾವ್ಯಮಿತ್ಯಪೇಕ್ಷಾಯಾಂ ಕಶ್ಚಿದಾಹ 'ತದದೋಷೌ ಶಬ್ದಾರ್ಥೌ ಸಗುಣಾವನಲಂಕೃತೀ ಪುನಃ ಕ್ವಾಪಿ" ಇತಿ. ಏತಚ್ಚಿಂತ್ಯಮ್. ತಥಾ ಹಿ, ಯದಿ ದೋಷರಹಿತಸ್ಯೈವ ಕಾವ್ಯತ್ವಾಂಗೀಕಾರಸ್ತದಾ—

ನ್ಯಕ್ಕಾರೋ ಹ್ಯಯಮೇವ ಮೇ ಯದರಯಸ್ತತ್ರಾಪ್ಯಸೌ ತಾಪಸಃ

ಸೋಽಪ್ಯತ್ರೈವ ನಿಹಂತಿ ರಾಕ್ಷಸಕುಲಂ ಜೀವತ್ಯಹೋ ರಾವಣಃ ।

ಧಿಗ್ಧಿಕ್ ಶಕ್ರಜಿತಂ ಪ್ರಬೋಧಿತವತಾ ಕಿಂ ಕುಂಭಕರ್ಣೇನ ವಾ

ಸ್ವರ್ಗಗ್ರಾಮಟಿಕಾವಿಲುಂಠನವೃಥೋಚ್ಛೂನೈಃ ಕಿಮೇಭಿರ್ಭುಜೈಃ॥

ಅಸ್ಯ ಶ್ಲೋಕಸ್ಯ ವಿಧೇಯಾವಿಮರ್ಶದೋಷದುಷ್ಟತಯಾ ಕಾವ್ಯತ್ವಂ ನ ಸ್ಯಾತ್. ಪ್ರತ್ಯುತ ಧ್ವನಿತ್ವೇನ ಉತ್ತಮಕಾವ್ಯತಾ ಅಸ್ಯ ಅಂಗೀಕೃತಾ. ತಸ್ಮಾದವ್ಯಾಪ್ತಿರ್ಲಕ್ಷಣ

ದೋಷಃ. ನನು ಕಶ್ಚಿದೇವಾಂಶೋऽತ್ರ ದುಷ್ಟಃ, ನ ಪುನಃ ಸರ್ವೋऽಪಿ ಇತಿ ಚೇತ್ತರ್ಹಿ ಯತ್ರಾಂಶೇ ದೋಷಃ ಸೋऽಕಾವ್ಯತ್ವಪ್ರಯೋಜಕ ಇತ್ಯಂಶಾಭ್ಯಾಮುಭಯತ ಆಕೃಷ್ಯಮಾಣಮಿದಂ ಕಾವ್ಯಮಕಾವ್ಯಂ ವಾ ಕಿಮಪಿ ನ ಸ್ಯಾತ್. ನ ಚ ಕಂಚಿದೇವಾಂಶಂ ಕಾವ್ಯಸ್ಯ ದೂಷಯಂತಃ ಶ್ರುತಿದುಷ್ಟಾದಯೋ ದೋಷಾಃ ಅಪಿ ತು ಸರ್ವಮೇವ ಕಾವ್ಯಮ್. ತಥಾಹಿ ಕಾವ್ಯಾತ್ಮಭೂತಸ್ಯ ರಸಸ್ಯ ಅನಪಕರ್ಷಕತ್ವೇ ತೇಷಾಂ ದೋಷತ್ವಮಪಿ ನಾಂಗೀಕ್ರಿಯತೇ. ಅನ್ಯಥಾ ನಿತ್ಯದೋಷಾನಿತ್ಯದೋಷತ್ವವ್ಯವಸ್ಥಾಪಿ ನ ಸ್ಯಾತ್. ಯದುಕ್ತಂ ಧ್ವನಿಕೃತಾ—

ಶ್ರುತಿದುಷ್ಟಾದಯೋ ದೋಷಾ ಅನಿತ್ಯಾ ಯೇ ಚ ದರ್ಶಿತಾಃ |
ಧ್ವನ್ಯಾತ್ಮನ್ಯೇವ ಶೃಂಗಾರೇ ತೇ ಹೇಯಾ ಇತ್ಯುದಾಹೃತಾಃ || ಇತಿ.

ಕಿಂಚ್ಯೈವಂ ಕಾವ್ಯಂ ಪ್ರವಿರಲವಿಷಯಂ ನಿರ್ವಿಷಯಂ ವಾ ಸ್ಯಾತ್, ಸರ್ವಥಾ ನಿರ್ದೋಷಸ್ಯೈಕಾಂತಮಸಂಭವಾತ್.

ಕಾವ್ಯದ ಸ್ವರೂಪವೆಂತಹದೆಂದು ವಿಚಾರಿಸುವಾಗ ವಿಮರ್ಶಕನೊಬ್ಬನು "ದೋಷವಿಲ್ಲದೆಯೂ ಗುಣಗಳಿಂದ ಕೂಡಿಯೂ ಕೆಲವೆಡೆಗಳಲ್ಲಿ ಸ್ಫುಟವಾಗಿ ತೋರುವ ಅಲಂಕಾರಗಳಿಲ್ಲದೆಯೂ ಇರುವ ಶಬ್ದಾರ್ಥಗಳೇ ಕಾವ್ಯವೆನಿಸುತ್ತವೆ" ಎಂದು ಹೇಳಿ ಕಾವ್ಯದ ಸ್ವರೂಪವನ್ನು ತಿಳಿಸಿರುವನು. ಈ ಲಕ್ಷಣವನ್ನು ವಿಮರ್ಶಿಸಲಾಗುವುದು. ದೋಷವಿಲ್ಲದ ಶಬ್ದಾರ್ಥಗಳನ್ನೇ ಕಾವ್ಯವೆಂದು ಒಪ್ಪಿಕೊಂಡರೆ ಆಗ ದೋಷವಿರುವ ಮುಂದಿನ ಪದ್ಯವು ಕಾವ್ಯವೇ ಆಗದೆಹೋಗಬೇಕಾದೀತು.

"ನನಗೆ ಶತ್ರುಗಳಿರುವರೆಂಬುದೇ ಒಂದು ಅವಮಾನ. ಅದರಲ್ಲೂ ಅವನು ಓರ್ವ ಅರಣ್ಯವಾಸಿ. ಅವನಾದರೋ ನಮ್ಮ ಎದುರಿಗೇ ಬಂದು ರಾಕ್ಷಸರೆಲ್ಲರನ್ನೂ ಕೊಲ್ಲುತ್ತಿರುವನು. ಇಷ್ಟಾದರೂ ಈ ರಾವಣನಿನ್ನೂ ಬದುಕಿರುವನು. ಇಂದ್ರಜಿತನಿಗೂ ಧಿಕ್ಕಾರವಾಗಲಿ. ನಿದ್ರೆಮಾಡುತ್ತಿರುವ ಕುಂಭಕರ್ಣನನ್ನು ಎಚ್ಚರಗೊಳಿಸಿದ್ದರಿಂದ ಆಗುವ ಫಲವಾದರೂ ಏನಿದ್ದೀತು ? ಸ್ವರ್ಗವೆಂಬ ಸಣ್ಣದೊಂದು ಹಳ್ಳಿಯನ್ನು ದರೋಡೆ ಮಾಡಿದ್ದರಿಂದ ವ್ಯರ್ಥವಾಗಿ ಬೆಳೆದಿರುವ ಈ ಭುಜಗಳಿಂದ ಆಗುವ ಫಲವೇನು ?" ಈ ಶ್ಲೋಕದಲ್ಲಿ ವಿಧೇಯಾವಿಮರ್ಶವೆಂಬ ದೋಷವಿದೆ. ಶತ್ರುವಿನಿಂದ ರಾಕ್ಷಸಕುಲಕ್ಕೇ ಹಿಂಸೆಯಾಗುತ್ತಿರುವುದನ್ನು ಸಹಿಸಿಕೊಂಡು ಜೀವಿಸುತ್ತಿರುವ ನನಗೆ ಭುಜಗಳಿರುವುದೇ ವ್ಯರ್ಥವೆಂಬುದೇ ಇಲ್ಲಿ ವಿಧೇಯಾಂಶ. ಇದೇಯೇ ಇಲ್ಲಿ ಪ್ರಧಾನವಾಗಿ ತಿಳಿಸಬೇಕಾದ ವಿಷಯ. ಇದು 'ವೃಥೋಚ್ಛೂನೈಃ' ಎಂಬ ಸಮಾಸದಲ್ಲಿ ಸೇರಿಕೊಂಡಿರುವುದರಿಂದ ಗೌಣವೆನಿಸಿದೆ. ಹೀಗೆ ವಿಧೇಯಾಂಶವನ್ನು ಪ್ರಧಾನವಾಗಿ ತಿಳಿಸದಿರುವುದೇ ಇಲ್ಲಿ ಒಂದು ದೋಷವೆನಿಸಿರುವುದರಿಂದ ಈ ಪದ್ಯವು ಕಾವ್ಯವೇ ಆಗದೇಹೋಗುತ್ತದೆ. ಆದರೆ ಇಲ್ಲಿ ಧ್ವನಿ ಇರುವುದರಿಂದ ಇದನ್ನು ಉತ್ತಮಕಾವ್ಯವೆಂದು ಅಂಗೀಕರಿಸಲಾಗಿದೆ. ಹೀಗೆ ಆ ವಿಮರ್ಶಕನು ಹೇಳಿದ ಕಾವ್ಯದ ಲಕ್ಷಣವು ಈ ಪದ್ಯದಲ್ಲಿ ವ್ಯಾಪಿಸದೇ ಇರುವ ಪ್ರಯುಕ್ತ

ಲಕ್ಷಣಕ್ಕೆ ಅವ್ಯಾಪ್ತಿ ದೋಷವು ಸಂಭವಿಸುತ್ತದೆ. ಇಲ್ಲಿ ಯಾವುದೋ ಒಂದೆಡೆಯಲ್ಲಿ ಮಾತ್ರ ದೋಷವಿದ್ದು ಬೇರೆ ಅಂಶಗಳಲ್ಲಿ ದೋಷವಿಲ್ಲವೆಂದು ಹೇಳುವುದಾದರೆ ಯಾವ ಅಂಶದಲ್ಲಿ ದೋಷವಿದೆಯೋ ಅದು ಮಾತ್ರ ಕಾವ್ಯವೆನಿಸದೆ ಬೇರೆ ಅಂಶದಲ್ಲಿ ಅದು ಕಾವ್ಯವೆನಿಸಲೆಂದು ಹೇಳಬೇಕಾದೀತು. ಆಗ ಎಲ್ಲಿ ಧ್ವನಿಯುಂಟೋ ಅದನ್ನು ಉತ್ತಮಕಾವ್ಯವೆಂದು ಭಾವಿಸ ಬೇಕಾಗುವುದು. ಹೀಗೆ ಎರಡು ಅಂಶಗಳಿಂದ ಎರಡುಕಡೆಗಳಲ್ಲೂ ಸೆಳೆತಕ್ಕೆ ಸಿಕ್ಕಿ ಇದು ಕಾವ್ಯವೋ ಅಲ್ಲವೋ ಎಂದು ಯಾವುದನ್ನೂ ಹೇಳಲಿಕ್ಕೆ ಆಗವೇಹೋದೀತು. ಕಾವ್ಯದಲ್ಲಿ ಶ್ರುತಿದುಷ್ಟ ಮೊದಲಾದ ದೋಷಗಳಿದ್ದಲ್ಲಿ ಅವರ ಯಾವುದಾದರೊಂದು ಭಾಗವನ್ನು ಮಾತ್ರವೇ ಅವು ದೂಷಿಸವೆ ಕಾವ್ಯವೆಲ್ಲವನ್ನೂ ದೂಷಿಸುತ್ತವೆ. ರಸವನ್ನು ಪ್ರಕಾಶ ಗೊಳಿಸಲು ತಡೆಯನ್ನುಂಟುಮಾಡುವಂತೆ ಒರಟಾದ ಪವಗಳನ್ನು ಪ್ರಯೋಗಿಸುವುದೇ ಶ್ರುತಿದುಷ್ಟವೆನಿಸುತ್ತದೆ. ಇಂತಹ ಪವಗಳಿಂದ ಕಾವ್ಯದ ಜೀವವೆನಿಸಿದ ರಸಕ್ಕೆ ಭಂಗ ಉಂಟಾಗದಿದ್ದರೆ ಇವುಗಳನ್ನು ದೋಷವೆಂದೂ ಪರಿಗಣಿಸಿಲ್ಲ. ಹೀಗೆ ಒಪ್ಪದೇಹೋದರೆ ಇಂತಹದು ನಿತ್ಯದೋಷ, ಇಂತಹುದು ಅನಿತ್ಯದೋಷ ಎಂದು ಆಯಾ ರಸಗಳ ಸ್ವರೂಪದ ಮೇಲೆ ನಿರ್ಣಯಿಸಬಹುದಾದ ವ್ಯವಸ್ಥೆಯೇ ತಪ್ಪಿಹೋಗಬೇಕಾದೀತು. ಶೃಂಗಾರ ಕರುಣ ಮೊದಲಾದ ರಸಗಳಲ್ಲಿ ಈ ದೋಷಗಳು ಅನ್ವಯಿಸುತ್ತವೆಯೇ ಹೊರತು ವೀರ ರೌದ್ರ ಮೊದ ಲಾದ ರಸಗಳಲ್ಲಿ ಇವು ದೋಷವೇ ಆಗಲಾರವು. ಆದ್ದರಿಂದ ಇವು ಕೆಲವೆಡೆ ನಿತ್ಯದೋಷ ವೆನಿಸಿ ಕೆಲವೆಡೆ ದೋಷವೇ ಆಗದಿರುವುದರಿಂದ ಈ ವ್ಯವಸ್ಥೆಯೇ ತಪ್ಪಿಹೋದೀತು. ಧ್ವನಿ ಕಾರನೂ ಸಹ "ಶ್ರುತಿ ದುಷ್ಟ ಮೊದಲಾದ ಅನಿತ್ಯದೋಷಗಳನ್ನು ಧ್ವನಿಕಾವ್ಯದ ಆತ್ಮ ವೆನಿಸಿದ ಶೃಂಗಾರರಸವನ್ನುಪ್ರಕಾಶಿಸುವಾಗ ಮಾತ್ರವೇ ತೊರೆಯಬೇಕೆಂದು ಅವನ್ನು ಇಲ್ಲಿ ಉದಾಹರಿಸಿದೆ" ಎಂದು ಹೇಳಿದ್ದಾನೆ. ಆದ್ದರಿಂದ ಬೇರೆ ರಸಗಳನ್ನು ಪ್ರಕಾಶಿಸುವಾಗ ಇವು ಇದ್ದರೂ ಬಾಧಕವಿಲ್ಲವೆಂಬುದು ಸ್ಪಷ್ಟಪಡುತ್ತದೆ. ಇದೂ ಅಲ್ಲದೆ, ಇದರಲ್ಲಿ ಇಷ್ಟೇ ಅಂಶದಲ್ಲಿ ದೋಷವಿದೆ, ಇಷ್ಟು ಅಂಶದಲ್ಲಿ ದೋಷವಿಲ್ಲವೆಂದು ನೋಡುತ್ತ ಹೋದರೆ ಕಾವ್ಯಕ್ಕೆ ಉದಾಹರಣಗಳೇ ಕಡಮೆಯಾಗಹೇಕಾದೀತು ಅಥವಾ ಇಲ್ಲದಂತಯೇ ಆಗ ಬಹುದು ; ಯಾಕೆಂದರೆ ಸಂಪೂರ್ಣವಾಗಿ ನಿರ್ದುಷ್ಟವಾದದ್ದು ಯಾವುದೂ ಎಲ್ಲಿಯೂ ಸಂಭವಿಸುವಂತೆಯೇ ಇಲ್ಲ.

ನನ್ವೀಷದರ್ಥೇ ನಞಃ ಪ್ರಯೋಗಃ ಇತಿ ಚೇತ್ತರ್ಹಿ ಈಷದ್ದೋಷೌ ಶಬ್ದಾರ್ಥೌ ಕಾವ್ಯಂ' ಇತ್ಯುಕ್ತೇ ನಿರ್ದೋಷಯೋಃ ಕಾವ್ಯತ್ವಂ ನ ಸ್ಯಾತ್. ಸತಿ ಸಂಭವೇ 'ಈಷದ್ದೋಷೌ' ಇತಿ ಚೇತ್, ಏತದಪಿ ಕಾವ್ಯಲಕ್ಷಣೇಽವಾಚ್ಯಮ್. ರತ್ನಾದಿಲಕ್ಷಣೇ ಕೀಟಾನುವೇಧಾದಿಪರಿಹಾರವತ್. ನಹಿ ಕೀಟಾನುವೇಧಾದಯೋ ರತ್ನಸ್ಯ ರತ್ನತ್ವಂ ವ್ಯಾಹಂತುಮೀಶಾಃ ಕಿಂ ತು ಉಪಾದೇಯತಾರತಮ್ಯಮೇವ ಕರ್ತುಂ, ತದ್ವದತ್ರ ಶ್ರುತಿ ದುಷ್ಟಾದಯೋಽಪಿ ಕಾವ್ಯಸ್ಯ. ಉಕ್ತಂ ಚ—

ಕೀಟಾನುವಿದ್ಧರತ್ನಾದಿಸಾಧಾರಣ್ಯೇನ ಕಾವ್ಯತಾ ।

ದುಷ್ಟೇಷ್ವಪಿ ಮತಾ ಯತ್ರ ರಸಾದ್ಯನುಗಮಃ ಸ್ಫುಟಃ ||

'ಅದೋಷೌ' ಎಂಬಲ್ಲಿ ಈಷತ್=ಸ್ವಲ್ಪ ಎಂಬ ಅರ್ಥದಲ್ಲಿ ನಕಾರವನ್ನು ಪ್ರಯೋಗಿಸಲಾಗಿದೆ ; 'ಪೂರ್ತಿಯಾಗಿ' ಎಂಬ ಅರ್ಥದಲ್ಲಿ ಅದನ್ನು ಪ್ರಯೋಗಿಸಿಲ್ಲವೆಂದು ಹೇಳುವುದಾದರೆ 'ಅದೋಷೌ' ಎಂಬ ಪದಕ್ಕೆ 'ಕೊಂಚ ದೋಷವುಳ್ಳವು' ಎಂದು ಅರ್ಥವನ್ನು ತಿಳಿಸಿ ಅಂತಹ ಶಬ್ದಾರ್ಥಗಳೇ ಕಾವ್ಯವೆಂದು ಲಕ್ಷಣವನ್ನು ಹೇಳಬೇಕಾಗುವುದು. ಹೀಗೆ ಹೇಳಿದರೆ ಎಲ್ಲಿ ಕೊಂಚವೂ ದೋಷವೇ ಇಲ್ಲವೋ ಅಂತಹ ಕಡೆ ಅದು ಕಾವ್ಯವೇ ಆಗದೇ ಹೋಗಬೇಕಾದೀತು. "ಒಂದು ವೇಳೆ ಸಂಭವಿಸುವುದಾದರೆ ಕೊಂಚ ದೋಷವಿದ್ದರೂ ಇರಲಿ; ಅದರಿಂದ ಅಡ್ಡಿಯಿಲ್ಲ" ಎಂದು ಅದೋಷಪದಕ್ಕೆ ಅರ್ಥವನ್ನು ಹೇಳುವುದಾದರೆ ಇದನ್ನು ಕಾವ್ಯದ ಲಕ್ಷಣದಲ್ಲಿ ಹೇಳಬೇಕಾಗಿಯೇ ಇಲ್ಲ. ರತ್ನದ ಲಕ್ಷಣವನ್ನು ತಿಳಿಸುವಾಗ ಅದನ್ನು ಒಂದುಕಡೆ ಹುಳವು ಕೊರೆದಿದ್ದರೂ ಅಷ್ಟರಿಂದಲೇ ನಾವು ಅದನ್ನು ರತ್ನವೆಂದು ಭಾವಿಸದೆ ಬಿಡುವುದಿಲ್ಲ. ಈ ಬಗೆಯ ದೋಷವಿದ್ದ ಮಾತ್ರದಿಂದ ರತ್ನವನ್ನು ರತ್ನವೇ ಅಲ್ಲವೆಂದು ಯಾರೂ ಅಲ್ಲಗಳೆಯಲಾರರು. ಒಂದು ರತ್ನವನ್ನು ರತ್ನವೆಂದು ಭಾವಿಸುವಾಗ ಹುಳು ಕೊರೆದದ್ದೆಂಬುದನ್ನು ಯಾರೂ ಗಮನಿಸುವುದಿಲ್ಲ. ಯಾಕೆಂದರೆ ಈ ಬಗೆಯ ದೋಷವು ರತ್ನದಲ್ಲಿರುವ ವ್ಯಕ್ತಿತ್ವವನ್ನು ಕೆಡಿಸಲಾರವು. ಅದಿದ್ದರೂ ಅದು ರತ್ನವಾಗಿಯೇ ಉಳಿಯುತ್ತದೆ. ಆದರೆ ಈ ದೋಷದಿಂದ ಇದು ಬೇರೊಂದರಿಂದ ಕನಿಷ್ಠವೆಂಬ ಭಾವನೆಗೆ ಮಾತ್ರ ಅಲ್ಲಿ ಅವಕಾಶವಿರುತ್ತದೆ. ಇದು ಉತ್ತಮ–ಇದು ಮಧ್ಯಮ–ಇದು ಕನಿಷ್ಠ ಎಂಬ ತಾರತಮ್ಯವನ್ನು ಮಾತ್ರ ಈ ದೋಷವು ತಿಳಿಸುತ್ತದೆ. ಹಾಗೆ ಶ್ರುತಿದುಷ್ಟ ಮೊದಲಾದ ದೋಷಗಳು ಒಂದು ಕಾವ್ಯದಲ್ಲಿ ಕಾವ್ಯತ್ವವನ್ನು ಕೆಡಿಸವಂತಿದ್ದು ಇದು ಬೇರೆಯದಕ್ಕಿಂತ ಕನಿಷ್ಠವಾದ್ದೆಂಬ ಭಾವನೆಯನ್ನು ಹುಟ್ಟಿಸುತ್ತದೆ. "ಹುಳು ಕೊರೆದಿರುವ ರತ್ನಕ್ಕೆ ಸಮಾನವೆನಿಸಿದ್ದರಿಂದ ದೋಷವುಳ್ಳ ಶಬ್ದಾರ್ಥಗಳೂ ಸಹ ಕಾವ್ಯವೆನಿಸಲು ಅಡ್ಡಿಯಿಲ್ಲ. ಹುಳು ಮುಟ್ಟಿದ್ದು ಮತ್ತು ಮುಟ್ಟದ್ದು ಈ ಎರಡು ಬಗೆಯ ರತ್ನಗಳೂ ಹೇಗೆ ರತ್ನವೆನಿಸುತ್ತವೆಯೋ ಹಾಗೆಯೇ ದೋಷವಿಲ್ಲದ್ದು ಮತ್ತು ದೋಷವುಳ್ಳದ್ದು ಈ ಬಗೆಯ ಕೃತಿಗಳೆರಡರಲ್ಲೂ ಸಹ ರಸಾಭಿವ್ಯಕ್ತಿಗೆ ತಡೆಯಿಲ್ಲದಿದ್ದರೆ ಅವನ್ನು ಕಾವ್ಯವೆಂದು ಭಾವಿಸಲು ಅಡ್ಡಿಯಿಲ್ಲ.

ಕಿಂ ಚ ಶಬ್ದಾರ್ಥಯೋಃ ಸಗುಣತ್ವವಿಶೇಷಣಮನುಪಪನ್ನಮ್. ಗುಣಾನಾಂ ರಸೈಕಧರ್ಮತ್ವಸ್ಯ "ಯೇ ರಸಸ್ಯಾಂಗಿನೋ ಧರ್ಮಾಃ ಶೌರ್ಯಾದಯ ಇವಾತ್ಮನಃ" ಇತ್ಯಾದಿನಾ ತೇನೈವ ಪ್ರತಿಪಾದಿತತ್ವಾತ್. ರಸಾಭಿವ್ಯಂಜಕತ್ವೇನ ಉಪಚಾರತಃ ಉಪಪದ್ಯತ ಇತಿ ಚೇತ್ ತಥಾಪ್ಯಯುಕ್ತಮ್. ತಥಾ ಹಿ ತಯೋಃ ಕಾವ್ಯಸ್ವರೂಪತ್ವೇನಾಭಿಮತಯೋಃ ಶಬ್ದಾರ್ಥಯೋಃ ರಸೋಽಸ್ತಿ ನ ವಾ ? ನಾಸ್ತಿ ಚೇತ್ ಗುಣವತ್ತ್ವಮಪಿ ನಾಸ್ತಿ. ಗುಣಾನಾಂ ತದನ್ವಯವ್ಯತಿರೇಕಾನುವಿಧಾಯಿತ್ವಾತ್. ಅಸ್ತಿ ಚೇತ್

ಕಥಂ ನೋಕ್ತಂ ರಸವಂತಾವಿತಿ ವಿಶೇಷಣಮ್. ಗುಣವತ್ತ್ವಾನ್ಯಥಾನುಪಪತ್ತ್ಯೈ ಏತಲ್ಲಭ್ಯತ ಇತಿ ಚೇತ್. ತರ್ಹಿ ಸರಸೌ ' ಇತ್ಯೇವ ವಕ್ತುಂ ಯುಕ್ತಂ, ನ 'ಸಗುಣೌ' ಇತಿ. ನ ಹಿ ಪ್ರಾಣಿಮಂತೋ ದೇಶಾ ಇತಿ ವಕ್ತವ್ಯೇ ಶೌರ್ಯಾದಿಮಂತೋ ದೇಶಾಃ ಇತಿ ಕೇನಾಪ್ಯುಚ್ಯತೇ. ನನು ' ಶಬ್ದಾರ್ಥೌ ಸಗುಣೌ ' ಇತ್ಯನೇನ ಗುಣಾಭಿವ್ಯಂಜಕೌ ಶಬ್ದಾರ್ಥೌ ಕಾವ್ಯೇ ಪ್ರಯೋಜ್ಯೌ ಇತ ಭಿಪ್ರಾಯ ಇತ್ಯಿ ಚೇತ್ತೇನ ಗುಣಾಭಿವ್ಯಂಜಕ ಶಬ್ದಾರ್ಥವತ್ತ್ವಸ್ಯಾಪಿ ಕಾವ್ಯೇ ಉತ್ಕರ್ಷಮಾತ್ರಾಧಾಯಕತ್ವಂ, ನ ತು ಸ್ವರೂಪಾಧಾಯಕತ್ವಮ್. ಉಕ್ತಂ ಹ್ಯಿ ಕಾವ್ಯಸ್ಯ ಶಬ್ದಾರ್ಥೌ ಶರೀರಂ, ರಸಾದಿಶ್ಚ ಆತ್ಮಾ, ಗುಣಃ ಶೌರ್ಯಾದಿವತ್, ದೋಷಃ ಕಾಣತ್ವಾದಿವತ್, ರೀತಯೋಽವಯವಸಂಸ್ಥಾನ ವಿಶೇಷವತ್, ಅಲಂಕಾರಾಃ ಕಟಕಕುಂಡಲಾದಿವತ್' ಇತಿ.

ಹೀಗೆ ' ಅದೋಷೌ ' ಎಂಬ ಪದವು ಲಕ್ಷಣದಲ್ಲಿ ಹೊಂದಿಕೆಯಾಗದಿರುವಂತೆಯೇ ಶಬ್ದಾರ್ಥಗಳಿಗೆ 'ಸಗುಣೌ' ಎಂಬ ವಿಶೇಷಣವನ್ನು ಕೊಟ್ಟದ್ದೂ ಹೊಂದುವುದಿಲ್ಲ. ಗುಣಗಳು ರಸದಲ್ಲಿ ಮಾತ್ರವೇ ಅನ್ವಯಿಸುವಂತವು. " ಆತ್ಮನಲ್ಲಿ ಶೌರ್ಯ ಮೊದಲಾದ ಧರ್ಮಗಳಿರುವಂತೆ ಕಾವ್ಯದಲ್ಲಿ ಪ್ರಧಾನವೆನಿಸಿವ ರಸಕ್ಕೆ ಗುಣಗಳು ಧರ್ಮವೆನಿಸಿವೆ " ಹೀಗೆ ಆ ವಿಮರ್ಶಕರು ತಾವೇ ತಿಳಿಸಿರುವರು. ಗುಣಗಳು ರಸವನ್ನು ಪ್ರಕಾಶಗೊಳಿಸುವುದರಿಂದ ಶಬ್ದಾರ್ಥಗಳಲ್ಲೂ ಅವು ಗೌಣವಾಗಿ ಅಂದರೆ ಅಪ್ರಧಾನವಾಗಿ ಸೇರಿಕೊಂಡಿರುತ್ತವೆ ಎಂದು ಹೇಳುವುದಾದರೆ ಅದೂ ಹೊಂದುವುದಿಲ್ಲ ; ಯಾಕೆಂದರೆ ಕಾವ್ಯದ ಸ್ವರೂಪವೆನಿಸಿದ ಶಬ್ದಾರ್ಥಗಳಲ್ಲಿ ರಸವುಂಟೇ ಇಲ್ಲವೇ ಎಂಬ ಅಂಶವೇ ಇಲ್ಲಿ ವಿಚಾರಾರ್ಹವೆನಿಸಿವೆ. ಅವುಗಳಲ್ಲಿ ರಸವಿರಲಾರದೆಂದು ಹೇಳಿದರೆ ಅಲ್ಲಿ ಗುಣಗಳೂ ಇಲ್ಲವೆಂದೇ ಹೇಳಬೇಕಾಗುವುದು. ಎಲ್ಲಿ ರಸವಿರುವುದೋ ಅಲ್ಲಿಯೇ ಗುಣಗಳಿರುತ್ತವೆ ; ಎಲ್ಲಿ ರಸವಿಲ್ಲವೋ ಅಲ್ಲಿ ಗುಣಗಳಿರುವುದಿಲ್ಲ ಎಂದು ಅನ್ವಯವ್ಯತಿರೇಕಗಳ ನಿಯಮವನ್ನು ಅನುಸರಿಸಿಕೊಂಡೇ ಗುಣಗಳು ಪ್ರವರ್ತಿಸುವ ಪ್ರಯುಕ್ತ ರಸವಿಲ್ಲದಮೇಲೆ ಗುಣವೇ ಇಲ್ಲವೆಂದು ಭಾವಿಸಬೇಕಾಗುವುದು. ಶಬ್ದಾರ್ಥಗಳಲ್ಲಿ ರಸವಿರುವುದೆಂದು ಹೇಳಿದರೆ ರಸವುಳ್ಳ ಶಬ್ದಾರ್ಥಗಳೇ ಕಾವ್ಯವೆಂದು ಹೇಳಬಹುದಾಗಿತ್ತು. ' ಸಗುಣೌ ' ಎಂಬುದರ ಬದಲು ' ಸರಸೌ ' ಎಂಬ ವಿಶೇಷಣವನ್ನೇ ಕೊಡಬಹುದಾಗಿತ್ತು. ಹಾಗೆ ಏಕೆ ಹೇಳಲಿಲ್ಲವೋ ತಿಳಿಯದು. ರಸವಿಲ್ಲದ ಕಡೆ ಗುಣವಿರಲಿಕ್ಕೂ ಸಾಧ್ಯವಿಲ್ಲದ ಪ್ರಯುಕ್ತ ಶಬ್ದಾರ್ಥಗಳೂ ಗುಣದಿಂದ ಕೂಡಿರಬೇಕೆಂದು ಹೇಳಿದರೆ ಅವು ರಸದಿಂದಲೂ ಕೂಡಿರಬೇಕೆಂಬುದು ತಾನಾಗಿಯೇ ತಿಳಿದುಬರುತ್ತದೆ ಎಂದು ಹೇಳುವುದಾದರೆ ಆಗ 'ಸಗುಣೌ' ಎಂಬುದನ್ನು ಬಿಟ್ಟು 'ಸರಸೌ' ಎಂದೇ ಹೇಳಬಹುದಾಗಿತ್ತು. ' ಈ ಸ್ಥಳದಲ್ಲಿ ಪ್ರಾಣಿಗಳಿವೆ ' ಎಂದು ಹೇಳುಬೇಕಾಗಿರುವಾಗ 'ಇವು ಶೌರ್ಯ ಮೊದಲಾದ ಗುಣವುಳ್ಳ ಪ್ರಾಣಿಗಳು' ಎಂದು ಯಾರೂ ಹೇಳುವುದಿಲ್ಲ. ವ್ಯವಹಾರಕಾಲದಲ್ಲಿ ಜನರು ಆ ಹೆಸರಿನಿಂದ ತಿಳಿಸುವರೇ ಹೊರತು ಕೇವಲ ಗುಣವುಳ್ಳ ಅಂಶದಿಂದ ಅವನ್ನು ತಿಳಿಸುವುದಿಲ್ಲ. ' ಸಗುಣೌ ' ಎಂಬಲ್ಲಿ ಗುಣ

ವನ್ನು ಪ್ರಕಾಶಪಡಿಸುವಂತಹ ಶಬ್ದಾರ್ಥಗಳನ್ನು ಕಾವ್ಯದಲ್ಲಿ ಪ್ರಯೋಗಿಸಬೇಕೆಂಬುದೇ ಲಕ್ಷಣಕಾರನ ಅಭಿಪ್ರಾಯವೆಂದು ಹೇಳುವುದಾದರೆ ಅದೂ ಸರಿಯಲ್ಲ; ಯಾಕೆಂದರೆ ಗುಣಗಳನ್ನು ಪ್ರಕಾಶಪಡಿಸುವ ಶಬ್ದಾರ್ಥಗಳಿರುವುದೂ ಸಹ ಕಾವ್ಯದ ಶ್ರೇಷ್ಠತೆಯನ್ನು ತಿಳಿಸಬಹುದೇ ಹೊರತು ಅದರ ಸ್ವರೂಪವನ್ನು ತಿಳಿಸಬಲ್ಲದೆಂದು ಹೇಳಲಿಕ್ಕಾಗುವುದಿಲ್ಲ. "ಕಾವ್ಯಕ್ಕೆ ಶಬ್ದಾರ್ಥಗಳೇ ಶರೀರವೂ, ರಸಭಾವಾದಿಗಳೇ ಆತ್ಮವೂ ಆಗಿವೆ. ಗುಣಗಳು ಶೌರ್ಯ ಮೊದಲಾದ ಧರ್ಮಗಳಂತೆ ಇರುವುವು. ದೋಷಗಳು ಕುರುಡುತನ ಮೊದಲಾದವುಗಳಂತೆ ಇರುವುವು. ರೀತಿಗಳು ಪದಗಳ ಜೋಡಣೆಯಲ್ಲಿ ಕಾಣಬರುವ ವಿಶೇಷಗಳೆನಿಸಿದೆ. ಅಲಂಕಾರಗಳು ಕೈಕಡಗ, ಓಲೆಗಳಂತೆ ಇರುವುವು" ಹೀಗೆ ಪ್ರಾಚೀನರು ಹೇಳಿರುವುವನ್ನು ಇಲ್ಲಿ ಗಮನಿಸಬಹುದು.

ಏತೇನ 'ಅನಲಂಕೃತೀ ಪುನಃ ಕ್ವಾಪಿ' ಇತಿ ಯದುಕ್ತಂ ತದಪಿ ಪರಾಸ್ತಮ್. ಅಸ್ಯ ಹ್ಯರ್ಥಃ ಸರ್ವತ್ರ ಸಾಲಂಕಾರೌ ಕ್ವಚಿತ್ತು ಅಸ್ಫುಟಾಲಂಕಾರಾವಪಿ ಶಬ್ದಾರ್ಥೌ ಕಾವ್ಯಮಿತಿ. ತತ್ರ ಸಾಲಂಕಾರಶಬ್ದಾರ್ಥಯೋರಪಿ ಕಾವ್ಯೇ ಉತ್ಕರ್ಷಮಾತ್ರಾಧಾಯಕತ್ವಾತ್. ಏತೇನ ವಕ್ರೋಕ್ತಿಃ ಕಾವ್ಯಜೀವಿತಮ್' ಇತಿ ವಕ್ರೋಕ್ತಿಜೀವಿತಕಾರೋಕ್ತಮಪಿ ಪರಾಸ್ತಮ್, ವಕ್ರೋಕ್ತೇರಲಂಕಾರರೂಪತ್ವಾತ್.

ಯತ್ತು ಕ್ವಚಿದಸ್ಫುಟಾಲಂಕಾರತ್ವೇ ಉದಾಹೃತಮ್

ಯಃ ಕೌಮಾರಹರಃ ಸ ಏವ ಹಿ ವರಸ್ತಾ ಏವ ಚೈತ್ರಕ್ಷಪಾಃ
ತೇ ಚೋನ್ಮೀಲಿತಮಾಲತೀಸುರಭಯಃ ಪ್ರೌಢಾಃ ಕದಂಬಾನಿಲಾಃ ||
ಸಾ ಚೈವಾಸ್ಮಿ ತಥಾಪಿ ತತ್ರ ಸುರತವ್ಯಾಪಾರಲೀಲಾವಿಧೌ
ರೇವಾರೋಧಸಿ ವೇತಸೀತರುತಲೇ ಚೇತಃ ಸಮುತ್ಕಂಠತೇ || ಇತಿ

ಏತಚ್ಚಿಂತ್ಯಮ್. ಅತ್ರ ಹಿ ವಿಭಾವನಾವಿಶೇಷೋಕ್ತಿಮೂಲಸ್ಯ ಸಂದೇಹಸಂಕರಾಲಂಕಾರಸ್ಯ ಸ್ಫುಟತ್ವಮ್, ಏತೇನ—

ಅದೋಷಂ ಗುಣವತ್ಕಾವ್ಯಮಲಂಕಾರೈರಲಂಕೃತಮ್
ರಸಾನ್ವಿತಂ ಕವಿಃ ಕುರ್ವನ್ ಕೀರ್ತಿಂ ಪ್ರೀತಿಂ ಚ ವಿಂದತಿ||

ಇತ್ಯಾದೀನಾಮಪಿ ಕಾವ್ಯಲಕ್ಷಣತ್ವಮಪಾಸ್ತಮ್.

ಹೀಗೆ ಅಲಂಕಾರಗಳು ಕಾವ್ಯಶರೀರದ ಒಡವೆಗಳೆನಿಸಿ ಕಾವ್ಯಕ್ಕೆ ಶೋಭೆಯನ್ನುಂಟುಮಾಡುವುದರಿಂದ "ಅನಲಂಕೃತೀ ಪುನಃ ಕ್ವಾಪಿ" ಎಂದು ಕಾವ್ಯಲಕ್ಷಣದಲ್ಲಿ ಹೇಳಿದ್ದೂ ಸಹ ನಿರಾಕೃತವಾಯಿತು. ಇದರ ಅಭಿಪ್ರಾಯವಿಷ್ಟೇ—"ಎಲ್ಲೆಡೆಗಳಲ್ಲೂ ಅಲಂಕಾರವಿದ್ದು ಕೆಲವೆಡೆಗಳಲ್ಲಿ ಅವು ಸ್ಫುಟವಾಗಿ ತೋರದೇ ಇರಬಹುದು. ಇಂತಹ ಶಬ್ದಾರ್ಥಗಳೇ ಕಾವ್ಯವೆನಿಸಿವೆ" ಹೀಗೆ ಇದಕ್ಕೆ ಅರ್ಥವನ್ನು ಹೇಳಿದರೂ ಹೀಗೆ ಅಲಂಕಾರವುಳ್ಳ ಶಬ್ದಾರ್ಥಗಳೂ ಸಹ ಕಾವ್ಯದಲ್ಲಿ ಉತ್ಕರ್ಷವನ್ನು ದೊರಕಿಸುತ್ತವೆಯೇ ಹೊರತು ಅದರ ಸ್ವರೂಪವನ್ನು ತಿಳಿಸಲಾರವು. ಇದರಿಂದ ವಕ್ರೋಕ್ತಿಯೇ ಕಾವ್ಯದ ಜೀವಾಳವೆಂದು

ವಕ್ರೋಕ್ತಿಜೀವಿತವನ್ನು ಬರೆದಿರುವ ಕುಂತಕನು ಹೇಳಿದ್ದೂ ಸಹ ನಿರಾಕೃತವಾಯಿತು; ಯಾಕೆಂದರೆ ವಕ್ರೋಕ್ತಿಯೂ ಒಂದು ಬಗೆಯ ಅಲಂಕಾರವೆನಿಸಿದ್ದರಿಂದ ಅದು ಆತ್ಮವೆನಿಸಲಾರದು. ಅಲಂಕಾರವು ಸ್ಫುಟವಾಗಿ ತೋರದಿರುವುದಕ್ಕೆ ಆ ಲಕ್ಷಣಕಾರನು ಹೀಗೆ ಉದಾಹರಿಸಿರುವನು. "ಯಾವನು ಬಾಲ್ಯದಲ್ಲಿ ನನ್ನ ಪ್ರೇಮವನ್ನು ಅನುಭವಿಸಿದ್ದನೋ ಅವನೇ ಈಗಲೂ ನನಗೆ ಇಷ್ಟವಾಗಿರುವನು. ಹಿಂದೆ ಇದ್ದ ಚೈತ್ರಮಾಸದ ರಾತ್ರಿಗಳೇ ಈಗಲೂ ಇವೆ. ಅರಳಿದ ಮಾಲತೀಪುಷ್ಪಗಳ ಸುಗಂಧವನ್ನೊಳಗೊಂಡು ಕದಂಬವೃಕ್ಷದ ಮೇಲೆ ಬೀಸುವ ಬಲವತ್ತರವಾದ ಆ ಗಾಳಿಯೇ ಈಗಲೂ ಇವೆ. ಆ ನಾನೇ ಈಗಲೂ ಇರುವೆನು. ಆದರೂ ನರ್ಮದಾನದಿಯ ದಡದಲ್ಲಿ ನೀರುವಂಜೀಮರದ ಬುಡದಲ್ಲಿ ಸಂಭವಿಸಿದ್ದ ಸುರತವ್ಯಾಪಾರವನ್ನು ನಡೆಸುವುದರ ಕಡೆಗೇ ಈ ಮನಸ್ಸು ದೃಢವಾಗಿ ಅಂಟಿಕೊಂಡು ಬಾಧಿಸುತ್ತಲಿದೆ." ಇಲ್ಲಿ ಸ್ಫುಟವಾದ ಅಲಂಕಾರವಿಲ್ಲವೆಂದು ಲಕ್ಷಣಕಾರನು ಹೇಳಿದ್ದು ವಿಚಾರಾರ್ಹವೆನಿಸಿದೆ. ಇಲ್ಲಿ ವಿಭಾವನೆ ಮತ್ತು ವಿಶೇಷೋಕ್ತಿಗಳ ಆಧಾರದ ಮೇಲೆ ಸಂದೇಹಸಂಕರಾಲಂಕಾರವು ಸ್ಪಷ್ಟವಾಗಿ ತೋರುತ್ತಿದೆ. ನಾಯಕೆಗೆ ಉತ್ಕಟವಾದ ಇಚ್ಛೆ ಹುಟ್ಟಲಿಕ್ಕೆ ಕಾರಣವೇ ಇಲ್ಲದಿದ್ದರೂ ಆ ಬಗೆಯ ಇಚ್ಛೆ ಇದೆ ಎಂದು ತಿಳಿಸಿರುವುದರಿಂದ ಇಲ್ಲಿ ವಿಭಾವನಾಲಂಕಾರವಿದೆ. ಆಕೆಯ ಇಷ್ಟಾರ್ಥವು ಸಿದ್ಧಿಸಲಿಕ್ಕೆ ಹಿಂದಿನ ಸಾಧನಸಾಮಗ್ರಿಗಳೆಲ್ಲವೂ ಇದ್ದರೂ ಸಹ ಇಷ್ಟಾರ್ಥವು ಸಿದ್ಧಿಸಲಿಲ್ಲವೆಂಬ ವಿಶೇಷವನ್ನು ತಿಳಿಸಿರುವುದರಿಂದ ಇಲ್ಲಿ ವಿಶೇಷೋಕ್ತ್ಯಲಂಕಾರವಿದೆ. ಅವನೇ ಪತಿ; ಅವಳೇ ನಾಯಿಕೆ; ಅವೇ ರಾತ್ರಿಗಳು; ಅದೇ ಸುಗಂಧದ ಗಾಳಿ–ಇವೆಲ್ಲವೂ ಇದ್ದರೂ ಸಹ ಆಕೆಯ ಇಚ್ಛೆಯು ಶಮನವಾಗಲಿಲ್ಲವೆಂದು ಇಲ್ಲಿ ತಿಳಿಸಿದ್ದೇ ವಿಶೇಷೋಕ್ತಿ. ಆದ್ದರಿಂದ ಈ ಪದ್ಯದಲ್ಲಿ ವಿಭಾವನೆಯೋ ವಿಶೇಷೋಕ್ತಿಯೋ ಎಂಬ ಸಂದೇಹಕ್ಕೆ ಅವಕಾಶವಿರುವುದರಿಂದ ಇದು ಸಂದೇಹಸಂಕರಾಲಂಕಾರದ ಉದಾಹರಣವೆನಿಸಿದೆ. ಇಂತಹ ಪದ್ಯವು ಕಾವ್ಯವೆನಿಸದೆ ಹೋಗಬೇಕಾದೀತು. ಆದ್ದರಿಂದ 'ಎಲ್ಲೆಡೆಯಲ್ಲೂ ಅಲಂಕಾರವಿರಬೇಕು ; ಕೆಲವೆಡೆಗಳಲ್ಲಿ ಸ್ಫುಟವಾದ ಅಲಂಕಾರವಿಲ್ಲದಿದ್ದರೂ ಶಬ್ದಾರ್ಥಗಳು ಕಾವ್ಯವೆನಿಸುತ್ತವೆ' ಎಂದು ಕಾವ್ಯಕ್ಕೆ ಹೇಳಿದ ಲಕ್ಷಣವು ಹೊಂದದೇ ಹೋಗುತ್ತದೆ. ಇದರಿಂದ ಪ್ರಾಚೀನರು "ದೋಷವಿಲ್ಲದೆ, ಗುಣವಿದ್ದು, ಅಲಂಕಾರಗಳಿಂದ ಅಲಂಕೃತವಾಗಿ ರಸದಿಂದ ಕೂಡಿದ್ದೇ ಕಾವ್ಯವೆನಿಸುವುದು. ಇದನ್ನು ರಚಿಸಿದವನು ಕೀರ್ತಿಯನ್ನೂ ಸಂತೋಷವನ್ನೂ ಪಡೆಯುವನು" ಎಂದು ಮುಂತಾಗಿ ಕಾವ್ಯಕ್ಕೆ ಹೇಳಿರುವ ಲಕ್ಷಣಗಳು ಹೊಂದುವುದಿಲ್ಲವೆಂಬುದು ಸ್ಪಷ್ಟವಾಯಿತು.

ಯತ್ತು ಧ್ವನಿಕಾರೇಣೋಕ್ತಂ "ಕಾವ್ಯಸ್ಯಾತ್ಮಾ ಧ್ವನಿಃ"ಇತಿ ತತ್ಕಿಂ ವಸ್ತ್ವಲಂಕಾರರಸಾದಿಲಕ್ಷಣಸ್ತ್ರಿರೂಪೋ ಧ್ವನಿಃ ಕಾವ್ಯಸ್ಯಾತ್ಮಾ, ಉತ ರಸಾದಿರೂಪಮಾತ್ರೋ ವಾ ನಾದ್ಯಃ, ಪ್ರಹೇಳಿಕಾದಾವತಿವ್ಯಾಪ್ತೇಃ. ದ್ವಿತೀಯಶ್ಚೇದೋಮಿತಿ ಬ್ರೂಮಃ. ನನು ಯದಿ ರಸಾದಿರೂಪಮಾತ್ರೋ ಧ್ವನಿಃ ಕಾವ್ಯಸ್ಯಾತ್ಮಾ, ತದಾ

ಶ್ವಶ್ರೂರತ್ರ ನಿಮಜ್ಜತಿ ಅತ್ರಾಹಂ ದಿವಸಕಂ ಪ್ರಲೋಕಯ।
ಮಾ ಪಥಿಕ ರಾತ್ರ್ಯಂಧ ಶಯ್ಯಾಯಾಮಾವಯೋರ್ನಿಮಂಕ್ಷ್ಯಸಿ॥

ಇತ್ಯಾದೌ ವಸ್ತುಮಾತ್ರಸ್ಯ ವ್ಯಂಗ್ಯತ್ವೇ ಕಥಂ ಕಾವ್ಯವ್ಯವಹಾರ ಇತಿ ಚೇನ್ನ, ಅತ್ರಾಪಿ ರಸಾಭಾಸವತ್ತ್ವೈವೇತಿ ಬ್ರೂಮಃ. ಅನ್ಯಥಾ 'ದೇವದತ್ತೋ ಗ್ರಾಮಂ ಯಾತಿ' ಇತಿ ವಾಕ್ಯೇ ತದ್ಭೃತ್ಯಸ್ಯ ತದನುಸರಣರೂಪವ್ಯಂಗ್ಯಾವಗತೇರಪಿ ಕಾವ್ಯತ್ವಂ ಸ್ಯಾತ್. ಅಸ್ತ್ವಿತಿ ಚೇನ್ನ ರಸವತ ಏವ ಕಾವ್ಯತ್ವಾಂಗೀಕಾರಾತ್. ಕಾವ್ಯಸ್ಯ ಪ್ರಯೋಜನಂ ಹಿ ರಸಾಸ್ವಾದ ಸುಖಪಿಂಡದಾನದ್ವಾರಾ ವೇದಶಾಸ್ತ್ರವಿಮುಖಾನಾಂ ಸುಕುಮಾರಮತೀನಾಂ ರಾಜಪುತ್ರಾದೀನಾಂ ವಿನೇಯಾನಾಂ ರಾಮಾದಿವತ್ಪ್ರವರ್ತಿತವ್ಯಂ ನ ರಾವಣಾದಿವತ್ ಇತ್ಯಾದ್ಯಿ ಕೃತಾಕೃತ್ಯಪ್ರವೃತ್ತಿನಿವೃತ್ತ್ಯುಪದೇಶ ಇತಿ ಚಿರಂತನೈರಪ್ಯುಕ್ತತ್ವಾತ್. ತಥಾ ಚಾಗ್ನೇಯ ಪುರಾಣೇಽಪ್ಯುಕ್ತಮ್ "ವಾಗ್ವೈದಗ್ಧ್ಯಪ್ರಧಾನೇಽಪಿ ರಸ ಏವಾತ್ರ ಜೀವಿತಮ್" ಇತಿ. ವ್ಯಕ್ತಿವಿವೇಕಕಾರೇಣಾಪ್ಯುಕ್ತಮ್ "ಕಾವ್ಯಸ್ಯಾತ್ಮನಿ ಸಂಗಿನಿ ರಸಾದಿರೂಪೇ ನ ಕಸ್ಯಚಿದ್ವಿಮತಿಃ" ಇತಿ. ಧ್ವನಿಕಾರೇಣಾಪ್ಯುಕ್ತಮ್ "ನ ಹಿ ಕವೇರಿತಿವೃತ್ತಮಾತ್ರನಿರ್ವಾಹೇಣ ಆತ್ಮಲಾಭಃ, ಇತಿಹಾಸಾದೇವ ತತ್ಸಿದ್ಧೇಃ" ಇತ್ಯಾದಿ. ನನು ತರ್ಹಿ ಪ್ರಬಂಧಾಂತರ್ವರ್ತಿನಾಂ ಕೇಷಾಂಚಿನ್ನೀರಸಾನಾಂ ಪದಾನಾಂ ಕಾವ್ಯತ್ವಂ ನ ಸ್ಯಾದಿತಿ ಚೇನ್ನ ರಸವತ್ಪದ್ಯಾಂತರ್ಗತನೀರಸಪದಾದೀನಾಮಿವ ಪದ್ಯರಸೇನ, ಪ್ರಬಂಧರಸೇನೈವ ತೇಷಾಂ ರಸವತ್ತಾಂಗೀಕಾರಾತ್. ಯತ್ತು ನೀರಸೇಷ್ವಪಿ ಗುಣಾಭಿವ್ಯಂಜಕವರ್ಣಸದ್ಭಾವಾತ್ ದೋಷಾಭಾವಾತ್ ಅಲಂಕಾರಸದ್ಭಾವಾಚ್ಚ ಕಾವ್ಯವ್ಯವಹಾರಃ. ಸಃ ರಸಾದಿಮತ್ಕಾವ್ಯಬಂಧಸಾಮ್ಯಾದ್ಗೌಣ ಏವ. ಯತ್ತು ವಾಮನೇನೋಕ್ತಂ 'ರೀತಿರಾತ್ಮಾ ಕಾವ್ಯಸ್ಯ' ಇತಿ ತನ್ನ, ರೀತೇಃ ಸಂಘಟನಾವಿಶೇಷತ್ವಾತ್, ಸಂಘಟನಾಯಾಶ್ಚ ಅವಯವಸಂಸ್ಥಾನರೂಪತ್ವಾತ್, ಆತ್ಮನಶ್ಚ ತದ್ಭಿನ್ನತ್ವಾತ್. ಯಚ್ಚ ಧ್ವನಿಕಾರೇಣೋಕ್ತಮ್—

ಅರ್ಥಃ ಸಹೃದಯಶ್ಲಾಘ್ಯಃ ಕಾವ್ಯಾತ್ಮಾ ಯೋ ವ್ಯವಸ್ಥಿತಃ।
ವಾಚ್ಯಪ್ರತೀಯಮಾನಾಖ್ಯೌ ತಸ್ಯ ಭೇದಾವುಭೌ ಸ್ಮೃತೌ॥ ಇತಿ.ಅತ್ರ

ವಾಚ್ಯಸ್ಯಾತ್ಮತ್ವಂ 'ಕಾವ್ಯಸ್ಯಾತ್ಮಾ ಧ್ವನಿಃ' ಇತಿ ಸ್ವವಚನವಿರೊಧಾದೇವ ಅಪಾಸ್ತಮ್.

ಧ್ವನಿಕಾರನು "ಕಾವ್ಯಕ್ಕೆ ಧ್ವನಿಯೇ ಆತ್ಮ"ವೆಂದು ಹೇಳಿದ್ದಾನೆ. ಇಲ್ಲಿ ಧ್ವನಿ ಎಂದರೆ ವಸ್ತು, ಅಲಂಕಾರ, ರಸಭಾವಾದಿಗಳು ಇಷ್ಟೂ ಆಗುವುದರಿಂದ ಈ ಮೂರು ಬಗೆಯ ಧ್ವನಿಯೂ ಕಾವ್ಯಕ್ಕೆ ಆತ್ಮವೇ ಅಥವಾ ರಸಭಾವಾದಿಗಳು ಮಾತ್ರವೇ ? ಎಂದು ವಿಕಲ್ಪಗಳು ಸಂಭವಿಸುತ್ತವೆ. ಇವುಗಳಲ್ಲಿ ಮೊದಲನೆಯದು ಯುಕ್ತವಲ್ಲ, ಯಾಕೆಂದರೆ ವಸ್ತು ಅಲಂಕಾರ ರಸಭಾವಾದಿಗಳು ಇವು ಮೂರನ್ನೂ ಕಾವ್ಯದ ಆತ್ಮವೆಂದು ಹೇಳಿದರೆ ಪ್ರಹೇಳಿಕೆ ಮೊದಲಾದವುಗಳಲ್ಲಿಯೂ ಧ್ವನಿ ಇರುವುದೆಂದು ಒಪ್ಪಬೇಕಾಗುತ್ತದೆ. ಯಾವುದೋ ಒಂದಂಶವನ್ನು ಗೂಢವಾಗಿಟ್ಟುಕೊಂಡು ಮತ್ತೊಂದಂಶವನ್ನು ವಾಚ್ಯವಾಗಿ ತಿಳಿಸುವುದೇ ಪ್ರಹೇಳಿಕೆ ಎನಿಸುವುದು. ಇದನ್ನೂ ಸಹ ಧ್ವನಿಕಾವ್ಯವೆಂದು ಭಾವಿಸ

ಬೇಕಾದೀತು ; ಆದರೆ ಇದನ್ನು ಧ್ವನಿ ಎಂದು ಯಾರೂ ಭಾವಿಸಿಲ್ಲ. ರಸಭಾವಾದಿಗಳನ್ನು ಕಾವ್ಯದ ಆತ್ಮವೆಂದು ಹೇಳುವುದಾದರೆ ಅದು ನಮಗೂ ಸಮ್ಮತವೆಂದು ಹೇಳುತ್ತೇವೆ. ಹಾಗೆ ರಸಭಾವಾದಿಗಳಷ್ಟೇ ಧ್ವನಿ ಎನಿಸಿ ಅವೇ ಕಾವ್ಯದ ಆತ್ಮವಾಗುವುದಾದರೆ ಆಗ "ಅತ್ತೆ ಇಲ್ಲಿ ಮಲಗುತ್ತಾಳೆ. ಇಲ್ಲಿ ನಾನು ಮಲಗುತ್ತೇನೆ. ದಾರಿಗನೇ, ರಾತ್ರಿವೇಳೆ ನಿನಗೆ ಕಣ್ಣು ಕಾಣಿಸುವುದಿಲ್ಲ. ಹಾಗೆ ಕಾಣದೆ ನೀನು ನಮ್ಮ ಹಾಸಿಗೆಯ ಮೇಲೆ ಬೀಳ ಬೇಡ. ಹಗಲಿನಲ್ಲಿ ಚೆನ್ನಾಗಿ ನೋಡಿಕೋ" ಎಂಬಲ್ಲಿ ಕೇವಲ ವಸ್ತುವೇ ವ್ಯಂಗ್ಯವೆನಿಸಿರ ವುದರಿಂದ ಇದನ್ನು ಕಾವ್ಯವೆಂದು ಹೇಗೆ ಹೇಳಲಿಕ್ಕಾದೀತು ? ಎಂದು ಕೇಳಿದರೆ "ಹಾಗಲ್ಲ; ಇಲ್ಲಿ ವಸ್ತುಧ್ವನಿಯೇನೂ ಇಲ್ಲ ; ಆದರೆ ರಸಾಭಾಸಕ್ಕೆ ಇದೇ ಉದಾಹರಣ ವಾಗುತ್ತದೆ" ಎಂದು ಹೇಳಬೇಕಾಗುತ್ತದೆ. ಇಲ್ಲವಾದರೆ "ದೇವದತ್ತನು ಗ್ರಾಮಕ್ಕೆ ಹೋಗುತ್ತಾನೆ" ಎಂದು ಅವನ ಮನೆಯ ಆಳು ಹೇಳಿದ ವಾಕ್ಯವು 'ಅವನ ಸೇವಕನು ಅವನನ್ನು ಹಿಂಬಾಲಿಸಿಕೊಂಡು ಹೋಗುವನು' ಎಂಬ ವ್ಯಂಗ್ಯಾರ್ಥವನ್ನು ತೋರಿಸಿ ಕೊಡುವುದರಿಂದ ಅದೂ ಒಂದು ಕಾವ್ಯವೆನಿಸಬೇಕಾದೀತು. ಹಾಗೆಯೇ ಆಗಲಿ ಎಂದು ಹೇಳುವುದಾದರೆ ಅದು ಹೊಂದುವುದಿಲ್ಲ ; ಯಾಕೆಂದರೆ ರಸವುಳ್ಳದ್ದು ಮಾತ್ರವೇ ಕಾವ್ಯ ವೆಂದು ನೀವೇ ಅಂಗೀಕರಿಸಿದ್ದೀರಿ. ಕಾವ್ಯದ ಪ್ರಯೋಜನವಾದರೋ ರಸಾಸ್ವಾದವೆಂಬ ಮೃಷ್ಟಾನ್ನವನ್ನು ಸುಕುಮಾರಮತಿಗಳಿಗೆ ದೊರಕಿಸಿ ಅವರನ್ನು ಪಳಗಿಸುವುದೇ ಆಗಿದೆ. ವೇದಶಾಸ್ತ್ರಗಳನ್ನು ಓದಿ ತಿಳಿಯಲು ಅವರಿಗೆ ಸಾಧ್ಯವಿಲ್ಲದ್ದರಿಂದ ಅವರಿಗೆ ರಾಮಾದಿ ಗಳಂತೆ ಬಾಳಬೇಕೆಂಬ ಪ್ರವೃತ್ತಿಯನ್ನೂ ರಾವಣಾದಿಗಳಂತೆ ಬಾಳಬಾರದೆಂಬ ನಿವೃತ್ತಿ ಯನ್ನೂ ಉಪದೇಶಿಸಿ ಅವರ ವರ್ತನೆಯನ್ನು ತಿದ್ದಿ ಸರಿಪಡಿಸುವುದೇ ಕಾವ್ಯದಿಂದಾಗ ಬೇಕಾದ ಪ್ರಯೋಜನವೆಂದು ಪ್ರಾಚೀನರೂ ಸಹ ತಿಳಿಸಿರುವರು. ಅಗ್ನಿಪುರಾಣ ದಲ್ಲಿ "ವಾಕ್ಚಮತ್ಕಾರವೇ ಪ್ರಧಾನವೆನಿಸಿದ್ದರೂ ಕಾವ್ಯದಲ್ಲಿ ರಸವೇ ಜೀವಾಳವೆನಿಸಿದೆ" ಎಂದು ಹೇಳಿದೆ. ವ್ಯಕ್ತಿವಿವೇಕಕಾರನೂ ಸಹ"ಕಾವ್ಯಕ್ಕೆ ರಸಭಾವಾದಿಗಳೇ ಆತ್ಮವೆನಿಸಿವೆ ಎಂಬ ಅಂಶದಲ್ಲಿ ಯಾರಿಗೂ ಭಿನ್ನಾಭಿಪ್ರಾಯವಿಲ್ಲ" ಎಂದೇ ಹೇಳಿರುವನು.ಧ್ವನಿಕಾರನೂ ಸಹ "ಕವಿಯು ಹಿಂದೆನಡೆದ ಸಮಾಚಾರವನ್ನು ತಿಳಿಸುವುದರಿಂದಲೇ ತನ್ನ ವೈಶಿಷ್ಟ್ಯವನ್ನು ಉಳಿಸಿಕೊಳ್ಳಲಾರನು, ಇತಿಹಾಸದಿಂದಲೇ ಅದನ್ನು ತಿಳಿಯಬಹುದಾದ್ದರಿಂದ ಅದಕ್ಕಾಗಿ ಕಾವ್ಯವು ಬೇಕಾಗಿಲ್ಲ" ವೆಂದು ಹೇಳಿದಾನೆ. ಹಾಗಾದರೆ ಪ್ರಬಂಧದೊಳಗೆ ಬಂದಿರುವ ಕೆಲವು ನೀರಸಪದ್ಯಗಳು ಕಾವ್ಯವೆನಿಸದೆಹೋಗುತ್ತವೆ ಎಂದು ಹೇಳುವುದಾದರೆ ಅದು ಸರಿಯಲ್ಲ. ರಸವತ್ತಾದ ಪದ್ಯದೊಳಗೆ ನೀರಸವಾದ ಕೆಲವು ಪದಗಳು ಸೇರಿದ್ದರೂ ಅವನ್ನೂ ಸಹ ಪದ್ಯ ವೆಂದೇ ಕರೆಯುವಂತೆ ಪ್ರಬಂಧವೆಲ್ಲದರಲ್ಲೂ ವ್ಯಕ್ತವಾಗುವ ರಸವನ್ನು ಗಮನಿಸಿ ನೀರಸ ವಾದ ಪದ್ಯಗಳಲ್ಲೂ ಗುಣಗಳನ್ನು ಪ್ರಕಾಶಿಸುವ ಪದಗಳಿರುವುದರಿಂದಲೂ, ದೋಷವಿಲ್ಲ ದ್ದರಿಂದಲೂ,ಅಲಂಕಾರವಿರುವುದರಿಂದಲೂ, ಅದನ್ನೂ ಕಾವ್ಯ ವೆಂದೇ ವ್ಯವಹರಿಸಬಹುದು. ಆದರೆ ರಸಭಾವಾದಿಗಳಿರುವ ಪದ್ಯದೊಡನೆ ಹೋಲಿಸಿದಾಗ ಅದು ಗೌಣ (ಅಪ್ರಧಾನ)

ವೆನಿಸುತ್ತದೆ. ಆದರೂ ಅದನ್ನು ಕಾವ್ಯವೆಂದು ಕರೆಯಲಿಕ್ಕೆ ಅಡ್ಡಿ ಇಲ್ಲ. ವಾಮನನು "ರೀತಿಯೇ ಕಾವ್ಯದ ಆತ್ಮ" ವೆಂದು ಹೇಳಿದ್ದು ಯುಕ್ತವಲ್ಲ; ಯಾಕೆಂದರೆ ರೀತಿ ಎಂಬುದು ಪದಗಳ ಜೊಡಣೆಯ ಒಂದು ಬಗೆಯೇ ಹೊರತು ಅದು ಆತ್ಮವೆನಿಸಲಾರದು. ಸಂಘಟನೆ ಎಂಬುದು ಪದಗಳ ಜೋಡಣೆಯಾದ್ದರಿಂದ ಆತ್ಮವೆಂಬುದು ಇದಕ್ಕಿಂತ ಬೇರೆಯಾದದ್ದು. ಧ್ವನಿಕಾರನು "ಸಹೃದಯರ ಪ್ರಶಂಸೆಗೆ ಅರ್ಹವಾಗಿಯೂ, ಕಾವ್ಯದ ಆತ್ಮವೆಂದೂ ಯಾವ ಅರ್ಥವು ವ್ಯವಸ್ಥಿತವಾಗಿದೆಯೋ ಅದಕ್ಕೆ ವಾಚ್ಯ ವ್ಯಂಗ್ಯ ಎಂದು ಎರಡು ಭೇದಗಳಿವೆ," ಎಂದು ಹೇಳಿರುವನು. ಇಲ್ಲಿ ವಾಚ್ಯಾರ್ಥವನ್ನು ಕಾವ್ಯದ ಆತ್ಮವೆಂದು ಹೇಳಿದ್ದು "ಕಾವ್ಯಕ್ಕೆ ಧ್ವನಿಯೇ ಆತ್ಮ" ವೆಂದು ಹಿಂದೆ ತಾನೇ ಹೇಳಿದ್ದ ಮಾತಿಗೆ ವಿರುದ್ಧವಾದ್ದರಿಂದ ನಿರಾಕೃತವಾಯಿತು.

ತತ್ಕಿಂಸ್ವರೂಪಂ ಕಾವ್ಯಮಿತ್ಯುಚ್ಯತೇ— "ವಾಕ್ಯಂ ರಸಾತ್ಮಕಂ ಕಾವ್ಯಂ" ರಸಸ್ವರೂಪಂ ನಿರೂಪಯಿಷ್ಯಾಮಃ. ರಸ ಏವಾತ್ಮಾ ಸಾರರೂಪತಯಾ ಜೀವನಾಧಾಯಕೋ ಯಸ್ಯ. ತೇನ ವಿನಾ ಕಾವ್ಯತ್ವಾಭಾವಸ್ಯ ಪ್ರತಿಪಾದಿತತ್ವಾತ್. 'ರಸ್ಯತ ಇತಿ ರಸಃ' ಇತಿ ವ್ಯುತ್ಪತ್ತಿಯೋಗಾತ್ ಭಾವತದಾಭಾಸಾದಯೋಽಪಿ ಗೃಹ್ಯಂತೇ. ತತ್ರ ರಸೋ ಯಥಾ

ಶೂನ್ಯಂ ವಾಸಗೃಹಂ ವಿಲೋಕ್ಯ ಶಯನಾದುತ್ಥಾಯ ಕಿಂಚಿಚ್ಛನೈಃ
ನಿದ್ರಾವ್ಯಾಜಮುಪಾಗತಸ್ಯ ಸುಚಿರಂ ನಿರ್ವರ್ಣ್ಯ ಪತ್ಯುರ್ಮುಖಮ್ ।
ವಿಶ್ರಬ್ಧಂ ಪರಿಚುಂಬ್ಯ ಜಾತಪುಲಕಾಮಾಲೋಕ್ಯ ಗಂಡಸ್ಥಲೀಂ
ಲಜ್ಜಾನಮ್ರಮುಖೀ ಪ್ರಿಯೇಣ ಹಸತಾ ಬಾಲಾ ಚಿರಂ ಚುಂಬಿತಾ ॥

ಅತ್ರ ಹಿ ಸಂಭೋಗಶೃಂಗಾರಾಖ್ಯೋ ರಸಃ

ಭಾವೋ ಯಥಾ ಮಹಾಪಾತ್ರರಾಘವಾನಂದಸಾಂಧಿವಿಗ್ರಹಿಕಾಣಾಮ್:—

ಯಸ್ಯಾಲೀಯತ ಶಲ್ಕಸೀಮ್ನಿ ಜಲಧಿಃ, ಪೃಷ್ಠೇ ಜಗನ್ಮಂಡಲಂ
ದಂಷ್ಟ್ರಾಯಾಂ ಧರಣೀ, ನಖೇ ದಿತಿಸುತಾಧೀಶಃ, ಪದೇ ರೋದಸೀ ।
ಕ್ರೋಧೇ ಕ್ಷತ್ರಗಣಃ ಶರೇ ದಶಮುಖಃ ಪಾಣೌ ಪ್ರಲಂಬಾಸುರೋ
ಧ್ಯಾನೇ ವಿಶ್ವಮಸಾವಧಾರ್ಮಿಕಕುಲಂ ಕಸ್ಮೈಚಿದಸ್ಮೈ ನಮಃ ॥

ಅತ್ರ ಭಗವದ್ವಿಷಯಾ ರತಿರ್ಭಾವಃ. ರಸಾಭಾಸೋ ಯಥಾ—

ಮಧು ದ್ವಿರೇಫಃ ಕುಸುಮೈಕಪಾತ್ರೇ ಪಪೌ ಪ್ರಿಯಾಂ ಸ್ವಾಮನುವರ್ತಮಾನಃ ।
ಶೃಂಗೇಣ ಚ ಸ್ಪರ್ಶನಿಮೀಲಿತಾಕ್ಷೀಂ ಮೃಗೀಮಕಂಡೂಯತ ಕೃಷ್ಣಸಾರಃ ॥

ಅತ್ರ ಸಂಭೋಗಶೃಂಗಾರಸ್ಯ ತಿರ್ಯಗ್ವಿಷಯತ್ವಾದ್ರಸಾಭಾಸಃ. ಏವಮನ್ಯತ್.

ದೋಷಾಃ ಪುನಃ ಕಾವ್ಯೇ ಕಿಂಸ್ವರೂಪಾ ಇತ್ಯುಚ್ಯಂತೇ—

ದೋ ಷಾ ಸ್ತ ಸ್ಯಾ ಪ ಕ ರ್ಷ ಕಾಃ ।

ಶ್ರುತಿದುಷ್ಟಾಪುಷ್ಟತ್ವಾದಯಃ ಕಾಣತ್ವಖಂಜತ್ವಾದಯ ಇವ ಶಬ್ದಾರ್ಥದ್ವಾರೇಣ ದೇಹದ್ವಾರೇಣೇವ ವ್ಯಭಿಚಾರಿಭಾವಾದೇಃ ಸ್ವಶಬ್ದವಾಚ್ಯತ್ವಾದಯೋ ಮೂರ್ಖತ್ವಾದಯ ಇವ ಸಾಕ್ಷಾತ್ಕಾವ್ಯಸ್ಯಾತ್ಮಭೂತಂ ರಸಮುಪಕರ್ಷಯಂತಃ ಕಾವ್ಯಸ್ಯಾಪಕ

ರ್ಷಕಾ ಇತ್ಯುಚ್ಯಂತೇ. ಏಷಾಂ ವಿಶೇಷೋದಾಹರಣಾನಿ ವಕ್ಷ್ಯಾಮಃ.

ಗುಣಾದಯಃ ಕಿಂಸ್ವರೂಪಾ ಇತ್ಯುಚ್ಯಂತೇ—

ಉತ್ಕರ್ಷಹೇತವಃ ಪ್ರೋಕ್ತಾ ಗುಣಾಲಂಕಾರರೀತಯಃ ॥೩॥

ಗುಣಾಃ ಶೌರ್ಯಾದಿವತ್, ಅಲಂಕಾರಾಃ ಕಟಕಕುಂಡಲಾದಿವತ್, ರೀತಯೋ ಅವಯವಸಂಸ್ಥಾನವಿಶೇಷವತ್, ದೇಹದ್ವಾರೇಣೇವ ಶಬ್ದಾರ್ಥದ್ವಾರೇಣ ತಮೇವ ಕಾವ್ಯಸ್ಯಾತ್ಮಭೂತಂ ರಸಮುತ್ಕರ್ಷಯಂತಃ ಕಾವ್ಯಸ್ಯೋತ್ಕರ್ಷಕಾ ಇತ್ಯುಚ್ಯಂತೇ. ಇಹ ಯದ್ಯಪಿ ಗುಣಾನಾಂ ರಸಧರ್ಮತ್ವಂ ತಥಾಪಿ ಗುಣಶಬ್ದೋಽತ್ರ ಗುಣಾಭಿವ್ಯಂಜಕಶಬ್ದಾರ್ಥಯೋರುಪಚರ್ಯತೇ. ಅತಶ್ಚ "ಗುಣಾಭಿವ್ಯಂಜಕಾಃ ಶಬ್ದಾಃ ರಸಸ್ಯೋತ್ಕರ್ಷಕಾಃ" ಇತ್ಯುಕ್ತಂ ಭವತೀತಿ ಪ್ರಾಗೇವೋಕ್ತಮ್. ಏಷಾಮಪಿ ವಿಶೇಷೋದಾಹರಣಾನಿ ವಕ್ಷ್ಯಾಮಃ.

ಇತಿ ಕಾವ್ಯಸ್ವರೂಪನಿರೂಪಣಂ ನಾಮ ಪ್ರಥಮಃ ಪರಿಚ್ಛೇದಃ

ಕಾವ್ಯಸ್ವರೂಪವೆಂತಹದೆಂಬುದನ್ನು ತಿಳಿಸುತ್ತಾನೆ.

"ರಸಾತ್ಮಕವಾದ ವಾಕ್ಯವೇ ಕಾವ್ಯವೆನಿಸುತ್ತದೆ" ರಸಸ್ವರೂಪವನ್ನು ಮುಂದೆ ತಿಳಿಸಲಾಗುವುದು. ಆ ಬಗೆಯ ರಸವೇ ಸಾರವೆನಿಸಿದ್ದು ಯಾವುದಕ್ಕೆ ಜೀವವಾಗಿದೆಯೋ ಅಂತಹ ವಾಕ್ಯವೇ ಕಾವ್ಯವೆನಿಸಿದೆ. ರಸವಿಲ್ಲದಿದ್ದರೆ ಆ ವಾಕ್ಯವು ಕಾವ್ಯವೆನಿಸುವುದೇ ಇಲ್ಲವೆಂದು ಹಿಂದೆಯೇ ತಿಳಿಸಿವೆ. ಅನುಭವಿಸಲಿಕ್ಕೆ ಯೋಗ್ಯವಾದುದೇ ರಸವೆಂಬ ವ್ಯುತ್ಪತ್ತಿಯಿಂದ ರಸಪದವು ಅನುಭವಾರ್ಹವಾದ ಭಾವ ಮತ್ತು ರಸಭಾವಗಳ ಆಭಾಸಗಳಿಗೂ ಅನ್ವಯಿಸುತ್ತದೆ. ಈಗ ರಸವನ್ನು ಉದಾಹರಿಸಲಾಗುವುದು. "ವಾಸದ ಮನೆಯನ್ನು ಶೂನ್ಯವೆಂದು ತಿಳಿದು ಹಾಸಿಗೆಯಿಂದ ಕೊಂಚವೇ ಮೆಲ್ಲಗೆ ಎದ್ದು, ನಿದ್ರೆ ಮಾಡುವಂತೆ ನಟಿಸುತ್ತಿದ್ದ ಪತಿಯ ಮುಖವನ್ನು ಬಹಳ ಹೊತ್ತು ದಿಟ್ಟಿಸಿ ನೋಡಿ ವಿಶ್ವಾಸದಿಂದ ಮುತ್ತಿಟ್ಟು ರೋಮಾಂಚಗೊಂಡ ಕಪೋಲಸ್ಥಲವನ್ನು ನೋಡಿ ನಾಚಿಕೆಯಿಂದ ತಲೆಯನ್ನು ಬಗ್ಗಿಸಿಕೊಂಡಿದ್ದ ಬಾಲಿಕೆಯನ್ನು ಪ್ರಿಯನು ನಗುತ್ತಲೇ ಬಹಳ ಹೊತ್ತು ಚುಂಬಿಸಿದನು" ಇಲ್ಲಿ ಸಂಭೋಗಶೃಂಗಾರರಸವು ಅಭಿವ್ಯಕ್ತವಾಗುತ್ತದೆ. ಇಲ್ಲಿ ನಾಯಕ ನಾಯಿಕೆಯರಿಬ್ಬರೂ ಅನ್ಯೋನ್ಯವಾಗಿ ಅವಲಂಬನರೆನಿಸಿದ್ದಾರೆ. ಶೂನ್ಯಗೃಹ ಮೊದಲಾದವು ರತಿಭಾವವನ್ನು ಉದ್ದೀಪಿಸುತ್ತವೆ. ಉತ್ಸಾಹ ಮೊದಲಾದವು ವ್ಯಭಿಚಾರಿಭಾವಗಳು. ಉತ್ಥಾನ ಮೊದಲಾದ ಕ್ರಿಯೆಗಳು ಅನುಭಾವಗಳು.

ಮಹಾಮಂತ್ರಿ ಎನಿಸಿದ ರಾಘವಾನಂದ ಎಂಬ ಸಂಧಿವಿಗ್ರಹಗಳ ವ್ಯವಸ್ಥಾಪಕನು ಕೊಟ್ಟಿರುವ ಭಾವಾಭಿವ್ಯಕ್ತಿಯನ್ನು ಹೀಗೆ ಉದಾಹರಿಸಿದ್ದಾನೆ. ನಾರಾಯಣನ ದಶಾವತಾರಲೀಲೆಯನ್ನು ತಿಳಿಸುತ್ತಾನೆ. "ಯಾವನ ಶರೀರದ ಒಂದು ಮೂಲೆಯಲ್ಲಿ ಸಾಗರವು ಅಡಗಿತ್ತೋ (ಮತ್ಸ್ಯಾವತಾರ), ಹಿಂಭಾಗದಲ್ಲಿ ವಿಶ್ವವೆಲ್ಲವೂ ಅಡಗಿತ್ತೋ (ಕೂರ್ಮಾವತಾರ) ಕೋರೆಹಲ್ಲಿನಲ್ಲಿ ಭೂಮಿಯೇ ಅಡಗಿತ್ತೋ, ಉಗುರಿನಲ್ಲಿ ಹಿರಣ್ಯಕಶಿಪು ನಾಶವಾ-

ದನೋ (ನರಸಿಂಹಾವತಾರ), ಪಾದದಲ್ಲಿ ಸ್ವರ್ಗಮರ್ತ್ಯಗಳೆರಡೂ ಲೀನವಾಗಿದ್ದವೋ (ವಾಮನಾವತಾರ), ಕ್ರೋಧದಲ್ಲಿ ಕ್ಷತ್ರಿಯವಂಶವೇ ನಾಶಗೊಂಡಿತೋ (ಪರಶುರಾಮಾವತಾರ), ಬಾಣದಲ್ಲಿ ರಾವಣನು ನಾಶವಾದನೋ (ರಾಮಾವತಾರ), ಕೈಯಿಂದಲೇ ಪ್ರಲಂಬಾಸುರನು ನಾಶಗೊಂಡನೋ (ಬಲರಾಮಾವತಾರ), ಧ್ಯಾನದಲ್ಲಿ ವಿಶ್ವವೆಲ್ಲವೂ ಅಂತರ್ಗತವಾಗಿತ್ತೋ (ಬುದ್ಧಾವತಾರ) ಯಾವನ ಖಡ್ಗದಲ್ಲಿ ಮ್ಲೇಚ್ಛವಂಶವೇ ನಾಶವಾಯಿತೋ (ಕಲ್ಕಿ ಅವತಾರ) ಇಂತಹ ಮಹಿಮಾಶಾಲಿಯಾದ ನಾರಾಯಣನಿಗೆ ನಮಸ್ಕಾರ". ಇಲ್ಲಿ ಭಗವಂತನ ಬಗ್ಗೆ ಭಕ್ತನಿಗೆ ಇದ್ದ ರತಿಭಾವವು ವ್ಯಕ್ತವಾಗುತ್ತದೆ.

ರಸಾಭಾಸವನ್ನು ಈಗ ಉದಾಹರಿಸುತ್ತಾನೆ—

"ತನ್ನ ಪ್ರಿಯೆಯನ್ನು ಅನುಸರಿಸುತ್ತಲೇ ದುಂಬಿಯು ಪುಷ್ಪವೆಂಬ ಒಂದೇ ಪಾತ್ರೆಯಲ್ಲಿ ಮಧುವನ್ನು ಕುಡಿಯಿತು. ಗಂಡುಜಿಂಕೆಯು ಮುಟ್ಟಿದ್ದರಿಂದಲೇ ಕಣ್ಣನ್ನು ಮುಚ್ಚಿಕೊಂಡಿದ್ದ ಹೆಣ್ಣು ಜಿಂಕೆಯನ್ನು ಅದು ಕೊಂಬಿನಿಂದ ಉಜ್ಜಿತು". ಇಲ್ಲಿ ಸಂಭೋಗಶೃಂಗಾರವು ತಿರ್ಯಕ್ಪ್ರಾಣಿಗಳಿಗೆ ಅನ್ವಯಿಸದೇ ಇರುವುದರಿಂದ ಇದು ರಸದಂತೆ ತೋರುತ್ತದೆ.

ರಸಕ್ಕೆ ಭಂಗವನ್ನುಂಟುಮಾಡುವಂತಹವೇ ದೋಷವೆನಿಸುವುದು. ಶ್ರುತಿದುಷ್ಟ (ಕೇಳಲಿಕ್ಕೆ ಅಸಹ್ಯವಾದ ಶಬ್ದ) ಅಪುಷ್ಟಾರ್ಥ (ಪ್ರಕೃತಾರ್ಥವನ್ನು ಪೋಷಿಸದಿರುವ್ವ ಅಂಶಗಳಿಂದೊಡಗೂಡಿರುವಿಕೆ) ಇವೇ ಮೊದಲಾದವು ಕಾವ್ಯದೋಷಗಳೆನಿಸಿವೆ. ಕುಂಟುತನ, ಕುರುಡುತನ ಇವೇ ಮೊದಲಾದವು ದೇಹದ ಮೂಲಕ ಆತ್ಮನಿಗೆ ಹಾನಿಯನ್ನುಂಟುಮಾಡುವಂತೆ ಕಾವ್ಯದೋಷಗಳು ಶಬ್ದಾರ್ಥಗಳ ಮೂಲಕ ಆತ್ಮವೆನಿಸಿದ ರಸಕ್ಕೆ ಹಾನಿಯನ್ನುಂಟುಮಾಡುತ್ತವೆ. ವ್ಯಭಿಚಾರಿಭಾವ ಮೊದಲಾದುವನ್ನು ಆಯಾ ಶಬ್ದಗಳಿಂದಲೇ ಸ್ಪಷ್ಟವಾಗಿ ತಿಳಿಸುವುದೇ ಮೊದಲಾದ ದೋಷಗಳಾದರೋ ಮೂರ್ಖತನ ಮೊದಲಾದವುಗಳಂತೆ ನೇರವಾಗಿ ಕಾವ್ಯದ ಆತ್ಮವೆನಿಸಿದ ರಸವನ್ನು ಕೆಳಮಟ್ಟಕ್ಕೆ ತರುತ್ತ ಕಾವ್ಯಕ್ಕೆ ಆಘಾತವೆನಿಸುತ್ತವೆ. ಇವುಗಳ ವಿಶೇಷೋದಾಹರಣಗಳನ್ನು ಮುಂದೆ ತಿಳಿಸಲಾಗುವುದು.

ಗುಣ ಮೊದಲಾದವು ಕಾವ್ಯದಲ್ಲಿ ಹೇಗಿರುತ್ತವೆ ಎಂಬುದನ್ನು ತಿಳಿಸುತ್ತಾನೆ—

ಗುಣಾದಿಗಳು ಕಾವ್ಯದಲ್ಲಿ ಉತ್ಕರ್ಷವನ್ನು ಹುಟ್ಟಿಸುತ್ತವೆ. ಶೌರ್ಯ, ಧೈರ್ಯ ಮೊದಲಾದ ಆತ್ಮಧರ್ಮಗಳಂತೆ ಗುಣಗಳು, ಶರೀರವನ್ನು ಅಲಂಕರಿಸುವ ಬಳೆಒಲೆಗಳಂತೆ ಅಲಂಕಾರಗಳು, ಪದಗಳ ಜೋಡಣೆಯಂತೆ ರೀತಿಗಳು ಕಾವ್ಯದ ದೇಹವೆನಿಸಿದ ಶಬ್ದಾರ್ಥಗಳ ಮೂಲಕ ಕಾವ್ಯದ ಆತ್ಮವೆನಿಸಿದ ರಸವನ್ನು ಶೋಭಿಸುವಂತೆ ಮಾಡುತ್ತ ಕಾವ್ಯದ ಉತ್ತೇಜಕಗಳೆನಿಸಿವೆ. ಇಲ್ಲಿ ಗುಣಗಳು ರಸಧರ್ಮವೆನಿಸಿದ್ದರೂ ಗುಣಶಬ್ದವನ್ನು ಇಲ್ಲಿ ಗುಣವನ್ನು ಪ್ರಕಾಶಪಡಿಸುವ ಶಬ್ದಾರ್ಥಗಳಲ್ಲಿ ಲಕ್ಷಣೆಯಿಂದ ಪ್ರಯೋಗಿಸಲಾಗಿದೆ. ಆದ್ದರಿಂದ "ಗುಣವನ್ನು ಪ್ರಕಾಶಪಡಿಸುವ ಶಬ್ದಗಳು ರಸಕ್ಕೆ ಉತ್ಕರ್ಷಕಗಳು" ಎಂದು ಹೇಳಿದಂತಾಗುವುದೆಂದು ಹಿಂದೆಯೇ ತಿಳಿಸಿದೆ. ಇವಕ್ಕೆ ವಿಶೇಷವಾದ ಉದಾಹರಣಗಳನ್ನು ಮುಂದೆ ತಿಳಿಸುವೆವು.

## ದ್ವಿತೀಯಪರಿಚ್ಛೇದ

ವಾಕ್ಯಸ್ವರೂಪಮಾಹ—

ವಾಕ್ಯಂ ಸ್ಯಾದ್ಯೋಗ್ಯತಾಕಾಂಕ್ಷಾಸತ್ತಿಯುಕ್ತಃ ಪದೋಚ್ಚಯಃ ।

ಯೋಗ್ಯತಾ ಪದಾರ್ಥಾನಾಂ ಪರಸ್ಪರಸಂಬಂಧೇ ಬಾಧಾಭಾವಃ. ಪದೋಚ್ಚಯಸ್ಯೈತದಭಾವೇಽಪಿ ವಾಕ್ಯತ್ವೇ " ವಹ್ನಿನಾ ಸಿಂಚತಿ " ಇತ್ಯಾದ್ಯಪಿ ವಾಕ್ಯಂ ಸ್ಯಾತ್. ಆಕಾಂಕ್ಷಾ ಪ್ರತೀತಿಪರ್ಯವಸಾನವಿರಹಃ. ಸ ಚ ಶ್ರೋತುರ್ಜಿಜ್ಞಾಸಾರೂಪಃ. ನಿರಾಕಾಂಕ್ಷಸ್ಯ ವಾಕ್ಯತ್ವೇ ' ಗೌರಶ್ವಃ ಪುರುಷೋ ಹಸ್ತೀ ' ಇತ್ಯಾದೀನಾಮಪಿ ವಾಕ್ಯತ್ವಂ ಸ್ಯಾತ್. ಆಸತ್ತಿರ್ಬುದ್ಧ್ಯವಿಚ್ಛೇದಃ. ಬುದ್ಧಿವಿಚ್ಛೇದೇಽಪಿ ವಾಕ್ಯತ್ವೇ ಇದಾನೀಮುಚ್ಚರಿತಸ್ಯ ದೇವದತ್ತಶಬ್ದಸ್ಯ ದಿನಾಂತರೋಚ್ಚರಿತೇನ ಗಚ್ಛತೀತಿ ಪದೇನ ಸಂಗತಿಃ ಸ್ಯಾತ್. ಅತ್ರಾಕಾಂಕ್ಷಾಯೋಗ್ಯತಯೋರಾತ್ಮಾರ್ಥಧರ್ಮತ್ವೇಽಪಿ ಪದೋಚ್ಚಯಧರ್ಮತ್ವಂ ಉಪಚಾರಾತ್.

ವಾಕ್ಯೋಚ್ಚಯೋ ಮಹಾವಾಕ್ಯಂ ಇತ್ಥಂ ವಾಕ್ಯಂ ದ್ವಿಧಾ ಮತಮ್ । ಯೋಗ್ಯತಾಕಾಂಕ್ಷಾಸತ್ತಿಯುಕ್ತ ಏವ. ಇತ್ಥಮಿತಿ ವಾಕ್ಯತ್ವೇನ ಮಹಾವಾಕ್ಯತ್ವೇನ ಚ. ಉಕ್ತಂ ಚ

ಸ್ವಾರ್ಥಬೋಧೇ ಸಮಾಪ್ತಾನಾಂ ಅಂಗಾಂಗಿತ್ವವ್ಯಪೇಕ್ಷಯಾ ।

ವಾಕ್ಯಾನಾಮೇಕವಾಕ್ಯತ್ವಂ ಪುನಃ ಸಂಹತ್ಯ ಜಾಯತೇ॥ ಇತಿ. ತತ್ರ ವಾಕ್ಯಂ ಯಥಾ ' ಶೂನ್ಯಂ ವಾಸಗೃಹಂ ' ಇತ್ಯಾದಿ. ಮಹಾವಾಕ್ಯಂ ಯಥಾ ರಾಮಾಯಣ ಮಹಾಭಾರತರಘುವಂಶಾದಿ. ಪದೋಚ್ಚಯೋ ವಾಕ್ಯಮಿತ್ಯುಕ್ತಮ್. ತತ್ರಂ ಕಿಂ ಪದ ಲಕ್ಷಣಮಿತ್ಯತ ಆಹ—

ವರ್ಣಾಃ ಪದಂ ಪ್ರಯೋಗಾರ್ಹಾನನ್ವಿತೈಕಾರ್ಥಬೋಧಕಾಃ। ಯಥಾ ಘಟಃ. ಪ್ರಯೋಗಾರ್ಹೇತಿ ಪ್ರಾತಿಪದಿಕಸ್ಯವ್ಯವಚ್ಛೇದಃ.ಅನನ್ವಿತೇತಿ ವಾಕ್ಯಮಹಾವಾಕ್ಯಯೋ. ಏಕೇತಿ ಸಾಕಾಂಕ್ಷಾನೇಕಪದವಾಕ್ಯಾನಾಮ್. ಅರ್ಥಬೋಧಕಾ ಇತಿ ಕಚಟತಪೇತ್ಯಾದಿನಾಂವ್ಯವಚ್ಛೇದಃ . ವರ್ಣಾ ಇತಿ ಬಹುವಚನಮವಿವಕ್ಷಿತಮ್.

ವಾಕ್ಯವೆಂದರೇನೆಂಬುದನ್ನು ಇಲ್ಲಿ ತಿಳಿಸುತ್ತಾನೆ. ಯೋಗ್ಯತೆ, ಆಕಾಂಕ್ಷೆ, ಆಸಕ್ತಿ ಇವುಗಳಿಂದ ಕೂಡಿರುವ ಪದಗಳ ಸಮೂಹವೇ ವಾಕ್ಯವೆನಿಸುತ್ತದೆ. ಪದಗಳ ಅರ್ಥಗಳು ಒಂದಕ್ಕೊಂದು ಸಂಬಂಧಿಸಲಿಕ್ಕೆ ಯಾವ ಅಡಚಣೆಯೂ ಆಗದಂತಿರುವುದೇ ಯೋಗ್ಯತೆ ಎನಿಸುವುದು. ಪದಗಳ ಸಮೂಹದಲ್ಲಿ ಇದಿಲ್ಲದಿದ್ದರೂ ಆ ಸಮೂಹವು ವಾಕ್ಯವೆನಿಸುವುದಾದರೆ 'ಬೆಂಕಿಯಿಂದ ನೆನೆಸುತ್ತಾನೆ' ಎಂಬ ಪದಸಮೂಹವೂ ವಾಕ್ಯವೆನಿಸಬೇಕಾದೀತು. ಇಲ್ಲಿ ಬೆಂಕಿಗೂ ಸೇಚನಕ್ರಿಯೆಗೂ ಪರಸ್ಪರ ಸಂಬಂಧವಿಲ್ಲದ್ದರಿಂದ ಇಂತಹ ಪದಸಮೂಹವು ವಾಕ್ಯವೆನಿಸಲಾರದು. ಒಂದೆಡೆ ಉಪಯೋಗಿಸಿರುವ ಪದಗಳ ಅರ್ಥಗಳು ಕೇಳುವವನ ಬುದ್ಧಿಗೆ ಗೋಚರವಾಗದಿರುವ ಸ್ಥಿತಿಯೇ ಆಕಾಂಕ್ಷೆ ಎನಿಸುವುದು. ಇದು ಕೇಳುವವನ ಇಚ್ಛೆಯನ್ನವಲಂಬಿಸಿರುವುದು. ಒಂದೇ ಕೆಲಸವು ಯಾರಿಂದ ಏತಕ್ಕಾಗಿ ನಡೆಯಿತೆಂಬ ಜಿಜ್ಞಾಸೆಯೇ ಆಕಾಂಕ್ಷೆ. ಇದಿಲ್ಲದ ಪದಸಮೂಹವೂ ವಾಕ್ಯವಾಗುವು

ದಾದರೆ 'ಗೊವು, ಕುದುರೆ, ಗಂಡಸು ಆನೆ' ಈ ಬಗೆಯ ಪದಸಮೂಹವೂ ವಾಕ್ಯವೇ ಆಗಬೇಕಾದೀತು. ಈ ಪದಗಳಿಗೆ ಪರಸ್ಪರ ಆಕಾಂಕ್ಷೆಯಿಲ್ಲದ್ದರಿಂದ ಇವು ಒಟ್ಟಿಗೆ ಸೇರಿದರೂ ವಾಕ್ಯವೆನಿಸಲಾರವು. ಕೇಳುವವರಿಗೆ ಪದಾರ್ಥಗಳ ಜ್ಞಾನವು ಯಾವ ಅಡಚಣೆಯೂ ಇಲ್ಲದೆ ಆಗುವುದೇ ಆಸಕ್ತಿ ಎನಿಸುವುದು. ಈ ಬಗೆಯ ಜ್ಞಾನವು ತೋರದಿದ್ದರೂ ಒಂದು ಪದಸಮೂಹವು ವಾಕ್ಯವೆನಿಸುವುದಾದರೆ ಈ ದಿನ ಉಚ್ಚರಿಸಿದ ದೇವದತ್ತಪದಕ್ಕೆ ನಾಳೆಯ ದಿನ ಉಚ್ಚರಿಸುವ ಗಚ್ಛತಿ ಎಂಬ ಪದದೊಡನೆ ಸಂಬಂಧವು ತೋರಬೇಕಾದೀತು. ಪದಗಳನ್ನು ಒಟ್ಟಿಗೆ ಒಂದಾದಮೇಲೊಂದನ್ನು ಉಚ್ಚರಿಸಿದರೆ ಮಾತ್ರವೇ ಅವುಗಳ ಜ್ಞಾನವು ಬುದ್ಧಿಯಲ್ಲಿ ತೋರುತ್ತದೆ. ಆದ್ದರಿಂದ ಪದಗಳಿಗೆ ಇದು ಇದ್ದೇ ಇರಬೇಕು. ಇಲ್ಲಿ ಆಕಾಂಕ್ಷೆ ಎಂಬುದು ಕೇಳುವವನ ಮತ್ತು ಹೇಳುವವನ ಆತ್ಮದಲ್ಲಿರುವ ಧರ್ಮ. ಯೋಗ್ಯತೆ ಎಂಬುದು ವಸ್ತುವಿನಲ್ಲಿರುವ ಧರ್ಮ. ಆದರೂ ಇವು ಪದಗಳ ರಾಶಿಗೆ ಸಂಬಂಧಿಸಿವೆ ಎಂದು ಹೇಳಿದ್ದು ಗೌಣ (ಅಪ್ರಧಾನ)ವೆನಿಸಿದೆ. ಇವೆರಡೂ ಪದಸಮೂಹಕ್ಕೆ ಸೇರಿದವಾದ್ದರಿಂದ ಹೀಗೆ ಹೇಳಿದೆ. ವಾಕ್ಯಗಳ ರಾಶಿಯೇ ಮಹಾವಾಕ್ಯವೆನಿಸುವುದು. ಇಲ್ಲಿಯೂ ಪದಗಳಿರುವಂತೆ ಆಕಾಂಕ್ಷೆ ಯೋಗ್ಯತೆ ಆಸತ್ತಿಗಳು ಇರಬೇಕು. ಹೀಗೆ ವಾಕ್ಯವು ಸಾಮಾನ್ಯವಾಕ್ಯವೆಂದೂ, ಮಹಾವಾಕ್ಯವೆಂದೂ ಎರಡುಬಗೆಯಾಗುತದೆ. ವಾಕ್ಯಗಳು ತಮ್ಮ ಅರ್ಥವನ್ನು ತಿಳಿಸಿಯಾದ ಮೇಲೆ ಒಂದು ಪ್ರಧಾನವಾಗಿದ್ದು ಮತ್ತೊಂದು ಅಪ್ರಧಾನವಾಗಿದ್ದರೆ ಆ ಸ್ಥಿತಿಯನ್ನವಲಂಬಿಸಿ ಎಲ್ಲವೂ ಒಟ್ಟುಗೂಡಿ ಒಂದು ವಾಕ್ಯವಾಗಿ ತೋರುವುದೇ ಮಹಾವಾಕ್ಯವೆನಿಸುವುದು. "ಶೂನ್ಯಂ ವಾಸಗೃಹಂ" ಎಂದು ಮುಂತಾದ ಪದವು ವಾಕ್ಯವೆನಿಸುತ್ತದೆ. ಇಂತಹ ಪದ್ಯಗಳನ್ನೊಳಗೊಂಡ ರಾಮಾಯಣ, ಮಹಾಭಾರತ, ರಘುವಂಶ ಮೊದಲಾದವು ಮಹಾವಾಕ್ಯವೆನಿಸುತ್ತವೆ.

ಪದಗಳ ಸಮೂಹವೇ ವಾಕ್ಯವೆಂದು ಹೇಳಿದ್ದರಿಂದ ಪದದ ಸ್ವರೂಪವನ್ನು ಈಗ ತಿಳಿಸಲಾಗುವುದು. ವಾಕ್ಯದಲ್ಲಿ ಪ್ರಯೋಗಿಸಲರ್ಹವೆನಿಸಿದ್ದು, ಒಂದಕ್ಕೊಂದು ಸಂಬಂಧಿಸದಿರುವ ಒಂದೇಬಗೆಯ ಅರ್ಥವನ್ನು ತಿಳಿಸುವ ವರ್ಣಗಳೇ ಪದವೆನಿಸುತ್ತವೆ. ಘಟಃ ಎಂಬುದು ಘ, ಟ, ಎಂಬ ಎರಡು ವರ್ಣಗಳಿಂದ ಕೂಡಿ ಪದವೆನಿಸಿದೆ. ಹೀಗೆ ಹೇಳಿದ್ದರಿಂದ ವಾಕ್ಯದಲ್ಲಿ ಪ್ರಯೋಗಿಸಲಿಕ್ಕಾದಿರಗುವ ಪ್ರಾತಿಪದಿಕವು (ಶಬ್ದದ ಮೂಲರೂಪ) ಪದವೆನಿಸುವುದಿಲ್ಲ. ವಾಕ್ಯ ಮಹಾಕಾವ್ಯಗಳು ಒಂದಕ್ಕೊಂದು ಹೊಂದಿಕೊಂಡಿರುವ ಅರ್ಥವನ್ನೇ ತಿಳಿಸುವುದರಿಂದ ಪದವೆನಿಸಲಾರವು. ಒಂದೇ ಅರ್ಥವನ್ನು ಬೋಧಿಸಬೇಕೆಂದು ಹೇಳಿದ್ದರಿಂದ ಪರಸ್ಪರ ಆಕಾಂಕ್ಷೆಯುಳ್ಳ ಅನೇಕ ಪದಗಳನ್ನೊಳಗೊಂಡ ವಾಕ್ಯಗಳು ಪದವೆನಿಸಲಾರವು. ಅರ್ಥವನ್ನು ಬೋಧಿಸಬೇಕೆಂದು ಹೇಳಿದ್ದರಿಂದ ಕಚಟತಪ ಎಂಬುವು ಯಾವ ಅರ್ಥವನ್ನೂ ಬೋಧಿಸದಿರುವ ಪ್ರಯುಕ್ತ ಪದವೆನಿಸುವುದಿಲ್ಲ. ಮೂಲದಲ್ಲಿ ವರ್ಣಾಃ ಎಂದು ಬಹುವಚನವನ್ನು ಹೇಳಿದ್ದರೂ ಅನೇಕವರ್ಣಗಳೇ ಇರಬೇಕೆಂಬ ನಿರ್ಬಂಧವೇನೂ ಇಲ್ಲ. ಒಂದೇ ವರ್ಣವೂ ಪದವೆನಿಸಬಹುದು.

ಅರ್ಥೋ ವಾಚ್ಯಶ್ಚ ಲಕ್ಷ್ಯಶ್ಚ ವ್ಯಂಗ್ಯಶ್ಚೇತಿ ತ್ರಿಧಾ ಮತಃ ||೨||

ಏಷಾಂ ಸ್ವರೂಪಮಾಹ—

ವಾಚ್ಯೋಽರ್ಥೋಽಭಿಧಯಾ ಬೋಧ್ಯೋ ಲಕ್ಷ್ಯೋ ಲಕ್ಷಣಾಯಾ ಮತಃ |
ವ್ಯಂಗ್ಯೋ ವ್ಯಂಜನಯಾ ತಾಃ ಸ್ಯುಸ್ತಿಸ್ರಃ ಶಬ್ದಸ್ಯ ಶಕ್ತಯಃ ||೩||

ತಾಃ ಅಭಿಧಾದ್ಯಾಃ |

ತತ್ರ ಸಂಕೇತಿತಾರ್ಥಸ್ಯ ಬೋಧನಾದಗ್ರಿಮಾಽಭಿಧಾ ||

ಉತ್ತಮವೃದ್ಧೇನ ಮಧ್ಯಮವೃದ್ಧಮುದ್ದಿಶ್ಯ 'ಗಾಮಾನಯ' ಇತ್ಯುಕ್ತೇ ತಂ ಗವಾನಯನಪ್ರವೃತ್ತಂ ಉಪಲಭ್ಯ ಬಾಲೋಽಸ್ಯ ವಾಕ್ಯಸ್ಯ "ಸಾಸ್ನಾದಿಮತ್ಪಿಂಡಾ-ನಯನಂ ಅರ್ಥಃ" ಇತಿ ಪ್ರಥಮಂ ಪ್ರತಿಪದ್ಯತೇ. ಅನಂತರಂ ಚ 'ಗಾಂ ಬಧಾನ, ಅಶ್ವಮಾನಯ' ಇತ್ಯಾದೌ ಆವಾಪೋದ್ವಾಪಾಭ್ಯಾಂ ಗೋಶಬ್ದಸ್ಯ 'ಸಾಸ್ನಾದಿ ಮಾನರ್ಥಃ' ಆನಯನಶಬ್ದಸ್ಯ ಚ 'ಆಹರಣಮರ್ಥಃ' ಇತಿ ಸಂಕೇತಮವಧಾರಯತಿ. ಕ್ವಚಿಚ್ಚ ಪ್ರಸಿದ್ಧಪದಸಮಭಿವ್ಯಾಹಾರಾತ್. ಯಥಾ "ಇಹ ಪ್ರಭಿನ್ನಕಮಲೋದರೇ ಮಧೂನಿ ಮಧುಕರಃ ಪಿಬತಿ" ಇತ್ಯತ್ರ ಕ್ವಚಿದಾಪ್ತೋಪದೇಶಾತ್ ಯಥಾ 'ಅಯಂ' ಅಶ್ವಶಬ್ದವಾಚ್ಯಃ" ಇತ್ಯತ್ರ, ತಂ ಚ ಸಂಕೇತಿತಮರ್ಥಂ ಬೋಧಯಂತೀ ಶಬ್ದಸ್ಯ ಶಕ್ತ್ಯಂತರಾನಂತರಿತಾ ಶಕ್ತಿರಭಿಧಾ ನಾಮ.

ಸಂಕೇತೋ ಗೃಹ್ಯತೇ ಜಾತೌ ಗುಣದ್ರವ್ಯಕ್ರಿಯಾಸು ಚ ||೪||

ಜಾತಿರ್ಗೋಪಿಂಡಾದಿಷು ಗೋತ್ವಾದಿಕಾ. ಗುಣೋ ವಿಶೇಷಾಧಾನಹೇತುಃ ಸಿದ್ಧೋ ವಸ್ತುಧರ್ಮಃ. ಶುಕ್ಲಾದಯೋ ಹಿ ಗವಾದಿಕಂ ಸಜಾತೀಯೇಭ್ಯಃ ಕೃಷ್ಣ ಗವಾದಿಭ್ಯೋ ವ್ಯಾವರ್ತಯಂತಿ. ದ್ರವ್ಯಶಬ್ದಾಃ ಏಕವ್ಯಕ್ತಿವಾಚಿನೋ ಹರಿಹರಡಿತ್ಥ ಡಪಿತ್ಥಾದಯಃ. ಕ್ರಿಯಾಃ ಸಾಧ್ಯರೂಪಾಃ ವಸ್ತುಧರ್ಮಾಃ ಪಾಕಾದಯಃ. ಏಷಾ ಹಿ ಅಧಿಶ್ರಯಣಾವಶ್ರಯಣಾಂತಾದಿಪೂರ್ವಾಪರೀಭೂತವ್ಯಾಪಾರಕಲಾಪಃ ಪಾಕಾದಿಶಬ ವಾಚ್ಯಃ. ಏಷ್ವೇವ ಹಿ ವ್ಯಕ್ತೇರುಪಾಧಿಷು ಸಂಕೇತೋ ಗೃಹ್ಯತೇ; ನ ವ್ಯಕ್ತೌ ಆನಂತ ವ್ಯಭಿಚಾರದೋಷಾಪಾತಾತ್.

ಅರ್ಥವು ವಾಚ್ಯ, ಲಕ್ಷ್ಯ. ವ್ಯಂಗ್ಯ ಎಂದು ಮೂರು ಬಗೆಯಾಗಿದೆ. ಇವುಗಳಲ್ಲಿ ವಾಚ್ಯಾರ್ಥವು ಶಬ್ದದ ಮುಖ್ಯವೃತ್ತಿ ಎನಿಸಿದ ಅಭಿಧೆಯಿಂದಲೂ, ಲಕ್ಷ್ಯಾರ್ಥವು ಲಕ್ಷಣಾವೃತ್ತಿಯಿಂದಲೂ ವ್ಯಂಗ್ಯಾರ್ಥವು ವ್ಯಂಜನಾವೃತ್ತಿಯಿಂದಲೂ ತಿಳಿದುಬರುತ್ತವೆ. ಈ ಮೂರು ವೃತ್ತಿಗಳೂ ಶಬ್ದದ ಶಕ್ತಿಗಳೆನಿಸಿವೆ. ಇವುಗಳಲ್ಲಿ ಅಭಿಧಾವೃತ್ತಿಯು ಯಾವ ಪದಕ್ಕೆ ಯಾವ ಅರ್ಥದಲ್ಲಿ ಸಂಕೇತವಿದೆಯೋ ಅಂತಹ ಅರ್ಥವನ್ನೇ ತಿಳಿಸಿ ಕೊಡುತ್ತದೆ. ಮನೆಯಲ್ಲಿ ಹಿರಿಯನೊಬ್ಬನು ಕಿರಿಯನೊಬ್ಬನಿಗೆ 'ಗಾಂ ಆನಯ' ಎಂದು ಹೇಳಲು ಆ ಮಾತನ್ನು ಕೇಳಿದೊಡನೆಯೇ ಅವನು ಗೋವನ್ನು ಕರೆತರಲು ಪ್ರವರ್ತಿಸುವನು. ಅದನ್ನು ತಿಳಿದ ಬಾಲಕನು ಈ ವಾಕ್ಯಕ್ಕೆ 'ಗಂಗದೊಗಲನಿಂದ

ಕೂಡಿದ ಪ್ರಾಣಿಯೊಂದನ್ನು ಕರೆತರುವುದೇ ಅರ್ಥವೆಂದು ಮೊದಲು ತಿಳಿಯುವನು. ಆ ಮೇಲೆ 'ಗೋವನ್ನು ಅಲ್ಲಿ ಕಟ್ಟಿಹಾಕು, ಕುದುರೆಯನ್ನು ಕರೆದುಕೊಂಡು ಬಾ' ಎಂದು ವಾಕ್ಯಗಳಲ್ಲಿ ಪದಗಳನ್ನು ವ್ಯತ್ಯಾಸವಾಗಿ ಹೇಳುವುದನ್ನು ಆ ಹುಡುಗನು ಗಮನಿಸುವನು. ಒಂದುಸಾರಿ ಹೇಳಿದ ಪದವನ್ನು ತೆಗೆದು ಬೇರೊಂದು ಪದವನ್ನು ಪ್ರಯೋಗಿಸಿದ್ದರಿಂದ ಗೋಶಬ್ದಕ್ಕೆ ಗಂಗೆತೊಗಲಿನಿಂದ ಕೂಡಿದ ಪ್ರಾಣಿಯೇ ಅರ್ಥವೆಂದೂ, ಆನಯನ ಪದಕ್ಕೆ ಕರೆತರುವುದೇ ಅರ್ಥವೆಂದೂ, ಈ ಪದಗಳಿಗೆ ಈ ಅರ್ಥದಲ್ಲಿಯೇ ಸಂಕೇತವಿದೆ ಎಂದೂ ತಿಳಿಯುವನು. ಕೆಲವುಕಡೆ ಈ ಬಗೆಯ ಸಂಕೇತವು ಒಂದು ಪದದೊಡನೆ ಮತ್ತೊಂದು ಪ್ರಸಿದ್ಧವಾದ ಪದವನ್ನು ಪ್ರಯೋಗಿಸುವುದರಿಂದಲೂ ತಿಳಿದುಬರುತ್ತದೆ. "ವಿಕಸಿತವಾದ ಕಮಲದೊಳಗೆ ಮಧುವನ್ನು ಮಧುಕರವು ಕುಡಿಯುತ್ತಲಿದೆ" ಎಂಬಲ್ಲಿ ಮಧುಎಂಬುದು ಲೋಕದಲ್ಲಿ ಪುಷ್ಪರಸವೆಂದು ಪ್ರಸಿದ್ಧವಾದ್ದರಿಂದ ಅದರ ಜೊತೆಯಲ್ಲಿರುವ ಮಧುಕರ ಎಂಬ ಪದಕ್ಕೆ ದುಂಬಿಯಲ್ಲಿ ಸಂಕೇತವಿದೆ ಎಂದು ತಿಳಿದುಬರುವುದು. ಇದರಿಂದ ಮಧುಕರವೆಂದರೆ ಜೇನುನೊಣವೇ ದುಂಬಿಯೇ ? ಎಂಬ ಸಂಶಯವು ತೊಲಗುತ್ತದೆ. ಕೆಲವು ಕಡೆ ಯಥಾರ್ಥವನ್ನು ತಿಳಿಸುವ ಜನರ ಉಪದೇಶದಿಂದಲೂ ಸಂಕೇತವನ್ನು ಗ್ರಹಿಸಬಹುದು. 'ಇದು ಅಶ್ವಶಬ್ದದಿಂದ ತಿಳಿದುಬರುವ ಅರ್ಥ' ಎಂದು ಆಪ್ತರು ತಿಳಿಸುವ ಮಾತಿನಿಂದ ಅಶ್ವಪದದ ಅರ್ಥವನ್ನು ತಿಳಿಯಬಹುದು. ಹೀಗೆ ಇಂತಹ ಪದವು ಇಂತಹ ಅರ್ಥವನ್ನು ಬೋಧಿಸಲೆಂಬ ಇಚ್ಛೆಗೆ ವಿಷಯವಾಗಿರುವ ಅರ್ಥವನ್ನು ಬೇರೆಯಾವ ಶಕ್ತಿಯಿಂದಲೂ ತಿಳಿಸಲಿಕ್ಕಾಗದ್ದರಿಂದ ಅದನ್ನು ತಿಳಿಸಿಕೊಡುವ ಶಕ್ತಿಯೇ ಅಭಿಧೆ ಎನಿಸುತ್ತದೆ.

ಇಂತಹ ಪದಕ್ಕೆ ಇಂತಹ ಅರ್ಥದಲ್ಲಿಯೇ ಸಂಕೇತವೆಂಬುದು ಆ ಪದದ ಜಾತಿ, ಗುಣ, ದ್ರವ್ಯ ಮತ್ತು ಕ್ರಿಯೆಗಳಿಗೆ ಅನ್ವಯಿಸುತ್ತದೆ. ಗೋವಿನ ದೇಹದಲ್ಲಿ ಗೋತ್ವ (ಎಲ್ಲಾ ಗೋವುಗಳಲ್ಲೂ ಅನುಸರಿಸಿಕೊಂಡು ಬರುವ ಧರ್ಮ) ಎಂಬುದು ಜಾತಿ ಎನಿಸುತ್ತದೆ. ಗೋವುಗಳಲ್ಲಿ ಒಂದನ್ನು ಪ್ರತ್ಯೇಕಿಸಲಿಕ್ಕೆ ಕಾರಣವೆನಿಸದ್ದು ಆ ಒಂದು ಗೋವಿನಲ್ಲಿಯೇ ಸೇರಿಕೊಂಡಿರುವ ಧರ್ಮವೇ ಗುಣವೆನಿಸುತ್ತದೆ. ಶುಕ್ಲ ಮೊದಲಾದವು ಗೋವುಗಳಲ್ಲಿ ಆಯಾ ಬಣ್ಣದ ಗೋವನ್ನು ಬೇರೆಬಣ್ಣದ ಗೋವುಗಳಿಂದ ಪ್ರತ್ಯೇಕಿಸುವಂತವು, ದ್ರವ್ಯಶಬ್ದವು ಒಂದು ವ್ಯಕ್ತಿಯನ್ನು ತಿಳಿಸುವ ಹರಿ, ಹರ, ಡಿತ್ಥ, ಡಪಿತ್ಥ ಮೊದಲಾದುವುಗಳಿಗೆ ಅನ್ವಯಿಸುತ್ತದೆ. ಮನುಷ್ಯನು ಪ್ರಯತ್ನದಿಂದ ಸಾಧಿಸಬಹುದಾದ ವಸ್ತುವಿನ ಧರ್ಮವೇ ಪಾಕ ಮೊದಲಾದ ಕ್ರಿಯೆ ಎನಿಸುತ್ತದೆ. ಅದು ಒಂದೇ ಬಗೆಯ ವ್ಯಾಪಾರದಿಂದ ಹುಟ್ಟದೆ ಅನೇಕ ಪ್ರಯತ್ನಗಳಿಂದ ಆಗಿರುತ್ತದೆ. ಒಲೆಯ ಮೇಲೆ ತಪ್ಪಲೆಯನ್ನಿರಿಸುವುದು, ಆ ಮೇಲೆ ಅದನ್ನು ಕೆಳಕ್ಕೆ ಇಳಿಸುವುದು ಹೀಗೆ ಹಿಂದೆ ಮುಂದೆ ನಡೆದಿರುವ ಪ್ರಯತ್ನಗಳ ಸಮೂಹವೇ ಪಾಕಶಬ್ದದ ಅರ್ಥವೆನಿಸುತ್ತದೆ. ಇವುಗಳಲ್ಲಿ ಪದಗಳಿಗೆ ಸಂಕೇತವಿದೆಯೇ ಹೊರತು ವ್ಯಕ್ತಿಯಲ್ಲಿರುವುದಿಲ್ಲ. ಅಂತಹ ವ್ಯಕ್ತಿಗಳು ಲೋಕದಲ್ಲಿ ಹೇರಳವಾಗಿರುವುದರಿಂದಲೂ, ಒಂದು ವ್ಯಕ್ತಿಗೆ ಅನ್ವಯಿಸಿದ್ದು ಮತ್ತೊಂ

ವಕ್ಕೂ ಅನ್ವಯಿಸುವ ಪ್ರಯುಕ್ತ ವ್ಯಭಿಚಾರದೋಷವು ಬರುವುದರಿಂದಲೂ ವ್ಯಕ್ತಿಯು ಪದದ ಸಂಕೇತವೆನಿಸಲಾರದು.

—: ಅಥ ಲಕ್ಷಣಾ :—

ಮುಖ್ಯಾರ್ಥಬಾಧೇ ತದ್ಯುಕ್ತೋ ಯಯಾಽನ್ಯೋಽರ್ಥಃ ಪ್ರತೀಯತೇ ।
ರೂಢೇಃ ಪ್ರಯೋಜನಾದ್ವಾಸೌ ಲಕ್ಷಣಾಶಕ್ತಿರರ್ಪಿತಾ ॥

'ಕಳಿಂಗಃ ಸಾಹಸಿಕಃ' ಇತ್ಯಾದೌ ಕಳಿಂಗಾದಿಶಬ್ದೋ ದೇಶವಿಶೇಷಾದಿರೂಪೇ ಸ್ವಾರ್ಥೇಽಸಂಭವನ್ ಯಯಾ ಶಬ್ದಶಕ್ತ್ಯಾ, ಸ್ವಸಂಯುಕ್ತಾನ್ ಪುರುಷಾದೀನ್ ಪ್ರತ್ಯಾಯಯತಿ, ಯಯಾ ಚ 'ಗಂಗಾಯಾಂ ಘೋಷಃ' ಇತ್ಯಾದೌ ಗಂಗಾದಿಶಬ್ದೋ ಜಲಮಯಾದಿರೂಪಾರ್ಥವಾಚ್ಯತ್ವಾತ್ ಪ್ರಕೃತೇಽಸಂಭವನ್ ಸ್ವಸ್ಯ ಸಾಮೀಪ್ಯಾದಿ ಸಂಬಂಧಸಂಬಂಧಿನಂ ತಟಾದಿಂ ಬೋಧಯತಿ ಸಾ ಶಬ್ದಸ್ಯಾರ್ಪಿತಾ ಸ್ವಾಭಾವಿಕೇತರಾ ಈಶ್ವರಾನುದ್ಭಾವಿತಾ ವಾ ಶಕ್ತಿರ್ಲಕ್ಷಣಾ. ಪೂರ್ವತ್ರ ಹೇತೂ ರೂಢಿಃ ಪ್ರಸಿದ್ಧಿರೇವ. ಉತ್ತರತ್ರ 'ಗಂಗಾತಟೇ ಘೋಷಃ' ಇತಿ ಪ್ರತಿಪಾದನಾದಲಭ್ಯಸ್ಯ ಶೀತತ್ವಪಾವನತ್ವಾತಿಶಯಸ್ಯ ಸಾಧನರೂಪಂ ಪ್ರಯೋಜನಮ್. ಹೇತುಂ ವಿನಾಪಿ ಯಸ್ಯ ಕಸ್ಯಚಿತ್ಸಂಬಂಧಿನೋ ಲಕ್ಷಣೇಽತಿಪ್ರಸಂಗಃ ಸ್ಯಾದಿತ್ಯುಕ್ತಮ್ 'ರೂಢೇಃ ಪ್ರಯೋಜನಾದ್ವಾಪಿ' ಇತಿ.

ಕೇಚಿತ್ತು 'ಕರ್ಮಣಿ ಕುಶಲಃ' ಇತಿ ರೂಢಾವುದಾಹರಂತಿ. ತೇಷಾಮಯಮಭಿಪ್ರಾಯಃ. ಕುಶಾನ್ ಲಾತೀತಿ ವ್ಯುತ್ಪತ್ತಿಲಭ್ಯಃ ಕುಶಗ್ರಾಹಿರೂಪೋ ಮುಖ್ಯೋಽರ್ಥಃ ಪ್ರಕೃತೇಽಸಂಭವನ್ ವಿವೇಚಕತ್ವಾದಿಸಾಧರ್ಮ್ಯಸಂಬಂಧಸಂಬಂಧಿನಂ ದಕ್ಷರೂಪಮರ್ಥಂ ಬೋಧಯತಿ. ತದನ್ಯೇ ನ ಮನ್ಯಂತೇ. ಕುಶಗ್ರಾಹಿರೂಪಾರ್ಥಸ್ಯ ವ್ಯುತ್ಪತ್ತಿಲಭ್ಯತ್ವೇಽಪಿ ದಕ್ಷರೂಪಸ್ಯೈವ ಮುಖ್ಯಾರ್ಥತ್ವಾತ್. ಅನ್ಯದ್ಧಿ ಶಬ್ದಾನಾಂ ವ್ಯುತ್ಪತ್ತಿನಿಮಿತ್ತಮನ್ಯಚ್ಚ ಪ್ರವೃತ್ತಿನಿಮಿತ್ತಮ್. ವ್ಯುತ್ಪತ್ತಿಲಭ್ಯಸ್ಯ ಮುಖ್ಯಾರ್ಥತ್ವೇ 'ಗೌಃ ಶೇತೇ' ಇತ್ಯತ್ರಾಪಿ ಲಕ್ಷಣಾ ಸ್ಯಾತ್. 'ಗಮೇರ್ಡೋಃ' ಇತಿ ಗಮ್‌ಧಾತೋರ್ಡೋಪ್ರತ್ಯಯೇನ ವ್ಯುತ್ಪಾದಿತಸ್ಯ ಗೋಶಬ್ದಸ್ಯ ಶಯನಕಾಲೇಽಪಿ ಪ್ರಯೋಗಾತ್.

ಇನ್ನು ಮುಂದೆ ಲಕ್ಷಣಾವೃತ್ತಿಯ ಸ್ವರೂಪವನ್ನು ತಿಳಿಸಲಾಗುವುದು. ಒಂದು ಪದದ ಮುಖ್ಯಾರ್ಥವು ಕ್ರಿಯೆಯಲ್ಲಿ ಅನ್ವಯವಾಗಲಿಕ್ಕೆ ಅಡಚಣೆಯಿದ್ದಲ್ಲಿ ಅದಕ್ಕೆ ಸಂಬಂಧಿಸಿದ ಮತ್ತೊಂದು ಕಲ್ಪಿತವಾದ ಅರ್ಥವನ್ನು ರೂಢಿಯಿಂದಲೋ, ಒಂದು ಬಗೆಯ ಫಲಸಾಧನೆಗಾಗಿಯೋ ಯಾವ ಶಕ್ತಿಯಿಂದ ತಿಳಿಯಬಹುದೋ ಅಂತಹ ಶಕ್ತಿಯೇ ಲಕ್ಷಣೆ ಎನಿಸುವುದು. ಸ್ವಾರಸಿಕವಾದ ಅರ್ಥವನ್ನು ಅಭಿಧೆಯೂ, ಕಲ್ಪಿತವಾದ ಅರ್ಥವನ್ನು ಲಕ್ಷಣೆಯೂ ತಿಳಿಸುತ್ತವೆ. "ಕಳಿಂಗನು ಧೈರ್ಯಶಾಲಿ" ಎಂಬಲ್ಲಿ ಕಳಿಂಗ ಶಬ್ದವನ್ನು ಆ ಹೆಸರಿನ ದೇಶವೆಂಬ ಅರ್ಥದಲ್ಲಿ ಉಪಯೋಗಿಸಲಿಕ್ಕಾಗದಿರುವುದರಿಂದ ಕಳಿಂಗಶಬ್ದಕ್ಕೆ ಸಂಬಂಧಿಸಿದ ಶಕ್ತಿಯಿಂದಲೇ ಅದು ಆ ದೇಶದಲ್ಲಿ ಹುಟ್ಟಿದ ಪುರುಷ ಮೊದಲಾದವರನ್ನು ತಿಳಿಸುತ್ತದೆ. 'ಗಂಗೆಯಲ್ಲಿ ಹಳ್ಳಿ ಇದೆ' ಎಂಬಲ್ಲಿ ಗಂಗಾಶಬ್ದವು ನೀರಿನ ಸಮೂಹವೆಂಬ ಅರ್ಥವನ್ನು ಬೋಧಿಸುವುದರಿಂದ ಅದು ಈ ಸಂದರ್ಭದಲ್ಲಿ ಅನ್ವಯಿಸುವುದಿಲ್ಲ.

ಆದ್ದರಿಂದ ಅದು ಗಂಗಾನದಿಯ ಸಮೀಪಕ್ಕೆ ಸಂಬಂಧಿಸಿದ ' ತೀರ ' ಎಂಬ ಅರ್ಥವನ್ನು ತಿಳಿಸುತ್ತದೆ. ಹೀಗೆ ಒಂದು ಶಬ್ದಕ್ಕೆ ಸಹಜವಾಗಿ ಅನ್ವಯಿಸದೆಯೋ ಅಥವಾ ಈಶ್ವರನ ಸಂಕೇತದಿಂದ ತಿಳಿದುಬರದೆಯೋ ಇರುವ ಯಾವ ವೃತ್ತಿಯುಂಟೋ ಅದು ಲಕ್ಷಣೆ ಎನಿಸುವುದು. ' ಕಳಿಂಗಃ ಸಾಹಸಿಕಃ ' ಎಂಬಲ್ಲಿ ರೂಢಿಯಿಂದ ಕಳಿಂಗನಿವಾಸಿ ಎಂಬ ಅರ್ಥವನ್ನು ಗ್ರಹಿಸಲಾಗುವುದು. ' ಗಂಗಾತಟೇ ಘೋಷಃ ' ಎಂದು ಹೇಳಿದ್ದರೆ ತಿಳಿದು ಬರದೇ ಇದ್ದಂತಹ ಶೈತ್ಯ ಪಾವನತ್ವ ಮೊದಲಾದ ಹೆಚ್ಚುಗುಣಗಳು ' ಗಂಗಾಯಾಂ ಘೋಷಃ' ಎಂದು ಹೇಳಿದ್ದರಿಂದ ತಿಳಿದುಬರುತ್ತವೆ. ಇವನ್ನು ತಿಳಿಸುವುದೇ ಹೀಗೆ ಹೇಳಿದ್ದರಿಂದಾಗುವ ಪ್ರಯೋಜನವೆನಿಸಿದೆ. ಕಾರಣವಿಲ್ಲದಿದ್ದರೂ ಮುಖ್ಯಾರ್ಥಕ್ಕೆ ಸಂಬಂಧಿಸಿದ ವಸ್ತುವಿನಲ್ಲಿ ಒಂದು ಪದಕ್ಕೆ ಲಕ್ಷಣೆಯನ್ನು ಹೇಳುವುದಾದರೆ ಅದರಂತೆಯೇ ಸಂಬಂಧವಿರುವ ಮತ್ತೊಂದು ವಸ್ತುವಿನಲ್ಲಿಯೂ ಲಕ್ಷಣೆಯನ್ನು ಹೇಳಬೇಕಾಗಿಬರುವ ಪ್ರಯುಕ್ತ ರೂಢಿ ಪ್ರಯೋಜನಗಳೆರಡನ್ನು ಅವಲಂಬಿಸಿಯೇ ಲಕ್ಷಣೆಯು ಪ್ರವರ್ತಿಸುವುದೆಂದು ಹೇಳಿದೆ.

ಕೆಲವರು ' ಕರ್ಮದಲ್ಲಿ-ಕುಶಲನು ' ಎಂಬುದನ್ನು ರೂಢಿಗೆ ಉದಾಹರಿಸುತ್ತಾರೆ. ಅವರ ಅಭಿಪ್ರಾಯ ಹೀಗಿದೆ. ' ಕುಶಗಳನ್ನು ಗ್ರಹಿಸುತ್ತಾನೆ ' ಎಂಬ ಪ್ರಕೃತಿಪ್ರತ್ಯಯಾರ್ಥಗಳ ವಿವೇಚನೆಯಿಂದ ತಿಳಿದುಬರುವ ಕುಶಗ್ರಾಹಿ ಎಂಬ ಮುಖ್ಯಾರ್ಥವು ಪ್ರಕೃತ ಸಂದರ್ಭದಲ್ಲಿ ಅನ್ವಯಿಸದೇ ಇರುವುದರಿಂದ ದರ್ಭೆಗಳನ್ನು ಆರಿಸುವುದರಲ್ಲಿ ಒಬ್ಬನಿಗೆ ಇರುವ ವಿವೇಕವೆಂಬ ಸಾಧರ್ಮ್ಯಕ್ಕೆ ಸಂಬಂಧಿಸಿದಂತೆ ಸಮರ್ಥ ಎಂಬ ಅರ್ಥವನ್ನು ಅದು ಬೋಧಿಸುತ್ತದೆ" ಎಂದು ಅವರುಹೇಳುತ್ತಾರೆ. ಇದನ್ನು ಬೇರೆಯವರು ಒಪ್ಪುವುದಿಲ್ಲ. ' ಕುಶಗಳನ್ನು ಆರಿಸುವಿಕೆ ' ಎಂಬ ಅರ್ಥವು ಆ ಪದದ ವಿವೇಚನೆಯಿಂದ ತಿಳಿದು ಬರುವುದಾದರೂ 'ಸಮರ್ಥ' ಎಂಬುದೇ ಅದರ ಮುಖ್ಯಾರ್ಥವೆನಿಸುತ್ತದೆ. ಆದ್ದರಿಂದ ಇಲ್ಲಿ ಮುಖ್ಯಾರ್ಥಕ್ಕೆ ಬಾಧವಿಲ್ಲದ ಪ್ರಯುಕ್ತ ಲಕ್ಷಣೆಗೆ ಅವಕಾಶವಿಲ್ಲ. ಪದಗಳ ಅವಯವಾರ್ಥಗಳ ವಿವೇಚನೆಗೆ ಕಾರಣವೆನಿಸಿದ ಅರ್ಥವೇ ಬೇರೆ. ಪದಗಳನ್ನು ಪ್ರಯೋಗಿಸಲು ಸಾಧಕವಾದ ಅರ್ಥವೇ ಬೇರೆ. ವ್ಯುತ್ಪತ್ತಿಯಿಂದ ತಿಳಿದುಬರುವ ಅರ್ಥವೇ ಮುಖ್ಯವೆನಿಸಿದ್ದರೆ 'ಗೋವು ಮಲಗಿದೆ ಎಂಬಲ್ಲಿಯೂ ಲಕ್ಷಣೆಯನ್ನು ಹೇಳಬೇಕಾಗುತ್ತದೆ. ' ಗಚ್ಛತೀತಿ ಗೌಃ ' ಎಂಬ ಅರ್ಥದಲ್ಲಿ ಗಮ್‌ಧಾತುವಿಗೆ ಡೋ ಪ್ರತ್ಯಯವನ್ನು ಹಚ್ಚಿದ್ದರಿಂದ ಆಗಿರುವ ಗೋಪದವನ್ನು ಗೋವಿಗೆ ತಿರುಗಾಡುವಾಗಲೇ ಉಪಯೋಗಿಸಬೇಕೇ ಹೊರತು ಮಲಗಿರುವಾಗ ಉಪಯೋಗಿಸುವಂತಿಲ್ಲ.ಗೋಶಬ್ದದ ವ್ಯುತ್ಪತ್ತಿಯಿಂದ ತಿಳಿದುಬರುವ ಅರ್ಥವು ಬಾಧಿತವಾಗುವುದರಿಂದ 'ಗೌಃಶೇತೇ' ಎಂಬಲ್ಲೂ ಲಕ್ಷಣೆಯನ್ನೇ ಹೇಳಬೇಕಾದೀತು. ಹಾಗೆ ಹೇಳಲಿಕ್ಕಾಗದಪ್ರಯುಕ್ತ ವ್ಯುತ್ಪತ್ತಿಯಿಂದ ತಿಳಿದುಬರುವ ಅರ್ಥವು ಶಬ್ದಪ್ರಯೋಗಕ್ಕೆ ಮೂಲವೆನಿಸಿದ ಅರ್ಥದಿಂದ ಬೇರೆ ಎಂದೇ ಹೇಳಬೇಕು.

ತ ದ್ಭೇ ದಾ ನಾ ಹ

ಮುಖ್ಯಾರ್ಥಸ್ಯೇತರಾಕ್ಷೇಪೋ ವಾಕ್ಯಾರ್ಥೇಽನ್ವಯಸಿದ್ಧಯೇ ।

ಸ್ಯಾದಾತ್ಮನೋಽಪ್ಯುಪಾದಾನಾದೇಷೋಪಾದಾನಲಕ್ಷಣಾ ॥

ರೂಢೌ ಉಪಾದಾನಲಕ್ಷಣಾ ಯಥಾ 'ಶ್ವೇತೋ ಧಾವತಿ'. ಪ್ರಯೋಜನೇ ಯಥಾ 'ಕುಂತಾಃ ಪ್ರವಿಶಂತಿ'. ಅನಯೋರ್ಹಿ ಶ್ವೇತಾದಿಭಿಃ ಕುಂತಾದಿಭಿಶ್ಚ ಅಚೇತನತಯಾ ಕೇವಲೈರ್ಧಾವನಪ್ರವೇಶನಕ್ರಿಯಯೋಃ ಕರ್ತೃತಯಾ ಅನ್ವಯಮಲಭಮಾನೈಃ ಏತತ್ಸಿದ್ಧಯೇ ಆತ್ಮಸಂಬಂಧಿನೋಽಶ್ವಾದಯಃ ಪುರುಷಾದಯಶ್ಚ ಆಕ್ಷಿಪ್ಯಂತೇ. ಪೂರ್ವತ್ರ ಪ್ರಯೋಜನಾಭಾವಮ್ರೂಢಿಃ; ಉತ್ತರತ್ರ ತು ಕುಂತಾದೀನಾಮತಿಗಹನತ್ವಂ ಪ್ರಯೋಜನಮ್. ಅತ್ರ ಚ ಮುಖ್ಯಾರ್ಥಸ್ಯ ಆತ್ಮನೋಽಪ್ಯುಪಾದಾನಮ್. ಲಕ್ಷಣಲಕ್ಷಣಾಯಾಂ ತು ಪರಸ್ಯೈವೋಪಲಕ್ಷಣಮಿತ್ಯನಯೋರ್ಭೇದಃ. ಇಯಮೇವಾಜಹತ್ಸ್ವಾರ್ಥೇತ್ಯುಚ್ಯತೇ. ಅರ್ಪಣಂ ಸ್ವಸ್ಯ ವಾಕ್ಯಾರ್ಥೇ ಪರಸ್ಯಾನ್ವಯಸಿದ್ಧಯೇ ।

ಉಪಲಕ್ಷಣಹೇತುತ್ವಾದೇಷಾ ಲಕ್ಷಣಲಕ್ಷಣಾ ॥

ರೂಢಿಪ್ರಯೋಜನಯೋರ್ಲಕ್ಷಣಲಕ್ಷಣಾ ಯಥಾ 'ಕಳಿಂಗಃ ಸಾಹಸಿಕಃ' 'ಗಂಗಾಯಾಂ ಘೋಷಃ' ಇತಿ ಚ. ಅನಯೋರ್ಹಿ ಪುರುಷತಟಯೋರ್ವಾಕ್ಯಾರ್ಥೇಽನ್ವಯಸಿದ್ಧಯೇ ಕಳಿಂಗಗಂಗಾಶಬ್ದೌ ಆತ್ಮಾನಮರ್ಪಯತಃ. ಯಥಾ ವಾ—

ಉಪಕೃತಂ ಬಹು ಯತ್ರ ಕಿಮುಚ್ಯತೇ ಸುಜನತಾ ಪ್ರಥಿತಾ ಭವತಾ ಪರಮ್ ।
ವಿದಧದೀದೃಶಮೇವ ಸದಾ ಸಖೇ ಸುಖಿತಮಾಸ್ವ ತತಃ ಶರಂ ಶತಮ್ ॥

ಅತ್ರ ಅಪಕಾರಾದೀನಾಂ ವಾಕ್ಯಾರ್ಥೇಽನ್ವಯಸಿದ್ಧಯೇ ಉಪಕೃತಾದಯಃ ಶಬ್ದಾಃ ಆತ್ಮಾನಮರ್ಪಯಂತಿ ಅಪಕಾರಿಣಂ ಪ್ರತ್ಯುಪಕಾರಾದಿಪ್ರತಿಪಾದನಾತ್ ಮುಖ್ಯಾರ್ಥಬಾಧಃ ವೈಪರೀತ್ಯಲಕ್ಷಣಃ ಸಂಬಂಧಃ. ಫಲಮಪಕಾರಾತಿಶಯಃ. ಇಯಜಹತ್ಸ್ವಾರ್ಥಾ.

ಒಂದು ಶಬ್ದದ ಮುಖ್ಯಾರ್ಥವು ವಾಕ್ಯಾರ್ಥದಲ್ಲಿ ಅನ್ವಯಿಸಲಿಕ್ಕಾಗಿ ಬೇರೊಂದು ಅರ್ಥವನ್ನು ಆಕ್ಷೇಪಿಸಿ ಅದರೊಡನೆ ತಾನೂ ಸೇರಿಕೊಂಡಿರುವುದಾಗಿ ಯಾವುದರಿಂದ ತಿಳಿಮಬರುವುದೋ ಅಂತಹ ವೃತ್ತಿಯೇ ಉಪಾದಾನಲಕ್ಷಣೆ ಎನಿಸುವುದು ರೂಢಿ. ಇರುವ ಕಡೆ ಉಪಾದಾನಲಕ್ಷಣೆಯು 'ಶ್ವೇತೋ ಧಾವತಿ' ಎಂಬಲ್ಲಿ ಸಂಭವಿಸುತ್ತದೆ. ಇಲ್ಲಿ ಶ್ವೇತವರ್ಣವು ಧಾವನಕ್ರಿಯೆಗೆ ಕರ್ತೃವೆನಿಸಲಾಗದ್ದರಿಂದ ಅಲ್ಲಿ ಅನ್ವಯಿಸಲಿಕ್ಕಾ ಕುದುರೆ ಎಂಬ ಅರ್ಥವನ್ನು ಆಕ್ಷೇಪಿಸಿ ಅದರೊಡನೆ ತಾನೂ ಸೇರಿಕೊಂಡಿದೆ. 'ಕುಂತಾಃ ಪ್ರವಿಶಂತಿ' ಎಂಬುದು ಪ್ರಯೋಜನಮೂಲವಾದ ಉಪಾದಾನಲಕ್ಷಣೆಗೆ ಉದಾಹರಣವಾಗುತ್ತದೆ. ಇಲ್ಲಿ ಕುಂತವೆಂಬ ಆಯುಧಕ್ಕೆ ಪ್ರವೇಶನಕ್ರಿಯೆಯಲ್ಲಿ ಅನ್ವಯವು ಬಾರದ್ದರಿಂದ ಅದು ಪುರುಷನೆಂಬ ಅರ್ಥವನ್ನು ಆಕ್ಷೇಪಿಸಿ ಅದರೊಡನೆ ತಾನೂ ಸೇರಿಕೊಂಡು ಕುಂತಧಾರಿ ಪುರುಷ ಎಂಬ ಅರ್ಥವನ್ನು ತಿಳಿಸುತ್ತದೆ. ಇವೆರಡು ಕಡೆಗಳಲ್ಲೂ ಶ್ವೇತ, ಕುಂತ ಇವು ಅಚೇತನವಾದ್ದರಿಂದ ಓಡಲಿಕ್ಕೂ ಪ್ರವೇಶಿಸಿಕ್ಕೂ ಕರ್ತೃವೆನಿಸಲಾಗದ ಪ್ರಯುಕ್ತ ಈ ಬಗೆಯ ಅನ್ವಯವನ್ನು ಸಾಧಿಸಲಿಕ್ಕಾಗಿ ಅವು ಶ್ವೇತವರ್ಣದ ಅಶ್ವವನ್ನೂ, ಕುಂತಧಾರಿಪುರುಷರನ್ನೂ ತಿಳಿಸುತ್ತವೆ. ಮೊದಲನೆಯದರಲ್ಲಿ ಪ್ರಯೊಜನವಿಲ್ಲದ್ದರಿಂದ ರೂಢ್ಯರ್ಥವೇ ಲಕ್ಷಣೆಯ ಬೀಜವೆನಿಸಿದೆ. ಎರಡನೆಯದರಲ್ಲಿ

ಕುಂತಗಳು ಬಹಳ ದೊಡ್ಡ ಪ್ರಮಾಣದಲ್ಲಿದ್ದುವೆಂಬುದನ್ನು ತಿಳಿಸುವುದೇ ಪ್ರಯೋಜನ ವೆನಿಸಿದೆ. ಈ ಎರಡು ಕಡೆಗಳಲ್ಲೂ ಆಕ್ಷಿಪ್ತವಾದ ಅರ್ಥದೊಡನೆ ಮುಖ್ಯಾರ್ಥವನ್ನು ತೊರೆಯದೇ ಇರುವುದರಿಂದ ಈ ಲಕ್ಷಣೆಯು ಅಜಹತ್ಸ್ವಾರ್ಥೆ ಎನಿಸಿದೆ.

ವಾಕ್ಯಾರ್ಥದಲ್ಲಿ ಬೇರೊಂದು ಆಕ್ಷಿಪ್ತವಾದ ಅರ್ಥಕ್ಕೆ ಅನ್ವಯವಾಗಲೆಂದು ಮುಖ್ಯಾರ್ಥವನ್ನು ತೊರೆಯುವಮೂಲಕ ಎಲ್ಲಿ ಲಕ್ಷಣೆಯನ್ನು ಹೇಳಲಾಗಿದೆಯೋ ಅದು ಲಕ್ಷಣಲಕ್ಷಣೆ ಎನಿಸುವುದು. ಹೀಗೆ ಮುಖ್ಯಾರ್ಥವನ್ನು ತೊರೆದು ಅದಕ್ಕೆ ಸಂಬಂಧಿಸಿದ ಬೇರೊಂದು ಅರ್ಥವನ್ನು ತಿಳಿಸಿಕೊಡಲು ಸಾಧಕವಾದ್ದರಿಂದ ಇಂತಹದು ಲಕ್ಷಣಲಕ್ಷಣೆ ಎನಿಸಿದೆ. ಇಲ್ಲಿ ರೂಢಿಮೂಲವಾದ ಲಕ್ಷಣಲಕ್ಷಣೆಗೆ 'ಕಳಿಂಗಃ ಸಾಹಸಿಕಃ' ಎಂಬುದೂ, ಪ್ರಯೋಜನಮೂಲವಾದ ಲಕ್ಷಣೆಗೆ 'ಗಂಗಾಯಾಂ ಘೋಷಃ' ಎಂಬುದೂ ಉದಾಹರಣೆಗಳೆನಿಸಿವೆ. ಇವುಗಳಲ್ಲಿ ಪುರುಷನಿಗೂ ತೀರಕ್ಕೂ ಪ್ರಧಾನವಾಕ್ಯಾರ್ಥದಲ್ಲಿ ಅನ್ವಯ ಉಂಟಾಗಲೆಂದು ಕಳಿಂಗ ಮತ್ತು ಗಂಗಾ ಈ ಪದಗಳು ತಮ್ಮ ಮುಖ್ಯಾರ್ಥ ವನ್ನು ಪೂರ್ತಿಯಾಗಿ ತೊರೆಯುತ್ತವೆ. ಹಾಗೆಯೇ " ನೀನು ಮಾಡಿದ ಉಪಕಾರವನ್ನು ಏನೆಂದು ಹೇಳಲಿ! ಮಿತ್ರನೆ! ನೀನು ಹೆಚ್ಚಿನ ಸೌಜನ್ಯವನ್ನೇ ಪ್ರಕಟಿಸಿರುವೆ. ಹೀಗೆಯೇ ಮುಂದೆಯೂ ಮಾಡುತ್ತ ನೀನು ನೂರುವರ್ಷಗಳವರೆಗೂ ಬದುಕು." ಇಲ್ಲಿ ಉಪಕಾರ ಮೊದಲಾದ ಅರ್ಥಗಳಿಗೆ ಪ್ರಧಾನವಾಕ್ಯಾರ್ಥದಲ್ಲಿ ಅನ್ವಯವನ್ನು ಹೇಳಿರು ವುದರಿಂದ ಈ ಪದಗಳು ಮುಖ್ಯಾರ್ಥವನ್ನು ತೊರೆದು ಅದಕ್ಕಿಂತಲೂ ತೀರ ವಿರುದ್ಧ ವೆನಿಸಿದ ಅಪಕಾರಾತಿಶಯವನ್ನು ತಿಳಿಸುತ್ತವೆ. ಹೀಗೆ ತಿಳಿಸುವುದೇ ಇಲ್ಲಿ ಪ್ರಯೋಜನ ವೆನಿಸಿದೆ. ಹೀಗೆ ಮುಖ್ಯಾರ್ಥವನ್ನು ತೊರೆಯುವುದರಿಂದಲೇ ಇದನ್ನು ಜಹತ್ಸ್ವಾರ್ಥೆ ಎಂದು ಕರೆಯಲಾಗಿದೆ.

ತಾಃ ಪೂರ್ವೋಕ್ತಾಃ ಚತುರ್ಭೇದಲಕ್ಷಣಾಃ

ಆರೋಪಾಧ್ಯವಸಾನಾಭ್ಯಾಂ ಪ್ರತ್ಯೇಕಂ ತಾ ಅಪಿ ದ್ವಿಧಾ ।
ವಿಷಯಸ್ಯಾನಿಗೀರ್ಣಸ್ಯಾನ್ಯತಾದಾತ್ಮ್ಯಪ್ರತೀತಿಕೃತ್ ॥
ಸಾರೋಪಾ ಸ್ಯಾನ್ನಿಗೀರ್ಣಸ್ಯ ಮತಾ ಸಾಧ್ಯವಸಾನಿಕಾ ।

ವಿಷಯಿಣಾ ಅನಿಗೀರ್ಣಸ್ಯ ವಿಷಯಸ್ಯ ತೇನೈವ ಸಹ ತಾದಾತ್ಮ್ಯಪ್ರತೀತಿ ಕೃತ್ಸಾರೂಪಾ. ಇಯಮೇವ ರೂಪಕಾಲಂಕಾರಸ್ಯ ಬೀಜಮುಚ್ಯತೇ. ರೂಢಾ ಉಪಾದಾನಲಕ್ಷಣಾ ಸಾರೋಪಾ ಯಥಾ 'ಅಶ್ವಃ ಶ್ವೇತೋ 'ಧಾವತಿ' ಅತ್ರ ಹಿ ಶ್ವೇತಗುಣವಾನಶ್ವಃ ಅನಿಗೀರ್ಣಸ್ವರೂಪಃ ಸ್ವಸಮವೇತಶ್ವೇತಗುಣತಾದಾತ್ಮ್ಯೇನ ಪ್ರತೀಯತೇ. ಪ್ರಯೋಜನೇ ಯಥಾ 'ಏತೇ ಕುಂತಾಃ ಪ್ರವಿಶಂತಿ'. ಅತ್ರ ಸರ್ವ ನಾಮ್ನಾ ಕುಂತಧಾರಿಪುರುಷನಿರ್ದೇಶಾತ್ ಸಾರೋಪತ್ವಮ್. ರೂಢಾ ಲಕ್ಷಣ ಲಕ್ಷಣಾ ಸಾರೋಪಾ ಯಥಾ 'ಕಳಿಂಗಃ ಪುರುಷೋ ಯುಧ್ಯತೇ." ಅತ್ರ ಪುರುಷ ಕಳಿಂಗಶಬ್ದಯೋಃ ಆಧಾರಾಧೇಯಭಾವಃ ಸಂಬಂಧಃ. ಪ್ರಯೋಜನೇ ಯಥಾ 'ಆಯು ರ್ಘೃತಮ್, ಅತ್ರಾಯುಷ್ಕಾರಣಮಪಿ ಘೃತಂ ಕಾರ್ಯಕಾರಣಭಾವಸಂಬಂಧಾಯು ಸ್ತಾದಾತ್ಮ್ಯೇನ ಪ್ರತೀಯತೇ. ಅನ್ಯವೈಲಕ್ಷಣ್ಯೇನ (ಅವ್ಯಭಿಚಾರೇಣ) ಆಯು ಷ್ಕರತ್ವಂ ಪ್ರಯೋಜನಮ್.

ಯಥಾ ವಾ—ರಾಜಕೀಯೇ ಪುರುಷೇ ಗಚ್ಛತಿ ' ರಾಜಾ ಗಚ್ಛತಿ ' ಇತೀ ಅತ್ರ ಸ್ವಸ್ವಾಮಿಭಾವಲಕ್ಷಣಃ ಸಂಬಂಧಃ. ಯಥಾ ವಾ—ಅಗ್ರಮಾತ್ರೇಽವಯವೇ ' ಹಸ್ತೋಽಯಮ್'. ಅತ್ರ ಅವಯವಾವಯವಿಭಾವಲಕ್ಷಣಃ ಸಂಬಂಧಃ. ಬ್ರಾಹ್ಮಣೋಽಪಿ "ತಕ್ಷಾಸೌ" ಅತ್ರ ತಾತ್ಕರ್ಮ್ಯಲಕ್ಷಣಃ. ಇಂದ್ರಾರ್ಥಾಸು ಸ್ಥೂಣಾಸು ' ಅಮೀ ಇಂದ್ರಾಃ' ತತ್ರ ತಾದರ್ಥ್ಯಲಕ್ಷಣಃ ಸಂಬಂಧಃ. ಏವಮನ್ಯತ್ರಾಪಿ. ನಿರ್ಗೀರ್ಣಸ್ಯ ಪುನರ್ವಿಷಯಸ್ಯ ಅನ್ಯತಾದಾತ್ಮ್ಯಪ್ರತೀತಿಕೃತ್ಸಾಧ್ಯವಸಾನಾ. ಅಸ್ಯಾಶ್ಚತುರ್ಷು ಭೇದೇಷು ಪೂರ್ವೋದಾಹರಣಾನ್ಯೇವ.

ರೂಢಿ ಮೂಲವಾದ ಉಪಾದಾನಲಕ್ಷಣೆ ಮತ್ತು ಲಕ್ಷಣಲಕ್ಷಣೆ, ಹಾಗೆಯೇ ಪ್ರಯೋಜನಮೂಲವಾದ ಉಪಾದಾನಲಕ್ಷಣೆ ಮತ್ತು ಲಕ್ಷಣಲಕ್ಷಣೆ ಇವೂ ಸಹ ಆರೋಪ ಅಧ್ಯವಸಾನ ಇವುಗಳ ಮೂಲಕ ಮತ್ತೆ ಎರಡೆರಡು ಬಗೆಗಳಾಗುತ್ತವೆ. ಮುಖ್ಯಾರ್ಥವು ಶಬ್ದದಿಂದ ಬೋಧಿತವಾಗಿದ್ದು ಲಕ್ಷ್ಯಾರ್ಥದೊಡನೆ ತಾದಾತ್ಮ್ಯಜ್ಞಾನವನ್ನು ಹುಟ್ಟಿಸುವುದಾದರೆ ಅಂತಹ ಶಬ್ದವೃತ್ತಿಯು ಸಾರೋಪಲಕ್ಷಣೆ ಎನಿಸುವುದು. ಮುಖ್ಯಾರ್ಥವು ಶಬ್ದದಿಂದ ಬೋಧಿತವಾಗದೆ ಅದರಲ್ಲಿ ಲಕ್ಷ್ಯಾರ್ಥದ ಅಭೇದಜ್ಞಾನ ಉಂಟಾಗುವುದಾದರೆ ಆ ಬಗೆಯ ಶಬ್ದವೃತ್ತಿಯು ಸಾಧ್ಯವಸಾನಲಕ್ಷಣೆ ಎನಿಸುತ್ತದೆ. ಇದು ಲಕ್ಷಣೆಯನ್ನು ತಿಳಿಸುವ ಪ್ರಕರಣವಾದ್ದರಿಂದ ಇಲ್ಲಿ ವಿಷಯ ವಿಷಯಿ ಪದಗಳು ಶಕ್ಯಾರ್ಥ, ಲಕ್ಷ್ಯಾರ್ಥಗಳನ್ನು ಬೋಧಿಸುತ್ತವೆ. ಇವೆರಡೂ ಶಬ್ದದಿಂದಲೇ ಬೋಧಿತವಾಗಿದ್ದು ಎಲ್ಲಿ ಇವೆರಡಕ್ಕೂ ಅಭೇದವು ತೋರುವುದೋ ಅಲ್ಲಿ ಸಾರೋಪಲಕ್ಷಣೆ ಇರುತ್ತದೆ ಇದೇಯೇ ರೂಪಕಾಲಂಕಾರದ ಬೀಜವೆನಿಸಿದೆ. ರೂಢಿಮೂಲವಾದ ಸಾರೋಪೋಪಾದಾನಲಕ್ಷಣೆಗೆ 'ಅಶ್ವಃ ಶ್ವೇತೋ ಧಾವತಿ' ಎಂಬುದು ಉದಾಹರಣವೆನಿಸಿವೆ. ಇಲ್ಲಿ ಅಶ್ವ ಎಂಬುದು ವಿಷಯವೆನಿಸಿದ ಪದ. ಶ್ವೇತ ಎಂಬುದು ವಿಷಯಿವಾಚಕಪದ. ಇಲ್ಲಿ ಇವೆರಡು ಪದಗಳೂ ಇದ್ದು ಶ್ವೇತವರ್ಣದ ಕುದುರೆಯ ಸ್ವರೂಪವು ಶಬ್ದದಿಂದಲೇ ಬೋಧಿತವಾಗಿದೆ. ಈ ಮೂಲಕ ಇವೆರಡಕ್ಕೂ ಇಲ್ಲಿ ತಾದಾತ್ಮ್ಯವು ತೋರುತ್ತದೆ. ಕುದುರೆಯು ಶಬ್ದದಿಂದಲೇ ಬೋಧಿತವಾಗಿ ತನ್ನಲ್ಲಿ ಸಮವಾಯಸಂಬಂಧದಿಂದ ಕೂಡಿಕೊಂಡಿರುವ ಶ್ವೇತಗುಣದೊಡನೆ ತಾದಾತ್ಮ್ಯವನ್ನು ಹೊಂದಿದೆ. ಪ್ರಯೋಜನವನ್ನವಲಂಬಿಸಿದ ಸಾರೋಪೋಪಾದಾನಲಕ್ಷಣೆಗೆ ' ಏತೇ ಕುಂತಾಃ ಪ್ರವಿಶಂತಿ ' ಎಂಬುದು ಉದಾಹರಣವಾಗುತ್ತದೆ. ಇಲ್ಲಿ 'ಏತೇ' ಎಂದು ಸರ್ವನಾಮಪದವು ಕುಂತಧಾರಿ ( ಕುಂತವನ್ನು ಹಿಡಿದಿರುವ ಪುರುಷರು) ಗಳನ್ನು ಸೂಚಿಸುತ್ತದೆ. ಇಲ್ಲಿ ' ಏತೇ ' ಎಂಬುದು ಮುಖ್ಯಾರ್ಥವನ್ನು ತಿಳಿಸುವ ಪದ. ' ಕುಂತಾಃ ' ಎಂಬುದು ಲಕ್ಷ್ಯಾರ್ಥವನ್ನು ತಿಳಿಸುವ ಪದ. ಪ್ರವೇಶನಕ್ರಿಯೆಯಲ್ಲಿ ಅನ್ವಯವನ್ನು ಪಡೆಯಲಿಕ್ಕಾಗಿ ' ಏತೇ ' ಎಂಬುದು ಕುಂತಧಾರಿಪುರುಷರನ್ನು ಬೋಧಿಸುತ್ತದೆ. ಇಲ್ಲಿ ಕುಂತಧಾರಿಗಳಿಗೆ ' ಏತೇ ' ಎಂಬ ಪದದ ಅರ್ಥದಲ್ಲಿ ಅಭೇದದಿಂದ ಅನ್ವಯವಾಗುತ್ತದೆ.

ಹಾಗೆ ಮುಖ್ಯಾರ್ಥವು ಶಬ್ದದಿಂದ ಬೋಧಿತವಾಗಿದ್ದು ಲಕ್ಷ್ಯಾರ್ಥದೊಡನೆ ತಾದಾತ್ಮ್ಯವನ್ನು ಹೊಂದುವುದರಿಂದ ಇದು ಸಾರೋಪಲಕ್ಷಣೆ ಎನಿಸಿವೆ. ರೂಢಿಮೂಲವಾದ ಸಾರೋಪಲಕ್ಷಣೆಗೆ 'ಕಳಿಂಗಃ ಪುರುಷೋ ಯುಧ್ಯತೆ' ಎಂಬುದು ಉದಾಹರಣವೆನಿಸುತ್ತದೆ. ಇಲ್ಲಿ ಪುರುಷನಿಗೂ ಕಳಿಂಗದೇಶಕ್ಕೂ ಆಧಾರಾಧೇಯಭಾವಸಂಬಂಧವಿದೆ. 'ಕಳಿಂಗದೇಶದಲ್ಲಿರುವ ಪುರುಷನು ಯುದ್ಧಮಾಡುತ್ತಾನೆ' ಎಂಬುದೇ ಇದರ ಅರ್ಥ. ಇಲ್ಲಿ ಕಳಿಂಗ ಪುರುಷ ಇವೆರಡೂ ಆಯಾಯ ಶಬ್ದಗಳಿಂದಲೇ ಬೋಧಿತವಾಗಿವೆ. ಇವಕ್ಕೆ ಇಲ್ಲಿ ತಾದಾತ್ಮ್ಯವನ್ನು ತಿಳಿಸಿರುವುದರಿಂದ ಇದು ಸಾರೋಪಲಕ್ಷಣೆ ಎನಿಸಿದೆ. ಹಾಗೆಯೇ ಕಳಿಂಗ ಶಬ್ದವು ಆಧಾರಾಧೇಯಭಾವಸಂಬಂಧದಿಂದ ಕೂಡಿಕೊಂಡಿರುವ ಪುರುಷನೆಂಬ ಅರ್ಥಕ್ಕೆ ಯುದ್ಧದಲ್ಲಿ ಅನ್ವಯವನ್ನು ದೊರಕಿಸಲು ಮುಖ್ಯಾರ್ಥವನ್ನು ತೊರೆಯುವುದರಿಂದ ಇದು ಲಕ್ಷಣಲಕ್ಷಣೆಯೂ ಆಗಿದೆ. ಪ್ರಯೋಜನಮೂಲವಾದ ಸಾರೋಪಲಕ್ಷಣಲಕ್ಷಣೆಗೆ 'ಆಯುಃ ಘೃತಮ್' ಎಂಬುದು ಉದಾಹರಣವಾಗುತ್ತದೆ. ಇಲ್ಲಿ ತುಪ್ಪವು ಆಯುಸ್ಸನ್ನು ಹೆಚ್ಚಿಸುವುದಾದ್ದರಿಂದ ಕಾರ್ಯಕಾರಣಭಾವಸಂಬಂಧದ ಮೂಲಕ ತುಪ್ಪದಲ್ಲಿ ಆಯುಸ್ಸಿನ ತಾದಾತ್ಮ್ಯವು ತೋರುತ್ತದೆ. ತುಪ್ಪವನ್ನು ಬಿಟ್ಟು ಬೇರೆ ಯಾವ ಪದಾರ್ಥಸೇವನೆಯಿಂದಲೂ ಅಯುಸ್ಸು ಒಂದೇ ಸಮನಾಗಿ ಹೆಚ್ಚದೆ ಇರುವ ಪ್ರಯುಕ್ತ ತುಪ್ಪದಿಂದಲೇ ಆಯುಸ್ಸು ಹೆಚ್ಚುವುದೆಂದು ತಿಳಿಸುವುದೇ ಪ್ರಯೋಜನವೆನಿಸಿದೆ.

ರಾಜನ ಕಡೆಯ ಪುರುಷನೊಬ್ಬನು ಬೀದಿಯಲ್ಲಿ ಹೋಗುತ್ತಿರುವಾಗ 'ರಾಜಾಸೌ ಗಚ್ಛತಿ' ಈ ರಾಜನು ಹೋಗುತ್ತಾನೆ ಎಂದು ಹೇಳುವುದರಲ್ಲಿ ರಾಜನಿಗೂ ಪುರುಷನಿಗೂ ಇರುವ ಸ್ವಸ್ವಾಮಿಭಾವಸಂಬಂಧವು ತೋರುತ್ತದೆ. ಇದರಿಂದ ರಾಜನ ಸಂಬಂಧಿಯನ್ನು ರಾಜನೆಂದೇ ತಾದಾತ್ಮ್ಯವನ್ನು ತಿಳಿಸಲಾಗಿದೆ. ಹಸ್ತದ ಮೇಲ್ಭಾಗವನ್ನು 'ಇದು ಹಸ್ತ' ಎಂದು ಪ್ರಯೋಗಿಸುವಾಗ ಅವಯವಾವಯವಿಸಂಬಂಧದಿಂದ ತಾದಾತ್ಮ್ಯವನ್ನು ತಿಳಿಸಲಾಗಿದೆ. 'ಇವನು ಮರಗೆಲಸದವನೆನಿಸಿದ್ದಾನೆ' ಎಂಬಲ್ಲಿ ಬ್ರಾಹ್ಮಣನು ಬಡಗಿಯ ಕೆಲಸವನ್ನು ಮಾಡುತ್ತಿರುವುದೇ ಸಂಬಂಧವೆನಿಸಿದೆ. ಇಂದ್ರನ ಪೂಜೆಗಾಗಿ ಮಾಡಿದ ಕಂಭಗಳಲ್ಲಿ 'ಇವರು ಇಂದ್ರರು' ಎಂದು ಪ್ರಯೋಗಿಸಲು (ತಾದರ್ಥ್ಯ) ಇಂದ್ರನಿಗಾಗಿ ಮಾಡಿದ್ದು ಎಂಬುದೇ ಸಂಬಂಧವೆನಿಸುತ್ತವೆ. ಇಲ್ಲಿ ಮೊದಲಿನ ಎರಡು ರೂಢಿಮೂಲವಾದ ಸಾರೋಪೋಪಾದಾನಲಕ್ಷಣೆಗೂ ಸಾರೋಪಲಕ್ಷಣಲಕ್ಷಣೆಗೂ ಉದಾಹರಣಗಳಾಗುತ್ತವೆ. ಕೊನೆಯ ಎರಡು ಪ್ರಯೋಜನಮೂಲವಾದ ಆ ಎರಡು ಲಕ್ಷಣೆಗಳಿಗೂ ಉದಾಹರಣಗಳಾಗುತ್ತವೆ. ಹೀಗೆಯೇ ಬೇರೆ ಬೇರೆ ಕಡೆಗಳಲ್ಲೂ ವಾಚಕರು ಊಹಿಸಿಕೊಳ್ಳಬೇಕು. ಮುಖ್ಯಾರ್ಥವನ್ನು ತಿಳಿಸುವ ಪದವು ಶಬ್ದದಿಂದ ಬೋಧಿತವಾಗದೇ ಇದ್ದರೂ ಆ ಅರ್ಥವು ಲಕ್ಷ್ಯಾರ್ಥದೊಡನೆ ತಾದಾತ್ಮ್ಯವನ್ನು ಹೊಂದುವುದಾದರೆ ಆ ಬಗೆಯ ಲಕ್ಷಣೆಯು ಸಾಧ್ಯವಸಾನಲಕ್ಷಣೆ ಎನಿಸುತ್ತದೆ. ಇದ

ರಲ್ಲೂ ರೂಢಿಮೂಲವಾದ ಸಾಧ್ಯಾವಸಾನೋಪಾದಾನಲಕ್ಷಣೆ ಮತ್ತು ಸಾಧ್ಯವಸಾನ ಲಕ್ಷ್ಮಣಲಕ್ಷಣೆ, ಪ್ರಯೋಜನಮೂಲವಾದ ಸಾಧ್ಯವಸಾನೋಪಾದಾನಲಕ್ಷಣೆ ಮತ್ತು ಸಾಧ್ಯಾವಸಾಸಲಕ್ಷಣಲಕ್ಷಣೆ ಎಂದು ನಾಲ್ಕು ಬಗೆಗಳಾಗುತ್ತವೆ. ಈ ನಾಲ್ಕು ಬಗೆಗಳಿಗೂ 'ಶ್ವೇತೋ ಧಾವತಿ' ( ರೂಢೌ ಉಪಾದಾನಲಕ್ಷಣಾ ), 'ಕುಂತಾಃ ಪ್ರವಿಶಂತಿ' (ಪ್ರಯೋಜನೇ ಉಪಾದಾನಲಕ್ಷಣಾ), 'ಕಳಿಂಗಃ ಸಾಹಸಿಕಃ' (ಪ್ರಯೋಜನೇ ಉಪಾದಾನಲಕ್ಷಣಾ), 'ಗಂಗಾಯಾಂ ಘೋಷಃ' (ಪ್ರಯೋಜನೇ ಲಕ್ಷಣಕ್ಷಲಣಾ) ಇವು ನಾಲ್ಕು ಉದಾಹರಣಗಳೆನಿಸಿವೆ.

ಸಾದೃಶ್ಯೇತರಸಂಬಂಧಾಃ ಶುದ್ಧಾಸ್ತಾಃ ಸಕಲಾ ಅಪಿ॥
ಸಾದೃಶ್ಯಾತ್ತು ಮತಾ ಗೌಣ್ಯಸ್ತೇನ ಷೋಡಷ ಭೇದಿತಾಃ।

ತಾಃ ಪೂರ್ವೋಕ್ತಾಃ ಅಷ್ಟಭೇಧಾ ಲಕ್ಷಣಾ ಃ. ಸಾದೃಶ್ಯೇತರಸಂಬಂಧಾಃ ಕಾರ್ಯಕಾರಣಭಾವಾದಯಃ. ಅತ್ರ ಶುದ್ಧಾನಾಂ ಪೂರ್ವೋದಾಹರಣಾನ್ಯೇವ. ರೂಢೌ ಉಪಾದಾನಲಕ್ಷಣಾ ಸಾರೋಪಾ ಗೌಣೀ ಯಥಾ 'ಏತಾನಿ ತೈಲಾನಿ ಹೇಮಂತೇ ಸುಖಾನಿ. ಅತ್ರ ತೈಲಶಬ್ದಸ್ತಿಲಭವಸ್ನೇಹರೂಪಂ ಮುಖ್ಯಾರ್ಥಮುಪಾದಾಯೈವ ಸಾರ್ಷಷಾದಿಷು ಸ್ನೇಹೇಷು ವರ್ತತೇ. ಪ್ರಯೋಜನೇ ಯಥಾ ರಾಜಕುಮಾರೇಷು ತತ್ಸದೃಶೇಷು ಚ ಗಚ್ಛತ್ಸು 'ಏತೇ ರಾಜಕುಮಾರಾ ಗಚ್ಛಂತಿ'. ರೂಢೌ ಉಪಾದಾನಲಕ್ಷಣಾ ಸಾಧ್ಯವಸಾನಾ ಗೌಣೀ ಯಥಾ 'ತೈಲಾನಿ ಹೇಮಂತೇ ಸುಖಾನಿ'. ಪ್ರಯೋಜನೇ ಯಥಾ 'ರಾಜಕುಮಾರಾ ಗಚ್ಛಂತಿ' ರೂಢೌ ಲಕ್ಷಣಲಕ್ಷಣಾ ಸಾರೋಪಾ ಗೌಣೀ ಯಥಾ 'ರಾಜಾ ಗೌಡೇಂದ್ರಂ ಕಂಟಕಂ ಶೋಧಯತಿ'. ಪ್ರಯೋಜನೇ ಯಥಾ' ರಾಜಾ ಕಂಟಕಂ ಶೋಧಯತಿ. ' ಪ್ರಯೋಜನೇ ಯಥಾ 'ಗೌರ್ಜಲ್ಪತಿ'. ಅತ್ರ ಕೇಚಿದಾಹುಃ 'ಗೋಸಹಚಾರಿಣೋ ಗುಣಾಃ ಜಾಡ್ಯಮಾಂದ್ಯಾದಯೋ ಲಕ್ಷ್ಯಂತೇ· ತೇ ಚ ಗೋಶಬ್ದಸ್ಯ ವಾಹೀಕಾರ್ಥಾಭಿಧಾನೇ ನಿಮಿತ್ತೀಭವಂತಿ 'ಇತಿ. ತದಯುಕ್ತಮ್' ಗೋಶಬ್ದಸ್ಯ ಅಗೃಹೀತಸಂಕೇತಂ ವಾಹೀಕಾರ್ಥಮಭಿಧಾತುಂ ಅಸಾಮರ್ಥ್ಯಾತ್ ಗೋಶಬ್ದಾರ್ಥಮಾತ್ರಬೋಧನಾಚ್ಚ ಅಭಿದಾಯಾ ವಿರತತ್ವಾತ್, ವಿರತಾಯಾಶ್ಚ ಪುನರುತ್ಥಾನಾಭಾವಾತ್.

ಅನ್ಯೇ ಚ ಪುನಃ "ಗೋಶಬ್ದೇನ ವಾಹೀಕಾರ್ಥೋ ನಾಭಿಧೀಯತೇ; ಕಿಂತು ಸ್ವಾರ್ಥಸಹಚಾರಿಗುಣಸಾಜಾತ್ಯೇನ ವಾಹೀಕಾರ್ಥಗತಾ ಗುಣಾ ಏವ ಲಕ್ಷ್ಯಂತೇ" ಇತಿ ವದಂತಿ. ತದಪ್ಯನ್ಯೇ ನ ಮನ್ಯಂತೇ. ತಥಾ ಹಿ ಅತ್ರ ಗೋಶಬ್ದಾದ್ವಾಹೀಕಾರ್ಥಃ ಪ್ರತೀಯತೇ ನ ವಾ? ಆದ್ಯೇಽಪಿ ಗೋಶಬ್ದಾದೇವ ವಾ? ಲಕ್ಷಿತಾದ್ವಾ ಗುಣಾದವಿನಾಭಾವದ್ವಾರಾ ವಾ? ತತ್ರ ನ ಪ್ರಥಮಃ, ವಾಹೀಕಾರ್ಥೇಽಸ್ಯ ಅಸಂಕೇತಿತತ್ವಾತ್. ನ ದ್ವಿತೀಯಃ, ಅವಿನಾಭಾವಲಭ್ಯಸ್ಯ ಅರ್ಥಸ್ಯ ಶಾಬ್ದೇಽನ್ವಯೇ ಪ್ರವೇಶಾಸಂಭವಾತ್.

ಶಾಬ್ದೀ ಹ್ಯಾಕಾಂಕ್ಷಾ ಶಬ್ದೇನೈವ ಪ್ರಪೂರ್ಯತೇ. ನ ದ್ವಿತೀಯಃ,ಯದಿ ಹಿ ಗೋ-ಶಬ್ದಾದ್ವಾಹೀಕಾರ್ಥೋ ನ ಪ್ರತೀಯೇತ ತದಾऽಸ್ಯ ವಾಹೀಕಶಬ್ದಸ್ಯ ಚ ಸಾಮಾನಾ-ಧಿಕರಣ್ಯಮಸಂಗತಂ ಸ್ಯಾತ್. ತಸ್ಮಾದತ್ರ ಗೋಶಬ್ದಃ ಮುಖ್ಯಯಾ ವೃತ್ತ್ಯಾ ವಾಹೀಕ ಶಬ್ದೇನ ಸಹ ಅನ್ವಯಮಲಭಮಾನಃ ಅಜ್ಞತ್ವಾದಿಸಾಧರ್ಮ್ಯಸಂಬಂಧಾತ್ ವಾಹೀ-ಕಾರ್ಥಂ ಲಕ್ಷಯತಿ. ವಾಹೀಕಸ್ಯ ಅಜ್ಞತ್ವಾದ್ಯತಿಶಯಬೋಧನಂ ಪ್ರಯೋಜನಮ್. ಇಯಂ ಚ ಗುಣಯೋಗಾದ್ಗೌಣೀತ್ಯುಚ್ಯತೇ. ಪೂರ್ವಾ ತು ಉಪಚಾರಾಮಿಶ್ರಣಾತ್ ಶುದ್ಧಾ. ಉಪಚಾರೋ ಹಿ ನಾಮ ಅತ್ಯಂತಂ ವಿಶಕಲಿತಯೋಃ ಸಾದೃಶ್ಯಾತಿಶಯಮ ಹಿಮ್ನಾ ಭೇದಪ್ರತೀತಿಸ್ಥಗನಮಾತ್ರಮ್. ಯಥಾ— 'ಅಗ್ನಿಮಾಣವಕಯೋಃ' ಶುಕ್ಲಪಟಯೋಸ್ತು ನಾತ್ಯಂತಂ ಭೇದಪ್ರತೀತಿಃ. ತಸ್ಮಾದೇವಮಾದಿಷು ಶುದ್ಧೈವ ಲಕ್ಷಣಾ.

ಹಿಂದೆ ಹೇಳಿದ ಎಂಟು ಬಗೆಯ ಲಕ್ಷಣಗಳು ಸಾದೃಶ್ಯವನ್ನು ಬಿಟ್ಟು ಕಾರ್ಯ ಕಾರಣಭಾವವೇ ಮೊದಲಾದ ಬೇರೆ ಬೇರೆ ಸಂಬಂಧಗಳಲ್ಲಿ ಪ್ರವರ್ತಿಸಿದರೆ ಶುದ್ಧವೆನಿಸು ತ್ತದೆ. ಸಾದೃಶ್ಯವನ್ನವಲಂಬಿಸಿದ ಲಕ್ಷಣೆಗಳು ಗೌಣಿ ಎನಿಸುತ್ತವೆ. ಅದ್ದರಿಂದ ಲಕ್ಷಣೆಗಳು ಒಟ್ಟು ಹದಿನಾರು ಬಗೆಯಾಗುತ್ತವೆ. ಶುದ್ಧಲಕ್ಷಣೆಗಳಿಗೆ ಹಿಂದಿನವೇ ಉದಾಹರಣಗಳಾಗುತ್ತವೆ. ರೂಢಿಮೂಲವಾದ ಸಾರೋಪೋಪಾದಾನಲಕ್ಷಣೆಯ. ಗೌಣಿಯಾಗಿದ್ದರೆ ಅದಕ್ಕೆ 'ಏತಾನಿ ತೈಲಾನಿ ಹೇಮಂತೇ ಸುಖಾನಿ' (ಈ ತೈಲಗಳು ಹೇಮಂತಕಾಲದಲ್ಲಿ ಹಿತವಾಗಿರುತ್ತವೆ.) ಎಂಬುದು ಉದಾಹರಣವಾಗುತ್ತದೆ. ಇಲ್ಲಿ ತೈಲಶಬ್ದವು ಎಳ್ಳಿನಿಂದಾದ ಎಂಬ ಮುಖ್ಯಾರ್ಥವನ್ನೊಳಗೊಂಡೇ ಸಾಸಿವೆ ಮೊದ ಲಾದ ಧಾನ್ಯಗಳಿಂದ ತೆಗೆದ ಎಣ್ಣೆಗಳಿಗೂ ಅನ್ವಯಿಸುತ್ತದೆ. ಎಳ್ಳಿನಿಂದ ತೆಗೆದ ಎಣ್ಣೆ ಯಲ್ಲಿರುವ ಜಿಡ್ಡು ಸಾಸಿವೆಯ ಎಣ್ಣೆಯಲ್ಲೂ ಇರುವುದರಿಂದ ಅವರಲ್ಲೂ ತೈಲ ಶಬ್ದ ವನ್ನು ಪ್ರಯೋಗಿಸಿದೆ. ಇಲ್ಲಿ ಎಳ್ಳಿನ ಎಣ್ಣೆ ಎಂಬುದೇ ಮುಖ್ಯಾರ್ಥ. ಸಾಸಿವೆಯ ಎಣ್ಣೆ ಮೊದಲಾದುವು ಲಕ್ಷ್ಯಾರ್ಥ. ಇಲ್ಲಿ ಎರಡು ಪದಗಳನ್ನೂ ಪ್ರಯೋಗಿಸಿ ತಾದಾತ್ಮ್ಯ ವನ್ನು ಹೇಳಿದೆ. ಪ್ರಯೋಜನಮೂಲವಾದ ಸಾರೋಪೋಪಾದಾನಲಕ್ಷಣೆಯು ಗೌಣಿ ಎನಿಸಿದ್ದಕ್ಕೆ 'ಏತೇ ರಾಜಕುಮಾರಾಃ ಗಚ್ಛಂತಿ' ಎಂಬುದೇ ಉದಾಹರಣವಾಗುತ್ತದೆ. ಬೀದಿಯಲ್ಲಿ ರಾಜಕುಮಾರರು ಹಾಗೆಯೇ ಅವರಿಗೆ ಸದೃಶರಾದ ಇತರರು ಹೋಗುತ್ತಿರಲು 'ಈ ರಾಜಕುಮಾರರು ಹೋಗುತ್ತಾರೆ' ಎಂದು ಇಲ್ಲಿ ಪ್ರಯೋಗಿಸಲಾಗಿದೆ. ರಾಜ ಕುಮಾರರಲ್ಲದವರು ಹೋಗುತ್ತಿರುವಾಗಲೂ ರಾಜಕುಮಾರರು ಹೋಗುತ್ತಾರೆ ಎಂದು ಹೇಳಿದೆ. ರಾಜಕುಮಾರರಲ್ಲದ ಇತರರೇ ಇಲ್ಲಿ ಮುಖ್ಯಾರ್ಥ. ರಾಜಕುಮಾರರೇ ಲಕ್ಷ್ಯಾರ್ಥ. ಇವರನ್ನೂ ಇತರರು ಎಂಬ ಶಬ್ದದಿಂದಲೇ ತಿಳಿಸಿ ಅವರೆಲ್ಲರಿಗೂ ಸಾದೃಶ್ಯ ಮೂಲಕವಾಗಿ ತಾದಾತ್ಮ್ಯವನ್ನು ಹೇಳಿದೆ. ಇತರರಿಗೂ ರಾಜಕುಮಾರರಂತೆ ವೇಷ ಭೂಷಣಗಳಿರುವುದರಿಂದ ಹೀಗೆ ಹೇಳಿದೆ. ರೂಢಿಮೂಲವಾದ ಸಾಧ್ಯವಸಾನೋ ಪಾದಾನಲಕ್ಷಣೆಯು ಗೌಣಿಗಿಯಾದ್ದರೆ 'ತೈಲಾನಿ ಹೇಮಂತೇ ಸುಖಾನಿ' ಎಂಬುದು

ಉದಾಹರಣವಾಗುತ್ತದೆ. ಇಲ್ಲಿ 'ತೈಲಾನಿ' ಎಂಬ ಪದವನ್ನು ಸಾಸಿವೆ ಮೊದಲಾದ ಧಾನ್ಯಗಳಿಂದ ತೆಗಿವ ಎಣ್ಣೆಗಳಲ್ಲಿ ಪ್ರಯೋಗಿಸಲಾಗಿದೆ. ಮುಖ್ಯಾರ್ಥವೆನಿಸಿದ ಎಳ್ಳಿನಿಂದಾದ ಎಣ್ಣೆಯು ಇಲ್ಲಿ ಶಬ್ದದಿಂದ ಬೋಧಿತವಾಗಿಲ್ಲ. ಆದರೂ ಎಳ್ಳಿನ ಎಣ್ಣೆಯ ಜಿಡ್ಡು ಅಲ್ಲಿಯೂ ಇರುವುದರಿಂದ ತಾದಾತ್ಮ್ಯವನ್ನು ಹೇಳಿದೆ. ಪ್ರಯೋಜನಮೂಲವಾದ ಸಾಧ್ಯವಸಾನೋಪಾದಾನಲಕ್ಷಣೆಯು ಗೌಣಿಯಾಗಿದ್ದರೆ ಅದಕ್ಕೆ 'ರಾಜಕುಮಾರಾಃ ಗಚ್ಛಂತಿ' ಎಂಬುದು ಉದಾಹರಣವಾಗುತ್ತದೆ. ಇಲ್ಲಿ ಇತರರನ್ನು ಶಬ್ದದಿಂದ ತಿಳಿಸದೆ ಅವರಿಗೂ ರಾಜಕುಮಾರರಿಗೂ ಸಾದೃಶ್ಯವನ್ನು ತಿಳಿಸಿದೆ. ಆದ್ದರಿಂದ ಇದು ಸಾಧ್ಯವಸಾನೋಪಾದಾನಲಕ್ಷಣೆ ಎನಿಸಿದೆ. ರೂಢಿಯನ್ನವಲಂಬಿಸಿದ ಸಾರೋಪಲಕ್ಷಣಲಕ್ಷಣೆಯು ಗೌಣಿಯಾಗಿದ್ದರೆ "ರಾಜಾ ಗೌಡೇಂದ್ರಂ ಕಂಟಕಂ ಶೋಧಯತಿ" ಎಂಬುದು ಉದಾಹರಣವಾಗುತ್ತದೆ. ಕಂಟಕಶಬ್ದವು ಮರದ ತೀಕ್ಷ್ಣಾವಯವವೆಂಬ ತನ್ನ ಶಕ್ಯಾರ್ಥವನ್ನು ತೊರೆದು ಗೌಡದೇಶದ ರಾಜನಿಗೆ ಅನ್ವಯಿಸುತ್ತದೆ. ಮುಳ್ಳಿಗೂ ಆ ರಾಜನಿಗೂ ಅಭೇದವು ತೋರುವುದರಿಂದ ಮುಳ್ಳಿಗೆ ಸದೃಶವಾದವನೆಂಬ ಅರ್ಥವು ಸಿದ್ಧಿಸುತ್ತದೆ. ಪ್ರಯೋಜನವನ್ನವಲಂಬಿಸಿದ ಸಾರೋಪಲಕ್ಷಣಲಕ್ಷಣೆಗೆ ಗೌರ್ವಾಹೀಕ ಎಂಬುದು ಉದಾಹರಣವಾಗುತ್ತದೆ. ವಾಹೀಕ ದೇಶದಲ್ಲಿರುವವನು ಗೋವಿನಂತೆ ಇರುವನು ಎಂಬಲ್ಲಿ ವಾಹೀಕನು ಗೋವಿಗಿಂತ ಬೇರೆಯಾಗಿದ್ದರೂ ಅವನನ್ನು ಗೋವೆಂದು ಹೇಳಿದ್ದರಿಂದ ಗೋಶಬ್ದವು ಸ್ವಾರ್ಥವನ್ನು ತೊರೆದು ವಾಹೀಕನಿಗೆ ಅನ್ವಯಿಸುತ್ತದೆ. ಎರಡು ಪದಗಳನ್ನು ಪ್ರಯೋಗಿಸಿ ತಾದಾತ್ಮ್ಯವನ್ನು ತಿಳಿಸುವುದರಿಂದ ಇದು ಸಾರೋಪವೆನಿಸಿದೆ. ಗೋವಿನಂತೆ ವಾಹೀಕನು ಮೂಢನಾದ್ದರಿಂದ ಇದು ಗೌಣಿ ಎನಿಸಿದೆ. ಇವನಲ್ಲಿ ಹೆಚ್ಚು ಮೌಢ್ಯವಿತ್ತೆಂದು ತಿಳಿಸುವುದೇ ಇಲ್ಲಿ ಪ್ರಯೋಜನವೆನಿಸಿದೆ. ರೂಢಿಯನ್ನವಲಂಬಿಸಿದ ಸಾಧ್ಯವಸಾನಲಕ್ಷಣಲಕ್ಷಣೆಯು ಗೌಣಿಯಾಗಿದ್ದರೆ ಆದಕ್ಕೆ 'ರಾಜಾ ಕಂಟಕಂ ಶೋಧಯತಿ' ಎಂಬುದೂ, ಅದೇ ಲಕ್ಷಣೆಯು ಪ್ರಯೋಜನವನ್ನವಲಂಬಿಸಿದಾಗ 'ಗೌರ್ಜಲ್ಪತಿ' ಎಂಬುದೂ ಉದಾಹರಣವಾಗುತ್ತವೆ. ಇಲ್ಲಿ ಎರಡು ಕಡೆಗಳಲ್ಲೂ ಗೌಡೇಂದ್ರಪದವು ಶಬ್ದದಿಂದ ಬೋಧಿತವಾಗಿಲ್ಲವಾದರೂ ಅವನಿಗೂ ಕಂಟಕಕ್ಕೂ ತಾದಾತ್ಮ್ಯವನ್ನು ತಿಳಿಸಿರುವುದರಿಂದ ಇದು ಸಾಧ್ಯವಸಾನಲಕ್ಷಣೆಯಾಯಿತು. ಕಂಟಕಪದವು ಸ್ವಾರ್ಥವನ್ನು ತೊರೆದು ಕ್ಷುದ್ರಶತ್ರುವೆನಿಸಿದ ಗೌಡೇಂದ್ರನನ್ನು ತಿಳಿಸಿದ್ದರಿಂದ ಇದು ಲಕ್ಷಣಲಕ್ಷಣೆಗೆ ಉದಾಹರಣವಾಗಿದೆ. ಕಂಟಕದಂತೆ ಅಲ್ಪಾಪಕಾರವನ್ನು ಮಾಡುವುದರಿಂದ ಅವನಿಗೂ ಕಂಟಕಕ್ಕೂ ಸಾದೃಶ್ಯವಿರುವ ಪ್ರಯುಕ್ತ ಈ ಲಕ್ಷಣೆಯು ಗೌಣಿ ಎನಿಸಿದೆ. ಇದು ರೂಢಿಮೂಲವೆನಿಸಿದೆ. ಗೌರ್ಜಲ್ಪತಿ ಎಂಬಲ್ಲಿ ಗೋವಿನಂತೆ ಈ ಮೂರ್ಖನು ಅಸಂಬದ್ಧವಾಗಿ ಮಾತನಾಡುತ್ತಾನೆ ಎಂದು ಹೇಳಿದ್ದರಿಂದ ಗೋಪದವು ಸ್ವಾರ್ಥವನ್ನು ತೊರೆದು ಮೂರ್ಖನನ್ನು ಬೋಧಿಸುವ ಪ್ರಯುಕ್ತ ಇದು ಲಕ್ಷಣಲಕ್ಷಣೆ ಎನಿಸಿದೆ. ಮೂರ್ಖ ಎಂಬಪದವನ್ನು ಇಲ್ಲಿ ತಿಳಿಸದೆಇರುವುದಾದರೂ ಅವನಿಗೆ ಗೋವಿನೊಡನೆ ತಾದಾತ್ಮ್ಯವನ್ನು ಹೇಳಿರುವುದರಿಂದ ಇದು ಸಾಧ್ಯವಸಾನಲಕ್ಷಣೆ ದೆವನಿಸಿ-

ಅವನಿಗೆ ಮೂರ್ಖಸಾದೃಶ್ಯವನ್ನು ಇಲ್ಲಿ ತಿಳಿಸಿರುವುದರಿಂದ ಇದು ಗೌಣಿ ಎನಿಸಿದೆ. ಅವನಲ್ಲಿ ಹೆಚ್ಚು ಮೂರ್ಖತನವಿತ್ತೆಂಬುದನ್ನು ತಿಳಿಸುವುದೇ ಇಲ್ಲಿ ಪ್ರಯೋಜನವೆನಿಸಿದೆ.

ಇಲ್ಲಿ ಕೆಲವರು "ಗೋವಿನಲ್ಲಿ ಸಹಜವಾಗಿರುವ ಜಾಡ್ಯಮಾಂದ್ಯ ಮೊದಲಾದ ಗುಣಗಳನ್ನು ಗೋಪದದಿಂದ ಗ್ರಹಿಸಬೇಕು. ಅವೇಯೇ ಇಲ್ಲಿ ಗೋಶಬ್ದವನ್ನು ವಾಹೀಕ ಎಂಬ ಅರ್ಥದಲ್ಲಿ ಪ್ರಯೋಗಿಸಲು ನಿಮಿತ್ತವೆನಿಸುತ್ತವೆ' ಎಂದು ಹೇಳುತ್ತಾರೆ. ಇದು ಯುಕ್ತವಲ್ಲ; ಯಾಕೆಂದರೆ ಗೋಶಬ್ದಕ್ಕೆ ವಾಹೀಕ ಎಂಬ ಅರ್ಥದಲ್ಲಿ ಸಂಕೇತವಿಲ್ಲದ್ದರಿಂದ ಆ ಪದವು ಆ ಅರ್ಥವನ್ನು ತಿಳಿಸಲು ಸಮರ್ಥವಾಗಿಲ್ಲ. ಅದು ಗೋಶಬ್ದದ ಅರ್ಥವನ್ನು ಮಾತ್ರವೇ ತಿಳಿಸಬಲ್ಲದು. ಅಷ್ಟರಲ್ಲಿಯೇ ಮುಖ್ಯವೃತ್ತಿ ಎನಿಸಿದ ಅಭಿಧೆಯ ಶಕ್ತಿಯು ಕೊನೆಗಾಣುವುದು. ಹೀಗೆ ತನ್ನ ಶಕ್ತಿಯನ್ನು ಕಳೆದುಕೊಂಡಮೇಲೆ ಆ ಅಭಿಧೆಗೆ ಮತ್ತೆ ಪ್ರವರ್ತಿಸಲು ಸಾಧ್ಯವಿಲ್ಲ. ಇಲ್ಲಿ ಮತ್ತೆ ಕೆಲವರು 'ಗೋಶಬ್ದವು ವಾಹೀಕ ಎಂಬ ಅರ್ಥವನ್ನು ಅಭಿಧಾವೃತ್ತಿಯಿಂದ ತಿಳಿಸುವುದಿಲ್ಲ; ಆದರೆ ಅದು ಗೋವಿನಲ್ಲಿ ಸಹಜವಾಗಿರುವ ಗುಣಗಳ ಸಾದೃಶ್ಯದಿಂದ ವಾಹೀಕನಲ್ಲಿರುವ ಗುಣಗಳನ್ನು ಲಕ್ಷಣೆಯಿಂದ ತಿಳಿಸುತ್ತದೆ" ಎಂದು ಹೇಳುತ್ತಾರೆ. ಇದನ್ನೂ ಸಹ ಇತರರು ಸಹಿಸುವುದಿಲ್ಲ; ಏಕೆಂದರೆ ಇಲ್ಲಿ ವಿಕಲ್ಪಗಳು ಹೀಗೆ ಸಂಭವಿಸುತ್ತವೆ. ಇಲ್ಲಿ ಗೋಶಬ್ದದಿಂದ ವಾಹೀಕ ಎಂಬ ಅರ್ಥವು ತೋರುವುದೇ ? ಇಲ್ಲವೆ? ಎಂದು ಆಕ್ಷೇಪಿಸಿದರೆ ತೋರುವುದೆಂದು ಹೇಳುವ ಪಕ್ಷದಲ್ಲಿ ಗೋಶಬ್ದದಿಂದಲೋ ಅಥವ ಲಕ್ಷಣೆಯಿಂದ ತೋರುವ ಗೋವಿನ ಯಾವ ಗುಣಗಳಿವೆಯೋ ಅವು ವಾಹೀಕನಲ್ಲೂ ಇರುವುದರಿಂದಲೋ ? ಎಂದು ಇಲ್ಲಿ ಸುಪ್ರಸಿದ್ಧವಾದ ಎರಡು ವಿಕಲ್ಪಗಳು ಸಂಭವಿಸುತ್ತವೆ ಎಂದು ಅವರು ಪ್ರತಿಪಾದಿಸುತ್ತಾರೆ. ಇವುಗಳಲ್ಲಿ ಮೊದಲನೆಯ ವಿಕಲ್ಪವು ಹೊಂದುವುದಿಲ್ಲ ; ಯಾಕೆಂದರೆ ವಾಹೀಕ ಎಂಬ ಅರ್ಥದಲ್ಲಿ ಗೋಪದಕ್ಕೆ ಸಂಕೇತವಿಲ್ಲವಾದ್ದರಿಂದ ಗೋಪದವು ವಾಹೀಕ ಎಂಬ ಅರ್ಥವನ್ನು ಬೋಧಿಸಲಾರದು. ಹಾಗೆಯೇ ಎರಡನೆಯ ವಿಕಲ್ಪವೂ ಹೊಂದುವುದಿಲ್ಲ ; ಯಾಕೆಂದರೆ ಗೋವಿನಲ್ಲಿರುವ ಗುಣಗಳು ವಾಹೀಕನಲ್ಲೂ ಇರುತ್ತವೆ ಎಂದು ಲಕ್ಷಣೆಯಿಂದ ತಿಳಿಸುವ ಅರ್ಥವನ್ನು ಶಾಬ್ದಬೋಧದಲ್ಲಿ ಅನ್ವಯಿಸಲಿಕ್ಕಾಗುವುದಿಲ್ಲ. ಒಂದು ಶಬ್ದದಿಂದ ತೋರುವ ಆಕಾಂಕ್ಷೆಯನ್ನು ಮತ್ತೊಂದು ಶಬ್ದದಿಂದ ತುಂಬಬೇಕೇಹೊರತು ಆಕ್ಷಿಪ್ತವಾದ ಬೇರೊಂದು ಅರ್ಥದಿಂದ ತುಂಬಲಿಕ್ಕಾಗುವುದಿಲ್ಲ. ಹೀಗೆ ಲಕ್ಷಣೆಯಿಂದ ತೋರಿಬರುವ ಗುಣಸಾದೃಶ್ಯದಿಂದಲೂ ಗೋಪದವು ವಾಹೀಕ ಎಂಬ ಅರ್ಥವನ್ನು ಬೋಧಿಸಲಾರದು. ಆದ್ದರಿಂದ ಎರಡನೆಯ ಪಕ್ಷವೂ ಹೊಂದುವುದಿಲ್ಲ. ಗೋಶಬ್ದದಿಂದ ವಾಹೀಕ ಎಂಬ ಅರ್ಥವು ತೋರುವುದಿಲ್ಲವೆಂದು ಹೇಳುವುದಾದರೆ ವಾಹೀಕಶಬ್ದಾರ್ಥಕ್ಕೂ ಗೋಶಬ್ದಾರ್ಥಕ್ಕೂ ಸಾಮಾನಾಧಿಕರಣ್ಯವನ್ನು ಹೇಳಿದ್ದೇ ಹೊಂದದೇಹೋಗುತ್ತದೆ. ಗೌಃ ವಾಹೀಕಃ ಎಂದು ಎರಡುಪದಗಳನ್ನು ಒಂದೇ ವಿಭಕ್ತಿಯಲ್ಲಿ ತಿಳಿಸಿದ್ದೇ ಸಾಮಾನಾಧಿಕರಣ್ಯವೆನಿಸುತ್ತದೆ. ಹಾಗೆ ಗೋಶಬ್ದದಿಂದ ವಾಹೀಕ ಎಂಬ ಅರ್ಥವು ತೋರದೆಹೋಗಿದ್ದರೆ ಹೀಗೆ ತಿಳಿಸಿದ್ದೇ ವ್ಯರ್ಥವಾದೀತು. ಆದ್ದರಿಂದ ಇಲ್ಲಿ ಗೋಶಬ್ದಕ್ಕೆ ಮುಖ್ಯವೃತ್ತಿಯಿಂದ ವಾಹೀಕ ಶಬ್ದದೊಡನೆ

ಅನ್ವಯವಾಗದಿರುವಪ್ರಯುಕ್ತ ಆ ಶಬ್ದವು ಅಜ್ಞತ್ವ ಮೊದಲಾದ ಸಾದೃಶ್ಯದ ಮೂಲಕ ವಾಹೀಕ ಎಂಬ ಅರ್ಥವನ್ನು ಲಕ್ಷಣೆಯಿಂದಲೇ ತಿಳಿಸುತ್ತದೆ. ವಾಹೀಕನಲ್ಲಿ ಅಜ್ಞತ್ವ ಮೊದಲಾದವು ವಿಶೇಷವಾಗಿರುವುವೆಂಬುದನ್ನು ತಿಳಿಸುವುದೇ ಇಲ್ಲಿ ಪ್ರಯೋಜನ. ಗೋವಿನಲ್ಲಿರುವ ಜಾಡ್ಯ ಮಾಂದ್ಯ ಎಂಬ ಗುಣಗಳಿಗೆ ಸದೃಶವಾದ ಗುಣಗಳ ಸಂಬಂಧವು ವಾಹೀಕನಲ್ಲೂ ಇರುವುದರಿಂದ ಈ ಬಗೆಯ ಲಕ್ಷಣೆಯು ಗೌಣಿ ಎನಿಸಿದೆ.' ಹಿಂದಿನ ಲಕ್ಷಣೆಗಳು ಗುಣಸಾದೃಶ್ಯವೆಂಬ ಉಪಚಾರದ ಸಂಪರ್ಕವಿಲ್ಲದ್ದರಿಂದ ಶುದ್ಧವೆನಿಸಿವೆ. ಪರಸ್ಪರಭಿನ್ನಾವಾದ ಪದಾರ್ಥಗಳಿಗೆ ಅತಿಸಾದೃಶ್ಯವಿರುವ ಪ್ರಯುಕ್ತ ಅವಕ್ಕೆ ಭೇದವು ತೋರದಿರುವುದೇ ಉಪಚಾರವೆನಿಸುತ್ತದೆ. 'ಅಗ್ನಿರ್ಮಾಣವಕಃ' ಎಂಬಲ್ಲಿ ಮಾಣವಕನೆಂಬ ಬಾಲಕನಲ್ಲಿ ಅಗ್ನಿ ಎಂದು ಪ್ರಯೋಗಿಸಿದ್ದರಿಂದ ಅವರಿಗೆ ಅತ್ಯಂತಭೇದವಿದ್ದರೂ ತೇಜಸ್ಸು ಅವನಲ್ಲೂ ಇರುವ ಪ್ರಯುಕ್ತ ಅವರಿಬ್ಬರಿಗೂ ಭೇದವು ತೋರುವುದಿಲ್ಲ. ಅದ್ದರಿಂದ "ಅಗ್ನಿರ್ಮಾಣವಕಃ" ಎಂದು ಸಾಮಾನಾಧಿಕರಣ್ಯದಿಂದ ಒಂದೇ ವಿಭಕ್ತಿಯಲ್ಲಿ ಹೇಳುವ ಪದ್ಧತಿ ಇದೆ. ಆದ್ದರಿಂದ ಇಲ್ಲಿ ಗೌಣೀಲಕ್ಷಣೆಯನ್ನು ಹೇಳಲಾಗುವುದು. ಆದರೆ 'ಶುಕ್ಲಃ ಪಟಃ' ಎಂಬಲ್ಲಿ ಎರಡು ಪದಗಳಿಗೂ ಸಾಮಾನಾಧಿಕರಣ್ಯವಿದ್ದರೂ ಇವೆರಡಕ್ಕೂ ಅತ್ಯಂತಭೇದವು ತೋರದೇ ಇರುವ ಪ್ರಯುಕ್ತ ಗೌಣೀಲಕ್ಷಣೆಯನ್ನು ಹೇಳದೆ ಶುದ್ಧಲಕ್ಷಣೆಯನ್ನೇ ಹೇಳಬೇಕು. ಇಲ್ಲಿ ಶುಕ್ಲಶಬ್ದವು ಶುಕ್ಲವರ್ಣವನ್ನು ಬೋಧಿಸುವಂತೆ ಆ ವರ್ಣದ ವಸ್ತು ಒಂದನ್ನೂ ಬೋಧಿಸಬಲ್ಲದು. "ಗುಣೇ ಶುಕ್ಲಾದಯಃ ಪುಂಸಿ ಗುಣಿಲಿಂಗಾಸ್ತು ತದ್ವತಿ" ಎಂಬ ಪ್ರಮಾಣದಿಂದ ಶುಕ್ಲ ಮೊದಲಾದ ಪದಗಳು ಗುಣವನ್ನು ಬೋಧಿಸುವಾಗ ಪುಲ್ಲಿಂಗದಲ್ಲಿದ್ದು ಗುಣವುಳ್ಳ ವಸ್ತುವಿಗೆ ಅನ್ವಯಿಸುವಾಗ ಆ ವಸ್ತುವನ್ನು ತಿಳಿಸುವ ಪದದ ಲಿಂಗವನ್ನು ಅನುಸರಿಸುತ್ತವೆ. 'ಬಿಳುಪಾಗಿರುವುದೇ ಗಡಿಗೆ' ಎಂದು ಹೇಳಿದ್ದರಿಂದ ಅವೆರಡಕ್ಕೂ ಅತ್ಯಂತಭೇದವಿಲ್ಲದಿರುವಂತೆ ಪಟ ಎಂಬ ಪದವು ಶುಕ್ಲಪಟವನ್ನು ಅಭಿಧೆಯಿಂದಲೇ ಬೋಧಿಸಬಲ್ಲದು. ಆದ್ದರಿಂದ ಇಲ್ಲಿ ಕೆಲವರ ಮತದಲ್ಲಿ ಲಕ್ಷಣೆಯನ್ನೇ ಹೇಳಲಿಕ್ಕಾಗುವುದಿಲ್ಲ. ಮತ್ತೆ ಕೆಲವರ ಮತದಲ್ಲಿ ಇವನ್ನು ನಿರೂಢ (ಶುದ್ಧ) ಲಕ್ಷಣೆ ಎಂದು ಹೇಳಲಾಗಿದೆ. ಅಂತೂ ಇಲ್ಲಿ 'ಅಗ್ನಿರ್ಮಾಣವಕಃ' ಎಂಬಂತೆ ಗೌಣೀಲಕ್ಷಣೆ ಹೊಂದುವುದಿಲ್ಲ.

ವ್ಯಂಗ್ಯಸ್ಯ ಗೂಢಾಗೂಢತ್ವಾದ್ದ್ವಿಧಾಃ ಸ್ಯುಃ ಫಲಲಕ್ಷಣಾಃ ॥೧೦॥

ಪ್ರಯೋಜನೇ ವಾ ಅಷ್ಟಭೇದಾ ಲಕ್ಷಣಾ ದರ್ಶಿತಾಸ್ತಾಃ ಪ್ರಯೋಜನರೂಪವ್ಯಂಗ್ಯಸ್ಯ ಗೂಢಾಗೂಢತಯಾ ಪ್ರತ್ಯೇಕಂ ದ್ವಿಧಾ ಭೂತ್ವಾ ಷೋಡಶಭೇದಾಃ. ತತ್ರ ಗೂಢಃ ಕಾವ್ಯಾರ್ಥಭಾವನಾಪರಿಪಕ್ವಬುದ್ಧಿವಿಭಾವಮಾತ್ರವೇದ್ಯಃ. ಯಥಾ 'ಉಪಕೃತಂ ಬಹು ಯತ್ರ' ಇತಿ. ಅಗೂಢಃ ಅತಿಸ್ಫುಟತಯಾ ಸರ್ವಜನಸಂವೇದ್ಯಃ ಯಥಾ—

"ಉಪದಿಶತಿ ಕಾಮಿನೀನಾಂ ಯೌವನಮದ ಏವ ಲಲಿತಾನಿ" ಅತ್ರ 'ಉಪದಿಶತಿ' ಇತ್ಯನೇನ 'ಆವಿಷ್ಕರೋತಿ' ಇತಿ ಲಕ್ಷ್ಯತೇ. ಆವಿಷ್ಕಾರಾತಿಶಯಶ್ಚ ಅಭಿಧೇಯವತ್ ಸ್ಫುಟಂ ಪ್ರತೀಯತೇ.

ಧರ್ಮಿಧರ್ಮಗತತ್ವೇನ ಫಲಸ್ಯೈತಾ ಅಪಿ ದ್ವಿಧಾ ।

ಏತಾಃ ಅನಂತರೋಕ್ತಾಃ ಷೋಡಶಭೇದಾ ಲಕ್ಷಣಾಃ ಫಲಸ್ಯ ಧರ್ಮಿಗತತ್ವೇನ ಧರ್ಮಗತತ್ವೇನ ಚ ಪ್ರತ್ಯೇಕಂ ದ್ವಿಧಾ ಭೂತ್ವಾ ದ್ವಾತ್ರಿಂಶದ್ಭೇದಾಃ. ದಿಙ್ಮಾತ್ರಂ ಯಥಾ— ಸ್ನಿಗ್ಧಶ್ಯಾಮಲಕಾಂತಿಲಿಪ್ತವಿಯತೋ ವೇಲ್ಲದ್ಬಲಾಕಾ ಘನಾಃ

ವಾತಾಃ ಶೀಕರಿಣಃ ಪಯೋದಸುಹೃದಾಮಾನಂದಕೇಕಾಃ ಕಲಾಃ ।

ಕಾಮಂ ಸಂತು ದೃಢಂ ಕಠೋರಹೃದಯೋ ರಾಮೋಽಸ್ಮಿ ಸರ್ವಂ ಸಹೇ

ವೈದೇಹೀ ತು ಕಥಂ ಭವಿಷ್ಯತಿ ಹ ಹಾ ಹಾ ದೇವಿ ಧೀರಾ ಭವ ॥

ಅತ್ರ ಅತ್ಯಂತದುಃಖಸಹಿಷ್ಣುರೂಪೇ ರಾಮೇ ಧರ್ಮಿಣಿ ಲಕ್ಷ್ಯೇ ತಸ್ಯೈವಾತಿಶಯಃ ಫಲಮ್. 'ಗಂಗಾಯಾಂ ಘೋಷಃ' ಇತ್ಯತ್ರ ತಟೇ ಶೀತತ್ವಪಾವನತ್ವರೂಪಧರ್ಮಸ್ಯ ಅತಿಶಯಃ ಫಲಮ್.

ತದೇವಂ ಲಕ್ಷಣಾಭೇದಾಃ ಚತ್ವಾರಿಂಶನ್ಮತಾ ಬುಧೈಃ ॥ ೧೧ ॥

ರೂಢಾವಷ್ಟೌ ಫಲೇ ದ್ವಾವಿಂಶದಿತಿ ಚತ್ವಾರಿಂಶಲ್ಲಕ್ಷಣಾಭೇದಾಃ ಕಿಂಚ

ಪದವಾಕ್ಯಗತತ್ವೇನ ಪ್ರತ್ಯೇಕಂ ತಾ ಅಪಿ ದ್ವಿಧಾ ।

ತಾಃ ಅನಂತರೋಕ್ತಾಶ್ಚತ್ವಾರಿಂಶದ್ಭೇದಾಃ ತತ್ರ ಪದಗತತ್ವೇ ಯಥಾ ಗಂಗಾಯಾಂ ಘೋಷಃ. ವಾಕ್ಯಗತತ್ವೇ ಯಥಾ 'ಉಪಕೃತಂ ಬಹು ಯತ್ರ' ಇತಿ ಏವಂ ಅಶೀತಿಪ್ರಕಾರಾ ಲಕ್ಷಣಾ.

ವ್ಯಂಗ್ಯಾರ್ಥವು ಸಹೃದಯರಿಗೂ ಸಹ ಕ್ಲೇಶದಿಂದ ತಿಳಿದುಬರುವಂತೆಯೂ (ಗೂಢ) ಹಾಗೆಯೇ ಪಂಡಿತಪಾಮರರೆಲ್ಲರಿಗೂ ಸುಲಭವಾಗಿ ತಿಳಿದುಬರುವಂತೆಯೂ ಇರುವುದರಿಂದ ಪ್ರಯೋಜನಮೂಲವಾದ ಲಕ್ಷಣೆಗಳು ಎರಡುಬಗೆಯಾಗುತ್ತವೆ.

ಪ್ರಯೋಜನವನ್ನವಲಂಬಿಸಿದ ಎಂಟು ಬಗೆಯ ಲಕ್ಷಣೆಗಳಲ್ಲಿ ವ್ಯಂಗ್ಯವೆನಿಸಿದ ಪ್ರಯೋಜನವು ಗೂಢವೂ ಸ್ಪಷ್ಟವೂ ಆಗಿರುವುದರಿಂದ ಆ ಲಕ್ಷಣೆಗಳು ಒಟ್ಟು ಹದಿನಾರು ಬಗೆಯಾಗುತ್ತವೆ. ಅವುಗಳಲ್ಲಿ ಗೂಢವ್ಯಂಗ್ಯವು ಕಾವ್ಯದಿಂದ ತೋರುವ ಅರ್ಥವನ್ನು ಯಾವಾಗಲೂ ಅನುಸಂಧಾನ ಮಾಡುತ್ತಲೇ ಬುದ್ಧಿಯನ್ನು ವಿಕಾಸಗೊಳಿಸಿಕೊಂಡ ಸಹೃದಯರಿಗೆ ಮಾತ್ರವೇ ತಿಳಿದುಬರುವಂತಹದು. 'ಉಪಕೃತಂ ಬಹು ಯತ್ರ' ಎಂಬಲ್ಲಿ ಗೂಢವ್ಯಂಗ್ಯವನ್ನು ತಿಳಿಯಬಹುದು. ಆ ಗೂಢವ್ಯಂಗ್ಯವು ಸ್ಪಷ್ಟವಾಗಿ ತೋರುವುದರಿಂದ ಎಲ್ಲರಿಗೂ ತಿಳಿದುಬರುವಂತಹದು. "ಸ್ತ್ರೀಯರಿಗೆ ಯೌವನಮದವೇ ವಿಲಾಸವನ್ನು ಉಪದೇಶಿಸುತ್ತದೆ" ಇಲ್ಲಿ 'ಉಪದಿಶತಿ' ಎಂಬುದು ಲಕ್ಷಣೆಯಿಂದ 'ಪ್ರಕಾಶಗೊಳಿಸುತ್ತದೆ' ಎಂಬ ಅರ್ಥವನ್ನು ತಿಳಿಸುತ್ತದೆ. ಅಲ್ಲಿ ವ್ಯಂಗ್ಯವೆನಿಸಿದ ಪ್ರಕಾಶಾತಿಶಯವು ವಾಚ್ಯಾರ್ಥದಂತೆ ಎಲ್ಲರಿಗೂ ಸ್ಪಷ್ಟವಾಗಿ ಕಂಡುಬರುತ್ತದೆ.

ವ್ಯಂಜನೆಯಿಂದ ತಿಳಿದುಬರುವ ಫಲವು ಧರ್ಮಿ (ವ್ಯಕ್ತಿ) ಯಲ್ಲೂ, ಧರ್ಮ (ಅವನಲ್ಲಿರುವ ಗುಣ) ದಲ್ಲೂ ಇರುವುದಾದ್ದರಿಂದ ಹಿಂದೆ ಹೇಳಿದ ಹದಿನಾರು ಬಗೆಯ ಲಕ್ಷಣೆಗಳು ಮತ್ತೆ ಎರಡೆರಡು ಬಗೆಗಳಾಗಿ ಒಟ್ಟು ಮೂವತ್ತೆರಡು ಬಗೆಗಳಾಗುತ್ತವೆ.

ಸ್ಥೂಲವಾಗಿ ತೋರಿಸಲು ಒಂದನ್ನು ಉದಾಹರಿಸಲಾಗಿದೆ. "ಆಕಾಶವು ನುಣುಪಾಗಿಯೂ ಕಪ್ಪುಬಣ್ಣದಿಂದ ತುಂಬಿಯೂ ಇದೆ. ಅದರ ಅಂತರದಲ್ಲಿ ಬಕ ಪಕ್ಷಿಗಳು ಸಾಲು ಸಾಲಾಗಿ ಓಡಾಡುತ್ತಿವೆ. ಇಂತಹ ಆಕಾಶದಲ್ಲಿ ಮೇಘಗಳು ಸಂಚರಿಸುತ್ತಿರಲಿ. ಶೀತವಾದ ಗಾಳಿಯೂ ಇರಲಿ. ಮೇಘವೆಂಬ ಸ್ನೇಹಿತರಿಗೆ ಆನಂದವನ್ನು ಕೊಡುತ್ತ ಮನೋಹರವಾದ ನವಿಲುಗಳ ಧ್ವನಿಯೂ ಇರಲಿ, ಇವೆಲ್ಲವೂ ಯಥೇಚ್ಛವಾಗಿರಲಿ. ನಾನೇನೋ ಕಠಿಣಹೃದಯನಾದ ರಾಮನಿರುವೆನು. ನಾನೇ ಎಲ್ಲವನ್ನೂ ಸಹಿಸುವೆನು. ಆದರೆ ಸೀತೆ ಇವೆಲ್ಲವನ್ನು ಸಹಿಸಿಕೊಂಡು ಹೇಗೆ ಇದ್ದಾಳು ! ಅಹಾ, ದೇವಿ ! ಧೈರ್ಯದಿಂದ ಇದ್ದು ನಿನ್ನನ್ನು ಸಂತೈಸಿಕೋ" ಇಲ್ಲಿ ದುಃಖವನ್ನು ಸಹಿಸುವ ರಾಮನೆಂಬ ವ್ಯಕ್ತಿಯೇ ಧರ್ಮಿ; ಸಹನವೆಂಬ ಧರ್ಮವುಳ್ಳವನು. ಇವನೇ ಇಲ್ಲಿ ಲಕ್ಷಣೆಯೆಂದ ತಿಳಿಯಬರುವಾಗ ಅದೇ ರಾಮನಿಗೆ ಹೆಚ್ಚು ದುಃಖವನ್ನು ಸಹಿಸುವಷ್ಟು ಅದ್ಭುತವಾದ ಶಕ್ತಿ ಇತ್ತೆಂಬುದನ್ನು ಸೂಚಿಸುವುದೇ ಪ್ರಯೋಜನವೆನಿಸಿದೆ. "ಗಂಗಾಯಾಂ ಘೋಷಃ" ಎಂಬಲ್ಲಿ ತೀರದಲ್ಲಿ ಶೈತ್ಯ, ಪಾವನತ್ವ ಮೊದಲಾದ ಧರ್ಮಗಳು ಹೆಚ್ಚು ನೆಲಸಿವೆವೆಂಬುದೇ ಫಲವೆನಿಸಿದೆ.

ಹೀಗೆ ರೂಢಿಮೂಲವಾದವು ಎಂಟು, ಪ್ರಯೋಜನಮೂಲವಾದವು ಮೂವತ್ತೆರಡು ಸೇರಿ ಒಟ್ಟು ಲಕ್ಷಣೆಯಲ್ಲಿ ನಲ್ವತ್ತು ಬಗೆಗಳಿವೆ. ಈ ನಲ್ವತ್ತು ಬಗೆಗಳು ಪದದಲ್ಲೂ ವಾಕ್ಯದಲ್ಲೂ ಸೇರಿರುವ ಪ್ರಯುಕ್ತ ಮತ್ತೆ ಎರಡು ಬಗೆಗಳಾಗುತ್ತವೆ. "ಗಂಗಾಯಾಂ ಘೋಷಂ" ಎಂಬಲ್ಲಿ ಪದದಲ್ಲೂ "ಉಪಕೃತಂ ಬಹು ಯತ್ರ" ಎಂಬಲ್ಲಿ ವಾಕ್ಯದಲ್ಲೂ ಲಕ್ಷಣೆಗಳಿರುವುದರಿಂದ ಇವು ಮತ್ತೆ ಎರಡೆರಡು ಬಗೆಗಳಾಗಿ ಒಟ್ಟು ಎಂಬತ್ತು ಬಗೆಗಳಾಗುತ್ತವೆ.

## ಅಥ ವ್ಯಂಜನಾ

ವಿರತಾಸ್ವಭಿಧಾದ್ಯಾಸು ಯಯಾರ್ಥೋ ಬೋಧ್ಯತೇ ಪರಃ ॥ ೧೨ ॥
ಸಾ ವೃತ್ತಿರ್ವ್ಯಂಜನಾ ನಾಮ ಶಬ್ದಸ್ಯಾರ್ಥಾದಿಕಸ್ಯ ಚ ।

'ಶಬ್ದಬುದ್ಧಿಕರ್ಮಣಾಂ ವಿರಮ್ಯ ವ್ಯಾಪಾರಾಭಾವಃ' ಇತಿ ನಯೇನ ಅಭಿಧಾಲಕ್ಷಣಾತಾತ್ಪರ್ಯಾಖ್ಯಾಸು ತಿಸೃಷು ವೃತ್ತಿಷು ಸ್ವಂ ಸ್ವಮರ್ಥಂ ಬೋಧಯಿತ್ವೋಪಕ್ಷೀಣಾಸು ಯಯಾಽನ್ಯೋಽರ್ಥೋ ಬೋಧ್ಯತೇ ಸಾ ಶಬ್ದಸ್ಯಾರ್ಥಸ್ಯ ಪ್ರಕೃತಿಪ್ರತ್ಯಯಾದೇಶ್ಚ ವೃತ್ತಿರ್ವ್ಯಂಜನಧ್ವನನಗಮನಪ್ರತ್ಯಾಯನಾದಿವ್ಯಪದೇಶವಿಷಯಾ ವ್ಯಂಜನಾ ನಾಮ. ತತ್ರ—

ಅಭಿಧಾಲಕ್ಷಣಾಮೂಲಾ ಶಬ್ದಸ್ಯ ವ್ಯಂಜನಾ ದ್ವಿಧಾ ॥ ೧೩ ॥

ಅಭಿಧಾಮೂಲಾಮಾಹ—

ಅನೇಕಾರ್ಥಸ್ಯ ಶಬ್ದಸ್ಯ ಸಂಯೋಗಾದ್ಯೈರ್ನಿಯಂತ್ರಿತೇ ।
ಏಕತ್ರಾರ್ಥೇಽನ್ಯಧೀಹೇತುರ್ವ್ಯಂಜನಾ ಸಾಽಭಿಧಾಶ್ರಯಾ ॥ ೧೪ ॥

ಆದ್ಯಶಬ್ದಾದ್ವಿಪ್ರಯೋಗಾದಯಃ. ಉಕ್ತಂ ಹಿ—

'ಸಂಯೋಗೋ ವಿಪ್ರಯೋಗಶ್ಚ ಸಾಹಚರ್ಯಂ ವಿರೋಧಿತಾ ।
ಅರ್ಥಃ ಪ್ರಕರಣಂ ಲಿಂಗಂ ಶಬ್ದಸ್ಯಾನ್ಯಸ್ಯ ಸನ್ನಿಧಿಃ ॥
ಸಾಮರ್ಥ್ಯಮೌಚಿತೀ ದೇಶಃ ಕಾಲೋ ವ್ಯಕ್ತಿಃ ಸ್ವರಾದಯಃ ।
ಶಬ್ದಾರ್ಥಸ್ಯಾನವಚ್ಛೇದೇ ವಿಶೇಷಸ್ಮೃತಿಹೇತವಃ ' ಇತಿ ॥

'ಸಶಂಖಚಕ್ರೋ ಹರಿಃ ಇತಿ ಶಂಖಚಕ್ರಯೋಗೇನ ಹರಿಶಬ್ದೋ ವಿಷ್ಣುಮೇವಾಭಿಧತ್ತೇ. 'ಅಶಂಖಚಕ್ರೋ ಹರಿಃ' ಇತಿ ತದ್ವಿಯೋಗೇನ ತಮೇವ. 'ಭೀಮಾರ್ಜುನೌ' ಇತಿ ಅರ್ಜುನಃ ಪಾರ್ಥಃ. 'ಕರ್ಣಾರ್ಜುನೌ' ಇತಿ ಕರ್ಣಃ ಸೂತಪುತ್ರಃ. ,ಸ್ಥಾಣುಂ ವಂದೇ ' ಇತಿ ಸ್ಥಾಣುಃ ಶಿವಃ. 'ಸರ್ವಂ ಜಾನಾತಿ ದೇವಃ ' ಇತಿ ದೇವೋ ಭವಾನ್. 'ಕುಪಿತೋ ಮಕರಧ್ವಜಃ ' ಇತಿ ಮಕರಧ್ವಜಃ ಕಾಮಃ. 'ದೇವಃ ಪುರಾರಿಃ' ಇತಿ ಶಿವಃ.'ಮಧುನಾ ಮತ್ತಃಪಿಕಃ' ಇತಿ ಮಧುರ್ವಸಂತಃ.'ಪಾತು ವೋ ದಯಿತಾಮುಖಮ್' ಇತಿ ಮುಖಂ ಸಾಮ್ಮುಖ್ಯಮ್.'ವಿಭಾತಿ ಗಗನೇ ಚಂದ್ರಃ' ಇತಿ ಚಂದ್ರಃ ಶಶೀ. 'ನಿಶಿ ಚಿತ್ರಭಾನುಃ ' ಇತಿ ಚಿತ್ರಭಾನುರ್ವಹ್ನಿಃ. 'ಭಾತಿ ರಥಾಂಗಮ್' ನಮುಂಸಕವ್ಯಕ್ತ್ಯಾ ರಥಾಂಗಂ ಚಕ್ರಮ್. ಸ್ವರಸ್ತು ವೇದ ಏವ ವಿಶೇಷಪ್ರತೀತಿಕೃನ್ನ ಕಾವ್ಯ ಇತಿ ತಸ್ಯ ವಿಷಯೇನೋದಾಹೃತಮ್.

ವ್ಯಂಜನಾವೃತ್ತಿಯ ಸ್ವರೂಪವನ್ನು ಈಗ ತಿಳಿಸುತ್ತೇನೆ.

ಅಭಿಧೆ ಮೊದಲಾದ ವ್ಯಾಪಾರಗಳು ತಮ್ಮ ಕೆಲಸವನ್ನು ಮಾಡಿ ಮುಗಿಸಿಯಾದ ಮೇಲೆ ಬೇರೆ ಯಾವ ವೃತ್ತಿಯಿಂದ ಮತ್ತೊಂದು ಅರ್ಥವು ತಿಳಿಮಬರುವುದೋ ಆ ವೃತ್ತಿಯು ವ್ಯಂಜನೆ ಎನಿಸುತ್ತದೆ. ಅದು ಶಬ್ದಕ್ಕು ಅರ್ಥಕ್ಕೂ ಸಂಬಂಧಿಸಿರುತ್ತದೆ.

"ಘಟ ಮೊದಲಾದ ವಸ್ತುಗಳನ್ನು ತಿಳಿಸುವ ಶಬ್ದ, ಪ್ರತ್ಯಕ್ಷ ಮೊದಲಾದ ಜ್ಞಾನ, ವ್ಯಾಪಾರ ಇವು ಒಂದೊಂದು ತನಗೆ ಸಂಬಂಧಿಸಿದ ಅರ್ಥವನ್ನು ತಿಳಿಸಿಯಾದ ಮೇಲೆ ಮತ್ತೆ ಅದೇ ಅರ್ಥವನ್ನು ತಿಳಿಸಲಿಕ್ಕೆ ಅವಕ್ಕೆ ಶಕ್ತಿ ಇರುವುದಿಲ್ಲ'' ಎಂಬ ನ್ಯಾಯದಿಂದ ಅಭಿಧೆ, ಲಕ್ಷಣೆ, ತಾತ್ಪರ್ಯ ಎಂಬ ಮೂರು ವೃತ್ತಿಗಳು ಒಂದು ಶಬ್ದದಿಂದತಿಳಿಸಬೇಕಾದ ಅರ್ಥವನ್ನು ತಿಳಿಸಿಯಾದ ಮೇಲೆ ಬೇರೊಂದು ಅರ್ಥವನ್ನು ಆ ಶಬ್ದ ದಿಂದ ತಿಳಿಸಿ ಕೊಡುವ ವೃತ್ತಿಯೇ ವ್ಯಂಜನೆ ಎನಿಸುವುದು. ಇದು ಶಬ್ದದಲ್ಲೂ ಅರ್ಥದಲ್ಲೂ ಪ್ರಕೃತಿಯಲ್ಲೂ ಪ್ರತ್ಯಯದಲ್ಲೂ ನೆಲಸಿರುವುದು. ಇದನ್ನು ವ್ಯಂಜನ, ಧ್ವನನ, ಗಮನ, ಪ್ರತ್ಯಾಯನ ಈ ಬಗೆಯ ಶಬ್ದಗಳಿಂದ ಕರೆಯಲಾಗಿದೆ.

ಈ ವ್ಯಂಜನೆಯು ಅಭಿಧೆಯನ್ನೂ ಲಕ್ಷಣೆಯನ್ನೂ ಅವಲಂಬಿಸಿರುವುದರಿಂದ ಎರಡು ಬಗೆಯಾಗುತ್ತದೆ. ಅವುಗಳಲ್ಲಿ ಅಭಿಧಾಮೂಲವ್ಯಂಜನೆಯು ಹೀಗಿರುತ್ತದೆ.. ಅನೇಕ ಅರ್ಥಗಳನ್ನು ತಿಳಿಸಬಹುದಾದ ಒಂದು ಶಬ್ದದ ವೃತ್ತಿ(ಅಭಿಧೆ)ಯನ್ನು ಒಂದು ಅರ್ಥದಲ್ಲಿ ವ್ಯವಸ್ಥೆಗೊಳಿಸಲು ಸಂಯೋಗ ಮೊದಲಾದ ಸಾಧನಗಳಿವೆ, ಅವುಗಳ ಮೂಲಕ ಅಭಿಧಾವೃತ್ತಿಯಿಂದ ಒಂದು ಶಬ್ದದ ಅರ್ಥವು ಇಂತಹದೆಂದು ನಿಷ್ಕರ್ಷವಾದ ಮೇಲೆ ಅದೇ ಶಬ್ದದಿಂದ ಬೇರೊಂದು ಅರ್ಥವು ತೋರುತ್ತದೆ. ಇದಕ್ಕೆ ಸಾಧನವೆನಿಸಿದ ವೃತ್ತಿ

ಯೇ ವ್ಯಂಜನೆ ಎನಿಸಿದೆ. ಇದೇ ಅಭಿಧೆಯನ್ನು ಆಶ್ರಯಿಸಿದ ವ್ಯಂಜನೆ ಎನಿಸುವುದು. ಇಲ್ಲಿ ಆದ್ಯಪದದಿಂದ ವಿಪ್ರಯೋಗ ಮೊದಲಾದ ಇತರ ಸಾಧನಗಳನ್ನು ಗ್ರಹಿಸಬೇಕು. ಅವುಗಳನ್ನು ಇಲ್ಲಿ ತಿಳಿಸಲಾಗಿದೆ.

ಪದಾರ್ಥಗಳಿಗೆ ಏರ್ಪಡಿಸಿರುವ ಸಂಯೋಗದಿಂದ ಒಂದು ಪದಕ್ಕೆ ಇದೇ ಅರ್ಥ ವೆಂಬ ನಿರ್ಣಯವಾಗುತ್ತದೆ. ಹಾಗೆ ಸಂಯುಕ್ತವಾದ ಪದಾರ್ಥಗಳಿಗೆ ಕೆಲವು ವೇಳೆ ವಿಯೋಗ ಉಂಟಾದರೆ ಅದರಿಂದಲೂ ಪದದ ಅರ್ಥವನ್ನು ನಿರ್ಣಯಿಸಬಹುದು. ಒಂದೆಡೆಯಲ್ಲಿ ಪದಾರ್ಥಗಳು ಸೇರಿಕೊಂಡಿರುವುದರಿಂದಲೂ ಒಂದು ಪದದ ಅರ್ಥ ವನ್ನು ನಿರ್ಣಯಿಸಬಹುದು. ವಿರೋಧವಿರುವುದಾಗಿ ತಿಳಿದು ಬಂದರೂಸಹ ಅರ್ಥ ವನ್ನು ನಿರ್ಣಯಿಸಬಹುದು. ಒಂದು ಪದದಿಂದ ಎಷ್ಟು ಅಂಶವನ್ನು ತಿಳಿಸಬೇಕೆಂಬ ಉದ್ದೇಶವಿದೆಯೋ ಅದರಿಂದಲೂ ಅರ್ಥವನ್ನು ನಿರ್ಣಯಿಸಬಹುದು. ಊಹೆಗೊಳ ಪಟ್ಟ ಗುರುತು (ಲಿಂಗ), ಒಂದು ಪದಕ್ಕೆ ಇದೇ ಅರ್ಥವೆಂಬಲ್ಲಿ ಸಂದೇಹವಿರುವಾಗ ಅಸಂದಿಗ್ಧವಾದ ಬೇರೊಂದು ಪದದ ಸಾನ್ನಿಧ್ಯ, ಈ ಪದಕ್ಕೆ ಈ ಅರ್ಥದಲ್ಲಿಯೇ ಶಕ್ತಿ ಇದೆ ಎಂಬ ಅಂಶ, ಒಂದು ಪದಕ್ಕೆ ಆಯಾ ಪಧಾರ್ಥದಲ್ಲಿರುವ ಯೋಗ್ಯತೆ, ಪದಾರ್ಥ ಗಳಿಗೆ ಆಧಾರವೆನಿಸಿದ ದೇಶ, ಕಾಲ, ಸ್ತ್ರೀಪುಂವ್ಯಕ್ತಿಗಳು, ಉದಾತ್ತ ಮೊದಲಾದ ಸ್ವರಗಳು ಇವು ಒಂದು ಶಬ್ದದ ಅರ್ಥ ಎಂತಹದೆಂಬುದನ್ನು ನಿರ್ಣಯಿಸಲು ಅನುಕೂಲ ವಾದ ಸಾಧನಗಳೆನಿಸಿವೆ. ಹರಿಶಬ್ದಕ್ಕೆ ಅನೇಕ ಅರ್ಥಗಳಿರುವಾಗ ವಿಷ್ಣುಎಂಬ ಅರ್ಥದಲ್ಲಿ ನಿಯಮನಮಾಡಲು ಶಂಖಚಕ್ರಗಳ ಸಂಯೋಗವು ಸಾಧಕವಾಗಿದೆ. ವಿಷ್ಣುವಿನಲ್ಲಿ ಯಾವಾಗಲೂ ಶಂಕಚಕ್ರಗಳಿದ್ದು ಕೆಲವು ವೇಳೆ ಅವಿಲ್ಲದಿದ್ದರೆ 'ಅಶಂಖ ಚಕ್ರೋ ಹರಿಃ' ಎಂಬಲ್ಲಿ ಶಂಖಚಕ್ರರಾಹಿತ್ಯವು (ವಿಪ್ರಯೋಗ) ಹರಿ ಎಂಬ ಪದಕ್ಕೆ ವಿಷ್ಣು ಎಂಬ ಅರ್ಥವನ್ನು ನಿರ್ಣಯಿಸುತ್ತದೆ. 'ಭೀಮಾರ್ಜುನೌ' ಎಂಬಲ್ಲಿ ಅರ್ಜುನಶಬ್ದವು ಭೀಮಶಬ್ದದ ಸಾಹಚರ್ಯದಿಂದ ಕಾರ್ತವೀರ್ಯಾರ್ಜುನನಿಗೆ ಅನ್ವಯಿಸದೆ, ಭೀಮನ ಸೋದರನಾದ ಅರ್ಜುನನಿಗೇ ಅನ್ವಯಿಸುತ್ತದೆ. 'ಕರ್ಣಾ ರ್ಜುನೌ' ಎಂಬಲ್ಲಿ ಕರ್ಣನಿಗೂ ಅರ್ಜುನನಿಗೂ ವಿರೋಧವಿರುವ ಪ್ರಯುಕ್ತ ಕರ್ಣ ಪದವು ಸೂತಪುತ್ರನಿಗೇ ಅನ್ವಯಿಸುತ್ತದೆ. 'ಸ್ಥಾಣುಂ ವಂದೇ' ಎಂಬಲ್ಲಿ ಸ್ಥಾಣು ಪದವು ಮೋಟುಮರಕ್ಕೂ ಈಶ್ವರನಿಗೂ ಅನ್ವಯಿಸುವಾಗ 'ವಂದೇ' ಎಂಬ ಪದದ ಅರ್ಥದಿಂದ ಅದು ಈಶ್ವರನನ್ನೇ ಬೋಧಿಸುತ್ತದೆ. 'ದೇವನು ಎಲ್ಲವನ್ನೂ ಬಲ್ಲನು' ಎಂದು ರಾಜನಿಗೆ ಹೇಳುವ ಪ್ರಕರಣದಲ್ಲಿ ದೇವನೆಂದರೆ ಭವಾನ್, ನೀನು ಎಂದು ಅರ್ಥ ವಾಗುತ್ತದೆ. 'ಕುಪಿತೋ ಮಕರಧ್ವಜಃ' ಎಂಬಲ್ಲಿ ಮಕರಧ್ವಜಃ ಎಂದರೆ ಸಮುದ್ರ, ಮನ್ಮಥ ಈ ಎರಡು ಅರ್ಥಗಳು ತೋರುವಾಗ ಕುಪಿತಃ ಎಂಬಲ್ಲಿ ಹೇಳಿದ ಕೋಪವೆಂಬ ಗುರುತು ಸಮುದ್ರದಲ್ಲಿ ಇಲ್ಲದ್ದರಿಂದ ಮನ್ಮಥನೆಂಬ ಅರ್ಥವನ್ನೇ ಮಕರಧ್ವಜಃ ಎಂಬುದು ತಿಳಿಸುತ್ತದೆ. 'ದೇವಃ ಪುರಾರಿಃ' ಎಂಬಲ್ಲಿ ಪುರಾರಿ ಎಂಬುದು ಒಂದು ಪುರದ ಶತ್ರುವಿಗೂ, ತ್ರಿಪುರಾಸುರನ ಶತ್ರುವಿಗೂ ಅನ್ವಯಿಸುವಾಗ ದೇವ ಎಂಬ

ಶಬ್ದದ ಸಾನ್ನಿಧ್ಯದಿಂದ ತ್ರಿಪುರಸಂಹಾರಕನಾದ ಶಿವನೆಂಬ ಅರ್ಥವೇ ನಿರ್ಣೀತವಾಗುವುದು. 'ಮಧುನಾ ಮತ್ತಃ ಕೋಕಿಲಃ' ಎಂಬಲ್ಲಿ ಮಧು ಪದವು ಜೇನುತುಪ್ಪ ಮತ್ತು ವಸಂತಮಾಸ ಎರಡನ್ನೂ ಬೋಧಿಸಬಲ್ಲದಾದರೂ ಕೋಗಿಲೆಯು ಮದಿಸುವಂತಹ ಸನ್ನಿವೇಶವನ್ನು ಕಲ್ಪಿಸುವ ಸಾಮರ್ಥ್ಯವು ವಸಂತಕಾಲಕ್ಕೆ ಇರುವುದರಿಂದ ಆ ಮೂಲಕವಾಗಿ ಮಧುವೆಂದರೆ ವಸಂತಕಾಲವೆಂದೇ ನಿರ್ಣಯಮಾಡಬೇಕು. 'ಪಾತು ವೋ ದಯಿತಾಮುಖಂ' ಎಂಬಲ್ಲಿ ಮುಖಪದವು ಯೋಗ್ಯತೆಯನ್ನು ಅವಲಂಬಿಸಿ ಹಣೆಯನ್ನು ತಿಳಿಸದೆ ಆಭಿಮುಖ್ಯವನ್ನು ತಿಳಿಸುವುದು. 'ವಿಭಾತಿ ಗಗನೇ ಚಂದ್ರಃ' ಎಂಬಲ್ಲಿ ಆಕಾಶವೆಂಬ ಸ್ಥಾನದ ಆಧಾರದ ಮೇಲೆ ಚಂದ್ರನೆಂಬ ಅರ್ಥವು ನಿರ್ಣೀತವಾಗುತ್ತದೆ. 'ನಿಶಿ ಚಿತ್ರಭಾನುಃ' ಎಂಬಲ್ಲಿ ಚಿತ್ರಭಾನು ಎಂದರೆ ಸೂರ್ಯ, ಅಗ್ನಿ ಎಂಬ ಎರಡು ಅರ್ಥಗಳು ತೋರುವಾಗ ರಾತ್ರಿ ವೇಳೆಗೆ ಅನುಗುಣವಾಗಿ ಅಗ್ನಿ ಎಂಬ ಅರ್ಥವೇ ನಿರ್ಣೀತವಾಗುವುದು. 'ಭಾತಿ ರಥಾಂಗಮ್' ಎಂಬಲ್ಲಿ ರಥಾಂಗ ಎಂಬ ಪದವು ರಥದ ಅವಯವವೆನಿಸಿದ ಚಕ್ರಕ್ಕೂ ಚಕ್ರವಾಕಪಕ್ಷಿಗೂ ಅನ್ವಯಿಸುವಾಗ ರಥಾಂಗಂ ಎಂದು ನಪುಂಸಕಲಿಂಗವನ್ನು ಪ್ರಯೋಗಿಸಿರುವುದರಿಂದ ಈ ಪದವು ಚಕ್ರವಾಕಪಕ್ಷಿಯನ್ನು ಬೋಧಿಸದೆ ಚಕ್ರವನ್ನೇ ಬೋಧಿಸುತ್ತದೆ. ಚಕ್ರವಾಕಪಕ್ಷಿಗೆ ಅನ್ವಯಿಸಬೇಕಾದರೆ, ಆ ಪದವನ್ನು ಪುಲ್ಲಿಂಗದಲ್ಲಿ ಉಪಯೋಗಿಸಬೇಕಾಗಿತ್ತು. ಸ್ವರವಾದರೋ ವೇದದಲ್ಲಿ ಮಾತ್ರವೇ ಉದಾತ್ತ ಮೊದಲಾದ ರೂಪದಿಂದ ನೆಲಸಿ ಅರ್ಥವಿಶೇಷವನ್ನು ನಿರ್ಣಯಿಸಲು ಸಾಧನವೆನಿಸಿದೆ. ಕಾವ್ಯದಲ್ಲಿ ಅದರ ಉಪಯೋಗವಿಲ್ಲದ್ದರಿಂದ ಅದರ ಬಗ್ಗೆ ಇಲ್ಲಿ ಉದಾಹರಣವನ್ನು ಕೊಟ್ಟಿಲ್ಲ.

ಅತ್ರ ಕೇಽಪ್ಯಸಹಮಾನಾ ಆಹುಃ— "ಸ್ವರೋಽಪಿ ಕಾಕ್ವಾದಿರೂಪಃ ಕಾವ್ಯೇ ವಿಶೇಷಪ್ರತೀತಿಕೃದೇವ. ಉದಾತ್ತಾದಿರೂಪೋಽಪಿ ಮುನೇಃ ಪಾಠೋಕ್ತದಿಶಾ ಶೃಂಗಾರಾದಿರಸವಿಶೇಷಪ್ರತೀತಿಕೃದೇವೇತ್ಯೇದದ್ವಿಷಯೇ ಉದಾಹರಣಮುಚಿತಮೇವ" ಇತಿ ತನ್ನ. ತಥಾಹಿ— ಸ್ವರಾಃ ಕಾಕ್ವಾದಯಃ ಉದಾತ್ತಾದಯೋ ವಾ ವ್ಯಂಗ್ಯರೂಪಮೇವ ವಿಶೇಷಂ ಪ್ರತ್ಯಾಯಯಂತಿ; ನ ಖಲು ಪ್ರಕೃತೋಕ್ತಮನೇಕಾರ್ಥಶಬ್ದಸ್ಯೈಕಾರ್ಥನಿಯಂತ್ರಣರೂಪಂ ವಿಶೇಷಮ್. ಕಿಂಚ ಯದಿ ಯತ್ರ ಕ್ವಚಿದದೇಕಾರ್ಥಕಶಬ್ದಾನಾಂ ಪ್ರಕರಣಾದಿನಿಯಮಾಭಾವಾತ್ ಅನಿಯಂತ್ರಿತಯೋರಪ್ಯರ್ಥಯೋಃ ಅನುರೂಪಸ್ವರವಶೇನೈಕತ್ರ ನಿಯಮನಂ ವಾಚ್ಯಂ ತದಾ ತಥಾವಿಧಸ್ಥಳೇ ಶ್ಲೇಷಾನಂಗೀಕಾರಪ್ರಸಂಗಃ. ನ ಚ ತಥಾ. ಅತ ಏವಾಹುಃ ಶ್ಲೇಷನಿರೂಪಣಪ್ರಸ್ತಾವೇ 'ಕಾವ್ಯಮಾರ್ಗೇ ಸ್ವರೋ ನ ಗಣ್ಯತೇ ಇತಿ ಚ ನಯಃ' ಇತ್ಯಲಮುಪಜೀವ್ಯಾನಾಂ ಮಾನ್ಯಾನಾಂ ವ್ಯಾಖ್ಯಾನೇಷು ಕಟಾಕ್ಷನಿಕ್ಷೇಪೇಣ. ಆದಿಶಬ್ದಾತ್ 'ಏತಾವನ್ಮಾತ್ರಸ್ತನೀ' ಇತ್ಯಾದಿ ಹಸ್ತಾದಿಚೇಷ್ಟಾಭಿಃ ಸ್ತನಾದೀನಾಂ ಕಮಲಕೋರಕಾದ್ಯಾಕಾರತ್ವಮ್.

ಏವಮೇಕಸ್ಮಿನ್ನರ್ಥೇಽಭಿಧಯಾ ನಿಯಂತ್ರಿತೇ ಯಾ ಶಬ್ದಸ್ಯ ಅನ್ಯಾರ್ಥ

ಬುದ್ಧಿಹೇತುಃ ಶಕ್ತಿಃ ಸಾ ಅಭಿಧಾಮೂಲಾ ವ್ಯಂಜನಾ.

ಯಥಾ ಮಮ ತಾತಪಾದಾನಾಂ ಮಹಾಪಾತ್ರಚತುರ್ದಶಭಾಷಾವಿಲಾಸಿನೀ ಭುಜಂಗ ಮಹಾಕವೀಶ್ವರಶ್ರೀಚಂದ್ರಶೇಖರಸಾಂಧಿವಿಗ್ರಹಿಕಾಣಾಮ್.

ದುರ್ಗಾಲಂಘಿತವಿಗ್ರಹೋ ಮನಸಿಜಂ ಸಮ್ಮೀಲಯಂಸ್ತೇಜಸಾ
ಪ್ರೋದ್ಯದ್ರಾಜಕಲೋ ಗೃಹೀತಗರಿಮಾ ವಿಷ್ವಗ್ವೃತೋ ಭೋಗಿಭಿಃ ।
ನಕ್ಷತ್ರೇಶಕೃತೇಕ್ಷಣೋ ಗಿರಿಗುರೌ ಗಾಢಾಂ ರುಚಿಂ ಧಾರಯನ್ ।
ಗಾಮಾಕ್ರಮ್ಯ ವಿಭೂತಿಭೂಷಿತತನೂ ರಾಜತ್ಯುಮಾವಲ್ಲಭಃ ॥

ಅತ್ರ ಪ್ರಕರಣೇನಾಭಿಧೇಯೇ ಉಮಾವಲ್ಲಭಶಬ್ದಸ್ಯ ಉಮಾನಾಮಮಹಾದೇವಿವಲ್ಲಭಭಾನುದೇವನೃಪತಿರೂಪೇಽರ್ಥೇ ನಿಯಂತ್ರಿತೇ ವ್ಯಂಜನಯೈವ ಗೌರೀವಲ್ಲಭರೂಪೋಽರ್ಥೋ ಬೋಧ್ಯತೇ. ಏವಮನ್ಯತ್. ಲಕ್ಷಣಾಮೂಲಾಮಾಹ—

ಲಕ್ಷಣೋಪಾಸ್ಯತೇ ಯಸ್ಯ ಕೃತೇ ತತ್ತು ಪ್ರಯೋಜನಮ್।
ಯಯಾ ಪ್ರತ್ಯಾಯ್ಯತೇ ಸಾ ಸ್ಯಾತ್ ವ್ಯಂಜನಾ ಲಕ್ಷಣಾಶ್ರಯಾ ॥೧೫॥

'ಗಂಗಾಯಾಂ ಘೋಷಃ' ಇತ್ಯಾದೌ ಜಲಮಯಾದ್ಯರ್ಥಬೋಧನಾದಭಿಧಾಯಾಂ, ತಟಾದ್ಯರ್ಥಬೋಧನಾಚ್ಚ ಲಕ್ಷಣಾಯಾಂ ಚ ವಿರತಾಯಾಂ ಯಥಾ ಶೀತತ್ವಪಾವನತ್ವಾದ್ಯತಿಶಯಾದಿರ್ಬೋಧ್ಯತೇ ಸಾ ಲಕ್ಷಣಾಮೂಲಾ ವ್ಯಂಜನಾ.

ಇಲ್ಲಿ ಕೆಲವರು ಈ ಅಂಶವನ್ನು ಸಹಿಸುವುದಿಲ್ಲ. ಅವರ ಅಭಿಪ್ರಾಯ ಹೀಗಿದೆ. "ಸ್ವರವೂ ಸಹ ಕಾಕು ಮೊದಲಾದ ರೂಪದಿಂದ ಕಾವ್ಯದಲ್ಲಿ ನೆಲಸಿ ವಿಶೇಷವಾದ ಅರ್ಥವನ್ನು ನಿರ್ಣಯಿಸಲು ಸಾಧಕವಾಗಿದೆ. (ಇಲ್ಲಿ ಕಾಕು ಎಂದರೆ ಧ್ವನಿಯ ವಿಕಾರ; ವಿಕೃತವಾದ ಧ್ವನಿ ಎಂದರ್ಥ.) ಉದಾತ್ತ ಮೊದಲಾದ ಸ್ವರಗಳಂತೂ ಭರತ ಮುನಿಯು ಹೇಳಿರುವಂತೆ ಒಂದೊಂದು ರಸದ ಅಭಿವ್ಯಕ್ತಿಗೆ ಸಾಧಕವೆನಿಸಿದೆ. ಅವು ಶೃಂಗಾರ ಮೊದಲಾದ ರಸಗಳ ಪರಿಚಯವನ್ನು ಮಾಡಿಸುವುದರಿಂದ ಅವುಗಳ ಬಗ್ಗೆ ಉದಾಹರಣಗಳನ್ನು ಕೊಡುವುದು ಯುಕ್ತವೇ ಆಗಿದೆ" ಎಂದು ಅವರು ಹೇಳುತ್ತಾರೆ. ಇದು ಸಮಂಜಸವಾಗಿ ಕಾಣುವುದಿಲ್ಲ. ಯಾಕೆಂದರೆ ಸ್ವರಗಳು ಕಾಕು ಮೊದಲಾದವೇ ಆಗಲಿ ಉದಾತ್ತ ಮೊದಲಾದವೇ ಆಗಲಿ ವ್ಯಂಗ್ಯವೆನಿಸಿದ ವಿಶೇಷಾರ್ಥವನ್ನು ಸೂಚಿಸ ಬಲ್ಲವೇ ಹೊರತು ಅನೇಕಾರ್ಥಕಶಬ್ದದಿಂದ ಒಂದು ಅರ್ಥವನ್ನು ನಿರ್ಣಯಿಸಲು ಸಾಧಕವಾಗಲಾರವು. ಕೆಲವು ಕಡೆಗಳಲ್ಲಿ ಅನೇಕಾರ್ಥಕಪದಗಳಿಗೆ ಪ್ರಕರಣ ಮೊದಲಾದ ನಿಯಮವಿಲ್ಲದ ಪ್ರಯುಕ್ತ ನಿಯಮಕ್ಕೆ ಒಳಪಡದ ಎರಡು ಅರ್ಥಗಳಲ್ಲಿ ಅನುಗುಣವಾದ ಸ್ವರದ ಮೂಲಕ ಒಂದು ಅರ್ಥವನ್ನು ನಿಯಮನಮಾಡುವುದಾದರೆ, ಅಂತಹ ಕಡೆಗಳಲ್ಲಿ ಶ್ಲೇಷವನ್ನು ಅಂಗೀಕರಿಸದೆ ಬಿಡಬೇಕಾದೀತು. ಆದರೆ ಅಲ್ಲಿ ಶ್ಲೇಷವನ್ನು ನಾವು ಒಪ್ಪಲೇಬೇಕು. ಶ್ಲೇಷಾಲಂಕಾರವನ್ನು ನಿರೂಪಿಸುವಾಗ "ಕಾವ್ಯದಲ್ಲಿ ಅನೇಕಾರ್ಥಗಳನ್ನು ತಿಳಿಸುವ ಪದಗಳಿದ್ದು ಅಲ್ಲಿ ಅರ್ಥನಿರ್ಣಯಕ್ಕೆ ಸಂದೇಹ

ಬಂದಾಗ ಸ್ವರದ ಬಲದಿಂದ ಅರ್ಥವನ್ನು ನಿರ್ಣಯಿಸಲಿಕ್ಕಾಗುವುದಿಲ್ಲ" ವೆಂದು ಸ್ಪಷ್ಟವಾಗಿ ತಿಳಿಸಲಾಗಿದೆ. ಹಾಗೆ ಆಶ್ರಯಾರ್ಹರೂ ಸನ್ಮಾನ್ಯರೂ ಆದ ಕವಿಗಳ ವ್ಯಾಖ್ಯಾನಗಳಲ್ಲಿ ದೋಷಗಳನ್ನು ಹುಡುಕುತ್ತ ಹೋಗುವುದರಿಂದ ಆಗುವ ಫಲವೂ ಅವ್ಯುರಲ್ಲಿಯೇ ಇದೆ. ಇಲ್ಲಿ ಆದಿಶಬ್ದದಿಂದ 'ಏತಾವನ್ಮಾತ್ರಸ್ತನೀ' (ಇಷ್ಟೇ ಪ್ರಮಾಣದ ಸ್ತನಗಳುಳ್ಳವಳು) ಎಂದು ಕೈ ಮೊದಲಾದ ಅವಯವಗಳ ಚಲನದಿಂದ ಸ್ತನ ಮೊದಲಾದುವು ಮೊಗ್ಗಿನ ಆಕಾರದಲ್ಲಿದ್ದವೆಂಬುದು ತಿಳಿದುಬರುತ್ತದೆ.

ಹೀಗೆ ಒಂದು ಅರ್ಥವನ್ನು ಅಭಿಧಾಶಕ್ತಿಯು ನಿಯಮನಮಾಡಿದ ಮೇಲೆ ಅದೇ ಶಬ್ದದಿಂದ ಬೇರೊಂದು ಅರ್ಥವನ್ನು ತಿಳಿಯಪಡಿಸಲು ಸಾಧನವೆನಿಸಿದ ಶಕ್ತಿಯೇ ಅಭಿಧಾ ಮೂಲವ್ಯಂಜನೆಎನಿಸಿದೆ. ಚತುರ್ದಶಭಾಷಾವಿಲಾಸಿನೀಭುಜಂಗ (ಹದಿನಾಲ್ಕು ಭಾಷೆಗಳಲ್ಲಿ ಲಲಿತವಾಗಿ ಪಳಗಿದವರು), ಮಹಾಕವೀಶ್ವರ ಎಂಬ ಬಿರುದುಗಳನ್ನು ಪಡೆದು, ಸಂಧಿವಿಗ್ರಹಾಧಿಕಾರಿಯೂ, ಪ್ರಧಾನಾಮಾತ್ಯರೂ ಎನಿಸಿದ ಚಂದ್ರಶೇಖರನೆಂಬ ನನ್ನ ಪೂಜ್ಯ ತಾತಂದಿರು ಬರೆದಿರುವ ಗ್ರಂಥದಿಂದ ವ್ಯಂಜನೆಯನ್ನು ಉದಾಹರಿಸಲಾಗಿದೆ. "ಶತ್ರುಗಳ ದುರ್ಗವನ್ನು ಭೇದಿಸಿಕೊಂಡು ಯುದ್ಧವನ್ನು ಮಾಡುವ ಸಾಮರ್ಥ್ಯವಿದ್ದು, ದೇಹಕಾಂತಿಯಿಂದ ಮನ್ಮಥನನ್ನು ಭ್ರಮೆಗೊಳಿಸುತ್ತ, ಭಯದಿಂದ ಓಡಿಹೋಗುವ ರಾಜರಿಗೆ ಅಭಯವನ್ನು ಕೊಡುತ್ತ, ಸಮಾಜದಲ್ಲಿ ಗೌರವವನ್ನು ಗಳಿಸಿ, ಯಾವಾಗಲೂ ಭೋಗಿಗಳೊಡಗೂಡಿದ್ದು ಕ್ಷತ್ರಿಯರ ಮೇಲೆ ಆಗಹ್ರದೃಷ್ಟಿಯನ್ನಿಡದೆ ಕೈಲಾಸನಾಥನಲ್ಲಿ ಹೆಚ್ಚು ಭಕ್ತಿಯನ್ನಿಟ್ಟು, ಭೂಮಿ ಎಲ್ಲವನ್ನೂ ಆಕ್ರಮಿಸಿ ಐಶ್ವರ್ಯದಿಂದ ಶೋಭಿಸುತ್ತ ಉಮೆ ಎಂಬ ರಾಣಿಯ ಪ್ರಿಯನೆನಿಸಿದ ಭಾನುದೇವನು ಶೋಭಿಸುತ್ತಾನೆ" "ಶರೀರದಲ್ಲಿ ಪಾರ್ವತಿಯೊಡಗೂಡಿದ್ದು ಮನ್ಮಥನನ್ನು ದಿವ್ಯತೇಜಸ್ಸಿನಿಂದ ವಿನಾಶಗೊಳಿಸಿದ್ದು, ಚಂದ್ರನಿಂದ ಅಲಂಕೃತನಾಗಿ, ವಿಶ್ವಕ್ಕೆ ಗುರುವೆನಿಸಿದ್ದು, ಎಲ್ಲೆಡೆಯಲ್ಲೂ ಸರ್ಪಗಳಿಂದ ಅವೃತನಾಗಿ ಸೂರ್ಯ, ಚಂದ್ರ, ಅಗ್ನಿಗಳೆಂಬ ನೇತ್ರಗಳಿಂದ ಶೋಭಿಸುತ್ತ, ಪರ್ವತರಾಜನ ಪ್ರೀತಿಗೆ ಪಾತ್ರನೆನಿಸಿ ವೃಷಭಾರೂಢನಾಗಿ ಮೂರು ಲೋಕಗಳ ಮೇಲೆ ಅಧಿಕಾರವನ್ನು ಪಡೆದಿದ್ದರೂ ಮೈಗೆಲ್ಲ ಭಸ್ಮವನ್ನು ಹಚ್ಚಿಕೊಂಡಿರುವ ಉಮಾದೇವಿಯ ಪ್ರಿಯನೆನಿಸಿದ ಪರಮೇಶ್ವರನು ಕಂಗೊಳಿಸುತ್ತಾನೆ" ಇದು ರಾಜವರ್ಣನದ ಪ್ರಕರಣದಲ್ಲಿ ಬಂದಿರುವ ಪದ್ಯ. ಇಲ್ಲಿ ಪ್ರಕರಣದಿಂದ ಉಮೆ ಎಂಬ ರಾಣಿಯ ಪತಿ ಎನಿಸಿದ ಭಾನುದೇವನೆಂಬ ರಾಜನಿಗೆ ಅನ್ವಯಿಸುವುದಾಗಿ ವ್ಯವಸ್ಥೆಯಾದ ಮೇಲೆ ಗೌರೀವಲ್ಲಭ ಎಂಬ ಬೇರೆ ಅರ್ಥವು ವ್ಯಂಜನೆಯಿಂದಲೇ ತೋರಬೇಕು. ಹೀಗೆಯೇ ಬೇರೆ ಉದಾಹರಣಗಳನ್ನು ಊಹಿಸಿಕೊಳ್ಳುವುದು.

ಲಕ್ಷಣಾಮೂಲವ್ಯಂಜನೆಯನ್ನು ಈಗ ತಿಳಿಸುತ್ತಾನೆ—

ಯಾವುದಕ್ಕಾಗಿ ಲಕ್ಷಣೆಯನ್ನು ಆಶ್ರಯಿಸಬೇಕೋ ಅದೇ ಅದರ ಪ್ರಯೋಜನವೆನಿಸಿದೆ. ಈ ಪ್ರಯೋಜನವು ಯಾವುದರಿಂದ ತಿಳಿದುಬರುವುದೋ ಅಂತಹ

ವೃತ್ತಿಯೇ ಲಕ್ಷಣಾಮೂಲವಾದ ವ್ಯಂಜನೆ ಎನಿಸುತ್ತತೆ. ಇದು ಲಕ್ಷಣೆಯನ್ನು ಅವಲಂಬಿಸಿ ಅದರ ಮೂಲಕ ತನ್ನ ಕಾರ್ಯವನ್ನು ಸಾಧಿಸುತ್ತದೆ. 'ಗಂಗೆಯಲ್ಲಿ ಹಳ್ಳಿ ಇದೆ' ಎಂಬಲ್ಲಿ ಗಂಗಾಪದದಿಂದ ಪ್ರವಾಹವೆಂಬ ಅರ್ಥವನ್ನು ಬೋಧಿಸಿದ ಮೇಲೆ ಅಭಿಧಾವೃತ್ತಿಯೂ, ತೀರ ಎಂಬ ಅರ್ಥವನ್ನು ತಿಳಿಸಿದ ಮೇಲೆ ಲಕ್ಷಣಾವೃತ್ತಿಯೂ ಕೊನೆಗಾಣಲು ಯಾವ ವೃತ್ತಿಯು ತೀರದಲ್ಲಿ ಹೆಚ್ಚು ಶೈತ್ಯ ಪಾವನತ್ವ ಮೊದಲಾದ ಧರ್ಮಗಳು ನೆಲಸಿದ್ದವೆಂಬುವನ್ನು ಗಂಗಾಪದದಿಂದ ಬೋಧಿಸಬಲ್ಲದೋ ಅದೇ ಲಕ್ಷಣಾಮೂಲ ವ್ಯಂಜನೆ ಎನಿಸಿದೆ.

ಏವಂ ಶಾಬ್ದೀಂ ವ್ಯಂಜನಾಮುಕ್ತ್ವಾ ಆರ್ಥೀಮಾಹ—

ವಕ್ತೃಬೋದ್ಧವ್ಯವಾಕ್ಯಾನಾಂ ಅನ್ಯಸನ್ನಿಧಿವಾಚ್ಯಯೋಃ ।
ಪ್ರಸ್ತಾವದೇಶಕಾಲಾನಾಂ ಕಾಕೋಶ್ಚೇಷ್ಟಾದಿಕಸ್ಯ ಚ ॥೧೬॥

ವೈಶಿಷ್ಟ್ಯಾದನ್ಯಮರ್ಥಂ ಯಾ ಬೋಧಯೇತ್ಸಾಽರ್ಥಸಂಭವಾ ವ್ಯಂಜನೇತಿ ಸಂಬಧ್ಯತೇ.

ತತ್ರ ವಕ್ತೃವಾಕ್ಯಪ್ರಸ್ತಾವದೇಶಕಾಲವೈಶಿಷ್ಟ್ಯೇ ಯಥಾ ಮಮ—

ಕಾಲೊ ಮಧುಃ ಕುಪಿತ ಏವ ಚ ಪುಷ್ಪಧನ್ವಾ
ಧೀರಾ ವಹಂತಿ ರತಿ ಖೇದಕರಾಸ್ಸಮೀರಾಃ ।
ಕೇಲೀವನೀಯಮಪಿ ವಂಜುಲಕುಂಜಮಂಜುಃ
ದೂರೇ ಪತಿಃ ಕಥಯ ಕಿಂ ಕರಣೀಯಮದ್ಯ ॥

ಅತ್ರೈನಂ ದೇಶಂ ಪ್ರತಿ ಶೀಘ್ರಂ ಪ್ರಚ್ಛನ್ನಕಾಮುಕಸ್ತ್ವಯಾ ಪ್ರೇಷ್ಯತಾಮಿತಿ ಸಖೀಂ ಪ್ರತಿ ಕಯಾಚಿತ್ ದ್ಯೋತ್ಯತೇ.

ಬೋದ್ಧವ್ಯವೈಶಿಷ್ಟ್ಯೇ ಯಥಾ—

ನಿಃಶೇಷಚ್ಯುತಚಂದನಂ ಸ್ತನತಟಂ ನಿರ್ಮೃಷ್ಟರಾಗೋಽಧರಃ ।
ನೇತ್ರೇ ದೂರಮನಂಜನೇ ಪುಲಕಿತಾ ತನ್ವೀ ತವೇಯಂ ತನುಃ ॥
ಮಿಥ್ಯಾವಾದಿನಿ ದೂತಿ ಬಾಂಧವಜನಸ್ಯಾಜ್ಞಾತಪೀಡಾಗಮೇ ।
ವಾಪೀಂ ಸ್ನಾತುಮಿತೋ ಗತಾಸಿ ನ ಪುನಸ್ತಸ್ಯಾಧಮಸ್ಯಾಂತಿಕಮ್ ॥

ಅತ್ರ ತದಂತಿಕಮೇವ ರಂತುಂ ಗತಾಸೀತಿ ವಿಪರೀತಲಕ್ಷಣಯಾ ಲಕ್ಷ್ಯಮ್. ತಸ್ಯ ಚ ತುತುಮಿತಿ ವ್ಯಂಗ್ಯಂ ಪ್ರತಿಪಾದ್ಯಂ ದೂತೀವೈಶಿಷ್ಟ್ಯಾತ್ ದ್ಯೋತ್ಯತೇ.

ಅನ್ಯಸನ್ನಿಧಿವೈಶಿಷ್ಟ್ಯೇ ಯಥಾ—

ಪಶ್ಯ ನಿಶ್ಚಲನಿಷ್ಪಂದಾ ಬಿಸಿನೀಪತ್ರೇ ವಿರಾಜತೇ ಬಲಾಕಾ ।
ನಿರ್ಮಲಮರಕತಭಾಜನಪರಿಸ್ಥಿತಾ ಶಂಖಶುಕ್ತಿರಿವ ॥

ಅತ್ರ ಬಲಾಕಾಯಾಃ ನಿಸ್ಪಂದತ್ವೇನ ವಿಶ್ವಸ್ತತ್ವಮ್, ತೇನಾಸ್ಯ ದೇಶಸ್ಯ ವಿಜನತ್ವಮ್. ಅತಃ ಸಂಕೇತಸ್ಥಾನಮೇತದಿತಿ ಕಯಾಪಿ ಸನ್ನಿಹಿತಂ ಪ್ರಚ್ಛನ್ನ

ಕಾಮುಕಂ ಪ್ರತ್ಯುಚ್ಯತೇ. ಅತ್ರೈವ ಸ್ಥಾನನಿರ್ಜನತ್ವರೂಪವ್ಯಂಗ್ಯಾರ್ಥವೈಶಿಷ್ಟ್ಯಂ ಪ್ರಯೋಜಕಮ್.

'ಭಿನ್ನಕಂಠಧ್ವನಿರ್ಧೀರೈಃ ಕಾಕುರಿತ್ಯಭಿಧೀಯತೇ' ಇತ್ಯುಕ್ತಪ್ರಕಾರಾಯಾಃ ಕಾಕೋರ್ಭೇದಾಃ ಆಕಾರೇಭ್ಯೋಽಜ್ಞಾತವ್ಯಾಃ. ಏತದ್ವೈಶಿಷ್ಟ್ಯೇ ಯಥಾ—

ಗುರುಪರತಂತ್ರಯಾ ಬತ ದೂರತರಂ ಶೇಶಮುದ್ಯತೋ ಗಂತುಮ್ ।
ಅಲಿಕುಲಕೋಕಿಲಲಲಿತೇ ನೈಷ್ಯತಿ ಸಖಿ ಸುರಭಿಸಮಯೇಽಸೌ ॥

ಅತ್ರ ನೈಷ್ಯತಿ, ಅಪಿ ತರ್ಹಿ ಏಷ್ಯತ್ಯೇವೇತಿ ಕಾಕ್ವಾ ವ್ಯಜ್ಯತೇ.

ಚೇಷ್ಟಾವೈಶಿಷ್ಟ್ಯೇ ಯಥಾ—

ಸಂಕೇತಕುಲಮನಸಂ ವಿಟಂ ಜ್ಞಾತ್ವಾ ವಿದಗ್ಧಯಾ ।
ಹಸನ್ನೇತ್ರಾರ್ಪಿತಾಕೂತಂ ಲೀಲಾಪದ್ಮಂ ನಿಮೀಲಿತಮ್ ॥

ಅತ್ರ ಸಂಧ್ಯಾ ಸಂಕೇತಕಾಲ ಇತಿ ಪದ್ಮನಿಮೀಲಿನಾದಿಚೇಷ್ಟಯಾ ಕಯಾಚಿದ್ದ್ಯೋತ್ಯತೇ.ಏವಂ ವಕ್ತ್ರಾದೀನಾಂ ವ್ಯಸ್ತಸಮಸ್ತಾನಾಂ ವೈಶಿಷ್ಟ್ಯೇ ಬೋದ್ಧವ್ಯಮ್.

ಹೀಗೆ ಶಬ್ದಕ್ಕೆ ಸಂಬಂಧಿಸಿದ ವ್ಯಂಜನಾವೃತ್ತಿಯನ್ನು ತಿಳಿಸಿ ಅರ್ಥಕ್ಕೆ ಸಂಬಂಧಿಸಿದ ವ್ಯಂಜನೆಯ ಸ್ವರೂಪವನ್ನು ತಿಳಿಸುತ್ತಾನೆ.

ಯಾವುದಾದರೊಂದು ಅಂಶವನ್ನು ತಿಳಿಸುವವನು- ಅದನ್ನು ಕೇಳುವವನು, ಹೇಳುವವನ ಮಾತು, ಮತ್ತೊಬ್ಬನ ಸಾನ್ನಿಧ್ಯ, ಇಷ್ಟಾರ್ಥ, ಸಂದರ್ಭ, ದೇಶ, ಕಾಲ, ಕಾಕು(ಧ್ವನಿವಿಕಾರ), ಅಂಗಚೇಷ್ಟೆ ಇವೇ ಮೊದಲಾದವುಗಳಲ್ಲಿ ತೋರುವ ವೈಶಿಷ್ಟ್ಯದಿಂದ ಒಂದು ಅರ್ಥವು ಬೇರೊಂದು ಅರ್ಥವನ್ನು ತಿಳಿಯಪಡಿಸಲು ಸಾಧಕವಾದ ವೃತ್ತಿಯೇ ಆರ್ಥೀ ವ್ಯಂಜನೆ ಎನಿನಿಸುವುದು. ಇವುಗಳಲ್ಲಿ ಹೇಳುವವನು, ಅವನ ಮಾತು, ಸಂದರ್ಭ, ದೇಶ, ಕಾಲ ಇವುಗಳ ವೈಶಿಷ್ಟ್ಯದಿಂದ ವ್ಯಂಗ್ಯಾರ್ಥವು ತೋರುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ಇದು ವಸಂತಕಾಲ, ಈ ಮನ್ಮಥನು ಕೋಪಿಸಿಕೊಂಡಿರುವನು. ಸುರತದಿಂದಾಗಿರುವ ಆಯಾಸವನ್ನು ಪರಿಹರಿಸಲು ಈ ಮಂದಮಾರುತವೂ ಬೀಸುತ್ತಲಿದೆ. ಈ ವಿಹಾರವನವೂಸಹ ಮನೋಹರವಾದ ಅಶೋಕ ವೃಕ್ಷಗಳ ರೆಂಬೆಗಳಿಂದ ಆವೃತವಾಗಿದೆ. ಪತಿಯಾದರೋ ದೂರದಲ್ಲಿರುವನು. ಈಗ ಏನು ಮಾಡಬೇಕು, ಹೇಳು", ಹೀಗೆ ಹೇಳಿದ್ದರಿಂದ ನಾಯಿಕೆಯ ಮನಸ್ಸಿನಲ್ಲಿ ವಿಹರಿಸಬೇಕೆಂಬ ಇಚ್ಛೆ ತೋರುತ್ತದೆ. ಹೇಳುವವಳು—ಅವಳು ಪ್ರಯೋಗಿಸುವ ವಾಕ್ಯಗಳು, ಸುರತದ ಪ್ರಸಂಗ, ಮನೋಹರವಾದ ಪ್ರದೇಶ, ವಸಂತಕಾಲ ಇವೆಲ್ಲವೂ ಸೇರಿ ಇಲ್ಲಿ ವ್ಯಂಗ್ಯಾರ್ಥವನ್ನು ವ್ಯಕ್ತಪಡಿಸುತ್ತವೆ. "ಈ ಪ್ರದೇಶಕ್ಕೆ ಕಾಮುಕನೊಬ್ಬನನ್ನು ನೀನು ಗೋಪ್ಯವಾಗಿ ಬೇಗನೆ ಕಳುಹಿಸಬೇಕು" ಎಂದು ಸಖಿಗೆ ನಾಯಿಕೆಯು ಸೂಚಿಸುತ್ತಾಳೆ. ಇಲ್ಲಿ ಹೇಳುವವಳು—ಅವಳ ಮಾತು ಸಂದರ್ಭ, ದೇಶ, ಕಾಲ, ಇವಿಷ್ಟರ ವೈಶಿಷ್ಟ್ಯದಿಂದಲೂ ವ್ಯಂಗ್ಯಾರ್ಥವು ತೋರುವುದು.

ಕೇಳುವವನ ವೈಶಿಷ್ಟ್ಯದಿಂದ ವ್ಯಂಗ್ಯಾರ್ಥವು ತೋರುವುದನ್ನು ಉದಾಹರಿಸುತ್ತಾನೆ. "ಸ್ತನಪ್ರದೇಶದಲ್ಲಿ ಶ್ರೀಗಂಧವು ಪೂರ್ತಿಯಾಗಿ ಅಳಿಸಿಹೋಗಿದೆ. ತುಟಿಯಲ್ಲಿ ಕೆಂಪುಬಣ್ಣವು ಪೂರ್ಣವಾಗಿ ಒರೆಸಿಹೋಗಿದೆ. ಕಣ್ಣುಗಳಿಗೆ ಹಚ್ಚಿದ ಕಾಡಿಗೆಯು ಪೂರ್ತಿಯಾಗಿ ತೊಲಗಿದೆ. ಈ ನಿನ್ನ ಕೃಶವಾದ ಶರೀರವು ರೋಮಾಂಚಗೊಂಡಿದೆ. ಬಂಧುಜನರಿಗೆ ತೊಂದರೆಯಾಗುವುದೆಂಬುದನ್ನು ತಿಳಿಯದೆ ಸುಳ್ಳನು ಹೇಳುತ್ತಿರುವ ಎಲೈ ದೂತಿಯೇ, ಸ್ನಾನಮಾಡಲಿಕ್ಕಾಗಿ ನೀನು ಬಾವಿಯ ಬಳಿಗೆ ಹೋಗಿದ್ದೆ. ಆ ನೀಚನ ಹತ್ತಿರಕ್ಕೆ ನೀನು ಹೋಗಿಲ್ಲ" ಇಲ್ಲಿ ಅವನ ಬಳಿಗೆ ನೀನು ಹೋಗಿದ್ದೆ ಎಂಬ ಅರ್ಥವು ವಿಪರೀತಲಕ್ಷಣೆಯೆಂದು ತಿಳಿದು ಬರುವುದು. "ನೀನು ಬಾವಿಗೆ ಸ್ನಾನಕ್ಕಾಗಿ ಹೋಗಿದ್ದೆ" ಎಂದು ವಾಚ್ಯಾರ್ಥವು ವಿಧಿರೂಪದಲ್ಲಿರುವಾಗ ಅದಕ್ಕೆ ವಿಪರೀತವಾಗಿ 'ನೀನು ಸ್ನಾನಕ್ಕಾಗಿ ಅಲ್ಲಿಗೆ ಹೋಗಿರಲಿಲ್ಲ; ಅದನ ಬಳಿಗೇ ಹೋಗಿದ್ದೆ' ಎಂದುನಿಷೇಧರೂಪವಾದ ಅರ್ಥವು ತೋರುವುದರಿಂದ ಇದು ವಿಪರೀತ ಲಕ್ಷಣೆ ಎನಿಸಿದೆ. "ಸ್ನಾನಕ್ಕಾಗಿ ಹೋಗಿದ್ದರೆ ಮೈಯಲ್ಲೆಲ್ಲಾ ಶ್ರೀಗಂಧವು ಅಳಿಸಿ ಹೋಗಬೇಕಾಗಿತ್ತು. ಆದರೆ ನಿನ್ನಲ್ಲಿ ಹಾಗೆ ಆಗಿಲ್ಲ, ನಿನ್ನ ಸ್ತನಗಳಲ್ಲಿ ಮಾತ್ರವೇ ಶ್ರೀ ಗಂಧವು ತೊಲಗಿದೆ; ತುಟಿಗಳಲ್ಲಿ ಮಾತ್ರವೇ ಕೆಂಪು ಅಳಿಸಿದೆ." ಹೀಗೆ ಆಕೆಯ ಪರಿಸ್ಥಿತಿ ಇರುವುದರಿಂದ ವಾಚ್ಯಾರ್ಥಕ್ಕೆ ವಿರುದ್ಧವಾದ ಅರ್ಥವನ್ನು ಇಲ್ಲಿ ಲಕ್ಷಣೆಯು ತಿಳಿಸುತ್ತದೆ. ಈ ಲಕ್ಷ್ಯಾರ್ಥದಿಂದ "ಅವನೊಡನೆ ನೀನು ರಮಿಸಲಿಕ್ಕಾಗಿಯೇ ಅಲ್ಲಿಗೆ ಹೋಗಿದ್ದೆ" ಎಂಬ ವ್ಯಂಗ್ಯಾರ್ಥವು ಈ ಮಾತನ್ನು ಕೇಳುತ್ತಿರುವ ದೂತಿಯ ವೈಶಿಷ್ಟ್ಯದಿಂದ ತಿಳಿದುಬರುತ್ತದೆ. ನಾಯಿಕೆ ಇಲ್ಲಿ ದೂತಿಗೆ ಹಾಗೆ ಹೇಳುತ್ತಿರುವಳು. ಈ ದೂತಿ ತನಗೆ ಅನುಕೂಲಳಾಗಿರುವ ಬದಲು ವಿರುದ್ಧವಾಗಿ ವರ್ತಿಸಿರುವಳು. ಬಾವಿಗೆ ಸ್ನಾನಕ್ಕಾಗಿ ಹೋಗುವ ನೆಪದಿಂದ ನೀಚಕಾಮುಕನೊಡನೆ ರಮಿಸಲಿಕ್ಕಾಗಿ ಹೋಗಿದ್ದ ದೂತಿಗೆ ನಾಯಿಕೆಯು ಹೇಳುತ್ತಿರುವಳು. ಇದನ್ನು ಕೇಳುತ್ತಿರುವ ದೂತಿಯ ವೈಶಿಷ್ಟ್ಯದಿಂದ ಇಲ್ಲಿ ಲಕ್ಷ್ಯಾರ್ಥದಿಂದ ವ್ಯಂಗ್ಯಾರ್ಥವು ತೋರುತ್ತದೆ.

ಅನ್ಯಸನ್ನಿಧಿವೈಶಿಷ್ಯಕ್ಕೆ ಉದಾಹರಣವನ್ನು ಕೊಡುತ್ತಾನೆ.

ಗಾಥಾಸಪ್ತಶತಿಯ ನಾಲ್ಕನೆಯ ಪದ್ಯವಿದು. ಇದರ ಅರ್ಥವು ಹೀಗಿದೆ. "ನಿರ್ಮಲವಾದ ಮರಕತಮಣಿಯ ಪೆಟ್ಟಿಗೆಯ ಮೇಲೆ ಇರಿಸಿದ ಕಪ್ಪೆಯಚಿಪ್ಪಿನಂತೆ ಈ ಬಕಪಕ್ಷಿಯುನ್ನತಾವರೆ ಎಲೆಯ ಮೇಲೆ ನಿಶ್ಚಲವಾಗಿಯೂ ಶಾಂತವಾಗಿಯೂ ನೆಲಸಿದೆ" ಈ ಪದ್ಯವನ್ನು ನಾಯಿಕೆಯು ಗುಪ್ತಕಾಮುಕನೊಬ್ಬನ ಸಮೀಪದಲ್ಲಿ ಹೇಳುತ್ತಿದ್ದಾಳೆ. ಅವನಿಗೆ ಮಾತ್ರ ಇದು ಅರ್ಥವಾಗುತ್ತದೆ. ಅವನಿಗೆ ಹೀಗೆ ಆಕೆ ತಿಳಿಸುತ್ತಾಳೆ. "ಇಲ್ಲಿ ಬಕಪಕ್ಷಿಯು ನಿಶ್ಚಲವಾಗಿರುವುದರಿಂದ ಈ ಪ್ರದೇಶವು ವಿಶ್ವಾಸಾರ್ಹವೆನಿಸಿದೆ. ಹೀಗೆ ಈ ನಿರ್ಜನಪ್ರದೇಶವು ನಿನಗೆ ಗೋಪ್ಯವೆನಿಸಿದೆ" ಎಂದು ಪಕ್ಕದಲ್ಲಿರುವ ಗುಪ್ತ ಕಾಮುಕನೊಬ್ಬನಿಗೆ ತಿಳಿಸುತ್ತಾಳೆ. ಈ ಸ್ಥಳದಲ್ಲಿ ಯಾವ ಬಗೆಯ ಜನಸಂಪರ್ಕವೂ

ಇಲ್ಲವೆಂಬ ವ್ಯಂಗ್ಯಾರ್ಥವು ತೋರಿ ಅದರ ವೈಶಿಷ್ಟ್ಯವೂ ಸಹ ಇದು ಗೋಪ್ಯಸ್ಥಾನವೆಂಬ ಬೇರೊಂದು ವ್ಯಂಗ್ಯಾರ್ಥವನ್ನು ತಿಳಿಯಪಡಿಸಲು ಅನುಕೂಲವಾಗಿದೆ. ಕಾಮುಕನ ಸಾನ್ನಿಧ್ಯದಲ್ಲಿ ಆಕೆಯು ಹೀಗೆ ಹೇಳಿದ್ದರಿಂದ ಅನ್ಯಸಾನ್ನಿಧ್ಯದ ವೈಶಿಷ್ಟ್ಯದಿಂದ ಈ ವ್ಯಂಗ್ಯಾರ್ಥವು 'ಇದು ಸಂಕೇತಸ್ಥಾನ' ವೆಂಬ ಬೇರೊಂದು ವ್ಯಂಗ್ಯಾರ್ಥವನ್ನು ಸೂಚಿಸುತ್ತದೆ. ಕಂಠಧ್ವನಿಯಲ್ಲಿ ಆಗಿರುವ ಬದಲಾವಣೆಯೇ ಕಾಕುವೆನಿಸಿದೆ. ಅಲ್ಲಿಗೆ ಕಾಕುವೆಂದರೆ ಸ್ವರದ ವಿಕಾರವೆಂದು ಹೇಳಿದಂತಾಯಿತು. ಇವರ ಭೇದಗಳನ್ನು ಹೇಳುವವನ ಇಂಗಿತಗಳಿಂದ ತಿಳಿಯಬೇಕು. ಇದರ ವೈಶಿಷ್ಟ್ಯದಿಂದ ಒಂದು ವಾಚ್ಯಾರ್ಥವು ಬೇರೊಂದು ವ್ಯಂಗ್ಯಾರ್ಥವನ್ನು ತಿಳಿಸಬಲ್ಲದು. "ಸಖಿಯೇ, ಪತಿಯು ಹಿರಿಯರ ಮಾತಿಗೆ ಕಟ್ಟುಬಿದ್ದು ದೂರದೇಶಕ್ಕೆ ಹೋರಡಲು ಉದ್ಯುಕ್ತನಾಗಿರುವನು. ಆದರೆ ದುಂಬಿಗಳ ಸಮೂಹ ಮತ್ತು ಕೋಗಿಲೆಗಳಿಂದ ಮನೋಹರವಾದ ವಸಂತಕಾಲದಲ್ಲಿ ಇವನು ಬರದೇಇರುವನೋ ? ಇಲ್ಲಿ "ಬರದೇ ಇರುವನೋ" ಎಂದು ವಿಕೃತವಾದ ಸ್ವರದಿಂದ ಆಕೆ ಹೇಳಿದ ಪ್ರಯುಕ್ತ 'ಅವನು ಆ ಕಾಲಕ್ಕೆ ಬಂದೇ ಬರುವನು' ಎಂಬ ವ್ಯಂಗ್ಯಾರ್ಥವು ತಿಳಿದುಬರುತ್ತವೆ.

ಅಂಗಚೇಷ್ಟೆಯ ವೈಶಿಷ್ಟ್ಯದಿಂದ ವ್ಯಂಗ್ಯಾರ್ಥವು ತೋರುವುದನ್ನು ಈಗ ಉದಾಹರಿಸುತ್ತಾನೆ. ಸಂಕೇತಕಾಲ ಯಾವುದು ಎಂಬುದನ್ನು ತಿಳಿಯಲು ವಿಟನು ಅಂಗಸಂಜ್ಞೆಯಿಂದ ? ಸಲು ಅದನ್ನು ತಿಳಿದುಕೊಂಡು ವಿದಗ್ಧನಾಯಿಕೆಯು ಅರಳಿದ ಕಣ್ಣುಗಳಿಂದ ತನ್ನ ಅ ಪ್ರಿಯನನ್ನು ಸೂಚಿಸುತ್ತ ವಿನೋದಕ್ಕಾಗಿ ಕೈಯಲ್ಲಿ ಹಿಡಿದದ್ದ ಕಮಲವನ್ನು ಉದ್ದೇಶಪೂರ್ವಕವಾಗಿ ಮುದುರಿದಳು." ವಿಟನು ತನ್ನ ಅವಯವಗಳ ವ್ಯಾಪಾರದಿಂದಲೇ ಸಂಕೇತಕಾಲವನ್ನು ತಿಳಿಯಲಿಚ್ಛಿಸುವನು. ಅವನ್ನು ಕೇಳಿದೊಡನೆಯೇ ನಾಯಿಕೆಗೆ ಸಂತೋಷವುಂಟಾಯಿತು. ಕಣ್ಣುಗಳು ಅರಳಿದುವು. ಹೀಗೆ ವಿಟನಿಗೆ ಆಕೆಯು ತನ್ನ ಸಂತೋಷವನ್ನು ಅಂಗಚೇಷ್ಟೆಯಿಂದಲೇ ತಿಳಿಸಿದಳು. ಅವನಿಗೆ ಉತ್ತರವನ್ನು ಕೊಡಲಿಕ್ಕಾಗಿ ಕೈಯಲ್ಲಿದ್ದ ಕಮಲವನ್ನು ಮೊಗ್ಗಾಗುವಂತೆ ಮಡಚಿದಳು. ಇದರಿಂದ ಕಮಲವು ಮೊಗ್ಗಾಗಲು ಅನುಕೂಲವೆನಿಸಿದ ಸಾಯಂಕಾಲವೇ ಸಂಕೇತಸಮಯವೆಂದು ಆಕೆ ಸೂಚಿಸಿದಂತಾಯಿತು. ಕೈಲಿದ್ದ ಕಮಲವನ್ನು ಮುದುರುವ ಮೂಲಕ ಈ ವ್ಯಂಗ್ಯಾರ್ಥವು ಇಲ್ಲಿ ಪ್ರಕಾಶಗೊಂಡಿರುವುದು. ಹೀಗೆ ವ್ಯಂಗ್ಯಾರ್ಥವನ್ನು ಸೂಚಿಸಲು ಹಿಂದೆ ಹೇಳಿದವುಗಳ ವೈಶಿಷ್ಟ್ಯದಲ್ಲಿ ಅವೆಲ್ಲವೂ ಒಟ್ಟಿಗೆ ಸೇರಿರಬಹುದು ಅಥವಾ ಒಂದೊಂದೇ ಆದರೂ ಇರಬಹುದು ಅಥವಾ ಎರಡು ಮೂರಾದರೂ ಸೇರಿರಬಹುದು.

ತ್ರೈವಿಧ್ಯಾದಿಯಮರ್ಥಾನಾಂ ಪ್ರತ್ಯೇಕಂ ತ್ರಿವಿಧಾ ಮತಾ ||೧೭||

ಅರ್ಥಾನಾಂ ವಾಚ್ಯಲಕ್ಷ್ಯವ್ಯಂಗ್ಯತ್ವೇನ ತ್ರಿರೂಪತಯಾ ಸರ್ವಾ ಅಪ್ಯನಂತರೋಕ್ತಾ ವ್ಯಂಜನಾಸ್ತ್ರಿವಿಧಾಃ. ತತ್ರ ವಾಚ್ಯಾರ್ಥಸ್ಯ ವ್ಯಂಜನಾ ಯಥಾ— 'ಕಾಲೋ ಮಧುಃ' ಇತ್ಯಾದಿ. ಲಕ್ಷ್ಯಾರ್ಥಸ್ಯ ಯಥಾ— 'ಪಶ್ಯ ನಿಶ್ಚಲನಿಷ್ಪಂದಾ' ಇತ್ಯಾದಿ. ಪ್ರಕೃತಿಪ್ರತ್ಯಯಾದಿವ್ಯಂಜಕತ್ವಂ ತು ಪ್ರಪಂಚಯಿಷ್ಯತೇ.

ಶಬ್ದಬೋಧ್ಯೋ ವ್ಯನಕ್ತ್ಯರ್ಥಃ ಶಬ್ದೋಽಪ್ಯರ್ಥಾಂತರಾಶ್ರಯಃ
ಏಕಸ್ಯ ವ್ಯಂಜಕತ್ವೇ ತದನ್ಯಸ್ಯ ಸಹಕಾರಿಕಾ ॥೧೮॥

ಯತಃ ಶಬ್ದೋ ವ್ಯಂಜಕತ್ವೇಽರ್ಥಾಂತರಮಪೇಕ್ಷತೇ, ಅರ್ಥೋಽಪಿ ಶಬ್ದಮ್ ತದೇಕಸ್ಯ ವ್ಯಂಜಕತ್ವೇಽನ್ಯಸ್ಯ ಸಹಕಾರಿತಾ ಅವಶ್ಯಮಂಗೀಕರ್ತವ್ಯಾ.

ಅಭಿಧಾದಿತ್ರಯೋಪಾಧಿವೈಶಿಷ್ಟ್ಯಾತ್ರಿವಿಧೋ ಮತಃ।
ಶಬ್ದೋಽಪಿ ವಾಚಕಸ್ತದ್ವಲ್ಲಕ್ಷಕೋ ವ್ಯಂಜಕಸ್ತಥಾ ॥೧೯॥

ಅಭಿಧೋಪಾಧಿಕೋ ವಾಚಕಃ. ಲಕ್ಷಣೋಪಾಧಿಕೋ ಲಕಕಃ, ವ್ಯಂಜನೋಪಾಧಿಕೋ ವ್ಯಂಜಕಃ— ಕಿಂ ಚ—

ತಾತ್ಪರ್ಯಾಖ್ಯಂ ವೃತ್ತಿಮಾಹುಃ ಪದಾರ್ಥಾನ್ವಯಬೋಧನೇ।
ತಾತ್ಪರ್ಯಾಖ್ಯಂ ತದರ್ಥಂ ಚ ವಾಕ್ಯಂ ತದ್ಬೋಧಕಂ ಪರೇ ॥೨೦॥

ಅಭಿಧಾಯಾಃ ಏಕೈಕಪದಾರ್ಥಬೋಧನವಿರಾಮಾತ್ ವಾಕ್ಯಾರ್ಥರೂಪಸ್ಯ ಬೋಧಿಕಾ ತಾತ್ಪರ್ಯಂ ನಾಮ ವೃತ್ತಿಃ. ತದರ್ಥಶ್ಚ ತಾತ್ಪರ್ಯಾರ್ಥಃ, ಶದ್ಬೋಧಕಂ ಚ ವಾಕ್ಯಂ ಇತ್ಯಭಿಹಿಕಾನ್ವಯವಾದಿನಾಂ ಮತಮ್.

—ಇತಿ ದ್ವಿತೀಯಃ ಪರಿಚ್ಛೇದಃ—

ಅರ್ಥಗಳು ಮೂರು ಬಗೆಯಾಗಿರುವುದರಿಂದ ಅರ್ಥಕ್ಕೆ ಸಂಬಂಧಿಸಿರುವ ವ್ಯಂಜನೆಗಳೂ ಸಹ ಮೂರು ಬಗೆಯಾಗಿವೆ.

ವಾಚ್ಯ, ಲಕ್ಷ್ಯ, ವ್ಯಂಗ್ಯವೆಂದು ಅರ್ಥಗಳು ಮೂರುಬಗೆಯಾದ್ದರಿಂದ ಹಿಂದೆ ಹೇಳಿದ ಅನೇಕ ವೈಶಿಷ್ಟ್ಯಗಳ ಮೂಲಕ ತೋರುವ ಅರ್ಥವ್ಯಂಜನೆಯು ಮೂರು ಬಗೆಯಾಗಿದೆ. ಅವುಗಳಲ್ಲಿ ವಾಚ್ಯಾರ್ಥದಿಂದ ತೋರುವ ವ್ಯಂಜನೆಗೆ 'ಕಾಲೋ ಮಧುಃ' ಎಂಬ ಪದ್ಯವನ್ನು ಹಿಂದೆ ಉದಾಹರಿಸಿದೆ. ಲಕ್ಷ್ಯಾರ್ಥದಿಂದ ತೋರುವ ವ್ಯಂಜನೆಗೆ " ನಿಶ್ಶೇಷಚ್ಯುತಚಂದನಂ ಎಂಬ ಪದ್ಯವನ್ನು ಹಿಂದೆ ಉದಾಹರಿಸಿದೆ. ವ್ಯಂಗ್ಯಾರ್ಥದಿಂದ ಬೇರೊಂದು ವ್ಯಂಗ್ಯಾರ್ಥವನ್ನು ಸೂಚಿಸುವ ವ್ಯಂಜನೆಗೆ " 'ಪಶ್ಯ ನಿಶ್ಚಲ' ಎಂಬ ಪದ್ಯವನ್ನು ಉದಾಹರಿಸಿದೆ. ಪ್ರಕೃತಿಪ್ರತ್ಯಯಗಳಿಂದ ವ್ಯಂಗ್ಯಾರ್ಥವು ತೋರಿಬರುವುವನ್ನು ಮುಂದೆ ಉದಾಹರಿಸಲಾಗುವುದು.

ಶಬ್ದದಿಂದ ತಿಳಿದುಬರುವ ವಾಚ್ಯ ಮೊದಲಾದ ಅರ್ಥವು ಬೇರೊಂದು ವ್ಯಂಗ್ಯಾರ್ಥವನ್ನು ಪ್ರಕಾಶಪಡಿಸುತ್ತದೆ. ಹಾಗೆಯೇ ಶಬ್ದವು ತನ್ನ ಅರ್ಥವನ್ನು ತಿಳಿಸುವಂತೆಯೇ ಅದರ ಮೂಲಕ ಬೇರೊಂದು ಅರ್ಥಕ್ಕೂ ಆಶ್ರಯವಾಗಿರುವುದು. ಹೀಗೆ ಒಂದು ವ್ಯಂಜಕವಾದರೆ ಮತ್ತೊಂದು ಸಹಕಾರಿಯಾಗಿರುವುದು. ಶಬ್ದವು ವ್ಯಂಜಕವಾದರೆ ಅರ್ಥವನ್ನು ಅಪೇಕ್ಷಿಸುತ್ತದೆ. ಹಾಗೆಯೇ ಅರ್ಥವು ವ್ಯಂಜಕವಾದರೆ ಶಬ್ದವನ್ನು ಅಪೇಕ್ಷಿಸುತ್ತದೆ. ಹೀಗೆ ಒಂದು ವ್ಯಂಜಕವಾಗಲು ಮತ್ತೊಂದು ಸಹಕಾರಿ ಎಂಬುವನ್ನು ಅವಶ್ಯಕವಾಗಿ ಒಪ್ಪಬೇಕು.

ಅಭಿದೆ ಮೊದಲಾದ ಮೂರು ಶಕ್ತಿಗಳು ಶಬ್ದದಲ್ಲಿರುವ ಧರ್ಮಗಳು. ಆದ್ದರಿಂದ ಶಬ್ದಕ್ಕೆ ಇವು ಮೂರು ವಿಶೇಷಣಗಳೆನಿಸಿವೆ. ಇವುಗಳ ವೈಶಿಷ್ಟ್ಯದಿಂದ ಶಬ್ದವೂ ಮೂರು ಬಗೆಯಾಗಿದೆ. ಅಭಿಧಾವ್ಯಾಪಾರವೇ ವಿಶೇಷಣವಾಗಿರುವ ಶಬ್ದವು ವಾಚಕವೆನಿಸುವುದು.ಲಕ್ಷಣಾ ವ್ಯಾಪಾರವೇ ವಿಶೇಷಣವೆನಿಸಿರುವ ಶಬ್ದವು ಲಕ್ಷಕವೆನಿಸುವುದು. ವ್ಯಂಜನಾವ್ಯಾಪಾರವೇ ವಿಶೇಷಣವೆನಿಸಿದ ಶಬ್ದವು ವ್ಯಂಜಕವೆನಿಸುವುದು. ಹೀಗೆ ಶಬ್ದಗಳು ಮೂರು ಬಗೆಯಾಗಿವೆ.

ಪದಾರ್ಥಗಳಲ್ಲಿ ಒಂದರಿಂದೊಂದಕ್ಕೆ ಅನ್ವಯವನ್ನು ತಿಳಿಸಲು ತಾತ್ಪರ್ಯವೆಂಬ ವೃತ್ತಿಯೊಂದನ್ನು ಅನುಭವಿಗಳು ತಿಳಿಸಿದ್ದಾರೆ. ಹೀಗೆ ಪ್ರತಿಯೊಂದು ಪದದಿಂದಲೂ ತೋರುವ ಅರ್ಥಗಳಿಗೆ ಇರುವ ಸಂಬಂಧವನ್ನು ಕಲ್ಪಿಸಲು ಅನುಕೂಲವಾದ ವೃತ್ತಿಯೇ ತಾತ್ಪರ್ಯವೆನಿಸುವುದೆಂದು ಪ್ರಾಚೀನನೈಯಾಯಿಕರು ತಿಳಿಸುತ್ತಾರೆ. ಅಭಿಧೆಯು ಒಂದೊಂದು ಪದದ ಅರ್ಥವನ್ನು ತಿಳಿಸಿ ವಿಶ್ರಾಂತಿಯನ್ನು ಹೊಂದಿದಮೇಲೆ ಆ ಪದಾರ್ಥಗಳಿಗೆ ಅನ್ವಯವಾಗುವ ವಾಕ್ಯಾರ್ಥವನ್ನು ತಿಳಿಸಲಿಕ್ಕಾಗಿ ತಾತ್ಪರ್ಯವೆಂಬ ವೃತ್ತಿಯು ಪ್ರವರ್ತಿಸುತ್ತದೆ. ಅದರಿಂದ ತಿಳಿದು ಬರುವ ಅರ್ಥವೇ ತಾತ್ಪರ್ಯಾರ್ಥವೆನಿಸುತ್ತದೆ. ಅದನ್ನು ತಿಳಿಸುವುದೇ ವಾಕ್ಯವೆನಿಸುತ್ತದೆ. ಅಲ್ಲಿಗೆ ತಾತ್ಪರ್ಯಾರ್ಥವನ್ನು ತಿಳಿಸುವಂತಹದು ವಾಕ್ಯವೇ ಹೊರತು ಪದವಲ್ಲ ; ತಾತ್ಪರ್ಯವೆಂಬ ವೃತ್ತಿಯೇ ಹೊರತು ಅಭಿಧಾದಿವೃತ್ತಿಗಳಲ್ಲವೆಂಬುದು ಸ್ಪಷ್ಟವಾಗುತ್ತದೆ. ಇದಿಷ್ಟನ್ನು ತಿಳಿಸುವವರು ಅಭಿಹಿತಾನ್ವಯವಾದಿಗಳೆನಿಸಿರುವರು. ಕೆಲವು ಮೀಮಾಂಸರು (ಭಾಟ್ಟಮತೀಯರು) ಹೀಗೆ ವಾದಿಸುತ್ತಾರೆ. ಶಬ್ದವೃತ್ತಿಗಳಿಂದ ತಿಳಿಯುವ ಅರ್ಥಗಳಿಗೆ ಪರಸ್ಪರ ಸಂಬಂಧವೆಂಬುದು ತಾತ್ಪರ್ಯವೆಂಬ ವೃತ್ತಿಯಿಂದಲೇ ತಿಳಿದುಬರುವುದೆಂದು ಹೇಳುವವರೇ ಅಭಿಹಿತಾನ್ವಯವಾದಿಗಳು. ಅಭಿಹಿತ ಅಂದರೆ ಶಬ್ದದಿಂದ ತಿಳಿದುಬರುವ ಅರ್ಥಗಳು. ಇವುಗಳಿಗೆ ಅನ್ವಯವೆಂದರೆ ಪರಸ್ಪರಸಂಬಂಧ. ಇದು ತಾತ್ಪರ್ಯವೆಂಬ ವೃತ್ತಿಯಿಂದ ತಿಳಿದುಬರುವುದೆಂಬುದೇ ಅಭಿಹಿತಾನ್ವಯವಾದ. ಇದಕ್ಕೆ ಎದುರಾಳಿಯಾಗಿ ಅನ್ವಿತಾಭಿಧಾನವೆಂಬ ವಾದವೂ ಇದೆ. ಇದನ್ನು ಪ್ರಾಭಾಕರರೂ, ಕೆಲವು ವೇದಾಂತಿಗಳೂ ಒಪ್ಪಿದ್ದಾರೆ. ಶಬ್ದಗಳು ಅರ್ಥಗಳೊಡನೆ ಅನ್ವಿತವಾಗಿಯೇ (ಹೊಂದಿಕೊಂಡೇ) ತೋರುತ್ತವೆ ಎಂಬುದೇ ಈ ಬಗೆಯ ವಾದ. ಶಬ್ದಶಕ್ತಿಯಿಂದ ತೋರುವ ಪದಾರ್ಥಗಳು ವಾಕ್ಯದಲ್ಲಿ ಒಂದೊಂದೂ ಪರಸ್ಪರವಾಗಿ ಸಾಮಾನ್ಯರೂಪದಲ್ಲಿ ಹೊಂದಿಕೊಂಡೇ ತೋರುತ್ತವೆ ಎಂದು ವಾದಿಸುವವರು ಅನ್ವಿತಾಭಿಧಾನವಾದಿಗಳು.

## ತೃತೀಯಃ ಪರಿಚ್ಛೇದಃ

ಅಥ ಕೋಽಯಂ ರಸ ಇತ್ಯುಚ್ಯತೇ—.

ವಿಭಾವೇನಾನುಭಾವೇನ ವ್ಯಕ್ತಃ ಸಂಚಾರಿಣಾ ತಥಾ ।
ರಸತಾಮೇತಿ ರತ್ಯಾದಿಃ ಸ್ಥಾಯೀಭಾವಃ ಸ ಚೇತಸಾಮ್ ॥೧॥

ವಿಭಾವಾದಯೋ ವಕ್ಷ್ಯಂತೇ. ಸಾತ್ತ್ವಿಕಾಶ್ಚ ಅನುಭಾವರೂಪತ್ವಾತ್ ನ

ಪೃಥಗುಕ್ತಾಃ. ವ್ಯಕ್ತೋ ದಧ್ಯಾದಿನ್ಯಾಯೇನ ರೂಪಾಂತರಪರಿಣತೋ ವ್ಯಕ್ತೀಕೃತ ಏವ ರಸೋ ನ ತು ದೀಪೇನ ಘಟ ಇವ ಪೂರ್ವಸಿದ್ಧೋ ವ್ಯಜ್ಯತೇ. ತದುಕ್ತಂ ಲೋಚನಕಾರೈಃ–" ರಸಾಃ ಪ್ರತೀಯಂತೇ ಇತಿ ತು ಓದನಂ ಪಚತೀತಿವತ್ ವ್ಯವಹಾರಃ " ಇತಿ. ಅತ್ರ ಚ ರತ್ಯಾದಿಪದೋಪಾದಾನಾದೇವ ಸ್ಥಾಯಿತ್ವೇ ಪ್ರಾಪ್ತೇ ಪುನಃ ಸ್ಥಾಯಿಪದೋಪಾದಾನಂ ರತ್ಯಾದೀನಾಮಪಿ ರಸಾಂತರೇಷು ಅಸ್ಥಾಯಿತ್ವಪ್ರತಿಪಾದಾನಾರ್ಥಮ್. ತತಶ್ಚ ಹಾಸಕ್ರೋಧಾದಯಃ ಶೃಂಗಾರವೀರಾದೌ ವ್ಯಭಿಚಾರಿಣ ಏವ. ತದುಕ್ತಮ್ " ರಸಾವಸ್ಥಃ ಪರಂ ಭಾವಃ ಸ್ಥಾಯಿತಾಂ ಪ್ರತಿಪದ್ಯತೇ " ಇತಿ.

ಅಸ್ಯ ಸ್ವರೂಪಪ್ರಕಾಶನಗರ್ಭ ಆಸ್ವಾದನಪ್ರಕಾರಃ ಕಥ್ಯತೇ—

ಸತ್ತ್ವೋದ್ರೇಕಾದಖಂಡಸ್ವಪ್ರಕಾಶಾನಂದಚಿನ್ಮಯಃ ।
ವೇದ್ಯಾಂತರಸ್ಪರ್ಶಶೂನ್ಯೋ ಬ್ರಹ್ಮಾಸ್ವಾದಸಹೋದರಃ ॥
ಲೋಕೋತ್ತರಚಮತ್ಕಾರಪ್ರಾಣಃ ಕೈಶ್ಚಿತ್ಪ್ರಮಾತೃಭಿಃ ।
ಸ್ವಾಕಾರವದಭಿನ್ನತ್ವೇ ನಾಯಮಾಸ್ವಾದ್ಯತೇ ರಸಃ ॥೨॥

"ರಜಸ್ತಮೋಭ್ಯಾಮಸ್ಪೃಷ್ಟಂ ಮನಃ ಸತ್ತ್ವಮಭಿಧೀಯತೇ " ಇತ್ಯುಕ್ತಪ್ರಕಾರೋ ಬಾಹ್ಯಮೇಯವಿಮುಖತಾಪಾದಕಃ ಕಶ್ಚನ ಆಂತರೋ ಧರ್ಮಃ ಸತ್ತ್ವಮ್. ತಸ್ಯೋದ್ರೇಕಃ ರಜಸ್ತಮಸೀ ಅಭಿಭೂಯ ಆವಿರ್ಭಾವಃ. ಅತ್ರ ಚ ಹೇತುಸ್ತಥಾವಿಧಾಲೌಕಿಕಕಾವ್ಯಾರ್ಥಪರಿಶೀಲನಮ್. ಅಖಂಡ ಇತ್ಯೇಕ ಏವಾಯಂ ವಿಭಾವಾದಿರತ್ಯಾದಿಪ್ರಕಾಶಸುಖಚಮತ್ಕಾರಾತ್ಮಕಃ. ಅತ್ರ ಹೇತುಂ ವಕ್ಷ್ಯಾಮಃ ಸ್ವಪ್ರಕಾಶಾದ್ಯಪಿ ವಕ್ಷ್ಯಮಾಣರೀತ್ಯಾ. ಚಿನ್ಮಯ ಇತಿ ಸ್ವರೂಪಾರ್ಥೇ ಮಯಟ್. ಚಮತ್ಕಾರಶ್ಚಿತ್ತವಿಸ್ತಾರರೂಪೋ ವಿಸ್ಮಯಾಪರಪರ್ಯಾಯಃ. ತತ್ಪ್ರಾಣತ್ವಂ ಚ ಅಸ್ಮದ್ವೃದ್ಧಪ್ರಪಿತಾಮಹಸಹೃದಯಗೋಷ್ಠೀಗರಿಷ್ಠಕವಿಪಂಡಿತಮುಖ್ಯಶ್ರೀಮನ್ನಾರಾಯಣಪಾದೈರುಕ್ತಮ್. ತದಾಹ ಧರ್ಮದತ್ತಃ ಸ್ವಗ್ರಂಥೇ—

ರಸೇ ಸಾರಶ್ಚಮತ್ಕಾರ; ಸರ್ವತ್ರಾಪ್ಯನುಭೂಯತೇ
ತಚ್ಚಮತ್ಕಾರಸಾರತ್ವೇ ಸರ್ವತ್ರಾಪ್ಯದ್ಭುತೋ ರಸಃ ।
ತಸ್ಮಾದದ್ಭುತಮೇವಾಹ ಕೃತೀ ನಾರಾಯಣೋ ರಸಮ್ ॥ ಇತಿ.

ಕೈಶ್ಚಿದಿತಿ ಪ್ರಾಕ್ತನಪುಣ್ಯಶಾಲಿಭಿಃ. ಯದುಕ್ತಂ–" ಪುಣ್ಯವಂತ; ಪ್ರಮಿಣ್ವಂತಿ ಯೋಗಿವದ್ರಸಸಂತತಿಮ್ ". ಯದ್ಯಪಿ "ಸ್ವಾದಃ ಕಾವ್ಯಾರ್ಥಸಂಭೇದಾದಾತ್ಮಾನಂದಸಮುದ್ಭವಃ " ಇತ್ಯುಕ್ತದಿಶಾ ರಸಸ್ಯಾಸ್ವಾದಾನತಿರಿಕ್ತತ್ವಮುಕ್ತಮ್. ತತ್ರಾಪಿ "ರಸಃ ಸ್ವಾದ್ಯತೇ " ಇತಿ ಕಾಲ್ಪನಿಕಂ ಭೇದಮುರರೀಕೃತ್ಯ ಕರ್ಮಕರ್ತರಿ ವಾ ಪ್ರಯೋಗಃ. ತದುಕ್ತಂ " ರಸ್ಯಮಾನತಾಮಾತ್ರಸಾರತ್ವಾತ್ ಪ್ರಕಾಶಶರೀರಾದನನ್ಯ ಏವ ರಸಃ " ಇತಿ. ಏವಮನ್ಯತ್ರಾಪ್ಯೇವಂವಿಧಸ್ಥಲೇಷು ಉಪಚಾರೇಣ ಪ್ರಯೋಗಾ ಜ್ಞೇಯಾಃ.

ರಸಾತ್ಮಕವಾದ ವಾಕ್ಯವೇ ಕಾವ್ಯವೆಂದು ಲಕ್ಷಣವನ್ನು ಹೇಳಿದ್ದರಿಂದ ಕಾವ್ಯದ

ಆತ್ಮವೆನಿಸಿದ ರಸ ಎಂತಹುದೆಂಬ ಆಕಾಂಕ್ಷೆಯನ್ನು ಪೂರೈಸಲು ಅದರ ಸ್ವರೂಪವನ್ನು ಈಗ ತಿಳಿಸುತ್ತಾನೆ. ಮಾನವರ ಹೃದಯದಲ್ಲಿ ಗೋಪ್ಯವಾಗಿ ನೆಲಸಿರುವ ರತಿ ಮೊದಲಾದ ಭಾವಗಳು ಕಾವ್ಯನಾಟಕಗಳಲ್ಲಿರುವ ನಾಯಕ ನಾಯಿಕೆಯರ ಆಶ್ರಯದಿಂದಲ್ಲೂ, ಚಂದ್ರಿಕೆ ಶ್ರೀಗಂಧರಸ ಮೊದಲಾದ ಉದ್ದೀಪಕಸಾಮಗ್ರಿಗಳಿಂದಲೂ, ಅವೇ ಭಾವಗಳನ್ನು ಪ್ರಕಾಶಗೊಳಿಸುವ ಅನುಭಾವಗಳಿಂದಲೂ, ನಿರ್ವೇದಮೊದಲಾದ ವ್ಯಭಿಚಾರಿಭಾವಗಳಿಂದಲೂ ಹೊರಹೊಮ್ಮಿ ಸಹೃದಯರ ಹೃದಯದಲ್ಲಿ ರಸವಾಗಿ ಪರಿಣಮಿಸುತ್ತವೆ. ವಿಭಾವ ಮೊದಲಾದವುಗಳ ಸ್ವರೂಪವನ್ನು ಮುಂದೆ ತಿಳಿಸಲಾಗುವುದು. ಸಾತ್ತ್ವಿಕಭಾವಗಳು ರಸಕ್ಕೆ ಪೋಷಕವಾದ್ದರಿಂದ ಅನುಭಾವವೆನಿಸುವ ಪ್ರಯುಕ್ತ ಅವನ್ನು ಇಲ್ಲಿ ಬೇರೆಯಾಗಿ ತಿಳಿಸಿಲ್ಲ. ಹಾಲು ಮೊಸರಾಗಿ ಪರಿಣಮಿಸುವಂತೆ ರತಿ ಮೊದಲಾದ ಭಾವಗಳು ಹೃದಯದಲ್ಲಿ ಸಂಸ್ಕಾರರೂಪದಿಂದ ಸ್ಥಿರವಾಗಿ ನೆಲಸಿರುವ ಪ್ರಯುಕ್ತ ಸ್ಥಾಯಿ ಎನಿಸಿವೆ. ಇದೇ ಭಾವವು ರಸವೆನಿಸುತ್ತದೆ. ನೆಲದ ಮೇಲಿರುವ ಗಡಿಗೆಯು ದೀಪದಿಂದ ನಮಗೆ ಕಂಡುಬರುವಂತೆ ಹಿಂದೆ ಇದ್ದದ್ದು ಸಹೃದಯರಿಗೆ ಗೋಚರವಾಗುವುದೆಂಬುದು ರಸಕ್ಕೆ ಅನ್ವಯಿಸುವುದಿಲ್ಲ. ರತಿ ಏನೋ ಜನರ ಹೃದಯದಲ್ಲಿ ಇದ್ದದ್ದು ಸಹಜ. ಅದೇ ರಸವಾಗಿ ಪರಿಣಮಿಸಿದರೂ ಬೇರೆ ಸ್ಥಿತಿಯಲ್ಲಿ ಪ್ರಕಾಶಗೊಳ್ಳುವುದು. ಈ ಸ್ಥಿತಿಯೇ ರಸಾವಸ್ಥೆ. ಈ ಅವಸ್ಥೆ ಹಿಂದೆ ಇರಲಿಲ್ಲ, ಆದರೆ ಇಂತಹ 'ರಸವು ತೋರುತ್ತದೆ' ಎಂಬುದನ್ನು 'ಓದನಂ ಪಚತಿ' 'ಅನ್ನವನ್ನು ಬೇಯಿಸುತ್ತಾನೆ' ಎಂಬಂತೆ ವ್ಯವಹರಿಸಲಾಗಿದೆ. ಅನ್ನವನ್ನು ಬೇಯಿಸಬೇಕಾಗಿಯೇ ಇಲ್ಲ; ಆದರೆ ಅಕ್ಕಿಯನ್ನಷ್ಟೇ ಬೇಯಿಸಬೇಕಾದ್ದು. ಅನ್ನವು ಮೊದಲು ಸಿದ್ಧವಾಗಿರಲಿಲ್ಲ. ಅಕ್ಕಿಯೇ ಅನ್ನವಾಗಿ ಪರಿಣಮಿಸುತ್ತದೆ. ಮೊದಲು ಅನ್ನವಿರದೇ ಇದ್ದರೂ 'ಅನ್ನವನ್ನು ಬೇಯಿಸುತ್ತೇನೆ' ಎಂದು ಪ್ರಯೋಗವಿರುವಂತೆ ರಸವು ತೋರುವುದೆಂಬ ಪ್ರಯೋಗವು ರೂಢಿಗೆ ಬಂದಿದೆ. ರಸವೆಂಬುದು ಅನುಭವಿಸುವುದಕ್ಕೆ ಮೊದಲು ಇರುವುದಿಲ್ಲ. ಮೊದಲು ಇದ್ದದ್ದು ರತಿಯೇ ಹೊರತು ರಸವಲ್ಲ. ಆದರೂ ರಸವು ಅಭಿವ್ಯಕ್ತವಾಗುತ್ತದೆ ಎಂದು ಪ್ರಯೋಗಿಸಲಾಗಿದೆ. ಹೀಗೆ ಲೋಚನಕಾರರು ಹೇಳಿದ್ದಾರೆ. ಮೂಲದಲ್ಲಿ 'ರತ್ಯಾದಿ' ಎಂಬ ಪದವನ್ನು ಉಪಯೋಗಿಸಿದ್ದರಿಂದಲೇ ಅವು ಹೃದಯದಲ್ಲಿ ಸ್ಥಿರವಾಗಿ ನೆಲಸಿರುವ ಪ್ರಯುಕ್ತ ಸ್ಥಾಯಿಯಾಗಿದ್ದರೂ ಆ ಪದವನ್ನು ಉದ್ದೇಶಪೂರ್ವಕವಾಗಿ ಉಪಯೋಗಿದೆ. ಅವು ಒಂದೊಂದು ರಸಕ್ಕೆ ನಿಯತವಾದ ಆಶ್ರಯವೆನಿಸಿದ್ದು ಬೇರೆ ರಸಕ್ಕೆ ಹಾಗೆ ಆಶ್ರಯವಾಗಲಾರವೆಂಬುದನ್ನು ಸ್ಥಾಯಿಯೆಂಬ ಆ ಪದವು ತಿಳಿಸುತ್ತದೆ, ಆದ್ದರಿಂದಲೇ ಹಾಸ; ಕ್ರೋಧ ಮೊದಲಾದವು ಶೃಂಗಾರ, ವೀರ ಮೊದಲಾದ ರಸಗಳಿಗೆ ಸ್ಥಾಯಿಭಾವವೆನಿಸದೆ ವ್ಯಭಿಚಾರಿಭಾವಗಳೆನಿಸುತ್ತವೆ. "ರಸವೆನಿಸಿಕೊಳ್ಳಲು ಯೋಗ್ಯವಾದ ಅವಸ್ಥೆಯನ್ನು ಹೊಂದಿರುವ ಭಾವವೇ ಸ್ಥಾಯಿಯಾಗುತ್ತದೆ. ರಸವೆನಿಸಲರ್ಹವಲ್ಲದ ಭಾವವು ಸ್ಥಾಯಿ ಎನಿಸದೆ ವ್ಯಭಿಚಾರಿಭಾವವೆನಿಸುತ್ತದೆ" ಹೀಗೆ ಅನುಭವಿಗಳು ಹೇಳಿದ್ದಾರೆ.

ರಸದ ಸ್ವರೂಪವನ್ನು ತಿಳಿಸುತ್ತಲೇ ಅದನ್ನು ಅನುಭವಿಸುವ ರೀತಿಯನ್ನು ವಿವರಿಸುತ್ತಾನೆ. ಸತ್ತ್ವಗುಣದ ಉದ್ರೇಕದಿಂದ ವಿಭಾವ, ಅನುಭಾವ, ವ್ಯಭಿಚಾರಿಭಾವಗಳು ಒಟ್ಟಿಗೆ ಸೇರಿದಾಗ ತಾನಾಗಿಯೇ ಪ್ರಕಾಶಗೊಂಡು ಸಂತೋಷರೂಪದಿಂದಲೂ ಜ್ಞಾನರೂಪದಿಂದಲೂ ಸಹೃದಯನ ಮನಸ್ಸಿನಲಿ ನೆಲಸಿ. ಇವಲ್ಲದೆ ಬೇರೆ ಯಾವ ಬಗೆಯ ಅರಿವನ್ನೂ ಹುಟ್ಟಿಸದೆ, ಬ್ರಹ್ಮಜ್ಞಾನಕ್ಕೆ ಸದೃಶವೆನಿಸಿ ಅಸಾಧಾರಣವಾದ ಚಮತ್ಕಾರವೇ (ಆಶ್ಚರ್ಯ) ಪ್ರಧಾನವೆನಿಸಿರುವ ದಿವ್ಯವಾದ ಆನಂದವೇ ರಸವೆನಿಸುವುದು. ಇಷ್ಟು ರಸದ ಸ್ವರೂಪವೆನಿಸಿದೆ. ಇದನ್ನು ಪುಣ್ಯಶಾಲಿಗಳಾದ ಕೆಲವರು ಮಾತ್ರವೇ ತಮ್ಮ ಶರೀರಕ್ಕಿಂತ ಬೇರೆಯಾಗದಷ್ಟು ಆತ್ಮೀಯತೆಯಿಂದ ಅನುಭವಿಸುವರು. ದೇಹ ಆತ್ಮ ಇವೆರಡೂ ವಸ್ತುತಃ ಬೇರೆಯಾಗಿದ್ದರೂ 'ನಾನು ಹೋಗುತ್ತೇನೆ'. ಎಂಬಲ್ಲಿ ಅವೆರಡೂ ಒಂದೇ ಎಂದು ಹೇಗೆ ತೋರುತ್ತವೆಯೋ ಹಾಗೆ ನಾಯಕನಲ್ಲೂ ನಾಯಿಕೆಯಲ್ಲೂ ಇರುವ ರತಿ, ಹಾಸ ಕ್ರೋಧ ಮೊದಲಾದ ಭಾವಗಳು ಬೇರೆಬೇರೆಯೇ ಆಸಿದ್ದರೂ ಅವರು ಆಡುವ ಮಾತುಗಳಿಂಲೂ, ಮಾಡುವ ಕ್ರಿಯೆಯಿಂದಲೂ ಸಾಮಾಜಿಕರಿಗೆ ತಮ್ಮ ಹೃದಯದಲ್ಲಿ ನೆಲಸಿರುವ ಅದೇ ಭಾವಗಳೊಡನೆ ಒಂದೇ ಎಂದು ತೋರುತ್ತವೆ. ಅವರು ರಸವನ್ನು ಅನುಭವಿಸುವಕಾಲದಲ್ಲಿ ವಿಭಾವ ಅನುಭಾವ ವ್ಯಭಿಚಾರಿಭಾವಗಳು ನಾಯಕನಿಗೆ ಸಂಬಂಧಿಸಿದವೋ ಅಲ್ಲವೋ ಎಂದಾಗಲಿ, ತನಗೆ ಸಂಬಂಧಿಸಿವೆಯೋ ಅಲ್ಲವೊ ಎಂದಾಗಲೀ ಸಾಮಾಜಿಕನು ಭಾವಿಸುವುದಿಲ್ಲವೆಂದು ಮುಂದೆ ತಿಳಿಸಲಾಗುವುದು.

'ರಜಸ್ತಮೋಗುಣಗಳಿಗೆ ಅಂಟಿಕೊಳ್ಳದಿರುವ ಮನಸ್ಸೇಸತ್ತ್ವಗುಣವೆನಿಸುತ್ತದೆ' ಎಂಬ ಪ್ರಮಾಣದಂತೆ ಸತ್ತ್ವವೆಂಬುದು ಮನಸ್ಸಿನ ಒಂದು ಬಗೆಯ ಧರ್ಮವೆನಿಸಿದೆ. ಅಲ್ಲಿಗೆ ಬೇರೆವಸ್ತುಗಳನ್ನು ಬೇರ್ಪಡಿಸುವ ಚಿತ್ತವೃತ್ತಿಯೇ ಸತ್ತ್ವವೆಂದು ಹೇಳಿದಂತಾಯಿತು. ಹೀಗೆ ಅಂತಃಕರಣದ ಧರ್ಮವೆನಿಸಿದ ಸತ್ತ್ವದ ಉದ್ರೇಕವೆಂದರೆ ರಜಸ್ತಮೋಗುಣಗಳನ್ನು ತಿರಸ್ಕರಿಸಿ ತಾನೇ ಪ್ರಧಾನವಾಗಿ ತೋರುವುದೆಂದರ್ಥ. ಸಾಮಾಜಿಕರಲ್ಲಿ ಸತ್ತ್ವಗುಣವು ಹೀಗೆ ಉದ್ರೇಕವಾಗಲು ಅವರು ಕಾವ್ಯನಾಟ್ಯಗಳಲ್ಲಿ ಅಸಾಧಾರಣವಾದ ವಿಷಯಗಳನ್ನು ಏಕಾಗ್ರಚಿತ್ತತೆಯಿಂದ ಓದುವುದು ಮತ್ತು ಕೇಳುವುದು ಇವೇ ಕಾರಣವೆನಿಸಿದೆ. ರಸವನ್ನು ಅಖಂಡವೆಂದು ಹೇಳಿದ್ದರಿಂದ ವಿಭಾವ ಮೊದಲಾದವುಗಳ ಮತ್ತು ರತ್ಯಾದಿಭಾವಗಳ ಅರಿವಿನಿಂದ ತೋರುವ ಚಮತ್ಕಾರವೇ ರಸವೆನಿಸಿ ಇಂತಹ ಚಮತ್ಕಾರವು ಒಂದೇ ಬಗೆಯಾಗಿರುವುದರಿಂದ ಈ ಚಮತ್ಕಾರವನ್ನು ಅಖಂಡ ರಸವೆಂದು ತಿಳಿಸಲಾಗಿದೆ. ರಸವನ್ನು ಚಮತ್ಕಾರವೆಂದು ಭಾವಿಸಿರುವುದಕ್ಕೆ ಕಾರಣವನ್ನು ಮುಂದೆ ತಿಳಿಸಲಾಗುವುದು. ರಸವು ತಾನಾಗಿಯೇ ತೋರುವುದೆಂಬುದನ್ನು ಮುಂದೆ ತಿಳಿಸಲಾಗುವುದು. ಚಿನ್ಮಯಃ ಎಂಬಲ್ಲಿ ಚಿತ್ ಪದದ ಮೇಲೆ ಸ್ವರೂಪ ಎಂಬ ಅರ್ಥದಲ್ಲಿ ಮಯಟ್ ಪ್ರತ್ಯಯವು ಬಂದದ್ದರಿಂದ ರಸವು ಜ್ಞಾನಸ್ವರೂಪವೆಂದು ಹೇಳಿದಂತಾಯಿತು. ಮನಸ್ಸನ್ನು ವಿಸ್ತಾರಗೊಳಿಸುವ ಧರ್ಮವೇ ಚಮತ್ಕಾರವೆನಿಸಿದೆ. ಅದಕ್ಕೆ

ವಿಸ್ಮಯವೆಂದು ಬೇರೆ ಹೆಸರಿದೆ. ಅದೇ ರಸದ ಪ್ರಾಣವೆಂದು ಹಿರಿಯರಾದ ನಾರಾಯಣ ಪಾದರು ತಿಳಿಸಿರುವರು. ಧರ್ಮದತ್ತನು ತನ್ನ ಗ್ರಂಥದಲ್ಲಿ "ಪ್ರತಿಯೊಂದು ರಸದಲ್ಲೂ ಚಮತ್ಕಾರವೇ ಸಾರವೆಂದು ಸಹೃದಯರಿಗೆ ತೋರುವುದರಿಂದ ಎಲ್ಲಾರಸಗಳೂ ಅದ್ಭುತ ದಲ್ಲಿಯೇ ಕೊನೆಗಾಣುತ್ತವೆ. ಆದ್ದರಿಂದ ಅದ್ಭುತ ಒಂದೇ ರಸವೆಂದು ನಾರಾಯಣ ಪಂಡಿತರು ಹೇಳಿದ್ದಾರೆ" ಹೀಗೆ ತಿಳಿಸಿದ್ದಾನೆ. ಮೂಲದಲ್ಲಿ 'ಕೈಶ್ಚಿತ್' ಎಂಬುದರಿಂದ ಪುಣ್ಯಶಾಲಿಗಳಾದವರು ಮಾತ್ರವೇ ರಸವನ್ನು ಅನುಭವಿಸುವರು ಎಂದು ಹೇಳಿದೆ. 'ಯೋಗಿಗಳು ಬ್ರಹ್ಮಜ್ಞಾನದ ಅಮೃತರಸವನ್ನು ಅನುಭವಿಸುವಂತೆ ಪುಣ್ಯಾತ್ಮರಷ್ಟೇ ರಸವನ್ನು ಆಸ್ವಾದಿಸಬಲ್ಲರು' ಹೀಗೆ ಅನುಭವಿಗಳು ಹೇಳಿದ್ದಾರೆ. "ರಸಾಸ್ವಾದವೆಂಬುದು ಕಾವ್ಯದಲ್ಲಿ ತಿಳಿಸಿರುವ ವಿಷಯಗಳ ಅನುಭವದಿಂದ ಸಾಮಾಜಿಕರಿಗೆ ಉಂಟಾಗುವ ಆನಂದವಲ್ಲದೆ ಬೇರೆಯಲ್ಲ'' ವೆಂಬ ಪ್ರಮಾಣದಿಂದ ರಸಕ್ಕೂ ಆಸ್ವಾದಕ್ಕೂ ಭೇದವಿಲ್ಲ ವೆಂದು ತಿಳಿಸಿದಂತಾಯಿತು. ಹೀಗೆ ರಸ ಮತ್ತು ಆಸ್ವಾದ ಇವೆರಡೂ ಒಂದೇ ಆಗಿದ್ದರೂ 'ರಸವನ್ನು ಅನುಭವಿಸಲಾಗುವುದು' ಎಂಬಲ್ಲಿ ಕಂಡುಬರುವ ಕಾಲ್ಪನಿಕಭೇದವನ್ನು ಅಂಗೀಕ ಕರಿಸಿ ಜನರು ಹೀಗೆ ಪ್ರಯೋಗಿಸುತ್ತಾರೆ. "ಅನುಭವಿಸಲು ಯೋಗ್ಯವಾಗುವ ಸ್ಥಿತಿಯೇ ರಸದ ಸಾರವೆನಿಸಿರುವುದರಿಂದ ಅದನ್ನು ಪ್ರಕಾಶಪಡಿಸುವ ಜ್ಞಾನವೆಂಬ ಶರೀರಕ್ಕಿಂತಲ್ಲೂ ಅದು ಬೇರೆ ಎನಿಸುವುದಿಲ್ಲ'' ಎಂದು ಹಿರಿಯರು ಹೇಳಿದ್ದಾರೆ. ಹೀಗೆ ರಸಕ್ಕೂ ಆಸ್ವಾದಕ್ಕೂ ಭೇದವಿಲ್ಲದಿದ್ದರೂ ರಸವನ್ನು ಆಸ್ವಾದಿಸುವುದಾಗಿ ಲೋಕದಲ್ಲಿ ಜನರು ತಿಳಿಸುವುದು ಕೇವಲ ಉಪಚಾರಕ್ಕೆ ಹೇಳುವ ಮಾತೇ ಹೊರತು ಪ್ರಧಾನವಲ್ಲವೆಂದು ಭಾವಿಸಬೇಕು. ಹೀಗೆ ಪ್ರಯೋಗವಿರುವ ಇತರ ಕಡೆಗಳಲ್ಲೂ ಸಹ ಇದೇ ರೀತಿಯಾಗಿ ತಿಳಿಯುವುದು.

ನನ್ವೇತಾವತಾ ರಸಸ್ಯಾಜ್ಞೇಯತ್ವಮುಕ್ತಂ ಭವತೀತಿ ವ್ಯಂಜನಾಯಾಶ್ಚ ಜ್ಞಾನವಿ ಶೇಷತ್ವಾತ್ ದ್ವಯೋರೈಕ್ಯಮಾಪತಿತಮ್. ತತಶ್ಚ

ಸ್ವಜ್ಞಾನೇನಾನ್ಯಧೀಹೇತುಃ ಸಿದ್ಧೇಽರ್ಥೇ ವ್ಯಂಜಕೋ ಮತಃ।
ಯಥಾ ದೀಪೋಽನ್ಯಥಾಭಾವೇ ಕೋ ವಿಶೇಷೋಽಸ್ಯ ಕಾರಕಾತ್॥

ಇತ್ಯುಕ್ತದಿಶಾ ಘಟಪ್ರದೀಪವತ್ ವ್ಯಂಗ್ಯವ್ಯಂಜಕಯೋಃ ಪಾರ್ಥಕ್ಯಮೇವೇತಿ ಕಥಂ ರಸಸ್ಯ ವ್ಯಂಗ್ಯತೇತಿ ಚೇತ್ ಸತ್ಯಮುಕ್ತಮ್. ಅತ ಏವಾಹುಃ "ವಿಲಕ್ಷಣ ಏವಾಯಂ ಕೃತಿಜ್ಞಪ್ತಿಭೇದೇಭ್ಯ; ಸ್ವಾದನಾಖ್ಯಃ ಕಶ್ಚಿದ್ವ್ಯಾಪಾರಃ. ಅತ ಎವ ಹಿ ರಸ ನಾಸ್ವದನಚಮತ್ಕರಣವಯೋ ವಿಲಕ್ಷಣಾ ಏವ ವ್ಯಪದೇಶಾಃ" ಇತಿ ಅಭಿಧಾದಿವಿಲಕ್ಷಣ ವ್ಯಾಪಾರಮಾತ್ರಪ್ರಸಾಧನಗ್ರಹಿಲೈರಸ್ಮಾಭಿಃ ರಸಾದೀನಾಂ ವ್ಯಂಗ್ಯತ್ವಮುಕ್ತಂ ಭವತೀತಿ.

ನನು ತರ್ಹಿ ಕರುಣಾದೀನಾಂ ರಸಾನಾಂ ದುಃಖಮಯತ್ವಾತ್ ರಸತ್ವಂ ನ ಸ್ಯಾದಿತ್ಯುಚ್ಯತೇ—

ಕರುಣಾದಾವಪಿ ರಸೇ ಜಾಯತೇ ಯತ್ ಪರಸುಖಮ್,

ಸಚೇತಸಾಮನುಭವಃ ಪ್ರಮಾಣಂ ತತ್ರ ಕೇವಲಮ್ ॥ ೧೩ ॥
ಆದಿಶಬ್ದಾತ್ ಬೀಭತ್ಸಭಯಾನಕಾದಯಃ,
ತಥಾಪ್ಯಸಹೃದಯಾನಾಂ ಮುಖಮುದ್ರಣಾಯ ಪಕ್ಷಾಂತರಮುಚ್ಯತೇ
ಕಿಂಚ ತೇಷು ಯದಾ ದುಃಖ ನ ಕೋಽಪಿ ಸ್ಯಾತ್ತದುನ್ಮುಖ ॥ ೧೪ ॥

ನಹಿ ಕಶ್ಚಿತ್ ಸಚೇತಾ ಆತ್ಮನೋ ದುಃಖಾಯ ಪ್ರವರ್ತತೇ. ಕರುಣಾದಿಷು ಚ ಸಕಲಸ್ಯಾಪಿ ಸಾಭಿನಿವೇಶಪ್ರವೃತ್ತಿದರ್ಶನಾತ್ ಸುಖಮಯತ್ವಮೇವ.

ಅನುಪಪತ್ತ್ಯಂತರಮಾಹ—

ತಥಾ ರಾಮಾಯಣಾದೀನಾಂ ಭವಿತಾ ದುಃಖಹೇತುತಾ ॥ ೧೫ ॥

ಕರುಣರಸಸ್ಯ ದುಃಖಹೇತುತ್ವೇ ಕರುಣರಸಪ್ರಧಾನರಾಮಾಯಣಾದಿಪ್ರಬಂಧಾನಾಮಪಿ ದುಃಖಹೇತುತ್ವಪ್ರಸಂಗಃ ಸ್ಯಾತ್.

ನನು ಕಥಂ ದುಃಖಕಾರಣೇಭ್ಯಃ ಸುಖೋತ್ಪತ್ತಿರಿತ್ಯಾಹ—

ಹೇತುತ್ವಂ ಶೋಕಹರ್ಷಾದೇರ್ಗತೇಭ್ಯೋ ಲೋಕಸಂಶ್ರಯಾತ್ ।
ಶೋಕಹರ್ಷಾದಯೋ ಲೋಕೇ ಜಾಯಂತಾಂ ನಾಮ ಲೌಕಿಕಾಃ ॥
ಅಲೌಕಿಕವಿಭಾವತ್ವಂ ಪ್ರಾಪ್ತೇಭ್ಯಃ ಕಾವ್ಯಸಂಶ್ರಯಾತ್ ।
ಸುಖಂ ಸಂಜಾಯತೇ ತೇಭ್ಯಃ ಸರ್ವೇಭ್ಯೋಽಪೀತಿ ಕಾ ಕ್ಷತಿಃ ॥ ೧೬ ॥

ಯೇ ಖಲು ರಾಮವನವಾಸಾದಯೋ ಲೋಕೇ 'ದುಃಖಕಾರಣಾನಿ' ಇತ್ಯುಚ್ಯಂತೇ ತ ಏವ ಹಿ ಕಾವ್ಯನಾಟ್ಯಸಮರ್ಪಿತಾಃ ಅಲೌಕಿಕವಿಭಾವನವ್ಯಾಪಾರವತ್ತಯಾ ಕಾರಣಶಬ್ದವಾಚ್ಯತ್ವಂ ವಿಹಾಯ ಅಲೌಕಿಕವಿಭಾವಶಬ್ದವಾಚ್ಯತ್ವಂ ಭಜಂತೇ ತೇಭ್ಯಶ್ಚ ಸುರತೇ ದಂತಘಾತಾದಿಭ್ಯ ಇವ ಸುಖಮೇವ ಜಾಯತೇ. ಅತಶ್ಚ ಲೌಕಿಕಶೋಕಹರ್ಷಾದಿಕಾರಣೇಭ್ಯೋ ಲೌಕಿಕಶೋಕಹರ್ಷಾದಯೋ ಜಾಯಂತ ಇತಿ ಲೋಕ ಏವ ಪ್ರತಿನಿಯಮಃ. ಕಾವ್ಯೇ ಪುನಃ ಸರ್ವೇಭ್ಯೋಽಪಿ ವಿಭಾವಾದಿಭ್ಯಃ ಸುಖಮೇವ ಜಾಯತೇ ಇತಿ ನಿಯಮಾನ್ನ ಕಶ್ಚಿದ್ದೋಷಃ,

ಕಥಂ ತರ್ಹಿ ಹರಿಶ್ಚಂದ್ರಾದಿಚರಿತಸ್ಯ ಕಾವ್ಯನಾಟ್ಯಯೋಃಕಪಿ ದರ್ಶನಶ್ರವಣಾಭ್ಯಾಂ ಅಶ್ರುಪಾತಾದಯೋ ಜಾಯಂತ ಇತ್ಯುಚ್ಯಂತೇ.

ಅಶ್ರುಪಾತಾದಯಾಸ್ತದ್ವದ್ರುತತ್ವಾಚ್ಚೇತಸೋ ಮತಾಃ ॥ ೧೭ ॥

ತರ್ಹಿ ಕಥಂ ಕಾವ್ಯತಃ ಸರ್ವೇಷಾಮೀದೃಶೀ ರಸಾಭಿವ್ಯಕ್ತಿ ರ್ನ ಜಾಯತ ಇತ್ಯತ ಆಹ ನ ಜಾಯತೇ ತದಾಸ್ವಾದೋ ವಿನಾ ರತ್ಯಾದಿವಾಸನಾಮ್ ॥ ೧೮ ॥

ವಾಸನಾ ಚ ಇದಾನೀಂತನೀ ಪ್ರಾಕ್ತನೀ ಚ ರಸಾಸ್ವಾದಹೇತುಃ; ತತ್ರ ಯದಿ ಆದ್ಯಾ ನ ಸ್ಯಾತ್ ತದಾ ಶ್ರೋತ್ರಿಯಜರನ್ಮೀಮಾಂಸಕಾದೀನಾಮಪಿ ಸಃ ಸ್ಯಾತ್ ಯಾದಿ ದ್ವಿತೀಯಾ ನ ಸ್ಯಾತ್, ತದಾ ಯದ್ರಾಗಿಣಾಮಪಿ ಕೇಷಾಂಚಿತ್ ರಸೋದ್ಬೋಧೋ ನ ದೃಶ್ಯತೇ ತನ್ನ ಸ್ಯಾತ್ಃ ಉಕ್ತಂ ತು ಧರ್ಮದತ್ತೇನ—

ಸವಾಸನಾನಾಂ ಸಭ್ಯಾನಾಂ ರಸಸ್ಯಾಸ್ವಾದನಂ ಭವೇತ" ।

ನಿರ್ವಾಸನಾಸ್ತು ರಂಗಾಂತಃಕಾಷ್ಠಕುಡ್ಯಾಶ್ಮಸನ್ನಿಭಾಃ ॥ ಇತಿ.

ರಸವು ಕೇವಲ ಆಸ್ವಾದರೂಪವೆಂದು ಅನುಭವಿಗಳಿಗೆ ಮಾತ್ರವೇ ಗೋಚರವಾಗುವುದಾಗಿ ಹೇಳಿದ್ದರಿಂದ ಅದು ಎದುರಿಗೆ ಇರುವ ಗಡಿಗೆಯನ್ನು ನೋಡಿ ತಿಳಿಯುವಂತಹ ವಸ್ತುವಲ್ಲವೆಂದೂ, ಆದರೆ ಜ್ಞಾನದ ಒಂದು ಬಗೆಎಂದೂ ಹೇಳಿದಂತಾಯಿತು.

ಹೀಗೆ ಹೇಳುವುದಾದರೆ ವ್ಯಂಜನಾವೃತ್ತಿಯೂ ಹೀಗೆಯೇ ಒಂದು ಬಗೆಯ ಜ್ಞಾನವೇ ಆದ ಪ್ರಯುಕ್ತ ರಸ ಮತ್ತು ವ್ಯಂಜನೆ ಎರಡು ಒಂದೇ ಆಗಬೇಕಾಯಿತು. ಆದ್ದರಿಂದಲೇ "ವ್ಯಂಜಕವೆನಿಸಿವ ವಸ್ತುವಿನ ಅರಿವಿನಿಂದ ಮತ್ತೊಂದು ವ್ಯಂಗ್ಯಾರ್ಥದ ಅರಿವು ಯಾವುದರಿಂದ ಉಂಟಾಗುವುದೋ ಅದೇ ವ್ಯಂಜಕವೆನಿಸುತ್ತದೆ ದಂಡ ಚಕ್ರ ಮೊದಲಾದ ಸಾಮಗ್ರಿಗಳಿಂದ ಮೊದಲೇ ಹುಟ್ಟಿದ್ದ ಘಟವನ್ನೇ ದೀಪವು ಪ್ರಕಾಶಪಡಿಸುವಂತೆ ಮೊದಲಿದ್ದ ಒಂದು ಅರ್ಥವೇ ಮತ್ತೊಂದು ಅರ್ಥವನ್ನು ತಿಳಿಯಪಡಿಸುತ್ತದೆ. ಹಾಗೆ ಸಿದ್ಧವಲ್ಲದ ವಸ್ತುವನ್ನೂ ಸಹ ಅದು ತಿಳಿಯಪಡಿಸುವುದೆಂದು ಒಪ್ಪುವುದಾದರೆ ಘಟವನ್ನು ಪ್ರಕಾಶಪಡಿಸುವ ದೀಪಕ್ಕೂ ಅದನ್ನು ಹುಟ್ಟಿಸುವ ದಂಡ ಚಕ್ರ ಮೊದಲಾದವುಗಳಿಗೂ ಭೇದವೇ ಇಲ್ಲದಂತಾದೀತು. ಗಡಿಗೆಯನ್ನು ಹುಟ್ಟಿಸುವ ಮೂಲಕ ದಂಡ ಮೊದಲಾದವುಗಳಿಂದಲೂ ಸಹ ಗಡಿಗೆಯ ಅರಿವು ಉಂಟಾಗುವುದು" ಹೀಗೆ ಪ್ರಾಚೀನರು ಹೇಳಿರುವ ಪ್ರಕಾರ ಘಟದೀಪಗಳಂತೆ ವ್ಯಂಗ್ಯ ವ್ಯಂಜಕಗಳಿಗೆ ಭೇದವೇ ಇರುತ್ತದೆ. ಹೀಗೆ ರಸ ಮತ್ತು ವ್ಯಂಜನೆ ಇವೆರಡನ್ನೂ ಜ್ಞಾನದ ಒಂದು ಬಗೆಗಳೆಂದು ಹಿಂದೆ ತಿಳಿಸಿ ವ್ಯಂಜನಾವೃತ್ತಿಯು ರಸವನ್ನು ಪ್ರಕಾಶಗೊಳಿಸುತ್ತದೆ ಎಂದು ಇಲ್ಲಿ ಹೇಳಿದ್ದರಿಂದ ಒಂದೇ ವಸ್ತುವನ್ನು ಕರ್ತೃವೆಂದೂ, ಕರ್ಮವೆಂದೂ ಹೇಗೆ ಹೇಳಲಿಕ್ಕಾದೀತು? ಎಂಬ ಆಕ್ಷೇಪವು ಬರುತ್ತದೆ. ಅದಕ್ಕೆ ಅಭಿನವಗುಪ್ತರ ಮತವನ್ನು ತಿಳಿಸುವ ಮೂಲಕ ಸಮಾಧಾನವನ್ನು ತಿಳಿಸುತ್ತಾನೆ. "ಕೃತಿ–ಕರ್ತೃವಿನಲ್ಲಿರುವ ಆಸ್ವಾದನಕ್ರಿಯೆ, ಜ್ಞಪ್ತಿ—ಶಕ್ಯ, ಲಕ್ಷ್ಯ, ವ್ಯಂಗ್ಯ ಎಂಬ ಅರ್ಥಗಳನ್ನು ತಿಳಿಸುವ ಅಭಿದೆ ಲಕ್ಷಣೆ ವ್ಯಂಜನೆ ಎಂಬ ವೃತ್ತಿಗಳು, ಇವಕ್ಕಿಂತಲ್ಲೂ ಸಂಪೂರ್ಣವಾಗಿ ಬೇರೆ ಎನಿಸಿ ರಸ ಒಂದನೇ ತಿಳಿಸಿಕೊಡುವ ಸ್ವಾದನವೆಂಬ ವ್ಯಾಪಾರ ಒಂದಿದೆ. ಬೇರೆ ವ್ಯಾಪಾರಗಳಿಗಿಂತಲೂ ವಿಲಕ್ಷಣವೆನಿಸಿದ ಇದನ್ನು ರಸನ, ಆಸ್ವಾದನ, ಚಮತ್ಕರಣ ಎಂಬ ಹೆಸರುಗಳಿಂದ ಕರೆಯಲಾಗಿದೆ. ರಸವನ್ನು ಪ್ರಕಾಶಪಡಿಸುವುದರಿಂದ ಇದನ್ನು ರಸವೆಂದು ಕೆಲವರು ಕರೆದಿದ್ದಾರೆ. ಅಭಿಧೆ ಮೊದಲಾದವ್ಯಾಪಾರಗಳಿಗಿಂತಲೂ ಬೇರೆಯಾದ ವ್ಯಾಪಾರವನ್ನು ಸಾಧಿಸುವುದರಲ್ಲಿ ಆಸಕ್ತರಾದನಾವು ರಸ ಭಾವ ಮೊದಲಾದವುಗಳನ್ನು ವ್ಯಂಜನಾವೃತ್ತಿಯಿಂದಲೇ ತಿಳಿಯಬೇಕೆಂದು ಹೇಳಿದ್ದೇವೆ. ಇದರಿಂದ ಸ್ವಾದನವೆಂಬ ಹೊಸದೊಂದು ವ್ಯಾಪಾರವನ್ನು ಒಪ್ಪರಿಕ್ಕೆ ಯಾವ ಅಲ್ಲಿಯೂ ಬರುವಂತಿಲ್ಲ.

ರಸವು ಯಾವಾಗಲೂ ಆನಂದಮಯವೆಂದು ಅಂಗೀಕರಿಸಿದರೆ ಕರುಣ ಮೊದಲಾದ ರಸಗಳನ್ನು ಅನುಭವಿಸುವಾಗ ಜನರು ಕಣ್ಣೀರನ್ನು ಸುರಿಸುವುದರಿಂದ ಅವು

ದುಃಖಮಯವೆನಿಸುವ ಪ್ರಯುಕ್ತ ಹೇಗೆ ರಸವೆನಿಸುತ್ತವೆ ? ಎಂದರೆ ಅದಕ್ಕೆ ಸಮಾಧಾನವನ್ನು ಹೇಳುತ್ತಾನೆ. ಕರುಣ ಮೊದಲೂದ ರಸಗಳಲ್ಲಿ ಯಾವ ಹೆಚ್ಚಿನ ಸುಖವುಂಟಾಗುವುದೋ ಆ ಬಗ್ಗೆ ಸಹೃದಯರ ಹೃದಯವಷ್ಟೇ ಪ್ರಮಾಣವೆನಿಸಿದೆ. ಧೀರರು ಕರುಣರಸವಲ್ಲೂ ಸುಖವನ್ನೇ ಅನುಭವಿಸುವರು. ಅವರಿಗೆ ದುಃಖವೇ ಬರುವುದಿಲ್ಲ. ಇಲ್ಲಿ 'ಕರುಣಾದಿ' ಎಂಬಲ್ಲಿ ಆದಿಶಬ್ದದಿಂದ ಬೀಭತ್ಸ, ಭಯಾನಕ ಮೊದಲಾದವನ್ನು ಗ್ರಹಿಸಬೇಕು. ಕರುಣ ಮೊದಲಾದ ರಸಗಳಲ್ಲಿ ದುಃಖವಾಗುವುದಾದರೆ ಆಗ ಯಾರೊಬ್ಬರೂ ಅಂತಹ ರಸಗಳಿಂದ ತುಂಬಿರುವ ಕಾವ್ಯ ನಾಟ್ಯಗಳನ್ನು ಓದಲಿಕ್ಕೂ ಕೇಳಲಿಕ್ಕೂ ಪ್ರವರ್ತಿಸುತ್ತಲೇ ಇರಲಿಲ್ಲ. ಆದ್ದರಿಂದ ರಸಗಳೆಲ್ಲವೂ ಆನಂದಮಯವೆಂಬಲ್ಲಿ ಯಾರಿಗೂ ಸಂಶಯಕ್ಕೆ ಅವಕಾಶವಿಲ್ಲ. ಯಾವೊಬ್ಬ ಚೇತನನೂ ಸಹ ತನ್ನನ್ನು ದುಃಖಪಡಿಸಲಿಚ್ಛಿಸುದಿಲ್ಲ. ಕರುಣ ಮೊದಲಾದ ರಸಗಳಲ್ಲಿ ಎಲ್ಲರೂ ಆಗ್ರಹದಿಂದ ಮುಂದೆ ನುಗ್ಗುವುದರಿಂದ ಅವೂ ಸಹ ಸುಖಮಯವೇ ಆಗಿವೆಎಂಬುದು ಸ್ಪಷ್ಟವಾಗುತ್ತದೆ. ಅವನ್ನೂ ದುಃಖಮಯವೆಂದು ಒಪ್ಪುವುದಾದರೆ ಬೇರೊಂದು ಅನೌಚಿತ್ಯವೂ ಉಂಟೆಂಬುದನ್ನು ತಿಳಿಸುತ್ತಾನೆ. ರಾಮಾಯಣ ಉತ್ತರರಾಮಚರಿತ ಮೊದಲಾದವೂ ಸಹ ದುಃಖಮೂಲವೇ ಆಗಬೇಕಾದೀತು. ಇವುಗಳಲ್ಲಿ ಕರುಣರಸವೇ ಪ್ರಧಾನವಾಗಿರುವುದರಿಂದ ಇವೆಲ್ಲವೂ ದುಃಖವನ್ನೇ ಕೊಡತಕ್ಕವೆಂದು ಹೇಳಬೇಕಾದೀತು. ಹಾಗಾದರೆ ದುಃಖವನ್ನು ಕೊಡುವ ಗ್ರಂಥಗಳಿಂದ ಸುಖವು ಹೇಗೆ ಬರುತ್ತದೆ? ಎಂಬುದನ್ನು ಈಗ ವಿವೇಚನೆಮಾಡುತ್ತಾನೆ. ಒಬ್ಬನ ಶೋಕಸಂತೋಷಗಳನ್ನು ನೋಡಿದಾಗ ಮತ್ತೊಬ್ಬನಿಗೆ ದುಃಖಸಂತೋಷಗಳು ಹುಟ್ಟುತ್ತವೆ ಎಂಬುದು ಲೋಕದ ನಿಯಮ. ಆದ್ದರಿಂದ ರಾಮನ ವನವಾಸ, ರಾಜ್ಯಾಭಿಷೇಕಕ್ಕಾಗಿ ಮಾಡಿದ ಪ್ರಯತ್ನ ಇವೆಲ್ಲವೂ ಲೋಕದಲ್ಲಿ ದುಃಖಕ್ಕೂ ಸಂತೋಷಕ್ಕೂ ಕಾರಣವೆನಿಸಿರಬಹುದು. ಆದರೆ ಇವುಗಳಿಂದ ದುಃಖವೇ ಹುಟ್ಟುತ್ತದೆ ಎಂಬುದು ಲೋಕಕ್ಕೆ ಅನ್ವಯಿಸುವುದೇ ಹೊರತು ನಾಟ್ಯಕ್ಕೆ ಅನ್ವಯಿಸುವುದಿಲ್ಲ. ಆದರೂ ಕಾವ್ಯದೊಳಗೆ ಪ್ರವೇಶಿಸಿದ್ದರಿಂದ ಇವೇ ಸುಖದುಃಖಗಳು ಲೋಕವಿಲಕ್ಷಣವಾದ ಕಾರಣವೆನಿಸಿ ಅವುಗಳಿಂದಲೇ ಸುಖವು ಹುಟ್ಟುತ್ತದೆ ಎಂಬಲ್ಲಿ ಅನೌಚಿತ್ಯವೇನೂ ಕಾಣುವುದಿಲ್ಲ. ದುಃಖಕ್ಕೆ ಕಾರಣವೆನಿಸಿದ ಒಂದು ವಸ್ತುವಿನಿಂದಲೂ ಸುಖವೇ ಹುಟ್ಟುವುದೆಂಬಲ್ಲಿ ಕವಿಯ ರಚನಾನೈಪುಣ್ಯವೇ ಕಾರಣವೆನಿಸಿದೆ. ಸಾಮಾಜಿಕರು ಸತ್ಕಾವ್ಯವನ್ನು ಕೇಳುವ ಕಾಲದಲ್ಲಿ ವನವಾಸ ಮೊದಲಾದವನ್ನು ಅನುಭವಿಸುತ್ತ ಕಣ್ಣೀರನ್ನು ಸುರಿಸಿದರೂ ಸಹ ಕವಿಯ ರಚನಾಚಮತ್ಕಾರದಿಂದ ಅವರು ಸುಖಸಾಗರದಲ್ಲಿಯೇ ಮುಳುಗುವರು. ಲೌಕಿಕವ್ಯಾಪಾರಗಳಿಗಿಂತ ಬೇರೆಯಾಗಿ ಕವಿಯ ಕಾವ್ಯನಾಟ್ಯಗಳಲ್ಲಿ ಏರ್ಪಡಿಸುವ ವಿಭಾವನ ಎಂಬ ವ್ಯಾಪಾರದಿಂದ ಲೌಕಿಕವಸ್ತುಗಳೇ ಕಾರಣಗಳೆನಿಸದೆ ಅಲೌಕಿಕವಾದ ವಿಭಾವ ಅನುಭಾವ ವ್ಯಭಿಚಾರಿಭಾವ ಎಂಬ ಶಬ್ದಗಳಿಂದ ವ್ಯವಹರಿಸಲ್ಪಡುತ್ತವೆ. ಹೀಗೆ ಲೋಕದಲ್ಲಿ ಹರಡಿರುವ ಶೋಕಹರ್ಷಗಳಿಗೆ

ಕಾರಣವೆನಿಸಿರುವ ವಸ್ತುಗಳಿಂದ ಲೌಕಿಕ ಶೋಕಹರ್ಷಗಳು ಹುಟ್ಟುತ್ತವೆ ಎಂಬುದು ಲೋಕದಲ್ಲಿ ಮಾತ್ರವೇ ಅನ್ವಯಿಸುವ ನಿಯಮ. ಕಾವ್ಯದಲ್ಲಾದರೋ ವಿಭಾವ ಮೊದಲಾದವೆಲ್ಲದರಿಂದಲೂ ಸುಖವೇ ಉಂಟಾಗುವುದೆಂಬ ನಿಯಮವಿದೆ. ಆದ್ದರಿಂದ ಇದರಲ್ಲಿ ಯಾವ ದೋಷವೂ ಅಂಟುವಂತಿಲ್ಲ.

ಹರಿಶ್ಚಂದ್ರನ ಚರಿತ್ರೆಯನ್ನು ಕಾವ್ಯದಲ್ಲಿ ಕೇಳುವಾಗಲೂ ನಾಟ್ಯದಲ್ಲಿ ನೋಡುವಾಗಲೂ ಜನರಿಗೆ ಏಕೆ ಕಣ್ಣೀರು ಬರುತ್ತದೆ ? ಎಂಬುವುದಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ರಸಾನುಭವದಿಂದ ಮನಸ್ಸು ಕರಗಿಹೋಗಿರುವ ಪ್ರಯುಕ್ತ ಜನರಿಗೆ ಆನಂದದಿಂದ ಹಾಗೆ ಕಣ್ಣೀರು ಬರುವುದು ಸಹಜ. ಹೀಗೆ ರಸಗಳೆಲ್ಲವೂ ಆನಂದಮಯವೆಂಬುದು ಸಿದ್ಧವಾದ ಮೇಲೆ ಕೆಲವರಿಗೆ ಕಾವ್ಯವನ್ನು ಓದಿದರೂ ನಾಟ್ಯವನ್ನು ನೋಡಿದರೂ ರಸವೇ ತೋರುವುದಿಲ್ಲವೆಂಬುದಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ರತಿ ಹಾಸ ಮೊದಲಾದ ಭಾವಗಳ ವಾಸನೆಯೇ ಇಲ್ಲದವರಿಗೆ ರಸಾಸ್ವಾದವೇ ಆಗುವಂತಿಲ್ಲ. ಈ ವಾಸನೆಯೂ ಸಹ ಇಂದಿನದು ಹಿಂದಿನದು ಎಂದು ಎರಡು ಬಗೆಯಾಗಿದೆ. ಇಂದಿನ ವಾಸನೆಯಿಲ್ಲದಿದ್ದರೆ ಆಗ ಕರ್ಮಠರು,ವೃದ್ಧಮೀಮಾಂಸಕರು ಇವರಿಗೂ ಸಹ ರಸಾಸ್ವಾದವಾಗಬೇಕಾದೀತು. ಹಿಂದಿನ ವಾಸನೆ ಇಲ್ಲದಿದ್ದರೆ ಆಗ ಅನುರಾಗಿಗಳಾದ ಕೆಲವರಿಗೂ ಸಹ ರಸಾಸ್ವಾದವಾಗುವುದಿಲ್ಲವೆಂಬುದು ನಮಗೆ ಕಂಡು ಬಂದಿವೆ. ಅದು ತಪ್ಪಿಹೋಗಬೇಕಾದೀತು. "ವಾಸನೆಯುಳ್ಳ ಸಭ್ಯರು ಮಾತ್ರವೇ ರಸವನ್ನು ಆಸ್ವಾದಿಸಬಲ್ಲರು. ವಾಸನೆಯಿಲ್ಲದವರು ರಂಗಸ್ಥಳದೊಳಗೆ ನಿಲ್ಲಿಸಿರುವ ಕಟ್ಟಿಗೆ, ಕಲ್ಲು, ಮರ, ಇವಕ್ಕೆ ಸದೃಶವೆನಿಸುವರು'' ಎಂದು ಧರ್ಮದತ್ತನು ಹೇಳಿದ್ದಾನೆ.

ನನು ಕಥಂ ರಾಮಾದಿರತ್ಯಾದ್ಯುದ್ಬೋಧಕಾರಣೈಃ ಸೀತಾದಿಭಿಃ ಸಾಮಾಜಿಕರತ್ಯಾದ್ಯುದ್ಬೋಧ ಇತ್ಯುಚ್ಯತೇ.—

ವ್ಯಾಪಾರೋಽಸ್ತಿ ವಿಭಾವಾದೇರ್ನಾಮ್ನಾ ಸಾಧಾರಣೀಕೃತಿಃ ||
ತತ್ಪ್ರಭಾವೇಣ ಯಸ್ಯಾಸನ್ ಪಾಥೋಧಿಪ್ಲವನಾದಯಃ |
ಪ್ರಮಾತಾ ತದಭೇದೇನ ಸ್ವಾತ್ಮಾನಂ ಪ್ರತಿಪದ್ಯತೇ ||೯||

ನನು ಕಥಂ ಮನುಷ್ಯಮಾತ್ರಸ್ಯ ಸಮುದ್ರಲಂಘನಾನೌ ಉತ್ಸಾಹೋದ್ಬೋಧ ಇತ್ಯುಚ್ಯತೇ—

ಉತ್ಸಾಹಾದಿಸಮುದ್ಬೋಧಃ ಸಾಧಾರಣ್ಯಾಭಿಮಾನತಃ ||
ನೃಣಾಮಪಿ ಸಮುದ್ರಾದಿಲಂಘನಾದ್ ನ ದುಷ್ಯತಿ ||೧೦||

ರತ್ಯಾದಯೋಽಪಿ ಸಾಧಾರಣ್ಯೇನೈವ ಪ್ರತೀಯಂತ ಇತ್ಯಾಹ—

ಸಾಧಾರಣ್ಯೇನ ರತ್ಯಾದಿರಪಿ ತದ್ವತ್ ಪ್ರತೀಯತೇ ||೧೧||

ರತ್ಯಾದೇರಪಿ ಹ್ಯಾತ್ಮಗತತ್ವೇನ ಪ್ರತೀತೌ ಸಭ್ಯಾನಾಂ ವ್ರೀಡಾತಂಕಾದಿರ್ಭವೇತ್, ಪರಗತತ್ವೇನ ತು ಅರಸ್ಯತಾಪಾತಃ.

ವಿಭಾವಾನಯೋಽಪಿ ಪ್ರಥಮತಃ ಸಾಧಾರಣ್ಯೇನ ಪ್ರತೀಯಂತ ಇತ್ಯಾಹ-
ಪರಸ್ಯ ನ ಪರಸ್ಯೇತಿ ಮಮೇತಿ ನ ಮಮೇತಿ ಚ ।
ತದಾಸ್ವಾದೇ ವಿಭಾವಾದೇಃ ಪರಿಚ್ಛೇದೋ ನ ವಿದ್ಯತೇ ॥೧೨॥

ನನು ತಥಾಪಿ ಕಥಮೇವಮಲೌಕಿಕತ್ವಮೇತೇಷಾಂ ವಿಭಾವಾದೀನಾಮಿತ್ಯುಚ್ಯತೇ—

ವಿಭಾವನಾದಿವ್ಯಾಪಾರಮಲೌಕಿಕಮುಪೇಯುಷಾಮ್ ।
ಅಲೌಕಿಕತ್ವಮೇತೇಷಾಂ ಭೂಷಣಂ ನ ತು ದೂಷಣಮ್ ॥೧೩॥

ಆದಿಶಬ್ದಾದನುಭಾವನಸಂಚಾರಣೇ. ತತ್ರ ವಿಭಾವನಂ ರತ್ಯಾದೇರ್ವಿಶೇಷೇಣ ಆಸ್ವಾದಾಂಕುರಣಯೋಗ್ಯತಾನಯನಮ್. ಅನುಭಾವನಮೇವಂಭೂತಸ್ಯ ರತ್ಯಾದೇಃ ಸಮನಂತರಮೇವ ರಸಾದಿರೂಪತಯಾ ಭಾವನಮ್. ಸಂಚಾರಣಂ ತಥಾಭೂತಸ್ಯೈವ ಸಮ್ಯಕ್ಚಾರಣಮ್.

ವಿಭಾವಾದೀನಾಂ ಯಥಾಸಂಖ್ಯಂ ಕಾರಣಕಾರ್ಯಸಹಕಾರಿತ್ವೇ ಕಥಂ ತ್ರಯಾಣಾಮೇವ ರಸಸ್ಯೋದ್ಬೋಧೇ ಕಾರಣತ್ವಮಿತ್ಯುಚ್ಯತೇ—

ಕಾರಣಕಾರ್ಯಸಂಚಾರಿರೂಪಾ ಅಪಿ ಹಿ ಲೋಕತಃ ।
ರಸೋದ್ಬೋಧೇ ವಿಭಾವಾದ್ಯಾಃ ಕಾರಣಾನ್ಯೇವ ತೇ ಮತಾಃ ॥೧೪॥

ನನು ತರ್ಹಿ ಕಥಂ ರಸಾಸ್ವಾದೇ ತೇಷಾಮೇಕಃ ಪ್ರತಿಭಾಸ ಇತ್ಯುಚ್ಯತೇ

ಪ್ರತೀಯಮಾನಃ ಪ್ರಥಮಂ ಪ್ರತ್ಯೇಕಂ ಹೇತುರುಚ್ಯತೇ ।
ತತಃ ಸಂವಲಿತಃ ಸರ್ವೋ ವಿಭಾವಾದಿಃ ಸಚೇತಸಾಮ್ ॥
ಪ್ರಪಾಣಕರಸನ್ಯಾಯಾಚ್ಚರ್ವ್ಯಮಾಣೋ ರಸೋ ಭವೇತ್ ॥೧೫॥

ಯಥಾ ಖಂಡಮರೀಚಾದೀನಾಂ ಸಮ್ಮೇಳನಾದಪೂರ್ವ ಇವ ಕಶ್ಚಿದಾಸ್ವಾದಃ ಪ್ರಪಾಣಕರಸೇ ಸಂಜಾಯತೇ, ವಿಭಾವಾದಿಸಂಬೋಧನಾದಿಹಾಪಿ ತಥೇತ್ಯರ್ಥಃ.

ಸಂಸ್ಕಾರಿಗಳಾದ ಸಭ್ಯರಿಗೆ ಮಾತ್ರವೇ ರಸಾನುಭವ ಉಂಟೆಂದು ಹೇಳಿದರೆ ರಾಮ ಮೊದಲಾದವರು ಅನುಭವಿಸುವ ರತಿ ಮೊದಲಾದ ಭಾವಗಳನ್ನು ಪ್ರಚೋದನಗೊಳಿಸುವ ಸೀತೆ ಮೊದಲಾದವರನ್ನು ನೋಡಿದ್ದರಿಂದಲೇ ಸಾಮಾಜಿಕರಲ್ಲಿ ರತಿ ಮೊದಲಾದ ಭಾವಗಳು ಹೇಗೆ ಪ್ರಕಾಶವಾಗುತ್ತವೆ? ಎಂಬುದನ್ನು ಇಲ್ಲಿ ತಿಳಿಸುತ್ತಾನೆ. ಕಾವ್ಯನಾಟ್ಯಗಳಲ್ಲಿ ಪ್ರಯೋಗಿಸುವ ವಿಭಾವ, ಅನುಭಾವ, ಸಂಚಾರಿಭಾವಗಳನ್ನು ಸಾಧಾರಣವನ್ನಾಗಿ ಮಾಡುವ ವ್ಯಾಪಾರ ಒಂದನ್ನು ಕಾವ್ಯಪ್ರಪಂಚದಲ್ಲಿ ಕವಿಯು ಕಲ್ಪಿಸಿರುವನು. ಇದರ ಪ್ರಭಾವದಿಂದ ಕಾವ್ಯವನ್ನು ಓದಿ ಮತ್ತು ಓದಿಸಿ ಕೇಳುವ ಮತ್ತು ನಾಟ್ಯವನ್ನು ನೋಡುವ ಸಾಮಾಜಿಕನು ಸೀತೆಯನ್ನು ಅಪಹರಿಸಿದ ರಾವಣನ ಕೊಲೆಗಾಗಿ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿಸಿದ ರಾಮನಿಗೂ ತನಗೂ ಭೇದವಿಲ್ಲವೆಂದು ತಿಳಿಯುವನು. ಸಾಮಾಜಿಕನಿಗೂ ರಾಮನಿಗೂ ಕಾಲದಲ್ಲಿ ಭೇದವಿದ್ದರೂ ಕವಿಯು ತನ್ನ ಪ್ರತಿಭೆ

ಯಿಂದ ಅಸಾಧಾರಣವಸ್ತುಗಳನ್ನು ಸಾಧಾರಣಗೊಳಿಸುವ ಪ್ರಯುಕ್ತ ಸಾಮಾಜಿಕನು ತನ್ನನ್ನು ರಾಮನೆಂದೇ ಭಾವಿಸುತ್ತಾನೆ. ಸ್ಫಟಿಕಮಣಿಯ ಹತ್ತಿರ ಕೆಂಪು ಹೂವಿದ್ದರೆ ಆ ಮಣಿಯೂ ಕೆಂಪಾಗಿ ಕಾಣುವಂತೆ ಸೀತೆಯು ರಾಮನ ಬಗ್ಗೆ ತೋರಿದ ರತಿಯು ಸಾಮಾಜಿಕನ ಮನಸ್ಸಿನಲ್ಲೂ ಪ್ರತಿಬಿಂಬಿಸುತ್ತದೆ.

ಹೀಗೆ ರಾಮನನ್ನು ನೋಡಿ ತಾನೂ ಅವನೂ ಒಂದೇ ಎಂದು ಭಾವಿಸಿದ ಸಾಮಾಜಿಕನಿಗೆ ಸಮುದ್ರವನ್ನು ದಾಟುವುದೇ ಮೊದಲಾದ ಅಸಾಧ್ಯವಾದ ಕಾರ್ಯಗಳಲ್ಲಿ ಉತ್ಸಾಹವು ಹೇಗೆ ಹುಟ್ಟುತ್ತದೆ ಎಂಬುದಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ಕಾವ್ಯವನ್ನು ಓದುವಾಗಲೂ ವಿಭಾವಅನುಭಾವವ್ಯಭಿಚಾರಿಭಾವಗಳಿನ್ನು ಸಾಧಾರಣಗೊಳಿಸಿದ ಪ್ರಯುಕ್ತ ಸಭ್ಯನು ತನ್ನನ್ನು ರಾಮನಿಂದ ಬೇರೆಯಲ್ಲವೆಂದು ತಿಳಿದಮೇಲೆ ಸಮುದ್ರಲಂಘನ ಮೊದಲಾದ ಅಸಾಧ್ಯಕಾರ್ಯಗಳಲ್ಲೂ ಉತ್ಸಾಹ ಮೊದಲಾದವು ಹುಟ್ಟುವುದರಲ್ಲಿ ಯಾವ ದೋಷವೂ ಇಲ್ಲ. ಪ್ರಚಂಡಸ್ವಭಾವದ ಉತ್ಸಾಹ ಮೊದಲಾದ ಸ್ಥಾಯಿಭಾವಗಳಲ್ಲಿ ವಿಭಾವ ಮೊದಲಾದುವನ್ನು ಸಾಧಾರಣಗೊಳಿಸುವುದಾಗಿ ಒಪ್ಪಿದ್ದರಿಂದ ರತಿ ಮೊದಲಾದ ಸೌಮ್ಯಭಾವಗಳನ್ನು ಸಾಧಾರಣವೆಂದೇ ಸಾಮಾಜಿಕನೂ ತಿಳಿಯುತ್ತಾನೆ, ರತಿ ಮೊದಲಾದ ಭಾವಗಳು ತನ್ನಲ್ಲಿಯೇ ಇರುವುದಾಗಿ ಸಾಮಾಜಿಕನು ತಿಳಿದರೆ ಅವರಿಗೆ ಲಜ್ಜೆ ಭಯ ಮೊದಲಾದುವು ಉಂಟಾಗುತ್ತವೆ. ಇವು ನಾಯಕನಲ್ಲಿಯೇ ಇರುವುದಾಗಿ ತಿಳಿದರೆ ಅವು ರಸವೇ ಆಗದೇಹೋಗುತ್ತವೆ.

ವಿಭಾವ ಮೊದಾದವೂ ಸಹ ರಸಾನುಭವಕ್ಕೆ ಮುಂಚೆ ಸಾಮಾಜಿಕರಿಗೆ ಸಾಧಾರಣವಾಗಿಯೇ ತಿಳಿದುಬರುತ್ತವೆ ಎಂಬುದನ್ನು ವಿವರಿಸುತ್ತಾನೆ. ಸಾಮಾಜಿಕನು ರಸವನ್ನು ಆಸ್ವಾದಿಸುವುದಕ್ಕಿಂತ ಮುಂಚೆ ರಂಗಸ್ಥಳದಲ್ಲಿ ನಟರು ಅಭಿನಯಿಸುವ ಸಮುದ್ರಲಂಘನ ಮೊದಲಾದುವು ರಾಮ ಮೊದಲಾದ ನಾಯಕರಲ್ಲಿಯೇ ಇದ್ದವು. ಈಗ ಅವನ್ನು ನೋಡುವಾಗ ಅವು ರಾಮನಲ್ಲಿ ಇಲ್ಲ; ಅವನ್ನು ನೋಡುವುದಷ್ಟೇ ತನಗೆ ಸಂಬಂಧಿಸಿದ ಕಾರ್ಯ. ಸಮುದ್ರಲಂಘನ ಮೊದಲಾದ ವ್ಯಾಪಾರಗಳು ತನ್ನಲ್ಲಿ ಇಲ್ಲ ಎಂದು ಕ್ರಿಯೆ ಮತ್ತು ಕಾಲಗಳ ಭೇದದಿಂದ ವಿಭಾವಾದಿಗಳು ತನಗಿಂತಲೂ ಬೇರೆ ಎಂಬ ಭೇದ ವಿದ್ದರೂ ಅದು ಸಾಮಾಜಿಕನಿಗೆ ನಾಟ್ಯವನ್ನು ನೋಡುವಾಗ ರಸಾನುಭವಕಾಲದಲ್ಲಿ ತೋರುವುದಿಲ್ಲ.

ಹಾಗಾದರೆ ಲೌಕಿಕವಾದ ವಿಭಾವ ಮೊದಲಾದವುಗಳಿಂದ ಅಲೌಕಿಕವಾದ ರಸವು ಹೇಗೆ ಪ್ರಕಾಶವಾಗುತ್ತದೆ ಎಂಬುದಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ಸಭ್ಯರಲ್ಲಿ ಮೊದಲು ಇಲ್ಲದೇ ಇದ್ದ ವಿಭಾವನ ಮೊದಲಾದ ವ್ಯಾಪಾರಗಳನ್ನು ರಸಾನುಭವಕ್ಕೆ ಕಾರಣವೆಂದು ಒಪ್ಪಿರುವಾಗ ವಿಭಾವಾದಿಗಳನ್ನು ಅಲೌಕಿಕವೆಂದು ಅಂಗೀಕರಿಸಿದ್ದು ರಸಾವಿರ್ಭಾವಕ್ಕೆ ಅನುಕೂಲವೇ ಹೊರತು ಪ್ರತಿಕೂಲವಲ್ಲ. ಇಲ್ಲಿ ಆದಿಶಬ್ದದಿಂದ ಅನುಭಾವನ, ಸಂಚಾರಣ ಮೊದಲಾದ ವ್ಯಾಪಾರಗಳನ್ನು ಗ್ರಹಿಸಬೇಕು.ರತ್ಯಾದಿಗಳನ್ನು

ಲೋಕವಿಲಕ್ಷಣವಾದ ರೀತಿಯಿಂದ ಸಭ್ಯರಿಗೆ ಆಹ್ಲಾದಕರವಾಗುವಂತೆ ಅನುಕೂಲ ಪಡಿಸುವುದೇ ವಿಭಾವನವ್ಯಾಪಾರ ಎನಿಸುತ್ತದೆ. ಇಂತಹ ರತ್ಯಾದಿಭಾವಗಳು ರಸ ವೆನಿಸುವಂತೆ ಮಾಡುವ ಸಾಧನವೇ ಅನುಭಾವನವ್ಯಾಪಾರವೆನಿಸುತ್ತದೆ. ಅಂತಹ ರತ್ಯಾದಿ ಭಾವಗಳು ರಸವಾಗಿ ಪರಿಣಮಿಸಲಿಕ್ಕೆ ಅನುಕೂಲವಾದ ಸನ್ನಿವೇಶವನ್ನು ವುಷ್ಟಿಗೊಳಿ ಸುವುದೇ ಸಂಚಾರಣವ್ಯಾಪಾರವೆನಿಸುವುದು.

ರಾಮನಲ್ಲಿರುವ ರತಿಗೆ ಸೀತೆ ಎಂಬ ವಿಭಾವವೇ ಕಾರಣವೆನಿಸಿರುವಳು. ಅವನಲ್ಲಿ ಕಾಣುವ ಸ್ತಂಭ, ಸ್ವೇದ ಮೊದಲಾದ ಅನುಭಾವವೇ ಕಾರ್ಯವೆನಿಸುವುದು. ಸೀತೆ ಯಲ್ಲಿರುವ ಚಾಪಲ್ಯ ಹರ್ಷ ಮೊದಲಾದ ಸಂಚಾರಿಭಾವಗಳು ರಾಮನಲ್ಲಿರುವ ರತಿಗೆ ಸಹಕಾರಿಕಾರಣವೆನಿಸಿವೆ. ಹೀಗೆ ವಿಭಾವ ಮತ್ತು ಸಂಚಾರಿಭಾವಗಳು ರತಿಯನ್ನು ರಸ ವಾಗಿ ಪರಿಣಮಿಸಲು ಕಾರಣವೆಂಬುದು ಹೊಂದುತ್ತದೆ. ಆದರೆ ರಾಮನಲ್ಲಿರುವ ಅನುಭಾವವು ರತಿಗೆ ಕಾರಣವಾಗಲಾಗದು. ಈ ಸ್ಥಿತಿಯಲ್ಲಿ ಈ ಮೂರನ್ನೂ ಕಾರಣ ವೆಂದು ಹೇಳಿರುವುದು ಹೇಗೆ ಹೊಂದಿಕೆಯಾಗುತ್ತದೆ? ಎಂದು ಆಕ್ಷೇಪವು ಬರುತ್ತದೆ. ಇದಕ್ಕೆ ಸಮಾಧಾನವನ್ನು ಇಲ್ಲಿ ತಿಳಿಸುತ್ತಾನೆ. ವಿಭಾವ, ಅನುಭಾವ, ಸಂಚಾರಿ ಬಾವಗಳ ಲೌಕಿಕದೃಷ್ಟಿಯಿಂದ ರತಿಗೆ ಕಾರಣವೂ, ಕಾರ್ಯವೂ, ಸಹಕಾರಿಯೂ ಆಗಿದ್ದರೂ ಸಾಮಾಜಿಕನಿಗೆ ರತಿಯನ್ನು ರಸವಾಗಿ ಪ್ರಕಾಶಪಡಿಸುವಾಗ ಇವೆಲ್ಲವೂ ಕಾರಣವೇ ಆಗುತ್ತವೆ. ಹೀಗೆ ವಿಭಾವಾದಿಗಳು ಕಾರಣವೂ, ರಸವು ಕಾರ್ಯವೂ ಆದರೆ ರಸಾನು ಭವಕಾಲದಲ್ಲಿ ಸಾಮಾಜಿಕನಿಗೆ ಇವೆಲ್ಲವೂ ಒಂದೇ ರಸವೆಂಬ ಜ್ಞಾನವು ಹೇಗೆ ಬರುತ್ತದೆ? ರಸಕ್ಕೂ ಅದರ ಕಾರಣವೆನಿಸಿದ ವಿಭಾವಾದಿಗಳಿಗೂ ಭೇದವಿರುವಾಗ ಸಾಮಾಜಿಕನಿಗೆ ರಸಾಸ್ವಾದಕಾಲದಲ್ಲಿ ವಿಭಾವಾದಿಗಳೆಲ್ಲವೂ ಒಂದೇ ರಸವೆಂಬ ಅಭೇದಜ್ಞಾನವು ಹೇಗೆ ಬರುತ್ತದೆ ? ಎಂಬುದೇ ಇಲ್ಲಿಯ ಆಕ್ಷೇಪ. ಇದಕ್ಕೆ ಸಮಾಧಾನವನ್ನು ಈಗ ತಿಳಿಸುತ್ತಾನೆ. ಸಭ್ಯರಿಗೆ ರಸಾನುಭವವಾಗುವ ಮುನ್ನ ವ್ಯಂಗ್ಯವಾಗಿ ತೋರುವ ವಿಭಾವಾದಿಗಳಲ್ಲಿ ಒಂದೊಂದೂ ರತಿ ಮೊದಲಾದ ಭಾವಗಳಿಗೆ ಕಾರಣವೆನಿಸಿರುತ್ತದೆ. ಆದರೆ ರತ್ಯಾದಿ ಭಾವಗಳು ರಸವಾಗಿ ಪ್ರಕಾಶವಾಗುವಾಗ ವಿಭಾವ ಮೊದಲಾದವೆಲ್ಲವೂ ಒಟ್ಟಗೆಸೇರಿಕೊಂಡು ವ್ಯಂಜನಾವೃತ್ತಿಯಿಂದ ಪಾನಕರಸದಂತೆ ಅಭಿವ್ಯಕ್ತವಾಗಿ ಸಹೃದಯರನ್ನು ಸಂತೋಷಪಡಿಸುತ್ತ ಅವರಿಗೆ ರಸವೆನ್ನಿಸುತ್ತವೆ. ಹೀಗೆ ರಸಾನುಭವಕ್ಕೆ ಮೊದಲು ಇದ್ದ ಭೇದವು ಅನುಭವಕಾಲದಲ್ಲಿ ತೋರುವುದಿಲ್ಲ. ಕಲ್ಲುಸಕ್ಕರೆ ಮೆಣಸು ಇವನ್ನು ಬೆರಸಿದ್ದರಿಂದ ಹಿಂದೆ ಇಲ್ಲದೇ ಇದ್ದ ಯಾವುದೋ ಒಂದು ಆಸ್ವಾದವು ಪಾನಕ ದಲ್ಲಿ ಕಂಡುಬರುತ್ತದೆ. ಹಾಗಯೇ ವಿಭಾವಾದಿಗಳು ಒಂದೆಡೆಗೆ ಸೇರಿದ್ದರಿಂದ ಕಾವ್ಯ ನಾಟ್ಯಗಳಲ್ಲೂ ವಿಭಾವಾದಿಗಳಿಗೂ ರಸಕ್ಕೂ ಹಿಂದೆ ಇದ್ದ ಭೇದವು ತೋರುವುದಿಲ್ಲ. ಅವು ಮೊದಲು ಒಂದೊಂದಾಗಿ ತೋರಿದರೂ ಕೊನೆಗೆ ಎಲ್ಲವೂ ಸೇರಿ ಒಂದೇ ರಸವಾಗಿ ತೋರುವುದರಲ್ಲಿ ಯಾವ ಅನೌಚಿತ್ಯವೂ ಇಲ್ಲ.

ನನು ಯದಿ ವಿಭಾವಾನುಭಾವವ್ಯಭಿಚಾರಿಭಿರ್ಮಿಲಿತೈರೇವ ರಸಸ್ತತ್ಕಥಂ ತೇಷಾ ಮೇಕಸ್ಯ ದ್ವಯೋರ್ವಾ ಸದ್ಭಾವೇಽಪಿ ಸ್ಯಾದಿತ್ಯುಚ್ಯತೇ—

ಸದ್ಭಾವಶ್ಚೇದ್ವಿಭಾವಾದೇರ್ದ್ವಯೋರೇಕಸ್ಯ ವಾ ಭವೇತ್ ।
ಝುಟಿತ್ಯನ್ಯಸಮಾಕ್ಷೇಪೇ ತದಾ ದೋಷೋ ನ ವಿದ್ಯತೇ ॥ ೧೬ ॥

ಅನ್ಯಸಮಾಕ್ಷೇಪಶ್ಚ ಪ್ರಕರಣಾದಿವಶಾತ್,

ದೀರ್ಘಾಕ್ಷಂ ಶರದಿಂದುಕಾಂತಿ ವದನಂ ಬಾಹೂ ನತಾವಂಸಯೋಃ
ಸಂಕ್ಷಿಪ್ತಂ ನಿಬಿಡೋನ್ನತಸ್ತನಭರಃ ಪಾರ್ಶ್ವೇ ಪ್ರಮೃಷ್ಟೇ ಇವ ।
ಮಧ್ಯಃ ಪಾಣಿಮಿತೋ ನಿತಂಬಿ ಜಘನಂ ಪಾದಾವುದಗ್ರಾಂಗುಲೀ
ಛಂದೋ ನರ್ತಯಿತುರ್ಯಥೈವ ಮನಸಃ ಸೃಷ್ಟಂ ತಥಾ ಸ್ಯಾದ್ವಪುಃ ॥

ಅತ್ರ ಮಾಲವಿಕಾಮಭಿಲಷತೋಽಗ್ನಿಮಿತ್ರಸ್ಯ ಮಾಲವಿಕಾರೂಪವಿಭಾವ ಮಾತ್ರವರ್ಣನೇಽಪಿ ಸಂಚಾರಿಣಾಂ ಔತ್ಸುಕ್ಯಾದೀನಾಂ ಅನುಭಾವಾನಾಂ ಚ ನಯನ ವಿಸ್ಫಾರಾದೀನಾಂ ಔಚಿತ್ಯಾದೇವಾಕ್ಷೇಪಃ. ಏವಮನ್ಯಾಕ್ಷೇಪೇಽಪ್ಯೂಹ್ಯಮ್.

'ಅನುಕಾರ್ಯಗತೋ ರಸಃ' ಇತಿ ವದತಃ ಪ್ರತ್ಯಾಹ—

ಪಾರಿಮಿತ್ಯಾಲ್ಲೌಕಿಕತ್ವಾತ್ ಸಾಂತರಾಯತಯಾ ತಥಾ ।
ಅನುಕಾರ್ಯಸ್ಯ ರತ್ಯಾದೇರುದ್ಬೋಧೋ ನ ರಸೋ ಭವೇತ್ ॥ ೧೭ ॥

ಸೀತಾದಿದರ್ಶನಾದಿಜೋ ರಾಮಾದಿರತ್ಯಾದ್ಯುದ್ಬೋಧೋ ಹಿ ಪರಿಮಿತೋ ಲೌಕಿಕೋ ನಾಟ್ಯಕಾವ್ಯದರ್ಶನಾದೇಃ ಸಾಂತರಾಯಶ್ಚ, ತಸ್ಮಾತ್ಕಥಂ ರಸರೂಪ ತಾಮಿಯೇತ್, ರಸಸ್ಯೈತತ್ತ್ರಿತಯವಿಲಕ್ಷಣಧರ್ಮಕತ್ವಾತ್.

ಅನುಕರ್ತೃಗತತ್ವಂ ಚಾಸ್ಯ ನಿರಸ್ಯತಿ—

ಶಿಕ್ಷಾಭ್ಯಾಸಾದಿಮಾತ್ರೇಣ ರಾಘವಾದೇಃ ಸ್ವರೂಪತಾಮ್ ।
ದರ್ಶಯನ್ ನರ್ತಕೋ ನೈವ ರಸಸ್ಯಾಸ್ವಾದಕೋ ಭವೇತ್ ॥ ೧೮ ॥
ಕಿಂಚ ಕಾವ್ಯಾರ್ಥಭಾವನೇನಾಯಮಪಿ ಸಭ್ಯಪದಾಸ್ಪದಮ್ ॥ ೧೯ ॥

ಯದಿ ಪುನರ್ನಟೋಽಪಿ ಕಾವ್ಯಾರ್ಥಭಾವನಯಾ ರಾಮಾದಿಸ್ವರೂಪತಾ ಮಾತ್ಮನೋ ದರ್ಶಯೇತ್, ತದಾ ಸೋಽಪಿ ಸಭ್ಯಮಧ್ಯ ಏವ ಗಣ್ಯತೇ.

ನಾಯಂ ಜ್ಞಾಪ್ಯಃ ಸ್ವಸತ್ತಾಯಾಂ ಪ್ರತೀತ್ಯವ್ಯಭಿಚಾರತಃ ॥ ೨೦ ॥

ಯೋ ಹಿ ಜ್ಞಾಪ್ಯೋ ಘಟಾದಿಃ ಸಃ ಸನ್ನಪಿ ಕದಾಚಿದಜ್ಞಾತೋ ಭವತಿ. ನ ಹ್ಯಯಂ ತಥಾ, ಪ್ರತೀತಿಮಂತರೇಣಾಭಾವಾತ್.

ಯಸ್ಮಾದೇಷ ವಿಭಾವಾದಿಸಮೂಹಾಲಂಬನಾತ್ಮಕಃ ।
ತಸ್ಮಾನ್ನ ಕಾರ್ಯಃ ॥ ೨೧ ॥

ಯದಿ ರಸಃ ಕಾರ್ಯಃ ಸ್ಯಾತ್, ತದಾ ವಿಭಾವಾದಿಜ್ಞಾನಕಾರಣಕ ಏವ ಸ್ಯಾತ್, ತತಶ್ಚ ರಸಪ್ರತೀತಿಕಾಲೇ ವಿಭಾವಾದಯೋ ನ ಪ್ರತೀಯೇರನ್. ಕಾರಣ

ಜ್ಞಾನತತ್ಕಾರ್ಯಜ್ಞಾನಯೋರ್ಯುಗಪದದರ್ಶನಾತ್. ನಹಿ ಚಂದನಸ್ಪರ್ಶಜ್ಞಾನಂ ತಜ್ಜನ್ಯಸುಖಜ್ಞಾನಂ ಚೈಕದಾ ಸಂಭವತಿ. ರಸಸ್ಯ ಚ ವಿಭಾವಾದಿಸಮೂಹಾಲಂಬನಾತ್ಮಕತಯೈವ ಪ್ರತೀತೇರ್ನ ವಿಭಾವಾದಿಜ್ಞಾನಕಾರಣಕತ್ವಮಿತ್ಯಭಿಪ್ರಾಯಃ.

ನೋ ನಿತ್ಯಃ ಪೂರ್ವಸಂವೇದನೋಜ್ಝಿತಃ ।
ಅಸಂವೇದನಕಾಲೇ ಹಿ ನ ಭಾವೋಽಪ್ಯಸ್ಯ ವಿದ್ಯತೇ ॥ ೨೨ ॥

ನ ಖಲು ನಿತ್ಯಸ್ಯ ವಸ್ತುನೋಽಸಂವೇದನಕಾಲೇಽಸಂಭವಃ—

ನಾಪಿ ಭವಿಷ್ಯನ್ ಸಾಕ್ಷಾದಾನಂದಮಯಸ್ವಪ್ರಕಾಶರೂಪತ್ವಾತ್ ।
ಕಾವ್ಯಜ್ಞಾನವಿಲಕ್ಷಣಭಾವಾನ್ನೋ ವರ್ತಮಾನೋಽಪಿ ॥ ೨೩ ॥
ವಿಭಾವಾದಿಪರಾಮರ್ಶವಿಷಯತ್ವಾತ್ ನ ಚೇತಸಾಮ್ ।
ಪರಾನಂದಮಯತ್ವೇನ ಸಂವೇದ್ಯತ್ವಾದಪಿ ಸ್ಫುಟಮ್ ।
ನ ನಿರ್ವಿಕಲ್ಪಕಂ ಜ್ಞಾನಂ ತಸ್ಯ ಗ್ರಾಹಕಮಿಷ್ಯತೇ ॥ ೨೪ ॥
ತಥಾಭಿಲಾಪಸಂಸರ್ಗಯೋಗ್ಯತ್ವವಿರಹಾನ್ನ ಚ ।
ಸವಿಕಲ್ಪಕಸಂವೇದ್ಯಃ ॥ ೨೫ ॥

ಸವಿಕಲ್ಪಕಜ್ಞಾನಸಂವೇದ್ಯಾನಾಂ ಹಿ ವಚನಪ್ರಯೋಗಯೋಗ್ಯತಾ ; ನ ತು ತಸಸ್ಯ ತಥಾ.

ಸಾಕ್ಷಾತ್ಕಾರತಯಾ ನ ಚ ।
ಪರೋಕ್ಷಸ್ತತ್ಪ್ರಕಾಶೋ ನಾಪರೋಕ್ಷಃ ಶಬ್ದಸಂಭವಾತ್ ॥ ೨೬ ॥

ತತ್ಕಥಯ ಕೀದೃಗಸ್ಯ ತತ್ತ್ವಮೇವಮಶ್ರುತಾದೃಷ್ಟಪೂರ್ವನಿರೂಪಣಪ್ರಕಾರಸ್ಯೇತ್ಯಾಹ—ತಸ್ಮಾದಲೌಕಿಕಃ ಸ್ತ್ಯತಂ ವೇದ್ಯಃ ಸಹೃದಯೈರಯಮ್ । ೨೭ ॥

ಹೀಗೆ ವಿಭಾವ, ಅನುಭಾವ, ಸಂಚಾರಿಭಾವ ಈ ಮೂರೂ ಸೇರಿದ್ದರಿಂದ ರತ್ಯಾದಿಭಾವಗಳು ರಸವಾಗಿ ಪರಿಣಮಿಸುವುದಾದರೆ ಅವುಗಳಲ್ಲಿ ಒಂದು, ಎರಡು ಇದ್ದು ಬೇರೊಂದು ಇಲ್ಲದಿದ್ದರೆ ರಸವು ಪ್ರಕಾಶವಾಗದೆ ಹೋಗುವುದಿಲ್ಲವೆ? ದಂಡ ಚಕ್ರ ಮೊದಲಾದ ಮುಖ್ಯಕಾರಣಗಳು, ಸಹಕಾರಿಕಾರಣಗಳು ಇವುಗಳ ಮಧ್ಯದಲ್ಲಿ ಎರಡಾಗಲೀ ಒಂದಾಗಲೀ ಇದ್ದರೆ ಅಲ್ಲಿ ಇಲ್ಲದೇಇರುವುದೊಂದನ್ನು ಆ ಕೂಡಲೇ ಆಕ್ಷೇಪಿಸಿಕೊಳ್ಳಬಹುದಾದ್ದರಿಂದ ರಸವು ಪ್ರಕಾಶವಾಗಲಿಲ್ಲವೆಂಬ ಆಶಂಕೆಗೆ ಅವಕಾಶವಿಲ್ಲ. ಪ್ರಕರಣಕ್ಕೆ ಅನುಗುಣವಾಗಿ (ವ್ಯಂಜನೆಯಿಂದ) ವಿಭಾವ ಮೊದಲಾದುವುಗಳಲ್ಲಿ ಬಂದು ಇದ್ದರೂ ಉಳಿದವನ್ನು ತಿಳಿಯಲಿಕ್ಕೆ ಅವಕಾಶವಿದ್ದೇ ಇದೆ. ಮೂಲವಿಕಾಗ್ನಿಮಿತ್ರ ನಾಟಕದಲ್ಲಿ ಮೂಲವಿಕೆಯುಕ್ತ ನೃತ್ಯವನ್ನಾರಂಭಿಸುಸಲು ಅಗ್ನಿಮಿತ್ರನು ಆಕೆಯನ್ನು ವರ್ಣಿಸುವಾಗ ಬಂದಿರುವ ಈ ಪದ್ಯದಲ್ಲಿ ಈ ಅಂಶವನ್ನು ಕಾಣಬಹುದು. " ಈಕೆಯ ಮುಖದಲ್ಲಿ ವಿಶಾಲವಾದ ಕಣ್ಣುಗಳಿವೆ ಮತ್ತು ಶರತ್ಕಾಲದ ಚಂದ್ರನಿಗೆ ಸದೃಶವಾದ ಕಾಂತಿ ಇದೆ. ತೋಳುಗಳು ಭುಜಗಳಲ್ಲಿ ಬಗ್ಗಿವೆ. (ಗಂಡಸಿನ ಹೆಗಲಿನಂತೆ ಈಕೆಯ

ಭುಜದ ಮೇಲ್ಭಾಗವು ಎತ್ತರವಾಗಿಲ್ಲ) ವಕ್ಷಸ್ಥಳದಲ್ಲಿ ಒತ್ತಾಗಿಯೂ ದಪ್ಪನಾಗಿಯೂ ಇರುವ ಸ್ತನಗಳಿವೆ. ಹೊಟ್ಟೆಯ ಪಕ್ಕಗಳೆರಡು ಒಬ್ಬನ ಕೈಯಿಂದ ಸವರಿದಂತೆ ಕಾಣುತ್ತಿವೆ. ಕಟಿಪ್ರದೇಶವು ಮುಷ್ಟಿಯಿಂದ ಅಳೆಯುವಷ್ಟು ತೆಳ್ಳಗಿದೆ. ತೊಡೆಗಳು ವಿಶಾಲವಾದ ಸೊಂಟದ ಹಿಂಭಾಗದಿಂದೊಡಗೂಡಿವೆ. ಪಾದಗಳಲ್ಲಿ ಉನ್ನತವಾದ ಬೆರಳುಗಳಿವೆ. ನಾಟ್ಯಾಚಾರ್ಯನ ಮನಸ್ಸಿಗೆ ಇಷ್ಟವಾಗುವಂತೆ ಈಕೆಯ ಶರೀರವು ನರ್ತನಕ್ಕೆ ಅನುಗುಣವಾಗಿ ಹೊಂದಿಕೊಂಡಿದೆ." ಇಲ್ಲಿ ಮಾಲವಿಕೆಯನ್ನು ಬಯಸುವ ಅಗ್ನಿಮಿತ್ರನಿಗೆ ಮಾಲವಿಕೆ ಎಂಬ ವಿಭಾವವನ್ನು ಮಾತ್ರವೇ ವರ್ಣಿಸಿದ್ದರೂ ಉತ್ಸಾಹ ಮೊದಲಾದ ಸಂಚಾರಿಭಾವಗಳೂ, ನೇತ್ರವೈಶಾಲ್ಯ ಮೊದವಾದ ಅನುಭಾವಗಳೂ ಸಂದರ್ಭಕ್ಕನುಗುಣವಾಗಿ ಸಹಜವಾಗಿಯೇ ತೋರುತ್ತವೆ.

ಅನುಕರಣಾರ್ಹರೆನಿಸಿವ ರಾಮ ಮೊದಲಾದವರಲ್ಲಿ ಸೀತೆ ಮೊದಲಾದವರು ವ್ಯಕ್ತಪಡಿಸುವ ರತಿಯೇ ರಸವೆನಿಸುತ್ತದೆ ಎಂಬ ಮತವನ್ನು ಇಲ್ಲಿ ನಿರಾಕರಿಸುತ್ತಾನೆ. ಆ ರತಿಯು ಅನುಕರಣಾರ್ಹನಾದ ಒಬ್ಬ ವ್ಯಕ್ತಿಗೆ ಮಾತ್ರವೇ ಸಂಬಂಧಿಸಿದ್ದರಿಂದಲೂ, ವಾಸ್ತವಪ್ರಪಂಚವಲ್ಲಿ ಕಾಣುವಂತೆಯೇ ಅದು ಕಂಡುಬರುವುದರಿಂದಲೂ, ಅದಕ್ಕೆ ಅನೇಕ ಅಡಚಣೆಗಳಿರುವುದರಿಂದಲೂ ಸಂಕುಚಿತವೆನಿಸುವುದು. ಹೀಗೆ ಸೀತೆ ಮೊದಲಾದ ನಾಯಿಕೆಯರನ್ನು ನೋಡಿವಾಗಲೂ, ಅವರ ಗುಣಗಳನ್ನು ಕೇಳಿದಾಗಲೂ ರಾಮ ಮೊದಲಾದ ನಾಯಕರಿಗೆ ತೋರುವ ರತಿ ಮೊದಲಾದ ಭಾವಗಳು ಆಯಾವ್ಯಕ್ತಿಗಳಿಗೆ ಮಾತ್ರವೇ ಸಂಬಂಧಿಸುವುದರಿಂದ ಸಂಕೋಚಗೊಳ್ಳುವ ಪ್ರಯುಕ್ತ ಅದರಲ್ಲಿ ಚಮತ್ಕಾರವಿಲ್ಲವ ಪ್ರಯುಕ್ತ ಅದು ಕೇವಲ ಲೌಕಿಕವೆನಿಸುವುದೇ ಹೊರತು ಅಲೌಕಿಕವೆನಿಸುವುದಿಲ್ಲ. ಇದೂ ಅಲ್ಲದೆ, ನಾಟ್ಯಗಳನ್ನು ನೋಡುವಾಗಲೂ, ಕಾವ್ಯಗಳನ್ನು ಕೇಳುವಾಗಲೂ ಅನೇಕ ಅಡಚಣೆಗಳು ಸಂಭವಿಸುವುದು ಸಹಜ. ಆದ್ದರಿಂದ ಅನುಕರಣೀಯ ವ್ಯಕ್ತಿಗಳಲ್ಲಿರುವ ರತ್ಯಾದಿಭಾವಗಳು ರಸವೆನಿಸಲಾರವು. ರಸವು ಎಂದಿಗೂ ಪರಿಮಿತವೂ ಲೌಕಿಕವೂ, ಆತಂಕಪೂರ್ಣವೂ ಆಗಲಾರದು. ಅದಕ್ಕೆ ವಿರುದ್ಧವಾಗಿ ಅದು ಅಪರಿಮಿತವೂ, ಅಲೌಕಿಕವೂ, ನಿರಾತಂಕವೂ ಆಗಿರುತ್ತದೆ. ಆದ್ದರಿಂದ ಅನುಕರಣೀಯ ನಾಯಕನಲ್ಲಿರುವ ರತಿಯು ರಸವಾಗಲಾರದು.

ಅನುಕರಣಮಾಡುವ ನಟನಲ್ಲಿಯೇ ರಸವಿರುತ್ತದೆ ಎಂಬುದನ್ನು ಈಗ ನಿರಾಕರಿಸುತ್ತಾನೆ. ರಾಮ ಮೊದಲಾದ ನಾಯಕರು ಹಿಂದೆ ಅನುಭವಿಸಿದ್ದ ವನವಾಸ ಮೊದಲಾದ ವ್ಯಾಪಾರಗಳನ್ನು ನರ್ತಕನು ಅಭಿನಯಿಸುವುದರಿಂದ ಅವನು ರಸವನ್ನು ಅನುಭವಿಸಲಾರನು. ಅಭಿನಯವನ್ನು ಕಲಿಯುವುದರಲ್ಲಿಯೇ ಆಸಕ್ತನಾಗಿರುವ ನಟನಿಗೆ ಕಾವ್ಯಾರ್ಥವನ್ನು ತಿಳಿಯುವ ಇಚ್ಛೆ ಇರುವುದಿಲ್ಲ. ಆದ್ದರಿಂದ ಅವನು ರಸವನ್ನು ಅನುಭವಿಸಲಾರನು. ಇದೂ ಅಲ್ಲದೆ, ಅವನು ಅನುಭವಿಸುವುದರ ಜೊತೆಗೆ ಕಾವ್ಯದ ಅರ್ಥವನ್ನು ತಿಳಿಯುವುದಾದರೆ ಅವನು ಸಾಮಾಜಿಕರಲ್ಲಿ ಒಬ್ಬನೇ ಆಗಬೇಕಾಗುವುದು.

ಅವನೂ ಸಹ ಕಾವ್ಯದಲ್ಲಿ ವರ್ಣಿತವಾದ ಅಂಶಗಳನ್ನು ಗ್ರಹಿಸಿ ರಾಮ ಮೊದಲಾದ ನಾಯಕರಂತೆ ನಟಿಸಿದರೆ ಆಗ ಅವನೂ ಸಭ್ಯನೇ ಆಗಬೇಕಾದೀತು. ಅವನು ಅಭಿನೇತೃವಾದ್ದರಿಂದ ಸಭ್ಯನಾಗಲಾರನು. ಹೀಗೆ ಅಭಿನೇತೃವಿನಲ್ಲಿ ರಸವಿರುವುದಿಲ್ಲವೆಂಬುದು ಸ್ಪಷ್ಟವಾಯಿತು.

ರಸವು ತನ್ನನ್ನು ಪ್ರಕಾಶಗೊಳಿಸಲು ಬೇರೊಂದು ಸಾಮಗ್ರಿಯನ್ನು ಅಪೇಕ್ಷಿಸದೆ ತಾನಾಗಿಯೇ ತನ್ನಿಂದಲೇ ಪ್ರಕಾಶವಾಗುವುದೆಂಬುದನ್ನು ಸ್ಥಾಪಿಸಲು ಅವರಲ್ಲಿ ಬೇರೆ ಧರ್ಮಗಳ ಸಂಪರ್ಕವಿಲ್ಲವೆಂಬುದನ್ನು ತಿಳಿಸುತ್ತಾನೆ. ಇದು ತಾನಿರುವುದಕ್ಕೆ ಬೇರೆ ಯಾವ ಸಾಧನವನ್ನೂ ಅಪೇಕ್ಷಿಸದೆ, ಅನುಭವಕಾಲದಲ್ಲಿ ಮಾತ್ರವೇ ಸಾಮಾಜಿಕರಿಗೆ ಅವರವರ ಮನಸ್ಸಿನಲ್ಲಿಯೇ ಗೋಚರವಾಗುವ ಪ್ರಯುಕ್ತ ಇದು ಜ್ಞಾಪ್ಯವೆನಿಸಲಾರದು. ಇವನ್ನು ಜ್ಞಾಪಿಸಲು ಬೇರೊಂದು ಸಾಧನವೇ ಬೇಕಾಗಿಲ್ಲ. ಲೋಕದಲ್ಲಿ ತಿಳಿಯಬೇಕಾದ ಗಡಿಗೆ ಮೊದಲಾದ ವಸ್ತುಗಳು ಇದ್ದರೂ ಸಹ ತಾವಾಗಿಯೇ ತಿಳಿದುಬರುವುದಿಲ್ಲ. ಅವು ಅಲ್ಲಿವೆ ಎಂಬುದನ್ನು ಜ್ಞಾಪಿಸಲು ದೀಪವು ಬೇಕು. ಆದರೆ ರಸವು ಮಾತ್ರ ಪ್ರಕಾಶವಾಗದೇ ಇರುವ ಕಾಲದಲ್ಲಿ ಇರುವುದೇ ಇಲ್ಲ. ರಸವಿದ್ದಲ್ಲಿ ಸಹೃದಯರಿಗೆ ಅನುಭವಕ್ಕೆ ಒಂದೇ ಬರುವುದು. ಇದನ್ನು ಬೇರೆ ಯಾರೂ ಸಭ್ಯರಿಗೆ ಜ್ಞಾಪಿಸಬೇಕಾಗಿಲ್ಲ.

ಇದು ವಿಭಾವ ಅನುಭಾವ ವ್ಯಭಿಚಾರಿಭಾವಗಳ ಸಮೂಹವೆನಿಸಿದ್ದರಿಂದ ಯಾವುದರಿಂದಲೂ ಹುಟ್ಟದೇ ಇರುವ ಪ್ರಯುಕ್ತ ಇದು ಕಾರ್ಯವೆನಿಸಲಾರದು. ಇದು ವಿಭಾವಾದಿಗಳ ಜ್ಞಾನದಿಂದ ಹುಟ್ಟುವುದಿಲ್ಲ. ರಸವು ಕಾರ್ಯವೆನಿಸಿದ್ದರೆ ವಿಭಾವಾದಿಗಳ ಜ್ಞಾನವು ಕಾರಣವಾಗುತ್ತಿತ್ತು; ಅದರಿಂದಲೇ ರಸವು ಹುಟ್ಟಬೇಕಾಗಿತ್ತು; ರಸವಿರುವ ಕಾಲದಲ್ಲಿ ವಿಭಾವಾದಿಗಳು ತೋರದೇ ಹೋಗಬೇಕಾಗಿತ್ತು. ಯಾಕೆಂದರೆ ಕಾರಣಗಳ ಜ್ಞಾನವೂ ಅವುಗಳಿಂದ ಹುಟ್ಟುವ ಕಾರ್ಯದ ಜ್ಞಾನವೂ ಏಕ ಕಾಲದಲ್ಲಿ ಇರುವುದಿಲ್ಲ. ಕಾರ್ಯವಾಗುವಕಾಲಕ್ಕೆ ನಿಯತವಾಗಿ ಹಿಂದಿನ ಗಳಿಗೆಯಲ್ಲಿಯೇ ಕಾರಣವಿರಬೇಕೆಂಬ ನಿಯಮವಿದೆ. ಶ್ರೀಗಂಧವನ್ನು ಹಚ್ಚಿಕೊಂಡರೆ ಸುಖವಾಗುತ್ತದೆ. ಆದರೆ ಸುಖದ ಅರಿವು ಮತ್ತು ಶ್ರೀಗಂಧ ಸ್ಪರ್ಶಜ್ಞಾನವೂ ಒಟ್ಟಿಗೆ ಒಂದೇ ಕಾಲದಲ್ಲಿ ಸಂಭವಿಸುವುದಿಲ್ಲ. ಆದರೆ ರಸವು ವಿಭಾವಾದಿಸಮೂಹರೂಪವೇ ಆದ್ದರಿಂದ ಅವುಗಳ ಜ್ಞಾನವು ರಸಕ್ಕೆ ಕಾರಣವೆನಿಸಲಾರದು. ವಿಭಾವಾದಿಗಳ ಜ್ಞಾನವೇ ರಸವೆನಿಸುವ ಪ್ರಯುಕ್ತ ಜ್ಞಾನವು ರಸಕ್ಕೆ ಕಾರಣವೆನಿಸಲಾರದು. ತನಗೆ ತಾನೇ ಕಾರ್ಯವೂ ಕಾರಣವೂ ಆಗುವುದೆಂಬುದು ಸಂಭವಿಸುವುದಿಲ್ಲ. ಆದ್ದರಿಂದ ರಸವು ವಿಭಾವಾದಿಗಳ ಜ್ಞಾನದಿಂದ ಹುಟ್ಟುವುದಿಲ್ಲ.

ಹಾಗಾದರೆ ಆಕಾಶದಂತೆ ರಸವು ನಿತ್ಯವೆನಿಸಲಿ ಎಂಬುದನ್ನು ಇಲ್ಲಿ ನಿರಾಕರಿಸುತ್ತಾನೆ. ರಸಾನುಭವಕ್ಕಿಂತಲೂ ಹಿಂದೆ ಇದ್ದ ಜ್ಞಾನದ ಸಂಪರ್ಕವೇ ಇಲ್ಲದ ಪ್ರಯುಕ್ತ ರಸವು ನಿತ್ಯವೆನಿಸಲಾರದು. ಸಾಮಾಜಿಕನು ರಸವನ್ನು ಅನುಭವಿಸದೇ ಇರುವ

ಕಾಲದಲ್ಲಿ ಅದು ಇರುವುದೇ ಇಲ್ಲ. ನಿತ್ಯವಾದ ವಸ್ತುವನ್ನು ಅದರ ಅರಿವು ಆಗದೇ ಇರುವ ಕಾಲದಲ್ಲೂ ಇಲ್ಲವೆಂದು ಹೇಳಲಿಕ್ಕೆ ಆಗುವುದಿಲ್ಲ. ರಸವು ಅನುಭವಕ್ಕೆ ಮೊದಲು ಇಲ್ಲದೇ ಇರುವ ಪ್ರಯುಕ್ತ ನಿತ್ಯವೆನಿಸಲಾರದು. ಸಭ್ಯರಿಗೆ ಕಾವ್ಯವನ್ನು ಕೇಳಿದಾಗಲೂ ನಾಟ್ಯವನ್ನು ನೋಡಿದಾಗಲೂ ರಸವು ಅನುಭವಗೋಚರವಾಗುವುದೇ ಹೊರತು ರಂಗಸ್ಥಳದಿಂದ ಎದ್ದು ಹೋಗಿ ಹೊರಗೆ ತಿರುಗಾಡುವಾಗ ಅದರ ಅನುಭವವಾಗುವಂತಿಲ್ಲ. ಆದ್ದರಿಂದ ರಸವು ನಿತ್ಯವಲ್ಲ. ಅದು ನಿತ್ಯವೆನಿಸಿದ್ದರೆ, ಅದು ಹಿಂದೆ ಈಗ ಮುಂದೆ ಯಾವಾಗಲೂ ಇದ್ದೇ ಇರಬೇಕಾಗುತ್ತಿತ್ತು. ರಸವು ವ್ಯಕ್ತವಾಗುವ ಕಾಲದಲ್ಲಿ ಮಾತ್ರವೇ ಇದ್ದು ಬೇರೆ ಕಾಲಗಳಲ್ಲಿ ಇಲ್ಲದೇ ಇರುವ ಪ್ರಯುಕ್ತ ನಿತ್ಯವೆನಿಸಲಾರದು.

ರಸವು ಅನುಭವಕಾಲದಲ್ಲಿ ಮಾತ್ರವೇ ಇದ್ದು ಸ್ವಪ್ರಕಾಶವೂ ಆನಂದಮಯವೂ ಆಗಿರುವುದರಿಂದ ಕಾವ್ಯನಾಟ್ಯಗಳನ್ನು ನೋಡಿ ಕೇಳಿಯಾದಮೇಲೆ ಮುಂದೆ ಯಾವಾಗಲೂ ಅನುಭವಕ್ಕೆ ಬರತಕ್ಕದ್ದೆಂದು ಹೇಳಲಿಕ್ಕೂ ಆಗುವುದಿಲ್ಲ. ಹೀಗೆ ಯಾವುದರ ಕಾರ್ಯವೂ ಅಲ್ಲದೆ ಬೇರೊಂದು ಸಾಧನದಿಂದ ತಿಳಿಯಲ್ಪಡದ ಪ್ರಯುಕ್ತ ಜ್ಞಾಪ್ಯವೂ ಅಲ್ಲದೆ ಇರುವುದರಿಂದ ಇದು ವರ್ತಮಾನಕಾಲಕ್ಕೆ ಸಂಬಂಧಿಸಿಯೂ ಇಲ್ಲ. ಇದು ಗಡಿಗೆಯಂತೆ ಸಿದ್ಧವಾದ ವಸ್ತುವಾಗಿದ್ದರೆ ಒಂದೆಡೆ ಇದ್ದು ಈಗ ವರ್ತಮಾನ ಕಾಲದಲ್ಲಿ ಅನುಭವಕ್ಕೆ ಬರುತ್ತಿತ್ತು. ಗಡಿಗೆಯಂತೆ ಇದು ಕಾರ್ಯವೂ ಅಲ್ಲ; ಆಕಾಶದಂತೆ ಜ್ಞಾಪ್ಯವೂ ಅಲ್ಲ. ಆದ್ದರಿಂದ ತತ್ಕಾಲದಲ್ಲಿ ಮಾತ್ರವೇ ಅದು ಇರುವಂತಹ ವಸ್ತುವಲ್ಲ. ಹಾಗಾದರೆ ಇದು ನಿರ್ವಿಕಲ್ಪಕಜ್ಞಾನಕ್ಕೆ ವಿಷಯವಾಗಲೆಂದರೆ ಅದೂ ಹೊಂದುವುದಿಲ್ಲ. ಯಾವ ಪ್ರಕಾರವಾಗಲೀ ವಿಶೇಷವಾಗಲೀ ಇಲ್ಲದೇ ಇರುವ ಜ್ಞಾನವೇ ನಿರ್ವಿಕಲ್ಪಕವೆನಿಸುವುದು. ರಸಕ್ಕಾದರೋ ಪ್ರಕಾರವಿಶೇಷಗಳಿರುವುದರಿಂದ ಅದು ನಿರ್ವಿಕಲ್ಪಕವೆನಿಸಲಾರದು. ಇದು ವಿಭಾವಾದಿಜ್ಞಾನರೂಪವೂ, ಪರಮಾನಂದಮಯವೂ ಆಗಿರುವುದರಿಂದ ಇದರಲ್ಲಿ ಪ್ರಕಾರವಿಶೇಷ್ಯಗಳು ಇರುವುದು ಸಹಜವೆನಿಸಿದೆ. ಹಾಗಾದರೆ ಇದು ಸವಿಕಲ್ಪಕಜ್ಞಾನಕ್ಕೆ ವಿಷಯವಾಗಲಿ ಎಂದರೆ ಅದೂ ಹೊಂದುವುದಿಲ್ಲ. ಸವಿಕಲ್ಪಕಜ್ಞಾನದಿಂದ ತಿಳಿದು ಬರುವ ವಸ್ತುಗಳು ಒಬ್ಬನ ಬಾಯಿಂದ ಹೊರಡುವ ಮಾತುಗಳ ಮೂಲಕ ಪ್ರಯೋಗಕ್ಕೆ ಬರುತ್ತವೆ. ರಸವಾದರೋ ಹಾಗೆ ಯಾವ ಮಾತಿನಿಂದಲೂ ಪ್ರಕಟವಾಗುವಂತಿಲ್ಲ. ಆದ್ದರಿಂದ ಇದು ಸವಿಕಲ್ಪಕಜ್ಞಾನಕ್ಕೆ ವಿಷಯವಾಗಲಾರದು. ಇವನ್ನು ಸಹೃದಯರು ಇಲ್ಲಿ ಪ್ರತ್ಯಕ್ಷವಾಗಿ ಮನಸ್ಸಿನಲ್ಲಿ ಅನುಭವಿಸುವರಾದ್ದರಿಂದ ಇದು ಪರೋಕ್ಷವೆನಿಸಲಾರದು. ಹಾಗೆಯೇ ಕೇವಲ ಕಾವ್ಯವೆಂಬ ಶಬ್ದದಿಂದಲೇ ಇದು ಪ್ರಕಾಶವಾಗುವ ಪ್ರಯುಕ್ತ ಪ್ರತ್ಯಕ್ಷವೂ ಆಗುವಂತಿಲ್ಲ. ಶಬ್ದರೂಪವಾದ ಕಾವ್ಯವನ್ನು ಓದಿ ಕೇಳಿ ತಿಳಿದಾಗಲೇ ರಸವು ಅನುಭವಗೋಚರವಾಗುವುದರಿಂದ ಇದು ಪ್ರತ್ಯಕ್ಷವೂ ಅಲ್ಲ, ಹಾಗಾದರೆ ಇಂತಹ ವಿಚಿತ್ರವಾದ ರಸವನ್ನು ನಿರೂಪಿಸುವ ರೀತಿಯನ್ನು ಹಿಂದೆ ಎಂದೂ ಯಾರೂ ಕೇಳದೆ, ನೋಡದೆ ಇರುವ ಪ್ರಯುಕ್ತ ಇದರ ಸ್ವರೂಪ ಹೇಗಿದೆ ? ಎಂದು ಕೇಳಿದರೆ ಅದನ್ನು

ತಿಳಿಸುತ್ತಾನೆ. ಇದು ಕೇವಲ ಅಲೌಕಿಕವೆನಿಸಿ ಸಹೃದಯರಿಗೆ ತಿಳಿದುಬರುವಂತಹ ದೆಂದು ಇದರಿಂದ ತಿಳಿಸಿದಂತಾಯಿತು.

ತತ್ ಕಿಂ ಪುನಃ ಪ್ರಮಾಣಂ ತಸ್ಯ ಸದ್ಭಾವೇ ಇತ್ಯಾಹ—

ಪ್ರಮಾಣಂ ಚರ್ವಣೈವಾತ್ರ ಸ್ವಾಭಿನ್ನೇ ವಿದುಷಾಂ ಮತಮ್ ॥ ೨೮ ॥

ಚರ್ವಣಾ ಆಸ್ವಾದನಮ್."ತತ್ರ ಸ್ವಾದಃ ಕಾವ್ಯಾರ್ಥಸಂಭೋಗಾದಾತ್ಮಾನಂದ ಸಮುದ್ಭವಃ" ಇತ್ಯುಕ್ತಪ್ರಕಾರಕಮ್.

ನನು ಯದಿ ರಸೋ ನ ಕಾರ್ಯಸ್ತತ್ಕಥಂ ಮಹರ್ಷಿಣಾ "ವಿಭಾವಾನು ಭಾವವ್ಯಭಿಚಾರಿಸಂಯೋಗಾದ್ರಸನಿಷ್ಪತ್ತಿಃ" ಇತಿ ಲಕ್ಷಣಂ ಕೃತಮಿತಿ ಚೇದು ಚ್ಯತೇ.

ನಿಷ್ಪತ್ತ್ಯಾ ಚರ್ವಣಸ್ಯಾಸ್ಯ ನಿಷ್ಪತ್ತಿರುಪಚಾರತಃ।

ಯದ್ಯಪಿ ರಸಾಭಿನ್ನತಯಾ ಚರ್ವಣಸ್ಯಾಪಿ ನ ಕಾರ್ಯತ್ವಂ, ತಥಾಪಿ ಕಸ್ಯ ಕಾದಾಚಿತ್ಕತಯಾ ಉಪಚರಿತೇನ ಕಾರ್ಯತ್ವೇನ ಕಾರ್ಯತ್ವಮುಪಚರ್ಯತೇ.

ಅವಾಚ್ಯತ್ವಾದಿಕಂ ತಸ್ಯ ವಕ್ಷ್ಯೇ ವ್ಯಂಜನರೂಪಣೇ ॥ ೩೦ ॥

ತಸ್ಯ ರಸಸ್ಯ ಆದಿಶಬ್ದಾತ್‌ಲಕ್ಷ್ಯತ್ವಾದಿ,

ನನು ಯದಿ ಮಿಳಿತಾ ರತ್ಯಾದಯೋ ರಸಾಸ್ತತ್ಕಥಂ ಅಸ್ಯ ಸ್ವಪ್ರಕಾಶತ್ವಂ ಕಥಂ ವಾ ಅಖಂಡತ್ವಮಿತ್ಯಾಹ—

ರತ್ಯಾದಿಜ್ಞಾನತಾದಾತ್ಮ್ಯಾದೇವ ಯಸ್ಮಾದ್ರಸೋ ಭವೇತ್ ।

ಅತೋಽಸ್ಯ ಸ್ವಪ್ರಕಾಶತ್ವಮಖಂಡತ್ವಂ ಚ ಸಿಧ್ಯತಿ ॥ ೩೧ ॥

ಯದಿ ರತ್ಯಾದಿಕಂ ಪ್ರಕಾಶಶರೀರಾದತಿರಿಕ್ತಂ ಸ್ಯಾತ್ ತದೈವಾಸ್ಯ ಸ್ವಪ್ರಕಾಶ ತ್ವಂ ನ ಸಿಧ್ಯೇತ್. ನ ಚ ತಥಾ ತಾದಾತ್ಮ್ಯಾಂಗೀಕಾರಾತ್. ಯದುಕ್ತಂ "ರಸ್ಯಾದ್ಯ ತಯಾ ಚರ್ವಣಾ ನ ಕಾರ್ಯಾ; ತಥಾಪಿ ಕಾದಾಚಿತ್ಕತಯಾ ಕಾರ್ಯತ್ವಮುಪಕಲ್ಪ್ಯ ತದೇಕಾತ್ಮನಿ ಅನಾದಿವಾಸನಾಪರಿಣತಿರೂಪೇ ರತ್ಸಾದಿಭಾವೇಽಪಿ ವ್ಯವಹಾರಃ" ಇತಿ. "ಸುಖಾದಿತಾದಾತ್ಮ್ಯಾಂಗೀಕಾರೇ ಸಿಧ್ದಾಂತಶಯ್ಯಾಮಧಿಶಯ್ಯ ದಿವ್ಯಂ ವರ್ಷ ಸಹಸ್ರಂ ಪ್ರಮೋದನಿದ್ರಾಮುಪೇಯಾಃ" ಇತಿ ಚ. "ಅಭಿನ್ನೋಽಪಿ ಸ. ಪ್ರಮಾತ್ರಾ ವಾಸನೋಪನೀತರತ್ಯಾದಿತಾದಾತ್ಮ್ಯೇನ ಗೋಚರೀಕೃತಃ" ಇತಿ ಚ ಜ್ಞಾನಸ್ಯ ಸ್ವಪ್ರ ಕಾಶತ್ವಮನಂಗೀಕುರ್ವತಾಮುಪರಿ ವೇದಾಂತಿಭಿರೇವ ನಿಪಾತನೀಯೋ ದಂಡಃ ತಾದಾತ್ಮ್ಯಾದೇವಾಸ್ಯ ಅಖಂಡತ್ವಮ್. ರತ್ಯಾದಯೋ ಹಿ ಪ್ರಥಮಮೇಕೈಕಶಃ ಪ್ರತೀ ಯಮಾನಾಃ ಸರ್ವೇಽಪ್ಯೇಕೀಭೂತಾಃ ಸ್ಫುರಂತ ಏವ ರಸತಾಮಾಪದ್ಯಂತೇ ತದುಕ್ತಮ್—

ವಿಭಾವಾ ಅನುಭಾವಾಶ್ಚ ಸಾತ್ತ್ವಿಕಾ ವ್ಯಭಿಚಾರಿಣಃ ।

ಪ್ರತೀಯಮಾನಾಃ ಪ್ರಥಮಂ ಖಂಡಶೋ ಯಾಂತ್ಯಖಂಡತಾಮ್ ॥

"ಪರಮಾರ್ಥತಸ್ತ್ವಖಂಡ ಏವಾಯಂ ವೇದಾಂತಪ್ರಸಿಧ್ಧಬ್ರಹ್ಮತತ್ತ್ವವತ್ ವೇದಿತವ್ಯಃ" ಇತಿ ಚ.

ಹೀಗೆ ವಿಲಕ್ಷಣವೆನಿಸಿವ ರಸವು ಇರುವುದೆಂಬಲ್ಲಿ ಪ್ರಮಾಣವೇನೆಂಬುದನ್ನು ಈಗ ತಿಳಿಸುತ್ತಾನೆ. ತನಗಿಂತ ಬೇರೆಯೇ ಆಗದಿರುವ ಈ ರಸವು ಇರುವ ಬಗ್ಗೆ ಸಹೃದಯರು ಅನುಭವಿಸುವ ಆಸ್ವಾದನವೇ ಪ್ರಮಾಣವೆಂದು ಅನುಭವಿಗಳು ಹೇಳುತ್ತಾರೆ. ಕಾವ್ಯಾರ್ಥಗಳನ್ನು ತಿಳಿದಾಗ ಉಂಟಾಗುವ ರಸಾಸ್ವಾದವೇ ರಸವಿರುವ ಬಗ್ಗೆ ಪ್ರಮಾಣವೆನಿಸಿದೆ. ರಸವು ಕಾರ್ಯವಲ್ಲದಿದ್ದರೆ ? "ವಿಭಾವ ಅನುಭಾವ ವ್ಯಭಿಚಾರಿಭಾವಗಳ ಸಂಯೋಗದಿಂದ ರಸವು ಹುಟ್ಟುತ್ತದೆ'' ಎಂದು ಭರತಮಹರ್ಷಿಯು ರಸನಿಷ್ಪತ್ತಿಯನ್ನು ಹೇಗೆ ಹೇಳಿರುವನು? ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ಕಾವ್ಯವನ್ನು ಓದಿದಾಗಲೇ ಮತ್ತು ಕೇಳಿದಾಗಲೇ ಹಾಗೆಯೇ ನಾಟ್ಯವನ್ನು ನೋಡಿದಾಗಲೇ ರಸದ ಅನುಭವವಾಗುವ ಪ್ರಯುಕ್ತ ರಸನಿಷ್ಪತ್ತಿಯನ್ನು ಉಪಚಾರಕ್ಕಾಗಿ ಹೇಳಿದೆ. ರಸಕ್ಕೂ ಅದರ ಆಸ್ವಾದಕ್ಕೂ ಅಭೇದವನ್ನು ಆರೋಪಿಸುವುದರಿಂದ ರಸದ ನಿಷ್ಪತ್ತಿಯನ್ನು ಮಹರ್ಷಿಯು ಹೇಳಿದ್ದರಲ್ಲಿ ತಪ್ಪೇನೂ ಇಲ್ಲ.

ರಸಕ್ಕೂ ಅದರ ಆಸ್ವಾದಕ್ಕೂ ಅಭೇದವನ್ನು ಒಪ್ಪಿದ್ದರಿಂದ ರಸವು ಕಾರ್ಯವೆನಿಸಿಲ್ಲವಾದರೂ ಅದರ ಆಸ್ವಾದವು ಕಾರ್ಯವೆನಿಸಿದ್ದರಿಂದ ಸಾಮಾಜಿಕನು ತನಗೆ ರಸಾಸ್ವಾದವಾಯಿತೆಂದು ಹೇಳುವುದು ಹೇಗೆ ಹೊಂದುತ್ತದೆ? ಅಂದರೆ ರಸದಂತೆಯೇ ರಸಾಸ್ವಾದವೂ ಕಾರ್ಯವೆನಿಸುವುದಿಲ್ಲವಾದರೂ ಅದು ಯಾವಾಗಲೂ ಇಲ್ಲದೆ ಒಂದು ವೇಳೆ ಮಾತ್ರವೇ ಅಭಿವ್ಯಕ್ತವಾಗುವುದರಿಂದ ಅದನ್ನು ಕಾರ್ಯವೆಂದು ಉಪಚಾರಕ್ಕಾಗಿ ಹೇಳಿದೆ. ಇದರಲ್ಲೂ ದೋಷವೇನೂ ಕಾಣುವುದಿಲ್ಲ.

ಕಾವ್ಯವು ರಸವನ್ನು ಪ್ರಕಾಶಪಡಿಸುತ್ತದೆ ಎಂಬುದು ಸಹಜವಾಗಿ ಸಂಭವಿಸಿದರೂ ಸಹ ಅದನ್ನು ಶಬ್ದಗೋಚರವಲ್ಲವೆಂದು ತಿಳಿಸಿದ್ದು ಹೇಗೆ ಹೊಂದುತ್ತದೆ? ಎಂದು ಕೇಳಿದರೆ ರಸವು ಎಂದೆಂದಿಗೂ ಅಭಿಧಾವೃತ್ತಿಯಿಂದ ವಾಚ್ಯವಾಗುವಂತೆಯೇ ಇಲ್ಲವೆಂಬ ಅಂಶವನ್ನು ಮುಂದೆ ವ್ಯಂಜನೆಯನ್ನು ನಿರೂಪಿಸುವ ಪ್ರಕರಣದಲ್ಲಿ ತಿಳಿಸಲಾಗುವುದು. ಹಾಗೆಯೇ ರಸವು ಲಕ್ಷಣಾವೃತ್ತಿಯಿಂದಲೂ ತಿಳಿದುಬರುವಂತದಲ್ಲವೆಂದು ಭಾವಿಸಬೇಕು. ರತ್ಯಾದಿಭಾವಗಳು ವಿಭಾವ ಅನುಭಾವವ್ಯಭಿಚಾರಿಭಾವಗಳೊಡನೆ ಒಟ್ಟಿಗೆ ಸೇರಿಕೊಂಡು ರಸವಾಗಿ ಪರಿಣಮಿಸುವುದಾದರೆ ರಸವನ್ನು ಸ್ವಪ್ರಕಾಶವೆಂದೂ, ಅಖಂಡವೆಂದೂ ಹಿಂದೆ ತಿಳಿಸಿದ್ದು ಹೇಗೆ ಹೊಂದುತ್ತದೆ? ಕಾವ್ಯವನ್ನು ಕೇಳುವಾಗಲೂ ನಾಟ್ಯವನು ನೋಡುವಾಗಲೂ ಹುಟ್ಟುವ ಜ್ಞಾನದಿಂದ ರಸವು ತಾನಾಗಿಯೇ ಪ್ರಕಾಶವಾಗುವ ಪ್ರಯುಕ್ತ ಇವನ್ನು ಅಖಂಡ (ಒಂದೇ ಬಗೆ) ಎಂದು ಹೇಳಿದ್ದು ಹೇಗೆ ಹೊಂದುತ್ತದೆ? ಎಂದು ಆಕ್ಷೇಪವು ಬಂದರೆ ಅದಕ್ಕೆ ಸಮಾಧಾನವನ್ನು ಹೇಳುತ್ತಾನೆ. ಕಾವ್ಯವನ್ನು ದಿಓದಾಗ ಮತ್ತು ಕೇಳಿದಾಗ ಆಯಾಯ ವಿಷಯಗಳ ಜ್ಞಾನಸ್ವರೂಪವನ್ನು ಪುರಸ್ಕರಿಸಿಕೊಂಡೇ ಇರುವ ರತ್ಯಾದಿಭಾವಗಳು ವಿಭಾವ ಮೊದಲಾದುವುಗಳೊಡನೆ ಕೂಡಿಕೊಂಡೇ ರಸವಾಗಿ ಪರಿಣಮಿಸುವ ಪ್ರಯುಕ್ತ ರಸವು ಅಖಂಡ ಮತ್ತು ಸ್ವಪ್ರಕಾಶವೆಂಬುದು

ಸಿದ್ಧಿಸುತ್ತದೆ. ರತಿಯೇ ರಸವಾಗುವಾಗ ಹಿಂದಿನದು ಮುಂದಿನದು ಎಲ್ಲವನ್ನೂ ಸೇರಿಸಿ ಕೊಂಡೇ ಇರುವ ಪ್ರಯುಕ್ತ ಅದಕ್ಕೆ ರಸಾವಸ್ಥೆಯಲ್ಲಿ ಅಖಂಡತ್ವವೆಂಬುದು ಇದ್ದೇ ಇರುತ್ತದೆ. ಕಾವ್ಯಾರ್ಥಗಳ ಮತ್ತು ವಿಭಾವಾದಿಗಳ ಸಂಪರ್ಕವಿದ್ದರೂ ರತ್ಯಾದಿಭಾವಗಳ ಪರಿಣಾಮಕ್ಕೆ ಬೇರೆ ಯಾವ ಸಾಧನದ ಆವಶ್ಯಕತೆಯಿಲ್ಲದೆ ಪರಿಣಾಮವು ತಾನಾಗಿಯೇ ಆಗುವ ಪ್ರಯುಕ್ತ ರಸವು ಸ್ವಪ್ರಕಾಶವೆಂಬುದು ಸಿದ್ಧಿಸುತ್ತದೆ. ರತ್ಯಾದಿಭಾವಗಳು ಪ್ರಕಾಶವೆನಿಸಿದ ಜ್ಞಾನಸ್ವರೂಪದಿಂದ ಬೇರೆಯೇ ಆಗಿ ಇರುವುದಾದರೆ ಆಗ ರಸವನ್ನು ಸ್ವಪ್ರಕಾಶವೆಂದು ಹೇಳಲಿಕ್ಕಾಗುವುದಿಲ್ಲ. ಆದರೆ ರತ್ಯಾದಿಭಾವಗಳಿಗೂ ಅವುಗಳ ಜ್ಞಾನಕ್ಕೂ ಅಭೇದವಿರುವುದರಿಂದ ಆ ಭಾವಗಳು ಪ್ರಕಾಶರೂಪವಾದ ಜ್ಞಾನಕ್ಕಿಂತಲೂ ಬೇರೆಯಾಗಿಯೇ ಇರುವುದಿಲ್ಲ. ಆದ್ದರಿಂದ ರಸವು ಸ್ವಪ್ರಕಾಶವೆನಿಸುವುದರಲ್ಲಿ ಯಾವ ಅಡ್ಡಿಯೂ ಇಲ್ಲ. ಅಲ್ಲಗೆ ಕಾರಿಕೆಯಲ್ಲಿ ಹೇಳಿರುವ ವಿಭಾವ ಮೊದಲಾದ ಪದಗಳು ಲಕ್ಷಣೆಯಿಂದ ಅವುಗಳ ಜ್ಞಾನವನ್ನು ತಿಳಿಸುತ್ತವೆ ಎಂದು ತಿಳಿಯಬೇಕು.

ರತ್ಯಾದಿಭಾವಗಳಿಗೂ ಅವುಗಳ ಜ್ಞಾನಕ್ಕೂ ಅಭೇದವನ್ನು ಅಂಗೀಕರಿಸಲು ಪ್ರಾಚೀನರ ಒಪ್ಪಿಗೆಯೂ ಇವೇ ಎಂಬುದನ್ನು ಈಗ ತಿಳಿಸುತ್ತಾನೆ. “ ಆಸ್ವಾದನವು ರಸತ್ಕಿಂತ ಬೇರೆಯಲ್ಲದ್ದರಿಂದ ಅದೂಸಹ ಕಾರ್ಯವೆನಿಸುವುದಿಲ್ಲ. ಆದರೂ ಅದನ್ನು ಕೆಲವು ವೇಳೆ ಕಾರ್ಯವೆಂದು ಕಲ್ಪಿಸಿ ಅದರಂತೆಯೇ ಸಾಮಾಜಿಕರ ಹೃದಯದಲ್ಲಿ ಬಹುಕಾಲದ ಸಂಸ್ಕಾರದಿಂದ ಅಂಟಿಕೊಂಡು ಬಂದಿರುವ ರತ್ಯಾದಿಭಾವಗಳಲ್ಲಿಯೂ ಆಸ್ವಾದನವುಂಟೆಂದು ವ್ಯವಹರಿಸಲಾಗಿದೆ. ಹೀಗೆ ರತ್ಯಾದಿಭಾವಗಳಲ್ಲಿ ಆಸ್ವಾದನವನ್ನು ಆರೋಪಿಸಿದ್ದರಿಂದಲೇ ಅದನ್ನು ರಸವಾಗಿ ಸಾಮಾಜಿಕನು ಆಸ್ವಾದಿಸಲಿಕ್ಕೆ ಅನುಕೂಲವಾಗುತ್ತದೆ”. ಎಂದು ಪ್ರಾಚೀನರು ಅಭಿಪ್ರಾಯಪಟ್ಟಿರುವರು. ರತ್ಯಾದಿಭಾವಗಳೇ ರಸವಾಗಿ ಪರಿಣಮಿಸುವುದರಿಂದ ಜ್ಞಾನಸ್ವರೂಪವಾದ ರಸವನ್ನೂ ರತ್ಯಾದಿಭಾವಗಳನ್ನೂ ಒಂದೇ ಎಂದು ಅಂಗೀಕರಿಸಿದ್ದರಿಂದ ರಸವು ಆನಂದಮಯವೂ ಜ್ಞಾನಮಯವೂ ಆಗಿದೆ ಎಂಬುದು ಅದಕ್ಕೆ ಹೇಗೆ ಸಿದ್ಧಿಸುತ್ತದೆ ? ಚಮತ್ಕಾರವೇ ಅದರ ಪ್ರಾಣವೆಂಬುದು ಹೇಗೆ ಹೊಂದುತ್ತದೆ? ಎಂದು ಮುಂತಾದ ಆಕ್ಷೇಪಗಳು ಯಾವುವೂ ನಿಲ್ಲುವಂತಿಲ್ಲ. “ಈ ಬಗೆಯ ಸಿದ್ಧಾಂತವನ್ನು ಅಂಗೀಕರಿಸಿ ನವೀನಾಲಂಕಾರಿಕರೆಲ್ಲರೂ ಸಾವಿರಾರು ವರ್ಷಗಳ ಕಾಲ ದಿವ್ಯವಾದ ಸುಖನಿದ್ರೆಯನ್ನು ಅನುಭವಿಸಬಹುದು ” ಹೀಗೆಂದು ಪ್ರಾಚೀನರು ಅಭಿಪ್ರಾಯಪಟ್ಟಿರುವರು. ಆದ್ದರಿಂದ ರತ್ಯಾದಿಭಾವಗಳಿಗೂ ಆಸ್ವಾದಕ್ಕೂ ತಾದಾತ್ಮ್ಯವಿರುವಂತೆ ರಸಕ್ಕೂ ಜ್ಞಾನ ಆನಂದ ಚಮತ್ಕಾರಗಳಿಗೂ ಅಭೇದವನ್ನು ಒಪ್ಪುವುದರಲ್ಲಿ ಯಾವ ದೋಷವೂ ಸಂಭವಿಸುವಂತಿಲ್ಲ. ಹೀಗೆ ತಾದಾತ್ಮ್ಯವಿರುವುದರಿಂದಲೇ ರಸವು ಅಖಂಡವೆನಿಸುವುದರಲ್ಲಿ ಯಾವ ದೋಷವೂ ಇಲ್ಲ. ರಸವು ಆಸ್ವಾದರೂಪವಾದರೂ ಸಾಮಾಜಿಕನಿಗೆ ಹಿಂದಿನ ಸಂಸ್ಕಾರದಿಂದ ದೊರೆತ ರತ್ಯಾದಿಭಾವಗಳೊಡನೆ ಬೇರ್ಪಡದಂತೆ ಹೊಂದಿಕೊಂಡೇ ಅವನಿಗೆ ಅನುಭವಕ್ಕೆ ಬರುವುದು. ಆದ್ದರಿಂದಲೇ ರಸವಿರುವ ಬಗ್ಗೆ

ಅಂತಹ ಸಭ್ಯನೇ ಪ್ರಮಾಣವೆಂದು ಹಿಂದೆ ತಿಳಿಸಿದೆ. ಜ್ಞಾನವು ಸ್ವಪ್ರಕಾಶವೆಂಬುದನ್ನು ಒಪ್ಪದೇಇರುವ ನೈಯಾಯಿಕರ ಮೇಲೆ ವೇದಾಂತಿಗಳು ಹೊರಿಸುವ ದೋಷವೇ ಇದು. ಹಿಂದಿನ ಜ್ಞಾನದಿಂದ ಮುಂದಿನ ಜ್ಞಾನವೂ, ಮುಂದಿನ ಜ್ಞಾನದಿಂದ ಅದರ ಮುಂದಿನ ಜ್ಞಾನವೂ, ಹೀಗೆಯೇ ಮುಂದುಮುಂದಿನ ಜ್ಞಾನದಿಂದ ಹಿಂದುಹಿಂದಿನ ಜ್ಞಾನವೂ ಪ್ರಕಾಶವಾಗುವುದೆಂದು . ಒಪ್ಪಿದರೆ ಅನವಸ್ಥಾದೋಷವು ಬರುವುದರಿಂದ ಜ್ಞಾನಗಳೆಲ್ಲವೂ ಸ್ವತಃಸಿದ್ಧವೆಂಬ ವೇದಾಂತಸಿದ್ಧಾಂತವನ್ನು ಅನುಸರಿಸಿಯೇ ಜ್ಞಾನಸ್ವರೂಪವಾದ ರಸವನ್ನು ಸ್ವಪ್ರಕಾಶವೆಂದು ಒಪ್ಪಲಾಗಿದೆ. ಆದರೂ ವಿಭಾವಾದಿಗಳು ಬೇರೆಬೇರೆಯಾಗಿಯೇ ತೋರುವುದರಿಂದ ರಸವು ಬೇರೆ ಬೇರೆಯೇ ಆಗುವ ಪ್ರಯುಕ್ತ ಅದನ್ನು ಅಖಂಡವೆಂದು ಹೇಳಿದ್ದು ಹೇಗೆ ಹೊಂದುತ್ತದೆ ? ಎಂದರೆ ರತ್ಯಾದಿಗಳು ಮೊದಲು ಒಂದೊಂದಾಗಿ ತೋರಿದರೂ ವಿಭಾವಾದಿಗಳೊಡನೆ ಒಟ್ಟಿಗೆ ಸೇರಿಕೊಂಡೇ ರಸವಾಗಿ ಪರಿಣಮಿಸುತ್ತವೆ ಎಂಬ ಸಮಾಧಾನವನ್ನು ತಿಳಿಸಲಾಗಿದೆ. "ವಿಭಾವ ಅನುಭಾವ, ವ್ಯಭಿಚಾರಿಭಾವ ಇವು ಸಾಮಾಜಿಕನಿಗೆ ನಾಟ್ಯವನ್ನು ನೋಡುವ ವೇಳೆ ಬೇರೆ ಬೇರೆಯಾಗಿ ತೋರಿದರೂ ಕೊನೆಗೆ ಅಖಂಡರೂಪವನ್ನು ತಾಳುವುವು. ಎಲ್ಲವೂ ಸೇರಿಕೊಂಡು ವ್ಯಂಜನೆಯಿಂದ ತೋರುವ ಒಂದೇ ಜ್ಞಾನಕ್ಕೆ ವಿಷಯವಾಗುತ್ತವೆ" ಹೀಗೆ ಪ್ರಾಚೀನರು ಹೇಳಿದ್ದಾರೆ. "ವಾಸ್ತವವಾಗಿ ಅಖಂಡವೆನಿಸಿದ ಈ ರಸವನ್ನು ವೇದಾಂತ ಶಾಸ್ತ್ರದಲ್ಲಿ ಪ್ರಸಿದ್ಧವೆನಿಸಿದ ಬ್ರಹ್ಮತತ್ತ್ವಕ್ಕೆ ಸದೃಶವೆಂದು ತಿಳಿಯಬೇಕು" ಹೀಗೆಂದೂ ಪ್ರಾಚೀನರು ತಿಳಿಸಿರುವರು.

ಅಥ ಕೇ ತೇ ವಿಭಾವಾನುಭಾವವ್ಯಭಿಚಾರಿಣ ಇತ್ಯಪೇಕ್ಷಾಯಾಂ ವಿಭಾವಮಾಹ

ರತ್ಯಾದ್ಯುದ್ಬೋಧಕಾ ಲೋಕೇ ವಿಭಾವಾಃ ಕಾವ್ಯನಾಟ್ಯಯೋಃ ।

ಯೇ ಹಿ ಲೋಕೇ ರಾಮಾದಿಗತರತಿಹಾಸಾದೀನಾಮುದ್ಬೋಧಕಾರಣಾನಿ ಸೀತಾದಯಸ್ತ ಏವ ಕಾವ್ಯೇ ನಾಟ್ಯೇ ಚ ನಿವೇಶಿತಾಃ ಸಂತಃ "ವಿಭಾವ್ಯಂತೇ ಆಸ್ವಾದಾಂಕುರಪ್ರಾದುರ್ಭಾವಯೋಗ್ಯಾಃಭಕ್ರಿಯಂತೇ ಸಾಮಾಜಿಕರತ್ಯಾದಿಭಾವಾಃ ಏಭಿಃ" ಇತಿ ವಿಭಾವಾ ಉಚ್ಯಂತೇ. ತದುಕ್ತಂ ಭರ್ತೃಹರಿಣಾ.

"ಶಬ್ದೋಪಹಿತರೂಪಾಂಸ್ತಾನ್ ಬುದ್ಧೇರ್ವಿಷಯತಾಂ ಗತಾನ್ ।

ಪ್ರತ್ಯಕ್ಷಾನಿವ ಕಂಸಾದೀನ್ ಸಾಧನತ್ವೇನ ಮನ್ಯತೇ" ॥

ಇತಿ ತದ್ಭೇದಾನಾಹ ಆಲಂಬನೋದ್ದೀಪನಾಖ್ಯೌ ತಸ್ಯ ಭೇದಾವುಭೌ ಸ್ಮೃತೌ ।

ಆಲಂಬನಂ ನಾಯಕಾದಿಸ್ತಮಾಲಂಬ್ಯ ರಸೋದ್ಗಮಾತ್ ।

ಆದಿಶಬ್ದಾನ್ನಾಯಿಕಾಪ್ರತಿನಾಯಕಾದಯಃ. ಅತ್ರ ಯೋ ಯಸ್ಯ ರಸಸ್ಯ ವಿಭಾವಃ ಸಃ ತತ್ಸ್ವರೂಪವರ್ಣನೇ ವಕ್ಷ್ಯತೇ.

ರಸದ ಸ್ವರೂಪವನ್ನು ತಿಳಿಸಿಯಾದಮೇಲೆ ಅದಕ್ಕೆ ಸಂಬಂಧಿಸಿದ ವಿಭಾವಾದಿಗಳ ಸ್ವರೂಪವೆಂತಹದೆಂಬ ಬಗ್ಗೆ ಆಕಾಂಕ್ಷೆಯುಂಟಾಗಲು ವಿಭಾವದ ಸ್ವರೂಪವನ್ನು ಇಲ್ಲಿ

ತಿಳಿಸುತ್ತಾನೆ. ಲೋಕದಲ್ಲಿ ಹರಡಿರುವ ರತಿ ಹಾಸ ಶೋಕ ಕ್ರೋಧ ಉತ್ಸಾಹ ಭಯ ಜುಗುಪ್ಸೆ ವಿಸ್ಮಯ ಶ್ರಮ ಎಂಬ ಸ್ಥಾಯಿಭಾವಗಳನ್ನು ಹೊರಹೊಮ್ಮಿಸುವ ಕಾರಣ ಸಾಮಗ್ರಿಗಳನ್ನು ಕಾವ್ಯನಾಟ್ಯಗಳಲ್ಲಿ ಪ್ರಯೋಗಿಸಿದರೆ ಅವೇ ವಿಭಾವವೆನಿಸುತ್ತವೆ. ರಾಮ ಮೊದಲಾದ ನಾಯಕರಲ್ಲಿರುವ ರತಿ ಮೊದಲಾದ ಭಾವಗಳನ್ನು ಹೊರಹೊಮ್ಮಿಸಲು ಲೋಕದಲ್ಲಿ ಸೀತೆ ಮೊದಲಾದ ನಾಯಿಕೆಯರು ಕಾರಣರೆನಿಸಿರುವರು. ಕಾವ್ಯನಾಟ್ಯಗಳಲ್ಲಿ ಪ್ರಯೋಗಿಸುವಾಗ ಅವರು ವಿಭಾವವೆನಿಸುವರು. ಸಾಮಾಜಿಕರ ಹೃದಯದಲ್ಲಿ ಗೋಪ್ಯವಾಗಿ ಅಡಗಿರುವ ರತ್ಯಾದಿಭಾವಗಳು ಅವರಿಗೆ ಆಸ್ವಾದಕ್ಕೆ ಯೋಗ್ಯವಾಗುವಂತೆ ಮಾಡುವ ಸಾಧನಗಳೇ ವಿಭಾವಗಳು. "ಕಾವ್ಯದೊಳಗೆ ಉಪಯೋಗಿಸಿರುವ ಪದಗಳಿಂದಲೇ ತನಗೆ ಗೋಚರವಾಗುವಂತೆಯೂ ಶಾಬ್ದಬೋಧಕ್ಕೆ ವಿಷಯವಾಗುವಂತೆಯೂ ತಿಳಿದು ಬರುವ ವ್ಯಕ್ತಿಗಳು ಕಂಸ ಮೊದಲಾದವರು ಪ್ರತ್ಯಕ್ಷವಾಗಿಯೇ ಅಂದರೆ ಸಾಮಾಜಿಕನ ಎದುರಿಗೆ ವೀರರಸಕ್ಕೆ ಉದ್ಬೋಧಕರಾಗುವರೆಂದು ಅವನು ತಿಳಿಯುವನು" ಹೀಗೆ ಭರ್ತೃಹರಿಯು ತಿಳಿಸಿದ್ದಾನೆ. ಈ ವಿಭಾವವು ಆಲಂಬನ ಉದ್ದೀಪನವೆಂದು ಎರಡುಬಗೆಯಾಗಿದೆ. ಯಾರನ್ನು ಆಶ್ರಯಿಸಿಕೊಂಡು ರಸವು ಪ್ರಕಾಶವಾಗುವುದೋ ಅಂತಹ ನಾಯಕ, ನಾಯಿಕೆ, ಪ್ರತಿನಾಯಕ ಮೊದಲಾದವರು ಆಲಂಬನವಿಭಾವವೆನಿಸುವರು. ಯಾವ ರಸಕ್ಕೆ ಯಾರು ವಿಭಾವವಾಗುವರೆಂಬುದನ್ನು ಮುಂದೆ ಆ ಪ್ರಕರಣದಲ್ಲಿ ತಿಳಿಸಲಾಗುವುದು.

ತತ್ರ ನಾಯಕಃ— ತ್ಯಾಗೀ ಕೃತೀ ಕುಲೀನಃ ಸುಶ್ರೀಕೋ ರೂಪಯೌವನೋತ್ಸಾಹೀ ।
ದಕ್ಷೋಽನುರಕ್ತಲೋಕಸ್ತೇಜೋವೈದಗ್ಧ್ಯಶೀಲವಾನ್ ನೇತಾ ॥

ದಕ್ಷಃ ಕ್ಷಿಪ್ರಕಾರೀ. ಶೀಲಂ ಸದ್ವೃತ್ತಮ್. ಏವಮಾದಿಗುಣಸಂಪನ್ನೋ ನೇತಾ ನಾಯಕೋ ಭವತಿ.

ತದ್ಭೇದಾನಾಹ— ಧೀರೋದಾತ್ತೋ ಧೀರೋದ್ಧತಸ್ತಥಾ ಧೀರಾಲಲಿತಶ್ಚ ।
ಧೀರಪ್ರಶಾಂತ ಇತ್ಯಯಮುಕ್ತಃ ಪ್ರಥಮಶ್ಚತುರ್ಭೇದಃ ॥

ತತ್ರ ಧೀರೋದಾತ್ತಃ ಅವಿಕತ್ಥನಃ ಕ್ಷಮಾವಾನತಿಗಂಭೀರೋ ಮಹಾಸತ್ತ್ವಃ ।
ಸ್ಥೇಯಾನ್ ನಿಗೂಢಮಾನೋ ಧೀರೋದಾತ್ತೋ ದೃಢವ್ರತಃ ॥೩೭॥

ಅವಿಕತ್ಥನೋಽನಾತ್ಮಶ್ಲಾಘಾಪರಃ. ಮಹಾಸತ್ತ್ವೋ ಹರ್ಷಶೋಕಾದ್ಯನಭಿಭೂತಸ್ವಭಾವಃ. ನಿಗೂಢಮಾನೋ ವಿನಯಚ್ಛನ್ನಗರ್ವಃ. ದೃಢವ್ರತೋಽಂಗೀಕೃತನಿರ್ವಾಹಕಃ. ಯಥಾ ರಾಮಯುಧಿಷ್ಠಿರಾದಿಃ.

ಅಥ ಧೀರೋದ್ಧತಃ— ಮಾಯಾಪರಃ ಪ್ರಚಂಡಶ್ಚಪಲೋಽಹಂಕಾರದರ್ಪಭೂಯಿಷ್ಠಃ
ಆತ್ಮಶ್ಲಾಘಾನಿರತೋ ಧೀರೈರ್ಧೀರೋದ್ಧತಃ ಕಥಿತಃ ॥ ೩೮ ॥

ಯಥಾ ಭೀಮಸೇನಾದಿಃ— ಅಥ ಧೀರೋದಾತ್ತಃ—

ನಿಶ್ಚಿಂತೋ ಮೃದುರನಿಶಂ ಕಲಾಪರೋ ಧೀರಲಲಿತಃ ಸ್ಯಾತ್ ॥೩೯॥

ಕಲಾನೃತ್ಯಾದಿಕಾ. ಯಥಾ ರತಾವಳ್ಯಾಂ ವತ್ಸರಾಜಾದಿಃ ॥

ಸಾಮಾನ್ಯಗುಣೈರ್ಭೂಯಾನ್ ದ್ವಿಜಾದಿಕೋ ಧೀರಪ್ರಶಾಂತಃ ಸ್ಯಾತ್ ಯಥಾ ಮಾಲತೀಮಾಧವಾದೌ ಮಾಧವಾದಿಃ.

ಅವರಲ್ಲಿ ನಾಯಕನ ಲಕ್ಷಣವನ್ನು ತಿಳಿಸುತ್ತಾನೆ. ನಾಯಕನು ದಾನಶೀಲನೂ, ಕರ್ಮಕುಶಲನೂ, ಸತ್ಕುಲಪ್ರಸೂತನೂ, ಬುದ್ಧಿವಂತನೂ ಸೌಂದರ್ಯಯೌವನ ಉತ್ಸಾಹಗಳುಳ್ಳವನೂ, ಬೇಗನೆ ಕೆಲಸಮಾಡುವವನೂ, ಪ್ರಜಾನುರಾಗಿಯೂ, ಬೇರೆಯವರು ನಿಂದಿಸುವುದನ್ನು ಸಹಿಸದೆಯೂ, ಉತ್ತಮಸ್ವಭಾವದವನೂ ಆಗಿರಬೇಕು. ಇಂತಹ ಗುಣವುಳ್ಳವನೇ ನಾಯಕನೆನಿಸುವನು,

ನಾಯಕರ ಬೇರೆಬೇರೆ ಬಗೆಗಳನ್ನೂ ತಿಳಿಸುತ್ತಾನೆ. ನಾಯಕನು ದೀರೋದಾತ್ತ, ದೀರೋದ್ಧತ, ಧೀರಲಲಿತ, ಧೀರಪ್ರಶಾಂತ ಎಂದು ನಾಲ್ಕು ಬಗೆಯಾಗಿರುವನು. ಇವರಲ್ಲಿ ಈಗ ಧೀರೋದಾತ್ತನ ಲಕ್ಷಣವನ್ನು ತಿಳಿಸುತ್ತಾನೆ.

ಧೀರೋದಾತ್ತನು ತನ್ನನ್ನು ಪ್ರಶಂಸೆಮಾಡಿಕೊಳ್ಳುವುದಿಲ್ಲ; ಪ್ರಾಣಿಗಳಿಗೆ ಕ್ಷಮೆಯನ್ನು ತೋರಿಸುವನು. ಅಪಕಾರಿಗಳಿಗೆ ಪ್ರತ್ಯುಪಕಾರವನ್ನು ಮಾಡಲು ಸಾಮರ್ಥ್ಯವಿದ್ದರೂ ಅದರಲ್ಲಿ ಅವನಿಗೆ ಇಚ್ಛೆಯಿರುವುದಿಲ್ಲ. ಇವನ ಆಶಯವು ಬೇರೆಯವರಿಗೆ ತಿಳಿಯದೇ ಇರುವುವರಿಂದ ಬಹಳ ಗಂಭೀರನೆನಿಸಿರುವನು. ಹರ್ಷ ಶೋಕ ಮೊದಲಾದುವುಗಳ ವಿಕಾರಕ್ಕೆ ಸಿಲುಕದೆ ಮನಸ್ಸಿನ ಚಾಪಲ್ಯಕ್ಕೆ ಕಾರಣವಿದ್ದರೂ ಕರ್ತವ್ಯಗಳಿಗೆ ವ್ಯವಸ್ಥೆಯಿಂದ ದೃಢವಾಗಿಯೇ ಅಂಟಿಕೊಂಡಿರುವನು, ಗರ್ವವಿದ್ದರೂ ಅದನ್ನು ವಿನಯದಿಂದ ಮುಚ್ಚಿಕೊಳ್ಳುವನು, ಹಿಡಿದ ಕಾರ್ಯವನ್ನು ಹೇಗಾದರೂ ಬಿಡದೆನಡೆಸುವನು, ಇದಿಷ್ಟೂ ಧೀರೊದಾತ್ತನಲಕ್ಷಣಗಳೆನಿಸಿವೆ. ರಾಮ, ಯುಧಿಷ್ಠಿರ ಮೊದಲಾದವರು ದೀರೊದಾತ್ತರು. ದೀರೊದ್ಧತನು ಬೇರೆಯವರನ್ನು ವಂಚಿಸುವುದರಲ್ಲಿ ಆಸಕ್ತನು, ಉಗ್ರಸ್ವಬಾವದವನು, ಚಂಚಲಪ್ರವೃತ್ತಿಯವನು, ಅಹಂಕಾರಗರ್ವಗಳಿಂದ ತುಂಬಿದವನು, ತನ್ನನ್ನು ಪ್ರಶಂಸಿಸುವುದರಲ್ಲಿ ಆಸಕ್ತನು. ಇಂತವನನ್ನು ಧೀರೋದ್ಧತನೆಂದು ಹಿರಿಯರು ಕರೆದಿರುವರು. ಭೀಮಸೇನನೇ ಮೊದಲಾದವರು ಧೀರೋದ್ಧತನಾಯಕರೆನಿಸಿದವರು. ಮಂತ್ರಿ ಮೊದಲಾದವರಲ್ಲಿ ರಾಜ್ಯದ ಹೊರೆಯನ್ನು ಇರಿಸಿ ನಿಶ್ಚಿಂತನಾಗಿರುವವನು, ಕೋಮಲಸ್ವಭಾವದವನು, ಯಾವಾಗಲೂ ನೃತ್ಯಗಾನ ಮೊದಲಾದ ವಿನೋದಗಳಲ್ಲಿಯೇ ನಿರತನಾಗಿರುವವನು ಇಂತವನು ಧೀರಲಲಿತನೆನಿಸುವನು. ರತಾವಳಿಯಲ್ಲಿ ಬರುವ ವತ್ಸರಾಜನು ಈ ಬಗೆಯ ನಾಯಕನೆನಿಸಿರುವನು.

ನಾಯಕರಲ್ಲಿ ಸಾಮಾನ್ಯವಾಗಿ ನೆಲಸಿರುವ ಗುಣಗಳಿಂದ ತುಂಬಿಕೊಂಡಿರುವವನು ಧೀರಪ್ರಶಾಂತನಾಯಕನೆನಿಸುವನು. ಇವನು ಬ್ರಾಹ್ಮಣಾದಿವರ್ಣಗಳಲ್ಲಿ ಯಾವನಾದರೂ ಒಬ್ಬನಾಗಿರಬಹುದು. ಮಾಲತೀಮಾಧವರಲ್ಲಿ ಮಾಧವನೇ ಈ ಬಗೆಯ ನಾಯಕನೆನಿಸಿರುವನು.

ಏಷಾಂ ಚ ಶೃಂಗಾರಿರೂಪತ್ವೇ ಭೇದಾನಾಹ—

ಏಭಿರ್ದಕ್ಷಿಣಧೃಷ್ಟಾನುಕೂಲಶಠರೂಪಿಭಿಸ್ತು ಷೋಡಶಧಾ ॥೪೦॥

ತತ್ರ ತೇಷಾಂ ಧೀರೋದಾತ್ತಾದೀನಾಂ ಪ್ರತ್ಯೇಕಂ ದಕ್ಷಿಣಧೃಷ್ಟಾನುಕೂಲ ಶಠತ್ವೇನ ಷೋಡಶಪ್ರಕಾರೋ ನಾಯಕಃ—

ಏಷು ತ್ವನೇಕಮಹಿಲಾಸು ಸಮರಾಗೋ ದಕ್ಷಿಣಃ ಕಥಿತಃ ।

ದ್ವಯೋಸ್ತ್ರಿಶ್ಚತುಃಪ್ರಭೃತಿಷು ನಾಯಿಕಾಸು ತುಲ್ಯಾನುರಾಗೋ ದಕ್ಷಿಣ ನಾಯಕಃ. ಯಥಾ—

ಸ್ನಾತಾ ತಿಷ್ಠತಿ ಕುಂತಲೇಶ್ವರಸುತಾ ವಾರೋಽಂಗರಾಜಸ್ವಸುಃ
ದ್ಯೂತೈ ರಾತ್ರಿರಿಯಂ ಜಿತಾ ಕಮಲಯಾ, ದೇವೀ ಪ್ರಸಾದ್ಯಾದ್ಯ ಚ ।
ಇತ್ಯಂತಃಪುರಸುಂದರೀಃ ಪ್ರತಿ ಮಯಾ ವಿಜ್ಞಾಯ ವಿಜ್ಞಾಪಿತೇ
ದೇವೇನಾಪ್ರತಿಪತ್ತಿಮೂಢಮನಸಾ ದ್ವಿತ್ರಾಃ ಸ್ಥಿತಂ ನಾಡಿಕಾಃ ॥

ಕೃತಾಗಾ ಅಪಿ ನಿಶ್ಶಂಕಸ್ತರ್ಜಿತೋಽಪಿ ನ ಲಜ್ಜಿತಃ ।
ದೃಷ್ಟದೋಷೋಽಪಿ ಮಿಥ್ಯಾವಾಕ್ ಕಥಿತೋ ಧೃಷ್ಟನಾಯಕಃ ॥ ೪೩ ॥

ಯಥಾ ಮಮ. ಶೋಣಂ ವೀಕ್ಷ್ಯ ಮುಖಂ ವಿಚುಂಬಿತುಮಹಂ ಯಾತಃ ಸಮೀಪಂ ತತಃ

ಪಾದೇನ ಪ್ರಹೃತಂ ತಯಾ ಸಪದಿ ತಂ ಧೃತ್ವಾ ಸಹಾಸೇ ಮಯಿ
ಕಿಂಚಿತ್ತತ್ರ ವಿಧಾತುಮಕ್ಷಮತಯಾ ಬಾಷ್ಪಂ ತ್ಯಜಂತ್ಯಾಃ ಸಖೇ
ಧ್ಯಾತಶ್ಚೇತಸಿ ಕೌತುಕಂ ವಿತನುತೇ ಕೋಪೋಽಪಿ ವಾಮಭ್ರುವಃ

ಅನುಕೂಲ ಏಕ ನಿರತಃ ॥ ೪೪ ॥

ಏಕಸ್ಯಾಮೇವ ನಾಯಿಕಾಯಾಮಾಸಕ್ತೋಽನುಕೂಲನಾಯಕಃ. ಯಥಾ ಶೃಂಗಾರ ತಿಲಕೇ — ಅಸ್ಮಾಕಂ ಸಖಿ ವಾಸಸೀ ನ ರುಚಿರೇ ಗ್ರೈವೇಯಕಂ ನೋಜ್ವಲಂ
ನೋ ವಕ್ರಾ ಗತಿರುದ್ಧತಂ ನ ಹಸಿತಂ ನೈವಾಸ್ತಿ ಕಶ್ಚಿನ್ಮದಃ ।
ಕಿಂ ತ್ವನ್ಯೇಽಪಿ ಜನಾ ವದಂತಿ ಸುಭಗೋಽಪ್ಯಸ್ಯಾಃ ಪ್ರಿಯೋ ನಾನ್ಯತಃ
ದೃಷ್ಟಿಂ ನಿಕ್ಷಿಪತೀತಿ ವಿಶ್ವಮಿಯತಾ ಮನ್ಯಾಮಹೇ ದುಃಖಿತಮ್ ॥

ಶಠೋಽಯಮೇಕತ್ರ ಬದ್ಧಭಾವೋ ಯಃ ॥
ದರ್ಶಿತಬಹಿರನುರಾಗೋ ವಿಪ್ರಿಯಮನ್ಯತ್ರ ಗೂಢಮಾಚರತಿ ॥ ೪೫ ॥

ಯಃ ಪುನರೇಕಸ್ಯಾಮೇವ ನಾಯಿಕಾಯಾಂ ಬದ್ಧಭಾವೋ ದ್ವಯೋರಪಿ ನಾಯಿಕಯೋರ್ಬಹಿರ್ದರ್ಶಿತಾನುರಾಗೋಽನ್ಯಸ್ಯಾಂ ನಾಯಿಕಾಯಾಂ ಗೂಢಂ ವಿಪ್ರಿಯಮಾಚರತಿ ಸಃ ಶಠನಾಯಕಃ.

ಯಥಾ ಅಮರುಶತಕೇ

ಶಠಾಽನ್ಯಸ್ಯಾಃ ಕಾಂಚೀಮಣಿರಣಿತಮಾಕರ್ಣ್ಯ ಸಹಸಾ
ಯದಾಶ್ಲಿಷ್ಯನ್ನೇವ ಪ್ರಶಿಥಿಲಭುಜಗ್ರಂಥಿರಭವಃ ।
ತದೇತತ್ ಕ್ವಾಚಕ್ಷೇ ಘೃತಮಧುಮಯತ್ವದ್ಬಹುವಚೋ

ವಿಶೇಣಾಘೂರ್ಣಂತೀ ಕಿಮುಪಿ ನ ಸಖೀ ಮೇ ಗಣಯತಿ ॥

ಹಿಂದೆ ಹೇಳಿದ ನಾಲ್ಕುಬಗೆಯ ನಾಯಕರಲ್ಲಿ ಒಬ್ಬೊಬ್ಬನೂ ದಕ್ಷಿಣ, ಧೃಷ್ಟ, ಅನುಕೂಲ, ಶಠ ಎಂದು ನಾಲ್ಕುಬಗೆಯಾಗುವುದರಿಂದ ಒಟ್ಟು ನಾಯಕರರಲ್ಲಿ ಹದಿನಾರು ಬಗೆಗಳಾಗುವರು.

ಇವರಲ್ಲಿ ದಕ್ಷಿಣನಾಯಕನು ಅನೇಕ ಸ್ತ್ರೀಯರಲ್ಲಿ ಅನುರಕ್ತನಾಗಿರುವನು. ರಾಜನ ದಕ್ಷಿಣಸ್ವಭಾವವು ಹೇಗಿದೆ ಎಂಬುದನ್ನು ದ್ವಾರಪಲಿಕೆಯೊಬ್ಬಳು ಸಖಿಯೊಬ್ಬಳಿಗೆ ತಿಳಿಸುವಳು. "ಕುಂತಲರಾಜನ ಮಗಳು ಸ್ನಾನಮಾಡಿ ಸಮಾಗಮಕ್ಕಾಗಿ ಕಾದಿರುವಳು. ಇದು ಅಂಗರಾಜನಮಗಳೊಡನೆ ಸೇರುವ ಸಮಯ. ಆದ್ದರಿಂದ ಅಲ್ಲಿಗೆ ಹೋಗುವುದು ಯುಕ್ತವೇ. ಕಮಲಾದೇವಿಯೊಡನೆ ದ್ಯೂತವಾಡಿ ರಾತ್ರಿಎಲ್ಲವನ್ನೂ ಕಳೆದಿರುವೆ. ಪಟ್ಟದರಾಣಿಯನ್ನೂ ಹೇಗಾದರೂ ಸಮಾಧಾನಮಾಡಲೇ ಬೇಕಾಗಿದೆ. ಹೀಗೆ ಅಂತಃ ಪುರದಸ್ತ್ರೀಯರ ಬಗ್ಗೆ ತಿಳಿದು ನಾನು ರಾಜನಿಗೆ ವಿಜ್ಞಾಪನೆಮಾಡಲು ಆವನಿಗೆ ಎಲ್ಲಿಗೆ ಹೋಗಬೇಕೆಂಬುದನ್ನು ನಿರ್ಣಯಿಸಲಿಕ್ಕಾಗದ್ದರಿಂದ ಅವನು ಎರಡು ಮೂರುಗಳಿಗೆಗಳ ವರೆಗೂ ಸುಮ್ಮನಿದ್ದನು.

ಯಾವುದೋ ಕಾರ್ಯಕ್ಕಾಗಿ ಹೋಗಿದ್ದ ಪ್ರೇಯಸಿಯು ಹತ್ತಿರದಲ್ಲಿಲ್ಲದೆ ಇದ್ದಾಗ ಆಕೆಗೆ ಅಪರಾಧವನ್ನು ಮಾಡಿದ್ದರೂ ನಿರ್ಭಯನಾಗಿರುವುದು, ಪ್ರೇಯಸಿಯಿಂದ ಅವಮಾನವನ್ನು ಹೊಂದಿದ್ದರೂ ನಾಚಿಕೆಯಿಲ್ಲದಿರುವುದು, ಇವನು ಬೇರೆ ಕಡೆ ಯಲ್ಲಿ ಅಸಕ್ತನಾಗಿರುವುದನ್ನು ಪ್ರೇಯಸಿಯು ಕಂಡಿದ್ದರೂ ತಾನು ಹಾಗೆ ಅಸಕ್ತನಾಗಿಲ್ಲ ವೆಂದು ಸುಳ್ಳನ್ನು ಹೇಳುವುದು. ಇದಿಷ್ಟು ಧೃಷ್ಟನಾಯಕನ ಸ್ವಭಾವವೆನಿಸಿದೆ. ನನ್ನದೇ ಆದ ಪದ್ಯವನ್ನು ಇಲ್ಲಿ ಉದಾಹರಿಸಲಾಗಿದೆ. ಒಬ್ಬ ನಾಯಕನು ಸ್ನೇಹಿತನೆದುರಿಗೆ ಹೇಳುವ ಮಾತಿದು. "ಆಕೆಯ ಮುಖವು ನನ್ನ ಅಪರಾದದಿಂದಲೇ ಕೆಂಪಗಾಗಿದ್ದು ದನ್ನು ನೋಡಿ ಚುಂಬಿಸಲಿಕ್ಕೆ ಸಮೀಪಕ್ಕೆ ಹೋದೆನು. ಆಗ ಆಕೆಯು ನನ್ನನ್ನು ಕಾಲಿನಿಂದ ಒದ್ದಳು. ನಾನಾದರೋ ಆ ಕೂಡಲೆ ಆ ಪಾದವನ್ನು ಹಿಡಿದು ಹಾಸ್ಯ ಮಾಡುತ್ತಿರಲು ಆಗ ಏನನ್ನೂ ಮಾಡಲಿಕ್ಕಾಗದ್ದರಿಂದ ಕಣ್ಣೀರಿಡುತ್ತಿದ್ದ ಆ ಸುಂದರ ಸ್ತ್ರೀಯ ಕೋಪವೂ ಸಹ ಮನಸ್ಸಿನಲ್ಲಿ ನೆನಸಿದಾಕ್ಷಣವೇ ಕುತೂಹಲವನ್ನು ಕೆರಳಿ ಸುತ್ತಿದೆ" ಪತಿಯು ಅಪರಾಧವನ್ನು ಮಾಡಿದ್ದರಿಂದ ಆಕೆಯ ಮುಖವು ಕೆಂಪೇರಿದೆ. ಅದನ್ನೇ ಇವನು ಮುತ್ತಿಡಲು ಹೋಗಿದ್ದುದರಿಂದ ಇವನು ತಪ್ಪುಮಾಡಿದ್ದರೂ ನಿರ್ಭಯ ನಾಗಿರುವನು. ಅವಳ ಕಾಲಿನಿಂದ ಹೊಡೆಸಿಕೊಂಡರೂ ಇವನಿಗೆ ನಾಚಿಕೆಯಿಲ್ಲ. ಈ ಬಗೆಯ ಲಕ್ಷಣಗಳಿರುವುದರಿಂದ ಇಂತಹ ನಾಯಕನು ಧೃಷ್ಟನೆನಿಸಿರುವನು.

ಒಬ್ಬ ನಾಯಿಕೆಯಲ್ಲಿಯೇ ಅನುರಾಗವಿಟ್ಟಿರುವವನು ಅನುಕೂಲನಾಯಕ ನೆನಿಸುವನು. ಶೃಂಗಾರತಿಲಕದ ಪದ್ಯದಲ್ಲಿ ಈ ನಾಯಕನ ಲಕ್ಷಣವನ್ನು ಉದಾ ಹರಿಸಿದೆ. ತನಗೆ ಪತಿಯು ಪ್ರಿಯನಾಗಿರುವುದನ್ನು ಪ್ರಕಟಿಸಲು ಒಬ್ಬ ಸ್ತ್ರೀಯು ಸಖಿಗೆ ಹೀಗೆ ಹೇಳುತ್ತಾಳೆ. "ಎಲೈ ಸಖಿಯೇ, ನನ್ನ ಬಟ್ಟೆಗಳೂ ಚೆನ್ನಾಗಿಲ್ಲ. ಅಡ್ಡಿಕೆ ಎಂಬ

ಕಂಠಾಭಾರಣವೂ ಸುಂದರವಾಗಿಲ್ಲ. ನನ್ನ ಗತಿಯೂ ಮನೋಹರವಾಗಿಲ್ಲ. ನಾನು ಗಟ್ಟಿಯಾಗಿ ನಗುತ್ತಲೂ ಇಲ್ಲ. ಬೇರೆ ಯಾವ ಯೌವನಮದವೂ ನನ್ನಲ್ಲಿ ಇಲ್ಲ. ಇಷ್ಟಾದರೂ ಪ್ರಿಯನು ಇಲ್ಲಿಂದ ಬಿಟ್ಟು ಬೇರೆ ಎಲ್ಲೂ ದೃಷ್ಟಿಯನ್ನಿಡುವುದಿಲ್ಲವೆಂದು ಜನರು ಹೇಳುತ್ತಾರೆ. ಇದರಿಂದ ವಿಶ್ವವನ್ನೇ ದುಃಖಗೊಳಿಸಿರುವೆನೆಂದು ನಾನು ಭಾವಿಸುತ್ತೇನೆ." ಇದು ಅನುಕೂಲನಾಯಕನ ವರ್ತನವೆನಿಸಿದೆ.

ಒಬ್ಬ ನಾಯಿಕೆಯಲ್ಲಿಯೇ ಆಶೆಯನ್ನಿಟ್ಟು ಹೊರಗೆ ನಾಯಿಕೆಯರಲ್ಲೂ ಅನುರಾಗವನ್ನು ತೋರಿಸುತ್ತ ಬೇರೊಬ್ಬ ನಾಯಿಕೆಯಲ್ಲಿ ಗುಪ್ತವಾಗಿ ಅಪ್ರಿಯ್ಯವನ್ನಾಚರಿಸುವವನು ಶಠನಾಯಕನೆನಿಸುವನು. ಅಮರುಶತಕದ ಪದ್ಯದಲ್ಲಿ ಇಂತಹ ನಾಯಕನ ವರ್ತನೆಯನ್ನು ಕಾಣಬಹುದು. ನಾಯಕನಿಗೆ ದೂತಿಯು ಹೇಳುವ ಮಾತಿದು. "ಎಲೈ ಧೂರ್ತನೇ, ನೀನು ನನ್ನ ಸಖಿಯನ್ನು ಆಲಿಂಗಿಸಿಕೊಂಡಿರುತ್ತಲೇ ಬೇರೊಬ್ಬಳು ಧರಿಸಿಕೊಂಡಿರುವ ಡಾಬಿನ ಗೆಜ್ಜೆಯ ಶಬ್ದವನು ಕೇಳಿ ಹಠಾತ್ತಾಗಿ ನಿನ್ನ ತೋಳುಗಳನ್ನು ಸಡಿಲಗೊಳಿಸಿಕೊಂಡೆ. ಹೀಗೆ ಇರುವ-ನಿನ್ನ ವರ್ತನೆಯನ್ನು ಏನೆಂದು ಯಾರಲ್ಲಿ ಹೇಳಲಿ? ತುಪ್ಪ ಮತ್ತು ಜೇನುವಿನೊಡನೆ ಕೂಡಿರುವಂತೆ ನಿನ್ನ ಮಾತು ಹೊರಗೆ ಮಧುರವೂ, ಒಳಗೆ ಕ್ರೂರವೂ ಆಗಿರುವುದರಿಂದ ಇಂತಹ ಮಾತಿನಿಂದ ಮೋಹಗೊಂಡಿರುವ ನನ್ನ ಸಖಿಗೆ ನಿನ್ನ ಸ್ವಭಾವವನ್ನು ತಿಳಿದುಕೊಳ್ಳಲಿಕ್ಕಾಗಿಲ್ಲ. ಇಲ್ಲಿ ತನ್ನಲ್ಲಿಗೆ ಬಂದ ನಾಯಿಕೆಯಲ್ಲಿ ಹೊರಗೆ ಅನುರಾಗವನ್ನು ತೋರಿಸುತ್ತ ಬೇರೊಬ್ಬಳಲ್ಲಿ ಗುಪ್ತವಾಗಿ ರಮಿಸುವುದನ್ನು ತಿಳಿಸಿರುವುದರಿಂದ ಈ ಬಗೆಯ ನಾಯಕನು ಶಠನೆನಿಸುವನು.

ಏಷಾಂ ಚ ತ್ರೈವಿಧ್ಯಾತ್ಸರ್ವೇಷಾಮುತ್ತಮಾಧಮಮಧ್ಯಮತ್ವೇನ ।
ಉಕ್ತಾ ನಾಯಕಭೇದಾಶ್ಚತ್ವಾರಿಂಶತ್ತಥಾಷ್ಟ ಚ ॥ ೪೬ ॥
ಸರ್ವೇಷಾಮುಕ್ತಷೋಡಶಭೇದಾನಾಮ್ ।

ಅಥ ಪ್ರಸಂಗಾದೇತೇಷಾಂ ಸಹಾಯಾನಾಹ—

ದೂರಾನುವರ್ತಿನಿ ಸ್ಯಾತ್ತಸ್ಯ ಪ್ರಾಸಂಗಿಕೇತಿವೃತ್ತೇ ತು ।
ಕಿಂಚಿತ್ತದ್ಗುಣಹೀನಃ ಸಹಾಯ ಏವಾಸ್ಯ ಪೀಠಮರ್ದಾಖ್ಯಃ ॥

ತಸ್ಯ ನಾಯಕಸ್ಯ ಬಹುವ್ಯಾಪಿನಿ ಪ್ರಸಂಗಸಂಗತೇ ಇತಿವೃತ್ತೇ ಅನಂತರೋಕ್ತೈರ್ನಾಯಕಸಾಮಾನ್ಯಗುಣೈಃ ಕಿಂಚಿದೂನಃ ಪೀಠಮರ್ದನಾಮಾ ಸಹಾಯೋ ಭವತಿ. ಯಥಾ ರಾಮಚಂದ್ರಾದೀನಾಂ. ಸುಗ್ರೀವಾದಯಃ

ಅಥ ಶೃಂಗಾರಸಹಾಯಾಃ—ಶೃಂಗಾರೇಽಸ್ಯ ಸಹಾಯಾಃ ವಿಟಚೇಟವಿದೂಷಕಾದ್ಯಾಃ ।
ಭಕ್ತಾ ನರ್ಮಸು ನಿಪುಣಾಃ ಕುಪಿತವಧೂಮಾನಭಂಜನಾಃ ಶುದ್ಧಾಃ ॥ ೪೭ ॥

ಆದಿಶಬ್ದಾನ್ಮಾಲಾಕಾರರಜಕತಾಂಬೂಲಿಕಗಾಂಧಿಕಾದಯಃ.

ತತ್ರ ವಿಟಃ—ಸಂಭೋಗಹೀನಸಂಪದ್ವಿಟಸ್ತು ಧೂರ್ತಃ ಕಲೈಕದೇಶಜ್ಞಃ ।
ವೇಶೋಪಚಾರಕುಶಲೋ ವಾಗ್ಮೀ ಮಧುರೋಽಥ ಬಹುಮತೋಗೋಷ್ಠ್ಯಾಮ್ ॥ ೪೮ ॥

ಚೇಟಃ ಪ್ರಸಿದ್ಧ ಏವ.

ಕುಸುಮವಸಂತಾದ್ಯಭಿಧಃ ಕರ್ಮವಪುರ್ವೇಷಭಾಷಾದ್ಯೈಃ।
ಹಾಸ್ಯಕರಃ ಕಲಹರತಿ ರ್ವಿದೂಷಕಃ ಸ್ಯಾತ್ಸ್ವಕರ್ಮಜ್ಞಃ ॥ ೫೦ ॥

ಸ್ವಕರ್ಮ ಭೋಜನಾದಿ.

ಹಿಂದೆ ಹೇಳಿದ ಹದಿನಾರು ಬಗೆಯ ನಾಯಕರಲ್ಲಿ ಒಬ್ಬೊಬ್ಬರೂ ಉತ್ತಮ, ಮಧ್ಯಮ, ಅಧಮ ಎಂದು ಮೂರು ಬಗೆಯಾಗಿರುವುದರಿಂದ ಒಟ್ಟು ನಾಯಕರು ನಲ್ವತ್ತೆಂಟು ಬಗೆಯಾಗುವರು. ಹೀಗೆ ನಾಯಕರನ್ನು ತಿಳಿಸಿಯಾದಮೇಲೆ ಅವರಿಗೆ ಸಂಬಂಧಿಸಿದ ಮಿತ್ರರು ಯಾರ್ಯಾರು ಎಂಬುದನ್ನು ತಿಳಿಸುತ್ತಾನೆ.

ನಾಟಕದಲ್ಲಿ ಪ್ರಧಾನನೆನಿಸಿದ ನಾಯಕನ ಚರಿತ್ರೆಯು ಬಹುದೂರದವರೆಗೂ ವ್ಯಾಪಿಸಿರುವಾಗ ನಾಯಕನ ಸಾಮಾನ್ಯಗುಣಗಳಿಂದ ಕೂಡಿ ಕೆಲವಂಶಗಳಲ್ಲಿ ಮಾತ್ರವೇ ನ್ಯೂನತೆಯಿರುವ ಅವನ ಸಹಾಯಕನ ವಿಚಾರವು ಕೆಲವು ಕಡೆ ಮಾತ್ರವೇ ಬರುವುದು. ಇಂತಹ ಸಹಾಯಕನೇ ಪೀಠಮರ್ದನೆನಿಸುವನು. ರಾಮಚಂದ್ರನಿಗೆ ಸುಗ್ರೀವನು ಇಂತಹ ಸಹಾಯಕನೆನಿಸಿದ್ದನು.

ಇನ್ನು ರಾಜನ ಶೃಂಗಾರಕ್ಕೆ ಸಹಾಯರಾಗುವವರನ್ನು ತಿಳಿಸುತ್ತಾನೆ.

ವಿಟ, ಚೇಟ, ವಿದೂಷಕ ಮೊದಲಾದವರು ರಾಜನಿಗೆ ಶೃಂಗಾರಕ್ಕೆ ಸಹಾಯ ಮಾಡುವವರು. ಇವರೆಲ್ಲರಿಗೂ ನಾಯಕನ ಬಗ್ಗೆ ಗೌರವವಿರುತ್ತದೆ. ಇವರು ಕೋಪ ಗೊಂಡ ನಾಯಕನ ಅಭಿಮಾನವನ್ನು ತೊಲಗಿಸಲು ಸಮರ್ಥರಿರುವರು. ಇವರು ನಾಯಕನ ಕಾರ್ಯದಲ್ಲಿ ಉದಾಸೀನರಾಗದಷ್ಟು ಶುದ್ಧರಿರುವರು. ಇಲ್ಲಿ ಆದಿಶಬ್ದದಿಂದ್ದ ಮಾಲಾಕಾರ, ರಜಕ, ತಾಂಬೂಲಿಕ, ಗಾಂಧಿಕ ಮೊದಲಾದವರನ್ನು ಗ್ರಹಿಸಬೇಕು. ಅವರಲ್ಲಿ ವಿಟನು ವಿಷಯಭೋಗದಿಂದ ಐಶ್ವರ್ಯವನ್ನು ಕಳೆದುಕೊಂಡು ಜೂಜಿನಲ್ಲಿ ಆಸಕ್ತನಾಗಿ, ನೃತ್ಯಗೀತಾದಿಕಲೆಗಳನ್ನು ಕೊಂಚ ತಿಳಿದು ವೇಶ್ಯೆಯರ ವ್ಯವಹಾರಗಳಲ್ಲಿ ನಿಪುಣನೂ, ವಾಗ್ಮಿಯೂ ಲೋಕಪ್ರಿಯನೂ ಎನಿಸಿ ಸಭೆಯಲ್ಲಿ ಅನೇಕಜನರೊಡನೆ ಕೂಡಿರುವನು. ಚೇಟನಂತೂ ಸೇವೆಯ ಮೂಲಕ ರಾಜನಿಗೆ ಸಹಾಯಕನಾಗಿರುವನು.

ವಿದೂಷಕನು ಯಾವುದಾದರೊಂದು ಪುಷ್ಪದ ಹೆಸರನ್ನೋ ಅಥವಾ ವಸಂತ ಎಂಬುದನ್ನೋ ಪಡೆದು ಕಾರ್ಯದಿಂದಲೂ, ಅಂಗಚೇಷ್ಟೆಯಿಂದಲೂ ವೇಷಭೂಷಣ ಗಳಿಂದಲೂ, ಗುರುತುಗಳಿಂದಲೂ ಲೋಕದ ಜನರನ್ನು ಹಾಸ್ಯಮಾಡುತ್ತ ಕಲಹವನ್ನು ಹೆಚ್ಚಿಸುವುದರಲ್ಲಿ ಆಸಕ್ತನೂ, ಭೋಜನವೇ ತನ್ನ ಪ್ರಧಾನಕರ್ಮವೆಂಬುದನ್ನು ತಿಳಿದವನೂ ಆಗಿರುವನು. ಇವರೆಲ್ಲರೂ ನಾಯಕನಿಗೆ ಸಹಾಯರೆನಿಸುವರು.

ಅರ್ಥಚಿಂತನೇ ಸಹಾಯಮಾಹ—

ಮಂತ್ರಿ ಸ್ಯಾದರ್ಥಾನಾಂ ಚಿಂತಾಯಾಮ್ ।

ಅರ್ಥಾಸ್ತಂತ್ರಾವಾಪಾದಯಃ. ಯತ್ತ್ವತ್ರ ಸಹಾಯಕಥನಪ್ರಸ್ತಾವೇ–"ಮಂತ್ರೀ ಸ್ವಂ ಚೋಭಯಂ ಚಾಪಿ ಸಖಾ ತಸ್ಯಾರ್ಥಚಿಂತನೇ" ಇತಿ ಕೇನಚಿಲ್ಲಕ್ಷಣಂ ಕೃತಂ; ತದಪಿ ರಾಜ್ಞೋಽರ್ಥಚಿಂತನೋಪಾಯಪ್ರಕರಣೇ ಲಕ್ಷಿತವ್ಯಂ; ನ ತು ಸಹಾಯಕಥನ

ಪ್ರಕರಣೇ. ನಾಯಕಸ್ಯ ಅರ್ಥಚಿಂತನೇ ಮಂತ್ರೀ ಸಹಾಯಃ ಇತ್ಯುಕ್ತೇऽಪಿ ನಾಯಕ ಸ್ಯಾರ್ಥತ ಏವ ಸಿದ್ಧತ್ವಾತ್. ಯದಪ್ಯುಕ್ತಂ " "ಮಂತ್ರಿಣಾ ಲಲಿತಃ ಶೇಷಾ ಮಂತ್ರಿ ಸ್ವಾಯತ್ತಸಿದ್ಧಯಃ" ತದಪಿ ಸ್ವಲಕ್ಷಣಕಥನೇನೈವ ಧೀರಲಲಿತಸ್ಯ ಮಂತ್ರಿಮಾತ್ರಾ ಯತ್ತಾರ್ಥಚಿಂತನೋಪಪತ್ತೇ(ರ್ಗತಾರ್ಥಮ್. ನ ಚಾರ್ಥಚಿಂತನೇ ತಸ್ಯ ಮಂತ್ರೀ ಸಹಾಯಃ, ಕಿಂತು ಸ್ವಯಮೇವ ನಿಷ್ಪಾದಕಃ ತಸ್ಯ ಅರ್ಥಚಿಂತನಾವ್ಯಭಾವಾತ್. ಅಥ ಅಂತಃಪುರಸಹಾಯಃ. ತದ್ವದವರೋಧೇ ।

ವಾಮನಷಂಡಕಿರಾತಮ್ಲೇಚ್ಛಾಭೀರಾಃ ಶಕಾರಕುಬ್ಜಾದ್ಯಾಃ ॥ ೫೧ ॥
ಮದಮೂರ್ಖತಾಭಿಮಾನೀ ದುಷ್ಕುಲತೈಶ್ವರ್ಯಸಂಯುಕ್ತಃ ।
ಸೋऽಯಮನೂಢಾಭ್ರಾತಾ ರಾಜ್ಞಃ ಶ್ಯಾಲಃ ಶಕಾರ ಇತ್ಯುಕ್ತಃ ॥ ೫೨ ॥

ಆದ್ಯಶಬ್ದಾನ್ಮೂಕಾದಯಃ. ತತ್ರ ಷಂಡವಾಮನಕಿರಾತಕುಬ್ಜಾದಯೋ ಯಥಾ ರತ್ನಾವಳ್ಯಾಮ್. ನಷ್ಟಂ ವರ್ಷವರೈರ್ಮನುಷ್ಯಗಣನಾಭಾವಾದಪಾಸ್ಯ ತ್ರಪಾಂ

ಅಂತಃ ಕಂಚುಕಿಕಂಚುಕಸ್ಯ ವಿಶತಿ ತ್ರಾಸಾದಯಂ ವಾಮನಃ ।
ಪರ್ಯಂತಾಶ್ರಯಿಭಿರ್ನಿಜಸ್ಯ ಸದೃಶಂ ನಾಮ್ನಃ ಕಿರಾತೈಃ ಕೃತಂ
ಕುಬ್ಜಾ ನೀಚತಯೈವ ಯಾಂತಿ ಶನಕೈರಾತ್ಮೇಕ್ಷಣಾಶಂಕಿನಃ ॥

ಶಕಾರೋ ಮೃಚ್ಛಕಟಿಕಾದಿಷು ಪ್ರಸಿದ್ಧಃ. ಅನ್ಯೇऽಪಿ ಯಥಾದರ್ಶನಂ ಜ್ಞಾತವ್ಯಾಃ. ಅಥ ದಂಡಸಹಾಯಾಃ—

ದಂಡೇ ಸುಹೃತ್ಕುಮಾರಾಟವಿಕಾಃ ಸಾಮಂತಸೈನಿಕಾದ್ಯಾಶ್ಚ ।

ದ್ದುಷ್ಟನಿಗ್ರಹೋ ದಂಡಃ. ಸ್ಪಷ್ಟಮನ್ಯತ್. ಅಥ ಧರ್ಮಸಹಾಯಾಃ.

ಋತ್ವಿಕ್ಪುರೋಧಸಃ ಸ್ಯುರ್ಬ್ರಹ್ಮವಿದಸ್ತಾಪಸಾಸ್ತಥಾ ಧರ್ಮೇ ॥ ೫೩ ॥
ಉತ್ತಮಾಃ ಪೀಠಮರ್ದಾದ್ಯಾಃ ಮಧ್ಯೌ ವಿಟವಿದೂಷಕೌ ।

ಬ್ರಹ್ಮವಿದೋ ವೇದವಿದ ಆತ್ಮವಿದೋ ವಾ. ಆದ್ಯಶಬ್ದಾನ್ಮಂತ್ರಿಪುರೋಹಿತಾದಯಃ.

ತಥಾ ಶಕಾರಚೇಟಾದ್ಯಾಃ ಅಧಮಾಃ ಪರಿಕೀರ್ತಿತಾಃ ॥ ೫೪ ॥

ಆದ್ಯಶಬ್ದಾತ್ತಾಂಬೂಲಿಕಾಗಾಂಧಿಕಾದಯಃ

ರಾಜನಿಗೆ ಹಣಸಂಪಾದನೆಯ ಚಿಂತನೆಯಲ್ಲಿ ಸಹಾಯಕರನ್ನು ಈಗ ತಿಳಿಸ ಲಾಗುವುದು. ಅರ್ಥಚಿಂತನೆಗೆ ಮಂತ್ರಿಯು ಆವಶ್ಯಕನೆನಿಸಿರುವನು. ಸ್ವರಾಜ್ಯದಲ್ಲಿ ಮಾಡಬೇಕಾದ ಕರ್ಮವೇ ತಂತ್ರವೆನಿಸುವುದು. ಪರರಾಜ್ಯದಲ್ಲಿ ಮಾಡಬೇಕಾದ್ದು ಆವಾಪವೆನಿಸುವುದು. ಇವನ್ನು ಪರಿಶೀಲಿಸುವುದೇ ಅರ್ಥವೆನಿಸಿದೆ. ಇದರ ಚಿಂತನೆಗೆ ಸಹಾಯಮಾಡುವವನೇ ಮಂತ್ರಿ ಎನಿಸುವನು. ರಾಜನ ಸಹಾಯಕರನ್ನು ತಿಳಿಸುವ ಸಂದರ್ಭದಲ್ಲಿ "ತನ್ನ ಮತ್ತು ರಾಜನ ಕರ್ತವ್ಯಗಳನ್ನು ಪರಿಶೀಲಿಸುವಾಗ ಒಬ್ಬನು ಮಂತ್ರಿ ಎನಿಸಿದ್ದು ರಾಜನಿಗೆ ಅರ್ಥಚಿಂತನೆಯಲ್ಲಿ ಸಹಾಯಮಾಡುವಾಗ ಮಿತ್ರನೆನಿ ಸುವನು." ಹೀಗೆ ಮಂತ್ರಿಯ ಲಕ್ಷಣವನ್ನು ಕೆಲವರು ಹೇಳಿರುವರು. ಅದನ್ನು ರಾಜನ ಅರ್ಥಚಿಂತನೆಗೆ ಬೇಕಾದ ಉಪಾಯಗಳನ್ನು ಪರಿಶೀಲಿಸುವಾಗ ಗಮನಿಸಬೇಕೇ

ಹೊರತು ನಾಯಕನ ಸಹಾಯಕರನ್ನು ತಿಳಿಸುವ ಸಂದರ್ಭದಲ್ಲಿ ಗಮನಿಸಬಾರದು, "ಸ್ವಪರ ರಾಷ್ಟ್ರಗಳ ವ್ಯವಹಾರಗಳಲ್ಲಿ ಮಂತ್ರಿಯು ರಾಜನಿಗೆ ಸಹಾಯನಾಗುವನು" ಎಂದು ಹೇಳಿದ್ದರೂ ಸಹ ಈ ಅಂಶವು ಅರ್ಥದಿಂದಲೇ ಸಿದ್ಧವಾಗುತ್ತದೆ. "ಧೀರಲಲಿತ ನೆಂಬ ನಾಯಕನು ಮಂತ್ರಿಯ ಸಹಾಯದಿಂದಲೇ ಸಿದ್ಧಿಯನ್ನು ಪಡೆಯುವನು. ಉಳಿದ ಧೀರೋದಾತ್ತ ಮೊದಲಾದ ನಾಯಕರು ಮಂತ್ರಿಯನ್ನೂ, ಸ್ವಶಕ್ತಿಯನ್ನೂ ಅವಲಂಬಿಸಿ ಕೊಂಡು ಕಾರ್ಯವನ್ನು ಸಾಧಿಸುವರು" ಎಂದು ಕೆಲವರು ಹೇಳಿರುವರು. ಇದೂ ಸಹ ಧೀರಲಲಿತನಿಗೆ ಹೇಳಿರುವ ಲಕ್ಷಣದಿಂದಲೇ ತಿಳಿದುಬರುವುದು. ಧೀರಲಲಿತನು ಮಂತ್ರಿಗೆ ಅಧೀನವಾಗಿಯೇ ತನ್ನ ಕಾರ್ಯಗಳನ್ನು ಸಾಧಿಸುವನೆಂದು ಹೇಳಿದ್ದರಿಂದಲೇ ಇಲ್ಲಿ ಹೇಳಿದ ಅಂಶವು ತಿಳಿದುಬರುವುದು. ಅವನಿಗೆ ಅರ್ಥಚಿಂತನದಲ್ಲಿ ಮಂತ್ರಿಯು ಸಹಾಯಕ ನಲ್ಲ: ಆದರೆ ಅವನಿಗೆ ಅರ್ಥಚಿಂತನವೇ ಇಲ್ಲದ ಪ್ರಯುಕ್ತ, ಅಕಸ್ಮಾತ್ ಯಾವು ದಾದರೂ ಸಂಭವಿಸಿದರೆ ಆಗ ಅದನ್ನು ಮಂತ್ರಿಯೇ ನೋಡಿಕೊಳ್ಳುವನು.

ರಾಜನಿಗೆ ಅಂತಃಪುರದಲ್ಲಿ ಸಹಾಯಕರನ್ನು ತಿಳಿಸುತ್ತಾನೆ–ಅವನಿಗೆ ಅಂತಃಪುರ ದಲ್ಲಿ ವಾಮನ, ಷಂಡ (ನಪುಂಸಕ), ಕಿರಾತ, ಮ್ಲೇಚ್ಛ, ಗೋಪಾಲ,, ಶಕಾರ, ಕುಬ (ವಕ್ರವಾದ ಆಕಾರವುಳ್ಳವನು) ಇವರೆಲ್ಲರೂ ಸಹಾಯಕರಾಗಿರುವರು.

ಇವರಲ್ಲಿ ಶಕಾರನು ಮದ, ಮೂರ್ಖತನ, ಅಹಂಕಾರಗಳಿಂದ ಕೂಡಿ ನೀಚವಂಶ ದಲ್ಲಿ ಹುಟ್ಟಿದ್ದರೂ ಐಶ್ವರ್ಯವನ್ನು ಪಡೆದಿದ್ದು ಮದುವೆಯಾಗದೇ ಇರುವ ಹುಡುಗಿಗೆ ಸೋದರನೆನಿಸಿದ್ದು ರಾಜನಿಗೆ ಭಾಮೈದುನನೆನಿಸಿರುವನು. ಮೂಲದಲ್ಲಿ ಆದ್ಯಶಬ್ದದಿಂದ ಮೂಕ ಮೊದಲಾದವರನ್ನು ಗ್ರಹಿಸಬೇಕು. ರತ್ನಾವಳೀನಾಟಕೆಯಲ್ಲಿ ಬರುವ ಷಂಡ. ವಾಮನ, ಕಿರಾತ, ಕುಬ್ಜ ಇವರು ಹೀಗಿರುವರು. ಕೋತಿಯು ಅನಿರೀಕ್ಷಿತವಾಗಿ ಅಂತಃಪುರವನ್ನು ಪ್ರವೇಶಿಸಿದಾಗ ಅಲ್ಲಿದ್ದವರು ಭ್ರಾಂತರಾದರೆಂಬುದನ್ನು ಇಲ್ಲಿ ವರ್ಣಿಸಿದೆ. "ಮನುಷ್ಯರೊಳಗೆ ತಮ್ಮನ್ನು ಪರಿಗಣಿಸದೆ ಇರುವುದರಿಂದ ಲಜ್ಜೆಯನ್ನು ತೊರೆದು ಭಯದಿಂದ ನಪುಂಸಕರು ಓಡಿಹೋದರು, ಮೋಟಾದ ಆಕಾರವುಳ್ಳವನು ಕಂಚುಕಿ ಎಂಬ ಮುದಿಬ್ರಾಹ್ಮಣನ ಉದ್ದವಾದ ಅಂಗಿಯೊಳಗೆ ಸೇರಿಕೊಂಡನು. ನಗರದ ಪಕ್ಕ ದಲ್ಲಿ ನೆಲೆಸುವ ಸ್ವಭಾವದವರಾದ ಕಿರಾತರು ತಮ್ಮ ಹೆಸರಿಗೆ ತಕ್ಕದ್ದನ್ನು ಮಾಡಿದರು. ಕೋತಿಯು ತಮ್ಮನ್ನು ಎಲ್ಲಿ ನೋಡುವುದೋ ಎಂಬ ಭಯದಿಂದ ಕುಳ್ಳರು ಮತ್ತಷ್ಟು ಬಗ್ಗಿಕೊಂಡು ನಡೆದರು" ಇಲ್ಲಿ ಇವರ ಸ್ವಭಾವಚೇಷ್ಟೆಗಳನ್ನು ಸ್ಪಷ್ಟವಾಗಿ ತಿಳಿಸಿದೆ. ಶಕಾರನು ಮೃಚ್ಛಕಟಿಕದಲ್ಲಿ ಪ್ರಸಿದ್ಧನೆನಿಸಿದ್ದಾನೆ. ಉಳಿದವರನ್ನು ಆಯಾಯ ನಾಟಕ ಗಳಲ್ಲಿ ನೋಡಿ ತಿಳಿಯತಕ್ಕದ್ದು.

ರಾಜನಿಗೆ ಲೋಕವನ್ನು ದಂಡಿಸಲು ಸಹಾಯಕರನ್ನು ತಿಳಿಸುತ್ತಾನೆ. ಸ್ನೇಹಿತರು, ವನೇಚರರು, ಸಾಮಂತರಾಜರು, ಮಕ್ಕಳು ಇವರೆಲ್ಲರೂ ರಾಜನಿಗೆ ದುಷ್ಟನಿಗ್ರಹವೆನಿಸಿದ ದಂಡಕ್ಕೆ ಸಹಾಯಕರೆನಿಸಿರುವರು.

ರಾಜನಿಗೆ ಧರ್ಮಕಾರ್ಯಗಳಲ್ಲಿ ಸಹಾಯಕರನ್ನು ತಿಳಿಸುತ್ತಾನೆ. ಯಾಜ್ಞಿಕರು,

ಪುರೋಹಿತರು, ಬ್ರಹ್ಮಜ್ಞಾನಿಗಳು, ತಪಸ್ವಿಗಳು ಇವರೆಲ್ಲರೂ ರಾಜನಿಗೆ ಧರ್ಮಾನುಷ್ಠಾನದಲ್ಲಿ ನೆರವಾಗುವರು.

ಇವರೆಲ್ಲರಲ್ಲೂ ಪೀಠಮರ್ದ, ಮಂತ್ರಿ, ಪುರೋಹಿತ ಮೊದಲಾದವರು ಉತ್ತಮರೆನಿಸುವರು. ವಿಟ ಮತ್ತು ವಿದೂಷಕರು ಮಧ್ಯಮರೆನಿಸಿರುವರು. ಹಾಗೆಯೇ ಶಕಾರ, ಚೇಟ, ತಾಂಬೂಲಿಕ (ತಾಂಬೂಲವನ್ನು ಬಾಯಿಗೆ ಇಡುವವರು) ಗಾಂಧಿಕ (ಗಂಧವನ್ನು ಮೈಗೆ ಹಚ್ಚುವವರು) ಇವರೆಲ್ಲರೂ ಅಧಮರೆನಿಸಿರುವರು.

ಅಥ ಪ್ರಸಂಗಾದ್ದೂತಾನಾಂ ವಿಭಾಗಗರ್ಭಲಕ್ಷಣಮಾಹ—

ನಿಸೃಷ್ಟಾರ್ಥೋ ಮಿತಾರ್ಥಶ್ಚ ತಥಾ ಸಂದೇಶಹಾರಕಃ ।
ಕಾರ್ಯಪ್ರೇಷ್ಯಸ್ತ್ರಿಧಾ ದೂತೋ ದೂತ್ಯಶ್ಚಾಪಿ ತಥಾವಿಧಾಃ ॥ ೫೩ ॥

ಅತ್ರ ಕಾರ್ಯಪ್ರೇಷ್ಯೋ ದೂತ ಇತಿ ಲಕ್ಷಣಮ್. ತತ್ರ

ಉಭಯೋರ್ಭಾವಮುನ್ನೀಯ ಸ್ವಯಂ ವದತಿ ಚೋತ್ತರಮ್ ।
ಸುಶ್ಲಿಷ್ಟಂ ಕುರುತೇ ಕಾರ್ಯಂ ನಿಸೃಷ್ಟಾರ್ಥಸ್ತು ಸ ಸ್ಮೃತಃ ॥ ೫೬ ॥

ಉಭಯೋರಿತಿ ಯೇನ ಪ್ರೇಷಿತೋ ಯದಂತಿಕಂ ಪ್ರೇಷಿತಶ್ಚ.

ಮಿತಾರ್ಥಭಾಷೀ ಕಾರ್ಯಸ್ಯ ಸಿದ್ಧಿಕಾರೀ ಮಿತಾರ್ಥಕಃ ।
ಯಾವದ್ಭಾಷಿತಸಂದೇಶಹಾರಃ ಸಂದೇಶಹಾರಕಃ ॥ ೫೭ ॥

ಅಥ ಸಾತ್ತ್ವಿಕಾ ನಾಯಕಗುಣಾಃ

ಶೋಭಾ ವಿಲಾಸೋ ಮಾಧುರ್ಯಂ ಗಾಂಭೀರ್ಯಂ ಧೈರ್ಯತೇಜಸೀ ।
ಲಲಿತೌದಾರ್ಯಮಿತ್ಯಷ್ಟೌ ಸತ್ತ್ವಜಾಃ ಪೌರುಷಾ ಗುಣಾಃ ॥ ೫೮ ॥

ತತ್ರ— ಶೂರತಾ ದಕ್ಷತಾ ಸತ್ಯಂ ಮಹೋತ್ಸಾಹೋಽನುರಾಗಿತಾ ।
ನೀಚೇ ಘೃಣಾಽಧಿಕೇ ಸ್ಪರ್ಧಾ ಯತಃ ಶೋಭೇತಿ ತಾಂ ವಿದುಃ ॥ ೫೯ ॥

ತತ್ರ ಅನುರಾಗಿತಾ ಯಥಾ—

ಅಹಮೇವ ಮತೋ ಮಹೀಪತೇರಿತಿ ಸರ್ವಃ ಪ್ರಕೃತಿಷ್ವಚಿಂತಯತ್ ।
ಉದಧೇರಿವ ನಿಮ್ನಗಾಶತೇಷ್ವಭವನ್ನಾಸ್ಯ ವಿಮಾನನಾ ಕ್ವಚಿತ್ ॥
ಏವಮನ್ಯತ್ರಾಪಿ. ಅಥ ವಿಲಾಸಃ—

ಧೀರಾ ದೃಷ್ಟಿರ್ಗತಿಶ್ಚಿತ್ರಾ ವಿಲಾಸೇ ಸಸ್ಮಿತಂ ವಚಃ ॥ ೬೦ ॥

ದೃಷ್ಟಿಸ್ತೃಣೀಕೃತಜಗತ್ತ್ರಯಸತ್ತ್ವಸಾರಾ
ಧೀರೋದ್ಧತಾ ನಮಯತೀವ ಗತಿರ್ಧರಿತ್ರೀಮ್ ।
ಕೌಮಾರಕೇಽಪಿ ಗಿರಿವದ್ಗುರುತಾಂ ದಧಾನೋ
ವೀರೋ ರಸಃ ಕಿಮಯಮಿತ್ಯುತ ದರ್ಪ ಏಷಃ ॥

ಸಂಕ್ಷೋಭೇಷ್ವನುದ್ವೇಗೋ ಮಾಧುರ್ಯಂ ಪರಿಕೀರ್ತಿತಮ್ ॥ ೬೧ ॥
ಭೀಶೋಕಕ್ರೋಧಹರ್ಷಾದ್ಯೈರ್ಗಾಂಭೀರ್ಯಂ ನಿರ್ವಿಕಾರತಾ ॥ ೬೨ ॥

ಊಹ್ಯಮುದಾಹರಣಮ್.

ಯಥಾ— ಆಹೂತಸ್ಯಾಭಿಷೇಕಾಯ ವಿಸೃಷ್ಟಸ್ಯ ವನಾಯ ಚ ।
ನ ಮಯಾ ಲಕ್ಷಿತಸ್ತಸ್ಯ ಸ್ವಲ್ಪೋಽಪ್ಯಾಕಾರವಿಭ್ರಮಃ ॥
ವ್ಯವಸಾಯಾದಚಲನಂ ಧೈರ್ಯಂ ವಿಘ್ನೇ ಮಹತ್ಯಪಿ ॥ ೬೩ ॥
ಯಥಾ— ಶ್ರುತಾಪ್ಸರೋಗೀತಿರಪಿ ಕ್ಷಣೇಽಸ್ಮಿನ್ ಹರಃ ಪ್ರಸಂಖ್ಯಾನಪರೋ ಬಭೂವ।
ಆತ್ಮೇಶ್ವರಾಣಾಂ ನ ಹಿ ಜಾತು ವಿಘ್ನಾಸ್ಸಮಾಧಿಭೇದಪ್ರಭವೋ ಭವಂತಿ ॥
ಅಧಿಕ್ಷೇಪಾಪಮಾನಾದೇಃ ಪ್ರಯುಕ್ತಸ್ಯ ಪರೇಣ ಯತ್ ।
ಪ್ರಾಣಾತ್ಯಯೇಽಪ್ಯಸಹನಂ ತತ್ತೇಜಃ ಸಮುದಾಹೃತಮ್ ॥
ವಾಗ್ವೇಷಯೋರ್ಮಧುರತಾ ತಾದೃಕ್ ಶೃಂಗಾರಚೇಷ್ಟಿತಂ ಲಲಿತಮ್ ।
ದಾನಂ ಸಪ್ರಿಯಭಾಷಣಮೌದಾರ್ಯಂ ಶತ್ರುಮಿತ್ರಯೋಸ್ಸಮತಾ ॥

ಕಾಂತಿ, ವಿಲಾಸ, ಮಾಧುರ್ಯ, ಗಾಂಭೀರ್ಯ, ಪ್ರಕಾಶ, ಮನೋಹರತ್ವ, ಔದಾರ್ಯ ಇವಿಷ್ಟು ಸತ್ತ್ವಗುಣದಿಂದ ನಾಯಕನಲ್ಲಿ ಉದ್ಭವಿಸುವ ಗುಣಗಳೆನಿಸಿವೆ. ಅವುಗಳಲ್ಲಿ ಶೌರ್ಯ, ಸಾಮರ್ಥ್ಯ, ಸತ್ಯ, ಹೆಚ್ಚಿನ ಉತ್ಸಾಹ, ಪ್ರೇಮದೃಷ್ಟಿ, ಸಣ್ಣವರಲ್ಲಿ ದಯೆ, ದೊಡ್ಡವರಲ್ಲಿ ಸ್ಪರ್ಧೆ ಇವಿಷ್ಟು ಯಾವುದರಿಂದ ಸಂಭವಿಸುತ್ತವೆಯೋ ಅದು ಶೋಭಾಗುಣವೆನಿಸುವುದು. ಅವುಗಳಲ್ಲಿ ಪ್ರೇಮದೃಷ್ಟಿಯನ್ನು ಉದಾಹರಿಸುತ್ತಾನೆ. "ನಾನೇ ಮಹಾರಾಜನಿಗೆ ಇಷ್ಟನು ಎಂದು ಪ್ರಜೆಗಳಲ್ಲಿ ಪ್ರತಿಯೊಬ್ಬನೂ ಆಲೋಚಿಸಿದನು. ನೂರಾರು ನದಿಗಳಿಗೆ ಸಮುದ್ರದಂತೆ ಯಾವಕಡೆಯಿಂದಲೂ ಈ ರಾಜನಿಗೆ ಅವಮಾನವೇ ಆಗಲಿಲ್ಲ. ಸಮುದ್ರವು ನದಿಗಳೆಲ್ಲವನ್ನೂ ಸಮಾನವಾಗಿ ಗೌರವಿಸಿದಂತೆ ರಾಜನು ಯಾರನ್ನೂ ಅವಮಾನಗೊಳಿಸಲಿಲ್ಲ; ಆದರೆ ಎಲ್ಲರನ್ನು ಆದರಿಸುತ್ತಿದ್ದನೆಂದರ್ಥ." ಇದರಿಂದ ರಾಜನಲ್ಲಿ ಪ್ರೇಮದೃಷ್ಟಿ ಮತ್ತು ಕಾಂತಿ ಎಂಬ ಸಾತ್ತ್ವಿಕಗುಣಗಳಿದ್ದುವೆಂಬುದು ಸ್ಪಷ್ಟಪಡುತ್ತದೆ. ಹೀಗೆಯೇ ಬೇರೆ ಕಡೆಗಳಲ್ಲೂ ತಿಳಿಯುವುದು.

ವಿಲಾಸವನ್ನು ಉದಾಹರಿಸುತ್ತಾನೆ. "ವಿಲಾಸಗುಣವು ಶೋಭಿಸುತ್ತಿರುವಾಗ ನಾಯಕನ ದೃಷ್ಟಿಯು ನಿಶ್ಚಲವೂ, ಗಮನವೂ ಆಶ್ಚರ್ಯಕರವೂ, ಮಾತು ಮುಗುಳುನಗೆಯೊಡಗೂಡಿಯೂ ಇರುತ್ತವೆ." ಉತ್ತರರಾಮಚರಿತದಲ್ಲಿ ಕುಶನನ್ನು ನೋಡಿ ರಾಮನು ಹೇಳುವ ಮಾತಿದು. "ಈ ಕುಮಾರನ ದೃಷ್ಟಿಯು ಮೂರು ಲೋಕಗಳ ಹೆಚ್ಚಿನ ಸಾಮರ್ಥ್ಯವನ್ನು ಹುಲ್ಲಿನಂತೆ ತಿರಸ್ಕರಿಸಿದೆ. ಅವನ ನಿಶ್ಚಲವೂ ಉದ್ಧತವೂ ಆದ ಗಮನವು ಭೂಮಿಯನ್ನೂ ಬಗ್ಗಿಸುವಂತಿದೆ. ಬಾಲ್ಯದಲ್ಲಿಯೂ ಬೆಟ್ಟದಂತೆ ಗೌರವವನ್ನು ಹೊಂದಿರುವ ಇವನು ವೀರರಸವೋ ಏನೋ ಎಂಬಂತಿರುವನು ಅಥವಾ ಗರ್ವವೇ ಹೀಗೆ ಶರೀರವನ್ನು ಧರಿಸಿದೆಯೋ ಎಂಬಂತಿದೆ" ಇಲ್ಲಿ ವಿಲಾಸಪ್ರಕೃತಿಯನ್ನು ತಿಳಿಸಿದೆ.

ಮನಸ್ಸಿಗೆ ಉದ್ವೇಗವುಂಟಾಗಲು ಸಾಕಷ್ಟು ಕಾರಣಗಳಿದ್ದರೂ ಉದ್ವೇಗವು ಹುಟ್ಟದಿರುವುದೇ ಮಾಧುರ್ಯವೆನಿಸುವುದು. ಇದಕ್ಕೆ ಉದಾಹರಣವನ್ನು ಊಹಿಸಿಕೊಳ್ಳುವುದು.

ಭಯ ಶೋಕ ಕ್ರೋಧ ಹರ್ಷ ಮೊದಲಾದ ಭಾವಗಳಿಂದ ಮನಸ್ಸಿಗೆ ವಿಕಾರವಿಲ್ಲದಿರುವ ಸ್ಥಿತಿಯೇ ಗಾಂಭೀರ್ಯವೆನಿಸುವುದು. "ರಾಮನನ್ನು ಅಭಿಷೇಕಕ್ಕಾಗಿ

ಕರೆದಾಗಲೂ, ವನವಾಸಕ್ಕೆ ಕಳುಹಿಸಿದಾಗಲೂ ಅವನಿಗೆ ಶರೀರದಲ್ಲಿ ಸ್ವಲ್ಪವಾದರೂ ವಿಕಾರವಾಯಿತೆಂಬುದನ್ನೇ ನಾನು ಗಮನಿಸಲಿಲ್ಲ" ಇಲ್ಲಿ ರಾಮನನ್ನು ಪಟ್ಟಾಭಿಷೇಕಕ್ಕೆ ಕರೆದಾಗಲೂ, ಅದು ತಪ್ಪಿ ಅವನು ಕಾಡಿಗೆ ಹೋಗಬೇಕಾದಾಗಲೂ ಅವನು ನಿರ್ವಿಕಾರ ನಾಗಿದ್ದುದೇ ಅವನ ಗಾಂಭೀರ್ಯವೆನಿಸಿದೆ.

ವಿಶೇಷವಾದ ಅಡಚಣೆಯಿದ್ದರೂ ಹಿಡಿದ ಪ್ರಯತ್ನದಿಂದ ವಿಮುಖನಾಗದಿರು ವುದೇ ಧೈರ್ಯವೆನಿಸುತ್ತದೆ. "ಅಪ್ಸರಸ್ತ್ರೀಯರ ಮನೋಹರವಾದ ಗಾನವಿದ್ದರೂ ಸಹ ಆ ಕಾಲದಲ್ಲಿ ಶಿವನು ಧ್ಯಾನದಲ್ಲಿಯೇ ನಿರತನಾಗಿದ್ದನು. ಆತ್ಮಶಕ್ತಿಯುಳ್ಳವರಿಗೆ ಸಮಾಧಿಯನ್ನು ನಾಶಮಾಡುವಂತಹ ವಿಘ್ನಗಳು ಎಂದಿಗೂ ಸಂಭವಿಸುವುದಿಲ್ಲ" ಇಲ್ಲಿ ಮನಸ್ಸಮಾಧಿಗೆ ಸಂಗೀತವು ವಿಘ್ನವನ್ನು ತಂದೊಡ್ಡಿದ್ದರೂ ಶಿವನು ಅದನ್ನು ಗಮನಿಸದೆ ಸ್ವರೂಪಧ್ಯಾನದಲ್ಲಿಯೇ ನಿರತನಾದುದು ಅವನ ಧೈರ್ಯಗುಣವನ್ನು ವ್ಯಕ್ತ ಪಡಿಸುತ್ತದೆ.

ಪ್ರಾಣವು ಹೋಗುವಾಗಲೂ ಸಹ ಶತ್ರುವಿನಿಂದ ಬರುವ ನಿಂದೆ, ಅವಮಾನ ಮೊದಲಾದುವನ್ನು ಸಹಿಸದಿರುವುದೇ ನಾಯಕನ ತೇಜಸ್ಸೆನಿಸುತ್ತದೆ. ಮಾತಿನಲ್ಲೂ ಹೊರಗಿನ ವೇಷದಲ್ಲೂ ಶೃಂಗಾರಚೇಷ್ಟೆಯಲ್ಲೂ ಕಂಡುಬರುವ ಸೌಂದರ್ಯವೇ ಲಲಿತ ಗುಣವೆನಿಸುತ್ತದೆ.

ಶತ್ರುವನ್ನೂ ಮಿತ್ರನನ್ನೂ ಸಮವಾಗಿ ಕಾಣುವುದು, ಹಾಗೆಯೇ ಒಳ್ಳೆಯ ಮಾತ ನ್ನಾಡುತ್ತಲೇ ದಾನಮಾಡುವುದು ಔದಾರ್ಯವೆನಿಸುತ್ತದೆ. ಇವೆಲ್ಲಕ್ಕೂ ಉದಾಹರಣ ಗಳನ್ನು ಊಹಿಸಿಕೊಳ್ಳುವುದು.

ಅಥ ನಾಯಿಕಾ ತ್ರಿವಿಧಾ ಸ್ವಾಽನ್ಯಾ ಸಾಧಾರಣೀ ಸ್ತ್ರೀತಿ ।
ನಾಯಕಸಾಮಾನ್ಯಗುಣೈರ್ಭವತಿ ಯಥಾಸಂಭವೈರ್ಯುಕ್ತಾ ॥ ೬೪ ॥

ನಾಯಿಕಾ ಪುನರ್ನಾಯಕಸಾಮಾನ್ಯಗುಣೈಸ್ತ್ಯಾಗಾದಿಭಿಃ ಯಥಾಸಂಭವೈರ್ಯು ಕ್ತಾ ಭವತಿ. ಸಾ ಚ ಸ್ವಸ್ತ್ರೀ ಅನ್ಯಸ್ತ್ರೀ ಸಾಧಾರಣಸ್ತ್ರೀತಿ ತ್ರಿವಿಧಾ. ತತ್ರ ಸ್ವಸ್ತ್ರೀ—

ವಿನಯಾರ್ಜವಾದಿಯುಕ್ತಾ ಗೃಹಕರ್ಮಪರಾ ಪತಿವ್ರತಾ ಸ್ವೀಯಾ ।

ಯಥಾ—ಲಜ್ಜಾಪರ್ಯಾಪ್ತಪ್ರಸಾಧನಾನಿ ಪರಭರ್ತೃನಿಷ್ಪಿಪಾಸಾನಿ ।
ಅವಿನಯದುರ್ಮೇಧಾನಿ ಧನ್ಯಾನಾಂ ಗೃಹೇ ಕಲತ್ರಾಣಿ ।

ಸಾಪಿ ಕಥಿತಾ ತ್ರಿಭೇದಾ ಮುಗ್ಧಾ ಮಧ್ಯಾ ಪ್ರಗಲ್ಭೇತಿ ॥೬೫॥

ತತ್ರ—ಪ್ರಥಮಾವತೀರ್ಣಯೌವನಮದನವಿಕಾರಾ ರತೌ ವಾಮಾ ।
ಕಥಿತಾ ಮೃದುಶ್ಚ ಮಾನೇ ಸಮಧಿಕಲಜ್ಜಾವತೀ ಮುಗ್ಧಾ ॥೬೬॥

ತತ್ರ ಪ್ರಥಮಾವತೀರ್ಣಯೌವನಾ ಯಥಾ ಮಮ ತಾತಪಾದಾನಾಮ್
ಮಧ್ಯಸ್ಯ ಪ್ರಥಿಮಾನಮೇತಿ ಜಘನಂ ವಕ್ಷೋಜಯೋರ್ಮಂದತಾ
ದೂರಂ ಯಾತ್ಯುದರಂ ಚ ರೋಮಲತಿಕಾ ನೇತ್ರಾರ್ಜವಂ ಧಾವತಿ ।
ಕಂದರ್ಪಂ ಪರಿವೀಕ್ಷ್ಯ ನೂತನಮನೋರಾಜ್ಯಾಭಿಷಿಕ್ತಂ ಕ್ಷಣಾತ್

ಅಂಗಾನೀವ ಪರಸ್ಪರಂ ವಿದಧತೇ ನಿರ್ಲುಂಠನಂ ಸುಭ್ರುವಃ ||
ಪ್ರಥಮಾವತೀರ್ಣಮದನವಿಕಾರಾ ಯಥಾ ಮಮ ಪ್ರಭಾವತೀಪರಿಣಯೇ
ದತ್ತೇ ಸಾಲಸಮಂಥರಂ ಭುವಿ ಪದಂ ನಿರ್ಯಾತಿ ನಾಂತಃಪುರಾತ್ |
ನೋದ್ದಾಮಂ ಹಸತಿ ಕ್ಷಣಾತ್ ಕಲಯತೇ ಹ್ರೀಯಂತ್ರಣಾಂ ಕಾಮಪಿ |
ಕಿಂಚಿದ್ಭಾವಗಭೀರವಕ್ರಿಮಲವಸ್ಪೃಷ್ಟಂ ಮನಾಗ್ಭಾಷತೇ |
ಸಭ್ರೂಭಂಗಮುದೀಕ್ಷತೇ ಪ್ರಿಯಕಥಾಮುಲ್ಲಾಸಯಂತೀಂ ಸಖೀಮ್ ||

ರತೌ ವಾಮಾ ಯಥಾ—
ದೃಷ್ಟಾ ದೃಷ್ಟಿಮಧೋ ದಧಾತಿ ಕುರುತೇ ನಾಲಾಪಮಾಭಾಷಿತಾ
ಶಯ್ಯಾಯಾಂ ಪರಿವೃತ್ಯ ತಿಷ್ಠತಿ ಬಲಾದಾಲಿಂಗಿತಾ ವೇಪತೇ|
ನಿರ್ಯಾಂತೀಷು ಸಖೀಷು ವಾಸಭವನಾನ್ನಿರ್ಗಂತುಮೇವೇಹತೇ
ಜಾತಾ ವಾಮತಯೈವ ಸಂಪ್ರತಿ ಮಮ ಪ್ರೀತ್ಯೈ ನವೋಢಾ ಪ್ರಿಯಾ ||

ಮಾನೇ ಮೃದುರ್ಯಥಾ—
ಸಾ ಪತ್ಯುಃ ಪ್ರಥಮಾಪರಾಧಸಮಯೇ ಸಖ್ಯೋಪದೇಶಂ ವಿನಾ
ನೋ ಜಾನಾತಿ ಸವಿಭ್ರಮಾಂಗವಲನಾ ವಕ್ರೋಕ್ತಿಸಂಸೂಚನಮ್|
ಸ್ವಚ್ಛೈರಚ್ಛಕಪೋಲಮೂಲಗಲಿತೈಃ ಪರ್ಯಸ್ತನೇತ್ರೋತ್ಪಲಾ
ಬಾಲಾ ಕೇವಲಮೇವ ರೋದಿತಿ ಲುಠಲ್ಲೋಲಾಲಕೈರಶ್ರುಭಿಃ ||

ಸಮಧಿಕಲಜ್ಜಾವತೀ ಯಥಾ 'ದತ್ತೇ ಸಾಲಸಮಂಥರಮ್' ಇತ್ಯತ್ರ.

ತತ್ರ ಸಮಧಿಕಲಜ್ಜಾವತೀತ್ವೇನಾಪಿ ಲಬ್ಧಾಯಾಃ ರತಿವಾಮತಾಯಾಃ ವಿಚ್ಛಿತ್ತಿವಿಶೇಷವತ್ತಯಾ ಪುನಃ ಕಥನಮ್

ನಾಯಿಕೆಯು ಸ್ವಸ್ತ್ರೀ ತನಗೆ ಭೋಗ್ಯಳಾದವಳು, ಅನ್ಯಸ್ತ್ರೀ ತನಗಿಂತ ಬೇರೆಯವರಿಗೆ ಭೋಗ್ಯಳಾದವಳು, ಸಾಧಾರಣಸ್ತ್ರೀ ಸಕಲ ಜನರಿಗೂ ಭೋಗ್ಯಳಾದವಳು ಹೀಗೆ ಮೂರುಬಗೆ ಎನಿಸಿರುವಳು. ನಾಯಕನಲ್ಲಿರುವ ತ್ಯಾಗ, ಸಾಮರ್ಥ್ಯ. ಔದಾರ್ಯ ಮೊದಲಾದ ಸದ್ಗುಣಗಳು ಸಹಜವಾಗಿ ನಾಯಿಕೆಯಲ್ಲೂ ನೆಲಸಿರುವುವು. ಇವರಲ್ಲಿ ಸ್ವೀಯನಾಯಿಕೆಯು ನಮ್ರತೆ (ಇಂದ್ರಿಯ ನಿಗ್ರಹ) ಋಜುಪ್ರಕೃತಿ ಮೊದಲಾದ ಗುಣಗಳಿಂದ ಕೂಡಿ ಮನೆಯ ಕೆಲಸಗಳನ್ನು ಶ್ರದ್ಧೆಯಿಂದ ನಡೆಸುತ್ತ ಪತಿಯಲ್ಲಿ ಭಕ್ತಿಯಿಂದ ನಡೆದುಕೊಳ್ಳುವಳು. "ನಾಚಿಕೆಯೇ ವಿಶೇಷವಾದ ಆಭರಣವೆನಿಸಿ, ಪರಪುರುಷರಲ್ಲಿ ಆಶೆಮಾಡದೆ, ದುರ್ವ್ಯಸನಗಳನ್ನರಿಯದೆ ಇರುವ ಸ್ತ್ರೀಯರು ಪುಣ್ಯಾತ್ಮರ ಮನೆಯಲ್ಲಿ ಮಾತ್ರವೇ ಇರುವರು." ಇಂತಹ ಸ್ತ್ರೀಯರು ಸ್ವಸ್ತ್ರೀ ಎನಿಸುವರು. ಇಂತಹ ಸ್ವಸ್ತ್ರೀಯಲ್ಲಿ ಮುಗ್ಧೆ, ಮಧ್ಯೆ, ಪ್ರಗಲ್ಭೆ ಎಂದು ಮೂರು ಬಗೆಯವರಿರುವರು. ಅವರಲ್ಲಿ ಮುಗ್ಧ ನಾಯಿಕೆಯ ಸ್ವಭಾವನ್ನು ಇಲ್ಲಿ ತಿಳಿಸಲಾಗುವುದು.

ಯೌವನವೂ ಕಾಮವಿಕಾರವೂ ಮೊದಲಬಾರಿಗೆ ಹೊಸದಾಗಿ ಬಂದಿದ್ದು, ರತಿಯಲ್ಲಿ ವಕ್ರಳೂ, ಮಾನದಲ್ಲಿ ಮೃದುವೂ, ಹೆಚ್ಚು ನಾಚಿಕೆಯಿಂದ ಕೂಡಿಯೂ ಇರು-

ವವಳು ಮುಗ್ಧೆ ಎನಿಸುವಳು. ಈ ಐದು ಬಗೆಯ ವರ್ತನವೇ ಇವಳ ಸ್ವಭಾವವಾಗಿದೆ. ಆಗ ತಾನೆ ಯೌವನಸ್ಥಿತಿಯನ್ನು ಪಡೆದವಳ ವರ್ತನೆಯನ್ನು ಹೀಗೆ ವರ್ಣಿಸಿದೆ. "ಈಕೆಯ ಪಶ್ಚಾದ್ಭಾಗದಲ್ಲಿ ಕಟಿಪ್ರದೇಶದ ಸ್ಥೌಲ್ಯವು ನೆಲಸಿದೆ. ಹೊಟ್ಟೆಯ ಸ್ಥೌಲ್ಯವು ಸ್ತನಗಳಲ್ಲಿ ಸೇರಿಕೊಂಡಿದೆ. ನೇತ್ರಗಳು ಹುಬ್ಬುಗಳ ವಕ್ರಸ್ವಭಾವವನ್ನು ಹೊಂದಿವೆ. ಆದ್ದರಿಂದಲೇ ಶೋಭನಾಂಗಿಯ ಅವಯವಗಳು ಮನ್ಮಥನಿಗೆ ಹೊಸದಾಗಿ ಮನೋರಾಜ್ಯದಲ್ಲಿ ಪಟ್ಟಾಭಿಷೇಕವಾಗಿದೆಯೋ ಏನೋ ಎಂದು ಭಾವಿಸಿ ಒಂದು ಕ್ಷಣಕಾಲದಲ್ಲಿಯೇ ತಮ್ಮಲ್ಲಿರುವ ವಸ್ತುಗಳನ್ನು ಪರಸ್ಪರವಾಗಿಬದಲು ಮಾಡಿಕೊಳ್ಳುವಂತಿವೆ'' ರಾಜ್ಯದಲ್ಲಿ ಹೊಸದಾಗಿ ಅಭಿಷಿಕ್ತವಾದ ರಾಜನನ್ನು ನೋಡಿ ಪ್ರಜೆಗಳು ಸಂತೋಷಗೊಳ್ಳುವಂತೆ ಆಕೆಯ ದೇಹದಲ್ಲಿ ಅವಯವಗಳು ಸಂತೋಷದಿಂದ ಒಂದರಿಂದೊಂದಕ್ಕೆ ವಸ್ತುಗಳನ್ನು ಬದಲಾಯಿಸಿಕೊಂಡವು. ಆಕೆಗೆ ಯೌವನಕಾಲದಲ್ಲಿ ಆದ ಬದಲಾವಣೆಗಳನ್ನು ಇಲ್ಲಿ ತಿಳಿಸಲಾಗಿದೆ. ಇಲ್ಲಿ ಜಘನ ಮೊದಲಾದ ಅವಯವಗಳು ದಪ್ಪನಾಗಲಾರಂಭಿಸಿದ್ದವೆಂದು ವರ್ಣಿಸಿದ್ದರಿಂದ ಆಕೆಗೆ ಯೌವನವು ಆಗ ತಾನೆ ಬಂದಿತ್ತೆಂದು ಸೂಚಿಸಲಾಗಿದೆ.

ಹೊಸದಾಗಿ ಕಾಮವಿಕಾರ ಉಂಟಾದವಳನ್ನು ಪ್ರಭಾವತೀಪರಿಣಯದಲ್ಲಿ ಹೀಗೆ ವರ್ಣಿಸಿದೆ. "ಆ ಪ್ರಭಾವತಿಯು ನೆಲದಮೇಲೆ ಮೆಲ್ಲಗೆ ಹೆಜ್ಜೆಯನ್ನಿಡುವಳು. ಅಂತಃಪುರದಿಂದ ಹೊರಗೆ ಹೊರಡುವುದಿಲ್ಲ; ಗಟ್ಟಿಯಾಗಿ ನಗುವುದಿಲ್ಲ; ತನಗೆ ಸಂಭವಿಸಿದ್ದರೂ ಹೇಳಲಿಕ್ಕಾಗದಷ್ಟು ಲಜ್ಜೆಯಿಂದುಂಟಾಗಿರುವ ಹಿಂಸೆಯನ್ನು ಪ್ರತಿಕ್ಷಣದಲ್ಲೂ ಅನುಭವಿಸುತ್ತಿರುವಳು. ಯಾವುದೋ ಒಂದು ಬಗೆಯ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು ಅದನ್ನು ತಿಳಿಯಲಿಕ್ಕಾಗದಷ್ಟು ವಕ್ರಸ್ವಭಾವದಿಂದ ಮಿತವಾಗಿ ಮಾತನಾಡುತ್ತಾಳೆ. "ಪತಿಯ ಬಗ್ಗೆ ಮಾತನಾಡುತ್ತಿರುವ ಸಖಿಯ ಮುಖವನ್ನು ಹುಬ್ಬುಗಂಟು ಹಾಕಿಕೊಂಡು ನೋಡುತ್ತಾಳೆ. ಇಲ್ಲಿ ಹ್ರೀಯಂತ್ರಣಾಂ ಎಂಬಲ್ಲಿ ಆಕೆಗೆ ಮನಸ್ಸಿನಲ್ಲಿ ಅಂಟಿಕೊಂಡಿದ್ದ ಆಶೆಗೆ ಲಜ್ಜೆಯಿಂದ ತಡೆಯಾಗಿತ್ತೆಂದು ಸೂಚನೆ ಇರುವುದರಿಂದಲೂ, ಪತಿಯ ಸಮಾಚಾರವನ್ನು ಹುಬ್ಬುಗಂಟುಹಾಕಿಕೊಂಡು ಕೇಳುವುದರಿಂದಲೂ ಈಕೆಗೆ ಕಾಮವಿಕಾರವು ಆಗ ತಾನೆ ಬಂದಿತ್ತೆಂದು ತಿಳಿದುಬರುತ್ತದೆ.

ರತಿಯಲ್ಲಿ ವಿರುದ್ಧವಾಗಿ ಆಚರಿಸುವವಳನ್ನು ಇಲ್ಲಿ ತಿಳಿಸಿದೆ. "ಆಗತಾನೆ ಮದುವೆಯಾಗಿದ್ದ ಹುಡುಗಿಯನ್ನು ನಾನು ನೋಡಿದಾಗ ಆಕೆಯು ತನ್ನ ನೋಟವನ್ನು ಕೆಳಕ್ಕೆ ತಗ್ಗಿಸುವಳು. ಮಾತನಾಡಿಸಿದರೆ ನನ್ನೊಡನೆ ಮಾತನ್ನೂ ಆಡುವುದಿಲ್ಲ; ಹಾಸಿಗೆಯಲ್ಲಿ ನನ್ನ ಕಡೆಗೆ ಬೆನ್ನನ್ನು ತಿರುಗಿಸಿಕೊಂಡು ನಿಂತಿದ್ದಾಳೆ. ನಾನೇ ಬಲಾತ್ಕಾರದಿಂದ ಆಲಿಂಗಿಸಿದರೆ ಆಕೆ ನಡುಗುತ್ತಾಳೆ. ಸಖಿಯರು ವಾಸದ ಮನೆಯಿಂದ ಹೊರಡುತ್ತಿರಲು ಈಕೆಯು ತಾನೂ ಹೊರಡಲು ಇಚ್ಛಿಸುತ್ತಾಳೆ. ಎಲ್ಲೆಡೆಯಲ್ಲೂ ಆಕೆಗೆ ಹೆಚ್ಚು ನಾಚಿಕೆಯುಂಟಾಗಿರುವುದರಿಂದ ಹೀಗೆ ಮಾಡುತ್ತಿರುವಳು" ಹೀಗೆ ರತಿಯಲ್ಲಿ ವಿರುದ್ಧವಾದದ್ದನ್ನು ಆಚರಿಸುತ್ತಲೇ ಈಕೆ ನನ್ನನ್ನು ಸಂತೋಷಪಡಿಸುತ್ತಾಳೆ ಎಂದು ಇಲ್ಲಿ ತಿಳಿಸಿದೆ.

ವರ್ತನವಲ್ಲಿ ಮೃದುವಾಗಿರುವವಳ ಸ್ವಭಾವವನ್ನು ಇಲ್ಲಿ ವರ್ಣಿಸಿದೆ. "ಈ ಬಾಲಿಕೆಗೆ ತನ್ನ ಪತಿಯು ಮೊದಲಬಾರಿಗೆ ಅಪಾರಾಧವನ್ನೆಸಗಿದಾಗ ಸಖಿಯರು ಅವನ್ನು ತಿಳಿಸದಿದ್ದರೆ ಅಪರಾಧವನ್ನು ಹೇಗೆ ಮುಚ್ಚಬೇಕೆಂಬ ಭೀತಿಯಿಂದ ಪತಿಯ ಅವಯವಗಳೆಲ್ಲವೂ ನಡುಗುತ್ತಿದ್ದರೂ ಆಕೆ ತಾನಾಗಿಯೇ ತಿಳಿದುಕೊಳ್ಳುವುದಿಲ್ಲ: ಆದರೆ ಸುತ್ತಲೂ ಕಣ್ಣುಗಳನ್ನು ತಿರುಗಿಸುತ್ತ ಸುಮ್ಮನೆ ಅಳುತ್ತಿರುವಳು. ಆಗ ಶುದ್ಧವಾದ ಕಣ್ಣೀರಿನ ಹನಿಗಳು ಸ್ವಚ್ಛವಾದ ಕೆನ್ನೆಗಳ ಮೇಲೆ ಬೀಳುತ್ತಿವೆ. ಮುಂಗುರುಳು ಒಂದಕ್ಕೊಂದು ತಗುಲಿ ಅಲುಗಾಡುತ್ತಲಿವೆ." ಪತಿಯು ಪರಸ್ತ್ರೀಯಲ್ಲಿ ಆಸಕ್ತನಾಗಿದ್ದು ದನ್ನು ಪ್ರೇಯಸಿಯ ಎದುರಿಗೆ ಮುಚ್ಚಲು ಚಾತುರ್ಯದಿಂದ ವರ್ತಿಸುತ್ತಿದ್ದರೂ, ಪ್ರೇಯಸಿಯು ಮೃದುಸ್ವಭಾವದಿಂದ ಪತಿಯ ಅಪರಾಧವನ್ನು ತಾನಾಗಿಯೇ ತಿಳಿಯ ಲಿಲ್ಲವೆಂಬುದನ್ನು ಇಲ್ಲಿ ತಿಳಿಸಿರುವುದರಿಂದ ಆಕೆಗೆ ಗೌರವದೃಷ್ಟಿಯಿದ್ದರೂ ಮೃದು ಸ್ವಭಾವವಿತ್ತೆಂಬುದು ತಿಳಿದುಬರುತ್ತದೆ. ಹೆಚ್ಚು ಲಜ್ಜೆಯುಳ್ಳವಳ ಸ್ವಭಾವವನ್ನು 'ಧತ್ತೆ ಸಾಲಸನಮಂಥರಂ' ಎಂಬ ಪದ್ಯದಲ್ಲಿ ತಿಳಿಸಿದೆ. ಹೆಚ್ಚು ಲಜ್ಜೆಯುಳ್ಳವಳೆಂದು ಹೇಳಿದ್ದ ರಲ್ಲಿಯೇ "ರತಿಯಲ್ಲಿ ವಿರುದ್ಧವಾಗಿ ಆಚರಿಸುವವಳು" ಎಂಬ ಅಂಶವು ಸೇರಿದ್ದರೂ ಅದರಲ್ಲಿಯೂ ಒಂದು ಬಗೆಯ ವೈಚಿತ್ರ್ಯವಿರುವುದರಿಂದ ಅದನ್ನು ಮತ್ತೆ ತಿಳಿಸಿದೆ.

ಅಥ ಮಧ್ಯಾ—ಮಧ್ಯಾ ವಿಚಿತ್ರಸುರತಾ ಪ್ರರೂಢಸ್ಮರಯೌವನಾ।
ಈಷತ್ಪ್ರಗಲ್ಭವಚನಾ ಮಧ್ಯಮವ್ರೀಡಿತಾ ಮತಾ॥ ೬೭ ॥

ತತ್ರ ವಿಚಿತ್ರಸುರತಾ ಯಥಾ—

ಕಾಂತೇ ತಥಾ ಕಥಮಪಿ ಪ್ರಥಿತಂ ಮೃಗಾಕ್ಷ್ಯಾ
ಚಾತುರ್ಯಮುದ್ಧತಮನೋಭವಯಾ ರತೇಷು ॥
ತತ್ಕೂಜಿತಾನ್ಯನುವದದ್ಭಿರನೇಕವಾರಂ
ಶಿಷ್ಯಾಯಿತಂ ಗೃಹಕಪೋತಶತೈರ್ಯಥಾಸ್ಯಾಃ ॥

ಪ್ರರೂಢಸ್ಮರಾ ಯಥಾ ಅತ್ರೈವೋದಾಹರಣೇ.

ಪ್ರರೂಢಯೌವನಾ ಯಥಾ ಮಮ—

ನೇತ್ರೇ ಖಂಜನಗಂಜನೇ ಸರಸಿಜಪ್ರತ್ಯರ್ಥಿ ಪಾಣಿದ್ವಯಂ
ವಕ್ಷೋಜೌ ಕರಿಕುಂಭವಿಭ್ರಮಕರೀಮತ್ಯುನ್ನತಿಂ ಗಚ್ಛತಃ।
ಕಾಂತಿಃ ಕಾಂಚನಚಂಪಕಪ್ರತಿನಿಧಿರ್ವಾಣೀ ಸುಧಾಸ್ಪರ್ಧಿನೀ
ಸ್ಮೇರೇಂದೀವರದಾಮಸೋದರವಪುಸ್ತಸ್ಯಾಃ ಕಟಾಕ್ಷಚ್ಛಟಾ ॥

ಏವಮನ್ಯತ್ರಾಪಿ. ಅಥ ಪ್ರಗಲ್ಭಾ—

ಸ್ಮರಾಂಧಾ ಗಾಢತಾರುಣ್ಯಾ ಸಮಸ್ತರತಕೋವಿದಾ ।
ಭಾವೋನ್ನತಾ ದರವ್ರೀಡಾ ಪ್ರಗಲ್ಭಾಕ್ರಾಂತನಾಯಕಾ॥೬೮॥

ಸ್ಮರಾಂಧಾ ಯಥಾ—ಧನ್ಯಾಸಿ ಯಾ ಕಥಯಸಿ ಪ್ರಿಯಸಂಗಮೇಽಪಿ
ವಿಶ್ರಬ್ಧಚಾಟುಕಶತಾನಿ ರತಾಂತರೇಷು।

ನೀವೀಂ ಪ್ರತಿ ಪ್ರಣಿಹಿತೇ ತು ಕರೇ ಪ್ರಿಯೇಣ
ಸಖ್ಯಃ ಶಪಾಮಿ ಯದಿ ಕಿಂಚಿದಪಿ ಸ್ಮರಾಮಿ ।

ಗಾಢತಾರುಣ್ಯಾ ಯಥಾ— ಅತ್ಯುನ್ನತಸ್ತನಮುರೋ ನಯನೇ ಸುದೀರ್ಘೇ
ವಕ್ರೇ ಭ್ರುವಾವತಿತರಾಂ ವಚನಂ ತತೋಽಪಿ ।
ಮಧ್ಯೇಽಧಿಕಂ ತನುರನೂನಗುರುರ್ನಿತಂಬೋ
ಮಂದಾ ಗತಿಃ ಕಿಮಪಿ ಚಾದ್ಭುತಯೌವನಾಯಾಃ ॥

ಸಮಸ್ತರತಕೋವಿದಾ ಯಥಾ—ಕ್ವಚಿತ್ತಾಂಬೂಲಾಕ್ತಃ ಕ್ವಚಿದಗುರುಪಂಕಮಲಿನಃ
ಕ್ವಚಿಚ್ಚೂರ್ಣೋದ್ಗಾರೀ ಕ್ವಚಿದಪಿ ಚ ಸಾಲಕ್ತಕಪದಃ ।
ವಲೀಭಂಗಾಭೋಗೈರಲಕಪತಿತೈಃ ಶೀರ್ಣಕುಸುಮೈಃ
ಸ್ತ್ರಿಯಾಃ ಸರ್ವಾವಸ್ಥಂ ಕಥಯತಿ ರತಂ ಪ್ರಚ್ಛದಪಟಃ ॥

ಭಾವೋನ್ನತಾ ಯಥಾ—ಮಧುರವಚನೈಃ ಸಭ್ರೂಭಂಗೈಃ ಕೃತಾಂಗುಲಿತರ್ಜನೈಃ
ರಭಸರಚಿತೈರಂಗನ್ಯಾಸೈರ್ಮಹೋತ್ಸವಬಂಧುಭಿಃ ।
ಅಸಕೃದಸಕೃತ್ ಸ್ಫಾರಸ್ಫಾರೈರಪಾಂಗವಿಲೋಕಿತೈಃ
ತ್ರಿಭುವನಜಯೇ ಸಾ ಪಂಚೇಷೋಃ ಕರೋತಿ ಸಹಾಯತಾಮ್ ॥

ಸ್ವಲ್ಪವ್ರೀಡಾ ಯಥಾ "ಧನ್ಯಾಸಿ ಯಾ ಕಥಯಸಿ" ಇತ್ಯತ್ರೈವ.

ಆಕ್ರಾಂತನಾಯಕಾ ಯಥಾ—

ಸ್ವಾಮಿನ್ ಭಂಗುರಯಾಲಕಂ ಸತಿಲಕಂ ಭಾಲಂ ವಿಲಾಸಿನ್ ಕುರು
ಪ್ರಾಣೇಶ ತ್ರುಟಿತಂ ಪಯೋಧರತಟೇ ಹಾರಂ ಪುನರ್ಯೋಜಯ ।
ಇತ್ಯುಕ್ತ್ವಾ ಸುರತಾವಸಾನಸಮಯೇ ಸಂಪೂರ್ಣಚಂದ್ರಾನನಾ
ಸ್ಪೃಷ್ಟಾ ತೇನ ತಥೈವ ಜಾತಪುಲಕಾ ಪ್ರಾಪ್ತಾ ಪುನರ್ಮೋಹನಮ್ ॥

ಮಧ್ಯೆ ಎನಿಸಿದ ನಾಯಿಕೆಗೆ ಮುಗ್ಧೆಗಿಂತಲೂ ಕೊಂಚ ಹೆಚ್ಚು ಕಾಮವಿಕಾರವಿರುತ್ತದೆ. ಈಕೆಗೆ ಸುರತದಲ್ಲಿ ಹೆಚ್ಚು ಇಚ್ಛೆ ಇರುವುದು, ಕಾಮವಿಕಾರವೂ ಯೌವನಾವಸ್ಥೆಯೂ ಈಕೆಗೆ ಹೆಚ್ಚಾಗಿರುತ್ತವೆ. ಸ್ವಲ್ಪ ಹೆಚ್ಚು ಪ್ರೌಢಿಮೆಯಿಂದ ಈಕೆಯು ಮಾತನಾಡುವಳು. ಹೆಚ್ಚು ಲಜ್ಜೆಗೆ ಈಕೆ ಗುರಿಯಾಗುವಳು. ಈ ಬಗೆಯ ಸ್ವಭಾವಭೇದದಿಂದ ಈಕೆಯಲ್ಲೂ ಐದು ಬಗೆಗಳನ್ನು ಕಾಣಬಹುದು. ಅದರಲ್ಲಿ ವಿಚಿತ್ರಸುರತೆ ಎನಿಸಿದವಳ ವರ್ತನವನ್ನು ಈಗ ಉದಾಹರಿಸಲಾಗಿದೆ. "ಹೆಚ್ಚು ಕಾಮವಿಕಾರವುಳ್ಳ ಆ ಮೃಗನೇತ್ರೆಯು ಸುರತಕ್ರೀಡೆಗಳಲ್ಲಿ ಪತಿಗೆ ವಿಚಿತ್ರವಾದ ಚಾತುರ್ಯವನ್ನು ತೋರಿಸಿದಳು" ಮನೆಯಲ್ಲಿದ್ದ ಅನೇಕ ಪಾರಿವಾಳಗಳು ಆಕೆಯ ಸುರತಕಾಲದ ಅವ್ಯಕ್ತ ಶಬ್ದಗಳನ್ನು ಕೇಳಿ ಅನುಕರಿಸುತ್ತ ಆಕೆಗೆ ಶಿಷ್ಯರಂತೆ ಇದ್ದವು. ಶಿಷ್ಯರು ಗುರುವಿನ ಉಪದೇಶವನ್ನು ಕೇಳಿ ಹೇಗೆ ಅನುಕರಿಸುವರೋ ಹಾಗೆ ಪಾರಿವಾಳಗಳು ನಾಯಿಕೆಯ ವಕ್ರವಾದ ಶಬ್ದಗಳನ್ನು ಅನೇಕಸಾರಿ ಅನುಕರಿಸಿದವು. ಸಂಭೋಗಕಾಲದಲ್ಲಿ ಆಕೆ ಹಾಗೆ ಶಬ್ದಮಾಡಿದ್ದರಿಂದ ವಿಚಿತ್ರಸುರತೆ ಎನಿಸಿರುವಳು. ಆಶೆ ಹೆಚ್ಚು ವ್ಯಾಪಿಸಿರುವ

ನಾಯಿಕೆಯ ವರ್ತನೆಯನ್ನೂ ಇದೇ ಉದಾಹರಣವಲ್ಲಿ ಕಾಣಬಹುದು.

ಯೌವನವು ಹೆಚ್ಚು ಬೆಳೆದಿರುವ ನಾಯಿಕೆಯ ವರ್ತನೆಯನ್ನು ಇಲ್ಲಿ ತಿಳಿಸುತ್ತಾನೆ. "ಆಕೆಯ ಕಣ್ಣುಗಳು ಖಂಜನವೆಂಬ ಪಕ್ಷಿಗಳಿಗಿಂತಲೂ ಸುಂದರವಾಗಿವೆ; ಕೈಗಳೆರಡು ಕಮಲಕ್ಕೆ ಸದೃಶವಾಗಿವೆ. ಸ್ತನಗಳೆರಡು ಆನೆಯ ಕಪೋಲಗಳೆಂಬ ಭ್ರಾಂತಿಯನ್ನುಂಟುಮಾಡುವಷ್ಟು ಉನ್ನತವಾಗಿವೆ. ಆಕೆಯ ಕಾಂತಿಯು ಸುವರ್ಣ ಮತ್ತು ಸಂಪಿಗೆ ಹೂವುಗಳಿಗೆ ಸದೃಶವಾಗಿವೆ. ಮಾತು ಅಮೃತಕ್ಕೆ ಸದೃಶವಾಗಿದೆ. ಆಕೆಯ ವಕ್ರದೃಷ್ಟಿಯು ವಿಕಸಿತವಾದ ಕನ್ನೈದಿಲೆಯ ಮಾಲೆಗೆ ಸದೃಶವಾಗಿದೆ" ಇಲ್ಲಿ ಆಕೆಗೆ ಯೌವನವು ಹೆಚ್ಚು ವ್ಯಾಪಿಸಿರುವುದರಿಂದ ಸ್ತನಗಳ ಔನ್ನತ್ಯ ಮೊದಲಾದವು ಹೆಚ್ಚು ವ್ಯಾಪಿಸಿರುವುದಾಗಿ ತಿಳಿಸಿದೆ.

ಪ್ರಗಲ್ಭನಾಯಿಕೆಯ ಸ್ವಭಾವವನ್ನು ತಿಳಿಸುತ್ತಾನೆ. ಈಕೆಯಲ್ಲಿ ಕಾಮಾಸಕ್ತಿ ಹೆಚ್ಚಾಗಿರುವುದು; ಯೌವನವೂ ಗಾಢವಾಗಿ ಬೆಳೆದಿರುವುದು. ಎಲ್ಲಾ ಬಗೆಯ ರತಿಕ್ರೀಡೆಗಳಲ್ಲೂ ಈಕೆ ನುರುಗಿರುವಳು. ಈಕೆಯಲ್ಲಿ ರತಿಭಾವವು ವಿಶೇಷವಾಗಿ ವ್ಯಾಪಿಸಿರುವುದು. ಈಕೆಗೆ ಕೊಂಚ ಲಜ್ಜೆಯೂ ಇರುವುದು, ನಾಯಕನು ಯಾವಾಗಲೂ ಈಕೆಯೊಡನೆಯೇ ಇರುವನು. ಈ ಆರು ಬಗೆಯ ವರ್ತನವನ್ನು ಈಕೆಯಲ್ಲಿ ಕಾಣಬಹುದು. ಅವುಗಳಲ್ಲಿ ಸ್ಮರಾಂಧನಾಯಿಕೆಯನ್ನು ಇಲ್ಲಿ ಉದಾಹರಿಸುತ್ತಾನೆ. ಸಂಭೋಗಕಾಲವಲ್ಲಿ ಪ್ರಿಯನೊಡನೆ ಮಾತನಾಡಿದ್ದನ್ನು ಸಖಿಯರ ನಡುವೆ ವಿವರಿಸುವ ಒಬ್ಬ ನಾಯಕಿಗೆ ಮತ್ತೊಬ್ಬಳು ಹೇಳುವ ಮಾತಿದು. "ಸಂಭೋಗದ ಸನ್ನಿವೇಶಗಳಲ್ಲಿ ವಿಶ್ವಾಸದಿಂದ ಆಡುವ ಹಿತವಚನಗಳನ್ನು ಪ್ರಿಯನೊಡನೆ ಸಮಾಗಮವುಂಟಾದ ಕಾಲದಲ್ಲೂ ಹೇಳುತ್ತಿರುವ ನೀನೇ ಧನ್ಯಳು. (ಆಕಾಲದಲ್ಲಿ ಸುರತದಲ್ಲಿ ಮಗ್ನಳಾದವಳಿಗೆ ಬೇರೆ ಮಾತುಗಳನ್ನಾಡಲಿಕ್ಕೆ ಸಾಧ್ಯವೇ ಇಲ್ಲದಿದ್ದರೂ ನೀನು ಅವನ್ನು ಆಡುತ್ತಿರುವುದು ವಿಚಿತ್ರವೇ ಸರಿ) ಎಲೈ ಸಖಿಯರೇ, ಪತಿಯು ಸೀರೆಯ ಗಂಟನ್ನು ಬಿಚ್ಚಲು ನನ್ನ ಕೈಗೆ ಪ್ರೇರಣೆಮಾಡಿದಾಗ ನಾನು ಏನನ್ನಾದರೂ ಸ್ಮರಿಸಿದ್ದರೆ ನನ್ನಮೇಲೆ ಆಣೆಯನ್ನು ಇಟ್ಟುಕೊಳ್ಳುವೆನು." ಸೀರೆಯ ಗಂಟನ್ನು ಬಿಚ್ಚುವಂತೆ ಪತಿಯು ಪ್ರೇರಿಸಿದಾಗ ಈಕೆಗೆ ಮೈಮೇಲೆ ಪ್ರಜ್ಞೆಯೇ ತಪ್ಪಿದಂತಾದ್ದರಿಂದ ಇವಳು ಸ್ಮರಾಂಧಳೆಂದು ಸ್ಪಷ್ಟಪಡುತ್ತದೆ.

ಯೌವನವು ಗಾಢವಾಗಿ ಬೆಳೆದಿರುವ ನಾಯಿಕೆಯನ್ನು ಉದಾಹರಿಸುತ್ತಾನೆ. "ಹೆಚ್ಚು ಯೌವನವುಳ್ಳ ಈ ರಮಣಿಯ ವಕ್ಷಸ್ಥಳದಲ್ಲಿ ಎತ್ತರವಾದ ಸ್ತನಗಳಿವೆ; ಕಣ್ಣುಗಳು ವಿಶಾಲವಾಗಿವೆ; ಹುಬ್ಬುಗಳು ಬಗ್ಗಿಕೊಂಡಿವೆ. ಹಾಗೆಯೇ ಮಾತು ಬಹಳ ಸುಂದರವಾಗಿದೆ. ಕಟಿಪ್ರದೇಶವು ಹೆಚ್ಚು ಕೃಶವಾಗಿದೆ. ಹಿಂಭಾಗವು ಬಹಳ ವಿಶಾಲವಾಗಿದೆ. ಈಕೆಯು ನಡೆಯುವ ರೀತಿಯೂ ಗಂಭೀರವಾಗಿದೆ." ಹೀಗೆ ಅವಯವಗಳು ವಿಶಾಲವಾಗಿ ಬೆಳೆದಿರುವುದರಿಂದ ಈಕೆಯ ಯೌವನವು ಗಾಢವಾಗಿ ವ್ಯಾಪಿಸಿತ್ತೆಂಬುದು ಸ್ಪಷ್ಟವಾಗುತ್ತದೆ.

ಎಲ್ಲಾ ಬಗೆಯ ರತಿಕ್ರೀಡೆಗಳಲ್ಲೂ ನುರುಗಿದವಳನ್ನು ಉದಾಹರಿಸುತ್ತಾನೆ.

"ಪತಿಯ ಹೆಗಲು ಇರುವ ಕಡೆ ತಾಂಬೂಲರಸದ ಗುರುತಿನಿಂದಲೂ, ಕೆಲವು ಕಡೆಗಳಲ್ಲಿ ಅಗುರುಗಂಧದಿಂದಲೂ ಮಲಿನವಾಗಿಯೂ, ಕೆಲವು ಕಡೆಗಳಲ್ಲಿ ತೊಡೆಗಳಿಗೆ ಹಚ್ಚಿದ್ದ ಶ್ರೀಗಂಧದ ತುಂತುರುಗಳು ಅಂಟಿಕೊಂಡಿರುವುದರಿಂದಲೂ, ಕೆಲವು ಕಡೆಗಳಲ್ಲಿ ಪಾದ ಗಳಿಗೆ ಹಚ್ಚಿದ ಅಲಕ್ತಕರಸವು ಅಂಟಿಕೊಂಡಿರುವುದರಿಂದಲೂ ಕೆಲವು ಕಡೆಗಳಲ್ಲಿ ತ್ರಿವಳಿ ಗಳ ಮೇಲೆ ಬರೆದಿದ್ದ ಗುರುತುಗಳು ಅಂಟಿರುವುದರಿಂದಲೂ ಮುಂಗುರುಳಿಗಳಿಂದ ಬಿದ್ದಿದ್ದ ಪುಷ್ಪಗಳ ದಳಗಳು ಕಳಚಿಬಿದ್ದುದರಿಂದಲೂ ಹಾಸಿಗೆಯ ಮೇಲೆ ಹಾಸಿದ್ದ ಬಟ್ಟೆಯು ಆಕೆ ಅನೇಕ ಅವಸ್ಥೆಗಳಲ್ಲಿ ಪತಿಯೊಡನೆ ಅನುಭವಿಸಿದ್ದ ರತಿಸುಖವನ್ನು ಪ್ರಕಾಶ ಗೊಳಿಸುತ್ತದೆ'' ಇದರಿಂದ ಆಕೆಯು ಅನೇಕ ಬಗೆಯ ರತಿಕ್ರೀಡೆಯ ಅವಸ್ಥೆಗಳನ್ನು ಚೆನ್ನಾಗಿ ಅರಿತಿದ್ದಳೆಂದು ತಿಳಿದುಬರುತ್ತದೆ.

ಭಾವಾವಿಷ್ಕರಣದಲ್ಲಿ ನಿಪುಣೆಯಾದ ನಾಯಿಕೆಯನ್ನು ಉದಾಹರಿಸುತ್ತಾನೆ. "ಆ ಕಾಮಿನಿಯು ಹುಬ್ಬುಗಂಟಿನೊಡನೆ ಕೂಡಿದ ಮನೋಹರವಾದ ಮಾತುಗಳಿಂದಲೂ, ಬೆರಳುಗಳನ್ನು ಅಳ್ಳಾಡಿಸುವುದರಿಂದಲೂ, ಬಾರಿಬಾರಿಗೂ ಹೆಚ್ಚುತ್ತಲಿರುವ ಓರೆ ನೋಟಗಳಿಂದಲೂ ಮನ್ಮಥನಿಗೆ ಮೂರು ಲೋಕಗಳನ್ನು ಜಯಿಸಲಿಕ್ಕೂ ಸಹಾಯ ವನ್ನು ಮಾಡುತ್ತಿರುವಳು.'' ಈಕೆಯ ಈ ಬಗೆಯ ಭಾವಗಳನ್ನು ನೋಡಿದ್ದರಿಂದ ಯುವಕರೆಲ್ಲರೂ ಮನ್ಮಥನಿಗೆ ವಶರಾಗುತ್ತಿದ್ದಾರೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. 'ಧನ್ಯಾಸಿ ಯಾ ಕಥಯಸಿ' ಎಂಬ ಪದ್ಯದಲ್ಲಿ ಆಕೆಯು ಪತಿಯೊಡನೆ ಸಂಭೋಗಕಾಲ ದಲ್ಲಿ ನಡೆದ ರಹಸ್ಯವನ್ನು ಸಖಿಯರೆದುರಿಗೆ ಸ್ಪಷ್ಟವಾಗಿ ತಿಳಿಸಿದ್ದರಿಂದ ಆಕೆಗೆ ಲಜ್ಜೆ ಕೊಂಚ ಕಡಮೆಯಾಗಿತ್ತೆಂಬ ಅಂಶವು ತಿಳಿಯುವುದು.

ನಾಯಕನನ್ನು ಆಕ್ರಮಿಸುವ ಸ್ವಭಾವದ ನಾಯಿಕೆಯನ್ನು ಇಲ್ಲಿ ಉದಾಹರಿ ಸುತ್ತಾನೆ. ''ಸುರತವು ಮುಗಿಯುವ ವೇಳೆಗೆ ಪೂರ್ಣಚಂದ್ರನಂತೆ ಶೋಭಿಸುವ ಆ ತರುಣಿಯು ಆ ಕಾಲದಲ್ಲಿ "ಸ್ವಾಮಿಯೇ, ಕೆದರಿಕೊಂಡಿರುವ ಈ ಮುಂಗುರಳನ್ನು ಹಿಂದಿನಂತೆ ಕಟ್ಟು. ಎಲೈ ವಿಲಾಸಶೀಲನೇ, ನನ್ನ ಹಣೆಯಲ್ಲಿ ತಿಲಕವನ್ನಿಡು, ಎಲೈ ಪ್ರಾಣೇಶನೇ, ಸ್ತನಪ್ರದೇಶದಲ್ಲಿ ಜರುಗಿರುವ ಹಾರವನ್ನು ಮತ್ತೆ ಅಲ್ಲಿಯೇ ಸೇರಿಸು'' ಹೀಗೆ ಹೇಳಲು ಅವನು ಹಾಗೆಯೇ ಆಯಾಯ ಸ್ಥಾನಗಳಲ್ಲಿ ಎಲ್ಲವನ್ನೂ ಸಜ್ಜುಗೊಳಿ ಸಲು ಆಕೆಯು ಮೈಯಲ್ಲಿ ರೋಮಾಂಚನವನ್ನು ಅನುಭವಿಸುತ್ತ ಮತ್ತೆ ಮೋಹಗೊಂಡು ಸುರತದಲ್ಲಿ ಪ್ರವರ್ತಿಸಿದಳು" ಹೀಗೆ ಪತಿಯ ಮೇಲೆ ಪ್ರಭಾವವನ್ನು ಬೀರುತ್ತ ಅವನನ್ನು ತನ್ನ ಕಡೆಗೆ ಸೆಳೆದುಕೊಳ್ಳುವ ಚಾತುರ್ಯವನ್ನು ಈಕೆಯಲ್ಲಿ ಕಾಣಬಹುದು.

ಮಧ್ಯಾಪ್ರಗಲ್ಭಯೋರ್ಭೇದಾಂತರಾಣ್ಯಾಹ—
ತೇ ಧೀರಾ ಚಾಪ್ಯಧೀರಾ ಚ ಧೀರಾಧೀರೇತಿ ಷಡ್ವಿಧೇ।
ತೇ ಮಧ್ಯಾಪ್ರಗಲ್ಭೇ. ತತ್ರ
ಪ್ರಿಯಂ ಸೋತ್ಪ್ರಾಸವಕ್ರೋಕ್ತ್ಯಾ ಮಧ್ಯಾ ಧೀರಾ ದಹೇದ್ರುಷಾ।
ಧೀರಾಧೀರಾ ತು ರುದಿತೈರಧೀರಾ ಪರುಷೋಕ್ತಿಭಿಃ ॥೬೮॥

ತತ್ರ ಮಧ್ಯಾ ಧೀರಾ ಯಥಾ--

ತದವಿತಥಮವಾದೀರ್ಯನ್ಮಮ ತ್ವಂ ಪ್ರಿಯೇತಿ
ಪ್ರಿಯಜನಪರಿಭುಕ್ತಂ ಯದ್ದುಕೂಲಂ ದಧಾನಃ।
ಮದದಿವಸತಿಮಾಗಾಃ ಕಾಮಿನಾಂ ಮಂಡನಶ್ರೀಃ
ವ್ರಜತಿ ಹಿ ಸಫಲತ್ವಂ ವಲ್ಲಭಾಲೋಕನೇನ॥

ಮಧ್ಯೈವ ಧೀರಾಧೀರಾ ಯಥಾ--

ಬಾಲೇ ನಾಥ ವಿಮುಂಚ ಮಾನಿನಿ ರುಷಂ ರೋಷಾನ್ಮಯಾ ಕಿಂ ಕೃತಂ
ಖೇದೋಽಸ್ಮಾಸು ನ ಮೇಽಪರಾಧ್ಯತಿ ಭವಾನ್ಸರ್ವೇಽಪರಾಧಾ ಮಯಾ॥
ತತ್ಕಿಂ ರೋದಿಷಿ ಗದ್ಗದೇನ ವಚಸಾ ಕಸ್ಯಾಗ್ರತೋ ರುದ್ಯತೇ
ನನ್ವೇತನ್ಮಮ ಕಾ ತವಾಸ್ಮಿ ದಯಿತಾ ನಾಸ್ಮೀತ್ಯತೋ ರುದ್ಯತೇ॥

ಇಯಮೇವ ಅಧೀರಾ ಯಥಾ--

ಸಾರ್ಧಂ ಮನೋರಥಶತೈಸ್ತವ ಧೂರ್ತ ಕಾಂತಾ
ಸೈವ ಸ್ಥಿತಾ ಮನಸಿ ಕೃತ್ರಿಮಹಾವರಮ್ಯಾ।
ಅಸ್ಮಾಕಮಸ್ತಿ ನ ಚ ಕಶ್ಚಿದಿಹಾವಕಾಶಃ
ತಸ್ಮಾತ್ ಕೃತಂ ಚರಣಪಾತವಿಡಂಬನಾಭಿಃ॥

ಪ್ರಗಲ್ಭಾ ಯದಿ ಧೀರಾ ಸ್ಯಾಚ್ಛನ್ನಕೋಪಾಕೃತಿಸ್ತದಾ।
ಉದಾಸ್ತೇ ಸುರತೇ ತತ್ರ ದರ್ಶಯರಾತ್ಯಾದರಾನ್ಬಹಿಃ॥

ತತ್ರ ಪ್ರಿಯೇ.ಯಥಾ—

ಏಕತ್ರಾಸನಸಂಸ್ಥಿತಿಃ ಪರಿಹೃತಾ ಪ್ರತ್ಯುದ್ಗಮಾದ್ದೂರತಃ
ತಾಂಬೂಲಾನಯನಚ್ಛಲೇನ ರಭಸಾಶ್ಲೇಷೋಽಪಿ ಸಂವಿಘ್ನಿತಃ।
ಆಲಾಪೋಽಪಿ ನ ಮಿಶ್ರಿತಃ ಪರಿಜನಂ ವ್ಯಾಪಾರಯಂತ್ಯಾಂತಿಕೇ
ಕಾಂತಂ ಪ್ರತ್ಯುಪಚಾರತಶ್ಚತುರಯಾ ಕೋಪಃ ಕೃತಾರ್ಥೀಕೃತಃ॥

ಧೀರಾಧೀರಾ ತು ಸೋಲ್ಲುಂಠಭಾಷಿತೈಃ ಖೇದಯೇದಮುಮ್।

ಅಮುಂ ನಾಯಕಮ್, ಯಥಾ ಮಮ.

ಅನಲಂಕೃತೋಽಪಿ ಸುಂದರ! ಹರಸಿ ಮನೋ ಮೇ ಯತಃ ಪ್ರಸಭಮ್।
ಕಿಂ ಪುನರನಲಂಕೃತಸ್ತ್ವಂ ಸಂಪ್ರತಿ ನಖರಕ್ಷತೈಸ್ತಸ್ಯಾಃ।

ತರ್ಜಯೇತ್ತಾಡಯೇದನ್ಯಾ ಪ್ರತ್ಯೇಕಂ ತಾ ಅಪಿ ತ್ರಿಧಾ।
ಕನಿಷ್ಠಜ್ಯೇಷ್ಠರೂಪತ್ವಾನ್ನಾಯಕಪ್ರಣಯಂ ಪ್ರತಿ।

ಅನ್ಯಾ ಅಧೀರಾ. ಯಥಾ. ಶೋಣಂ 'ವೀಕ್ಷ್ಯ ಮುಖಂ' ಇತ್ಯತ್ರೈವ. ಅತ್ರ ಚ ಸರ್ವತ್ರ ರುಷೇತ್ಯನುವರ್ತ್ಯತೇ.

ತಾಃ ಅನಂತರೋಕ್ತಾಃ ಷಡ್ಭೇದಾಃ ನಾಯಿಕಾಃ

ದೃಷ್ಟ್ವೈಕಾಸನಸಂಸ್ಥಿತೇ ಪ್ರಿಯತಮೇ ಪಶ್ಚಾದುಪೇತ್ಯಾದರಾತ್

ಏಕಸ್ಯಾ ನಯನೇ ಪಿಧಾಯ ವಿಹಿತಕ್ರೀಡಾನುಬಂಧಚ್ಛಲಃ ।
ಈಷದ್ವಕ್ರಿತಕಂಧರಃ ಸಪುಲಕಃ ಪ್ರೇಮೋಲ್ಲಸನ್ಮಾನಸಾಂ
ಅಂತರ್ಹಾಸಲಸತ್ಕಪೋಲಫಲಕಾಂ ಧೂರ್ತೋಽಪರಾಂ ಚುಂಬತಿ ॥

ಮಧ್ಯಾಪ್ರಗಲ್ಭಯೋರ್ಭೇದಸ್ತಸ್ಮಾದ್ದ್ವಾದಶ ಕೀರ್ತಿತಾಃ ।
ಮುಗ್ಧಾ ತ್ವೇಕೈವ ತೇನ ಸ್ಯುಃ ಸ್ವೀಯಾಭೇದಾಸ್ತ್ರಯೋದಶ ॥
ಪರಕೀಯಾ ದ್ವಿಧಾ ಪ್ರೋಕ್ತಾ ಪರೋಢಾ ಕನ್ಯಕಾ ತಥಾ ।

ತತ್ರ—ಯಾತ್ರಾದಿನಿರತಾನ್ಯೋಢಾ ಕುಲಟಾ ಗಲಿತತ್ರಪಾ ।

ಸ್ವಾಮೀ ನಿಶ್ವಸಿತೇಽಪ್ಯಸೂಯತಿ ಮನೋಜಿಘ್ರಃ ಸಪತ್ನೀಜನಃ
ಶ್ವಶ್ರೂರಿಂಗಿತದೈವತಂ ನಯನಯೋರೀಹಾಲಿಹೋ ಯಾತರಃ
ತದ್ದೂರಾದಯಮಂಜಲಿಃ ಕಿಮಧುನಾ ದೃಗ್ಭಂಗಭಾವೇನ ತೇ
ವೈದಗ್ಧೀಮಧುರಪ್ರಬಂಧರಸಿಕ ವ್ಯರ್ಥೋಽಯಮತ್ರ ಶ್ರಮಃ

ಅತ್ರ ಹಿ ಮಮ ಪರಿಣೇತಾ ಅನ್ನಾಚ್ಛಾದನಾದಿದಾತೃತಯಾ ಸ್ವಾಮ್ಯೇವ; ನ ತು ವಲ್ಲಭಃ; ತ್ವಂ ವೈತು ದಗ್ಧೀಮಧುರತ್ವೇನ ಪ್ರಬಂಧರಸಿಕತಯಾ ಚ ಮಮ ವಲ್ಲಭೋಽಸೀತ್ಯಾದಿವ್ಯಂಗ್ಯಾರ್ಥವಶಾತ್ ಅಸ್ಯಾಃ ಪರನಾಯಕವಿಷಯಾ ರತಿಃ ಪ್ರತೀಯತೇ.

ಕನ್ಯಾ ತ್ವಜಾತೋಪಯಮಾ ಸಲಜ್ಜಾ ನವಯೌವನಾ ।

ಅಸ್ಯಾಶ್ಚ ಪಿತ್ರಾದ್ಯಾಯತತ್ವಾತ್ ಪರಕೀಯಾತ್ವಮ್. ಯಥಾ ಮಾಲತೀ ಮಾಧವಾದೌ ಮಾಲತ್ಯಾದಿಃ.

ಮಧ್ಯೆ, ಪ್ರಗಲ್ಭೆ ಎನಿಸಿದ ನಾಯಿಕೆಯರಲ್ಲಿರುವ ಭೇದಗಳು ಹೀಗಿವೆ. ಅವರು ಒಬ್ಬೊಬ್ಬರೂ ಧೀರೆ, ಅಧೀರೆ ಮತ್ತು ಧೀರಾಧೀರೆ ಎಂದು ಒಟ್ಟು ಅವರು ಆರು ಬಗೆಯಾಗಿರುವರು. ಕೆಲವರು ಧೀರಸ್ವಭಾವದವರು; ಕೆಲವರು ಹೆದರುವ ಸ್ವಭಾವದವರು ಮತ್ತೆ ಕೆಲವರಿಗೆ ಧೈರ್ಯ ಹೆದರಿಕೆ ಎರಡೂ ಇರುತ್ತವೆ. ಅವರಲ್ಲಿ ಧೀರಪ್ರಕೃತಿಯ ಮಧ್ಯೆನಾಯಿಕೆಯು ಪ್ರಿಯನನ್ನು ಮುಗುಳುನಗೆಯಿಂದಲೂ ವ್ಯಂಗ್ಯವಾದ ಮಾತಿನಿಂದಲೂ ಸಂತಾಪಗೊಳಿಸುವಳು. ಧೀರಾಧೀರನಾಯಿಕೆಯಾದರೋ ಅಳುತ್ತಲೂ, ಅಧೀರನಾಯಿಕೆಯು ಕಠಿಣವಾದ ಮಾತುಗಳಿಂದಲೂ ಪತಿಯನ್ನು ಗೋಳಾಡಿಸುವರು.

ಅವರಲ್ಲಿ ಧೀರಮಧ್ಯಮಪ್ರಕೃತಿಯವಳನ್ನು ಇಲ್ಲಿ ತಿಳಿಸುತ್ತಾನೆ. ಪರಸ್ತ್ರೀಯೊಡನೆ ಭೋಗಿಸಿ ಆಕೆಯ ಬಟ್ಟೆಯನ್ನು ಉಟ್ಟುಕೊಂಡು ಬಂದಿರುವ ನಾಯಕನಿಗೆ ನಾಯಿಕೆ ಹೇಳುವ ಮಾತಿದು. "ನೀನು ನನ್ನನ್ನು ಪ್ರಿಯೆ ಎಂದು ಹೇಳಿದ್ದು ಸುಳ್ಳು. ನಿನಗೆ ಪ್ರಿಯರಾದ ಜನರು ಉಟ್ಟ ಬಟ್ಟೆಯನ್ನು ನೀನು ಧರಿಸಿ ನನ್ನ ವಾಸಗೃಹಕ್ಕೆ ಬಂದಿರುವೆ. ಕಾಮುಕರಿಗೆ ಒಡವೆಯಿಂದ ಉಂಟಾಗುವ ಕಾಂತಿಯು ಪ್ರಿಯೆಯನ್ನು ನೋಡಿದ್ದರಿಂದ ಸಫಲಗೊಳ್ಳುತ್ತದೆ." ಇಲ್ಲಿ ಮುಗುಳುನಗೆಯಿಂದ ಕೂಡಿದ ವಕ್ರೋಕ್ತಿಯಿಂದ ನಾಯಕನಿಗೆ ಸಂತಾಪಗೊಳಿಸಿದ್ದರಿಂದ ಈಕೆ ಧೀರಸ್ವಭಾವದ ಮಧ್ಯೆ ನಾಯಿಕೆ ಎನಿಸಿರುವಳು.

ಧೀರಾಧೀರಪ್ರಕೃತಿಯ ಮಧ್ಯೆ ನಾಯಿಕೆಯ ವರ್ತನೆ ಹೀಗಿದೆ. ಅನ್ಯಾಸಕ್ತನಾದ ನಾಯಕನ ಸಮಾಚಾರವನ್ನು ಕೇಳಿ ಅಳುವ ನಾಯಿಕೆಯ ಉಕ್ತಿಪ್ರತ್ಯುಕ್ತಿಗಳನ್ನು ಇಲ್ಲಿ ಕಾಣಬಹುದು. 'ಬಾಲೆ' ಎಂದು ನಾಯಕನು ಕರೆಯಲು 'ನಾಥ' ಎಂದು ಆಕೆ ಇವನನ್ನು ಕರೆಯುವಳು. "ಮಾನಿನಿ ಎಲ್ಲೈ ಅಭಿಮಾನಶಾಲಿಯೇ, ಕೋಪವನ್ನು ಬಿಡು" ಎಂದು ಅವನು ಹೇಳಿದನು. ಆಗ ಆಕೆ "ಕೋಪದಿಂದ ನಾನು ನಿನಗೆ ಏನು ಮಾಡಿದೆನು?" ಎಂದು ಕೇಳುವಳು. ಅದಕ್ಕೆ ಅವನು "ನೀನು ನನಗೆ ಆಯಾಸಗೊಳಿಸಿರುವೆ" ಎಂದು ಹೇಳುವನು. "ನೀನು ನನಗೆ ಏನೂ ಅಪರಾಧಮಾಡಿಲ್ಲ ; ಎಲ್ಲ ಅಪರಾಧಗಳೂ ನನ್ನಲ್ಲಿಯೇ ಇವೆ." ಎಂದು ಆಕೆ ಹೇಳುವಳು. "ಹಾಗಾದರೆ ನೀನು ಬಿಕ್ಕಳಿಸಿ ಏಕೆ ಅಳುತ್ತಿರುವೆ" ಎಂದು ಅವನು ಕೇಳಲು "ಯಾರ ಮುಂದೆ ಅಳುತ್ತಿರುವೆನು ?"ಎಂದು ಆಕೆ ಹೇಳುವಳು. "ನನ್ನ ಎದುರಿಗೆ ಅಳುತ್ತಿರುವೆ" ಎಂದು ಅವನು ಹೇಳಲು "ನಾನು ನಿನಗೆ ಏನಾಗಿರುವೆ ? ನನಗೂ ನಿನಗೂ ಸಂಬಂಧವೇನಿದೆ ?" ಎಂದು ಆಕೆ ಹೇಳಲು "ನೀನು ನನ್ನಲ್ಲಿ ಪ್ರೇಮವನ್ನಿಟ್ಟಿಲ್ಲವೆಂದು ನಾನು ಅಳುತ್ತಿರುವೆ" ಎಂದು ಆಕೆ ಉತ್ತರವನ್ನು ಕೊಟ್ಟಳು''. ಹೀಗೆ ನಡೆಯುವ ಪ್ರಶ್ನೋತ್ತರಗಳಿಂದ ಆಕೆಗೆ ಧೈರ್ಯವಿತ್ತೆಂದೂ, ಅಳುತ್ತಿದ್ದುದರಿಂದ ಹೆದರಿಕೆಯು ಇತ್ತೆಂದೂ ತಿಳಿದುಬರುತ್ತದೆ. ಪತಿಗೆ ಅಳುತ್ತ ಸಂತಾಪವನ್ನುಂಟುಮಾಡಿದ್ದರಿಂದ ಈಕೆ ಮಧ್ಯಪ್ರಕೃತಿಯ ಧೀರಾಧೀರೆ ಎನಿಸಿರುವಳೆಂದು ತಿಳಿದುಬರುತ್ತದೆ.

ಅಧೀರಪ್ರಕೃತಿಯ ಮಧ್ಯೆನಾಯಕೆಯ ವರ್ತನೆಯನ್ನು ತಿಳಿಸುತ್ತಾನೆ. ಪರಸ್ತ್ರೀಯಲ್ಲಿ ಸಂಭೋಗಮಾಡಿಬಂದು ನಾಯಿಕೆಯ ಕಾಲಿಗೆ ಬೀಳುವ ನಾಯಕನಿಗೆ ಬೇರೊಬ್ಬ ಸ್ತ್ರೀಯಳ ಸಿಟ್ಟಿನ ಮಾತಿದು. "ಎಲೈ ಧೂರ್ತನೇ, ಕೃತ್ರಿಮವಾದ ಹಾವಭಾವ ವಿಲಾಸಗಳುಳ್ಳ ಆಕೆಯೇ ನಿನ್ನ ನೂರಾರು ಸಂಕಲ್ಪಗಳೊಡನೆ ನಿನ್ನ ಮನಸ್ಸಿನಲ್ಲಿ ನೆಲಸಿರುವಳು. ಹೀಗೆ ಆಕೆಯೇ ನಿನ್ನ ಹೃದಯವನ್ನು ಪೂರ್ಣವಾಗಿ ವ್ಯಾಪಿಸಿರುವುದರಿಂದ ನಿನ್ನ ಮನಸ್ಸಿನಲ್ಲಿ ನನಗೆ ಸ್ವಲವೂ ಅವಕಾಶವು ದೊರೆತಿಲ್ಲ. ಆದ್ದರಿಂದ ನೀನು ತೋರಿಕೆಗಾಗಿ ನನ್ನ ಕಾಲಿಗೆ ಬೀಳುವುದನ್ನು ನಿಲ್ಲಿಸು. ಇದರಿಂದ ಏನೂ ಫಲವಾಗಲಾರದು" ಹೀಗೆ ಕಠಿಣವಾದ ಮಾತಿನಿಂದ ನಾಯಕನಿಗೆ ಸಂತಾಪವನ್ನುಂಟುಮಾಡುವುದರಿಂದ ಈಕೆ ಅಧೀರಪ್ರಕೃತಿಯ ಮಧ್ಯೆ ನಾಯಿಕೆ ಎನಿಸಿದ್ದಾಳೆ.

ಪ್ರಗಲ್ಭನಾಯಿಕೆಯು ಧೀರಳಾಗಿದ್ದರೆ ಆಗ ತೋರಿಕೆಯ ಹಾಸ್ಯದಿಂದ ಕೋಪವನ್ನು ಮುಚ್ಚಿದಂತೆ ನಟಿಸುತ್ತ ನಾಯಕನಲ್ಲಿ ಹೊರಗೆ ಪ್ರೇಮವನ್ನು ತೋರಿಸುತ್ತ ಕೋಪದಿಂದ ರತಿಕ್ರೀಡೆಯಲ್ಲಿ ಉದಾಶೀನಳಾಗಿರುವಳು.''ಚತುರೆಯಾದ ನಾಯಿಕೆಯು ಪರಸ್ತ್ರೀಯಲ್ಲಾಸಕ್ತನಾದ ಪತಿಯನ್ನು ನೋಡಿ ದೂರದಿಂದಲೇ ಹಾಸಿಗೆಯಿಂದ ಎದ್ದುದರಿಂದ ಒಂದೇಕಡೆ ಆಸನದಲ್ಲಿ ಕುಳಿತುಕೊಳ್ಳುವುದನ್ನು ತೊರೆದಂತಾಯಿತು. ತಾಂಬೂಲವನ್ನು ತರುವ ನೆಪದಿಂದ ಬೇರೆ ಕಡೆಗೆ ಹೋಗುತ್ತ ಆತುರದಿಂದ ಆಲಂಗಿಸಿಕೊಳ್ಳುವುದನ್ನೂ ತಡೆದದ್ದಾಯಿತು. ಪತಿಯ ಸಮೀಪದಲ್ಲಿ ಸೇವಕನನ್ನು ಸೇವೆಗಾಗಿ

ನೇವಿಸುತ್ತ ಆಕೆಗೆ ಅವನೊಡನೆ ಮಾತನಾಡುವುದನ್ನೂ ತೊರೆವಪ್ಪಾಯಿತು. ಹೀಗೆ ಹೊಸದಾಗಿ ಬಂದ ಪತಿಗೆ ಉಪಚಾರದ ಮಾತಿನಿಂದಲೇ ಕೋಪವನ್ನು ಶಮನಗೊಳಿಸಲಾಯಿತು.'' ಇದರಿಂದ ನಾಯಿಕೆ ಸುರತದಲ್ಲಿ ಉದಾಶೀನಳಾಗಿದ್ದಳೆಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದಲೇ ಈಕೆ ಧೀರಳೂ ಪ್ರಗಲ್ಭಳೂ ಆಗಿರುವಳು.

ಧೀರಾಧೀರಪ್ರಕೃತಿಯ ಪ್ರಗಲ್ಭಸ್ತ್ರೀಯು ಮೇಲೆ ಮೇಲೆ ಪ್ರಿಯವಾಗಿ ತೋರಿದರೂ ವಾಸ್ತವವಾಗಿ ಅಪ್ರಿಯವಾದ ಮಾತುಗಳಿಂದ ಪತಿಯನ್ನು ಸಂತಾಪಗೊಳಿಸುವಳು. ಇದೇ ಅವಳ ವರ್ತನೆ ಎನಿಸಿದೆ. ಸ್ತ್ರೀಯಳ ನಖಕ್ಷತಗಳ ಗುರುತಿರುವ ನಾಯಕನಿಗೆ ನಾಯಿಕೆ ಹೇಳುವ ಮಾತಿದು. "ಎಲೈ ಸುಂದರನೇ, ನಿನಗೊಡವೆಗಳಿಲ್ಲದಿದ್ದರೂ ನನ್ನ ಮನಸ್ಸನ್ನು ಬಲಾತ್ಕಾರದಿಂದ ಅಪಹರಿಸಿರುವೆ. ಆದ್ದರಿಂದಲೇ ಆ ಕಾಮಿನಿಯೊಡನೆ ಸಂಭೋಗ ಮಾಡಿದ್ದಾಗ ನಿನಗೆ ಆಗಿರುವ ನಖಕ್ಷತಗಳಿಂದ ಈಗ ನೀನು ಅಲಂಕೃತನಾಗಿರುವೆ. ಈ ಬಗ್ಗೆ ಹೇಳುವುದೇನಿದೆ'' ಹೀಗೆ ತೋರಿಕೆಗೆ ಪ್ರಿಯವಾಗಿ ಮಾತನಾಡುವುದರಿಂದ ಈಕೆಯು ಧೀರಾಧೀರಪ್ರಕೃತಿಯ ಪ್ರಗಲ ನಾಯಿಕೆ ಎನಿಸಿರುವಳು.

ಅಧೀರಪ್ರಕೃತಿಯ ನಾಯಿಕೆಯು ಕೋಪದಿಂದ ನಾಯಕನನ್ನು ಗದರಿಸುವಳು ಮತ್ತು ಹೊಡೆಯುವಳು. ಇದು ಅವಳ ವರ್ತನೆ ಎನಿಸಿದೆ. 'ಶೋಣಂ ವೀಕ್ಷ್ಯ ಮುಖಂ' ಎಂಬಲ್ಲಿ ಈಕೆಯ ವರ್ಣನವು ಬಂದಿದೆ. ಅಲ್ಲಿ ನಾಯಕನಿಗೆ ನಾಯಿಕೆಯು ಕಾಲಿನಿಂದ ಒದೆಯುವುದಾಗಿ ಹೇಳಿದ್ದರಿಂದ ಆಕೆ ಅಧೀರಪ್ರಗಲ್ಭೆ ಎನಿಸಿರುವಳು. ಹಿಂದೆ ಹೇಳಿದ ಆರುಬಗೆಯ ನಾಯಿಕೆಯರಲ್ಲಿ ಒಬ್ಬೊಬ್ಬರೂ ನಾಯಕನನ್ನು ಪ್ರೀತಿಸುವ ಬಗ್ಗೆ ಹೆಚ್ಚು ಕಡಮೆ ಇರುವುದರಿಂದ ಜ್ಯೇಷ್ಠೆ ಕನಿಷ್ಠೆ ಎಂದು ಎರಡು ಬಗೆ ಎನಿಸುವರು. "ಪ್ರಿಯತಮನು ನಾಯಿಕೆಯೊಡನೆ ಒಂದೇ ಆಸನದಲ್ಲಿ ಕುಳಿತಿರಲು ಧೂರ್ತನಾಯಕನು ದೂರದಿಂದಲೇ ನೋಡಿ ಶಬ್ದಮಾಡದಂತೆ ಹಿಂದಿನಿಂದಲೇ ಬಂದು ಕ್ರೀಡೆಯನ್ನಾರಂಭಿಸುವ ನೆಪದಿಂದ ಕೂಡಿ ಒಬ್ಬಳ ಕಣ್ಣನ್ನು ಮುಚ್ಚಿ ಕುತ್ತಿಗೆಯನ್ನು ಕೊಂಚ ವಕ್ರವಾಗಿ ಮಾಡಿಕೊಂಡು ರೋಮಾಂಚಗೊಂಡು ಪ್ರೇಮದಿಂದ ಮನಸ್ಸನ್ನು ವಿಕಾಸಗೊಳಿಸಿ ಅಂತರ್ಹಾಸದಿಂದ ಪ್ರಕಾಶಿಸುವಕಪೋಲಸ್ಥಲವುಳ್ಳ ಬೇರೊಬ್ಬ ಕನ್ಯೆಗೆ ಮುತ್ತಿಡುವನು." ಇಲ್ಲಿ ನಾಯಕನ ಪ್ರೇಮದ ಬಗ್ಗೆ ವಂಚಿತಳಾದ್ದರಿಂದ ಒಬ್ಬಳು ಕನಿಷ್ಠೆಯೂ, ಮುತ್ತಿಡುವುದರಲ್ಲಿ ಚರಿತಾರ್ಥಳಾದ್ದರಿಂದ ಮತ್ತೊಬ್ಬಳು ಜ್ಯೇಷ್ಠೆಯೂ ಎನಿಸಿರುವರು.

ಮಧ್ಯೆ ಪ್ರಗಲ್ಭೆ ಇವರಿಬ್ಬರಲ್ಲಿ ಒಟ್ಟು ಹನ್ನೆರಡು ಬಗೆಗಳಾಗುತ್ತವೆ. ಮುಗ್ಧ ನಾಯಿಕೆಯು ಒಂದೇ ಬಗೆಯಾಗಿರುವುದರಿಂದ ಒಟ್ಟಿನಲ್ಲಿ ಸ್ವೀಯನಾಯಿಕೆಯಲ್ಲಿ ಹದಿಮೂರು ಬಗೆಗಳಿವೆ. ಪರಕೀಯನಾಯಿಕೆಯಲ್ಲಾದರೋ ಪರೋಢೆ (ಮದುವೆಯಾಗಿರುವವಳು) ಕನ್ಯಕೆ, (ಮದುವೆಯಾಗದವಳು) ಹೀಗೆ ಎರಡು ಬಗೆಗಳಿವೆ. ಇವರಲ್ಲಿ ಪರೋಢೆಯು ಎರಡು ಬಗೆಯಾಗಿರುವಳು. ಒಬ್ಬಳು ಲಜ್ಜೆಯಿಲ್ಲದೆ ಮಹೋತ್ಸವ ಮೊದಲಾದ ಕಡೆಗಳಲ್ಲಿ ನೃತ್ಯಗೀತೆಗಳಲ್ಲಿ ತೊಡಗಿರುವವಳು. ಎರಡನೆಯವಳು

ಮನೆಯಲ್ಲಿದ್ದರೂ ಲಜ್ಜೆಯಿಲ್ಲದೆ ಪರಪುರುಷನಲ್ಲಿ ಪ್ರವರ್ತಿಸುವವಳು. ಈಗ ಕುಲಟೆಯ ಲಕ್ಷಣವನ್ನು ಹೇಳುತ್ತಾನೆ. "ನಾನು ಕೊಂಚ ನಿಟ್ಟುಸಿರನ್ನು ಬಿಟ್ಟರೂ ಪತಿಯು 'ಯಾರೋ ಬಂದರು' ಎಂದು ಅಸೂಯೆಪಡುತ್ತಾನೆ. ಸವತಿಯರು ಯಾವಾಗಲೂ ನನ್ನ ಅಭಿಪ್ರಾಯವನ್ನೇ ಗಮನಿಸುತ್ತಾರೆ. ಅತ್ತೆಯೂ ದೇವತೆಯಂತೆ ಹಸ್ತಸಂಕೇತದ ಭಾವವನ್ನು ತಿಳಿಯುತ್ತಾಳೆ. ಅತ್ತಿಗೆಯರು ಕಣ್ಣುಗಳ ಚಲನವಲನಗಳನ್ನು ಪೂರ್ತಿ ಯಾಗಿ ಅನುಸರಿಸುತ್ತಾರೆ. ಆದ್ದರಿಂದ ದೂರದಿಂದಲೇ ನಾನು ನಿನಗೆ ಈ ಅಂಜಲಿ ಯನ್ನು ಅರ್ಪಿಸುತ್ತೇನೆ. ನಿನಗೆ ಕಣ್ಣುಗಳ ಈ ಸಂಕೇತದಿಂದ ಈಗ ಆಗಬೇಕಾದ್ದೇ ನಿದೆ? ಚಾತುರ್ಯದಿಂದ ಮನೋಹರನಾಗಿದ್ದು ರತಿಯನ್ನು ಹೆಚ್ಚಿಸುವ ಆಸನಗಳಲ್ಲಿ ನಿಪುಣನಾಗಿರುವವನೇ, ಇಲ್ಲಿ ನಿನ್ನ ನೇತ್ರಚಲನೆ ಮೊದಲಾದ ಶ್ರಮವೆಲ್ಲವೂ ವ್ಯರ್ಥ ವಾಯಿತು. ಈಗ ಅನೇಕ ಅಡಚಣೆಗಳಿರುವುದರಿಂದ ನಿನ್ನ ಅಭಿಲಾಷವನ್ನು ನಡೆಸ ಲಾಗುವುದಿಲ್ಲ." ಹೀಗೆ ಮನೆಯಲ್ಲಿ ಎಲ್ಲರೊಡನೆ ಇರುವುದರಿಂದ ಆಕೆ ಪರಮಪುರುಷನ ಸೂಚನೆಗಳನ್ನು ಗಮನಿಸಲಿಕ್ಕಾಗುವುದಿಲ್ಲವೆಂದು ಹೇಳಿದ್ದರಿಂದ ಆಕೆ ಹೇಗೆ ಕುಲಟೆ ಎನಿಸಬಲ್ಲಳೆಂದು ಆಕ್ಷೇಪಿಸಿದರೆ ಅದಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ಇಲ್ಲಿ "ನನ್ನನ್ನು ಲಗ್ನವಾಗಿರುವವನು ಅನ್ನವಸ್ತ್ರಗಳನ್ನು ಕೊಡುವುದರಿಂದ ಪತಿ ಎನಿಸಿರುವನೇ ಹೊರತು ನನಗೆ ಪ್ರಿಯನಾಗಿಲ್ಲ. ನೀನಾದರೋ ವಾಕ್ಚಾತುರ್ಯದಿಂದ ಮನೋಹರ ನಾಗಿರುವುದರಿಂದಲೂ, ರತಿವರ್ಧಕವಾದ ಆಸನಗಳಲ್ಲಿ ಚೆನ್ನಾಗಿ ಪಳಗಿರುವುದರಿಂದಲೂ ನೀನು ನನಗೆ ಪ್ರಿಯನಾಗಿರುವೆ" ಎಂಬ ವ್ಯಂಗ್ಯಾರ್ಥವಿರುವುದರಿಂದ ಆಕೆಗೆ ಪರ ಪುರುಷನಲ್ಲಿ ಪ್ರೇಮವಿತ್ತೆಂಬುದು ವ್ಯಂಗ್ಯವಾಗಿ ತೋರುತ್ತದೆ. ಮದುವೆಯಾಗದೆ ಲಜ್ಜೆ ಯಿಂದ ಕೂಡಿ ಹೊಸದಾಗಿ ಯೌವನದ ಸುಖವನ್ನು ಅನುಭವಿಸುವ ಸ್ಥಿತಿಯಲ್ಲಿ ಇರುವವನು ಕನ್ಯೆ ಎನಿಸುವಳು. ಈಕೆ ತಂದೆ ಮೊದಲಾದವರಿಗೆ ಅಧೀನಳಾಗಿರುವಳು. ಮಾಲತೀಮಾಧವದಲ್ಲಿ ಮಾಲತಿ ಇಂತಹ ನಾಯಿಕೆ ಎನಿಸಿರುವಳು.

ಧೀರಾ ಕಲಾಪ್ರಗಲ್ಭಾ ಸ್ಯಾದ್ವೇಶ್ಯಾ ಸಾಮಾನ್ಯನಾಯಿಕಾ ||
ನಿರ್ಗುಣಾನಪಿ ನ ದ್ವೇಷ್ಟಿ ನ ರಜ್ಯತಿ ಗುಣಿಷ್ವಪಿ ।
ವಿತ್ತಮಾತ್ರಂ ಸಮಾಲೋಕ್ಯ ಸಾ ರಾಗಂ ದರ್ಶಯೇದ್ಬಹಿಃ ||
ಕಾಮಮಂಗೀಕೃತಮಪಿ ಪರಿಕ್ಷೀಣಧನಂ ನರಮ್ ।
ಮಾತ್ರಾ ನಿಷ್ಕಾಸಯೇದೇಷಾ ಪುನಃ ಸಂಧಾನಕಾಮ್ಯಯಾ ||
ತಸ್ಕರಾಃ ಪಂಡಕಾ ಮೂರ್ಖಾಃ ಸುಖಪ್ರಾಪ್ತಧನಾಸ್ತಥಾ ।
ಲಿಂಗಿನಶ್ಛನ್ನಕಾಮಾದ್ಯಾ ಆಸಾಂ ಪ್ರಾಯೇಣ ವಲ್ಲಭಾಃ ।
ಏಷಾಪಿ ಮದನಾಯತ್ತಾ ಕ್ವಾಪಿ ಸತ್ಯಾನುರಾಗಿಣೀ ।
ರಕ್ತಾಯಾಂ ವಾ ವಿರಕ್ತಾಯಾಂ ರತಮಸ್ಯಾಂ ಸುದುರ್ಲಭಮ್ ।

ಪಂಡಕೋ ವಾತರೋಗಪಂಡಾದಿಃ. ಛನ್ನಂ ಪ್ರಚ್ಛನ್ನಂ ಕಾಮಯಂತೇ ತೇ ಛನ್ನಕಾಮಾಃ. ತತ್ರ ರಾಗಹೀನಾ ಯಥಾ ನಟಕಮೇಲಕಾದೌ ಮದನಮಂಜ

ಯೋದಿಃ. ರಕ್ತಾ ಯಥಾ ಮೃಚ್ಛಕಟಿಕಾದೌ ವಸಂತಸೇನಾದಿಃ— ಪುನಶ್ಚ

ಅವಸ್ಥಾಭಿರ್ಭವಂತ್ಯಷ್ಟೌ ಏತಾಃ ಷೋಡಶ ಭೇದಿತಾಃ ।
ಸ್ವಾಧೀನಭರ್ತೃಕಾ ತದ್ವತ್ ಖಂಡಿತಾಽಥಾಭಿಸಾರಿಕಾ ॥
ಕಲಹಾಂತರಿತಾ ವಿಪ್ರಲಬ್ಧಾ ಪ್ರೋಷಿತಭರ್ತೃಕಾ ।
ಅನ್ಯಾ ವಾಸಕಸಜ್ಜಾ ಸ್ಯಾತ್ ವಿರಹೋತ್ಕಂಡಿತಾ ತಥಾ ॥

ತತ್ರ— ಕಾಂತೋ ರತಿಗುಣಾಕೃಷ್ಟೋ ನ ಜಹಾತಿ ಯದಂತಿಕಮ್
ವಿಚಿತ್ರವಿಭ್ರಮಾಸಕ್ತಾ ಸಾ ಸ್ಯಾತ್ಸ್ವಾಧೀನಭರ್ತೃಕಾ ॥

ಯಥಾ 'ಅಸ್ಮಾಕಂ ಸಖಿ ವಾಸಸೀ' ಇತ್ಯಾದಿ.

ಪಾರ್ಶ್ವಮೇತಿ ಪ್ರಿಯೋ ಯಸ್ಯಾ ಅನ್ಯಸಂಭೋಗಚಿಹ್ನಿತಃ ।
ಸಾ ಖಂಡಿತೇತಿ ಕಥಿತಾ ಧೀರೈರೀರ್ಷ್ಯಾಕಷಾಯಿತಾ ॥

ಯಥಾ 'ತದವಿತಥಮವಾದೀಃ" ಇತ್ಯಾದಿ.

ಅಭಿಸಾರಯತೇ ಕಾಂತಂ ಯಾ ಮನ್ಮಥವಶಂವದಾ ।
ಸ್ವಯಂ ವಾಭಿಸರತ್ಯೇಷಾ ಧೀರೈರುಕ್ತಾಭಿಸಾರಿಕಾ ॥

ನಚ ಮೇಽವಗಚ್ಛತಿ ಯಥಾ ಲಘುತಾಂ ಕರುಣಾಂ ಯಥಾ ಚ ಕುರುತೇಸ ಮಯಿ
ನಿಪುಣಂ ತಥೈನಮಭಿಗಮ್ಯ ವದೇಃ ಅಭಿದೂತಿ ಕಾಚಿದಿತಿ ಸಂದಿದಿಶೇ ॥

ಉತ್ಕ್ಷಿಪ್ತಂ ಕರಕಂಕಣದ್ವಯಮಿಹಾಬದ್ಧಾ ದೃಢಂ ಮೇಖಲಾ
ಯತ್ನೇನ ಪ್ರತಿಪಾದಿತಾ ಮುಖರಯೋರ್ಮಂಜೀರಯೋರ್ಮೂಕತಾ ।
ಆರಬ್ಧೇ ರಭಸಾಖ್ಯಯಾ ಪ್ರಿಯಸಖಿ ಕ್ರೀಡಾಭಿಸಾರೋತ್ಸವೇ
ಚಂಡಾಲಸ್ತಿಮಿರಾವಗುಂಠನಪಟಕ್ಷೇಪಂ ವಿಧತ್ತೇ ವಿಧುಃ

ಸಂಲೀನಾ ಸ್ವೇಷು ಗಾತ್ರೇಷು ಮೂಕೀಕೃತವಿಭೂಷಣಾ ।
ಅವಗುಂಠನಸಂವೀತಾ ಕುಲಜಾಭಿಸರೇದ್ಯದಿ ॥

ವಿಚಿತ್ರೋಜ್ವಲವೇಶಾ ತು ರಣನ್ನೂಪುರಕಂಕಣಾ ।
ಪ್ರಮೋದಸ್ಮೇರವದನಾ ಸ್ಯಾದ್ವೇಶ್ಯಾಭಿಸರೇದ್ಯದಿ ॥
ಮದಸ್ಖಲಿತಸಂಲಾಪಾ ವಿಭ್ರಮೋತ್ಫುಲ್ಲಲೋಚನಾ ।
ಆವಿದ್ಧಗತಿಸಂಬಾರಾ ಸ್ಯಾತ್ ಪ್ರೇಷ್ಯಾಭಿಸರೇದ್ಯದಿ ।

ತತ್ರಾದ್ಯೇ 'ಉತ್ಕ್ಷಿಪ್ತಂ' ಇತ್ಯಾದಿ. ಅನ್ಯಯೋ ಊಹ್ಯಮುದಾಹರಣಮ್.

ಪ್ರಸಂಗಾದಭಿಸಾರಸ್ಥಾನಾನಿ ಕಥ್ಯಂತೇ—

ಕ್ಷೇತ್ರಂ ವಾಟೀ ಭಗ್ನದೇವಾಲಯೋ ದೂತೀಗೃಹಂ ವನಮ್ ।
ಮಾಲಯಂ ಚ ಶ್ಮಶಾನಂ ಚ ನದ್ಯಾದೀನಾಂ ತಟೀ ತಥಾ ॥
ಏವಂ ಕೃತಾಭಿಸಾರಾಣಾಂ ಪುಂಶ್ಚಲೀನಾಂ ವಿನೋದನೇ ।
ಸ್ಥಾನಾನ್ಯಷ್ಟೌ ತಥಾ ಧ್ವಾಂತಚ್ಛನ್ನೇಷು ಕ್ವಚಿದಾಶ್ರಯಃ ॥
ಚಾಟುಕರಮಪಿ ಪ್ರಾಣನಾಥಂ ರೋಷಾದಪಾಸ್ಯ ಯಾ ।

ಪಶ್ಚಾತ್ತಾಪಮವಾಪ್ನೋತಿ ಕಲಹಾಂತರಿತಾ ತು ಸಾ ||

ಯಥಾ ಮಮ ತಾತಪಾದಾನಾಮ್.

ನೋ ಚಾಟುಶ್ರವಣಂ ಕೃತಂ ನ ಚ ದೃಶಾ ದ್ವಾರೋಽಂತಿಕೇ ವೀಕ್ಷಿತಃ
ಕಾಂತಸ್ಯ ಪ್ರಿಯಹೇತವೇ ನಿಜಸಖೀವಾಂಛಾ ದೂರೀಕೃತಾ ||
ಪಾದಾಂತೇ ವಿನಿಪತ್ಯ ತತ್‌ಕ್ಷಣಮಸೌ ಗಚ್ಛನ್ಮಯಾ ಮೂಢಯಾ
ಪಾಣಿಭ್ಯಾಮವರುಧ್ಯ ಹಂತ ಸಹಸಾ ಕಂಠೇ ಕಥಂ ನಾರ್ಪಿತಃ ||

ಪ್ರಿಯಃ ಕೃತ್ವಾಪಿ ಸಂಕೇತಂ ಯಸ್ಯಾ ನಾಯಾತಿ ಸನ್ನಿಧಿಮ್ |
ವಿಪ್ರಲಬ್ಧಾ ತು ಸಾ ಜ್ಞೇಯಾ ನಿತಾಂತಮವಮಾನಿತಾ ||

ಯಥಾ— ಉತ್ತಿಷ್ಠ ದೂತಿ ಯಾಮೋ ಯಾತಸ್ತಥಾಪಿ ನಾಯಕಃ |
ಯೋಽತಃ ಪರಮಪಿ ಜೀವೇತ್ ಜೀವಿತನಾಥೋ ಭವೇತ್ತಸ್ಯಾಃ ||

ನಾನಾಕಾರ್ಯವಶಾದ್ಯಸ್ಯಾ ದೂರದೇಶಂ ಗತಃ ಪತಿಃ |
ಸಾ ಮನೋಭವದುಃಖಾರ್ತಾ ಭವೇತ್ಪ್ರೋಷಿತಭರ್ತೃಕಾ ||

ಯಥಾ— ತಾಂ ಜಾನೀಥಾಃ ಪರಿಮಿತಕಥಾಂ ಜೀವಿತಂ ಮೇ ದ್ವಿತೀಯಂ
ದೂರೀಭೂತೇ ಮಯಿ ಸಹಚರೇ ಚಕ್ರವಾಕೀಮಿವೈಕಾಮ್ |
ಗಾಢೋತ್ಕಂಠಾಂ ಗುರುಷು ದಿವಸೇಷ್ವೇಷು ಗಚ್ಛತ್ಸು ಬಾಲಾಂ
ಜಾತಾಂ ಮನ್ಯೇ ಶಿಶಿರಮಥಿತಾಂ ಪದ್ಮಿನೀಂ ವಾನ್ಯರೂಪಾಮ್ ||

ಕುರುತೇ ಮಂಡನಂ ಯಸ್ಯಾಃ ಸಜ್ಜಿತೇ ವಾಸವೇಶ್ಮನಿ |
ಸಾ ತು ವಾಸಕಸಜ್ಜಾ ಸ್ಯಾದ್ವಿದಿತಪ್ರಿಯಸಂಗಮಾ ||

ಯಥಾ ರಾಘವಾನಂದಾನಾಂ ನಾಟಕೇ

ವಿದೂರೇ ಕೇಯೂರೇ ಕುರು ಕರಯುಗೇ ರತ್ನವಲಯೈಃ
ಅಲಂ ಗುರ್ವೀ ಗ್ರೀವಾಭರಣಲತಿಕೇಯಂ ಕಿಮನಯಾ |
ನವಾಮೇಕಾಮೇಕಾಮಲಿಮಯಿ ಮಯಿ ತ್ವಂ ವಿರಚಯೇಃ
ನ ಪಥ್ಯಂ ನೇಪಥ್ಯಂ ಬಹುತರಮನಂಗೋತ್ಸವವಿಧೌ ||

ಸಾಧಾರಣಸ್ತ್ರೀ ಎನಿಸಿದ ನಾಯಿಕೆಯ ಸ್ವಭಾವವನ್ನು ಈಗ ತಿಳಿಸುತ್ತಾನೆ. ಆಕೆಗೆ ಸುಶಿಕ್ಷಿತವಾದ ಬುದ್ಧಿ ಇದ್ದು ನೃತ್ಯಗೀತಾದಿಕಲೆಗಳಲ್ಲಿ ಪಳಗಿ ಎಲ್ಲರಿಗೂ ಸಂತೋಷವನ್ನುಂಟುಮಾಡುವ ಸ್ವಭಾವವಿರುತ್ತದೆ. ವೇಶ್ಯೆಯ ವರ್ತನವಿರುವುದ ರಿಂದ ಆಕೆಯು ಸಾಮಾನ್ಯನಾಯಿಕೆ ಎನಿಸುವಳು. ಆಕೆಯು ಗುಣವಿಲ್ಲದವರನ್ನು ದ್ವೇಷಿಸದೆ ಗುಣಶಾಲಿಗಳಲ್ಲಿ ಅಂಟಿಕೊಳ್ಳದೆ ಹಣವನ್ನಷ್ಟೇ ಗಮನಿಸುತ್ತ ಎಲ್ಲರಲ್ಲೂ ಹೊರಗೆ ಪ್ರೇಮವನ್ನು ತೋರಿಸುವಳು. ಒಬ್ಬ ಯುವಕನನ್ನು ಹೆಚ್ಚಾಗಿ ಪ್ರೀತಿಸುವ ನೆಂದು ಒಪ್ಪಿಕೊಂಡಿದ್ದರೂ ಅವನಲ್ಲಿ ಹಣವು ಮುಗಿದರೆ ಮತ್ತೆ ಹಣವನ್ನು ತಂದು ಕೊಡಲೆಂಬ ಇಚ್ಛೆಯಿಂದ ಅವನನ್ನು ತಾಯಿಯ ಕಡೆಯಿಂದ ಹೇಳಿಸಿ ಮನೆಯಿಂದ ಹೊರಗೆ ಹೊರಡಿಸಬಹುದು. ಈಕೆಯಲ್ಲಿ ಸಾಮಾನ್ಯವಾಗಿ ಕಳ್ಳರು, ವಾತರೋಗದಿಂದ

ನರಳುವವರು, ಅನಾಯಾಸವಾಗಿ ಹಣವನ್ನು ಕೊಡಿಟ್ಟವರು, ಭಂಡರು, ಗೋಪ್ಯವಾಗಿ ರಮಿಸಲಿಚ್ಛಿಸುವವರು ಇಂತವರೇ ಪ್ರೀತಿಸಲಿಕ್ಕೆ ಬರುವರು. ಈಕೆಯೂ ಕಾಮ ಬಾಧೆಗೆ ಸಿಲುಕಿ ಯಾವನಾದರೊಬ್ಬನಲ್ಲಿ ಪ್ರೇಮವನ್ನಿಡಬಹುದು. ಆಕೆಗೆ ಅನುರಾಗವಿರಲಿ ಅಥವಾ ಇಲ್ಲದಿರಲಿ ಅವಳಲ್ಲಿ ಯಾರೊಬ್ಬರಿಗೂ ರಮಿಸುವುದಂತೂ ಕಷ್ಟವೇ ಆಗುತ್ತದೆ. ಯಾರಲ್ಲೂ ಆನುರಾಗವಿಲ್ಲದ ಇಂತಹ ಸ್ತ್ರೀಯಳ ವರ್ತನವನ್ನು 'ನಟಕಮೇಲಕ' ನಮದನ ಮಂಜರಿಯಲ್ಲಿ ಕಾಣಬಹುದು. ಒಬ್ಬನಲ್ಲಿ ಅನುರಕ್ತಳಾದ ಇಂತಹ ಸ್ತ್ರೀಯಳ ವರ್ತನವನ್ನು ಮೃಚ್ಛಕಟಿಕದ ವಸಂತಸೇನೆಯಲ್ಲಿ ಕಾಣಬಹುದು.

ಹದಿನಾರು ಬಗೆಯ ನಾಯಿಕೆಯರಲ್ಲಿ ಅವಸ್ಥಾಭೇದದಿಂದ ಎಂಟು ಬಗೆಗಳನ್ನು ಕಾಣಬಹುದು. ಸ್ವೀಯ ಸ್ತ್ರೀಯರಲ್ಲಿ ಹದಿಮೂರು ಬಗೆ, ಪರೋಢೆ ಮತ್ತು ಕನ್ಯಕೆ ಎಂಬವರಿಬ್ಬರು.–ಸಾಧಾರಣ ಸ್ತ್ರೀ ಒಬ್ಬಳು. ಈ ಹದಿನಾರು ಬಗೆಯ ನಾಯಿಕೆಯರಲ್ಲಿ ಎಂಟು ಅವಸ್ಥೆಗಳನ್ನು ಕಾಣಬಹುದು. ಸ್ವಾಧೀನಭರ್ತೃಕೆ (ಪತಿಯನ್ನು ತನಗೆ ವಶಪಡಿಸಿಕೊಂಡವಳು) ಖಂಡಿತೆ, ಅಭಿಸಾರಿಕೆ, ಕಲಹಾಂತರಿತೆ, (ಪತಿಯನ್ನು ಒಮ್ಮೆ ತೊರೆದು ಸಂತಾಪಗೊಂಡವಳು) ವಿಪ್ರಲಬ್ಧೆ (ವಂಚಿತಳು) ಪ್ರೋಷಿತಭರ್ತೃಕೆ (ಪತಿಯು ಪ್ರವಾಸದಲ್ಲಿರುವಾಗ ಅವನ ವಿಯೋಗದಿಂದ ನರಳುವವಳು) ವಾಸಕಸಜ್ಜೆ (ಮನೆಯಲ್ಲಿ ಅಲಂಕಾರಗಳನ್ನು ಮಾಡಿಸಿಕೊಳ್ಳುವವಳು) ವಿರಹೋತ್ಕಂಠಿತೆ (ಪತಿಯು ಬಾರವೇ ಇದ್ದುದಕ್ಕಾಗಿ ವ್ಯಥೆಗೊಂಡವಳು) ಈ ಬಗೆಯ ಅವಸ್ಥೆಗಳಿಂದ ಅವರಲ್ಲಿ ಎಂಟು ಬಗೆಗಳಿವೆ. ಅನುರಾಗದಿಂದ ಆಕರ್ಶಿತನಾಗಿ ಪತಿಯನ್ನು ಒಂದು ಗಳಿಗೆಯೂ ಬಿಡದಂತೆ ಆಶ್ರಯಿಸಿದ್ದು ಅನೇಕ ಬಗೆಯ ವಿಲಾಸಗಳಲ್ಲಿ ನಿರತಳಾಗಿರುವ ಸ್ತ್ರೀಯಳೇ ಸ್ವಾಧೀನಭರ್ತೃಕೆ ಎನಿಸುವಳು. "ಅಸ್ಮಾಕಂಸಖಿ ವಾಸಸೀ" ಎಂಬ ಪದ್ಯದಲ್ಲಿ ಇಂತಹ ಸ್ತ್ರೀಯಳನ್ನು ತಿಳಿಸಲಾಗಿದೆ. ಪತಿಯು ಬೇರೊಬ್ಬ ಸ್ತ್ರೀಯಳಲ್ಲಿ ಸಂಭೋಗ ಮಾಡಿದ ಗುರುತುಗಳಿಂದ ತನ್ನ ಹತ್ತಿರಕ್ಕೆ ಬಂದಾಗ ಅವನ ಬಗ್ಗೆ ಅಸೂಯೆಯಿಂದ ಮನಸ್ಸನ್ನು ಕೆಡಿಸಿಕೊಂಡಿರುವ ಸ್ತ್ರೀಯಳು ಖಂಡಿತೆ ಎನ್ನಿಸುವಳು. "ತದವಿತಥಮವಾದೀಃ" ಎಂಬ ಪದ್ಯದಲ್ಲಿ ಈಕೆಯ ವರ್ತನವನ್ನು ಕಾಣಬಹುದು. ಕಾಮಪೀಡಿತಳಾಗಿದ್ದು ತನ್ನ ಪ್ರೀತಿಗೆ ಪಾತ್ರನಾದವನನ್ನು ಸಖಿಯರ ಕಡೆಯಿಂದ ಕರೆಸಿಕೊಳ್ಳುತ್ತಲೋ ಅಥವಾ ತಾನಾಗಿಯೇ ಅವನ ಬಳಿಗೆ ಹೋಗುತ್ತಲೋ ಅವನನ್ನು ಪ್ರೀತಿಸುವವಳು ಅಭಿಸಾರಿಕೆ ಎನಿಸುವಳು. ಪ್ರೀತಿಪಾತ್ರನನ್ನು ತನ್ನೆಡೆಗೆ ಬರಮಾಡಿಕೊಳ್ಳುವವಳು ಮತ್ತು ಅವನೆಡೆಗೆ ತಾನಾಗಿಯೇ ಹೋಗುವವಳು ; ಹೀಗೆ ಅವಳಲ್ಲಿ ಎರಡು ಬಗೆಯ ವರ್ತನವಿದೆ. ಇವೆರಡಕ್ಕೂ ಉದಾಹರಣಗಳನ್ನು ಕೊಡಲಾಗಿದೆ. "ಆ ಪ್ರಿಯತಮನು ನನ್ನಲ್ಲಿ ಅಗೌರವವನ್ನೂ ತೋರಿಸುವುದಿಲ್ಲ. ನನ್ನ ಬಗ್ಗೆ ಅವನಿಗೆ ದಯೆಯೂ ಇದೆ. ಇಂತಹ ಪ್ರಿಯನ ಬಳಿಗೆ ನೀನು ಹೋಗಿ ಬುದ್ಧಿವಂತಿಕೆಯಿಂದ ಮಾತನಾಡು''ಹೀಗೆ ಕಾಮಿನಿಯೊಬ್ಬಳು ದೂತಿಯ ಹತ್ತಿರ ಒಂದು ಸಂದೇಶವನ್ನು ಕಳುಹಿಸಿದಳು." ಇಲ್ಲಿ ಅವನನ್ನು ಹೇಗಾದರೂ ತನ್ನ ಬಳಿಗೆ ಕರೆಸಬೇಕೆಂಬ ಆಶೆ ಇರು

ವುದರಿಂದ ನಾಯಿಕೆಯು ಅಭಿಸಾರಿಕೆ ಎನಿಸಿರುವಳು. "ಎಲೈ ಪ್ರಿಯಸಖಿಯೇ, ಕೈಯಲ್ಲಿರುವ ಬಳೆಗಳೆರಡನ್ನು ಶಬ್ದವಾಗದಂತೆ ಮೇಲಕ್ಕೆ ಎತ್ತಿಕೊಂಡಿದ್ದೇನೆ. ಡಾಬನ್ನು ಶಬ್ದಮಾಡದಂತೆ ಗಟ್ಟಿಯಾಗಿ ಕಟ್ಟಿಕೊಂಡಿರುವೆನು. ಶಬ್ದಮಾಡುವ ಕಾಲುಕಡಗಗಳನ್ನು ನಿಶ್ಶಬ್ದವಾಗುವಂತೆ ಮೇಲಕ್ಕೆ ಎತ್ತಿದ್ದಾಗಿದೆ. ಹೀಗೆ ನಾನು ಸಂತೋಷದಿಂದ ಅವನನ್ನು ಅನುಸರಿಸಲಿಕ್ಕೆ ಆರಂಭಿಸಿರುವಾಗ ಚಂಡಾಲನಂತೆ ಕ್ರೂರನಾದ ಚಂದ್ರನು ಕತ್ತಲೆ ಎಂಬ ಪರದೆಯ ಬಟ್ಟೆಯನ್ನು ಹೊದ್ದಿಸಿರುವನು. ಆದ್ದರಿಂದ ಅವನನ್ನು ಹುಡುಕಿಕೊಂಡು ಹೋಗುವ ಕಾರ್ಯವು ಪೂರ್ತಿಯಾಗಿ ಆಗಲಿಲ್ಲ" ಹೀಗೆ ನಾಯಿಕೆಯು ತಾನಾಗಿಯೇ ಪತಿಯನ್ನು ಹುಡುಕಿಕೊಂಡು ಹೋಗುವುದನ್ನು ತಿಳಿಸುವ ಸಂದರ್ಭದಲ್ಲಿ ಹಾಗೆ ಹುಡುಕುವ ರೀತಿಯಲ್ಲಿ ಕಾಣುವ ಬಗೆಗಳನ್ನು ಈಗ ತಿಳಿಸುತ್ತಾನೆ. ಸತ್ಕುಲದಲ್ಲಿ ಹುಟ್ಟಿದವಳು ಪತಿಯನ್ನು ಹುಡುಕಿಕೊಂಡು ಹೋಗುವುದಾದರೆ ಆಗ ಆಕೆಯು ಅವಯವಗಳನ್ನು ಕುಗ್ಗಿಸಿಕೊಂಡು, ಒಡವೆಗಳನ್ನು ಶಬ್ದಮಾಡದಂತೆ ಅಡಗಿಸಿಕೊಂಡು, ಮೈಮೇಲೆ ಹೊದಿಕೆಯನ್ನು ಹಾಕಿಕೊಂಡು ಹೋಗುವಳು. ವೇಶ್ಯೆಯು ಒಬ್ಬನನ್ನು ಹುಡುಕಿಕೊಂಡು ಹೋಗುವಾಗ ವಿಚಿತ್ರವೂ ಸುಂದರವೂ ಆದ ಬಟ್ಟೆಗಳನ್ನು ಧರಿಸಿ ಕಾಲು ಕಡಗಗಳನ್ನು ಶಬ್ದಮಾಡಿಸುತ್ತ ಆನಂದದಿಂದ ನಗುತ್ತ ಹೋಗುವಳು. ದಾಸಿಯೊಬ್ಬಳು ಪ್ರಿಯನನ್ನು ಹುಡುಕುತ್ತ ಹೋಗಬೇಕಾದರೆ ಕಾಮವಿಕಾರದಿಂದ ತೊದಲಾಗಿ ಮಾತನಾಡುತ್ತ ವಿಲಾಸದಿಂದ ಕಣ್ಣುಗಳನ್ನು ವಿಕಾಸಗೊಳಿಸಿಕೊಂಡು ಹೆಜ್ಜೆಯನ್ನಿಡುವಾಗ ಅಲ್ಲಲ್ಲಿ ಎಡವುತ್ತ ಹೋಗುವಳು. ಈಕೆಯಲ್ಲಿ ಹೆಚ್ಚು ಕಾಮೋದ್ರೇಕವಿರುವ ಪ್ರಯುಕ್ತ ಆಕೆ ಹೀಗೆ ಹೋಗುವುದು ಸಹಜ. ಇವರಲ್ಲಿ ಸತ್ಕುಲ ಪ್ರಸೂತೆಯು ರತಿಯನ್ನು ಹುಡುಕಿಕೊಂಡು ಹೋಗುವುದನ್ನು 'ಉತ್‌ಕ್ಷಿಪ್ತಮ್' ಎಂಬ ಪದ್ಯದಲ್ಲಿ ತಿಳಿಸಿದೆ. ಉಳಿದ ಬಗ್ಗೆ ಉದಾಹರಣಗಳನ್ನು ಊಹಿಸಿಕೊಳುವುದು

ಈ ಪ್ರಸಂಗದಿಂದ ಅಭಿಸರಣಸ್ಥಾನಗಳೆಂತಹವೆಂಬುದನ್ನು ಇಲ್ಲಿ ತಿಳಿಸಲಾಗುವುದು. ಸಸ್ಯಗಳನ್ನು ಬೆಳೆಯುವ ಭೂಮಿ, ನಿರ್ಜನಪ್ರದೇಶ, ಮುರಿದು ಬಿದ್ದಿರುವ ದೇವಾಲಯ, ದೂತಿಯ ಮನೆ, ಅರಣ್ಯ, ಉಪವನ, ಶ್ಮಶಾನ, ನದಿಯ ತೀರ ಈ ಎಂಟು ಸ್ಥಾನಗಳು ಪತಿಯನ್ನು ಹುಡುಕಿಕೊಂಡು ಅಲೆಯುವ ಸ್ತ್ರೀಯರಿಗೆ ಸಂತೋಷಪಡಿಸಲು ಅನುಕೂಲ ಇವಲ್ಲದೆ ಕತ್ತಲೆಯಿಂದ ಆವರಿಸಿದ ಕೆಲವು ಮನೆಗಳಲ್ಲೂ ಅವರು ಸೇರಬಹುದು.

ಪ್ರಿಯವಾಗಿ ಮಾತನಾಡುವ ರಮಣನನ್ನೂ ಸಹ ಸಿಟ್ಟಿನಿಂದ ತೊರೆದು ಆಮೇಲೆ ಸಂತಾಪವನ್ನು ಅನುಭವಿಸುವವಳು ಕಲಹಾಂತರಿತೆ ಎನಿಸುವಳು. ಈಬಗ್ಗೆ ಉದಾಹರಣ ಹೀಗಿದೆ. ಪ್ರಿಯನು ಬೇಡಿಕೊಂಡರೂ ಸಹ ಸಿಟ್ಟಿನಿಂದ ತಿರಸ್ಕರಿಸಿ ಆಮೇಲೆ ಸಂತಾಪಗೊಂಡ ಸ್ತ್ರೀಯಳು ಸಖಿಗೆ ಹೇಳುವ ಮಾತಿದು. "ಕಾಂತನು ಹೇಳಿದ ಹಿತವಚನವನ್ನು ಸಹ ತಿರಸ್ಕರಿಸಿದ್ದಾಯಿತು. ನನ್ನ ಸಂತೋಷಕ್ಕಾಗಿ ಅವನು ಕೊಡಲಿಕ್ಕೆ ಬಂದ ಮುಕ್ತಾಹಾರವನ್ನೂ ನೋಡಲಿಲ್ಲ. ಅವನನ್ನು ಸಂತೋಷಪಡಿಸಲು ನನ

ಸಖಿ ಹೇಳಿದ ಮಾತುಗಳನ್ನೂ ತೊರೆವದ್ದಾಯಿತು. ಇವನು ನನ್ನನ್ನು ಸಂತೋಷ ಪಡಿಸಲು ನನ್ನ ಕಾಲುಗಳ ಮೇಲೆ ಬಿದ್ದರೂ ನಾನು ಪ್ರಸನ್ನಳಾಗದ್ದರಿಂದ ಆ ಕೂಡಲೇ ಅವನು ಹೊರಡಲು ಅವನನ್ನು ನಾನು ಕೈಗಳಿಂದ ತಡೆದು ಅವನ ಕುತ್ತಿಗೆಯನ್ನು ತಬ್ಬಿ ಕೊಳ್ಳಲಿಲ್ಲ' ಇಲ್ಲಿ ಪತಿಯು ಎಷ್ಟು ಸಮಾಧಾನಮಾಡಿದರೂ ಅವನ್ನು ತಿರಸ್ಕರಿಸಿದ್ದ ರಿಂದ ಈಕೆ ಕಲಹಾಂತರಿತೆ ಎನಿಸಿರುವಳು.

ಪ್ರಿಯನು ಸಂಕೇತಸ್ಥಳವನ್ನು ಏರ್ಪಡಿಸಿದ್ದರೂ ಸಹ ಅಲ್ಲಿಗೆ ಬರದೆ ಯಾವ ಳನ್ನು ಹೆಚ್ಚು ಅವಮಾನಗೊಳಿಸುವನೋ ಅಂತಹ ಸ್ತ್ರೀಯು ವಿಪ್ರಲಬ್ಧೆ ಎನಿಸುವಳು. "ಸಂಕೇತಸ್ಥಳಕ್ಕೆ ಹೋಗಿದ್ದ ನಾಯಿಕೆಯು ಪತಿಯು ತಡವಾದುದನ್ನು ಗಮನಿಸಿ ದೂತಿಗೆ ವ್ಯಸನದಿಂದ ಹೇಳುವ ಮಾತಿದು. ಎಲೈ ದೂತಿಯೇ ಏಳು, ನಾವು ಹೋಗೋಣ. ಇಲ್ಲಿಗೆ ಪ್ರಿಯನು ಬರುವ ವೇಳೆಯಲ್ಲಿ ಒಂದು ಜಾವ ಕಳೆದಿದೆ. ಆದರೂ ಅವನು ಬರಲಿಲ್ಲ. ಇನ್ನು ಮೇಲೆಯೂ ಯಾವಳು ಬದುಕಿರುವಳೋ ಅವಳಿಗೇ ಅವನು ಪ್ರಾಣ ಕಾಂತನಾದಾನು! ನಾನಂತೂ ಇನ್ನು ಮೇಲೆ ಬದುಕಲಾರೆ. ಅವನಂತೂ ನನಗೆ ದೊರೆಯಲಾರನು" ಇಲ್ಲಿ ಸಂಕೇತಸ್ಥಳಕ್ಕೆ ಪ್ರಿಯನು ಬಾರದೆ ಇರುವುದರಿಂದ ಹೀಗೆ ಗೋಳಾಡುವ ಸ್ತ್ರೀಯಳು ವಿಪ್ರಲಬ್ಧೆ ಎನಿಸಿರುವಳು.

ಅನೇಕ ಬಗೆಯ ಕಾರ್ಯಗಳನ್ನು ನಡೆಸಲು ಪತಿಯು ದೂರ ದೇಶಕ್ಕೆ ಹೋಗಿರು ವಾಗ ಅವನ ವಿಯೋಗಕ್ಕಾಗಿ ವ್ಯಥೆ ಪಡುವ ಸ್ತ್ರೀಯಳು ಪ್ರೋಷಿತ್ತಭರ್ತೃಕೆ ಎನಿಸು ವಳು. ಕುಬೇರನ ಶಾಪದಿಂದ ಹೆಂಡತಿಯನ್ನು ತೊರೆದು ದೂರದೇಶಕ್ಕೆ ಹೋಗಿದ್ದ ಯಕ್ಷನು ಮೇಘವನ್ನು ಕುರಿತು ಹೇಳುವ ಮಾತಿದು. "ಆಕೆಯೊಡನೆ ಯಾವಾಗಲೂ ಇದ್ದ ನಾನು ಚಕ್ರವಾಕಿಯನ್ನು ಅಗಲಿದಂತೆ ಹೀಗೆ ಪ್ರವಾಸದಲ್ಲಿರಲು ಆಕೆಯು ಮಿತ ವಾಗಿ ಮಾತನಾಡುತ್ತ ಏಕಾಕಿಳಾಗಿರುವಳು. ಮನೆಯಲ್ಲಿ ಅನೇಕ ಸ್ತ್ರೀಯರಿದ್ದರೂ ಹೀಗೆ ನನಗಾಗಿ ಕೊರಗುತ್ತಿರುವವಳನ್ನೇ ನನ್ನ ಎರಡನೆಯ ಪ್ರಾಣವೆಂದು ತಿಳಿದುಕೋ. ಇಷ್ಟೊಂದು ವಿರಹದಿವಸಗಳು ಕಳೆಯಲಾಗಿ ನನಗಾಗಿ ಹೆಚ್ಚು ಆಶೆಗೊಂಡಿರುವ ಆ ಬಾಲೆಯನ್ನು ಹಿಮದ ತುಂತುರಿನಿಂದ ಮಲಿನಗೊಂಡ ಪದ್ಮಿನಿಯೋ ಅಥವಾ ಬೇರೆ ಯೊಂದು ಮಲಿನವೂ ಕ್ಷೀಣವೂ ಆದ ರೂಪವೋ ಎಂದು ಭಾವಿಸುವೆನು." ಇಲ್ಲಿ ಪತಿಯ ಪ್ರವಾಸಕಾಲದಲ್ಲಿ ಹೆಂಡತಿ ಹೀಗೆ ವ್ಯಥೆ ಪಡುತ್ತಿರುವಳೆಂದು ವರ್ಣಿಸಿರುವುದರಿಂದ ಈಕೆಯು ಪ್ರೋಷಿತಭರ್ತೃಕೆ ಎನಿಸಿರುವಳು.

ಪುಷ್ಪಗಳಿಂದಲೂ ಶ್ರೀಗಂಧದಿಂದಲೂ ಶೋಭಿಸುತ್ತಿರುವ ವಾಸದ ಮನೆಯಲ್ಲಿ ಪ್ರಿಯನ ಸಮಾಗಮವಾಗುವುದೆಂದು ತಿಳಿದು ಅಲಂಕಾರವನ್ನು ಸಖಿಯರಿಂದ ಮಾಡಿಸಿ ಕೊಳ್ಳುವ ಸ್ತ್ರೀಯಳು ವಾಸಕಸಜ್ಜೆ ಎನಿಸುವಳು. ರಾಘವಾನಂದರ ನಾಟಕದಲ್ಲಿ ಈ ಬಗ್ಗೆ ಉದಾಹರಣವು ಹೀಗಿದೆ. ಮಲಗುವ ಮನೆಗೆ ಹೋಗಲಿಚ್ಛಿಸುವ ನಾಯಿಕೆ ಅಲಂಕರಿಸುವ ಸಖಿಗೆ ಹೇಳುವ ಮಾತಿದು. "ಕೈಬಳೆಗಳನ್ನು ನನಗೆ ತೊಡಿಸಬೇಡ. ಕೈಗಳಲ್ಲಿ ರತ್ನಕಡಗಗಳು ಬೇಕಾಗಿಲ್ಲ. ಈ ಕಂಠಮಾಲೆಯು ಭಾರವಾಗಿದೆ. ಇದ

ರಿಂದ ಏನು ಫಲ ? ಹೊಸದಾಗಿ ಮಾಡಿಸಿರುವ ಒಂದೆಳೆಯ ಹಾರವನ್ನು ನನ್ನ ಕುತ್ತಿಗೆ ಯಲ್ಲಿ ತೊಡಿಸು. ಸುರತೋತ್ಸವವನ್ನು ಅನುಭವಿಸುವಾಗ ಒಡವೆಗಳ ಅಲಂಕಾರವು ಶೋಭಿಸುವುದಿಲ್ಲ. ಅದೆಲ್ಲವೂ ಆಲಿಂಗನಕ್ಕೆ ಅಡಚಣೆಯಾಗುವುದು '' ಹೀಗೆ ವಾಸಗೃಹ ದಲ್ಲಿ ಅಲಂಕಾರವನ್ನು ಮಾಡಿಸಿಕೊಳ್ಳುವ ಸ್ತ್ರೀಯು ಹೇಳಿದ್ದರಿಂದ ಇದು ವಾಸಕ ಸಜ್ಜೆಯ ವರ್ತನವನ್ನು ತಿಳಿಸುತ್ತದೆ.

ಆಗಂತುಂ ಕೃತಚಿತ್ತೋಽಪಿ ದೈವಾನ್ನಾಯಾತಿ ಯತ್ಪ್ರಿಯಃ।
ತದನಾಗಮದುಃಖಾರ್ತಾ ವಿರಹೋತ್ಕಂಠಿತಾ ತು ಸಾ ॥

ಯಥಾ— ಕಿಂ ರುದ್ಧಃ ಪ್ರಿಯಯಾ ಕಯಾಚಿದಥವಾ ಸಖ್ಯಾ ಮಮೋದ್ವೇಜಿತಃ।
ಕಿಂ ವಾ ಕಾರಣಗೌರವಂ ಕಿಮಪಿ ಯನ್ನಾದ್ಯಾಗತೋ ವಲ್ಲಭಃ।
ಇತ್ಯಾಲೋಚ್ಯ ಮೃಗೀದೃಶಾ ಕರತಲೇ ವಿನ್ಯಸ್ಯ ವಕ್ತ್ರಾಂಬುಜಂ।
ದೀರ್ಘಂ ನಿಶ್ವಸಿತಂ ಚಿರಂ ಚ ರುದಿತಂ ಕ್ಷಿಪ್ತಾಶ್ಚ ಪುಷ್ಪಸ್ರಜಃ॥
ಇತಿ ಸಾಷ್ಟಾವಿಂಶತಿಶತಮುತ್ತಮಮಧ್ಯಮಾಧಮಸ್ವರೂಪತಃ।
ಚತುರಧಿಕಾಶೀತಿಯುತಂ ಶತತ್ರಯಂ ನಾಯಿಕಾಭೇದಾನಾಂ ಸ್ಯಾತ್ ॥

"ಇಹ ಚ ಪರಸ್ತ್ರಿಯೌ ಕನ್ಯಕಾನ್ಯೋಢೇ ಸಂಕೇತಾತ್ಪೂರ್ವಂ ವಿರಹೋತ್ಕಂಠಿತೇ ಪಶ್ಚಾತ್ ವಿದೂಷಕಾದಿನಾ ಸಹಾಭಿಸರಂತ್ಯಾವಭಿಸಾರಿಕೇ, ಕುತೋಽಪಿ ಸಂಕೇತಸ್ಥಾನಮಪ್ರಾಪ್ತೇ ನಾಯಕೇ ವಿಪ್ರಲಬ್ಧೇ ಇತಿ ತ್ರ್ಯವಸ್ಥೈವ ಅನಯೋಃ ಅಸ್ವಾಧೀನಪ್ರಿಯಯೋಃ ಅವಸ್ಥಾಂತರಾಯೋಗಾತ್ '' ಇತಿ ಕಶ್ಚಿತ್.

ಕ್ವಚಿದನ್ಯೋನ್ಯಸಾಂಕರ್ಯಮಾಸಾಂ ಲಕ್ಷ್ಯೇಷು ದೃಶ್ಯತೇ।
ನ ಖಲು ವಯಮಮುಷ್ಯ ದಾನಯೋಗ್ಯಾಃ
ಪಿಬತಿ ಚ ಪಾತಿ ಚ ಯಾಸಕೌ ರಹಸ್ತ್ವಾಮ್।
ವಿಟ ವಿಟಪಮಮುಂ ದದಸ್ವ ತಸ್ಯೈ
ಭವತಿ ಯತಸ್ಸದೃಶೋಶ್ಚಿರಾಯ ಯೋಗಃ॥
ತವ ಕಿತವ ಕಿಮಾಹಿತೈರ್ವೃಥಾ ನಃ ಕ್ಷಿತಿರುಹಪಲ್ಲವಪುಷ್ಪಕರ್ಣಪೂರೈಃ।
ನನು ಜನವಿದಿತೈರ್ಭವದ್ವ್ಯಲೀಕೈಶ್ಚಿರಪರಿಪೂರಿತಮೇವ ಕರ್ಣಯುಗ್ಮಮ್॥
ಮುಹುರುಪಹಸಿತಾಮಿವಾಲಿನಾದೈರ್ವಿತರಸಿ ನಃ ಕಲಿಕಾಂ ಕಿಮರ್ಥಮೇನಾಮ್
ವಸತಿಮುಪಗತೇನ ಧಾಮ್ನಿ ತಸ್ಯಾಃ ಶಠ ಕಲಿರೇಷ ಮಹಾಂಸ್ತ್ವಯಾದ್ಯ ದತ್ತಃ॥
ಇತಿ ಗದಿತವತೀ ರುಷಾ ಜಘಾನ ಸ್ಫುರಿತಮನೋಹರಪಕ್ಷ್ಮಕೇಸರೇಣ।
ಶ್ರವಣನಿಯಮಿತೇನ ಕಾಂತಮನ್ಯಾ ಸಮಮಸಿತಾಂಬುರುಹೇಣ ಚಕ್ಷುಷಾ ಚ॥

ಇಯಂ ಹಿ ವಕ್ರೋಕ್ತ್ಯಾ ಪರುಷವಚನೇನ ಕರ್ಣೋತ್ಪಲತಾಡನೇನ ಚ ಧೀರಮಧ್ಯತಾಽಧೀರಮಧ್ಯತಾಽಧೀರಪ್ರಗಲ್ಭತಾಭಿಃ ಸಂಕೀರ್ಣಾ. ಏವಮನ್ಯತ್ರಾ ಪ್ಯೂಹ್ಯಮ್. ಇತರಾ ಅಪ್ಯಸಂಖ್ಯಾತಾಃ ನೋಕ್ತಾ ವಿಸ್ತರಶಂಕಯಾ। ತಾಃ ನಾಯಕಾಃ-

ಪ್ರೇಯಸಿಯ ಬಳಿಗೆ ಹೋಗಲು ಪ್ರಿಯನಿಗೆ ಮನ್ನಿದ್ದರೂ ಸಹ ಅವನು ಆಕಸ್ಮಿಕವಾಗಿ ಬರದೇ ಇರಲು ಅವನು ಬಾರದೇ ಇದ್ದುದಕ್ಕಾಗಿ ದುಃಖಗೊಂಡವಳು ವಿರಹೋತ್ಕಂಠಿತೆ ಎನಿಸುವಳು. ನಿರ್ದಿಷ್ಟವಾದ ಸಮಯವು ಕಳೆದರೂ ಸಹ ಪ್ರಿಯನು ಬಾರದೆ ಇದ್ದುದನ್ನು ನೋಡಿ ವ್ಯಸನಗೊಂಡವಳೊಬ್ಬಳು ಹೇಳುವ ಮಾತಿದು. " ಯಾವಳೋ ಒಬ್ಬ ಸ್ತ್ರೀಯಳು ಪ್ರಿಯನನ್ನು ಇಲ್ಲಿಗೆ ಬರದಂತೆ ತಡೆದಿರಬಹುದು? ಅಥವಾ ನಾನು ಅವನ ಬಳಿಗೆ ಕಳುಹಿಸಿದ್ದ ದೂತಿಯೇ ಬಿರುಸಾಗಿ ಮಾತನಾಡಿ ಅವನನ್ನು ರೇಗಿಸಿರಬಹುದೇ? ನನ್ನ ಪ್ರಿಯತಮನು ಇಷ್ಟು ಹೊತ್ತಾದರೂ ಬಾರದೇ ಇರುವುದಕ್ಕೆ ಯಾವ ಹೆಚ್ಚಿನ ಕಾರಣವಿರಬಹುದು?" ಹೀಗೆ ಕಾಮಿನಿಯು ಆಲೋಚಿಸಿ ಕೈಯಲ್ಲಿ ಮುಖವನ್ನಿಟ್ಟು ಬಹಳ ಹೊತ್ತು ನಿಟ್ಟುಸಿರನ್ನು ಬಿಟ್ಟಳು; ಬಹುಕಾಲ ಅತ್ತಳು. ಸಂತೋಷಕ್ಕಾಗಿ ಮುಡಿದುಕೊಂಡಿದ್ದ ಹೂಮಾಲೆಗಳು ಕೆಳಗೆ ಬಿದ್ದವು" ಇಲ್ಲಿ ಬರಲಿಕ್ಕೆ ಒಪ್ಪಿಕೊಂಡಿದ್ದ ಪ್ರಿಯನು ಬಾರದೇ ಇದ್ದುದರಿಂದ ದುಃಖಾರ್ತಳಾದ ನಾಯಿಕೆಯು ಗೋಳಾಡುವುದನ್ನು ತಿಳಿಸಿರುವುದರಿಂದ ಈಕೆಯು ವಿರಹೋತ್ಕಂಠಿತೆ ಎನಿಸಿರುವಳು.

ಹೀಗೆ ಸ್ವಾಧೀನಭರ್ತೃಕೆ ಮೊದಲಾದ ಎಂಟು ಅವಸ್ಥೆಗಳಿಂದ ಒಟ್ಟು ನೂರ ಇಪ್ಪತ್ತೆಂಟು ಬಗೆಯ ನಾಯಿಕೆಯರಾಗುವರು. ಮಧ್ಯೆಯರಲ್ಲಿ ಧೀರೆ, ಅಧೀರೆ, ಧೀರಾಧೀರೆ ಎಂದು ಮೂರು ಬಗೆಗಳು, ಹಾಗೆಯೇ ಪ್ರಗಲ್ಭೆಯರಲ್ಲಿ ಮೂರು ಬಗೆಗಳು. ಈ ಆರು ಬಗೆಗಳು ಅನುರಾಗದಲ್ಲಿ ಅಲ್ಪ ಆಧಿಕ್ಯ ಎಂಬ ಎರಡು ಭೇದದಿಂದ ಒಟ್ಟು ಹನ್ನೆರಡು ಬಗೆಗಳಾಗುತ್ತವೆ. ಮುಗ್ಧೆಯಲ್ಲಿ ಒಂದೇ ಬಗೆ. ಹೀಗೆ ಒಟ್ಟು ಹದಿಮೂರು ಬಗೆಗಳಿವೆ. ಪರೋಢೆ ಕನ್ಯಕೆ ಎಂಬ ಭೇದದಿಂದ ಪರಕೀಯಳಲ್ಲಿ ಎರಡು ಬಗೆಗಳಿವೆ. ಸಾಧಾರಣಸ್ತ್ರೀಯಲ್ಲಿ ಮಾತ್ರ ಒಂದೇ ಬಗೆ ಇದೆ. ಅಲ್ಲಿಗೆ ಒಟ್ಟು ಹದಿನಾರು ಬಗೆಗಳಲ್ಲಿ ಸ್ವಾಧೀನಭರ್ತೃಕೆ ಮೊದಲಾದ ಎಂಟು ಅವಸ್ಥೆಗಳಿಂದ ನೂರಿಪ್ಪತ್ತೆಂಟು ಬಗೆಗಳಾಗುತ್ತವೆ. ಈ ನೂರ ಇಪ್ಪತ್ತೆಂಟು ಬಗೆಗಳಲ್ಲಿ ಒಬ್ಬೊಬ್ಬಳಲ್ಲೂ ಉತ್ತಮ, ಮಧ್ಯಮ, ಅಧಮ ಎಂದು ಮೂರು ಬಗೆಗಳಿರುವುದರಿಂದ ಒಟ್ಟು ಮುನ್ನೂರ ಎಂಭತ್ತ ನಾಲ್ಕು ಬಗೆಗಳಾಗುತ್ತವೆ. ಇಲ್ಲಿ ಕನ್ಯಕೆ, ಅನ್ಯೋಢೆ ಎನಿಸಿದ ಪರಸ್ತ್ರೀಯರು ತಂದೆಗೂ ಪತಿಗೂ ಅಧೀನರಾದ್ದರಿಂದ ಅವರಲ್ಲಿ ಹಿಂದೆಹೇಳಿದ ಎಂಟು ಬಗೆಯ ಅವಸ್ಥೆಗಳು ಅನ್ವಯಿಸುವುದಿಲ್ಲ. ಇವರು ವಿರಹೋತ್ಕಂಠಿತೆಯೂ, ಅಭಿಸಾರಿಕೆಯೂ, ವಿಪ್ರಲಬ್ಧೆಯೂ ಆಗಬಹುದು. ಆದರೆ ಉಳಿದ ಐದು ಅವಸ್ಥೆಗಳು ಇವರಲ್ಲಿ ಸಂಭವಿಸುವುದಿಲ್ಲವೆಂದು ಕೆಲವರು ಹೇಳುತ್ತಾರೆ.

ಕೆಲವು ಉದಾಹರಣಗಳಲ್ಲಿ ಒಂದೇಕಡೆಯಲ್ಲಿಯೇ ಅನೇಕ ನಾಯಿಕೆಯರ ಲಕ್ಷಣಗಳು ಸಂಭವಿಸುತ್ತವೆ. "ಹೂವು ಚಿಗುರುಗಳಿಂದ ಅಲಂಕೃತವಾದ ಮರದ ಕೊಂಬೆಯನ್ನು ಕೊಡಲು ಇಚ್ಛಿಸಿದ ನಾಯಕನಿಗೆ ಒಬ್ಬಳು ಹೇಳುವ ಮಾತಿದು. "ಎಲೈ ವಿಟನೆ, ಈ ಕೊಂಬೆಯನ್ನು ಪಡೆಯಲು, ನಾವು ಅರ್ಹರಲ್ಲ. ಯಾವಳು

ನಿರ್ಜನಸ್ಥಳದಲ್ಲಿ ನಿನ್ನನ್ನು ಭೋಗಿಸಿ ಬೇರೆಯವರಿಂದ ರಕ್ಷಿಸುವಳೋ ಅಂತವಳಿಗೆ ಈ ಕೊಂಬೆಯನ್ನು ಕೊಡು. ಯಾಕೇಂದರೆ ಸಮಾನವಾದ ವಸ್ತುಗಳಿಗೆ ಯೋಗವು ಹೊಂದುತ್ತದೆ. ವಿಟನಾದ ನಿನ್ನನ್ನು ಪಾನಮಾಡಿರುವುದರಿಂದ ಕೊಂಬೆಯು ವಿಟಪ ಎನಿಸಿ ನೀನೂ ವಿದಪನೆನಿಸಿದ್ದರಿಂದ ಇಬ್ಬರಿಗೂ ಯೋಗವು ಕೂಡುತ್ತದೆ.'' "ಎಲೈ ಧೂರ್ತನೆ, ನನ್ನ ಕಿವಿಯಲ್ಲಿ ಇಡುವ ಚಿಗುರು ಹೂವುಗಳೆಂಬ ಕರ್ಣಾಭರಣಗಳಿಂದ ನನಗೆ ಏನು ಫಲವಾದೀತು ? ಅವುಗಳ ಪ್ರಯೋಜನವು ಹೇಗೆ ಬೇರೆ ರೀತಿಯಾಗಿ ಸಿದ್ಧಿಸಿತೆಂದರೆ ಎಲ್ಲರಿಗೂ ತಿಳಿದ ನಿನ್ನ ಅಕ್ರಮವರ್ತನವ ವಾರ್ತೆಗಳಿಂದ ನನ್ನ ಕಿವಿಗಳೆರಡೂ ಬಹಳಕಾಲದಿಂದಲ್ಲೂ ತುಂಬಿಹೋಗಿವೆ. ಇನ್ನು ಈ ಅಲಂಕಾರಗಳಿಗೆ ಅವಕಾಶವೆಲ್ಲಿದ್ದೀತು ?'' ಈ ಮೊಗ್ಗಿನ ಮೇಲೆ ಇರುವ ದುಂಬಿಗಳ ಝೇಂಕಾರದಿಂದ ಬಾರಿಬಾರಿಗೂ ಹಾಸ್ಯಕ್ಕೆ ಗುರಿಯಾಗಿಯೋ ಏನೋ ಎಂಬಂತಿರುವ ಈ ಮೊಗ್ಗನ್ನು ನಮಗೆ ಏಕೆ ಕೊಡುವೆ ? ಪರಸತಿಯರ ಮನೆಯಲ್ಲಿ ವಾಸಮಾಡುವ ನೀನು ನಮಗೆ ದೊಡ್ಡದೊಂದು ವಿವಾದವನ್ನು ತಂದೊಡ್ಡಿರುವೆ. ನೀನು ಕೊಟ್ಟಿರುವ ಕಲಿ (ಕಲಹವೇ) ಇರುವಾಗ ಬೇರೊಂದು ಕಲಿ (ಮೊಗ್ಗು–ಕಲಿಕೆ) ಯನ್ನು ಕೊಡಬೇಕಾಗಿಲ್ಲ.'' ಹೀಗೆ ಹೇಳಿದ್ದರಿಂದ ಆ ಸ್ತ್ರೀಯು ರೋಷದಿಂದ ಮನೋಹರವಾದ ಪುಷ್ಪದಳಗಳಂತಿರುವ ರೆಪ್ಪೆಗಳಿಂದ ಕೂಡಿ ಕಿವಿಗಳವರೆಗೂ ವಿಸ್ತಾರಗೊಂಡಿದ್ದ ನೀಲೋತ್ಪಲದಿಂದಲೂ ಓರೆಗಣ್ಣಿನಿಂದಲೂ ಏಕಕಾಲದಲ್ಲಿ ಪ್ರಿಯನನ್ನು ಕಾಡಿಸಿದಳು.

ಹಿಂದಿನ ನಾಲ್ಕು ಪದ್ಯಗಳಲ್ಲಿ ಒಬ್ಬಳೇ ನಾಯಿಕೆಯು ಮೂರು ಬಗೆಯಾಗಿರುವುದನ್ನು ಕಾಣಬಹುದು. ಮೊದಲನೆಯ ಪದ್ಯದಲ್ಲಿ ವಿಟಪ ಎಂಬ ಶಬ್ದದಲ್ಲಿ ಶ್ಲೇಷವನ್ನಿಟ್ಟು ವಕ್ರೋಕ್ತಿಯಿಂದ ಪತಿಯ ಬಗ್ಗೆ ಕೋಪಿಸಿಕೊಳ್ಳುವುದಾಗಿ ತಿಳಿಸಿರುವುದರಿಂದ ಆಕೆ ಧೀರಮಧ್ಯನಾಯಿಕೆ ಎನಿಸಿರುವಳು. ಎರಡು, ಮೂರನೆಯ ಶ್ಲೋಕಗಳಲ್ಲಿ 'ಕಿತವ' ಎಂದು ಮುಂತಾಗಿ ಕಠಿಣವಾದ ಮಾತಿನಿಂದ ಪತಿಯ ಬಗ್ಗೆ ಸಿಟ್ಟಿಗೆ ಏಳುವುದಾಗಿ ತಿಳಿಸಿರುವುದರಿಂದ ಆಕೆ ಅಧೀರಮಧ್ಯೆ ಎನಿಸಿರುವಳು. ನಾಲ್ಕನೆಯ ಪದ್ಯದಲ್ಲಿ ಕನ್ನೈದಿಲೆಯಿಂದ ಪತಿಯನ್ನು ಕಾಡಿಸಿದಳೆಂದು ಹೇಳಿರುವುದರಿಂದ ಆಕೆಯು ಅಧೀರ ಪ್ರಗಲ್ಭೆ ಎನಿಸಿರುವಳು. ಮಾಘಕವಿಯು ಈ ನಾಲ್ಕು ಪದ್ಯಗಳನ್ನು ಶಿಶುಪಾಲವಧದ ಏಳನೇಯ ಸರ್ಗದಲ್ಲಿ ರಚಿಸಿರುವುದರಿಂದ ಈ ಬಗೆಯ ಸಾಂಕರ್ಯವನ್ನು ಅಂಗೀಕರಿಸಲಾಗಿದೆ. ಹೀಗೆಯೇ ನಾಯಿಕೆಯರ ಅನೇಕ ಬಗೆಗಳಿದ್ದರೂ ಗ್ರಂಥವು ವಿಸ್ತಾರವಾದೀತೆಂಬ ಭಯದಿಂದ ಅವರೆಲ್ಲರನ್ನೂ ಇಲ್ಲಿ ತಿಳಿಸಿಲ್ಲ.

ಅಥ ಆಸಾಮಲಂಕಾರಾಃ—

ಯೌವನೇ ಸತ್ತ್ವಜಾಸ್ತಾಸಾಮಷ್ಟಾವಿಂಶತಿಸಂಖ್ಯಕಾಃ
ಅಲಂಕಾರಾಸ್ತತ್ರ ಭಾವಹಾವಹೇಲಾಸ್ತ್ರಯೋಽಂಗಜಾಃ ||
ಶೋಭಾ ಕಾಂತಿಶ್ಚ ದೀಪ್ತಿಶ್ಚ ಮಾಧುರ್ಯಂ ಚ ಪ್ರಗಲ್ಭತಾ |
ಔದಾರ್ಯಂ ಧೈರ್ಯಮಿತ್ಯೇತೇ ಸಪ್ತೈವ ಸ್ಯುರಯತ್ನಜಾಃ ||

ಲೀಲಾ ವಿಲಾಸೋ ವಿಚ್ಛಿತ್ತಿರ್ವಿಬ್ಬೋಕಃ ಕಿಲಕಿಂಚಿತಮ್ ।
ಮೋಟ್ಟಾಯಿತಂ ಕುಟ್ಟಮಿತಂ ವಿಭ್ರಮೋ ಲಲಿತಂ ಮದಃ ॥
ವಿಕೃತಂ ತಪನಂ ಮೌಗ್ಧ್ಯಂ ವಿಕ್ಷೇಪಶ್ಚ ಕುತೂಹಲಮ್ ।
ಹಸಿತಂ ಚಕಿತಂ ಕೇಲಿರಿತ್ಯಷ್ಟಾದಶಸಂಖ್ಯಕಾಃ ॥
ಸ್ವಭಾವಜಾಶ್ಚ ಭಾವಾದ್ಯಾ ದಶ ಪುಂಸಾಂಭವಂತ್ಯಪಿ ॥

ಪೂರ್ವೇ ಭಾವಾದಯೋ ಧೈರ್ಯಾಂತಾಃ ದಶ ನಾಯಕಾನಾಮಪಿ ಸಂಭವಂತಿ; ಕಿಂತು ಸರ್ವೇಽಪ್ಯಮೀ ನಾಯಿಕಾಶ್ರಿತಾ ಏವ ವಿಚ್ಛಿತ್ತಿವಿಶೇಷಂ ಪುಷ್ಯಂತಿ.

ತತ್ರ ಭಾವಃ—ನಿರ್ವಿಕಾರಾತ್ಮಕೇ ಚಿತ್ತೇ ಭಾವಃ ಪ್ರಥಮವಿಕ್ರಿಯಾ ।

ಜನ್ಮತಃ ಪ್ರಭೃತಿ ನಿರ್ವಿಕಾರೇ ಮನಸಿ ಉದ್ಬುದ್ಧಮಾತ್ರೋ ವಿಕಾರೋ ಭಾವಃ

ಯಥಾ— ಸ ಏವ ಸುರಭಿಃ ಕಾಲಃ ಸ ಏವ ಮಲಯಾನಿಲಃ ।
ಸೈವೇಯಮಬಲಾ ಕಿಂತು ಮನೋಽನ್ಯದಿವ ದೃಶ್ಯತೇ ॥

ಅಥ ಹಾವಃ— ಭ್ರೂನೇತ್ರಾದಿವಿಕಾರೈಸ್ತು ಸಂಭೋಗೇಚ್ಛಾಪ್ರಕಾಶಕಃ ।
ಭಾವ ಏವಾಲ್ಪಸಂಲಕ್ಷ್ಯವಿಕಾರೋ ಹಾವ ಉಚ್ಯತೇ ॥

ಯಥಾ— ವಿವೃಣ್ವತೀ ಶೈಲಸುತಾಪಿ ಭಾವಮಂಗೈಃ ಸ್ಫುರದ್ಬಾಲಕದಂಬಕಲ್ಪೈಃ ।
ಸಾಚೀಕೃತಾ ಚಾರುತರೇಣ ತಸ್ಥೌ ಮುಖೇನ ಪರ್ಯಸ್ತವಿಲೋಚನೇನ ॥

ಅಥ ಹೇಲಾ— ಹೇಲಾತ್ಯಂತಸಮಾಲಕ್ಷ್ಯವಿಕಾರಃ ಸ್ಯಾತ್ಸ ಏವ ಚ ।
ಸ ಏವ ಭಾವ ಏವ. ಯಥಾ—

ತಥಾ ತಸ್ಯಾ ಝುಟಿತಿ ಪ್ರವೃತ್ತಾ ವಧ್ವಾಃ ಸರ್ವಾಂಗವಿಭ್ರಮಾಃ ಸಕಲಾಃ ।
ಸಂಶಯಿತಮುಗ್ಧಭಾವಾ ಭವತಿ ಚಿರಂ ಯಥಾ ಸಖೀನಾಮಪಿ ॥

ಅಥ ಶೋಭಾ— ರೂಪಯೌವನಲಾಲಿತ್ಯಭೋಗಾದ್ಯೈರಂಗಭೂಷಣಮ್ ।
ಕಾಂತಿಃ—ಅಥ ಶೋಭಾ ಪ್ರೋಕ್ತಾ ಸೈವ ಕಾಂತಿರ್ಮನ್ಮಥಾಪ್ಯಾಯಿತದ್ಯುತಿಃ ॥

ಅತ್ರ ಯೌವನಶೋಭಾ ಯಥಾ—

ಅಸಂಭೃತಂ ಮಂಡನಮಂಗಯಷ್ಟೇರನಾಸವಾಖ್ಯಂ ಕರಣ ಮದಸ್ಯ ।
ಕಾಮಸ್ಯ ಪುಷ್ಪವ್ಯತಿರಿಕ್ತಮಸ್ತ್ರಂ ಬಾಲ್ಯಾತ್ಪರಂ ಸಾಥ ವಯಃ ಪ್ರಪೇದೆ

ಏವಮನ್ಯತ್ರಾಪಿ. ಮನ್ಮಥೋನ್ಮೇಷೇಣ ಅತಿವಿಸ್ತೀರ್ಣಾ ಶೋಭೈವ. ಕಾಂತಿರುಚ್ಯತೇ. ಯಥಾ— 'ನೇತ್ರೇ ಖಂಜನಗಂಜನೇ ' ಇತ್ಯಾದಿ.

ಅಥ ದೀಪ್ತಿಃ— ಕಾಂತಿರೇವಾತಿವಿಸ್ತೀರ್ಣಾ ದೀಪ್ತಿರಿತ್ಯಭಿಧೀಯತೇ ।

ಯಥಾ ಮಮ ಚಂದ್ರಕಲಾನಾಮನಾಟಿಕಾಯಂ ಚಂದ್ರಕಲಾವರ್ಣನಮ್

ತಾರುಣ್ಯಸ್ಯ ವಿಲಾಸಃ ಸಮಧಿಕಲಾವಣ್ಯಸಂಪದೋ ಹಾಸಃ ।
ಧರಣಿತಲಸ್ಯಾಭರಣಂ ಯುದಜನಮನಸೋ ವಶೀಕರಣಮ್ ।

ಅಥ ಮಾಧುರ್ಯಮ್—ಸರ್ವಾವಸ್ಥಾವಿಶೇಷೇಷು ಮಾಧುರ್ಯಂ ರಮಣೀಯತಾ ।

ಯಥಾ— ಸರಸಿಜಮನುವಿದ್ಧಂ ಶೈವಲೇನಾಪಿ ರಮ್ಯಂ

ಮಲಿನಮಪಿ ಹಿಮಾಂಶೋರ್ಲಕ್ಷ್ಮ ಲಕ್ಷ್ಮೀಂ ತನೋತಿ ।
ಇಯಮಧಿಕಮನೋಜ್ಞಾ ವಲ್ಕಲೇನಾಪಿ ತನ್ವೀ
ಕಿಮಿವ ಹಿ ಮಧುರಾಣಾಂ ಮಂಡನಂ ನಾಕೃತೀನಾಮ್ ॥

ಹಿಂದೆ ಹೇಳಿವ ನಾಯಿಕೆಯರ ಅಲಂಕಾರಗಳನ್ನು ಇಲ್ಲಿ ತಿಳಿಸಲಾಗುವುದು. ಈ ನಾಯಕೆಯರಿಗೆ ಯೌವನಕಾಲದಲ್ಲಿ ಶೃಂಗಾರವನ್ನು ಸೂಚಿಸುವ ಸಾತ್ತ್ವಿಕ ಗುಣದಿಂದ ಇಪ್ಪತ್ತೆಂಟು ಬಗೆಯ ಅಲಂಕಾರಗಳು ಹುಟ್ಟುತ್ತವೆ. ಭಾವ ಹಾವ, ಹೇಲ ಇವು ಮೂರು ಅಲಂಕಾರಗಳು ದೇಹದಿಂದ ಹುಟ್ಟುತ್ತವೆ. ಶೋಭಾ, ಕಾಂತಿ, ದೀಪ್ತಿ, ಮಾಧುರ್ಯ, ಪ್ರಗಲ್ಭತೆ, ಔದಾರ್ಯ, ಧೈರ್ಯ ಇವು ಶರೀರದಲ್ಲೂ ಮನಸ್ಸಿನಲ್ಲೂ ಅನಾಯಾಸವಾಗಿ ಆವಿರ್ಭವಿಸುವ ಅಲಂಕಾರಗಳು, ಲೀಲೆ, ವಿಲಾಸ, ವಿಚ್ಛಿತ್ತಿ, ವಿಬ್ಬೋಕ, ಕಿಲಕಿಂಚಿತ, ತಪನ, ಮೌಗ್ಧ್ಯ, ವಿಕ್ಷೇಪ, ಕುತೂಹಲ, ಹಸಿತ, ಚಕಿತ' ಕೇಲಿ ಇವು ಹದಿನೆಂಟು ಸ್ವಾಭಾವಿಕವಾದ ಅಲಂಕಾರಗಳು, ಭಾವದಿಂದ ಮೊದಲಾಗಿ ಧೈರ್ಯದವರೆಗೂ ಇರುವ ಹತ್ತು ಅಲಂಕಾರಗಳು ನಾಯಕರಿಗೂ ಅನ್ವಯಿಸುತ್ತವೆ. ಆದರೆ ಈ ಅಲಂಕಾರಗಳೆಲ್ಲವೂ ನಾಯಿಕೆಯರಲ್ಲಿದ್ದರೆ ಮಾತ್ರವೇ ಹೆಚ್ಚಿನ ಸೌಂದರ್ಯವನ್ನು ದೊರಕಿಸುತ್ತವೆ.

ಅವುಗಳಲ್ಲಿ ಭಾವವನ್ನು ವಿವರಿಸುತ್ತಾನೆ. ಹುಟ್ಟಿದಾಗಿನಿಂದಲೂ ವಿಕಾರವೇ ಇಲ್ಲದಿರುವ ಮನಸ್ಸಿನಲ್ಲಿ ಮೊಳಕೆಯ ರೂಪದಲ್ಲಿ ಉದ್ಭವಿಸುವ ಮೊದಲನೆಯ ವಿಕಾರವೇ ಭಾವ ಎನಿಸುವುದು. "ಅದೇ ವಸಂತಕಾಲವಿದೆ.ಅದೇ ಮಂದಮಾರುತವಿದೆ.ಅದೇ ಕಾಂತೆ ಇರುವಳು ಆದರೆ ಮನಸ್ಸು ಮಾತ್ರ ಬೇರೆ ರೀತಿಯಾಗಿದೆ" ಹಿಂದೆ ಇದ್ದ ಸನ್ನಿವೇಶವೇ ಈಗಲೂ ಇದ್ದರೂ ಮನಸ್ಸಿನಲ್ಲಿ ಮಾತ್ರ ಬದಲಾವಣೆಯಾಗಿರುವುದಾಗಿ ಹೇಳಿದ್ದರಿಂದ ಅಲ್ಲಿ ತೋರುವ ವಿಕಾರವೇ ಭಾವವೆನಿಸುತ್ತದೆ.

ಹುಬ್ಬುಗಳನ್ನು ಗಂಟುಹಾಕುವುದು, ಕಣ್ಣುಗಳಿಂದ ಓರೆಯಾಗಿ ನೋಡುವುದು ಇವೇ ಮೊದಲಾದ ವಿಕಾರಗಳಿಂದ ಸಂಭೋಗದ ಇಚ್ಛೆಯನ್ನು ಪ್ರಕಾಶ ಪಡಿಸುವ ಭಾವವೇ ಮನಸ್ಸಿನ ವಿಕಾರವನ್ನುಕೊಂಚ ಹೊರಪಡಿಸುವಾಗ ಹಾವವೆನಿಸುತ್ತದೆ. "ಪಾರ್ವತಿಯೂ ಸಹ ವಿಕಸಿತವಾದ ಕದಂಬಪುಷ್ಪಗಳಿಗೆ ಸಮಾನವೆನಿಸಿದ ಅವಯವಗಳಿಂದ ಭಾವವನ್ನು ಹೊರಪಡಿಸುತ್ತ ದೃಷ್ಟಿಯನ್ನು ಹಿಂದಕ್ಕೆ ತಿರುಗಿಸಿ ಸುಂದರವಾದ ಮುಖವನ್ನು ವಕ್ರವಾಗಿ ಮಾಡಿಕೊಂಡು ನಿಂತಳು" ಇಲ್ಲಿ ಮೈಯಲ್ಲಿ ರೋಮಾಂಚವು ಹೊರಪಡುವುದರಿಂದ ಇದು ಹಾವವೆನಿಸಿದೆ.

ಮನಸ್ಸಿನೊಳಗಿನ ವಿಕಾರವು ಹೊರಗಡೆ ಹೆಚ್ಚು ಕಂಡು ಬರುವುದಾದರೆ ಅಂತಹ ಭಾವವು ಹೇಲಾ ಎನಿಸುವುದು. "ಹೊಸದಾಗಿ ಮದುವೆಯಾದ ಆ ತರುಣಿಗೆ ಓರೆ ನೋಟವೇ ಮೊದಲಾದ ವಿಲಾಸಗಳು ಬೇಗನೆ ಪ್ರಕಟವಾದವು. ಇದರಿಂದ ಸಖಿಯರಿಗೂ ಸಹ ಈಕೆಯ ಬಾಲ್ಯಭಾವದ ಬಗ್ಗೆ ಬಹಳಕಾಲದವರೆಗೂ ಸಂಶಯವೇ ಉಂಟಾಯಿತು" ಇಲ್ಲಿ ವಧುವಿಗೆ ಎಲ್ಲಾ ಅವಯವಗಳಲ್ಲೂ ವಿಲಾಸಗಳು ಕಂಡು

ಬಂದವದ್ದರಿಂದ ಮನೋವಿಕಾರವು ಪೂರ್ತಿಯಾಗಿ ಹೊರಹೊಮ್ಮಿತೆಂದು ತಿಳಿಸಿದ್ದರಿಂದ ಇದು ಹೇಲೆ ಎನಿಸಿದೆ.

ಸೌಂದರ್ಯ, ಯೌವನ, ಕೋಮಲಪ್ರಕೃತಿ, ಪುಷ್ಪ ಶ್ರೀಗಂಧ ಮೊದಲಾದವುಗಳ ಉಪಯೋಗದಿಂದ ದೊರೆತ ಸೌಖ್ಯ ಇವುಗಳಿಂದ ಶರೀರಕ್ಕೆ ಉಂಟಾಗುವ ಅಲಂಕಾರವೇ ಶೋಭೆ ಎನಿಸುತ್ತವೆ. ಇಲ್ಲಿ ಯೌವನದಿಂದ ಉಂಟಾಗುವ ಶೋಭೆಯನ್ನು ಉದಾಹರಿಸುತ್ತಾನೆ. "ಬಾಲ್ಯವು ಕಳೆಯಲು ಆಕೆಗೆ ಒಂದು ಆಶೆಯುಂಟಾಯಿತು. ಅದರಿಂದ ದೇಹಕ್ಕೆ ಯಾವ ಪ್ರಯತ್ನವೂ ಇಲ್ಲದೆ ಒಂದು ಕಗೆಯ ಅಲಂಕಾರವುಂಟಾಯಿತು. ಅದು ಮದ್ಯವಿಲ್ಲದೆಯೇ ಮದವನ್ನು ಹುಟ್ಟಿಸಿತು ಮತ್ತು ಪುಷ್ಪವಲ್ಲದೆ ಇದ್ದರೂ ಅದು ಮನ್ಮಥನಿಗೆ ಒಂದು ಬಗೆಯ ಆಯುಧವೆನಿಸಿತು" ಇಲ್ಲಿ ಪಾರ್ವತಿಗೆ ಬಾಲ್ಯವು ಕಳೆದು ಯೌವನವು ಪ್ರಾಪ್ತವಾಗಲು ಅದು ದೇಹಕ್ಕೆಲ್ಲಾ ಅಲಂಕಾರವೂ ಕಾಮೋತ್ತೇಜಕವೂ ಮದವನ್ನು ಹುಟ್ಟಿಸುವ ಸಾಮಗ್ರಿಯೂ ಆಯಿತೆಂದು ವರ್ಣಿಸಿರುವುದರಿಂದ ಇದು ಯೌವನದಿಂದ ಆದ ಶೋಭೆಗೆ ಉದಾಹರಣವೆನಿಸಿದೆ.

ಕಾಮವಿಕಾರದಿಂದ ಬೆಳೆದು ವ್ಯಾಪಿಸಿದ ಪ್ರಕಾಶವೇ ಕಾಂತಿ ಎನಿಸುತ್ತದೆ. "ನೇತ್ರೇ ಖಂಜನಗಂಜನೇ" ಎಂಬ ಪದ್ಯದಲ್ಲಿ ಕಾಂತಿಯ ಸ್ವರೂಪವನ್ನು ತಿಳಿಸಿದೆ.

ಶರೀರದಲ್ಲೆಲ್ಲಾ ಹೆಚ್ಚು ವ್ಯಾಪಿಸಿದ ಕಾಂತಿಯೇ ದೀಪ್ತಿ ಎನಿಸುತ್ತದೆ. ಚಂದ್ರಕಲೆ ಎಂಬ ನಾಟಕದಲ್ಲಿ ಚಂದ್ರಕಲಾನಾಯಿಕೆಯನ್ನು ವರ್ಣಿಸುವ ಈ ಪದ್ಯದಲ್ಲಿ ದೀಪ್ತಿಯನ್ನು ಹೀಗೆ ವರ್ಣಿಸಲಾಗಿದೆ. "ಯೌವನವನ್ನು ಪ್ರಕಾಶಿಸುತ್ತಲೂ ಸೌಂದರ್ಯ ಸಮೃದ್ಧಿಯನ್ನು ಬೆಳಗುತ್ತಲೂ, ಯುವಕರ ಮನಸ್ಸನ್ನು ಸೆಳೆಯುತ್ತಲೂ ಇರುವ ಈ ಅವಸ್ಥೆಯು ಭೂಮಂಡಲವನ್ನೇ ಅಲಂಕರಿಸುತ್ತಿತ್ತು" ಇಲ್ಲಿ ಸೌಂದರ್ಯವು ಹೆಚ್ಚು ವ್ಯಾಪಿಸಿತ್ತೆಂದು ವರ್ಣಿಸಿರುವುದರಿಂದ ಇದು ದೀಪ್ತಿ ಎನಿಸಿದೆ.

ಎಲ್ಲಾ ಬಗೆಯ ಅಲಂಕಾರಗಳೂ ಇರಲಿ ಅಥವಾ ಇಲ್ಲದಿರಲಿ ಶರೀರದಲ್ಲಿ ಕಂಡು ಬರುವ ಸೌಂದರ್ಯವೇ ಮಾಧುರ್ಯವೆನಿಸುತ್ತದೆ. "ಕಮಲವು ಪಾಚಿಯೊಡನೆ ಅಂಟಿಕೊಂಡಿದ್ದರೂ ರಮಣೀಯವಾಗಿರುತ್ತದೆ. ಚಂದ್ರದ ಕಳಂಕವು ಮಲಿನವಾಗಿದ್ದರೂ ಶೋಭೆಯನ್ನು ಉಂಟುಮಾಡುತ್ತದೆ. ಈ ತರುಣಿಯು ನಾರುಮುಡಿಯಿಂದಲೂ ಹೆಚ್ಚು ಮನೋಹರವಾಗಿರುವಳು. ಸುಂದರವಾದ ಆಕಾರಗಳಿಗೆ ಯಾವುದು ತಾನೆ ಅಲಂಕಾರವಾಗಲಾರದು?" ಇಲ್ಲಿ ಶಕುಂತಲೆಯು ನಾರುಮುಡಿಯನ್ನು ಉಟ್ಟಿದ್ದರೂ ಸುಂದರಿಯಾಗಿದ್ದುದರಿಂದ ಆಕೆಯಲ್ಲಿ ಮಾಧುರ್ಯವೇ ಅಲಂಕಾರವನಿಸಿವೆ.

ಅಥ ಪ್ರಗಲ್ಭತಾ– ನಿಸ್ಸಾಧ್ವಸತ್ವಂ ಪ್ರಗಲ್ಭತಾ—

ಸಮಾಶ್ಲಿಷ್ಟಾಃ ಸಮಾಶ್ಲೇಷೈಶ್ಚುಂಬಿತಾಶ್ಚುಂಬನೈರಪಿ।

ದಷ್ಟಾಶ್ಚ ದಂಶನೈಃ ಕಾಂತಂ ದಾಸೀಕುರ್ವಂತಿ ಯೋಷಿತಃ॥

ಅಥ ಔದಾರ್ಯಮ್— ಔದಾರ್ಯಂ ವಿನಯಃ ಸದಾ॥

ನ ಬ್ರೂತೇ ಪರುಷಾಂ ಗಿರಂ ವಿತನುತೇ ನ ಭ್ರೂಯುಗಂ ಭಂಗುರಂ

ನೋತ್ತಂಸಂ ಕ್ಷಿಪತಿ ಕ್ಷಿತೌ ಶ್ರವಣತಃ ಸಾ ಮೇ ಸ್ಫುಟೇಽಪ್ಯಾಗಸಿ ||
ಕಾಂತಾ ಗರ್ಭಗೃಹೇ ಗವಾಕ್ಷವಿವರವ್ಯಾಪಾರಿತಾಕ್ಷ್ಯಾ ಬಹಿಃ
ಸಖ್ಯಾ ವಕ್ತ್ರಮಪಿ ಪ್ರಯಚ್ಛತಿ ಪರಂ ಪರ್ಯಶ್ರುಣೀ ಲೋಚನೇ ||

ಅಥ ಧೈರ್ಯಂ— ಯಾನಸ್ಥಾನಾಸನಾದೀನಾಂ ಮುಖನೇತ್ರಾದಿಕರ್ಮಣಾಮ್ |
ವಿಶೇಷಸ್ತು ವಿಲಾಸಃ ಸ್ಯಾದಿಷ್ಟಸಂದರ್ಶನಾದಿನಾ ||

ಯಥಾ— ಅತ್ರಾಂತರೇ ಕಿಮಪಿ ವಾಗ್ವಿಭವಾತಿವೃತ್ತ
ವೈಚಿತ್ರ್ಯಮುಲ್ಲಸಿತವಿಭ್ರಮಮಾಯತಾಕ್ಷ್ಯಾಃ |
ತದ್ಭೂರಿಸಾತ್ತ್ವಿಕವಿಕಾರಮಪಾಸ್ತಧೈರ್ಯ-
ಮಾಚಾರ್ಯಕಂ ಕಿಮಪಿ ಮಾನ್ಮಥಮಾವಿರಾಸೀತ್ ||

ಅಥ ವಿಚ್ಛಿತ್ತಿಃ— ಸ್ತೋಕಾಪ್ಯಾಕಲ್ಪರಚನಾ ವಿಚ್ಛಿತ್ತಿಃ ಕಾಂತಿಪೋಷಕೃತ್ |

ಯಥಾ— ಸ್ವಚ್ಛಾಂಭಃಸ್ನಪನವಿಧೌತಮಂಗಮೋಷ್ಠಃ
ತಾಂಬೂಲದ್ಯುತಿವಿಶದೋ ವಿಲಾಸಿನೀನಾಮ್ |
ವಾಸಸ್ತು ಪ್ರತನುವಿವಿಕ್ತಮಸ್ತ್ವಿತೀಯಾನ್
ಆಕಲ್ಪೋ ಯದಿ ಕುಸುಮೇಷುಣಾ ನ ಶೂನ್ಯಃ ||

ಅಥ ವಿಬ್ಬೋಕಃ— ವಿಬ್ಬೋಕಸ್ತ್ವತಿಗರ್ವೇಣ ವಸ್ತುನೀಷ್ಟೇಽಪ್ಯನಾದರಃ !
ಯಾಸಾಂ ಸತ್ಯಪಿ ಸದ್ಗುಣಾನುಸರಣೇ ದೋಷಾನುವೃತ್ತಿಃ ಪರಾ
ಯಾಃ ಪ್ರಾಣಾನ್ವರಮರ್ಪಯಂತಿ ನ ಪುನಃ ಸಂಪೂರ್ಣದೃಷ್ಟಿಂ ಪ್ರಿಯೇ |
ಅತ್ಯಂತಾಭಿಮತೇಽಪಿ ವಸ್ತುನಿ ವಿಧಿರ್ಯಾಸಾಂ ನಿಷೇಧಾತ್ಮಕಃ
ತಾಸ್ತ್ರೈಲೋಕ್ಯವಿಲಕ್ಷಣಪ್ರಕೃತಯೋ ವಾಮಾಃ ಪ್ರಸೀದಂತು ತೇ ||

ಅಥ ಕಿಲಕಿಂಚಿತಂ— ಸ್ಮಿತಶುಷ್ಕರುದಿತಹಸಿತತ್ರಾಸಕ್ರೋಧಶ್ರಮಾದೀನಾಮ್ |
ಸಾಂಕರ್ಯಂ ಕಿಲಕಿಂಚಿತಮಭೀಷ್ಟತಮಸಂಗಮಾದಿಜಾದ್ಧರ್ಷಾತ್ ||

ಯಥಾ— ಪಾಣಿರೋಧಮವಿರೋಧಿತವಾಂಛಂ ಭರ್ತ್ಸನಾಶ್ಚ ಮಧುರಸ್ಮಿತಗರ್ಭಾಃ |
ಕಾಮಿನಃ ಸ್ಮ ಕುರುತೇ ಕರಭೋರೂರ್ಹಾರಿ ಶುಷ್ಕರುದಿತಂ ಚ ಸುಖೇಽಪಿ ||

ಅಥ ಮೋಟ್ಟಾಯಿತಂ— ತದ್ಭಾವಭಾವಿತೇ ಚಿತ್ತೇ ವಲ್ಲಭಸ್ಯ ಕಥಾದಿಷು |
ಮೋಟ್ಟಾಯಿತಮಿತಿ ಪ್ರಾಹುಃ ಕರ್ಣಕಂಡೂಯನಾದಿಕಮ್ ||
ಸುಭಗ ! ತ್ವತ್ಕಥಾರಂಭೇ ಕರ್ಣಕಂಡೂತಿಲಾಲಸಾ |
ಉಜ್ಜೃಂಭವದನಾಂಭೋಜಾ ಭಿನತ್ತ್ಯಂಗಾನಿ ಸಾಂಗನಾ ||

ಅಥ ಕುಟ್ಟಮಿತಂ— ಕೇಶಸ್ತನಾಧರಾದೀನಾಂ ಗ್ರಹೇ ಹರ್ಷೇಽಪಿ ಸಂಭ್ರಮಾತ್ |
ಪ್ರಾಹುಃ ಕುಟ್ಟಮಿತಂ ನಾಮ ಶಿರಃಕರವಿಧೂನನಮ್ ||
ಪಲ್ಲವೋಪಮಿತಿಸಾಮ್ಯಸಪಕ್ಷಂ ದಷ್ಟವತ್ಯಧರಬಿಂಬಮಭೀಷ್ಟೇ |
ಪರ್ಯಕೂಜಿ ಸರುಜೇವ ತರುಣ್ಯಾಸ್ತಾರಲೋಲವಲಯೇನ ಕರೇಣ ||

ಪತಿಯ ಬಗ್ಗೆ ಧಾರ್ಷ್ಟ್ಯವನ್ನಾಚರಿಸುವಾಗ ನಿರ್ಭಯನಾಗಿರುವುದೇ ಪ್ರಾಗಲ್ಭ್ಯ ಶಿ ವೆನಿಸುವುದು. "ಸ್ತ್ರೀಯರು ತಮ್ಮನ್ನು ಪ್ರಿಯನು ಆಲಿಂಗಿಸಿದಾಗ ಪ್ರತಿಯಾಗಿ ಆಲಿಂಗಿಸುತ್ತಲೂ, ಮುತ್ತಿಟ್ಟಾಗ ಪ್ರತಿಯಾಗಿ ಮುತ್ತಿಡುತ್ತಲೂ, ಹಲ್ಲಿನಿಂದ ಕಚ್ಚಿದಾಗ ತಾವೂ ಹಲ್ಲುಗಳಿಂದ ಕಚ್ಚುತ್ತಲೂ ಪ್ರಿಯನನ್ನು ದಾಸನಂತೆ ವಶಪಡಿಸಿಕೊಳ್ಳುತ್ತಾರೆ" ಇಲ್ಲಿ ಪ್ರತ್ಯಾಲಿಂಗನ ಮೊದಲಾದ ಕೆಲಸಗಳನ್ನು ಮಾಡುವಾಗ ಸ್ತ್ರೀಯರು ನಿರ್ಭಯ ರಾಗಿರುವುದರಿಂದ ಅವರಲ್ಲಿ ಪ್ರಗಲ್ಭತೆ ಎಂಬುದು ಅಲಂಕಾರವೆನಿಸಿದೆ.

ಎಲ್ಲಾ ಕಾಲಗಳಲ್ಲೂ ನಮ್ರತೆಯಿಂದ ನಡೆದುಕೊಳ್ಳುವುದೇ ವಿನಯವೆನಿಸುತ್ತದೆ. ಪ್ರೇಯಸಿಯನ್ನು ಪ್ರಶಂಸಿಸುವ ನಾಯಕನ ಮಾತಿದು. "ನನ್ನಲ್ಲಿ ಅಪರಾಧವು ಸ್ಪಷ್ಟ ವಾಗಿ ಕಂಡುಬಂದರೂ ಪ್ರಿಯೆಯು ಕಠಿಣವಾದ ಮಾತನ್ನೇ ಆಡುವುದಿಲ್ಲ; ಕೋಪ ವನ್ನು ಸೂಚಿಸುವಂತೆ ಹುಬ್ಬುಗಳನ್ನು ಗಂಟುಹಾಕುವುದಿಲ್ಲ; ಕಿವಿಯಿಂದ ಕುಂಡಲ ವನ್ನು ತೆಗೆದು ನೆಲದಮೇಲೆ ಇಡುವುದಿಲ್ಲ; ಆದರೆ ಮನೆಯ ಮಧ್ಯದಲ್ಲಿದ್ದು ಕಿಟಕಿ ಯಿಂದ ಹೊರಗೆ ದೃಷ್ಟಿಯನ್ನಿಟ್ಟಿರುವ ಸಖಿಯ ಮುಖವನ್ನೇ ನೋಡುತ್ತ ಕಣ್ಣುಗಳಿಂದ ಹೆಚ್ಚಾಗಿ ನೀರನ್ನು ಸುರಿಸುತ್ತಾಳೆ.'' ಇಲ್ಲಿ ಪ್ರಿಯನ ಬಗ್ಗೆ ಕಠಿಣವಾಗಿ ಮಾತನಾಡಲು ಅವಕಾಶವಿದ್ದರೂ ಪ್ರೇಯಸಿಯಲ್ಲಿ ಮೃದುವಾದ ವರ್ತನೆಯನ್ನು ತಿಳಿಸಿರುವುದರಿಂದ ಇದು ಅವಳ ಔದಾರ್ಯವನ್ನು ಸೂಚಿಸುತ್ತದೆ.

ಆತ್ಮಪ್ರಶಂಸೆಯನ್ನು ತೊರೆದು ಚಂಚಲಗೊಳ್ಳದ ಮನೋವೃತ್ತಿಯೇ ಧೈರ್ಯ ವೆನಿಸುವುದು. ಮಾಲತೀಮಾಧವದಲ್ಲಿ ಲವಂಗಿಕೆಗೆ ಹೇಳುವ ಮಾತಿದು. "ಎಲ್ಲಾ ರಾತ್ರಿಗಳಲ್ಲೂ ಆಕಾಶದಲ್ಲಿ ಪೂರ್ಣಚಂದ್ರನು ಶೋಭಿಸಲಿ. ಹಾಗೆಯೇ ಮನ್ಮಥನೂ ಸುಡಲಿ. ಇವರಿಬ್ಬರೂ ಯಮನಿಗಿಂತ ಬೇರೆ ಏನನ್ನು ಮಾಡಿಯಾರು? ನನಗಾದರೋ ಪ್ರಶಂಸಾರ್ಹನಾದ ತಂದೆಯು ಪ್ರಿಯನಾಗಿರುವನು. ಹಾಗೆಯೇ ನಿರ್ದೋಷವಾದ ವಂಶವೂ ಪ್ರಿಯವೆನಿಸಿದೆ. ಇವೆಲ್ಲಾ ಇದ್ದರೂ ಈ ಮಾಧವನು ಮಾತ್ರ ಪ್ರಿಯನಾಗಿಲ್ಲ; ಅವನು ನೋಡಿದೊಡನೆಯೇ ನನಗೆ ಈ ಕಷ್ಟವನ್ನು ಕೊಡುತ್ತಾನೆ. ಹಾಗೆಯೇ ನನ್ನ ಜೀವನವೂ ಸಹ ಪ್ರಿಯವಾಗಿಲ್ಲ: ಯಾಕೆಂದರೆ ಇದು ಇನ್ನೂ ಹೋಗದೆಯೇ ನನ್ನನ್ನು ಕಾಡಿಸುತ್ತಿದೆ. ಇದು ಹೋಗಿದ್ದರೆ ನನಗೆ ಈ ಕಷ್ಟವೇ ಇರುತ್ತಿರಲಿಲ್ಲ'' ಇಲ್ಲಿ ಆಕೆಗೆ ಅಷ್ಟೊಂದು ವಿರಹಸಂತಾಪವಿದ್ದರೂ 'ನನ್ನ ಜೀವನವು ಪ್ರಿಯವಾಗಿಲ್ಲ'ವೆಂದು ಆತ್ಮ ಪ್ರಶಂಸೆಯನ್ನು ತೊರೆದು ನಿಶ್ಚಲವಾದ ಮನೋಭಾವವಿರುವುದರಿಂದ ಇದು ಧೈರ್ಯ ವೆನಿಸಿದೆ.

ಪ್ರೀತಿಯನ್ನು ವ್ಯಕ್ತಪಡಿಸುವ ಅಂಗಚೇಷ್ಟೆಗಳಿಂದಲೂ, ಅಲಂಕಾರಗಳಿಂದಲೂ, ಪ್ರಣಯಸೂಚಕವಾದ ಮಾತುಗಳಿಂದಲೂ ಕಾಂತನನ್ನು ಅನುಕರಿಸುವುದು ಲೀಲೆ ಎನಿಸುವುದು. "ತಾವರೆದಂಟೆಂಬ ಸರ್ಪವೇ ಕೈಕಡಗವಾಗಿದ್ದು, ಕೂದಲುಗಳ ಗಂಟೇ ಜಡೆಯಾಗಿದ್ದು ಶಿವನನ್ನು ಅನುಕರಿಸುತ್ತಿರುವ ಪಾರ್ವತಿಯು ಜಗತ್ತನ್ನು ಲೀಲೆಯಿಂದ ರಕ್ಷಿಸಲಿ" ಇಲ್ಲಿ ಶಿವನನ್ನು ಅನುಕರಿಸಲು ಪಾರ್ವತಿಗೂ ಅವನಂತೆಯೇ ಕಂಕಣ ಮತ್ತು

ಜಡೆಗಳು ಇರುವುದಾಗಿ ತಿಳಿಸಿದೆ. ಈ ಬಗೆಯ ಅನುಕರಣವು ಪಾರ್ವತಿಯನ್ನು ಅಲಂಕರಿಸುತ್ತಲೇ ಅವಳಲ್ಲಿ ಲೀಲೆಎನಿಸಿದೆ.

ಪ್ರಿಯನ ಸಂದರ್ಶನದಿಂದಲೂ, ಅವನು ಬಂದದ್ದರಿಂದಲೂ, ಅವನ ವಾರ್ತೆಯನ್ನು ಕೇಳಿದ್ದರಿಂದಲೂ ಅವನೊಡನೆ ಹೋಗುವುದು, ಸೇರುವುದು, ಕುಳಿತುಕೊಳ್ಳುವುದು, ಮಲಗುವುದು ಹೀಗೆ ಕಣ್ಣು ಮೊದಲಾದ ಅವಯವಗಳಿಂದಾಗುವ ಕರ್ಮಗಳಲ್ಲಿ ತೋರಿಬರುವ ವೈಚಿತ್ರ್ಯವೇ ವಿಲಾಸವೆನಿಸುವುದು. "ಈ ಮಧ್ಯದಲ್ಲಿ ವಿಶಾಲಾಕ್ಷಿ ಎನಿಸಿದ ಮಾಲತಿಗೆ ಯಾವುದೋ ಒಂದು ಬಗೆಯ ಕಾಮಸಂಬಂಧವಾದ ವಿಚಿತ್ರ ವಿಕಾರವುಂಟಾಯಿತು. ಇದನ್ನು ಬಾಯಿಂದ ವಿವರಿಸಲಾಗುವುದಿಲ್ಲ. ಆದರೆ ಅದು ಆಕೆಯ ವಿಲಾಸಪ್ರಕೃತಿಯನ್ನೂ, ಸ್ತಂಭ ಮೊದಲಾದ ಸಾತ್ತ್ವಿಕಭಾವಗಳನ್ನೂ ವಿಶೇಷವಾಗಿ ವ್ಯಕ್ತಪಡಿಸುತ್ತಲಿದೆ. ಆದರೆ ಅದು ಅವಳ ಧೈರ್ಯವನ್ನೇ ತೊಲಗಿಸಿದೆ'' ಇಲ್ಲಿ ಮಾಧವನನ್ನು ನೋಡಿದ್ದರಿಂದ ಮಾಲತಿಯ ಕಣ್ಣು ಮೊದಲಾದ ಅವಯವಗಳಲ್ಲಿ ಅನೇಕ ಬಗೆಯ ವೈಚಿತ್ರ್ಯಗಳನ್ನು ತಿಳಿಸಿರುವುದರಿಂದ ಇದು ಅವಳಲ್ಲಿ ವಿಲಾಸವೆಂಬ ಅಲಂಕಾರವೆನಿಸಿದೆ.

ಸ್ವಲ್ಪವೇ ಅಲಂಕಾರವಿದ್ದರೂ ಅಷ್ಟರಿಂದಲೇ ಶೋಭೆಯನ್ನು ಹೆಚ್ಚಿಸುವುದೇ ವಿಚ್ಛಿತ್ತಿ ಎನಿಸುತ್ತದೆ. ''ರಮಣಿಯರ ಅವಯವವು ನಿರ್ಮಲವಾದ ನೀರಿನಲ್ಲಿ ಸ್ನಾನ ಮಾಡಿದ್ದರಿಂದ ಶುದ್ಧವೂ, ಶುಚಿಯೂ ತಾಂಬೂಲದ ಬಣ್ಣದಿಂದ ಸುಂದರವೂ, ಹಾಗೆಯೇ ಬಟ್ಟೆಯು ಸೂಕ್ಷ್ಮವೂ ಸ್ವಚ್ಛವೂ ಆಗಿರಲಿ. ಇದೆಲ್ಲವೂ ಸಾಕಷ್ಟು ಅಲಂಕಾರವೇ ಆಗಿದೆ. ಇದಕ್ಕಿಂತ ಹೆಚ್ಚು ಬೇಕಾಗಿಲ್ಲ. ಅದರೆ ಪ್ರೀತಿವಿಶೇಷವೆಂಬುದೊಂದು ಇದ್ದಲ್ಲಿ ಇವೆಲ್ಲವೂ ಕಾಂತಿಯನ್ನು ಹೆಚ್ಚಿಸುತ್ತವೆ. ಪ್ರೀತಿಯಿಲ್ಲದಿದ್ದರೆ ಇವು ಯಾವುದೂ ಫಲಿಸುವುದಿಲ್ಲ." ಹೀಗೆ ಸ್ವಲ್ಪದರಿಂದಲೇ ಹೆಚ್ಚು ಕಾಂತಿ ಬಂದಿದೆ.

ಇಷ್ಟವಾದ ವಸ್ತುವನ್ನೂ ಸಹ ಹೆಚ್ಚು ಗರ್ವದಿಂದ ತಿರಸ್ಕರಿಸುವುದೇ ಬಬ್ಬೋಕವೆನಿಸುತ್ತದೆ. ಕಾಮುಕನೆನಿಸಿದ ಸ್ನೇಹಿತನಿಗೆ ಒಬ್ಬನು ಹೇಳುವ ಮಾತಿದು. ''ಇತರರ ಸದ್ಗುಣವನ್ನು ಗ್ರಹಿಸುವ ಸಾಮರ್ಥ್ಯವಿದ್ದರೂ ಯಾರು ಕೇವಲ ದೋಷವನ್ನೇ ಹುಡುಕುವರೋ, ಯಾರು ಪ್ರಾಣವನ್ನಾದರೂ ಅರ್ಪಿಸುವರೇ ಹೊರತು ಪ್ರೀತಿಪಾತ್ರರಾದವರಲ್ಲಿ ಪೂರ್ಣದೃಷ್ಟಿಯನ್ನಂತೂ ಇಡುವುದಿಲ್ಲವೋ, ಹೆಚ್ಚು ಪ್ರೀತಿಪಾತ್ರವಾದ ಬಟ್ಟೆ ಒಡವೆ ಮೊದಲಾದ ವಸ್ತುವನ್ನು ಯಾರಿಗಾದರೂ ಕೊಡಬೇಕಾಗಿಬಂದರೆ ಕೊಡಕೂಡದೆಂದು ಯಾರು ತಡೆಯುವರೋ ಮೂರು ಲೋಕಗಳಲ್ಲೂ ವಿಲಕ್ಷಣರಾದ ಇಂತಹ ಸ್ತ್ರೀಯರು ನಿನಗೆ ಪ್ರಸನ್ನರಾಗಲಿ" ಇಲ್ಲಿ ಸ್ತ್ರೀಯರಿಗೆ ಇಷ್ಟವೆನಿಸಿದ ವಸ್ತ್ರಧಾರಣಗಳಲ್ಲೂ ತಿರಸ್ಕಾರವನ್ನು ತಿಳಿಸಿರುವುದರಿಂದ ಇದು ಬಬ್ಬೋಕವೆನಿಸಿದೆ.

ಅತ್ಯಂತ ಪ್ರಿಯನಾದವನೊಡನೆ ಸೇರುವುದು, ಅವನನ್ನು ನೋಡುವುದು, ಅವನು ಬರುವನೆಂದು ಕೇಳುವುದು, ಇವುಗಳಿಂದ ಹುಟ್ಟಿದ ಸಂತೋಷದಿಂದ ಮುಗುಳುನಗೆ, ವ್ಯರ್ಥವಾಗಿ ಅಳುವುದು, ಹಾಸ್ಯಮಾಡುವುದು, ಹೆದರುವುದು, ಸಿಟ್ಟಿಗೇಳುವುದು,

ಆಯಾಸಪಡುವುದು ಇವೇ ಮೊದಲಾದ ಭಾವಗಳು ಒಂದೆಡೆಗೆ ಸೇರುವುದೇ 'ಕಿಲ ಕಿಂಚಿತ' ವೆನಿಸುವುದು. "ಆನೆಯ ಸೊಂಡಲಿನಂತೆ ತೊಡೆಯುಳ್ಳ ಕಾಂತೆಯು ನಾಯಕನಿಗೆ ಸೊಂಟದ ಮೇಲಿನ ಬಟ್ಟೆಯನ್ನು ಬಿಚ್ಚಲು ಪ್ರವರ್ತಿಸಿದಾಗ ಕೈಗೆ ಮಾಡಿದ ತಡೆಯನ್ನೂ, ಮನೋಹರವಾದ ಮುಗುಳುನಗೆಯಿಂದ ಕೂಡಿದ ತಿರಸ್ಕಾರ ಗಳನ್ನೂ, ಸುಖವನ್ನು ಅನುಭವಿಸವಾಗಲೂ ಮನೋಹರವಾಗಿ ಕಾಣುವ ನಟನೆಯ ಅಳುವಿಕೆಯನ್ನೂ ನಾಯಕನ ಇಚ್ಛೆಗೆ ವಿರೋಧವಾಗದಂತೆ ಮಾಡಿದಳು' ಇಲ್ಲಿ ಮುಗುಳುನಗೆ, ತೋರಿಕೆಗಾಗಿ ಅಳುವುದು ಇವೆರಡು ಭಾವಗಳು ಸೇರಿರುವುದರಿಂದ ನಾಯಿಕೆಗೆ ಸಂಭವಿಸಿದ ಅಲಂಕಾರವು ಕಿಲಕಿಂಚಿತವೆನಿಸಿದೆ.

ಪ್ರಿಯನು ಸಖಿಯರೊಡನೆ ಮಾತನಾಡುವಾಗಲೂ, ಪ್ರಿಯೆಯ ಚಿತ್ರವನ್ನು ನೋಡುವಾಗಲೂ, ಆಕೆಯನ್ನು ಸ್ಮರಿಸುವಾಗಲೂ ಪ್ರಿಯೆಯ ಮನಸ್ಸು ಪ್ರಿಯನ ಮುಖ ಭಾವದಲ್ಲಿ ವ್ಯಾಪಿಸಿರಲು ನಾಯಿಕೆಗೆ ಕಿವಿಯನ್ನು ಕೆರೆಯುವುದು, ಆಕಳಿಕೆ ಮೊದಲಾದ ವಿಕಾರಗಳು ತೋರಿದರೆ ಆ ಬಗೆಯ ವರ್ತನವು ಮೋಟ್ಟಾಯಿತವೆನಿಸುತ್ತದೆ. ಒಬ್ಬನು ತನ್ನ ಪ್ರಿಯೆಯ ಪ್ರಣಯವನ್ನು ಸ್ನೇಹಿತನಿಗೆ ತಿಳಿಸುತ್ತಾನೆ. "ಎಲೈ ಸುಂದರನೇ, ಸಖಿಯರೊಡನೆ ನಿನ್ನ ಮಾತನ್ನೇ ಆಡಲಿಕ್ಕೆ ಆರಂಭಿಸಲು ಕಿವಿಯನ್ನು ಉಜ್ಜುವುದರಲ್ಲಿ ಆಸಕ್ತಳಾದ ನಿನ್ನ ಕಾಂತೆಯು ಬಾಯಿಯಲ್ಲಿ ಆಕಳಿಸುತ್ತ ಶರೀರದ ಅವಯವಗಳನ್ನು ಮುರಿಯುತ್ತಿದ್ದಾಳೆ." ಇಲ್ಲಿ ನಾಯಿಕೆಯು ಕಿವಿಗಳನ್ನು ಕೆರೆಯುವುದು ಆಕಳಿಸುವುದು, ಮೈಮುರಿಯುವುದು ಇವುಗಳಿಂದ ಅವಳ ಮೋಟ್ಟಾಯಿತಸ್ಥಿತಿಯು ತಿಳಿದುಬರುವುದು. ಇದು ಸಹಜವಾದ ಭಾವವೆನಿಸಿದೆ.

ಪ್ರಿಯೆಯ ಕೂದಲು, ಸ್ತನಗಳು, ಕೆಳತುಟಿ, ಕೈಗಳು ಇವನ್ನು ನಾಯಕನು ಹಿಡಿದು ಕೊಂಡು ಆನಂದಪಡುವಾಗ ಆತುರದಿಂದ ತಲೆ ಕೈಗಳನ್ನು ಅಳ್ಳಾಡಿಸುವುದೇ ಕುಟ್ಟ ಮಿತವೆನಿಸುತ್ತದೆ. "ಪ್ರಿಯನು ಚಿಗುರಿನೊಡನೆ ಮಾತ್ರವೇ ಹೋಲಬಹುದಾದ ಕೆಳ ತುಟಿಯಲ್ಲಿ ಮುತ್ತಿಡಲಾಗಿ ನಾಯಿಕೆಯು ವ್ಯಥೆಯಿಂದ ಕೂಡಿದ್ದಳೋ ಏನೋ ಎಂಬಂತೆ ನಡುಗುತ್ತಿದ್ದರಿಂದ ಬಳೆಯು ಅಳ್ಳಾಡುತ್ತಿರಲು ಅದು ಎಲ್ಲೆಡೆಯಲ್ಲೂ ಶಬ್ದ ಮಾಡಿತು" ಇಲ್ಲಿ ನಾಯಿಕೆಯ ಕೈ ನಡುಗಿದ್ದರಿಂದ ಆಕೆಗೆ ಕುಟ್ಟಮಿತವೆಂಬ ಅಲಂಕಾರವನ್ನು ತಿಳಿಸಲಾಗಿದೆ.

ಅಥ ವಿಭ್ರಮಃ— ತ್ವರಯಾ ಹರ್ಷರಾಗಾದೇರ್ದಯಿತಾಗಮನಾದಿಷು ।
ಅಸ್ಥಾನೇ ಭೂಷಣಾದೀನಾಂ ವಿನ್ಯಾಸೋ ವಿಭ್ರಮೋ ಮತಃ ॥
ಶ್ರುತ್ವಾಯಾಂತಂ ಬಹಿಃ ಕಾಂತಮಸಮಾಪ್ತವಿಭೂಷಯಾ ।
ಭಾಲೇಽಂಜನಂ ದೃಶೋರ್ಲಾಕ್ಷಾ ಕಪೋಲೇ ತಿಲಕಃ ಕೃತಃ ॥
ಅಥ ಲಲಿತಂ— ಸುಕುಮಾರತಯಾಂಗಾನಾಂ ವಿನ್ಯಾಸೋ ಲಲಿತಂ ಭವೇತ್ ।
ಗುರುಕರತಲನೂಪುರಾಸುನಾದಂ ಸುಲಲಿತನರ್ತಿತವಾಮಪಾದಪದ್ಮಾ ।
ಇತರದನತಿಲೋಲಮಾದಧಾನಾ ಪದಮಥ ಮನ್ಮಥಮಂಥರಂ ಜಗಾಮ ॥

ಅಥ ಮದಃ— ಮದೋ ವಿಕಾರಃ ಸೌಭಾಗ್ಯಯೌವನಾದ್ಯವಲೇಪಜಃ ।
ಯಥಾ— ಮಾ ಗರ್ವಮುದ್ವಹ ಕಪೋಲತಲೇ ಚಕಾಸ್ತಿ
ಕಾಂತಸ್ವಹಸ್ತಲಿಖಿತಾ ಮಮ ಮಂಜರೀತಿ ।
ಅನ್ಯಾಪಿ ಕಿಂ ನ ಖಲು ಭಾಜನಮೀದೃಶೀನಾಂ
ವೈರೀ ನ ಚೇದ್ಭವತಿ ವೇಪಥುರಂತರಾಯಃ ॥
ಅಥ ವಿಕೃತಮ್— ವಕ್ತವ್ಯಕಾಲೇಽಪ್ಯವಚೋ ವ್ರೀಡಯಾ ವಿಕೃತಂ ಮತಮ್ ।
ದೂರಾಗತೇನ ಕುಶಲಂ ಪೃಷ್ಟಾ ನೋವಾಚ ಸಾ ಮಮ ಕಿಂಚಿತ್ ।
ಪರ್ಯಶ್ರುಣೀ ತು ನಯನೇ ತಸ್ಯಾಃ ಕಥಯಾಂಬಭೂವತುಃ ಸರ್ವಮ್ ॥
ಅಥ ತಪನಮ್— ತಪನಂ ಪ್ರಿಯವಿಚ್ಛೇದೇ ಸ್ಮರಾವೇಶೋತ್ಥಚೇಷ್ಟಿತಮ್ ।
ಶ್ವಾಸಾನ್ಮುಂಚತಿ ಭೂತಲೇ ವಿಲುಠತಿ ತ್ವನ್ಮಾರ್ಗಮಾಲೋಕತೇ ॥
ದೀರ್ಘಂ ರೋದಿತಿ ವಿಕ್ಷಿಪತ್ಯತ ಇತಃ ಕ್ಷಾಮಾಂ ಭುಜಾವಲ್ಲರೀಮ್ ।
ಕಿಂಚ ಪ್ರಾಣಸಮಾನ ! ಕಾಂಕ್ಷಿತವತೀ ಸ್ವಪ್ನೇಽಪಿ ತೇ ಸಂಗಮಂ ।
ನಿದ್ರಾಂ ವಾಂಛತಿ ನ ಪ್ರಯಚ್ಛತಿ ಪುನರ್ದಗ್ಧೋ ವಿಧಿಸ್ತಾಮಪಿ ॥
ಅಥ ಮೌಗ್ಧ್ಯಮ್— ಅಜ್ಞಾನಾದಿವ ಯಾ ಪೃಚ್ಛಾ ಪ್ರತೀತಸ್ಯಾಪಿ ವಸ್ತುನಃ ।
ವಲ್ಲಭಸ್ಯ ಪುರಃ ಪ್ರೋಕ್ತಂ ಮೌಗ್ಧ್ಯಂ ತತ್ತತ್ತ್ವವೇದಿಭಿಃ ॥
ಯಥಾ— ಕೇ ದ್ರುಮಾಸ್ತೇ ಕ್ವ ವಾ ಗ್ರಾಮೇ ಸಂತಿ ಕೇನ ಪ್ರರೋಪಿತಾಃ ।
ನಾಥ ಮತ್ಕಂಕಣನ್ಯಸ್ತಂ ಯೇಷಾಂ ಮುಕ್ತಾಫಲಂ ಫಲಮ್ ॥
ಅಥ ವಿಕ್ಷೇಪಃ— ಭೂಷಾಣಾಮರ್ಧರಚನಾ ವೃಥಾ ವಿಶ್ವಗವೇಕ್ಷಣಮ್ ।
ರಹಸ್ಯಾಖ್ಯಾನಮೀಷಚ್ಚ ವಿಕ್ಷೇಪೋ ದಯಿತಾಂತಿಕೇ ॥
ಯಥಾ— ಧಮ್ಮಿಲ್ಲಮರ್ಧಮುಕ್ತಂ ಕಲಯತಿ ತಿಲಕಂ ತಥಾ ಶಕಲಮ್ ।
ಕಿಂಚಿದ್ವದತಿ ರಹಸ್ಯಂ ಚಕಿತಂ ವಿಶ್ವಗವಲೋಕತೇ ತನ್ವೀ ॥
ಅಥ ಕುತೂಹಲಂ— ರಮ್ಯವಸ್ತುಸಮಾಲೋಕೇ ಲೋಲತಾ ಸ್ಯಾತ್ಕುತೂಹಲಮ್ ।
ಪ್ರಸಾಧಿಕಾಲಂಬಿತಮಗ್ರಪಾದಮಾಕ್ಷಿಪ್ಯ ಕಾಚಿದ್ದ್ರವರಾಗಮೇವ ।
ಉತ್ಸೃಷ್ಟಲೀಲಾಗತಿರಾಗವಾಕ್ಷಾದಲಕ್ತಕಾಂಕಾಂ ಪದವೀಂ ತತಾನ ॥
ಅಥ ಹಸಿತಂ— ಹಸಿತಂ ತು ವೃಥಾ ಹಾಸೋ ಯೌವನೋದ್ಭೇದಸಂಭವಃ ।
ಯಥಾ— ಅಕಸ್ಮಾದೇವ ತನ್ವಂಗೀ ಜಹಾಸ ಯದಿಯಂ ಪುನಃ ।
ನೂನಂ ಪ್ರಸೂನಬಾಣೋಽಸ್ಯಾಂ ಸ್ವಾರಾಜ್ಯಮಧಿತಿಷ್ಠತಿ ॥
ಅಥ ಚಕಿತಂ— ಕುತೋಽಪಿ ದಯಿತಸ್ಯಾಗ್ರೇ ಚಕಿತಂ ಭಯಸಂಭ್ರಮಃ ।
ತ್ರಸ್ಯಂತೀ ಚಲಶಫರೀವಿಘಟ್ಟಿತೋರುಃ ವಾಮೋರೂರತಿಶಯಮಾಪ ವಿಭ್ರಮಸ್ಯ ।
ಕ್ಷುಭ್ಯಂತಿ ಪ್ರಸಭಮಹೋ ವಿನಾಪಿ ಹೇತೋರ್ಲೀಲಾಭಿಃ ಕಿಮು ಸತಿ ಕಾರಣೇ ತರುಣ್ಯಃ ॥
ಅಥ ಕೇಲಿಃ— ವಿಹಾರೇ ಸಹ ಕಾಂತೇನ ಕ್ರೀಡಿತಂ ಕೇಲಿರುಚ್ಯತೇ ।
ವ್ಯಪೋಹಿತುಂ ಲೋಚನತೋ ಮುಖಾನಿಲೈರಪಾರಯಂತಂ ಕಿಲ ಪುಷ್ಪಜಂ ರಜಃ ।

ಪಯೋಧರೇಣೋರಸಿ ಕಾಚಿದುನ್ಮನಾಃ ಪ್ರಿಯಂ ಜಘಾನೋನ್ನತಪೀವರಸ್ತನೀ ||

ಪ್ರಿಯನು ಬರುವುದೇ ಮೊದಲಾದ ಮಹೋತ್ಸವಸಮಾರಂಭಗಳಲ್ಲಿ ಸಂತೋಷ ದಿಂದಲೂ ಪ್ರೇಮದಿಂದಲೂ ಸಖಿಯು ಕರೆದಿದ್ದರಿಂದಲೂ ಆತುರದಿಂದ ಶ್ರೀಗಂಧ ಮೊದ ಲಾದವನ್ನು ಯೋಗ್ಯವಲ್ಲದ ಕಡೆಗಳಲ್ಲಿ ಹಚ್ಚಿಕೊಳ್ಳುವುದು, ಹಾಗೆಯೇ ಆಭರಣಗಳನ್ನು ನಿರ್ದಿಷ್ಟಸ್ಥಾನದಿಂದ ತಪ್ಪಿಸಿ ಬೇರೆಕಡೆಗಳಲ್ಲಿ ಧರಿಸುವುದು ವಿಭ್ರಮವೆನಿಸುವುದು. "ಹೊರಗಡೆ ಪತಿಯು ಬಂದನೆಂಬುದನ್ನು ಕೇಳಿ ಒಡವೆಗಳನ್ನು ಪೂರ್ತಿಯಾಗಿ ಧರಿಸ ದಯೇ ಹಣೆಯಲ್ಲಿ ಅಂಜನವನ್ನೂ ಕಣ್ಣುಗಳಲ್ಲಿ ಲಾಕ್ಷಾರಸವನ್ನೂ, ಕೆನ್ನೆಯಲ್ಲಿ ತಿಲಕ ವನ್ನೂ ಆಕೆಯು ಇಟ್ಟುಕೊಂಡಳು" ಇಲ್ಲಿ ಸಂತೋಷದಿಂದ ಆತುರಪಟ್ಟು ಒಡವೆಗಳನ್ನು ಬೇರೆ ಬೇರೆ ಸ್ಥಾನಗಳಲ್ಲಿ ಧರಿಸಿದ್ದರಿಂದ ಈ ಬಗೆಯ ಅಲಂಕಾರವು ವಿಭ್ರಮವೆನಿಸಿದೆ.

ಅವಯವಗಳ ಕೋಮಲಭಾವದಿಂದ ಅತಿಮೃದುವಾಗಿ ಹೆಜ್ಜೆಯನ್ನಿಡುವುದೇ ಮೊದಲಾದ ವ್ಯಾಪಾರಗಳು ಲಲಿತವೆನಿಸುತ್ತವೆ. "ಎಡಗಡೆಯ ಪಾದದಿಂದ ಲಲಿತವಾಗಿ ನರ್ತನಮಾಡುತ್ತಿರುವ ಆ ನಾಯಿಕೆಯು ಬಲದ ಪಾದವನ್ನು ನಿಶ್ಚಲವಾಗಿ ನೆಲದ ಮೇಲೆ ಇಡುತ್ತ ಬಹಳ ಗಂಭೀರವೂ ಮನೋಹರವೂ ಆದ ಕಾಲುಕಡಗದ ಶಬ್ದ ದೊಡನೆ ಕಾಮಾವೇಶದಿಂದ ಮೆಲ್ಲಗೆ ಹೊರಟಳು." ಇಲ್ಲಿ ನಾಯಿಕೆಯು ಕೋಮಲವಾದ ರೀತಿಯಲ್ಲಿ ಪಾದಗಳನ್ನಿಟ್ಟದ್ದರಿಂದ ಇದು ಲಲಿತವೆನಿಸಿದೆ.

ಸೌಭಾಗ್ಯ (ಪತಿಗೆ ಪ್ರಿಯಳಾಗಿರುವಿಕೆ) ಯೌವನ, ಹಾಗೆಯೇ ಒಳ್ಳೆಯ ಬಟ್ಟೆ ಒಡವೆ ಮೊದಲಾದವು ಇವುಗಳಿಂದ ಹುಟ್ಟಿದ ಅಹಂಕಾರಕ್ಕೆ ಸಂಬಧಿಸಿದ ವಿಕಾರವೇ ಮದವೆನಿಸುವುದು. ತಾನು ಪತಿಗೆ ಪ್ರಿಯಳಾಗಿರುವಳೆಂಬುದನ್ನು ಪ್ರಕಟಿಸುವ ನಾಯಿಕೆಗೆ ಒಬ್ಬಳು ಹೇಳುವ ಮಾತಿದು. "ನಿನ್ನ ಕೆನ್ನೆಯಲ್ಲಿ ಪತಿಯು ತನ್ನ ಕೈಯಿಂದ ಬರೆದಿರುವ ಚಿತ್ರವು ಪ್ರಕಾಶಿಸುತ್ತಿರುವುದೆಂಬ ಕಾರಣದಿಂದ ನೀನು ಪತಿಗೆ ಪ್ರಿಯ ಳಾಗಿರುವೆನೆಂದು ಭಾವಿಸಿ ಗರ್ವಪಡಬೇಡ. ಪ್ರಿಯನನ್ನು ಮುಟ್ಟುವುದರಿಂದ ಹುಟ್ಟುವ ನಡುಗು ಅಡಚಣೆಯಾಗದಿದ್ದರೆ ಆಗ ಬೇರೊಬ್ಬಳೂ (ನಾನೇ) ಇಂತಹ ಚಿತ್ರಗಳಿಗೆ ಪಾತ್ರಳಾಗುತ್ತಿರಲಿಲ್ಲವೆ? ಬೇರೊಬ್ಬಳ ಕೆನ್ನೆಯಲ್ಲೂ ಅವನು ಚಿತ್ರಗಳನ್ನು ಬರದೇ ಬರೆಯುವನು" ಇಲ್ಲಿ ಈ ಮಾತನ್ನು ಹೇಳುವವಳು ಮತ್ತು ಕೇಳುವವಳು ಇವರಿಬ್ಬರಿಗೂ ಸೌಭಾಗ್ಯದ ಗರ್ವದಿಂದ ಹುಟ್ಟಿದ ಮದವೇ ವಿಕಾರವೆನಿಸಿದೆ.

ಹೇಳಬೇಕಾದ ಕಾಲದಲ್ಲೂ ಲಜ್ಜೆಯಿಂದ ಏನನ್ನೂ ಹೇಳದಿರುವುದು ವಿಕೃತ ವೆನಿಸುವುದು. ಸ್ನೇಹಿತನೊಬ್ಬನು ಹೇಳುವ ಮಾತಿದು. "ದೂರದಿಂದ ಬಂದ ನಾನು ಆಕೆಯ ಕ್ಷೇಮದ ಬಗ್ಗೆ ಕೇಳಿದೆನು. ಆಕೆಯು ಅದಕ್ಕೆ ಏನನ್ನೂ ಹೇಳಲಿಲ್ಲ, ಆದರೆ ಕಣ್ಣೀರಿನಿಂದ ತುಂಬಿದ ಕಣ್ಣುಗಳೇ ಆಕೆಯ ವಿರಹಕಾಲದಲ್ಲಿ ಅನುಭವಿಸುತ್ತಿದ್ದ ದುಃಖವನ್ನು ಸೂಚಿಸಿದವು" ಇಲ್ಲಿ ಪತಿಯು ಪ್ರಶ್ನೆ ಮಾಡಿದಮೇಲೆ ಉತ್ತರಿಸುವುದು ಯುಕ್ತವಾದರೂ ನಾಯಿಕೆ ಅವನ್ನು ಮಾಡದೆ ಇದ್ದುದರಿಂದ ಇದು ವಿಕೃತವೆನಿಸಿದೆ.

ಪ್ರಿಯನ ವಿರಹದಿಂದ ಕಾಮವಿಕಾರವುಂಟಾಗಿ ಅದರಿಂದ ಒಬ್ಬಳು ಅನುಭವಿಸುವ ಸಂತಾಪವು ತಪನವೆನಿಸುತ್ತದೆ. ಪರದೇಶಕ್ಕೆ ಹೋಗಿರುವ ಪತಿಯನ್ನು ಕುರಿತು ನಾಯಿಕೆಯ ದೂತಿ ಹೇಳುತ್ತಾಳೆ. "ಎಲೈ ಪ್ರಾಣಪ್ರಿಯನೆ, ನಿನ್ನ ಪ್ರಿಯೆಯು ನಿಟ್ಟುಸಿರನ್ನು ಬಿಡುತ್ತಾಳೆ; ನೆಲದಮೇಲೆ ಹೊರಳಾಡುತ್ತಾಳೆ; ನೀನು ಬರುವ ದಾರಿಯನ್ನೇ ಕಾಯುತ್ತಾಳೆ; ಗಟ್ಟಿಯಾಗಿ ಅಳುವಳು; ಕೃಶವಾದ ತೋಳನ್ನು ಆಕಡೆ ಈಕಡೆ ಇಡುವಳು; ಸ್ವಪ್ನದಲ್ಲಾದರೂ ನಿನ್ನ ಸಮಾಗಮವನ್ನು ಬಯಸುತ್ತಾಳೆ, ಆಕೆ ನಿದ್ರೆಯನ್ನು ಇಚ್ಛಿಸಿದರೂ ದುಷ್ಟವಿಧಿಯ ಆಕೆಗೆ ಅದನ್ನು ಕೊಡುವುದಿಲ್ಲ" ಆಕೆಯು ಕಾಮಾವೇಶದಿಂದ ನಿಟ್ಟುಸಿರು ಬಿಡುವುದೇ ಮೊದಲಾದ ತಾಪವನ್ನು ಅನುಭವಿಸುತ್ತಿರುವುದರಿಂದ ಇದು ತಾಪನವೆನಿಸಿದೆ.

ಹಿಂದೆ ತಿಳಿದಿರುವ ವಸ್ತುವನ್ನೂ ಸಹ ತಿಳಿಯದವಳಂತೆ ಪ್ರಿಯನ ಎದುರಿಗೆ ಕೇಳುವುದು ಮೌಗ್ಧ್ಯವೆನಿಸುತ್ತದೆ. "ಸ್ವಾಮಿ, ನನ್ನ ಬಳೆಯಲ್ಲಿ ಕೆತ್ತಿರುವ ಮುತ್ತು ಯಾವ ಮರದಿಂದ ಬಂದ ಫಲ ? ಆ ಮರಗಳು ಯಾವುವು ? ಯಾವ ಗ್ರಾಮದಲ್ಲಿ ಅವು ಇವೆ ? ಯಾರು ಅವನ್ನು ನೆಟ್ಟವರು ? " ಮುತ್ತುಗಳು ಶುಕ್ತಿಯಿಂದಾದವೆಂಬುದನ್ನು ಆಕೆಯು ಮೊದಲೇ ತಿಳಿದಿದ್ದರೂ ತಿಳಿಯದವಳಂತೆ ಪ್ರಶ್ನೆಮಾಡಿದ್ದರಿಂದ ಇದು ಮೌಗ್ಧ್ಯವೆನಿಸಿದೆ.

ಒಡವೆಗಳನ್ನು ಅರ್ಧದಷ್ಟು ಮಾತ್ರವೇ ತೊಟ್ಟುಕೊಂಡು ವ್ಯರ್ಥವಾಗಿ ಎಲ್ಲೆಡೆಯಲ್ಲೂ ನೋಡುವುದು, ಹಾಗೆಯೇ ಪತಿಯ ಎದುರಿಗೆ ಕೊಂಚವೇ ರಹಸ್ಯವಾದ ಅಂಶವನ್ನು ತಿಳಿಸುವುದು ಇದಿಷ್ಟುವೇ ವಿಕ್ಷೇಪವೆನಿಸುತ್ತದೆ. "ಕೃಶಾಂಗಿಯಾದ ನಾಯಿಕೆಯು ಕೂದಲಿನಲ್ಲಿ ಅರ್ಧಭಾಗವನ್ನು ಕಟ್ಟಿ ಉಳಿದವನ್ನು ಹಾಗೆಯೇಬಿಟ್ಟಿದ್ದಾಳೆ. ಹಾಗೆಯೇ ತಿಲಕವನ್ನು ಹಣೆಯಲ್ಲಿ ಸ್ವಲ್ಪವೇ ಇಟ್ಟುಕೊಂಡಿದ್ದಾಳೆ; ರಹಸ್ಯ ವಿಚಾರವನ್ನು ಅಸ್ಪಷ್ಟವಾಗಿ ತಿಳಿಸುತ್ತಾಳೆ, ಹಾಗೆಯೇ ಬೆದರಿಕೆಯಿಂದ ಎಲ್ಲೆಡೆಯಲ್ಲೂ ನೋಡುತ್ತಾಳೆ." ಹೀಗೆ ಅಲಂಕಾರವನ್ನುಪೂರ್ತಿಯಾಗಿಮಾಡಿಕೊಳ್ಳದೆ ಗಾಬರಿಯಿಂದ ರಹಸ್ಯವನ್ನು ಮೆಲ್ಲಗೆ ತಿಳಿಸುತ್ತಲಿರುವುದೇ ನಾಯಿಕೆಗೆ ವಿಶೇಷವಾದ ಅಲಂಕಾರವೆನಿಸಿದೆ.

ಮನೋಹರವಾದ ವಸ್ತುವನ್ನು ನೋಡುವುದರಲ್ಲಿ ಉಂಟಾಗುವ ಚಿತ್ತಚಾಂಚಲ್ಯವೇ ಕುತೂಹಲವೆನಿಸುತ್ತದೆ. "ಅಲಂಕಾರಮಾಡುವ ದೂತಿಯು ಲಾಕ್ಷಾರಸವನ್ನು ಹಚ್ಚಲಿಕ್ಕೆ ನಾಯಿಕೆಯು ಕಾಲನ್ನು ಮುಂದಕ್ಕೆ ಎಳೆದುಕೊಂಡು ಸ್ವಲ್ಪ ಹಚ್ಚಿದ್ದಾಳೆ. ಅದು ಇನ್ನೂ ಆರಿಲ್ಲ. ಅಷ್ಟರೊಳಗೆ ಆಕೆಯು ಆ ಕಾಲನ್ನು ಸೆಳೆದುಕೊಂಡು ಬೇಗನೆ ಕಿಟಕಿಯವರೆಗೆ ಹೋಗಿದ್ದರಿಂದ ಲಾಕ್ಷಾರಸವು ದಾರಿಯಲ್ಲೆಲ್ಲಾ ಹೆಜ್ಜೆಯ ಗುರುತಾಗಿ ಅಂಟಿಕೊಂಡಿತು". ಆಕೆಗೆ ಹೊರಗಡೆ ನೋಡಲು ಅಷ್ಟು ಕುತೂಹಲವಿತ್ತು.

ಯೌವನದ ಆವಿರ್ಭಾವದಿಂದ ಹುಟ್ಟಿದ ನಿಷ್ಪ್ರಯೋಜನವಾದ ಹಾಸ್ಯವೇ ಹಸಿತವೆನಿಸುವುದು. ಆಕಸ್ಮಿಕವಾಗಿ ನಗುವ ನವತರುಣಿಯ ಬಗ್ಗೆ ಒಬ್ಬಳು ಹೇಳುತ್ತಾಳೆ "ಈ ಕೃಶಾಂಗಿಯು ಯಾವ ಕಾರಣವೂ ಇಲ್ಲದೆ ತಾನಾಗಿಯೇ ನಗುತ್ತಿರುವುದರಿಂದ

ಮನ್ಮಥನು ಈಕೆಯಲ್ಲಿ ಸ್ವತಂತ್ರವಾಗಿ ಪ್ರವೇಶಿಸಿರುವನೆಂದು ಭಾವಿಸುತ್ತೇನೆ". ಹೀಗೆ ನಾಯಿಕೆಯು ವ್ಯರ್ಥವಾಗಿ ನಗುವುದರಿಂದ ಈಕೆಯಲ್ಲಿ ಹಸಿತ ವೆಂಬ ಅಲಂಕಾರ ವಿರುವುದಾಗಿ ಇಲ್ಲ ತಿಳಿಯಬರುತ್ತದೆ.

ಪ್ರಿಯನ ಎದುರಿಗೆ ಯಾವುದೋ ಸ್ವಲ್ಪ ಕಾರಣದಿಂದ ಬೆದರುವುದೇ ಚಕಿತ ವೆನಿಸುವುದು. ಪ್ರೇಯಸಿಯೊಡನೆ ಜಲಕ್ರೀಡೆಯನ್ನಾಡಿ ಮೇಲಕ್ಕೆ ಎದ್ದವನು ಸ್ನೇಹಿತನಿಗೆ ಹೇಳುತ್ತಾನೆ. "ನೀರಿನಲ್ಲಿ ಓಡಾಡುವ ಮೀನುಗಳಿಂದ ಬಡಿಸಿಕೊಂಡು ನಡುಗುತ್ತ ಸುಂದರವಾದ ತೊಡೆಗಳಿಂದ ಶೋಭಿಸುತ್ತಿರುವ ತರುಣಿಯು ನೀರಿ ನೊಳಗೆಯೇ ವಿಶೇಷವಾಗಿ ಸುತ್ತಾಡಿದಳು. ಎಂತಹ ಆಶ್ಚರ್ಯವಿದು! ತರುಣಿಯರು ಕಾರಣವಿಲ್ಲದೆಯೇ ಶೃಂಗಾರಾಚೇಷ್ಟೆಗಳಿಂದಲೇ ಹಠಾತ್ತಾಗಿ ಚಂಚಲಗೊಳ್ಳುತ್ತಾರೆ. ಕಾರಣವಿದ್ದಲ್ಲಿ ಕ್ಷೋಭೆಗೊಳ್ಳುವ ಬಗ್ಗೆ ಇನ್ನು ಹೇಳುವುದೇನಿದೆ?" ಇಲ್ಲಿ ಮೀನಿನ ಹೊಡೆತದಿಂದಲೇ ನಾಯಿಕೆಯು ಗಾಬರಿಗೊಂಡಳೆಂದು ಹೇಳಿರುವುದರಿಂದ ಇದು ಚಕಿತ ವೆಂಬ ಅಲಂಕಾರವೆನಿಸಿದೆ.

ರತಿಪ್ರಸಂಗದಲ್ಲಿ ಪ್ರಿಯನೊಡನೆ ಆಟವಾಡುವುದೇ ಕೇಲಿ ಎನಿಸುವುದು. "ಉನ್ನತವೂ ದಪ್ಪವೂ ಆದ ಸ್ತನಗಳಿರುವ ಒಬ್ಬ ನಾಯಿಕೆಯು ಸುರತದ ಬಗ್ಗೆ ಹೆಚ್ಚು ಬಯಸುತ್ತ ಬಾಯಿಂದ ಹೊರಟ ಗಾಳಿಯಿಂದ ತನ್ನ ಕಣ್ಣಿನ ಬಳಿ ಇದ್ದ ಹೂವಿನ ಪರಾಗವನ್ನು ದೂರಮಾಡಲಿಕ್ಕೆ ಆಗದಷ್ಟು ಅಶಕ್ತನಾಗಿದ್ದ ನಾಯಕನ್ನು ವಕ್ಷಸ್ಥಳದಲ್ಲಿ ತನ್ನ ಸ್ತನದಿಂದ ಹೊಡೆದಳು; ಅವನು ಅಶಕ್ತನಾದುದಕ್ಕೆ ದಂಡವನ್ನು ಹಾಕುವ ನೆಪದಿಂದ ಹಾಗೆ ಹೊಡೆದಳು." ನಾಯಕನ ವಕ್ಷಸ್ಥಳದಲ್ಲಿ ಪ್ರೇಯಸಿಯು ಸ್ತನದಿಂದ ಬಡಿದು ರತಿಸುಖವನ್ನು ಅನುಭವಿಸಿದ್ದರಿಂದ ಇದು ಕೇಲಿ ಎನಿಸಿದೆ.

ಅಥ ಮುಗ್ಧಾಕನ್ಯಕಯೋರನುರಾಗೇಂಗಿತಾನಿ

ದೃಷ್ಟ್ವಾ ದರ್ಶಯತಿ ವ್ರೀಡಾಂ ಸಮ್ಮುಖಂ ನೈವ ಪಶ್ಯತಿ ।
ಪ್ರಚ್ಛನ್ನಂ ವಾ ಭ್ರಮಂತಂ ವಾತಿಕ್ರಾಂತಂ ಪಶ್ಯತಿ ಪ್ರಿಯಮ್ ॥
ಬಹುಧಾ ಪೃಚ್ಛ್ಯಮಾನಾಪಿ ಮಂದಮಂದಮಧೋಮುಖೀ ।
ಸಗದ್ಗದಸ್ವರಂ ಕಿಂಚಿತ್ ಪ್ರಿಯಂ ಪ್ರಾಯೇಣ ಭಾಷತೇ ॥
ಅನ್ಯೈಃ ಪ್ರವರ್ತಿತಾಂ ಶಶ್ವತ್ ಸಾವಧಾನಾನೆ ಚ ತತ್ಕಥಾಮ್ ।
ಶೃಣೋತ್ಯನ್ಯತ್ರ ದತ್ತಾಕ್ಷೀ ಪ್ರಿಯೇ ಬಾಲಾನುರಾಗಿಣೀ ॥

ಅಥ—ಸಕಲಾನಾಮಪಿ ನಾಯಿಕಾನಾಂ ಅನುರಾಗೇಂಗಿತಾನಿ

ಚಿರಾಯ ಸವಿಧೇ ಸಾಧಿನ ಪ್ರಿಯಸ್ಯ ಬಹು ಮನ್ಯತೇ ।
ವಿಲೋಚನಪಥಂ ಚಾಸ್ಯ ನ ಗಚ್ಛತ್ಯನಲಂಕೃತಾ ॥
ಕಾಪಿ ಕುಂತಲಸಂವ್ಯಾನಸಂಯಮಪ್ಯಪದೇಶತಃ ।
ಬಾಹುಮೂಲಂ ಸ್ತನೌ ನಾಭಿಪಂಕಜಂ ದರ್ಶಯೇತ್ಸ್ಫುಟಮ್ ॥
ಆಚ್ಛಾದಯತಿ ವಾಗಾದ್ಯೈಃ ಪ್ರಿಯಸ್ಯ ಪರಿಚಾರಕಾನ್ ।

ವಿಶ್ವಸಿತ್ಯಸ್ಯ ಮಿತ್ರೇಷು ಬಹುಮಾನಂ ಕರೋತಿ ಚ ||
ಸಖೀಮಧ್ಯೇ ಗುಣಾನ್ ಬ್ರೂತೇ ಸ್ವಧನಂ ಪ್ರದದಾತಿ ಚ |
ಸುಪ್ತೇ ಸ್ವಪಿತಿ ದುಃಖೇಽಸ್ಯ ದುಃಖಂ ಧತ್ತೇ ಸುಖೇ ಸುಖಮ್ ||
ಸ್ಥಿತಾ ದೃಷ್ಟಿಪಥೇ ಶಶ್ವತ್ ಪ್ರಿಯೇ ಪಶ್ಯತಿ ದೂರತಃ |
ಆಭಾಷತೇ ಪರಿಜನಂ ಸಮ್ಮುಖೇ ಸ್ಮರವಿಕ್ರಿಯಮ್ ||
ಯತ್ಕಿಂಚಿದಪಿ ಸಂವೀಕ್ಷ್ಯ ಕುರುತೇ ಹಸಿತಂ ಮುಧಾ |
ಕರ್ಣಕಂಡೂಯನಂ ತದ್ವತ್ ಕಬರೀಮೋಕ್ಷಸಂಯಮಮ್ |
ಜೃಂಭತೇ ಸ್ಫೋಟಯತ್ಯಂಗಂ ಬಾಲಮಾಶ್ಲಿಷ್ಯ ಚುಂಬತಿ ||
ಭಾಲೇ ತಥಾ ವಯಸ್ಯಾಯಾ ರಚಯೇತ್ತಿಲಕಕ್ರಿಯಾಮ್ |
ಅಂಗುಷ್ಠಾಗ್ರೇಣ ಲಿಖತಿ ಸಕಟಾಕ್ಷಂ ನಿರೀಕ್ಷತೇ ||
ದಶತಿ ಸ್ವಾಧರಂ ಚಾಪಿ ಬ್ರೂತೇ ಪ್ರಿಯಮಧೋಮುಖೀ ||
ನ ಮುಂಚತಿ ಚ ತಂ ದೇಶಂ ನಾಯಕೋ ಯತ್ರ ದೃಶ್ಯತೇ |
ಆಗಚ್ಛತಿ ಗೃಹಂ ಚಾಸ್ಯ ಕಾರ್ಯವ್ಯಾಜೇನ ಕೇನಚಿತ್ ||
ದತ್ತಂ ಕಿಮಪಿ ಕಾಂತೇನ ಧೃತ್ವಾಂಗೇ ಮುಹುರೀಕ್ಷತೇ |
ನಿತ್ಯಂ ಹೃಷ್ಯತಿ ತದ್ಯೋಗೇ ವಿಯೋಗೇ ಮಲಿನಾ ಕೃಶಾ ||
ಮನ್ಯತೇ ಬಹು ತಚ್ಛೀಲಂ ತತ್ಪ್ರಿಯಂ ಮನ್ಯತೇ ಪ್ರಿಯಮ್ |
ಪ್ರಾರ್ಥಯತ್ಯಲ್ಪಮೂಲ್ಯಾನಿ ಸುಪ್ತಾ ನ ಪರಿವರ್ತತೇ ||
ವಿಕಾರಾತ್ಸಾತ್ತ್ವಿಕಾನಸ್ಯ ಸಂಮುಖೌ ಚಾಧಿಗಚ್ಛತಿ |
ಭಾಷತೇ ಸೂನೃತಂ ಸ್ನಿಗ್ಧಮನುರಕ್ತಾ ನಿತಂಬಿನೀ ||
ಏತೇಷ್ವಧಿಕಲಜ್ಜಾನಿ ಚೇಷ್ಟಿತಾನಿ ನವಸ್ತ್ರಿಯಾಃ |
ಮಧ್ಯವ್ರೀಡಾನಿ ಮಧ್ಯಾಯಾಃ ಸ್ರಂಸಮಾನತ್ರಪಾಣಿ ತು ||
ಅನ್ಯಸ್ತ್ರಿಯಾಃ ಪ್ರಗಲ್ಭಾಯಾಃ ತಥಾ ಸ್ಯುರ್ವಾರಯೋಷಿತಃ |
ದಿಙ್ಮಾತ್ರಂ ಯಥಾ ಮಮ ||

ಅಂತಿಕಾಗತಮಪಿ ಮಾಮಿಯಮವಲೋಕಯತೀವ ಹಂತ ದೃಷ್ಟ್ವಾಪಿ |
ಸರಸನಖಕ್ಷತಮಂಡಿತಮಾವಿಷ್ಕುರುತೇ ಭುಜಾಮೂಲಮ್ ||

ತಥಾ— ಲೇಖ್ಯಪ್ರಸ್ಥಾಪನೈಃ ಸ್ನಿಗ್ಧೈರ್ವೀಕ್ಷಿತೈರ್ಮೃದುಭಾಷಿತೈಃ |
ದೂತೀಸಂಪ್ರೇಷಣೈರ್ನಾರ್ಯಾ ಭಾವಾಭಿವ್ಯಕ್ತಿರಿಷ್ಯತೇ ||

ದೂತ್ಯಶ್ಚ— ದೂತ್ಯಃ ಸಖೀ ನಟೀ ದಾಸೀ ಧಾತ್ರೇಯೀ ಪ್ರತಿವೇಶಿನೀ |
ಬಾಲಾ ಪ್ರವ್ರಜಿತಾ ಕಾರುಃ ಶಿಲ್ಪಿನ್ಯಾದ್ಯಾಃ ಸ್ವಯಂ ತಥಾ ||

ಕಾರುಃ ರಜಕೀಪ್ರಭೃತಿಃ. ಶಿಲ್ಪಿನೀ ಚಿತ್ರಕಾರಾದಿಸ್ತ್ರೀ. ಆದಿಶಬ್ದಾತ್ ತಾಂಬೂಲಿಕಗಾಂಧಿಕಸ್ತ್ರೀಪ್ರಭೃತಯಃ

ತತ್ರ ಸಖೀ ಯಥಾ " ಶ್ವಾಸಾನ್ ಮುಂಚತಿ " ಇತ್ಯತ್ರ.

ಸ್ವಯಂ ದೂತೀ ಯಥಾ ಮಮ—

ಪಥಿಕ ಪಿಪಾಸಿತ ಇವ ಲಕ್ಷ್ಯಸೇ ಯಾಮಿ ತತ್ ಕಿಮನ್ಯತ್ ।
ನ ಮನಾಗಪಿ ವಾರಕ ಇಹಾಸ್ತಿ ಗೃಹೇ ಘನರಸಂ ಪಿಬತಾಮ್ ॥

ಏತಾಶ್ಚ ನಾಯಿಕಾವಿಷಯೇ ನಾಯಕಾನಾಮಪಿ ದೂತ್ಯೋ ಭವಂತಿ.

ದೂತೀಗುಣಾನಾಹ— ಕಲಾಕೌಶಲಮುತ್ಸಾಹೋ ಭಕ್ತಿಶ್ಚಿತ್ತಜ್ಞತಾ ಸ್ಮೃತಿಃ ।
ಮಾಧುರ್ಯಂ ನರ್ಮವಿಜ್ಞಾನಂ ವಾಗ್ಮಿತಾ ಚೇತಿ ತದ್ಗುಣಾಃ ॥

ಏತಾ ಅಪಿ ಯಥೌಚಿತ್ಯಾದುತ್ತಮಮಧ್ಯಮಾಧಮಾಃ.

ಏತಾ ದ್ಯೂತ್ಯಃ— ಅಥ ಪ್ರತಿನಾಯಕಃ—

ಧೀರೋದಾತ್ತಃ ಪಾಪಕಾರೀ ವ್ಯಸನೀ ಪ್ರತಿನಾಯಕಃ ।

ಯಥಾ ರಾಮಸ್ಯ ರಾವಣಃ.

ಹಿಂದೆ ಹೇಳಿದ ಮುಗ್ಧೆ ಕನ್ಯಕೆ ಇವರ ಅನುರಾಗಚೇಷ್ಟೆಗಳನ್ನು ಇಲ್ಲಿ ತಿಳಿಸುತ್ತಾನೆ. ಪ್ರಿಯನನ್ನು ಪ್ರೀತಿಸುವಾಗ ಇವರ ಕಡೆಗೆ ಪ್ರಿಯನು ನೋಡಿದರೆ ಇವರಿಗೆ ಲಜ್ಜೆಯುಂಟಾಗುತ್ತದೆ. ಹೀಗೆ ತಲೆಯನ್ನು ತಗ್ಗಿಸುವುದರಿಂದ ಇವರು ಎದುರಿಗೆ ಇರುವ ಪ್ರಿಯನನ್ನು ಸಹ ನೋಡುವುದಿಲ್ಲ. ಪ್ರಿಯನು ಎದುರಿಗೆ ಇದ್ದಾಗ ಮರೆಯಾಗಿಯೋ, ಅವನು ಹೊರಗೆ ಹೊರಟಾಗಲೋ, ಅವನು ತಿರುಗಾಡುವಾಗಲೋ ಅವನನ್ನು ಇವರು ನೋಡುವರು. ಬಹಳವಾಗಿ ಪ್ರಶ್ನೆಮಾಡಿದರೂ ಸಹ ತಲೆಯನ್ನು ತಗ್ಗಿಸಿ ಮೆಲ್ಲನೆ ಬಿಕ್ಕಳಿಸುತ್ತ ಕೊಂಚವೇ ಪ್ರಿಯವಾಗಿ ಮಾತನಾಡುವಳು. ತಮ್ಮ ಪ್ರಿಯನ ಸಮಾಚಾರವನ್ನು ಬೇರೆಯವರು ಹೇಳುವುದಾದರೆ ಬೇರೆಕಡೆಗೆ ಗಮನವನ್ನು ಕೊಟ್ಟಿದ್ದರೂ ಸಹ ಯಾವಾಗಲೂ ಕೇಳುತ್ತಲೇ ಇರುವರು.

ಇನ್ನು ನಾಯಿಕೆಯರೆಲ್ಲರ ಅನುರಾಗ ಚೇಷ್ಟೆಗಳನ್ನು ತಿಳಿಸುತ್ತಾನೆ. ಇವರಿಂದ ಮುಗ್ಧೆ ಕನ್ಯಕೆ ಇವರಿಗೂ ಸಹ ಈ ಬಗೆಯ ವ್ಯವಹಾರಗಳು ಸಂಭವಿಸುತ್ತವೆ ಎಂಬುದು ಸ್ಪಷ್ಟವಾಗುತ್ತದೆ. ಅನುರಕ್ತಳಿಗೆ ಪ್ರಿಯನ ಸಮೀಪದಲ್ಲಿ ಬಹಳ ಹೊತ್ತು ಇರುವುದು ಇಷ್ಟವೆನಿಸಿದೆ. ಆಕೆ ಅಲಂಕಾರವನ್ನು ಮಾಡಿಕೊಳ್ಳದೆ ಪ್ರಿಯನ ಕಣ್ಣಿಗೆ ಬೀಳುವುದಿಲ್ಲ. ಪ್ರಗಲ್ಭೆಯು ಕೂದಲನ್ನು ಕಟ್ಟುವ ನೆಪದಿಂದಲೂ, ಹೊದಿಕೆಯ ಬಟ್ಟೆಯನ್ನು ಹೊದ್ದುಕೊಳ್ಳುವ ನೆಪದಿಂದಲೂ ತೋಳುಗಳ ತುದಿಯನ್ನೂ ಸ್ತನಗಳನ್ನು ಹೊಕ್ಕಳನ್ನು ಪತಿಗೆ ತೋರಿಸುವಳು, ಪ್ರೀಯನ ಸೇವಕರನ್ನು ಒಳ್ಳೆಯ ಮಾತಿನಿಂದ ಮರೆಮಾಡುವಳು, ಸಖಿಯರೆದುರಿಗೆ ಪ್ರಿಯನ ಗುಣಗಳನ್ನು ತಿಳಿಸಿ ಅವರಿಗೆ ತನ್ನ ಹಣವನ್ನು ಕೊಡುವಳು, ಪ್ರಿಯನು ಮಲಗಿದ್ದರೆ ತಾನೂ ಮಲಗುವಳು, ಅವನು ನರಳುವಾಗ ತಾನೂ ನರಳುವಳು; ಅವನು ಸಂತೋಷವಾಗಿದ್ದರೆ ತಾನೂ ಸಂತೋಷಪಡುವಳು. ಪ್ರಿಯನು ನೋಡುತ್ತಿರುವಾಗ ದೂರದಲ್ಲಿ ನಿಂತು ಅವನನ್ನು ಬಾರಿ ಬಾರಿಗೂ ನೋಡುವಳು. ಎದುರಿಗೆ ಇರುವ ಸೇವಿಕರಿಗೆ ತನ್ನ ಕಾಮವಿಕಾರದೊಡನೆಯೇ ಬಹುಕಾಲ ಮಾತನಾಡುತ್ತಾಳೆ. ಯಾವುದಾದರೊಂದು ವಸ್ತುವನ್ನು ಕಂಡಾಗ ಹಾಸ್ಯಮಾಡುವಳು

ಹಾಗೆಯೇ ಕಿವಿಗಳನ್ನು ಉಜ್ಜುತ್ತಲೂ ಕೂದಲನ್ನು ಬಿಚ್ಚುತ್ತಲೂ ಕಟ್ಟುತ್ತಲೂ ಆಕಳಿಸುವಳು, ಬೆರಳುಗಳಿಂದ ನಟಿಕೆ ಮುರಿಯುವಳು, ಸ್ನೇಹಿತಳ ಹಣೆಯಲ್ಲಿ ತಿಲಕವನ್ನು ಇಡುವಳು. ಅಂಗುಷ್ಠದ ತುದಿಯಿಂದ ಬರೆಯುವಳು ಮತ್ತು ಓರೆ ನೋಟದಿಂದ ತನ್ನ ತುಟಿಯನ್ನು ಕಚ್ಚುತ್ತ ತಲೆಯನ್ನು ತಗ್ಗಿಸಿ ಪ್ರಿಯವಾದ್ದನ್ನು ತಿಳಿಸುವಳು. ನಾಯಕನಿರುವ ಸ್ಥಳವನ್ನು ಆಕೆ ಬಿಡುವುದಿಲ್ಲ. ಯವುದಾದರೂ ಕಾರ್ಯದ ನೆಪದಿಂದ ಪ್ರಿಯನ ಮನೆಗೆ ಹೋಗುವಳು, ಪ್ರಿಯನು ಕೊಟ್ಟ ಯಾವುದಾದರೂ ಪದಾರ್ಥವನ್ನು ತನ್ನ ಅವಯವದಲ್ಲಿ ಧರಿಸಿ ಅದನ್ನು ಬಾರಿ ಬಾರಿಗೂ ನೋಡುತ್ತಾಳೆ. ಪ್ರಿಯನೊಡನೆ ಇದ್ದರೆ ಯಾವಾಗಲೂ ಸಂತೋಷದಿಂದಿದ್ದು ಅವನು ಅಲ್ಲಿಂದ ಹೊರಗೆ ಹೋದರೆ ಮಲಿನಳೂ ಕೃಶಳೂ ಆಗುವಳು, ಅವನ ಸ್ವಭಾವವನ್ನು ಬಹಳವಾಗಿ ಗೌರವಿಸುವಳು ಅವನಿಗೆ ಪ್ರಿಯವಾದ್ದನ್ನು ತನಗೂ ಪ್ರಿದುವೆಂದು ತಿಳಿಯುತ್ತಾಳೆ. ಸ್ವಲ್ಪ ಬೆಲೆಯ ಪದಾರ್ಥಗಳಿಗಾಗಿ ಅವನಲ್ಲಿ ಪ್ರಾರ್ಥಿಸುವಳು. ಮಲಗಿರುವಾಗ ಪ್ರಿಯನಿರುವ ದಿಕ್ಕಿಗೆ ಬೆನ್ನನ್ನು ತೋರಿಸುವುದಿಲ್ಲ. ಪ್ರಿಯನು ಎದುರಿಗೆ ಇದ್ದಾಗ ಈಕೆಗೆ ಬೆವರು ಸುರಿಸುವಿಕೆ ಮೊದಲಾದ ಸಾತ್ತ್ವಿಕಭಾವಗಳು ಕಂಡುಬರುತ್ತವೆ. ಸತ್ಯವೂ ಹಿತವೂ ಆದಮಾತನ್ನು ಪ್ರೇಮದಿಂದ ಪತಿಯ ಬಗ್ಗೆ ಆಡುವಳು.

ಇಲ್ಲಿ ಹೇಳಿದ ಚೇಷ್ಟೆಗಳಲ್ಲಿ ಮುಗ್ಧೆಗೂ ಕನ್ಯಕೆಗೂ ಸಂಬಂಧಿಸಿದ ಚೇಷ್ಟೆಗಳು ಹೆಚ್ಚು ಲಜ್ಜೆಯಿಂದ ಕೂಡಿರುವುವು. ಮಧ್ಯೆನಾಯಿಕೆಗೆ ಮುಗ್ಧೆಗಿಂತ ಕಡಮೆಯೂ ಪ್ರಗಲ್ಭೆಗಿಂತ ಹೆಚ್ಚೂ ಲಜ್ಜೆ ಇರುತ್ತದೆ. ಪರಸ್ತ್ರೀಗೂ ಪ್ರಗಲ್ಭೆಗೂ ವೇಶ್ಯಗೂ ಲಜ್ಜೆಯು ಪೂರ್ತಿ ತೊಲಗಿರುವುದು. ನನ್ನ ಪದ್ಯವನ್ನು ಸೂಚನೆಗಾಗಿ ಉದಾಹರಿಸಲಾಗಿದೆ. "ನಾನು ಹತ್ತಿರದಲ್ಲಿಯೇ ಇದ್ದರೂ ಸಹ ಆಕೆಯು ನನ್ನನ್ನು ದೂರದಿಂದ ನೋಡುವಂತೆ ಕಾಣುವಳು. ಕಂಡಾಗ ಆಗ ತಾನೆ ಆಗಿದ್ದ ಹಲ್ಲಿನ ಗಾಯದ ಗುರುತಿನಿಂದ ಅಲಂಕೃತವಾಗಿದ್ದ ಸ್ತನಗಳ ಪಕ್ಕದ ಭಾಗವನ್ನು ತೋರಿಸುತ್ತಾಳೆ" ಇಲ್ಲಿ ನಾಯಿಕೆಯು ನೋಡುತ್ತಿರುವಳೆಂದು ಹೇಳಿದ್ದರಿಂದ ಈಕೆಗೆ ನಾಚಿಕೆ ಸ್ವಲ್ಪ ಕಡಮೆಯಾಗಿತ್ತೆಂಬುದು ತಿಳಿಯುತ್ತದೆ.

ಹೀಗೆಯೇ ನಾಯಿಕೆಯರೆಲ್ಲರಿಗೂ ತಮ್ಮ ಪ್ರೇಮವನ್ನು ಹೊರಹೊಮ್ಮಿಸಲು ಸಾಧನಗಳನ್ನು ತಿಳಿಸುತ್ತಾನೆ. ಪತ್ರವನ್ನು ಕಳುಹಿಸುವುದರಿಂದಲೂ, ಮೃದುವಾದ ನೋಟಗಳಿಂದಲೂ, ಹಾಗೆಯೇ ಮಾತುಗಳಿಂದಲೂ, ದೂತಿಯೊಡನೆ ಹೇಳಿಕಳುಹಿಸುವುದರಿಂದಲೂ ನಾಯಿಕೆಯರು ತಮ್ಮ ಭಾವವನ್ನು ಪ್ರಕಾಶಪಡಿಸಬಹುದು.

ಎಂತಹ ಹೆಂಗಸರು ದೂತಿಯರಾಗಲರ್ಹರೆಂಬುದನ್ನು ತಿಳಿಸುತ್ತಾನೆ. ಸಖಿ, ನಟಿ, ದಾಸಿ, ಸಾಕುಮಗಳು, ಪಕ್ಕದ ಮನೆಯವಳು, ಹುಡುಗಿ, ಪ್ರವಾಸದಲ್ಲಿರುವವಳು, ಕೆಲಸದ ಹೆಂಗಸು, ಚಿತ್ರಗಳನ್ನು ಬರೆಯುವವಳು ಇಂತವರು ದೂತಿಯಾಗಲರ್ಹರು. ಹಾಗೆಯೇ ತಾಂಬೂಲವನ್ನು ತರುವವಳು, ಗಂಧವನ್ನು ಹಚ್ಚುವವಳು, ಇಂತವರೂ ದೂತಿಯರಾಗಬಹುದು. "ಶ್ವಾಸಾನ್ ಮುಂಚತಿ" ಎಂಬ ಪದ್ಯದಲ್ಲಿ ಸಖಿಯೇ

ನಾಯಕನ ದುಃಖವನ್ನು ತಿಳಿಸುತ್ತ ದೂತಿ ಎನಿಸಿರುವುದನ್ನು ಕಾಣಬಹುದು.

ನಾಯಿಕೆಯೇ ತನ್ನ ಸಮಾಚಾರವನ್ನು ತಿಳಿಸುವಾಗ ದೂತಿ ಎನಿಸಿರುವ ಳೆಂಬುದನ್ನು ಇಲ್ಲಿ ಉದಾಹರಿಸುತ್ತಾನೆ. "ಪಥಿಕನೇ, ನಿನಗೆ ಬಾಯಾರಿದಂತೆ ಕಾಣು ತ್ತದೆ. ಆದ್ದರಿಂದ ಬೇರೆ ಕಡೆಗೆ ಏಕೆ ಹೋಗುವೆ? ಇಲ್ಲಿ ಮನೆಯಲ್ಲಿಯೇ ಹೆಚ್ಚು ನೀರಿರುವ ಹೊಂಡವಿದೆ. ಅಲ್ಲಿ ನೀರನ್ನು ಕುಡಿಯುವವರಿಗೆ ಯಾವ ತಡೆಯೂ ಇಲ್ಲ" ಇಲ್ಲಿ ಹೇಳುವ ನಾಯಿಕೆಯೇ ದೂತಿಯ ಕಾರ್ಯವನ್ನು ಮಾಡುತ್ತಿರುವುದರಿಂದ ಸ್ವಯಂದೂತಿ ಎನಿಸಿರುವಳು.

ದೂತಿಯ ಗುಣಗಳನ್ನು ತಿಳಿಸುತ್ತಾನೆ. ಸಾಧಾರಣವಾದ ಕಲೆಗಳಲ್ಲಿ ನೈಪುಣ್ಯ, ಉತ್ಸಾಹ,ಭಕ್ತಿ,ಬೇರೆಯವರ ಹೃದಯವನ್ನು ತಿಳಿಯುವ ಶಕ್ತಿ,ಸ್ಮರಣಶಕ್ತಿ! ಕಣ್ಣುಗಳಿಗೆ ಇಂಪಾಗಿ ಕಾಣುವುದು, ಬೇರೆಯವರ ಹಾಸ್ಯವನ್ನು ತಿಳಿಯುವುದರಲ್ಲಿ ಆಸಕ್ತಿ, ವಾಚಾಳ ತನ ಇವು ಆಕೆಯ ಗುಣಗಳೆನಿಸಿವೆ. ಇವರೂ ಸಹ ಸ್ವಭಾವಕ್ಕೆ ತಕ್ಕಂತೆ ಉತ್ತಮ ಮಧ್ಯಮ ಅಧಮ ಎಂದು ಮೂರು ಬಗೆಯಾಗಿರುವರು. ಹೀಗೆ ದೂತಿಯರನ್ನು ತಿಳಿಸಿಯಾಯಿತು.

ಹಿಂದೆ ನಾಯಕನನ್ನು ವರ್ಣಿಸಿದ್ದರಿಂದ ಅವನಿಗೆ ಎದುರಾಳಿ ಎನಿಸಿದ ಪ್ರತಿ ನಾಯಕನ ವರ್ತನೆಯನ್ನು ಇಲ್ಲಿ ತಿಳಿಸುತ್ತಾನೆ. ಆತನಲ್ಲಿ ಧೀರೋದ್ಧತನ ಲಕ್ಷಣವಿರ ಬೇಕು. ಆದರೆ ಅವನಿಗೆ ಪಾಪವನ್ನಾಚರಿಸುವುದರಲ್ಲಿಯೇ ಇಚ್ಛೆ ಇದ್ದು ಹದಿನೆಂಟು ಬಗೆಯ ವ್ಯಸನಗಳು ಇರುವುವು. ಬೇಟೆ, ಹಗಲುನಿದ್ರೆ, ಅಪವಾದ, ಸ್ತ್ರೀಚಿಂತೆ, ವಿವಾದ, ಸಂಗೀತ, ವ್ಯರ್ಥವಾದ ಓಡಾಟ, ಚಾಡಿಹೇಳುವುದು, ಭಯ, ದ್ರೋಹ, ಅಸೂಯೆ, ದೂಷಣ, ಕಾಠಿಣ್ಯ ಈ ಬಗೆಯ ವ್ಯಸನಗಳಿಂದ ಕೂಡಿದವನು ಪ್ರತಿ ನಾಯಕನೆನಿಸುವನು. ರಾಮನಿಗೆ ರಾವಣನು ಇಂತಹ ಶತ್ರುವೆನಿಸಿರುವನು.

ಉದ್ದೀಪನವಿಭಾವಾಸ್ತೇ ರಸಮುದ್ದೀಪಯಂತಿ ಯೇ ।
ತೇ ಚ— ಆಲಂಬನಸ್ಯ ಚೇಷ್ಟಾದ್ಯಾಃ ದೇಶಕಾಲಾವಯಸ್ತಥಾ ॥

ಚೇಷ್ಟಾದ್ಯಾಃ ಇತ್ಯಾದಿಶಬ್ದಾದ್ರೂಪಭೂಷಣಾದಯಃ. ಕಾಲಾದೀತ್ಯಾದಿ ಶಬ್ದಾತ್ ಚಂದ್ರಚಂದನಕೋಕಿಲಾಲಾಪಭ್ರಮರಝುಂಕಾರಾದಯಃ.

ತತ್ರ ಚಂದ್ರೋ ಯಥಾ ಮಮ—

ಕರಮುದಯಮಹೀಧರಸ್ತನಾಗ್ರೇ ಗಲಿತತಮಃಪಟಲಾಂಶುಕೇ ನಿವೇಶ್ಯ ।
ವಿಕಸಿಕಕುಮುದೇಕ್ಷಣಂ ವಿಚುಂಬತ್ಯಯಮಮರೇಶದಿಶೋ ಮುಖಂ ಸುಧಾಂಶುಃ॥

ಅಥಾನುಭಾವಾಃ—ಉದ್ಬುದ್ಧಂ ಕಾರಣೈಃ ಸ್ವೈಃ ಸ್ವೈರ್ಬಹಿರ್ಭಾವಂ ಪ್ರಕಾಶಯನ್ ।
ಲೋಕೇ ಯಃ ಕಾರ್ಯರೂಪಃ ಸೋಽನುಭಾವಃ ಕಾವ್ಯನಾಟ್ಯಯೋಃ॥

ಯಃ ಖಲು ಲೋಕೇ ಸೀತಾದಿಚಂದ್ರಾದಿಭಿಃ ಸ್ವೈಃ ಆಲಂಬನೋದ್ದೀಪನ ಕಾರಣೈಃ ರಾಮಾದೇರಂತರುದ್ಬುದ್ಧಂ ರತ್ಯಾದಿಕಂ ಬಹಿಃ ಪ್ರಕಾಶಯನ್ ಕಾರ್ಯ ಮಿತ್ಯುಚ್ಯತೇ ಸಃ ಕಾವ್ಯನಾಟ್ಯಯೋಃ ಪುನರನುಭಾವಃ—

ಕಃ ಪುನರಸೌ ಇತ್ಯಾಹ—

ಉಕ್ತಾಃ ಸ್ತ್ರೀಣಾಮಲಂಕಾರಾಃ ಅಂಗಜಾಶ್ಚ ಸ್ವಭಾವಜಾಃ ।
ತದ್ರೂಪಾಃ ಸಾತ್ತ್ವಿಕಾ ಭಾವಾಸ್ತಥಾ ಜ್ಯೇಷ್ಠಾಃ ಪರಾ ಅಪಿ ॥

ತದ್ರೂಪಾಃ ಅನುಭಾವಸ್ವರೂಪಾಃ. ಅತ್ರ ಚ ಯೋ ಯಸ್ಯ ರಸಸ್ಯ ಅನುಭಾವಃ ಸಃ ತತ್ಸ್ವರೂಪವರ್ಣನೇ ವಕ್ಷ್ಯತೇ.

ತತ್ರ ಸಾತ್ತ್ವಿಕಾಃ— ವಿಕಾರಾಃ ಸತ್ತ್ವಸಂಭೂತಾಃ ಸಾತ್ತ್ವಿಕಾಃ ಪರಿಕೀರ್ತಿತಾಃ।

ಸತ್ತ್ವಂ ನಾಮ ಸ್ವಾತ್ಮವಿಶ್ರಾಮಪ್ರಕಾಶಕಾರೀ ಕಶ್ಚನ ಆಂತರೋ ಧರ್ಮಃ।

ಸತ್ತ್ವಮಾತ್ರೋದ್ಭವತ್ವಾತ್ತೇ ಭಿನ್ನಾ ಅಪ್ಯನುಭಾವತಃ.

ಗೋಬಲೀವರ್ದನ್ಯಾಯೇನೇತಿ ಶೇಷಃ— ಕೇ ತೇ ಇತ್ಯಾಹ—

ಸ್ತಂಭಃ ಸ್ವೇದೋಽಥ ರೋಮಾಂಚಃ ಸ್ವರಭಂಗೋಽಥ ವೇಪಥುಃ ।
ವೈವರ್ಣ್ಯಮಶ್ರುಪ್ರಲಯಾ ಇತ್ಯಷ್ಟೌ ಸಾತ್ತ್ವಿಕಾಃ ಸ್ಮೃತಾಃ ।

ತತ್ರ— ಸ್ತಂಭಶ್ಚೇಷ್ಟಾಪ್ರತೀಘಾತೋ ಭಯಹರ್ಷಾಮಯಾದಿಭಿಃ ।
ವಪುರ್ಜಲೋದ್ಗಮಃ ಸ್ವೇದೋ ರತಿಘರ್ಮಶ್ರಮಾದಿಭಿಃ ॥
ಹರ್ಷಾದ್ಭುತಭಯಾದಿಭ್ಯೋ ರೋಮಾಂಚೋ ರೋಮವಿಕ್ರಿಯಾ ।
ಮದಸಮ್ಮದಪೀಡಾದ್ಯೈರ್ವೈಸ್ವರ್ಯಂ ಗದ್ಗದಂ ವಿದುಃ ॥
ರಾಗದ್ವೇಷಶ್ರಮಾದಿಭ್ಯಃ ಕಂಪೋ ಗಾತ್ರಸ್ಯ ವೇಪಥುಃ ।
ವಿಷಾದಮದರೋಷಾದ್ಯೈರ್ವರ್ಣಾನ್ಯತ್ವಂ ವಿವರ್ಣತಾ ॥
ಅಶ್ರುನೇತ್ರೋದ್ಭವಂ ವಾರಿ ಕ್ರೋಧದುಃಖಪ್ರಹರ್ಷಜಮ್ ।
ಪ್ರಲಯಃ ಸುಖದುಃಖಾಭ್ಯಾಂ ಚೇಷ್ಟಾಜ್ಞಾನನಿರಾಕೃತಿಃ ॥

ಯಥಾ ಮಮ— ತನುಸ್ಪರ್ಶಾದಸ್ಯಾ ದರಮುಕುಳಿತೇ ಹಂತ ನಯನೇ ।
ಉದಂಚದ್ರೋಮಾಂಚಂ ವ್ರಜತಿ ಜಡತಾಮಂಗಮಖಿಲಮ್ ॥
ಕಪೋಲೌ ಘರ್ಮಾರ್ದ್ರೌ ಧ್ರುವಮುಪರತಾಶೇಷವಿಷಯಂ ।
ಮನಃ ಸಾಂದ್ರಾನಂದಂ ಸ್ಪೃಶತಿ ಝುಟಿತಿ ಬ್ರಹ್ಮ ಪರಮಮ್ ॥

ಅಥ ವ್ಯಭಿಚಾರಿಣಃ— ವಿಶೇಷಾದಾಭಿಮುಖ್ಯೇನ ಚರಂತೋ ವ್ಯಭಿಚಾರಿಣಃ ।
ಸ್ಥಾಯಿನ್ಯುನ್ಮಗ್ನನಿರ್ಮಗ್ನಾಸ್ತ್ರಯಸ್ತ್ರಿಂಶಚ್ಚ ತದ್ವಿಧಾಃ ॥

ಸ್ಥಿರತಯಾ ವರ್ತಮಾನೇ ಹಿ ರತ್ಯಾದೌ ನಿರ್ವೇದಾದಯಃ ಪ್ರಾದುರ್ಭಾವ ತಿರೋಭಾವಾಭ್ಯಾಂ ಆಭಿಮುಖ್ಯೇನ ಚರಣಾತ್ ವ್ಯಭಿಚಾರಿಣಃ ಕಥ್ಯಂತೇ. ತೇ ಕೇ ಇತ್ಯಾಹ—

ನಿರ್ವೇದಾವೇಗದೈನ್ಯಶ್ರಮಮದಜಡತಾ ಔಗ್ರ್ಯಮೋಹೌ ವಿಬೋಧಃ।
ಸ್ವಪ್ನಾಪಸ್ಮಾರಗರ್ವಾ ಮರಣಮಲಸತಾಮರ್ಷನಿದ್ರಾವಹಿತ್ಥಾ ॥
ಔತ್ಸುಕ್ಯೋನ್ಮಾದಶಂಕಾಃ ಸ್ಮೃತಿಮತಿಸಹಿತಾ ವ್ಯಾಧಿಸಂತ್ರಾಸಲಜ್ಜಾ ।
ಹರ್ಷಾಸೂಯಾವಿಷಾದಾಃ ಸಧೃತಿಚಪಲತಾಗ್ಲಾನಿಚಿಂತಾವಿತರ್ಕಾಃ ॥

ತತ್ರ ನಿರ್ವೇದಃ— ತತ್ತ್ವಜ್ಞಾನಾಪದೀರ್ಷ್ಯಾದೇರ್ನಿರ್ವೇದಃ ಸ್ವಾವಮಾನನಾ ।
ದೈನ್ಯಚಿಂತಾಶ್ರುನಿಶ್ವಾಸವೈವರ್ಣ್ಯೋಚ್ಛ್ವಸಿತಾದಿಕೃತ್ ॥
ತತ್ರತತ್ತ್ವಜ್ಞಾನಾತ್ ನಿರ್ವೇದೋ ಯಥಾ—
ಮೃತ್ಕುಂಭವಾಲುಕಾರಂಧ್ರಪಿಧಾನರಚನಾರ್ಥಿನಾ ।
ದಕ್ಷಿಣಾವರ್ತಶಂಖೋಽಯಂ ಹಂತ ಚೂರ್ಣೀಕೃತೋ ಮಯಾ ॥

ಅಥ ಆವೇಗಃ–ಆವೇಗಃ ಸಂಭ್ರಮಸ್ತತ್ರ ವರ್ಷಜೇ ಪಿಂಡಿತಾಂ ಗತಾ ।
ಉತ್ಪಾತಜೇ ಪ್ರಸ್ತತಾಂಗೇ ಧೂಮಾನ್ಯಾಕುಲತಾಗ್ನಿ ಜೇ ॥
ರಾಜವಿದ್ರವಜಾದೇಸ್ತು ಶಸ್ತ್ರನಾಗಾದಿಯೋಜನಮ್ ।
ಗಜಾದೇಃ ಸ್ತಂಭಕಂಪಾದಿಃ ಪಾಂಶ್ವಾದ್ಯಾಕುಲತಾನಿಲಾತ್ ॥
ಇಷ್ಟಾದ್ಧರ್ಷಾಃ ಶುಚೋಽನಿಷ್ಟಾತ್ ಜ್ಞೇಯಾಶ್ಚಾನ್ಯೇ ಯಥಾಯಥಮ್
ತತ್ರ ಶತ್ರುಜೋ ಯಥಾ—
ಅರ್ಘ್ಯಮರ್ಘ್ಯಮಿತಿ ವಾದಿನಂ ನೃಪಂ ಸೋಽನಪೇಕ್ಷ್ಯ ಭರತಾಗ್ರಜೋ ಯತಃ ।
ಕ್ಷತ್ರಕೋಪದಹನಾರ್ಚಿಷಂ ತತಃ ಸಂದಧೇ ದೃಶಮುದಗ್ರತಾರಕಾಮ್ ॥
ಏವಮನ್ಯದೂಹ್ಯಮ್— ಅಥ ದೈನ್ಯಮ್—
ದೌರ್ಗತ್ಯಾದ್ಯೈರನೌಜಸ್ಯಂ ದೈನ್ಯಂ ಮಲಿನತಾದಿಕೃತ್ ।

ಯಥಾ— ವೃದ್ಧೋಽಂಧಃ ಪತಿರೇಷ ಮಂಚಕಗತಃ ಸ್ಥೂಣಾವಶೇಷಂ ಗೃಹಂ
ಕಾಲೋಽಭ್ಯರ್ಣಜಲಾಗಮಃ ಕುಶಲಿನೀ ವತ್ಸಸ್ಯ ವಾರ್ತಾಪಿ ನೋ ।
ಯತ್ನಾತ್ ಸಂಚಿತತೈಲಬಿಂದುಘಟಿಕಾ ಭಗ್ನೇತಿ ಪರ್ಯಾಕುಲಾ ॥
ದೃಷ್ಟ್ವಾ ಗರ್ಭಭರಾಲಸಾಂ ನಿಜವಧೂಂ ಶ್ವಶ್ರೂಶ್ಚಿರಂ ರೋದಿತಿ ।

ನಾಯಕ ನಾಯಿಕೆ ಪ್ರತಿನಾಯಕರೆನಿಸಿದ ಆಲಂಬನವಿಭಾವಗಳನ್ನು ತಿಳಿಸಿಯಾದ ಮೇಲೆ ಆ ಆಲಂಬನವಿಭಾವಗಳಿಂದಲೇ ಮೊಳಕೆಗೊಂಡ ರಸವನ್ನು ಪೋಷಿಸುವ ಉದ್ದೀಪನವಿಭಾವಗಳನ್ನು ಈಗ ತಿಳಿಸುತ್ತಾನೆ. ರಸವನ್ನು ಪ್ರಕಾಶಗೊಳಿಸುವಂತೆ ಮಾಡುವ ಸಾಧನಗಳೇ ಉದ್ದೀಪನವಿಭಾವವೆನಿಸುತ್ತವೆ. ಆಲಂಬನವೆನಿಸಿದ ನಾಯಕ ಮೊದಲಾದ ವ್ಯಕ್ತಿಗಳ ಕಣ್ಣು ಕೈ ಹುಬ್ಬು ಮೊದಲಾದ ಅವಯವಗಳ ವ್ಯಾಪಾರಗಳು, ಸೌಂದರ್ಯ ಅಲಂಕಾರ ಮೊದಲಾದವು, ದೇಶ, ಕಾಲ, ಚಂದ್ರ, ಶ್ರೀಗಂಧ, ಕೋಗಿಲೆಗಳ ಗಾನ, ದುಂಬಿಗಳ ಝೇಂಕಾರನಾದ ಮೊದಲಾದವು ಉದ್ದೀಪನವಿಭಾವಗಳೆನಿಸಿವೆ. ಇವುಗಳಲ್ಲಿ ಚಂದ್ರನು ರಸವನ್ನು ಹೇಗೆ ಉಜ್ವಲಗೊಳಿಸುವನೆಂಬುದನ್ನು ಇಲ್ಲಿ ತಿಳಿಸುತ್ತಾನೆ. " ಈ ಚಂದ್ರನು ಹಾಗೆಯೇ ಕೋಮಲನೂ ಸುಂದರನೂ ಆದ ನಾಯಕನು ಹೊರಗೆ ಹಾಕಿದ್ದ ಅಂಧಕಾರದ ಸಮೂಹವೆಂಬ ಬಟ್ಟೆಯೇ ಎನ್ನೋಣ ಎಂಬಂತಿದ್ದ ಉದಯಪರ್ವತವೆಂಬ ಸ್ತನದ ಮಧ್ಯದಲ್ಲಿರುವ ಕಪ್ಪುಬಣ್ಣವನ್ನು(ಕೈಯನ್ನು) ಇಟ್ಟು ಅರಳಿದ ಕನ್ನೈದಿಲೆ ಎಂಬ ಕಣ್ಣುಗಳಿರುವ ಪೂರ್ವದಿಕ್ಕೆಂಬ ಸ್ತ್ರೀಯ ಮುಖವನ್ನು ಚುಂಬಿಸುತ್ತಾನೆ. ಸಾಮಾಜಿಕರ ಮನಸ್ಸಿನಲ್ಲಿ ರಸವಾಗಿ ಪರಿಣಮಿ

ಸುವ ರತಿಗೆ ಚಂದ್ರನು ಉದ್ದೀಪನವಿಭಾವ ಎನಿಸಿದ್ದರಿಂದ ಅದನ್ನು ಇಲ್ಲಿ ತಿಳಿಸಲಾಗಿದೆ. ಯಾವ ರಸಕ್ಕೆ ಯಾವುದು ಉದ್ದೀಪನವಾಗಬಲ್ಲದೋ ಅವನ್ನು ಆಯಾಪ್ರಕರಣದಲ್ಲಿ ತಿಳಿಸಲಾಗುವುದು.

ಆಲಬಂಬನೊದ್ದೀಪನವಿಭಾವಗಳನ್ನು ತಿಳಿಸಿಯಾದಮೇಲೆ ಅನುಭಾದಗಳನ್ನು ಈಗ ತಿಳಿಸುತ್ತಾನೆ. ಆಯಾಯ ಕಾರಣಗಳಿಂದ ಹುಟ್ಟಿದ ರತಿ ಮೊದಲಾದ ಸ್ಥಾಯಿ ಭಾವವನ್ನು ಹೊರಗೆ ಸಭ್ಯರಲ್ಲಿ ಪ್ರಕಾಶಗೊಳಿಸುವ ಕ್ರಿಯೆಯೇ ಕಾವ್ಯನಾಟ್ಯಗಳಲ್ಲಿ ಅನುಭಾವವೆನಿಸುವುದು. ಬೇರೆಯವರ ಹೃದಯದಲ್ಲಿ ಸ್ಥಾಯಿಭಾವವನ್ನು ಹುಟ್ಟಿಸುವ ಕಾರ್ಯವೇ ಅನುಭಾವ. ಸೀತೆ ಎಂಬ ಆಲಂಬನವಿಭಾವದಿಂದಲೂ ಚಂದ್ರಮೊದಲಾದ ಉದ್ದೀಪನಕಾರಣಗಳಿಂದಲೂ ರಾಮನ ಹೃದಯದಲ್ಲಿ ಹುಟ್ಟುವ ರತಿ ಮೊದಲಾದಭಾವ ಗಳನ್ನು ಹೊರಗೆ ಸಾಮಾಜಿಕರ ಹೃದಯದಲ್ಲಿ ಅನುಭವಿಸಲಿಕ್ಕೆ ಯೋಗ್ಯವಾಗುವಂತೆ ಮಾಡುವ ಕ್ರಿಯೆಯು ಲೋಕದಲ್ಲಿ ಕಾರ್ಯವೆನಿಸಿ ಕಾವ್ಯನಾಟ್ಯಗಳಲ್ಲಿ ಅನುಭಾವ ವೆನಿಸುತ್ತದೆ.

ಈ ಅನುಭಾವ ಎಂತಹದೆಂಬುದನ್ನು ತಿಳಿಸುತ್ತಾನೆ. ಸ್ತ್ರೀಪುರುಷರ ಅಲಂಕಾರ ಗಳು, ಅವರ ಶರೀರದ ಅವಯವಗಳಲ್ಲಿ ಕಂಡುಬರುವ ಭಾವ, ಹಾವ,ಹೇಲ ಮೊದಲಾದ ಚೇಷ್ಟೆಗಳು,ಹಾಗೆಯೇ ಸ್ವಾಭಾವಿಕವಾದ ಲೀಲೆ ವಿಲಾಸ ಮೊದಲಾದ ಅಲಂಕಾರಗಳು, ಹಾಗೆಯೇ ಸ್ತಂಭ ಸ್ವೇದ ಮೊದಲಾದ ಸಾತ್ವಿಕಭಾವಗಳು ಹಾಗೆಯೇ ಓರೆನೋಟ ಮೊದಲಾದ ಚೇಷ್ಟೆಗಳು ಇವೆಲ್ಲವೂ ಅನುಭಾವವೆನಿಸುತ್ತವೆ. ಯಾವುದು ಯಾವ ರಸಕ್ಕೆ ಅನುಭಾವವಾಗಬಲ್ಲದೋ ಅವನ್ನು ಅವರ ಸ್ವರೂಪವನ್ನು ವರ್ಣಿಸುವಾಗ ತಿಳಿಸ ಲಾಗುವುದು. ಈಗ ಸಾತ್ತ್ವಿಕಭಾವಗಳನ್ನು ತಿಳಿಸುತ್ತಾನೆ. ಸತ್ತ್ವಗುಣದಿಂದ ದೇಹದ ಬೇರೆ ಬೇರೆ ಅವಯವಗಳಲ್ಲಿ ಕಂಡುಬರುವ ವಿಕಾರಗಳೇ ಸಾತ್ತ್ವಿಕಭಾವಗಳೆನಿಸುತ್ತವೆ. ಸಾಮಾಜಿಕನ ಹೃದಯದಲ್ಲಿ ರಸಭಾವಗಳನ್ನು ಪ್ರಕಾಶಗೊಳಿಸುವ ಒಂದು ಆಂತರ ಧರ್ಮವೇ ಸತ್ತ್ವವೆನಿಸಿದೆ. ಇದರಿಂದ ಮಾತ್ರವೇ ಹುಟ್ಟುವ ವಿಕಾರಗಳು ಸಾತ್ತ್ವಿಕ ವೆನಿಸಿ ಅನುಭಾವದಿಂದ ಬೇರೆ ಎನಿಸಿವೆ. ಹಿಂದಿನ ಕಾರಿಕೆಯಲ್ಲಿ 'ವಿಭಾವಾ ಅನುಭಾವಾಶ್ಚ ಸಾತ್ತ್ವಿಕಾ ವ್ಯಭಿಚಾರಿಣಃ" ಎಂದು ಅನುಭಾವಗಳನ್ನೂ ಸಾತ್ತ್ವಿಕಭಾವಗಳನ್ನೂ ಬೇರೆಬೇರೆಯಾಗಿ ತಿಳಿಸಿ ಈಗ ಸಾತ್ತ್ವಿಕಭಾವಗಳನ್ನು ಅನುಭಾವಗಳೆಂದು ಹೇಳಿದ್ದು ಪರಸ್ಪರ ವಿರೋಧವಲ್ಲವೆ? ಎಂದರೆ ಗೋಬಲೀವರ್ದನ್ಯಾಯದಿಂದ ಯಾವ ವಿರೋಧವೂ ಇಲ್ಲವೆಂದು ಇಲ್ಲಿ ಸಮನ್ವಯಮಾಡಬಹುದಾಗಿದೆ. ವೃಷಭವು (ಎತ್ತು) ಧೇನು (ಆಗ ತಾನೆ ಕರುವನ್ನು ಹಾಕಿರುವ ಗೋವು) ವಿಗಿಂತ ಬೇರೆಯೇ ಆಗಿದೆ. ಗೋವೆಂದು ಭಾವಿ ಸಿದರೆ ಎರಡೂ ಒಂದೇ ಆಗುತ್ತವೆ. ಆದರೆ ಇವೆರಡಕ್ಕೂ ವ್ಯಯಕ್ತಿಕಭೇದವಿದೆ. ಗೋ ಶಬ್ದವು ಹೆಣ್ಣು ಆಕಳು, ಎತ್ತು ಎರಡನ್ನೂ ತಿಳಿಸುತ್ತದೆ. ಗೋ ಎಂಬ ಅರ್ಥದಿಂದ ಎರಡಕ್ಕೂ ಅಭೇದವಿದೆ. ಗೋವುಗಳ ಮಧ್ಯದಲ್ಲಿ ಎತ್ತಿಗೆ ಒಂದು ಶ್ರೇಷ್ಠತೆಯನ್ನು ತೋರಿಸಲು ಗೋಬಲಿವರ್ದ ಎಂದು ಕರೆಯುತ್ತಾರೆ. ಹಾಗೆ ಇಲ್ಲಿ ಸ್ತಂಭ ಸ್ವೇದ

ಎಂಬ ಸಾತ್ತ್ವಿಕಭಾವಗಳು ಬಲೀವರ್ದವ ಸ್ಥಾನದಲ್ಲಿದ್ದು ಅನುಭಾವಗಳೂ ಆಗಿವೆ. ಭಾವಹಾವಗಳು ಅನುಭಾವವೇ ಆಗಿವೆ. ಸಾತ್ತ್ವಿಕಭಾವ ಎಂಬುದು ಸ್ತಂಭಸ್ವೇದಗಳಲ್ಲಿ ಇರುವಂತೆ ಭಾವ ಹಾವಗಳಲ್ಲಿಲ್ಲ. ಸಾತ್ತ್ವಿಕಭಾವ ಎಂಬುದು ವ್ಯಾಪಕವಾದ ಧರ್ಮ. ಸಾತ್ತ್ವಿಕಭಾವ ಎಂಬುಸು ಸ್ತಂಭ ಮೊದಲಾದುವುಗಳಲ್ಲಿ ಮಾತ್ರವೇ ಇರುವುದು. ಹೀಗೆ ಸಾತ್ತ್ವಿಕಭಾವಗಳು ಅನುಭಾವಗಳೇ ಆದರೂ ಭಾವ ಹಾವಗಳ ದೃಷ್ಟಿಯಿಂದ ಬೇರೆಯಾಗಿವೆ. ಗೋವು, ಎತ್ತು, ಎರಡೂ ಗೋವೇ ಆದರೂ ಗೋವಿನ ದೃಷ್ಟಿಯಿಂದ ಎತ್ತು ಬೇರೆಯೇ ಆಗಿದೆ. ಹೆಣ್ಣುಗೋವು ಹೇಗೆ ವೃಷಭವೆನಿಸಲಾರದೋ ಹಾಗೆಯೇ ಹಾವಭಾವಗಳು ಸಾತ್ತ್ವಿಕವೆನಿಸದೆ ಅನುಭಾವಗಳೇ ಆಗುತ್ತವೆ. ಈ ರೀತಿಯಲ್ಲಿ ಅನುಭಾವಗಳಿಗೂ ಸಾತ್ತ್ವಿಕಭಾವಗಳಿಗೂ ಭೇದವೂ ಅಭೇದವೂ ಹೊಂದುತ್ತವೆ.

ಸಾತ್ತ್ವಿಕಭಾವಗಳು ಯಾವುವೆಂಬುದನ್ನು ತಿಳಿಸುತ್ತಾನೆ. ಸ್ತಂಭ, ಸ್ವೇದ, ರೋಮಾಂಚ, ಸ್ವರಭಂಗ, ವೇಪಥ, ವೈವರ್ಣ್ಯ, ಕಣ್ಣೀರು ಸುರಿಸುವುದು, ಪ್ರಳಯ ಇದಿಷ್ಟು ಸಾತ್ತ್ವಿಕಭಾವಗಳೆನಿಸಿವೆ. ಭಯ, ಸಂತೋಷ ರೋಗ, ಹೆಚ್ಚು ಅನುರಾಗ ಇವುಗಳಿಂದ ದೇಹದ ಚಲನವಲಯಗಳು ನಿಲ್ಲುವುದೇ ಸ್ತಂಭವೆನಿಸುವುದು. ಸುರತ, ಬೇಸಿಗೆಯ ಕಾಲ, ಶ್ರಮ ಇವುಗಳಿಂದ ದೇಹದಲ್ಲಿ ನೀರಿನ ತುಂತುರುಗಳು ಹೊರ ಹೊಮ್ಮುವುದೇ ಸ್ವೇದವೆನಿಸುವುದು. ಹರ್ಷ, ಆಶ್ಚರ್ಯ, ಭಯ. ಮೊದಲಾದವುಗಳಿಂದ ಸ್ವರವು ಬದಲಾಯಿಸುವುದೇ ಗದ್ಗದವೆನಿಸುವುದು. ರಾಗ, ದ್ವೇಷ, ಶ್ರಮ, ಇವುಗಳಿಂದ ದೇಹ ನಡುಗುವುದೇ ವೇಪಥು ಎನಿಸುವುದು. ರೋಷಗಳಿಂದ ಶರೀರದ ಬಣ್ಣವು ಬದಲಾಯಿಸುವುದೇ ವೈವರ್ಣ್ಯವೆನಿಸುವುದು. ಕ್ರೋಧ, ದುಃಖ, ಸಂತೋಷಗಳಿಂದ ಕಣ್ಣಿನಲ್ಲಿ ಬರುವ ನೀರು ಅಶ್ರುವೆನಿಸುವುದು. ಸುಖದಿಂದಾಗಲೀ, ದುಃಖದಿಂದಾಗಲೀ ದೇಹದಲ್ಲಿ ಕ್ರಿಯೆಯನ್ನೂ ಜ್ಞಾನವನ್ನೂ ನಿರಾಕರಿಸುವುದೇ ಪ್ರಳಯವೆನಿಸುವುದು. ನಾಯಿಕಿಯೊಡನೆ ಭೋಗಿಸಿವ ನಾಯಕನು ತನ್ನ ಅವಸ್ಥೆಯನ್ನು ವರ್ಣಿಸುತ್ತಾನೆ. "ಈ ಪ್ರಿಯೆಯ ದೇಹಸ್ಪರ್ಶದಿಂದ ಕಣ್ಣುಗಳೆರಡೂ ಕೊಂಚ ಮುಚ್ಚಿಕೊಂಡಿವೆ. ರೋಮಾಂಚಗೊಂಡ ಅವಯವಗಳೂ ಸ್ತಬ್ಧವಾಗಿವೆ." ಇಲ್ಲಿ ರೊಮಾಂಚ, ಸ್ತಂಭ ಇವೆರಡನ್ನು ತಿಳಿಸಿದೆ. ಕೆನ್ನೆಗಳು ಬಿಸಿಲಿನಿಂದ ಬೆವರಿವೆ. ಇಲ್ಲಿ ಸ್ವೇದವನ್ನು ತಿಳಿಸಿದೆ. ಬೇರೆ ಎಲ್ಲಾ ವಿಷಯಗಳನ್ನು ತೊರೆದಿರುವ. ಮನಸ್ಸು ನಿಶ್ಚಯವಾಗಿಯೂ ಆನಂದಮಯವಾದ ಪರಬ್ರಹ್ಮದಲ್ಲಿ ವಿಲೀನವಾಗಲಿದೆ". ಇಲ್ಲಿ ಪ್ರಳಯವನ್ನು ತಿಳಿಸಿಯಾಯಿತು. "ಬಾಲೇ ನಾಥ ವಿಮುಂಚ ಮಾನಿನಿ ರುಷಮ್'' ಎಂಬ ಪದ್ಯದಲ್ಲಿ ಸ್ವರಭಂಗವೂ ''ಮಾ ಗರ್ವಮುದ್ವಹ'' ಎಂಬಲ್ಲಿ ಮೈನಡುಗುವಿಕೆಯೂ ''ಶೋಣಂ ವೀಕ್ಷ್ಯ ಮುಖಂ'' ಎಂಬಲ್ಲಿ ವೈವರ್ಣ್ಯವೂ ಅನುಭಾವಗಳೆನಿಸಿವೆ.

ವಿಭಾವ ಅನುಭಾವಗಳನ್ನು ತಿಳಿಸಿಯಾದ ಮೇಲೆ ವ್ಯಭಿಚಾರಿಭಾವಗಳ ಸ್ವರೂಪವನ್ನು ತಿಳಿಸುತ್ತಾನೆ. ವಿಭಾವ ಅನುಭಾವಗಳಿಗಿಂತಲೂ ಹೆಚ್ಚಾಗಿ ರಸವನ್ನು ಪೋಷಿಸಲು ಅನುಕೂಲವಾಗಿ, ಪ್ರವರ್ತಿಸುತ್ತಲೂ ನೀರಿನಲ್ಲಿ ಬುದ್ಬುದಗಳಂತೆ ಸ್ಥಾಯಿ

ಭಾವದಲ್ಲಿಯೇ ಕೆಲವುವೇಳೆ ಹುಟ್ಟುತ್ತಲೂ ಕೆಲವುವೇಳೆ ಮುಳುಗುತ್ತಲೂ ಇರುವ ಭಾವಗಳು ವ್ಯಭಿಚಾರಿಗಳೆನಿಸಿವೆ. ಅಲ್ಲಿಗೆ ರಸವನ್ನು ಪೋಷಿಸುತ್ತ ಸ್ಥಾಯಿಯಲ್ಲಿಯೇ ತೋರಿ ಸೇರುವ ಭಾವಗಳೇ ವ್ಯಭಿಚಾರಿಗಳೆಂದು ಹೇಳಿದಂತಾಯಿತು. ಹೃದಯದಲ್ಲಿ ಸ್ಥಿರವಾಗಿ ನೆಲಸಿರುವ ರತಿ ಮೊದಲಾದ ಭಾವಗಳಲ್ಲಿ ನಿರ್ವೇದ ಮೊದಲಾದ ಮೂವತ್ತ ಮೂರುಭಾವಗಳು ಹುಟ್ಟಿ ಕಣ್ಮರೆಯಾಗುತ್ತ ರಸವನ್ನು ಪುಷ್ಟೀಕರಿಸಲು ಅನುಕೂಲ ವಾಗಿ ಸಂಚರಿಸುವುದರಿಂದ ಇವು ವ್ಯಭಿಚಾರಿಭಾವಗಳೆನಿಸಿವೆ. ಅವು ಯಾವುವೆಂಬು ನ್ನು ಈಗ ತಿಳಿಸಲಾಗುವುದು. ನಿರ್ವೇದ, ಆವೇಗ, ದೈನ್ಯ, ಶಮ, ಮದ, ಜಡತೆ, ಉಗ್ರತೆ, ಮೋಹ, ವಿಬೋಧ, ಸ್ವಪ್ನ, ಅಪಸ್ಮಾರ, ಗರ್ವ, ಮರಣ, ಆಲಸ್ಯ, ಅಮರ್ಷ, ನಿದ್ರೆ, ಅವಹಿತ್ಥ, ಔತ್ಸುಕ್ಯ, ಉನ್ಮಾದ, ಶಂಕೆ, ಸ್ಮೃತಿ ಮತಿ, ವ್ಯಾಧಿ, ಸಂತ್ರಾಸ, ಲಜ್ಜೆ, ಹರ್ಷ, ಅಸೂಯೆ, ವಿಷಾದ, ಧೃತಿ, ಚಾಪಲ್ಯ, ಗ್ಲಾನಿ, ಚಿಂತೆ, ವಿತರ್ಕ ಇವು ಇಷ್ಟು ವ್ಯಭಿಚಾರಿಭಾವಗಳು. ಅವುಗಳಲ್ಲಿ ನಿರ್ವೇದವನ್ನು ಇಲ್ಲಿ ತಿಳಿಸುತ್ತಾನೆ.

ತತ್ತ್ವಜ್ಞಾನ, ಆಪತ್ತು, ಅಸೂಯೆ ಇವುಗಳಿಂದ ತನಗೆ ಅವಮಾನ ಉಂಟಾಗು ವುದೇ ನಿರ್ವೇದವೆನಿಸುತ್ತದೆ. ಇದರಿಂದ ದೈನ್ಯ, ಚಿಂತೆ, ಕಣ್ಣೀರು, ನಿಟ್ಟುಸಿರು, ಮೈಯಲ್ಲಿ ಬಣ್ಣದ ಬದಲಾವಣೆ, ನಿರಾಶಭಾವ ಇವು ಹುಟ್ಟುತ್ತವೆ. ತತ್ತ್ವಜ್ಞಾನ ದಿಂದ ನಿರ್ವೇದವು ಹುಟ್ಟುವುದನ್ನು ಉದಾಹರಿಸುತ್ತಾನೆ. ಸಂಸಾರದಲ್ಲಿ ಹೆಚ್ಚುಕಾಲ ಜೀವನವನ್ನು ನಡೆಸಿದವನು ಧೈನ್ಯದಿಂದ ಹೇಳುವ ಮಾತಿದು. "ಮಣ್ಣಿನಿಂದ ನಿರ್ಮಿತವಾಗಿರುವ ಕಲಶದಲ್ಲಿ ಮರಳಿನಂತೆ ಇರುವ ರಂಧ್ರವನ್ನು ಮುಚ್ಚಬೇಕೆಂದು ಹೊರಟ ನಾನು ಈ ದೇಹವೆಂಬ ಬಲಗಡೆ ಸುಳಿ ಇರುವ ಶಂಖವನ್ನು ಚೂರುಮಾಡಿ ದೆನು." ಅತಿ ತುಚ್ಛವಾದ ಮಣ್ಣಿನ ಮಡಕೆಯಲ್ಲಿ ಮರಳಿನಷ್ಟು ರಂಧ್ರವಿತ್ತು. ಅದನ್ನು ಮುಚ್ಚಲಿಕ್ಕಾಗಿ ಅಮೂಲ್ಯವಾದ ಶಂಖವನ್ನು ಪುಡಿಮಾಡಿದ್ದಾಯಿತು. ಸಂಸಾರದ ನ್ಯೂನತೆಗಳನ್ನು ಪರಿಹರಿಸಲು ದೇಹವನ್ನು ಉಪಯೋಗಿಸಿದ್ದಾಯಿತು. ಆತ್ಮ ಕ್ಷೇಮಲಾಭಕ್ಕೆ ಈ ದೇಹವನ್ನು ಉಪಯೋಗಿಸುವ ಬದಲು ಸಣ್ಣದೊಂದು ನ್ಯೂನತೆ ಯನ್ನು ತೊಲಗಿಸಲಿಕ್ಕಾಗಿ ಉಪಯೋಗಿಸಿದ್ದರಿಂದ ವೈರಾಗ್ಯವು ಹುಟ್ಟಿದೆ.

ರಘುವಂಶದಲ್ಲಿ ರಾಮನ ಸಂಹಾರಕ್ಕಾಗಿ ಬಂದ ಪರಶುರಾಮನು ಇಲ್ಲಿ ತಿಳಿಸು ತ್ತಾನೆ. "ಅರ್ಘ್ಯವನ್ನು ಸ್ವೀಕರಿಸು ಎಂದು ದಶರಥನು ಹೇಳುತ್ತಿದ್ದರೂ ಅದನ್ನು ತಿರಸ್ಕರಿಸಿ ಎಲ್ಲಿ ರಾಮನಿರುವನೋ ಆ ಕಡೆ ಕ್ಷತ್ರಿಯರ ಮೇಲಿನ ಕೋಪವೆಂಬ ಬೆಂಕಿ ಯಂತೆ ಉರಿಯುತ್ತ ಮೇಲಕ್ಕೆ ತಿರುಗಿಸಿದ ಕಣ್ಣುಗಳನ್ನು ಬಾಣಗಳಂತೆ ಪ್ರೇರಿಸಿದನು.

ದಾರಿದ್ರ್ಯದಿಂದಲೂ ಬೇಸರಿಕೆಯಿಂದಲೂ ಹುಟ್ಟಿ ದೇಹದಲ್ಲಿ ಮಾಯೆ ಮಾಲಿನ್ಯ ಗಳನ್ನು ಹುಟ್ಟಿಸುವ ಭಾವವೇ ದೈನ್ಯವೆನಿಸುವುದು. "ಮುದುಕನಾದ ನನ್ನ ಪತಿಯು ಮಂಚದಮೇಲೆ ಮಲಗಿರುವನು. ಮನೆಯಲ್ಲಿ ಒಂದು ಕಂಬವಷ್ಟೇ ಉಳಿದಿರುವುದು, ಮಳೆ ಬಿದ್ದರೆ ಇಲ್ಲಿ ಅವಶ್ಯವಾಗಿ ಸುರಿಯುವುದರಿಂದ ಇಲ್ಲಿ ಇರಲಿಕ್ಕೆ ಅವಕಾಶವು ಸಿಕ್ಕು

ವುದಿಲ್ಲ. ಮಳೆಗಾಲವೂ ಸಹ ಬಹಳ ಹತ್ತಿರದಲ್ಲಿಯೇ ಇದೆ. ಮಳೆಬೀಳಲಿಕ್ಕೆ ತಡವೇ ಇಲ್ಲ. ಜೀವಿಕೆಯನ್ನು ಸಂಪಾದಿಸಲು ದೇಶಾಂತರಕ್ಕೆ ಹೋಗಿರುವ ಮಗನ ವಾರ್ತೆಯೇ ಕೇಳಿಬಂದಿಲ್ಲ. ಭಯಕ್ಕೆ ಇದೂ ಒಂದು ಬಗೆಯ ಕಾರಣವೆನಿಸಿದೆ. ಬಹಳ ಕಷ್ಟಪಟ್ಟು ಸಂಗ್ರಹಿಸಿದ ಎಣ್ಣೆಯ ಗಡಿಗೆಯೂ ಒಡೆದುಹೋಯಿತೆಂದು ಅತ್ತೆಯು ದುಃಖ ಗೊಂಡಿರುವಳು. ಸೊಸೆಯು ಗರ್ಭಿಣಿಯಾಗಿದ್ದು ಗರ್ಭದ ಭಾರದಿಂದ ಆಲಸ್ಯ ಗೊಂಡಿರುವುದನ್ನು ನೋಡಿ ಆಕೆಯೂ ಬಹಳವಾಗಿ ಅಳುತ್ತಿರುವಳು" ಇಲ್ಲಿ ಪತಿ ಮುದುಕ ನಾಗಿ ಮಂಚದಮೇಲೆ ಕುಳಿತು ಮಗನು ಪರಸ್ಥಳಕ್ಕೆ ಹೋಗಿದ್ದು ಅತ್ತೆಯು ಚಿಂತೆಯಿಂದ ಇದ್ದು ಸೊಸೆಯ ಯೋಚನೆಯಲ್ಲಿ ಇರುವಳೆಂದು ಹೇಳಿದ್ದರಿಂದ ಇದೆಲ್ಲವೂ ಮನೆಯ ದೈನ್ಯಸ್ಥಿತಿಯನ್ನು ತಿಳಿಸುತ್ತದೆ.

ಅಥ ಶ್ರಮಃ—ರತ್ಯಧ್ವಗತ್ಯಾದೇಃ ಶ್ವಾಸನಿದ್ರಾದಿಕೃಚ್ಛ್ರಮಃ ॥

ಯಥಾ—ಸದ್ಯಃ ಪುರೀಪರಿಸರೇ ಚ ಶಿರೀಷಮೃದ್ವೀ
ಗತ್ವಾ ಜವಾತ್ ತ್ರಿಚತುರಾಣಿ ಪದಾನಿ ಸೀತಾ ।
ಗಂತವ್ಯಮಸ್ತಿ ಕಿಯದಿತ್ಯಸಕೃದ್ಬ್ರುವಾಣಾ
ರಾಮಾಶ್ರುಣಃ ಕೃತವತೀ ಪ್ರಥಮಾವತಾರಮ್ ॥

ಅಥ ಮದಃ—ಸಂಮೋಹಾನಂದಸಂಭೇದೋ ಮದೋ ಮದ್ಯೋಪಯೋಗಜಃ
ಅಮುನಾ ಚೋತ್ತಮಃ ಶೇತೇ ಮಧ್ಯೋ ಹಸತಿ ಗಾಯತಿ ।
ಅಧಮಪ್ರಕೃತಿಶ್ಚಾಪಿ ಪರುಷಂ ವಕ್ತಿ ರೋದಿತಿ ॥
ಪ್ರಾತಿಭಂ ತ್ರಿಸರಕೇಣ ಗತಾನಾಂ ವಕ್ರವಾಕ್ಯರಚನಾರಮಣೀಯಃ ।
ಗೂಢಸೂಚಿತರಹಸ್ಯಸಹಾಸಃ ಸುಭ್ರುವಾಂ ಪ್ರವವೃತೇ ಪರಿಹಾಸಃ ॥

ಅಥ ಜಡತಾ—ಅಪ್ರತಿಪತ್ತಿರ್ಜಡತಾ ಸ್ಯಾದಿಷ್ಟಾನಿಷ್ಟದರ್ಶನಶ್ರುತಿಭಿಃ ।
ಅನಿಮಿಷನಯನನಿರೀಕ್ಷಣತೂಷ್ಣೀಂಭಾವಾದಯಸ್ತತ್ರ ॥
ಯಥಾ ಮಮ ಕುವಲಯಾಶ್ವಚರಿತೇ ಪ್ರಾಕೃತಕಾವ್ಯೇ
ಕೇವಲಂ ತಮ್ಮುವಯುಗಳಂ ಅನ್ಯೋನ್ಯನಿಹಿತಸಜಲಮಂಥರದೃಷ್ಟಿ ।
ಆಲೇಖ್ಯಕಾರ್ಪಿತಮಿವ ಕ್ಷಣಮಾತ್ರಂ ತತ್ರ ಸ್ಥಿತಂ ಮುಕ್ತಸಂಗಮ್ ॥

ಅಥ ಉಗ್ರತಾ— ಶೌರ್ಯಾಪರಾಧಾದಿಭವಂ ಭವೇಚ್ಚಂಡತ್ವಮುಗ್ರತಾ ।
ತತ್ರ ಖೇದಃ ಶಿರಃಕಂಪತರ್ಜನಾತಾಡನಾದಃ ॥
ಪ್ರಣಯಿಸಖೀಸಲೀಲಪರಿಹಾಸರಸಾಧಿಗತೈಃ ।
ಲಲಿತಶಿರೀಷಪುಷ್ಪಹನನೈರಪಿ ತಾಮ್ಯತಿ ಯತ್ ॥
ವಪುಷಿ ವಧಾಯ ತತ್ರ ತವ ಶಸ್ತ್ರಮುಪಕ್ಷಿಪತಃ ।
ಪತತು ಶಿರಸ್ಯಕಾಂಡೇ ಯಮದಂಡ ಇವೈಷ ಭುಜಃ ।

ಅಥ ಮೋಹಃ— ಮೋಹೋ ವಿಚಿತ್ರತಾ ಭೀತಿದುಃಖಾವೇಗಾನುಚಿಂತನೈಃ ।
ಘೂರ್ಣನಾಗಾತ್ರಪತನಭ್ರಮಣಾದರ್ಶನಾದಿಕೃತ್ ॥

ತ್ರೀವ್ರಾಭಿಸಂಗಪ್ರಭವೇಣ ವೃತ್ತಿಂ ಮೋಹೇನ ಸಂಸ್ತಂಭಯತೇಂದ್ರಿಯಣಾಮ್।
ಅಜ್ಞಾತಭರ್ತೃವ್ಯಸನಾ ಮುಹೂರ್ತಂ ಕೃತೋಪಕಾರೇವ ರತಿರ್ಬಭೂವ ॥

ಅಥ ವಿಬೋಧಃ— ನಿದ್ರಾಪಗಮಹೇತುಭ್ಯೋ ವಿಭೋಧಶ್ಚೇತನಾಗಮಃ ।
ಜೃಂಭಾಂಗಭಂಗನಯನಮಿಾಲನಾಂಗಾವಲೋಕಕೃತ್ ॥

ಯಥಾ—ಚಿರರತಪರಿಖೇದಾತ್ ಪ್ರಾಪ್ತನಿದ್ರಾಸುಖಾನಾಂ
ಚರಮಮಪಿ ಶಯಿತ್ವಾ ಪೂರ್ವಮೇವ ಪ್ರಬುದ್ಧಾಃ ।
ಅಪರಿಚಲಿತಗಾತ್ರಾಃ ಕುರ್ವತೇ ನ ಪ್ರಿಯಾಣಾಂ
ಅಶಿಥಿಲಭುಜಚಕ್ರಾಶ್ಲೇಷಭೇದಂ ತರುಣ್ಯಃ ॥

ಅಥ ಸ್ವಪ್ನಃ— ಸ್ವಪ್ನೋ ನಿದ್ರಾ ಮುಖೇ ತಸ್ಯ ವಿಷಯಾನುಭವಸ್ತು ಯಃ ।
ಕೋಪಾವೇಗಭಯಗ್ಲಾನಿಸುಖದುಃಖಾದಿಕಾರಕಃ ॥

ಯಥಾ—ಮಾಮಾಕಾಶಪ್ರಣಿಹಿತಭುಜಂ ನಿರ್ದಯಾಶ್ಲೇಷಹೇತೋಃ ।
ಲಬ್ಧಾಯಾಸ್ತೇ ಕಥಮಪಿ ಮಯಾ ಸ್ವಪ್ನಸಂದರ್ಶನೇನ ॥
ಪಶ್ಯಂತೀನಾಂ ನ ಖಲು ಬಹುಶೋ ನ ಸ್ಥಲೀದೇವತಾನಾಂ ।
ಮುಕ್ತಾ ಸ್ಥೂಲಾಸ್ತರುಕಿಸಲಯೇಷ್ವಶ್ರುಲೇಶಾಃ ಪತಂತಿ ॥

ಅಥ ಅಪಸ್ಮಾರಃ—ಮನಃಕ್ಷೇಪಸ್ತ್ವಪಸ್ಮಾರಃ ಗ್ರಹಾದ್ಯಾವೇಶನಾದಿಜಃ ।
ಭೂಪಾತಕಂಪಪ್ರಸ್ವೇದಫೇನಲಾಲಾದಿಕಾರಕಃ ॥

ಯಥಾ—ಆಶ್ಲಿಷ್ಟಭೂಮಿಂ ರಸಿತಾರಮುಚ್ಚೈರ್ಲಲದ್ಭುಜಾಕಾರಬೃಹತ್ತರಂಗಮ್ ।
ಫೇನಾಯಮಾನಂ ಪತಿಮಾಪಗಾನಾಂ ಅಸಾವಪಸ್ಮಾರಿಣಮಾಶಶಂಕೇ ॥

ಅಥ ಗರ್ವಃ — ಗರ್ವೋ ಮದಃ ಪ್ರಭಾವಶ್ರೀವಿದ್ಯಾಸತ್ಕುಲಾದಿಜಃ ।
ಅವಜ್ಞಾಸವಿಲಾಸಂಗದರ್ಶನಾವಿನಯಾದಿಕೃತ್ ॥

ಯಥಾ—ಧೃತಾಯುಧೋ ಯಾವದಹಂ ತಾವದನ್ಯೈಃ ಕಿಮಾಯುಧೈಃ ।
ಯದ್ವಾ ನ ಸಿದ್ಧಿಮಸ್ತ್ರೇಣ ಮಮ ತತ್ಕೇನ ಸಾಧ್ಯತಾಮ್ ॥

ಅಥ ಮರಣಂ— ಶರಾದ್ಯೈರ್ಮರಣಂ ಜೀವತ್ಯಾಗೋಽಂಗಪತನಾದಿಕೃತ್ ।
ರಾಮಮನ್ಮಥಶರೇಣ ತಾಡಿತಾ ದುಸ್ಸಹೇನ ಹೃದಯೇ ನಿಶಾಚರೀ ।
ಗಂಧವದ್ರುಧಿರಚಂದನೋಕ್ಷಿತಾ ಜೀವಿತೇಶವಸತಿಂ ಜಗಾಮ ಸಾ ॥

ಅಥ ಆಲಸ್ಯಂ— ಆಲಸ್ಯಂ ಶ್ರಮಗರ್ಭಾದ್ಯೈಃ ಜಾಡ್ಯಂ ಜೃಂಭಾಸಿತಾದಿವತ್ ।
ತಥಾ ಭೂಷಯತ್ಯಂಗಂ ನ ತಥಾ ಭಾಷತೇ ಸಖೀಮ್ ।
ಜೃಂಭತೇ ಮುಹುರಾಸೀನಾ ಬಾಲಾ ಗರ್ಭಭರಾಲಸಾ ।

ಅಥ ಅಮರ್ಷಃ— ನಿಂದಾಕ್ಷೇಪಾಪಮಾನಾದೇಃ ಅಮರ್ಷೋಽಭಿನಿವಿಷ್ಟತಾ ।
ನೇತ್ರರಾಗಶಿರಂಕಂಪಭ್ರೂಭಂಗೋತ್ತರ್ಜನಾದಿಕೃತ್ ॥
ಪ್ರಾಯಶ್ಚಿತ್ತಂ ಚರಿಷ್ಯಾಮಿ ಪೂಜ್ಯಾನಾಂ ವೋ ವ್ಯತಿಕ್ರಮಾತ್ ।
ನ ತ್ವೇವಂ ದೂಷಯಿಷ್ಯಾಮಿ ಶಸ್ತ್ರಗ್ರಹಮಹಾವ್ರತಮ್ ॥

ಅಥ ನಿದ್ರಾ— ಚೇತಸ್ಸಂಮೀಲನಂ ನಿದ್ರಾ ಶ್ರಮಕ್ಲಮಮದಾದಿಜಮ್ ।
ಜಂಭಾಕ್ಷಿಮೀಲನೋಚ್ಛ್ವಾಸಗಾತ್ರಭಂಗಾದಿಕಾರಣಮ್ ॥
ಯಥಾ— ಸಾರ್ಥಕಾನರ್ಥಕಪದಂ ಬ್ರುವತೀ ಮಂಥರಾಕ್ಷರಮ್ ।
ನಿದ್ರಾರ್ಧಮೀಲಿತಾಕ್ಷೀ ಸಾ ಲಖಿತೇವಾಸ್ತಿ ಮೇ ಹೃದಿ ॥
ಅಥ ಅವಹಿತ್ಥಾ— ಭಯಗೌರವಲಜ್ಜಾದೇರ್ಹರ್ಷಾದ್ಯಾಕಾರಗುಪ್ತಿರವಹಿತ್ಥಾ ।
ವ್ಯಾಪಾರಾಂತರಸಕ್ತ್ಯನ್ಯಥಾವಭಾಷಣವಿಲೋಕನಾದಿಕರ್ಮ್ ॥
ಏವಂ ವಾದಿನಿ ದೇವರ್ಷೌ ಪಾರ್ಶ್ವೇ ಪಿತುರಧೋಮುಖೀ ।
ಲೀಲಾಕಮಲಪತ್ರಾಣಿ ಗಣಯಾಮಾಸ ಪಾರ್ವತೀ ॥

ಸುರತ, ಮಾರ್ಗಪ್ರಯಾಣ, ಮರವನ್ನು ಕಡಿಯುವುದು ಇವೇ ಮೊದಲಾದವುಗಳಿಂದ ಹುಟ್ಟಿ ದೀರ್ಘನಿಶ್ವಾಸ, ನಿದ್ರೆ ಮೊದಲಾದವುಗಳನ್ನು ಹುಟ್ಟಿಸುವ ಅವಸ್ಥೆಯೇ ಶ್ರಮವೆನಿಸುವುದು. ಅಯೋಧ್ಯೆಯಿಂದ ಸೀತಾರಾಮರೊಡನೆ ವನವಾಸಕ್ಕೆ ಹೊರಡುವ ಕಾಲದ ಅವಸ್ಥೆಯನ್ನು ವರ್ಣಿಸುವ ಪದ್ಯವಿದು. "ಶಿರೀಷಪುಷ್ಪದಂತೆ ಮೃದುವಾದ ಸೀತೆಯು ಅಯೋಧ್ಯೆಯ ಪಕ್ಕದಲ್ಲಿ ವೇಗದಿಂದ ಮೂರು ನಾಲ್ಕು ಹೆಜ್ಜೆಗಳನ್ನಿಟ್ಟು ಕಾಡನ್ನು ಸೇರಲು ಇನ್ನು ಎಷ್ಟುದೂರ ಹೋಗಬೇಕೆಂದು ಪದೇ ಪದೇ ಕೇಳುತ್ತ ರಾಮನಿಗೆ ಮೊದಲಬಾರಿಗೆ ಕಣ್ಣೀರನ್ನು ತರಿಸಿದಳು." ಇನ್ನು ಎಷ್ಟು ದೂರ ಹೋಗಬೇಕೆಂದು ಬಾರಿಬಾರಿಗೂ ಕೇಳಿದ್ದರಿಂದ ಸೀತೆಯ ವ್ಯಥೆಯು ತೋರಿಬರುವ ಪ್ರಯುಕ್ತ ಇದು ಶ್ರಮವೆನಿಸಿದೆ.

ಮದ್ಯವನ್ನು ಕುಡಿದದ್ದರಿಂದ ಹುಟ್ಟಿ ಮೋಹ ಮತ್ತು ಆನಂದ ಇವೆರಡೂ ಬೆರೆಯುವುದರಿಂದ ಉಂಟಾಗುವ ಅವಸ್ಥೆಯೇ ಮದವೆನಿಸುತ್ತದೆ. ಇದರಿಂದ ಉತ್ತಮಪ್ರಕೃತಿಯವನು ಸುಮ್ಮನೆ ಮಲಗಿರುವನು. ಮಧ್ಯಮಪ್ರಕೃತಿಯವನು ನಗುವನು, ನೀಚಪ್ರಕೃತಿಯವನು ಮಾತನಾಡುತ್ತಲೇ ಅಳುವನು. "ಮೂರುವೇಳೆ ಮದ್ಯವನ್ನು ಕುಡಿದದ್ದರಿಂದ ಹೆಚ್ಚು ಪ್ರಜ್ಞೆಯನ್ನು ಹೊಂದಿದ್ದ ಕಾಮಿನಿಯರ ವ್ಯಂಗ್ಯವಾದ ಮಾತಿನಿಂದ ರಮಣೀಯವೆನಿಸಿ, ಮೊದಲು ಗೋಪ್ಯವಾಗಿದ್ದ ಸುರತವ್ಯಾಪಾರಗಳನ್ನು ಬೆಳಗಿಸುವ ವಿಹಾರವು ಪ್ರಾರಂಭವಾಯಿತು." ಮಾಘದ ಹತ್ತನೆಯ ಸರ್ಗದ ಈ ಪದ್ಯವು ರಮಣಿಯರ ಮದವನ್ನು ತಿಳಿಸುತ್ತದೆ.

ಇಷ್ಟವೂ ಅನಿಷ್ಟವೂ ಆದದ್ದನ್ನು ನೋಡಿದ್ದರಿಂದಲೂ ಕೇಳಿದ್ದರಿಂದಲೂ ಮುಂದೆ ಏನು ಮಾಡಬೇಕೆಂಬುದೇ ತಿಳಿಯದಿರುವುದು ಜಡತೆ ಎನಿಸುವುದು. ಕುವಯಲಾಶ್ವಚರಿತೆ ಎಂಬ ಪ್ರಾಕೃತಕಾವ್ಯದಲ್ಲಿ ಹೀಗೆ ಹೇಳಿದೆ. "ಪರಸ್ಪರಸಂಪರ್ಕವನ್ನು ತೊರೆದ ಆ ಯುವಯುವತಿಯರಿಬ್ಬರು ಪರಸ್ಪರವಾಗಿ ರೆಪ್ಪೆಹೊಡೆಯದಂತೆ ನೋಡುತ್ತ ಕಣ್ಣೀರನ್ನು ಸುರಿಸುತ್ತ ಚಿತ್ರದ ಗೊಂಬೆಗಳಂತೆ ಕ್ಷಣಕಾಲದಲ್ಲಿ ತಟಸ್ಥವಾಗಿದ್ದರು." ಪರಸ್ಪರ ಇಷ್ಟವಾದ ತಮ್ಮಿಬ್ಬರನ್ನೇ ನೋಡುತ್ತ ನಿಂತಿದ್ದುದರಿಂದ ಯಾರಿಗೂ ಏನು ಮಾಡಬೇಕೆಂಬುದೇ ತಿಳಿಯದ ಪ್ರಯುಕ್ತ ಈ ಅವಸ್ಥೆಯು ಜಡತೆ ಎನಿಸಿದೆ.

ಶೌರ್ಯದಿಂದಲೂ, ಶತ್ರುವಿನ ಅಪರಾಧ ಮತ್ತು ಅಪಕಾರಗಳಿಂದಲೂ ಹೆಚ್ಚು ಕೋಪಗೊಳ್ಳುವುದೇ ಉಗ್ರತೆ ಎನಿಸುವುದು. ಇದು ಇರುವ ಕಾಲದಲ್ಲಿ ಬೆವರು, ತಲೆ ಅಳ್ಳಾಡಿಸುವಿಕೆ, ಬೆದರಿಕೆ, ಹೊಡೆಯುವುದು ಇಂತಹ ಅವಸ್ಥೆಗಳು ಉಂಟಾಗುತ್ತವೆ. ಮಾಲತೀ ಮಾಧವದಲ್ಲಿ ಮಾಲತಿಯನ್ನು ಕೊಲ್ಲಲು ತಯಾರಾಗಿರುವ ಅಘೋರಘಂಟ ನಿಗೆ ಮಾಧವನು ಹೇಳುವ ಮಾತಿದು. "ಪ್ರಣಯಿಜನರನ್ನು ಪ್ರೇಮದಿಂದ ಹಾಸ್ಯ ಮಾಡುವಾಗ ಉಪಯೋಗಿಸುವ ಶಿರೀಷಪುಷ್ಪದ ಹೊಡೆತಗಳಿಂದಲೇ ಈ ಶರೀರವು ವ್ಯಥೆಪಡುತ್ತದೆ. ಹೀಗಿರುವಾಗ ಇಂತಹ ಶರೀರದಲ್ಲಿ ಕೊಲೆಗಾಗಿ ಶಸ್ತ್ರವನ್ನಿಡುವ ನಿನ್ನ ಶಿರಸ್ಸಿನಲ್ಲಿ ಅಕಾಲದಲ್ಲಿ ಬೀಳುವ ಯಮದಂಡದಂತೆ ಈ ಬಲಭುಜವು ಬೀಳಲಿ" ಇಲ್ಲಿ ಅಘೋರಘಂಟನು ಮಾಲತಿಯನ್ನು ಕೊಲ್ಲಲು ಪ್ರಯತ್ನಮಾಡುತ್ತಿರುವುದೇ ಒಂದು ಅಪರಾಧವೆನಿಸಿದೆ. ಇದರಿಂದ ಮಾಧವನಿಗೆ ಹೆಚ್ಚು ಕೋಪ ಬರುವುದರಿಂದ ಇದು ಉಗ್ರತೆ ಎನಿಸಿದೆ.

ಭಯ, ದುಃಖ, ಆವೇಗ, ಉತ್ಕಟವಾದ ಚಿಂತೆ ಇವುಗಳಿಂದ ಹುಟ್ಟಿ ಕಣ್ಣು ಗಳನ್ನು ತಿರುಗಿಸುವಂತೆಯೂ, ನೆಲದ ಮೇಲೆ ಹೊರಳಾಡುವಂತೆಯೂ, ಓಡಾಡು ವಂತೆಯೂ, ಕಣ್ಣಿಗೆ ಕಾಣಿಸದಂತೆಯೂ (ಆತ್ಮಹತ್ಯೆ) ಮಾಡಿಸುವ ವಿಷಮವಾದ ಅವಸ್ಥೆಯೇ ಮೋಹವೆನಿಸುವುದು. ಕುಮಾರಸಂಭವದಲ್ಲಿ ಮನ್ಮಥನನ್ನು ಸುಟ್ಟಮೇಲೆ ರತಿಯ ಅವಸ್ಥೆಯನ್ನು ತಿಳಿಸುವ ಪದ್ಯವಿದು. "ಪತಿಯ ಮರಣದ ಹೆಚ್ಚು ಶೋಕ ದಿಂದ ಹುಟ್ಟಿ ಇಂದ್ರಿಯಗಳ ವ್ಯಾಪಾರವನ್ನು ತಡೆದು ನಿಲ್ಲಿಸಿದ ಮೋಹದಿಂದ ರತೀ ದೇವಿಯು ಪತಿವಿಯೋಗದಿಂದ ಉಂಟಾದ ವ್ಯಸನವನ್ನರಿಯದೆ ಒಂದು ಗಳಿಗೆಯವರೆಗೆ ಉಪಕಾರವನ್ನು ಹೊಂದಿದಳೋ ಎನೋ ಎಂಬಂತೆ ಶಾಂತವಾಗಿದ್ದಳು". ಆಕೆಯು ದುಃಖವೇನೆಂಬುದನ್ನೇ ತಿಳಿಯದಂತೆ ಮಾಡಿದ ಮೋಹವನ್ನು ಇಲ್ಲಿ ತಿಳಿಸುತ್ತಾನೆ.

ನಿದ್ರೆಯನ್ನು ತೊಲಗಿಸುವ ಕಾರಣಗಳಿಂದ ಹುಟ್ಟಿ ಆಕಳಿಕೆ, ಅವಯವಗಳನ್ನು ಮುಂದಕ್ಕೆ ಚಾಚುವುದು, ಕಣ್ಣುಗಳನ್ನು ಮುಚ್ಚುವುದು, ಅವಯವಗಳನ್ನೇ ನೋಡು ವುದು ಇವೇ ಮೊದಲಾದ ಸ್ಥಿತಿಯನ್ನು ಉಂಟುಮಾಡುವ ಎಚ್ಚರಿಕೆಯೇ ವಿಬೋಧ ವೆನಿಸುತ್ತದೆ. ಮಲಗಿದ್ದಾಗ ಯಾರಾದರೂ ಕರೆದರೆ ಆ ಕಾಲದಲ್ಲಿ ಎಚ್ಚರಗೊಂಡವನು ಹೀಗೆಲ್ಲಾ ಮಾಡುವುದು ಸಹಜ. ಶಿಶುಪಾಲವಧದಲ್ಲಿ ಪ್ರಭಾತಕಾಲದ ವರ್ಣನದಲ್ಲಿ ಬರುವ ಪದ್ಯವಿದು."ಮೊದಲೇ ಎಚ್ಚರಗೊಂಡ ತರುಣಿಯರು ಪ್ರಿಯನ ನಿದ್ರೆಗೆ ಭಂಗ ವಾಗಬಾರದೆಂದು ತಮ್ಮ ಮೈಯನ್ನು ಅಳ್ಳಾಡಿಸಿದಂತೆ ಇದ್ದು ಬಹಳಕಾಲ ತಮ್ಮೊಡನೆ ರಮಿಸಿದ್ದರಿಂದ ಆಯಾಸಗೊಂಡು ನಿದ್ರೆಯನ್ನು ಅನುಭವಿಸುತ್ತಿದ್ದ ಪತಿಯರಿಗೆ ಗಟ್ಟಿ ಯಾದ ತೋಳುಗಳೊಡನೆ ಆಲಿಂಗನಕ್ಕೆ ಅಡ್ಡಿಮಾಡಲಿಲ್ಲ." ಇಲ್ಲಿ ಕಾಲನಿಯಮದಂತೆ ರೆಪ್ಪೆಗಳನ್ನು ತೆರೆಯುವಂತೆ ಮಾಡಿದ್ದರಿಂದ ತರುಣಿಯರ ಎಚ್ಚರಿಕೆಯನ್ನು ತಿಳಿಸಿದೆ.

ನಿದ್ರೆಯಲ್ಲಿರುವವನು ವಿಷಯಗಳನ್ನು ಅನುಭವಿಸುವುದೇ ಸ್ವಪ್ನವೆನಿಸುತ್ತದೆ. ಇದರಿಂದ ಕೋಪ, ಆವೇಗ, ಭಯ, ಗ್ಲಾನಿ, ಸುಖ, ದುಃಖ ಇವುಗಳು ಉಂಟಾಗುತ್ತವೆ.

ಮೇಘದೂತದಲ್ಲಿ ಯಕ್ಷನು ಹೇಳುವ ಮಾತಿದು. "ಸ್ವಪ್ನದಲ್ಲಿ ನಿನ್ನನ್ನು ನೋಡಿ ಆಗ ಲಾದರೂ ಆಲಿಂಗಿಸಬೇಕೆಂಬ ಗಾಢವಾದ ಇಚ್ಛೆಯಿಂದ ನಾನು ಬಯಲಿನಲ್ಲಿ ತೋಳು ಗಳನ್ನು ನೀಡಿದಾಗ ವನದೇವತೆಗಳೆಲ್ಲರಿಗೂ ಮುತ್ತಿನ ಮಣಿಗಳಂತೆ ಹೊರಗೆ ಬರುವ ಕಣ್ಣೀರಿನ ಹನಿಗಳು ಮರದ ಚಿಗುರುಗಳಲ್ಲಿ ಅನೇಕ ವೇಳೆ ಬೀಳುವುದಿಲ್ಲವೆಂಬುದೇ ಇಲ್ಲ. ಅಂದರೆ ಅಲ್ಲಿ ವಿಶೇಷವಾಗಿ ಬಿದ್ದೇ ಬೀಳುತ್ತವೆ ಎಂದು ಹೇಳಿದಂತಾಯಿತು. ನನ್ನ ಅವಸ್ಥೆಯನ್ನು ನೋಡಿ ವನದೇವತೆಗಳೂ ಸಹ ಅಳುತ್ತಾರೆ'' ಇಲ್ಲಿ ಯಕ್ಷನಿಗೆ ಆಕಾಶದಲ್ಲಿ ತೋಳುಗಳನ್ನು ನೀಡಿ ಪ್ರಿಯೆಯನ್ನು ಆಲಿಂಗಿಸಿದ ಅನುಭವವುಂಟಾಗುವುದ ರಿಂದ ಇದು ಸ್ವಪ್ನವೆನಿಸಿದೆ.

ಗ್ರಹಗಳು ಮತ್ತು ಭೂತಗಳ ಆವೇಶದಿಂದ ಹುಟ್ಟಿ ನೆಲದಮೇಲೆ ಬೀಳುವುದು, ನಡುಗುವುದು, ಬೆವರು, ನೊರೆ, ಜೊಲ್ಲು ಇವನ್ನು ಹುಟ್ಟಿಸುವ ಅವಸ್ಥೆಯೇ ಅಪಸ್ಮಾರ ವೆನಿಸುತ್ತದೆ. ಆ ಕಾಲದಲ್ಲಿ ಹೊರಗಿನ ವಿಷಯಗಳನ್ನು ತಿಳಿಯುವ ಸಾಮರ್ಥ್ಯವಿರುವು ದಿಲ್ಲ. ಶಿಶುಪಾಲವಧೆಯಲ್ಲಿ ಸಮುದ್ರವನ್ನು ವರ್ಣಿಸುವಾಗ ಬರುವ ಪದ್ಯವಿದು. "ಭೂಮಿ ಯನ್ನು ಆಲಿಂಗಿಸಿಕೊಂಡು, ಗಟ್ಟಿಯಾಗಿ ಶಬ್ದ ಮಾಡುತ್ತಲೂ, ತೋಳುಗಳಂತೆ ಇದ್ದ ದೊಡ್ಡ ಅಲೆಗಳನ್ನು ಅಳ್ಳಾಡಿಸುತ್ತಲೂ, ನೊರೆಯನ್ನು ಸುರಿಸುತ್ತಲೂ ಇರುವ ಸಮುದ್ರ ನಿಗೆ ಅಪಸ್ಮಾರರೋಗವು ಬಂದಿದೆಯೋ ಏನೋ ಎಂದು ಕೃಷ್ಣನು ಊಹಿಸಿದನು'' ಇಲ್ಲಿ ಅಪಸ್ಮಾರದ ಲಕ್ಷಣವು ಪೂರ್ತಿಯಾಗಿ ಕಂಡುಬಂದಿದೆ.

ಪ್ರತಾಪ, ಸೌಂದರ್ಯ; ಶಾಸ್ತ್ರಜ್ಞಾನ, ಸದ್ವಂಶದಲ್ಲಿ ಹುಟ್ಟುವಿಕೆ ಇವುಗಳಿಂದ ತೋರಿ ಬೇರೆಯವರನ್ನು ಹಾಸ್ಯಮಾಡುವಂತೆಯೂ, ವಿಲಾಸದಿಂದ ಅವಯವಗಳನ್ನು ನೋಡಿಕೊಳ್ಳುವಂತೆಯೂ, ತನ್ನನ್ನು ಪ್ರಶಂಸಿಸುವಂತೆಯೂ ದುರ್ನಡತೆಯನ್ನು ಉಂಟುಮಾಡುವ ಅವಸ್ಥೆಯೇ ಗರ್ವವೆನಿಸುತ್ತದೆ. ವೇಣೀಸಂಹಾರದಲ್ಲಿ ಕರ್ಣನು ಹೇಳುವ ಮಾತಿದು. "ನಾನು ಆಯುಧವನ್ನು ಹಿಡಿದಮೇಲೆ ಬೇರೆಯವರ ಆಯುಧ ಗಳಿಂದ ಆಗುವುದೇನಿದೆ? ಅಥವಾ ನನ್ನ ಶಸ್ತ್ರದಿಂದ ಕಾರ್ಯಸಾಧನವಾಗದಿದ್ದರೆ ಬೇರೆ ಯಾರಿಂದ ಆದೀತು? ನನ್ನಿಂದಾಗದಿದ್ದರೆ ಬೇರೆ ಯಾರಿಂದಲೂ ಆಗದು." ಇಲ್ಲಿ ಹೇಳುವವನು ಶೌರ್ಯದಿಂದ ಆತ್ಮಪ್ರಶಂಸೆಯನ್ನು ಮಾಡಿಕೊಂಡಿರುವುದರಿಂದ ಇದು ಅವನ ಗರ್ವವನ್ನು ತಿಳಿಸುತ್ತದೆ.

ಬಾಣಪ್ರಯೋಗವೇ ಮೊದಲಾದ ಕಾರಣಗಳಿಂದ ಹುಟ್ಟಿ ರಕ್ತವನ್ನು ಸುರಿಸು ವುದು, ನೆಲದ ಮೇಲೆ ಬೀಳುವುದು ಇವೇ ಮೊದಲಾದ ಅವಸ್ಥೆಗಳನ್ನು ಹುಟ್ಟಿಸುವಂತೆ ಜೀವನದ ಕೊನೆಯ ಸ್ಥಿತಿಯೇ ಮರಣವೆನಿಸುವುದು. ರಘುವಂಶದಲ್ಲಿ ತಾಟಕಿಯ ವಧೆಯನ್ನು ವರ್ಣಿಸುವ ಪದ್ಯವಿದು. "ಆ ರಾಕ್ಷಸಿಯು ರಾಮನೆಂಬ ಮನ್ಮಥನ ತೀಕ್ಷ್ಣವಾದ ಬಾಣಕ್ಕೆ ಸಿಲುಕಿ ಸಹಿಸಲಾಗದೆ, ಸುಗಂಧವೂ ದುರ್ಗಂಧವೂ ಆದ ರಕ್ತಚಂದನವನ್ನು ಮೈಗೆಲ್ಲಾ ಬಳಿದುಕೊಂಡು ಜೀವಸ್ವಾಮಿ ಎನಿಸಿದ ಯಮನಮನೆಗೆ ಹೊರಟಳು." ಇಲ್ಲಿ ಬಾಣದ ಹೊಡೆತದಿಂದ ರಾಕ್ಷಸಿಯ ಮರಣವು ತಿಳಿದುಬರುತ್ತದೆ.

ಆಯಾಸ, ಗರ್ಭಧಾರಣ, ರಾತ್ರಿಜಾಗರಣ ಇವೇ ಮೊದಲದ ಕಾರಣಗಳಿಂದ ಹುಟ್ಟಿ ಆಕಳಿಕೆ, ಕೆಲಸವಿಲ್ಲದೆ ಕುಳಿತಿರುವುದು, ಮಲಗುವುದು ಹೀಗೆ ಮಾಡುವ ಅವಸ್ಥೆಯೇ ಆಲಸ್ಯವೆನಿಸುವುದು. "ಗರ್ಭದ ಭಾರದಿಂದ ಆಲಸ್ಯಗೊಂಡ ಪ್ರೇಯಸಿ ಹಿಂದಿನಂತೆ ಅವಯವಗಳನ್ನು ಅಲಂಕರಿಸಿಕೊಳ್ಳುವುದಿಲ್ಲ; ಸಖಿಯರೊಡನೆ ಮಾತನಾಡು ವುದಿಲ್ಲ. ಯಾವಾಗಲೂ ಕುಳಿತುಕೊಂಡೇ ಬಾರಿ ಬಾರಿಗೂ ಆಕಳಿಸುವಳು" ಇಲ್ಲಿ ಗರ್ಭಿಣಿಗೆ ಈ ಬಗೆಯ ವಿಕಾರವು ಸಂಭವವೆನಿಸಿದೆ.

ನಿಂದೆ, (ಶಾಂತರೀತಿಯಲ್ಲಿ ದೋಷವನ್ನು ಎತ್ತಾಡುವುದು) ಆಕ್ಷೇಪ, ಉಗ್ರ ಭಾವದಿಂದ ಗದರಿಸುವುದು, ಹೊಲ ಹೆಂಡತಿ ಇವರನ್ನು ಅಪಹರಿಸುವುದು, ಅವಮಾನ ಪಡಿಸುವುದು ಇವುಗಳಿಂದ ಹುಟ್ಟುವ ಅಭಿನಿವೇಶವೇ ಅಮರ್ಷವೆನಿಸುವುದು, ಇದರಿಂದ ಕಣ್ಣುಗಳು ಕೆಂಪೇರುವುದು, ತಲೆ ನಡುಗುವುದು, ಹುಬ್ಬುಗಂಟುಹಾಕುವುದು, ಮಾತಿ ನಿಂದ ಬೆದರಿಸುವುದು ಇವೇ ಮೊದಲಾದ ಕಾರ್ಯಗಳು ನಡೆಯುತ್ತವೆ. ಮಹಾವೀರ ಚರಿತದಲ್ಲಿ ವಸಿಷ್ಠ ವಿಶ್ವಾಮಿತ್ರ ಮೊದಲಾದವರನ್ನು ಕುರಿತು ಪರಶುರಾಮನು ಹೇಳುವ ಮಾತಿದು. "ಪೂಜ್ಯರಾದ ನಿಮ್ಮ ಮಾತನ್ನು ಅತಿಕ್ರಮಿಸಿ ನಡೆದದ್ದರಿಂದ ಪ್ರಾಯಶ್ಚಿತ್ತ ವನ್ನಾಚರಿಸುವೆನು. ಆದರೆ ಶಸ್ತ್ರದನ್ನು ಹಿಡಿಯಬೇಕೆಂಬ ಮಹಾವ್ರತವನ್ನು ಮಾತ್ರ ತೊರೆಯಲಾರೆನು, ಗುರುವಾಕ್ಯವನ್ನು ಮೀರುವುದಕ್ಕಿಂತಲೂ ಮಹಾವ್ರತವನ್ನು ತೊರೆಯುವುದರಿಂದ ಹೆಚ್ಚು ಪಾಪವು ಬರುವುದು." ಇಲ್ಲಿ ರಾಮನು ಶಿವಧನುಸ್ಸನ್ನು ಮುರಿದಿದ್ದರಿಂದ ತನ್ನ ಗುರುವಾದ ಶಿವನಿಗೆ ಅಪಮಾನವಾಯಿತೆಂದು ಪರಶುರಾಮನು ಹೀಗೆ ಪ್ರತಜ್ಞೆ ಮಾಡುವಪ್ರಯುಕ್ತ ಇದು ಅವನ ಅಮರ್ಷವನ್ನು ತಿಳಿಸುತ್ತದೆ.

ಆಯಾಸ (ಮಾನಸಿಕ), ಕ್ಲಮ (ದೈಹಿಕಶ್ರಮ) ಔಷಧಸೇವನೆ ಇವೇ ಮೊದ ಲಾದ ಕಾರಣಗಳಿಂದ ಉಂಟಾಗುವ ಅವಸ್ಥೆಯೇ ನಿದ್ರೆ ಎನಿಸುವುದು. ಇದರಿಂದ ಆಕಳಿಕೆ, ಕಣ್ಣು ಮುಚ್ಚುವುದು, ದೀರ್ಘನಿಶ್ವಾಸ, ಅವಯವಗಳನ್ನು ಮುಂದಕ್ಕೆ ಚಾಚುವುದು, ಮಲಗುವುದು ಇವೆಲ್ಲವೂ ಉಂಟಾಗುತ್ತವೆ. ಈ ಕಾಲದಲ್ಲಿ ಮೇಧ್ಯವೆಂಬ ನಾಡಿಯೊಳಗೆ ಚೇತನವು ದೃಢವಾಗಿ ನೆಲಸುವುದು. ಸಖಿಯ ಬಳಿಯಲ್ಲಿ ವಿರಹಿಯೊಬ್ಬನು ಹೇಳುವ ಮಾತಿದು. "ನಿದ್ರೆಯಿಂದ ಕಣ್ಣುಗಳನ್ನು ಅರ್ಧ ಮುಚ್ಚಿದ ಆಕೆಯು ಅಸ್ಪಷ್ಟವಾದ ಅಕ್ಷರಗಳಿಂದ ಅರ್ಥವಿರುವಂತೆಯೂ ಅರ್ಥವಿಲ್ಲದಂತೆಯೂ ಮಾತನಾಡುತ್ತಲೇ ನನ್ನ ಹೃದಯದಲ್ಲಿ ಕೆತ್ತಿದ ಗೊಂಬೆಯಂತೆ ನೆಲಸಿದಳು." ಇಲ್ಲಿ ರತಿಶ್ರಮದಿಂದ ನಿದ್ರೆ ಬಂದು ಕಣ್ಣುಗಳನ್ನು ಮುಚ್ಚಿಕೊಂಡಿರುವ ನಾಯಿಕೆಯ ನಿದ್ರಾವಸ್ಥೆಯನ್ನು ತಿಳಿಸಲಾಗಿದೆ.

ಭಯ, ಗೌರವ, ಲಜ್ಜೆ, ಬಟ್ಟೆಯನ್ನು ಮುಚ್ಚಿಕೊಳ್ಳುವುದು, ಇವೇ ಮೊದಲಾದ ಕಾರಣಗಳಿಂದ ಹುಟ್ಟುವ ಅವಸ್ಥೆಯೇ ಅವಹಿತ್ಥೆ ಎನಿಸುವುದು. ಇದರಿಂದ ಬೇರೆ ಕಾರ್ಯದಲ್ಲಿ ಆಸಕ್ತಿ, ಬೇರೆ ರೀತಿಯಲ್ಲಿ ಕಾಣಿಸಿಕೊಳ್ಳುವುದು, ಒಂದು ಕಡೆಯಿಂದ ಮತ್ತೊಂದುಕಡೆಗೆ ಎದ್ದು ಹೋಗುವುದು ಇವೆಲ್ಲವೂ ಉಂಟಾಗುತ್ತವೆ. ಮುಖವು

ವಿಕಾಸಗೊಳ್ಳುವುದು, ರೋಮಾಂಚ ಇವೇ ಮೊದಲಾದ ಆಕಾರಗಳನ್ನು ಮುಚ್ಚುವುದೇ ಅವಹಿತ್ಥೆ ಎನಿಸುವುದು. ಕುಮಾರಸಂಭವದಲ್ಲಿ ನಾರದ ಹಿಮಾಲಯ ಇವರಿಬ್ಬರೂ ಪಾರ್ವತಿಯ ವಿವಾಹದ ಬಗ್ಗೆ ಮಾತನಾಡುತ್ತಿರಲು ಪಕ್ಕದಲ್ಲಿದ್ದ ಪಾರ್ವತಿಯು ಏನು ಮಾಡಿದಳೆಂಬುದನ್ನು ಇಲ್ಲಿ ತಿಳಿಸುತ್ತಾನೆ. "ನಾರದಮಹರ್ಷಿಯು ಹೀಗೆ ಹೇಳಲು ಪಾರ್ವತಿಯು ತಂದೆಯ ಸಮೀಪದಲ್ಲಿ ತಲೆಯನ್ನು ತಗ್ಗಿಸಿಕೊಂಡು ನಿಂತಿದ್ದು ಕೈಯಲ್ಲಿ ವಿನೋದಕ್ಕಾಗಿ ಹಿಡಿದಿದ್ದ ಕಮಲದ ದಳಗಳನ್ನು ಎಣಿಕೆಮಾಡಿದಳು." ತನ್ನ ಮದುವೆಯ ವಿಚಾರವಾಗಿ ಮಾತನಾಡಿದ್ದರಿಂದ ಮುಖವು ಸಂತೋಷದಿಂದ ವಿಕಾಸ ವಾಗಿದ್ದು, ಕಮಲದ ದಳಗಳ ಎಣಿಕೆಯಿಂದ ಪಾರ್ವತಿಯು ತನ್ನ ಭಾವವನ್ನು ಮುಚ್ಚಿದ್ದ ರಿಂದ ಇದು ಅವಹಿತ್ಥೆ ಎನಿಸಿದೆ.

ಅಥ ಔತ್ಸುಕ್ಯಂ— ಇಷ್ಟಾನವಾಪ್ತೇರೌತ್ಸುಕ್ಯಂ ಕಾಲಕ್ಷೇಪಾಸಹಿಷ್ಣುತಾ ।
ಚಿತ್ತತಾಪತ್ವರಾಸ್ವೇದದೀರ್ಘನಿಶ್ವಾಸಿತಾದಿಕೃತ್ ॥
ಯಃ ಕೌಮಾರಹರಸ್ಸ ಏವ ಹಿ ವರಸ್ತಾ ಏವ ಚೈತ್ರಕ್ಷಪಾಃ
ತೇ ಚೋನ್ಮೀಲಿತಮಾಲತೀಸುರಭಯಃ ಪ್ರೌಢಾಃ ಕದಂಬಾನಿಲಾಃ ॥
ಸಾ ಚೈವಾಸ್ಮಿ ತಥಾಪಿ ತತ್ರ ಸುರತವ್ಯಾಪಾರಲೀಲಾವಿಧೌ ।
ರೇವಾರೋಧಸಿ ವೇತಸೀತರುತಲೇ ಚೇತಸ್ಸಮುತ್ಕಂಠತೇ ॥

ಅತ್ರ ಯತ್ ಕಾವ್ಯಪ್ರಕಾಶಕಾರೇಣ ರಸಸ್ಯ ಪ್ರಾಧಾನ್ಯಮಿತ್ಯುಕ್ತಂ ತದ್ರಸನ ಧರ್ಮಯೋಗಿತ್ವಾತ್ ವ್ಯಭಿಚಾರಿಭಾವಸ್ಯಾಪಿ ರಸಶಬ್ದವಾಚ್ಯತ್ವೇನ ಗತಾರ್ಥಂ ಮಂತವ್ಯಮ್.

ಅಥ ಉನ್ಮಾದಃ— ಚಿತ್ತಸಂಮ್ಮೋಹ ಉನ್ಮಾದಃ ಕಾಮಶೋಕಭಯಾದಿಭಿಃ ।
ಅಸ್ಥಾನಹಾಸರುದಿತಗೀತಪ್ರಲಪನಾದಿಕೃತ್ ॥

ಯಥಾ ಮಮ— ಭ್ರಾತರ್ದ್ವಿರೇಫ ಭವತಾ ಭ್ರಮಿತಾ ಸಮಂತಾತ್
ಪ್ರಾಣಾಧಿಕಾ ಪ್ರಿಯತಮಾ ಮಮ ವೀಕ್ಷಿತಾ ಕಿಮ್ ।
(ಝುಂಕಾರಮನುಭೂಯ ಸಾನಂದಂ) ಬ್ರೂಷೇ ಕಿಮೋಮಿತಿ ಸಖೇ ಕಥಯಾಶು ತನ್ಮೇ
ಕಿಂ ಕಿಂ ವ್ಯವಸ್ಯತಿ ಕುತೋಽಸ್ತಿ ಚ ಕೀದೃಶೀಯಮ್ ॥

ಅಥ ಶಂಕಾ—ಪರಕ್ರೌರ್ಯಾತ್ಮದೋಷಾದ್ಯೈಃ ಶಂಕಾನರ್ಥಸ್ಯ ತರ್ಕಣಮ್ ।
ವೈವರ್ಣ್ಯಕಂಪವೈಸ್ವರ್ಯಪಾರ್ಶ್ವಾಲೋಕಾಸ್ಯಶೋಷಕೃತ್ ॥

ಯಥಾ ಮಮ— ಪ್ರಾಣೇಶೇನ ಪ್ರಹಿತನಖರೇಷ್ವಂಗಕೇಷು ಕ್ಷಪಾಂತೇ
ಜಾತಾತಂಕಾ ರಚಯತಿ ಚಿರಂ ಚಂದನಾಲೇಪಜಾನಿ ।
ಧತ್ತೇ ಲಾಕ್ಷಾಮಸಕೃದಧರೇ ದತ್ತದಂತಾವಘಾತೇ
ಕ್ಷಾಮಾಂಗೀಯಂ ಚಕಿತಮಭಿತಶ್ಚಕ್ಷುಷೀ ವಿಕ್ಷಿಪಂತೀ ॥

ಅಥ ಸ್ಮೃತಿ— ಸದೃಶಜ್ಞಾನಚಿಂತಾದ್ಯೈಃ ಭ್ರೂಸಮುನ್ನಮನಾದಿಕೃತ್ ।

ಸ್ಮೃತಿಃ ಪೂರ್ವಾನುಭೂತಾರ್ಥವಿಷಯಜ್ಞಾನಮುಚ್ಯತೇ ॥
ಯಥಾ ಮಮ—ಮಯಿ ಸಕಪಟಂ ಕಿಂಚಿತ್ ಕ್ವಾಪಿ ಪ್ರಣೀತವಿಲೋಚನೇ
ಕಿಮಪಿ ನಯನಂ ಪ್ರಾಪ್ತೇ ತಿರ್ಯಗ್ವಿಜೃಂಭಿತತಾರಕಮ್ ।
ಸ್ಮಿತಮುಪಗತಾಮಾಲೀಂ ದೃಷ್ಟ್ವಾ ಸಲಜ್ಜಮವಾಂಚಿತಂ
ಕುವಲಯದೃಶಃ ಸ್ಮೇರಸ್ಮೇರಂ ಸ್ಮರಾಮಿ ತದಾನನಮ್ ॥
ಅಥ ಮತಿಃ— ನೀತಿಮಾರ್ಗಾನುಸೃತ್ಯಾದೇರರ್ಥನಿರ್ಧಾರಣಂ ಮತಿಃ ।
ಸ್ಮೇರತಾ ಧೃತಿಸಂತೋಷೌ ಬಹುಮಾನಶ್ಚ ತದ್ಭವಾಃ ॥
ಯಥಾ-ಅಸಂಶಯಂ ಕ್ಷತ್ರಪರಿಗ್ರಹಕ್ಷಮಾ ಯದಾರ್ಯಮಸ್ಯಾಮಭಿಲಾಷಿ ಮೇ ಮನಃ।
ಸತಾಂ ಹಿ ಸಂದೇಹಪದೇಷು ವಸ್ತುಷು ಪ್ರಮಾಣಮಂತಃಕರಣಪ್ರವೃತ್ತಯಃ॥
ಅಥ ವ್ಯಾಧಿಃ— ವ್ಯಾಧಿರ್ಜ್ವರಾದಿವಾತಾರ್ದ್ಯೈರ್ಭೂಮೀಚ್ಛೋತ್ಕಂಪನಾದಿಕೃತ್
ತತ್ರ ದಾಹಮಯತ್ವೇ ಭೂಮೀಚ್ಛಾದಯಃ, ಶೈತ್ಯಮಯತ್ವೇ ಉತ್ಕಂಪನಾದಯಃ ಸ್ಪಷ್ಟಮುದಾಹರಣಮ್.
ಯಥಾ— ದತ್ತ್ವಾ ಕಟಾಕ್ಷಮೇಣಾಕ್ಷ್ಯಾ ಗೃಹೀತಂ ಹೃದಯಂ ಮಮ ।
ಮಯಾಪಿ ಹೃದಯಂ ದತ್ತ್ವಾ ಗೃಹೀತೋ ಮದನಜ್ವರಃ ॥
ಅಥ ತ್ರಾಸಃ—ನಿರ್ಘಾತವಿದ್ಯುದುಲ್ಕಾದ್ಯೈಸ್ತ್ರಾಸಃ ಕಂಪಾದಿಕಾರಕಃ ।
ಪರಿಸ್ಫುರನ್ಮೀನವಿಘಟ್ಟಿತೋರವಃ ಸುರಾಂಗನಾಸ್ತ್ರಾಸವಿಲೋಲದೃಷ್ಟಯಃ।
ಉಪಾಯಯುಃ ಕಂಪಿತಪಾಣಿಪಲ್ಲವಾಃ ಸಖೀಜನಸ್ಯಾಪಿ ವಿಲೋಕನೀಯತಾಮ್॥
ಅಥ ವ್ರೀಡಾ—ಧಾರ್ಷ್ಟ್ಯಾಭಾವೋ ವ್ರೀಡಾ ವದನಾನಮನಾದಿಕೃದ್ದುರಾಚಾರಾತ್।
ಯಥಾ 'ಮಯಿ ಸಕಪಟಮ್' ಇತ್ಯಾದಿ.
ಅಥ ಹರ್ಷಃ— ಹರ್ಷಸ್ತ್ವಿಷ್ಟಾವಾಪ್ತೇರ್ಮನಃಪ್ರಸಾದೋಽಶ್ರುಗದ್ಗದಾದಿಕರಃ ।
ಯಥಾ-ಸಮೀಕ್ಷ್ಯ ಪುತ್ರಸ್ಯ ಚಿರಾತ್ಪಿತಾ ಮುಖಂ ನಿಧಾನಕುಂಭಸ್ಯ ಯಥೈವ ದುರ್ಗತಃ
ಮುದಾ ಶರೀರೇ ಪ್ರಬಭೂವ ನಾತ್ಮನಃ ಪಯೋಧಿರಿಂದೂದಯಮೂರ್ಛಿತೋ ಯಥಾ॥
ಅಥ ಅಸೂಯಾ— ಅಸೂಯಾಽನ್ಯಗುಣರ್ದ್ಧೀನಾಮೌದ್ಧತ್ಯಾದಸಹಿಷ್ಣುತಾ ।
ದೋಷೋದ್ಘೋಷಭ್ರೂವಿಭೇದಾವಜ್ಞಾ ಕ್ರೋಧೇಂಗಿತಾದಿಕೃತ್ ॥
ಯಥಾ—ಅಥ ತತ್ರ ಪಾಂಡುತನಯೇನ ಸದಸಿ ವಿಹಿತಂ ಮಧುದ್ವಿಷಃ ।
ಮಾನಮಸಹತ ನ ಚೇದಿಪತಿಃ ಪರವೃದ್ಧಿಮತ್ಸರಿ ಮನೋ ಹಿ ಮಾನಿನಾಮ್॥
ಅಥ ವಿಷಾದಃ— ಉಪಾಯಾಭಾವಜನ್ಮಾ ತು ವಿಷಾದಃ ಸತ್ತ್ವಸಂಶಯಃ ।
ನಿಶ್ವಾಸೋಚ್ಛ್ವಾಸಹೃತ್ತಾಪಸಹಾಯಾನ್ವೇಷಣಾದಿಕೃತ್ ॥
ಯಥಾ ಮಮ— ಏಷಾ ಕುಟಿಲಘನೇನ ಚಿಕುರಕಲಾಪೇನ ತವ ನಿಬದ್ಧಾ ವೇಣೀ ।
ಮಮ ಸಖಿ ದಾರಯತಿ ದಶತ್ಯಾಯಸಯಷ್ಟಿರಿವ ಕಾಲೋರಗೀವ ಹೃದಯಮ್॥
ಅಪೇಕ್ಷಿಸಿದ ಫಲವು ದೊರಕದೇ ಇದ್ದು ಅದು ದೊರಕುವವರೆಗೂ ಕಾಲವನ್ನು ಕಳೆಯಲು ಸಹನೆ ಇಲ್ಲದಿರುವುದೇ ಔತ್ಸುಕ್ಯವೆನಿಸುವುದು. ಇದರಿಂದ ಸಂತಾಪ,

ಬೆವರು, ದೀರ್ಘನಿಶ್ವಾಸ ಅತುರ ಮೊದಲಾದ ಹಿಂಸೆಗಳು ಸಂಭವಿಸುತ್ತವೆ. "ನನ್ನ ಬಾಲ್ಯವನ್ನು ಅಪಹರಿಸಿದ ವರನು ಅವನೇ ಇದ್ದಾನೆ. ಅವೇ ಚೈತ್ರಮಾಸದ ರಾತ್ರಿಗಳೇ ಈಗಲೂ ಇವೆ. ಅರಳಿದ ಮಾಲತೀಪುಷ್ಪದ ಸುಗಂಧಗಳೇ ಈಗಲೂ ಇವೆ. ಕದಂಬವೃಕ್ಷದ ಕಡೆಯಿಂದ ಬರುವ ಗಾಳಿಯೂ ಅದೇ ಇದೆ. ಹಿಂದೆ ಇದ್ದ ನಾನೇ ಇಂದಿಗೂ ಪ್ರೇಯಸಿಯಾಗಿರುವೆನು. ಆದರೂ ಅಲ್ಲಿ ರೇವಾನದಿಯ ತೀರದಲ್ಲಿ ನೀರು ವಂಜೀ ಮರದ ಬುಡದಲ್ಲಿ ಸುರತವನ್ನು ಲೀಲೆಯಿಂದ ಆಚರಿಸುವುದರಲ್ಲಿಯೇ ನನ್ನ ಮನಸ್ಸಿಗೆ ಕುತೂಹಲವುಂಟಾಗಿದೆ." ನಾಯಿಕೆಗೆ ಹಿಂದಿನಂತೆ ರೇವಾನದಿಯ ದಂಡೆಯಲ್ಲಿ ತನಗೆ ಇಷ್ಟವಾದ ಸುರತೋತ್ಸವವು ಮತ್ತೆ ಲಭಿಸಲಿಲ್ಲವೆಂಬ ಚಿಂತೆ ಇರುವುದರಿಂದ ಇದು ಔತ್ಸುಕ್ಯವೆನಿಸುವುದು. ಕಾವ್ಯಪ್ರಕಾಶಕಾರನು ಈ ಪದ್ಯವನ್ನು ಉದಾಹರಿಸಿ ಇಲ್ಲಿ ರಸಕ್ಕೆ ಪ್ರಾಧಾನ್ಯವಿದೆ ಎಂದು ಹೇಳಿರುವನು. ಹಾಗಾದರೆ ಇಲ್ಲಿ ಇದನ್ನು ಔತ್ಸುಕ್ಯವೆಂಬ ವ್ಯಭಿಚಾರಭಾವಕ್ಕೆ ಉದಾಹರಣವನ್ನಾಗಿ ಕೊಟ್ಟಿರುವುದು ಯುಕ್ತವೇ ಎಂದು ಆಕ್ಷೇಪವು ಬಂದರೆ ಅದನ್ನು ಹೀಗೆ ಸಮಾಧಾನ ಮಾಡುತ್ತಾನೆ. ಈ ಪದ್ಯದಲ್ಲಿರುವ ಔತ್ಸುಕ್ಯವೆಂಬ ವ್ಯಭಿಚಾರಿಭಾವವೂ ಸಹ ರಸದಂತೆಯೇ ಸಹೃದಯರಿಗೆ ಆಸ್ವಾದನಕ್ಕೆ ಯೋಗ್ಯವೆನಿಸಿರುರುವುದರಿಂದ ಅದನ್ನು ರಸಶಬ್ದದಿಂದಲೇ ಸೂಚಿಸಿರುವ ಪ್ರಯುಕ್ತ ಇಲ್ಲಿ ಯಾವ ವಿರೋಧಕ್ಕೂ ಅವಕಾಶವಿಲ್ಲ. ಯಾವುದು ಅನುಭಾವದಿಂದ ಪುಷ್ಟಿಯನ್ನು ಹೊಂದಿ ಚಮತ್ಕಾರವಾಗಿರುವುದೋ ಅದೇ ಅಲ್ಲಿ ಪ್ರಧಾನವೆನಿಸುವುದು. ಈ ಪದ್ಯದಲ್ಲಿ ವ್ಯಭಿಚಾರಿಭಾವವೇ ಚಮತ್ಕಾರವಾಗಿರುವುದರಿಂದ ಅದನ್ನೇ ಇಲ್ಲಿ ಸಹೃದಯರು ಅನುಭವಿಸುವ ಪ್ರಯುಕ್ತ ಅದನ್ನು ಒಪ್ಪಲಿಕ್ಕೆ ಅಡ್ಡಿಯಿಲ್ಲ. ಇದರಿಂದ ರಸಕ್ಕೆ ಪ್ರಾಧಾನ್ಯವನ್ನು ಅವನೂ ಒಪ್ಪಿದಂತೆಯೇ ಆಯಿತು.

ಕಾಮ, ಶೋಕ, ಭಯ ಮೊದಲಾದ ಕಾರಣಗಳಿಂದ ಆಯಾಯ ವಸ್ತುಗಳನ್ನು ಯಥಾರ್ಥವಾಗಿ ತಿಳಿಯಲಿಕ್ಕಾಗದಿರುವ ಸ್ಥಿತಿಯೇ ಉನ್ಮಾದವೆನಿಸಿವುದು. ಇದರಿಂದ ಅಸ್ಥಾನದಲ್ಲಿ (ಅವಶ್ಯಕತೆ ಇಲ್ಲದಿದ್ದಾಗ) ನಗುವುದು, ಅಳುವುದು, ಗಾನಮಾಡುವುದು, ಮಾತನಾಡುವುದು ಇಂತಹ ಮರವಸ್ಥೆಯುಂಟಾಗುವುದು. "ಸೋದರನಾದ ದುಂಬಿಯೇ ದೇಶದಲ್ಲೆಲ್ಲಾ ಸುತ್ತುವ ನೀನು ನನ್ನ ಪ್ರಾಣಪ್ರಿಯಳನ್ನು ಎಲ್ಲಿಯಾದರೂ ಕಂಡೆಯಾ? ಎಂದು ನಾಯಕನು ಕೇಳುವನು. ಆಗ ದುಂಬಿಯು ಝೇಂಕಾರನಾದವನ್ನು ಮಾಡುತ್ತಿರಲು ಅದನ್ನೇ ಓಂಕಾರವೆಂದು ತಿಳಿದು ನಾಯಕನು ಮತ್ತೆ ಹೇಳುವನು" "ಕಂಡಿರುವೆನೆಂದು ಒಪ್ಪಿಗೆಯನ್ನು ತಿಳಿಸುವೆಯಾ? ಅವನ್ನು ನನಗೆ ಬೇಗ ಹೇಳು. ಆಕೆ ಏನು ಮಾಡುತ್ತಿರುವಳು? ಎಲ್ಲಿ ಇರುವಳು? ಆಕೆ ಹೇಗೆ ಇರುವಳು?' ಇದನ್ನು ನನಗೆ ಬೇಗ ತಿಳಿಸು." ಇಲ್ಲಿ ಭ್ರಮರದ ಪ್ರತ್ಯುತ್ತರವನ್ನು ನಿರೀಕ್ಷಿಸಲಿಕ್ಕೆ ಅಶಕ್ತನಾಗಿರುವ ನಾಯಕನು ಹೀಗೆ ಗೋಳಾಡುತ್ತಲಿರುವುದರಿಂದ ಇದು ಕಾಮದಿಂದ ಹುಟ್ಟಿದ ಉನ್ಮಾದವೆನಿಸಿದೆ. ಬೇರೆಯವರಿಂದ ಹಿಂಸೆ, ತನ್ನಲ್ಲಿರುವ ದೋಷ, ಅದೃಷ್ಟದಿಂದ ಉಂಟಾದ ಅನಿಷ್ಟ ಇವುಗಳಿಂದ ಹುಟ್ಟುವ ವಿಪತ್ತಿನ ಊಹೆಯೇ ಶಂಕೆ

ಎನಿಸುವುದು. ಇದರಿಂದ ಮೈಯಲ್ಲಿ ಬಣ್ಣದ ಬದಲಾವಣೆ, ನಡಗುವುದು, ಸ್ವರದ ಬದಲಾವಣೆ, ಪಕ್ಕದ ಕಡೆಗೆ ನೋಡುವುದು, ಮುಖದಲ್ಲಿ ಒಣಗುವಿಕೆ ಇವೇ ಮೊದಲಾದ ತೊಂದರೆಗಳು ಉಂಟಾಗುತ್ತವೆ. ''ಪ್ರಾತಃಕಾಲದಲ್ಲಿ ನೋಡುವ ಸಖಿಯ ಉಪಹಾಸಕ್ಕೆ ಗುರಿಯಾದ ಈ ಕೃಶಾಂಗಿಯು ಹೆದರಿಕೆಯಿಂದ ಎಲ್ಲೆಡೆಯಲ್ಲೂ ನೋಡುತ್ತ ಪತಿಯಿಂದ ರಾತ್ರಿ ಆಗಿದ್ದ ನಖಕ್ಷತಗಳ ಗುರುತು ಇದ್ದ ಸ್ತನಗಳಲ್ಲಿ ಶ್ರೀಗಂಧವನ್ನು ಲೇಪಿಸುತ್ತಾಳೆ. ಹಾಗೆಯೇ ಅವನು ಹಲ್ಲಿನಿಂದ ಕಡಿದಿದ್ದ ತುಟಿಗೆ ಬಾರಿ ಬಾರಿಗೂ ಲಾಕ್ಷಾರಸವನ್ನು ಹಚ್ಚುತ್ತಾಳೆ" ಇಲ್ಲಿ ನಾಯಿಕೆಯನ್ನು ಸಖಿಯರು ಹಾಸ್ಯಮಾಡಲು ಅನುಕೂಲವಾದ ಊಹೆಯನ್ನು ತಿಳಿಸಿರುವುದರಿಂದ ಇದು ಶಂಕೆ ಎನಿಸಿದೆ,

ಸದೃಶವಾದ ವಸ್ತುವನ್ನು ನೋಡುವುದು, ಚಿಂತಿಸುವುದು, ಬೇರೆಯವರು ಮಾಡುವ ಅದರ ವರ್ಣನೆ ಇವುಗಳಿಂದ ಒಬ್ಬನಿಗೆ ಹಿಂದೆ ಅನುಭವಿಸಿದ್ದ ಬೇರೊಂದು ವಸ್ತುವಿನ ಅರಿವಾಗುವುವೇ ಸ್ಮೃತಿ ಎನಿಸುವುದು. ಇದರಿಂದ ಹುಬ್ಬುಗಳನ್ನು ಮೇಲಕ್ಕೆ ಹಾರಿಸುವುದು ಇವೇ ಮೊದಲಾದ ಅವಸ್ಥೆ ಉಂಟಾಗುವುದು.

ಸ್ನೇಹಿತನ ಸಮೀಪದಲ್ಲಿ ಪ್ರವಾಸಿಯೊಬ್ಬನು ಹೇಳುವ ಮಾತಿದು. "ಯಾವುದೋ ಒಂದು ಕಡೆಗೆ ನಾನು ವ್ಯಾಜದಿಂದ ದೃಷ್ಟಿಯನ್ನು ತಿರುಗಿಸಿದ್ದಾಗ ಯಾವುದೋ ರೀತಿಯಿಂದ ಕಣ್ಣಿಗೆ ಬೀಳಲು ವಕ್ರವಾಗಿ ಕಣ್ಣುಗುಡ್ಡೆಯನ್ನು ತಿರುಗಿಸಿ ನಗುತ್ತಲೇ ಹಾಸ್ಯವನ್ನು ಮಾಡುತ್ತಿದ್ದ ಸಖಿಯನ್ನುನೋಡಿ ತಲೆಯನ್ನು ತಗ್ಗಿಸಿ ವಿಕಸಿತವಾದ ಕಣ್ಣುಗುಡ್ಡೆಗಳಿಂದ ಕೂಡಿದ ಪ್ರಿಯೆಯ ಮುಖವನ್ನು ಸ್ಮರಿಸುತ್ತೇನೆ'' ಇಲ್ಲಿ ನಾಯಕನಿಗೆ ಭಾವನೆಯಿಂದ ಹಿಂದೆ ಕಂಡಿದ್ದ ಪ್ರೇಯಸಿಯ ಮುಖದ ಸ್ಮರಣವಾಗುವ ಪ್ರಯುಕ್ತ ಇದು ಸ್ಮೃತಿಎನಿಸಿದೆ.

ನೀತಿಶಾಸ್ತ್ರವನ್ನು ಅನುಸರಿಸುವುದರಿಂದಲೂ ಅನುಮಾನದಿಂದಲೂ ಪದಾರ್ಥ ವಿಂತಹದೆಂದು ನಿಶ್ಚಯಿಸುವುದೇ ಮತಿ ಎನಿಸುವುದು. ಇದರಿಂದ ಕೊಂಚ ಹಾಸ್ಯ, ಧೈರ್ಯ, ಸಂತೋಷ, ಅದರ ಇವೆಲ್ಲವೂ ಸಂಭವಿಸುತ್ತವೆ. ಶಾಕುಂತಲದಲ್ಲಿ ಶಕುಂತಲೆಯನ್ನುನೋಡಿ ದುಷ್ಯಂತನು ಹೇಳುತ್ತಾನೆ. "ಈ ಶಕುಂತಲೆಯು ನಿಜವಾಗಿಯೂ ಕ್ಷತ್ರಿಯನಿಗೆ ಮದುವೆಯಾಗಲರ್ಹಳೆಂಬಲ್ಲಿ ಯಾವ ಸಂಶಯವೂ ಇಲ್ಲ. ಯಾಕೆಂದರೆ ನಿರ್ದುಷ್ಟವಾದ ನನ್ನ ಮನಸ್ಸು ಈಕೆಯಲ್ಲಿ ಅಂಟಿಕೊಂಡಿದೆ. ಸಂಶಯಕ್ಕೆ ಆಸ್ಪದವಾದ ವಸ್ತುಗಳಲ್ಲಿ ಸತ್ಪುರುಷರಿಗೆ ಹೃದಯವು ಪ್ರವರ್ತಿಸುವುದಾದರೆ ಅದರಿಂದಲೇ ಸಂಶಯಗಳೆಲ್ಲವೂ ನಿವಾರಣವಾಗುತ್ತವೆ'' ಇಲ್ಲಿ ದುಷ್ಯಂತನಿಗೆ ಶಕುಂತಲೆಯು ಕ್ಷತ್ರಿಯನಿಗೆ ವಿವಾಹಕ್ಕೆ ಯೋಗ್ಯಳಿರುವಳೆಂಬುದು ಅನುಮಾನದಿಂದ ನಿರ್ಣಯವಾಗುವುದರಿಂದ ಇದು ಮತಿ ಎನಿಸಿದೆ.

ವಾತ ಪಿತ್ತ ಕಫಗಳಲ್ಲಿ ವ್ಯತ್ಯಾಸವಾದರೆ ಅದರಿಂದ ಹುಟ್ಟುವ ಅವಸ್ಥೆಯೇ ಜ್ವರ ಮೊದಲಾದ ವ್ಯಾಧಿ ಎನಿಸುವುದು. ಇದರಿಂದ ಭೂಮಿಯಲ್ಲಿ ಹೊರಳಾಡುವುದು,

ನಡುಗುವುದು, ನೀರಡಿಕೆ ಇವೇ ಮೊದಲಾದ ಅವಸ್ಥೆಗಳು ಉಂಟಾಗುತ್ತವೆ. ಮೈಯಲ್ಲಿ ಉಷ್ಣವು ಹೆಚ್ಚಿದರೆ ನೆಲದಮೇಲೆ ಹೊರಳಾಡುವ ಇಚ್ಛೆಯೂ, ಶೀತವಾದರೆ ಮೈಯಲ್ಲಿ ನಡುಕವೂ ಹುಟ್ಟುತ್ತವೆ. "ಕೋಮಲಾಂಗಿಯು ನನ್ನ ಮೇಲೆ ಓರೆನೋಟಗಳನ್ನು ಪ್ರಯೋಗಿಸಿ ನನ್ನ ಹೃದಯವನ್ನು ಕಸಿದು ಕೊಂಡಳು. ನಾನಾದರೋ ಆಕೆಗೆ ಹೃದಯವನ್ನು ಕೊಟ್ಟು ಕಾಮಜ್ವರವನ್ನು ಪಡೆದೆನು.'' ಇಲ್ಲಿ ನಾಯಕನಿಗೆ ನಾಯಿಕೆಯನ್ನು ನೋಡಿದ್ದರಿಂದ ಕಾಮಬಾಧೆ ಎಂಬ ಜ್ವರವು ಬಂದಿತೆಂದು ಹೇಳಿದ ಪ್ರಯುಕ್ತ ಇದು ವ್ಯಾಧಿ ಎನಿಸಿದೆ.

ಸಿಡಿಲು, ಮಿಂಚು, ಧೂಮಕೇತು, ಭೂಕಂಪ ಇವೇ ಮೊದಲಾದ ಕಾರಣಗಳಿಂದ ಹುಟ್ಟಿ ಮೈಯಲ್ಲಿ ನಡುಕ, ಮೂರ್ಛೆ ಇವನ್ನು ಹುಟ್ಟಿಸುವ ಅವಸ್ಥೆಯೇ ತ್ರಾಸವೆನಿಸುವುದು. ಜಲಕ್ರೀಡೆಯನ್ನು ಇಲ್ಲಿ ವರ್ಣಿಸಲಾಗಿದೆ. "ಮೀನುಗಳಿಂದ ತೊಡೆಗಳಲ್ಲಿ ಹೊಡೆಸಿಕೊಂಡು ಭಯದಿಂದ ಚಂಚಲಗೊಂಡ ಅಪ್ಸರಸ್ತ್ರೀಯರೂ ಸಹ ಅವರನ್ನು ಕುತೂಹಲದಿಂದ ನೋಡತೊಡಗಿದರು. ಇನ್ನು ಅವರ ಅವಸ್ಥೆಯನ್ನು ನಾಯಕನು ನೋಡುವ ಬಗ್ಗೆ ಹೇಳುವುದೇನಿದೆ ?'' ಇಲ್ಲಿ ಅಪ್ಸರಸ್ತ್ರೀಯರಿಗೆ ಮೀನುಗಳ ಹೊಡೆತದಿಂದ ಕೈಯಲ್ಲಿ ನಡುಕವುಂಟಾದ್ದರಿಂದ ಇದು ತ್ರಾಸವೆನಿಸಿದೆ.

ಸ್ತನಗಳು, ನಿತಂಬ (ಹೊಟ್ಟೆಯ ಹಿಂಭಾಗ) ಇವನ್ನು ತೋರಿಸುವ ಮೂಲಕ ಕಂಡು ಬರುವ ಸಂಕುಚಿತಾವಸ್ಥೆಯೇ ವ್ರೀಡೆ ಎನಿಸುವುದು. ಇದರಿಂದ ಮುಖವನ್ನು ತಗ್ಗಿಸುವುದು, ಕಾಣಿಸಿಕೊಳ್ಳದಂತೆ ಹೋಗುವುದು ಈ ಬಗೆಯ ಅವಸ್ಥೆಯು ಸಂಭವಿಸುವುದು. 'ಮಯಿ ಸಕಪಟಂ' ಎಂಬ ಹಿಂದಿನ ಪದ್ಯದಲ್ಲಿ ನಾಯಕನ ನಿರೀಕ್ಷಣದಿಂದ ನಾಯಿಕೆಗೆ ಮುಖವನ್ನು ತಗ್ಗಿಸುವ ಸ್ಥಿತಿಯುಂಟಾಯಿತೆಂದು ತಿಳಿಸಿದ್ದರಿಂದ ಇದು ವ್ರೀಡೆ ಎನಿಸಿದೆ.

ಇಷ್ಟಕಾರ್ಯವು ಸಿದ್ಧಿಸಿದ್ದರಿಂದ ಉಂಟಾದ ಮನಸ್ಸಿನ ಪ್ರಸನ್ನತೆಯೇ ಹರ್ಷವೆನಿಸುತ್ತದೆ.ಇದರಿಂದ ತೊದಳುನುಡಿ ಮೊದಲಾದ ವಿಕಾರ ಉಂಟಾಗುವುದು. ರಘುವಂಶದಲ್ಲಿ ರಘು ಹುಟ್ಟಿದಾಗ ದಿಲೀಪನಿಗೆ ಆದ ಹರ್ಷವನ್ನು ತಿಳಿಸುವ ಪದ್ಯವಿದು. "ಬಡವನು ನಿಧಿಯನ್ನು ಕಂಡಂತೆ ತಂದೆಯು ಬಹು ಕಾಲದಮೇಲೆ ಹುಟ್ಟಿದ ಮಗನನ್ನು ಕಂಡೊಡನೆಯೇ ಚಂದ್ರೋದಯದಿಂದ ವೃದ್ಧಿಹೊಂದುವ ಸಮುದ್ರದಂತೆ ಆನಂದದಿಂದ ದೇಹವನ್ನು ಅಳ್ಳಾಡಿಸಲು ಅಶಕ್ತನಾದನು.'' ಇಲ್ಲಿ ದಿಲೀಪನಿಗೆ ಪುತ್ರಲಾಭದಿಂದ ಆದ ಹರ್ಷವನ್ನು ತಿಳಿಸಿದೆ.

ಬೇರೊಬ್ಬರ ಗುಣವನ್ನೂ ವೃದ್ಧಿಯನ್ನೂ ಕಂಡು ಗರ್ವದಿಂದ ಸಹಿಸದಿರುವುದು ಅಸೂಯೆ ಎನಿಸುವುದು. ಇದರಿಂದ ಬೇರೆಯವರಲ್ಲಿ ದೋಷವನ್ನು ಪ್ರಕಟಿಸುವುದು, ಹುಬ್ಬುಗಂಟು ಹಾಕುವುದು, ಬೇರೆಯವರನ್ನು ಅವಮಾನಪಡಿಸುವುದು, ಕಣ್ಣು ಕೆಂಪೇರುವುದು ಇವೇ ಮೊದಲಾದ ಅವಸ್ಥೆಗಳಾಗುವುವು. ''ಕೃಷ್ಣನಿಗೆ ಅಗ್ರಪೂಜೆಯನ್ನು ಸಲ್ಲಿಸಿದಾಗ ಶಿಶುಪಾಲನು ಸಭೆಯಲ್ಲಿ ಕೃಷ್ಣನಿಗೆ ಯುಧಿಷ್ಠಿರನು ಹಾಗೆ.

ಗೌರವಿಸಿದ್ದನ್ನು ಸಹಿಸಲಿಲ್ಲ. ಯಾಕೆಂದರೆ ತೇಜಸ್ವಿಗಳ ಮನಸ್ಸು ಬೇರೆಯವರ ಏಳಿಗೆಯಲ್ಲಿ ದ್ವೇಷವನ್ನು ತಾಳುತ್ತದೆ.” ಇಲ್ಲಿ ಕೃಷ್ಣನಿಗೆ ಆದ ಸನ್ಮಾನವನ್ನು ಶಿಶುಪಾಲನು ಸಹಿಸದೇ ಇರುವುದರಿಂದ ಇದು ಅಸೂಯೆ ಎನಿಸಿದೆ.

ಅನರ್ಥವನ್ನು ಪರಿಹರಿಸುವ ಕಾರಣಗಳಿಲ್ಲದ್ದರಿಂದ ಹುಟ್ಟಿ ಮನುಷ್ಯನ ಉದ್ಯಮವನ್ನೇ ನಾಶಗೊಳಿಸುವ ಅವಸ್ಥೆಯೇ ವಿಷಾದವೆನಿಸುತ್ತದೆ. ಇದರಿಂದ ನಿರಾಶೆ, ಮನಸ್ತಾಪ, ಬೇರೆಯವರ ಸಹಾಯವನ್ನು ಬಯಸುವುದು ಇವೇ ಮೊದಲಾದ ಅವಸ್ಥೆಗಳು ಸಂಭವಿಸುತ್ತವೆ. ವಿರಹದಿಂದ ಬಹುಕಾಲದಿಂದಲೂ ಒಂದೇ ಜಡೆಯನ್ನು ಧರಿಸಿರುವ ನಾಯಿಕೆಗೆ ಸಖಿ ಹೇಳುವಳು “ಎಲೈ ಸಖಿಯೇ, ವಕ್ರವೂ ಒತ್ತಾಗಿಯೂ ಇರುವ ಕೂದಲುಗಳಿರುವ ನಿನ್ನ ಈ ಜಡೆಯು ಕಬ್ಬಿಣದ ಮೊಳೆಯಂತೆ ನನ್ನ ಹೃದಯವನ್ನು ಸೀಳುತ್ತಿದೆ. ಹಾಗೆಯೇ ಕೃಷ್ಣಸರ್ಪದಂತೆ ಈ ಹೃದಯವನ್ನು ಕಚ್ಚುತ್ತಿದೆ’’ ಇಲ್ಲಿ ವಿರಹಸಂತಾಪವನ್ನು ಪರಿಹರಿಸುವ ಉಪಾಯವಿಲ್ಲದ್ದರಿಂದ ನಾಯಿಕೆಯ ವಿಷಾದವನ್ನು ತಿಳಿಸಲಾಗಿದೆ.

ಅಥ ಧೃತಿಃ— ಜ್ಞಾನಾಭೀಷ್ಟಾಗಮಾದ್ಯೈಸ್ತು ಸಂಪೂರ್ಣಸ್ಪೃಹತಾ ಧೃತಿಃ ।
ಸೌಹಿತ್ಯವಚನೋಲ್ಲಾಸಸಹಾಸಪ್ರತಿಭಾದಿಕೃತ್ ।

ಯಥಾ ಮಮ–ಕೃತ್ವಾ ದೀನನಿಪೀಡನಾಂ ನಿಜಜನೇ ಬದ್ಧ್ವಾ ವಚೋವಿಗ್ರಹಂ
ನೈವಾಲೋಚ್ಯ ಗರೀಯಸೀರಪಿ ಚಿರಾದಾಮುಷ್ಮಿಕೀರ್ಯಾತನಾಃ ।
ದ್ರವ್ಯೌಘಾಃ ಪರಿಸಂಚಿತಾಃ ಖಲು ಮಯಾ ಯಸ್ಯಾಃ ಕೃತೇ ಸಾಂಪ್ರತಂ
ನೀವಾರಾಂಜಲಿನಾಪಿ ಕೇವಲಮಹೋ ಸೇಯಂ ಕೃತಾರ್ಥಾ ತನುಃ ।

ಅಥ ಚಪಲತಾ—ಮಾತ್ಸರ್ಯದ್ವೇಷರಾಗಾದೇಶ್ಚಾಪಲ್ಯಂ ತ್ವನವಸ್ಥಿತಿಃ ।
ತತ್ರ ಭರ್ತ್ಸನಾಪಾರುಷ್ಯಸ್ವಚ್ಛಂದಾಚರಣಾದಯಃ ॥

ಅನ್ಯಾಸು ತಾವದುಪಮರ್ದಸಹಾಸು ಭೃಂಗ
ಲೋಲಂ ವಿನೋದಯ ಮನಃ ಸುಮನೋಲತಾಸು ।
ಮುಗ್ಧಾಮಜಾತರಜಸಂ ಕಲಿಕಾಮಕಾಲೇ
ವ್ಯರ್ಥಂ ಕದರ್ಥಯಸಿ ಕಿಂ ನವಮಾಲಿಕಾಯಾಃ॥

ಅಥ ಗ್ಲಾನಿಃ—ಸತ್ಯಾಯಾಸಮನಸ್ತಾಪಕ್ಷುತ್ಪಿಪಾಸಾದಿಸಂಭವಾ ।
ಗ್ಲಾನಿರ್ನಿಷ್ಪ್ರಾಣತಾಕಂಪಕಾರ್ಶ್ಯಾನುತ್ಸಾಹತಾದಿಕೃತ್ ॥

ಯಥಾ—ಕಿಸಲಯಮಿವ ಮುಗ್ಧಂ ಬಂಧನಾದ್ವಿಪ್ರಲೂನಂ
ಹೃದಯಕುಸುಮಶೋಷೋ ದಾರುಣೋ ದೀರ್ಘಶೋಕಃ ।
ಗ್ಲಪಯತಿ ಪರಿಪಾಂಡುಕ್ಷಾಮಮಸ್ಯಾಃ ಶರೀರಂ
ಶರದಿಜ ಇವ ಘರ್ಮಃ ಕೇತಕೀಗರ್ಭಪತ್ರಮ್ ॥

ಅಥ ಚಿಂತಾ—ಧ್ಯಾನಂ ಚಿಂತಾ ಹಿತಾನಾಪ್ತೇಃ ಶೂನ್ಯತಾಶ್ವಾಸತಾದಿಕೃತ್।
ಯಥಾ–ಮಮ ಕಮಲೇನ ವಿಕಸಿತೇನ ಸಂಯೋಜಯಂತೀ ವಿರೋಧಿನಂ ಶಶಿಬಿಂಬಮ್।

ಕರತಲಪರ್ಯಸ್ತಮುಖೀ ಕಿಂ ಚಿಂತಯಸಿ ಸುಮುಖಿ ಅಂತರಾಹಿತಹೃದಯಾ||
ಅಥ ವಿತರ್ಕಃ. ತರ್ಕೋ ವಿಚಾರಃ ಸಂದೇಹಾತ್ ಭ್ರೂಶಿರೋಂಗುಲಿನರ್ತಕಃ |
ಯಥಾ " ಕಿಂ ರುದ್ಧಃ ಪ್ರಿಯಯಾ" ಇತ್ಯಾದಿ.

ಏತೇ ಚ ತ್ರಯಸ್ತ್ರಿಂಶದ್ವ್ಯಭಿಚಾರಿಭೇದಾ ಇತಿ ಯದುಕ್ತಂ ತದುಪಲಕ್ಷಣ ಮಿತ್ಯಾಹ. ರತ್ಯಾದಯೋಽಪ್ಯನಿಯತೇ ರಸೇ ಸ್ಯುರ್ವ್ಯಭಿಚಾರಿಣಃ |

ತಥಾಹಿ- ಶೃಂಗಾರೇ ಅನುಚ್ಛಿದ್ಯಮಾನತಯಾ ಆವಸ್ಥಾನಾತ್ ರತಿರೇವ ಸ್ಥಾಯಿಶಬ್ದವಾಚ್ಯಾ, ಹಾಸಃ ಪುನರುತ್ಪದ್ಯಮಾನೋ ವ್ಯಭಿಚಾರ್ಯೇವ ವ್ಯಭಿಚಾರಿ ಲಕ್ಷಣಯೋಗಾತ್.ತದುಕ್ತಮ್"ರಸಾವಸ್ಥಃ ಪರಂ ಭಾವಃ ಸ್ಥಾಯಿತಾಂ ಪ್ರತಿಪದ್ಯತೇ" ಇತಿ. ತತ್ರ ಕಸ್ಯ ಸ್ಥಾಯಿನಃ ಕಸ್ಮಿನ್ರಸೇ ಸಂಚಾರಿತ್ವಮಿತ್ಯಾಹ—

ಶೃಂಗಾರವೀರಯೋರ್ಹಾಸೋ ವೀರೇ ಕ್ರೋಧಸ್ತಥಾ ಮತಃ |
ಶಾಂತೇ ಜುಗುಪ್ಸಾ ಕಥಿತಾ ವ್ಯಭಿಚಾರಿತಯಾ ಪುನಃ |
ಇತ್ಯಾದ್ಯನ್ಯತ್ಸಮುನ್ನೇಯಂ ಸ್ವಯಂ ಭಾವಿತಬುದ್ಧಿಭಿಃ|

ಅಥಸ್ಥಾಯಿ ಭಾವಃ-ಅವಿರುದ್ಧಾ ವಿರುದ್ಧಾ ವಾ ಯಂ ತಿರೋಧಾತುಮಕ್ಷಮಾಃ |
ಆಸ್ವಾದಾಂಕುರಕಂದೋಽಸೌ ಭಾವಃ ಸ್ಥಾಯೀತಿ ಸಮ್ಮತಃ

ಯದುಕ್ತಂ- ಸ್ರಕ್ಸೂತ್ರವೃತ್ತ್ಯಾ ಭಾವಾನಾಮನ್ಯೇಷಾಮನುಗಾಮುಕಃ |
ನ ತಿರೋಧೀಯತೇ ಸ್ಥಾಯೀ ತೈರಸೌ ಪುಷ್ಯತೇ ಪರಮ್ ||

ತದ್ಭೇದಾನಾಹ— ರತಿರ್ಹಾಸಶ್ಚ ಶೋಕಶ್ಚ ಕ್ರೋಧೋತ್ಸಾಹೌ ಭಯಂ ತಥಾ |
ಜುಗುಪ್ಸಾ ವಿಸ್ಮಯಶ್ಚೇತ್ಥಮಷ್ಟೌ ಪ್ರೋಕ್ತಾಃ ಶಮೋಽಪಿಚ ||

ತತ್ರ--- ರತಿರ್ಮನೋಽನುಕೂಲೇಽರ್ಥೇ ಮನಸಃ ಪ್ರವಣಾಯಿತಮ್ |
ವಾಗಾದಿವೈಕೃತಾಚ್ಚೇತೋವಿಕಾಸೋ ಹಾಸ ಇಷ್ಯತೇ ||
ಇಷ್ಟನಾಶಾದಿಭಿಶ್ಚೇತೋವೈಕ್ಲವ್ಯಂ ಶೋಕಶಬ್ದಭಾಕ್ |
ಪ್ರತಿಕೂಲೇಷು ತೈಕ್ಷ್ಣ್ಯಸ್ಯಾವಬೋಧಃ ಕ್ರೋಧ ಇಷ್ಯತೇ ||
ಕಾರ್ಯಾರಂಭೇಷು ಸಂರಂಭಃ ಸ್ಥೇಯಾನುತ್ಸಾಹ ಉಚ್ಯತೇ |
ರೌದ್ರಶಕ್ತ್ಯಾತು ಜನಿತಂ ಚಿತ್ತವೈಕ್ಲವ್ಯದಂ ಭಯಮ್ ||
ದೋಷೇಕ್ಷಣಾದಿಭಿರ್ಗರ್ಹಾ ಜುಗುಪ್ಸಾ ವಿಷಯೋದ್ಭವಾ |
ವಿವಿಧೇಷು ಪದಾರ್ಥೇಷು ಲೋಕಸೀಮಾತಿವರ್ತಿಷು ||
ವಿಸ್ಫಾರಶ್ಚೇತಸೋ ಯಸ್ತು ಸ ವಿಸ್ಮಯ ಉದಾಹೃತಃ |
ಶಮೋ ನಿರೀಹಾವಸ್ಥಾಯಾಂ ಆತ್ಮವಿಶ್ರಾಮಜಂ ಸುಖಮ್ ||

ಯಥಾ ಮಾಲತೀಮಾಧವೇ ರತಿಃ, ನಟಕಮೇಲಕೇ ಹಾಸಃ, ರಾಮಾಯಣೇ ಶೋಕಃ. ಮಹಾಭಾರತೇ ಶಮಃ. ಏವಮನ್ಯೇಽಪಿ. ಕಿಂ ಚ |

ನಾನಾಭಿನಯಸಂಬಂಧಾತ್ ಭಾವಯಂತಿ ರಸಾನ್ಯತಃ|
ತಸ್ಮಾದ್ಭಾವಾ ಅಮೀ ಪ್ರೋಕ್ತಾಃ ಸ್ಥಾಯಿಸಂಚಾರಿಸಾತ್ತ್ವಿಕಾಃ ||

ಯದುಕ್ತಂ "ಸುಖದುಃಖಾತಿಭಿರ್ಭಾವೈರ್ಭಾವಸ್ತದ್ಭಾವಭಾವನಮ್"

ತತ್ತ್ವಜ್ಞಾನದಿಂದಲೂ, ಪ್ರೀತಿಪಾತ್ರರಾದವರು ಬಂದದ್ದರಿಂದಲೂ, ವಿಪತ್ತು ತೊಲಗಿದ್ದರಿಂದಲೂ ಮನಸ್ಸನ್ನು ತುಂಬಿಸಿಕೊಳ್ಳುವುದೇ ಧೃತಿ ಎನಿಸುವುದು. ಇದರಿಂದ ಉಲ್ಲಾಸ, ಆಹ್ಲಾದ, ಬುದ್ಧಿವಿಕಾಸ, ಶಾಂತಿ ಇವೆಲ್ಲವೂ ಉಂಟಾಗುವುದಲ್ಲದೆ ಮನುಷ್ಯನು ತನಗಾದ ತೃಪ್ತಿಯನ್ನು ಮಾತಿನಿಂದ ತಿಳಿಯಪಡಿಸುವನು.

ಹಿಂದೆ ದುರ್ಮಾರ್ಗದಿಂದ ಹಣವನ್ನು ಸಂಪಾದಿಸಿದ್ದು ಮುಪ್ಪಿನಲ್ಲಿ ಕಾಡಿನಲ್ಲಿ ವಾಸಿಸುವನೊಬ್ಬನು ಆಡುವ ಮಾತಿದು. "ದರಿದ್ರರಿಗೆ ಹಿಂಸೆಯನ್ನು ಕೊಟ್ಟು ಸ್ತ್ರೀಯರೊಡನೆ ವಾಗ್ಯುದ್ಧವನ್ನು ಮಾಡಿ, ಮುಂದೆ ಬಹುಕಾಲದವರೆಗೆ ಅನುಭವಿಸಬೇಕಾಗುವ ನರಕದ ಹಿಂಸೆಗಳನ್ನು ಗಮನಿಸದೆ ಈ ದೇಹಕ್ಕೋಸ್ಕರ ಹಣದ ರಾಶಿಯನ್ನು ಸಂಪಾದಿಸಿಯಾಯಿತು. ಈ ಶರೀರವಾದರೋ ಒಂದು ಹಿಡಿಯಷ್ಟು ಅಕ್ಕಿಯಿಂದಲೇ ಹಸಿವನ್ನು ಪರಿಹರಿಸಿಕೊಳ್ಳಬಲ್ಲದು." ಈ ಮಾತನ್ನು ಹೇಳುವವನು ತತ್ತ್ವಜ್ಞಾನದ ಬಲದಿಂದ ಒಂದುಹಿಡಿ ಧಾನ್ಯಕ್ಕೆ ತೃಪ್ತಿಪಡುವೆನೆಂದು ತಿಳಿಸಿದ್ದರೂ ಇದು ಅವನ ಧೃತಿಯನ್ನು ತಿಳಿಸುತ್ತದೆ.

ಮಾತ್ಸರ್ಯ, ದ್ವೇಷ, ರಾಗ, ಹುಚ್ಚುತನ ಇವುಗಳ ಪರಿಣಾಮವಾಗಿ ಮನಸ್ಸು ವ್ಯವಸ್ಥೆಯಿಂದ ಇಲ್ಲದೆಇರುವುದೇ ಚಾಪಲ್ಯವೆನಿಸುವುದು, ಅದರಿಂದ ಜನರು ಸ್ವಚ್ಛಂದವಾಗಿ ವ್ಯವಹರಿಸುತ್ತಲೂ, ನಿಷ್ಠುರವಾಗಿ ಮಾತನಾಡುತ್ತಲೂ ನಿಷ್ಕಾರಣವಾಗಿ ಗದರಿಸುತ್ತಲೂ ಇರುವರು. ಇನ್ನು ಯೌವನಾವಸ್ಥೆಗೆ ಬಾರದಿರುವ ಹುಡುಗಿಯಲ್ಲಿ ಬಲಾತ್ಕಾರದಿಂದ ರಮಿಸಲು ಯತ್ನಿಸುವ ಕಾಮುಕನನ್ನು ನೋಡಿ ದುಂಬಿಗೆ ಉಪದೇಶಿಸುವ ನೆಪದಿಂದ ಒಬ್ಬನು ಹೇಳುವನು: "ಎಲೈ ದುಂಬಿಯೇ ವಿಕಸಿತವಾದ ಪುಷ್ಪಗಳಿದ್ದಲೆ ಎಯಮೇಲೆ ಕುಳಿತುಕೊಳ್ಳುವುದರಿಂದ ಆಗುವ ಹೊರೆಯನ್ನು ಸಹಿಸುವಂತಹ ಬೇರೆ ಮರಗಳಲ್ಲಿ ನಿನ್ನ ಚಂಚಲವಾದ ಮನಸ್ಸನ್ನು ಮಧುಪಾನದಿಂದ ಸಂತೋಷಗೊಳಿಸು. ಇನ್ನೂ ಪರಾಗವೇ ಕಾಣಿಸದಿರುವ ಈ ಮಲ್ಲಿಗೆಯ ಮೊಗ್ಗನ್ನು ನೀನು ಮಧುಪಾನಕ್ಕಾಗಿ ಅಕಾಲದಲ್ಲಿ ಏಕೆ ಆರಳಿಸುತ್ತಿರುವೆ?" "ಎಲೈ ಕಾಮುಕನೇ, ಕುಚಗಳನ್ನು ಹಿಂಡುವುದೇ ಮೊದಲಾದ ಕ್ಲೇಶಗಳನ್ನು ಸಹಿಸಬಹುದಾದ ಯುವತಿಯರಲ್ಲಿ ರಮಿಸದೆ ಇನ್ನೂ ರಜಸ್ವಲೆಯೇ ಆಗದಿರುವ ಈ ಮುಗ್ಧ ಬಾಲಿಕೆಯಲ್ಲಿ ರಮಿಸುತ್ತ ಏಕೆ ನಿರಾಶನಾಗುವೆ?" ಹೀಗೆ ಬಾಲೆಯಲ್ಲಿ ರಮಿಸಲು ಪ್ರಯತ್ನಿಸುತ್ತಿರುವ ಕಾಮುಕನಿಗೆ ದುಂಬಿಯ ನೆಪದಿಂದ ಉಪದೇಶಿಸಲಾಗಿದೆ. ಇಲ್ಲಿ ದುಂಬಿ ಮತ್ತು ಕಾಮುಕನ ಸ್ವಚ್ಛಂದಪ್ರವೃತ್ತಿ ಮನಸ್ಸಿನ ಅಸ್ಥಿರಪ್ರಕೃತಿಯನ್ನು ತಿಳಿಸಿರುವುದರಿಂದ ಇದು ಚಾಂಚಲ್ಯವೆನಿಸಿದೆ.

ಸುರತದಿಂದಲೂ, ಬೇರೆಬೇರೆ ಬಗೆಯ ಆಯಾಸದಿಂದಲೂ, ಮನಸ್ತಾಪದಿಂದಲೂ ಹಸಿವು ನೀರಡಿಕೆಗಳಿಂದಲೂ ಹುಟ್ಟಿದ ದೇಹದ ದೌರ್ಬಲ್ಯವೇ ಗ್ಲಾನಿ ಎನಿಸುವುದು. ಇದರಿಂದ ದೇಹವು ನಡುಗುತ್ತಲೂ, ಕೃಶವಾಗಿಯೂ, ಉತ್ಸಾಹವಿಲ್ಲದೆಯೂ, ಕಾಂತಿಹೀನವೂ ಆಗುತ್ತದೆ. ಉತ್ತರರಾಮಚರಿತದಲ್ಲಿ ಗೋದಾವರಿಯ ಮಡುವಿನಿಂದ

ಹೊರಗೆ ಬರುತ್ತಿರುವ ಸೀತೆಯನ್ನು ನೋಡಿ ಮುರಳೆಯು ಹೇಳುವ ಮಾತಿದು. 'ಹೃದಯವೆಂಬ ಪುಷ್ಪವನ್ನೇ ಒಣಗಿಸಿರುವ ಭೀಕರವೂ, ದೀರ್ಘವೂ ಆದ ದುಃಖವು ದಂಟನಿಂದ ಮುರಿದು ಬಿದ್ದಿರುವ ಮನೋಹರವಾದ ಚಿಗುರಿನಂತೆ ಇರುವ ಈ ಸೀತೆಯ ಬಿಳಿಯ ಬಣ್ಣದ ಕೃಶವಾದ ಶರೀರವನ್ನು ಶರತ್ಕಾಲದ ಬಿಸಿಲು ಕೇತಿಕೀಪುಷ್ಪವನ್ನು ಒಣಗಿಸಿದಂತೆ ಬಾಡಿಸುತ್ತಲಿದೆ." ಇಲ್ಲಿ ಮನಸ್ತಾಪದಿಂದ ಹುಟ್ಟಿ ಸೀತೆಯ ಶರೀರವನ್ನು ಕೃಶಗೊಳಿಸಿರುವ ದೌರ್ಬಲ್ಯವೆಂಬ ಗ್ಲಾನಿಯನ್ನು ತಿಳಿಸಲಾಗಿದೆ.

ಹಿತವಾದದ್ದನ್ನು ಪಡೆಯದೇ ಇದ್ದು ಅದನ್ನು ಪಡೆಯಬೇಕೆಂದು ಆದರ ಬಗ್ಗೆ ಮಾಡುವ ಆಲೋಚನೆಯೇ ಚಿಂತೆ ಎನಿಸುವುದು. ಅಂತವರು ಯಾವಾಗಲೂ ಕೊರಗುತ್ತಲೂ, ನಿಟ್ಟುಸಿರನ್ನು ಬಿಡುತ್ತಲೂ ಇರುವರು. ಪತಿಯ ಚಿಂತೆಯಲ್ಲಿಯೇ ನಿರತಳಾಗಿರುವ ವಿರಹಿಣಿಗೆ ಸಖಿಯು ಹೇಳುವಳು. "ಎಲೈ ಕೋಮಲಾಂಗಿಯೇ, ಒಳಗಡೆಯೇ ಮನಸ್ಸನ್ನು ಅಂಟಿಸಿಕೊಂಡು ಕೈಯಲ್ಲಿಯೇ ಮುಖವನ್ನಿಟ್ಟಿರುವ ನೀನು ವಿಕಸಿತವಾದ ಕಮಲದೊಡನೆ ಚಂದ್ರನನ್ನು ಸೇರಿಸಬೇಕೆಂದು ಏಕೆ ಚಿಂತಿಸುತ್ತಿರುವೆ? ನಿನ್ನ ಹಸ್ತವೆಂಬ ಕಮಲದೊಡನೆ ಮುಖವೆಂಬ ಚಂದ್ರವನ್ನು ಸೇರಿಸಿದರೆ ಆಗ ಕಮಲದಲ್ಲಿ ಅದರ ವಿರೋಧಿಯಾದ ಚಂದ್ರನನ್ನು ಸೇರಿಸಿದಂತೆಯೇ ಆಯಿತು." ಇಲ್ಲಿ ನಾಯಿಕೆಗೆ ಹಿತವೆನಿಸಿದ ಪ್ರಿಯನ ಸಮಾಗಮವು ಆಗದೇ ಇರುವುದರಿಂದ ಅವಳ ಚಿಂತೆಯು ತೋರುವುದು.

ಸಂದೇಹದಿಂದ ಹುಟ್ಟಿ ಹುಬ್ಬು, ಶಿರಸ್ಸು ಮತ್ತು ಬೆರಳುಗಳನ್ನು ಅಲ್ಲಾಡಿಸುವಂತೆ ಮಾಡುವ ಅನೇಕ ಬಗೆಯ ವಿಚಾರವೇ ವಿತರ್ಕವೆನಿಸುವುದು. "ಕಿಂ ರುದ್ಧಃ ಪ್ರಿಯಯಾ" ಎಂಬ ಪದ್ಯದಲ್ಲಿ ಪ್ರಿಯನು ಸಂಕೇತಸ್ಥಾನಕ್ಕೆ ನಿರ್ದಿಷ್ಟಸಮಯದಲ್ಲಿ ಬಾರದೇಇರುವುದಕ್ಕೆ ಅನೇಕ ಬಗೆಯ ಆಲೋಚನೆಗಳನ್ನು ಪ್ರೇಯಸಿಯು ನಡೆಸಿದ್ದು ವಿತರ್ಕವೆನಿಸಿದೆ.

ಹೀಗೆ ವ್ಯಭಿಚಾರಿಭಾವಗಳು ಮೂವತ್ತಮೂರೆಂದು ಅಕ್ಷರದಲ್ಲಿ ಹೇಳಿದ್ದರೂ ಅಷ್ಟೇ ಎಂಬ ನಿರ್ಧಾರವಿಲ್ಲವೆಂಬುದನ್ನು ತಿಳಿಸುತ್ತಾನೆ. ರತಿ ಹಾಸ ಮೊದಲಾದ ಸ್ಥಾಯಿಭಾವಗಳೂ ಸಹ ಕೆಲವು ವೇಳೆ ವ್ಯಭಿಚಾರಿಭಾವಗಳಾಗುತ್ತವೆ. ಒಂದು ರಸದಲ್ಲಿ ಅದರ ಸ್ಥಾಯಿಭಾವವನ್ನು ಬಿಟ್ಟು ಬೇರೊಂದು ಸ್ಥಾಯಿಭಾವವಿದ್ದಲ್ಲಿ ಅದನ್ನು ವ್ಯಭಿಚಾರಿಭಾವವೆಂದು ತಿಳಿಯಬೇಕು, ಶೃಂಗಾರರಸದಲ್ಲಿ ಬೇರೆ ಭಾವದಿಂದ ತಪ್ಪಿಸಲಿಕ್ಕಾಗದಷ್ಟು ಪ್ರಧಾನವೆನಿಸಿದ್ದರಿಂದ ರತಿಯೇ ಸ್ಥಾಯಿ ಎನಿಸಿದೆ. ಅಲ್ಲಿ ಹಾಸವು ತೋರಿದರೆ ಅದು ಶೃಂಗಾರರಸಕ್ಕೆ ವ್ಯಭಿಚಾರಿಭಾವವೆನಿಸುವುದೇ ಹೊರತು ಸ್ಥಾಯಿಯಾಗಲಾರದು. ರಸವಾಗಲಿಕ್ಕೆ ಅನುಕೂಲವೆನಿಸಿದ ಭಾವವಷ್ಟೇ ಸ್ಥಾಯಿ ಎನಿಸಬಲ್ಲದು. ಆದ್ದರಿಂದ ಶೃಂಗಾರರಸಕ್ಕೆ ಹಾಸವು ಸ್ಥಾಯಿಯಾಗಲಾರದು.

ಹಾಗಾದರೆ ಯಾವ ಸ್ಥಾಯಿಭಾವವು ಯಾವ ರಸದಲ್ಲಿ ಸಂಚಾರಿಭಾವವೆನಿಸಬಲ್ಲದೆಂಬುದನ್ನು ತಿಳಿಸುತ್ತಾನೆ. ಶೃಂಗಾರ ಮತ್ತು ವೀರ ರಸಗಳಲ್ಲಿ ಹಾಸವೂ, ವೀರರಸದಲ್ಲಿ ಕ್ರೋಧವೂ, ಶಾಂತರಸದಲ್ಲಿ ಜುಗುಪ್ಸೆಯೂ ವ್ಯಭಿಚಾರಿಭಾವಗಳೆನಿಸುತ್ತವೆ. ಹಾಗೆಯೇ ಹಾಸ್ಯರಸದಲ್ಲಿ ವಿಸ್ಮಯವೂ, ಕರುಣರಸದಲ್ಲಿ ಭಯವೂ, ರೌದ್ರರಸದಲ್ಲಿ

ಹಾಸವೂ, ಭಯಾನಕರಸದಲ್ಲಿ ಶೋಕವೂ ವ್ಯಭಿಚಾರಿಭಾವವೆನಿಸುತ್ತವೆ. ವ್ಯಭಿಚಾರಿ ಭಾವಗಳಲ್ಲಿ ಹೀಗೆ ಸಂಚಾರಮಾಡುವ ಸ್ವಭಾವವಿರುವುದರಿಂದ ಅವನ್ನು ಸಂಚಾರಿ ಭಾವಗಳೆಂದು ಕರೆಯಲಾಗಿದೆ.

ಸ್ಥಾಯಿಭಾವದ ಸ್ವರೂಪವನ್ನು ವಿವರಿಸುತ್ತಾನೆ. ಅನುಕೂಲವೋ ಅಥವಾ ಪ್ರತಿಕೂಲವೋ ಆಗಿರುವ ವಿಭಾವಾದಿಭಾವಗಳು ಯಾವ ಭಾವವನ್ನು ಮನಸ್ಸಿಗೆ ಗೋಚರವಾಗದಂತೆ ಮಾಡಲು ಅಸಮರ್ಥವೆನಿಸಿವೆಯೋ ಅಂತಹ ಭಾವವು ರಸೋತ್ಪತ್ತಿಗೆ ಸೂಕ್ಷ್ಮರೂಪದಿಂದ ಕಾರಣವಾಗಿದ್ದು ಸ್ಥಾಯಿ ಎನಿಸುತ್ತದೆ. ವಿಭಾವ ಅನುಭಾವ ವ್ಯಭಿಚಾರಿಭಾವಗಳು ಅನುಕೂಲವೇ ಆಗಿರಲಿ, ಪ್ರತಿಕೂಲವೇ ಆಗಿರಲಿ. ಹಾಗೆ ಇದ್ದರೂ ಯಾವ ಭಾವವು ಸ್ಥಿರವಾಗಿ ನಿಂತು ಮನಸ್ಸಿಗೆ ಗೋಚರವಾಗಬಲ್ಲದೋ ಅದೇ ಸ್ಥಾಯಿ ಎನಿಸುವುದು.

ಪುಷ್ಪ ಮಾಲೆಯೊಳಗಿರುವ ಸೂತ್ರದಂತೆ ಭಾವಗಳೆಲ್ಲದರಲ್ಲೂ ಅನುಸರಿಸಿಕೊಂಡು ಬಂದು ಬೇರೊಂದು ಭಾವದಿಂದ ಕಣ್ಮರೆಯಾಗದಂತೆ ಸ್ಥಿರವಾಗಿ ನಿಂತು ರಸವನ್ನು ಪುಷ್ಟಿಗೊಳಿಸುವ ಭಾವವೇ ಸ್ಥಾಯಿಭಾವವೆನಿಸುತ್ತದೆ. ಈ ಸ್ಥಾಯಿಭಾವಗಳು ರತಿ, ಹಾಸ ಶೋಕ, ಕ್ರೋಧ, ಉತ್ಸಾಹ, ಭಯ ಜುಗುಪ್ಸೆ, ವಿಸ್ಮಯ, ಶಮ ಎಂದು ಒಂಬತ್ತು ಇವೆ. ಅವುಗಳಲ್ಲಿ ಇಲ್ಲಿ ಎಂಟು ಸ್ಥಾಯಿಭಾವಗಳನ್ನು ಮೊದಲು ತಿಳಿಸಿ 'ಶಮವೂ ಒಂದು ಉಂಟು' ಎಂದು ಬೇರೆಯಾಗಿ ತಿಳಿಸಿರುವುದರಿಂದ ಇವರ ಬಗ್ಗೆ ಬಿನ್ನಾಭಿಪ್ರಾಯವಿದೆ ಎಂಬುದು ವ್ಯಕ್ತವಾಗುತ್ತದೆ. ಮನಸ್ಸಿಗೆ ಅನುಕೂಲವಾದ ವಸ್ತುವಿನಲ್ಲಿ ಅಂಟಿಕೊಂಡಂತೆ ಇರುವುದೇ ರತಿ ಎನಿಸುವುದು. ಮಾತಿನ ವಿಕಾರದಿಂದ ಮನಸ್ಸಿನ ವಿಕಾಸವೇ ಹಾಸವೆನಿಸುವುದು. ಇಷ್ಟನಾಶವೇ ಮೊದಲಾದ ಹೇತುಗಳಿಂದ ಮನಸ್ಸಿಗೆ ಆಗುವ ದುಃಖವೇ ಶೋಕವೆನಿಸುವುದು. ವಿರೋಧಿಗಳಲ್ಲಿ ಉಗ್ರಪ್ರಕೃತಿಯನ್ನು ತಾಳಿ ಅವರಿಗೆ ಕೆಡುಕನ್ನು ಮಾಡುವ ಇಚ್ಛೆಯಿಂದ ಮನಸ್ಸು ಉರಿಯುವಂತೆ ಕಾಣುವುದೇ ಕ್ರೋಧವೆನಿಸುವುದು. ಕಾರ್ಯಗಳನ್ನು ಆರಂಭಿಸುವಾಗ ಸ್ಥಿರವಾಗಿ ನಡೆಸುವ ಉದ್ಯಮವೇ ಉತ್ಸಾಹವೆನಿಸುವುದು. ಭಯಂಕರವಾದ ಶಕ್ತಿಯಿಂದ ಹುಟ್ಟಿದ ಮನೋವೈಕ್ಲವ್ಯವೇ ಭಯವೆನಿಸುವುದು. ತಿಳಿಯಬೇಕಾದ ವಸ್ತುಗಳಲ್ಲಿ ದೋಷವನ್ನು ಗಮನಿಸುವುದರಿಂದ ಹುಟ್ಟುವ ದುಸಿಯೇ ಜುಗುಪ್ಸೆ ಎನಿಸುವುದು. ಲೋಕದ ಎಲ್ಲೆಯನ್ನು ಮೀರಿದಂತಹ ಇಂದ್ರಜಾಲವೇ ಮೊದಲಾದ ಅಲೌಕಿಕವ್ಯಾಪಾರಗಳನ್ನು ತಿಳಿದಾಗ ಮನಸ್ಸಿಗೆ ಆಗುವ ಪ್ರಸಾರವೇ ವಿಸ್ಮಯವೆನಿಸುವುದು. ಆದ್ದರಿಂದಲೇ ಇದು ಹಾಸದಿಂದ ಬೇರೆ ಎನಿಸಿದೆ. ವೈರಾಗ್ಯದಶೆಯಲ್ಲಿ ಪರಮಾತ್ಮನಲ್ಲಿ ಮನಸ್ಸು ಬೆರೆಯುವುದರಿಂದ ಉಂಟಾಗುವ ಸುಖವೇ ಶಮವೆನಿಸುವುದು. ಮಾಲತೀಮಾಧವದಲ್ಲಿ ರತಿಯೂ, ನಟಕಮೇಲಕದಲ್ಲಿ ಹಾಸವೂ, ರಾಮಾಯಣದಲ್ಲಿ ಶೋಕವೂ, ಮಹಾಭಾರತದಲ್ಲಿ ಶಮವೂ, ಶಿಶುಪಾಲವಧದಲ್ಲಿ ಕ್ರೋಧವೂ, ವೇಣೀಸಂಹಾರದಲ್ಲಿ ಉತ್ಸಾಹವೂ, ಮಾಲತೀಮಾಧವದ ಐದನೆಯ ಅಂಕದಲ್ಲಿ ಜಿಗುಪ್ಸೆಯೂ ಸ್ಥಾಯಿಭಾವಗಳೆನಿಸಿವೆ. ರತಿ ಮೊದಲಾದ

ಭಾವಗಳು ತಮಗೆ ಸಂಬಂಧಿಸಿದ ರಸಗಳನ್ನು ಪ್ರಕಾಶಗೊಳಿಸುತ್ತವೆ. ಹೀಗೆ ದೃಶ್ಯ ಕಾವ್ಯಗಳಲ್ಲಿ ಅಭಿನಯದ ಮೂಲಕವೂ ಶ್ರವ್ಯಕಾವ್ಯಗಳಲ್ಲಿ ಓದಿ ಕೇಳುವುದರಿಂದಲೂ ಅನೇಕ ಬಗೆಯ ರಸಗಳನ್ನು ಪ್ರಕಾಶಗೊಳಿಸುವುದರಿಂದ ಸ್ಥಾಯಿಭಾವಗಳೂ ಸಂಚಾರಿ ಭಾವಗಳೂ ವ್ಯಭಿಚಾರಿಭಾವಗಳೂ ಭಾವವೆನಿಸಿವೆ. ಇಲ್ಲಿ ಸಾತ್ತ್ವಿಕವೆಂಬ ಪದವು ಅನುಭಾವಗಳಿಗೆ ಮಾತ್ರವೇ ಅನ್ವಯಿಸುವುದಾದರೂ ಬಹುವಚನದಲ್ಲಿರುವುದರಿಂದ ವಿಭಾವಗಳಿಗೂ ಅನ್ವಯಿಸುವುದು.

ಅಥ ರಸಸ್ಯ ಭೇದಾನಾಹ—

ಶೃಂಗಾರಹಾಸ್ಯಕರುಣರೌದ್ರವೀರಭಯಾನಕಾಃ।
ಬೀಭತ್ಸೋಽದ್ಭುತ ಇತ್ಯಷ್ಟೌ ರಸಾಃ ಶಾಂತಸ್ತಥಾ ಮತಃ॥

ತತ್ರ ಶೃಂಗಾರಃ — ಶೃಂಗಂ ಹಿ ಮನ್ಮಥೋದ್ಭೇದಸ್ತದಾಗಮನಹೇತುಕಃ।
ಉತ್ತಮಪ್ರಕೃತಿಪ್ರಾಯೋ ರಸಃ ಶೃಂಗಾರ ಇಷ್ಯತೇ॥
ಪರೋಢಾಂ ವರ್ಜಯಿತ್ವಾತ್ರ ವೇಶ್ಯಾಂ ಚಾನನುರಾಗಿಣೀಮ್।
ಆಲಂಬನಂ ನಾಯಿಕಾಃ ಸ್ಯುರ್ದಕ್ಷಿಣಾದ್ಯಾಶ್ಚ ನಾಯಕಾಃ॥
ಚಂದ್ರಚಂದನರೋಲಂಬರುತಾದ್ಯುದ್ದೀಪನಂ ಮತಮ್।
ಭ್ರೂವಿಕ್ಷೇಪಕಟಾಕ್ಷಾದಿರನುಭಾವಃ ಪ್ರಕೀರ್ತಿತಃ॥
ತ್ಯಕ್ತ್ವೌಗ್ರ್ಯಮರಣಾಲಸ್ಯಜುಗುಪ್ಸಾ ವ್ಯಭಿಚಾರಿಣಃ।
ಸ್ಥಾಯೀ ಭಾವೋ ರತಿಃ ಶ್ಯಾಮವರ್ಣೋಽಯಂ ವಿಷ್ಣುದೈವತಃ॥

ಯಥಾ 'ಶೂನ್ಯಂ ವಾಸಗೃಹಂ' ಇತ್ಯಾದಿ. ಅತ್ರ ಉಕ್ತಸ್ವರೂಪಃ ಪತಿ, ಃಉಕ್ತ ಸ್ವರೂಪಾ ಬಾಲಾ ಆಲಂಬನವಿಭಾವೌ. ಶೂನ್ಯಂ ವಾಸಗೃಹಂ ಉದ್ದೀಪನ ವಿಭಾವಃ. ಚುಂಬನಮನುಭಾವಃ. ಲಜ್ಜಾಹಾಸೌ ವ್ಯಭಿಚಾರಿಣೌ. ಏತೈರಭಿವ್ಯಕ್ತಃ ಸಹೃದಯರತಿಭಾವಃ ಶೃಂಗಾರರಸರೂಪತಾಂ ಭಜತೇ.

ತದ್ಭೇದಾನಾಹ– ವಿಪ್ರಲಂಭೋಽಥ ಸಂಭೋಗ ಇತ್ಯೇಷ ದ್ವಿವಿಧೋ ಮತಃ।

ತತ್ರ– ಯತ್ರ ತು ರತಿಃ ಪ್ರಕೃಷ್ಟಾ ನಾಭೀಷ್ಟಮುಪೈತಿ ವಿಪ್ರಲಂಭೋಽಸೌ॥
ಅಭೀಷ್ಟಂ ನಾಯಕಂ ನಾಯಿಕಾಂ ವಾ.।

ಸ ಚ ಪೂರ್ವರಾಗಮಾನಪ್ರವಾಸಕರುಣಾತ್ಮಕಶ್ಚತುರ್ಧಾ ಸ್ಯಾತ್॥

ತತ್ರ– ಶ್ರವಣಾದ್ದರ್ಶನಾದ್ವಾಪಿ ಮಿಥಃ ಸಂರೂಢರಾಗಯೋಃ।
ದಶಾವಿಶೇಷೋ ಯೋಽಪ್ರಾಪ್ತೌ ಪೂರ್ವರಾಗಃ ಸ ಉಚ್ಯತೇ॥
ಶ್ರವಣಂ ತು ಭವೇತ್ತತ್ರ ದೂತವಂದಿಸಖೀಮುಖಾತ್।
ಇಂದ್ರಜಾಲೇ ಚ ಚಿತ್ರೇ ಚ ಸಾಕ್ಷಾತ್ಸ್ವಪ್ನೇ ಚ ದರ್ಶನಮ್॥
ಅಭಿಲಾಷಶ್ಚಿಂತಾ ಸ್ಮೃತಿರ್ಗುಣಕಥನೋದ್ವೇಗಸಂಪ್ರಲಾಪಾಶ್ಚ।
ಉನ್ಮಾದೋಽಥ ವ್ಯಾಧಿರ್ಜಡತಾ ಮೃತಿರಿತಿ ದಶಾತ್ರ ಕಾಮದಶಾಃ॥
ಅಭಿಲಾಷಃ ಸ್ಪೃಹಾ ಚಿಂತಾ ಪ್ರಾಪ್ತ್ಯುಪಾಯಾದಿಚಿಂತನಮ್ ।

ಉನ್ಮಾದಶ್ಚಾಪರಿಚ್ಛೇದಶ್ಚೇತನಾಽಚೇತನೇಷ್ವಪಿ॥
ಅಲಕ್ಷ್ಯವಾಕ್ ಪ್ರಲಾಪಃ ಸ್ಯಾಚ್ಚೇತಸೋ ಭ್ರಮಣಾದ್ಭೃಶಮ್।
ವ್ಯಾಧಿಸ್ತು ದೀರ್ಘನಿಶ್ವಾಸಪಾಂಡುತಾಕೃಶತಾದಯಃ॥
ಜಡತಾ ಹೀನಚೇಷ್ಟತ್ವಮಂಗಾನಾಂ ಮನಸಸ್ತಥಾ।

ಶೇಷಂ ಸ್ಪಷ್ಟಮ್. ಕ್ರಮೇಣೋದಾಹರಣಾನಿ.

ಪ್ರೇಮಾರ್ದ್ರಾಃ ಪ್ರಣಯಸ್ಪೃಶಃ ಪರಿಚಯಾದುದ್ಗಾಢರಾಗೋದಯಾಃ
ತಾಸ್ತಾ ಮುಗ್ಧದೃಶೋ ನಿಸರ್ಗಮಧುರಾಶ್ಚೇಷ್ಟಾ ಭವೇಯುರ್ಮಯಿ।
ಯಾಸ್ವಂತಃಕರಣಸ್ಯ ಬಾಹ್ಯಕರಣವ್ಯಾಪಾರರೋಧೀ ಕ್ಷಣಾತ್
ಆಶಂಸಾಪರಿಕಲ್ಪಿತಾಸ್ವಪಿ ಭವತ್ಯಾನಂದಸಾಂದ್ರೋ ಲಯಃ॥

ಅತ್ರ ಮಾಲತೀಸಾಕ್ಷಾದ್ದರ್ಶನಪ್ರರೂಢರಾಗಸ್ಯ ಮಾಧವಸ್ಯಾಭಿಲಾಷಃ.

ಕಥಮೀಕ್ಷೇ ಕುರಂಗಾಕ್ಷೀಂ ಸಾಕ್ಷಾಲ್ಲಕ್ಷ್ಮೀಂ ಮನೋಭುವಃ।
ಇತಿ ಚಿಂತಾಕುಲಃ ಕಾಂತೋ ನಿದ್ರಾಂ ನೈತಿ ನಿಶೀಥಿನೀಮ್॥

ಅತ್ರ ಕಸ್ಯಾಶ್ಚಿನ್ನಾಯಿಕಾಯಾಃ ಇಂದ್ರಜಾಲದರ್ಶನಪ್ರರೂಢರಾಗಸ್ಯ ನಾಯಕಸ್ಯ ಚಿಂತಾ. ಇದಂ ಮಮ. 'ಮಯಿ ಸಕಪಟಮ್' ಇತ್ಯಾದೌ ಸ್ಮೃತಿಃ. "ನೇತ್ರೇ ಖಂಜನಗಂಜನೇ" ಇತ್ಯಾದೌ ಗುಣಕಥನಮ್. "ಶ್ವಾಸಾನ್ ಮುಂಚತಿ ಇತ್ಯಾದೌ ಉದ್ವೇಗಃ.

ತ್ರಿಭಾಗಶೇಷಾಸು ನಿಶಾಸು ಚ ಕ್ಷಣಂ ನಿಮೀಲ್ಯ ನೇತ್ರೇ ಸಹಸಾ ವ್ಯಬುಧ್ಯತ।
ಕ್ವ ನೀಲಕಂಠ! ವ್ರಜಸೀತ್ಯಲಕ್ಷ್ಯವಾಕ್ ಅಸತ್ಯಕಂಠಾರ್ಪಿತಬಾಹುಬಂಧನಾ॥

ಅತ್ರ ಪ್ರಲಾಪಃ. "ಭ್ರಾತರ್ದ್ವಿರೇಫ" ಇತ್ಯಾದೌ ಉದ್ವೇಗಃ.

ಅತ್ರ ವ್ಯಾಧಿಃ—ಪಾಂಡುಕ್ಷಾಮಂ ವದನಂ ಹೃದಯಂ ಸರಸಂ ತವಾಲಸಂ ಚ ವಪುಃ।
ಆವೇದಯತಿ ನಿತಾಂತಂ ಕ್ಷೇತ್ರಿಯರೋಗಂ ಸಖಿ ಹೃದಂತಃ॥

ಅತ್ರ ಜಡತಾ—ಬಿಸಿನೀದಳಶಯನೀಯೇ ನಿಹಿತಂ ಸರ್ವಂ ಸುನಿಶ್ಚಲಮಂಗಮ್।
ದೀರ್ಘೋ ನಿಶ್ವಾಸಭರ ಏವ ಸಾಧಯತಿ ಜೀವತಿ ಇತಿ ಪರಮ್॥

ರಸವಿಚ್ಛೇದಹೇತುತ್ವಾನ್ಮರಣಂ ನೈವ ವರ್ಣ್ಯತೇ॥
ಜಾತಪ್ರಾಯಂ ತು ತದ್ವಾಚ್ಯಂ ಚೇತಸಾ ಕಾಂಕ್ಷಿತಂ ತಥಾ।
ವರ್ಣ್ಯತೇಽಪಿ ಯದಿ ಪ್ರತ್ಯುಜ್ಜೀವನಂ ಸ್ಯಾದೂದರತಃ॥

ತತ್ರ ಆದ್ಯಂ ಯಥಾ— ಶೇಫಾಲಿಕಾಂ ವಿದಳಿತಾಮವಲೋಕ್ಯ ತನ್ವೀ
ಪ್ರಾಣಾನ್ ಕಥಂಚಿದಪಿ ಧಾರಯಿತುಂ ಪ್ರಭೂತಾ।
ಆಕರ್ಣ್ಯ ಸಂಪ್ರತಿ ರುತಂ ಚರಣಾಯುಧಾನಾಂ।
ಕಿಂ ವಾ ಭವಿಷ್ಯತಿ ನ ವೇದ್ಮಿ ತಪಸ್ವಿನೀ ಸಾ॥

ದ್ವಿತೀಯಂ. ರೋಲಂಬಾಃ ಪರಿಪೂರಯಂತು ಹರಿತೋ ಝುಂಕಾರಕೋಲಾಹಲೈಃ

ಯಥಾ— ಮಂದಂ ಮಂದಮುಪೈತು ಚಂದನವನೀಜಾತೋ ನಭಸ್ವಾನಪಿ।

ಮಾದ್ಯಂತಃ ಕಲಯಂತು ಚೂತಶಿಖರೇ ಕೇಲೀಪಿಕಾಃ ಪಂಚಮಂ ।
ಪ್ರಾಣಾಃ ಸತ್ವರಮಶ್ಮಸಾರಕಠಿನಾ ಗಚ್ಛಂತು ಗಚ್ಛಂತ್ವಮೀ ॥
ತೃತೀಯಂ ಯಥಾ— ಕಾದಂಬರ್ಯಾಂ ಮಹಾಶ್ವೇತಾಪುಂಡರೀಕವೃತ್ತಾಂತೇ.
ಏಷ ಚ ಪ್ರಕಾರಃ ಕರುಣವಿಪ್ರಲಂಭವಿಷಯ ಇತಿ ವಕ್ಷ್ಯಾಮಃ.
ಕೇಚಿತ್ತು— ನಯನಪ್ರೀತಿಃ ಪ್ರಥಮಂ ಚಿತ್ತಾಸಂಗಸ್ತತೋಽಥ ಸಂಕಲ್ಪಃ ।
ನಿದ್ರಾಚ್ಛೇದಸ್ತನುತಾ ವಿಷಯನಿವೃತ್ತಿಸ್ತ್ರಪಾನಾಶಃ ॥
ಉನ್ಮಾದೋ ಮೂರ್ಛಾ ಮೃತಿರಿತ್ಯೇತಾಃ ಸ್ಮರದಶಾ ದಶೈವ ಸ್ಯುಃ॥ ಇತಿ.

ರಸಗಳು ಹದಿನಾರು ಬಗೆ ಎಂದು ಗೋಸ್ವಾಮಿಯೂ, ಹತ್ತು ಬಗೆ ಎಂದು ಭರತ ರಭಸರೂ, ಒಂಭತ್ತು ಬಗೆ ಎಂದು ರತ್ನಕೋಷ ಮೊದಲಾದವರೂ. ಎಂಟು ಬಗೆ ಎಂದು ಮಮ್ಮಟ ಮೊದಲಾದರೂ, ನಾಲ್ಕೇ ರಸಗಳೆಂದು ನವೀನರೂ ಹೇಳುವರು. ಆದರೂ ರಸಗಳು ಎಂಟೆಂಬುದು ಯುಕ್ತಿಯುಕ್ತವೂ, ಬಹು ಜನರಿಗೆ ಸಮ್ಮತವೂ ಆದ್ದರಿಂದ ತನ್ನ ಮತದಲ್ಲೂ ಎಂಟು ರಸಗಳಿವೆ ಎಂಬುದನ್ನು ಸೂಚಿಸಲು ವಿಶ್ವನಾಥನು “ಅಷ್ಟೌ ರಸಾಃ’ ಎಂದು ತಿಳಿಸಿ ಬೇರೆ ವಾಕ್ಯದಿಂದ ‘ಶಾಂತಸ್ತಥಾ ರಸಃ’ ಎಂದು ಹೆಳಿದ್ದಾನೆ. ಆದರೂ ‘ತಥಾ’ ಎಂದು ಹೇಳಿದ್ದರಿಂದ ವಾತ್ಸಲ್ಯವೆಂಬ ಮತ್ತೊಂದೂ ಇದೆ ಎಂದೂ, ಭರತನಿಗೂ ಅದು ಸಮ್ಮತವೆಂದೂ ತಿಳಿಯುತ್ತದೆ. ಇವೆಲ್ಲಕ್ಕೂ ಶೃಂಗಾರವೇ ಪ್ರಧಾನವಾದ್ದರಿಂದ ಅದನ್ನು ಮೊದಲು ತಿಳಿಸಲಾಗಿದೆ. ಶೃಂಗವೆಂದರೆ ಕಾಮೋದ್ರೇಕವೆಂಬುದು ಆಲಂಕಾರಿಕರಲ್ಲಿ ರೂಢಿ ಎನಿಸಿದೆ. ಜನರಿಗೆ ಹುಟ್ಟುವ ಭಾವಗಳಲ್ಲಿ ಇದೇ ಮೊಲನೆಯದು. ಅದನ್ನು ಹುಟ್ಟಿಸಲು ಕಾರಣವಾದವ್ದೇ ಶೃಂಗಾರ ರಸ. ಅಲ್ಲಿಗೆ ಉತ್ತಮಪ್ರಕೃತಿಯೇ ಆಲಂಬನವಾಗುಳ್ಳದ್ದೇ ಶೃಂಗಾರವೆಂದು ಹೇಳಿದಂತಾಯಿತು. ಅಧಮಪ್ರಕೃತಿಯವನಲ್ಲೂ ಶೃಂಗಾರವಿದ್ದೇ ಇರುತ್ತದೆಯಾದರೂ ಅದು ಶೃಂಗಾರರಸವೆನಿಸುವುದಿಲ್ಲ. ಉತ್ತಮಪ್ರಕೃತಿಯವನಲ್ಲಿ ಹುಟ್ಟುವ ಕಾಮವಿಕಾರವೇ, ಶೃಂಗ (ಉನ್ನತ ಮಟ್ಟದ್ದು) ಎನಿಸಿ ಅದನ್ನು ಬೆಳೆಸುವುದರಿಂದ ಶೃಂಗಾರರಸವಲ್ಲಿ ಗಾಂಭೀರ್ಯವೇ ಜೀವಾಳವೆನಿಸಿದೆ. ಆದ್ದರಿಂದಲೇ ಶೃಂಗಾರರಸಕ್ಕೆ ಪರೋಢೆ, ಅನುರಾಗವಿಲ್ಲದ(ವೇಶ್ಯೆ) ಇವರನ್ನು ಬಿಟ್ಟು ಉಳಿದ ನಾಯಿಕೆಯರು ಹಾಗೂ ದಕ್ಷಿಣ ಮೊದಲಾದ ಎಲ್ಲಾ ಬಗೆಯ ನಾಯಕರು ಆಲಂಬನರೆನಿಸಿದುವರು. ಇವರಲ್ಲಿ ಪರಕೀಯ ಕನ್ಯೆಯೂ, ಅನುರಾಗವುಳ್ಳ ವೇಶ್ಯೆಯೂ ಆಲಂಬನರಾಗುವರೆಂಬುದು ಸ್ಪಷ್ಟ. ಬೇರೊಬ್ಬನು ಮದುವೆಯಾಗಿರುವ ಸ್ತ್ರೀಯೇ ಪರೋಢೆ. ಆಕೆಯಲ್ಲೂ ಅನುರಾಗವಿಲ್ಲದ ವೇಶ್ಯೆಯಲ್ಲೂ ಶೃಂಗಾರವಿದ್ದರೆ ಅದು ಆಭಾಸವಾಗುವುದೇ ಹೊರತು ರಸವೆನಿಸುವುದಿಲ್ಲ. ಚಂದ್ರ, ಚಂದನ, ಭ್ರಮರದ ಧ್ವನಿ ಇವೇ ಮೊದಲಾದವು ಉದ್ದೀಪನವಿಭಾವವೆನಿಸುತ್ತವೆ. ಹುಬ್ಬನ್ನು ಗಂಟುಹಾಕುವುದು, ಓರೆನೋಟ ಮೊದಲಾದ ಕ್ರಿಯೆಗಳು ಅನುಭಾವವೆನಿಸುತ್ತವೆ. ಉಗ್ರತೆ, ಮರಣ, ಆಲಸ್ಯ, ಜಿಗುಪ್ಸೆ ಇವನ್ನು ಬಿಟ್ಟು ಉಳಿದವು ವ್ಯಭಿಚಾರಿಭಾವಗಳೆನಿಸಿವೆ. ಇವುಗಳಿಂದ ಪುಷ್ಟಿಯನ್ನು ಹೊಂದಿದ ಸ್ಥಾಯಿ

ಭಾವವೇ ರಸವಾಗಿ ಪರಿಣಮಿಸುತ್ತದೆ. ಮಾನವರ ಹೃದಯದಲ್ಲಿ ಕೆಲವು ಭಾವಗಳು ಸ್ಥಿರವಾಗಿ ನೆಲಸಿದ್ದು ಅವೂ ಗೋಪ್ಯವೂ ಗಂಭೀರವೂ ಆಗಿರುವುದರಿಂದ ವಿಭಾವ ಅನುಭಾವ ವ್ಯಭಿಚಾರಿಭಾವಗಳಿಂದ ವಿಕಾಸಗೊಂಡು ರಸವಾಗಿ ಪರಿಣಮಿಸಿ ನಿರ್ಮಲಹೃದಯರಿಗೆ ಆಸ್ವಾದಿಸಲು ಯೋಗ್ಯವಾಗುತ್ತವೆ. ಇಲ್ಲಿ ಹೇಳಿರುವ ವಿಭಾವ ಅನುಭಾವ ವ್ಯಭಿಚಾರಿ ಭಾವಗಳು ರತಿಭಾವವನ್ನು ಬೆಳೆಸಲು ಅನುಕೂಲವಾಗಿರುವುವು. ಇದು ಶ್ಯಾಮವರ್ಣವಿದ್ದು ವಿಷ್ಣುದೇವತೆಗೆ ಸಂಬಂಧಿಸಿದೆ. ಇದರ ವಿಕಾಸಸ್ಥಿತಿಯೇ ಶೃಂಗಾರದೆನಿಸಿದೆ.

ಇದರಲ್ಲಿ ಸಂಭೋಗ ವಿಪ್ರಲಂಭ ಎಂದು ಎರಡು ಬಗೆಗಳಿವೆ. ಎಲ್ಲಿ ರತಿಯು ಸಾಕಷ್ಟು ಪುಷ್ಟಿಯನ್ನು ಹೊಂದದೆ, ಇಷ್ಟನಾದ ನಾಯಕನಿಗೂ ನಾಯಿಕೆಗೂ ಅನ್ವಯಿಸುವುದಿಲ್ಲವೋ ಅಂತಹ ಕಡೆಗಳಲ್ಲಿ ವಿಪ್ರಲಂಭಶೃಂಗಾರವನ್ನೇ ಹೇಳಬೇಕು. ಇದು ಪೂರ್ವರಾಗ, ಮಾನ, ಪ್ರವಾಸ, ಕರುಣ ಎಂದು ನಾಲ್ಕು ಬಗೆಯಾಗಿದೆ. ಪರಸ್ಪರವಾಗಿ ಕೇಳಿದ್ದರಿಂದಲೋ ಅಥವಾ ನೋಡಿದ್ದರಿಂದಲೋ ಅನುರಾಗವು ಬೆಳೆದಿದ್ದು ಅದನ್ನು ಅನುಭವಿಸಲಿಕ್ಕೆ ಆಗದೇ ಇರುವ ಅವಸ್ಥಾವಿಶೇಷವೇ ಪೂರ್ವರಾಗವೆನಿಸುತ್ತದೆ. ಇಲ್ಲಿ ದೂತ, ಹೊಗಳುಭಟ, ಸಖಿ ಇವರ ಕಡೆಯಿಂದ ನಾಯಕನಾಯಿಕೆಯರು ಒಬ್ಬರನ್ನೊಬ್ಬರು ಕೇಳಬಹುದು. ಚಿತ್ರದಲ್ಲಿ ನೇರವಾಗಿಯಾಗಲಿ, ಇಂದ್ರಜಾಲದ ಮೂಲಕವಾಗಲೀ ಸ್ವಪ್ನದಲ್ಲಾಗಲೀ, ಅವರು ಒಬ್ಬರನ್ನೊಬ್ಬರು ನೋಡಬಹುದು.

ಈ ಪೂರ್ವರಾಗದಲ್ಲೂ ಅಭಿಲಾಷೆ, ಚಿಂತೆ, ಸ್ಮೃತಿ, ಗುಣಕಥನ, ಉದ್ವೇಗ, ಸಂಪ್ರಲಾಪ, ಉನ್ಮಾದ, ವ್ಯಾಧಿ, ಜಡತೆ, ಮರಣ ಇವು ಹತ್ತು ಅವಸ್ಥೆಗಳು ನಾಯಕನಾಯಿಕೆಯರಿಗೆ ಕಾಮವನ್ನು ಹುಟ್ಟಿಸುವ ರತಿಯಿಂದ ಸಂಭವಿಸುತ್ತವೆ. ನಾಯಕನಾಯಿಕೆಯರಿಗೆ ಪರಸ್ಪರವಾಗಿ ಸೇರಬೇಕೆಂಬ ಇಚ್ಛೆಯೇ ಅಭಿಲಾಷವೆನಿಸುವುದು. ಪರಸ್ಪರವಾಗಿ ಸೇರುವ ಉಪಾಯಗಳನ್ನು ಆಲೋಚಿಸುವುದೇ ಚಿಂತೆ ಎನಿಸುವುದು. ದೂರದಲ್ಲಿದ್ದು ಒಬ್ಬರನ್ನೊಬ್ಬರು ಸೇರಿಕೊಳ್ಳುವುದೇ ಸ್ಮೃತಿ. ಒಬ್ಬರ ಗುಣಗಳನ್ನು ಮತ್ತೊಬ್ಬರ ಬಾಯಿಂದ ಹೇಳುವುದೇ ಗುಣಕಥನ. ಚೇತನವ್ಯಕ್ತಿಗಳನ್ನು ಜಡವಸ್ತುಗಳಿಂದ ಪ್ರತ್ಯೇಕಿಸಲಿಕ್ಕಾಗದಿರುವ ಅವಸ್ಥೆಯೇ ಉನ್ಮಾದವೆನಿಸುವುದು. ಒಬ್ಬರನ್ನೊಬ್ಬರು ಗಮನಿಸದೆಯೇ ಮಾತನಾಡುವುದು ಪ್ರಲಾಪವೆನಿಸುತ್ತದೆ. ಮನಸ್ಸು ಆಗಾಗ್ಗೆ ಚಲಿಸುವುದರಿಂದ ಈ ಅವಸ್ಥೆಯುಂಟಾಗುತ್ತದೆ. ದೀರ್ಘನಿಶ್ವಾಸ, ಶರೀರವೆಲ್ಲವೂ ಕೃಶವಾಗುವುದು ಮತ್ತು ಬೆಳ್ಳಗಾಗುವುದು ಇವೇ ಮೊದಲಾದವು ನಾಯಕನಿಗೂ ನಾಯಿಕೆಗೂ ಅನ್ವಯಿಸುತ್ತವೆ. ದೇಹದ ಇಂದ್ರಿಯಗಳು ಮತ್ತು ಮನಸ್ಸು ನೀಚಕೃತ್ಯಗಳಲ್ಲಿ ತೊಡಗುವುದೇ ಜಡತೆ ಎನಿಸುವುದು. ಇವಕ್ಕೆ ಕ್ರಮವಾಗಿ ಉದಾಹರಣಗಳನ್ನು ಕೊಡಲಾಗಿದೆ. ಮಾಲತೀಮಾಧವದಲ್ಲಿ ಮಾಲತಿಯನ್ನು ಉದ್ದೇಶಿಸಿ ಸ್ಮಶಾನಕ್ಕೆ ಹೋಗುವ ಮಾಧವನು ಹೇಳುವ ಮಾತಿದು... "ಪ್ರೀತಿ ಎಂಬುದು ಸೂಕ್ಷ್ಮರೂಪದಲ್ಲಿ ಹುಟ್ಟಿರುವುದರಿಂದ ಸರಸವಾಗಿ ಬೆಳೆಯಲು ಅನುಕೂಲವಾಗಿದ್ದು ಒಬ್ಬರಿಗೊಬ್ಬರಿಗೆ

ಅಭಿಪ್ರಾಯವನ್ನು ಹೊಂದಿಸಿಕೊಳ್ಳುವುದರಿಂದ ಹೆಚ್ಚು ವ್ಯಾಪಿಸಿದ್ದು ಸಹಜವಾಗಿಯೇ ಮನೋಹರವಾಗಿರುವ ಕಾಮಿನಿಯ ಆಯಾಯ ಓರೆನೋಟ ಮೊದಲಾದ ಚೇಷ್ಟೆಗಳು ನನ್ನಲ್ಲಿ ಬೀಳಲಿ. ಇಂತಹ ಬಯಕೆಯಿಂದ ಕಲ್ಪಿಸಿದ ಆ ಚೇಷ್ಟೆಗಳಲ್ಲಿ ಒಂದು ಕ್ಷಣಕಾಲ ವಾದರೂ ಹೊರಗಿನ ವ್ಯವಹಾರಗಳನ್ನು ತಡೆಗಟ್ಟಲು ಸಮರ್ಥವೆನಿಸಿ ನಿರಂತರವೂ ಆನಂದದಿಂದ ಕೂಡಿದ ಮನಸ್ಸಿನ ತಲ್ಲೀನತೆಯು ಉಂಟಾಗಬಹುದು."

ಇಲ್ಲಿ ಮಾಲತಿಯನ್ನು ನೇರವಾಗಿ ನೋಡಿದ್ದರಿಂದ ಅನುರಾಗವು ಬೆಳೆದು ಮಾಧವ ನಿಗೆ ಆಕೆಯ ಮೇಲೆ ಇಚ್ಛೆ ಹುಟ್ಟಿರುವುದಾಗಿ ತಿಳಿಸಿದೆ. "ಮನ್ಮಥನ ಹೆಂಡತಿಯೋ ಏನೋ ಎಂಬಂತಿರುವ ಪ್ರೇಯಸಿಯನ್ನು ಎಂದು ನೋಡುವೆನೋ?ಎಂಬ ಚಿಂತೆಯಲ್ಲಿಯೇ ವ್ಯಾಕುಲಗೊಂಡ ಪ್ರಿಯನಿಗೆ ರಾತ್ರಿವೇಳೆ ನಿದ್ರೆಯೇ ಬರುವುದಿಲ್ಲ." ಇಲ್ಲಿ ಒಬ್ಬ ನಾಯಿಕೆಯನ್ನು ಇಂದ್ರಜಾಲಪ್ರಯೋಗದಿಂದ ನೋಡಿ ಅನುರಾಗವನ್ನು ಬೆಳೆಸಿಕೊಂಡ ನಾಯಕನಿಗೆ ಇರುವ ಚಿಂತೆಯ ವಿವರವನ್ನು ಇಲ್ಲಿ ತಿಳಿಸಲಾಗಿದೆ. 'ಮಯಿ ಸಕಪಟಂ' ಎಂಬ ಪದ್ಯದಲ್ಲಿ ನಾಯಕನಿಗೆ ನಾಯಿಕೆಯ ಸ್ಮರಣವನ್ನು ತಿಳಿಸಿದೆ. "ನೇತ್ರೇ ಖಂಜನ ಗಂಜನೇ" ಎಂಬ ಪದ್ಯದಲ್ಲಿ ನಾಯಕ ನಾಯಿಕೆಯರ ಗುಣಕಥನವನ್ನು ಕಾಣ ಬಹುದು. 'ಶ್ವಾಸಾನ್ ಮುಂಚತಿ' ಎಂಬ ಪದ್ಯದಲ್ಲಿ ಉದ್ವೇಗವನ್ನು ಸೂಚಿಸಿದೆ. ಕುಮಾರಸಂಭವದಲ್ಲಿ ಶಿವನಲ್ಲಿ ಅನುರಕ್ತಳಾಗಿದ್ದ ಪಾರ್ವತಿಯ ಅವಸ್ಥೆಯನ್ನು ಇಲ್ಲಿ ವರ್ಣಿಸಿದೆ. "ಮೂರನೆಯ ಜಾವವಷ್ಟೇ ಉಳಿದಿರುವ ರಾತ್ರಿಗಳಲ್ಲಿ ಒಂದು ಕ್ಷಣಕಾಲ ಕಣ್ಣನ್ನು ಮುಚ್ಚಿ ಕೂಡಲೆ ಆಕೆ ಎಚ್ಚರಗೊಳ್ಳುತ್ತಿದ್ದಳು. "ಎಲೈ ನೀಲಕಂಠನೇ, ನನ್ನ ಮಾತನ್ನು ಗಮನಿಸದೆಯೇ ನೀನು ಎಲ್ಲಿಗೆ ಹೋಗುತ್ತಿರುವೆ" ಎಂದು ಎದುರಿಗೆ ಇಲ್ಲದೇ ಇರುವ ಶಿವನ ಕುತ್ತಿಗೆಯಲ್ಲಿ ತೋಳುಗಳನ್ನು ನೀಡಿ ಆಲಿಂಗಿಸಿಕೊಳ್ಳುತ್ತಿದ್ದಳು." ಇಲ್ಲಿ ಶಿವನಿಲ್ಲದಿದ್ದರೂ ಅವನೊಡನೆ ಪಾರ್ವತಿಯು ಮಾತನಾಡುತ್ತಿದ್ದುದನ್ನು ತಿಳಿಸಿದೆ. 'ಭ್ರಾತರ್ದ್ವಿರೇಫ' ಎಂಬ ಪದ್ಯದಲ್ಲಿ ಉನ್ಮಾದಾವಸ್ಥೆಯನ್ನು ವರ್ಣಿಸಿದೆ.

"ಎಲೈ ಸಖಿಯೇ ನಿನ್ನ ಮುಖವು ಬೆಳ್ಳಗಾಗಿ ಕ್ಷೀಣವಾಗುತ್ತಿದೆ. ಹೃದಯವು ಪ್ರೇಮದಿಂದ ಕೂಡಿದೆ. ಶರೀರವು ಆಲಸ್ಯದಿಂದ ಕೂಡಿದೆ. ನಿನ್ನ ಶರೀರವು ಹೃದಯ ದೊಳಗೆ ಇರುವ ರೋಗವನ್ನು ಪ್ರಕಟಿಸುತ್ತದೆ" ಇಲ್ಲಿ ನಾಯಿಕೆಯ ಪ್ರಣಯರೋಗ ವನ್ನು ವರ್ಣಿಸಲಾಗಿದೆ.

"ಕಮಲದ ದಳಗಳ ಮೇಲೆ ಮಲಗಿರುವುದರಿಂದ ನಿನ್ನ ಶರೀರವು ಅತ್ಯಂತನಿಶ್ಚಲ ವಾಗಿದೆ. ಆದರೆ ನಾನು ಬದುಕಿರುವೆ ಎಂಬುದು ನಿನ್ನ ವಿಶೇಷವಾದ ನಿಟ್ಟುಸುರಿನಿಂದ ತಿಳಿದುಬರುತ್ತದೆ." ಇಲ್ಲಿ ದೇಹದ ಜಡಪ್ರಕೃತಿಯನ್ನು ಸೂಚಿಸಲಾಗಿದೆ.

ಮರಣವನ್ನು ಕಾಮವಿಕಾರದ ಒಂದು ಅವಸ್ಥೆ ಎಂದು ಭಾವಿಸಿ ವರ್ಣಿಸುವುದಾದರೆ ಆ ವೃತ್ತಾಂತವು ಶೃಂಗಾರರಸಕ್ಕೆ ಅವಕಾಶವನ್ನು ಕೊಡದೆ ಕರುಣರಸದಲ್ಲಿಯೇ ಕೊನೆ ಗಾಣುವುದರಿಂದ ಅದು ಶೃಂಗಾರರಸವನ್ನು ಹುಟ್ಟಿಸುವ ಹತ್ತು ಅವಸ್ಥೆಗಳಲ್ಲಿ ಒಂದು ಆಗಲಾರದು. ಅಲ್ಲಿ ಶೃಂಗಾರರಸವೇ ಕೊನೆಗಾಣುವುದರಿಂದ ಮರಣವನ್ನು ಕವಿಗಳು

ವರ್ಣಿಸುವುದಿಲ್ಲ; ಆದರೆ ಮರಣ ಸಂಭವಿಸಿತೆಂಬುದಕ್ಕೆ ಬದಲು ಇನ್ನೇನು ಸಂಭವಿಸಿದಂತೆಯೇ ಆಯಿತು ಎಂದು ವರ್ಣಿಸುವುದೊಂದು ರೀತಿ. ಮನಸ್ಸಿನಲ್ಲಿ ಮರಣವನ್ನು ಬಯಸುವುದೊಂದು ರೀತಿ. ಒಬ್ಬನು ಸತ್ತರೂ ಸಹ ಆದಷ್ಟು ಬೇಗನೆ ಮತ್ತೆ ಬದುಕಿಕೊಳ್ಳುವನೆಂದು ವರ್ಣಿಸುವುದು ಮೂರನೆಯ ರೀತಿ. ಹೀಗೆ ಮೂರು ಬಗೆಗಳಲ್ಲಿ ಮರಣವನ್ನು ವರ್ಣಿಸುವುದರಿಂದ ಅದು ಶೃಂಗಾರರಸಕ್ಕೆ ಪೋಷಕವಾದ ಹತ್ತು ಕಾಮದಶೆಗಳಲ್ಲಿ ಒಂದಾಗಲಿಕ್ಕೆ ಅರ್ಹವೆನಿಸುತ್ತದೆ. ಇದರಲ್ಲಿ ಮೊದಲನೆಯದನ್ನು ಹೀಗೆ ಉದಾಹರಿಸುತ್ತಾನೆ.

"ರಾತ್ರಿಯ ಕಾಲವು ಸ್ವಲ್ಪವೇ ಉಳಿದಿರುವ ವೇಳೆಯಲ್ಲಿ ನಾಯಕನ ಬಳಿಗೆ ದೂತಿಯು ಬಂದು ಹೇಳುತ್ತಾಳೆ. "ಕೃಶಾಂಗಿಯಾಗಿ ಶೋಚನೀಯಸ್ಥಿತಿಯಲ್ಲಿರುವ ನಾಯಿಕೆಯು ಶೇಫಾಲಿಕೆ ಎಂಬ ಹೂವು ಅರಳಿದ್ದನ್ನು ನೋಡಿ ಬಹಳ ಕಷ್ಟದಿಂದ ಪ್ರಾಣವನ್ನು ಉಳಿಸಿಕೊಳ್ಳಲು ಸಮರ್ಥಳಾದಳು, ಈಗಲಾದರೋ ಕೋಗಿಲೆಗಳು ಕೂಗುವುದನ್ನು ಕೇಳಿ ಮುಂದೆ ಏನಾಗುವಳು ಎಂಬುದನ್ನು ನಾನು ಹೇಳಲಾರೆ" ಇಲ್ಲಿ ಮರಣವೆಂಬುದು ಸಂಭವಿಸಲಿರುವುದೆಂಬುದನ್ನು ತಿಳಿಸಿದೆ.

ಮರಣವನ್ನು ತಿಳಿಸುವ ಮೊದಲನೆಯ ರೀತಿಯನ್ನು ವರ್ಣಿಸಿ ಎರಡನೆಯ ರೀತಿಗೆ ಉದಾಹರಣವನ್ನು ಕೊಡುತ್ತಾನೆ. "ದುಂಬಿಗಳೆಲ್ಲವೂ ಸೇರಿ ದಿಕ್ಕುಗಳನ್ನು ಝುಂಕಾರಧ್ವನಿಯಿಂದ ತುಂಬಿಸಲಿ. ಮಲಯಪರ್ವತದ ಶ್ರೀಗಂಧವೃಕ್ಷಗಳ ಕಡೆಯಿಂದ ಬರುವ ಗಾಳಿ ಮೆಲ್ಲಗೆ ಬೀಸಲಿ. ಮಾವಿನಮರದಲ್ಲಿ ರಸವನ್ನು ಕುಡಿದು ಮದಿಸಿದ ಆಟದ ಕೋಗಿಲೆಗಳು ಪಂಚಮಸ್ವರವನ್ನು ಹಾಡಲಿ. ಇಷ್ಟೆಲ್ಲ ಸನ್ನಿವೇಶವಿದ್ದರೂ ಉಕ್ಕಿನಂತೆ ಕಠಿಣವಾಗಿರುವ ನನ್ನ ಪ್ರಾಣವು ಬೇಗನೆ ಹೋಗಲಿ" ಎಂದು ನಾಯಿಕೆಯು ತಾನೆ ತನ್ನ ಮರಣವನ್ನು ಬಯಸಿದ್ದಾಳೆ. ಮಹಾಶ್ವೇತೆ ಮತ್ತು ಪುಂಡರಿಕ ಇವರ ವೃತ್ತಾಂತದಲ್ಲಿ ಮರಣದ ಮೂರನೆಯ ಬಗೆಯನ್ನು ತಿಳಿಯಬಹುದು.

ಹಿಂದೆ ಹೇಳಿದ ಹತ್ತು ಅವಸ್ಥೆಗಳನ್ನು ಕೆಲವರು ಬೇರೆ ರೀತಿಯಲ್ಲಿ ಹೇಳುತ್ತಾರೆ. ನಾಯಕನಾಯಿಕೆಯರು ಒಬ್ಬರನ್ನೊಬ್ಬರು ಕಣ್ಣಿನಿಂದ ನೋಡಿ ಸಂತೋಷಪಡುವುದು, ಮನಸ್ಸು ಪರಸ್ಪರವಾಗಿ ಆಸಕ್ತಿಯನ್ನು ವಹಿಸುವುದು, ಒಬ್ಬರಿಗೊಬ್ಬರು ತಮ್ಮ ಇಷ್ಟವನ್ನು ಪಡೆಯುವುದಾಗಿ ಆಲೋಚಿಸುವುದು, ನಿದ್ರೆಯ ಸುಖವನ್ನು ತೊರೆಯುವುದು, ಶರೀರವು ಕೃಶವಾಗುವುದು, ಭೋಗ್ಯವಸ್ತುಗಳನ್ನು ತೊರೆಯುವುದು, ಬುದ್ಧಿವ್ಯತ್ಯಾಸ, ಮೂರ್ಛೆ, ಮರಣ ಹೀಗೆ ಹತ್ತು ಬಗೆಯ ಕಾಮವಿಕಾರಗಳುಂಟೆಂದು ಕೆಲವರು ಹೇಳುತ್ತಾರೆ.

ಆದೌ ವಾಚ್ಯಃ ಸ್ತ್ರಿಯಾ ರಾಗಃ ಪುಂಸಃ ಪಶ್ಚಾತ್ತದಿಂಗಿತೈಃ

ಇಂಗಿತಾನ್ಯುಕ್ತಾನಿ. ಯಥಾ ರತ್ನಾವಳ್ಯಾಂ ಸಾಗರಿಕಾವತ್ಸರಾಜಯೋಃ. ಆದೌ ಪುರುಷಾನುರಾಗೇ ಸಂಭವತ್ಯಪ್ಯೇವಮಧಿಕಂ ಹೃದಯಂಗಮಂ ಭವತಿ.

ನೀಲೀ ಕುಸುಂಭಂ ಮಂಜಿಷ್ಠಾ ಪೂರ್ವರಾಗೋಽಪಿ ಚ ತ್ರಿಧಾ ।

ನ ಚಾತಿಶೋಭತೇ ಯನ್ನಾಪೈತಿ ಪ್ರೇಮ ಮನೋಗತಮ್ ।
ತಂ ನೀಲೀರಾಗಮಾಖ್ಯಾಂತಿ ಯಥಾ ಶ್ರೀರಾಮಸೀತಯೋಃ ॥
ಕುಸುಂಭರಾಗಂ ತಂ ಪ್ರಾಹುಃ ಯದಪೈತಿ ಚ ಶೋಭತೇ ।
ಮಂಜಿಷ್ಠಾರಾಗಮಾಹುಸ್ತಂ ಯನ್ನಾಪೈತ್ಯತಿಶೋಭತೇ ॥

ಅಥ ಮಾನಃ— ಮಾನಃ ಕೋಪಃ ಸ ತು ದ್ವೇಧಾ ಪ್ರಣಯೇರ್ಷ್ಯಾಸಮುದ್ಭವಃ ।
ದ್ವಯೋಃ ಪ್ರಣಯಮಾನಃ ಸ್ಯಾತ್ಪ್ರಮೋದೇ ಸುಮಹತ್ಯಪಿ ॥
ಪ್ರೇಮ್ಣಃ ಕುಟಿಲಗಾಮಿತ್ವಾತ್ ಕೋಪೋ ಯಃ ಕಾರಣಂ ವಿನಾ ।

ದ್ವಯೋರಿತಿ ನಾಯಕಸ್ಯ ನಾಯಿಕಾಯಾಶ್ಚ ಉಭಯೋಶ್ಚ ಪ್ರಣಯಮಾನೋ ವರ್ಣನೀಯ. ಉದಾಹರಣಾಮ್. ತತ್ರ ನಾಯಕಸ್ಯ ಯಥಾ

ಅಲೀಕಪ್ರಸುಪ್ತಕ ವಿನಿಮೀಲಿತಾಕ್ಷ ದೇಹಿ ಸುಭಗ ಮಹ್ಯಮವಕಾಶಮ್ ।
ಗಂಡಪರಿಚುಂಬನಪುಲಕಿತಾಂಗ ನ ಪುನಶ್ಚಿರಯಿಷ್ಯಾಮಿ ॥

ನಾಯಿಕಾಯಾ ಯಥಾ— ಕುಮಾರಸಂಭವೇ ಸಂಧ್ಯಾವರ್ಣನಾವಸರೇ—

ಉಭಯೋಃ ಯಥಾ—

ಪ್ರಣಯಕುಪಿತಯೋರ್ದ್ವಯೋರಪ್ಯಲೀಕಸುಪ್ತಯೋರ್ಮಾನವಿಜ್ಞಯೋಃ ।
ನಿಶ್ಚಲನಿರುದ್ಧನಿಶ್ವಾಸದತ್ತಕರ್ಣಯೋಃ ಕೋ ಮಲ್ಲಃ ?॥

ಅನುನಯಪರ್ಯಂತಾಸಹತ್ವೇ ತ್ವಸ್ಯ ನ ವಿಪ್ರಲಂಭಭೇದತಾ ಕಿಂತು ಸಂಭೋಗಸಂಚಾರೀರ್ಷ್ಯಾಖ್ಯಭಾವತ್ವಮ್. ಯಥಾ—

ಭ್ರೂಭಂಗೇ ರಚಿತೇಽಪಿ ದೃಷ್ಟಿರಧಿಕಂ ಸೋತ್ಕಂಠಮುದ್ವೀಕ್ಷತೇ
ರುದ್ಧಾಯಾಮಪಿ ವಾಚಿ ಸಸ್ಮಿತಮಿದಂ ದಗ್ಧಾನನಂ ಜಾಯತೇ।
ಕಾರ್ಕಶ್ಯಂ ಗಮಿತೇಽಪಿ ಚೇತಸಿ ತನೂ ರೋಮಾಂಚಮಾಲಂಬತೇ
ದೃಷ್ಟೇ ನಿರ್ವಹಣಂ ಭವಿಷ್ಯತಿ ಕಥಂ ಮಾನಸ್ಯ ತಸ್ಮಿನ್ ಜನೇ ॥

ಯಥಾ ವಾ—ಏಕಸ್ಮಿನ್ ಶಯನೇ ಪರಾಙ್ಮುಖತಯಾ ವೀತೋತ್ತರಂ ತಾಮ್ಯತೋಃ
ಅನ್ಯೋನ್ಯಸ್ಯ ಹೃದಿ ಸ್ಥಿತೇಽಪ್ಯನುನಯೇ ಸಂರಕ್ಷತೋರ್ಗೌರವಮ್।
ದಂಪತ್ಯೋಃ ಶನಕೈರಪಾಂಗವಲನಾನ್ಮಿಶ್ರೀಭವಚ್ಚಕ್ಷುಷೋಃ
ಭಗ್ನೋ ಮಾನಕಲಿಃ ಸಹಾಸರಭಸವ್ಯಾಸಕ್ತಕಂಠಗ್ರಹಃ ॥

ಪತ್ಯುರನ್ಯಪ್ರಿಯಾಸಂಗೇ ದೃಷ್ಟೇಽಥಾನುಮಿತೇ ಶ್ರುತೇ ।
ಈರ್ಷ್ಯಾಮಾನೋ ಭವೇತ್ ಸ್ತ್ರೀಣಾಂ ತತ್ರ ತ್ವನುಮಿತಿಸ್ತ್ರಿಧಾ ॥
ಉತ್ಸ್ವಪ್ನಾಯಿತಭೋಗಾಂಕಗೋತ್ರಸ್ಖಲನಸಂಭವಾ ॥

ತತ್ರ ದೃಷ್ಟೇ ಯಥಾ— ವಿನಯತಿ ಸದೃಶೋ ದೃಶೋಃ ಪರಾಗಂ ।
ಪ್ರಣಯಿನಿ ಕೌಸುಮಮಾನನಾನಿಲೇನ ॥
ತದಹಿತಯುವತೇರಭೀಕ್ಷ್ಣಮಕ್ಷ್ಣೋಃ ।
ದ್ವಯಮಪಿ ರೋಷರಜೋಭಿರಾಪುಪೂರೇ ॥

ಸಂಭೋಗಚಿಹ್ನೇನಾನುಮಿತೇ ಯಥಾ—

ನವನಖಪದಮಂಗಂ ಗೋಪಯಸ್ಯಂಶುಕೇನ
ಸ್ಥಗಯಸಿ ಪುನರೋಷ್ಠಂ ಪಾಣಿನಾ ದಂತದಷ್ಟಮ್ ।
ಪ್ರತಿದಿಶಮುಪರಸ್ತ್ರೀಸಂಗಶಂಸೀ ವಿಸರ್ಪನ್
ನವಪರಿಮಲಗಂಧಃ ಕೇನ ಶಕ್ಯೋ ವರೀತುಮ್ ॥

ಏವಮನ್ಯತ್ರ— ಸಾಮಭೇದೋಽಥ ದಾನಂ ಚ ನತ್ಯುಪೇಕ್ಷೇ ರಸಾಂತರಮ್ ।
ತದ್ಭಂಗಾಯ ಪತಿಃ ಕುರ್ಯಾತ್ ಷಡುಪಾಯಾನಿತಿ ಕ್ರಮಾತ್ ॥
ತತ್ರ ಪ್ರಿಯವಚಃ ಸಾಮಭೇದಸ್ತತ್ಸಖ್ಯುಪಾರ್ಜನಮ್ ।
ದಾನವ್ಯಾಜೇನ ಭೂಷಾದೇಃ ಪಾದಯೋಃ ಪತನಂ ನತಿಃ ॥
ಸಾಮಾದೌ ತು ಪರಿಕ್ಷೀಣೇ ಸ್ಯಾದುಪೇಕ್ಷಾವಧೀರಣಮ್ ।
ರಭಸತ್ರಾಸಹರ್ಷಾದೇಃ ಕೋಪಭ್ರಂಶೋ ರಸಾಂತರಮ್ ॥

ಯಥಾ 'ನೋ ಚಾಟು ಶ್ರವಣೇ ಕೃತಂ' ಇತ್ಯಾದಿ. ಅತ್ರ ಸಾಮಾದಯಃ ಪಂಚ ಸೂಚಿತಾಃ. ರಸಾಂತರಮೂಹ್ಯಮ್.

ನಾಯಕನಾಯಿಕೆಯರಲ್ಲಿ ಯಾರಿಗೆ ಮೊದಲು ಪ್ರೀತಿ ಹುಟ್ಟುವುದೆಂಬುದನ್ನು ವರ್ಣಿಸಬೇಕಾದರೆ ನಾಯಿಕೆಗೆ ನಾಯಕನ ಮೇಲೆ ಮೊದಲು ಪ್ರೀತಿ ಹುಟ್ಟುವುದನ್ನು ವರ್ಣಿಸಬೇಕು. ಆ ಮೇಲೆ ನಾಯಕನಿಗೆ ನಾಯಿಕೆಯ ಅನುರಾಗವು ಹುಟ್ಟುವುದಾಗಿ ಕವಿಗಳು ವರ್ಣಿಸುವರು. ಹಾಗೆ ವರ್ಣಿಸಿದರೆ ರಾಗವು ಸ್ಥಿರವಾಗಿ ನಿಲ್ಲಬಲ್ಲದು. ಅಭಿಪ್ರಾಯಗಳನ್ನು ತಿಳಿಸುವ ಮುಖಭಾವ ಮೊದಲಾದ ರೀತಿಗಳು ಎಂತವೆಂಬುದನ್ನು ಹಿಂದೆ ತಿಳಿಸಿಯಾಗಿದೆ.

ವಿಪ್ರಲಂಭದ ನಾಲ್ಕು ಬಗೆಗಳಲ್ಲಿ ಮೊದಲನೆಯದಾದ ಪೂರ್ವರಾಗ ಎಂಬುದು ನೀಲೀರಾಗ, ಕುಸುಂಭರಾಗ, ಮಜಿಷ್ಠಾರಾಗ ಎಂದು ಮೂರು ಬಗೆಯದಾಗಿದೆ. ಹೊರಗಿನ ಜನರಿಗೆ ಕಾಣಿಸಿಕೊಳ್ಳದೆ ಗೂಢವಾಗಿರುವ ಗಾಢಾನುರಾಗವು ಯಾರಿಗೆ ಇರುವುದೋ ಒಮ್ಮೆ ಬಂದದ್ದು ಮತ್ತೆ ತೊಲಗುವುದಿಲ್ಲವೋ ಅಂತಹ ಪ್ರೇಮವನ್ನು ನೀಲೀರಾಗವೆಂದು ಕರೆಯಲಾಗಿದೆ. ಸೀತಾರಾಮರಿಗೆ ಇದ್ದ ಪ್ರೇಮವು ಇಂತಹದು.

ಎರಡನೆಯದು ಕುಸುಂಭರಾಗ. ನಾಯಕನಾಯಕಿಯರಿಗೆ ಇರುವ ಪ್ರೇಮವು ಸ್ಪಷ್ಟವಾಗಿ ಹೊಟ್ಟ ಮೊದಲು ಕಂಡುಬರುತ್ತದೆಯಾದರೂ ಯಾವುದಾದರೊಂದು ಮನಸ್ತಾಪದ ಸಂದರ್ಭದಲ್ಲಿ ಹಿಂದಿನ ಪ್ರೇಮವು ಬೇಗನೆ ತೊಲಗುವುದು. ಹೀಗೆ ಅವ್ಯವಸ್ಥಿತವಾದ ಅನುರಾಗವು ಕುಸಂಭರಾಗವೆನಿಸುತ್ತದೆ.

ಮೂರನೆಯದು ಮಂಜಿಷ್ಠಾರಾಗ. ಯಾವ ನಾಯಕನಾಯಕಿಯರ ಪ್ರೇಮಕ್ಕೆ ಎಷ್ಟೇ ಅಡ್ಡಿ ಬಂದರೂ ಅದು ಹೋಗುವುದಿಲ್ಲವೋ ಅದರೆ ಯಾರ ಪ್ರೇಮವು ಹೆಚ್ಚಾಗಿರುವುದೆಂದು ತಿಳಿದುಬರುವುದೋ ಅಂತಹವರ ಪ್ರೇಮವು ಮಂಜಿಷ್ಠಾರಾಗವೆನಿಸುವುದು.

ವಿಪ್ರಲಂಭದ ಪ್ರಭೇದಗಳಲ್ಲಿ ಎರಡನೆಯದಾದ ಮಾನವಿಪ್ರಲಂಭದ ಸ್ವರೂಪ ವನ್ನು ಇಲ್ಲಿ ತಿಳಿಸುತ್ತಾನೆ. ಮಾನವೆಂದರೆ ಕೋಪ. ಅದು ಪ್ರಣಯದಿಂದ ಹುಟ್ಟಿದ ಕೋಪ, ಅಸೂಯೆಯಿಂದ ಹುಟ್ಟುವ ಕೋಪ ಎಂದು ಎರಡು ಬಗೆಯಾಗಿದೆ. ಪ್ರಣಯ ಕೋಪವು ಎಂತಹದೆಂಬುದನ್ನು ಈಗ ತಿಳಿಸುತ್ತಾನೆ. ಪ್ರೀತಿಯು ನಾಯಕನಾಯಕಿಯರಿಗೆ ಪರಸ್ಪರವಾಗಿ ಉಂಟಾಗಿದ್ದರೂ ಸಹ ಅಪರಾಧವೇ ಮೊದಲಾದ ಕಾರಣವಿಲ್ಲದೆಯೇ ಅವ ರಿಗೆ ಕೋಪವುಂಟಾದರೆ ಅದು ಪ್ರಣಯಮಾನವೆನಿಸುತ್ತದೆ. ಪ್ರೇಮವೆಂಬುದು ಯಾವಾ ಗಲೂ ಸ್ಥಿರವಾಗಿರುವುದಿಲ್ಲ. ವಕ್ರವಾಗಿ ಪ್ರವರ್ತಿಸುವುದೇ ಅದರ ಸ್ವಭಾವ. ಇದನ್ನು ಇಲ್ಲಿ ಉದಾಹರಿಸುತ್ತಾನೆ. "ಸುಳ್ಳಾಗಿ ನಿದ್ರೆಮಾಡುವೆನೆಂದು ನಟಿಸುತ್ತ ಕಣ್ಣನ್ನು ಮುಚ್ಚಿಕೊಂಡು ಇರುವ ನಾಯಕನೇ, ನಿನ್ನ ಕಪೋಲದಲ್ಲಿ ನಾನು ಮುತ್ತಿಟ್ಟಾಗ ನಿನಗೆ ಮೈಯೆಲ್ಲಾ ರೋಮಾಂಚವುಂಟಾಯಿತು. ಇದರಿಂದ ನೀನು ನಿಜವಾಗಿಯೂ ನಿದ್ರೆ ಮಾಡುತ್ತಿಲ್ಲ. ಆದ್ದರಿಂದ ಹಾಸಿಗೆಯ ಮೇಲೆ ಮಲಗಲಿಕ್ಕೆ ನನಗೂ ಸ್ವಲ್ಪ ಅವಕಾಶ ವನ್ನು ಕೊಡು. ತಡವಾಯಿತೆಂದು ಕೋಪಿಸಬೇಡ. ಇನ್ನು ತಡಮಾಡದೆ ಬೇಗನೆ ಬರುವೆನು" ಇದು ನಾಯಕನಲ್ಲಿ ನಾಯಕಿಯ ಬಗ್ಗೆ ಇದ್ದ ಪ್ರಣಯಕೋಪವೆನಿಸಿದೆ.

ನಾಯಕಿಯಲ್ಲಿ ನಾಯಕನ ಬಗ್ಗೆ ಹುಟ್ಟುವ ಪ್ರಣಯಕೋಪಕ್ಕೆ ಕುಮಾರ ಸಂಭವದ ಸಂಧ್ಯಾವರ್ಣನದ ಭಾಗದಲ್ಲಿ ನೋಡಿಕೊಳ್ಳುವುದು. ನಾಯಕನಿಗೆ ನಾಯಿಕೆ ಯಲ್ಲೂ ನಾಯಿಕೆಗೆ ನಾಯಕನಲ್ಲೂ ಹುಟ್ಟುವ ಪ್ರಣಯಕೋಪಕ್ಕೆ ಉದಾಹರಣವನ್ನು ಕೊಡುತ್ತಾನೆ. "ಇಬ್ಬರೂ ಕೋಪದಿಂದ ಮಲಗಿದಂತೆ ನಟಿಸುವರು. ನಿದ್ರೆ ಮಾಡು ವಂತೆ ನಟಿಸುತ್ತ ಪ್ರಣಯಕೋಪವನ್ನು ತೋರಿಸಲು ನಿರ್ಮಲರೂ ಮತ್ತು ನಿಶ್ಚಲರೂ ಆಗಿ ನಿಟ್ಟುಸಿರನ್ನು ತಡೆದು ಯಾರು ಮೊದಲು ಉಸಿರನ್ನು ಬಿಡುವರೆಂದು ಸಾವಧಾನ ದಿಂದ ಕೇಳುತ್ತಲೂ ಇರುವ ನಾಯಕನಾಯಿಕೆಯರಲ್ಲಿ ಯಾರಿಗೆ ಹೆಚ್ಚು ಸಹನೆ ಇದೆಯೋ ನೋಡೋಣವೆಂದು ಸಖಿಯರಿಬ್ಬರು ಒಬ್ಬೊಬ್ಬರು ಮಾತನಾಡಿಕೊಳ್ಳುತ್ತಿರುವರು" ಇಬ್ಬರಲ್ಲೂ ಇರುವ ಪ್ರಣಯಕೋಪವು ಇಲ್ಲಿ ತೋರಿಬರುವುದು. ಪ್ರಣಯಮಾನವನ್ನು ವಿಪ್ರಲಂಭದ ಒಂದು ಬಗೆ ಎಂದು ಹೇಳಿದ್ದು ಯುಕ್ತವೇ ಎಂದು ವಿಚಾರಿಸಿದರೆ ಇಬ್ಬರಿಗೋ ಅಥವಾ ಒಬ್ಬರಲ್ಲೋ ಕೋಪವುಂಟಾದಾಗ ಅವರು ಒಂದೆಡೆ ಸೇರುವ ಮಾತ್ರ ದಿಂದಲೇ ಕೋಪವು ಕೊನೆಗಾಣದೆ ಯಾರಿಗೆ ಯಾರಮೇಲೆ ಕೋಪವಾಗಿದೆಯೋ ಅವನ್ನು ಒಳ್ಳೆಯ ಮಾತನ್ನು ಹೇಳುತ್ತಲೇ ಶಮನಮಾಡುವ ಸನ್ನಿವೇಶವಿದ್ದಲ್ಲಿ ಮಾತ್ರವೇ ಮಾನವಿಪ್ರಲಂಭವನ್ನು ಹೇಳಬೇಕೆಂದು ವ್ಯವಸ್ಥೆಮಾಡಲಾಗಿದೆ. ಕೋಪಗೊಂಡ ವರು ಒಬ್ಬರಿಗೊಬ್ಬರು ಸೇರಿದಮಾತ್ರದಿಂದಲೇ ಆ ಕೋಪವನ್ನು ಬಿಡುವುದಾದರೆ ಅದು ಮಾನವಿಪ್ರಲಂಭವಾಗುವುದಿಲ್ಲ; ಆದರೆ ಅದು ಸಂಭೋಗಶೃಂಗಾರಕ್ಕೆ ಈರ್ಷ್ಯೆಎಂಬ ವ್ಯಭಿಚಾರವೇ ಆಗುತ್ತದೆ. ಅದು ರಸವಾಗಲಾರದು. ಅದಕ್ಕೆ ಉದಾಹರಣ ಹೀಗಿದೆ. ಪ್ರಣಯ ಕೋಪವನ್ನು ಉಪದೇಶಿಸುತ್ತಿರುವ ಸಖಿಗೆ ಒಬ್ಬಳು ಹೀಗೆ ಹೇಳುತ್ತಾಳೆ. "ಹುಬ್ಬನ್ನು ಗಂಟುಹಾಕಿದ್ದರೂ ನನ್ನ ಕಣ್ಣು ಉತ್ಕಂಠೆಯಿಂದಲೇ ನೋಡುತ್ತಲಿದೆ.

ಮಾತನಾಡಬಾರದೆಂದು ಬಲಾತ್ಕಾರದಲ್ಲಿ ಬಾಯನ್ನು ಮುಚ್ಚಿದ್ದರೂ ಈ ಮುಖವು ಮುಗುಳುನಗೆಯನ್ನು ಹೊರಕ್ಕೆ ತೋರಿಸುತ್ತಲಿದೆ. ಮನಸ್ಸಿನಲ್ಲಿ ಕಾಠಿಣ್ಯವು ಹುಟ್ಟು ವಂತೆ ಮಾಡಿದರೂ ಸಹ ನನ್ನ ಮೈಎಲ್ಲಾ ರೋಮಾಂಚಗೊಳ್ಳುತ್ತಲಿವೆ. ಆದ್ದರಿಂದಲೇ ನನ್ನ ಪ್ರಿಯನನ್ನು ನಾನು ಕಂಡೊಡನೆಯೇ ಪ್ರಣಯಕೋಪವು ಹೇಗೆ ಸ್ಥಿರವಾಗಿ ನಿಂತೀತು ? ಅಂದರೆ ಇದು ನೆಲೆಯಾಗಿ ನಿಲ್ಲುವುದಿಲ್ಲವೆಂದು ಅರ್ಥ.'' ಪ್ರಿಯನು ಸಮಾಧಾನ ಮಾಡುವುದಕ್ಕೆ ಮೊದಲೇ ಪ್ರೇಯಸಿಯ ಪ್ರಣಯಕೋಪವು ತೊಲಗುವುದನ್ನು ಇಲ್ಲಿ ತಿಳಿಸಲಾಗಿದೆ. ಆದ್ದರಿಂದ ಇದು ಸಂಭೋಗಶೃಂಗಾರಕ್ಕೆ ಉದಾಹರಣವೇ ಹೊರತು ಮಾನವಿಪ್ರಲಂಭಕ್ಕೆ ಉದಾಹರಣವಲ್ಲ. ಇದಕ್ಕೆ ಮತ್ತೊಂದು ಉದಾಹರಣವನ್ನು ಕೊಡುತ್ತಾನೆ.

'' ಒಂದೇ ಹಾಸಿಗೆಯಲ್ಲಿ ಪರಸ್ಪರ ವಿರೋಧದಿಂದ ಒಬ್ಬರ ಮುಖವನ್ನು ಒಬ್ಬರು ನೋಡದಂತೆ, ಪ್ರಶ್ನೋತ್ತರಗಳಿಲ್ಲದೆ ಸಂತಾಪಗೊಂಡಿರುವ ನಾಯಕನಾಯಿಕೆಯರ ಮನಸ್ಸನ್ನು ಇಬ್ಬರಲ್ಲೂ ಇರುವ ಪ್ರಣಯಕೋಪದ ಸಮಾಧಾನದಿಂದ ದೂರಮಾಡ ಬೇಕೆಂಬ ಬಯಕೆ ಇದ್ದರೂ ಸಹ ತಮ್ಮ ಗೌರವವನ್ನು ಕಾಪಾಡಿಕೊಳ್ಳುತ್ತಿರಲು ಮೆಲ್ಲಗೆ ಓರೆಗಣ್ಣಿನಿಂದ ನೋಡುತ್ತಿರುವ ದಂಪತಿಗಳು ನಗುತ್ತ ರಭಸದಿಂದ ಆಲಿಂಗನದಲ್ಲಿ ನಿರತ ರಾದ ಪ್ರಯುಕ್ತ ಪ್ರಣಯಕಲಹವು ಮುರಿದು ಹೋಯಿತು.'' ಒಬ್ಬರನ್ನೊಬ್ಬರು ಸಮಾಧಾನಮಾಡುವುದಕ್ಕೆ ಮೊದಲೇ ಪ್ರಣಯಕೋಪವು ತೊಲಗಿದ್ದರಿಂದ ಇದೂ ಸಹ ಮಾನವಿಪ್ರಲಂಭಕ್ಕೆ ಉದಾಹರಣವಾಗಲಾರದು; ಆದರೆ ಸಂಭೋಗಶೃಂಗಾರಕ್ಕೆ ಪೋಷಕವಾದ ಈರ್ಷ್ಯ ಎಂಬ ವ್ಯಭಿಚಾರಭಾವಕ್ಕೆ ಇದು ಉದಾಹರಣವಾಗಿದೆ.

ಪ್ರಣಯಮಾನವನ್ನು ತಿಳಿಸಿ ಈಗ ಈರ್ಷ್ಯಾಮಾನವನ್ನು ತಿಳಿಸುತ್ತಾನೆ. ಇದು ಪ್ರತ್ಯಕ್ಷಗೋಚರವಾದ ಅನುಮಿತಿಗೆ ವಿಷಯವಾದರೆ ಮೂರು ಬಗೆಯಾಗುತ್ತದೆ. ಪತಿಯು ಅನ್ಯಾಸಕ್ತನಾಗಿರುವನೆಂಬುದನ್ನು ನೋಡಿದರೂ ಅಥವಾ ಗುರುತುಗಳಿಂದ ಊಹಿಸಿದರೂ ಅಥವಾ ಕಿವಿಯಿಂದ ಕೇಳಿದರೂ ಸಹ ಈರ್ಷ್ಯಾಮಾನವು ಮೂರು ಬಗೆ ಯಾಗುವುದು. ಅದರಲ್ಲಿ ಅನುಮಿತಿಯಿಂದ ತೋರುವ ಈರ್ಷ್ಯಾಮಾನವು ಮೂರು ಬಗೆ ಯಾಗಿದೆ, ಕನವರಿಕೆಯಿಂದಲೂ, ಭೋಗಚಿಹ್ನೆಯಿಂದಲೂ, ಪತಿಗಿಂತ ಬೇರೆ ಹೆಸರನ್ನು ಹೇಳುವುದರಿಂದಲೂ ಪ್ರಣಯಕೋಪವನ್ನು ಊಹಿಸಬಹುದು.

ಪತಿಯು ಅನ್ಯಾಸಕ್ತವಾಗಿರುವನೆಂಬುದನ್ನು ಕಣ್ಣಿನಿಂದ ನೋಡುವುದರಿಂದ ಹುಟ್ಟುವ ಈರ್ಷ್ಯಾಮಾನವನ್ನು ಉದಾಹರಿಸುತ್ತಾನೆ. “ಪ್ರಿಯತಮನು ಸುಂದರಿ ಯೊಬ್ಬಳ ಕಣ್ಣಿಗೆ ಬಿದ್ದಿದ್ದ ಪರಾಗವನ್ನು ಸಿಟ್ಟುಸಿರಿನಿಂದ ದೂರಮಾಡುತ್ತಿರಲು ಅವಳ ಹತ್ತಿರದಲ್ಲಿದ್ದ ಸವತಿಯು ಕಣ್ಣುಗಳೆರಡಕ್ಕೂ ಕೋಪದ ಪರಾಗವು ಬಾರಿಬಾರಿಗೂ ತುಂಬಿಕೊಂಡಿತು.” ಇಲ್ಲಿ ಪತಿಯು ಮೊದಲನೆಯ ಹೆಂಡತಿಯಲ್ಲಾಸಕ್ತನಾಗಿದ್ದುದನ್ನು ನೋಡಿ ಎರಡನೆಯವಳಿಗೆ ಅಸೂಯೆಯಿಂದ ಕೋಪವುಂಟಾಯಿತೆಂದು ತಿಳಿಸಲಾಗಿದೆ.

ಪತಿಯು ಬೇರೊಬ್ಬಳಲ್ಲಿ ಭೋಗಿಸಿದ ಗುರುತು ಅವನಲ್ಲಿ ಕಾಣುತ್ತಿರಲು ಅದರಿಂದ ಅವನು ಅಲ್ಲಿ ಆಸಕ್ತನಾಗಿದ್ದನೆಂದು ಊಹಿಸಿ ನಾಯಿಕೆಯಲ್ಲಿ ಪ್ರಣಯಕೋಪವು ಹುಟ್ಟುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ಬೇರೊಬ್ಬ ಸ್ತ್ರೀಯುಳ ಉಗುರಿನಿಂದ ಆದ ಗಾಯಗಳು ನಿನ್ನ ಮೈಯಲ್ಲಿ ಕಾಣುತ್ತಿರಲು ಅವನ್ನು ಬಟ್ಟೆಯಿಂದ ಮುಚ್ಚುತ್ತಿರುವೆ. ಹಾಗೆಯೇ ಮತ್ತೊಬ್ಬ ಸ್ತ್ರೀಯು ಹಲ್ಲಿನಿಂದ ಕಚ್ಚಿರುವ ತುಟಿಯನ್ನು ಕೈಯಿಂದ ಮುಚ್ಚುತ್ತಿರುವೆ. ಆದರೆ ನಿನ್ನ ಮೈಯಲ್ಲಿ ಹಚ್ಚಿರುವ ಸುಗಂಧವು ಪ್ರತಿಯೊಂದು ದಿಕ್ಕಿನಲ್ಲೂ ಗಾಳಿಯಿಂದ ವ್ಯಾಪಿಸುತ್ತ ಪರಸ್ತ್ರೀಯೊಡನೆ ನೀನು ಮಾಡಿರುವ ಸಂಬಂಧವನ್ನು ಸ್ಪಷ್ಟವಾಗಿ ತಿಳಿಸುವ ಪ್ರಯುಕ್ತ ಅದನ್ನು ಮುಚ್ಚಲಿಕ್ಕೆ ಯಾರಿಗೆ ಸಾಧ್ಯವಾದೀತು?'' ಇಲ್ಲಿ ಪತಿಯು ಪರಸ್ತ್ರೀಯೊಡನೆ ಮಾಡಿದ ಸಂಭೋಗದ ಗುರುತುಗಳನ್ನು ನೋಡಿ ಅವನ ವ್ಯಭಿಚಾರವನ್ನು ಊಹಿಸಿ ನಾಯಿಕೆಗೆ ಅಸೂಯೆಯಿಂದ ಕೋಪವು ಬಂದಿರುವುದಾಗಿ ತಿಳಿಸಲಾಗಿದೆ. ಹೀಗೆಯೇ ಪತಿಯ ಕನವರಿಕೆಯಿಂದಲೂ, ಪತಿಯು ಹೊರಗಡೆ ಭೋಗಿಸಿದನೆಂಬುವನ್ನು ಕೇಳಿದರೂ ನಾಯಿಕೆಗೆ ಅಸೂಯೆಯಿಂದ ಕೋಪವು ಬರುವುದಕ್ಕೆ ಉದಾಹರಣಗಳನ್ನು ಊಹಿಸಿಕೊಳ್ಳಬೇಕು.

ಈ ರೀತಿಯಲ್ಲಿ ನಾಯಕನಾಯಿಕೆಯರಿಗೆ ಹುಟ್ಟುವ ಪ್ರಣಯಕೋಪವು ಶಮನವಾಗಲು ಮಾರ್ಗಗಳನ್ನು ತಿಳಿಸುತ್ತಾನೆ. ಸಾಮ, ಭೇದ, ದಾನ, ನಮಸ್ಕಾರ, ಔದಾಶೀನ್ಯ, ರಸಾಂತರ (ಬೇರೊಂದುಕಡೆಗೆ ಗಮನವನ್ನು ತಿರುಗಿಸುವಿಕೆ) ಈ ಆರು ಉಪಾಯಗಳಿಂದ ಪತಿಯು ನಾಯಿಕೆಯ ಪ್ರಣಯಕೋಪವನ್ನು ಹೋಗಲಾಡಿಸಲು ಪ್ರಯತಿಸಬೇಕು. ಅವುಗಳಲ್ಲಿ ಆಕೆಯ ಮನಸ್ಸಿಗೆ ಹಿಡಿಸುವಂತೆ ಮಾತನಾಡುವುದೇ ಸಾಮವೆನಿಸುತ್ತದೆ. ಅವಳ ಸಖಿಯನ್ನು ಪತಿಯು ತನ್ನ ಕಡೆಗೆ ಸೆಳೆದುಕೊಳ್ಳುವುದೇ ಭೇದವೆನಿಸುವುದು. ಯಾವುದೋ ನೆಪದಿಂದ ಪ್ರಿಯೆಗೆ ಒಡವೆವಸ್ತ್ರಗಳನ್ನು ತಂದು ಕೊಡುವುದೇ ದಾನವೆನಿಸುವುದು. ಆಕೆಯ ಪಾದಗಳ ಮೇಲೆ ಬೀಳುವುದೇ ನಮಸ್ಕಾರ. ಸಾಮ ಮೊದಲಾದ ಉಪಾಯಗಳೆಲ್ಲವೂ ಮುಗಿದ ಮೇಲೆ ಅವಳನ್ನು ತಿರಸ್ಕರಿಸುವುದು ಔದಾಶೀನ್ಯವೆನಿಸುವುದು. ಹಾಗೆಯೇ ವೇಗ ಭಯ ಅಪರಾಧ ಅನಿಷ್ಟಪ್ರದರ್ಶನ ಮೊದಲಾದವುಗಳಿಂದ ಕೋಪವನ್ನು ತೊಲಗಿಸುವುದೇ ರಸಾಂತರವೆನಿಸುವುದು. "ನೋ ಚಾಟು'' ಎಂಬ ಪದ್ಯದಲ್ಲಿ ನಾಯಿಕೆಯ ಪ್ರಣಯಕೋಪವನ್ನು ತೊಲಗಿಸಲು ಪತಿಯ ಹಿತವಚನವೇ ಮೊದಲಾಗಿ ಐದು ಉಪಾಯಗಳನ್ನು ಸೂಚಿಸಲಾಗಿದೆ. 'ನೋ ಚಾಟು ಶ್ರವಣೇನ ಕೃತಂ' ಎಂಬುದರಿಂದ ಪತಿಯ ಸಾಮೋಪಾಯವೂ 'ನ ಚ ದೃಶಾ ಹಾರೋಽಂತಿಕೇ ವೀಕ್ಷಿತಃ' ಎಂಬುದರಿಂದ ದಾನವೂ, 'ಕಾಂತಸ್ಯ ಪ್ರಿಯಹೇತವೇ ನಿಜಸಖೀವಾಚೋಽಪಿ ದೂರೀಕೃತಾಃ' ಎಂಬುದರಿಂದ ಭೇದವೂ 'ಪಾದಾಂತೇ ವಿನಿಪತ್ಯ' ಎಂಬುದರಿಂದ ನತಿಯೂ 'ಗಚ್ಛತಿ' ಎಂಬುದರಿಂದ ಉಪೇಕ್ಷೆಯೂ ಸೂಚಿತವಾಗುತ್ತವೆ. ಮಾಲವಿಕಾಗ್ನಿಮಿತ್ರದ ನಾಲ್ಕನೆಯ ಅಂಕದ ಕೊನೆಯಲ್ಲಿ ವಸುಲಕ್ಷ್ಮಿಯು ಕೋತಿಯಿಂದ ಆದ ಭಯವನ್ನು ತಿಳಿಸುತ್ತಲೇ ಇರಾವತಿಯ ಪ್ರಣಯಕೋಪವನ್ನು ಶಮನ

ಮಾಡುವುದೇ ರಸಾಂತರಕ್ಕೆ ಉದಾಹರಣವೆನಿಸಿದೆ.

ಅಥ ಪ್ರವಾಸಃ— ಪ್ರವಾಸೋ ಭಿನ್ನದೇಶಿತ್ವಂ ಕಾರ್ಯಾಚ್ಛಾಪಾಚ್ಚ ಸಂಭ್ರಮಾತ್ ।
ತತ್ರಾಂಗಚೇಲಮಾಲಿನ್ಯಮೇಕವೇಣೀಧರಂ ಶಿರಃ ॥
ನಿಶ್ವಾಸೋಚ್ಛ್ವಾಸರುದಿತಭೂಮಿಪಾತಾದಿ ಜಾಯತೇ ।

ಕಿಂ ಚ— ಅಂಗೇಷ್ವಸೌಷ್ಠವಂ ತಾಪಃ ಪಾಂಡುತಾ ಕೃಶತಾ ರುಚಿಃ ॥
ಅಧೃತಿಃ ಸ್ಯಾದನಾಲಂಬಸ್ತನ್ಮಯೋನ್ಮಾದಮೂರ್ಛನಾಃ ।
ಮೃತಿಶ್ಚೇತಿ ಕ್ರಮಾದ್ ಜ್ಞೇಯಾ ದಶ ಸ್ಮರದಶಾ ಇಹ ॥
ಅಸೌಷ್ಠವಂ ಮಲಾಪತ್ತಿಸ್ತಾಪಸ್ತು ವಿರಹಜ್ವರಃ ।
ಅರುಚಿರ್ವಸ್ತುವೈರಾಗ್ಯಂ ಸರ್ವತ್ರಾರಾಗಿತಾಽಧೃತಿಃ ॥
ಅನಾಲಂಬನತಾ ಚಾಪಿ ಶೂನ್ಯತಾ ಮನಸಃ ಸ್ಮೃತಾ ।
ತನ್ಮಯಂ ತತ್ಪ್ರಕಾಶೋ ಹಿ ಬಾಹ್ಯಾಭ್ಯಂತರತಸ್ತಥಾ ॥

ಶೇಷಂ ಸ್ಪಷ್ಟಮ್. ಏಕದೇಶತೋ ಯಥಾ ಮಮ ತಾತಪಾದಾನಾಮ್—
ಚಿಂತಾಭಿಃ ಸ್ತಿಮಿತಂ ಮನಃ ಕರತಲೇ ಲೀನಾ ಕಪೋಲಸ್ಥಲೀ
ಪ್ರತ್ಯೂಷಕ್ಷಣದೇಶಪಾಂಡು ವದನಂ ಶ್ವಾಸೈಕಖಿನ್ನೋಽಧರಃ ।
ಅಂಭಃಶೀಕರಪದ್ಮಿನೀಕಿಸಲಯೈರ್ನೋಪೈತಿ ತಾಪಃ ಶಮಂ
ಕೋಽಸ್ಯಾಃ ಪ್ರಾರ್ಥಿತದುರ್ಲಭೋಽಸ್ತಿ ಸಹತೇ ದೀನಾಂ ದಶಾಮೀದೃಶೀಮ್ ॥

ಭಾವೀ ಭವನ್ ಭೂತ ಇತಿ ತ್ರಿಧಾ ಸ್ಯಾತ್ತತ್ರ ಕಾರ್ಯಜಃ ।

ಕಾರ್ಯಜಸ್ಯ ಬುದ್ಧಿಪೂರ್ವಕತ್ವಾತ್ ತ್ರೈವಿಧ್ಯಮ್. ತತ್ರ ಭಾವೀ ಯಥಾ ಮಮ
ಯಾಮಃ ಸುಂದರಿ! ಯಾಹಿ ಪಾಂಥ! ದಯಿತೇ ಶೋಕಂ ವೃಥಾ ಮಾ ಕೃಥಾಃ
ಶೋಕಸ್ತೇ ಗಮನೇ ಕುತೋ ಮಮ? ತತೋ ಬಾಷ್ಪಂ ಕಥಂ ಮುಂಚಸಿ ।
ಶೀಘ್ರಂ ನ ವ್ರಜಸೀತಿ ಮಾಂ ಗಮಯಿತುಂ ಕಸ್ಮಾದಿಯಂ ತೇ ತ್ವರಾ ।
ಭೂಯಾನಸ್ಯ ಸಹ ತ್ವಯಾ ಜಿಗಮಿಷೋರ್ಜೀವಸ್ಯ ಮೇ ಸಂಭ್ರಮಃ ॥

ಭವನ್ ಯಥಾ—ಪ್ರಸ್ಥಾನಂ ವಲಯೈಃ ಕೃತಂ ಪ್ರಿಯಸಖೈರಸ್ರೈರಜಸ್ರಂ ಗತಂ
ಧೃತ್ಯಾ ನ ಕ್ಷಣಮಾಸಿತಂ ವ್ಯವಸಿತಂ ಚಿತ್ತೇನ ಗಂತುಂ ಪರಃ ।
ಯಾತುಂ ನಿಶ್ಚಿತಚೇತಸಿ ಪ್ರಿಯತಮೇ ಸರ್ವೇ ಸಮಂ ಪ್ರಸ್ಥಿತಾ ।
ಗಂತವ್ಯೇ ಸತಿ ಜೀವಿತ! ಪ್ರಿಯಸುಹೃತ್ ಸಾರ್ಥಃ ಕಿಮು ತ್ಯಜ್ಯತೇ ॥

ಭೂತೋ ಯಥಾ "ಚಿಂತಾಭಿಃ ಸ್ತಿಮಿತಮ್" ಇತ್ಯಾದಿ

ಶಾಪಾದ್ಯಥಾ "ತಾಂ ಜಾನೀಥಾಃ" ಇತ್ಯಾದಿ. ಸಂಭ್ರಮೋ ದಿವ್ಯಮಾನುಷ ನಿರ್ಘಾತೋತ್ಪಾತಾದಿಜಃ. ಯಥಾ ವಿಕ್ರಮೋರ್ವಶ್ಯಾಂ ಉರ್ವಶೀಪುರೂರವಸೋಃ.

ಅತ್ರ ಪೂರ್ವರಾಗೋಕ್ತಾನಾಂ ಅಭಿಲಾಷಾದೀನಾಂ ಅತ್ರೋಕ್ತಾನಾಂ ಚ ಅಂಗಸೌಷ್ಠವಾದೀನಾಮಪಿ ದಶಾನಾಮುಭಯೇಷಾಮಪಿ ಉಭಯತ್ರ ಸಂಭವೇಽಪಿ ಚಿರಂತನಪ್ರಸಿದ್ಧ್ಯಾ ವಿವಿಚ್ಯ ಪ್ರತಿಪಾದನಮ್.

ಅಥ ಕರುಣಃ— ಯೂನೋರೇಕತರಸ್ಮಿನ್ ಗತವತಿ ಲೋಕಾಂತರಂ ಪುನರ್ಲಭ್ಯೇ ।
ವಿಮನಾಯತೇ ಯದೈಕಸ್ತದಾ ಭವೇತ್ಕರುಣವಿಪ್ರಲಂಭಾಖ್ಯಃ ॥

ಯಥಾ ಕಾದಂಬರ್ಯಾಂ ಪುಂಡರೀಕಮಹಾಶ್ವೇತಾವೃತಾಂತೇ ಪುನರಲಭ್ಯೇ ಽಂತರೇಣ ವಾ ಲಭ್ಯೇ ಕರುಣಾಖ್ಯ ಏವ ರಸಃ.

ಕಿಂ ಚಾತ್ರ ಆಕಾಶಸರಸ್ವತೀಭಾಷಾನಂತರವೇವ ಶೃಂಗಾರಃ ಸಂಗಮಪ್ರತ್ಯಾಶಯಾ ರತೇರುದ್ಭವಾತ್. ಪ್ರಥಮಸ್ತು ಕರುಣ ಏವೇತ್ಯಭಿಯುಕ್ತಾ ಮನ್ಯಂತೇ, ಯಚ್ಚಾತ್ರ "ಸಂಗಮಪ್ರತ್ಯಾಶಾನಂತರಮಪಿ ಭವತೋ ವಿಪ್ರಲಂಭಶೃಂಗಾರಸ್ಯ ಪ್ರವಾಸಾಖ್ಯೋ ಭೇದ ಏವ" ಇತಿ ಕೇಚಿದಾಹುಃ. ತದನ್ಯೇ ಮರಣರೂಪವಿಶೇಷಸಂಭವಾತ್ ತದ್ಭಿನ್ನಮಪಿ ಮನ್ಯಂತೇ.

ನಾಯಕನಾಯಿಕೆಯರಲ್ಲಿ ಯಾರಾದರೊಬ್ಬರು ಕರ್ತವ್ಯಪಾಲನೆಗಾಗಿಯೋ ಅಥವಾ ಶಾಪದಿಂದಲೋ, ಯಾವುದಾದರೂ ಕಾರಣದಿಂದುಂಟಾದ ಸಂಭ್ರಮದಿಂದಲೋ ಪರದೇಶಕ್ಕೆ ಹೋಗಿರುವುದೇ ಪ್ರವಾಸವಿಪ್ರಲಂಭವೆನಿಸುವುದು." ಆ ಕಾಲದಲ್ಲಿ ನಾಯಕನಾಯಿಕೆಯರ ಹಸ್ತ ಪಾದ ಮೊದಲಾದ ಅವಯವಗಳೂ ಬಟ್ಟೆಯೂ ಕೊಳೆಯಾಗಿರುತ್ತವೆ. ಕೂದಲಿಗೆ ಎಣ್ಣೆಯಿಲ್ಲದೆ ತಲೆ ಒಣಗಿರುತ್ತದೆ, ಅವರು ನಿರಾಶರಾಗಿ ನಿಟ್ಟುಸಿರು ಬಿಡುತ್ತಲೂ, ಅಳುತ್ತಲೂ ಇರಬೇಕಾಗುವುದು.

ಇದಿಷ್ಟೇ ಅಲ್ಲದೆ, ಇನ್ನು ಕೆಲವು ದುರಾವಸ್ಥೆಗಳು ಸಂಭವಿಸುತ್ತವೆ. ಅವಯವಗಳಲ್ಲಿ ಸ್ವಸ್ಥತೆಯಿಲ್ಲದಿರುವಿಕೆ, ಸಂತಾಪ, ಬೆಳ್ಳಗಾಗುವಿಕೆ, ಕೃಶತೆ, ಆಹಾರದಲ್ಲಿ ರುಚಿ ಇಲ್ಲದಿರುವಿಕೆ, ಧೈರ್ಯವಿಲ್ಲದ ಸ್ಥಿತಿ, ಮನಸ್ಸಿನ್ಯಸ್ಥಿತಿ, ಒಳಗೆ ಹೊರಗೆ ಎಲ್ಲಿಡೆಯಲ್ಲೂ ತನ್ನ ಇಷ್ಟಾರ್ಥವನ್ನೇ ಬಯಸುತ್ತಿರುವುದು. ಉನ್ಮಾದ, ಮೂರ್ಛೆ, ಮರಣ ಇವು ಹತ್ತು ಕಾಮವಿಕಾರಗಳು ಸಂಭವಿಸುತ್ತವೆ.

ದೇಹಗಳಿಗೆ ಸಂಸ್ಕಾರವಿಲ್ಲದ್ದರಿಂದ ಮಣ್ಣು ಮೊದಲಾದ ಕೊಳೆ ಅಂಟುವುದೇ ಅಸೌಷ್ಠವವೆನಿಸುವುದು. ವಿರಹವ್ಯಥೆಯಿಂದ ಉಂಟಾಗುವ ಬಿಸಿಯೇ ತಾಪವೆನಿಸುವುದು. ಶರೀರವು ಬೆಳ್ಳಗಾಗುವುದೇ ಪಾಂಡುತೆ. ಅದು ಕೃಶವಾಗುವುದಂತೂ ಎಲ್ಲರಿಗೂ ತಿಳಿದೇ ಇದೆ. ಭೋಗ್ಯವಸ್ತುಗಳನ್ನು ಪ್ರೀತಿಸದೆ ಇರುವುದೇ ಅರುಚಿ. ಯಾವುದರಲ್ಲೂ ಅನುರಾಗವಿಲ್ಲದೆ ಇರುವುದೇ ಅಧೃತಿ. ಯಾವ ಆಶ್ರಯವೂ ಇಲ್ಲದೆ ಇರುವ ಸ್ಥಿತಿಯೇ ಅನಾಲಂಬ. ಒಳಗೆ ಹೊರಗೆ ತನ್ನ ಇಚ್ಛೆಯನ್ನು ಭಾವಿಸುತ್ತಿರುವುದೇ ತನ್ಮಯ. ಉನ್ಮಾದಮೂರ್ಛೆಗಳನ್ನು ಹಿಂದೆ ತಿಳಿಸಿದೆ. ಇವಿಷ್ಟೂ ಕಾಮವಿಕಾರವನ್ನು ಹೆಚ್ಚಿಸುವ ಅವಸ್ಥೆಗಳು. ಇವುಗಳಲ್ಲಿ ತಾಪ, ಪಾಂಡುತೆ, ಅನಾಲಂಬ ಈ ಮೂರಕ್ಕೆ ಉದಾಹರಣ ಹೀಗಿದೆ. ವಿರಹಿಣೀ ಸ್ತ್ರೀಯೊಬ್ಬಳ ಅವಸ್ಥೆಯನ್ನು ನೋಡಿ ಅವಳ ಸಖಿಯು ಒಬ್ಬನಿಗೆ ಹೇಳುತ್ತಾಳೆ. "ಇವಳ ಮನಸ್ಸು ಚಿಂತೆಯಿಂದ ಸ್ತಬ್ಧವಾಗಿದೆ. (ಇದರಿಂದ ಅನಾಲಂಬ ಸ್ಥಿತಿಯು ಸೂಚಿತವಾಯಿತು.) ಗಂಡಪ್ರದೇಶವು ಕೈಯಲ್ಲಿಯೇ ಅಡಗಿಕೊಂಡಿತು. ಮುಖವು ಪ್ರಾತಃಕಾಲದ ಚಂದ್ರನಂತೆ ಬೆಳ್ಳಗಾಗಿದೆ. (ಇದರಿಂದ ಪಾಂಡುತೆಯನ್ನು

ತಿಳಿಸಿದಂತಾಯಿತು.) ಕೆಳತುಟಿಯು ನಿಟ್ಟುಸಿರಿನಿಂದಲೇ ಅತ್ಯಂತವಾಗಿ ಬಳಲಿದೆ. ಶರೀರದ ಸಂತಾಪವು ನೀರಿನ ತುಂತುರುಗಳಿರುವ ಕಮಲದ ದಳಗಳಿಂದಲೂ ಶಾಂತಿಯನ್ನು ಹೊಂದುವುದಿಲ್ಲ. (ಇದರಿಂದ ತಾಪವನ್ನು ಹೇಳಿಯಾಯಿತು.) ಈಕೆಯು ಇಂತಹ ಶೋಚನೀಯಾವಸ್ಥೆಯನ್ನು ಸಹಿಸಿಕೊಂಡು ಈಕೆಯ ಬಯಕೆಗೆ ಪಾತ್ರನಾಗಿದ್ದು ದೊರೆಯದೇ ಇರುವವನು ಯಾರು ಇರಬೇಕು ?" ಈ ಪದ್ಯದಲ್ಲಿ ಕೆಲವು ಕಾಮದಶೆಗಳ ಸೂಚನೆಯನ್ನು ಕಾಣಬಹುದು.

ಯಾವುದೋ ಒಂದು ಕಾರ್ಯವನ್ನು ನಿರ್ವಹಿಸಲಿಕ್ಕಾಗಿ ಸಂಭವಿಸುವ ಪ್ರವಾಸವು (ಭಾವಿ) ಮುಂದೆ ಆಗುವಂತಹದು (ಭವತ್) ಈಗ ಸಂಭವಿಸುವಂತಹದು, (ಭೂತ) ಹಿಂದೆ ಆಗಿಹೋಗಿರುವುದು ಹೀಗೆ ಮೂರು ಬಗೆಯಾಗಿದೆ. ಅವುಗಳಲ್ಲಿ ಮುಂದೆ ಸಂಭವಿಸುವಂತಹ ಪ್ರವಾಸವನ್ನು ಹೀಗೆ ಉದಾಹರಿಸುತ್ತಾನೆ ; ಪರದೇಶಕ್ಕೆ ಹೊರಡಲಿಚ್ಛಿಸುವ ನಾಯಕನ ವಿರಹವನ್ನು ಸಹಿಸಲಿಕ್ಕಾಗದೆ ಇರುವ ನಾಯಿಕೆಯು ಪ್ರಶ್ನೋತ್ತರರೂಪದಿಂದ ಹೇಳುವ ಮಾತಿದು." 'ಎಲೈ ಸುಂದರಿಯೇ, ನಾವು ಹೊರಡುವೆವು' ಎಂದು ಅವನು ಹೇಳಲು ಆಕೆ 'ಪಥಿಕನೇ, ಹೊರಡು' ಎಂದು ಹೇಳುವಳು. (ಇಲ್ಲಿ 'ಪಾಂಥ' ಎಂದು ಕರೆದಿದ್ದರಿಂದ ಆಕೆಗೆ ಅವನಲ್ಲಿ ಪ್ರೇಮವಿಲ್ಲವೆಂಬುದು ಸೂಚಿತವಾಯಿತು.) 'ಎಲೈ ಪ್ರೇಯಸಿ, ವ್ಯರ್ಥವಾಗಿ ದುಃಖ ಪಡಬೇಡ, ಬೇಗ ನಾನು ಬರುವೆನು' ಎಂದು ಅವನು ಹೇಳುವನು. 'ನಾನು ಹೋದರೆ ನಿನಗೆ ದುಃಖ ಏಕೆ ಬಂದೀತು ?' 'ಹಾಗಾದರೆ ನೀನು ಏಕೆ ಕಣ್ಣೀರನ್ನು ಸುರಿಸುತ್ತಿರುವೆ ?' 'ನೀನು ಬೇಗನೆ ಹೋಗಲಿಲ್ಲವೆಂದು ನಾನು ಕಣ್ಣೀರನ್ನು ಸುರಿಸುವೆನು.' 'ನನ್ನನ್ನು ಹೊರಡಿಸಲು ನಿನಗೆ ಏಕೆ ಇಷ್ಟು ಆತುರ ?' ನಿನ್ನೊಡನೆ ಹೊರಡಲಿಚ್ಛಿಸುವ ನನಗೆ ಬಾಳಿನಲ್ಲಿ ಹೆಚ್ಚು ಆತುರವಿದೆ. ಆದ್ದರಿಂದಲೇ ನನಗೆ ನಿನ್ನನ್ನು ಹೊರಡಿಸಲು ಇಷ್ಟೊಂದು ಆತುರವಿದೆ.' ಇಲ್ಲಿ ನಾಯಿಕೆಯ ವಿರಹವನ್ನು ತಿಳಿಸುವ ಈ ಮಾತಿನಿಂದ ಮುಂದೆ ಆಗಲಿರುವ ನಾಯಕನ ಪ್ರವಾಸವು ಸೂಚಿತವಾಗುತ್ತದೆ.

ಈಗಿನ ವಿರಹಕ್ಕೆ ಅನ್ವಯಿಸುವಂತೆ ಈಗಲೇ ಸಂಭವಿಸುವ ಪ್ರವಾಸವನ್ನು ಇಲ್ಲಿ ಉದಾಹರಿಸುತ್ತಾನೆ. ನಾಯಕನು ಪರಸ್ಥಳಕ್ಕೆ ಹೊರಡುತ್ತಿರುವಾಗ ಸಖಿಗೆ ನಾಯಿಕೆಯು ಹೇಳುವ ಮಾತಿದು. 'ಪ್ರಿಯತಮನು ಪರದೇಶಕ್ಕೆ ಹೋಗಲು ಮನಸ್ಸು ಮಾಡಲು ನಾಯಿಕೆಯ ಕೈಕಡಗಗಳು ಆಗಲೇ ಪ್ರಯಾಣಮಾಡಿದವು. ಬಹು ದಿವಸಗಳಿಂದಲೂ ಪ್ರಿಯನು ಹೊರಡುವನೆಂದು ಆಲೋಚಿಸಿದ್ದರಿಂದ ಪ್ರೇಯಸಿಯ ದೇಹವು ಕೃಶವಾಗಿ ಕೈಗಳಿಂದ ಬಳೆಯು ಬೀಳಲಾರಂಭಿಸಿತ್ತು. ನನ್ನ ಪ್ರಿಯಬಂಧುಗಳೆನಿಸಿದ ಕಣ್ಣೀರಿನ ಹನಿಗಳು ಬಾರಿಬಾರಿಗೂ ಹೊರಟುವು. ಮುಂದೆ ವಿರಹ ಉಂಟಾಗುವುದೆಂದು ಮೊದಲೇ ಕಣ್ಣೀರು ಬೀಳತೊಡಗಿದವು. ಧೈರ್ಯದಿಂದ ಒಂದು ಕ್ಷಣವಾದರೂ ಇರಲಿಕ್ಕಾಗಲಿಲ್ಲ. ಮನಸ್ಸು ಪ್ರಿಯನಿಗಿಂತ ಮೊದಲೇ ಹೊರಟಿತು. ಪ್ರಿಯನಿರುವ ಕಡೆಯಲ್ಲಿಯೇ ಇರಬೇಕಾದ್ದು ಆವಶ್ಯಕವೆಂದು ಅದು ಭಾವಿಸಿತು. ಹೀಗೆ ತಿಳಿದು ಎಲ್ಲವೂ ಒಂದೇ

ಕಾಲವಲ್ಲಿ ಹೊರಟವು. ಆದ್ದರಿಂದ ಎಲೈ ಪ್ರಾಣವೇ, ನೀನು ಹೋಗುವಾಗ ನಿನ್ನ ಆಪ್ತಮಿತ್ರರೆನಿಸಿದ ಕಂಕಣ ಮೊದಲಾದವೆಲ್ಲವನ್ನು ಏಕೆ ಬಿಟ್ಟು ಹೋಗುವೆ. ಜೊತೆಯವರೊಡನೆ ಹೊರಟರೆ ನಿನಗೆ ಅಷ್ಟು ಆಯಾಸವಿರುವುದಿಲ್ಲ," ಇಲ್ಲಿ ವಿರಹವೂ ಪ್ರವಾಸವೂ ಒಂದೇ ವರ್ತಮಾನಕಾಲಕ್ಕೆ ಅನ್ವಯಿಸುವುದಾಗಿ ತಿಳಿಸಿದೆ. 'ಚಿಂತಾಭಿಃ ಸ್ತಿಮಿತಂ' ಎಂಬ ಪದ್ಯದಲ್ಲಿ ವಿರಹವನ್ನು ತಿಳಿಸುವಕಾಲಕ್ಕೆ ಹಿಂದೆಯೇ ಪ್ರವಾಸವು ಸಂಭವಿಸಿತ್ತೆಂಬುದನ್ನು ಹೇಳಿದೆ. ಶಾಪದಿಂದ ಸಂಭವಿಸುವ ಪ್ರವಾಸಕ್ಕೆ 'ತಾಂ ಜಾನೀಥಾಃ' ಎಂಬಲ್ಲಿ ಕುಬೇರನ ಶಾಪದಿಂದ ಯಕ್ಷನಿಗೆ ಒದಗಿದ್ದ ಶಾಪವನ್ನು ಉದಾಹರಿಸಲಾಗಿದೆ. ಸಂಭ್ರಮದಿಂದ ಒದಗುವ ಪ್ರವಾಸವು ಮಿಂಚು, ಸಿಡಿಲು, ಗುಡುಗು ಮೊದಲಾದ ಉಪದ್ರವಗಳಿಂದಲೂ ಬರುವಂತಹದು. ವಿಕ್ರಮೋರ್ವಶೀಯದಲ್ಲಿ ಉರ್ವಶೀಪುರೂರವ ಇವರಿಗೆ ಒದಗುವ ಪ್ರವಾಸವೂ ಇಂತಹದು. ಇಲ್ಲಿ ಪೂರ್ವರಾಗವಿಪ್ರಲಂಭದಲ್ಲಿ ಹೇಳಿದ ಅಭಿಲಾಷೆ ಮೊದಲಾದ ಹತ್ತು ಅವಸ್ಥೆಗಳೂ ಪ್ರವಾಸವಿಪ್ರಲಂಭದಲ್ಲಿ ತಿಳಿಸಿದ ಅಂಗಸೌಷ್ಠವ ಮೊದಲಾದ ಹತ್ತು ಅವಸ್ಥೆಗಳು ಎರಡು ಕಡೆಗಳಲ್ಲೂ ಸಂಭವಿಸಿದರೂ ಸಹ ಹಿಂದಿನ ಪರಂಪರೆಯನ್ನು ಅನುಸರಿಸಿ ಬೇರೆಬೇರೆಯಾಗಿ ತಿಳಿಸಲಾಗಿದೆ.

ಮೂರುಬಗೆಯ ವಿಪ್ರಲಂಭವನ್ನು ತಿಳಿಸಿ ಕರುಣವಿಪ್ರಲಂಭವನ್ನು ಈಗ ತಿಳಿಸುತ್ತಾನೆ. ಯುವಕ ಯುವತಿ ಇವರಲ್ಲಿ ಯಾರಾದರೊಬ್ಬರು ಪರದೇಶಕ್ಕೆ ಹೋಗಿದ್ದು ಮತ್ತೆ ಹಿಂತಿರುಗಿಬಂದು ಸೇರುವ ಸಂಭವವಿದ್ದರೆ ಅವರಲ್ಲಿ ಒಬ್ಬರು ದುಃಖದಿಂದ ವ್ಯಥೆಪಡುತ್ತಿರುವಾಗ ಶೋಕದಿಂದ ಕೂಡಿದ ರತಿಯೇ ಸ್ಥಾಯಿ ಎನಿಸಿದ್ದ ಕಾರಣ ವಿಪ್ರಲಂಭಶೃಂಗಾರವಾಗಿ ಪರಿಣಮಿಸುತ್ತದೆ. ಸತ್ತಮೇಲೆ ಮತ್ತೆ ಸೇರಬೇಕೆಂಬ ಇಚ್ಛೆಇದ್ದರೆ ಅದು ಕರುಣವಿಪ್ರಲಂಭವೆನಿಸುವುದು. ಕಾದಂಬರಿಯಲ್ಲಿ ಪುಂಡರೀಕ ಮಹಾಶ್ವೇತೆಯರ ವೃತ್ತಾಂತದಲ್ಲಿ ಇದನ್ನು ಕಾಣಬಹುದು. ಅಲ್ಲಿ ಪುಂಡರೀಕನು ಮೊದಲು ಸತ್ತನು. ಅವನೇ ಮತ್ತೆ ಮಹಾಶ್ವೇತೆಗೆ ದೊರೆತನು. ಹೀಗೆಈ ಶರೀರದಲ್ಲಿ ಮತ್ತೆ ಸಮಾಗಮದ ಆಶೆಯಿಲ್ಲದೆಇದ್ದರೂ ಅಥವಾ ಬೇರೆ ಶರೀರದಿಂದ ಸಮಾಗಮವನ್ನು ಪಡೆಯುವುದಾದರೂ ಶೋಕವಷ್ಟೇ ಸ್ಥಾಯಿಭಾವವಾಗುವಪ್ರಯುಕ್ತ ಅದು ಕರುಣರಸವಾಗಿ ಪರಿಣಮಿಸುವುದು.

ಈ ಬಗ್ಗೆ ಪ್ರಾಚೀನಾಲಂಕಾರರ ಅಭಿಪ್ರಾಯವನ್ನು ತಿಳಿಸುತ್ತಾನೆ. ಕಾದಂಬರಿಯಲ್ಲಿ ಬರುವ ಪುಂಡರೀಕ ಮಹಾಶ್ವೇತೆ ಇವರ ವೃತ್ತಾಂತದಲ್ಲಿ ಆಕಾಶವಾಣಿಯು "ಮಹಾಶ್ವೇತೆಯೇ, ನೀನು ಪ್ರಾಣವನ್ನು ತೊರೆಯಬೇಡ, ಮತ್ತೆ ನಿನಗೆ ಇವನೊಡನೆ ಸಮಾಗಮವಾಗಲಿದೆ" ಹೀಗೆ ನುಡಿದಮೇಲೆ ಸಮಾಗಮದ ಆಶೆಯುಂಟಾದ್ದರಿಂದ ಮಹಾಶ್ವೇತೆಗೆ ರತಿಯು ಉದ್ಭವಿಸುವ ಪ್ರಯುಕ್ತ ಶೃಂಗಾರವೇ ಹೊಂದಿಕೆಯಾಗುತ್ತದೆ. ಆದರೆ ಆಕಾಶವಾಣಿಯನ್ನು ಕೇಳುವುದಕ್ಕಿಂತ ಮುಂಚೆ ಕರುಣರಸವನ್ನೇ ಒಪ್ಪಬೇಕು. ಹೀಗೆ ಅನುಭವಿಗಳು ಹೇಳಿದ್ದಾರೆ. "ಸಮಾಗಮವಾಗುವುದೆಂಬ ಆಶೆ ಹುಟ್ಟಿದ ಮೇಲೆಯೂ ವಿಪ್ರಲಂಭಶೃಂಗಾರವೇ ಸಂಭವಿಸಿದರೆ ಪ್ರವಾಸವಿಪ್ರಲಂಭವನ್ನೇ ಹೇಳ

ಬೇಕು" ಎಂದು ಕೆಲವರು ಹೇಳಿದ್ದಾರೆ. ಇದನ್ನು ಬೇರೆಯವರು ಪುಂಡರೀಕನಿಗೆ ಮರಣವೇ ಸಂಭವಿಸುವ ಪ್ರಯುಕ್ತ ಪ್ರವಾಸವಿಪ್ರಲಂಭಕ್ಕಿಂತ ಬೇರೊಂದುರೀತಿಯೇ ಉಂಟೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಅವರು ತಾವೇ ಒಪ್ಪಿರುವ ಕರುಣವಿಪ್ರಲಂಭವನ್ನೂ ಸಹ ಅಲ್ಲಿ ಅನ್ವಯಿಸಲಿಚ್ಛಿಸುವುದಿಲ್ಲ. ಇವೆರಡು ಮತಗಳಲ್ಲೂ ಹೀಗೆ ಅಸ್ವಾರಸ್ಯವಿದೆ. ಪ್ರವಾಸವಿಪ್ರಲಂಭದಲ್ಲಿ ಮರಣದ ಸಂಪರ್ಕವಿಲ್ಲದ್ದರಿಂದ ಪುಂಡರೀಕನ ವೃತ್ತಾಂತದಲ್ಲಿ ಅದು ಅನ್ವಯಿಸುವುದಿಲ್ಲ. ಪೂರ್ವರಾಗ, ಮಾನ, ಪ್ರವಾಸ, ಕರುಣ ಎಂಬ ನಾಲ್ಕು ಬಗೆಗಳನ್ನು ಪ್ರಾಚೀನರು ಒಪ್ಪದೇ ಇರುವುದರಿಂದ ಇವಕ್ಕಿಂತ ಬೇರೊಂದು ಮಾರ್ಗವೂ ಅಲ್ಲಿ ಅನ್ವಯಿಸುವುದಿಲ್ಲ.

ಅಥ ಸಂಭೋಗಃ— ದರ್ಶನಸ್ಪರ್ಶನಾದೀನಿ ನಿಷೇವೇತೇ ವಿಲಾಸಿನೌ ।
ಯತ್ರಾನುರಕ್ತಾವನ್ಯೋಽನ್ಯಂ ಸಂಭೋಗೋಽಯಮುದಾಹೃತಃ ॥

ಆದಿಶಬ್ದಾದನ್ಯೋನ್ಯಾಧರಪಾನಚುಂಬನಾದಯಃ

ಯಥಾ 'ಶೂನ್ಯಂ ವಾಸಗೃಹಂ' ಇತ್ಯಾದಿ.

ಸಂಖ್ಯಾತುಮಶಕ್ಯತಯಾ ಚುಂಬನಪರಿರಂಭಣಾದಿಬಹುಭೇದಾತ್ ।
ಅಯಮೇಕ ಏವ ಧೀರೈಃ ಕಥಿತಃ ಸಂಭೋಗಶೃಂಗಾರಃ ॥
ತತ್ರ ಸ್ಯಾದೃತುಷಟ್ಕಂ ಚಂದ್ರಾದಿತ್ಯೌ ತಥೋದಯಾಸ್ತಮಯಃ ।
ಜಲಕೇಲಿವನವಿಹಾರಪ್ರಭಾತಮಧುಪಾನಯಾಮಿನೀಪ್ರಭೃತಿಃ ॥
ಅನುಲೇಪನಭೂಷಾದ್ಯಾ ವಾಚ್ಯಂ ಶುಚಿ ಮೇಧ್ಯಮನ್ಯಚ್ಚ ।

ತಥಾ ಚ ಭರತಃ "ಯತ್ ಕಿಂಚಿಲ್ಲೋಕೇ ಶುಚಿ ಮೇಧ್ಯಮುಜ್ಜ್ವಲಂ ದರ್ಶನೀಯಂ ವಾ ತತ್ಸರ್ವಂ ಶೃಂಗಾರೇ ಉಪಯುಜ್ಯತೇ" ಇತಿ.

ಕಿಂಚ—ಕಥಿತಶ್ಚತುರ್ವಿಧೋಽಸಾವಾನಂತರ್ಯಾತ್ತು ಪೂರ್ವರಾಗಾದೇಃ

ಯದುಕ್ತಂ— ನ ವಿನಾ ವಿಪ್ರಲಂಭೇನ ಸಂಭೋಗಃ ಪುಷ್ಟಿಮಶ್ನುತೇ ।
ಕಷಾಯಿತೇ ಹಿ ವಸ್ತ್ರಾದೌ ಭೂಯಾನ್ರಾಗೋ ವಿವರ್ಧತೇ ॥

ತತ್ರ ಪೂರ್ವರಾಗಾನಂತರಂ ಸಂಭೋಗೋ ಯಥಾ ಕುಮಾರಸಂಭವೇ ಪಾರ್ವತೀಪರಮೇಶ್ವರಯೋಃ—

ಪ್ರವಾಸಾನಂತರಂ ಸಂಭೋಗೋ ಯಥಾ ಮಮ ತಾತಪಾದಾನಾಮ್

'ಕ್ಷೇಮಂ ತೇ ನನು ಪಕ್ಷ್ಮಲಾಕ್ಷಿ! ಕೃಶಕಂ ಕ್ಷೇಮಂ ಮದಂಗಂ ದೃಢಮ್'
ಏತಾವತ್ ಕೃಶತಾ ಕುತಃ ತವ ಪುನಃ ಪುಷ್ಟಂ ಶರೀರಂ ಯತಃ ;
ಕೇನಾಹಂ ಪೃಥುಲಃ ಪ್ರಿಯೇ ; ಪ್ರಣಯಿನೀದೇಹಸ್ಯ ಸಂಮಿಲನಾತ್
ತ್ವತ್ತಃ ಸುಭ್ರು! ನ ಕಾಪಿ ಮೇ ; ಯದಿ ಇಪಂ ಕ್ಷೇಮಂ ಕುತಃ ಪೃಚ್ಛಸಿ.
ಏವಮನ್ಯತ್ರಾಪ್ಯೂಹ್ಯಮ್.

ಪರಸ್ಪರವಾಗಿ ಅನುರಾಗವುಳ್ಳ ಸ್ತ್ರೀಪುರುಷರು ಯಾವಾಗ ಒಬ್ಬರನ್ನು ಒಬ್ಬರು ನೋಡುತ್ತಲೂ ಮುಟ್ಟುತ್ತಲೂ ರತಿಯನ್ನು ಅನುಭವಿಸುವರೋ ಆ ಬಗೆಯ ಅನುಭವವು

ಸಂಭೋಗಶೃಂಗಾರವೆನಿಸುವುದು. ಅನುರಾಗವುಳ್ಳವರಿಬ್ಬರು ಪ್ರತ್ಯಕ್ಷವಾಗಿ ಅನುಭವಿಸುವ ರತಿಯೇ ಸಂಭೋಗಶೃಂಗಾರವೆನಿಸುವುದು. ಇಲ್ಲಿ ದರ್ಶನಸ್ಪರ್ಶನಗಳಿರುವ ಪ್ರಯುಕ್ತ ವಿಪ್ರಲಂಭಕ್ಕಿಂತ ಇದು ಬೇರೆ ಎನಿಸಿದೆ. ಪೂರ್ವರಾಗಮಾನಗಳಲ್ಲಿ ಕೆಲವುವೇಳೆ ದರ್ಶನವಿದ್ದರೂ ಅಲ್ಲಿ ಭೋಗವಿಲ್ಲದ್ದರಿಂದ ಇದು ಅವಕ್ಕಿಂತ ಬೇರೆ ಎನಿಸಿದೆ. 'ಅನುರಕ್ತೌ' ಎಂದು ಹೇಳಿದ್ದರಿಂದ ಉದಾಶೀನರಾಗಿರುವ ಸ್ತ್ರೀಪುರುಷರಿಗೆ ಪರಸ್ಪರ ದರ್ಶನವಿದ್ದರೂ ರತಿಯು ವಿಕಾಸವಾಗುವುದಿಲ್ಲವೆಂಬುದು ತಿಳಿದುಬರುತ್ತದೆ. 'ಅನ್ಯೋನ್ಯಂ' ಎಂದು ಹೇಳಿದ್ದರಿಂದ ಇಬ್ಬರಲ್ಲಿ ಒಂದು ಕಡೆ ಮಾತ್ರ ಅನುರಾಗವಿದ್ದರೂ ಶೃಂಗಾರರಸಕ್ಕೆ ಅವಕಾಶವಿಲ್ಲವೆಂಬುದು ತಿಳಿಯುತ್ತದೆ. ಕಾರಿಕೆಯಲ್ಲಿ ಆದಿಶಬ್ದದಿಂದ ಅಧರಪಾನ, ಚುಂಬನ ಮೊದಲಾವನ್ನು ಗ್ರಹಿಸಬೇಕು. 'ಶೂನ್ಯಂ ವಾಸಗೃಹಂ' ಎಂಬ ಪದ್ಯದಲ್ಲಿ ಚುಂಬನವೆಂಬ ಪ್ರತ್ಯಕ್ಷಭೋಗವನ್ನು ಅನುಭವಿಸಿದ್ದರಿಂದ ನಾಯಕ ನಾಯಿಕೆಯರಲ್ಲಿದ್ದ ರತಿಭಾವವು ಸಾಮಾಜಿಕರಲ್ಲಿ ಸಂಭೋಗಶೃಂಗಾರವಾಗಿ ಪರಿಣಮಿಸುತ್ತದೆ.

ಸಂಭೋಗಶೃಂಗಾರದಲ್ಲಿ ಚುಂಬನ, ಆಲಿಂಗನ ಮೊದಲಾದ ಅನೇಕ ಬಗೆಗಳಿರುವುದರಿಂದ ಅವನ್ನು ಎಣಿಸಲು ಸಾಧ್ಯವಾಗದ ಪ್ರಯುಕ್ತ ಸಂಭೋಗಶೃಂಗಾರವನ್ನು ಒಂದೇ ಬಗೆ ಎಂದು ಅನುಭವಿಗಳು ಹೇಳಿದ್ದಾರೆ. ಈ ಸಂಭೋಗಶೃಂಗಾರದಲ್ಲಿ ಆರು ಋತುಗಳು, ಜಲಕ್ರೀಡೆ, ವನವಿಹಾರ, ಪ್ರಾತಃಕಾಲ, ಮಧುಪಾನ, ರಾತ್ರಿ ಮೊದಲಾದವು, ಚಂದನ ಮೊದಲಾದವುಗಳ ಲೇಪನ, ಬಟ್ಟೆಗಳು, ಒಡವೆಗಳು ಇವುಗಳ ಅಲಂಕರಣ ಇವೆಲ್ಲವೂ ಉದ್ದೀಪಕವೆನಿಸಿವೆ. ಇವುಗಳ ಜೊತೆಗೆ ಕಮಲ ಮೊದಲಾದವನ್ನೂ ಗ್ರಹಿಸಬೇಕು. ಇದರ ಜೊತೆಗೆ ವಿಭಾವ ಮೊದಲಾದವೆಲ್ಲವೂ ಶುಚಿಯೂ ಪವಿತ್ರವೂ ಆಗಿರಬೇಕು. "ಲೋಕದಲ್ಲಿ ಯಾವುದು ಶುಚಿಯೂ ಪ್ರಕಾಶಮಾನವೂ ಆಗಿದೆಯೋ ಅದೆಲ್ಲವೂ ಶೃಂಗಾರದಲ್ಲಿ ಉಪಯೋಗವಾಗುತ್ತದೆ" ಹೀಗೆ ಭರತನೂ ಹೇಳಿದ್ದಾನೆ. ವಿಪ್ರಲಂಭದಲ್ಲಿ 'ಪೂರ್ವರಾಗ' ಮೊದಲಾದ ನಾಲ್ಕು ಬಗೆಗಳನ್ನೂ ತಿಳಿಸಿದ ಮೇಲೆ ಸಂಭೋಗಶೃಂಗಾರವೂ ನಾಲ್ಕು ಬಗೆಯಾಗುವ ಸಂಭವವಿರುವುದರಿಂದ ಇದು ಹೇಗೆ ಒಂದೇ ಬಗೆ ಎನಿಸುತ್ತದೆ ? ಎಂದು ಆಕ್ಷೇಪಿಸಿದರೆ ಅದೂ ತನಗೆ ಸಮ್ಮತವೆಂದು ಗ್ರಂಥಕಾರನು ಒಪ್ಪಿಕೊಳ್ಳುತ್ತಾನೆ. ಅಲ್ಲಿಯಂತೆ ಇಲ್ಲಿಯೂ ಪೂರ್ವರಾಗ, ಮಾನ. ಪ್ರವಾಸ ಕರುಣವಿಪ್ರಲಂಭ ಇವು ನಾಲ್ಕರ ಅನಂತರವೇ ಸಂಭೋಗವು ಸಂಭವಿಸುವುದರಿಂದ ಇವರಲ್ಲೂ ನಾಲ್ಕು ಬಗೆಗಳುಂಟೆಂದು ತಿಳಿಯುವುದು. ಯಾಕೆಂದರೆ ವಿಪ್ರಲಂಭವಿಲ್ಲದೆ ಸಂಭೋಗಶೃಂಗಾರವು ಪುಷ್ಟಿಯನ್ನು ಹೊಂದುವುದಿಲ್ಲ. ಬಟ್ಟೆಯನ್ನು ಕಷಾಯದಿಂದ ಶುದ್ಧಿಮಾಡಿದರೆಯೇ ಅದರ ಕೆಂಪು ಬಣ್ಣವು ಮತ್ತೆ ಹೆಚ್ಚುತ್ತದೆ. ಹೀಗೆ ವಿಪ್ರಲಂಭದ ಸಂಪರ್ಕವಿಲ್ಲದಿದ್ದರೆ ಸಂಭೋಗಕ್ಕೆ ಪುಷ್ಟಿ ದೊರೆಯಲಾರದು. ಕುಮಾರಸಂಭವದ ಎಂಟನೆಯ ಸರ್ಗದಲ್ಲಿ ಪಾರ್ವತೀಪರಮೇಶ್ವರರ ಸಂಭೋಗವನ್ನು ಪೂರ್ವರಾಗವೆಂಬ ವಿಪ್ರಲಂಬವನ್ನು ತಿಳಿಸಿದ ಅನಂತರವೇ ವರ್ಣಿಸಿದೆ.

ಪ್ರವಾಸವಿಪ್ರಲಂಭದ ಅನಂತರವಲ್ಲಿ ಸಂಭೋಗಶೃಂಗಾರವು ಸಂಭವಿಸುವುದಕ್ಕೆ ಉದಾಹರಣ ಹೀಗಿದೆ. ಪರದೇಶದಿಂದ ಬಂದ ನಾಯಕನು ಸಂಸ್ಕೃತದಲ್ಲೂ ಮನೆಯಲ್ಲಿ ಇದ್ದ ನಾಯಿಕೆಯು ಪ್ರಾಕೃತದಲ್ಲವ ಸಂಭಾಷಣಮಾಡುವರು. "ಎಲೈ ಸುಂದರಿ, ನಿನಗೆ ಕ್ಷೇಮವೆ ?" ಎಂದು ನಾಯಕನು ಕೇಳಲು"ಬಹಳ ಕೃಶವಾಗಿರುವ ಈ ದೇಹವೇ ಕ್ಷೇಮವನ್ನು ತಿಳಿಸುತ್ತದೆ" ಎಂದು ನಾಯಿಕೆ ಉತ್ತರಿಸುವಳು. "ಇಷ್ಟೊಂದು ಕೃಶತ್ವವು ನಿನಗೆ ಏಕೆ ಬಂದಿತು?'' "ನಿನ್ನ ಶರೀರವು ಪುಷ್ಟವಾಗಿರುವುದರಿಂದ ನನ್ನದು ಹೀಗೆ ಕೃಶವಾಯಿತು.'' "ನಾನು ಏತರಿಂದ ಸ್ಥೂಲನಾಗಿರುವೆನು? " 'ಪ್ರೀತಿಪಾತ್ರಳಾದವಳ ಸಂಮೇಳನದಿಂದ ಹಾಗೆ ನೀನು ದಪ್ಪನಾಗಿರುವೆ? ನಿನ್ನ ಪ್ರವಾಸಕಾಲದಲ್ಲಿಯೇ ಬೇರೊಬ್ಬ ಪ್ರೇಯಸಿಯ ಸಂಪರ್ಕದಿಂದ ನೀನು ಹೀಗೆ ಇರುವೆ'.'ಎಲೈ ಕೋಮಲಾಂಗಿ ನಿನ್ನನ್ನು ಬಿಟ್ಟು ಬೇರೆ ಯಾರೂ ನನ್ನನ್ನು ಪ್ರೀತಿಸುವವರಿಲ್ಲ' 'ಹಾಗಿದ್ದರೆ ನೀನು ನನ್ನ ಕ್ಷೇಮಕ್ಕಾಗಿ ಏಕೆ ಪ್ರಶ್ನೆ ಮಾಡಿದೆ? 'ನೀನು ನನ್ನನ್ನೇ ಪ್ರೀತಿಸುತ್ತಿದ್ದರೆ ನಿನ್ನ ವಿರಹದಿಂದ ನನಗೆ ಕ್ಷೇಮವಿಲ್ಲವೆಂಬುದು ನಿನಗೆ ತಿಳಿದೇಇರುತ್ತಿತ್ತು. ಆಗ ನಿನ್ನ ಪ್ರಶ್ನೆಯೇ ಹುಟ್ಟುತ್ತಿರಲಿಲ್ಲ.' ಇಲ್ಲಿ ಪ್ರವಾಸದ ಅನಂತರ ಸಂಭೋಗವನ್ನು ತಿಳಿಸಿದೆ. ಮಾನ ಮತ್ತು ಕರುಣ ವಿಪ್ರಲಂಭಗಳ ಅನಂತರವೇ ಸಂಭವಿಸುವ ಸಂಭೋಗಶೃಂಗಾರಕ್ಕೆ ಉದಾಹರಣಗಳನ್ನು ಹೀಗೆಯೇ ಊಹಿಸಿಕೊಳ್ಳುವುದು.

ಅಥ ಹಾಸಃ— ವಿಕೃತಾಕಾರವಾಗ್ವೇಷಚೇಷ್ಟಾದೇಃ ಕುಹಕಾದ್ಭವೇತ್ ।
ಹಾಸ್ಯೋ ಹಾಸಸ್ಥಾಯಿಭಾವಃ ಶ್ವೇತಃ ಪ್ರಮಥದೈವತಃ ॥
ವಿಕೃತಾಕಾರವಾಕ್ಚೇಷ್ಟಂ ಯಮಾಲೋಕ್ಯ ಹಸೇಜ್ಜನಃ ।
ತದತ್ರಾಲಂಬನಂ ಪ್ರಾಹುಸ್ತಚ್ಚೇಷ್ಟೋದ್ದೀಪನಂ ಮತಮ್ ॥
ಅನುಭಾವೋಽಕ್ಷಿಸಂಕೋಚವದನಸ್ಮೇರತಾದಿಕಃ ।
ನಿದ್ರಾಲಸ್ಯಾವಹಿತ್ಥಾದ್ಯಾ ಅತ್ರ ಸ್ಯುರ್ವ್ಯಭಿಚಾರಿಣಃ ॥
ಜ್ಯೇಷ್ಠಾನಾಂ ಸ್ಮಿತಹಸಿತೇ ಮಧ್ಯಾನಾಂ ವಿಹಸಿತಾವಹಸಿತೇ ಚ ।
ನೀಚಾನಾಮಪಹಸಿತಂ ತಥಾತಿಹಸಿತಂ ಚ ಷಡ್ಭೇದಾಃ ॥
ಈಷದ್ವಿಕಾಸಿನಯನಂ ಸ್ಮಿತಂ ಸ್ಯಾತ್ ಸ್ಪಂದಿತಾಧರಮ್ ।
ಕಿಂಚಿಲ್ಲಕ್ಷ್ಯದ್ವಿಜಂ ತತ್ರ ಹಸಿತಂ ಕಥಿತಂ ಬುಧೈಃ ॥
ಮಧುರಸ್ವರಂ ವಿಹಸಿತಂ ಸಾಂಸಶಿರಃಕಂಪಮವಹಸಿತಮ್ ।
ಅಪಹಸಿತಂ ಸಾಸ್ರಾಕ್ಷಂ ವಿಕ್ಷಿಪ್ತಾಂಗಂ ಚ ಭವತ್ಯತಿಹಸಿತಮ್ ॥

ಯಥಾ–ಗುರೋರ್ಗಿರಃ ಪಂಚ ದಿನಾನ್ಯಧೀತ್ಯ ವೇದಾಂತಶಾಸ್ತ್ರಾಣಿ ದಿನತ್ರಯಂ ಚ ।
ಅಮೀ ಸಮಾಘ್ರಾಯ ಚ ತರ್ಕವಾದಾನ್ ಸಮಾಗತಾಃ ಕುಕ್ಕುಟಮಿಶ್ರಪಾದಾಃ॥ ಅಸ್ಯ ನಟಕಮೇಲಕಪ್ರಭೃತಿಷು ಪರಿಪೋಷೋ ದ್ರಷ್ಟವ್ಯಃ.

ಅತ್ರ ಚ— ಯಸ್ಯ ಹಾಸಃ ನ ಚೇತ್ ಕ್ವಾಪಿ ಸಾಕ್ಷಾನ್ನೈವ ನಿಬಧ್ಯತೇ ।
ತಥಾಪ್ಯೇಷ ವಿಭಾವಾದಿಃ ಸಾಮರ್ಥ್ಯಾದುಪಲಭ್ಯತೇ ॥

ಅಭೇದೇನ ವಿಭಾವಾದಿಃ ಸಾಧಾರಣ್ಯಾತ್ ಪ್ರತೀಯತೇ ।
ಸಾಮಾಜಿಕೈಸ್ತತೋ ಹಾಸ್ಯರಸೋಽಯಮನುಭೂಯತೇ ॥
ಏವಮನ್ಯೇಷ್ವಪಿ ರಸೇಷು ಬೋದ್ಧವ್ಯಮ್..

ಸ್ವಾಭಾವಿಕಸ್ಥಿತಿಗಿಂತಲೂ ಬೇರೆಯಾದ ಆಕಾರ, ಮಾತು, ವೇಶ, ಚೇಷ್ಟೆ, ಗುರುತು ಇಂತಹವುಳಿಂದ ಕುತೂಹಲವನ್ನು ಹುಟ್ಟಿಸುವ ಜನರಿಂದ ಹಾಸ್ಯರಸವು ಹೊರ ಹೊಮ್ಮುತ್ತದೆ. ಹಾಸವೆಂಬ ಸ್ಥಾಯಿಭಾವದಿಂದ ಇದು ವಿಕಾಸಗೊಂಡು ಸಾಮಾಜಿಕರಿಗೆ ಅನುಭವಗೋಚರವಾಗುತ್ತದೆ. ಇದಕ್ಕೆ ಶ್ವೇತವರ್ಣವಿದ್ದು ಈಶ್ವರನ ಅಂತರಂಗ ಭಕ್ತರೆನಿಸಿದೆ ಪ್ರಮಥರೇ ಇವಕ್ಕೆ ಅಧಿದೇವತೆಗಳೆನಿಸಿರುವರು. ವಿಲಕ್ಷಣವಾದ ಆಕಾರ ವಿದ್ದು ಮಾತು ಮತ್ತು ಚೇಷ್ಟೆ ಇವೂ ಸಹ ಸಹಜಸ್ಥಿತಿಗಿಂತ ಬೇರೆಯಾಗಿದ್ದರೆ ಅಂತವ ನನ್ನು ನೋಡಿ ಜನರು ನಗುವರು. ಇಂತಹ ವ್ಯಕ್ತಿಯೇ ಹಾಸ್ಯರಸಕ್ಕೆ ಆಲಂಬನ ವಿಭಾವವೂ, ಅವನ ಚೇಷ್ಟೆಯೇ ಉದ್ದೀಪನವಿಭಾವವೂ ಆಗಿವೆ. ಕಣ್ಣುಗಳನ್ನು ಮುಚ್ಚುವುದು, ಮುಖದಲ್ಲಿ ಮಂದಹಾಸ, ಮುಖವನ್ನು ಮುಚ್ಚಿಕೊಳ್ಳುವುದು ಇವೆಲ್ಲವೂ ಇಲ್ಲಿ ಅನುಭಾವಗಳು. ನಿದ್ರೆ, ಆಲಸ್ಯ, ತನ್ನ ಆಕಾರವನ್ನು ಮುಚ್ಚಿಕೊಳ್ಳುವುದು, ಶ್ರಮ ಇವೆಲ್ಲವೂ ಹಾಸ್ಯರಸವಲ್ಲಿ ವ್ಯಭಿಚಾರಿಭಾವಗಳೆನಿಸಿದೆ.

ಪ್ರಕೃತಿಭೇದದಿಂದ ಹಾಸ್ಯದಲ್ಲಿ ತೋರುವ ಭೇದಗಳನ್ನು ತಿಳಿಸುತ್ತಾನೆ. ಉತ್ತಮಪ್ರಕೃತಿಯವರಿಗೆ ಸ್ಮಿತ ಹಸಿತ ಎರಡೂ ಅನ್ವಯಿಸುತ್ತವೆ. ಇವಿಷ್ಟನ್ನು ಮೀರಿ ಹೆಚ್ಚಾಗಿ ನಗುವುದು ಅವರ ಘನತೆಗೆ ಕುಂದುಕವಾಗುತ್ತದೆ. ಮಧ್ಯಮವರ್ಗದವರಿಗೆ ವಿಹಸಿತ ಅವಹಸಿತ ಈ ಎರಡು ಬಗೆಯ ಹಾಸ್ಯಗಳು ಅನ್ವಯಿಸುತ್ತವೆ. ನೀಚರಿಗೆ ಅಪಹಸಿತ ಮತ್ತು ಅತಿಹಸಿತ ಇವು ಹೊಂದುತ್ತವೆ. ಹೀಗೆ ಹಾಸ್ಯದಲ್ಲಿ ಆರುಬಗೆಗಳಿವೆ. ಸ್ವಲ್ಪವೇ ನಗುತ್ತಲೇ ಕಣ್ಣುಗಳನ್ನು ವಿಸ್ತಾರಗೊಳಿಸುವುದು ಸ್ಮಿತ ಎನಿಸುವುದು. ಹಾಗೆಯೇ ತುಟಿಯನ್ನು ಸ್ವಲ್ಪವೇ ಅಲುಗಿಸುವುದೂ ಸ್ಮಿತವೇ. ಹಲ್ಲುಗಳು ಕೊಂಚವೇ ಹೊರಗೆ ಕಾಣುವಂತೆ ನಗುವುದು ಹಸಿತವೆನಿಸುವುದು. ಸುಶ್ರಾವ್ಯವಾದ ಧ್ವನಿಯಿಂದ ನಗುವುದು ವಿಹಸಿತವೆನಿಸುವುದು. ಹೆಗಲು ತಲೆಗಳನ್ನು ಅಳ್ಳಾಡಿಸುತ್ತ ನಗುವುದು ಅವಹಸಿತವೆನಿಸುವುದು. ಕಣ್ಣೀರನ್ನು ಸುರಿಸುತ್ತ ಹಾಸ್ಯಮಾಡುವುದು ಅಪಹಸಿತ ವೆನಿಸುವುದು. ಅವಯವಗಳನ್ನು ಅಳ್ಳಾಡಿಸುತ್ತ ಹಾಸ್ಯಮಾಡುವುದು ಅತಿಹಸಿತ ವೆನಿಸುವುದು.

“ ಈ ಕುಕ್ಕುಟಮಿಶ್ರರು ಗುರುವಿನ ವಾಕ್ಯಗಳನ್ನು ಅಂದರೆ ಪೂರ್ವಮಿಮಾಂಸಾ ಶಾಸ್ತ್ರವನ್ನು ಐದುದಿನಗಳಕಾಲ ಅಭ್ಯಾಸಮಾಡಿ ಉತ್ತರಮೀಮಾಂಸಾಶಾಸ್ತ್ರವನ್ನು ಮೂರು ದಿನಗಳವರೆಗೆ ಓದಿ ನವ್ಯನ್ಯಾಯಮೊದಲಾದ ತರ್ಕಶಾಸ್ತ್ರಗಳನ್ನು ವ್ಯಾಸಂಗ ಮಾಡಿ ಬಂದಿರುವರು. ಆದ್ದರಿಂದ ಇವರಿಗೆ ಪ್ರಧಾನೋಪಾಧ್ಯಾಯರ ಸ್ಥಾನವನ್ನು ಕೊಡಬೇಕು ” ಎಂಬುದು ಹೇಳುವವನ ಆಶಯ. ಈ ಹಾಸ್ಯರಸವನ್ನು ನಟಕ ಮೇಲಕ ಮೊದಲಾದ ಕಡೆಗಳಲ್ಲಿ ವಿಸ್ತಾರವಾಗಿ ಕಾಣಬಹುದು. ‘ಗುರೋರ್ಗಿರಃ’ ಎಂಬಲ್ಲಿ

ಆಲಂಬವನವೆನಿಸಿದ ವಕ್ತೃವಿಗೆ ಅವನ ಚೇಷ್ಟೆಗಳೇ ಉದ್ದೀಪನವೆನಿಸಿ ಅವನ ಅಕ್ಷಿ ಸಂಕೋಚವೇ ಮೊದಲಾದವು ಅನುಭಾವವೆನಿಸಿ ಅವೆಲ್ಲವನ್ನೂ ಶಬ್ದದಿಂದಲೇ ಸ್ಪಷ್ಟವಾಗಿ ತಿಳಿಸಿರುವುದರಿಂದ ಇಲ್ಲಿ ಹಾಸ್ಯರಸವು ಹೇಗೆ ತೋರುತ್ತದೆ? ಎಂದು ಕೇಳಿದರೆ ಅದಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ಒಬ್ಬನನ್ನು ಅವಲಂಬಿಸಿಕೊಂಡು ಹಾಸ್ಯರಸವು ವಿಕಾಸವಾಗುವುದಾದರೂ ಅದು ಅವನಿಗೆ ನೇರವಾಗಿ ಎಂದಿಗೂ ಅಂಟಿಕೊಂಡಿರುವುದಿಲ್ಲ. ಆದರೂ ಅದು ವಿಭಾವ ಅನುಭಾವ ಸಂಚಾರಿಭಾವಗಳ ಸಾಮರ್ಥ್ಯದಿಂದಲೇ ತೋರಿ ಸಾಮಾಜಿಕರಿಗೆ ಅನುಭವಯೋಗ್ಯವಾಗುತ್ತದೆ, ಸಾಮಾಜಿಕರು ವಿಭಾವಗಳನ್ನು ಸಾಧಾರಣವೆಂದು ಭಾವಿಸಿ ತಮಗಿಂತ ಬೇರೆಯಲ್ಲವೆಂದು ತಿಳಿಯುವರು. ಆದ್ದರಿಂದಲೇ ಅವರು ಈ ಹಾಸ್ಯರಸವನ್ನು ಅನುಭವಿಸುತ್ತಾರೆ. ಹೀಗೆಯೇ ಬೇರೆ ರಸಗಳಲ್ಲೂ ತಿಳಿಯುವುದು.

ಅಥ ಕರುಣಃ— ಇಷ್ಟನಾಶಾದನಿಷ್ಟಾಪ್ತೇಃ ಕರುಣಾಖ್ಯೋ ರಸೋ ಭವೇತ್ ।

ಧೀರೈಃ ಕಪೋತವರ್ಣೋಽಯಂ ಕಥಿತೋ ಯಮದೈವತಃ ॥

ಶೋಕೋಽತ್ರ ಸ್ಥಾಯಿಭಾವಃ ಸ್ಯಾತ್ ಶೋಚ್ಯಮಾಲಂಬನಂ ಮತಮ್ ।

ತಸ್ಯ ದಾಹಾದಿಕಾವಸ್ಥಾ ಭವೇದುದ್ದೀಪನಂ ಪುನಃ ॥

ಅನುಭಾವಾ ದೈವನಿಂದಾಭೂಪಾತಕ್ರಂದಿತಾದಯಃ ।

ವೈವರ್ಣ್ಯೋಚ್ಛ್ವಾಸನಿಶ್ವಾಸಸ್ತಂಭಪ್ರಲಪನಾನಿ ಚ ॥

ನಿರ್ವೇದಮೋಹಾಪಸ್ಮಾರವ್ಯಾಧಿಗ್ಲಾನಿಸ್ಮೃತಿಶ್ರಮಾಃ ।

ವಿಷಾದಜಡತೋನ್ಮಾದಚಿಂತಾದ್ಯಾ ವ್ಯಭಿಚಾರಿಣಃ ॥

ಶೋಚ್ಯಂ ವಿನಷ್ಟಬಂಧುಪ್ರಭೃತಿ. ಯಥಾ ಮಮ ರಾಘವವಿಲಾಸೇ—

ವಿಪಿನೇ ಕ್ವ ಜಟಾನಿಬಂಧನಂ ತವ ಚೇದಂ ಕ್ವ ಮನೋಹರಂ ವಪುಃ ।

ಅನಯೋರ್ಘಟನಾ ವಿಧೇಃ ಸ್ಫುಟಂ ನನು ಖಡ್ಗೇನ ಶಿರೀಷಕರ್ತನಮ್ ॥

ಅತ್ರ ಹಿ ರಾಮವನವಾಸಜನಿತಶೋಕಾರ್ತಸ್ಯ ದಶರಥಸ್ಯ ದೈವನಿಂದಾ ಏವಂ ಬಂಧುವಿಯೋಗವಿಭವನಾಶಾದಾವಪಿ ಉದಾಹಾರ್ಯಮ್.

ಪರಿಪೋಷಸ್ತು ಮಹಾಭಾರತೇ ಸ್ತ್ರೀಪರ್ವಣಿ ದ್ರಷ್ಟವ್ಯಃ

ಅಥ ಕರುಣವಿಪ್ರಲಂಭಾದ್ಭೇದಮಾಹ—

ಶೋಕಸ್ಥಾಯಿತಯಾ ಭಿನ್ನೋ ವಿಪ್ರಲಂಭಾದಯಂ ರಸಃ ।

ವಿಪ್ರಲಂಭೇ ರತಿಃ ಸ್ಥಾಯೀ ಪುನಃ ಸಂಭೋಗಹೇತುಕಃ ॥

ಪುತ್ರ, ಧನ ಮೊದಲಾದ ಇಷ್ಟವಸ್ತುಗಳ ನಾಶದಿಂದಲೂ, ಅನಿಷ್ಟವಸ್ತುಗಳು ನಮ್ಮನ್ನು ಆಕ್ರಮಿಸುವುದರಿಂದಲೂ ಕರುಣವೆಂಬ ರಸವು ನಮಗೆ ಆಸ್ವಾದಕ್ಕೆ ಯೋಗ್ಯವಾಗುವುದೆಂದು ಅನುಭಾವಿಗಳು ಹೇಳುವರು. ಇವಕ್ಕೆ ಕಪೋತದ ಬಣ್ಣ ಅಂದರೆ. ಮಲಿನವರ್ಣವಿದ್ದು ಯಮನೇ ಅಧಿದೇವತೆ ಎನಿಸಿರುವನು. ಯಮನಿಂದಲೇ ಶೋಕವು ಹುಟ್ಟುವುದರಿಂದ ಅವನೇ ಇಲ್ಲಿ ಅಧಿದೇವತೆ. ಈ ಶೋಕವೇ, ಇಲ್ಲಿ ಸ್ಥಾಯಿಭಾವ.

ಬಂಧುಗಳು ನಷ್ಟವಾಗಿ ಶೋಚನೀಯಸ್ಥಿತಿಯಲ್ಲಿರುವ ವ್ಯಕ್ತಿಯೇ ಇಲ್ಲಿ ಅವಲಂಬನ, ಅವನಿಗೆ ಹೆಂಡತಿ ಮಕ್ಕಳೆಲ್ಲರೂ ತೊಲಗುವುದೇ ಉದ್ದೀಪನ. ಅವನು ಅದೃಷ್ಟವನ್ನು ನಿಂದಿಸುವುದು, ಅಳುವುದು, ನೆಲದಮೇಲೆ ಬೀಳುವುದು ಇವೆಲ್ಲವೂ ಅನುಭಾವಗಳು. ಮುಖದಲ್ಲಿ ಬಣ್ಣ ಬದಲಾಯಿಸುವುದು, ಉಚ್ಛ್ವಾಸ, ಸ್ತಂಭ, ಪ್ರಲಾಪ, ನಿರ್ವೇದ, ಮೋಹ, ಅಪಸ್ಮಾರ, ವ್ಯಾಧಿ, ಗ್ಲಾನಿ, ಸ್ಮೃತಿ, ಶ್ರಮ, ವಿಷಾದ, ಜಡತೆ, ಉನ್ಮಾದ, ಚಿಂತೆ ಇವೆಲ್ಲವೂ ವ್ಯಭಿಚಾರಿಭಾವಗಳೆನಿಸಿವೆ. ರಾಘವವಿಲಾಸದಿಂದ ಆಲಂಬನವಿಭಾವವನ್ನು ತಿಳಿಸುತ್ತಾನೆ. ಕಾಡಿಗೆ ಹೋಗಲು ಉದ್ಯುಕ್ತನಾದ ರಾಮನಿಗೆ ದಶರಥನು ಹೇಳುತ್ತಾನೆ. "ಕಾಡಿನಲ್ಲಿ ಋಷಿಜೀವನವನ್ನು ನಡೆಸಲು ಜಡೆಯನ್ನು ಧರಿಸುವ ವ್ರತವೆಲ್ಲಿ ? ನಿನ್ನ ಈ ಮನೋಹರವಾದ ರೂಪವೆಲ್ಲಿ ? ಇವೆರಡನ್ನು ವಿಧಿಯು ಇಲ್ಲಿ ಸೇರಿಸಿರುವುದು ಖಡ್ಗದಿಂದ ಮೃದುವಾದ ಶಿರೀಷಪುಷ್ಪವನ್ನು ಕತ್ತರಿಸಿದಂತಾಯಿತು." ಇಲ್ಲಿ ರಾಮನ ವನವಾಸದಿಂದ ಉಂಟಾದ ದುಃಖಕ್ಕೆ ಬಳಲಿ ಬೆಂಡಾಗುವ ದಶರಥನು ವಿಧಿಯನ್ನು ನಿಂದಿಸುತ್ತಾನೆ. ಇಲ್ಲಿ ರಾಮನೇ ಆಲಂಬನವಿಭಾವ, ಅವನು ಅರಣ್ಯಕ್ಕೆ ಹೊರಡುವ ಪ್ರಯತ್ನವೇ ಉದ್ದೀಪನವಿಭಾವ. ಇದು ಅರ್ಥದಿಂದ ಸಹಜವಾಗಿಯೇ ತಿಳಿದುಬರುವುದರಿಂದ ಇದನ್ನು ಅಲ್ಲಿ ಸೂಚಿಸಿಲ್ಲ, ಶೋಕವೇ ಸ್ಥಾಯಿಭಾವ, ದೈವನಿಂದೆಯೇ ಅನುಭಾವ, ಗ್ಲಾನಿ ವಿಷಾದ ಮೊದಲಾದವು ವ್ಯಭಿಚಾರಿಭಾವಗಳು. ಇವೂ ಸಹ ಅರ್ಥದಿಂದಲೇ ಸಿದ್ಧಿಸುತ್ತವೆ. ಹಾಗೆಯೇ ಬಂಧುವಿಯೋಗ, ಐಶ್ವರ್ಯನಾಶ, ಅನಿಷ್ಟಪ್ರಾಪ್ತಿ ಇವುಗಳ ಬಗ್ಗೆ ತಿಳಿಯುವುದು. ಅದರ ಪೂರ್ಣವಿಕಾಸಸ್ಥಿತಿಯನ್ನು ಮಹಾಭಾರತದ ಸ್ತ್ರೀಪರ್ವದಲ್ಲಿ ನೋಡಬಹುದು. ಇದು ಕರುಣವಿಪ್ರಲಂಭಶೃಂಗಾರದಿಂದ ಬೇರೆ ಎಂಬುದನ್ನು ತಿಳಿಸುತ್ತಾನೆ. ಇದಕ್ಕೆ ಶೋಕವು ಸ್ಥಾಯಿಯಾದ್ದರಿಂದ ಇದು ವಿಪ್ರಲಂಭಕ್ಕಿಂತ ಬೇರೆ ಎಂಬುದು ಸ್ಪಷ್ಟವಾಗಿದೆ. ವಿಪ್ರಲಂಭದಲ್ಲಾದರೋ ರತಿಯು ಸ್ಥಾಯಿ. ಅಲ್ಲಿಯೂ ಶೋಕವಿರುವುದೆಂದು ಆಕ್ಷೇಪಿಸಿದರೆ ಅಲ್ಲಿರುವ ಶೋಕವು ಸಂಭೋಗಕ್ಕೆ ಕಾರಣವೆನಿಸಿದೆಯೇ ಹೊರತು ಅದು ಸ್ಥಾಯಿ ಎನಿಸಲರ್ಹವಾಗಿಲ್ಲ. ಅಲ್ಲಿ ರತಿಯೇ ಸ್ಥಾಯಿಭಾವವಾಗಿದ್ದು ಶೋಕವು ಅಪ್ರಧಾನವಾಗಿದ್ದು ಕೇವಲ ಸಾಹಾಯಕವಾಗಿರುತ್ತದೆ. ಇಲ್ಲಿಯಾದರೋ ಶೋಕವೇ ಪ್ರಧಾನವಾದ್ದರಿಂದ ಸ್ಥಾಯಿಭಾವವೆನಿಸಿದೆ.

ಅಥ ರೌದ್ರಃ—ರೌದ್ರಃ ಕ್ರೋಧಸ್ಥಾಯಿಭಾವಃ ರಕ್ತೋ ರುದ್ರಾಧಿದೈವತಃ ।

ಆಲಂಬನಮರಿಸ್ತತ್ರ ತಚ್ಚೇಷ್ಟೋದ್ದೀಪನಂ ಮತಮ್ ॥
ಮುಷ್ಟಿಪ್ರಹಾರಪತನವಿಕೃತಚ್ಛೇದಾವದಾರಣೈಶ್ಚೈವ ।
ಸಂಗ್ರಾಮಸಂಭ್ರಮಾದ್ಯೈರಸ್ಯೋದ್ದೀಪ್ತಿರ್ಭವೇತ್ ಪ್ರೌಢಾ ॥
ಭ್ರೂವಿಭಂಗೋಷ್ಠನಿರ್ದಂಶಬಾಹುಸ್ಫೋಟನತರ್ಜನಾಃ ।
ಆತ್ಮಾವದಾನಕಥನಮಾಯುಧೋತ್ಕ್ಷೇಪಣಾನಿ ಚ ॥
ಅನುಭಾವಾಸ್ತಥಾಕ್ಷೇಪಕ್ರೂರಸಂದರ್ಶನಾದಯಃ ।

ಉಗ್ರತಾವೇಗರೋಮಾಂಚಸ್ವೇದವೇಪಥವೋ ಮದಃ ||
ಮೋಹಾಮರ್ಷಾದಯಶ್ಚಾತ್ರ ಭಾವಾಃ ಸ್ಯುರ್ವ್ಯಭಿಚಾರಿಣಃ |
ಕೃತಮನುಮತಂ ದೃಷ್ಟಂ ವಾ ಯೈರಿದಂ ಗುರುಪಾತಕಂ |
ಮನುಜಪಶುಭಿರ್ನಿರ್ಮರ್ಯಾದೈರ್ಭವದ್ಭಿರುದಾಯುಧೈಃ ||
ನರಕರಿಪುಣಾ ಸಾರ್ಧಂ ತೇಷಾಂ ನ ಭೀಮಕಿರೀಟನಾಂ |
ಅಯಮಹಮಸೃಜ್ಮೇದೋಮಾಂಸೈಃ ಕರೋಮಿ ದಿಶಾಂ ಬಲಿಮ್ ||

ಅಸ್ಯ ಯುದ್ಧವೀರಾದ್ಭೇದಮಾಹ—

ರಕ್ತಾಸ್ಯನೇತ್ರತಾ ಚಾತ್ರ ಭೇದಿನೀ ಯುದ್ಧವೀರತಃ |

ಶೃಂಗಾರ, ಹಾಸ್ಯ, ಕರುಣರಸಗಳನ್ನು ನಿರೂಪಿಸಿ ಈಗ ರೌದ್ರರಸದ ಸ್ವರೂಪವನ್ನು ತಿಳಿಸುತ್ತಾನೆ. ರೌದ್ರರಸಕ್ಕೆ ಕ್ರೋಧವೇ ಸ್ಥಾಯಿಭಾವ. ಕ್ರೋಧವು ರಜೋಗುಣದಿಂದ ಹುಟ್ಟುವುದರಿಂದ, ರಜೋಗುಣವನ್ನು ಕೆಂಪುಬಣ್ಣವೆಂದು ಭಾವಿಸಿರುವ ಪ್ರಯುಕ್ತ ರೌದ್ರರಸವನ್ನು ಕೆಂಪು ಬಣ್ಣದ್ದೆಂದು ಕರೆಯಲಾಗಿದೆ. ಸಂಹಾರಕ್ಕೆ ಅಧಿಪತಿಯಾದ ರುದ್ರನೇ ಈ ರಸಕ್ಕೆ ಅಧಿಷ್ಠಾನದೇವತೆ. ಶತ್ರುವೇ ಈ ರಸಕ್ಕೆ ಆಲಂಬನ. ಮುಷ್ಟಿಯಿಂದ ಹೊಡೆಯುವುದು, ಮತ್ತು ಆಕ್ರಮಿಸುವುದು, ಅವನಿಗೆ ವಿರುದ್ಧವಾದ್ದನ್ನು ಮಾಡುವುದು, ಅವನ ಸೈನ್ಯವನ್ನು ಹಾಳುಮಾಡುವುದು, ಶೂಲದಿಂದ ಇರಿಯುವುದು ಇವುಗಳಿಂದಲೂ, ಯುದ್ಧಕ್ಕೆ ಆತುರದಿಂದ ಹೊರಡುವುದು, ಶತ್ರುಗಳ ಶಿಬಿರವನ್ನು ನಾಶಮಾಡುವುದು ಇವುಗಳಿಂದಲೂ ರೌದ್ರರಸಕ್ಕೆ ಹೆಚ್ಚಿನ ಉದ್ದೀಪನವುಂಟಾಗುವುದು. ಹುಬ್ಬುಗಂಟು ಹಾಕುವುದು, ತುಟಿಯನ್ನು ಕಚ್ಚುವುದು, ತೋಳುಗಳನ್ನು ಅಳ್ಳಾಡಿಸುವುದು, ಮಾತಿನಿಂದ ಬೆದರಿಸುವುದು, ತಾನು ಮಾಡಿದ ಕಾರ್ಯಗಳನ್ನು ಪ್ರಶಂಸಿಸುವುದು, ಆಯುಧಗಳನ್ನು ಮೇಲಕ್ಕೆ ಎತ್ತುವುದು ಹಾಗೆಯೇ ಎದುರಾಳಿಯನ್ನು ನಿಂದಿಸುವುದು,ಕ್ರೂರವಾಗಿ ನೋಡುವುದು. ತನ್ನ ಸೈನಿಕರನ್ನು ಉತ್ತೇಜನಗೊಳಿಸುವುದು ಇವೆಲ್ಲವೂ ಅನುಭಾವಗಳು. ಉಗ್ರತೆ, ಆವೇಗ, ರೋಮಾಂಚ, ಸ್ವೇದ, ನಡುಕ, ಮದ, ಮೋಹ ಅಮರ್ಷ ಇವೆಲ್ಲವೂ ವ್ಯಭಿಚಾರಿಭಾವಗಳು.

ವೇಣೀಸಂಹಾರದಲ್ಲಿ ದ್ರೋಣನನ್ನು ಧೃಷ್ಟದ್ಯುಮ್ನನು ಕೊಂದನೆಂದು ಕೇಳಿ ದುರ್ಯೋಧನನೆದುರಿಗೆ ಅಶ್ವತ್ಥಾಮನು ಹೀಗೇಗೆ ಹೇಳುವನು. "ಯುಕ್ತಾಯುಕ್ತ ವಿವೇಕವಿಲ್ಲದ್ದರಿಂದ ಪಶುವೆನಿಸಿ ಆತ್ಮಗೌರವವಿಲ್ಲದೆ ಆಯುಧಪಾಣಿಯಾಗಿದ್ದು ನೀವು ಬ್ರಹ್ಮಹತ್ಯೆ ಎನಿಸಿದ ಈ ಮಹಾಪಾಪವನ್ನು ಮಾಡಿಸಿರುವಿರಿ. ಧೃಷ್ಟದ್ಯುಮ್ನನು ಮಾಡಿದ್ದನ್ನು ನೀವೆಲ್ಲರೂ ನೋಡಿರುವಿರಿ. ಅದಕ್ಕೆ ಪ್ರತಿಯಾಗಿ ಕೃಷ್ಣ, ಭೀಮ, ಅರ್ಜುನರೊಡನೆ ನಿಮ್ಮೆಲ್ಲರ ರಕ್ತ,ಮಾಂಸ, ಮೇದಸ್ಸು ಇವುಗಳಿಂದ ನಾನು ಈ ಎಲ್ಲಾ ದಿಕ್ಕುಗಳಲ್ಲೂ ಇರುವ ಪ್ರಾಣಿಗಳಿಗೆ ಬಲಿಯನ್ನು ಕೊಡುವೆನು ?" ಇಲ್ಲಿ ಧೃಷ್ಟದ್ಯುಮ್ನ ಮೊದಲಾದವರು ಆಲಂಬನವಿಭಾವರು. ಅವನು ಮಾಡಿದ ಪಿತೃಹತ್ಯ ಮೊದಲಾದವು ಉದ್ದೀಪನವಿಭಾವಗಳು. ಇಲ್ಲಿ ಹೇಳಿರುವಂತೆ ಬೆದರಿಸುವುದೇ ಅನುಭಾವ. ಉಗ್ರತೆ

ಆವೇಗ ಮೊದಲಾದವು ವ್ಯಭಿಚಾರಿಭಾವಗಳು. ಇವುಗಳಿಂದ ಅಭಿವ್ಯಕ್ತವಾಗುವ ರೌದ್ರ ರಸವು ಸಾಮಾಜಿಕರ ಹೃದಯದಲ್ಲಿ ಅನುಭವಗೋಚರವಾಗುವುದು.

ಯುದ್ಧವೀರರಸಕ್ಕಿಂತಲೂ ರೌದ್ರರಸವು ಬೇರೆ ಎಂಬುವನ್ನು ಇಲ್ಲಿ ತಿಳಿಸುತ್ತಾನೆ. ಯುದ್ಧವೀರದಲ್ಲಿಯೂ ಶತ್ರುವೇ ಆಲಂಬನವಿಭಾವವೆನಿಸಿದ್ದರಿಂದ ಎರಡೂ ಒಂದೇ ಬಗೆ ಎನಿಸುವ ಪ್ರಯುಕ್ತ ಅವಕ್ಕೆ ಭೇದವನ್ನು ತಿಳಿಯಬೇಕು. ರೌದ್ರರಸದಲ್ಲಿ ಸ್ಥಾಯಿ ಎನಿಸಿದ ಕ್ರೋಧವು ಶತ್ರುವಿನ ಮುಖವನ್ನೂ ಕಣ್ಣುಗಳನ್ನೂ ಕೆಂಪಗೆಮಾಡಿಸುತ್ತದೆ. ಯುದ್ಧವೀರರಸದಲ್ಲಿ ಹೀಗೆ ಕಣ್ಣು ಕೆಂಪೇರುವುದಿಲ್ಲ. ಉತ್ಸಾಹವಿರುವವರೆಗೆ ಮಾತ್ರವೇ ಯುದ್ಧವೀರರಸವು ಅನುಭವಗೋಚರವಾಗುವುದು. ಅದರ ಜೊತೆಯಲ್ಲಿಯೇ ಕ್ರೋಧವು ಹುಟ್ಟುವುದಾದರೆ ಆಗ ಅದು ರೌದ್ರರಸವೇ ಆಗಿ ಪರಿಣಮಿಸುವುದು.

ಅಥ ವೀರಃ— ಉತ್ತಮಪ್ರಕೃತೀರ್ವೀರಃ ಉತ್ಸಾಹಸ್ಥಾಯಿಭಾವಕಃ ।
ಮಹೇಂದ್ರದೈವತೋ ಹೇಮವರ್ಣೋಽಯಂ ಸಮುದಾಹೃತಃ ॥
ಆಲಂಬನವಿಭಾವಾಸ್ತು ವಿಜೇತವ್ಯಾದಯೋ ಮತಾಃ ।
ವಿಜೇತವ್ಯಾದಿಚೇಷ್ಟಾದ್ಯಾಸ್ತಸ್ಯೋದ್ದೀಪನರೂಪಿಣಃ ॥
ಅನುಭಾವಾಸ್ತು ತತ್ರ ಸ್ಯುಃ ಸಹಾಯಾನ್ವೇಷಣಾದಯಃ ।
ಸಂಚಾರಿಣಸ್ತು ಧೃತಿಮತಿಗರ್ವಸ್ಮೃತಿತರ್ಕರೋಮಾಂಚಾಃ ॥
ಸ ಚ ದಾನಧರ್ಮಯುದ್ಧೈರ್ದಯಯಾ ಚ ಸಮನ್ವಿತಶ್ಚತುರ್ಧಾ ಸ್ಯಾತ್ ।

ಸ ಚ ವೀರೋ ದಾನವೀರೋ ಧರ್ಮವೀರೋ ದಯಾವೀರೋ ಯುದ್ಧವೀರಶ್ಚೇತಿ ಚತುರ್ವಿಧಃ. ತತ್ರ ದಾನವೀರೋ ಯಥಾ ಪರಶುರಾಮಃ "ತ್ಯಾಗಃ ಸಪ್ತಸಮುದ್ರಮುದ್ರಿತಮಹೀನಿರ್ವ್ಯಾಜದಾನಾವಧಿಃ" ಇತಿ. ಅತ್ರ ಪರಶುರಾಮಸ್ಯ ತ್ಯಾಗೇ ಉತ್ಸಾಹಃ ಸ್ಥಾಯಿಭಾವಃ ಸಂಪ್ರದಾನಭೂತೈಃ ಬ್ರಾಹ್ಮಣೈರಾಲಂಬನವಿಭಾವೈಃ ಸತ್ತ್ವಾಧ್ಯವಸಾಯಾದಿಭಿಶ್ಚೋದ್ದೀಪನವಿಭಾವೈರ್ವಿಭಾವಿತಃ ಸರ್ವಸ್ವತ್ಯಾಗಾದಿಭಿರನುಭಾವೈರನುಭಾವಿತೋ ಹರ್ಷಧೃತ್ಯಾದಿಭಿಃ ಸಂಚಾರಿಭಿಃ ಪುಷ್ಟಿಂ ನೀತೋ ದಾನವೀರತಾಂ ಭಜತೇ. ಧರ್ಮವೀರೋ ಯಥಾ ಯುಧಿಷ್ಠಿರಃ—

ರಾಜ್ಯಂ ಚ ವಸು ದೇಹಶ್ಚ ಭಾರ್ಯಾಭ್ರಾತೃಸುತಾಶ್ಚ ಯೇ ।
ಯಚ್ಚ ಲೋಕೇ ಮಮಾಯತ್ತಂ ತದ್ಧರ್ಮಾಯ ಸದೋದ್ಯತಮ್ ॥

ಯುದ್ಧವೀರೋ ಯಥಾ ಶ್ರೀರಾಮಚಂದ್ರಃ—

ಭೋ ಲಂಕೇಶ್ವರ ! ದೀಯತಾಂ; ರಾಮಃ ಸ್ವಯಂ ಯಾಚತೇ
ಕೋಽಯಂ ತೇ ಮತಿವಿಭ್ರಮಃ ಸ್ಮರ ನಯಂ ನಾದ್ಯಾಪಿ ಕಿಂಚಿತ್ ಕೃತಮ್ ।
ನೈವಂ ಚೇತ್ ಖರದೂಷಣತ್ರಿಶಿರಸಾಂ ಕಂಠಾಸೃಜಾ ಪಂಕಿಲಃ
ಪತ್ರೀ ನೈಷ ಸಹಿಷ್ಯತೇ ಮಮ ಧನುರ್ಜ್ಯಾಬಂಧಬಂಧೂಕೃತಃ ॥

ದಯಾವೀರೋ ಯಥಾ ಜೀಮೂತವಾಹನಃ—

ಶಿರಾಮುಖೈಃ ಸ್ಯಂದತ ಏವ ರಕ್ತಮದ್ಯಾಪಿ ದೇಹೇ ಮಮ ಮಾಂಸಮಸ್ತಿ ।

ತೃಪ್ತಿಂ ನ ಪಶ್ಯಾಮಿ ತವಾಪಿ ತಾವತ್ ಕಿಂ ಭಕ್ಷಣಾತ್ತ್ವಂ ವಿರತೋ ಗರುತ್ಮನ್||
ಏಷ್ವಪಿ ವಿಭಾವಾದಯಃ ಪೂರ್ವೋದಾಹರಣವದೂಹ್ಯಾಃ.

ಬೇರೆ ಎಲ್ಲಾರಸಗಳಿಗಿಂತಲೂ ವೀರರಸದ ಸ್ವಭಾವವು ಉತ್ಕೃಷ್ಟವೆನಿಸಿದೆ. ಉತ್ಕೃಷ್ಟಜನರಲ್ಲಿವ ಉತ್ಸಾಹವೇ ಇದರ ಸ್ಥಾಯಿಭಾವವೆನಿಸಿದೆ. ವೀರರೆಲ್ಲರಿಗೂ ಈಶ್ವರನೆನಿಸಿದ ಮಹೇಂದ್ರನೇ ಇವಕ್ಕೆ ಅಭಿಮಾನದೇವತೆ ಎನಿಸಿರುವನು. ಮಹೇಂದ್ರನಿಗೆ ಬಂಗಾರದ ಬಣ್ಣವಿರುವುದರಿಂದ ವೀರರಸವೂ ಅದೇವರ್ಣವೆನಿಸಿದೆ. ಯುದ್ಧದಲ್ಲಿ ಜಯಿಸಬೇಕಾಗಿರುವ ಶತ್ರು, ದಯೆಗೆ ಅರ್ಹನಾದವನು, ದಾನಧರ್ಮಗಳಿಗೆ ಪಾತ್ರರೆನಿಸಿದವರು ಇವಕ್ಕೆ ಆಲಂಬನರೆನಿಸಿರುವರು. ಯುದ್ಧವೀರದಲ್ಲಿ ಜಯಿಸಬೇಕಾಗಿರುವ ಶತ್ರುವೂ, ದಾನವೀರದಲ್ಲಿ ದಾನವನ್ನು ತೆಗೆದುಕೊಳ್ಳುವವನೂ, ಧರ್ಮವೀರದಲ್ಲಿ ದರ್ಮವೂ, ದಯಾವೀರದಲ್ಲಿ ದುಃಖದಲ್ಲಿ ನರಳುವವನೂ ಆಲಂಬನವಿಭಾವರೆನಿಸಿರುವರು. ಇವರೆಲ್ಲರೂ ಮಾಡುವ ಚೇಷ್ಟೆಗಳೇ ಉದ್ದೀಪನವಿಭಾವವೆನಿಸಿರುವುವು. ಸಹಾಯವನ್ನು ಹುಡುಕುವುದು, ಭೇದವನ್ನು ಪ್ರಯೋಗಿಸುವುದು, ತ್ಯಾಗ, ಧನಸಂಗ್ರಹ, ಯಾಗವನ್ನಾಚರಿಸುವುದು, ಮಾತಿನಿಂದ ಸಮಾಧಾನಮಾಡುವುದು ಇವೆಲ್ಲವು ಅನುಭಾವಗಳು. ಧೃತಿ, ಮತಿ, ಗರ್ವ, ಸ್ಮೃತಿ, ತರ್ಕ, ರೋಮಾಂಚ ಇವೆಲ್ಲವೂ ವ್ಯಭಿಚಾರಿಭಾವಗಳು. ಇವುಗಳಿಂದ ಪುಷ್ಟಿಹೊಂದಿದ ವೀರರಸವು ದಾನವೀರ, ಧರ್ಮವೀರ, ಯುದ್ಧವೀರ ದಯಾವೀರ ಎಂದು ನಾಲ್ಕು ಬಗೆಯಾಗಿದೆ. ಇವುಗಳಲ್ಲಿ ದಾನವೀರನೆನಿಸಿದ ಪರಶುರಾಮನ ಬಗ್ಗೆ ಮಹಾವೀರಚರಿತನಾಟಕದಲ್ಲಿ ಹೀಗೆ ಹೇಳಿದೆ. "ಇವನು ಜಮದಗ್ನಿಯ ಮಗನು. ಮಹಾದೇವನೇ ಇವನಿಗೆ ಆಚಾರ್ಯನು. ಅವನ ವೀರ್ಯವೆಂತಹದೆಂಬುದನ್ನು ಮಾತಿನಿಂದ ತಿಳಿಸಲಾಗುವುದಿಲ್ಲ. ಇಪ್ಪತ್ತೊಂದು ಸಾರಿ ಸಂಚಾರಮಾಡಿ ಕ್ಷತ್ರಿಯರನ್ನು ಸಂಹಾರಮಾಡಿದ್ದರಿಂದಲೇ ಇವನ ವೀರ್ಯ ಎಂತಹದೆಂಬುದು ವ್ಯಕ್ತವಾಗುತ್ತದೆ. ಇವನು ಫಲಾಪೇಕ್ಷೆಯಿಲ್ಲದೆ ಮಾಡುವ ದಾನಕ್ಕೆ ಏಳು ಸಮುದ್ರಗಳಿಂದ ಆವರಿಸಿದ ಭೂಮಿಯೇ ಅವಧಿ ಎನಿಸಿದೆ. ಹೀಗೆ ತಪಸ್ವಿಯೂ ಸತ್ಯನಿಷ್ಠನೂ ಆದ ಪೂಜ್ಯಪರಶುರಾಮನಿಗೆ ಯಾವುದು ತಾನೆ ಅಸಾಧ್ಯವೆನಿಸೀತು ! ಅವನಿಗೆ ಎಲ್ಲವೂ ಸಾಧ್ಯವೇ ಆಗಿದೆ." ಇಲ್ಲಿ ಪರಶುರಾಮನ ತ್ಯಾಗಕ್ಕೆ ಉತ್ಸಾಹವೇ ಸ್ಥಾಯಿಭಾವ. ಆ ದಾನವನ್ನು ತೆಗೆದುಕೊಳುವ ಬ್ರಾಹ್ಮಣರೇ ಆಲಂಬನರು. ಸತ್ತ್ವಗುಣದಿಂದ ಹುಟ್ಟುವ ದಾನದ ಪ್ರವೃತ್ತಿಯೇ ಉದ್ದೀಪನವಿಭಾವವೆನಿಸಿದೆ. ಅವನು ಸರ್ವಸ್ವವನ್ನೂ ದಾನಮಾಡಿದ್ದೇ ಈ ರಸವನ್ನು ಸಾಮಾಜಿಕರಿಗೆ ಅನುಭವಿಸಲು ಯೋಗ್ಯವನ್ನಾಗಿ ಮಾಡುವ ಕ್ರಿಯೆ ಎನಿಸಿದೆ. ಹರ್ಷ, ಧೈರ್ಯ ಮೊದಲಾದವು ವ್ಯಭಿಚಾರಿಭಾವಗಳು. ಇವುಗಳಿಂದ ಉತ್ಸಾಹವು ಪುಷ್ಟಿಹೊಂದಿ ದಾನವೀರರಸವೆನಿಸುತ್ತದೆ.

ಧರ್ಮವೀರನೆನಿಸಿದ ಯುಧಿಷ್ಠಿರನನ್ನು ಇಲ್ಲಿ ವರ್ಣಿಸಿದೆ. "ರಾಜ್ಯ, ಹಣ, ಶರೀರ, ಹೆಂಡತಿ, ತಮ್ಮಂದಿರು, ಮಕ್ಕಳು ಇವಿಷ್ಟೇ ಅಲ್ಲದೆ ಲೋಕದಲ್ಲಿ ನನಗೆ ಸೇರಿದ ಪ್ರತಿಯೊಂದು ವಸ್ತುವೂ ಧರ್ಮಕ್ಕಾಗಿ ಮುಡಪಾಗಿಟ್ಟದೆ." ಹೀಗೆ ಹೇಳುವ ಯುಧಿಷ್ಠಿ

ಶನ ಧರ್ಮಕ್ಕೆ ಉತ್ಸಾಹವೇ ಸ್ಥಾಯಿಭಾವ. ಧರ್ಮವೇ ಆಲಂಬನವಿಭಾವ. ಈ ಧರ್ಮವು ಸ್ವರ್ಗವನ್ನು ದೊರಕಿಸುವುದೆಂದು ತಿಳಿಸುವ ಶ್ರುತಿಯೇ ಉದ್ದೀಪನವಿಭಾವ. ಇಲ್ಲಿ ಅವನ ಹೇಳಿಕೆಯೇ ಅನುಭಾವ. ಹರ್ಷ ಮೊದಲಾದವು ವ್ಯಭಿಚಾರಭಾವಗಳು. ಇವೆಲ್ಲವೂ ಒಂದಕ್ಕೊಂದು ಸೇರಿಕೊಂಡು ಸಾಮಾಜಿಕರ ನಿರ್ಮಲಹೃದಯದಲ್ಲಿ ಧರ್ಮವೀರರಸವಾಗಿ ಪರಿಣಮಿಸುತ್ತವೆ.

ಯುದ್ಧವೀರನೆನಿಸಿದ ರಾಮಚಂದ್ರನನ್ನು ಹೀಗೆ ವರ್ಣಿಸಿದೆ. ರಾಮನು ರಾವಣನ ಬಳಿಗೆ ಹೋಗಿ ಹೀಗೆ ಹೇಳುತ್ತಾನೆ. "ಅಯ್ಯಾ ರಾವಣ, ಸೀತೆಯನ್ನು ನನಗೆ ಹಿಂದಕ್ಕೆ ಕೊಡು. ನಾನೇ ಬಂದು ಕೇಳುತ್ತಿರುವೆನು. (ದೂತರಿಂದ ಕೇಳಿಸಿದ್ದರೆ ನಿನಗೆಶ್ವಾವಿಸ ಹುಟ್ಟಲಾರದೆಂದು ನಾನೇ ಬಂದಿರುವೆನು) ನಿನಗೆ ಹೀಗೆ ಬುದ್ಧಿವ್ಯತ್ಯಾಸ ಏಕೆ ಆಯಿತು ? ಪ್ರಬಲನೊಡನೆ ದುರ್ಬಲನು ಜಗಳವಾಡಬಾರದೆಂಬ ನೀತಿಯನ್ನು ತಿಳಿದುಕೋ. ಈಗಲೂ ಕಾಲವು ಮೀರಿಲ್ಲ. ನೀನು ಸೀತೆಯನ್ನು ಕೊಡದೆ ಇದ್ದಲ್ಲಿ ಹಿಂದೆ ಸಂಹಾರವಾಗಿರುವ ಖರ, ದೂಷಣ, ತ್ರಿಶಿರ ಇವರ ಕುತ್ತಿಗೆಗಳನ್ನು ಕತ್ತರಿಸುವಾಗ ಬಂದ ರಕ್ತದಿಂದ ಕೆಂಪಾಗಿದ್ದು ಧನುಸ್ಸಿನ ಹಗ್ಗದೊಡನೆ ಸೇರಿ ಶತ್ರುಸಂಹಾರದಲ್ಲಿ ಪಳಗಿರುವ ಈ ನನ್ನ ಬಾಣವು ನಿನ್ನ ಬಗ್ಗೆ ಸಹನೆಯನ್ನು ಮೀರುವುದು." ಇಲ್ಲಿ ರಾಮನಿಗೆ ಯುದ್ಧದಲ್ಲಿ ತೋರುವ ಉತ್ಸಾಹವೇ ಸ್ಥಾಯಿಭಾವ. ರಾವಣನೇ ಆಲಂಬನವಿಭಾವ, ಅವನು ಮಾಡಿದ ಸೀತಾಪಹಾರವೇ ಮೊದಲಾದ ಅಪಚಾರವು ಉದ್ದೀಪನವಿಭಾವ. ರಾಮನ ಬಾಯಿಂದ ಬಂದ ಮಾತೇ ಅನುಭಾವ. ಗರ್ವ ಮೊದಲಾದವು ವ್ಯಭಿಚಾರಿಭಾವಗಳು. ಇವೆಲ್ಲವೂ ಸೇರಿ ಯುದ್ಧವೀರರಸವಾಗಿ ಪರಿಣಮಿಸಿ ಸಹೃದಯರಿಗೆ ಅನುಭವಗೋಚರವಾಗುತ್ತವೆ.

ದಯವೀರನೆನಿಸಿದ ಜೀಮೂತವಾಹನನ ಬಗ್ಗೆ ಹೀಗೆ ಹೇಳಿದೆ. ನಾಗಾನಂದ ನಾಟಕದಲ್ಲಿ ಆಶ್ರಿತರಾದ ಸರ್ಪಗಳ ರಕ್ಷಣೆಗಾಗಿ ಅವನು ತನ್ನ ದೇಹವನ್ನೇ ಅರ್ಪಿಸಲು ಅದರಲ್ಲಿ ಸ್ವಲ್ಪಭಾಗವನ್ನು ತಿಂದು ವೈರಾಗ್ಯವನ್ನು ಹೊಂದಿದ ಗರುಡನಿಗೆ ಜೀಮೂತವಾಹನನು ಹೇಳುತ್ತಾನೆ. "ಅಯ್ಯಾ ಗರುಡ ! ನೀನು ಕೊಕ್ಕಿನ ಏಟುಗಳಿಂದ ಕತ್ತರಿಸಿದ ನಾಡಿಗಳ ಮೂಲಕ ರಕ್ತವು ಸುರಿಯುತ್ತಿದೆ. ಈ ದೇಹದಲ್ಲಿ ಇನ್ನೂ ಮಾಂಸವಿದೆ. ನಿನಗಾದರೂ ಮಾಂಸವನ್ನು ತಿಂದು ತೃಪ್ತಿಯಾಗಿಲ್ಲ. ನೀನು ಏಕೆ ತಿನ್ನುವುದನ್ನು ನಿಲ್ಲಿಸಿರುವೆ ?" ಇಲ್ಲಿ ಜೀಮೂತವಾಹನನ ದಯೆಯಲ್ಲಿ ಉತ್ಸಾಹವೇ ಸ್ಥಾಯಿಭಾವ, ಸರ್ಪವೇ ಆಲಂಬನವಿಭಾವ. ಸರ್ಪವು ಭಯಗೊಂಡು ಹೇಳುವ ಮಾತೇ ಉದ್ದೀಪನವಿಭಾವ. ಇಲ್ಲಿ ಜೀಮೂತವಾಹನು ಹೇಳಿದ ಮಾತೇ ಅನುಭಾವ. ಧೃತಿ ಮೊದಲಾದವು ವ್ಯಭಿಚಾರಿಭಾವ. ಇವೆಲ್ಲವೂ ಒಂದೇ ಬಗೆಯ ಜ್ಞಾನವಾಗಿ ಸಾಮಾಜಿಕರ ಹೃದಯದಲ್ಲಿ ನೆಲಸಿ ವೀರರಸವಾಗಿ ಪರಿಣಮಿಸುತ್ತವೆ.

ಅಥ ಭಯಾನಕಃ— ಭಯಾನಕೋ ಭಯಸ್ಥಾಯಿಭಾವಃ ಕಾಲಾಧಿದೈವತಃ ।
ಸ್ತ್ರೀನೀಚಪ್ರಕೃತಿಃ ಕೃಷ್ಣೋ ಮತಸ್ತತ್ತ್ವವಿಶಾರಧೈಃ ॥

ಯಸ್ಮಾದುತ್ಪದ್ಯತೇ ಭೀತಿಸ್ತದತ್ರಾಲಂಬನಂ ಮತಮ್ ।
ಚೇಷ್ಟಾ ಘೋರತರಾ ತಸ್ಯ ಭವೇದುದ್ದೀಪನಂ ಪುನಃ ॥
ಅನುಭಾವೋಽತ್ರ ವೈವರ್ಣ್ಯಗದ್ಗದಸ್ವರಭಾಷಣಮ್ ।
ಪ್ರಲಯಸ್ವೇದರೋಮಾಂಚಕಂಪದಿಕ್ಪ್ರೇಕ್ಷಣಾದಯಃ ॥
ಜುಗುಪ್ಸಾವೇಗಸಂಮೋಹಸಂತ್ರಾಸಗ್ಲಾನಿದೀನತಾಃ ।
ಶಂಕಾಪಸ್ಮಾರಸಂಭ್ರಾಂತಿಮೃತ್ಯ್ವಾದ್ಯಾ ವ್ಯಭಿಚಾರಿಣಃ ॥

ಯಥಾ—ನಷ್ಟಂ ವರ್ಷವರೈರ್ಮನುಷ್ಯಗಣನಾಭಾವಾದಪಾಸ್ಯ ತ್ರಪಾಂ ।
ಅಂತಃಕಂಚುಕಿಕಂಚುಕಸ್ಯ ವಿಶತಿ ತ್ರಾಸಾದಯಂ ವಾಮನಃ ॥
ಪರ್ಯಂತಾಶ್ರಯಿಭಿರ್ನಿಜಸ್ಯ ಸದೃಶಂ ನಾಮ್ನಃ ಕಿರಾತೈಃ ಕೃತಂ
ಕುಬ್ಜಾ ನೀಚತಯೈವ ಯಾಂತಿ ಶನಕೈರಾತ್ಮೇಕ್ಷಣಾಶಂಕಿನಃ ॥

ಭಯಾನಕರಸಕ್ಕೆ ಭಯವೇ ಸ್ಥಾಯಿಭಾವವೆನಿಸಿದೆ. ಯಮನೇ ಅದಕ್ಕೆ ಅಧಿದೇವತೆ. ಯಮನು ಜೀವರಿಗೆ ಮೃತ್ಯುವನ್ನು ದೊರಕಿಸುವವನಾದ್ದರಿಂದ ಅವನಿಂದ ಭೀತಿಯುಂಟಾಗುದು ಸಹಜ. ಇದರಿಂದ ಈ ರಸಕ್ಕೂ ಈ ಹೆಸರು ಅನ್ವರ್ಥವೆನಿಸಿದೆ. ಭಯವು ದುಃಖವನ್ನು ಕೊಡುವುದರಿಂದ ಪಾಪಕ್ಕೆ ಸದೃಶವೆನಿಸಿದೆ.ಪಾಪವು ಕಪ್ಪು ಬಣ್ಣದ್ದೆಂದು ರೂಢಿಇರುವ ಪ್ರಯುಕ್ತ ಭಯಾನಕರಸವನ್ನು ಕೃಷ್ಣವರ್ಣವೆಂದು ಕರೆಯಲಾಗಿದೆ. ಸ್ತ್ರೀಜಾತಿಯ ನೀಚಪ್ರಕೃತಿಯ ವ್ಯಕ್ತಿಯೇ ಇದಕ್ಕೆ ಆಲಂಬನ ವಿಭಾವ. ಆಕೆಯಿಂದಲೇ ಜನರಿಗೆ ಭಯವುಂಟಾಗುವ ಪ್ರಯುಕ್ತ ಆ ಬಗೆಯ ಭಯವೇ ಭಯಾನಕರಸವಾಗುತ್ತದೆ. ಉತ್ತಮಪಾತ್ರದಿಂದ ಭಯವುಂಟಾದರೆ ಅದು ಭಯಾನಕ ರಸವಾಗದೆ ಅದರ ಆಭಾಸವೆನಿಸುತ್ತದೆ. ನೀಚವ್ಯಕ್ತಿಯ ಅಥವಾ ವಸ್ತುವಿನ ಭೀಕರವಾದ ಚೇಷ್ಟೆಯೇ ಉದ್ದೀಪನವಿಭಾವ. ಮುಖದಲ್ಲಿ ಬಣ್ಣದ ಬದಲಾವಣೆ, ಗದ್ಗದಸ್ವರದಿಂದ ಮಾತನಾಡುವುದು ಇವೆಲ್ಲವೂ ಅನುಭಾವಗಳು.ಯಾವ ಪ್ರಯತ್ನವನ್ನೂ ಮಾಡದಂತಹ ಸ್ಥಿತಿ(ಪ್ರಳಯ),ಬೆವರುಸುರಿಸುವುದು, ಮೈಯಲ್ಲಿ ರೋಮಾಂಚವಾಗುವುದು, ನಡುಕ,ದಿಕ್ಕುಗಳನ್ನು ನೋಡುವುದು,ಓಡುವುದು ಇವೂ ಸಹ ಅನುಭಾವಗಳೇ. ಜುಗುಪ್ಸೆ, ಆವೇಗ, ಮೋಹ, ಬೆದರಿಕೆ, ದೈನ್ಯ, ಶಂಕೆ, ಅಪಸ್ಮಾರ, ಭ್ರಾಂತಿ, ಮರಣ ಇವೇ ಮೊದಲಾದವು ವ್ಯಭಿಚಾರಿಭಾವಗಗಳೆನಿಸಿವೆ. ರತ್ನಾವಳೀನಾಟಿಕೆಯಲ್ಲಿ ಕೋತಿಯು ಆಕಸ್ಮಿಕವಾಗಿ ಅಂತಃಪುರವನ್ನು ಪ್ರವೇಶಿಸಿದ್ದರಿಂದ ಅಲ್ಲಿದ್ದ ನಪುಂಸಕರು, ಕುಳ್ಳರು, ಕಿರಾತರು ಇವರಿಗೆ ಉಂಟಾದ ಭಯವನ್ನು ಕವಿಯು ತಿಳಿಸಿದ್ದಾನೆ. ನಪುಂಸಕರೇ ಮೊದಲಾದವರಿಗೆ ಉಂಟಾದ ಭಯವೇ ಸ್ಥಾಯಿಭಾವ.ಆಕಸ್ಮಿಕವಾಗಿ ಬಂದ ಕೋತಿಯೇ ಆಲಂಬನವಿಭಾವ. ಹಲ್ಲುಗಳನ್ನು ಕಿರಿಯುವುದೇ ಮೊದಲಾದ ಅದರ ಚೇಷ್ಟೆಯೇ ಉದ್ದೀಪನವಿಭಾವ. ನಪುಂಸಕ, ಕುಳ್ಳ ಮೊದಲಾದವರು ಅಂತಃಪುರದಿಂದ ಓಡಿದ್ದೇ ಅನುಭಾವ. ಶಂಕೆ ಮೊದಲಾದವು ವ್ಯಭಿಚಾರಿಭಾವಗಳು. ಇವೆಲ್ಲವೂ ಒಟ್ಟಿಗೇ ಸೇರಿ ಸಭ್ಯರಲ್ಲಿ ಭಯಾನಕರಸವಾಗಿ ಪರಿಣಮಿಸುತ್ತವೆ.

ಅ) ಬೀಭತ್ಸಃ— ಜುಗುಪ್ಸಾಸ್ಥಾಯಿಭಾವಸ್ತು ಬೀಭತ್ಸಃ ಕಥ್ಯತೇ ರಸಃ ।
ನೀಲವರ್ಣೋ ಮಹಾಕಾಲದೈವತೋಽಯಮುದಾಹೃತಃ ॥
ದುರ್ಗಂಧಮಾಂಸರುಧಿರಮೇದಾಂಸ್ಯಾಲಂಬನಂ ಮತಮ್ ।
ತತ್ರೈವ ಕೃಮಿಪಾತಾದ್ಯಮುದ್ದೀಪನಮುದಾಹೃತಮ್ ॥
ನಿಷ್ಠೀವನಾಸ್ಯವಲನನೇತ್ರಸಂಕೋಚನಾದಯಃ ।
ಅನುಭಾವಸ್ತತ್ರ ಮತಾಸ್ತಥಾ ಸ್ಯುರ್ವ್ಯಭಿಚಾರಿಣಃ ॥
ಮೋಹೋಽಪಸ್ಮಾರ ಆವೇಗೋ ವ್ಯಾಧಿಶ್ಚ ಮರಣಾದಯಃ ।

ಉತ್ಕೃತ್ಯೋತ್ಕೃತ್ಯ ಕೃತ್ತಿಂ ಪ್ರಥಮಮಥ ಪೃಥೂಚ್ಛೋಥಭೂಯಾಂಸಿಮಾಂಸಾ।
ನ್ಯಂಸಸ್ಫಿಕ್‌ಪೃಷ್ಠಪಿಂಡಾದ್ಯವಯವಸುಲಭಾನ್ಯುಗ್ರಪೂತೀನಿ ಜಗ್ಧ್ವಾ॥
ಅಂತಃಪರ್ಯಸ್ತನೇತ್ರಃ ಪ್ರಕಟಿತದಶನಃ ಪ್ರೇತರಂಕಃ ಕರಂಕಾತ್ ।
ಅಂಕಸ್ಥಾದಸ್ಥಿಸಂಸ್ಥಂ ಸ್ಥಪುಟಗತಮಪಿ ಕ್ರವ್ಯಮವ್ಯಗ್ರಮತ್ತಿ ॥

ಬೀಭತ್ಸರಸಕ್ಕೆ ಜುಗುಪ್ಸೆಯೇ ಸ್ಥಾಯಿಭಾವ. ಮಹಾಕಾಲನೇ ಅಧಿದೇವತೆ ಅವನು ಯಾವಾಗಲೂ ಭಯಂಕರವಾದ ಸ್ಮಶಾನದಲ್ಲಿ ವಾಸಮಾಡುತ್ತ, ನೀಲವರ್ಣದಲ್ಲಿ ರುವುದರಿಂದ ಬೀಭತ್ಸರಸವನ್ನು ನೀಲವರ್ಣವೆಂದು ಭಾವಿಸಲಾಗಿದೆ. ದುರ್ಗಂಧವೆನಿಸಿದ ಮಾಂಸ, ರಕ್ತ, ಮೇದಸ್ಸು ಇವೇ ಮೊದಲಾದವು ಈ ರಸಕ್ಕೆ ಆಲಂಬನವಿಭಾವಗಳು. ಆ ಮಾಂಸ ಮೊದಲಾದವುಗಳಲ್ಲಿಯೇ ಕ್ರಿಮಿಗಳು ಬಂದು ಬೀಳುವುದು ಉದ್ದೀಪನ ವಿಭಾವವೆನಿಸಿದೆ. ಆ ಮಾಂಸ ಮೊದಲಾದವನ್ನು ನೋಡಿ 'ಥೂ' ಎನ್ನುವುದು, ಆ ಕಡೆಯಿಂದ ಮುಖವನ್ನು ಬೇರೆ ಕಡೆಗೆ ತಿರುಗಿಸುವುದು, ಕಣ್ಣುಗಳನ್ನು ಮುಚ್ಚಿ ಕೊಳ್ಳುವುದು ಇವೆಲ್ಲವೂ ಅನುಭಾವಗಳು. ಮೋಹ, ಅಪಸ್ಮಾರ, ಆವೇಗ, ವ್ಯಾಧಿ, ಮರಣ ಇವೆಲ್ಲವೂ ವ್ಯಭಿಚಾರಿಭಾವಗಳು.

ಮಾಲತೀಮಾಧವನಲ್ಲಿ ಸ್ಮಶಾನದಲ್ಲಿ ಪಿಶಾಚಗಳ ಅವಸ್ಥೆಯನ್ನು ನೋಡಿ ಮಾಧ ವನು ಹೇಳುವ ಮಾತಿದು. "ಶವದೊಳಗೆ ದೃಷ್ಟಿಯನ್ನಿಟ್ಟು ಹಲ್ಲುಗಳನ್ನು ಹೊರಗೆ ತೋರಿ ಸುತ್ತ ದೀನದಾದ ಒಂದು ಪಿಶಾಚವು ಮೊದಲು ಶವದ ಚರ್ಮವನ್ನು ಉಗುರುಗಳಿಂದ ಕಿತ್ತು ಆಮೇಲೆ ಭುಜಗಳು, ಕುಂಡಿ, ಬೆನ್ನು ಇವುಗಳಿಗೆ ಸಂಬಂಧಿಸಿದ ಅವಯವಗಳಿಂದ ದೊರೆಯುವ ಹೆಚ್ಚು ದುರ್ವಾಸನೆಯಿಂದ ಕೂಡಿ ಶೋಥರೋಗದಿಂದ ದಪ್ಪನಾಗಿರುವ ಮಾಂಸಗಳನ್ನು ಜಗಿದು ತಿಂದು, ತೊಡೆಯಮೇಲೆ ಬುರುಡೆಯೊಂದನ್ನು ಇಟ್ಟು ಕೊಂಡು ಮೂಳೆಗಳಲ್ಲಿಯೂ ಕೀಲುಗಳಲ್ಲಿಯೂ ಇದ್ದ ಮಾಂಸವನ್ನು ನಿರ್ಭಯ ವಾಗಿ ತಿನ್ನುತ್ತಿದೆ'' ಇಲ್ಲಿ ಮಾಧವನಿಗೆ ಹುಟ್ಟುವ ಜುಗುಪ್ಸೆಯೇ ಸ್ಥಾಯಿಭಾವ. ಸ್ಮಶಾನದಲ್ಲಿ ಕಾಣುವ ಮಾಂಸ ಮೊದಲಾದವೇ ಆಲಂಬನವಿಭಾವ. ಅವುಗಳ ದುರ್ಗಂಧವೇ ಉದ್ದೀಪನವಿಭಾವ. ಅವನ್ನು ನೋಡಿ ಮಾಧವನು 'ಥೂ ಥೂ' ಎನ್ನುವುದೇ ಅನುಭಾವ. ಇಲ್ಲಿ ಸ್ಥಾಯಿಭಾವ ಮತ್ತು ಅನುಭಾವಗಳು ಸಂದರ್ಭಕ್ಕೆ ಅನುಗುಣವಾಗಿ ಸಿದ್ಧಿಸುವ ಪ್ರಯುಕ್ತ ಅವುಗಳನ್ನು ತಿಳಿಸಿಲ್ಲ. ಗ್ಲಾನಿ ಮೊದಲಾದವು

ವ್ಯಭಿಚಾರಿಭಾವಗಳು. ಇವೆಲ್ಲವೂ ಸೇರಿ ಸಭ್ಯರಿಗೆ ಬೀಭತ್ಸರಸವಾಗಿ ಪರಿಣಮಿಸುತ್ತವೆ.

ಅಥ ಅದ್ಭುತಃ— ಅದ್ಭುತೋ ವಿಸ್ಮಯಸ್ಥಾಯಿಭಾವೋ ಗಂಧರ್ವದೈವತಃ ।
ಪೀತವರ್ಣೋ ವಸ್ತು ಲೋಕಾತಿಗಮಾಲಂಬನಂ ಮತಮ್ ॥
ಗುಣಾನಾಂ ತಸ್ಯ ಮಹಿಮಾ ಭವೇದುದ್ದೀಪನಂ ಪುನಃ
ಸ್ತಂಭಃ ಸ್ವೇದೋಽಥ ರೋಮಾಂಚಗದ್ಗದಸ್ವರಸಂಭ್ರಮಃ ॥
ತಥಾ ನೇತ್ರವಿಕಾಸಾದ್ಯಾ ಅನುಭಾವಾಃ ಪ್ರಕೀರ್ತಿತಾಃ ।
ವಿತರ್ಕಾವೇಗಸಂಭ್ರಾಂತಿಹರ್ಷಾದ್ಯಾ ವ್ಯಭಿಚಾರಿಣಃ ॥

ಯಥಾ—ದೋರ್ದಂಡಾಂಚಿತಚಂದ್ರಶೇಖರಧನುರ್ದಂಡಾವಭಂಗೋದ್ಯತಃ
ಟಂಕಾರಧ್ವನಿರಾರ್ಯಬಾಲಚರಿತಪ್ರಸ್ತಾವನಾಡಿಂಡಮಃ ।
ದ್ರಾಕ್ ಪರ್ಯಸ್ತಕಪಾಲಸಂಪುಟಮಿಲದ್ಬ್ರಹ್ಮಾಂಡಭಾಂಡೋದರ
ಭ್ರಾಮ್ಯತ್ಪಿಂಡಿತಚಂಡಿಮಾ ಕಥಮಹೋ ನಾದ್ಯಾಪಿ ವಿಶ್ರಾಮ್ಯತಿ ॥

ಅದ್ಭುತರಸಕ್ಕೆ ವಿಸ್ಮಯವೇ ಸ್ಥಾಯಿಭಾವವೆನಿಸಿದೆ. ಗಂಧರ್ವನೇ ಅದಕ್ಕೆ ಅಧಿದೇವತೆ. ಗಂಧರ್ವನೇ ಗಾನದಿಂದ ಜನರಿಗೆ ವಿಸ್ಮಯವನ್ನುಂಟುಮಾಡಲು ಶಕ್ತನಾದ್ದರಿಂದಲೂ ಅವನಿಗೆ ಪೀತವರ್ಣವಿರುವುದರಿಂದಲೂ ಅದ್ಭುತರಸವನ್ನು ಪೀತವರ್ಣವೆಂದು ಕರೆಯಲಾಗಿದೆ. ಅಲೌಕಿಕವಾದ ಇಂದ್ರಜಾಲ ಮೊದಲಾದ ವಸ್ತುವೇ ಇದಕ್ಕೆ ಆಲಂಬನ ವಿಭಾವ. ಆ ಬಗೆಯ ವಿಚಿತ್ರವಸ್ತುವಿನ ಗುಣಗಳ ಮಹಿಮೆಯೇ ಉದ್ದೀಪನ ವಿಭಾವವಾಗುತ್ತದೆ. ಸ್ತಂಭ (ಸ್ತಬ್ಧವಾಗಿ ನಿಲ್ಲುವುದು) ಬೆವರು, ರೋಮಾಂಚ, ಗದ್ಗದಸ್ವರ, ಸಂಭ್ರಮ, ನೇತ್ರವಿಕಾಸ, ರೆಪ್ಪೆಹೊಡೆಯದೆ ನೋಡುವುದು ಇವೆಲ್ಲವೂ ಅನುಭಾವಗಳು. ಆವೇಗ, ಜಡತೆ, ಹರ್ಷ, ಔತ್ಸುಕ್ಯ ಮೊದಲಾದವು ವ್ಯಭಿಚಾರಿ ಭಾವಗಳು. ಮಹಾವೀರಚರಿತದಲ್ಲಿ ರಾಮನು ಶಿವನ ಧನುಸ್ಸನ್ನು ಮುರಿದಾಗ ಉಂಟಾದ ಶಬ್ದವನ್ನು ಕೇಳಿ ವಿಸ್ಮಯಗೊಂಡ ಲಕ್ಷ್ಮಣನ ಮಾತಿದು. "ತೋಳುಗಳಿಂದ ಸೆಳೆದು ಶಿವನ ಧನುಸ್ಸನ್ನು ಮುರಿದದ್ದರಿಂದ ಹುಟ್ಟಿದ ಪೂಜ್ಯನಾದ ರಾಮನ ಬಾಲಚರಿತಗಳು ಮುಂದೆ ಆರಂಭವಾಗುವುವೆಂದು ಸೂಚಿಸುವ ಈ ಟಂಕಾರನಾದವು ಒಮ್ಮೆಗೆ ಮೇಲಕ್ಕೆ ಎತ್ತಿದ ಕಪಾಲಗಳೆರಡರೊಡನೆ ಸೇರಿದ್ದ ಬ್ರಹ್ಮಾಂಡವೆಂಬ ಪಾತ್ರೆಯ ಒಳಭಾಗದಲ್ಲಿ ಗಟ್ಟಿಯಾಗಿ ನೆಲಸಿದ್ದು ಈಗಲೂ ಸಹ ಕೊನೆಗಾಣುತ್ತಲೇ ಇಲ್ಲ. ಎಂತಹ ಆಶ್ಚರ್ಯವಿದು!" ಇಲ್ಲಿ ಲಕ್ಷ್ಮಣಗೆ ಉಂಟಾದ ವಿಸ್ಮಯವೇ ಸ್ಥಾಯಿಭಾವ. ಧನುಷ್ಟಂಕಾರವೇ ಆಲಂಬನವಿಭಾವ, ಅವರ ವೈಶಾಲ್ಯವ್ಯಾಪ್ತಿಗಳೇ ಆಲಂಬನವಿಭಾವ, ಟಂಕಾರವು ಹೀಗೆ ವ್ಯಾಪಿಸಿತೆಂಬು ಹೇಳುವುದೇ ಅನುಭಾವ. ಹರ್ಷ ಮೊದಲಾದವು ವ್ಯಭಿಚಾರಿಭಾವಗಳು. ಇವೆಲ್ಲವೂ ಒಟ್ಟುಗೂಡಿ ಸಾಮಾಜಿಕರ ಹೃದಯದಲ್ಲಿ ಒಂದೇ ಬಗೆಯ ಜ್ಞಾನವೆನಿಸಿ ಅದ್ಭುತರಸದ ಅನುಭವವನ್ನು ನೀಡುತ್ತವೆ.

ಅಥ ಶಾಂತಃ— ಶಾಂತಃ ಶಮಸ್ಥಾಯಿಭಾವಃ ಉತ್ತಮಪ್ರಕೃತಿರ್ಮತಃ ।
ಕುಂದೇಂದುಸುಂದರಚ್ಛಾಯಃ ಶ್ರೀನಾರಾಯಣದೈವತಃ ॥

ಅನಿತ್ಯತ್ವಾದಿನಾಽಶೇಷವಸ್ತುನಿಸ್ಸಾರತಾ ತು ಯಾ।
ಪರಮಾತ್ಮಸ್ವರೂಪಂ ವಾ ತಸ್ಯಾಲಂಬನಮಿಷ್ಯತೇ ॥
ಪುಣ್ಯಾಶ್ರಮಹರಿಕ್ಷೇತ್ರತೀರ್ಥರಮ್ಯವನಾದಯಃ।
ಮಹಾಪುರುಷಸಂಗಾದ್ಯಾಸ್ತಸ್ಯೋದ್ದೀಪನರೂಪಿಣಃ ॥
ರೋಮಾಂಚಾದ್ಯಾಶ್ಚಾನುಭಾವಾಸ್ತಥಾ ಸ್ಯುರ್ವ್ಯಭಿಚಾರಿಣಃ।
ನಿರ್ವೇದಹರ್ಷಸ್ಮರಣಮತಿಭೂತದಯಾದಯಃ

ಯಥಾ— ರಥ್ಯಾಂತಶ್ಚರತಸ್ತಥಾ ಧೃತಜರತ್ಕಂಥಾಲವಸ್ಯಾಧ್ವಗೈಃ।
ಸತ್ರಾಸಂ ಚ ಸಕೌತುಕಂ ಚ ಸದಯಂ ದೃಷ್ಟಸ್ಯ ತೈರ್ನಾಗರೈಃ।
ನಿರ್ವ್ಯಾಜೀಕೃತಚಿತ್ಸುಧಾರಸಮುದಾ ನಿದ್ರಾಯಮಾಣಸ್ಯ ಮೇ
ನಿಶ್ಶಂಕಃ ಕರಟಃ ಕದಾ ಕರಪುಟೀಭಿಕ್ಷಾಂ ವಿಲುಂಠಿಷ್ಯತಿ ॥

ಪುಷ್ಟಿಶ್ಚ ಮಹಾಭಾರತಾದೌ ದ್ರಷ್ಟವ್ಯಾ.

ನಿರಹಂಕಾರರೂಪತ್ವಾದ್ದಯಾವೀರಾದಿರೇಷ ನೋ।

ದಯಾವೀರಾದೌ ಹಿ ಜೀಮೂತವಾಹನಾದೌ ಅಂತರಾ ಮಲಯವತ್ಯಾದ್ಯನುರಾಗಾದೇರಂತೇ ಚ ವಿದ್ಯಾಧರ ಚಕ್ರವರ್ತಿತ್ವಾದ್ಯಾಪ್ತೇಃ ದರ್ಶನಾದಹಂಕಾರೋಪಶಮೋ ನ ದೃಶ್ಯತೇ. ಶಾಂತಸ್ತು ಸರ್ವಪ್ರಕಾರೇಣ ಅಹಂಕಾರಪ್ರಶಮೈಕರೂಪತ್ವಾತ್ ನ ತತ್ರಾಂತರ್ಭಾವಮರ್ಹತಿ. ಅತಶ್ಚ ನಾಗಾನಂದೇ ಶಾಂತರಸಪ್ರಧಾನತ್ವಮಪಾಸ್ತಮ್. ನನು

ನ ಯತ್ರ ದುಃಖಂ ನ ಸುಖಂ ನ ಚಿಂತಾ ನ ದ್ವೇಷರಾಗೌ ನ ಚ ಕಾಚಿದಿಚ್ಛಾ।
ರಸಃ ಸ ಶಾಂತಃ ಕಥಿತೋ ಮುನೀಂದ್ರೈಃ ಸರ್ವೇಷು ಭಾವೇಷು ಶಮಃ ಪ್ರಧಾನಃ ॥

ಏವಂರೂಪಸ್ಯ ಶಾಂತಸ್ಯ ಮೋಕ್ಷಾವಸ್ಥಾಯಾಮೇವ ಆತ್ಮಸ್ವರೂಪಾಪತ್ತಿಲಕ್ಷಣಾಯಾಂ ಪ್ರಾದುರ್ಭಾವಾತ್ ತತ್ರ ಸಂಚಾರ್ಯಾದೀನಾಮಭಾವಾತ್ ಕಥಂ ರಸತ್ವಮಿತ್ಯುಚ್ಯತೇ. ಯುಕ್ತವಿಯುಕ್ತದಶಾಯಾಮವಸ್ಥಿತೋ ಯಃ ಶಮಃ ಸ ಏವ ಯತಃ।
ರಸತಾಮೇತಿ ತದಸ್ಮಾತ್ ಸಂಚಾರ್ಯಾದೇಃ ಸ್ಥಿತಿಶ್ಚ ನ ವಿರುದ್ಧಾ ॥

ಯಚ್ಚಾಸ್ಮಿನ್ ಸುಖಭಾವೋಽಪ್ಯುಕ್ತಸ್ತಸ್ಯ ವೈಷಯಿಕಸುಖಪರತ್ವಾತ್ ನ ವಿರೋಧಃ. ಉಕ್ತಂ ಹಿ. ಯಚ್ಚ ಕಾಮಸುಖಂ ಲೋಕೇ ಯಚ್ಚ ದಿವ್ಯಂ ಮಹಾಸುಖಮ್।
ತೃಷ್ಣಾಕ್ಷಯಸುಖಸ್ಯೈತೇ ನಾರ್ಹತಃ ಷೋಡಶೀಂ ಕಲಾಮ್ ॥
ಸರ್ವಾಕಾರಮಹಂಕಾರರಹಿತತ್ವಂ ವ್ರಜಂತಿ ಚೇತ್ ।
ಅತ್ರಾಂತರ್ಭಾವಮರ್ಹಂತಿ ದಯಾವೀರಾದಯಸ್ತದಾ ॥

ಆದಿಶಬ್ದಾತ್ ಧರ್ಮವೀರದಾನವೀರದೇವತಾವಿಷಯರತಿಭಾವಪ್ರಭೃತಯಃ

ತತ್ರ ದೇವತಾವಿಷಯಾ ರತಿರ್ಯಥಾ—
ಕದಾ ವಾರಾಣಸ್ಯಾಮಿಹ ಸುರಧುನೀರೋಧಸಿ ವಸನ್
ವಸಾನಃ ಕೌಪೀನಂ ಶಿರಸಿ ನಿದಧಾನೋಽಂಜಲಿಪುಟಮ್ ।
ಅಯೇ ಗೌರೀನಾಥ ! ತ್ರಿಪುರಹರ ! ಶಂಭೋ ! ತ್ರಿನಯನ !

ಪ್ರಸೀದೇಶಿ ಕ್ರೋಶನ್ನಿವಿಷಮಿವ ನೇಷ್ಯಾಮಿ ದಿವಸಾನ್ ॥

ಅಥ ಮುನೀಂದ್ರಸಮ್ಮತೊ ವತ್ಸಲಃ—

ವತ್ಸಲಶ್ಚ ರಸ ಇತಿ ತೇನ ಸ ದಶಮೋ ರಸಃ ।
ಸ್ಫುಟಂ ಚಮತ್ಕಾರಿತಯಾ ವತ್ಸಲಂ ಚ ರಸಂ ವಿದುಃ ॥
ಸ್ಥಾಯೀ ವತ್ಸಲತಾಸ್ನೇಹಃ ಪುತ್ರಾದ್ಯಾಲಂಬನಂ ಮತಮ್ ।
ಉದ್ದೀಪನಾನಿ ತಚ್ಚೇಷ್ಟಾ ವಿದ್ಯಾಶೌರ್ಯದಯಾದಯಃ ॥
ಆಲಿಂಗನಾಂಗಸಂಸ್ಪರ್ಶಶಿರಶ್ಚುಂಬನವಿಾಕ್ಷಣಮ್ ।
ಪುಲಕಾನಂದಬಾಷ್ಪಾದ್ಯಾಃ ಅನುಭಾವಾಃ ಪ್ರಕೀರ್ತಿತಾಃ ॥
ಸಂಚಾರಿಣೋಽನಿಷ್ಟಶಂಕಾಹರ್ಷಗರ್ವಾದಯೋಮತಾಃ ।
ಪದ್ಮಗರ್ಭಚ್ಛವಿರ್ವರ್ಣೋ ದೈವತಂ ಲೋಕಮಾತರಃ ॥

ಯಥಾ— ಯದಾಹ ಧಾತ್ರ್ಯಾ ಪ್ರಥಮೋದಿತಂ ವಚೋ
ಯಯೌ ತದೀಯಾಮವಲಂಬ್ಯ ಚಾಂಗುಲೀಮ್ ।
ಅಭೂಚ್ಚ ನಮ್ರಃ ಪ್ರಣಿಪಾತಶಿಕ್ಷಯಾ
ಪಿತುರ್ಮುದಂ ತೇನ ತತಾನ ಸೋಽರ್ಭಕಃ ॥

ಶಾಂತರಸಕ್ಕೆ ಶಮವೇ ಸ್ಥಾಯಿಭಾವ. ಉತ್ಕೃಷ್ಟನಾದ ವ್ಯಕ್ತಿಯಲ್ಲಿರುವ ಶಮವೇ ಶಾಂತರಸವಾಗಿ ಪರಿಣಮಿಸಬಲ್ಲದು. ಶಮವು ಸತ್ತ್ವಗುಣದಿಂದ ಹುಟ್ಟುವುದು. ಆ ಸತ್ತ್ವಗುಣಕ್ಕೆ ನಾರಾಯಣನೇ ಅಧಿಷ್ಠಾತೃವಾದ್ದರಿಂದ ಶಾಂತರಸಕ್ಕೂ ಅವನೇ ಅಧಿದೇವತೆ ಎನಿಸಿರುವನು. ಇವು ಮಲ್ಲಿಗೆ ಹೂವು, ಚಂದ್ರ ಇವರಂತೆ ಬಿಳಿಯಬಣ್ಣದ್ದು. ಆದ್ದರಿಂದ ಇಲ್ಲಿಯೂ ಅದೇ ಬಣ್ಣವನ್ನು ಭಾವಿಸಲಾಗಿದೆ. ಲೋಕದ ವಸ್ತುಗಳೆಲ್ಲವೂ ಅವಶ್ಯವಾಗಿ ನಾಶವಾಗುವುವೆಂದು ಭಾವಿಸಿ ಎಲ್ಲವನ್ನೂ ತುಚ್ಛವೆಂದೋ ಅಥವಾ ಪರಮಾತ್ಮಸ್ವರೂಪವೆಂದೋ ತಿಳಿಯುವುದೇ ಶಾಂತರಸದ ಆಲಂಬನವಿಭಾವವೆನಿಸಿದೆ. ಪುಣ್ಯಾಶ್ರಮ, ದಿವ್ಯಕ್ಷೇತ್ರ, ತೀರ್ಥ, ಉಪವನ, ಮಹಾತ್ಮರ ಸಂಗ ಇವೆಲ್ಲವೂ ಶಾಂತರಸಕ್ಕೆ ಉದ್ದೀಪನವಿಭಾವಗಳು. ರೋಮಾಂಚ ಮೊದಲಾದವು ಅನುಭಾವಗಳು. ನಿರ್ವೇದ, ಹರ್ಷ, ಸ್ಮರಣ, ಮತಿ, ಭೂತದಯೆ ಇವೆಲ್ಲವೂ ವ್ಯಭಿಚಾರಿಭಾವಗಳು.

ಪ್ರಾಪಂಚಿಕವಿಷಯಗಳಲ್ಲಿ ವಿರಕ್ತನಾದ ಭಿಕ್ಷು ಹೇಳುವ ಮಾತಿದು. "ರಸ್ತೆಯಲ್ಲಿ ಭಿಕ್ಷೆಗಾಗಿ ತಿರುಗಿ ಹಳೆ ಚಿಂದಿಬಟ್ಟೆಯನ್ನು ಧರಿಸಿ, ಪಥಿಕರಿಗೆ ಭಯದಿಂದಲೂ ಕುತೂಹಲದಿಂದಲೂ, ನಾಗರಿಕರಿಗೆ ದಯೆಯಿಂದಲೂ ಕಾಣಿಸಿಕೊಂಡು, ಸಹಜವಾಗಿ ಹೊಂದಿಕೊಂಡಿರುವ ಚಿದಾನಂದದ ರಸವನ್ನು ಪಾನಮಾಡಿ ಸಂತೋಷದಿಂದ ಮಲಗಿರುವ ನನ್ನ ಕೈಯಲ್ಲಿರುವ ಭಿಕ್ಷಾನ್ನವನ್ನು ಯಾವಾಗ ಕಾಗೆಯೊಂದು ನಿರ್ಭಯವಾಗಿ ಕಸಿದುಕೊಂಡು ಹೋಗುವುದೋ!" ಇಲ್ಲಿ ಭಿಕ್ಷುವಿಗೆ ದೊರೆತಿರುವ ಶಮವೇ ಮುಂದೆ ಸಭ್ಯರಿಗೆ ಅನುಭವಕ್ಕೆ ಯೋಗ್ಯವೆನಿಸುವ ಶಾಂತರಸಕ್ಕೆ ಸ್ಥಾಯಿ ಎನಿಸಿದೆ. ಜಗತ್ತನ್ನು ಪರಮಾತ್ಮಸ್ವರೂಪವೆಂದು ತಿಳಿಯುವುದೇ ಆಲಂಬನವಿಭಾವ. ಅವನು ಹಿಂದಿನಿಂದಲೂ

ಪುಣ್ಯಾಶ್ರಮಗಳನ್ನು ನೋಡಿರುವುದರಿಂದ ಅವುಗಳ ದರ್ಶನವೇ ಅವನ ಹೃದಯದಲ್ಲಿ ಗೋಪ್ಯವಾಗಿದ್ದ ಶಮದ ವಿಕಾಸಕ್ಕೆ ಉದ್ದೀಪನವಿಭಾವವೆನಿಸುತ್ತದೆ. ಅವನು ಹೇಳಿದಂತೆ ಭಿಕ್ಷೆಯನ್ನು ಕಾಗೆ ಬಂದು ಅಪಹರಿಸಿಕೊಂಡು ಹೋಗುವುದೇ ಅನುಭಾವ. ಹರ್ಷ ಮೊದಲಾದವು ವ್ಯಭಿಚಾರಿಭಾವಗಳು. ಇವೆಲ್ಲವೂ ಸೇರಿ ಸಭ್ಯರ ಹೃದಯದಲ್ಲಿ ಶಾಂತರಸ ವಾಗಿ ಪರಿಣಮಿಸುತ್ತವೆ. ಈ ರಸವು ಮಹಾಭಾರತದಲ್ಲಿ ಹೆಚ್ಚು ಪುಷ್ಟಿಯಿಂದ ಪ್ರಕಾಶಗೊಂಡಿದೆ.

ದಯಾವೀರರಸದಲ್ಲೂ ಧರ್ಮಾನುಷ್ಠಾನದ ಬಗ್ಗೆ ಉತ್ಸಾಹವಿದ್ದು ಅದನ್ನು ಸ್ಥಾಯಿ ಎಂದು ಅಂಗೀಕರಿಸುವುದರಿಂದ ಶಾಂತರಸವನ್ನು ಅದರಲ್ಲಿಯೇ ಸೇರಿಸಬಹು ದೆಂದು ಆಕ್ಷೇಪಿಸಿದರೆ ಅದಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ಶಮವುಳ್ಳವನು 'ನಾನು ಮಾಡುವೆನು, ಇದು ನನ್ನದು' ಎಂಬ ಅಹಂಕಾರವಿಲ್ಲದೆ ಇರುವುದರಿಂದ ಇವನು ದಯಾ ಧರ್ಮವೀರರಾಗಲಾರನು. ಆದ್ದರಿಂದ ವ್ಯಕ್ತಿಯು ಅಹಂಕಾರ ಮಮಕಾರಗಳಿಂದ ಕೂಡಿದ್ದರೆ ದಯಾವೀರನೆನಿಸಿರುವನು; ನಿರಹಂಕಾರನಾದರೆ ಶಾಂತನೆನಿಸುವನು. ಹೀಗೆ ಇವೆರಡಕ್ಕೂ ಭೇದವಿರುವುದಾಗಿ ಎಲ್ಲರಿಗೂ ತಿಳಿದಿದೆ. ದಯಾವೀರನೆನಿಸಿದ ಜೀಮೂ ತವಾಹನನಿಗೆ ಮೊದಲಿಂದ ವೈರಾಗ್ಯವಿದ್ದರೂ ಮಧ್ಯದಲ್ಲಿ ಮಲಯವತಿಯೊಡನೆ ಅನು ರಾಗವು ಹುಟ್ಟಿದ್ದಾಗಿಯೂ, ಕೊನೆಯಲ್ಲಿ ವಿದ್ಯಾಧರಚಕ್ರವರ್ತಿ ಎಂಬ ಪದವಿಯನ್ನು ಹೊಂದಿದನೆಂದೂ ಸ್ಪಷ್ಟವಾಗಿ ಕಂಡುಬಂದಿರುವುದರಿಂದ ಆವನಲ್ಲಿ ಅಹಂಕಾರವು ನಾಶ ವಾಗಿರಲಿಲ್ಲ. ಅವನಲ್ಲಿ ಅಹಂಕಾರವು ಪೂರ್ತಿಯಾಗಿ ತೊಲಗಿದ್ದರೆ ಮಲಯವತಿಯ ಬಗ್ಗೆ ಅವನಿಗೆ ಅನುರಾಗವೇ ಹುಟ್ಟುತ್ತಿರಲಿಲ್ಲ. ಶಾಂತರಸದಲ್ಲಾದರೂ ಎಲ್ಲಾ ಬಗೆಯ ಅಹಂಕಾರವೂ ತೊಲಗಿರುತ್ತದೆ. ಹೀಗೆ ಅಹಂಕಾರದ ವಾಸನೆಯೇ ಇಲ್ಲದಿರುವ ಶಾಂತ ರಸವನ್ನು ಅಹಂಕಾರದಿಂದ ತುಂಬಿರುವ ದಯಾ ಧರ್ಮ ವೀರರಸಗಳಲ್ಲಿ ಸೇರಿಸಲಿಕ್ಕಾ ಗುವುದಿಲ್ಲ. ಆದ್ದರಿಂದಲೇ ನಾಗಾನಂದದಲ್ಲಿ ಶಾಂತರಸವು ಪ್ರಧಾನವೆಂಬುದು ತಿರ ಸ್ಕೃತವಾಯಿತು.

ಶಾಂತರಸದಲ್ಲಿ ಶಮಕ್ಕೆ ಆಶ್ರಯನಾದವನಿಗೆ ದುಃಖ, ಸುಖ, ಚಿಂತೆ, ದ್ವೇಷ, ರಾಗ ಇವು ಯಾವುವೂ ಇರುವುದಿಲ್ಲ. ಯಾವ ಬಗೆಯ ಇಚ್ಛೆಯೂ ಇರುವುದಿಲ್ಲ. ಹೀಗೆ ಎಲ್ಲಾ ಬಗೆಯ ವಿಷಯಗಳ ಇಚ್ಛೆಯು ಇಲ್ಲದಿರುವುದೇ ಇಲ್ಲಿ ಪ್ರಧಾನವೆನಿಸಿದೆ. ಇಂತಹ ಸ್ಥಿತಿಯೇ ಶಮವೆನಿಸಿ ಅದೇ ಶಾಂತರಸವಾಗಿ ಪರಿಣಮಿಸುತ್ತದೆ ಎಂದು ಅನುಭವಿಗಳು ಹೇಳಿದ್ದಾರೆ. ಆದ್ದರಿಂದ ಇದು ಎಲ್ಲಾ ಭಾವಗಳಿಗೂ ಪ್ರಧಾನವೆನಿಸಿದೆ. ಈ ಬಗೆಯ ಶಾಂತರಸವು ಮೋಕ್ಷಾವಸ್ಥೆಯಲ್ಲಿ ಆತ್ಮಸ್ವರೂಪವನ್ನು ಹೊಂದಿದವನಿಗೆ ಮಾತ್ರವೇ ಸಂಭವಿಸುವುದರಿಂದ ಆ ಕಾಲದಲ್ಲಿ ರಸವನ್ನು ಪೋಷಿಸುವ ಸಂಚಾರಿಭಾವಗಳು ಇಲ್ಲದೇ ಇರುವ ಪ್ರಯುಕ್ತ ಆದನ್ನು ರಸವೆಂದು ಹೇಗೆ ಒಪ್ಪಬಹುದು? ಎಂದು ಆಕ್ಷೇಪವು ಬಂದರೆ ಅದಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ಸಂಸಾರದ ಕರ್ಮಗಳನ್ನು ನಡೆಸು ತ್ತಲೇ ಯೋಗವನ್ನು ಅಭ್ಯಾಸಮಾಡುವವನು ಯುಕ್ತವಿಯುಕ್ತನೆನಿಸುವನು. ಜನಕ

ಮಹಾರಾಜನು ಕ್ಷತ್ರಿಯನಾಗಿದ್ದು ರಾಜ್ಯವನ್ನು ನಡೆಸುತ್ತಲೇ ಶಿವಯೋಗದ ಆನಂದ ವನ್ನು ಅನುಭವಿಸುತ್ತಿದ್ದನು. ಹಾಗೆ ಇರುವವನಲ್ಲಿ ಯಾವ ಶಮವಿದೆಯೋ ಅದೆಯೇ ಶಾಂತರಸವಾಗಿ ಪರಿಣಮಿಸಬಲ್ಲದು. ಅವನು ಸಂಸಾರಿಯೂ ಮತ್ತು ಯೋಗಿಯೂ ಆಗಿದ್ದು ವಿಷಯಭೋಗವನ್ನು ಅನುಭವಿಸುತ್ತಿರುವುದರಿಂದ ಅವನಿಗೆ ನಿರ್ವೇದ ಹರ್ಷ ಮೊದಲಾದ ಸಂಚಾರಿಭಾವಗಳು ಸಂಭವಿಸುವುದರಲ್ಲಿ ಯಾವ ವಿರೋಧವೂ ಇಲ್ಲ. ಅವನಲ್ಲಿ ಸುಖವಿರುವುದಿಲ್ಲವೆಂದು ಹೇಳಿದ್ದು ವಿಷಯಸುಖಗಳಿಗೆ ಅನ್ವಯಿಸುವುದರಿಂದ ಸಮಂಜಸವಾಗುತ್ತದೆ. ಅವನು ಒಳಗೆ ವಿರಕ್ತನೂ, ಹೊರಗೆ ಆಸಕ್ತನೂ ಆಗಿರುವುದ ರಿಂದಲೂ, ಈಶ್ವರಪ್ರೀತ್ಯರ್ಥವಾಗಿ ಎಲ್ಲಾ ವ್ಯವಹಾರಗಳನ್ನೂ ನಡೆಸುವುದರಿಂದಲೂ ಅವನು ವಿಷಯಸುಖಗಳಿಗೆ ಅಂಟಿಕೊಳ್ಳದಂತೆ ಅವನ್ನು ಅನುಭವಿಸುವ ಪ್ರಯುಕ್ತ ವ್ಯಭಿ ಚಾರಿಭಾವಗಳಿಂದ ಅವನ ಶಮವು ಪುಷ್ಟಿಹೊಂದಲಿಕ್ಕೆ ಅಡ್ಡಿಯಿಲ್ಲ.

"ಲೋಕದಲ್ಲಿ ಇಂದ್ರಿಯಗಳಿಂದ ಬರುವ ಸುಖವಾಗಲೀ ಅಥವಾ ದಿವ್ಯವಾದ ಸ್ವರ್ಗದ ಸುಖವಾಗಲೀ ಆಶೆಯನ್ನು ತೊರೆದವನಿಗೆ ಬರುವ ಸುಖದಲ್ಲಿ ಹದಿನಾರನೆಯ ಒಂದು ಭಾಗಕ್ಕೂ ಸಮವಾಗುವುದಿಲ್ಲ. ಒಬ್ಬನು ಎಲ್ಲಾಬಗೆಯ ಅಹಂಕಾರಗಳೂ ಇಲ್ಲದ ಸ್ಥಿತಿಯನ್ನು ಮುಟ್ಟುವುದಾದರೆ ಆಗ ದಯಾವೀರ ಮೊದಲಾದ ರಸಗಳು ಶಾಂತ ರಸದಲ್ಲಿ ಸೇರಲು ಅರ್ಹವಾಗುತ್ತವೆ." ಹೀಗೆ ಹಿರಿಯರು ಹೇಳಿದ್ದಾರೆ. ಇಲ್ಲಿ ಧರ್ಮ ವೀರ ದಾನವೀರರಸಗಳೂ, ದೇವತೆಗಳ ಬಗ್ಗೆ ಇರುವ ರತಿಭಾವ ಮೊದಲಾದವೂ ಸಹ ಫಲಾಪೇಕ್ಷೆಯಿಲ್ಲದೆ ಪ್ರವರ್ತಿಸುವುದಾದರೆ ಆಗ ಶಾಂತರಸದಲ್ಲಿ ಸೇರಬಹುದೆಂದು ತಿಳಿಯಬೇಕು. ಆದ್ದರಿಂದ ಶಾಂತವೆಂಬ ರಸವನ್ನು ಸ್ವೀಕರಿಸಲೇಬೇಕು.

ದೇವತೆಗಳ ಬಗ್ಗೆ ಇರುವ ರತಿಯು ನಿಸ್ಸ್ವಾರ್ಥತೆಯಿಂದ ಕೂಡಿದ್ದರೆ ಶಾಂತ ರಸದಲ್ಲಿಯೇ ಸೇರುವುದನ್ನು ಉದಾಹರಿಸುತ್ತಾನೆ. ಒಬ್ಬನು ಮೋಕ್ಷಾವಸ್ಥೆಯಲ್ಲಿದ್ದು ಹೀಗೆ ಹೇಳುವನು "ನಾನು ಕಾಶಿಯಲ್ಲಿ ಗಂಗಾನದಿಯ ತೀರದಲ್ಲಿ ನೆಲಸಿದ್ದು ಪುಟ್ಟಗೋಸಿ ಯನ್ನು ಹಾಕಿಕೊಂಡು ತಲೆಯಮೇಲೆ ಕೈಬೊಗಸೆಯನ್ನಿಟ್ಟು" ಸ್ವಾಮಿ,ಗೌರೀಪತಿಯೇ, ತ್ರಿಪುರಸಂಹಾರಿಯೇ, ಶಂಭುವೇ, ತ್ರಿಣೇತ್ರನೇ ಪ್ರಸನ್ನನಾಗು " ಎಂದು ಮೊರೆಯಿ ಡುತ್ತ ದಿವಸಗಳನ್ನು ನಿಮಿಷದಂತೆ ಎಂದು ಕಳೆಯುವೆನೋ ! " ಹೀಗೆ ಹೇಳುವವನು ಮೋಕ್ಷಾವಸ್ಥೆಯಲ್ಲಿದ್ದು ಎಲ್ಲಾ ಬಗೆಯ ಅಹಂಕಾರಗಳೂ ತೊಲಗಿರುವುದರಿಂದ ಇಲ್ಲಿ ಧರ್ಮವೀರರಸವೂ ಇಲ್ಲ; ಸಂಚಾರಿಭಾವಗಳಿಂದ ಸಾಕಷ್ಟು ಪುಷ್ಟಿಯು ದೊರೆಯದೇ ಇರುವ ಪ್ರಯುಕ್ತ ಶಾಂತರಸವೂ ಇಲ್ಲ ; ಆದರೆ ಶಿವನ ಬಗ್ಗೆ ಭಕ್ತನಿಗೆ ಇರುವ ರತಿ ಯಷ್ಟೇ ತೋರಿ ಭಾವವೆನಿಸಿದೆ.

ಮುನಿಶ್ರೇಷ್ಠನೂ, ಪ್ರಾಚೀನಾಲಂಕಾರಿಕನೂ ಆದ ಭರತನಿಗೆ ಸಮ್ಮತವಾದ ವತ್ಸಲವೆಂಬ ರಸವನ್ನು ಈಗ ನಿರೂಪಿಸುತ್ತಾನೆ. ವತ್ಸಲವೆಂಬ ರಸವು ಹತ್ತನೆಯದೆನಿ ಸಿದೆ. ಅದರಲ್ಲಿಯೂ ಸಹೃದಯರಿಗೆ ಆಹ್ಲಾದವುಂಟಾಗುವುದರಿಂದ ಅದನ್ನು ರಸವೆಂದು ಹಿರಿಯರು ಹೇಳಿದ್ದಾರೆ. ವಾತ್ಸಲ್ಯವೆನಿಸಿದ ಸ್ನೇಹವೇ ಅದರ ಸ್ಥಾಯಿಭಾವ. ಪುತ್ರ,

ಕನ್ಯೆ, ಸೋದರ ಮೊದಲಾದವರು ಆಲಂಬನವಿಭಾವ. ವಿದ್ಯೆ, ಶೌರ್ಯ, ಧನಾರ್ಜನೆ ಮೊದಲಾದ ಅವರ ವ್ಯಾಪಾರಗಳು ಉದ್ದೀಪನವಿಭಾವವೆನಿಸಿರುವುವು. ಆಲಿಂಗನ, ಅಂಗಸ್ಪರ್ಶ, ಶಿರಶ್ಚುಂಬನ, ಪರಸ್ಪರನೋಟ, ರೋಮಾಂಚಗೊಳ್ಳುವುದು, ಆನಂದ ದಿಂದ ಕಣ್ಣೀರನ್ನು ಸುರಿಸುವುದು ಇವೆಲ್ಲವೂ ಅನುಭಾವಗಳು. ಅನಿಷ್ಟವನ್ನು ಊಹಿಸು ವುದು. ಹರ್ಷ, ಗರ್ವ ಮೊದಲಾದವು ಸಂಚಾರಿಭಾವಗಳೆನಿಸಿವೆ. ಹೂವಿನ ಮೊಗ್ಗಿನಂತೆ ವರ್ಣವಿದ್ದು ಗೌರೀ ಮೊದಲಾದ ಹದಿನಾರು ಲೋಕಮಾತೆಯರೇ ಇದಕ್ಕೆ ಅಧಿಷ್ಠಾನ ದೇವತೆಯರೆನಿಸಿರುವರು.

ರಘುವಂಶದಲ್ಲಿ ರಘುವಿನ ಬಾಲ್ಯಾವಸ್ಥೆಯನ್ನು ವರ್ಣಿಸುವ ಪದ್ಯವಿದು. " ದಾಸಿಯು ಮೊದಲಿನ ಬಾರಿಗೆ ಉಚ್ಚರಿಸಿದ ಮಾತನ್ನು ಬಾಲಕನಾದ ರಘುವು ಉಚ್ಚರಿ ಸುತ್ತಲೂ, ಆ ದಾಸಿಯ ಬೆರಳನ್ನು ಹಿಡಿದುಕೊಂಡು ನಡೆಯುತ್ತಲೂ, ಹಿರಿಯರಿಗೆ ನಮಸ್ಕರಿಸಬೇಕೆಂಬ ಶಿಕ್ಷೆಯಿಂದ ನಮ್ರನಾಗಿಯೂ ತಂದೆಗೆ ಸಂತೋಷವನ್ನುಂಟುಮಾಡಿ ದನು." ಇಲ್ಲಿ ದಿಲೀಪನ ಸ್ನೇಹವೇ ಸ್ಥಾಯಿಭಾವ. ರಘುವೇ ಆಲಂಬನವಿಭಾವ, ಆಲಿಂಗನ ಮೊದಲಾದವು ಅನುಭಾವಗಳು. ಹರ್ಷ ಮೊದಲಾದವು ಸಂಚಾರಿಭಾವ ಗಳು. ಇವುಗಳೆಲ್ಲವೂ ಸೇರಿ ಸಾಮಾಜಿಕರ ಹೃದಯದಲ್ಲಿ ವತ್ಸಲರಸವಾಗಿ ಪರಿಣಮಿ ಸುತ್ತವೆ.

ಏಷಾಂ ಚ ರಸಾನಾಂ ಪರಸ್ಪರವಿರೋಧಮಾಹ—

ಆದ್ಯಃ ಕರುಣಬೀಭತ್ಸರೌದ್ರವೀರಭಯಾನಕೈಃ ।
ಭಯಾನಕೇನ ಕರುಣೇನಾಪಿ ಹಾಸ್ಯೋ ವಿರೋಧಭಾಕ್ ॥
ಕರುಣೋ ಹಾಸ್ಯಶೃಂಗಾರರಸಾಭ್ಯಾಮಪಿ ತಾದೃಶಃ ।
ರೌದ್ರಸ್ತು ಹಾಸ್ಯಶೃಂಗಾರಭಯಾನಕರಸೈರಪಿ ॥
ಭಯಾನಕೇನ ಶಾಂತೇನ ತಥಾ ವೀರರಸಃ ಸ್ಮೃತಃ ।
ಶೃಂಗಾರವೀರರೌದ್ರಾಖ್ಯಹಾಸ್ಯಶಾಂತೈರ್ಭಯಾನಕಃ ॥
ಶಾಂತಸ್ತು ವೀರಶೃಂಗಾರರೌದ್ರಹಾಸ್ಯಭಯಾನಕೈಃ ।
ಶೃಂಗಾರೇಣ ತು ಬೀಭತ್ಸ ಇತ್ಯಾಖ್ಯಾತಾ ವಿರೋಧಿತಾ ॥

ಆದ್ಯಃ—ಶೃಂಗಾರಃ. ಏಷಾಂ ಚ ಸಮಾವೇಶಪ್ರಕಾರಾ ವಕ್ಷ್ಯಂತೇ

ಕುತೋಽಪಿ ಕಾರಣಾತ್ ಕ್ವಾಪಿ ಸ್ಥಿರತಾಮುಪಯನ್ನಪಿ ।
ಉನ್ಮಾದಾದಿರ್ನ ತು ಸ್ಥಾಯೀ ನ ಪಾತ್ರೇ ಸ್ಥೈರ್ಯಮೇತಿ ತತ್ ॥

ಯಥಾ— ವಿಕ್ರಮೋರ್ವಶ್ಯಾಂ ಚತುರ್ಥೇಽಂಕೇ ಪುರೂರವಸ ಉನ್ಮಾದಃ—

ರಸಭಾವೌ ತದಾಭಾಸೌ ಭಾವಸ್ಯ ಪ್ರಶಮೋದಯೌ ।
ಸಂಧಿಃ ಶಬಲತಾ ಚೇತಿ ಸರ್ವೇಽಪಿ ರಸನಾದ್ರಸಾಃ ॥

ರಸನಧರ್ಮಯೋಗಿತ್ವಾದ್ಭಾವಾದಿಷ್ವಪಿ ರಸತ್ವಮುಪಚಾರಾದಿತ್ಯಭಿಪ್ರಾಯಃ

ಭಾವಾದಯ ಉಚ್ಯಂತೇ—
ಸಂಚಾರಿಣಃ ಪ್ರಧಾನಾನಿ ದೇವಾದಿವಿಷಯಾ ರತಿಃ ।
ಉದ್ಬುದ್ಧಮಾತ್ರಸ್ಥಾಯೀ ಸ ಭಾವ ಇತ್ಯಭಿಧೀಯತೇ ॥
" ನ ಭಾವಹೀನೋಽಸ್ತಿ ರಸೋ ನ ಭಾವೋ ರಸವರ್ಜಿತಃ ।
ಪರಸ್ಪರಕೃತಾ ಸಿದ್ಧಿರನಯೋ ರಸಭಾವಯೋಃ ॥"

ಇತ್ಯುಕ್ತದಿಶಾ ಪರಮಾಲೋಚನಯಾ ಪರಮವಿಶ್ರಾಂತಿಸ್ಥಾನೇನ ರಸೇನ ಸಹೈವ ವರ್ತಮಾನಾ ಅಪಿ ರಾಜಾನುಗತವಿವಾಹಪ್ರವೃತ್ತಭೃತ್ಯವದಾಪಾತತೋ ಯತ್ರ ಪ್ರಾಧಾನ್ಯೇನ ಅಭಿವ್ಯಕ್ತಾ ವ್ಯಭಿಚಾರಿಣೋ, ದೇವಮುನಿಗುರುನೃಪಾದಿವಿಷಯಾ ಚ ರತಿರುದ್ಬುದ್ಧಮಾತ್ರಾ, ವಿಭಾವಾದಿಭಿರಪರಿಪುಷ್ಟತಯಾ ರಸರೂಪತಾಮನಾಪದ್ಯಮಾನಾಶ್ಚ ಸ್ಥಾಯಿನೋ ಭಾವಾಃ ಭಾವಶಬ್ದವಾಚ್ಯಾಃ ತತ್ರ ವ್ಯಭಿಚಾರೀ ಯಥಾ—'ಏವಂ ವಾದಿನಿ ದೇವರ್ಷೌ' ಇತ್ಯಾದಿ. ಅತ್ರ ಅವಹಿತ್ಥಾ.

ದೇವವಿಷಯಾ ರತಿರ್ಯಥಾ ಕುಂದಮಾಲಾಯಾಮ್—
ದಿವಿ ವಾ ಭುವಿ ವಾ ಮಮಾಸ್ತು ವಾಸೋ ನರಕೇ ವಾ ನರಕಾಂತಕಪ್ರಕಾಮಮ್ ।
ಅವಧೀರಿತಶಾರದಾರವಿಂದೌ ಚರಣೌ ತೇ ಮರಣೇಽಪಿ ಚಿಂತಯಾಮಿ ॥

ಮುನಿವಿಷಯಾ ರತಿರ್ಯಥಾ—
ವಿಲೋಕನೇನೈವ ತವಾಮುನಾ ಮುನೇ ಕೃತಃ ಕೃತಾರ್ಥೋಽಸ್ಮಿ ನಿಬರ್ಹಿತಾಂಹಸಾ
ತವಾಪಿ ಶುಶ್ರೂಷುರಹಂ ಗರೀಯಸೀರ್ಗಿರೋಽಥವಾ ಶ್ರೇಯಸಿ ಕೇನ ತೃಪ್ಯತೇ ॥

ರಾಜವಿಷಯಾ ರತಿರ್ಯಥಾ—
ತ್ವದ್ವಾಜಿರಾಜಿನಿರ್ಧೂತಧೂಲೀಪಟಲಪಂಕಿಲಾಮ್ ।
ನ ಧತ್ತೇ ಶಿರಸಾ ಗಂಗಾಂ ಭೂರಿಭಾರಭಿಯಾ ಹರಃ ॥

ಏಳನೆಯ ಪರಿಚ್ಛೇದದಲ್ಲಿ ಬರುವ ದೋಷವಿವೇಚನೆಗೆ ಅನುಕೂಲವಾಗುವಂತೆ ರಸಗಳಿಗೆ ಪರಸ್ಪರವಿರೋಧವು ಹೇಗೆ ಸಂಭವಿಸುವುದೆಂಬುದನ್ನು ಇಲ್ಲಿ ತಿಳಿಸುತ್ತಾನೆ. ಕರುಣ, ಬೀಭತ್ಸ, ರೌದ್ರ, ವೀರ, ಭಯಾನಕರಸಗಳೊಡನೆ ಶೃಂಗಾರರಸಕ್ಕೆ ವಿರೋಧವಿರುವುದರಿಂದ ಇದನ್ನು ಅವುಗಳೊಡನೆ ಸೇರಿಸಬಾರದು. ಅವುಗಳ ಸ್ಥಾಯಿಭಾವವೆನಿಸಿದ ಶೋಕ, ಜುಗುಪ್ಸೆ, ಕ್ರೋಧ, ಉತ್ಸಾಹ, ಭಯ ಇವು ಇರುವಾಗ ಶೃಂಗಾರದ ಸ್ಥಾಯಿ ಎನಿಸಿದ ರತಿಯೇ ತೋರುವುದಿಲ್ಲ. ಆದ್ದರಿಂದಲೇ ಶೃಂಗಾರಕ್ಕೆ ಈ ರಸಗಳೊಡನೆ ವಿರೋಧವಿದೆ ಎಂದು ತಿಳಿಯಬೇಕು. ಹಾಗೆಯೇ ಹಾಸ್ಯರಸಕ್ಕೆ ಭಯಾನಕ ಮತ್ತು ಕರುಣರಸಗಳೊಡನೆ ವಿರೋಧವಿದೆ. ರೌದ್ರರಸಕ್ಕೆ ಹಾಸ್ಯ, ಶೃಂಗಾರ, ಭಯಾನಕರಸಗಳೊಡನೆ ವಿರೋಧವಿದೆ. ವೀರರಸಕ್ಕೆ ಭಯಾನಕ, ಶಾಂತರಸಗಳೊಡನೆ ವಿರೋಧವಿದೆ. ಭಯಾನಕರಸಕ್ಕೆ ಶೃಂಗಾರ, ವೀರ, ರೌದ್ರ, ಹಾಸ್ಯ, ಶಾಂತರಸಗಳೊಡನೆ ವಿರೋಧವಿದೆ. ಶಾಂತರಸಕ್ಕೆ ವೀರ, ಶೃಂಗಾರ, ರೌದ್ರ, ಹಾಸ್ಯ ಭಯಾನಕರಸಗಳೊಡನೆ ವಿರೋಧವಿದೆ. ಬೀಭತ್ಸರಸಕ್ಕೆ ಶೃಂಗಾರದೊಡನೆ ವಿರೋಧವಿದೆ.

ಮೂರನೆಯ ಕ್ಷಣದಲ್ಲಿ ಇರುವಂತಹವೇ ಸ್ಥಾಯಿ ಎನಿಸುವುದೆಂಬ ವ್ಯುತ್ಪತ್ತಿಯಿಂದ ಮೂರನೆಯ ಕ್ಷಣದಲ್ಲೂ ಇರುವ ಉನ್ಮಾದವು ಹೇಗೆ ಸ್ಥಾಯಿ ಎನಿಸಲಾರದು ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ಆಕ್ಷೇಪಿಸಿದ ಫಲವು ದೊರಕದೇ ಇದ್ದು ಯಾವುದೋ ಕಾರಣದಿಂದ, ಯಾವುದೋ ಕಾಲದಲ್ಲಿ, ಯಾವುದೋ ಒಂದೆಡೆಯಲ್ಲಿ, ಯಾವುದೋ ಒಂದು ರಸವು ಅಭಿವ್ಯಕ್ತವಾಗುವಾಗ ಉನ್ಮಾದವು ಹೆಚ್ಚು ಕಾಲವಿರಬಹುದು. ಆದರೂ ಅದನ್ನು ಸ್ಥಾಯಿ ಎಂದು ಕರೆಯಲಾಗುವುದಿಲ್ಲ. ಉನ್ಮಾದ, ನಿರ್ವೇದ ಇವು ಯಾವ ನಾಯಕನಲ್ಲೂ ಗ್ರಂಥವು ಮುಗಿಯುವವರೆಗೂ ಸ್ಥಿರವಾಗಿ ಇರುವುದಿಲ್ಲವಾದ್ದರಿಂದ ಸ್ಥಾಯಿ ಎನಿಸಲಾರವು. ಯಾವುದು ನಾಟಕದ ಕೊನೆಯವರೆಗೂ ನಿಲ್ಲಬಲ್ಲದೋ ಅದು ಮಾತ್ರವೇ ಸ್ಥಾಯಿಭಾವವಾಗಲಿದೆ. ಉನ್ಮಾದ ಮೊದಲಾದವು ಎಲ್ಲಿಯೂ ಹಾಗೆ ಕೊನೆಯವರೆಗೆ ಇರುವಂತಹವಲ್ಲವಾದ್ದರಿಂದ ಸ್ಥಾಯಿ ಎನಿಸಲಾರವು. ವಿಕ್ರಮೋರ್ವಶೀಯ ನಾಟಕದ ನಾಲ್ಕನೆಯ ಅಂಕದಲ್ಲಿ ಪುರೂರವನಿಗೆ ಬಂದ ಉನ್ಮಾದವು ಆ ಅಂಕದಲ್ಲಿ ಮಾತ್ರವೇ ಇದ್ದು ನಾಟಕದ ಉದ್ದಕ್ಕೂ ಇಲ್ಲದೇ ಇರುವುದರಿಂದ ಸ್ಥಾಯಿ ಎನಿಸಿಲ್ಲ. ಅವನಿಗೆ ಉರ್ವಶಿಯಲ್ಲಿ ಇದ್ದ ರತಿಯು ಮಾತ್ರ ನಾಟಕದ ಕೊನೆಯವರೆಗೂ ಇರುವುದರಿಂದ ಸ್ಥಾಯಿ ಎನಿಸಿಕೊಂಡಿದೆ.

ವಾಕ್ಯಂ ರಸಾತ್ಮಕಂ ಕಾವ್ಯಂ ಎಂಬಲ್ಲಿ ರಸಪದದಿಂದ ಭಾವ ಮೊದಲಾದವನ್ನು ಗ್ರಹಿಸಬೇಕೆಂದು ಇಲ್ಲಿ ತಿಳಿಸುತ್ತಾನೆ. ರಸ, ಭಾವ, ರಸಾಭಾಸ ಭಾವಾ ಭಾಸಭಾವಪ್ರಶಮ, ಭಾವೋದಯ, ಭಾವಸಂಧಿ, ಭಾವಶಬಲತೆ ಇವೆಲ್ಲವೂ ಸಹೃದಯರಿಗೆ ಕಾವ್ಯ ನಾಟ್ಯಗಳಲ್ಲಿ ಆಸ್ವಾದಕ್ಕೆ ಯೋಗ್ಯವಾದ್ದರಿಂದ ಅವೆಲ್ಲವನ್ನೂ ರಸವೆಂದು ಲಕ್ಷಣೆಯಿಂದ ಗೌಣವಾಗಿ ಗ್ರಹಿಸಬೇಕು. ವಿಭಾವಾದಿಗಳಿಂದ ಪರಿಪುಷ್ಟವಾದ ಸ್ಥಾಯಿಭಾವವು ರಸವಾಗಿ ಪರಿಣಮಿಸುವುದನ್ನು ಮಾತ್ರ ಪ್ರಧಾನವೆಂದೇ ಭಾವಿಸಬೇಕು. ರಸಾತ್ಮಕಂ ವಾಕ್ಯಂ ಎಂಬಲ್ಲಿ ಗೌಣ ಹಾಗೂ ಈ ಎರಡು ಬಗೆಯ ರಸಗಳನ್ನೂ ಗ್ರಹಿಸಬೇಕು.

ರಸಕ್ಕಿಂತ ಪ್ರಧಾನವಾಗಿ ತೋರಿಬರುವ ನಿರ್ವೇದ ಮೊದಲಾದ ವ್ಯಭಿಚಾರಿಭಾವಗಳು, ದೇವ ಗುರು ಮೊದಲಾದವರ ಬಗ್ಗೆ ಹುಟ್ಟುವ ರತಿ ಇವೆಲ್ಲವೂ ಭಾವವೆನಿಸುತ್ತವೆ. ವಿಭಾವಾದಿಗಳಿಂದ ಪುಷ್ಟಿಯನ್ನು ಹೊಂದದೇ ಇರುವ ರತ್ಯಾದಿಸ್ಥಾಯಿಭಾವವೂ ಭಾವವೆನಿಸುತ್ತದೆ. ಇದರಿಂದ ಸಂಚಾರಿಭಾವಗಳು, ದೇವಾದಿವಿಷಯಕವಾದ ರತಿ, ರತ್ಯಾದಿ ಸ್ಥಾಯಿಭಾವ ಇವು ಮೂರೂ ಭಾವವೆನಿಸುತ್ತವೆ ಎಂಬುದು ಸ್ಪಷ್ಟವಾಯಿತು. ತನ್ನ ಸಿದ್ಧಾಂತಕ್ಕೆ ಅನುಕೂಲವಾಗುವಂತೆ ಪ್ರಾಚೀನಮತವನ್ನು ತಿಳಿಸುತ್ತಾನೆ. "ನಿರ್ವೇದವೇ ಮೊದಲಾದ ವ್ಯಭಿಚಾರಿಭಾವಗಳಿಲ್ಲದೆ ರಸವೇ ಇರುವುದಿಲ್ಲ. ಅವು ರಸಕ್ಕೆ ಪೋಷಕವಾದ್ದರಿಂದ ಅನಿವಾರ್ಯವೆನಿಸಿವೆ. ಹಾಗೆಯೇ ರಸವಿಲ್ಲದೆ ನಿರ್ವೇದ ಮೊದಲಾದ ಭಾವವೂ ಇರುವುದಿಲ್ಲ. ರಸಕ್ಕೆ ಮೂಲವೆನಿಸಿದ ಸ್ಥಾಯಿಭಾವದಲ್ಲಿ ವ್ಯಭಿಚಾರಿಭಾವವು ಎದ್ದು ಬಿದ್ದು ಅಂಟಿಕೊಂಡೇ ಇರಬೇಕು. ಆದ್ದರಿಂದ ರಸಭಾವಗಳು ಪರಸ್ಪರ ಅವಲಂಬನದಿಂದಲೇ ವಿಕಾಸಗೊಳ್ಳಲಿವೆ."

ಈ ಪ್ರಕಾರದಿಂದ ಸೂಕ್ಷ್ಮವಾಗಿ ಪರ್ಯಾಲೋಚಿಸಿದರೆ ಈ ಅಂಶವು ಸ್ಪಷ್ಟವಾಗುತ್ತದೆ. ವ್ಯಭಿಚಾರಿಭಾವಕ್ಕೆ ಸ್ಥಾಯಿಭಾವವೇ ವಿಶ್ರಾಂತಿಸ್ಥಾನವೆನಿಸಿದೆ. ಅದರೊಡನೆ ಇದು ಅಂಟಿಕೊಂಡಿರುವುದಾದರೂ ಸೇವಕನ ಮದುವೆಯಾಗುತ್ತಿರುವಾಗ ಪ್ರಧಾನವೆನಿಸಿದ ಸೇವಕನನ್ನು ರಾಜನು ಹಿಂಬಾಲಿಸಿಕೊಂಡು ಹೋಗುವಂತೆ ಎಲ್ಲಿ ವ್ಯಭಿಚಾರಿಭಾವಗಳು ಪ್ರಧಾನವಾಗಿ ತೋರುತ್ತವೆಯೋ ಅವು, ದೇವಮುನಿಗುರುಗಳ ಬಗ್ಗೆ ಇರುವ ಪ್ರೀತಿ, ವಿಭಾವಾದಿಗಳಿಂದ ಪುಷ್ಟವಾಗದಿರುವ ಸ್ಥಾಯಿ ಇವೆಲ್ಲವೂ ಭಾವವೆನಿಸುತ್ತವೆ. ದೇವ, ಮುನಿ, ಗುರು, ನೃಪ ಇವರಿಗೆ ಸಂಬಂಧಿಸಿದ ರತಿಯು ಉತ್ಪನ್ನವಾದೊಡನೆ ವಿಭಾವ ಅನುಭವ ವ್ಯಭಿಚಾರಿಭಾವಗಳಿಂದ ಪುಷ್ಟಿಯನ್ನು ಹೊಂದದೆ ಇರುವುದರಿಂದ ರಸವೆನಿಸದೆ ಸ್ಥಾಯಿಭಾವಗಳಾಗಿಯೇ ಉಳಿದು ಭಾವವೆನಿಸುತ್ತವೆ. ಅವುಗಳಲ್ಲಿ ವ್ಯಭಿಚಾರಿಭಾವವು ಅಭಿವ್ಯಕ್ತವಾಗಿ ಭಾವವೆನಿಸುವುದನ್ನು ಉದಾಹರಿಸುತ್ತಾನೆ. "ನಾರದನು ಪಾರ್ವತಿಯ ಎದುರಿಗೆ ಅವಳ ತಂದೆಯೊಡನೆ ಅವಳ ವಿವಾಹದ ಬಗ್ಗೆ ಮಾತನಾಡುತ್ತಿರಲು ಆಕೆಯು ವಿನೋದಕ್ಕಾಗಿ ಕೈಯಲ್ಲಿ ಹಿಡಿದಿದ್ದ ಕಮಲದ ದಳಗಳನ್ನು ಎಣಿಕೆಮಾಡತೊಡಗಿದಳು" ಎಂಬಲ್ಲಿ ಅವಹಿತ್ಥವೆಂಬ ವ್ಯಭಿಚಾರಿಭಾವವು ಅಭಿವ್ಯಕ್ತವಾಗಿ ಭಾವವೆನಿಸಿದೆ. ಅವಹಿತ್ಥವೆಂದರೆ ತನ್ನ ಅಭಿಪ್ರಾಯವನ್ನು ತೋರ್ಪಡಿಸದೇ ಇರುವ ಸ್ಥಿತಿ. ಆಕೆಯ ವಿವಾಹದ ಬಗ್ಗೆ ಆಕೆಯ ಎದುರಿಗೆ ಮಾತನಾಡುತ್ತಿರುವಾಗ ನೇರವಾಗಿ ಆಕೆಯು ಕೇಳುವ ಹಾಗೆಯೂ ಇಲ್ಲ; ಕೇಳದೆಯೇ ಇರುವಂತೆಯೂ ಇಲ್ಲ; ಇಂತಹ ಸ್ಥಿತಿಯಲ್ಲಿ ಆಕೆ ಇಚ್ಛೆಯಿದ್ದರೂ ಅದನ್ನು ತೋರ್ಪಡಿಸದಂತೆ ಇರಬೇಕಾಯಿತು. ಇದನ್ನೇ ಅವಹಿತ್ಥ ಎಂದು ಕರೆಯಲಾಗಿದೆ.

ದೇವರ ಬಗ್ಗೆ ಇರುವ ರತಿಯನ್ನು ಕುಂದಮಾಲೆಯಲ್ಲಿ ಹೀಗೆ ತಿಳಿಸಿದೆ. "ಎಲೈ ನರಕಾಸುರನ ಶತ್ರು ಕೃಷ್ಣನೇ, ನನಗೆ ಸ್ವರ್ಗದಲ್ಲಾಗಲೀ, ಭೂಮಿಯಲ್ಲಾಗಲೀ, ನರಕದಲ್ಲಾಗಲೀ ವಾಸಮಾಡುವಂತಾದರೂ ಚಿಂತೆಯಿಲ್ಲ. ಅದರಿಂದ ನನಗೆ ಎಳ್ಳಷ್ಟೂ ದುಃಖವಿಲ್ಲ,ಆದರೂ ಶರತ್ಕಾಲದ ಕಮಲವನ್ನು ಸೌಂದರ್ಯದಲ್ಲಿ ಮೀರಿಸಿರುವ ನಿನ್ನ ಪಾದಗಳನ್ನು ಮರಣಕಾಲದಲ್ಲೂ ಚಿಂತಿಸುವೆನು." ಇಲ್ಲಿ ಹೇಳುವವನಿಗೆ ಕೃಷ್ಣನ ಬಗ್ಗೆ ಇರುವ ರತಿಭಾವವು ವ್ಯಕ್ತವಾಗುತ್ತದೆ. ಇಲ್ಲಿ ತೋರುವ ರತಿಯು ನಾಯಕ ನಾಯಿಕೆಯರಿಗೆ ತೋರುವ ರತಿಗಿಂತಲೂ ಭಿನ್ನವಾದುದು. ಆದ್ದರಿಂದ ಈ ಬಗೆಯ ರತಿಯು ರಸವಾಗಿ ಪರಿಣಮಿಸದೆ ಭಾವವಾಗಿಯೇ ನಿಲ್ಲುತ್ತದೆ.

ಮುನಿಗಳ ಬಗ್ಗೆ ತೋರುವ ರತಿಯನ್ನು ಇಲ್ಲಿ ತಿಳಿಸುತ್ತಾನೆ. ಶಿಶುಪಾಲವಧೆಯಲ್ಲಿ ನಾರದನಿಗೆ ಕೃಷ್ಣನು ಹೇಳುವ ಮಾತಿದು. "ನನ್ನ ಪಾಪವನ್ನು ತೊಲಗಿಸಿದ ನಿನ್ನ ಈ ದರ್ಶನದಿಂದ ನಾನು ಧನ್ಯನಾದೆನು. ಆದರೂ ಸಹ ಅರ್ಥಗೌರವದಿಂದ ಕೂಡಿದ ನಿನ್ನ ಮಾತುಗಳನ್ನು ಕೇಳಲು ಇಚ್ಛಿಸುತ್ತೇನೆ. ಮಂಗಳವು ದೊರಕುವುದಾದರೆ ಯಾರಿಗೆ ತಾನೆ ಆ ಬಗ್ಗೆ ತೃಪ್ತಿ ಇದ್ದೀತು? ಮಂಗಳವಿದ್ದರೂ ಬೇರೊಂದು ಮಂಗಳವು ದೊರೆತೀತೆಂಬ ಆಕಾಂಕ್ಷೆ ಎಲ್ಲರಿಗೂ ಸಹಜವಾಗಿ ಇದ್ದೇ ಇರುತ್ತದೆ." ಇಲ್ಲಿ

ಕೃಷ್ಣನಿಗೆ ನಾರದನ ಬಗ್ಗೆ ಇರುವ ಅನುರಾಗವೆಂಬ ರತಿಯು ಶೃಂಗಾರವೆನಿಸದೆ ಭಾವವೇ ಆಗಿ ಉಳಿಯುತ್ತದೆ. ರಾಜನ ಬಗ್ಗೆ ಇರುವ ರತಿಯು ಭಾವವಾಗಿ ಉಳಿಯುವ ಬಗ್ಗೆ ಉದಾಹರಣವನ್ನು ಕೊಡುತ್ತಾನೆ. "ಎಲೈ ರಾಜನೇ, ನಿನ್ನ ಕುದುರೆಗಳು ಯುದ್ಧಕ್ಕೆ ಹೊರಡುವಾಗ ನೆಲದಿಂದ ಮೇಲಕ್ಕೆ ಎದ್ದ ಧೂಳಿನಿಂದ ಕೆಸರಾದ ಗಂಗೆಯನ್ನು ಮೊದಲಿಗಿಂತಲೂ ಹೆಚ್ಚು ಭಾರವಾದವಳೆಂದು ಭಯದಿಂದ ಮಹಾದೇವನು ತಲೆಯಮೇಲೆ ಧರಿಸಲಿಲ್ಲ." ಇಲ್ಲಿ ಕವಿಗೆ ರಾಜನ ಬಗ್ಗೆ ಇದ್ದ ಅನುರಾಗವೆಂಬ ರತಿಯು ಶೃಂಗಾರವೆನಿಸದೆ ಭಾವವಾಗಿಯೇ ಕೊನೆಗಾಣುತ್ತದೆ. ಹೀಗೆಯೇ ಗುರು, ಸ್ನೇಹಿತ ಇವರ ಬಗ್ಗೆ ಇರುವ ರತಿಯೂ ಭಾವವೇ ಆಗುತ್ತದೆ.

ಉದ್ಬುದ್ಧಮಾತ್ರಸ್ಥಾಯಿಭಾವೋ ಯಥಾ—

ಹರಸ್ತು ಕಿಂಚಿತ್ಪರಿವೃತ್ತಧೈರ್ಯಶ್ಚಂದ್ರೋದಯಾರಂಭ ಇವಾಂಬುರಾಶಿಃ ।
ಉಮಾಮುಖೇ ಬಿಂಬಫಲಾಧರೋಷ್ಠೇ ವ್ಯಾಪಾರಯಾಮಾಸ ವಿಲೋಚನಾನಿ"

ಅತ್ರ ಪಾರ್ವತೀವಿಷಯಾ ಭಗವತೋ ರತಿಃ.

ನನೂಕ್ತಂ ಪ್ರಪಾಣಕರಸವದ್ವಿಭಾವಾದೀನಾಮೇಕೋಽವಭಾಸೋ ರಸ ಇತಿ ತತ್ರ ಸಂಚಾರಿಣಃ ಪಾರ್ಥಕ್ಯಾಭಾವಾತ್ ಕಥಂ ಪ್ರಾಧಾನ್ಯೇನಾಭಿವ್ಯಕ್ತಿಃ?ಇತ್ಯುಚ್ಯತೇಃ.

ಯಥಾ ಖಂಡಮರೀಚಾದೇರೇಕೀಭಾವೇ ಪ್ರಪಾಣಕೇ ।
ಉದ್ರೇಕಃ ಕಸ್ಯಚಿತ್ ಕ್ವಾಪಿ ತಥಾ ಸಂಚಾರಿಣೋ ರಸೇ ॥

ಅಥ ರಸಾಭಾಸಭಾವಾಭಾಸೌ.

ಅನೌಚಿತ್ಯಪ್ರವೃತ್ತತ್ವೇ ಆಭಾಸೋ ರಸಭಾವಯೋಃ ।

ಅನೌಚಿತ್ಯಂ ಚಾತ್ರ ರಸಾನಾಂ ಭರತಾದಿಪ್ರಣೀತಲಕ್ಷಣಾನಾಂ ಸಾಮಗ್ರೀರಹಿತತ್ವೇ ಸತಿ ಏಕದೇಶಯೋಗಿತ್ವೋಪಲಕ್ಷಣಪರಂ ಬೋಧ್ಯಮ್.

ತಚ್ಚ ಬಾಲವ್ಯುತ್ಪತ್ತಯೇ ಏಕದೇಶತೋ ವಣ್ಯರ್ತೇ—

ಉಪನಾಯಕಸಂಸ್ಥಾಯಾಂ ಮುನಿಗುರುಪತ್ನೀಗತಾಯಾಂ ಚ ।
ಬಹುನಾಯಕವಿಷಯಾಯಾಂ ರತೌ ತಥಾನುಭಯನಿಷ್ಠಾಯಾಮ್ ॥
ಪ್ರತಿನಾಯಕನಿಷ್ಠತ್ವೇ ತದ್ವದಧಮಪಾತ್ರತಿರ್ಯಗಾದಿಗತೇ ।
ಶೃಂಗಾರೇಽನೌಚಿತ್ಯಂ ರೌದ್ರೇ ಗುರ್ವಾದಿಗತಕೋಪೇ ॥
ಶಾಂತೇ ಚ ಹೀನನಿಷ್ಠೇ ಗುರ್ವಾದ್ಯಾಲಂಬನೇ ಹಾಸ್ಯೇ ।
ಬ್ರಹ್ಮವಧಾದ್ಯುತ್ಸಾಹೇಽಧಮಪಾತ್ರಗತೇ ತಥಾ ವೀರೇ ॥
ಉತ್ತಮಪಾತ್ರಗತತ್ವೇ ಭಯಾನಕೇ ಜ್ಞೇಯಮೇವಾನ್ಯತ್ರ ।

ತತ್ರ ರತೇರುಪನಾಯಕನಿಷ್ಠತ್ವೇ ಯಥಾ ಮಮ—

ಸ್ವಾಮೀ ಮುಗ್ಧತರೋ ವನಂ ಘನಮಿದಂ ಬಾಲಾಹಮೇಕಾಕಿನೀ
ಕ್ಷೋಣೀಮಾವೃಣುತೇ ತಮಾಲಮಲಿನಚ್ಛಾಯಾ ತಮಃಸಂತತಿಃ ।
ತನ್ಮೇ ಸುಂದರ ! ಮುಂಚ ಕೃಷ್ಣ ! ಸಹಸಾ ವರ್ತ್ಮೇತಿ ಗೋಪ್ಯಾ ಗಿರಃ।

ಶ್ರುತ್ವಾ ತಾಂ ಪರಿರಭ್ಯ ಮನ್ಮಥಕಲಾಸಕ್ತೋ ಹರಿಃ ಪಾತು ವಃ ||

ಬಹುನಾಯಕನಿಷ್ಠತ್ವೇ ಯಥಾ—

ಕಾಂತಾಸ್ತ ಏವ ಭುವನತ್ರಿತಯೇಽಪಿ ಮನ್ಯೇ
ಯೇಷಾಂ ಕೃತೇ ಸುತನು ಪಾಂಡುರಯಂ ಕಪೋಲಃ |

ಅನುಭಯನಿಷ್ಠತ್ವೇ ಯಥಾ ಮಾಲತೀಮಾಧವೇ ನಂದನಸ್ಯ ಮಾಲತ್ಯಾಮ್||

"ಪಶ್ಚಾದುಭಯನಿಷ್ಠತ್ವೇಽಪಿ ಪ್ರಥಮಮೇಕನಿಷ್ಠತ್ವೇ ರತೇರಾಭಾಸತ್ವಮ್" ಇತಿ ಶ್ರೀಮಲ್ಲೋಚನಕಾರಾಃ. ತತ್ರೋದಾಹರಣಂ ಯಥಾ ರತ್ನಾವಳ್ಯಾಂ ಸಾಗರಿಕಾಯಾಃ ಅನ್ಯೋನ್ಯಸಂದರ್ಶನಾತ್ ಪ್ರಾಕ್ ವತ್ಸರಾಜೇ ರತಿಃ.

ಪ್ರತಿನಾಯಕನಿಷ್ಠತ್ವೇ ಹಯಗ್ರೀವವಧೇ ಹಯಗ್ರೀವಸ್ಯ ಜಲಕ್ರೀಡಾವರ್ಣನೇ

ಅಧಮಪಾತ್ರಗತತ್ವೇ ಯಥಾ—

ಜಘನಸ್ಥಲನದ್ಧಪತ್ರವಲ್ಲೀಗಿರಿಮಲ್ಲೀಕುಸುಮಾನಿ ಕಾಪಿ ಭಿಲ್ಲೀ |
ಅವಚಿತ್ಯ ಗಿರೌ ಪುರೋ ನಿಷಣ್ಣಾ ಸ್ವಕಚಾನುತ್ಕಚಯಾಂಚಕಾರ ಭರ್ತ್ರಾ ||

ತಿರ್ಯಗ್ಗತತ್ವೇ ಯಥಾ—

ಮಲ್ಲೀಮತಲ್ಲೀಷು ವನಾಂತರೇಷು ವಲ್ಲ್ಯಂತರೇ ವಲ್ಲಭಮಾಹ್ವಯಂತೀ |
ಚಂಚದ್ವಿಪಂಚೀಕಲನಾದಭಂಗೀ ಸಂಗೀತಮಂಗೀಕರುತೇ ಸ್ಮ ಭೃಂಗೀ ||

ಆದಿಶಬ್ದಾತ್ತಾಪಸಾದಯಃ—

ರೌದ್ರಾಭಾಸೋ ಯಥಾ—

ರಕ್ತೋತ್ಫುಲ್ಲವಿಶಾಲಲೋಲನಯನಃ ಕಂಪೋತ್ತರಾಂಗೋ ಮುಹುಃ |
ಮುಕ್ತ್ವಾ ಕರ್ಣಮಪೇತಭೀರ್ಧೃತಧನುರ್ಬಾಣೋ ಹರೇಃ ಪಶ್ಯತಃ ||
ಆಧ್ಮಾತಃ ಕಟುಕೋಕ್ತಿಭಿಃ ಸ್ವಮಸಕೃದ್ದೋರ್ವಿಕ್ರಮಂ ಕೀರ್ತಯನ್|
ಅಂಸಾಸ್ಫೋಟಪಟುರ್ಯುಧಿಷ್ಠಿರಮಸೌ ಹಂತುಂ ಪ್ರವಿಷ್ಟೋಽರ್ಜುನಃ||

ಭಯಾನಕಾಭಾಸೋ ಯಥಾ—

ಅಶಕ್ನುವನ್ ಸೋಢುಮಧೀರಲೋಚನಃ ಸಹಸ್ರರಶ್ಮೇರಿವ ಯಸ್ಯ ದರ್ಶನಮ್ |
ಪ್ರವಿಶ್ಯ ಹೇಮಾದ್ರಿಗುಹಾಗೃಹಾಂತರಂ ನಿನಾಯ ಬಿಭ್ಯದ್ದಿವಸಾನಿ ಕೌಶಿಕಃ ||

ಸ್ತ್ರೀನೀಚವಿಷಯಮೇವ ಹಿ ಭಯಂ ರಸಪ್ರಕೃತಿಃ. ಏವಮನ್ಯತ್ರ.

ಭಾವಾಭಾಸೋ ಲಜ್ಜಾದಿಕೇ ತು ವೇಶ್ಯಾದಿವಿಷಯೇ ಸ್ಯಾತ್ |
ಭಾವಸ್ಯ ಶಾಂತಾವುದಯೇ ಸಂಧಿಮಿಶ್ರಿತಯೋಃ ಕ್ರಮಾತ್ ||
ಭಾವಸ್ಯ ಶಾಂತಿರುದಯಃ ಸಂಧಿಃ ಶಬಲತಾ ಮತಾ ||

ಕ್ರಮೇಣ ಯಥಾ—ಸುತನು! ಜಹಿಹಿ ಕೋಪಂ ಪಶ್ಯ ಪಾದಾನತಂ ಮಾಂ
ನ ಖಲು ತವ ಕದಾಚಿತ್ ಕೋಪ ಏವಂವಿಧೋಽಭೂತ್ |
ಇತಿ ನಿಗದತಿ ನಾಥೇ ತಿರ್ಯಗಾಮೀಲಿತಾಕ್ಷ್ಯಾ
ನಯನಜಲಮನಲ್ಪಂ ಮುಕ್ತಮುಕ್ತಂ ನ ಕಿಂಚಿತ್ ||

ಅತ್ರ ಬಾಷ್ಪಮೋಚನೇನ ಈರ್ಷ್ಯಾಖ್ಯಸಂಚಾರಿಭಾವಸ್ಯ ಶಮಃ.

ಚರಣಪತನಪ್ರತ್ಯಾಖ್ಯಾನಾತ್ ಪ್ರಸಾದಪರಾಙ್ಮುಖೇ
ನಿಭೃತಕಿತವಾಚಾರೇತ್ಯುಕ್ತ್ವಾ ರುಷಾ ಪರುಷೀಕೃತೇ ।
ವ್ರಜತಿ ರಮಣೇ ನಿಶ್ವಸ್ಯೋಚ್ಚೈಃ ಸ್ಥನಸ್ಥಿತಹಸ್ತಯಾ
ನಯನಸಲಿಲಚ್ಛನ್ನಾ ದೃಷ್ಟಿಃ ಸಖೀಷು ನಿವೇಶಿತಾ ॥

ಅತ್ರ ವಿಷಾದಸ್ಯೋದಯಃ. ನಯನಯುಗಾಸೇಚನಕಂ ಮಾನಸವೃತ್ತ್ಯಾಪಿ ದುಷ್ಪ್ರಾಪಮ್। ರೂಪಮಿದಂ ಮದಿರಾಕ್ಷ್ಯಾ ಮದಯತಿ ಹೃದಯಂ ದುನೋತಿ ಚ ಮೇ॥

ಅತ್ರ ಹರ್ಷವಿಷಾದಯೋಃ ಸಂಧಿಃ—

ಕ್ವಾಕಾರ್ಯಂ ಶಶಲಕ್ಷ್ಮಣಃ ಕ್ವ ಚ ಕುಲಂ ಭೂಯೋಽಪಿ ದೃಶ್ಯೇತ ಸಾ
ದೋಷಾಣಾಂ ಪ್ರಶಮಾಯ ಮೇ ಶ್ರುತಮಹೋ ಕೋಪೇಽಪಿ ಕಾಂತಂ ಮುಖಮ್।
ಕಿಂ ವಕ್ಷ್ಯಂತ್ಯಕಪಲ್ಮಷಾಃ ಕೃತಧಿಯಃ ಸ್ವಪ್ನೇಽಪಿ ಸಾ ದುರ್ಲಭಾ
ಚೇತಃ ಸ್ವಾಸ್ಥ್ಯಮುಪೈಹಿ ಕಃ ಖಲು ಯುವಾ ಧನ್ಯೋಽಧರಂ ಪಾಸ್ಯತಿ ॥

ಅತ್ರ ವಿತರ್ಕೌತ್ಸುಕ್ಯಮತಿಸ್ಮರಣಶಂಕಾದೈನ್ಯಧೃತಿಚಿಂತಾನಾಂ ಶಬಲತಾ.

ಸ್ಥಾಯಿಭಾವವು ಹೇಗೆ ತೋರುವುದೋ ಹಾಗೆಯೇ ನಿಂತು ರಸವೆನಿಸದೆ ಭಾವವೆನಿಸುವುದಕ್ಕೆ ಉದಾಹರಣವು ಹೀಗಿದೆ. "ಚಂದ್ರನು ಉದಯಿಸಿದೊಡನೆ ಸಮುದ್ರದಲ್ಲಿ ಬದಲಾವಣೆಯಾಗುವಂತೆ ಈಶ್ವರನಲ್ಲೂ ಚಿತ್ತವು ಕೊಂಚ ಬದಲಾವಣೆಯಾಯಿತು. ಆಗ ಅವನು ತೊಂಡೆಯ ಹಣ್ಣಿನಂತೆ ಕೆಳತುಟಿಯುಳ್ಳ ಉಮೆಯ ಮುಖದಲ್ಲಿ ತನ್ನ ದೃಷ್ಟಿಯನ್ನಿಟ್ಟನು." ಇಲ್ಲಿ ಶಿವನಿಗೆ ಅಲ್ಲಿ ದೃಷ್ಟಿ ಇಟ್ಟಾಗ ಅಭಿವ್ಯಕ್ತವಾದ ರತಿಯು ಉದ್ದೀಪನವಿಭಾವ ಮತ್ತು ಸಂಚಾರಿಭಾವಗಳು ಇಲ್ಲದ್ದರಿಂದ ಪುಷ್ಟಿಯನ್ನು ಹೊಂದದೆ ಹೇಗೆ ಹುಟ್ಟಿತೋ ಹಾಗೆಯೇ ನಿಂತು ಭಾವವೆನಿಸಿದೆ. ರತಿ ಎಂಬ ಭಾವವು ಸೂಕ್ಷ್ಮರೂಪದಿಂದ ಇದ್ದು ಅಭಿವ್ಯಕ್ತವಾಗುವಾಗುವಾಗ ಉದ್ದೀಪನವಿಭಾವ ಮತ್ತು ವ್ಯಭಿಚಾರಿಭಾವಗಳ ಪರಿಪೋಷವಿಲ್ಲದಿದ್ದರೆ ಬೆಳೆಯುವುದಿಲ್ಲ. ಇಲ್ಲಿ ಪಾರ್ವತಿಯ ಬಗ್ಗೆ ಶಿವನಿಗುಂಟಾದ ರತಿಭಾವಕ್ಕೆ ಉದ್ದೀಪನ ವ್ಯಭಿಚಾರಿಭಾವಗಳಿಂದ ಪರಿಪುಷ್ಟಿಯಾಗದೇ ಇರುವುದರಿಂದ ರತಿಯು ಭಾವವಾಗಿ ನಿಲ್ಲುವುದೇ ಹೊರತು ಸ್ಥಾಯಿಯಾಗುವುದಿಲ್ಲ. ಪಾನಕದ ರಸದಲ್ಲಿ ಕಲ್ಲುಸಕ್ಕರೆ ಮೆಣಸು ಇವನ್ನು ವ್ಯವಸ್ಥಿತವಾದ ಪ್ರಮಾಣದಲ್ಲಿಯೇ ಬೆರೆಸಬೇಕು. ಹಾಗೆ ಇಲ್ಲದೆ ಯಾವುದಾದರೊಂದು ಹೆಚ್ಚಾಗಿದ್ದರೂ ಅವಕ್ಕೆ ಪಾನಕವೆಂಬ ಹೆಸರು ಮಾತ್ರ ತಪ್ಪುವುದಿಲ್ಲ. ಹಾಗೆ ವಿಭಾವ ಅನುಭಾವ ವ್ಯಭಿಚಾರಿಗಳೆಲ್ಲವೂ ಬೆರೆತು ಒಂದೇ ರಸವಾಗಿ ಪರಿಣಮಿಸುವಾಗ ಒಂದು ವ್ಯಭಿಚಾರಿಭಾವವು ಪ್ರಧಾನವಾಗಿ ಪ್ರಕಾಶಗೊಂಡರೆ ಅದರಿಂದ ಕಾವ್ಯಕ್ಕೆ ಹಾನಿ ಏನೂ ಇಲ್ಲವೆಂದೇ ತಿಳಿಯಬೇಕು. ಪಾನಕವು ಕೊಂಚ ಕಾರವಾಗಿದ್ದರೂ ಅಥವಾ ಸಿಹಿಯಾಗಿದ್ದರೂ ಪಾನಕವಾಗಿಯೇ ಉಳಿಯುವಂತೆ ವ್ಯಭಿಚಾರಿಭಾವವು ಎದ್ದು ಕಾಣುವಹಾಗಿದ್ದರೂ ದೋಷವಿಲ್ಲ. ಎಲ್ಲವೂ ಸಮವಾಗಿ ಸೇರಿದರೆ

ಮಾತ್ರವೇ ರಸವಾಗಬೇಕು. ಆದರೂ ಒಮ್ಮೆ ವ್ಯಭಿಚಾರಿಭಾವಕ್ಕೆ ಪ್ರಾಧಾನ್ಯವಿದ್ದರೂ ವಿರೋಧವಿಲ್ಲ. ರಸಾಭಾಸ ಭಾವಾಭಾಸಗಳ ಸ್ವರೂಪವನ್ನು ವಿವರಿಸುತ್ತಾನೆ. ಬಾಹ್ಯವಾದ ಸ್ಥಾಯಿಭಾವಗಳು ಭರತನ ಲಕ್ಷಣಗಳಿಗೂ, ಸ್ವಾಭಾವಿಕವಾದ ನಿಯಮಗಳಿಗೂ ಧರ್ಮಶಾಸ್ತ್ರಕ್ಕೂ ವಿರುದ್ಧವಾಗಿರುವುದಾದರೆ ಆಗ ಅಂತಹವು ಆಭಾಸವೆನಿಸುತ್ತವೆ. ಅದೇರೀತಿಯಲ್ಲಿ ಸ್ಥಾಯಿಗಿಂತ ಬೇರೆಯಾದ ಭಾವವು ಹಾಗೆ ವಿರುದ್ಧವಾಗಿದ್ದರೂ ಅನುಚಿತವೆನಿಸುತ್ತದೆ. ಬಾಲಕರ ಅವಗಾಹನೆಗಾಗಿ ಒಂದು ಅಂಶವನ್ನು ಮಾತ್ರ ಇಲ್ಲಿ ತೋರಿಸಲಾಗುವುದು. ವಿವಾಹವಾಗಿರುವ ನಾಯಿಕೆಯ ರತಿಯು ನಾಯಕನಲ್ಲಿ ಇರಬೇಕಾದ್ದು ಉಪನಾಯಕನಲ್ಲೂ ಇರುವುದಾದರೆ ಅದು ಶೃಂಗಾರರಸದಲ್ಲಿ ಅನೌಚಿತ್ಯವೆನಿಸುತ್ತದೆ. ನಾಯಕನಲ್ಲಿರಬೇಕಾದ್ದು ಉಪನಾಯಕನಲ್ಲೂ ಪ್ರವರ್ತಿಸುವುದಾದರೆ ಧರ್ಮಶಾಸ್ತ್ರದ ವಿರೋಧವು ಬರುತ್ತದೆ. ನಾಯಕನ ರತಿಯು ನಾಯಿಕೆಯಲ್ಲಿರುವ ಬದಲು ಋಷಿಯ, ಹಾಗೂ ಗುರುವಿನ ಹೆಂಡತಿಯಲ್ಲಿ ಇರುವುದಾದರೆ ಅದೂ ಅನೌಚಿತ್ಯವೇ ಆಗುವುದು. ರತಿಯು ಯೋಗ್ಯವಾದ ಆಲಂಬನದಲ್ಲಿಯೇ ಪ್ರಕಾಶಿಸಬಲ್ಲದು. ಅಯೋಗ್ಯವಾದ ಕಡೆ ಇದ್ದರೆ ಅದು ಆಭಾಸವೆನಿಸುವುದು. ಹಾಗೆಯೇ ರತಿಯು ಅನೇಕ ನಾಯಕರಲ್ಲಿ ಪ್ರವರ್ತಿಸಿದರೂ, ಸತಿಪತಿಗಳಿಬ್ಬರಲ್ಲೂ ಒಂದಾಣಿಕೆ ಇಲ್ಲದಿದ್ದರೂ ಅದು ಶೃಂಗಾರರಸದಲ್ಲಿ ಅನೌಚಿತ್ಯವೆನಿಸುವುದು. ಹಾಗೆಯೇ ಅನುರಾಗವು ಪ್ರತಿನಾಯಕರಲ್ಲಾಗಲೀ ನೀಚನಲ್ಲಾಗಲೀ ಇರುವುದಾದರೆ ಅದೂ ಸಹ ಶೃಂಗಾರರಸಕ್ಕೆ ಅನೌಚಿತ್ಯವೇ ಎನಿಸುವುದು. ಗುರು ಮೊದಲಾದ ಹಿರಿಯರ ಮೇಲೆ ಕೋಪ ಹುಟ್ಟಿದರೆ ಅದು ರೌದ್ರರಸದಲ್ಲಿ ಅನೌಚಿತ್ಯವೆನಿಸುವುದು. ಗುರುವಿನ ಮೇಲೆ ಕೋಪ ಮಾಡುವುದು ಧರ್ಮಶಾಸ್ತ್ರಕ್ಕೆ ವಿರುದ್ಧವಾದ್ದರಿಂದ ಕೋಪಕ್ಕೆ ಗುರುವು ಯೋಗ್ಯನಾದ ಆಲಂಬನವಾಗುವುದಿಲ್ಲ. ನೀಚಜಾತಿಯವನಲ್ಲಿ ಶಮವಿದ್ದರೆ ಅದು ಶಾಂತರಸಕ್ಕೆ ಅನುಚಿತವೆನಿಸುವುದು. ಗುರು ಮೊದಲಾದ ಪೂಜ್ಯವ್ಯಕ್ತಿಗಳ ಬಗ್ಗೆ ಹಾಸ್ಯಮಾಡುವುದಾದರೆ ಅದೂ ಸಹ ಹಾಸ್ಯರಸದಲ್ಲಿ ಅನೌಚಿತ್ಯವೆನಿಸುವುದು. ಬ್ರಹ್ಮವಧ ಮೊದಲಾದ ಪಾಪಗಳಲ್ಲಿ ನೀಚನಿಗೆ ಉತ್ಸಾಹವು ಹುಟ್ಟಿದರೆ ಅದರಿಂದ ತೋರುವ ವೀರರಸವು ಅನೌಚತ್ಯದೋಷದಿಂದ ಆಭಾಸವಾಗಿ ಪರಿಣಮಿಸುವುದು. ಉತ್ತಮಪಾತ್ರದಿಂದ ಭಯವುಂಟಾಗುವುದಾದರೆ ಅದು ಆಭಾಸವವಾಗುವುದೇ ಹೊರತು ರಸವೆನಿಸಲಾರದು. ನೀಚಪಾತ್ರದಲ್ಲಿ ಇರುವ ಭಯವೇ ಭಯಾನಕರಸವಾಗಬಲ್ಲದು.

ರತಿ ಉಪನಾಯಕನಲ್ಲಿದ್ದರೆ ಹೇಗೆ ಅನುಚಿತವಾಗುವುದೆಂಬುದನ್ನು ಉದಾಹರಿಸುತ್ತಾನೆ. "ಕೃಷ್ಣನೇ, ನನ್ನನ್ನು ಲಗ್ನವಾಗಿರುವವನು ಬಹಳ ಮುಗ್ಧನು, ಏನನ್ನೂ ತಿಳಿಯದವನು, ಅವನಿಂದ ನನಗೆ ತೃಪ್ತಿಯಾಗುವುದಿಲ್ಲ. ಈ ಅರಣ್ಯವಾದರೋ ಭಯಂಕರವಾಗಿದೆ. ನಾನಾದರೋ ಹುಡುಗಿ; ಒಬ್ಬಳೇ ಇರುವೆನು. ಆದ್ದರಿಂದ ಈಗ ವಿಳಂಬವೇ ಈಗ ಆಗಬಾರದು. ರಮಿಸಲು ಯಾವ ತಡೆಯೂ ಇಲ್ಲ. ಹೊಂಗೆ ನೆರಳಿನಂತೆ ಮಲಿನವಾಗಿರುವ ಕತ್ತಲೆಯರಾಶಿಯು ಭೂಮಿಯನ್ನು ಆವರಿಸಿದೆ. ಹೀಗೆ ಇದು

ಭೀಕರವಾದ ಕಾಲವಾದ್ದರಿಂದ ನಾವು ರಮಿಸುವುದನ್ನು ಯಾರೊಬ್ಬರೂ ತಿಳಿಯಲಾರರು. ಆದ್ದರಿಂದ ಎಲೈ ಸುಂದರನೇ (ಸೌಂದರ್ಯದಿಂದ ನನ್ನ ಮನಸ್ಸನ್ನು ಮೋಹಿಸಿರುವವನೇ) ನಿನ್ನನ್ನು ಬಿಟ್ಟು ಹೋಗಲಿಕ್ಕೆ ನನಗೆ ಮನಸ್ಸಿಲ್ಲ. ಬೇಗನೆ ನನ್ನ ಮನೆಯ ಪರ ದಾರಿಯನ್ನು ಬಿಡು" ಹೀಗೆ ಹೇಳಿದ ಗೋಪಿಯ ಮಾತುಗಳನ್ನು ಕೇಳಿ ಆಕೆಯನ್ನು ಆಲಂಗಿಸಿದ ಲೀಲಾವಿಹಾರಕುಶಲನಾದ ಕೃಷ್ಣನು ನಿಮ್ಮನ್ನು ಕಾಪಾಡಲಿ." ಇಲ್ಲಿ ಮದುವೆಯಾದ ಪತಿಯು ಏನೂ ತಿಳಿಯದವನು ಎಂಬುವರಿಂದ ಬೇರೊಬ್ಬ ಪತಿ ಇರುವನೆಂಬುದು ತಿಳಿದುಬರುವ ಪ್ರಯು ಗೋಪಿಗೆ ಕೃಷ್ಣನು ಉಪನಾಯಕನೇ ಆದನೆಂಬುದು ತಿಳಿದುಬರುತ್ತದೆ.

ರತಿಯು ಅನೇಕ ನಾಯಕರಲ್ಲಿ ಇದ್ದರೆ ಅದು ಹೇಗೆ ಆಬಾಸವಾಗುವುದೆಂಬುದನ್ನು ಈಗ ಉದಾಹರಿಸುತ್ತಾನೆ. "ಎಲೈ ಶೋಭನಾಂಗಿ, ಈ ನಿನ್ನ ಕಪೋಲಸ್ಥಲವು ಯಾರ ನಿಮಿತ್ತದಿಂದ ಬಿಳುಪಾಗಿದೆಯೋ ಅಂತಹ ನಾಯಕರು ಮೂರು ಲೋಕಗಳಲ್ಲಿಯೇ ಮನೋಹರರೆಂದು ಭಾವಿಸುತ್ತೇನೆ." ಇಲ್ಲಿ ಕಾಂತಾಃ ಎಂದು ಬಹುವಚನವಿರುವುದರಿಂದ ನಾಯಿಕೆಯ ರತಿಯು ಅನೇಕ ನಾಯಕರಲ್ಲಿ ಪ್ರವರ್ತಿಸುತ್ತಲಿದೆ ಎಂಬುದು ತಿಳಿದುಬರುವುದು.

ರತಿಯು ಇಬ್ಬರಲ್ಲೂ ಒಂದೇ ಬಗೆಯಾಗಿ ಇಲ್ಲದೇ ಇರುವುದನ್ನು ಈಗ ಉದಾಹರಿಸುತ್ತಾನೆ. ನಾಯಕನಲ್ಲಿ ನಾಯಿಕೆಯ ಬಗ್ಗೆ ರತಿ ಇದ್ದು, ನಾಯಿಕೆಯಲ್ಲಿ ನಾಯಕನ ಬಗ್ಗೆ ಇಲ್ಲದೇ ಇದ್ದರೆ ಅದು ಆಭಾಸವಾಗುವುದೇ ಹೊರತು ಭಾವವೆನಿಸುವುದಿಲ್ಲ. ಮಾಲತೀಮಾಧವದಲ್ಲಿ ನಂದನನಿಗೆ ಮಾಲತಿಯಲ್ಲಿ ರತಿ ಇದ್ದರೂ ಮಾಲತಿಗೆ ನಂದನನಲ್ಲಿ ರತಿ ಇರಲಿಲ್ಲವೆಂಬುದು ಇದಕ್ಕೆ ಉದಾಹರಣವಾಗುತ್ತದೆ. ರತಿಯು ಮೊದಲು ಇಬ್ಬರಲ್ಲೂ ಒಂದೇ ಬಗೆಯಾಗಿ ಇಲ್ಲದೆ ಇದ್ದು ಆಮೇಲೆ ಇಬ್ಬರಲ್ಲೂ ಇರುವಂತಾದರೆ ಮೊದಲು ಒಂದುಕಡೆ ಮಾತ್ರವೇ ಇದ್ದುದರಿಂದ ಅದು ಕೊನೆಗೂ ಅಭಾಸವೇ ಆಗುವುದು. ರತ್ನಾವಳಿಯಲ್ಲಿ ಸಾಗರಿಕೆ ವತ್ಸರಾಜ ಇವರು ಪರಸ್ಪರವಾಗಿ ನೋಡುವ ಮೊದಲು ವತ್ಸರಾಜನಲ್ಲಿ ರತಿ ಹುಟ್ಟಿ ಸಾಗರಿಕೆಯಲ್ಲಿ ಹುಟ್ಟದೇ ಅನಂತರದಲ್ಲಿ ಇಬ್ಬರಲ್ಲಿ ರತಿ ಹುಟ್ಟಿದರೂ ಸಹ ಮೊದಲು ಹುಟ್ಟಿನ ರತಿಭಾವವನ್ನು ಅವಲಂಬಿಸಿ ಅದಕ್ಕೆ ಅನೌಚಿತ್ಯವೇ ಬರುವುದು.

ಪ್ರತಿನಾಯಕನಲ್ಲಿ ರತಿ ಇದ್ದರೆ ಅದು ಆಭಾಸವಾಗುವುದೆಂಬುದಕ್ಕೆ ಉದಾಹರಣವನ್ನು ಕೊಡುತ್ತಾನೆ. ಹಯಗ್ರೀವವಧದಲ್ಲಿ ಹಯಗ್ರೀವನ ಜಲಕ್ರೀಡೆಯನ್ನು ವರ್ಣಿಸುವಾಗ ಈ ಬಗೆಯ ಅನೌಚಿತ್ಯವನ್ನು ಕಾಣಬಹುದು.

ನೀಚಪಾತ್ರದಲ್ಲಿ ರತಿಯಿರುವುದನ್ನು ಉದಾಹರಿಸುತ್ತಾನೆ. "ಬೆನ್ನಿನ ಹಿಂಭಾಗದಲ್ಲಿ ಚಿತ್ರದ ಗುರುತನ್ನು ಧರಿಸಿದ ಒಬ್ಬ ಬೇಡರವಳು ಬೆಟ್ಟದ ಮಲ್ಲಿಗೆ ಹೂವುಗಳನ್ನು ಕೊಯು ಪತಿಯ ಎದುರಿಗೆ ಕುಳಿತು ತನ್ನ ಕೂದಲುಗಳಿಗೆ ಕಟ್ಟಿಕೊಂಡಳು" ಇಲ್ಲಿ

ಅನುರಾಗವು ಯಥಾರ್ಥಪರಿಸ್ಥಿತಿಯನ್ನು ತಿಳಿಯಲು ಅಶಕ್ತಳಾದ ನೀಚಸ್ವಭಾವದ ನಾಯಕನಾಯಿಕೆಯಲ್ಲಿರುವ ಪ್ರಯುಕ್ತ ಶೃಂಗಾರಾಭಾಸವೆನಿಸಿದೆ.

ಅನುರಾಗವು ತಿರ್ಯಗ್ಜಾತಿಯ ಪ್ರಾಣಿಗಳ ಬಗ್ಗೆ ಪ್ರವರ್ತಿಸುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ಹೆಣ್ಣುದುಂಬಿಯು ವೀಣೆಯ ನಾದದಂತೆ ಶಬ್ದವನ್ನು ಮಾಡುತ್ತ ವನದಲ್ಲಿ ಬೆಳೆದ ದಿವ್ಯವಾದ ಮಲ್ಲಿಗೆಯ ಹೂವಿನಲ್ಲೂ ಹಾಗೆಯೇ ಬೇರೆ ಕಡೆಗಳಲ್ಲೂ ಇರುವ ತನ್ನ ವಲ್ಲಭ(ಗಂಡುದುಂಬಿ)ನನ್ನು ಕರೆಯುತ್ತಲಿದೆ" ಹೆಣ್ಣುದುಂಬಿಗೆ ಗಂಡುದುಂಬಿಯಲ್ಲಿ ಇರುವ ರತಿಭಾವವು ಇಲ್ಲಿ ತೋರುತ್ತದೆಯಾದ್ದರಿಂದ ಇದು ಶೃಂಗಾರರಸಾಭಾಸವೆನಿಸಿತು.

ರೌದ್ರಾಭಾಸವನ್ನು ಉದಾಹರಿಸುತ್ತಾನೆ. ಕರ್ಣನನ್ನು ಕೊಲ್ಲಲು ಅಸಮರ್ಥನಾದ ಅರ್ಜುನನನ್ನು ಯುಧಿಷ್ಠಿರನು ನಿಂದಿಸಲು ಆಗ ಅವನಿಗೆ ಕ್ರೋಧವುಂಟಾಯಿತು. "ಕೆಂಪೇರಿ ವಿಕಸಿತವೂ ವಿಶಾಲವೂ ಚಂಚಲವೂ ಆದ ಕಣ್ಣುಗಳಿಂದ ಕೂಡಿದ್ದು ಮತ್ತೆಮತ್ತೆ ತಲೆಯನ್ನು ಅಳ್ಳಾಡಿಸುತ್ತ ಕರ್ಣನೊಡನೆ ಯುದ್ಧಮಾಡುವುದನ್ನು ಬಿಟ್ಟು ಕೃಷ್ಣನು ನೋಡುತ್ತಿರುವಾಗಲೇ ಬಿಲ್ಲುಬಾಣಗಳನ್ನು ಕೈಯಲ್ಲಿ ಹಿಡಿದು ಯುಧಿಷ್ಠಿರನ ತೀಕ್ಷ್ಣವಾದ ವಾಕ್ಯಗಳಿಂದ ಉತ್ತೇಜಿತನಾಗಿ ತನ್ನ ಭುಜವನ್ನು ತಟ್ಟುತ್ತ ಅರ್ಜುನನು ಮತ್ತೆ ಮತ್ತೆ ತನ್ನ ಬಾಹುಬಲವನ್ನು ಉಲ್ಲೇಖಿಸುತ್ತ ಯುಧಿಷ್ಠಿರನನ್ನು ಕೊಲ್ಲಲು ಶಿಬಿರಕ್ಕೆ ಪ್ರವೇಶಿಸಿದನು." ತಂದೆಗೆ ಸರಿ ಎನಿಸಿದ ಯುಧಿಷ್ಠಿರನ ಮೇಲೆ ಕ್ರೋಧವು ಹುಟ್ಟಿದ್ದು ಆಭಾಸವಾಯಿತು. ಭಯಾನಕಾಭಾಸವನ್ನು ಉದಾಹರಿಸುತ್ತಾನೆ. "ದೇವೇಂದ್ರನು ಸೂರ್ಯನಂತೆ ಇರುವ ರಾವಣನ ದರ್ಶನವನ್ನು ಸಹಿಸಲಶಕ್ತನಾಗಿ ಸ್ಥಿರವಾದ ಮನಸ್ಸಿಲ್ಲದೆ ಹೆದರುತ್ತ ಮೇರುಪರ್ವತದ ಗವಿಯ ಮಧ್ಯಪ್ರದೇಶವನ್ನು ಹೊಕ್ಕು ಅಲ್ಲಿ ದಿನಗಳನ್ನು ಕಳೆದನು." ಇಲ್ಲಿ ಭಯಕ್ಕೆ ದೇವೇಂದ್ರನಂತಹ ಉತ್ತಮಪಾತ್ರನೇ ಆಲಂಬನವಾದ್ದರಿಂದ ಇದು ಭಯಾನಕರಸವೆನಿಸಿಸದೆ ಅದರ ಆಭಾಸವೆನಿಸಿದೆ. ಸ್ತ್ರೀಯಾಗಲೀ, ನೀಚಪಾತ್ರವಾಗಲಿ ಭಯಕ್ಕೆ ಆಲಂಬನವಿಭಾವವಾಗುವುದಾದರೆ ಮಾತ್ರವೇ ಅದು ಭಯಾನಕರಸವಾಗಬಲ್ಲದು; ಇಲ್ಲವಾದರೆ ಆಭಾಸವೇ ಆದೀತು. ಹಾಗೆಯೇ ಶಮವು ಹೀನಸ್ವಭಾವದವನಲ್ಲಿರುವುದಾದರೆ ಶಾಂತಾಭಾಸವಾಗುವುದೇ ಹೊರತು ಶಾಂತರಸವೆನಿಸುವುದಿಲ್ಲವೆಂದು ತಿಳಿಯುವುದು.

ಲಜ್ಜೆ-ನಿರ್ವೇದ ಮೊದಲಾದ ವ್ಯಭಿಚಾರಿಭಾವಗಳು ವೇಶ್ಯೆ ದೂತಿ ಮೊದಲಾದವರಲ್ಲಿ ಇರುವುದಾದರೆ ಭಾವಾಭಾಸವಾಗುವವೇ ಹೊರತು ಭಾವವೆನಿಸಲಾರವು. ಲಜ್ಜೆಯನ್ನು ಪೂರ್ತಿಯಾಗಿ ತೊರೆದಿರುವ ವೇಶ್ಯೆಯಲ್ಲಿ ಲಜ್ಜೆ ಇರುವುದಾದರೆ ಅದು ಭಾವವೆನಿಸದೆ ಭಾವಾಭಾಸವೇ ಆಗುವುದು.

ಭಾವಶಾಂತಿ, ಭಾವೋದಯ, ಭಾವಸಂಧಿ, ಭಾವಶಬಲತೆ ಇವನ್ನು ತಿಳಿಸುತ್ತಾನೆ. ಹಿಂದೆ ತಿಳಿಸಿದ ಯಾವುದೋ ಒಂದು ವ್ಯಭಿಚಾರಿಭಾವವು ತೊಲಗಲು ಅದು ಭಾವಶಾಂತಿ ಎಂಬ ಹೆಸರಿನಿಂದ ಕಾವ್ಯಕ್ಕೆ ಆತ್ಮವೆನಿಸುವುದು. ಯಾವುದೂ ಒಂದು

ಭಾವವು ಉತ್ಪನ್ನವಾಗಲು ಅದು ಭಾವೋದಯವೆನಿಸುವುದು. ಎರಡು ಭಾವಗಳು ಸಮಾನವಾಗಿ ನೆಲಸಿದ್ದರೆ ಅದು ಭಾವಸಂಧಿ ಎನಿಸುವುದು. ಅನೇಕ ಭಾವಗಳು ಸಮಾನಭಾವದಿಂದ ಮಿಶ್ರವಾಗಿದ್ದರೆ ಅದು ಭಾವಶಬಲವೆಂಬ ಹೆಸರಿನಿಂದ ಕಾವ್ಯದ ಜೀವವೆನಿಸುವುದು. ಇವನ್ನು ಕ್ರಮವಾಗಿ ಉದಾಹರಿಸುತ್ತಾನೆ.

"ಎಲೈ ಶೋಭನಾಂಗಿ, 'ಕೋಪವನ್ನು ಬಿಡು. ನಿನ್ನ ಪಾದದಲ್ಲಿ ಬಿದ್ದಿರುವ ನನ್ನನ್ನು ನೋಡು. ಇಂತಹ ಕೋಪವು ನಿನಗೆ ಯಾವಾಗಲೂ ಬಂದಿರಲಿಲ್ಲ.' ಹೀಗೆ ಪತಿಯು, ಹೇಳುತ್ತಿರಲು ಕಣ್ಣನ್ನು ವಕ್ರಭಾವದಿಂದ ಕೊಂಚ ಮುಚ್ಚಿದ ನಾಯಿಕಿಯೊಬ್ಬಳು ಹೆಚ್ಚು ಕಣ್ಣೀರನ್ನು ಸುರಿಸಿದಳು. ಆದರೆ ಏನನ್ನೂ ಹೇಳಲಿಲ್ಲ.'' ಇಲ್ಲಿ ಕಣ್ಣೀರನ್ನು ಆಕೆಯೇ ಸುರಿಸಲಿಕ್ಕೆ ಆರಂಭಿಸಿದ್ದರಿಂದ ಈರ್ಷ್ಯೆ ಎಂಬ ಭಾವವು ತೊಲಗಿದ್ದಿತೆಂಬುದು ಸೂಚಿತವಾಗುತ್ತದೆ. ಇದು ಭಾವಶಾಂತಿಯ ಉದಾಹರಣವೆನಿಸಿತು.

ಭಾವೋದಯವನ್ನು ಈಗ ಉದಾಹರಿಸುತ್ತಾನೆ. "ಪಾದಗಳಲ್ಲಿ ತಾನು ಬಿದ್ದಿರುವುದನ್ನು ತಿರಸ್ಕರಿಸಿದ್ದರಿಂದ ಪತಿಯು ಪ್ರಸನ್ನನಾಗದಿರಲು'ಗೋಪ್ಯವಾಗಿ ಧೂರ್ತತನದಿಂದ ವ್ಯವಹರಿಸುವವನು'ಎಂದು ಹೇಳಿ ಆಕೆಯು ಅವನನ್ನು ಕೋಪದಿಂದ ನಿಷ್ಠುರಗೊಳಿಸಲು ಪತಿಯು ಆಕೆಯನ್ನು ಬಿಟ್ಟುತೊಲಗುವನು. ಆಗ ಆಕೆಯುನಿಟ್ಟುಸಿರುಬಿಡುತ್ತ ಸ್ತನಗಳ ಮೇಲೆ ಕೈಯನ್ನು ಇಟ್ಟುಕೊಂಡು ಕಣ್ಣೀರಿನಿಂದ ತುಂಬಿದ ದೃಷ್ಟಿಯನ್ನು ಸಖಿಯರ ಕಡೆಗೆ ಇಟ್ಟಳು." ಪತಿಯು ತನ್ನನ್ನು ತೊರೆದುಹೋಗಲು ಆಕೆಗೆ ವಿಷಾದಭಾವವು ಉಂಟಾಯಿತು. ಹಾಗೆ ಹುಟ್ಟದೇ ಇದ್ದರೆ ಆಕೆಯ ಕಣ್ಣಿನಲ್ಲಿ ನೀರುಬರುತ್ತಿರಲಿಲ್ಲ. ಇದು ವಿಷಾವೆಂಬ ಭಾವದ ಉದಯಕ್ಕೆ ಉದಾಹರಣವಾಗಿದೆ.

ಭಾವಸಂಧಿಯನ್ನು ಈಗ ಉದಾಹರಿಸುತ್ತಾನೆ. "ಕಣ್ಣುಗಳೆರಡಕ್ಕೂ ಹೆಚ್ಚು ತೃಪ್ತಿಯನ್ನುಂಟುಮಾಡುತ್ತಲೂ, ಮನಸ್ಸಿನಲ್ಲಿ ಭಾವಿಸಿದ್ದರೂ ದೊರೆಯದೆಯೂ ಇರುವ ಸುಂದರಿಯ ಈ ರೂಪವು ನನ್ನ ಹೃದಯವನ್ನು ಸಂತೋಷಗೊಳಿಸುತ್ತದೆ. ಅದನ್ನು ಹೊಂದಲಿಕ್ಕೆ ಆಗದೇ ಇರುವುದರಿಂದ ಅದು ನನಗೆ ಸಂತಾಪಗೊಳಿಸುತ್ತಲೂ ಇದೆ." ಇಲ್ಲಿ ಹರ್ಷವಿಷಾದಗಳೆರಡೂ ಹೇಳುವವನ ಮನಸ್ಸಿನಲ್ಲಿ ಸಮಾನವಾಗಿ ನೆಲಸಿದ್ದರಿಂದ ಇದು ಭಾವಸಂಧಿಗೆ ಉದಾಹರಣವೆನಿಸಿದೆ.

ಭಾವಶಬಲತೆಯನ್ನು ಉದಾಹರಿಸುತ್ತಾನೆ. ವಿಕ್ರಮೋರ್ವಶೀಯದಲ್ಲಿ ಉರ್ವಶಿಯ ವಿರಹದಿಂದ ಉನ್ಮತ್ತನಾಗಿದ್ದ ಪುರೂರವನು ಹೇಳುವ ಮಾತಿದು. "ಈ ಆತ್ಮಹತ್ಯವೆಂಬ ಅಕಾರ್ಯವೆಲ್ಲಿ? ಚಂದ್ರನ ನಿರ್ಮಲವಾದ ಈ ವಂಶವೆಲ್ಲಿ ? ಪೂರ್ತಿ ಶುದ್ಧವಾದ ಚಂದ್ರನ ವಂಶದಲ್ಲಿ ಹುಟ್ಟಿರುವ ನನಗೆ ಈ ಆತ್ಮಹತ್ಯವೆಂಬುದು ಹೊಂದುತ್ತದೆಯೇ ? ಮತ್ತೆ ಉರ್ವಶಿಯು ಎಲ್ಲಿಯಾದರೂ ಕಾಣಬಹುದು. (ಇದರಿಂದ ಪುರೂರವನ ಔತ್ಸುಕ್ಯವು ವ್ಯಕ್ತವಾಗುತ್ತದೆ) ನನ್ನಲ್ಲಿರುವ ದೋಷಗಳನ್ನು ಪರಿಹರಿಸಿಕೊಳ್ಳಲು ನನಗೆ ಶಾಸ್ತ್ರಜ್ಞಾನವೂ ಇದೆ. ಮಾಡಬಾರದ ಈ ಅಕಾರ್ಯವನ್ನು ಎಂದಿಗೂ ಮಾಡಬಾರದೆಂಬ ಬುದ್ಧಿಯಿದೆ. ಕೋಪಕಾಲದಲ್ಲೂ ಊರ್ವಶಿಯ ಮುಖವು

ಸುಂದರನೇ ಆಗಿರುವುದು. (ಇಲ್ಲಿ ಸ್ಮೃತಿಭಾವವು ತೋರುವುದು) ಪುಣ್ಯಾತ್ಮರಾದ ಧೀರರು ನನ್ನ ಅಕಾರ್ಯದ ಬಗ್ಗೆ ಏನು ಹೇಳಿಯಾರು ? ಇಲ್ಲಿ (ಅವನಿಗೆ ತನ್ನ ಬಗ್ಗೆ ಉಂಟಾದ ಶಂಕೆ ತೋರುವುದು.) ಆದರೆ ಆಕೆ ಸ್ವಪ್ನದಲ್ಲೂ ನನಗೆ ಹೊಂದಲರ್ಹಳಲ್ಲ. (ಇಲ್ಲಿ ದೈನ್ಯವು ತೋರುವುದು) ಆದ್ದರಿಂದ ಎಲೈ ಮನಸ್ಸೇ, ಹೇಗಾದರೂ ಧೈರ್ಯವನ್ನು ಹೊಂದು. (ಇಲ್ಲಿ ಧೃತಿಭಾವವು ವ್ಯಕ್ತವಾಗುತ್ತದೆ) ಯಾವ ಧನ್ಯನು ಆಕೆಯ ತುಟಿಯ ಅಮೃತವನ್ನು ಕುಡಿಯುವನೋ! (ಇಲ್ಲಿ ಅವನಿಗೆ ಆಕೆಯ ಬಗ್ಗೆ ಇದ್ದ ಚಿಂತಾಭಾವವು ವ್ಯಕ್ತವಾಗುತ್ತದೆ.) ಇಲ್ಲಿ ವಿತರ್ಕ, ಔತ್ಸುಕ್ಯ, ಮತಿಸ್ಮರಣ, ಶಂಕೆ, ಧೈನ್ಯ ಧೃತಿ,ಚಿಂತೆ, ಇಷ್ಟು ಭಾವಗಳು ಸೇರಿರುವುದರಿಂದ ಇದು ಭಾವಶಬಲತೆಗೆ ಉದಾಹರಣವಾಗಿದೆ. ಇಲ್ಲಿ ಭಾವಗಳು ಒಂದಾದಮೇಲೆ ಒಂದರಂತೆ ಹುಟ್ಟಿ ಸೇರಿಕೊಂಡಿರುವುದರಿಂದ ಇದರಲ್ಲಿ ಒಂದು ಬಗೆಯ ವೈಚಿತ್ರ್ಯವಿದೆ.

## ಚತುರ್ಥಃ ಪರಿಚ್ಛೇದಃ

ಅಥ ಕಾವ್ಯಭೇದಮಾಹ—

ಕಾವ್ಯಂ ಧ್ವನಿರ್ಗುಣೀಭೂತವ್ಯಂಗ್ಯಶ್ಚೇತಿ ದ್ವಿಧಾ ಮತಮ್ ।
ತತ್ರ—ವಾಚ್ಯಾತಿಶಾಯಿನಿ ವ್ಯಂಗ್ಯೇ ಧ್ವನಿಸ್ತತ್ ಕಾವ್ಯಮುತ್ತಮಮ್ ॥

ವಾಚ್ಯಾದಧಿಕಚಮತ್ಕಾರಿಣಿ ವ್ಯಂಗ್ಯಾರ್ಥೇ ಧ್ವನ್ಯತೇ ಅಸ್ಮಿನ್ನಿತಿ ವ್ಯುತ್ಪತ್ತ್ಯಾ ಧ್ವನಿರ್ನಾಮೋತ್ತಮಂ ಕಾವ್ಯಮ್.

ಭೇದೌ ಧ್ವನೇರಪಿ ದ್ವಾವುದೀರಿತೌ ಲಕ್ಷಣಾಭಿಧಾಮೂಲೌ ।
ಅವಿವಕ್ಷಿತವಾಚ್ಯೋಽನ್ಯೋ ವಿವಕ್ಷಿತಾನ್ಯಪರವಾಚ್ಯಶ್ಚ ।

ಅತ್ರ ಅವಿವಕ್ಷಿತವಾಚ್ಯೋ ನಾಮ ಲಕ್ಷಣಾಮೂಲೋ ಧ್ವನಿಃ ಲಕ್ಷಣಾಮೂಲತಾದೇವಾತ್ರ ವಾಚ್ಯಮವಿವಕ್ಷಿತಂ ಬಾಧಿತಸ್ವರೂಪವಮ್. ವಿವಕ್ಷಿತಾನ್ಯಪರವಾಚ್ಯಸ್ತ್ವಭಿಧಾಮೂಲಃ. ಅತ ಏವಾತ್ರ ವಾಚ್ಯಂ ವಿವಕ್ಷಿತಮ್. ಅನ್ಯಪರಂ ವ್ಯಂಗ್ಯನಿಷ್ಠಮ್. ಅತ್ರ ಹಿ ವಾಚ್ಯೋಽರ್ಥಃ ಸ್ವರೂಪಂ ಪ್ರಕಾಶಯನ್ನೇವ ವ್ಯಂಗ್ಯಾರ್ಥಸ್ಯ ಪ್ರಕಾಶಕಃ ಯಥಾ ಪ್ರದೀಪೋಘಟಸ್ಯ. ಅಭಿಧಾಮೂಲಸ್ಯ ಬಹುವಿಷಯತಯಾ ಪಶ್ಚಾನ್ನಿರ್ದೇಶಃ. ಅವಿವಕ್ಷಿತವಾಚ್ಯಸ್ಯ ಭೇದಾವಾಹ—

ಅರ್ಥಾಂತರಂ ಸಂಕ್ರಮಿತೇ ವಾಚ್ಯೇಽತ್ಯಂತಂ ತಿರಸ್ಕೃತೇ ।
ಅವಿವಾಕ್ಷಿತವಾಚ್ಯೋಽಪಿ ಧ್ವನಿರ್ದ್ವೈವಿಧ್ಯಮೃಚ್ಛತಿ ॥

ಅವಿವಕ್ಷಿತವಾಚ್ಯೋ ನಾಮ ಧ್ವನಿಃ ಅರ್ಥಾಂತರಸಂಕ್ರಮಿವಾಚ್ಯಃ ಅತ್ಯಂತತಿರಸ್ಕೃತವಾಚ್ಯಶ್ಚೇತಿ ದ್ವಿವಿಧಃ. ಯತ್ರ ಸ್ವಯಮನುಪಯುಜ್ಯಮಾನೋಮುಖ್ಯೋಽರ್ಥಃ ಸ್ವವಿಶೇಷರೂಪೇಽರ್ಥಾಂತರೇ ಪರಿಣಮತಿ ತತ್ರ ಮುಖ್ಯಾರ್ಥಸ್ಯ ಸ್ವವಿಶೇಷರೂಪಾರ್ಥಾಂತರಸಂಕ್ರಮಿತತ್ವಾದರ್ಥಾಂತರಸಂಕ್ರಮಿತವಾಚ್ಯತ್ವಮ್ ॥

ಕದಲೀ ಕದಳೀ, ಕರಭಃ ಕರಭಃ, ಕರಿರಾಜಕರಃ ಕರಿರಾಜಕರಃ।
ಭುವನತ್ರಿತಯೇಽಪಿ ಬಿಭರ್ತಿ ತುಲಾಮಿದಮೂರುಯುಗಂ ನ ಚಮೂರುದೃಶಃ॥

ಕಾವ್ಯಲಕ್ಷಣದಲ್ಲಿರುವ ವಾಕ್ಯ-ರಸ ಇವುಗಳ ಸ್ವರೂಪವನ್ನು ತಿಳಿಸಿಯಾದಮೇಲೆ ಕಾವ್ಯವು ಎಷ್ಟು ಬಗೆಯೆಂಬುದನ್ನು ತಿಳಿಸುತ್ತಾನೆ. ಧ್ವನಿ ಮತ್ತು ಗುಣೀಭೂತ ವ್ಯಂಗ್ಯವೆಂದು ಕಾವ್ಯವು ಎರಡು ಬಗೆಯಾಗಿದೆ. ಅವುಗಳಲ್ಲಿ ಧ್ವನಿ ಎಂಬುದೇ ಉತ್ತಮ ಕಾವ್ಯವೆನಿಸಿದೆ. ವಾಚ್ಯಾರ್ಥಕ್ಕಿಂತಲೂ ಹೆಚ್ಚು ಚಮತ್ಕಾರವನ್ನುಂಟುಮಾಡುವ ವ್ಯಂಗ್ಯಾರ್ಥವನ್ನು ಪ್ರಕಾಶಪಡಿಸುವಂತಹ ಕಾವ್ಯವು ಧ್ವನಿ ಎನಿಸುತ್ತದೆ. ವಾಚ್ಯಕ್ಕಿಂತಲೂ ಸ್ವಾರಸ್ಯವಾದ ವ್ಯಂಗ್ಯಾರ್ಥವು ವ್ಯಂಜನಾವೃತ್ತಿಯಿಂದ ಎಲ್ಲಿ ಪ್ರಕಾಶವಾಗುವುದೋ ಅದು ಧ್ವನಿಕಾವ್ಯವೆನಿಸುವುದು. ಈ ಧ್ವನಿಯು ಲಕ್ಷಣಾಮೂಲಧ್ವನಿ ಅಭಿಧಾಮೂಲ ಧ್ವನಿಯೆಂದು ಎರಡು ಬಗೆಯಾಗಿದೆ. ಇವಕ್ಕೆ ಅವಿವಕ್ಷಿತವಾಚ್ಯ ಮತ್ತು ವಿವಕ್ಷಿತಾನ್ಯ ಪರವಾಚ್ಯವೆಂದು ಬೇರೆ ಎರಡು ಹೆಸರುಗಳಿವೆ. ಲಕ್ಷಣೆಯನ್ನು ಅವಲಂಬಿಸಿದ ಧ್ವನಿಯಲ್ಲಿ ವಾಚ್ಯಾರ್ಥವು ವಿವಕ್ಷಿತವಾಗಿರುವುದಿಲ್ಲ. ಅದೇ ಬಾಧಿತವಾಗಿದ್ದು ಬೇರೊಂದು ಲಕ್ಷ್ಯಾರ್ಥವು ತೋರಿ ಅದರಿಂದ ವ್ಯಂಗ್ಯಾರ್ಥವು ಪ್ರಕಾಶವಾಗುವುದು. ಅಭಿಧೆಯನ್ನು ಅವಲಂಬಿಸಿದ ಧ್ವನಿಯಲ್ಲಿ ವಾಚ್ಯಾರ್ಥವಿದ್ದು ಅದು ಅನ್ಯಪರ ಅಂದರೆ ವ್ಯಂಗ್ಯಾರ್ಥವನ್ನು ತಿಳಿಸುವಂತಹದಾಗಿರುತ್ತದೆ. ಹೀಗೆ ಇಲ್ಲಿ ಎರಡು ಮುಖ್ಯಭೇದಗಳಾಗುತ್ತವೆ. ಅವಿವಕ್ಷಿತವಾಚ್ಯಧ್ವನಿಯಲ್ಲಿ ವಾಚ್ಯಾರ್ಥವು ಬಾಧಿತವಾಗಿದ್ದು ಬೇರೊಂದು ಅರ್ಥವು ತೋರುತ್ತದೆ. ವಿವಕ್ಷಿತಾನ್ಯಪರವಾಚ್ಯದಲ್ಲಿ ವಾಚ್ಯಾರ್ಥವು ವಿವಕ್ಷಿತವಾಗಿದ್ದು ವ್ಯಂಗ್ಯನಿಷ್ಠವಾಗಿರುತ್ತದೆ. ಇಲ್ಲಿ ವಾಚ್ಯಾರ್ಥವು ತನ್ನನ್ನು ತಿಳಿಯಪಡಿಸುತ್ತಲೇ ವ್ಯಂಗ್ಯವನ್ನು ಪ್ರಕಾಶಪಡಿಸುತ್ತದೆ. ದೀಪವು ತನ್ನನ್ನು ಪ್ರಕಾಶಪಡಿಸುತ್ತಲೇ ಘಟವನ್ನೂ ಪ್ರಕಾಶಪಡಿಸುವಂತೆ ಅಭಿಧಾಮೂಲಧ್ವನಿಯು ತನ್ನನ್ನೂ ವ್ಯಂಗ್ಯಾರ್ಥವನ್ನೂ ಪ್ರಕಾಶಗೊಳಿಸುತ್ತದೆ. ಇದಕ್ಕೆ ಬಹಳ ವ್ಯಾಪ್ತಿ ಇರುವುದರಿಂದ ಇವನ್ನು ಕೊನೆಗೆ ತಿಳಿಸಿ ಅವಿವಕ್ಷಿತವಾಚ್ಯವನ್ನು ಮೊದಲು ತಿಳಿಸುತ್ತಾನೆ.

ಇದರಲ್ಲಿ ಅರ್ಥಾಂತರಸಂಕ್ರಮಿತವಾಚ್ಯ ಅತ್ಯಂತತಿರಸ್ಕೃತವಾಚ್ಯ ಎಂದು ಎರಡು ಬಗೆಗಳಿವೆ. ಎಲ್ಲಿ ಮುಖ್ಯಾರ್ಥವು ತಾನಾಗಿಯೇ ಉಪಯೋಗಕ್ಕೆ ಬಾರದಂತಿದ್ದು ತನ್ನಲ್ಲಿಯೇ ಒಂದು ಬಗೆ ಎನಿಸಿದ ಬೇರೊಂದು ಅರ್ಥದಲ್ಲಿ ಕೊನೆಗಾಣುವುದೋ ಅಲ್ಲಿ ಆ ಬಗೆಯ ಸಂಘಟನೆಯು ಅರ್ಥಾಂತರಸಂಕ್ರಮಿತವಾಚ್ಯಧ್ವನಿ ಎನಿಸುವುದು. ಮುಖ್ಯಾರ್ಥವು ತನ್ನ ವಿಶೇಷವೆನಿಸಿದ ಅರ್ಥಾಂತರದಲ್ಲಿ ಸಂಕ್ರಮಿಸುವುದರಿಂದ ಈ ಬಗೆಯ ಧ್ವನಿಗೆ ಅರ್ಥಾಂತರಸಂಕ್ರಮಿತವಾಚ್ಯವೆಂಬ ಹೆಸರು ಅನ್ವರ್ಥವೆನಿಸಿದೆ. ಇದನ್ನು ಉದಾಹರಿಸುತ್ತಾನೆ. ಒಬ್ಬ ಸುಂದರಿಯನ್ನು ನೋಡಿ ಒಬ್ಬ ರಸಿಕನು ಹೇಳುತ್ತಾನೆ. "ಬಾಳೆಯ ಗಿಡವು ಹೆಚ್ಚು ಶೈತ್ಯವುಳ್ಳದ್ದರಿಂದ ಬಾಳೆಯ ಗಿಡವೇ ಆಗಿದೆ. ಆದ್ದರಿಂದ ಅದು ಹೆಚ್ಚು ಶೀತವೂ ಹೆಚ್ಚು ಉಷ್ಣವೂ ಇಲ್ಲದ ತರುಣಿಯ ತೊಡೆಗೆ ಹೋಲಿಕೆಯಾಗಲಾರದು. ಮಣಿಕಟ್ಟು ಬಹಳ ಚಿಕ್ಕದಾದ್ದರಿಂದ

ಮಣಿಕಟ್ಟೇ ಆಗಿದೆ. ಆದ್ದರಿಂದ ಅದು ಎಂದಿಗೂ ಈಕೆಯ ತೊಡೆಗೆ ಹೋಲಿಕೆಯಾಗಲಾರದು. ಆನೆಯ ಸೊಂಡಿಲು ಅತ್ಯಂತ ಕಠಿನವಾದ್ದರಿಂದ ಕೇವಲ ಸೊಂಡಿಲೇ ಆಗಿದೆ. ಆದ್ದರಿಂದ ಅದೂ ಸಹ ಅತ್ಯಂತ ಕೋಮಲವಾದ ಅವಳ ತೊಡೆಗೆ ಹೋಲಿಕೆಯಾಗಲಾರದು. ಹೀಗೆ ಜಿಂಕೆಯಂತೆ ಕಣ್ಣುಗಳಿರುವ ಈ ನಾಯಿಕೆಯ ಈ ತೊಡೆಗಳೆರಡು ಮೂರು ಲೋಕಗಳಲ್ಲೂ ಯಾವುದರ ಸಾದೃಶ್ಯವನ್ನೂ ಹೊಂದಿಲ್ಲ! ಈ ಮೂರು ವಸ್ತುಗಳನ್ನು ಬಿಟ್ಟರೆ ಬೇರೆ ಉಪಮಾನವೇ ಎಲ್ಲಿಯೂ ಇಲ್ಲ. ಈ ಮೂರರ ಅವಸ್ಥೆಯೂ ಹೇಗಾಯಿತು ? ಇನ್ನು ಉಪಮಾನವೆಲ್ಲಿದ್ದೀತು ? '' ಇಲ್ಲಿ ಎರಡನೆಯಸಾರಿ ಉಪಯೋಗಿಸಿರುವ ಕದಳೀ ಕರಭ ಕರಿರಾಜಕರ ಈ ಮೂರು ಶಬ್ದಗಳು ಬಾಳೆಗಿಡ, ಮಣಿಕಟ್ಟು,ಆನೆಯಸೊಂಡಲು ಎಂಬ ಸಾಮಾನ್ಯವಾದ ಮುಖ್ಯಾರ್ಥದಲ್ಲಿ ಬಾಧಿತವಾಗಿ ಜಾಡ್ಯ ಮೊದಲಾದ ವೈಶಿಷ್ಟ್ಯದಿಂದ ಕೂಡಿದ ಬಾಳೆಗಿಡ, ಮಣಿಕಟ್ಟು ಆನೆಯಸೊಂಡಲು ಎಂಬ ಅರ್ಥವನ್ನು ಬೋಧಿಸುತ್ತಿವೆ. ವಾಚ್ಯಾರ್ಥವು ಬಾಧಿತವಾಗಿ ಶೈತ್ಯವಿಶಿಷ್ಟವಾದ ಬಾಳೆಗಿಡ, ಬಹಳ ಚಿಕ್ಕದಾದ ಮಣಿಕಟ್ಟು,ಅತ್ಯಂತ ಕಠಿಣವಾದ ಸೊಂಡಲು ಈ ಬಗೆಯ ಅರ್ಥವನ್ನು ಬೋಧಿಸುತ್ತವೆ. ಇಲ್ಲಿ ತೋರುವ ಹೆಚ್ಚು ಶೈತ್ಯ–ಖರ್ವತ್ವ–ವಿಶೇಷ ಕಾಠಿಣ್ಯವೆಂಬುದೇ ವ್ಯಂಗ್ಯಾರ್ಥವೆನಿಸಿದೆ.

ಯತ್ರ ಪುನಃ ಸ್ವಾರ್ಥಂ ಸರ್ವತ್ರ ಪರಿತ್ಯಜನ್ ಅರ್ಥಾಂತರೇ ಪರಿಣಮತಿ ಕಶ್ಚನ ಶಬ್ದಃ ತತ್ರ ಮುಖ್ಯಾರ್ಥಸ್ಯ ಅತ್ಯಂತತಿರಸ್ಕೃತತ್ವಾತ್ ಅತ್ಯಂತತಿರಸ್ಕೃತವಾಚ್ಯತ್ವಮ್. ಯಥಾ.

ನಿಶ್ವಾಸಾಂಧ ಇವಾದರ್ಶಶ್ಚಂದ್ರಮಾ ನ ಪ್ರಕಾಶತೇ.

ಅತ್ರ ಅಂಧಶಬ್ದೋ ಮುಖ್ಯಾರ್ಥೇ ಬಾಧಿತಃ ಅಪ್ರಕಾಶರೂಪಮರ್ಥಂ ಬೋಧಯತಿ ಅಪ್ರಕಾಶಾತಿಶಯಶ್ಚ ವ್ಯಂಗ್ಯಃ. ಅಂಧತ್ವಾಽಪ್ರಕಾಶತ್ವಯೋಃ ಸಾಮಾನ್ಯವಿಶೇಷಭಾವಾಭಾವಾತ್ ನ ಅರ್ಥಾಂತರಸಂಕ್ರಮಿತವಾಚ್ಯತ್ವಮ್. ಯಥಾ.

ಭ್ರಮ ಧಾರ್ಮಿಕ ವಿಶ್ವಸ್ತಃ ಸ ಶ್ವಾ ಅದ್ಯ ಮಾರಿತಸ್ತೇನ।
ಗೋದಾವರೀಕಚ್ಛಕುಂಜವಾಸಿನಾ ದೃಪ್ತಸಿಂಹೇನ ॥

ತ್ರಅಭ್ರಮ ಧಾರ್ಮಿಕ ಇತ್ಯತೋ ಭ್ರಮಣಸ್ಯ ವಿಧಿಃ ಪ್ರಕೃತೇ ಅನುಪಯುಜ್ಯಮಾನತಯಾ ಭ್ರಮಣನಿಷೇಧೇ ಪರ್ಯವಸ್ಯತೀತಿ ವಿಪರೀತಲಕ್ಷಣಾಶಂಕಾ ನ ಕಾರ್ಯಾ ಯತ್ರ ಖಲು ವಿಧಿನಿಷೇಧೌ ಉತ್ಪದ್ಯಮಾನಾವೇವ ನಿಷೇಧವಿಧ್ಯೋಃ ಪರ್ಯವಸ್ಯತಃ ತತ್ರೈವ ತದವಸರಃ ; ಯತ್ರ ಪುನಃ ಪ್ರಕರಣಾದಿಪರ್ಯಾಲೋಚನೇನ ವಿಧಿನಿಷೇಧಯೋಃ ನಿಷೇಧವಿಧೀ ಅವಗಮ್ಯೇತೇ ತತ್ರ ಧ್ವನಿರೇವ. ತದುಕ್ತಮ್.

ಕ್ವಚಿದ್ಬಾಧ್ಯತಯಾ ಖ್ಯಾತಿಃ ಕ್ವಚಿತ್ ಖ್ಯಾತಸ್ಯ ಬಾಧನಮ್ ।
ಪೂರ್ವತ್ರ ಲಕ್ಷಣೈವ ಸ್ಯಾತ್ ಉತ್ತರತ್ರಾಭಿಧೈವ ತು ॥

ಅತ್ರಾದ್ಯೇ ಮುಖ್ಯಾರ್ಥಸ್ಯ ಅರ್ಥಾಂತರೇ ಸಂಕ್ರಮಣಂ ಪ್ರವೇಶಃ ನ ತು ತಿರೋ

ಭಾವಃ. ಅತ ಏವಾತ್ರ ಅಜಹತ್ಸ್ವಾರ್ಥಾ ಲಕ್ಷಣಾ ದ್ವಿತೀಯೇ ತು ಸ್ವಾರ್ಥಸ್ಯ ಅತ್ಯಂತಂ ತಿರಸ್ಕೃತತ್ವಾತ್ ಜಹತ್ಸ್ವಾರ್ಥಾ.

ಎಲ್ಲಿ ಒಂದು ಶಬ್ದವು ಸ್ವಾರ್ಥವನ್ನು ಪೂರ್ತಿಯಾಗಿ ತೊರೆದು ಬೇರೆ ಅರ್ಥದಲ್ಲಿಯೇ ಪರಿಣಮಿಸುವುದೋ ಅಲ್ಲಿ ಮುಖ್ಯಾರ್ಥವು ಅತ್ಯಂತವಾಗಿ ತಿರಸ್ಕೃತವಾಗುವುದರಿಂದ ಆ ಬಗೆಯ ಧ್ವನಿಯು ಅತ್ಯಂತತಿರಸ್ಕೃತವಾಚ್ಯವೆನಿಸುವುದು. "ನಿಟ್ಟುಸಿರಿನ ತುಂತುರು ಬಿಮ್ಮುದರಿಂದ ಕೊಳೆಯಾದ ಕನ್ನಡಿಯಂತೆ ಚಂದ್ರನು ಪ್ರಕಾಶಿಸುವುದಿಲ್ಲ'' ಇಲ್ಲಿ ಅಂಧ ಶಬ್ದವು ಕುರುಡ ಎಂಬ ಮುಖ್ಯಾರ್ಥವನ್ನು ತಿಳಿಸುವುದಿಲ್ಲ. ಕನ್ನಡಿಯು ಕುರುಡಾಯಿತು ಎಂದು ಹೇಳಲಿಕ್ಕೆ ಆಗುವುದಿಲ್ಲವಾದ್ದರಿಂದ ಈ ಅರ್ಥವು ಬಾಧಿತವಾಯಿತು. ಆದ್ದರಿಂದ ಅಂಧಶಬ್ದವು ಅಪ್ರಕಾಶ-ವಸ್ತುಗಳನ್ನು ಪ್ರಕಾಶಪಡಿಸುವುದಿಲ್ಲ ಎಂಬ ಅರ್ಥವನ್ನು ತಿಳಿಸುತ್ತದೆ. ಇಲ್ಲಿ ಅಪ್ರಕಾಶಾತಿಶಯ-ಕೊಳೆಯಾಗಿರುವುದರಿಂದ ಕನ್ನಡಿಯು ಎದುರಿಗಿರುವ ವಸ್ತುಗಳನ್ನು ಸ್ವಲ್ಪವೂ ಪ್ರಕಾಶಪಡಿಸುತ್ತಿಲ್ಲ ಎಂಬ ಅರ್ಥವೇ ಇಲ್ಲಿ ವ್ಯಂಗ್ಯವೆನಿಸಿದೆ. ಇಲ್ಲಿ ಅಂಧತ್ವ-ಅಪ್ರಕಾಶತ್ವ ಎಂಬ ಎರಡು ಅರ್ಥಗಳೂ ಬೇರೆಬೇರೆಯೇ ಆಗಿರುವುದರಿಂದ ಒಂದು ಅರ್ಥವು ಬೇರೊಂದು ಅರ್ಥವಾಗಿಯೇ ಪರಿಣಮಿಸಿದೆ. ಒಂದು ಅರ್ಥವು ಸಾಮಾನ್ಯವೆನಿಸಿದ್ದು ಮತ್ತೊಂದು ಅದರಲ್ಲಿಯೇ ಒಂದು ಬಗೆ (ವಿಶೇಷ) ಎನಿಸಿದ್ದರೆ ಆಗ ಅರ್ಥಾಂತರಸಂಕ್ರಮಿತವಾಚ್ಯಧ್ವನಿಯನ್ನು ಹೇಳಲಿಕ್ಕಾಗುತ್ತಿರಲಿಲ್ಲ. ಇಲ್ಲಿ ಅಂಧತ್ವ ಅಪ್ರಕಾಶತ್ವ ಈ ಈ ಎರಡು ಅರ್ಥಗಳಲ್ಲಿ ಒಂದು ಸಾಮಾನ್ಯ, ಮತ್ತೊಂದು ವಿಶೇಷ ಎನಿಸದೆ ಎರುಡೂ ಬೇರೆಯೇ ಆಗಿವೆ. ಹೀಗೆ ಅಂಧಶಬ್ದವು ಸ್ವಾರ್ಥವನ್ನು ಪೂರ್ತಿಯಾಗಿ ತೊರೆದು ಬೇರೊಂದು ಅರ್ಥವನ್ನೇ ತಿಳಿಸುವುದರಿಂದ ಇದು ಅರ್ಥಾಂತರಸಂಕ್ರಮಿತವಾಚ್ಯವೆನಿಸದೆ ಅತ್ಯಂತ ತಿರಸ್ಕೃತವೇ ಆಗಿದೆ. ಸಾಮಾನ್ಯಾರ್ಥವು ವಿಶೇಷಾರ್ಥದಲ್ಲಿ ಕೊನೆಗಾಣುವುದಾದರೆ ಅರ್ಥಾಂತರಸಂಕ್ರಮಿತವಾಚ್ಯವನ್ನೂ, ಮುಖ್ಯಾರ್ಥವನ್ನು ಪೂರ್ತಿಯಾಗಿ ತೊರೆದು ಬೇರೊಂದು ಅರ್ಥವನ್ನೇ ಪರಿಗ್ರಹಿಸುವುದಾದರೆ ಅತ್ಯಂತತಿರಸ್ಕೃತವಾಜ್ಯವನ್ನೂ ಹೇಳಬೇಕು. ಇವಕ್ಕೆ ಬೇರೆ ಉದಾಹರಣಗಳನ್ನು ಕೊಡುತ್ತಾನೆ.

"ಧಾರ್ಮಿಕನೇ, ನೀನು ಇಲ್ಲಿ ವಿಶ್ವಾಸವಾಗಿ ತಿರುಗಾಡಬಹುದು. ಇಲ್ಲಿ ನೆಲಸಿದ್ದ ಆ ನಾಯಿಯೂ ಸತ್ತು ಹೋಗಿದೆ. ಇಲ್ಲಿಯೇ ಗೋದಾವರೀನದಿಯ ದಂಡೆಯ ಪೊದರಿನಲ್ಲಿ ವಾಸಮಾಡುವ ಸಿಂಹವು ಆ ನಾಯಿಯನ್ನು ಕೊಂದುಹಾಕಿತು" ಇಲ್ಲಿ "ಭ್ರಮ ಧಾರ್ಮಿಕ'' ಎಂಬಲ್ಲಿ ಹೇಳಿರುವ "ತಿರುಗಾಡು" ಎಂಬ ವಿಧಿಯು ಪ್ರಕೃತ ಸಂದರ್ಭಕ್ಕೆ ಹೊಂದಿಕೆಯಾಗುವುದಿಲ್ಲವಾದ್ದರಿಂದ ವಿಪರೀತಲಕ್ಷಣೆಯಿಂದ "ಇಲ್ಲಿ ತಿರುಗಾಡಬೇಡ" ಎಂಬ ನಿಷೇಧದಲ್ಲಿ ಇದು ಕೊನೆಗಾಣುವುದೆಂಬ ಶಂಕೆ ಬರಬಹುದು. ಆದರೆ ಅದಕ್ಕೆ ಇಲ್ಲಿ ಅವಕಾಶವಿಲ್ಲ. ಎಲ್ಲಿ ವಿಧಿನಿಷೇಧಗಳು ಮೊದಲು ತೋರುವಾಗಲೇ ನಿಷೇಧವಿಧಿಗಳಾಗಿ ಕೊನೆಯಾಗುತ್ತವೆಯೋ ಅಲ್ಲಿ ಮಾತ್ರವೇ ವಿಪರೀತಲಕ್ಷಣೆಯು ಪ್ರವರ್ತಿಸುತ್ತದೆ. ವಿಧಿರೂಪದಲ್ಲಿರುವ ವಾಕ್ಯವನ್ನು ಕೇಳುತ್ತಿರವಾಗಲೇ ನಿಷೇಧವು

ಎಲ್ಲಿ ತೋರುವುದೋ, ನಿಷೇಧರೂಪದಲ್ಲಿರುವ ವಾಕ್ಯವನ್ನು ಕೇಳುತ್ತಿರವಾಗಲೇ ವಿಧಿಯು ಎಲ್ಲಿ ತೋರುವುದೋ ಅಲ್ಲಿಯೇ ವಿಪರೀತಲಕ್ಷಣೆಯನ್ನು ಅವಲಂಬಿಸಿದ ಅತ್ಯಂತ ತಿರಸ್ಕೃತವಾಚ್ಯಧ್ವನಿಯು ಸಂಭವಿಸುತ್ತದೆ. ಗಚ್ಛ, ಗಚ್ಛಸಿ ಚೇತ್ಕಾಂತ '' ಎಂಬಲ್ಲಿ ಗಚ್ಛ ಎಂದು ವಿಧಿಯು ತೋರುವ ಕಾಲದಲ್ಲಿ ನ ಗಚ್ಛ (ಹೋಗಬೇಡ) ಎಂಬ ನೀಷೇಧವು ತೋರುವುದರಿಂದ ಅಲ್ಲಿ ಮಾತ್ರ ವಿಪರೀತಲಕ್ಷಣೆಗೆ ಅವಕಾಶವಿರುತ್ತದೆ. ಎಲ್ಲಿ ಪ್ರಕರಣವನ್ನು ಪರ್ಯಾಲೋಚಿಸುವುದರಿಂದ ವಿಧಿಯು ನಿಷೇಧರೂಪವಾಗಿಯೂ, ನಿಷೇಧವು ವಿಧಿರೂಪವಾಗಿಯೂ ತಿಳಿದುಬರುವುದೋ ಅಲ್ಲಿ ವಿಪರೀತಲಕ್ಷಣೆಯು ಸಂಭವಿಸುವಂತಿಲ್ಲ. ವಿಧಿವಾಕ್ಯವನ್ನು ಕೇಳಿದ್ದರಿಂದ ನಿಷೇಧವೇ ಎಲ್ಲಿ ತಿಳಿದು ಬರುವುದೋ ಅಲ್ಲಿ ಅಭಿಧಾಮೂಲಕವಸ್ತುಧ್ವನಿಯನ್ನೇ ಹೇಳಬೇಕು. ಭ್ರಮ ಎಂಬ ವಿಧಿಯನ್ನು ಕೇಳಿದ್ದರಿಂದ ಪ್ರಕರಣಕ್ಕೆ ಅನುಗುಣವಾಗಿ 'ನ ಭ್ರಮ' ಇಲ್ಲಿ ತಿರುಗಾಡಬೇಡ ಎಂದು ನಿಷೇಧರೂಪದಿಂದ ವ್ಯಂಗ್ಯಾರ್ಥವು ತೋರುವುದರಿಂದ ಇದು ಅಭಿಧಾಮೂಲಧ್ವನಿಯೇ ಆಗುವುದು. ಇಲ್ಲಿ ಭ್ರಮ ಎಂಬ ವಿಧ್ಯರ್ಥವು 'ನ ಭ್ರಮ' ಎಂಬ ವ್ಯಂಗ್ಯಾರ್ಥದಲ್ಲಿಯೇ ಅನ್ವಯಿಸುತ್ತದೆ. "ಅಲ್ಲಿದ್ದ ನಾಯಿಯನ್ನು ಇದೇ ಗೋದಾವರೀನದಿಯ ದಂಡೆಯ ಪೊದರಿನಲ್ಲಿರುವ ಸಿಂಹವು ತಿಂದು ಹಾಕಿದ್ದರಿಂದ ನೀನು ವಿಶ್ವಾಸದಿಂದ ಇಲ್ಲಿ ತಿರುಗಾಡು'' ಎಂಬ ವಿಧಿಯನ್ನು ಕೇಳಿದೊಡನೆಯೇ "ನಾಯಿಗೇ ಹೆದರುತ್ತಿದ್ದ ನೀನು ಈಗ ಸಿಂಹಕ್ಕೆ ತುಂಬ ಹೆದರುವವನಾದ್ದರಿಂದಲೂ, ಇಲ್ಲಿ ನಾಯಿಗೆ ಬದಲು ಸಿಂಹದ ಭಯವಿರುವುದರಿಂದಲೂ ನೀನು ಇಲ್ಲಿ ತಿರುಗಾಡಬೇಡ." ಎಂಬ ನಿಷೇಧವೇ ತಿಳಿದುಬರುತ್ತದೆ. "ಕೆಲವು ಕಡೆಗಳಲ್ಲಿ ಶಬ್ದಗಳನ್ನು ಕೇಳಿದಮಾತ್ರದಿಂದಲೇ ಅನ್ವಯವು ಹೊಂದುವುದಿಲ್ಲವೆಂದು ತೋರುತ್ತದೆ. ಕೆಲವು ಕಡೆಗಳಲ್ಲಿ ಅನ್ವಯವುಳ್ಳದ್ದಾಗಿ ಮೊದಲೇ ತಿಳಿದುಬರುವ ಶಬ್ದಕ್ಕೆ ಪ್ರಕರಣಾನುಗುಣವಾಗಿ ಬಾಧವುಂಟಾಗುವುದು. ಇವೆರಡರೊಳಗೆ ಶಬ್ದವನ್ನು ಕೇಳಿದೊಡನೆಯೇ ಅನ್ವಯವು ಹೊಂದದೇ ಇರುವಕಡೆ ಲಕ್ಷಣಾಮೂಲಧ್ವನಿಯನ್ನೇ ಹೇಳಬೇಕು. ಪರಸ್ಪರ ಅನ್ವಯದಿಂದ ಬೋಧವಾದಮೇಲೆ ಬಾಧವುಂಟಾಗುವ ಕಡೆಗಳಲ್ಲಿ ಅಭಿಧಾಮೂಲಧ್ವನಿಯನ್ನು ಹೇಳಬೇಕು. ಅಭಿಧೆಯಿಂದಲೇ ಅನ್ವಯವಾಗುವಾಗ ಲಕ್ಷಣೆಯನ್ನಾಶ್ರಯಿಸುವ ಆವಶ್ಯಕತೆ ಇಲ್ಲವಾದ್ದರಿಂದ ಅಂತಹಕಡೆಗಳಲ್ಲಿ ಅಭಿಧಾಮೂಲ ವ್ಯಂಜನೆಯಿಂದ ತಿಳಿದುಬರುವ ಧ್ವನಿಯೇ ಹೊಂದುತ್ತದೆ.

ಎರಡು ಬಗೆಯ ಲಕ್ಷಣಾಮೂಲಧ್ವನಿಗಳಲ್ಲಿ ಎಲ್ಲಿ ಎಷ್ಟರಮಟ್ಟಿಗೆ ಲಕ್ಷಣೆಯು ಪ್ರವರ್ತಿಸುತ್ತದೆ ಎಂಬುದನ್ನು ತಿಳಿಸುತ್ತಾನೆ. ಮೊದಲನೆಯದಾದ ಅರ್ಥಾಂತರಸಂಕ್ರಮಿತವಾಚ್ಯದಲ್ಲಿ ಕದಳೀ ಕದಳೀ ಎಂಬ ಕಡೆ ಎರಡನೆಯ ಕದಳೀಶಬ್ದದ ಸಾಮಾನ್ಯಾರ್ಥವೆನಿಸಿದ್ದ ಬಾಳೆಗಿಡ ಎಂಬ ಮುಖ್ಯಾರ್ಥವು ಶೈತ್ಯಗುಣವುಳ್ಳ ಬಾಳೆಗಿಡ ಎಂಬ ಬೇರೊಂದು ಅರ್ಥದಲ್ಲಿ ಪ್ರವೇಶಿಸುತ್ತದೆಯೇ ಹೊರತು ಪೂರ್ತಿಯಾಗಿ ತಿರಸ್ಕೃತವಾಗುವುದಿಲ್ಲ. ಆದ್ದರಿಂದಲೇ ಇಲ್ಲಿ ಅಜತ್ಸ್ವಾರ್ಥಾಲಕ್ಷಣೆಯನ್ನು ಹೇಳಲಾ

ಗಿದೆ. ಸ್ವಾರ್ಥವನ್ನು ಬಿಡದೆ ಅದನ್ನು ಸೇರಿಸಿಕೊಂಡೇ ಬೇರೊಂದು ಅರ್ಥವನ್ನು ತಿಳಿಸಲಿಕ್ಕೆ ಲಕ್ಷಣೆಯನ್ನು ಉಪಯೋಗಿಸಲಾಗಿದೆ. ಎರಡನೆಯ ಬಗೆ ಎನಿಸಿದ ಅತ್ಯಂತತಿರಸ್ಕೃತವಾಚ್ಯದಲ್ಲಿಯಾದರೋ 'ನಿಶ್ವಾಸಾಂಧಃ' ಎಂಬಲ್ಲಿ ಅಂಧಶಬ್ದಕ್ಕೆ "ನೋಡಲಿಕ್ಕಾಗದ ಕುರುಡ'' ಎಂಬ ಅರ್ಥವು ಕನ್ನಡಿಗೆ ಹೊಂದದೆ ಇದ್ದು ಅತ್ಯಂತ ತಿರಸ್ಕೃತವಾಗುವ ಪ್ರಯುಕ್ತ ಇದು ಜಹತ್ಸ್ವಾರ್ಥ ಎನಿಸಿದೆ.

ವಿವಕ್ಷಿತಾಭಿಧೇಯೋಽಪಿ ದ್ವಿಭೇದಃ ಪ್ರಥಮಂ ಮತಃ ।
ಅಸಂಲಕ್ಷ್ಯಕ್ರಮೋ ಯತ್ರ ವ್ಯಂಗ್ಯೋ ಲಕ್ಷ್ಯಕ್ರಮಸ್ತಥಾ ॥

ವಿವಕ್ಷಿತಾನ್ಯಪರವಾಚ್ಯೋಽಪಿ ಧ್ವನಿಃ ಅಸಂಲಕ್ಷ್ಯಕ್ರಮವ್ಯಂಗ್ಯಃ ಸಂಲಕ್ಷ್ಯಕ್ರಮವ್ಯಂಗ್ಯಶ್ಚೇತಿ ದ್ವಿವಿಧಃ.

ತತ್ರಾದ್ಯೋ ರಸಭಾವಾದಿರೇಕ ಏವಾತ್ರ ಗಣ್ಯತೇ ।
ಏಕೋಽಪಿ ಭೇದೋಽನಂತತ್ವಾತ್ ಸಂಖ್ಯೇಯಸ್ತಸ್ಯ ನೈವ ಯತ್ ॥

ಉಕ್ತಸ್ವರೂಪೋ ರಸಭಾವಾದಿಃ ಅಸಂಲಕ್ಷ್ಯಕ್ರಮವ್ಯಂಗ್ಯಃ ಅತ್ರ ವ್ಯಂಗ್ಯಪ್ರತೀತೇರ್ವಿಭಾವಾದಿಪ್ರತೀತಿಕಾರಣತ್ವಾತ್ ಕ್ರಮೋಽವಶ್ಯಮಸ್ತಿ; ಕಿಂತು ಉತ್ಪಲಪತ್ರಶತವ್ಯತಿಭೇದವತ್ ಲಾಘವಾತ್ ನ ಸಂಲಕ್ಷ್ಯತೇ. ಏಷು ಚ ರಸಾದಿಷು ಏಕಸ್ಯಾಪಿ ಭೇದಸ್ಯ ಅನಂತತ್ವಾತ್ ಸಂಖ್ಯಾತುಮಶಕ್ಯತ್ವಾತ್ ಅಸಂಲಕ್ಷ್ಯಕ್ರಮವ್ಯಂಗ್ಯಧ್ವನಿರ್ನಾಮ ಕಾವ್ಯಮೇಕಭೇದಮೇವೋಕ್ತಮ್. ತಥಾಹಿ ಏಕಸ್ಯೈವ ಹಿ ಶೃಂಗಾರಸ್ಯ ಏಕೋಽಪಿ ಸಂಭೋಗರೂಪೋ ಭೇದಃ ಪರಸ್ಪರಾಲಿಂಗನಾಧರಪಾನಚುಂಬನಾದಿಭೇದಾತ್ ಪ್ರತ್ಯೇಕಂ ಚ ವಿಭಾವಾದಿವೈಚಿತ್ರ್ಯಾತ್ ಸಂಖ್ಯಾತುಮಶಕ್ಯಃ, ಕಾ ಗಣನಾತ್ರ ಸರ್ವೇಷಾಮ್.

ಶಬ್ದಾರ್ಥೋಭಯಶಕ್ತ್ಯುತ್ಥೇ ವ್ಯಂಗ್ಯೇಽನುಸ್ವಾನಸನ್ನಿಭೇ ।
ಧ್ವನಿರ್ಲಕ್ಷ್ಯಕ್ರಮವ್ಯಂಗ್ಯಸ್ತ್ರಿವಿಧಃ ಕಥಿತೋ ಬುಧೈಃ ॥

ಕ್ರಮಲಕ್ಷ್ಯತ್ವಾದೇವ ಅನುರಣನರೂಪೋ ಯೋ ವ್ಯಂಗ್ಯಸ್ತಸ್ಯ ಶಬ್ದಶಕ್ತ್ಯುದ್ಭವತ್ವೇನ ಅರ್ಥಶಕ್ತ್ಯುದ್ಭವತ್ವೇನ ಶಬ್ದಾರ್ಥಶಕ್ತ್ಯುದ್ಭವತ್ವೇನ ಚ ತ್ರೈವಿಧ್ಯಾತ್ ಸಂಲಕ್ಷ್ಯಕ್ರಮವ್ಯಂಗ್ಯನಾಮ್ನೋ ಧ್ವನೇಃ ಕಾವ್ಯಸ್ಯಾಪಿ ತ್ರೈವಿಧ್ಯಮ್.

ಲಕ್ಷಣಾಮೂಲವೆನಿಸಿದ ಅವಿವಕ್ಷಿತವಾಚ್ಯವನ್ನು ನಿರೂಪಿಸಿ ಅಭಿಧಾಮೂಲಧ್ವನಿ ಎನಿಸಿದ ವಿವಕ್ಷಿತಾನ್ಯಪರವಾಚ್ಯ ಧ್ವನಿಯನ್ನು ಈಗ ವಿವರಿಸುತ್ತಾನೆ. ವ್ಯಂಗ್ಯಾರ್ಥಕ್ಕೆ ಅನ್ವಯಿಸುವಂತೆ ತಿಳಿಸಲಿಕ್ಕೆ ಇಷ್ಟವಾದ ವಾಚ್ಯಾರ್ಥವನ್ನು ಎಲ್ಲಿ ತಿಳಿಸಿದೆಯೋ ಅಂತಹದೇ ವಿವಕ್ಷಿತಾನ್ಯಾಪರವಾಚ್ಯಧ್ವನಿ ಎನಿಸುವುದು. ಇಲ್ಲಿ ವಿವಕ್ಷಿತವಾದ ಅರ್ಥವು ಅನ್ಯಪರವಾಗಿರುವುದು. ಇದು ಮೊದಲು ಎರಡು ಭಾಗವಾಗುತ್ತದೆ. ಇದರಿಂದ ಅದು ಆಮೇಲೆ ಅನೇಕ ಬಗೆಗಳಾಗುತ್ತದೆ ಎಂಬ ಅರ್ಥವು ಸೂಚಿತವಾಯಿತು. ಅಸಂಲಕ್ಷ್ಯಕ್ರಮವ್ಯಂಗ್ಯ ಸಂಲಕ್ಷ್ಯಕ್ರಮವ್ಯಂಗ್ಯ ಇವೇ ಆ ಎರಡು ಬಗೆಗಳು. ಯಾವ ಅರ್ಥವನ್ನು ಪ್ರಕಾಶಪಡಿಸುವಾಗ ಕಾರಣ ಕಾರ್ಯ ಮೊದಲಾದವು ಹಿಂದುಮುಂದು ಇರ

ಬೇಕೆಂದು ನಿಯಮವು ಎಲ್ಲಿ ಕಾಣಬರುವುದಿಲ್ಲವೋ ಅಲ್ಲಿ ಅಸಂಲಕ್ಷ್ಯಕ್ರಮವ್ಯಂಗ್ಯಧ್ವನಿ ಯನ್ನೂ, ಎಲ್ಲಿ ಅಂತಹ ಕ್ರಮವು ಕಂಡುಬರುವುದೋ ಅಲ್ಲಿ ಸಂಲಕ್ಷ್ಯಕ್ರಮವ್ಯಂಗ್ಯಧ್ವನಿ ಯನ್ನೂ ಹೇಳಬೇಕು. ಇವುಗಳಲ್ಲಿ ಮೊದಲನೆಯ ಅಸಂಲಕ್ಷ್ಯಕ್ರಮವ್ಯಂಗ್ಯವೆಂಬುದು ಒಂದೇ ಬಗೆ ಎನಿಸಿದೆ. ರಸ, ಭಾವ, ರಸಾಭಾಸ, ಭಾವಾಭಾಸ, ಭಾವಸಂಧಿ, ಭಾವಪ್ರಶಮ, ಭಾವಶಬಲತೆ ಇವಿಷ್ಟು ಅಸಂಲಕ್ಷ್ಯಕ್ರಮವ್ಯಂಗ್ಯವೆನಿಸಿವೆ. ಇವೆಲ್ಲವನ್ನು ಒಂದೇ ಬಗೆ ಎಂದು ಇಲ್ಲಿ ಪರಿಗಣಿಸಲಾಗಿದೆ. ಇವುಗಳಲ್ಲಿ ಒಂದಾದ ಶೃಂಗಾರರಸದ ಒಂದು ಬಗ್ಗೆ ಎನಿಸಿದ ಸಂಭೋಗವೇ ಚುಂಬನ ಮೊದಲಾದ ಭೇದದಿಂದ ಅನಂತವಾಗಿರು ವುದರಿಂದ ಆ ಭೇದಗಳೆಲ್ಲವನ್ನೂ ವರ್ಣಿಸಲಿಕ್ಕೇ ಆಗುವುದಿಲ್ಲ. ಒಂದರ ಸ್ಥಿತಿಯೇ ಹೀಗಾದಮೇಲೆ ಬೇರೆ ಉಳಿದವುಗಳ ಬಗ್ಗೆ ಹೇಳುವುದೇನಿದೆ ? ರಸ ಭಾವ ಇವುಗಳ ಸ್ವರೂಪವನ್ನು ಹಿಂದೆ ತಿಳಿಸಿಯಾಗಿದೆ. ಇವನ್ನು ಇಲ್ಲಿ ಅಸಂಲಕ್ಷ್ಯಕ್ರಮವ್ಯಂಗ್ಯಧ್ವನಿ ಎಂದು ಕರೆಯಲಾಗಿದೆ. ರಸ ಭಾವ ಮೊದಲಾದವು ಯಾವಾಗಲೂ ವ್ಯಂಗ್ಯವಾಗಿಯೇ ಪ್ರಕಾಶವಾಗುತ್ತವೆ. ಈ ಬಗೆಯ ಪ್ರಕಾಶಕ್ಕೆ ವಿಭಾವ ಅನುಭಾವ ವ್ಯಭಿಚಾರಿಭಾವಗಳ ಪ್ರಕಾಶವೇ ಕಾಸಣವೆನಿಸಿದೆ. ಇಂತಹ ಕಾರಣದಿಂದ ರಸವು ಅನುಭವಗೋಚರವಾಗು ವಾಗ ಅಲ್ಲಿ ಒಂದು ಕ್ರಮವು ಅವಶ್ಯವಾಗಿ ಇರಲೇಬೇಕು. ವಿಭಾವಾದಿಗಳು ತಿಳಿದ ಮೇಲೆಯೇ ರಸದ ಅನುಭವವಾಗುವ ಪ್ರಯುಕ್ತ ಅಲ್ಲಿ ಒಂದು ಕ್ರಮವಿದ್ದೇ ಇದೆ. ಆದರೆ ಆ ಬಗೆಯ ಕಾರಣಕಾರ್ಯಗಳು ಹಿಂದುಮುಂದು ಇರುವುವೆಂಬ ಕ್ರಮವನ್ನು ಗುರ್ತಿಸಲಿಕ್ಕೆ ಆಗುವುದಿಲ್ಲ. ವಿಭಾವ ಅನುಭಾವ ವ್ಯಭಿಚಾರಿಭಾವಗಳನ್ನು ತಿಳಿದೊ ಡನೆಯೇ ಸಹೃದಯರಲ್ಲಿ ಅಡಗಿದ್ದ ಸ್ಥಾಯಿಭಾವಗಳು ರಸವಾಗಿ ಪರಿಣಮಿಸುವುದರಿಂದ ಪೌರ್ವಾಪರ್ಯಕ್ರಮವಿದ್ದರೂ ಕಾಣುಬರುವುದಿಲ್ಲ. ಕಮಲದ ದಳಗಳನೇಕವನ್ನು ಒಂದೇ ಕಾಲದಲ್ಲಿ ಒಂದೇ ಸೂಜಿಯಿಂದ ಚುಚ್ಚಿದರೆ ಆ ಸೂಜಿಯು ಯಾವುದನ್ನು ಮೊದಲು ಚುಚ್ಚಿತು, ಯಾವುದನ್ನು ಅನಂತರ ಚುಚ್ಚಿತು ಎಂಬ ಭೇದವೇ ಕಂಡುಬರುವುದಿಲ್ಲ. ಹಾಗೆ ವಿಭಾವಾದಿಗಳನ್ನು ಅನುಭವಿಸಿದೊಡನೆಯೇ ರಸದ ಅನುಭವವೂ ಆಗುವ ಪ್ರಯುಕ್ತ ಹೀಗೆ ಒಮ್ಮೆಗೆ ಆಗುವಾಗ ಸಹೃದಯರಿಗೆ ಯಾವುದು ಮೊದಲು ಆಯಿತು, ಯಾವುದು ಆಮೇಲೆ ಆಯಿತು ಎಂಬ ಅರಿವು ಆಗುವುದಿಲ್ಲ. ಹೀಗೆ ರಸಾನುಭವದಲ್ಲಿ ಕ್ರಮವು ತಿಳಿಯದೇ ಇರುವುದರಿಂದ ರಸವನ್ನು ಅಸಂಲಕ್ಷ್ಯಕ್ರಮವ್ಯಂಗ್ಯಧ್ವನಿ ಎಂದು ಕರೆಯಲಾಗಿದೆ. ಹೀಗೆ ರಸಾದಿಗಳಲ್ಲಿ ಒಂದೊಂದು ಭೇದವೂ ಅನಂತವೆನಿಸಿ ಎಣಿಕೆಗೆ ಸಿಕ್ಕದೇ ಇರುವುದರಿಂದ ಅಸಂಲಕ್ಷ್ಯಕ್ರಮವ್ಯಂಗ್ಯಧ್ವನಿಯು ಒಂದೇ ಬಗೆ ಎನಿಸಿದೆ.

ಅಸಂಲಕ್ಷ್ಯಕ್ರಮವ್ಯಂಗ್ಯಧ್ವನಿಯನ್ನು ತಿಳಿಸಿ ಸಂಲಕ್ಷ್ಯಕ್ರಮವ್ಯಂಗ್ಯಧ್ವನಿಯನ್ನು ಈಗ ವಿಭಾಗಿಸುತ್ತಾನೆ. ಒಂದು ದೊಡ್ಡ ಮನೆಯೊಳಗೆ ಒಂದು ಶಬ್ದವನ್ನು ಉಚ್ಚ ರಿಸಿದಾಗ ಅದರ ಪ್ರತಿಧ್ವನಿಗೆ ಸದೃಶ್ಯವಾದ ವ್ಯಂಗ್ಯಾರ್ಥವು ಶಬ್ದದಶಕ್ತಿಯಿಂದಲೂ ಅರ್ಥದ ಶಕ್ತಿಯಿಂದಲೂ ಶಬ್ದಾರ್ಥಗಳೆರಡರ ಶಕ್ತಿಯಿಂದಲೂ ತೋರುವುದಾದರೆ ಆ ಬಗೆಯ ಧ್ವನಿಯು ಸಂಲಕ್ಷ್ಯಕ್ರಮವ್ಯಂಗ್ಯವೆನಿಸುವುದು. ಎಲ್ಲಿ ಒಂದು ಶಬ್ದವನ್ನು

ತಿಳಿದೊಡನೆಯೇ ಅವರಿಂದ ವ್ಯಂಗ್ಯಾರ್ಥವು ತಿಳಿದುಬರುವುದೋ ಅಲ್ಲಿ ಶಬ್ದಶಕ್ತಿ ಮೂಲಧ್ವನಿಯನ್ನು ಹೇಳಬೇಕು. ಎಲ್ಲಿ ಅರ್ಥವನ್ನು ತಿಳಿದೊಡನೆಯೇ ವ್ಯಂಗ್ಯಾರ್ಥವು ತೋರುವುದೋ ಅಲ್ಲಿ ಅರ್ಥಶಕ್ತಿಮೂಲಧ್ವನಿಯನ್ನು ಹೇಳಬೇಕು. ಎಲ್ಲಿ ಶಬ್ದಾರ್ಥ ಗಳೆರಡರ ಜ್ಞಾನದಿಂದ ವ್ಯಂಗ್ಯಾರ್ಥವು ತೋರಿಬರುವುದೋ ಅಲ್ಲಿ ಉಭಯಶಕ್ತಿಮೂಲ ಧ್ವನಿಯನ್ನು ಹೇಳಬೇಕು. ಒಂದು ಶಬ್ದವನ್ನು ಉಚ್ಚರಿಸಿದಾಗ ಹುಟ್ಟುವ ಅದರ ಪ್ರತಿಧ್ವನಿಯಂತೆ ಶಬ್ದಾರ್ಥಶಕ್ತಿಗಳಿಂದ ವ್ಯಂಗ್ಯಾರ್ಥವು ತೋರಿದಾಗ ಅಲ್ಲಿ ಇರುವ ಕ್ರಮವು ಸ್ಪಷ್ಟವಾಗಿ ಕಂಡುಬರುವುದರಿಂದ ವಿವಕ್ಷಿತಾನ್ಯಪರವಾಚ್ಯವೆಂಬ ಧ್ವನಿಯ ಎರಡನೆಯ ಬಗೆಯು ಸಂಲಕ್ಷ್ಯಕ್ರಮವ್ಯಂಗ್ಯವೆನಿಸಿದೆ. ಇದು ಶಬ್ದಶಕ್ತಿಮೂಲ, ಅರ್ಥ ಶಕ್ತಿಮೂಲ, ಉಭಯಶಕ್ತಿಮೂಲ ಎಂದು ಮೂರುಬಗೆಯಾಗಿರುವುದರಿಂದ ಇಂತಹ ಧ್ವನಿಯೇ ಆತ್ಮವೆನಿಸಿದ ಕಾವ್ಯವೂ ಸಹ ಮೂರು ಬಗೆ ಎನಿಸುವುದು.

ತತ್ರ— ವಸ್ತ್ವಲಂಕಾರರೂಪತ್ವಾತ್ ಶಬ್ದಶಕ್ತ್ಯುದ್ಭವೋ ದ್ವಿಧಾ ।

ಅಲಂಕಾರಶಬ್ದಸ್ಯ ಪೃಥಗುಪಾದಾನಾತ್ ಅನಲಂಕಾರಂ ವಸ್ತುಮಾತ್ರಂ ಗೃಹ್ಯತೇ. ತತ್ರ ವಸ್ತುರೂಪಃ ಶಬ್ದಶಕ್ತ್ಯುದ್ಭವೋ ವ್ಯಂಗ್ಯೋ ಯಥಾ—

ಪಥಿಕ ನಾತ್ರ ಸಂಸ್ತರೋಽಸ್ತಿ ಮನಾಕ್ ಪ್ರಸ್ತರಸ್ಥಲೇ ಗ್ರಾಮೇ।
ಉನ್ನತಪಯೋಧರಂ ಪ್ರೇಕ್ಷ್ಯ ಪುನರ್ಯದಿ ವಸಸಿ ತದ್ವಸ ॥

ಅತ್ರ ಸಂಸ್ತರಾದಿಶಬ್ದಶಕ್ತ್ಯಾ ಯದ್ಯುಪಭೋಗಕ್ಷಮೋಽಸಿ ತದಾ ಅತ್ರ ಆಸ್ಸ್ವ ಇತಿ ವಸ್ತು ವ್ಯಜ್ಯತೇ.

ಅಲಂಕಾರರೂಪೋ ಯಥಾ ದುರ್ಗಾಲಂಘಿತವಿಗ್ರಹಃ ಇತ್ಯಾದಿ. ಅತ್ರ ಪ್ರಾಕ ರಣಿಕಸ್ಯ ಉಮಾನಾಮಮಹಾದೇವೀವಲ್ಲಭಭಾನುದೇವನಾಮನೃಪತೇರ್ವರ್ಣನೇನ ದ್ವಿತೀಯಾರ್ಥಸೂಚಿತಮಪ್ರಾಕರಣಿಕಸ್ಯ ಪಾರ್ವತೀವಲ್ಲಭಸ್ಯ ವರ್ಣನಂ ಅಸಂಬದ್ಧಂ ಮಾ ಪ್ರಸಾಂಕ್ಷೀತ್ ಇತಿ ಈಶ್ವರಭಾನುದೇವಯೋಃ ಉಪಮಾನೋಪಮೇಯಭಾವಃ ಕಲ್ಪ್ಯತೇ. ತದತ್ರ ಉಮಾವಲ್ಲಭ ಇವ ಇತ್ಯುಪಮಾಲಂಕಾರೋ ವ್ಯಂಗ್ಯಃ.

ಯಥಾ ವಾ—ಅಮಿತಃ ಸಮಿತಃ ಪ್ರಾಪ್ತೈರುತ್ಕರ್ಷೈರ್ಹರ್ಷದಃ ಪ್ರಭೋ ।
ಅಹಿತಃ ಸಹಿತಃ ಸಾಧುಯಶೋಭಿರಸತಾಮಸಿ ॥

ಅತ್ರ ಅಮಿತ ಇತ್ಯಾದೌ ಅಪಿಶಬ್ದಾಭಾವಾತ್ ವಿರೋಧಾಭಾಸೋ ವ್ಯಂಗ್ಯಃ ವ್ಯಂಗ್ಯಸ್ಯ ಅಲಂಕಾರ್ಯತ್ವೇಽಪಿ ಬ್ರಾಹ್ಮಣಶ್ರಮಣನ್ಯಾಯಾತ್ ಅಲಂಕಾರತ್ವಂ ಮುಪಚರ್ಯತೇ.

ವಸ್ತು ವಾಽಲಂಕೃತಿರ್ವಾಪಿ ದ್ವಿಧಾರ್ಥಃ ಸಂಭವೀ ಸ್ವತಃ ।
ಕವೇಃ ಪ್ರೌಢೋಕ್ತಿಸಿದ್ಧೋ ವಾ ತನ್ನಿಬದ್ಧಸ್ಯ ಚೇತಿ ಷಟ್ ॥
ಷಡ್ಭಿಸ್ತೈರ್ವ್ಯಜ್ಯಮಾನಸ್ತು ವಸ್ತ್ವಲಂಕಾರರೂಪತಃ ।
ಅರ್ಥಶಕ್ತ್ಯುದ್ಭವೋ ವ್ಯಂಗ್ಯೋ ಯಾತಿ ದ್ವಾದಶಭೇದತಾಮ್ ॥

ಹಿಂದೆ ತಿಳಿಸಿದ ಮೂರುಬಗೆಯ ಸಂಲಕ್ಷ್ಯಕ್ರಮವ್ಯಂಗ್ಯಗಳಲ್ಲಿ ತೋರುವ ವ್ಯಂಗ್ಯಾರ್ಥವು ಒಂದು ವಸ್ತುವೆನಿಸುವುದರಿಂದಲೂ, ಅಲಂಕಾರವೆನಿಸುವುದರಿಂದಲೂ ಶಬ್ದಶಕ್ತಿಮೂಲವಾದ ಸಂಲಕ್ಷಕ್ರಮವ್ಯಂಗ್ಯವು ಎರಡುಬಗೆಯದಾಗಿದೆ. ಇಲ್ಲಿ ಪದಾರ್ಥಗಳೆಲ್ಲವೂ ವಸ್ತುವೆನಿಸಿದ್ದರಿಂದ ಅಲಂಕಾರವೂ ಅದರಲ್ಲಿಯೇ ಸೇರುವ ಪ್ರಯುಕ್ತ ಆ ಅಲಂಕಾರಶಬ್ದವನ್ನು ಬೇರೆಯಾಗಿ ತಿಳಿಸಿರುವುದರಿಂದ ಎಲ್ಲಿ ಅಲಂಕಾರಕ್ಕೆ ಪ್ರಾಧಾನ್ಯವಿದೆಯೋ ಅಲ್ಲಿ ಮಾತ್ರವೇ ಅದರ ಧ್ವನಿಯನ್ನು ಹೇಳಬೇಕೆಂದೂ, ಎಲ್ಲಿ ಅಲಂಕಾರಕ್ಕೆ ಪ್ರಾಧಾನ್ಯವಿಲ್ಲವೋ ಅಲ್ಲಿ ವಸ್ತುವನ್ನು ಮಾತ್ರವೇ ಗ್ರಹಿಸಬೇಕೆಂದೂ ಶಬ್ದಶಕ್ತಿಮೂಲಧ್ವನಿಯಲ್ಲಿ ಈ ಎರಡು ಬಗೆಗಳನ್ನು ತಿಳಿಸಲಾಗಿದೆ. ಶಬ್ದಶಕ್ತಿಯಿಂದ ತಿಳಿದುಬರುವ ವ್ಯಂಗ್ಯಾರ್ಥವು ಕೇವಲ ಒಂದು ವಸ್ತುವೆನಿಸುವುದನ್ನು ಉದಾಹರಿಸುತ್ತಾನೆ. ರಾತ್ರಿವೇಳೆ ಒಂದೆಡೆಯಲ್ಲಿ ನೆಲಸಲಿಕ್ಕೆ ಸ್ಥಳವನ್ನು ಕೇಳುತ್ತಿರುವ ಪಥಿಕನಿಗೆ ಸ್ವೈರಿಣಿಸ್ತ್ರೀಯೊಬ್ಬಳು ಹೇಳುತ್ತಾಳೆ. "ಎಲೈ ಪಥಿಕನೇ, ಕಲ್ಲುಗುಂಡುಗಳಿಂದ ತುಂಬಿರುವ ಈ ಗ್ರಾಮದಲ್ಲಿ ಹಾಸಲಿಕ್ಕೆ ಯಾವುದೊಂದು ಚಾಪೆಯೂ ಸಿಕ್ಕುವುದಿಲ್ಲ. ಮೇಲೆಕಾಣುತ್ತಿರುವ ಮೇಘಗಳನ್ನು (ಸ್ತನಗಳನ್ನು) ಕಂಡು ಇರುವುದಾದರೆ ಇರು." ಇಲ್ಲಿ ಸಂಸ್ತರ (ಹಾಸುವ ಚಾಪೆ) ಪಯೋಧರ(ಸ್ತನ) ಮೊದಲಾದ ಶಬ್ದಗಳಿಗೆ ಸಂಬಂಧಿಸಿದ ಅಭಿಧಾಮೂಲವ್ಯಂಜನಾವೃತ್ತಿಯಿಂದ (ಹಾಸಲಿಕ್ಕೆ ಹಾಸಿಗೆ ಯಾವುದೂ ಇಲ್ಲದಿದ್ದರೂ ಸಹ ಉನ್ನತವಾದ ಸ್ತನವನ್ನು ನೋಡಿ ನೀನು ಭೋಗಿಸಲು ಶಕ್ತನಿದ್ದರೆ ಇಲ್ಲಿ ನಿಲ್ಲು) ಎಂಬ ವಸ್ತು ಅಭಿವ್ಯಕ್ತವಾಗುತ್ತದೆ.

ಅಲಂಕಾರವು ವ್ಯಂಗ್ಯವಾಗಿ ತೋರುವುದಕ್ಕೆ 'ದುರ್ಗಾಲಂಘಿತವಿಗ್ರಹಃ' ಎಂಬ ಪದ್ಯವು ಉದಾಹರಣವಾಗುತ್ತದೆ. ಇದು ಉಮೆ ಎನಿಸಿದ ಮಹಾರಾಣಿಯ ಪತಿಯಾದ ಭಾನುದೇವನೆಂಬ ರಾಜನನ್ನು ವರ್ಣಿಸುವ ಪ್ರಕರಣವಾಗಿದೆ. ಉಮೆಯೊಡಗೂಡಿದ ಭಾನುದೇವನ ಪ್ರತಿಭೆಯನ್ನು ವರ್ಣಿಸುವುದೇ ಪ್ರಕೃತಾರ್ಥ. ಆದರೆ ಇದು ಶಬ್ದದ ಶಕ್ತಿಯಿಂದ ಮೊದಲು ತಿಳಿದುಬರುವ ಅರ್ಥ. ಇಲ್ಲಿ ಉಪಯೋಗಿಸಿರುವ ಶಬ್ದಗಳು ಅಭಿಧಾಮೂಲವ್ಯಂಜನಾವೃತ್ತಿಯಿಂದ ಅಪ್ರಕೃತವಾದ ಬೇರೊಂದು ಅರ್ಥವನ್ನೂ ತಿಳಿಯಪಡಿಸುತ್ತವೆ. ಉಮೆ ಎನಿಸಿದ ಪಾರ್ವತಿಯ ಪತಿಯಾದ ಪರಮೇಶ್ವರನೆಂಬ ಅರ್ಥವೇ ಈ ಪ್ರಕೃತಾರ್ಥ. ಎರಡನೆಯ ಅರ್ಥವು ಮೊದಲನೆಯ ಅರ್ಥಕ್ಕೆ ಸಂಬಂಧಿಸದೇ ಇರಬಾರದೆಂದು ಭಾವಿಸಿ ಪರಮೇಶ್ವರನಿಗೂ ಭಾನುದೇವನಿಗೂ ಉಪಮಾನೋಪಮೇಯಭಾವವನ್ನು ಕಲ್ಪಿಸಲಾಗುವುದು. (ಉಮಾವಲ್ಲಭ ಇವ ಉಮಾವಲ್ಲಭಃ) ಉಮೆಯ ಪತಿಯಾದ ಭಾನುದೇವನು ಉಮಾಪತಿಯಾದ ಈಶ್ವರನಂತೆ ಶೋಭಿಸುವನೆಂದು ಉಮಾವಲ್ಲಭನನ್ನು ಉಪಮೇಯವೆಂದೂ, ಪಾರ್ವತೀಪತಿ ಈಶ್ವರನನ್ನು ಉಪಮಾನವೆಂದೂ ಭಾವಿಸಲಾಗಿದೆ. ಹೀಗೆ ಇಲ್ಲಿ ಶಬ್ದಶಕ್ತಿಯಿಂದ ಉಪಮಾಲಂಕಾರವು ವ್ಯಂಗ್ಯವಾಗಿ ತೋರುವುದರಿಂದ ಇದು ಶಬ್ದಶಕ್ತಿಮೂಲ ಅಲಂಕಾರಧ್ವನಿಗೆ ಉಧಾಹರಣವೆನಿಸಿದೆ.

ಅಲಂಕಾರಧ್ವನಿಗೆ ಬೇರೊಂದು ಉದಾಹರಣವನ್ನೂ ಕೊಡುತ್ತಾನೆ. "ಎಲೈ ಸ್ವಾಮಿಯೇ, ನೀನು ಮಿತಪರಿಮಾಣವಿಲ್ಲದವನಾದರೂ ಮಿತಪರಿಮಾಣವುಳ್ಳವನಾಗಿರುವೆ. ನೀನು ಹಿತವಿಲ್ಲದವನಾದರೂ ಹಿತವುಳ್ಳವನಾಗಿರುವೆ. ದುರ್ಜನರಿಗೆ ಶತ್ರುವಾಗಿದ್ದು ಯುದ್ಧದಲ್ಲಿ ದೊರಕುವ ವಿಜಯದಿಂದ ಅನ್ಯಾಯ್ಯಪ್ರಶನಾಗಿದ್ದು ಒಳ್ಳೆಯ ಪ್ರಶಂಸೆಯಿಂದ ಕೂಡಿರುವೆ. ನಿನ್ನ ಪಕ್ಷದವರಿಗೆ ಹೆಚ್ಚು ಸಂತೋಷವನ್ನುಂಟುಮಾಡುತ್ತಿರುವೆ. ನೀನು ದುಷ್ಟರಿಗೆ ಶತ್ರುವೆನಿಸಿದ್ದು ಯುದ್ಧದಲ್ಲಿ ಗಳಿಸಿದ ವಿಜಯದಿಂದ ಬೇರೆ ಶತ್ರುಗಳಿಗೆ ಪೋಲದಿರುವೆ." ಹೀಗೆ ಹೇಳಿದರೆ ವಿರೋಧಪರಿಹಾರವಾಗುವುದು. ಇಲ್ಲಿ ಅಮಿತಃ ಸಮಿತಃ, ಅಹಿತಃ, ಸಹಿತಃ ಎಂಬಲ್ಲಿ ಅಪಿಶಬ್ದವಿಲ್ಲದಿದ್ದರೂ ವಿರೋಧಾಭಾಸವಿರುವುದರಿಂದ ಇದು ವ್ಯಂಗ್ಯವಾಗಿಯೇ ತೋರುತ್ತದೆ. ಇಲ್ಲಿ ವಿರೋಧವು ಅರ್ಥದಿಂದ ತೋರದೆ ಶಬ್ದವನ್ನು ಕೇಳಿದೊಡನೆಯೇ ತೋರುವುದರಿಂದ ಇದು ಕೇವಲ ಶಬ್ದಶಕ್ತಿಮೂಲವಾದ ಅಲಂಕಾರಧ್ವನಿ ಎನಿಸಿದೆ. ಇಲ್ಲಿ ರಸಭಾವಗಳಂತೆ ವಿರೋಧಾಲಂಕಾರವು ವ್ಯಂಗ್ಯವೆನಿಸಿ ಸಹೃದಯರಿಗೆ ಆಸ್ವಾದ್ಯವಾದ್ದರಿಂದ ಇದು ಪ್ರಧಾನವೆನಿಸಿದೆ. ಈಗ ಇದು ಬೇರೊಂದರಿಂದ ಅಲಂಕಾರವನ್ನು ಹೊಂದಬೇಕೇ ಹೊರತು ತಾನು ಬೇರೊಂದನ್ನು ಅಲಂಕರಿಸುವಂತಿಲ್ಲ. ಅಲಂಕಾರವು ವ್ಯಂಗ್ಯವಾಗಿ ತೋರಿದರೆ ಅಲಂಕಾರ್ಯವೆನಿಸುವುದರಿಂದ ಅದನ್ನು ಮತ್ತೆ ಅಲಂಕಾರವೆಂದು ಹೇಗೆ ಭಾವಿಸಲಿಕ್ಕಾದೀತು ? ಎಂದು ಆಕ್ಷೇಪವು ಬರುತ್ತದೆ. ಒಬ್ಬ ಬ್ರಾಹ್ಮಣನು ಬ್ರಾಹ್ಮಣಧರ್ಮವನ್ನು ಬಿಟ್ಟು ಸನ್ಯಾಸಾಶ್ರಮವನ್ನು ಪ್ರವೇಶಿಸಿದರೆ ಲೋಕದ ಜನರು ಅವನನ್ನು ಶ್ರಮಣನೆಂದಷ್ಟೇ ಕರೆಯದೆ ಹಿಂದಿನ ಬ್ರಾಹ್ಮಣ್ಯವನ್ನು ಅನುಸರಿಸಿ ಬ್ರಾಹ್ಮಣಶ್ರಮಣನೆಂದು ಕರೆಯುತ್ತಾರೆ. ಹೀಗೆ ಅಲಂಕಾರವು ಬೇರೊಂದು ವಸ್ತುವನ್ನು ಅಲಂಕರಿಸುವಾಗ, ಅಲಂಕಾರವೆನಿಸಿದ್ದಂತೆ ವ್ಯಂಗ್ಯವಾಗಿ ತೋರುವಾಗಲೂ ಅದಕ್ಕೆ ಹಿಂದಿನಂತೆ ಅಲಂಕಾರವೆನಿಸುವ ಸ್ಥಿತಿಯು ತಪ್ಪುವುದಿಲ್ಲ. ಇಲ್ಲಿ ಅಹಿತಃ ಸಹಿತಃ ಎಂದು ಅಪಿಶಬ್ದವಿದ್ದರೆ ವಿರೋಧಾಭಾಸವು ಸ್ಪಷ್ಟವಾಗಿ ತೋರುತ್ತಿದ್ದಂತೆ ಆ ಶಬ್ದವಿಲ್ಲದಿದ್ದರೂ ಅಲ್ಲಿ ವಿರೋಧಾಭಾಸವು ವ್ಯಂಗ್ಯವಾಗಿ ತೋರುವಾಗಲೂ ಅದೇ ಅಲಂಕಾರವೆಂಬ ಹೆಸರು ಇದ್ದೇ ಇರುತ್ತದೆ.

ಶಬ್ದಶಕ್ತಿಮೂಲಧ್ವನಿಯನ್ನು ತಿಳಿಸಿ ಅರ್ಥಶಕ್ತಿಮೂಲಧ್ವನಿಯ ವಿಭಾಗಗಳನ್ನು ಈಗ ತಿಳಿಸುತ್ತಾನೆ. ವಸ್ತು (ಅಲಂಕಾರಕ್ಕಿಂತ ಬೇರೆಯಾದ ಪದಾರ್ಥ) ಮತ್ತು ಅಲಂಕಾರವೆಂದು ಅರ್ಥವು ಎರಡು ಬಗೆಯಾಗಿದೆ. ಇಂತಹ ಅರ್ಥವು ಸ್ವತಃಸಂಭವಿ ಕವಿಪ್ರೌಢೋಕ್ತಿಸಿದ್ಧ, ಕವಿನಿಬದ್ಧವಕ್ತೃಪ್ರೌಢೋಕ್ತಿಸಿದ್ಧವೆಂದು ಒಂದೊಂದೂ ಮೂರು ಬಗೆಯಾಗುವುದರಿಂದ ಇದರಲ್ಲಿ ಒಟ್ಟು ಆರು ಭಾಗಗಳಾಗುತ್ತವೆ. ಈ ಆರರಿಂದಲೂ ವಸ್ತು ಅಲಂಕಾರಗಳೆರಡು ಬೇರೆಬೇರೆಯಾಗಿ ಅಭಿವ್ಯಕ್ತವಾಗುವುದರಿಂದ ಅರ್ಥಶಕ್ತಿಮೂಲವ್ಯಂಗ್ಯವು ಒಟ್ಟು ಹನ್ನೆರಡು ಬಗೆಗಳಾಗುತ್ತವೆ. ೧) ಸ್ವತಸ್ಸಂಭವಿವಸ್ತುವಿನಿಂದ ವಸ್ತುಧ್ವನಿ ೨) ಸ್ವತಸ್ಸಂಭವಿವಸ್ತುವಿನಿಂದ ಅಲಂಕಾರಧ್ವನಿ ೩) ಸ್ವತಃ

ಸಂಭವಿ ಅಲಂಕಾರದಿಂದ ವಸ್ತುಧ್ವನಿ ೪) ಸ್ವತಸ್ಸಂಭವಿ ಅಲಂಕಾರದಿಂದ ಅಲಂಕಾರ ಧ್ವನಿ ೫) ಕವಿಪ್ರೌಢೋಕ್ತಿಸಿದ್ಧವಸ್ತುವಿನಿಂದ ವಸ್ತುಧ್ವನಿ ೬) ಕವಿಪ್ರೌಢೋಕ್ತಿ ಸಿದ್ಧವಸ್ತುವಿನಿಂದ ಅಲಂಕಾರಧ್ವನಿ ೭) ಕವಿಪ್ರೌಢೋಕ್ತಿಸಿದ್ಧ ಅಲಂಕಾರದಿಂದ ವಸ್ತುಧ್ವನಿ ೮) ಕವಿಪ್ರೌಢೋಕ್ತಿಸಿದ್ಧ ಅಲಂಕಾರದಿಂದ ಅಲಂಕಾರಧ್ವನಿ ೯) ಕವಿನಿಬದ್ಧ ವಕ್ತೃಪ್ರೌಢೋಕ್ತಿಸಿದ್ಧವಾದ ವಸ್ತುವಿನಿಂದ ವಸ್ತುಧ್ವನಿ ೧೦) ಅಂತಹ ವಸ್ತುವಿನಿಂದ ಅಲಂಕಾರಧ್ವನಿ ೧೧) ಕವಿನಿಬದ್ಧವಕ್ತೃಪ್ರೌಢೋಕ್ತಿಸಿದ್ಧವಾದ ಅಲಂಕಾರದಿಂದ ವಸ್ತುಧ್ವನಿ ೧೨) ಅಂತಹ ಅಲಂಕಾರದಿಂದ ಅಲಂಕಾರಧ್ವನಿ. ಹೀಗೆ ವಸ್ತುಧ್ವನಿಯ ಆರು ಬಗೆಗಳು ಅಲಂಕಾರಧ್ವನಿಯ ಆರು ಬಗೆಗಳೊಡನೆ ಒಟ್ಟು ಅರ್ಥಶಕ್ತಿಮೂಲಧ್ವನಿಯಲ್ಲಿ ಹನ್ನೆರಡು ಬಗೆಗಳಾಗುತ್ತವೆ.

ಸ್ವತಃ ಸಂಭವೀ ಔಚಿತ್ಯಾದ್ಬಹಿರಪಿ ಸಂಭಾವ್ಯಮಾನಃ. ಪ್ರೌಢೋಕ್ತ್ಯಾ ಸಿದ್ಧೋ ನ ತ್ವೌಚಿತ್ಯೇನ. ತತ್ರ ಕ್ರಮೇಣ ಯಥಾ—

ದೃಷ್ಟಿಂ ಹೇ ಪ್ರತಿವೇಶಿನಿ ಕ್ಷಣಮಿಹಾಪ್ಯಸ್ಮದ್ಗೃಹೇ ದಾಸ್ಯಸಿ
ಪ್ರಾಯೇಣಾಸ್ಯ ಶಿಶೋಃ ಪಿತಾ ನ ವಿರಸಾಃ ಕೌಪೀರಪಃ ಪಾಸ್ಯತಿ ।
ಏಕಾಕಿನ್ಯಪಿ ಯಾಮಿ ಸತ್ವರಮಿತಃ ಸ್ರೋತಸ್ತಮಾಲಾಕುಲಂ
ನೀರಂಧ್ರಾಸ್ತನುಮಾಲಿಖಂತು ಜರಠಚ್ಛೇದಾ ನಲಗ್ರಂಥಯಃ ॥

ಅನೇನ ಸ್ವತಃ ಸಂಭವಿನಾ ವಸ್ತುಮಾತ್ರೇಣ ಏತತ್ಪ್ರತಿಪಾದಿಕಾಯಾಃ ಭಾವಿಪರ ಪುರುಷೋಪಭೋಗಜನಖಕ್ಷತಾದಿಗೋಪನರೂಪಂ ವಸ್ತುಮಾತ್ರಂ ವ್ಯಜ್ಯತೇ.

ದಿಶಿ ಮಂದಾಯತೇ ತೇಜೋ ದಕ್ಷಿಣಸ್ಯಾಂ ರವೇರಪಿ ।
ತಸ್ಯಾಮೇವ ರಘೋಃ ಪಾಂಡ್ಯಾಃ ಪ್ರತಾಪಂ ನ ವಿಷೇಹಿರೇ ।

ಅನೇನ ಸ್ವತಃಸಂಭವಿನಾ ವಸ್ತುನಾ ರವಿತೇಜಸೋ ರಘುಪ್ರತಾಪಃ ಅಧಿಕಃ ಇತಿ ವ್ಯತಿರೇಕಾಲಂಕಾರೋ ವ್ಯಜ್ಯತೇ.

ಆಪತಂತಮಮುಂ ದೂರಾದೂರೀಕೃತಪರಾಕ್ರಮಃ ।
ಬಲೋಽವಲೋಕಯಾಮಾಸ ಮಾತಂಗಮಿವ ಕೇಸರೀ ॥

ಅತ್ರ ಉಪಮಾನಾಲಂಕಾರರೂಪೇಣ ಸ್ವತಃಸಂಭವಿನಾ ವ್ಯಂಜಕಾರ್ಥೇನ ಬಲದೇವಃ ಕ್ಷಣೇನೈವ ವೇಣುದಾರಿಣಃ ಕ್ಷಯಂ ಕರಿಷ್ಯತೀತಿ ವಸ್ತು ವ್ಯಜ್ಯತೇ.

ಗಾಢಕಾಂತದಶನಕ್ಷತವ್ಯಥಾಸಂಕಟಾದರಿವಧೂಜನಸ್ಯ ಯಃ ।
ಓಷ್ಠವಿದ್ರುಮದಳಾನ್ಯಮೋಚಯನ್ನಿರ್ದಶನ್ ಯುಧಿ ರುಷಾ ನಿಜಾಧರಮ್ ॥

ಅತ್ರ ಸ್ವತಃಸಂಭವಿನಾ ವಿರೋಧಾಲಂಕಾರೇಣ 'ಅಧರೋ ನಿರ್ದಗ್ಧಃ ಶತ್ರವೋ ವ್ಯಾಪಾದಿತಾಶ್ಚ' ಇತಿ ಸಮುಚ್ಚಯಾಲಂಕಾರೋ ವ್ಯಂಗ್ಯಃ.

ಸಜ್ಜಯತಿ ಸುರಭಿಮಾಸಃ ನ ಚಾಪನಯತಿ ಯುವತಿಜನಲಕ್ಷ್ಯಸಹಾನ್ ।
ಅಭಿನವಸಹಕಾರಮುಖಾನ್ ನವಪಲ್ಲವಪತ್ರಲಾನ್ ಅನಂಗಸ್ಯ ಶರಾನ್ ॥

ಅತ್ರ ವಸಂತಃ ಶರಕಾರಃ, ಕಾಮೋ ಧನ್ವೀ, ಯುವತಯೋ ಲಕ್ಷ್ಯಂ, ಪುಷ್ಪಾಣಿ ಶರಾ ಇತಿ ಕವಿಪ್ರೌಢೋಕ್ತಿಸಿದ್ಧಂ ವಸ್ತು ಪ್ರಕಾಶೀಭವನ್ಮದನವಿಜೃಂಭಣ ರೂಪಂ ವಸ್ತು ವ್ಯನಕ್ತಿ.

ರಜನೀಷು ವಿಮಲಭಾನೋಃ ಕರಜಾಲೇನ ಪ್ರಕಾಶಿತಂ ವೀರ ।
ಧವಲಯತಿ ಭುವನಮಂಡಲಮಖಿಲಂ ತವ ಕೀರ್ತಿಸಂತತಿಃ ಸತತಮ್ ॥

ಅತ್ರ ಕವಿಪ್ರೌಢೋಕ್ತಿಸಿದ್ಧೇನ ವಸ್ತುನಾ ಕೀರ್ತಿಸಂತತೇಶ್ಚಂದ್ರಕರಜಾಲಾದ ಧಿಕಕಾಲಪ್ರಕಾಶಕತ್ವೇನ ವ್ಯತಿರೇಕಾಲಂಕಾರೋ ವ್ಯಂಗ್ಯಃ.

ದಶಾನನಕಿರೀಟೇಭ್ಯಸ್ತತ್ಕ್ಷಣಂ ರಾಕ್ಷಸಶ್ರಿಯಃ ।
ಮಣಿವ್ಯಾಜೇನ ಪರ್ಯಸ್ತಾಃ ಪೃಥಿವ್ಯಾಮಶ್ರುಬಿಂದವಃ ॥

ಅತ್ರ ಕವಿಪ್ರೌಢೋಕ್ತಿಸಿದ್ಧೇನ ಅಪಹ್ನುತ್ಯಲಂಕಾರೇಣ ಭವಿಷ್ಯದ್ರಾಕ್ಷಸಶ್ರೀ ವಿನಾಶರೂಪಂ ವಸ್ತು ವ್ಯಜ್ಯತೇ.

ಧಮ್ಮಿಲ್ಲೇನ ವ ಮಲ್ಲಿಕಾಸಮುದಯೋ ಹಸ್ತೇ ಸಿತಾಂಭೋರುಹಂ
ಹಾರಃ ಕಂಠತಟೇ ಪಯೋಧರಯುಗೇ ಶ್ರೀಖಂಡಲೇಪೋ ಘನಃ ।
ಏಕೋಽಪಿ ತ್ರಿಕಳಿಂಗಭೂಮಿತಿಲಕ ! ತ್ವತ್ಕೀರ್ತಿರಾಶಿರ್ಯಯೌ
ನಾನಾಮಂಡನತಾಂ ಪುರಂದರಪುರೀವಾಮಭ್ರುವಾಂ ವಿಗ್ರಹೇ ॥

ಅತ್ರ ಕವಿಪ್ರೌಢೋಕ್ತಿಸಿದ್ಧೇನ ರೂಪಕಾಲಂಕಾರೇಣ "ಭೂಮಿಷ್ಠೋಽಪಿ ಸ್ವರ್ಗಸ್ಥಾನಾಮುಪಕಾರಂ ಕರೋಷಿ" ಇತಿ ವಿಭಾವನಾಲಂಕಾರೋ ವ್ಯಜ್ಯತೇ.

ಶಿಖರಿಣಿ ಕ್ವ ನು ನಾಮ ಕಿಯಚ್ಚಿರಂ ಕಿಮಭಿಧಾನಮಸಾವಕರೋತ್ತಪಃ ।
ಸುಮುಖಿ ! ಯೇನ ತವಾಧರಪಾಟಲಂ ದಶತಿ ಬಿಂಬಫಲಂ ಶುಕಶಾವಕಃ ॥

ಅತ್ರಾನೇನ ಕವಿನಿಬದ್ಧಸ್ಯ ಕಸ್ಯಚಿತ್ಕಾಮಿನಃ ಪ್ರೌಢೋಕ್ತಿಸಿದ್ಧೇನ ವಸ್ತುನಾ "ತವಾಧರಃ ಪುಣ್ಯಾತಿಶಯಲಭ್ಯಃ" ಇತಿ ವಸ್ತು ಪ್ರತೀಯತೇ.

ಸುಭಗೇಽ! ಕೋಟಿಸಂಖ್ಯತ್ವಮುಪೇತ್ಯ ಮದನಾಶುಗೈಃ ।
ವಸಂತೇ ಪಂಚತಾ ತ್ಯಕ್ತಾ ಪಂಚತಾಸೀದ್ವಿಯೋಗಿನಾಮ್ ॥

ಅತ್ರ ಕವಿನಿಬದ್ಧವಕ್ತೃಪ್ರೌಢೋಕ್ತಿಸಿದ್ಧೇನ ಕಾಮಶರಾಣಾಂ ಕೋಟಿಸಂಖ್ಯ ತ್ವಪ್ರಾಪ್ತ್ಯಾ ನಿಖಿಲವಿಯೋಗಿಮರಣೇನ ಶವಸ್ತುನಾ ರಾಣಾಂ ಪಂಚತಾ ಶರಾನ್ ವಿಮುಚ್ಯ ವಿಯೋಗಿನಃ ಶ್ರಿತೇವೇತ್ಯುತ್ಪ್ರೇಕ್ಷಾಲಂಕಾರೋ ವ್ಯಜ್ಯತೇ.

ಮಲ್ಲಿಕಾಮುಕುಲೇ ಚಂಡಿ ! ಭಾತಿ ಗುಂಜನ್ ಮಧುವ್ರತಃ ।
ಪ್ರಯಾಣೇ ಪಂಚಬಾಣಸ್ಯ ಶಂಖಮಾಪೂರಯನ್ನಿವ ॥

ಅತ್ರ ಕವಿನಿಬದ್ಧವಕ್ತೃಪ್ರೌಢೋಕ್ತಿಸಿದ್ಧೇನ ಉತ್ಪ್ರೇಕ್ಷಾಲಂಕಾರೇಣ ಕಾಮಸ್ಯಾ ಯಮುನ್ಮಾದಕಃ ಕಾಲಃ ಪ್ರಾಪ್ತಃ; ತತ್ಕಥಂ ಮಾನಿನಿ ! ಮಾನಂ ನ ಮುಂಚಸಿ" ಇತಿ ವಸ್ತು ವ್ಯಜ್ಯತೇ.

ಮಹಿಲಾಸಹಸ್ರಭರಿತೇ ತವ ಹೃದಯೇ ಸುಭಗ ! ಸಾ ಅಮಾಂತೀ ।
ಅನುದಿನಮನನ್ಯಕರ್ಮಾ ಅಂಗಂ ತನುಕಮಪಿ ತನಯತಿ ॥

ಅತ್ರ 'ಅಮಾಂತೀ' ಇತಿ ಕವಿನಿಬದ್ಧವಕ್ತೃಪ್ರೌಢೋಕ್ತಿಸಿದ್ಧೇನ ಕಾವ್ಯಲಿಂಗಾಲಂಕಾರೇಣ ತನೋಸ್ತನೂಕರಣೇಽಪಿ ತವ ಹೃದಯೇ ಸಾ ನ ವರ್ತತೇ ಇತಿ ವಿಶೇಷೋಕ್ತ್ಯಲಂಕಾರೋ ವ್ಯಜ್ಯತೇ.

ನ ಖಲು ಕವೇಃ ಕವಿನಿಬದ್ಧಸ್ಯೇವ ರಾಗಾದ್ಯಾವಿಷ್ಟತಾ; ಅತಃ ಕವಿನಿಬದ್ಧವಕ್ತೃಪ್ರೌಢೋಕ್ತಿಃ ಕವಿಪ್ರೌಢೋಕ್ತೇರಧಿಕಂ ಸಹೃದಯಚಮತ್ಕಾರಿಣೀತಿ ಪೃಥಕ್ ಪ್ರತಿಪಾದಿಕಾ. ಏಷು ಚ ಅಲಂಕೃತಿವ್ಯಂಜನಸ್ಥಲೇ ರೂಪಕೋತ್ಪ್ರೇಕ್ಷಣವ್ಯತಿರೇಚನಾದಿಮಾತ್ರಸ್ಯ ಪ್ರಾಧಾನ್ಯಂ ಸಹೃದಯಸಂವೇದ್ಯಂ, ನ ತು ರೂಪ್ಯಾದೀನಾಮಿತ್ಯಲಂಕೃತೇರೇವ ಮುಖ್ಯತ್ವಮ್.

ಅರ್ಥಶಕ್ತಿಮೂಲಧ್ವನಿಯ ಹನ್ನೆರಡು ಬಗೆಗಳಲ್ಲಿ ಸ್ವತಃಸಂಭವಿವಸ್ತುವಿನಿಂದ ವಸ್ತುಧ್ವನಿಯೂ, ಅಲಂಕಾರಧ್ವನಿಯೂ, ಸ್ವತಃಸಂಭವಿ ಅಲಂಕಾರದಿಂದ ವಸ್ತುಧ್ವನಿಯೂ, ಅಲಂಕಾರಧ್ವನಿಯೂ ತೋರುವುವೆಂದು ನಾಲ್ಕು ಬಗೆಗಳನ್ನು ಹಿಂದೆ ಹೇಳಿದೆ. ಒಂದು ಶಬ್ದದ ಯೋಗ್ಯತೆಗನುಸರಿಸಿ ಸಹಜವಾಗಿ ತೋರುವ ಅರ್ಥವು ಎಲ್ಲರಿಗೂ ಸಮಾನವೆಂಬುದನ್ನು ತಿಳಿಸುವುದೇ ಸ್ವತಃಸಂಭವಿ ಎಂಬ ಶಬ್ದದ ಅರ್ಥವಾಗುವುದು. ಇಂತಹ ವಸ್ತುವಿನಿಂದ ಅಲಂಕಾರವೂ, ಅಲಂಕಾರದಿಂದ ವಸ್ತುವೂ ಅಭಿವ್ಯಕ್ತವಾಗುವುದಕ್ಕೆ ಉದಾಹರಣಗಳನ್ನು ಕ್ರಮವಾಗಿ ಕೊಡಲಾಗಿದೆ. "ಎದುರು ಮನೆಯಲ್ಲಿ ಇರುವ ಸ್ತ್ರೀಯಳೇ, ನಾನು ಹೊರಗೆ ಹೋಗಿಬರುವವರೆಗೂ ಮನೆಯ ಕಡೆ ನೋಡಿಕೋ. ನಾನು ಎಲ್ಲಿಗೆ ಹೋಗುವೆನೆಂದರೆ ಈ ಮಗುವಿನ ತಂದೆಯು (ನನ್ನ ಪತಿಯು) ಸಾಮಾನ್ಯವಾಗಿ ನೀರಸವಾದ ಬಾವಿಯ ನೀರನ್ನು ಕುಡಿಯುವುದಿಲ್ಲ. ನಾನು ಒಬ್ಬಂಟಿಗಳಾದರೂ ವೇಗದಿಂದ ಹೊಂಗೆಮರಗಳಿಂದ ಕೂಡಿರುವ ನದಿಯ ಬಳಿಗೆ ಹೋಗಿ ನೀರನ್ನು ತರುವೆ. ಅಲ್ಲಿ ಒರಟಾಗಿರುವ ನಳ ಎಂಬ ಹುಲ್ಲಿನ ತುದಿಗಳು ನನ್ನ ಮೈಯಲ್ಲಿ ಗೀರಿ ಗಾಯಗಳನ್ನು ಮಾಡಲಿ. ನಾನು ಸಹಿಸುವೆ" ಇದರಿಂದ 'ತನಗೆ ಪತಿಯನ್ನು ಅನುಸರಿಸಬೇಕೆಂಬ ಮನೋಭಾವವಿದೆ' ಎಂಬುದು ಲೋಕಾನುಭವಸಿದ್ಧವಾಗಿದೆ. ಇಷ್ಟೇ ಇಲ್ಲಿ ಸ್ವತಃಸಂಭವಿಯಾದ ವಸ್ತು. ಇದರಿಂದ ಮುಂದೆ ಸಂಭವಿಸಬಹುದಾದ ಪರಪುರುಷನ ಭೋಗದಿಂದ ಉಂಟಾದ ನಖಕ್ಷತಗಳನ್ನು ಮರೆಮಾಚಬೇಕೆಂಬ ವಸ್ತುವು ವ್ಯಂಗ್ಯವಾಗಿ ತೋರುತ್ತದೆ. "ದಕ್ಷಿಣದಿಕ್ಕಿನಲ್ಲಿ ಸೂರ್ಯನ ತೇಜಸ್ಸೂ ಸಹ ಕಡಮೆಯಾಗುತ್ತದೆ. ಆದರೆ ಅದೇ ದಿಕ್ಕಿನಲ್ಲಿ ರಘುವಿನ ಪರಾಕ್ರಮವನ್ನು ಪಾಂಡ್ಯದೇಶದ ರಾಜರು ಸಹಿಸಲು ಅಶಕ್ತರಾದರು." ರಘುವಂಶದಲ್ಲಿ ರಘುವಿನ ದಿಗ್ವಿಜಯವನ್ನು ವರ್ಣಿಸುವ ಪದ್ಯವಿದು. ದಕ್ಷಿಣಾಯನದಲ್ಲಿ ಸೂರ್ಯನ ಪ್ರತಾಪವು ಕಡಮೆಯಾಗುವುದು ಸಹಜ. ಇಂತಹ ಸೂರ್ಯನನ್ನು ಜಯಿಸಿದ ಪಾಂಡ್ಯರಾಜರನ್ನೂ ಸಹ ರಘು ಜಯಿಸಿದನು. ಇಂತಹ ಸ್ವತಸ್ಸಂಭವವಸ್ತುವಿ

ನಿಂದ ಸೂರ್ಯನ ತೇಜಸ್ಸಿಗಿಂತಲೂ ರಘುವಿನ ಪ್ರತಾಪವು ಅಧಿಕವಾಗಿತ್ತೆಂದು ವ್ಯತಿರೇಕಾಲಂಕಾರವು ಅಭಿವ್ಯಕ್ತವಾಗುತ್ತದೆ.

ಸ್ವತಸ್ಸಂಭವಿ ಅಲಂಕಾರದಿಂದ ವಸ್ತುಧ್ವನಿಯನ್ನು ಉದಾಹರಿಸುತ್ತಾನೆ. ಬಹು ಕಾಲದಿಂದ ಪರಾಕ್ರಮವನ್ನು ಕೂಡಿಸಿಕೊಂಡಿದ್ದ ಬಲರಾಮನು ಆನೆಯನ್ನು ಸಿಂಹವು ದೃಷ್ಟಿಸಿ ನೋಡುವಂತೆ ತನ್ನೆಡೆಗೆ ಬರುತ್ತಿದ್ದ ವೇಣುದಾರಿ ಎಂಬ ಬಾಣಾಸುರನ ಮಗನನ್ನು ದೂರದಿಂದಲೇ ನೋಡಿದನು." ಇಲ್ಲಿ ಇವ ಶಬ್ದದಿಂದ ಬಲರಾಮನನ್ನು ಸಿಂಹಕ್ಕೂ, ವೇಣುದಾರಿಯನ್ನು ಆನೆಗೂ ಸಹಜವಾಗಿ ಹೋಲಿಸಿರುವುದರಿಂದ ಇದೇ ಇಲ್ಲಿ ವ್ಯಂಜಕವಾದ ಅರ್ಥ. ಇದರಿಂದ ಸಿಂಹವು ಒಂದು ಕ್ಷಣಕಾಲದಲ್ಲಿಯೇ ಆನೆಯನ್ನು ಅನಾಯಾಸವಾಗಿ ಕೊಲ್ಲುವಂತೆ ಬಲರಾಮನು ಸುಲಭವಾಗಿ ವೇಣುದಾರಿಯನ್ನು ಕೊಲ್ಲುವನೆಂಬ ವಸ್ತು ತೋರುತ್ತದೆ. ಸ್ವತಃಸಂಭವಿ ಅಲಂಕಾರದಿಂದ ಅಲಂಕಾರವು ತೋರುವುದನ್ನು ಉದಾಹರಿಸುತ್ತಾನೆ. "ಯಾವನು ಯುದ್ಧದಲ್ಲಿ ಕೋಪದಿಂದ ತನ್ನ ತುಟಿಯನ್ನೇ ಕಚ್ಚಿಕೊಂಡು ಪತಿಯ ಹಲ್ಲಿನ ಕಡಿತದ ಗಾಯದಿಂದ ಹುಟ್ಟುವ ತೀವ್ರವಾದ ವ್ಯಥೆಯೆಂಬ ವಿಪತ್ತಿನಿಂದ ಶತ್ರುಸ್ತ್ರೀಯರೆಲ್ಲರ ತುಟಿ ಎಂಬ ಚಿಗುರುಗಳನ್ನು ಬಿಡಿಸಿದನೋ" ತುಟಿಯನ್ನು ಕಚ್ಚುವುದರಿಂದ ವ್ಯಥೆಯು ಹೆಚ್ಚಬೇಕೇ ಹೊರತು ಕಡಮೆಯಾಗುವಂತಿಲ್ಲ. ಆದ್ದರಿಂದ ಇಲ್ಲಿ ವಿರೋಧವು ಸಹಜವಾಗಿ ತೋರುತ್ತಿದೆ. ರಾಜನು ತನ್ನ ತುಟಿಯನ್ನು ಕಚ್ಚಿದ್ದರಿಂದ ಶತ್ರುಸ್ತ್ರೀಯರ ತುಟಿಗಳಿಗೆ ನೋವು ತೊಲಗಿತೆಂದು ಇಲ್ಲಿ ಆಶ್ರಯಭೇದವಿರುವ ಪ್ರಯುಕ್ತ ವಿರೋಧವು ಪರಿಹಾರವಾಗುತ್ತದೆ. ರಾಜನು ತುಟಿಯನ್ನು ಕಚ್ಚಿದ್ದರಿಂದ ಶತ್ರುಸ್ತ್ರೀಯರ ತುಟಿಯನ್ನು ಅವರ ಗಂಡಂದಿರು ಹಲ್ಲಿನಿಂದ ಕಚ್ಚುವುದರಿಂದಾಗುವ ವ್ಯಥೆಯನ್ನು ರಾಜನು ತೊಲಗಿಸದನೆಂದೂ, ಶತ್ರುಸಂಹಾರದಿಂದ ಹೆಂಡತಿಯರ ತುಟಿಯನ್ನು ಕಚ್ಚುವ ಆವಶ್ಯಕತೆ ಇಲ್ಲದಂತಾಯಿತೆಂದೂ ವಿರೋಧವು ಪರಿಹಾರವಾಗಿದೆ. ಇದು ಸ್ವಾಭಾವಿಕವಾಗಿಯೇ ಸಂಭವಿಸಿದೆ. ಹೀಗೆ ಸಹಜವಾಗಿ ತೋರುವ ವಿರೋಧಾಲಂಕಾರದಿಂದ ರಾಜನು ಅಧರವನ್ನು ಕಚ್ಚಿದ್ದೂ ಆಯಿತು, ಹಾಗೆಯೇ ಶತ್ರುಗಳನ್ನು ಕೊಂದಿದ್ದೂ ಆಯಿತು. ಹೀಗೆ ಎರಡು ಕಾರ್ಯಗಳೂ ಒಟ್ಟಿಗೆ ನಡೆದವೆಂದು ತಿಳಿಸುವ ಸಮುಚ್ಚಯಾಲಂಕಾರವು ವ್ಯಂಗ್ಯವಾಗಿ ತೋರುತ್ತದೆ.

ಕವಿಪ್ರೌಢೋಕ್ತಿಯಿಂದ ತೋರುವ ವಸ್ತುವಿನಿಂದ ವಸ್ತುಧ್ವನಿಯನ್ನು ಇಲ್ಲಿ ಉದಾಹರಿಸುತ್ತಾನೆ. "ವಸಂತಕಾಲವು ಯುವಕರೆಂಬ ಲಕ್ಷ್ಯಗಳನ್ನು ಭೇದಿಸಲು ಸಮರ್ಥವೆನಿಸಿ ಹೊಸದಾದ ಮಾವಿನ ಚಿಗುರುಗಳೇ ಮೊದಲಾದ ಸುವಾಸನೆಯ ಚಿಗುರು ಗರಿಗಳಿರುವ ಬಾಣಗಳನ್ನು ಮನ್ಮಥನಿಗಾಗಿ ಸೃಷ್ಟಿಸುತ್ತದೆ. ಆದರೆ ಶೀತಕಾಲದಂತೆ ಅವನ್ನು ತೊಲಗಿಸುವುದಿಲ್ಲ." ಇಲ್ಲಿ ವಸಂತಕಾಲವು ಬಾಣಗಳನ್ನು ಸಿದ್ಧಪಡಿಸುವವನು, ಮನ್ಮಥನು ಧನುರ್ಧಾರಿ, ಯುವಕರೇ ಬಾಣಕ್ಕೆ ಗುರಿಯಾಗುವವರು, ಪುಷ್ಪಗಳೇ ಬಾಣಗಳು ಹೀಗೆ ಕವಿಯ ಪ್ರೌಢೋಕ್ತಿಯಿಂದ ಸಿದ್ಧವಾಗಿವೆ. ಇವೆಲ್ಲವೂ ವಾಸ್ತವವಾಗಿ ಇರುವುವಲ್ಲ. ಇವು ಎಂದಿಗೂ ಸ್ವಾಭಾವಿಕವಾಗಿ ಸಂಭವಿಸುವುದಿಲ್ಲ. ಮನ್ಮಥನ ವಿಲಾಸವು ಎಲ್ಲರಲ್ಲೂ ಪ್ರಕಟವಾಯಿತೆಂಬ ವಸ್ತು ಇಲ್ಲಿ ವ್ಯಕ್ತವಾಗುತ್ತದೆ.

ಕವಿಪ್ರೌಢೋಕ್ತಿಸಿದ್ಧವಾದ ವಸ್ತುವಿನಿಂದ ಅಲಂಕಾರವು ವ್ಯಂಗ್ಯವಾಗಿ ತೋರುವುದನ್ನು ಉದಾಹರಿಸುತ್ತಾನೆ. 'ಎಲೈ ವೀರನೇ, ನಿನ್ನ ಕೀರ್ತಿಯ ಪರಂಪರೆಯು ನಿರ್ಮಲವಾದ ಕಿರಣಗಳುಳ್ಳ ಚಂದ್ರನ ಕಿರಣಗಳ ಸಮೂಹದಿಂದ ರಾತ್ರಿಯಲ್ಲಿ ಮಾತ್ರವೇ ಪ್ರಕಾಶಿಸುವ ಸಮಸ್ತಭೂಮಂಡಲವನ್ನು ಯಾವಾಗಲೂ ಬೆಳ್ಳಗೆ ಮಾಡುತ್ತದೆ. ಚಂದ್ರನು ರಾತ್ರಿಯಲ್ಲಿ ಮಾತ್ರವೇ ಶೋಭಿಸುತ್ತಾನೆ. ನಿನ್ನ ಕೀರ್ತಿಧಾರೆಯಾದರೋ ಯಾವಾಗಲೂ ಶೋಭಿಸುತ್ತಿದೆ. ಹೀಗೆ ಇದು ಚಂದ್ರನ ಕಿರಣಗಳ ಸಮೂಹಕ್ಕಿಂತಲೂ ಹೆಚ್ಚುಕಾಲ ಪ್ರಕಾಶಿಸುತ್ತದೆ ಎಂಬುದು ಇಲ್ಲಿ ಕವಿಪ್ರೌಢೋಕ್ತಿಸಿದ್ಧವಾದ ವಸ್ತು. ಇದರಿಂದ ವ್ಯತಿರೇಕಾಲಂಕಾರವು ಅಭಿವ್ಯಕ್ತವಾಗುತ್ತದೆ.

ಯಥಾರ್ಥವಾಗಿಲ್ಲದೆ ಕವಿಪ್ರೌಢೋಕ್ತಿಯಿಂದಲೇ ಸಿದ್ಧವಾದ ಅಲಂಕಾರದಿಂದ ವಸ್ತು ಅಭಿವ್ಯಕ್ತವಾಗುವುದನ್ನು ಉದಾಹರಿಸುತ್ತಾನೆ. ರಘುವಂಶದ ಹತ್ತನೇ ಸರ್ಗದಲ್ಲಿ ರಾಮನ ಜನನವನ್ನು ವರ್ಣಿಸುವಾಗ ಬರುವ ಪದ್ಯವಿದು. "ರಾಮನ ಉತ್ಪತ್ತಿಕಾಲದಲ್ಲಿ ರಾವಣನ ಹತ್ತು ಕಿರೀಟಗಳಿಂದ ರತ್ನವು ಕೆಳಗೆ ಬೀಳುವ ನೆಪದಿಂದ ರಾಕ್ಷಸಲಕ್ಷ್ಮಿಯ ಕಣ್ಣಿನಿಂದ ಹನಿಗಳು ನೆಲದಮೇಲೆ ಬಿದ್ದುವು" ಇಲ್ಲಿ ಕೇವಲ ಸಂಪತ್ತೆನಿಸಿದ ರಾಕ್ಷಸಲಕ್ಷ್ಮಿಗೆ ಕಣ್ಣೀರುಗಳು ಹೊರಗೆ ಬಂದವೆಂಬುದು ಅಸಂಭವವಾದ್ದರಿಂದ ಇಲ್ಲಿ ಕವಿಯು ಚಮತ್ಕಾರದಿಂದ ಈ ರೀತಿಯಲ್ಲಿ ಹೇಳಿದ್ದಾನೆ. ಆದ್ದರಿಂದ ಇಲ್ಲಿರುವ ಅಪಹ್ನುತ್ಯಲಂಕಾರವು ಕವಿಪ್ರೌಢೋಕ್ತಿಸಿದ್ಧವಾದದ್ದು. ಇದರಿಂದ ಮುಂದೆ ರಾಕ್ಷಸರ ವಿನಾಶವಾಗಲಿರುವುದೆಂಬ ವಸ್ತು ಅಭಿವ್ಯಕ್ತವಾಗುತ್ತದೆ.

ಕವಿಯ ಪ್ರೌಢೋಕ್ತಿಯಿಂದ ಸಿದ್ಧವಾದ ಅಲಂಕಾರದಿಂದ ಅಲಂಕಾರಧ್ವನಿಯನ್ನು ಉದಾಹರಿಸುತ್ತಾನೆ. ತ್ರಿಕಳಿಂಗ ದೇಶದ ಅಧಿಪತಿಯೇ, ನಿನ್ನ ಕೀರ್ತಿರಾಶಿಯೊಂದೇ ಸ್ವರ್ಗದಲ್ಲಿರುವ ರಮಣಿಯರ ಶರೀರದಲ್ಲಿ ಅನೇಕ ಬಗೆಯ ಆಭರಣಗಳಾಗಿ ಪರಿಣಮಿಸಿದೆ. ಅವರ ಕೇಶಪಾಶದಲ್ಲಿ ಅದು ಮಲ್ಲಿಗೆಹೂವಿನ ಗೊಂಚಲಾಯಿತು. ಹೀಗೆಯೇ ಅವರ ಕೈಯಲ್ಲಿ ಶ್ವೇತಕಮಲವಾಗಿ ಪರಿಣಮಿಸಿತು ; ಕುತ್ತಿಗೆಯಲ್ಲಿ ಮುತ್ತಿನಹಾರವಾಯಿತು ಹಾಗೆಯೇ ಸ್ತನಗಳೆರಡರಲ್ಲೂ ಗಾಢವಾದ ಶ್ರೀಗಂಧದ ಲೇಪವಾಯಿತು. ನಿನ್ನ ಕೀರ್ತಿರಾಶಿಯೊಂದೇ ಮಲ್ಲಿಗೆ ಹೂವು, ಬಿಳಿಯ ಕಮಲ, ಮುತ್ತಿನಹಾರ, ಶ್ರೀಗಂಧದ ರಸ ಇವೆಲ್ಲವೂ ಆಯಿತೆಂದು ಕೀರ್ತಿಯನ್ನು ಈ ರೂಪದಲ್ಲಿ ಆರೋಪಿಸಿರುವುದರಿಂದ ಇದು ವಾಸ್ತವಿಕವಲ್ಲವಾದ್ದರೂ ಕವಿಯ ಕಲ್ಪನೆಯಿಂದ ಸಿದ್ಧವಾದ ರೂಪಕಾಲಂಕಾರವೆನಿಸಿದೆ. ಇದರಿಂದ ವಿಭಾವನಾಲಾಂಕಾರವು ಇಲ್ಲಿ ಅಭಿವ್ಯಕ್ತವಾಗುತ್ತದೆ. ನೀನು ಭೂಮಿಯಲ್ಲೇ ಇದ್ದರೂ ಸ್ವರ್ಗದ ಜನರಿಗೆ ಉಪಕಾರವನ್ನು ಮಾಡುತ್ತಿರುವೆ ಎಂಬುದೇ ಇಲ್ಲಿ ವಿಭಾವನಾಲಂಕಾರದ ಸ್ವರೂಪ. ಸ್ವರ್ಗದಲ್ಲಿರುವ ಸ್ತ್ರೀಯರನ್ನು ಅಲಂಕರಿಸಲು ಕಾರಣವು ಸ್ವರ್ಗದಲ್ಲಿಯೇ ಇರಬೇಕಾಗಿತ್ತು. ಕಾರ್ಯಕಾರಣಗಳು ಒಂದೆಡೆಯೇ ಇರಬೇಕೆಂಬ ಈ ನಿಯಮವನ್ನು ಉಲ್ಲಂಘಿಸಿ ಇಲ್ಲಿ ಕಾರಣವಿಲ್ಲದೆಯೇ ಸ್ವರ್ಗದ ಜನರಿಗೆ ಉಪಕಾರವಾಯಿತೆಂದು ಕಾರ್ಯವನ್ನು ತಿಳಿಸಲಾಗಿದೆ. ಭೂಮಿಯಲ್ಲಿ ವ್ಯಾಪಿ

ಸಿದ ಕೀರ್ತಿಯು ಸ್ವರ್ಗಕ್ಕೆ ಹೋಗುವುದೆಂಬುದು ನಂಬಿಕೆಗೆ ಅರ್ಹವೆನಿಸಿಲ್ಲ. ಆದರೂ ಕವಿಯು ಪ್ರತಿಭೆಯಿಂದ ವಿಭಾವನಾಲಂಕಾರವನ್ನು ಕಲ್ಪಿಸಿದ್ದಾನೆ. ಆದರೂ ಇಲ್ಲಿ ಕಾರ್ಯಕಾರಣಗಳು ಬೇರೆ ಬೇರೆ ಕಡೆಗಳಲ್ಲಿರುವುದರಿಂದ ಅಸಂಗತಿ ಎಂಬ ಅಲಂಕಾರವೇ ನ್ಯಾಯವಾಗಿ ಕಾಣುತ್ತದೆ.

ಕವಿಯು ಕಲ್ಪಿಸಿದ ಜನರು ಪ್ರತಿಭೆಯಿಂದ ತೋರುವ ವಸ್ತು-ಬೇರೊಂದು ವಸ್ತುವನ್ನು ಪ್ರಕಾಶಿಸುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. ಎಲೈ "ಶೋಭನಾಂಗಿ, ಯಾವ ಪರ್ವತದಲ್ಲಿ ಎಷ್ಟುಕಾಲ ಯಾವ ಬಗೆಯ ತಪಸ್ಸನ್ನು ಈ ಗಿಳಿಯ ಮರಿಯು ಆಚರಿಸಿರಬೇಕು ? ಆದ್ದರಿಂದಲೇ ನಿನ್ನ ತುಟಿಯಂತೆ ಬೆಳ್ಳಗೂ ಕೆಂಪಗೂ ಇರುವ ತೊಂಡೆಯ ಹಣ್ಣನ್ನು ಇದು ಕಚ್ಚುತ್ತಿದೆ. ಕೊಕ್ಕಿನಿಂದ ತೊಂಡೆಯ ಹಣ್ಣನ್ನು ಕಚ್ಚುತ್ತಿರುವ ಗಿಳಿಯ ಮರಿಯನ್ನು ನೋಡಿ ಕವಿಯು ಕಲ್ಪಿಸಿದ ವ್ಯಕ್ತಿಯೊಬ್ಬನು ಒಬ್ಬ ಸುಂದರಿಗೆ ಹೇಳುವ ಈ ಮಾತಿನಲ್ಲಿ ನಾಯಿಕೆಯ ತುಟಿಯಂತೆ ತೊಂಡೆಹಣ್ಣು ಕೆಂಪಗಿದೆ ಎಂಬ ವಸ್ತು ಅಡಗಿದೆ. ತೊಂಡೆಹಣ್ಣಿನಂತೆ ತುಟಿ ಕೆಂಪಗಿದೆ ಎಂಬುದರ ಬದಲು ತುಟಿಯಂತೆ ಹಣ್ಣು ಕೆಂಪಗಿದೆ ಎಂದು ಕವಿಯು ತನ್ನ ಪ್ರತಿಭಾಸಾಮರ್ಥ್ಯದಿಂದ ಕಲ್ಪಿಸಿದ್ದಾನೆ. ತುಟಿಯು ಬಹಳ ಕೆಂಪಗೆ ಮನೋಹರವಾಗಿದೆ ಎಂಬ ವಸ್ತುವನ್ನು ಹೀಗೆ ಕವಿಯು ಪ್ರತಿಭೆಯಿಂದ ಕಲ್ಪಿಸಿದ್ದಾನೆ. ಇದರಿಂದ ಬೇರೊಂದು ವಸ್ತುವು ಅಭಿವ್ಯಕ್ತವಾಗುತ್ತದೆ. ಆ ವಸ್ತು ಯಾವುದು ? ನಿನ್ನ ಅಧರಾಮೃತವು ಹೆಚ್ಚು ಪುಣ್ಯವನ್ನು ಗಳಿಸಿದವರಿಗೆ ಮಾತ್ರವೇ ದೊರೆಯುವಂತಹದು ಎಂಬ ವಸ್ತು ಇಲ್ಲಿ ಅಭಿವ್ಯಕ್ತವಾಗುತ್ತದೆ.

ಕವಿಕಲ್ಪಿತವಾದ ವ್ಯಕ್ತಿಒಬ್ಬನು ಹೇಳುವ ಮಾತಿನಿಂದ ತೋರುವ ವಸ್ತುವಿನಿಂದ ಅಲಂಕಾರವು ಅಭಿವ್ಯಕ್ತವಾಗುವುದನ್ನು ಉದಾಹರಿಸುತ್ತಾನೆ. ಪ್ರವಾಸದಿಂದ ಬಂದವನೊಬ್ಬನು ಪ್ರಿಯೆಗೆ ತನ್ನ ಪ್ರವಾಸಕಾಲದ ಅವಸ್ಥೆಯನ್ನು ವರ್ಣಿಸುತ್ತಾನೆ. "ಎಲೈ ಸುಂದರಿಯೇ, ವಸಂತಕಾಲದಲ್ಲಿ ಮನ್ಮಥನ ಬಾಣಗಳು ಅವನ ಪ್ರಭಾವದಿಂದಲೇ ಕೋಟಿಸಂಖ್ಯೆಯಷ್ಟು ಹೆಚ್ಚಿದವು. ಎಲ್ಲಿ ನೋಡಿದರೂ ಅವೇ ಬಾಣಗಳು ವ್ಯಾಪಿಸಿದ್ದುದರಿಂದ ಅವು ಐದೆಂಬ ಸಂಖ್ಯೆಯನ್ನು ತೊರೆದವು; ಆದರೆ ವಿರಹಿಗಳಿಗೆ ಈ ಪಂಚತ್ವವು (ಮರಣವು) ಅಂಟಿಕೊಂಡಿತು" ಇಲ್ಲಿ ಮನ್ಮಥನ ಬಾಣಗಳು ಕೋಟಿಸಂಖ್ಯೆಯಷ್ಟಿದ್ದುದರಿಂದ ವಿಯೋಗಿಗಳೆಲ್ಲರೂ ಸತ್ತರೆಂಬ ವಸ್ತುವನ್ನು ಕವಿಕಲ್ಪಿತನಾದ ವ್ಯಕ್ತಿಯೊಬ್ಬನು ತನ್ನ ಪ್ರತಿಭೆಯಿಂದ ತಿಳಿಸುತ್ತಾನೆ. ಹೀಗೆ ಇಲ್ಲಿ ಹೇಳಿರುವ ವಸ್ತು ಯಥಾರ್ಥವಾದುದಲ್ಲ. ಮನ್ಮಥನ ಬಾಣದಿಂದ ಸಮಸ್ತವಿಯೋಗಿಗಳಿಗೂ ಮರಣವುಂಟಾಯಿತೆಂಬ ವಸ್ತು ಪ್ರೌಢೋಕ್ತಿಯಿಂದಲೇ ತಿಳಿದುಬರುವಂತಹದು. ಇದರಿಂದ ಉತ್ಪ್ರೇಕ್ಷಾಲಂಕಾರವು ಅಭಿವ್ಯಕ್ತವಾಗುತ್ತದೆ. ಮನ್ಮಥನು ಐದು ಬಾಣಗಳನ್ನೇ ಯಾವಾಗಲೂ ಪ್ರಯೋಗಿಸುವನು. ಈ ಬಾಣಗಳು ಕೋಟಿಸಂಖ್ಯೆಯಷ್ಟು ಹೆಚ್ಚಿದ್ದುದರಿಂದ ಅಲ್ಲಿದ್ದ ಪಂಚತ್ವವು ಅವನ್ನು ಬಿಟ್ಟು ವಿಯೋಗಿಗಳನ್ನು ಆಶ್ರಯಿಸಿತೋ ಏನೋ ಎಂದು ಉತ್ಪ್ರೇಕ್ಷೆಯು ಇಲ್ಲಿ ಅಭಿವ್ಯಕ್ತವಾಗುತ್ತದೆ.

ಕವಿಕಲ್ಪಿತನಾದ ವ್ಯಕ್ತಿಯೊಬ್ಬನು ಹೇಳುವ ಪ್ರತಿಭೆಯ ಮಾತಿನಿಂದ ತೋರುವ ಅಲಂಕಾರದಿಂದ ವಸ್ತು ಒಂದು ಅಭಿವ್ಯಕ್ತವಾಗುವುದನ್ನು ಉದಾಹರಿಸುತ್ತಾನೆ. 'ಕೋಪಿಸ್ಠಳೇ ಪ್ರಣಯಕೋಪವನ್ನು ತೊಲಗಿಸಲಿಕ್ಕಾಗಿ ಮಲ್ಲಿಗೆ ಹೂವಿನ ಮೊಗ್ಗಿನಲ್ಲಿ ಶಬ್ದ ಮಾಡುವ ಭ್ರಮರವು ಮನ್ಮಥನ ಯುದ್ಧಯಾತ್ರೆಯಲ್ಲಿ ಶಂಖವನ್ನು ಊದುತ್ತಿದೆಯೋ ಏನೊ ಎಂಬಂತೆ ಪ್ರಕಾಶಿಸುತ್ತದೆ.' ಕವಿಕಲ್ಪಿತವಾದ ವ್ಯಕ್ತಿಯೊಬ್ಬನು ತನ್ನ ಪ್ರೌಢೋಕ್ತಿಯಿಂದ ತಿಳಿಸುವ ಈ ಮಾತು ಸ್ವಾಭಾವಿಕವಾದುದಲ್ಲವಾದರೂ ಇದರಿಂದ ಉತ್ಪ್ರೇಕ್ಷಾಲಾಂಕಾರವು ತೋರಿ ಅದರಿಂದ ಕಾಮೋದ್ರೇಕವನ್ನು ಹುಟ್ಟಿಸುವ ಕಾಲವು ಒದಗಿವೆ. ಇದರಿಂದ ಕೋಪಸ್ವಭಾವವನ್ನು ಬಿಡು ಎಂಬ ವಸ್ತು ವ್ಯಂಗ್ಯವಾಗಿ ತೋರುತ್ತದೆ.

ಕವಿಕಲ್ಪಿತವ್ಯಕ್ತಿಯೊಬ್ಬನ ಪ್ರತಿಭಾವಾಣಿಯಿಂದ ತೋರುವ ಅಲಂಕಾರವು ಮತ್ತೊಂದು ಅಲಂಕಾರವನ್ನು ಪ್ರಕಾಶಪಡಿಸುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. ಅನೇಕ ಹೆಂಡತಿಯರಿರುವ ನಾಯಕನೊಬ್ಬನು ಪರಸ್ಥಳಕ್ಕೆ ಹೋಗಿ ತನ್ನ ನಾಯಿಕೆಯ ವೃತ್ತಾಂತವನ್ನು ತಿಳಿಯಲಿಚ್ಛಿಸಿದಾಗ ಅವನಿಗೆ ಆ ನಾಯಿಕೆಯ ದೂತಿಯು ಹೇಳುವ ಮಾತಿದು. "ಎಲೈ ಸ್ತ್ರೀವಲ್ಲಭನೇ, ಅನೇಕ ಹೆಂಡತಿಯರ ಅನುರಾಗದಿಂದ ತುಂಬಿರುವ ನಿನ್ನ ಹೃದಯದಲ್ಲಿ ಅಡಗದೇ ಇರುವ ಆ ನಾಯಿಕೆಯು ಪ್ರತಿದಿನವೂ ಬೇರೆ ಯಾವ ಕೆಲಸವೂ ಇಲ್ಲದೆ ಸಹಜವಾಗಿ ಕೃಶವಾಗಿರುವ ದೇಹವನ್ನು ನಿನ್ನ ಹೃದಯದಲ್ಲಿ ಅವಕಾಶವನ್ನು ಪಡೆಯುವ ಉದ್ದೇಶದಿಂದ ಮತ್ತೆ ಕೃಶಪಡಿಸುತ್ತಿರುವಳು.'' ಇಲ್ಲಿ ತೋರುವ ಕಾವ್ಯಾಲಿಂಗಾಲಂಕಾರವು ಯಥಾರ್ಥವಾದುದಲ್ಲ. ಆದರೆ ಕವಿಕಲ್ಪಿತಳಾದ ದೂತಿಯು ತನ್ನ ಪ್ರತಿಭೆಯಿಂದ ಹೀಗೆ ಕಲ್ಪಿಸಿದ್ದಾಳೆ. ಅನೇಕ ಸ್ತ್ರೀಯರಿಗೆ ಪ್ರಿಯನೆನಿಸಿದವನು ಆ ನಾಯಿಕೆಗೂ ಪ್ರಿಯನಾದ್ದರಿಂದ ಅವನ ಹೃದಯದಲ್ಲಿ ಆಕೆಯೂ ಸ್ಥಾನವನ್ನು ಪಡೆಯಲೇಬೇಕಾದ್ದು ನ್ಯಾಯವೆಂದು ದೂತಿಯು ಕಲ್ಪಿಸಿ ಹೇಳಿದ್ದಾಳೆ. ಆದರೆ ಆಕೆಯು ಅವನ ಹೃದಯದಲ್ಲಿ ಅಡಗಲಿಲ್ಲ. ಅಡಗಬೇಕಾದರೆ ದೇಹವು ಕೃಶವಾಗಬೇಕು. ಹೃದಯದಲ್ಲಿ ಅವಳಿಗೆ ಅವಕಾಶವು ಸಿಕ್ಕದಿದ್ದುದೇ ದೇಹವನ್ನು ಕೃಶಪಡಿಸಲು ಹೇತುವೆನಿಸಿದೆ. ಹೀಗೆ ಇದಕ್ಕೆ 'ಅಮಾಂತೀ' ಎಂಬ ಪದದ ಅರ್ಥವು ಹೇತುವೆನಿಸಿದ್ಧರಿಂದ ಇದು ಪದಾರ್ಥಹೇತುಕವಾದ ಕಾವ್ಯಲಿಂಗಾಲಂಕಾರವೆನಿಸಿದೆ. ಇದರಿಂದ ಮತ್ತೊಂದು ಅಲಂಕಾರವು ಅಭಿವ್ಯಕ್ತವಾಗುತ್ತದೆ. ಹೆಚ್ಚು ಅವಕಾಶವೇ ಇಲ್ಲದಿರುವ ಹೃದಯದಲ್ಲಿ ಸ್ಥಾನವನ್ನು ಪಡೆಯಲು ದೇಹವನ್ನು ಕೃಶಪಡಿಸಿಕ್ಕೊಂಡರೂ ಸಹ ಹೃದಯದಲ್ಲಿ ಸ್ಥಾನವು ಸಿಕ್ಕದೆ ಅವಳು ನಿರಾಶಳೇ ಆಗಬೇಕಾಯಿತು. ಕಾರಣವಿದ್ದರೂ ಫಲವಾಗವಿಲ್ಲವೆಂಬುದೇ ವಿಶೇಷೋಕ್ತಿ. ಇದು ಇಲ್ಲಿ ವಾಚ್ಯವೆನಿಸದೆ ವ್ಯಂಗ್ಯವಾಗಿ ತೋರುತ್ತದೆ.

ಕವಿಯು ಕಲ್ಪಿಸಿದ ವ್ಯಕ್ತಿಯೊಬ್ಬನು ಹೇಳುವ ಮಾತೂ ಸಹ ಕವಿಯ ಮಾತೇ ಆಗಿದೆ. ಆದ್ದರಿಂದ ಕವಿಯ ಮಾತಿಗೂ ಕವಿಕಲ್ಪಿತವ್ಯಕ್ತಿಯ ಮಾತಿಗೂ ಭೇದವಿಲ್ಲದ ಪ್ರಯುಕ್ತ ಇಲ್ಲಿ ಅವೆರಡನ್ನು ಏಕೆ ಬೇರೆಯಾಗಿ ತಿಳಿಸಿದೆ ? ಎಂಬವಕ್ಕೆ ಸಮಾಧಾನ

ವನ್ನು ತಿಳಿಸುತ್ತಾನೆ. ಕವಿಯ ಮಾತಿಗಿಂತಲೂ ಕವಿನಿಬದ್ಧನಾದ ವಕ್ತೃವಿನ ಮಾತು ಪ್ರತ್ಯೇಕವಾಗಿರಲೇಬೇಕು. ಅಂತಹ ವಕ್ತೃವಿನಲ್ಲಿ ಅನುರಾಗ ಉತ್ಸಾಹಗಳಿರುವಂತೆ ಕವಿಗೆ ಇರುವುದಿಲ್ಲ. ಕವಿಗಿಂತಲೂ ಕವಿನಿಬದ್ಧವಕ್ತೃವಿಗೆ ಹೆಚ್ಚು ಅಭಿನಿವೇಶವಿರುವ ಪ್ರಯುಕ್ತ ಕವಿಯ ಮಾತಿಗಿಂತಲೂ ಕವಿನಿಬದ್ಧವಕ್ತೃವಿನ ಮಾತು ಸಹೃದಯರಿಗೆ ಹೆಚ್ಚು ಚಮತ್ಕಾರವನ್ನುಂಟುಮಾಡುತ್ತದೆ. ಆದ್ದರಿಂದ ಎರಡನ್ನೂ ಬೇರೆಯಾಗಿ ತಿಳಿಸಿದೆ. ಇವುಗಳಲ್ಲಿ ಅಲಂಕಾರಗಳನ್ನು ಅಭಿವ್ಯಕ್ತಪಡಿಸುವ ಕಡೆಗಳಲ್ಲಿ ರೂಪಕದಲ್ಲಿ ಆರೋಪಿಸುವುದು, ಉತ್ಪ್ರೇಕ್ಷೆಯಲ್ಲಿ ಉತ್ಪ್ರೇಕ್ಷಿಸುವುದು, ವ್ಯತಿರೇಕದಲ್ಲಿ ಒಂದಕ್ಕಿಂತ ಮತ್ತೊಂದರಲ್ಲಿ ವಿಶೇಷವನ್ನು ತಿಳಿಸಿ ಪ್ರತ್ಯೇಕಿಸುವುದು, ಉಪಮಾನದೊಡನೆ ಸದೃಶವೆನಿಸುವುದು ಹೀಗೆ ಇವಿಷ್ಟೇ ಸಹೃದಯರಿಗೆ ಅಹ್ಲಾದವನ್ನುಂಟುಮಾಡುವುದರಿಂದ ಇದು ಪ್ರಧಾನವೆನಿಸಿದೆ. ಅದರೆ ಕೀರ್ತಿಯಲ್ಲಿ ಆರೋಪಿತವಾದ ವಸ್ತು ಮಲ್ಲಿಕಾಪುಷ್ಪ ಇವೇ ಮೊದಲಾದವು ಇಲ್ಲಿ ಪ್ರಧಾನವೆನಿಸಲಾರವು. ಆದ್ದರಿಂದ ಅಲಂಕಾರಧ್ವನಿಯಲ್ಲಿ ಅಲಂಕಾರ್ಯವಾದ ವಸ್ತುವು ಪ್ರಧಾನವೆನಿಸಿದ್ದರಿಂದ ಅಲಂಕಾರಧ್ವನಿಯನ್ನು ವಸ್ತುಧ್ವನಿಯಿಂದ ಪ್ರತ್ಯೇಕವಾಗಿ ತಿಳಿಸಬೇಕಾದ್ದು ಆವಶ್ಯಕವೆಂದು ಭಾವಿಸಿ ಇಲ್ಲಿ ಬೇರೆಯಾಗಿ ತಿಳಿಸಿದೆ.

ಏಕಃ ಶಬ್ದಾರ್ಥಶಕ್ತ್ಯುತ್ಥೇ ತದಷ್ಟಾದಶಧಾ ಧ್ವನಿಃ

ಉಭಯಶಕ್ತ್ಯುದ್ಭವೇ ವ್ಯಂಗ್ಯೇ ಏಕೋ ಧ್ವನೇರ್ಭೇದಃ ಯಥಾ ।—

ಹಿಮಮುಕ್ತಚಂದ್ರರುಚಿರಃ ಸಪದ್ಮಕೋ ಮದಯನ್ ದ್ವಿಜಾನ್ ಜನಿತಮೀನಕೇತನಃ।
ಅಭವತ್ ಪ್ರಸಾದಿತಸುರೋ ಮಹೋತ್ಸವಃ ಪ್ರಮದಾಜನಸ್ಯ ಸ ಚಿರಾಯ ಮಾಧವಃ॥

ಅತ್ರ ಮಾಧವಃ ಕೃಷ್ಣೋ ಮಾಧವೋ ವಸಂತ ಇವೇತ್ಯುಪಮಾಲಂಕಾರೋ ವ್ಯಂಗ್ಯಃ। ಏವಂ ಚ ವ್ಯಂಗ್ಯಭೇದಾದೇವ ವ್ಯಂಜಕಾನಾಂ ಕಾವ್ಯಾನಾ ಭೇದಃ ॥

ಅವಿವಕ್ಷಿತವಾಚ್ಯಃ ಅರ್ಥಾಂತರಸಂಕ್ರಮಿತವಾಚ್ಯೋಽತ್ಯಂತತಿರಸ್ಕೃತವಾಚ್ಯಶ್ಚೇತಿ ದ್ವಿವಿಧಃ ವಿವಕ್ಷಿತಾನ್ಯಪರವಾಚ್ಯಸ್ತು ಅಸಂಲಕ್ಷ್ಯಕ್ರಮವ್ಯಂಗ್ಯತ್ವೇನೈಕಃ. ಸಂಲಕ್ಷ್ಯಕ್ರಮವ್ಯಂಗ್ಯತ್ವೇನ ಚ ಶಬ್ದಾರ್ಥೋಭಯಶಕ್ತಿಮೂಲತಯಾ ಪಂಚದಶೇತಿ ಅಷ್ಟಾದಶಭೇದೋ ಧ್ವನಿಃ. ಏಷು ಚ.

ವಾಕ್ಯೇ ಶಬ್ದಾರ್ಥಶಕ್ತ್ಯುತ್ಥಸ್ತದನ್ಯೇ ಪದವಾಕ್ಯಯೋಃ ।

ತತ್ರ ಅರ್ಥಾಂತರಸಂಕ್ರಮಿತವಾಚ್ಯೋ ಧ್ವನಿಃ ಪದಗತೋ ಯಥಾ—

ಧನ್ಯಃ ಸ ಏವ ತರುಣೋ ನಯನೇ ತಸ್ಯೈವ ನಯನೇ ಚ ।
ಯುವಜನಮೋಹನವಿದ್ಯಾ ಭವಿತೇಯಂ ಯಸ್ಯ ಸಮ್ಮುಖೇ ಸುಮುಖೀ ॥

ತತ್ರ ದ್ವಿತೀಯನಯನಶಬ್ದೋ ಭಾಗ್ಯವತ್ತಾದಿಗುಣವಿಶಿಷ್ಟನಯನಪರಃ—

ವಾಕ್ಯಗತೋ ಯಥಾ—

ತ್ವಾಮಸ್ಮಿ ವಚ್ಮಿ ವಿದುಷಾಂ ಸಮವಾಯೋಽತ್ರ ತಿಷ್ಠತಿ ।
ಆತ್ಮೀಯಾಂ ಮತಿಮಾದಾಯ ಸ್ಥಿತಿಮತ್ರ ವಿಧೇಹಿ ತತ್ ॥

ಅತ್ರ ಪ್ರತಿಪಾದ್ಯಸ್ಯ ಸಂಮುಖೀನತ್ವಾದೇವ ಲಬ್ಧೇ ಪ್ರತಿಪಾದ್ಯತ್ವೇ 'ತ್ವಾಮ್'

ಇತಿ ಪುನರ್ವಚನಂ ಅನ್ಯವ್ಯಾವೃತ್ತಿವಿಶಿಷ್ಟಂ ತ್ವದರ್ಥಂ ಲಕ್ಷಯತಿ. ಏವಂ 'ವಚ್ಮಿ' ಇತ್ಯನೇನೈವ ಕರ್ತರಿ ಲಬ್ಧೇ 'ಅಸ್ಮಿ' ಇತಿ ಪುನರ್ವಚನಂ ಅನ್ಯವ್ಯಾವೃತ್ತಿವಿಶಿಷ್ಟಂ ಮದರ್ಥಂ ಲಕ್ಷಯತಿ. ತಥಾ 'ವಿದುಷಾಂ ಸಮುದಾಯಃ' ಇತ್ಯಾದಿವಚನೇನೈವ ವಕ್ತುಃ ಪ್ರತಿಪಾದನೇ ಸಿದ್ಧೇ ಪುನಃ 'ವಚ್ಮಿ' ಇತಿ ವಚನಂ 'ಉಪದಿಶಾಮಿ' ಇತಿ ವಚನವಿಶೇಷರೂಪಮರ್ಥಂ ಲಕ್ಷಯತಿ. ಏತಾನಿ ಚ ಲಕ್ಷಿತಾನಿ ಸ್ವಾತಿಶಯಂ ವ್ಯಂಜಯಂತಿ. ಏತೇನ ಮಮ ವಚನಂ ತವ ಅತ್ಯಂತಂ ಹಿತಂ; ತದವಶ್ಯಮೇತತ್ ಕರ್ತವ್ಯಮಿತ್ಯಭಿಪ್ರಾಯಃ. ತದೇವಮಯಂ ವಾಕ್ಯಗತೋಽರ್ಥಾಂತರಸಂಕ್ರಮಿತವಾಚ್ಯೋ ಧ್ವನಿಃ.

ಅತ್ಯಂತತಿರಸ್ಕೃತವಾಚ್ಯಃ ಪದಗತೋಯಥಾ "ನಿಶ್ವಾಸಾಂಧ ಇವ" ಇತ್ಯಾದಿ. ವಾಕ್ಯಗತೋ ಯಥಾ 'ಉಪಕೃತಂ ಬಹು' ಇತ್ಯಾದಿ.

ಅನ್ಯೇಷಾಂ ವಾಕ್ಯಗತತ್ವೇ ಉದಾಹೃತಮ್ ಪದಗತತ್ವೇ ಯಥಾ.

ಲಾವಣ್ಯಂ ತದಸೌ ಕಾಂತಿಸ್ತದ್ರೂಪಂ ಸ ವಚಃಕ್ರಮಃ ।
ತದಾ ಸುಧಾಸ್ಪದಮಭೂದಧುನಾ ತು ಜ್ವರೋ ಮಹಾನ್ ॥

ಅತ್ರ ಲಾವಣ್ಯಾದೀನಾಂ ತಾದೃಗನುಭವೈಕಗೋಚರತಾವ್ಯಂಜಕಾನಾಂ ತದಾದಿಶಬ್ದಾನಾಮೇವ ಪ್ರಾಧಾನ್ಯಮ್. ಅನ್ಯೇಷಾಂ ತು ತದುಪಕಾರಿತ್ವಮೇವೇಶಿತನ್ಮೂಲ ಏವ ಧ್ವನಿವ್ಯಪದೇಶಃ.

ತದುಕ್ತಂ ಧ್ವನಿಕೃತಾ— ಏಕಾವಯವಸಂಸ್ಥೇನ ಭೂಷಣೇನೇವ ಕಾಮಿನೀ ।
ಪದದ್ಯೋತ್ಯೇನ ಸುಕವೇರ್ಧ್ವನಿನಾ ಭಾತಿ ಭಾರತೀ ॥

ಏವಂ ಭಾವಾದಿಷ್ವಪ್ಯೂಹ್ಯಮ್— ಭುಕ್ತಿಮುಕ್ತಿಕೃದೇಕಾಂತಸಮಾದೇಶನತತ್ಪರಃ ॥
ಕಸ್ಯ ನಾನಂದನಿಸ್ಯಂದಂ ವಿದಧಾತಿ ಸದಾಗಮಃ ॥

ಅತ್ರ ಸದಾಗಮಶಬ್ದಃ ಸನ್ನಿಹಿತಮುಪನಾಯಕಂ ಪ್ರತಿ ಸಚ್ಛಾಸ್ತ್ರಾರ್ಥಮಭಿಧಾಯ 'ಸತಃ ಪುರುಷಸ್ಯಾಗಮಃ' ಇತಿ ವಸ್ತು ವ್ಯನಕ್ತಿ, ನನು 'ಸದಾಗಮಃ ಸದಾಗಮ ಇವ' ಇತಿ ನ ಕಥಮುಪಮಾಧ್ವನಿರಿತಿ ಚೇನ್ನ – ಸದಾಗಮಶಬ್ದಾರ್ಥಯೋರುಪಮಾನೋಪಮೇಯಭಾವಾವಿವಕ್ಷಣಾತ್. ರಹಸ್ಯಸಂಗೋಪನಾರ್ಥಮೇವ ಹಿ ದ್ವ್ಯರ್ಥಪ್ರತಿಪಾದನಂ ಪ್ರಕರಣಾದಿಪರ್ಯಾಲೋಚನೇನ ಸಚ್ಛಾಸ್ತ್ರಾಭಿಧಾನಸ್ಯಅಸಂಬಂಧತ್ವಾತ್.

ಅನನ್ಯಸಾಧಾರಣಧೀರ್ಧೃತಾಖಿಲವಸುಂಧರಃ ।
ರಾಜತೇ ಕೋಽಪಿ ಜಗತಿ ಸ ರಾಜಾ ಪುರುಷೋತ್ತಮಃ ॥

ಅತ್ರ ಪುರುಷಶ್ರೇಷ್ಠಃ ಪುರುಷೋತ್ತಮ ಇವೇತ್ಯುಪಮಾಧ್ವನಿಃ ಅನಯೋಃ ಶಬ್ದಶಕ್ತಿಮೂಲೌ ಸಂಲಕ್ಷ್ಯಕ್ರಮಭೇದೌ.

ಶಬ್ದಶಕ್ತಿಮೂಲಧ್ವನಿ ಮತ್ತು ಅರ್ಥಶಕ್ತಿಮೂಲಧ್ವನಿ ಇವೆರಡನ್ನೂ ವಿವರಿಸಿ ಈಗ ಶಬ್ದಾರ್ಥೋಭಯಶಕ್ತಿಮೂಲಧ್ವನಿಯ ಭೇದವನ್ನು ತಿಳಿಸುತ್ತಾನೆ. ಶಬ್ದಾರ್ಥಗಳೆರಡರ ಶಕ್ತಿಯಿಂದಲೂ ಸಂಭವಿಸುವ ಧ್ವನಿ ಒಂದೇ ಬಗೆಯಾಗಿದೆ. ವಸ್ತುವೆನಿಸಿದ

ಶಬ್ದಾರ್ಥಗಳೆರಡೂ ಇಲ್ಲಿ ಬೇರೊಂದು ಅರ್ಥವನ್ನು ಪ್ರಕಾಶಪಡಿಸುವುದರಿಂದ ಆ ಅರ್ಥವು ಒಂದು ವಸ್ತುವೆನಿಸದೆ ಕೇವಲ ಅಲಂಕಾರವೇ ಆಗುವ ಪ್ರಯುಕ್ತ ಶಬ್ದಾರ್ಥೋಭಯಶಕ್ತಿಮೂಲಧ್ವನಿಯು ಒಂದೇ ಬಗೆಎನಿಸಿದೆ. ಇದನ್ನು ಉದಾಹರಿಸುತ್ತಾನೆ. ಶಿಶುಪಾಲವಧದ ಹದಿಮೂರನೆಯ ಸರ್ಗದಲ್ಲಿ ಕೃಷ್ಣನು ಇಂದ್ರಪ್ರಸ್ಥನಗರಕ್ಕೆ ಹೋದಾಗ ಅಲ್ಲಿಯ ವೃತ್ತಾಂತವನ್ನು ಇಲ್ಲಿ ತಿಳಿಸಲಾಗಿದೆ. "ಹಿಮಾವರಣದಿಂದ ಬಿಡುಗಡೆಯಾದ ಚಂದ್ರನಂತೆ ಸುಂದರನಾಗಿ, ಹೆಂಡತಿ ಪದ್ಮೆಯೊಡಗೂಡಿ, ದ್ವಿಜರೆನಿಸಿದ ಬ್ರಾಹ್ಮಣ ಕ್ಷತ್ರಿಯ ವೈಶ್ಯರೆಲ್ಲರಿಗೆ ಆನಂದವನ್ನುಂಟುಮಾಡುತ್ತ, ಪ್ರದ್ಯುಮ್ನನೆಂಬ ಮಗನನ್ನು ಪಡೆದು, ರಾಕ್ಷಸರ ಸಂಹಾರದಿಂದ ದೇವತೆಗಳನ್ನು ಸಂತೋಷಪಡಿಸಿದ ಶ್ರೀಕೃಷ್ಣನು ಶೀತಕಾಲದ ಹಿಮದಿಂದ ಬಿಡುಗಡೆಯಾದ ಚಂದ್ರನಿಂದ ಶೋಭಿಸುತ್ತಲೂ ವಿಕಸಿತವಾದ ಕಮಲಗಳೊಡಗೂಡಿಯೂ, ಕೋಗಿಲೆ ಮೊದಲಾದ ಪಕ್ಷಿಗಳನ್ನು ಸಂತೋಷಗೊಳಿಸುತ್ತಲೂ, ಜನರಿಗೆ ಕಾಮೋದ್ರೇಕವನ್ನುಂಟುಮಾಡುತ್ತಲೂ, ಮದ್ಯವನ್ನು ಕುಡಿಯಲು ಹಿತವಾಗುವಂತೆಯೂ ಮಾಡುವ ವಸಂತಕಾಲದಂತೆ ಇಂದ್ರಪ್ರಸ್ಥನಗರದ ಸ್ತ್ರೀಯರಿಗೆ ದರ್ಶನದಿಂದಲೇ ಹೆಚ್ಚು ಆನಂದವನ್ನುಂಟುಮಾಡಿದನು'' ಇಲ್ಲಿ ಪ್ರಕೃತಸಂದರ್ಭಕ್ಕೆ ಅನುಗುಣವಾದ ಶ್ರೀಕೃಷ್ಣನ ಆಗಮನವನ್ನು ವರ್ಣಿಸುವಾಗ ಅದರೊಡನೆಯೇ ಶಬ್ದಾರ್ಥಗಳೆರಡರಿಂದಲೂ ತೋರುವ ಅಪ್ರಕೃತವಾದ ವಸಂತಕಾಲದ ವರ್ಣನೆ ತೋರುತ್ತದೆ. ಇದು ಇಲ್ಲಿ ಅಸಂಬದ್ಧವಾಗಬಾರದೆಂದು ಕೃಷ್ಣನು ವಸಂತನಂತೆ ಜನರಿಗೆ ಸಂತೋಷಗೊಳಿಸಿದನೆಂದು ಉಪಮಾಲಂಕಾರವು ಇಲ್ಲಿ ಸಹಜವಾಗಿ ತೋರುತ್ತದೆ ಎಂದು ಒಪ್ಪಲೇ ಬೇಕು. ಹೀಗೆ ಶಬ್ದಾರ್ಥಗಳೆರಡರಿಂದಲೂ ತೋರುವ ಬೇರೊಂದು ಅರ್ಥವನ್ನು ಅಲಂಕಾರವೆಂದು ಇಲ್ಲಿ ಭಾವಿಸಲಾಗಿದೆ.

ಹೀಗೆ ವ್ಯಂಗ್ಯಾರ್ಥಗಳ ವೈವಿಧ್ಯದಿಂದ ಅವನ್ನು ವ್ಯಕ್ತಪಡಿಸುವ ಕಾವ್ಯಗಳಲ್ಲೂ ಭೇದವಿರುವ ಪ್ರಯುಕ್ತ ಧ್ವನಿಯು ಒಟ್ಟಿನಲ್ಲಿ ಹದಿನೆಂಟು ಬಗೆ ಎನಿಸಿದೆ. ಲಕ್ಷಣಾಮೂಲವೆನಿಸಿದ ಅವಿವಕ್ಷಿತವಾಚ್ಯದಲ್ಲಿ ಅರ್ಥಾಂತರಸಂಕ್ರಮಿತವಾಚ್ಯ ಅತ್ಯಂತತಿರಸ್ಕೃತವಾಚ್ಯ ಎಂದು ಎರಡು ಬಗೆಗಳು, ಅಭಿಧಾಮೂಲವೆನಿಸಿದ ವಿವಕ್ಷಿತಾನ್ಯಪರವಾಚ್ಯದಲ್ಲಿ ಹದಿನಾರು ಬಗೆಗಳು. (ಅಸಂಲಕ್ಷ್ಯಕ್ರಮವ್ಯಂಗ್ಯದಲ್ಲಿ ರಸಭಾವಾದಿಗಳನ್ನು ಪ್ರಕಾಶಪಡಿಸುವುದು ಒಂದು ಬಗೆ) ಸಂಲಕ್ಷ್ಯಕ್ರಮವ್ಯಂಗ್ಯದಲ್ಲಿ ಶಬ್ದಶಕ್ತಿಮೂಲದಲ್ಲಿ ಎರಡು ಬಗೆಗಳು, ಅರ್ಥಶಕ್ತಿಮೂಲದಲ್ಲಿ ಹನ್ನೆರಡು ಬಗೆಗಳು, ಉಭಯಶಕ್ತಿಮೂಲದಲ್ಲಿ ಒಂದುಬಗೆ) ಹೀಗೆ ಬಿಟ್ಟು ಧ್ವನಿಭೇದಗಳು ಹದಿನೆಂಟು ಬಗೆ ಎನಿಸಿವೆ. ಈ ಹದಿನೆಂಟು ಬಗೆಗಳು ಕೆಲವುಕಡೆ ಪದದಲ್ಲೂ ಕೆಲವು ಕಡೆ ವಾಕ್ಯದಲ್ಲೂ ಸಂಭವಿಸುತ್ತವೆ. ಈಗ ಅರ್ಥಾಂತರಸಂಕ್ರಮಿತವಾಚ್ಯಧ್ವನಿಯು ಒಂದು ಪದದಿಂದ ತೋರುವುದನ್ನು ಉದಾಹರಿಸುತ್ತಾನೆ. ಹೆಚ್ಚು ಸೌಂದರ್ಯವುಳ್ಳ ಕನ್ಯೆಯೊಬ್ಬಳನ್ನು ನೋಡಿ ಒಬ್ಬನು ಅಭಿಲಾಷೆಯಿಂದ ಹೀಗೆ ಹೇಳುತ್ತಾನೆ. "ಯುವಕರನ್ನು ಮೋಹಗೊಳಿಸುವ ವಿದ್ಯೆಯೇ ತಾನಾಗಿರುವ ಈ ತರುಣಿಯು ಯಾವನ ಎದುರಿಗೆ ಪ್ರಸನ್ನಳಾಗಿ ನಿಲ್ಲುವಳೋ

ಅವನೇ ಪುಣ್ಯಶಾಲಿ, ಅವನ ಕಣ್ಣುಗಳೇ ಸಾರ್ಥಕವಾದ ಕಣ್ಣುಗಳು. ಇಲ್ಲಿ ಎರಡನೆಯ ನಯನ ಶಬ್ದವು ಸೌಭಾಗ್ಯ ಸಾರ್ಥಕ್ಯ ಮೊದಲಾದ ಗುಣಗಳಿಂದ ಕೂಡಿದ ಕಣ್ಣು ಎಂಬ ಅರ್ಥವನ್ನು ಪ್ರಕಾಶಪಡಿಸುತ್ತದೆ. ನೇತ್ರ ಎಂಬ ವಾಚ್ಯಾರ್ಥವು ಇಂತಹ ಗುಣಶಾಲಿಯಾದ ಕಣ್ಣು ಎಂಬ ಅರ್ಥದಲ್ಲಿ ಪ್ರವೇಶಿಸುವುದರಿಂದ ಇದು ಅರ್ಥಾಂತರ ಸಂಕ್ರಮಿತವಾಚ್ಯಧ್ವನಿ ಎನಿಸಿದೆ. ನಯನ ಎಂಬ ಒಂದೇ ಪದದಿಂದ ಇಲ್ಲಿ ವ್ಯಂಗ್ಯಾರ್ಥವು ತೋರುವ ಪ್ರಯುಕ್ತ ಧ್ವನಿಯು ಪದದಲ್ಲಿ ಮಾತ್ರವೇ ಇರುವುದಾಗಿ ತಿಳಿಯಬೇಕು.

ಇದೇ ಅರ್ಥಾಂತರಸಂಕ್ರಮಿತವಾಕ್ಯಧ್ವನಿಯು ವಾಚ್ಯದಲ್ಲಿ ಇರುವುದನು ಉದಾಹರಿಸುತ್ತಾನೆ. ಪಂಡಿತಸಮಾಜದಲ್ಲಿ ಸರಿಯಾಗಿ ವ್ಯವಹರಿಸದೆ ಹೊರಡಲಿರುವ ವನಿಗೆ ಒಬ್ಬನು ಗರ್ವದಿಂದ ಹೇಳುವ ಮಾತಿದು. "ಎಲೈ ದುಷ್ಟವ್ಯವಹಾರಿಯೇ, ನಾನು ನಿನಗೆ ಹೇಳುತ್ತಿರುವೆನು. (ಅಸ್ಮಿ ಎಂಬುದು ಅಹಂ ಎಂಬ ಅರ್ಥವನ್ನು ತಿಳಿಸುವ ಅವ್ಯಯ) ವಿದ್ವಾಂಸರ ಸಮೂಹವು ಇಲ್ಲಿ ನೆಲಸಿದೆ. ಆದ್ದರಿಂದ ನಿನಗೆ ಹಿತ ವಾದ ಮಾರ್ಗವನ್ನು ಹೇಳುವೆನು ಕೇಳು. ಇಲ್ಲವಾದರೆ ನಿನಗೆ ತುಂಬ ಅನರ್ಥ ಉಂಟಾದೀತು'' ಇಲ್ಲಿ ಎದುರಿಗೆ ಇರುವವನೊಬ್ಬನಿಗೆ ಹೇಳಬೇಕಾಗಿರುವುದರಿಂದ 'ತ್ವಾಂ' ಎಂಬುದು ವ್ಯರ್ಥವಾಗುವ ಪ್ರಯುಕ್ತ ಮುಖ್ಯಾರ್ಥವು ಇಲ್ಲಿ ಬಾಧಿತವಾಯಿತು. ಅದು ಬೇರೊಂದು ಅರ್ಥವನ್ನು ಲಕ್ಷಣೆಯಿಂದ ತಿಳಿಸುತ್ತದೆ. 'ಬೇರೆಯವರೆಲ್ಲವನ್ನು ತೊರೆದು ನಿನಗೊಬ್ಬನಿಗೇ ಇವನ್ನು ಹೇಳುತ್ತಿರುವೆನು' ಎಂಬುದೇ ಹೇಳುವವನ ಆಶಯವಾದ್ದರಿಂದ 'ತ್ವಾಂ' ಎಂಬುದು "ಎಲ್ಲರನ್ನೂ ಬಿಟ್ಟು ನಿನ್ನೊಬ್ಬನನ್ನು" ಎಂಬ ಅರ್ಥವನ್ನು ಲಕ್ಷಣೆಯಿಂದ ತಿಳಿಸುತ್ತದೆ. ಹಾಗೆಯೇ 'ವಚ್ಮಿ' ಎಂಬ ಪದವು ಹೇಳುವವನು ತಾನೇ ಆಗಿರುವಾಗ ನಾನು ಎಂಬ ಕರ್ತೃಪದವನ್ನು ಉಪಯೋಗಿಸುವ ಆವಶ್ಯಕತೆ ಇಲ್ಲದಿದ್ದರೂ 'ಬೇರೆ ಎಲ್ಲರನ್ನು ಬಿಟ್ಟು ನಾನೊಬ್ಬನೇ' ಎಂಬ ಅರ್ಥವನ್ನು ಲಕ್ಷಣೆಯಿಂದ ತಿಳಿಸುವುದು. ಹಾಗೆಯೇ ವಿದ್ವಾಂಸರ ಸಮುದಾಯವು ಇಲ್ಲಿ ನೆಲಸಿದೆ ಎಂಬುದರಿಂದಲೇ 'ಅವರೆಲ್ಲರೂ ಜನರಿಗೆ ಉಪದೇಶಿಸುತ್ತಿರುವರು'. ಎಂಬ ಅರ್ಥವು ತೋರುವಾಗ 'ವಚ್ಮಿ' ಎಂಬ ಪದವು ಉಪದೇಶರೂಪದಿಂದ ವಿಶೇಷವಾಗಿ ತಿಳಿಸುವೆನೆಂಬ ಅರ್ಥವನ್ನು ಲಕ್ಷಣೆಯಿಂದ ಬೋಧಿಸುತ್ತದೆ. ಇಲ್ಲಿ ತ್ವಾಂ, ಅಸ್ಮಿ, ವಚ್ಮಿ ಎಂಬ ಮೂರು ಪದಗಳಿಂದಲೂ ಲಕ್ಷಣೆಯಿಂದ ತಿಳಿದುಬರುವ ಇಷ್ಟು ಅರ್ಥಗಳೂ ಆಯಾಯ ಅರ್ಥಗಳಲ್ಲಿ ಒಂದೊಂದು ವೈಶಿಷ್ಟ್ಯವನ್ನು ವ್ಯಕ್ತಪಡಿಸುತ್ತವೆ. 'ತ್ವಂ' ಎಂಬುದು 'ನೀನು ಇವನ್ನು ವಿವೇಚನ ಮಾಡಿತಿಳಿ ಎಂಬುದನ್ನೂ, 'ಅಸ್ಮಿ' ಎಂಬುದು 'ನಾನು ನಿನಗೆ ಹಿತೈಷಿ' ಎಂಬುದನ್ನೂ 'ವಚ್ಮಿ' ಎಂಬುದು 'ಈ ಮಾತನ್ನು ನೀನು ಮೀರಬಾರದು. ಇದು ನಿನಗೆ ಗ್ರಾಹ್ಯವಾದುದು' ಎಂಬ ಅರ್ಥವನ್ನು ವ್ಯಂಜನೆಯಿಂದ ತಿಳಿಸುತ್ತವೆ. "ನನ್ನ ಮಾತು ನಿನಗೆ ಅತ್ಯಂತಹಿತವೆನಿಸಿದೆ. ಇದನ್ನು ನೀನು ಅವಶ್ಯವಾಗಿ ತಿಳಿದು ಆಚರಿಸಬೇಕು" ಎಂಬುದೇ ಇಲ್ಲಿ ತೋರುವ ವ್ಯಂಗ್ಯಾರ್ಥ. ಇದು ವಾಚ್ಯದಿಂದ ತೋರುವ ಅರ್ಥಾಂತರ ಸಂಕ್ರಮಿತ ವಾಚ್ಯಧ್ವನಿ ಎನಿಸಿದೆ.

ಅತ್ಯಂತ ತಿರಸ್ಕೃತ ವಾಚ್ಯಧ್ವನಿಯು ಪದದಲ್ಲಿರುವುದಕ್ಕೆ 'ನಿಶ್ವಾಸಾಂಧ ಇವ' ಎಂಬುದು ಉದಾಹರಣವೆನಿಸಿದೆ. ಇಲ್ಲಿ 'ಅಂಧ' ಎಂಬ ಪದವು 'ಪ್ರಕಾಶಪಡಿಸ ಲಾರದು' ಎಂಬ ಅರ್ಥವನ್ನು ವ್ಯಂಜನೆಯಿಂದ ತಿಳಿಸುತ್ತದೆ. ಅದೇ ಬಗೆಯ ಧ್ವನಿಯು ವಾಕ್ಯದಲ್ಲಿ ಇರುವುದಕ್ಕೆ 'ಉಪಕೃತಂ ಬಹು ಯತ್ರ' ಎಂಬುದು ಉದಾಹರಣವೆನಿಸಿದೆ. ಅಲ್ಲಿ ಉಪಕೃತಂ, ಸುಜನತಾ, ಸುಖಿತಂ ಎಂಬ ಅನೇಕ ಪದಗಳಿಂದ ವ್ಯಂಗ್ಯಾರ್ಥ ವು ತೋರುವುದರಿಂದ ನಾಲ್ಕು ವಾಕ್ಯಗಳಿರುವ ಆ ಪದ್ಯವನ್ನು ಮಹಾವಾಕ್ಯರೂಪವಾದ ಒಂದೇ ವಾಕ್ಯವೆಂದು ಭಾವಿಸಿ ಅದನ್ನು ಇಲ್ಲಿ ಉದಾಹರಿಸಿದೆ. ಇಲ್ಲಿ ಎರಡುಕಡೆಗಳಲ್ಲೂ ಅಂಧ-ಉಪಕೃತ ಇತ್ಯಾದಿ ಪದಗಳು ತಮ್ಮ ಅರ್ಥವನ್ನು ಪೂರ್ತಿಯಾಗಿ ತೊರೆದು ಬೇರೊಂದು ಅರ್ಥವನ್ನು ತಿಳಿಸುವುದರಿಂದ ಇವೆರಡೂ ಅತ್ಯಂತತಿರಸ್ಕೃತವಾಚ್ಯ ಧ್ವನಿಯ ಉದಾಹರಣಗಳೆನಿಸಿವೆ. ಅಸಲಂಕ್ಷ್ಯಕ್ರಮವ್ಯಂಗ್ಯ, ಸಂಲಕ್ಷಕ್ರಮ ವ್ಯಂಗ್ಯ ಇವುಗಳಲ್ಲಿ "ಶೂನ್ಯಂ ವಾಸಗೃಹಂ" ಎಂಬುದನ್ನು ಅಸಂಲಕ್ಷಕ್ರಮವ್ಯಂಗ್ಯಕ್ಕೂ "ಪಥಿಕನಾತ್ರ" ಎಂಬುದನ್ನು ಸಂಲಕ್ಷ್ಯ ಕ್ರಮ ವ್ಯಂಗ್ಯಕ್ಕೂ ಉದಾಹರಿಸಿಯಾಗಿದೆ.

ಒಂದು ಪದದಲ್ಲಿ ವಿಪ್ರಲಂಭಶೃಂಗಾರವೆಂಬ ಅಸಂಲಕ್ಷ್ಯಕ್ರಮವ್ಯಂಗ್ಯವು ತೋರು ವುದನ್ನು ಉದಾಹರಿಸುತ್ತಾನೆ. ಪ್ರಿಯತಮೆಯನ್ನು ಸ್ಮರಿಸುತ್ತ ಒಬ್ಬ ಪ್ರವಾಸಿಯು ಹೇಳುವ ಮಾತಿದು. "ಕಾಂತೆಯ ಆ ಅಲೌಕಿಕವಾದ ಲಾವಣ್ಯ, ಆ ಅರ್ವಚನೀಯ ವಾದ ಕಾಂತಿ, ಆ ಅಸಾಧಾರಣವಾದ ಸೌಂದರ್ಯ, ಆ ಅಪೂರ್ವವಾದ ಮಾತು, ಇವೆಲ್ಲವೂ ಆಗ ಸಂಭೋಗಕಾಲದಲ್ಲಿ ಆನಂದಮಯವಾಗಿದ್ದವು. ಆದರೆ ಅವೆಲ್ಲವನ್ನೂ ಈಗ ನೆನೆಸಿಕೊಂಡರೆ ಹೆಚ್ಚು ಸಂತಾಪವೇ ಆಗುತ್ತದೆ.' ಇಲ್ಲಿ ಲಾವಣ್ಯ ಮೊದಲಾದ ಅನೇಕ ಪದಗಳು ವ್ಯಂಜಕವಾಗಿರುವುದರಿಂದ ಅಂತಹ ಪದಗಳ ಸಮೂಹವೆನಿಸಿದ ವಾಕ್ಯದಿಂದಲೇ ಇಲ್ಲಿಯೂ ವ್ಯಂಗ್ಯಾರ್ಥವು ತೋರುವುದೆಂದು ಹೇಳೋಣವೆಂದರೆ ಅದಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ಹಿಂದೆ ಅನುಭವಿಸಿದ ಅಲೌಕಿಕತ್ವ ಅಸಾಧಾರಣತ್ವ ಅಪೂರ್ವತ್ವ ಎಂಬ ಅರ್ಥಗಳು ತತ್ ಅಸೌ ಸಃ ಎಂಬ ಪದಗಳಿಂ ದಲೇ ತೋರುವ ಪ್ರಯುಕ್ತ ಆಯಾಯ ಪದಕ್ಕೆ ಮಾತ್ರವೇ ಇಲ್ಲಿ ಪ್ರಧಾನ್ಯವಿರುವುದ ರಿಂದ ಧ್ವನಿಯು ಪದಗತವೇ ಹೊರತು ವಾಕ್ಯಗತವಲ್ಲವೆಂದು ತಿಳಿಯಬೇಕು. ಆಯಾ ಪದವು ಆಯಾ ಅರ್ಥವನ್ನು ವ್ಯಕ್ತಪಡಿಸಲು ಬೇರೆ ಪದಗಳು ಲಾವಣ್ಯ ಮೊದಲಾದವು ಪೋಷಕವಾಗಿದೆ. ಹೀಗೆ ತತ್, ಅಸೌ, ನಃ ಎಂಬ ಒಂದೊಂದು ಪದದಿಂದಲೇ ವ್ಯಂಗ್ಯಾ ರ್ಥವು ಇಲ್ಲಿ ತೋರುತ್ತದೆಯಾದ್ದರಿಂದ ಇದು ಪದಗತವೆನಿಸಿದೆ. ಇದನ್ನು ಧ್ವನಿಕಾರರು ಸ್ಪಷ್ಟಪಡಿಸಿರುವರು. ದೇಹದ ಒಂದು ಅವಯವದಲ್ಲಿರುವ ಒಡವೆಯಿಂದಲೇ ಕಾಮಿನಿಯು ಶೋಭಿಸುವಂತೆ ಒಂದು ಪದದಲ್ಲಿ ಪ್ರಕಾಶವಾಗುವ ಧ್ವನಿಯಿಂದಲೇ ಸತ್ಕವಿಯ ವಾಣಿಯು ಶೋಭಿಸುತ್ತದೆ' ಆದ್ದರಿಂದ ಒಂದೇ ಪದದಲ್ಲೂ ಧ್ವನಿ ಇರುವ ಬಗ್ಗೆ ಸಂಧೇಹ ಪಡಬೇಕಾಗಿಲ್ಲ. ಹಾಗೆಯೇ ಭಾವ, ರಸಾಭಾಸ, ಭಾವಾಭಾಸ, ಮೊದ ಲಾದವುಗಳಲ್ಲಿಯೂ ತಿಳಿಯುವುದು. ಅಸಂಲಕ್ಷ್ಯಕ್ರಮವ್ಯಂಗ್ಯವೆನಿಸಿದ ಭಾವಧ್ವನಿಯು

ಪದವಲ್ಲಿರುವುದನ್ನು 'ಗಣಯಾಮಾಸ ಪಾರ್ವತೀ' ಎಂಬಲ್ಲಿ ಗಣಯಾಮಾಸ, ಎಂಬ ಪದದಿಂದ ಪಾರ್ವತಿಯಲ್ಲಿ ಅನಹಿತ್ತೆ ಎಂಬ ಭಾವವು ಪ್ರಕಟವಾಗುತ್ತದೆ. ಶಬ್ದಶಕ್ತಿ ಮೂಲವಸ್ತುಧ್ವನಿಯು ಪದದಲ್ಲಿರುವುದನ್ನು ಈಗ ಉದಾಹರಿಸುತ್ತಾನೆ. ಉಪಪತಿಯು ತನ್ನ ಬಳಿಗೆ ಬಂದದ್ದನ್ನು ಕಂಡು ಸಖಿಯರ ನಡುವೆ ಇದ್ದ ಸ್ತ್ರೀಯೊಬ್ಬಳು ಶಾಸ್ತ್ರವನ್ನು ಪ್ರಶಂಸೆಮಾಡುವ ನೆಪದಿಂದ ತನ್ನ ಆನಂದವನ್ನು ಸೂಚಿಸುತ್ತಾಳೆ. "ಸ್ವರ್ಗ ಮೊದಲಾದ ಭೋಗವನ್ನೂ ಬ್ರಹ್ಮಜ್ಞಾನದಿಂದ ಲಭಿಸಬಹುದಾದ ಯೋಗವನ್ನೂ ದೊರಕಿಸುತ್ತಲೂ, ಶಾಸ್ತ್ರೋಕ್ತಕರ್ಮಗಳನ್ನಾಚರಿಸಲಿಕ್ಕೆ ಪ್ರೇರಿಸುತ್ತಲೂ ಇರುವ ವೇದಾದಿ ಶಾಸ್ತ್ರಗಳು ಯಾವ ಆಸ್ತಿಕರಿಗೆ ತಾನೆ ಪ್ರೀತಿಯ ಪ್ರವಾಹವನ್ನು ಹುಟ್ಟಿಸುವುದಿಲ್ಲ!" ಆದರೆ ಎಲ್ಲರಿಗೂ ಹುಟ್ಟಿಸುತ್ತವೆ ಎಂದರ್ಥ. ಇಲ್ಲಿ ಉಪಪತಿಯ ಬಗ್ಗೆ ಹೀಗೆ ಅರ್ಥವಾಗುತ್ತದೆ.? "ಸುರತಸಂಭೋಗವನ್ನು ದೊರಕಿಸುತ್ತಲೇ ವಿರಹವ್ಯಥೆಯನ್ನು ತೊಲಗಿಸಲು ನಿರ್ಜನಪ್ರದೇಶಕ್ಕೆ ಹೋಗಲು ಅನುಮತಿಯನ್ನು ಕೊಡಲು ಆಸಕ್ತನಾಗಿರುವ ನಿನ್ನಂತಹ ಪುರುಷನ ಆಗಮನವು ನನ್ನಂತಹ ಯಾರಿಗೆ ತಾನೆ ಆನಂದಪ್ರವಾಹವನ್ನುಂಟುಮಾಡುವುದಿಲ್ಲ?" ಇಲ್ಲಿ ಸದಾಗಮ ಎಂಬ ಶಬ್ದವು ಪಕ್ಕದಲ್ಲಿರುವ ಉಪನಾಯಕನಿಗೆ ಒಳ್ಳೆಯ ಶಾಸ್ತ್ರಾರ್ಥವನ್ನು ತಿಳಿಸಿ 'ಸತ್ಪುರುಷನ ಆಗಮ' ಎಂಬ ವಸ್ತುವನ್ನು ಪ್ರಕಾಶಗೊಳಿಸುತ್ತದೆ. ಅಲ್ಲಿಗೆ ಸದಾಗಮವೆಂಬುದು ನಂಬಿಕೆಗೆ ಅರ್ಹವಾದ ಶಾಸ್ತ್ರ ಎಂಬ ಅರ್ಥದ ಜೊತೆಗೆ ಸತ್ಪುರುಷನ ಆಗಮನ ಎಂಬ ಅರ್ಥವನ್ನೂ ತಿಳಿಸುತ್ತದೆ. ಇಲ್ಲಿ ಉಪನಾಯಕನ ಆಗಮನ ಎಂಬಲ್ಲಿ ಅಲಂಕಾರಧ್ವನಿ ಯಾಕೆ ಆಗಬಾರದು? 'ಸದಾಗಮ ಇವ ಸದಾಗಮಃ ಸಚ್ಛಾಸ್ತ್ರದಂತೆ ನಿನ್ನಂತಹ ಸತ್ಪುರುಷನ ಆಗಮನ ವಾಯಿತು' ಎಂದು ಇಲ್ಲಿ ಉಪಮಾಲಂಕಾರವು ವ್ಯಂಗ್ಯವಾಗಿ ತೋರುವುದೆಂದು ಏಕೆ ಹೇಳಬಾರದು? ಅಂದರೆ ಇಲ್ಲಿ ತೋರುವ ಸದಾಗಮಶಬ್ದಾರ್ಥಗಳೆರಡಕ್ಕೂ ಉಪಮಾನೋಪಮೇಯಭಾವವು ವಿವಕ್ಷಿತವಾಗಿಲ್ಲ. ಇದು ಕವಿಗೆ ಇಷ್ಟವಲ್ಲದ್ದರಿಂದ ಇಲ್ಲಿ ಉಪಮಾಧ್ವನಿಯು ಹೊಂದುವುದಿಲ್ಲವೆಂದು ತಿಳಿಸುತ್ತಾನೆ. "ಇದನ್ನು ಹೇಳಲು ಕವಿಗೆ ಯಾಕೆ ಇಷ್ಟವಿಲ್ಲ? ಅದಕ್ಕೆ ಕಾರಣವೇನು?" ಎಂದು ಕೇಳಿದರೆ ಅದಕ್ಕೆ ಸಮಾಧಾನವು ಹೀಗಿದೆ. ಇಲ್ಲಿ ಎರಡು ಅರ್ಥಗಳನ್ನು ಕೊಡುವ ಸಮಾಗಮ ಎಂಬ ಪದವನ್ನು ಕವಿಯು ಉದ್ದೇಶಪೂರ್ವಕವಾಗಿ ತಿಳಿಸಿದ್ದಾನೆ. ಉಪಮಾಲಂಕಾರವನ್ನು ತಿಳಿಸಲಿಕ್ಕಾಗಿ ಈ ಪದವನ್ನು ಅವನು ಇಲ್ಲಿ ಪ್ರಯೋಗಿಸಿಲ್ಲ, ಆದರೆ ಉಪಪತಿಯು ಆಕೆಯ ಬಳಿಗೆ ಅನಿರೀಕ್ಷಿತವಾಗಿ ಬಂದದ್ದರಿಂದ ಆಕೆಗೆ ಉಂಟಾದ ಆನಂದವನ್ನು ಸೂಚಿಸಲಿಕ್ಕಾಗಿಯೇ ಈ ಪದವನ್ನು ಪ್ರಯೋಗಿಸಿದ್ದಾನೆ. ಇಲ್ಲಿಯ ಪ್ರಕರಣವನ್ನು ಪರ್ಯಾಲೋಚಿಸಿದರೆ ಸಚ್ಛಾಸ್ತ್ರದ ನಿಯಮವನ್ನು ತಿಳಿಸುವುದಕ್ಕೆ ಅವಕಾಶವೇ ಇಲ್ಲ. ಶಾಸ್ತ್ರಜ್ಞಾನದಿಂದ ಆನಂದವುಂಟಾಗುವುದೆಂಬುದನ್ನು ತಿಳಿಸಲಿಕ್ಕೆ ಇಲ್ಲಿ ಯಾವ ಸಂಬಂಧವೂ ಇಲ್ಲ. ಆದ್ದರಿಂದ ಇಲ್ಲಿ ವಸ್ತುಧ್ವನಿಯೇ ಹೊರತು ಅಲಂಕಾರಧ್ವನಿಯಲ್ಲ.

ಶಬ್ದಶಕ್ತಿಮೂಲವಾದ ಅಲಂಕಾರಧ್ವನಿಯು ಪದದಲ್ಲಿ ಇರುವುದನ್ನು ಉದಾಹರಿ

ಸುತ್ತಾನೆ. ಪರೋಕ್ಷವಲ್ಲಿ ಒಬ್ಬನು ರಾಜನನ್ನು ಸ್ತುತಿಸುತ್ತಾನೆ. "ಬೇರೆ ಯಾರಲ್ಲೂ ಇಲ್ಲದಂತಹ ಬುದ್ಧಿ ಇದ್ದು ಆಮೆಯ ರೂಪದಿಂದ ಬೆನ್ನಿನಲ್ಲಿ ಭೂಮಿಯನ್ನು ಹೊತ್ತು ಪುರುಷೋತ್ತಮನೆನಿಸಿದ ನಾರಯಣನಂತೆ ಸಮಸ್ತಭೂಮಿಯನ್ನು ರಕ್ಷಿಸುವ ಹೊರೆಯನ್ನು ಹೊತ್ತು ಪುರುಷಶ್ರೇಷ್ಠನೂ ಹೆಚ್ಚು ಪ್ರಭಾವಶಾಲಿಯೂ ಆದ ಆ ರಾಜನು ಪ್ರಕಾಶಿಸುತ್ತಾನೆ." ಇಲ್ಲಿ ಪುರುಷೋತ್ತಮ ಎಂದರೆ ಪುರುಷರಲ್ಲಿ ಶ್ರೇಷ್ಠ ಮತ್ತು ನಾರಾಯಣ ಎಂದು ಎರಡು ಅರ್ಥಗಳು ತೋರುತ್ತವೆ. ಮೊದಲನೆಯದು ಪ್ರಕರಣಕ್ಕನುಗುಣವಾದ ವಾಚ್ಯಾರ್ಥ. ಎರಡನೆಯದು ಅಪ್ರಕೃತವಾದ ವ್ಯಂಗ್ಯಾರ್ಥ. ಪ್ರಕೃತಾರ್ಥವನ್ನು ತಿಳಿಸುವಾಗ ಅಪ್ರಕೃತಾರ್ಥವೂ ಶಬ್ದಶಕ್ತಿಯಿಂದ ತೋರುತ್ತದೆ. ಇವೆರಡಕ್ಕೂ ಸಂಬಂಧವನ್ನು ಕಲ್ಪಿಸಲಿಕ್ಕಾಗಿ ಪ್ರಕೃತಾರ್ಥವನ್ನು ಅಪ್ರಕೃತಾರ್ಥದೊಡನೆ ಹೋಲಿಸಲಾಗುವುದು. ಪುರುಷಶ್ರೇಷ್ಠನೆನಿಸಿದ ರಾಜನು ಪುರುಷೋತ್ತಮನಂತೆ ಪ್ರಕಾಶಿಸುತ್ತಿದ್ದನೆಂದು ಇಲ್ಲಿ ಉಪಮಾಧ್ವನಿಯು ತೋರುತ್ತದೆ. ಹೀಗೆ ಶಬ್ದಶಕ್ತಿಮೂಲವೆನಿಸಿದ ಸಂಲಕ್ಷ್ಯಕ್ರಮವ್ಯಂಗ್ಯದ ವಸ್ತುವಿನ ಮತ್ತು ಅಲಂಕಾರದ ಧ್ವನಿಗಳೆರಡನ್ನು ಉದಾಹರಿಸಲಾಗಿದೆ.

ಸಾಯಂ ಸ್ನಾನಮುಪಾಸಿತಂ ಮಲಯಜೇನಾಂಗಂ ಸಮಾಲೇಪಿತಂ
ಯಾತೋಽಸ್ತಾಚಲಮೌಲಿರಂಬರಮಣಿರ್ವಿಸ್ರಬ್ಧಮತ್ರಾಗತಿಃ ।
ಆಶ್ಚರ್ಯಂ ತವ ಸೌಕುಮಾರ್ಯಮಭಿತಃ ಕ್ಲಾಂತಾಸಿ ಯೇನಾಧುನಾ
ನೇತ್ರದ್ವಂದ್ವಮಮೀಲನವ್ಯತಿಕರಂ ಶಕ್ನೋತಿ ತೇನಾಸಿತುಮ್ ॥

ಅತ್ರ ಸ್ವತಸ್ಸಂಭವಿನಾ ವಸ್ತುನಾ ಕೃತಪರಪುರುಷಪರಿಚಯಾ ಸ್ನಾತಾಸೀತಿ ವಸ್ತು ವ್ಯಜ್ಯತೇ. ತಚ್ಚ "ಅಧುನಾ ಕ್ಲಾಂತಾಸಿ ನ ತು ಪೂರ್ವಂ ಕದಾಚಿದಪಿ ತವ ಏವಂವಿಧಃ ಕ್ಲಮೋ ದೃಷ್ಟಃ" ಇತಿ ಬೋಧಯತೋಽಧುನಾಪದಸ್ಯೈವ ಇತರಪದಾರ್ಥೋತ್ಕರ್ಷಾತ್. ಅಧುನಾಪದಸ್ಯೈವ ಪದಾಂತರಾಪೇಕ್ಷಯಾ ವೈಶಿಷ್ಟ್ಯಮ್.

ತದಪ್ರಾಪ್ತಿಮಹಾದುಃಖವಿಲೀನಾಶೇಷಪಾತಕಾ ।
ತಚ್ಚಿಂತಾವಿಪುಲಾಹ್ಲಾದಕ್ಷೀಣಪುಣ್ಯಚಯಾ ತಥಾ ॥
ಚಿಂತಯಂತೀ ಜಗತ್ಸೂತಿಂ ಪರಂ ಬ್ರಹ್ಮಸ್ವರೂಪಿಣಮ್ ।
ನಿರುಚ್ಛ್ವಾಸತಯಾ ಮುಕ್ತಿಂ ಗತಾಽನ್ಯಾ ಗೋಪಕನ್ಯಕಾ ॥

ಅತ್ರ ಅಶೇಷಚಯಪದಪ್ರಭಾವಾತ್ ಅನೇಕಜನ್ಮಸಹಸ್ರಭೋಗ್ಯದುಷ್ಕೃತಸುಕೃತಫಲರಾಶಿತಾದಾತ್ಮ್ಯಾಧ್ಯವಸಿತತಯಾ ಭಗವದ್ವಿರಹದುಃಖಚಿಂತಾಹ್ಲಾದಯೋಃ ಪ್ರತ್ಯಾಯನಮಿತ್ಯತಿಶಯೋಕ್ತಿದ್ವಯಪ್ರತೀತಿರಶೇಷಚಯಪದದ್ವಯದ್ಯೋತ್ಯಾ. ಅತ್ರ ಚ ವ್ಯಂಜಕಸ್ಯ ಪ್ರೌಢೋಕ್ತಿಮಂತರೇಣಾಪಿ ಸಂಭವಾತ್ ಸ್ವತಸ್ಸಂಭವಿತಾ.

ಪಶ್ಯಂತ್ಯಸಂಖ್ಯಪಥಗಾಂ ತ್ವದ್ದಾನಜಲವಾಹಿನೀಮ್ ।
ದೇವ ! ತ್ರಿಪಥಗಾತ್ಮಾನಂ ಗೋಪಯತ್ಯುಗ್ರಮೂರ್ಧನಿ ॥

ಇದಂ ಮಮ. ಅತ್ರ 'ಪಶ್ಯಂತೀ' ಇತಿ ಕವಿಪ್ರೌಢೋಕ್ತಿಸಿದ್ಧೇನ. ಕಾವ್ಯ

ಲಿಂಗಾಲಂಕಾರೇಣ 'ನ ಕೇऽಪ್ಯನ್ಯೇ ದಾತಾರಸ್ತವ ಸದೃಶಾಃ' ಇತಿ ವ್ಯತಿರೇಕಾಲಂಕಾರೋऽಸಂಖ್ಯಪದದ್ಯೋತ್ಯಃ.

ಏವಮನ್ಯೇಷ್ವಪಿ ಅರ್ಥಮೂಲಸಂಲಕ್ಷ್ಯಕ್ರಮಭೇದೇಷು ಉದಾಹಾರ್ಯಮ್. ತದೇವಂ ಧ್ವನೇಃ ಪೂರ್ವೋಕ್ತೇಷ್ವಷ್ಟಾದಶಸು ಭೇದೇಷು ಮಧ್ಯೇ ಶಬ್ದಾರ್ಥಶಕ್ತ್ಯುತ್ಥೋ ವ್ಯಂಗ್ಯೋ ವಾಕ್ಯಮಾತ್ರೇ ಭವನ್ನೇಕಃ. ಅನ್ಯೇ ಪುನಃ ಸಪ್ತದಶ. ವಾಕ್ಯೇ ಪದೇ ಚೇತಿ ಚತುಸ್ತ್ರಿಂಶದಿತಿ ಪಂಚತ್ರಿಂಶದ್ಭೇದಾಃ.

ಅರ್ಥಶಕ್ತಿಮೂಲಸ್ವತಸ್ಸಂಭವವಿವಸ್ತುವಿನಿಂದ ಪದದಲ್ಲಿ ತೋರುವ ವಸ್ತುಧ್ವನಿಯನ್ನು ಉದಾಹರಿಸುತ್ತಾನೆ. ದಾರಿಯಲ್ಲಿ ಉಪಪತಿಯೊಡನೆ ಭೋಗಿಸಿ ಸ್ನಾನ ಮಾಡಿ ಬಂದ ಸಖಿಗೆ ಒಬ್ಬಳು ಹೇಳುತ್ತಾಳೆ. "ಸಾಯಂಕಾಲದಲ್ಲಿ ನೀನು ಸ್ನಾನ ಮಾಡಿರುವೆ. ಶ್ರೀಗಂಧವನ್ನು ಮೈಯಲ್ಲಿ ಲೇಪಿಸಿಕೊಂಡಿರುವೆ. ಸೂರ್ಯನೂ ಮುಳುಗಿದನು. ಆದ್ದರಿಂದ ಬಿಸಿಲಿನಿಂದ ಆಗುವ ಶ್ರಮವೂ ಸಂಭವಿಸುವಂತಿಲ್ಲ. ಇವೆರಡರಿಂದಲೂ ನಿನಗೆ ಶ್ರಮವುಂಟಾಗುವ ಸಂಭವವಿಲ್ಲ. ಇಷ್ಟೆಲ್ಲವನ್ನು ಮುಗಿಸಿಕೊಂಡು ನನ್ನ ಬಳಿಗೆ ಯಾವ ಶಂಕೆಯೂ ಇಲ್ಲದಂತೆ ನೀನು ಬಂದಿರುವೆ. ಇಲ್ಲಿಗೆ ವೇಗವಾಗಿಯೂ ಬಂದಿಲ್ಲವಾದ್ದರಿಂದ ನಿನಗೆ ಶ್ರಮವಾಯಿತೆಂಬುದು ಹೊಂದುವುದಿಲ್ಲ. ಆದರೂ ನೀನು ಎಲ್ಲೆಡೆಯಲ್ಲೂ ಆಯಾಸಗೊಂಡಿರುವೆ. ಈ ಬಗೆಯ ಆಯಾಸದಿಂದಲೇ ನಿನ್ನ ಕಣ್ಣುಗಳೆರಡು ಮುಚ್ಚದಂತೆ ಇರಲು ಸಾಧ್ಯವಾಗಿಲ್ಲ. ಹೆಚ್ಚು ಆಯಾಸವಾಗಿದ್ದರೆ ಕಣ್ಣು ಸಹಜವಾಗಿ ಮುಚ್ಚಲಿಕ್ಕೆ ಆರಂಭಿಸುತ್ತದೆ. ಹೀಗೆ ನಿನ್ನ ಕೋಮಲಸ್ವಭಾವವು ಬೇರೆಯಾರಲ್ಲೂ ಇಲ್ಲದ ಪ್ರಯುಕ್ತ ಆಶ್ಚರ್ಯಕರವಾಗಿದೆ. ಇಷ್ಟೊಂದು ಆಯಾಸಗೊಳ್ಳಲು ಕಾರಣವಿಲ್ಲದಿದ್ದರೂ ನಿನ್ನ ಅಸದೃಶವಾದ ಸೌಕುಮಾರ್ಯದಿಂದಲೇ ನೀನು ಹೀಗೆ ಬಳಲಿರುವೆ ಎಂದು ತೋರುತ್ತದೆ." ಇಲ್ಲಿ ಸ್ವತಸ್ಸಂಭವಿವಸ್ತುವಿನಿಂದ ಬೇರೊಂದು ವಸ್ತು ತೋರುತ್ತದೆ. ನೀನು ಹೆಚ್ಚು ಸೌಖ್ಯದಿಂದ ಬೆಳೆದವಳಾದ್ದರಿಂದ ಹಾಗೆ ಶರೀರದ ಎಲ್ಲಾ ಕಡೆಯಲ್ಲೂ ಆಯಾಸಗೊಂಡಿರುವುದು ಸಹಜವಾದ್ದರಿಂದ ಇದು ಸ್ವತಸ್ಸಿದ್ಧವಾದ ವಸ್ತುವೆನಿಸಿದೆ. ಇದರಿಂದ 'ಪರಪುರುಷರ ಸಂಪರ್ಕವನ್ನು ಮಾಡಿ ಈಗ ತಾನೆ ಸ್ನಾನಮಾಡಿಕೊಂಡು ಬಂದಿರುವೆ' ಎಂಬ ವಸ್ತು ತೋರುತ್ತದೆ. "ನೀನು ಈಗ ಬಳಲಿರುವಂತೆ ಹಿಂದೆ ಯಾವಾಗಲೂ ಬಳಲಿರಲಿಲ್ಲ. ಹಿಂದೆ ಎಂದೂ ನಿನ್ನಲ್ಲಿ ಇಷ್ಟು ಶ್ರಮವೇ ಕಂಡಿರಲಿಲ್ಲ. ಈಗಲೇ ಇಷ್ಟು ಬಳಲಿರುವೆ" ಎಂದು ಇಷ್ಟು ಅರ್ಥವನ್ನು 'ಅಧುನಾ' ಎಂಬ ಒಂದೇ ಪದವು ಸೂಚಿಸುತ್ತದೆ. ಇಲ್ಲಿ 'ಶ್ರಾಂತಾ ಅಸಿ' ಎಂಬ ಅರ್ಥವು ತೋರುತ್ತದೆ. ಆದರೆ ಈ ಅರ್ಥವನ್ನು ಪ್ರಕಾಶಪಡಿಸಲು ಅವಕ್ಕಿಂತಲೂ 'ಅಧುನಾ' ಎಂಬ ಪದಕ್ಕೆ ಹೆಚ್ಚು ಸಾಮರ್ಥ್ಯವಿರುವ ಪ್ರಯುಕ್ತ ಬೇರೆ ಪದಗಳಿಗಿಂತಲೂ ಅಧುನಾ ಪದವೇ ಇಲ್ಲಿ ಪ್ರಧಾನವೆನಿಸಿದೆ. ಪ್ರಧಾನವಾದುದನ್ನು ಅನುಸರಿಸಿಯೇ ವ್ಯವಹರಿಸುವುದು ಯುಕ್ತವಾದ್ದರಿಂದ ಇಲ್ಲಿ ವ್ಯಂಗ್ಯಾರ್ಥವನ್ನು ವಿಶದಗೊಳಿಸಲು ಅಧುನಾ ಎಂಬ ಪದವೇ ಸಮರ್ಥವೆನಿಸಿದೆ.

ಸ್ವತಸ್ಸಂಭವಿ ವಸ್ತುವಿನಿಂದ ಒಂದು ಪದದ ಮೂಲಕ ತೋರುವ ಅಲಂಕಾರ ಧ್ವನಿಯನ್ನು ಉದಾಹರಿಸುತ್ತಾನೆ. ಭಾಗವತದಲ್ಲಿ ಹಿರಿಯರು ತಡೆದದ್ದರಿಂದ ಕೃಷ್ಣನ ರಾಸಕ್ರಿಡೆಗೆ ಹೋಗಲು ಅಸಮರ್ಥಳಾದ ಗೋಪಿಕೆಯೊಬ್ಬಳು ಮುಕ್ತಿಯನ್ನು ಪಡೆದ ಬಗೆಯನ್ನು ಇಲ್ಲಿ ವರ್ಣಿಸಿದೆ. "ಆ ಕೃಷ್ಣನನ್ನು ಪಡೆಯಲಿಕ್ಕಾಗದ್ದರಿಂದ ಉಂಟಾದ ಮಹಾದುಃಖದಲ್ಲಿ ಎಲ್ಲಾ ಪಾಪಗಳನ್ನು ಕಳೆದುಕೊಂಡು, ಅವನ ಚಿಂತೆಯಿಂದಲೇ ದೊರೆತ ಹೆಚ್ಚಿನ ಸಂತೋಷದಿಂದ ಅನೇಕ ಜನ್ಮಗಳಲ್ಲಿ ಸಂಪಾದಿಸಿದ್ದ ಪುಣ್ಯವನ್ನು ಕಳೆದುಕೊಂಡು, ಹಾಗೆಯೇ ಜಗತ್ಕಾರಣನೂ ಪರಮಾತ್ಮಸ್ವರೂಪಿಯೂ ಆದ ಕೃಷ್ಣನನ್ನೇ ಧ್ಯಾನಿಸುತ್ತ ಗೋಪಿಕೆಯೊಬ್ಬಳು ತನ್ನ ಶ್ವಾಸವನ್ನು ತಡೆದು ಮುಕ್ತಿಯನ್ನು ಹೊಂದಿದಳು. ಪಾಪದಂತೆ ಪುಣ್ಯವೂ ಸಹ ಐಹಿಕ ಭೋಗವನ್ನು ಕೊಡುವ ಪ್ರಯುಕ್ತ ಅವೆರಡನ್ನು ನೀಗಿಕೊಂಡು ಧ್ಯಾನದಿಂದ ಕೃಷ್ಣನನ್ನು ಸಾಕ್ಷಾತ್ಕರಿಸಿಕೊಂಡು ಮುಕ್ತಿಯನ್ನು ಆಕೆಯು ಪಡೆದಳು.'' ಇಲ್ಲಿ ಅಶೇಷ, ಚಯ ಎಂಬುವ ಪದಗಳೆರಡರ ಪ್ರಭಾವದಿಂದ ತೋರುವ ಅನೇಕ ಜನ್ಮಗಳಲ್ಲಿ ಭೋಗಿಸಬೇಕಾಗಿದ್ದ ಸುಕೃತ ದುಷ್ಕೃತಗಳ ರಾಶಿಗಿಂತ ಬೇರೆ ಎನಿಸದ ಧ್ಯಾನಸುಖವೂ ವಿರಹದುಃಖವೂ ಇಲ್ಲಿ ಅಬಿವ್ಯಕ್ತವಾಗುತ್ತವೆ. ಈಗ ಆಕೆಗೆ ಕೃಷ್ಣನ ರಾಸಕ್ರೀಡೆಯಲ್ಲಿ ಭಾಗವಹಿಸಲಿಕ್ಕಾಗದೇ ಇದ್ದುದರಿಂದ ಬಂದ ದುಃಖವು ಹಿಂದಿನ ಸಾವಿರಾರು ಜನ್ಮಗಳ ಪಾಪವೆಂದೂ, ಧ್ಯಾನದಿಂದ ಅವನ ದರ್ಶನವನ್ನು ಪಡೆದ ಪ್ರಯುಕ್ತ ಆಕೆಗೆ ಉಂಟಾದ ಸುಖವು ಹಿಂದಿನ ಅನೇಕ ಜನ್ಮಗಳಲ್ಲಿ ಗಳಿಸಿದ ಪುಣ್ಯವೆಂದೂ ಭಾವಿಸಿದಳು. ಇಲ್ಲಿ ಅಶೇಷ, ಚಯ ಎಂಬ ಎರಡು ಪದಗಳು ಭಗವದ್ವಿರಹದ ದುಃಖದಲ್ಲಿ ಪಾಪವನ್ನೂ, ಧ್ಯಾನದ ಸುಖದಲ್ಲಿ ಪುಣ್ಯವನ್ನೂ ತಾದಾತ್ಮ್ಯಭಾವನೆಯಿಂದ ಆರೋಪಿಸಿದ್ದರೂ ಅತಿಶಯೋಕ್ತಿಯು ವ್ಯಂಗ್ಯವಾಗಿ ತೋರುತ್ತದೆ. ಈಗ ಅವಳಿಗೆ ಒದಗಿದ ವಿರಹದುಃಖವನ್ನೂ ಅನೇಕ ಜನ್ಮಗಳಲ್ಲಿ ಅನುಭವಿಸಬೇಕಾದ ದುಃಖವನ್ನೂ ಒಂದೇ ಎಂದು ಭಾವಿಸುವುದೇ ಅತಿಶಯೋಕ್ತಿ. ಇದು ಅಶೇಷಪದದಿಂದ ತೋರುವುದು. ಹಾಗೆಯೇ ಈಗ ಅವಳಿಗೆ ಒದಗಿದ ಧ್ಯಾನಸುಖವನ್ನೂ, ಹಿಂದಿನ ಆನೇಕ ಜನ್ಮಗಳ ಪುಣ್ಯವನ್ನೂ ಒಂದೇ ಎಂದು ಭಾವಿಸುವುದೂ ಅತಿಶಯೋಕ್ತಿಯೇ. ಈಗಿನ ದುಃಖಕ್ಕೂ ಹಿಂದಿನ ದುಃಖಗಳಿಗೂ ಭೇದವಿದ್ದರೂ ಅಭೇದವು ಚಯಪದದಿಂದ ತೋರುವ ಪ್ರಯುಕ್ತ ಇವೆರಡು ಅತಿಶಯೋಕ್ತಿಗಳು ಸ್ವತಸ್ಸಿದ್ಧವಾದ ವಸ್ತುವಿನಿಂದ ತೋರುತ್ತವೆ. ಈ ಎರಡು ಪದಗಳಿಂದ ತಿಳಿದುಬರುವ ಪುಣ್ಯಪಾಪಕರ್ಮಗಳು ಮೋಕ್ಷಕ್ಕೆ ಬಂಧಕವೆಂಬ ವಸ್ತು ಸರ್ವಾನುಭವಸಿದ್ಧವಾದ್ದರಿಂದ ಇದು ಕವಿಪ್ರತಿಭೆಯಿಂದ ಕಲ್ಪಿತವಾದುದಲ್ಲ. ಕವಿಯು ಇದನ್ನು ಕಲ್ಪಿಸಿ ಹೇಳದೆ ಇದ್ದರೂ ಎಲ್ಲರಿಗೂ ಇದು ತಿಳಿದ ವಿಷಯವೇ ಆದ್ದರಿಂದ ಇಂತಹ ಸ್ವಾಭಾವಿಕವಾದ ವಸ್ತುವಿನಿಂದ ಅಲಂಕಾರವು ತೋರುವುದಕ್ಕೆ ಇದು ಉದಾಹರಣವಾಗಿದೆ.

ಕವಿಪ್ರೌಢೋಕ್ತಿಸಿದ್ಧವಾದ ಅಲಂಕಾರದಿಂದ ಅಲಂಕಾರವು ತೋರುವುವನು ಇಲ್ಲಿ ಉದಾಹರಿಸುತ್ತಾನೆ. "ಎಲೈ ರಾಜನೇ, ನೀನು ದಾನಮಾಡುವಾಗ, ಉಪಯೋ

ಗಿಸಿದ ನೀರಿನ ಹೊಳೆಯು ಅನೇಕ ದಿಕ್ಕುಗಳಲ್ಲಿ ಹರಿಯುತ್ತಿರುವುದನ್ನು ನೋಡಿ ಗಂಗಾ ನದಿಯು ಮಹಾದೇವನ ಜಡೆಯೊಳಗೆ ತನ್ನನ್ನು ಹೊರಕ್ಕೆ ಕಾಣಿಸದಂತೆ ಮುಚ್ಚಿಕೊಂಡಿತ್ತಾಳೆ." ಹೀಗೆ ಕವಿಯೇ ಒಬ್ಬ ರಾಜನನ್ನು ಸ್ತುತಿಸುತ್ತಾನೆ. ಇದು ಯಥಾರ್ಥವಾದ ವಸ್ತುವಲ್ಲ. ಜಲಮಯವಾದ ಗಂಗೆಯು ನೋಡಿದಳೆಂಬುದು ಸಂಭವಿಸುವಂತಿಲ್ಲ. ಹಾಗೆ ನೋಡಿದ್ದರಿಂದಲೇ ಗಂಗೆಯು ತನ್ನನ್ನು ಮುಚ್ಚಿಕೊಳ್ಳುತ್ತಾಳೆ. ಇಲ್ಲಿ 'ಪಶ್ಯಂತೀ ಎಂಬ ಪದವು ಗಂಗೆಗೆ ತನ್ನನ್ನು ಮುಚ್ಚಿಕೊಳ್ಳಲು ಕಾರಣವನ್ನು ತಿಳಿಸುತ್ತದೆ. ಆದ್ದರಿಂದ ಇದು ಪದಾರ್ಥಹೇತುಕಕಾವ್ಯಲಿಂಗವೆನಿಸಿದೆ. ಇದೇ ಇಲ್ಲಿ ಬೇರೊಂದು ಅಲಂಕಾರವನ್ನು ಪ್ರಕಾಶಪಡಿಸುವುದರಿಂದ ವ್ಯಂಜಕವೆನಿಸಿದೆ. ಇಲ್ಲಿ ಇದರಿಂದ ವ್ಯತಿರೇಕಾಲಂಕಾರವು ಅಭಿವ್ಯಕ್ತವಾಗುತ್ತದೆ. 'ಬೇರೆ ಯಾವ ದಾತೃವೂ ನಿನಗೆ ಸಮವೆನಿಸಿದವರಿಲ್ಲವೆಂದೂ, ಎಲ್ಲರಿಗೂ ಹೆಚ್ಚಿನವನು ಎಂದೂ ವ್ಯತಿರೇಕಾಲಂಕಾರವು ಅಸಂಖ್ಯ ಪದದಿಂದ ತೋರುತ್ತದೆ. ನೀನು ಎಲ್ಲರಿಗೂ ವಿಶೇಷವಾಗಿ ದಾನಮಾಡಿದಾಗ ಎರೆದ ನೀರು ಪ್ರವಾಹರೂಪದಲ್ಲಿ ಹರಿಯುತ್ತಿದೆಯಾದ್ದರಿಂದ ಎಲ್ಲರಿಗಿಂತಲೂ ರಾಜನಲ್ಲಿ ವೈಶಿಷ್ಟ್ಯವನ್ನು ಅಸಂಖ್ಯಪದವು ಸೂಚಿಸುತ್ತದೆ. ಹಾಗೆಯೇ ಅರ್ಥಶಕ್ತಿಮೂಲವೆನಿಸಿದ ಸಂಲಕ್ಷ್ಯಕ್ರಮವ್ಯಂಗ್ಯದ ಬಗೆಗಳಿಗೆ ಉದಾಹರಣಗಳನ್ನು ಊಹಿಸಿಕೊಳ್ಳುವುದು.

ಸ್ವತಸ್ಸಂಭವಿ ಅಲಂಕಾರದಿಂದ ವಸ್ತುಧ್ವನಿಗೆ ಉದಾಹರಣಹೀಗಿದೆ.

ಅಥವಾ ಕೃತವಾಗ್ದ್ವಾರೇ ವಂಶೇಽಸ್ಮಿನ್ ಪೂರ್ವಸೂರಿಭಿಃ ।
ಮಣೌ ವಜ್ರಸಮುತ್ಕೀರ್ಣೇ ಸೂತ್ರಸ್ಯೇವಾಸ್ತಿ ಮೇ ಗತಿಃ ॥

"ಹಿಂದಿನ ಕವಿಗಳು ಈ ವಂಶವನ್ನು ಸಾಕಷ್ಟು ವರ್ಣಿಸಿ ಮುಂದಿನವರಿಗೆ ದಾರಿಯನ್ನು ಮಾಡಿಕೊಟ್ಟಿರುವಾಗ ವಜ್ರದಿಂದ ಕೊರೆದ ಮಣಿಯಲ್ಲಿ ಸೂತ್ರದಂತೆ ನನ್ನ ಗತಿಯಾಗಿದೆ. ಇಲ್ಲಿ ಸ್ವತಸ್ಸಂಭವಿ ಉಪಮಾಲಂಕಾರದಿಂದ ಸೂರ್ಯವಂಶವನ್ನು ವರ್ಣಿಸುವ ಶಕ್ತಿಯು ಕವಿಗೆ ಇಲ್ಲವೆಂಬ ವಸ್ತುವು ಅಭಿವ್ಯಕ್ತವಾಗುತ್ತದೆ.

ಸ್ವತಸ್ಸಂಭವಿಅಲಂಕಾರದಿಂದ ಅಲಂಕಾರಧ್ವನಿಯನ್ನು ಉದಾಹರಿಸುತ್ತಾನೆ.

ಜಾಜ್ವಲ್ಯಮಾನಾ ಜಗತಃ ಶಾಂತಯೇ ಸಮುಪೇಯುಷೀ।
ವ್ಯದ್ಯೋತಿಷ್ಟ ಸಭಾವೇದ್ಯಾಮಸೌ ನರಶಿಖಿತ್ರಯೀ ॥

ಇಲ್ಲಿ ನರಶಿಖಿ ಪದದಿಂದ ಉದ್ಧವ ಬಲರಾಮ ಕೃಷ್ಣ ಈ ಮೂವರು ಮಂತ್ರಾಲೋಚನೆಗೆ ಒಂದೆಡೆಯಲ್ಲಿ ಸೇರಿದಾಗ ಬೆಂಕಿಯಂತೆ ಪ್ರಕಾಶಿಸುತ್ತಿದ್ದರು ಎಂದು ಹೇಳಿದ್ದರಿಂದ ಮೂವರು ವ್ಯಕ್ತಿಗಳಲ್ಲಿ ಶಿಖಿತ್ವವನ್ನು ಆರೋಪಿಸಿದ್ದರಿಂದ ಇದು ರೂಪಕಾಲಂಕಾರವೆನಿಸಿದೆ. ಇದೇ ಇಲ್ಲಿ ಬೇರೊಂದು ಅಲಂಕಾರವನ್ನು ಪ್ರಕಾಶಗೊಳಿಸುತ್ತದೆ. ಈ ಮೂವರೆಂಬ ಬೆಂಕಿಗೂ ಶಾಂತಿಹೋಮಕ್ಕಾಗಿ ಉಪಯೋಗಿಸುವ ಬೆಂಕಿಗೂ ಭೇದವಿದ್ದರೂ ಅಭೇದವನ್ನು ಸೂಚಿಸಿರುವ ಪ್ರಯುಕ್ತ ಅತಿಶಯೋಕ್ತಿಯು ಶಾಂತಿ ಎಂಬ ಪದದಿಂದ ತೋರುತ್ತದೆ. ಹೀಗೆಯೇ ಕವಿಪ್ರೌಢೋಕ್ತಿಸಿದ್ಧವಾದ ವಸ್ತುವಿನಿಂದ ಬೇರೊಂದು ವಸ್ತುವೂ, ಅಂತಹ ವಸ್ತುವಿನಿಂದ ಅಲಂಕಾರವೂ, ಕವಿಪ್ರೌಢೋಕ್ತಿ

ಸಿದ್ಧವಾದ ಅಲಂಕಾರದಿಂದ ವಸ್ತುವೂ, ಅಂತಹ ಅಲಂಕಾರದಿಂದ ಅಲಂಕಾರವೂ, ಕವಿಬದ್ಧಪ್ರೌಢೋಕ್ತಿಸಿದ್ಧವಾದ ವಸ್ತುವಿನಿಂದ ಅಲಂಕಾರವೂ ಅಭಿವ್ಯಕ್ತವಾಗುವುದಕ್ಕೆ ಉದಾಹರಣಗಳನ್ನು ಊಹಿಸಿಕೊಳ್ಳುವುದು. ಹೀಗೆ ಧ್ವನಿಗೆ ಹಿಂದೆ ತಿಳಿಸಿದ ಹದಿನೆಂಟುಬಗೆಗಳಲ್ಲಿ ಶಬ್ದ ಮತ್ತು ಅರ್ಥಗಳೆರಡರ ಶಕ್ತಿಯಿಂದಲೂ ತೋರುವ ವ್ಯಂಗ್ಯಾರ್ಥವು ವಾಕ್ಯವಪ್ಪರಲ್ಲಿಯೇ ಇರುವುದರಿಂದ ಅದು ಒಂದೇ ಬಗೆಯಾಗುತ್ತವೆ. ಉಳಿದವು ಹದಿನೇಳು ಬಗೆಗಳು ವಾಕ್ಯದಲ್ಲೂ ಪದದಲ್ಲೂ ಸಂಭವಿಸುವುದರಿಂದ ಮೂವತ್ತನಾಲ್ಕು ಬಗೆಗಳಾಗುತ್ತವೆ. ಇವೆಲ್ಲವೂ ಸೇರಿ ಒಟ್ಟು ಮೂವತ್ತೈದು ಬಗೆಗಳಾಗುವುವು.

ಪ್ರಬಂಧೇಽಪಿ ಮತೋ ಧೀರೈರರ್ಥಶಕ್ತ್ಯುದ್ಭವೋ ಧ್ವನಿಃ ।

ಪ್ರಬಂಧೋ ಮಹಾವಾಕ್ಯಮ್. ಅನಂತರೋಕ್ತದ್ವಾದಶಭೇದೋಽರ್ಥಶಕ್ತ್ಯುತ್ಥಃ ಯಥಾ ಮಹಾಭಾರತೇ ಗೃಧ್ರಗೋಮಾಯುಸಂವಾದೇ—

ಅಲಂ ಸ್ಥಿತ್ವಾ ಶ್ಮಶಾನೇಽಸ್ಮಿನ್ ಗೃಧ್ರಗೋಮಾಯುಸಂಕುಲೇ ।
ಕಂಕಾಲಬಹುಲೇ ಘೋರೇ ಸರ್ವಪ್ರಾಣಿಭಯಂಕರೇ ॥
ನ ಚೇಹ ಜೀವಿತಃ ಕಶ್ಚಿತ್ ಕಾಲಧರ್ಮಮುಪಾಗತಃ ।
ಪ್ರಿಯೋ ವಾ ಯದಿ ವಾ ದ್ವೇಷ್ಯಃ ಪ್ರಾಣಿನಾಂ ಗತಿರೀದೃಶೀ ॥

ಇತಿ ದಿವಸೇ ಶಕ್ತಸ್ಯ ಗೃಧ್ರಸ್ಯ ಶ್ಮಶಾನೇ ಮೃತಂ ಬಾಲಮುಪಾದಾಯ ತಿಷ್ಠತಾಂ ತಂ ಪರಿತ್ಯಜ್ಯ ಗಮನಮಿಷ್ಟಮ್.

ಆದಿತ್ಯೋಽಯಂ ಸ್ಥಿತೋ ಮೂಢಾಃ! ಸ್ನೇಹಂ ಕುರುತ ಸಾಂಪ್ರತಮ್‌ಃ
ಬಹುವಿಘ್ನೋ ಮುಹೂರ್ತೋಽಯಂ ಜೀವೇದಪಿ ಕದಾಚನ॥
ಅಮುಂ ಕನಕವರ್ಣಾಭಂ ಬಾಲಮಪ್ರಾಪ್ತಯೌವನಮ್ ।
ಗೃಧ್ರವಾಕ್ಯಾತ್ ಕಥಂ ಬಾಲಂ ತ್ಯಜಧ್ವಮವಿಶಂಕಿತಾಃ ॥

ಇತಿ ನಿಶಿ ಸಮರ್ಥಸ್ಯ ಗೋಮಾಯೋರ್ದಿವಸೇ ಪರಿತ್ಯಾಗೋಽನಭಿಲಷಿತ ಇತಿ ವಾಕ್ಯಸಮೂಹೇನ ದ್ಯೋತ್ಯತೇ. ಅತ್ರ ಸ್ವತಃಸಂಭವೀ ವ್ಯಂಜಕಃ.

ಏವಮನ್ಯೇಷು ಏಕಾದಶಭೇದೇಷು ಉದಾಹರ್ತವ್ಯಮ್. ಏವಂ ವಾಚ್ಯಾರ್ಥವ್ಯಂಜಕತ್ವೇ ಉದಾಹೃತಮ್. ಲಕ್ಷ್ಯಾರ್ಥಸ್ಯ ಯಥಾ ನಿಃಶೇಷಚ್ಯುತಚಂದನಂ ಇತ್ಯಾದಿ. ವ್ಯಂಗ್ಯಾರ್ಥಸ್ಯ ಯಥಾ 'ಪಶ್ಯ ನಿಶ್ಚಲ' ಇತ್ಯಾದಿ. ಅನಯೋಃ ಸ್ವತಸ್ಸಂಭವಿನೋರ್ಲಕ್ಷ್ಯವ್ಯಂಗ್ಯಾರ್ಥೌ ವ್ಯಂಜಕೌ. ಏವಮನ್ಯೇಷ್ವೇಕಾದಶಭೇದೇಷು ಉದಾಹಾರ್ಯಮ್.

ಪದಾಂಶವರ್ಣರಚನಾಪ್ರಬಂಧೇಷ್ವಸ್ಫುಟಕ್ರಮಃ ।

ಅಸಂಲಕ್ಷ್ಯಕ್ರಮವ್ಯಂಗ್ಯೋ ಧ್ವನಿಃ. ತತ್ರ ಪದಾಂಶಃ ಪ್ರಕೃತಿಪ್ರತ್ಯಯೋಪಸರ್ಗನಿಪಾತಾದಿಭೇದಾದನೇಕವಿಧಃ.

ಚಲಾಪಾಂಗಾಂ ದೃಷ್ಟಿಂ ಸ್ಪೃಶಸಿ ಬಹುಶೋ ವೇಪಥುಮತೀಂ

ರಹಸ್ಯಾಖ್ಯಾಯೀವ ಸ್ವನಸಿ ಮೃದು ಕರ್ಣಾಂತಿಕಚರಃ ।
ಕರಂ ವ್ಯಾಧುನ್ವತ್ಯಾಃ ಪಿಬಸಿ ರತಿಸರ್ವಸ್ವಮಧರಂ
ವಯಂ ತತ್ತ್ವಾನ್ವೇಷಾನ್ಮಧುಕರ ! ಹತಾಸ್ತ್ವಂ ಖಲು ಕೃತೀ ॥

ಅತ್ರ ಹತಾಃ ಇತಿ ನ ಪುನರ್ದುಃಖಂ ಪ್ರಾಪ್ತವಂತ ಇತಿ ಹನ್‌ಪ್ರಕೃತೇಃ.

ಮುಹುರಂಗುಲಿಸಂವೃತಾಧರೋಷ್ಠಂ ಪ್ರತಿಷೇಧಾಕ್ಷರವಿಕ್ಲವಾಭಿರಾಮಮ್ ।
ಸುಖಮಂಸವಿವರ್ತಿ ಪಕ್ಷ್ಮಲಾಕ್ಷ್ಯಾಃ ಕಥಮಪ್ಯುನ್ನಮಿತಂ ನ ಚುಂಬಿತಂ ತು॥

ಅತ್ರ 'ತು' ಇತಿ' ನಿಪಾತಸ್ಯ ಅನುತಾಪವ್ಯಂಜಕತ್ವಮ್.

'ನ್ಯಕ್ಕಾರೋ ಹ್ಯಯಮೇವ ಯದರಯಃ, ಇತ್ಯಾದೌ 'ಅರಯಃ' ಇತಿ ಬಹುವಚನಸ್ಯ, 'ತಾಪಸ' ಇತ್ಯೇಕವಚನಸ್ಯ, 'ಅತ್ರೈವ, ಇತಿ ಸರ್ವನಾಮ್ನಃ, 'ನಿಹಂತಿ' ಇತಿ 'ಜೀವತಿ' ಇತಿ ಚ ತಿಙಃ, 'ಅಹೋ' ಇತ್ಯವ್ಯಯಸ್ಯ, 'ಗ್ರಾಮಟಿಕಾ' ಇತಿ ಕಒರೂಪತದ್ಧಿತಸ್ಯ, ವಿಲುಂಠನೇತಿ ವ್ಯುಪಸರ್ಗಸ್ಯ, 'ಭುಜೈಃ' ಇತಿ ಬಹುವಚನಸ್ಯ ಚ ವ್ಯಂಜಕತ್ವಮ್.

ಆಹಾರೇ ವಿರತಿಃ ಸಮಸ್ತವಿಷಯಗ್ರಾಮೇ ನಿವೃತ್ತಿಃ ಪರಾ
ನಾಸಾಗ್ರೇ ನಯನಂ ತದೇತದಪರಂ ಯಚ್ಚೈಕತಾನಂ ಮನಃ ।
ಮೌನಂ ಚೇದಮಿದಂ ಚ ಶೂನ್ಯಮಧುನಾ ಯದ್ವಿಶ್ವಮಾಭಾತಿ ತೇ
ತದ್ಬ್ರೂಯಾಸ್ಸಖಿ ಯೋಗಿನೀ ಕಿಮಸಿ ಭೋಃ ಕಿಂ ವಾ ಡಿಯೋಗಿನ್ಯಸಿ॥

ಅತ್ರ ತು 'ಆಹಾರೇ' ಇತಿ ವಿಷಯಸಪ್ತಮ್ಯಾಃ, 'ಸಮಸ್ತ' ಇತಿ 'ಪರಾ' ಇತಿ ಚ ವಿಶೇಷಣದ್ವಯಸ್ಯ, 'ಮೌನಂ ಚೇದಂ" ಇತಿ ಪ್ರತ್ಯಕ್ಷಪರಾಮರ್ಶಿನಃ ಸರ್ವನಾಮ್ನಃ, 'ಆಭಾತಿ' ಇತ್ಯುಪಸರ್ಗಸ್ಯ, 'ಸಖಿ' ಇತಿ ಪ್ರಣಯಸ್ಮಾರಣಸ್ಯ, 'ಅಸಿ ಭೋ' ಇತಿ ಸೋಪಹಾಸೋತ್ಪ್ರಾಸಸ್ಯ, 'ಕಿಂ ವಾ' ಇತ್ಯುತ್ತರಪಕ್ಷದಾರ್ಢ್ಯಸೂಚಕಸ್ಯ ವಾಶಬ್ದಸ್ಯ, 'ಅಸಿ' ಇತಿ ವರ್ತಮಾನೋಪದೇಶಸ್ಯ ಚ ತತ್ತದ್ವಿಷಯವ್ಯಂಜಕತ್ವಂ ಸಹೃದಯಸಂವೇದ್ಯಮ್. ವರ್ಣರಚನಯೋರುದಾಹರಿಷ್ಯತೇ.

ಪ್ರಬಂಧೇ ಯಥಾ— ಮಹಾಭಾರತೇ ಶಾಂತಃ, ರಾಮಾಯಣೇ ಕರುಣಃ, ಮಾಲತೀಮಾಧವರತ್ನಾವಳ್ಯಾದೌ ಶೃಂಗಾರಃ. ಏವಮನ್ಯತ್ರ.

ಕೇವಲ ಅರ್ಥಶಕ್ತಿಯಿಂದಲೇ ತೋರುವ ಹನ್ನೆರಡು ಬಗೆಯ ಧ್ವನಿಯು ಪ್ರಬಂಧದಲ್ಲೂ ಹಾಗೆಯೇ ವಾಕ್ಯಪದಗಳಲ್ಲೂ ಸಂಭವಿಸುತ್ತದೆ ಎಂದು ಅನುಭವಿಗಳು ಹೇಳಿದ್ದಾರೆ. ಹಿಂದಿನ ಮೂವತ್ತೈದು ಬಗೆಗಳ ಜೊತೆಗೆ ಇವು ಹನ್ನೆರಡು ಬಗೆಗಳೂ ಸೇರಿ ಒಟ್ಟು ಇಲ್ಲಿಗೆ ನಲ್ವತ್ತೇಳು ಬಗೆಯ ಧ್ವನಿಗಳಾದವು. ಪ್ರಬಂಧವೆಂದರೆ ಅನೇಕ ವಾಕ್ಯಗಳ ಸಮೂಹವೆಂದು ಅರ್ಥ. ಮಹಾಭಾರತದಲ್ಲಿ ಗೃಧ್ರಗೋಮಾಯುಸಂವಾದವೆಂಬ ಮಹಾವಾಕ್ಯಾರ್ಥದಲ್ಲಿ ತೋರುವ ಧ್ವನಿಯನ್ನು ಈಗ ತಿಳಿಸುತ್ತಾನೆ. "ಸಾಯಂಕಾಲದವೇಳೆ ಒಂದು ಮಗುವಿನ ಹೆಣವನ್ನು ತೆಗೆದುಕೊಂಡು ಸ್ಮಶಾನಕ್ಕೆ ಹೋದ ಬಂಧುಜನರನ್ನು ಉದ್ದೇಶಿಸಿ ರಣಹದ್ದು ಹೀಗೆ ಹೇಳುತ್ತದೆ. ರಾತ್ರಿವೇಳೆ ಅದಕ್ಕೆ ಕಣ್ಣು

ಕಾಣಿಸದೇ ಇರುವ ಪ್ರಯುಕ್ತ ಹಗಲಿನಲ್ಲಿಯೇ ಆ ಹೆಣವನ್ನು ತಿನ್ನಬೇಕೆಂಬ ಇಚ್ಛೆಯಿಂದ ಬಂಧುಗಳನ್ನು ಅವರವರ ಮನೆಗಳಿಗೆ ಕಳುಹಿಸಲಿಕ್ಕಾಗಿ ಅದು ಅವರಿಗೆ ಹೇಳುತ್ತದೆ. "ಹದ್ದು ನರಿಗಳಿಂದಲೂ, ಮನುಷ್ಯರ ಮೂಳೆಗಳಿಂದಲೂ ತುಂಬಿ ಪ್ರಾಣಿಗಳೆಲ್ಲರಿಗೂ ಭಯಂಕಾರವೆನಿಸಿ, ನಿಮ್ಮಂತವರಿಗೂ ಹೆದರಿಕೆಯನ್ನು ಹುಟ್ಟಿಸುವ ಈ ಸ್ಮಶಾನದಲ್ಲಿ ಇದ್ದು ಪ್ರಯೋಜನವೇನು? ಒಮ್ಮೆ ಸತ್ತು ಈ ಸ್ಮಶಾನಕ್ಕೆ ಬಂದ ಹೆಣ ಯಾವುದೂ ಮತ್ತೆ ಬರುವ ಸಂಭವವಿಲ್ಲ. ನಿಮಗೆ ಬೇಕಾದವನಾಗಲೀ ಬೇಕಿಲ್ಲದವನಾಗಲೀ ಸತ್ತವನು ಯಾರೇ ಆದರೂ ಮತ್ತೆ ಬದುಕಲಾರನು. ಪ್ರಾಣಿಗಳ ಹಣೆಯಬರಹವೆಲ್ಲವೂ ಸಾಯುವುದೇ ಆಗಿದೆ. ಆದ್ದರಿಂದ ನಾವು ಬೇಗನೆ ಹೊರಡುವುದು ಉತ್ತಮ" ಹೀಗೆ ವ್ಯವಹರಿಸಲು ಸಮರ್ಥವೆನಿಸಿದ ಹದ್ದು ಸ್ಮಶಾನಕ್ಕೆ ಬಂದಿರುವ ಆ ಹೆಣವನ್ನು ಆಗಲೇ ತಿನ್ನುವ ಉದ್ದೇಶದಿಂದ ಬಂಧುಗಳನ್ನು ಅಲ್ಲಿಂದ ಹೊರಡಿಸಲು ಇಚ್ಛೆಯಿಂದ ಅವರಿಗೆ ಹಾಗೆ ತಿಳಿಸುತ್ತದೆ.

ರಾತ್ರಿವೇಳೆಯೇ ಹೆಣದ ಮಾಂಸವನ್ನು ತಿನ್ನಲು ಸಮರ್ಥವೆನಿಸಿದ ನರಿಗೆ ಹಗಲಿನಲ್ಲಿ ಬಂಧುಗಳು ಆ ಹೆಣವನ್ನು ಅಲ್ಲಿ ಬಿಟ್ಟುಹೋಗುವುದು ಇಷ್ಟವಾಗಲಿಲ್ಲ. ಅದಕ್ಕಾಗಿ ಅದು ಜನರಿಗೆ ಹೀಗೆ ತಿಳಿಸುತ್ತದೆ. "ಅಯ್ಯಾ ಮೂಢರೇ, ಇನ್ನೂ ಸೂರ್ಯನು ಮುಳುಗಿಲ್ಲ. ನೀವು ಮನೆಗೆ ಹೊರಡಲು ಆತುರ ಪಡುವಂತೆ ಕಾಣುತ್ತದೆ. ಮಗನ ಬಗ್ಗೆ ಸ್ನೇಹವನ್ನು ಬೆಳೆಸಿರಿ. ಈಗ ಈ ಮಗುವಿಗೆ ಯಾವುದಾದರೂ ಪಿಶಾಚಿ ಹಿಡಿದಿರಬಹುದು. ಮುಂದೆ ಇದು ತೊಲಗಿ ಈ ಮಗು ಹೇಗಾದರೂ ಬದುಕಬಹುದು. ಇನ್ನು ಯೌವನಸುಖವನ್ನೇ ಅನುಭವಿಸದೆ ಇರುವ ಇಂತಹ ಸುಂದರವಾದ ಮಗನನ್ನು ನೀವು ಹದ್ದಿನ ಮಾತಿನಂತೆ ಹೇಗೆ ನಿರ್ಭಯವಾಗಿ ಬಿಟ್ಟುಹೋಗುತ್ತಿರುವಿರಿ. ಇನ್ನು ಕೊಂಚ ಹೊತ್ತು ಕಾಯ್ದು ನೋಡಿ. ಮಗು ಬದುಕಬಹುದು." ಇಲ್ಲಿ ಗೃಧ್ರಗೋಮಾಯು ಇವೆರಡರ ಮಾತುಗಳೂ ಸೇರಿ ಪ್ರಬಂಧವೆನಿಸಿದೆ. ಇವೆರಡು ಪ್ರಬಂಧಗಳಲ್ಲೂ ತೋರುವ ಅರ್ಥವು ಕವಿಕಲ್ಪಿತವೆನಿಸದೆ ಸಹಜವಾಗಿ ಸಂಭವಿಸಿದೆ. ಹಗಲಿನಲ್ಲಾಗಲೀ ರಾತ್ರಿಯಲ್ಲಾಗಲೀ ಈ ಮಗುವನ್ನು ಬಿಟ್ಟುಹೋಗುವುದು ಯುಕ್ತವಲ್ಲವೆಂಬ ಅರ್ಥವೇ ಇಲ್ಲಿ ಸ್ವತಸ್ಸಂಭವಿಯಾದ ವಸ್ತು. ಇದೇ ಇಲ್ಲಿ ವ್ಯಂಜಕವೆನಿಸಿದೆ. ಇದರಿಂದ ಅವೆರಡಕ್ಕೂ ಹೇಗಾದರೂ ಹೆಣದ ಮಾಂಸವನ್ನು ತಿನ್ನಬೇಕೆಂಬ ಇಚ್ಛೆ ತೀವ್ರವಾಗಿತ್ತೆಂಬ ವಸ್ತು ಅಭಿವ್ಯಕ್ತವಾಗುತ್ತದೆ. ವಾಕ್ಯಸಮೂಹವೆನಿಸಿದ ಪ್ರಬಂಧದಲ್ಲಿ ವಸ್ತುವಿನಿಂದ ವಸ್ತು ಅಭಿವ್ಯಕ್ತವಾಗುವುದಕ್ಕೆ ಇದು ಉದಾಹರಣವೆನಿಸಿದೆ. ಹೀಗೆಯೇ ಉಳಿದ ಹನ್ನೊಂದು ಬಗೆಗಳಿಗೆ ಉದಾಹರಣಗಳನ್ನು ಊಹಿಸಿಕೊಳ್ಳುವುದು. ಹೀಗೆಯೇ 'ದೃಷ್ಟಂ ಹೇ ಪ್ರತಿವೇಶಿನಿ' ಎಂಬ ಪದದಲ್ಲಿ ವಾಚ್ಯಾರ್ಥವು ಬೇರೊಂದು ಅರ್ಥವನ್ನು ಪ್ರಕಾಶಪಡಿಸುವುದನ್ನು ಉದಾಹರಿಸಿಯಾಗಿದೆ; ಲಕ್ಷ್ಯಾರ್ಥವು ಬೇರೊಂದು ವ್ಯಂಗ್ಯಾರ್ಥವನ್ನು ಪ್ರಕಾಶಪಡಿಸುವುದಕ್ಕೆ 'ಪಶ್ಯ ನಿಶ್ಚಲ' ಎಂಬುದು ಉದಾಹರಣವಾಗುತ್ತದೆ. ಇವೆರಡು ಉದಾಹರಣಗಳಲ್ಲೂ ಸ್ವತಸ್ಸಂಭವಿ ಎನಿಸಿದ ವಸ್ತುವಿನಿಂದ ವಸ್ತು ಅಭಿವ್ಯಕ್ತವಾಗುತ್ತದೆ.

ಅಂತಹ ವಸ್ತುವಿನಿಂದ ಅಲಂಕಾರವು ತೋರುವುದೇ ಮೊದಲಾದ ಇತರ ಹನ್ನೊಂದು ಬಗೆಗಳಿಗೆ ಉದಾಹರಣಗಳನ್ನು ಊಹಿಸಿಕೊಳ್ಳುವುದು.

ಕ್ರಮವು ಸ್ಪಷ್ಟವಾಗಿ ಕಾಣಿಸದಿರುವ ಅಸಂಲಕ್ಷ್ಯಕ್ರಮವ್ಯಂಗ್ಯವು ಪದದ ಅಂಶವೆನಿಸಿದ ಪ್ರಕೃತಿ, ಪ್ರತ್ಯಯ, ಉಪಸರ್ಗ, ನಿಪಾತಗಳಲ್ಲೆಲ್ಲಾ ಸಂಭವಿಸುತ್ತದೆ. ಹೀಗೆ ಪದದ ಅನೇಕ ಬಗೆಗಳಲ್ಲೂ ವರ್ಣಗಳಲ್ಲೂ, ರಚನೆಯಲ್ಲೂ ಪ್ರಬಂಧದಲ್ಲೂ ಅಸಂಲಕ್ಷ್ಯ ಕ್ರಮವ್ಯಂಗ್ಯವು ಪ್ರಕಟವಾಗುತ್ತದೆ.

ಪದದ ಅಂಶವೆನಿಸಿದ ಪ್ರಕೃತಿಯಿಂದ ಅಸಂಲಕ್ಷ್ಯಕ್ರಮವ್ಯಂಗ್ಯವೆನಿಸಿದ ಅರ್ಥವು ತೋರುವುದನ್ನು ಈಗ ಉದಾಹರಿಸುತ್ತಾನೆ. ಅಭಿಜ್ಞಾನಶಾಕುಂತಲದಲ್ಲಿ ದುಂಬಿಯು ಶಕುಂತಲೆಯ ಮುಖಕ್ಕೆ ಕೊಡುತ್ತಿದ್ದ ಹಿಂಸೆಯನ್ನು ನೋಡಿದ ದುಷ್ಯಂತನು ಹೀಗೆ ಹೇಳುತ್ತಾನೆ. "ಎಲೈ ದುಂಬಿಯೇ, ನೀನು ಎಲ್ಲಿ ಕಚ್ಚುವೆಯೋ ಎಂದು ಚಂಚಲಗೊಂಡು ಓರೆನೋಟದಿಂದ ನಡುಗುತ್ತಿರುವ ಆಕೆಯ ಮನೋಹರವಾದ ದೃಷ್ಟಿಗೆ ನೀನು ಬಿದ್ದಿರುವೆ. ಯಾವುದೋ ರಹಸ್ಯವನ್ನು ಹೇಳುವವನಂತೆ ಆಕೆಯ ಕಿವಿಯ ಹತ್ತಿರವೇ ಸಂಚರಿಸುತ್ತ ಇಂಪಾಗಿ ಶಬ್ದಮಾಡುತ್ತಿರುವೆ. ನಿನ್ನನ್ನು ಓಡಿಸಲಿಕ್ಕಾಗಿ ಕೈಯನ್ನು ಅಳ್ಳಾಡಿಸುತ್ತಿರುವ ಆಕೆಯ ಪ್ರೇಮದ ಜೀವಾಳವೆನಿಸಿದ ಕೆಳತುಟಿಯ ದಿವ್ಯಾಮೃತವನ್ನು ಕುಡಿಯುತ್ತಿರುವೆ.ಆದ್ದರಿಂದ ನೀನೆ ಧನ್ಯ. ನಾನಾದರೋ 'ಈಕೆಯು ಕನ್ಯೆ, ನನಗೆ ರಮಿಸಲು ಯೋಗ್ಯಳೇ ಅಲ್ಲವೆ ?' ಎಂದು ಮುಂತಾದ ತತ್ತ್ವಜಿಜ್ಞಾಸೆಯಿಂದ ಮೃತಪ್ರಾಯನಾಗಿರುವೆನು. ವಿಚಾರಮಾಡುತ್ತಲೇ ನಾನು ಕೆಟ್ಟೆನು. ಇಷ್ಟರಲ್ಲಿ ನೀನು ಆಕೆಯನ್ನು ಅನಾಯಾಸವಾಗಿ ಅನುಭವಿಸಿ ಆನಂದಪಡುತ್ತಿರುವೆ." ಇಲ್ಲಿ ಹತಾಃ ಎಂಬ ಪದದ ಹನ್‌ಧಾತುವು "ನಾನು ಕೇವಲ ದುಃಖವನ್ನು ಹೊಂದಿರುವೆನಷ್ಟೇ ಅಲ್ಲದೆ ವ್ಯಾಕುಲಗೊಂಡು ಸತ್ತಂತೆ ಆಗಿರುವೆನು. ನಾನು ಆನಂದದಿಂದ ಅನುಭವವಿಲ್ಲದೆ ಸತ್ತ ಹೆಣವಾಗಿರುವೆನು" ಎಂಬ ಅರ್ಥವನ್ನು ಪ್ರಕಾಶಪಡಿಸುತ್ತದೆ. ಕ್ರಿಯಾಪದದಲ್ಲಿ ಮೂಲ ಧಾತುವೇ ಪ್ರಕೃತಿ ಎನಿಸುತ್ತದೆ. ಹನ್ ಎಂಬ ಪ್ರಕೃತಿಯು ದುಃಖಾತಿಶಯವನ್ನು ತಿಳಿಸುವುದರಿಂದ ಅದೇ ಇಲ್ಲಿ ವ್ಯಂಜಕವೆನಿಸಿದೆ.

ನಿಪಾತವು ವ್ಯಂಗ್ಯಾರ್ಥವನ್ನು ಪ್ರಕಾಶಪಡಿಸುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. ಶಾಕುಂತಲದಲ್ಲಿ ಗೌತಮಿಯೊಡನೆ ಶಕುಂತಲೆಯು ಹೊರಟಮೇಲೆ ದುಷ್ಯಂತನು ಅನುತಾಪಪಡುವುದನ್ನು ಇಲ್ಲಿ ತಿಳಿಸಿದೆ. "ಆಕೆಯು ಬಾರಿ ಬಾರಿಗೂ ಬೆರಳುಗಳಿಂದ ತನ್ನ ತುಟಿಯನ್ನು ಮುಚ್ಚಿಕೊಳ್ಳುತ್ತಿದ್ದಳು. ಆಕೆಯನ್ನು ತ್ಯಾಗ ಮಾಡಲಿಕ್ಕೆ ನಾನು ಪ್ರಯೋಗಿಸಿದ ವಾಕ್ಯದಿಂದ ಆಕೆಗೆ ವ್ಯಥೆಯುಂಟಾಗಿದ್ದರೂ ಸುಂದರವಾಗಿದ್ದು ಹೆಗಲಿನ ಕಡೆಗೆ ತಿರುಗಿದ್ದ ಮುಖವನ್ನು ಕಣ್ಣಿಗೆ ಬಿದ್ದಿದ್ದ ಪರಾಗವನ್ನು ದೂರಮಾಡುವ ನೆಪದಿಂದ ಆಕೆಯು ಮೇಲಕ್ಕೆ ಎತ್ತಿದಳು. ಆದರೂ ಅದನ್ನು ಚುಂಬಿಸಲಿಕ್ಕಾಗಲಿಲ್ಲವಾದ್ದರಿಂದ ಈವರಿವಿಗೆ ನಾನು ಮಾಡಿದ್ದೆಲ್ಲವೂ ಎಷ್ಟು ಅನಾಹುತವಾಯಿತು ?" ಆಕೆಯು ಮುಖವನ್ನು ಮೇಲಕ್ಕೆ ಎತ್ತಿದ್ದರೂ ನನಗೆ ಅದಕ್ಕೆ ಮುತ್ತಿ

ಡಲು ಅವಕಾಶವಾಗಲಿಲ್ಲ. ನಾನು ಎಂತಹ ಪಾಪಿ ಇರುವೆನು." ಹೀಗೆ ದುಷ್ಯಂತನು ತನ್ನ ಅಕೃತ್ಯಕ್ಕಾಗಿ ಅನುಭವಿಸಿದ ಅನುತಾಪವನ್ನು 'ತು' ಎಂಬ ನಿಪಾತವು ಪ್ರಕಾಶ ಪಡಿಸುತ್ತದೆ." ನ್ಯಕ್ಕಾರೋ ಹ್ಯಯವೇವ' ಎಂಬ ಪದ್ಯದಲ್ಲಿ "ಅರಯಃ" ಎಂಬಲ್ಲಿ ಬಹು ವಚನವೂ, 'ತಾಪಸಃ' ಎಂಬಲ್ಲಿ ಏಕವಚನವೂ "ಅವನು ಒಬ್ಬನೇ ಆದರೂ ಸನ್ಯಾಸಿ, ನಾನು ಅಸಹಾಯಶೂರನೆನಿಸಿದರೂ ನನಗೆ ಲೋಕದಲ್ಲಿ ಶತ್ರುಗಳಿರುವರು" ಎಂಬ ಅರ್ಥ ವನ್ನು ಪ್ರಕಟಿಸುತ್ತವೆ. ಅವನಾದರೋ ಇಲ್ಲಿಯೇ ನನ್ನ ಕಣ್ಣೆದುರಿಗೆ ನನ್ನ ಕಡೆಯವ ರನ್ನೇ ಕೊಲ್ಲುತ್ತಿದ್ದಾನೆ ಎಂಬುದನ್ನು 'ಅತ್ರೈವ' ಎಂಬ ಸರ್ವನಾಮವೂ. "ಅವನು ಹೀಗೆ ಕೊಲ್ಲುತ್ತಿದ್ದರೂ ಪಾಪಿ ರಾವಣನು ಬದುಕಿದ್ದಾನೆ" ಎಂಬುದನ್ನು 'ನಿಹಂತಿ' 'ಜೀವತಿ' ಎಂಬಲ್ಲಿ ತಿಙಪ್ರತ್ಯಯವೂ, 'ನಾನು ಸ್ವರ್ಗವೆಂಬ ಸಣ್ಣದೊಂದು ಹಳ್ಳಿ ಯನ್ನು ಲೂಟಿಮಾಡಿದ್ದರೂ ಇಂತಹ ವ್ಯರ್ಥವಾದ ಭುಜಗಳಿದ್ದು ಆಗುವ ಫಲವೇನು ?" ಎಂಬ ಅರ್ಥವನ್ನು 'ಗ್ರಾಮಟಿಕಾ' ಎಂಬಲ್ಲಿ ಗ್ರಾಮಶಬ್ದಕ್ಕೆ ಹಚ್ಚಿರುವ ತದ್ಧಿತ ಪ್ರತ್ಯಯವೂ, 'ಅಹೋ' ಎಂಬ ಅವ್ಯಯವೂ, 'ವಿಲುಂಠನ' ಎಂಬಲ್ಲಿ 'ವಿ' ಎಂಬ ಉಪಸರ್ಗವೂ, 'ಭುಜೈಃ' ಎಂಬಲ್ಲಿ ಬಹುವಚನವೂ ಪ್ರಕಾಶಗೊಳಿಸುತ್ತವೆ. ಹೀಗೆ ಪದದ ಅಂಶಗಳೆನಿಸಿದ ಪ್ರಕೃತಿ ಪ್ರತ್ಯಯ ಉಪಸರ್ಗ ನಿಪಾತ ಮೊದಲಾದವು ಇಲ್ಲಿ ವ್ಯಂಜಕವೆನಿಸುತ್ತವೆ.

ಇದಕ್ಕೆ ಬೇರೊಂದು ಉದಾಹರಣವನ್ನು ಕೊಡುತ್ತಾನೆ. ಪ್ರಿಯನ ವಿಯೋಗ ದಿಂದ ಎಲ್ಲಾ ಕೆಲಸಗಳನ್ನೂ ತೊರೆದಿರುವ ನಾಯಿಕೆಗೆ ಸಖಿಯು ಹಾಸ್ಯಮಾಡುತ್ತ ಹೇಳುವಳು. "ನೀನು ಆಹಾರವನ್ನು ಪೂರ್ತಿಯಾಗಿ ತೊರೆದಿರುವೆ. ಎಲ್ಲಾ ಬಗೆಯ ವಿಹಾರವನ್ನೂ ತೊರೆದಿರುವೆ. ಮೂಗಿನ ತುದಿಯಲ್ಲಿಯೇ ದೃಷ್ಟಿಯನ್ನಿಟ್ಟಿರುವೆ. ಒಂದೇ ವಿಷಯದಲ್ಲಿ ನಿನ್ನ ಮನಸ್ಸು ದೃಢವಾಗಿ ಅಂಟಿಕೊಂಡಿದೆ. (ಇದೆಲ್ಲವೂ ಯೋಗಿನಿ ವಿಯೋಗಿನಿ ಇಬ್ಬರಿಗೂ ಅನ್ವಯಿಸಿರಬೇಕು) ಇದರಮೇಲೆ ಮೌನವಾಗಿರುವೆ. ಈ ವಿಶ್ವವೇ ನಿನ್ನ ಮನಸ್ಸಿನಲ್ಲಿ ಶೂನ್ಯವಾಗಿ ಕಾಣುತ್ತಲಿದೆ. ಆದ್ದರಿಂದ ನೀನು ಯೋಗಿ ನಿಯೋ ವಿಯೋಗಿನಿಯೋ ಇದನ್ನು ದಯವಿಟ್ಟು ತಿಳಿಸು. ಇಲ್ಲಿ ಹೇಳಿರುವ ಲಕ್ಷಣಗಳು ಇಬ್ಬರಲ್ಲೂ ಇರುವಂತವಾದ್ದರಿಂದ ನಿಜಾಂಶವನ್ನು ನೀನೇ ತಿಳಿಸು" ಹೀಗೆ ಸಖಿ ತಿಳಿಸುತ್ತಾಳೆ. ಯೋಗಿನಿಯು ಮಾಂಸಾಹಾರವನ್ನು ಮಾತ್ರವೇ ತೊರೆಯುವಳು. ನೀನು ಎಲ್ಲಾ ಬಗೆಯ ಆಹಾರವನ್ನೂ ತೊರೆದಿರುವೆ'' ಎಂಬುದನ್ನು ಆಹಾರೇ ಎಂಬಲ್ಲಿ ರುವ ವಿಷಯಸಪ್ತಮಿಯು ಪ್ರಕಾಶಪಡಿಸುತ್ತದೆ. 'ಸಮಸ್ತವಿಷಯಗ್ರಾಮೇ, ಪರಾ' ಎಂಬಲ್ಲಿ 'ಸಮಸ್ತ' 'ಪರಾ' ಎಂಬ ವಿಶೇಷಣಗಳೆರಡೂ 'ಯೋಗಿನಿಗೆ ಯೋಗಪ್ರತಿ ಬಂಧಕವಾದ ಕೆಲವು ವಿಷಯಗಳಲ್ಲಿ ಮಾತ್ರವೇ ನಿವೃತ್ತಿ ಇದ್ದು ಬೇರೆ ವಿಷಯಗಳಲ್ಲಿ ಪ್ರವೃತ್ತಿ ಇರುತ್ತದೆ; ನಿನಗಾದರೋ ಎಲ್ಲಾ ವಿಷಯಗಳಲ್ಲೂ ನಿವೃತ್ತಿಯೇ ಇದೆ' ಎಂಬ ಅಂಶವನ್ನು ಪ್ರಕಾಶಗೊಳಿಸುತ್ತವೆ. 'ಮೌನಂ ಚ ಇದಂ' ಎಂಬಲ್ಲಿ ಪ್ರತ್ಯಕ್ಷ ಸ್ಥಿತಿಯನ್ನು ತಿಳಿಸುವ ಸರ್ವನಾಮವು 'ಯೋಗಿನಿಯು ಬೇರೆ ಯಾರಲ್ಲೂ ಮಾತಡನಾ

ದಿದ್ದರೂ ಮತ್ತೊಬ್ಬ ಯೋಗಿನಿಯೊಡನೆ ಮಾತನಾಡುತ್ತಾಳೆ ; ನೀನಾದರೋ ನಿನ್ನ ಬಳಿಗೆ ಬಂದ ಈ ಸಖಿಯನ್ನು (ನನ್ನನ್ನು) ಕಂಡರೂ ಮಾತನಾಡುತ್ತಿಲ್ಲ' ಎಂಬ ಅರ್ಥವನ್ನು ಪ್ರಕಟಿಸುತ್ತದೆ. 'ಆಭಾತಿ' ಎಂಬಲ್ಲಿ 'ಆ' ಎಂಬ ಉಪಸರ್ಗವು ಯೋಗಿನಿಗೆ ಜಗತ್ತು ಪಾರಮಾರ್ಥಿಕವಾಗಿ ಶೂನ್ಯವಾಗಿ ಕಾಣುವುದಾದರೂ ವ್ಯಾವಹಾರಿಕವಾಗಿ ಸತ್ಯವಾಗಿಯೇ ಕಾಣುವುದು. ನಿನಗಾದರೋ ಇದರಿಂದ ಯಾವ ಪ್ರಯೋಜನವೂ ಇಲ್ಲವಾದ್ದರಿಂದ ಇದು ಯಾವಾಗಲೂ ಎಲ್ಲಾ ಕಾಲದಲ್ಲೂ ಎಲ್ಲಾ ಅವಸ್ಥೆಗಳಲ್ಲೂ ಶೂನ್ಯವೇ ಆಗಿದೆ' ಎಂಬ ಅರ್ಥವನ್ನು ಪ್ರಕಟಿಸುತ್ತದೆ. 'ಸಖಿ' ಎಂಬ ಸಂಬೋಧನವು 'ಯೋಗಿನಿಗೆ ಜಗತ್ತಿನಲ್ಲಿ ಯಾರಲ್ಲಿಯೂ ಪ್ರೇಮವೇ ಇರುವುದಿಲ್ಲ. ನಿನಗಾದರೂ ನನ್ನಲ್ಲಿ ಪ್ರೇಮವಿದೆ' ಎಂಬುದನ್ನು ಸೂಚಿಸುತ್ತದೆ. 'ಅಸಿ ಭೋಃ' ಎಂಬುದು 'ನೀನೇನು ಯೋಗಿನಿಯೋ'? ಎಂದು ಕೊಂಚವಾಗಿಯಾದರೂ ಹಾಸ್ಯಮಾಡುವ ಅವಕಾಶವು ಸಖಿಯಾದ ತನಗೆ ಇದೆ ಎಂಬುದನ್ನು ತಿಳಿಸುತ್ತದೆ. "ಯೋಗಿನಿಯನ್ನಾದರೋ ಯಾರೂ ಹಾಸ್ಯಮಾಡುವಂತೆಯೇ ಇಲ್ಲ. ನಿನ್ನ ಬಗ್ಗೆ ನಾನು ಕೊಂಚವಾದರೂ ಹಾಸ್ಯಮಾಡಬಹುದು" ಎಂಬ ಅರ್ಥವು 'ಅಸಿ,ಭೋಃ' ಈ ಎರಡು ಪದಗಳಿಂದ ವ್ಯಕ್ತವಾಗುತ್ತದೆ. 'ಕಿಂ ವಾ' ಎಂಬಲ್ಲಿ 'ಯೋಗಿನಿಯಲ್ಲದಿದ್ದರೆ ವಿಯೋಗಿನಿಯೇ ಆಗಿರಬೇಕು ಎಂದು ಎರಡನೆಯ ಪಕ್ಷವನ್ನೇ ದೃಢಪಡಿಸಬೇಕೆಂಬ ಅಂಶವನ್ನು 'ವಾ' ಶಬ್ದವು ಸೂಚಿಸುತ್ತದೆ. 'ಅಸಿ' ಎಂಬಲ್ಲಿ ವರ್ತಮಾನಕಾಲವನ್ನು ತಿಳಿಸುವ 'ಸಿ' ಎಂಬ ಪ್ರತ್ಯಯವು ಯೋಗಿನಿಗೆ ಯಾವ ಸಿದ್ಧಿಯೂ ಮುಂದೆ ಎಂದೋ ಆಗಲಿರುವುದು ; ನಿನಗಾದರೋ ಈಗಲೇ ವಿಯೋಗವು ಸಿದ್ಧಿಸಿರುವುದರಿಂದ ನೀನು ವಿಯೋಗಿನಿಯಾಗಿರುವೆ' ಎಂಬ ಅರ್ಥವನ್ನು ಸೂಚಿಸುತ್ತದೆ. ಹಾಗೆ ಆಯಾಯ ಭಾಗಗಳಿಂದ ಅಭಿವ್ಯಕ್ತವಾಗುವ ಅರ್ಥವು ಸಹೃದಯರಿಗೆ ಅನುಭವಗೋಚರವಾಗಲಿದೆ.

ವರ್ಣಗಳು ಗುಣವನ್ನೂ, ರಚನೆಯು ರೀತಿಯನ್ನೂ ಪ್ರಕಾಶಪಡಿಸುತ್ತವೆ ಎಂಬುದನ್ನು ಎಂಟು ಒಂಭತ್ತನೆಯ ಪರಿಚ್ಛೇದಗಳಲ್ಲಿ ತಿಳಿಸಲಾಗುವುದು. ಪ್ರಬಂಧದಲ್ಲಿ ರಸವು ಅಭಿವ್ಯಕ್ತವಾಗುವುದೆಂಬ ಅಂಶವನ್ನು ಅವುಗಳನ್ನು ಓದಿಯೇ ತಿಳಿಯಬೇಕು. ಮಹಾಭಾರತದಲ್ಲಿ ಶಾಂತರಸವೂ. ರಾಮಾಯಣದಲ್ಲಿ ಕರುಣರಸವೂ, ಮಾಲತೀ-ಮಾಧವ ರತ್ನಾವಳಿಗಳಲ್ಲಿ ಶೃಂಗಾರರಸವೂ, ಕಿರಾತಾರ್ಜುನೀಯದಲ್ಲಿ ದೇವೇಂದ್ರನಿಗೆ ಸಂಬಂಧಿಸಿದ ಪ್ರಬಂಧದಲ್ಲಿ ಶಾಂತರಸವೂ, ಅರ್ಜುನನಿಗೆ ಸಂಬಂಧಿಸಿದ ಪ್ರಬಂಧದಲ್ಲಿ ವೀರರಸವೂ, ಶಿಶುಪಾಲವಧದ ಹದಿಮೂರನೆಯ ಸಗವದಲ್ಲಿ ರೌದ್ರವೀರರಸಗಳೂ ಅಭಿವ್ಯಕ್ತವಾಗುವುದನ್ನು ಸಹೃದಯರು ಅನುಭವಿಸಬಹುದು.

ತದೇವಮೇಕಪಂಚಾಶದ್ಭೇದಾಸ್ತಸ್ಯ ಧ್ವನೇರ್ಮತಾಃ ।
ಸಂಕರೇಣ ತ್ರಿರೂಪೇಣ ಸಂಸೃಷ್ಟ್ಯಾ ಚೈಕರೂಪಯಾ ॥
ವೇದಖಾಗ್ನಿಶರಾಃ ಶುದ್ಧೈರಿಷುಬಾಣಾಗ್ನಿಸಾಯಕಾಃ ॥

ಶುದ್ಧೈಃ ಶುದ್ಧ ಭೇದೈಃ ಏಕಪಂಚಾಶತಾ ಯೋಜನೇನೇತ್ಯರ್ಥಃ. ದಿಙ್ಮಾತ್ರಂ ತು ಉದಾಹ್ರಿಯತೇ.

ಅತ್ಯುನ್ನತಸ್ತನಯುಗಾತರಲಾಯತಾಕ್ಷೀ ದ್ವಾರಿಸ್ಥಿತಾತದುಪಯಾನಮಹೋತ್ಸವಾಯ
ಸಾ ಪೂರ್ಣಕುಂಭನವನೀರಜತೋರಣಸ್ರಕ್ಸಂಭಾರಮಂಗಲಮಯತ್ನಕೃತಂ ವಿಧತ್ತೇ ॥

ಅತ್ರ ಸ್ತನಾವೇವ ಪೂರ್ಣಕುಂಭೌ, ದೃಷ್ಟಯ ಏವ ನವನೀರಜಾ ಇತಿ ರೂಪಕಧ್ವನಿರಸಧ್ವನ್ಯೋಃ ಏಕಾಶ್ರಯಾನುಪ್ರವೇಶರೂಪಃ ಸಂಕರಃ.

ಧಿನ್ವಂತ್ಯಸೂನಿ ಮದಮೂರ್ಛದಲಿಧ್ವನೀನಿ ಧೂತಾಧ್ವನೀನಹೃದಯಾನಿ ಮಧೋರ್ದಿನಾನಿ ।
ನಿಸ್ತಂದ್ರಚಂದ್ರವದನಾವದನಾರವಿಂದಸೌರಭ್ಯಸೌಹೃದಸಗರ್ವಸಮೀರಣಾನಿ ॥

ಅತ್ರ ನಿಸ್ತಂದ್ರೇತ್ಯಾದಿಲಕ್ಷಣಾಮೂಲಧ್ವನೀನಾಂ ಸಂಸೃಷ್ಟಿಃ.

ಅಥ ಗುಣೀಭೂತವ್ಯಂಗ್ಯಮ್—

ಅಪರಂತು ಗುಣೀಭೂತವ್ಯಂಗ್ಯಂ ವಾಚ್ಯಾದನುತ್ತಮೇ ವ್ಯಂಗ್ಯೇ ಚ ।

ಅಪರಂ ಕಾವ್ಯಂ. ಅನುತ್ತಮತ್ವಂ ನ್ಯೂನತಯಾ ಸಾಮ್ಯೇನ ಚ ಸಂಭವತಿ.

ತತ್ರ ಸ್ಯಾದಿತರಾಂಗಂ ಕಾಕ್ವಾಕ್ಷಿಪ್ತಂ ಚ ವಾಚ್ಯಸಿದ್ಧ್ಯಂಗಮ್ ।
ಸಂಧಿಗ್ಧಪ್ರಾಧಾನ್ಯಂ ತುಲ್ಯಪ್ರಾಧಾನ್ಯಮಸ್ಫುಟಮಗೂಢಮ್
ವ್ಯಂಗ್ಯಮಸುಂದರಮೇವ ಭೇದಾಸ್ತಸ್ಯೋದಿತಾ ಹ್ಯಷ್ಟೌ ॥

ಇತರಸ್ಯ ರಸಾದೇರಂಗಂ ರಸಾದಿವ್ಯಂಗ್ಯಂ ಯಥಾ—

ಅಯಂ ಸ ರಶನೋತ್ಕರ್ಷೀ ಪೀನಸ್ತನವಿಮರ್ದನಃ ।
ನಾಭ್ಯೂರುಜಘನಸ್ಪರ್ಶೀ ನೀವೀವಿಸ್ರಂಸನಃ ಕರಃ ॥

ಅತ್ರ ಶೃಂಗಾರಃ ಕರುಣಸ್ಯಾಂಗಮ್.

ಮಾನೋನ್ನತಾಂ ಪ್ರಣಯಿನೀಮನುನೇತುಕಾಮಃ
ತ್ವತ್ಸೈನ್ಯಸಾಗರರವೋದ್ಗತಕರ್ಣತಾಪಃ ।
ಹಾ ಹಾ ! ಕಥಂ ನು ಭವತೋ ರಿಪುರಾಜಧಾನೀ—
ಪ್ರಾಸಾದಸಂತತಿಷು ತಿಷ್ಠತಿ ಕಾಮಿಲೋಕಃ ॥

ಅತ್ರ ಔತ್ಸುಕ್ಯತ್ರಾಸಸಂಧಿಸಂಸ್ಕೃತಸ್ಯ ಕರುಣಸ್ಯ ರಾಜವಿಷಯರತೌ ಅಂಗಭಾವಃ.

ಜನಸ್ಥಾನೇ ಭ್ರಾಂತಂ ಕನಕಮೃಗತೃಷ್ಣಾಂಧಿತಧಿಯಾ
ವಚೋ ವೈದೇಹೀತಿ ಪ್ರತಿಪದಮುದಶ್ರು ಪ್ರಲಪಿತಮ್ ।
ಕೃತಾಲಂಕಾಭರ್ತುರ್ವದನಪರಿಪಾಟೀಷು ಘಟನಾ
ಮಯಾಪ್ತಂ ರಾಮತ್ವಂ ಕುಶಲವಸುತಾ ನ ತ್ವಧಿಗತಾ ॥

ಅತ್ರ ರಾಮತ್ವಂ ಪ್ರಾಪ್ತಮಿತ್ಯವಚನೇಽಪಿ ಶಬ್ದಶಕ್ತೇರೇವ ರಾಮತ್ವಮವಗಮ್ಯತೇ. ವಚನೇನ ತು ಸಾದೃಶ್ಯಹೇತುಕತಾದಾತ್ಮ್ಯಾರೋಪಣಮಾವಿಷ್ಕುರ್ವತಾ ತದ್ಗೋಪನಮಪಾಕೃತಮ್. ತೇನ ವಾಚ್ಯಂ ಸಾದೃಶ್ಯೇ ವಾಕ್ಯಾರ್ಥಾನ್ವಯಾಪಾದಕತಯಾ ಅಂಗತಾಂ ನೀತಮ್.

ಕಾಕ್ವಾಕ್ಷಿಪ್ತಂ ಯಥಾ–ಮಥ್ನಾಮಿ ಕೌರವಶತಂ ಸಮರೇ ನ ಕೋಪಾತ್

ದುಶ್ಶಾಸನಸ್ಯ ರುಧಿರಂ ನ ಪಿಬಾಮ್ಯುರಸ್ತಃ ||
ಸಂಚೂರ್ಣಯಾಮಿ ಗದಯಾ ನ ಸುಯೋಧನೋರೂ
ಸಂಧಿಂ ಕರೋತು ಭವತಾಂ ನೃಪತಿಃ ಪಣೇನ ||

ಅತ್ರ 'ಮಥ್ನಾಮ್ಯೇವ' ಇತ್ಯಾದಿ ವ್ಯಂಗ್ಯಂ ವಾಚ್ಯಸ್ಯ ನಿಷೇಧಸ್ಯ ಸಹಭಾವೇನೈವ ಸ್ಥಿತಮ್.

ದೀಪಯನ್ ರೋದಸೀರಂಧ್ರಮೇಷ ಜ್ವಲತಿ ಸರ್ವತಃ |
ಪ್ರತಾಪಸ್ತವ ರಾಜೇಂದ್ರ ! ವೈರಿವಂಶದವಾನಲಃ ||

ಅತ್ರಾನ್ವಯಸ್ಯ ವೇಣುತ್ವಾರೋಪಣರೂಪೋ ವ್ಯಂಗ್ಯಃ ಪ್ರತಾಪಸ್ಯ ದಾವಾನಲತ್ವಾರೋಪಸಿದ್ಧ್ಯಂಗಮ್.

"ಹರಸ್ತು ಕಿಂಚಿತ್ಪರಿವೃತ್ತಧೈರ್ಯಃ" ಇತ್ಯಾದೌ ವಿಲೋಚನವ್ಯಾಪಾರಚುಂಬನಾಭಿಲಾಷಯೋಃ ಪ್ರಾಧಾನ್ಯೇ ಸಂದೇಹಃ.

ಬ್ರಾಹ್ಮಣಾತಿಕ್ರಮತ್ಯಾಗೋ ಭವತಾಮೇವ ಭೂತಯೇ |
ಜಾಮದಗ್ನ್ಯಃ ಯಥಾ ಮಿತ್ರಮನ್ಯಥಾ ದುರ್ಮನಾಯತೇ ||

ಅತ್ರ ಪರಶುರಾಮೋ ರಕ್ಷಃಕುಲಕ್ಷಯಂ ಕರಿಷ್ಯತೀತಿ ವ್ಯಂಗ್ಯಸ್ಯ ವಾಚ್ಯಸ್ಯ ಚ ಸಮಂ ಪ್ರಾಧಾನ್ಯಮ್.

ಸಂಧೌ ಸರ್ವಸ್ವಹರಣಂ ವಿಗ್ರಹೇ ಪ್ರಾಣನಿಗ್ರಹಃ |
ಅಲ್ಲಾವುದೀನನೃಪತೌ ನ ಸಂಧಿರ್ನ ಚ ವಿಗ್ರಹಃ ||

ಅತ್ರ ಅಲ್ಲಾವದೀನಾಖ್ಯೇ ನೃಪತೌ ದಾನಸಾಮಾದಿಮಂತರೇಣ ನಾನ್ಯಃ ಪ್ರಶಮೋಪಾಯ ಇತಿ ವ್ಯಂಗ್ಯಂ ವ್ಯುತ್ಪನ್ನಾನಾಮಪಿ ಝಟಿತ್ಯಸ್ಫುಟಮ್.

ಅಸಂಲಕ್ಷ್ಯಕ್ರಮವ್ಯಂಗ್ಯವು ಪದದಲ್ಲೂ, ಪದದ ಅಂಶಗಳಲ್ಲೂ, ವಾಕ್ಯದಲ್ಲೂ, ಮಹಾವಾಕ್ಯದಲ್ಲೂ, ವರ್ಣದಲ್ಲೂ, ರಚನೆಯಲ್ಲೂ ಕಂಡುಬರುವುದರಿಂದ ಆರು ಬಗೆಯಾಗಿದೆ. ಈ ರೀತಿಯಾಗಿ ಧ್ವನಿಯಲ್ಲಿ ಐವತ್ತೊಂದು ಬಗೆಗಳಾಗುತ್ತವೆ. ಅರ್ಥಾಂತರಸಂಕ್ರಮಿತವಾಚ್ಯದಲ್ಲಿ ಪದಗತ ಮತ್ತು ವಾಕ್ಯಗತ ಎರಡು, ಅತ್ಯಂತತಿರಸ್ಕೃತವಾಚ್ಯದಲ್ಲಿ ಹೀಗೆಯೇ ಎರಡು, ಅಸಂಲಕ್ಷ್ಯಕ್ರಮವ್ಯಂಗ್ಯವು ಪದ, ಪದಾಂಶ, ವಾಕ್ಯ, ಮಹಾವಾಕ್ಯ; ವರ್ಣ ರಚನೆ ಈ ಆರರಲ್ಲೂ ಇರುವ ಪ್ರಯುಕ್ತ ಆರು ಬಗೆಯಾಗುತ್ತದೆ. ಸಂಲಕ್ಷ್ಯಕ್ರಮವ್ಯಂಗ್ಯವು ಶಬ್ದಶಕ್ತಿಯಿಂದ ತೋರುವಾಗ ವಸ್ತುರೂಪವಾದರೆ ಪದದಲ್ಲಿ ಒಂದು ಬಗೆ, ವಾಕ್ಯದಲ್ಲಿ ಒಂದುಬಗೆ. ಅದು ಅರ್ಥಶಕ್ತಿಯಿಂದ ತೋರಿದರೆ ಪದದಲ್ಲಿ ಹನ್ನೆರಡು ಬಗೆಗಳು. ವಾಕ್ಯದಲ್ಲಿ ಹನ್ನೆರಡು ಬಗೆಗಳು. ಮಹಾವಾಕ್ಯದಲ್ಲಿ ಹನ್ನೆರಡು ಬಗೆಗಳು, ಶಬ್ದಾರ್ಥೋಭಯಶಕ್ತಿಗಳಿಂದ ತೋರುವಾಗ ಒಂದುಬಗೆ. ಹೀಗೆ ಒಟ್ಟು ಶುದ್ಧಧ್ವನಿಯಲ್ಲಿ ಐವತ್ತೊಂದು ಬಗೆಗಳಾಗುತ್ತವೆ. ಈ ಐವತ್ತೊಂದರಲ್ಲಿ ಒಂದೊಂದು ಬಗೆಯಲ್ಲೂ ಅಂಗಾಂಗಿಭಾವ, ಏಕಾಶ್ರಯಸ್ಥಿತಿ, ಸಂದಿಗ್ಧಭಾವವೆಂಬ ಮೂರುಬಗೆಯ

ಸಾಂಕರ್ಯದಿಂದಲೂ, ಸಂಸೃಷ್ಟಿಯಿಂದಲೂ ಒಂದಕ್ಕೊಂದು ಸೇರಿ ಎದು ಸಾವಿರದ ಮುನ್ನೂರಐವತ್ತೈದುಬಗೆಗಳಾಗುತ್ತವೆ. ಇವುಗಳಲ್ಲಿ ಕೆಲವನ್ನು ಸೂಚನೆಗಾಗಿ ಉದಾಹರಿಸಲಾಗಿದೆ.

ವಿದೇಶದಿಂದ ಪ್ರಿಯನು ಬಂದನೆಂಬುದನ್ನು ಕೇಳಿ ವಾಸದ ಮನೆಯ ಬಾಗಿಲಿನಲ್ಲಿದ್ದ ನಾಯಿಕೆಯು ವರ್ಣಿಸುತ್ತಾಳೆ." ಅತ್ಯುನ್ನತವಾದ ಸ್ತನಗಳೆರಡರಿಂದಲೂ, ಚಂಚಲವೂ ದೀರ್ಘವೂ ಆದ ನೇತ್ರಗಳಿಂದಲೂ ಶೋಭಿಸುವ ನಾಯಿಕೆಯು ಬಾಗಿಲಿನಲ್ಲಿ ನಿಂತು ತನ್ನ ಪ್ರಿಯನು ಮನೆಗೆ ಬಂದಾಗ ನಡೆಸುವ ಮಹೋತ್ಸವಕ್ಕಾಗಿ ಪೂರ್ಣಕುಂಭಗಳನ್ನು ಬಾಗಿಲಿನ ಎರಡು ಕಡೆಗಳಲ್ಲೂ ಇಡುತ್ತಲೂ, ವಿಕಸಿತವಾದ ಕಮಲಗಳಿಂದ ತೋರಣಮಾಲಿಕೆಗಳನ್ನು ಕಟ್ಟುತ್ತಲೂ ಮಂಗಳವನ್ನಾಚರಿಸಿದಳು." ಇಲ್ಲಿ ಸ್ತನಗಳೇ ಪೂರ್ಣಕುಂಭಗಳೆಂದೂ, ದೃಷ್ಟಿಗಳೇ ಪುಷ್ಪಮಾಲೆಗಳೆಂದೂ ವಾಚ್ಯವಾಗಿ ಆರೋಪಿಸದೆ ವ್ಯಂಗ್ಯವಾಗಿ ಆರೋಪಿಸಿರುವುದರಿಂದ ಇಲ್ಲಿ ರೂಪಕಾಂಕಾರಧ್ವನಿ ಇದೆ. ಸ್ತನಗಳೆರಡರಿಂದಲೂ ನೋಟಗಳಿಂದಲೂ ನಾಯಕನ ರತಿಯು ಉಜ್ವಲಿಸುವುದರಿಂದ ಸಂಭೋಗಶೃಂಗಾರವು ತೋರುತ್ತದೆ. ರೂಪಕಧ್ವನಿ ಮತ್ತು ಸಂಭೋಗಶೃಂಗಾರಧ್ವನಿ ಇವೆರಡೂ ಸ್ತನಯುಗಾ, ತರಳಾಯಕಾಕ್ಷೀ, ಎಂಬ ಒಂದೊಂದು ಪದದಲ್ಲೂ ಒಂದೇ ಆಶ್ರಯದಲ್ಲೂ ಪ್ರವೇಶಿಸಿರುವುದರಿಂದ ಇಲ್ಲಿ ಅವೆರಡರ ಸಾಂಕರ್ಯವಿದೆ.

ಪದವಲ್ಲಿ ತೋರುವ ಧ್ವನಿಗೆ ಸಂಸೃಷ್ಟಿಯನ್ನು ಉದಾಹರಿಸುತ್ತಾನೆ. ವಸಂತಸಮೆಯವನ್ನು ವರ್ಣಿಸುವ ಪದ್ಯವಿದು." ಆನಂದದಿಂದ ಮುಂಬಿಗಳು ಝೇಂಕಾರನಾದವನ್ನು ಮಾಡುತ್ತಿರಲು, ವಿರಹಿಗಳ ಹೃದಯಗಳು ಕಾಮೋದ್ರೇಕದಿಂದ ನಡುಗುತ್ತಿರಲು ಚಂದ್ರನಂತೆ ಪ್ರಕಾಶಮಾನವಾದ ರಮಣಿಯರ ಮುಖಕಮಲಗಳ ಸೌಗಂಧ್ಯದ ಸಂಪರ್ಕದಿಂದ ಗಾಳಿಯಲ್ಲಿ ಸುಗಂಧವು ವ್ಯಾಪಿಸಿರಲು ಇಂತಹ ವಸಂತಕಾಲದ ದಿನಗಳು ಜನರನ್ನು ಸಂತೋಷಗೊಳಿಸುತ್ತವೆ.' ಇಲ್ಲಿ ನಿಸ್ತಂದ್ರ ಎಂಬಲ್ಲಿ ತಂದ್ರಾ ಎಂದರೆ ನಿದ್ರೆ ಎಂಬುದು ವಾಚ್ಯಾರ್ಥ. ಚಂದ್ರನಲ್ಲಿ ನಿದ್ರೆ ಎಂಬುದು ಸಂಭವಿಸದಿರುವುದರಿಂದಲೇ ನಿಸ್ತ್ರಂದ್ರಸ್ಥಿತಿಯೂ ಅವನಲ್ಲಿ ಸಂಭವಿಸದ ಪ್ರಯುಕ್ತ ಮುಖ್ಯಾರ್ಥವು ಬಾಧಿತವಾಗಿ ಜಹತ್ಸ್ವಾರ್ಥಾಲಕ್ಷಣೆಯಿಂದ ನಿಸ್ತ್ರಂದ್ರಪದವು ಪ್ರಕಾಶ ಎಂಬ ಅರ್ಥವನ್ನು ತಿಳಿಸುತ್ತದೆ. ಇಲ್ಲಿ ಪ್ರಕಾಶಾತಿಶಯವು ವ್ಯಂಜನಾವೃತ್ತಿಯಿಂದ ತೋರಿ ಅತ್ಯಂತ ತಿರಸ್ಕೃತವಾಚ್ಯಧ್ವನಿ ಎನಿಸಿದೆ. ಹಾಗೆಂಯೇ ಸೌಹೃದ ಸಗರ್ವ ಇವು ಪ್ರಾಣಿಧರ್ಮಗಳೆನಿಸಿ ವಾಯುವಿನಲ್ಲಿ ಸಂಭವಿಸದೇ ಇರುವುದರಿಂದ ಸ್ವಾರ್ಥವನ್ನು ತೊರೆದು ಸಂಪರ್ಕ ಮತ್ತು ಬಾಹುಳ್ಯ (ಹೆಚ್ಚು ಪ್ರಮಾಣ) ಎಂಬ ಅರ್ಥವನ್ನು ಲಕ್ಷಣೆಯಿಂದ ತಿಳಿಸುತ್ತವೆ. ಹೆಚ್ಚು ಸಂಪರ್ಕ ಮತ್ತು ವೈಶಿಷ್ಟ್ಯ ಎಂಬವೇ ಇಲ್ಲಿ ಪ್ರಯೋಜನಗಳು. ಇವು ವ್ಯಂಜನೆಯಿಂದ ತೋರುತ್ತ ಅತ್ಯಂತತಿರಸ್ಕೃತವಾಚ್ಯಧ್ವನಿ ಎನಿಸಿವೆ. ಇವು ಮೂರು ಲಕ್ಷಣಾಮೂಲಧ್ವನಿಗಳು ಪದಗಳಲ್ಲಿದ್ದು ಇಲ್ಲಿ ಸೇರಿಕೊಂಡಿರುವುದರಿಂದ ಇದು ಸಂಸೃಷ್ಟಿಯ ಉದಾಹರಣವೆನಿಸಿದೆ. ಹಿಂದಿನಂತೆ ಇಲ್ಲಿಯೂ ಸಾಂಕರ್ಯವನು

ಏಕೆ ಹೇಳಬಾರದು ಎಂದರೆ ಇಲ್ಲಿ ಇವಕ್ಕೆ ಅಂಗಾಂಗಿಭಾವವಿಲ್ಲ ; ಒಂದನ್ನು ಒಂದು ಅಪೇಕ್ಷಿಸುತ್ತಲೂ ಇಲ್ಲ ; ಹೀಗೆ ಮಾತು ಬೇರೆಬೇರೆ ಪದಗಳಲ್ಲಿದ್ದು ಒಂದೇ ಆಶ್ರಯ ದಲ್ಲಿಯೂ ಇಲ್ಲ. ಆದ್ದರಿಂದ ಈ ಮೂರಕ್ಕೆ ಸಾಂಕರ್ಯವನ್ನು ಹೇಳದೆ ಸೃಷ್ಟಿ ಯನ್ನೇ ಹೇಳಬೇಕು.

ಧ್ವನಿಯ ಪ್ರಧಾನಭೇದಗಳನ್ನು ತಿಳಿಸಿ ಈಗ ಗುಣೀಭೂತವ್ಯಂಗ್ಯದ ಸ್ವರೂಪ ವನ್ನು ತಿಳಿಸುತ್ತಾನೆ. ವ್ಯಂಗ್ಯಾರ್ಥವು ವಾಚ್ಯಾರ್ಥಕ್ಕಿಂತ ಉತ್ಕೃಷ್ಟವಾಗಿರದೆ ಅದಕ್ಕೆ ಸಮಾನವೆನಿಸಿದ್ದರೆ ಅದು ಧ್ವನಿಗಿಂತ ಬೇರೆಯಾಗಿ ಗುಣೀಭೂತವ್ಯಂಗಕಾವ್ಯವೆನಿಸು ವುದು. ಇಲ್ಲಿ ವ್ಯಂಗ್ಯಾರ್ಥವು ವಾಚ್ಯಾರ್ಥಕ್ಕೆ ಪೋಷಕವಾಗಿರುವುದರಿಂದ ಗೌಣವಾಗಿರು ವುದು. ಇಲ್ಲಿ ಅನುತ್ತಮತ್ವ ಎಂಬಲ್ಲಿ ನ್ಯೂನತೆ ಮತ್ತು ಸಾಮ್ಯ ಎರಡು ಬಗೆಯೂ ಸಂಭವಿಸುತ್ತವೆ.

ಗುಣೀಭೂತವ್ಯಂಗ್ಯದ ಸ್ವರೂಪ ಮತ್ತು ಬಗೆಗಳನ್ನು ತಿಳಿಸುತ್ತಾನೆ. ಇಲ್ಲಿ ವ್ಯಂಗ್ಯಾರ್ಥವು ರಸಭಾವಾದಿಗಳಿಗೆ ಪೋಷಕವಾಗಿರುತ್ತದೆ. ಕೆಲವುವೇಳೆ ಅದು ಸ್ವರದ ವಿಕಾರದಿಂದ ವಾಚ್ಯಾರ್ಥದೊಡನೆಯೇ ತೋರುತ್ತದೆ. ಮುಖ್ಯಾರ್ಥವು ಸಿದ್ಧಿಸಲಿಕ್ಕೆ ಇದು ಕೆಲವು ಕಡೆಗಳಲ್ಲಿ ಸಹಾಯಕವಾಗಿರುತ್ತದೆ. ಮತ್ತು ಕೆಲವು ಕಡೆಗಳಲ್ಲಿ ವಾಚ್ಯಾ ರ್ಥಕ್ಕೂ ವ್ಯಂಗ್ಯಾರ್ಥಕ್ಕೂ ಪ್ರಾಧಾನ್ಯದ ಬಗ್ಗೆ ಸಂಶಯವಿರುವಂತಹದು ಒಂದು ಬಗೆ. ವಾಚ್ಯವ್ಯಂಗ್ಯಗಳೆರಡಕ್ಕೂ ಪ್ರಾಧಾನ್ಯವು ಸಮವಾಗಿರುವುದೊಂದು ಬಗೆ. ಬುದ್ಧಿವಂತರಿಗೂ ಸಹ ಬಹಳ ಸಾಹಸದಿಂದ ತಿಳಿಯುವಂತಹದೊಂದು ಬಗೆ. ಮಂದ ಬುದ್ಧಿಯವರಿಗೂ ಬೇಗನೆ ತಿಳಿದುಬರುವಂತಹದು ಮತ್ತೊಂದು ಬಗೆ. ಚಮತ್ಕಾರವಿಲ್ಲ ದಂತಹುದು ಒಂದು ಬಗೆ. ಹೀಗೆ ಗುಣೀಭೂತವ್ಯಂಗ್ಯದಲ್ಲಿ ಇತರಾಂಗ, ಕಾಕ್ವಾಕ್ಷಿಪ್ತ, ವಾಚ್ಯಸಿದ್ಧ್ಯಂಗ, ಸಂದಿಗ್ಧಪ್ರಾಧಾನ್ಯ, ತುಲ್ಯಪ್ರಾಧಾನ್ಯ, ಅಸ್ಫುಟ, ಅಗೂಢ, ಅಸುಂದರ ಎಂದು ಒಟ್ಟು ಎಂಟು ಬಗೆಗಳಿವೆ.

ರಸಕ್ಕೆ ಪೋಷಕವಾದ ಇತರಾಂಗ ಎಂಬ ಗುಣೀಭೂತವ್ಯಂಗ್ಯದ ಬಗೆಯನ್ನು ಉದಾಹರಿಸುತ್ತಾನೆ. ಮಹಾಭಾರತದಲ್ಲಿ ದ್ರೋಣಪರ್ವದಲ್ಲಿ ಯುದ್ಧಭೂಮಿಯಲ್ಲಿ ಸತ್ತ ಭೂರಿಶ್ರವನ ಹಸ್ತವು ಬಿದ್ದುದನ್ನು ನೋಡಿ ಅವನ ಹೆಂಡತಿ ಹೇಳುವ ಮಾತಿದು. "ಸಂಭೋಗಕ್ಕಾಗಿ ಸೊಂಟದಿಂದ ಡಾಬನ್ನು ಸೆಳೆಯುತ್ತಲೂ, ದಪ್ಪವಾದ ಸ್ತನಗಳನ್ನು ಹಿಸುಕುತ್ತಲೂ, ತೊಡೆ, ಕಟಿಪಶ್ಚಾದ್ಭಾಗ ಇವನ್ನು ಮುಟ್ಟುತ್ತಲೂ, ಸೊಂಟದ ಗಂಟನು ಬಿಚ್ಚುತ್ತಲೂ ಶೋಭಿಸುವ ಹಸ್ತವಿದು" ಇಲ್ಲಿ ಆಲಂಬನವೆನಿಸಿದ ಭೂರಿಶ್ರವನು ಸತ್ತದ್ದರಿಂದ ರತಿ ಮೊದಲಾದ ಭಾವಗಳನ್ನು ಹೆಂಡತಿಯು ಸ್ಮರಿಸುಕೊಳ್ಳುತ್ತಾಳೆ. ಹಿಂದಿನಂತೆ ಶೃಂಗಾರವಿಲ್ಲದಿದ್ದರೂ ಅದರ ಕೊಂಚ ಸಂಪರ್ಕವಿದೆ. ಪ್ರಕೃತ ಸಂದರ್ಭ ಕ್ಕನುಗುಣವಾಗಿ ಶೋಕವು ಇಲ್ಲಿ ಪ್ರಧಾನವಾದ್ದರಿಂದ ಕರುಣರಸವಾದರೋ ಪೂರ್ಣ ವಾಗಿ ತೋರುತ್ತದೆ. ಆದ್ದರಿಂದ ಶೃಂಗಾರವು ಇಲ್ಲಿ ತೋರುತ್ತ ವಿಶೇಷವಾಗಿ ಶೋಕಕ್ಕೆ ಅನ್ವಯಿಸುತ್ತ ಕರುಣರಸವನ್ನು ಪೋಷಿಸುತ್ತದೆ. ಪರಸ್ಪರವಿರುದ್ಧವಾದ ಶೃಂಗಾರ

ಕರುಣಗಳೆರಡು ಒಂದೆಡೆಗೆ ಸೇರಿದ್ದಕ್ಕೆ ಸಮಾಧಾನವನ್ನು ಸಪ್ತಮಪರಿಚ್ಛೇದದಲ್ಲಿ ತಿಳಿಸಲಾಗುವುದು.

ರಸವು ಭಾವಕ್ಕೆ ಪೋಷಕವಾಗಿರುವುದನ್ನು ಉದಾಹರಿಸುತ್ತಾನೆ. 'ಎಲೈ ರಾಜನೆ ಹೆಚ್ಚು ಪ್ರಣಯಕೋಪವುಳ್ಳ ಸ್ತ್ರೀಯರನ್ನು ಸಮಾಧಾನಪಡಿಸಲಿಚ್ಛಿಸುವ ಪ್ರಿಯರು ನಿನ್ನ ಸೈನ್ಯವೆಂಬ ಸಾಗರವು ಶತ್ರುನಗರವನ್ನು ಆಕ್ರಮಿಸುವಾಗ ಉಂಟಾಗುವ ಕೋಲಾಹಲದಿಂದ ಕಿವಿಗಳಿಗೆ ಸಂತಾಪವುಂಟಾಗುವ ಪ್ರಯುಕ್ತ ನಿನ್ನ ಶತ್ರುರಾಜರ ಅರಮನೆಯ ಮೇಲ್ಭಾಗಗಳಲ್ಲಿ ಹೇಗೆ ವಾಸಮಾಡಿಯಾರು ?" ಇಲ್ಲಿ ಪ್ರಥಮಾರ್ಧದಲ್ಲಿ ಔತ್ಸುಕ್ಯವೂ ದ್ವಿತೀಯಾರ್ಧದಲ್ಲಿ ತ್ರಾಸವೂ ವ್ಯಂಗ್ಯವಾಗಿ ತೋರುತ್ತವೆ. ಈ ಔತ್ಸುಕ್ಯ, ತ್ರಾಸ ಇವೆರಡೂ ಸೇರುವುದರಿಂದ ಕರುಣರಸವು ಸಾಕಷ್ಟು ಪುಷ್ಟಿಯನ್ನು ಹೊಂದುವುದು, 'ಹಾ,ಹಾ' ಎಂಬ ಪದಗಳಿಂದ ಕರುಣರಸವು ಅಭಿವ್ಯಕ್ತವಾಗುತ್ತದೆ. ಈ ಕರುಣರಸವು ಇಲ್ಲಿ ರಾಜನ ಬಗ್ಗೆ ಪ್ರಧಾನವಾಗಿ ತೋರುವ ರತಿಭಾವಕ್ಕೆ ಪೋಷಕವಾಗಿದೆ. ಇಲ್ಲಿ ತೋರುವ ಔತ್ಸುಕ್ಯ ಮೊದಲಾದ ವ್ಯಂಗ್ಯಾರ್ಥಗಳಿಗೆ ವಾಕ್ಯಾರ್ಥಕ್ಕಿಂತಲೂ ಚಮತ್ಕಾರವು ಕಡಿಮೆಯಿರುವುದರಿಂದ ಇದು ಗುಣೀಭೂತವ್ಯಂಗ್ಯವೆನಿಸಿದೆ.

ಶಬ್ದಶಕ್ತಿಮೂಲವ್ಯಂಗ್ಯವು ವಾಚ್ಯಾರ್ಥಕ್ಕೆ ಪೋಷಕವಾಗಿರುವುದನ್ನು ಉದಾಹರಿಸುತ್ತಾನೆ. ಹಣಕ್ಕಾಗಿ ಹೊರಡುವವನೊಬ್ಬನು ತನಗೆ ಹಣವು ಸಿಕ್ಕದೇ ಇದ್ದುದರಿಂದ ಧನಿಕರ ಸಮೀಪದಲ್ಲಿ ವ್ಯಥೆಯಿಂದ ಹೀಗೆ ತಿಳಿಸುತ್ತಾನೆ. "ಹಣವನ್ನು ಪಡೆಯುವಾಗ ಬಿಸಿಲ್ಬೊರೆಯ ಭಾವನೆಯಿಂದ ವಿವೇಕವಿಲ್ಲದೆ ಧನಿಕರ ಮನೆಗಳಿಗೆ ಓಡಾಡಿದ್ದಾಯಿತು. ಸುವರ್ಣಮಯವಾದ ಜಿಂಕೆಯ ವೇಷದ ಮಾರೀಚನನ್ನು ಹಿಡಿಯುವ ಆಶೆಯಿಂದ ಮೋಹಗೊಂಡು ರಾಮನು ದಂಡಕಾರಣ್ಯದ ಒಂದು ಭಾಗವೆನಿಸಿದ ಜನಸ್ಥಾನದಲ್ಲಿ ತಿರುಗಿದಂತಾಯಿತು. ಪ್ರತಿಯೊಂದು ಮನೆಯ ಬಾಗಿಲಿನಲ್ಲೂ 'ದೇಹಿ-ಅಯ್ಯೋ ! ಅಪ್ಪಾ ! ಏನನ್ನಾದರೂ ಕೊಡು' ಎಂಬ ದೀನೋಕ್ತಿಯಿಂದ ಅಳುತ್ತ ಕಣ್ಣೀರನ್ನು ಸುರಿಸಿದ್ದಾಯಿತು. ಒಂದೊಂದು ಹೆಜ್ಜೆಗೂ ವೈದೇಹಿ–ಹಾ ಸೀತೆ–ಜನಕರಾಜಪುತ್ರಿ ! ಎಂಬ ಮಾತನ್ನು ನಿರರ್ಥಕವಾಗಿ ಹೇಳಿದ್ದಾಯಿತು. ಅದಕ್ಕೆ ಹಿಂದೆಯೇ ರಾವಣನು ಸೀತೆಯನ್ನು ಅಪಹರಿಸಿದ್ದರಿಂದ ಆಕೆಯ ಪ್ರತ್ಯುತ್ತರವೇ ಸಿಕ್ಕಲಿಲ್ಲ. ಧನಿಕರು ಏರ್ಪಡಿಸಿಕೊಂಡ ಅಲಂಕಾರಗಳಲ್ಲಿ ಯಾವ ಬಗೆಯ ಪ್ರಶಂಸೆಯನ್ನು ಹೆಚ್ಚಾಗಿ ಮಾಡಲಿಲ್ಲ ? ನೀನೇ ಹೇಳು. ಅಂದರೆ ಎಲ್ಲವನ್ನೂ ಮಾಡಿದ್ದಾಯಿತು ಎಂದು ಅರ್ಥ. ಅವರ ವರ್ತನೆ ವೇಷಭೂಷಗಳನ್ನೆಲ್ಲಾ ಸಾಕಷ್ಟು ವರ್ಣಿಸಿಯಾಯಿತು. ಆದರೂ ಯಾರಿಂದಲೂ ಹಣವು ಬರಲಿಲ್ಲ. ನನ್ನ ಬಡತನವನ್ನು ತೊಲಗಿಸುವಷ್ಟು ಅಮಂಗಳಕರವಾದ ಹಣವು ಮಾತ್ರ ಬರಲಿಲ್ಲ. ಲಂಕೇಶ್ವರನಾದ ರಾವಣನ ತಲೆಗಳಲ್ಲಿ ಬಾಣಪ್ರಯೋಗವನ್ನು ಸಾಕಷ್ಟು ಮಾಡಿಯಾಯಿತು, ಆದ್ದರಿಂದಲೇ ನನಗೆ ದಶರಥನ ಮಗನಾದ ರಾಮನೆಂಬ ಹೆಸರೇನು ಬಂದಿತು. ಆದರೆ ಕುಶ, ಲವ ಇವರನ್ನು ಹಡೆದ ಸೀತೆಯನ್ನು ಮಾತ್ರ ನಾನು ಇನ್ನೂ ಪಡೆಯಲಿಲ್ಲ. ಇಲ್ಲಿ ನಾನು ರಾಮನೆನಿಸಿಕೊಂಡೆನು ಎಂಬುದನ್ನು

ಹೇಳದೇ ಇದ್ದಿದ್ದರೂ ಶಬ್ದಶಕ್ತಿಯಿಂದಲೇ ಇಲ್ಲಿ ಹೇಳಿರುವ ಕೆಲವು ಅಂಶಗಳಿಂದ ರಾಮನ ಸಾದೃಶ್ಯವು ಹೇಳುವವನಲ್ಲಿ ಅನ್ವಯಿಸುವುದೆಂದು ಸ್ಪಷ್ಟವಾಗಿ ಕಂಡುಬರುತ್ತದೆ. 'ಮಯಾಪ್ತಂ ರಾಮತ್ವಂ' ಎಂದು ಹೇಳಿದ ಮಾತಿನಿಂದ ತನ್ನಲ್ಲಿ ರಾಮನ ಸಾದೃಶ್ಯವನ್ನು ಆಧಾರವಾಗಿಟ್ಟುಕೊಂಡು ತನ್ನಲ್ಲಿ ರಾಮನ ತಾದ್ರೂಪ್ಯವು ತೋರುತ್ತದೆ. ಇಲ್ಲಿ ಅಭೇದವೇ ವಾಚ್ಯವೆನಿಸಿದೆ. ಸಾದೃಶ್ಯವು ವ್ಯಂಗ್ಯವೆನಿಸಿದೆ. ಇದು ವ್ಯಂಗ್ಯವಾದ್ದರಿಂದ ಗೋಪ್ಯವಾಗಿರಬೇಕಾಗಿತ್ತು ಆದರೆ ಇಲ್ಲಿ ವಾಚ್ಯದಂತೆ ಕಾಣುತ್ತಿದೆ. ವಾಚ್ಯಾರ್ಥಕ್ಕೆ ವ್ಯಂಗ್ಯಾರ್ಥವು ಉಪಪಾದಕವಾಗಿದೆ. ಹೀಗೆ ಗುಣೀಭೂತವ್ಯಂಗ್ಯದ ಮೊದಲನೆಯಬಗೆಯಾದ ಇತರಾಂಗವನ್ನು ತಿಳಿಸಿ ಸ್ವರವಿಕಾರದಿಂದ ವ್ಯಂಗ್ಯವು ವಾಚ್ಯದೊಡನೆಯೇ ತೋರುವ ಎರಡನೆಯ ಬಗೆಯನ್ನು ವಿವರಿಸುತ್ತಾನೆ. "ಕೌರವರೆಲ್ಲರನ್ನೂ ಯುದ್ಧದಲ್ಲಿ ಕೋಪದಿಂದ ನಾಶಮಾಡುವುದಿಲ್ಲವೆ? ದುಶ್ಶಾಸನನ ವಕ್ಷಸ್ಥಳದಿಂದ ರಕ್ತವನ್ನು ಹೀರುವುದಿಲ್ಲವೆ? ದುರ್ಯೋಧನನ ತೊಡೆಗಳನ್ನು ಗದೆಯಿಂದ ಮುರಿಯುವುದಿಲ್ಲವೆ? ನಿಮ್ಮ ರಾಜನಾದ ಯುಧಿಷ್ಠಿರನು (ಪ್ರತಿಜ್ಞೆಯನ್ನು ಮೀರುತ್ತಿರುವುದರಿಂದ ಅವನು ನನಗೆ ರಾಜನಲ್ಲ) ಇಂದ್ರಪ್ರಸ್ಥ ಮೊದಲಾದ ಬರಿಯ ಐದುಗ್ರಾಮಗಳನ್ನು ಪಡೆಯಲಿಕ್ಕಾಗಿ ದುರ್ಯೋಧನನೊಡನೆ ಸಂಧಿಯನ್ನು ಮಾಡಿಕೊಳ್ಳಲಿ?" ಇಲ್ಲಿ ಕೌರವರನ್ನು ನಾಶ ಮಾಡುವೆನು. ರಕ್ತವನ್ನು ಕೂಡಿದೇ ಕುಡಿಯುವೆನು. ತೊಡೆಗಳನ್ನು ಮುರಿದೇ ಮುರಿಯುವೆನು? ಎಂಬ ವ್ಯಂಗ್ಯಾರ್ಥವು "ನಾಶಮಾಡುವುದಿಲ್ಲ, ಕುಡಿಯುವುದಿಲ್ಲ, ಪುಡಿಮಾಡುವುದಿಲ್ಲ' ಎಂಬ ನಿಷೇಧರೂಪವಾದ ವಾಚ್ಯಾರ್ಥದೊಡನೆಯೇ ತೋರುತ್ತದೆ. ವಾಚ್ಯದೊಡನೆ ತೋರುವುದಕ್ಕಿಂತ ಕೊಂಚ ಬೇರೆಯಾಗಿ ವ್ಯಂಗ್ಯವು ತೋರುವುದರಿಂದ ಮಾಧುರ್ಯವು ಹೆಚ್ಚುತ್ತಿತ್ತು.

ವಾಚ್ಯಸಿದ್ಧ್ಯಂಗವೆನಿಸಿದ ಮೂರನೆಯ ಬಗೆಯನ್ನು ಈಗ ಉದಾಹರಿಸುತ್ತಾನೆ. "ಎಲೈ ಮಹರಾಜನೇ, ಶತ್ರುವಂಶವೆಂಬ ಬಿದುರಿನಲ್ಲಿರುವ ಕಾಡುಗಿಚ್ಚೆನಿಸಿದ ಈ ನಿನ್ನ ಪ್ರತಾಪವು ಸ್ವರ್ಗಮರ್ತ್ಯಗಳೆರಡರ ಮಧ್ಯಪ್ರದೇಶವನ್ನು ಪ್ರಕಾಶಿಸುತ್ತ ಎಲ್ಲೆಡೆಯಲ್ಲೂ ಶೋಭಿಸುತ್ತಲಿದೆ." ಶತ್ರುವಂಶದಲ್ಲಿ ಬಿದಿರುಮೆಳೆಯ ಅಭೇದವನ್ನು ಆರೋಪಿಸುವುದೇ ವ್ಯಂಗ್ಯಾರ್ಥ. ಆದರೆ ಇಲ್ಲಿ ರಾಜನ ಪ್ರತಾಪವೇ ಕಾಡುಗಿಚ್ಚೆಂಬ ಆರೋಪವೇ ಇಲ್ಲಿ ವಾಚ್ಯಾರ್ಥವೆನಿಸಿದೆ. ಪ್ರತಾಪವನ್ನು ಬೆಂಕಿ ಎಂದು ಹೇಳಬೇಕಾದರೆ ಶತ್ರುವಂಶವೆಂಬ ಬಿದುರಿಗೆ ಅದು ಕಾಡುಗಿಚ್ಚೆನಿಸಿದ್ದು ಪೋಷಕವಾಗಿದೆ. ಎಲ್ಲಿ ಪ್ರಧಾನವಾದದ್ದು ವಾಚ್ಯವೋ ವ್ಯಂಗ್ಯವೋ ಎಂಬ ಸಂಶಯವಿದಿಯೋ ಅದು ನಾಲ್ಕನೆಯ ಗುಣೀಭೂತವ್ಯಂಗ್ಯವೆನಿಸಿದೆ. ಅದನ್ನು ಈಗ ಉದಾಹರಿಸುತ್ತಾನೆ. "ಹರಸ್ತು ಕಿಂಚಿತ್ಪರಿವೃತ್ತಧೈರ್ಯಃ" ಎಂಬ ಪದ್ಯದಲ್ಲಿ ಶಿವನು ಪಾರ್ವತಿಯ ಮುಖದಲ್ಲಿ ದೃಷ್ಟಿಯನ್ನಿಟ್ಟನು ಎಂಬುದು ವಾಚ್ಯಾರ್ಥ. ಮುಖಪದ್ಮದಲ್ಲಿಯೇ ದೃಷ್ಟಿಯನ್ನಿಟ್ಟದ್ದರಿಂದ ಅವನಿಗೆ ಅದನ್ನು ಚುಂಬಿಸುವ ಅಭಿಲಾಷೆಯಿತ್ತೆಂಬುದು ವ್ಯಂಗ್ಯಾರ್ಥ. ಇಲ್ಲಿ ಉಮೆಯ ಮುಖದಲ್ಲಿ ಶಿವನು ದೃಷ್ಟಿಯನ್ನಿಟ್ಟದ್ದು ಶೃಂಗಾರವನ್ನು ಪ್ರಕಾಶಪಡಿಸುವುದರಿಂದ ಹೀಗೆ ದೃಷ್ಟಿಯನ್ನಿಟ್ಟದ್ದು

ಪ್ರಧಾನವೇ ಅಥವಾ ಇಲ್ಲಿ ಚುಂಬನವು ವ್ಯಂಗ್ಯವೆನಿಸಿ ಆಸ್ವಾದ್ಯವಾದ್ದರಿಂದ ಅಪರ ಬಗ್ಗೆ ಶಿವನಿಗೆ ಇದ್ದ ಅಭಿಲಾಷವು ಪ್ರಧಾನವೋ ಎಂಬ ಬಗ್ಗೆ ಇಲ್ಲಿ ಸಂದೇಹವಿದೆ. ಈ ಬಗ್ಗೆ ಸಂದೇಹವಿರುವ ಪ್ರಯುಕ್ತ ಇಲ್ಲಿ ವ್ಯಂಗ್ಯಾರ್ಥವು ಚಮತ್ಕಾರಿಯಲ್ಲದ್ದರಿಂದ ಇದು ಗುಣೀಭೂತವ್ಯಂಗ್ಯವೆನಿಸಿದೆ.

ವ್ಯಂಗ್ಯಾರ್ಥಕ್ಕೆ ವಾಚ್ಯಾರ್ಥದೊಡನೆ ಪ್ರಾಧಾನ್ಯವು ಸಮವಾಗಿರುವುದನ್ನು ಇಲ್ಲಿ ಉದಾಹರಿಸುತ್ತಾನೆ. ಮಹಾವೀರಚರಿತನಾಟಕದ ದ್ವಿತೀಯಾಂಕದಲ್ಲಿ ರಾವಣನಿಗೆ ಪತ್ರದ ಮೂಲಕ ಪರಶುರಾಮನು ಹೇಳಿಕಳುಹಿಸುವ ಮಾತಿದು. "ಬ್ರಾಹ್ಮಣರಿಗೆ ತೊಂದರೆಯನ್ನು ಕೊಡದಿರುವುದು ನಿಮ್ಮಂತಹ ರಾಕ್ಷಸರಿಗೆ ಮಾತ್ರವೇ ಮಂಗಳವನ್ನುಂಟುಮಾಡುವುದು. ಹಾಗೆ ಬ್ರಾಹ್ಮಣರಿಗೆ ತೊಂದರೆಯನ್ನು ಕೊಟ್ಟರೆ ನಿಮ್ಮಹಾಗೆಯೇ ಶಿವನನ್ನು ಉಪಾಸನಮಾಡಿದ್ದರಿಂದ ನಿಮ್ಮ ಸ್ನೇಹಿತನಾದ ಪರಶುರಾಮನು ಅಸಂತುಷ್ಟನಾಗುವನು." ಇಲ್ಲಿ 'ಮರ್ಮನಾಯತೆ' ಎಂಬ ಪದದಿಂದ ತೋರುವ ವ್ಯಂಗ್ಯಾರ್ಥವೂ ಮಿತ್ರ ಎಂಬ ಪದದಿಂದ ತಿಳಿದುಬರುವ ಹಿತಕಾರಿತ್ವ ಎಂಬ ವಾಚ್ಯಾರ್ಥವೂ ಸಮಾನವಾಗಿ ಚಮತ್ಕಾರವನ್ನು ಹುಟ್ಟಿಸುತ್ತಿರುವುದರಿಂದ ಪ್ರಧಾನವೆನಿಸಿವೆ. ಇಲ್ಲಿ ವಾಚ್ಯಾರ್ಥಕ್ಕಿಂತಲೂ ವ್ಯಂಗ್ಯಾರ್ಥವು ಉತ್ತಮವಲ್ಲದ ಪ್ರಯುಕ್ತ ಇದು ಗುಣೀಭೂತವೆನಿಸಿದೆ.

ವ್ಯಂಗ್ಯಾರ್ಥವು ಹೆಚ್ಚು ಬುದ್ಧಿಶಾಲಿಗಳಿಗೂ ಸಹ ಬಹಳ ಕ್ಲೇಶದಿಂದ ತಿಳಿದುಬರುವುದೇ ಅಸ್ಫುಟವೆನಿಸಿದ ಗುಣೀಭೂತವ್ಯಂಗ್ಯದ ಒಂದು ಬಗೆ. ಅದನ್ನು ವಿವರಿಸುತ್ತಾನೆ. "ಅಲ್ಲಾವುದ್ದೀನಚಕ್ರವರ್ತಿಯೊಡನೆ ತನಗೆ ವಿರೋಧವನ್ನು ಭಾವಿಸಿ ಒಬ್ಬ ದುರ್ಬಲರಾಜನು ಹೇಳುವ ಮಾತಿದು. "ಅಲ್ಲಾವುದ್ದೀನನೊಡನೆ ಸಂಧಿಯನ್ನು ಮಾಡಿಕೊಂಡರೆ ಅವನು ಶತ್ರುವಿನ ಐಶ್ವರ್ಯವೆಲ್ಲವನ್ನು ತೆಗೆದುಕೊಳ್ಳುವನು. ಯುದ್ಧವನ್ನು ಮಾಡುವುದಾದರೆ ಶತ್ರುವಿನ ಪ್ರಾಣವೇ ನಾಶವಾಗುತ್ತದೆ. ಆದ್ದರಿಂದ ಅವನೊಡನೆ ಸಂಧಿವಿಗ್ರಹಗಳೆರಡೂ ಯುಕ್ತವಲ್ಲ." ಇಲ್ಲಿ ಅಲ್ಲಾವುದ್ದೀನ ರಾಜನೊಡನೆ ದಾನಸಾಮ ಎಂಬ ಉಪಾಯಗಳನ್ನು ಬಿಟ್ಟರೆ ಬೇರೆ ಯಾವ ಶಾಂತಿಯಮಾರ್ಗವೂ ಹೊಂದುವುದಿಲ್ಲವೆಂಬ ವ್ಯಂಗ್ಯಾರ್ಥವು ಇಲ್ಲಿ ವ್ಯುತ್ಪನ್ನರಾದವರಿಗೂ ಸಹ ಬೇಗನೆ ತೋರುವುದಿಲ್ಲವಾದ್ದರಿಂದ ಇದು ಅಸ್ಫುಟವ್ಯಂಗ್ಯವೆನಿಸಿದೆ. ಆದ್ದರಿಂದಲೇ ಇಲ್ಲಿ ವ್ಯಂಗ್ಯಾರ್ಥವು ವಾಚ್ಯಾರ್ಥಕ್ಕಿಂತಲೂ ಉತ್ಕೃಷ್ಟವೆನಿಸಿಲ್ಲದ ಪ್ರಯುಕ್ತ ಇದು ಗುಣೀಭೂತವ್ಯಂಗ್ಯದ ಒಂದು ಬಗೆ ಎನಿಸಿದೆ.

ಅನೇನ ಲೋಕಗುರುಣಾ ಸತಾಂ ಧರ್ಮೋಪದೇಶಿನಾ ।
ಅಹಂ ವ್ರತವತೀ ಸ್ವೈರಮುಕ್ತೇನ ಕಿಮತಃ ಪರಮ್ ॥

ಅತ್ರ ಪ್ರತೀಯಮಾನೋಽಪಿ ಶಾಕ್ಯಮುನೇಸ್ತಿರ್ಯಗ್ಯೋಷಿತಿ ಬಲಾತ್ಕಾರೋಪಭೋಗಃ ಸ್ಫುಟತಯಾ ವಾಚ್ಯಾಯಮಾನ ಇತ್ಯಗೂಢಮ್.

ವಾಣೀರಕುಂಜೋಡ್ಡೀನಶಕುನಿಕೋಲಾಹಲಂ ಶೃಣ್ವತ್ಯಾಃ ।
ಗೃಹಕರ್ಮವ್ಯಾಪೃತಾಯಾಃ ವಧ್ವಾಃ ಸೀದಂತ್ಯಂಗಾನಿ ॥

ಅತ್ರ ದತ್ತಸಂಕೇತಃ ಕಶ್ಚಿತ್ ಲತಾಗೃಹಂ ಪ್ರವಿಷ್ಟ ಇತಿ ವ್ಯಂಗ್ಯಾತ್ ಸೀದಂ ತ್ಯಂಗಾನಿ,ಇತಿ ವಾಚ್ಯಸ್ಯ ಚಮತ್ಕಾರಃ ಸಹೃದಯಸಂವೇದ್ಯ ಇತ್ಯಸುಂದರಮ್. ಕಿಂಚ ಯೋ ದೀಪಕತುಲ್ಯಯೋಗಿತಾದಿಷು ಉಪಮಾಲಂಕಾರೋ ವ್ಯಂಗ್ಯಃ ಸ ಗುಣೀಭೂತ ವ್ಯಂಗ್ಯ ಏವ; ಕಾವ್ಯಸ್ಯ ದೀಪಕಾದಿಮುಖೇನೈವ ಚಮತ್ಕಾರವಿಧಾಯಿತ್ವಾತ್.ತದುಕ್ತಂ ಧ್ವನಿಕೃತಾ— ಅಲಂಕಾರಾಂತರಸ್ಯಾಪಿ ಪ್ರತೀತೌ ಯತ್ರ ಭಾಸತೇ ।

ತತ್ಪರತ್ವಂ ನ ಕಾವ್ಯಸ್ಯ ನಾಸೌ ಮಾರ್ಗೋ ಧ್ವನೇರ್ಮತಃ ॥

ಯತ್ರ ಚ ಶಬ್ದಾಂತರಾದಿನಾ ಗೋಪನಕೃತಚಾರುತ್ವಸ್ಯ ವಿಪರ್ಯಾಸಃ—

ಯಥಾ—ದೃಷ್ಟ್ಯಾ ಕೇಶವ ! ಗೋಪರಾಗಹೃತಯಾ ಕಿಂಚಿನ್ನ ದೃಷ್ಟಂ ಮಯಾ
ತೇನಾತ್ರ ಸ್ಖಲಿತಾಸ್ಮಿ ನಾಥ ! ಪತಿತಂ ಕಿಂ ನಾಮ ನಾಲಂಬಸೇ ।
ಏಕಸ್ತ್ವಂ ವಿಷಮೇಷುಖಿನ್ನಮನಸಾಂ ಸರ್ವಾಬಲಾನಾಂ ಗತಿಃ
ಗೋಪ್ಯೈವಂ ಗದಿತಃ ಸಲೇಶಮವತಾದ್ಗೋಷ್ಠೇ ಹರಿರ್ವಶ್ಚಿರಮ್ ॥

ಅತ್ರ ಗೋಪರಾಗಾದಿಶಬ್ದಾನಾಂ ಗೋಪೇ ರಾಗಃ ಇತ್ಯಾದಿವ್ಯಂಗ್ಯಾರ್ಥಾನಾಂ 'ಸಲೇಶಮ್' ಇತಿ ಪದೇನ ಸ್ಫುಟತಯಾವಭಾಸಃ. 'ಸಲೇಶಮ್' ಇತಿ ಪದಸ್ಯ ಪರಿತ್ಯಾಗಃ ಧ್ವನಿರೇವ. ಕಿಂಚ ಯತ್ರ ವಸ್ತ್ವಲಂಕಾರರಸಾದಿರೂಪವ್ಯಂಗ್ಯಾನಾಂ ರಸಾಭ್ಯಂತರೇ ಗುಣೀಭಾವಃ, ತತ್ರ ಪ್ರಧಾನಕೃತ ಏವ ಕಾವ್ಯವ್ಯವಹಾರಃ. ತದುಕ್ತಂ ತೇನೈವ. ಪ್ರಕಾರೋಽಯಂ ಗುಣೀಭೂತವ್ಯಂಗ್ಯೋಽಪಿ ಧ್ವನಿರೂಪತಾಮ್ ।

ಧತ್ತೇ ರಸಾದಿತಾತ್ಪರ್ಯಪರ್ಯಾಲೋಚನಯಾ ಪುನಃ॥ಯತ್ರ ತು—

ಯತ್ರೋನ್ಮದಾನಾಂ ಪ್ರಮದಾಜನಾನಾಮಭ್ರಂಲಿಹಃ ಶೋಣಮಣೀಮಯೂಖಃ ।
ಸಂಧ್ಯಾಭ್ರಮಂ ಪ್ರಾಪ್ನುವತಾಮಖಂಡೇಽಪ್ಯನಂಗನೇಪಥ್ಯವಿಧಿಂತ್ತೆ ವಿಧತ್ತೇ ॥

ಇತ್ಯಾದೌ ರಸಾದೀನಾಂ ನಗರೀವೃತ್ತಾದಿವಸ್ತುಮಾತ್ರೇ ಅಂಗತ್ವಮ್, ತತ್ರ ತೇಷಾಮತಾತ್ಪರ್ಯವಿಷಯತ್ವೇಽಪಿ ತೈರೇವ ಗುಣೀಭೂತೈಃ ಕಾವ್ಯವ್ಯವಹಾರಃ.ತದುಕ್ತಮಸ್ಮತ್ಸಗೋತ್ರಕವಿಪಂಡಿತಮುಖ್ಯಶ್ರೀಚಂಡೀದಾಸಪಾದೈಃ—

ಕಾವ್ಯಾರ್ಥಸ್ಯ ಅಖಂಡಬುದ್ಧಿವೇದ್ಯಸ್ಯ ತನ್ಮಯೀಭಾವೇನ ಅಸ್ವಾದದಶಾಯಾಂ ಗುಣಪ್ರಧಾನಭಾವಾವಭಾಸಸ್ತಾವನ್ನಾನುಭೂಯತೇ, ಕಲಾಂತರೇ ತು ಪ್ರಕರಣಾದಿ ಪರ್ಯಾಲೋಚನಯಾ ಭವನ್ನಪ್ಯಸೌ ನ ಕಾವ್ಯಸ್ಯ ಪದೇಶಂ ವ್ಯಾಹಂತುಮೀಶಸ್ತಸ್ಯಾ ಸ್ವಾದಮಾತ್ರಾಯತ್ತತ್ವಾತ್.

ಕೇಚಿಚ್ಚಿತ್ರಾಖ್ಯಂ ತೃತೀಯಂ ಕಾವ್ಯಭೇದಮಿಚ್ಛಂತಿ. ತದಾಹುಃ

"ಶಬ್ದಚಿತ್ರಂ ವಾಚ್ಯಚಿತ್ರಮವ್ಯಂಗ್ಯಂ ತ್ವವರಂ ಸ್ಮೃತಮ್" ಇತಿ, ತನ್ನ ಯದಿ ಚ ಅವ್ಯಂಗ್ಯತ್ವೇನ ವ್ಯಂಗ್ಯಾಭಾವಸ್ತದಾ ತಸ್ಯ ಕಾವ್ಯತ್ವಮಪಿ ನಾಸ್ತೀತಿ ಪ್ರಾಗೇವೋಕ್ತಮ್. ಈಷದ್ವ್ಯಂಗ್ಯತ್ವಮಿತಿ ಚೇತ್ ಕಿಂ ನಾಮ ಈಷ ದ್ವ್ಯಂಗ್ಯತ್ವಮ್, ಆಸ್ವಾದ್ಯವ್ಯಂಗ್ಯತ್ವಮ್,ಅನಾಸ್ವಾದ್ಯವ್ಯಂಗ್ಯತ್ವಂ ವಾ? ಆದ್ಯೇ ಪ್ರಾಚೀನಭೇದಯೋರೇವ ಅಂತಃ ಪಾತಃ, ದ್ವಿತೀಯೇ ತ್ವಕಾವ್ಯತ್ವಮ್. ಯದಿ ಚ

ಆಸ್ವಾದ್ಯತ್ವಂ ತದಾ ಅಕ್ಷುದ್ರತ್ವಮೇವ, ಕ್ಷುದ್ರತಾಯಾಂ ಅನಾಸ್ವಾದ್ಯದ್ವಾತ್.
ತದುಕ್ತಂ ಧ್ವನಿತ್ವತಾ—

ಪ್ರಧಾನಗುಣಭಾವಾಭ್ಯಾಂ ವ್ಯಂಗ್ಯಸ್ಯೈವಂ ವ್ಯವಸ್ಥಿತೇ ।
ಉಭೇ ಕಾವ್ಯೇ ತತೋಽನ್ಯ ತಚ್ಚಿತ್ರಮಭಿಧೀಯತೇ ॥

ಆಸ್ಫುಟವೆನಿಸಿದ ಗುಣೀಭೂತವ್ಯಂಗ್ಯದ ಆರನೆಯ ಬಗೆಯನ್ನು ಉದಾಹರಿಸುತ್ತಾನೆ. ಬುದ್ಧನು ನೀಜಜಾತಿಯ ಹೆಂಗಸಿನೊಡನೆ ಬಲಾತ್ಕಾರದಿಂದ ಭೋಗಿಸಿದ್ದನ್ನು ಸಹಿಸಲಿಕ್ಕಾಗದೆ ಅವನ ಹೆಂಡತಿಯು ಆ ಸಮಾಚಾರವನ್ನು ತಿಳಿಯಲಿಚ್ಛಿಸಿದ ಸಖಿಗೆ ಹೇಳುವ ಮಾತಿದು. "ಸತ್ಪುರುಷರಿಗೆ ಧರ್ಮವನ್ನು ಉಪದೇಶಿಸುತ್ತಲೂ ಲೋಕಕ್ಕೆ ಗುರುವೆನಿಸಿಯೂ ಇರುವ ಪತಿಯೊಡನೆ ನಾನು ಪತಿವ್ರತೆಯ ನಿಯಮವನ್ನಾಚರಿಸುತ್ತಿರುವೆನು. ಇದರಮೇಲೆ ಪತಿಯ ಚಾರಿತ್ರ್ಯವನ್ನು ಸಂಪೂರ್ಣವಾಗಿ ಹೇಳಿದ್ದರಿಂದ ಆಗುವ ಪ್ರಯೋಜನವೇನು? ಪತಿವ್ರತೆ ಪತಿಯ ದೋಷವನ್ನು ಹೇಳಬಾರದಾದ್ದರಿಂದ ಇದರಮೇಲೆ ಬೇರೆ ಏನೂ ಹೇಳಬೇಕಾಗಿಲ್ಲ." ಇಲ್ಲಿ ಶಾಕ್ಯಮುನಿಯು ತಿರ್ಯಗ್ಜಾತಿಯ ಸ್ತ್ರೀಯಲ್ಲಿ ಬಲಾತ್ಕಾರದಿಂದ ಭೋಗಿಸಿದನೆಂಬುದೇ ವ್ಯಂಗ್ಯವಾಗಿ ತೋರುವ ಅರ್ಥ. ಇದು ಇಲ್ಲಿ ವಾಚ್ಯದಂತೆ ಶೀಘ್ರವಾಗಿ ತಿಳಿದುಬರುತ್ತದೆ. ವ್ಯಂಗ್ಯಾರ್ಥವು ಸ್ಪಷ್ಟವಾಗಿ ತೋರಿದರೆ ವಾಚ್ಯಾರ್ಥಕ್ಕೆ ಸಮವೆನಿಸಿ ಅದರ ವೈಶಿಷ್ಟ್ಯವು ಕುಂದುವುದು. ಮಂದಮತಿಗಳಿಗೂ ಸಹ ಬೇಗನೆ ತಿಳಿಯುವಷ್ಟು ಸ್ಪಷ್ಟವಾಗಿರುವ ವ್ಯಂಗ್ಯಾರ್ಥವು ವಾಚ್ಯಾರ್ಥಕ್ಕೆ ಸಮವೆನಿಸುವ ಪ್ರಯುಕ್ತ ಇದು ಅಗೂಢವೆಂಬ ಗುಣೀಭೂತವ್ಯಂಗ್ಯದ ಒಂದು ಬಗೆ ಎನಿಸಿದೆ. ಈಗ ವ್ಯಂಗ್ಯಾರ್ಥವು ಚಮತ್ಕಾರಿ ಎನಿಸದೆಇರುವ ಅಸುಂದರವೆಂಬ ಏಳನೆಯ ಬಗೆಯನ್ನು ತಿಳಿಸುತ್ತಾನೆ. ಉಪನಾಯಕನಿಗೆ ಸಂಕೇತವನ್ನು ಏರ್ಪಡಿಸಿದ ಅತ್ತಿಗೆಗೆ ನಾದಿನಿಯು ಹಾಸ್ಯಮಾಡುವ ಮಾತಿದಲ್ಲಿ ಇದು ಕಂಡುಬರುತ್ತದೆ. 'ಉಪನಾಯಕನ ಸಂಪರ್ಕದಿಂದ ವೇತಸಲತಾಗೃಹದಿಂದ ಹಠಾತ್ತಾಗಿ ಮೇಲಕ್ಕೆ ಹಾರಿದ ಪಕ್ಷಿಗಳ ಕೋಲಾಹಲವನ್ನು ಕೇಳುತ್ತ ಮನೆಯ ಕೆಲಸಗಳಲ್ಲಿ ತೊಡಗಿರುವ ಅತ್ತಿಗೆಯ ಅವಯವಗಳು ಆಯಾಯ ಕೆಲಸಗಳನ್ನು ಆನಂದದಿಂದ ನಡೆಸಲು ಸಮರ್ಥವೆನಿಸುತ್ತವೆ.' ಇಲ್ಲಿ "ಹಿಂದೆ ಮಾಡಿದ್ದ ಸಂಕೇತದಂತೆ ಒಬ್ಬನು ಲತಾಗೃಹಕ್ಕೆ ಪ್ರವೇಶಿಸಿದನು.'' ಎಂಬುದೇ ವ್ಯಂಗ್ಯವಾಗಿ ತೋರುವ ಅರ್ಥ. ಇದರಿಂದ 'ಸೀದಂತ್ಸಂಗಾನಿ' ಎಂಬಲ್ಲಿ ಹೇಳಿರುವ ವಾಚ್ಯಾರ್ಥಕ್ಕೆ ಚಮತ್ಕಾರವುಂಟಾಗುವುದೆಂದು ಸಹೃದಯರಿಗೆ ಸ್ಪಷ್ಟವಾಗಿ ತಿಳಿದುಬರುತ್ತದೆ. ವ್ಯಂಗ್ಯಾರ್ಥವು ಸುಂದರವಾದ ಬೇರೊಂದು ಅರ್ಥವನ್ನು ಪ್ರಕಾಶಪಡಿಸುವುದಾದರೆ ಅದೇ ಅಸುಂದರವೆನಿಸುವುದು. ತಾನು ಸುಂದರವಾಗಿರುವ ಬದಲು ವಾಚ್ಯಾರ್ಥವನ್ನು ಸುಂದರಗೊಳಿಸುವುದರಿಂದ ಈ ಬಗೆಯ ವ್ಯಂಗ್ಯವು ಗುಣೀಭೂತವ್ಯಂಗ್ಯದ ಎಂಟನೆಯ ಬಗೆಯೆನಿಸುತ್ತದೆ. ಇದೂ ಅಲ್ಲಿಗೆ, ದೀಪಕ ತುಲ್ಯಯೋಗಿತೆ ಮೊದಲಾದ ಅಲಂಕಾರಗಳಲ್ಲಿ ಉಪಮಾಲಂಕಾರವು ವ್ಯಂಗ್ಯವಾಗಿ ತೋರುವುದರಿಂದ ಅದೂ ಸಹ ಗುಣೀಭೂತವ್ಯಂಗ್ಯವೇ ಆಗುವುದು. ಕಾವ್ಯದಲ್ಲಿ ಯಾವುದು

ಪ್ರಧಾನವಾಗಿರುವುದೋ ಅದೇ ಚಮತ್ಕಾರವನ್ನು ಹುಟ್ಟಿಸುತ್ತದೆ. ದೀಪಕಾದ್ಯಲಂಕಾರಗಳು ಎಲ್ಲಿ ಚಮತ್ಕಾರಿಯಾಗಿರುತ್ತವೆಯೋ ಅಲ್ಲಿ ಗುಣೀಭೂತವ್ಯಂಗ್ಯವು ಅಪ್ರಧಾನವಾದ್ದರಿಂದ ಅಸುಂದರವೆನಿಸುತ್ತದೆ. ಇದನ್ನು ಧ್ವನಿಕಾರರು ಸ್ಪಷ್ಟವಾಗಿ ತಿಳಿಸಿರುವರು. "ಕಾವ್ಯದಲ್ಲಿ ಬೇರೊಂದು ಅಲಂಕಾರವು ವ್ಯಂಗ್ಯವಾಗಿ ತೋರಿದರೂ ಕಾವ್ಯಕ್ಕೆ ಆತ್ಮವೆನಿಸಲರ್ಹವಾಗಿಲ್ಲದಿದ್ದರೆ ಅದು ಸಹೃದಯರಿಗೆ ಅನುಭವಗೋಚರವಾಗುವುದಿಲ್ಲ. ಅದು ಗುಣೀಭೂತವ್ಯಂಗ್ಯದ ಒಂದು ಬಗೆಯಾಗುವುದೇ ಹೊರತು ಧ್ವನಿಗೆ ವಿಷಯವಾಗುವುದಿಲ್ಲ." ಅವರ ಅಭಿಪ್ರಾಯವು ಹೀಗಿದೆ.

ಅಸುಂದರವೆಂಬ ಗುಣೀಭೂತವ್ಯಂಗ್ಯವು ತೋರುವ ಬೇರೊಂದು ಬಗೆಯನ್ನು ತಿಳಿಸುತ್ತಾನೆ. ಹಠಾತ್ತಾಗಿ ಪ್ರವೇಶಿಸುವ ಯಾವುದಾದರೊಂದು ಶಬ್ದವು ವ್ಯಂಗ್ಯಾರ್ಥವನ್ನು ಮುಚ್ಚಿದರೆ ಅದರ ಸೌಂದರ್ಯಕ್ಕೆ ಭಂಗ ಬರುವುದು. ಅಂತಹ ಕಡೆಗಳಲ್ಲಿ ಗುಣೀಭೂತವ್ಯಂಗ್ಯವನ್ನೇ ಹೇಳಬೇಕು. "ಕೃಷ್ಣ ಪರಮಾತ್ಮನೇ, ಗೋವುಗಳ ಪಾದಗಳಿಂದ ಮೇಲಕ್ಕೆದ್ದ ನೆಲದ ಧೂಳಿಗಳು ನನ್ನ ನೋಟವನ್ನು ಆಕರ್ಶಿಸಿದ್ದ ಪ್ರಯುಕ್ತ ಅಂತಹ ನೋಟದಿಂದ ನನಗೆ ಏನೊಂದೂ ಕಾಣಿಸಲಿಲ್ಲ. ಆದ್ದರಿಂದ ನಾನು ಇಲ್ಲಿ ಎಡವಿ ಬಿದ್ದಿರುವೆನು. ಕೆಳಗೆ ಬಿದ್ದ ನನ್ನನ್ನು ನೀನು ಹಿಡಿದುಕೊಳ್ಳುವುದಿಲ್ಲವೆ? ಸ್ವಾಮಿ! ಗೋಪಾಲನೆನಿಸಿದ ನಿನ್ನಲ್ಲಿ ಇರುವ ಅನುರಾಗದಿಂದ ಆಕೃಷ್ಟಳಾದ ನಾನು ನಮ್ಮ ಕುಲ ಯಾವುದು ಎಂದು ಮುಂತಾಗಿ ವಿಚಾರಿಸಲಿಲ್ಲ. ಅನುರಾಗದಿಂದ ನಾನು ಸಾಧ್ವೀಚಾರಿತ್ರ್ಯವನ್ನು ತೊರೆದಿರುವೆನು. ಆದ್ದರಿಂದ ನಿನ್ನನ್ನು ನನ್ನ ಪತಿಯೆಂದು ನಾನು ಭಾವಿಸಿರುವೆನು. ನಿನ್ನನ್ನು ರಮಣನೆಂದು ಬಯಸಿರುವ ನನಗೆ ನೀನು ಆಶ್ರಯವನ್ನು ಕೊಡುವುದಿಲ್ಲವೇ ? ಹಳ್ಳದಿಣ್ಣೆಗಳಲ್ಲಿ ಬಿದ್ದೇಳುತ್ತ ನೊಂದ ಅಬಲೆಯರಿಗೆ ನೀನೇ ಗತಿ. ಆದ್ದರಿಂದ ನನ್ನನ್ನು ರಕ್ಷಿಸಬೇಕೆಂಬ ಇಚ್ಛೆಯಿಂದ ಪರಸ್ತ್ರೀಯನ್ನು ಎತ್ತಿದರೂ ನಿನಗೆ ದೋಷವಿಲ್ಲ. ಮನ್ಮಥನ ಬಾಣದಿಂದ ನೊಂದ ಎಲ್ಲಾ ಹೆಂಗಸರಿಗೂ ಸುರತದ ಅವಕಾಶವನ್ನು ಕಲ್ಪಿಸಿ ನೀನೇ ಅವರ ನೋವನ್ನು ಪರಿಹರಿಸುವೆ. ಹೀಗೆ ಗೊಲ್ಲರ ಹಟ್ಟಿಯಲ್ಲಿ ಗೋಪಿಯು ಸುರತದ ಆಶೆಯಿಂದ ಮಾಡುವ ಪ್ರಾರ್ಥನೆಯನ್ನು ಕೇಳುತ್ತ ವಿನೋದಪಡುತ್ತಿರುವ ಕೃಷ್ಣನು ನಿಮ್ಮನ್ನು ಕಾಪಾಡಲಿ" ಇಲ್ಲಿ ಗೋಪರಾಗ ಮೊದಲಾದ ಶಬ್ದಗಳು ಗೊಲ್ಲನೆನಿಸಿದ ಕೃಷ್ಣನಲ್ಲಿ ಗೋಪಿಕಾಸ್ತ್ರೀಗೆ ಇದ್ದ ಅನುರಾಗವನ್ನು ವ್ಯಕ್ತಪಡಿಸುತ್ತವೆ. ಇಲ್ಲಿ ತಿಳಿದುಬರುವ ವ್ಯಂಗ್ಯಾರ್ಥಗಳು 'ಸಲೇಶಂ' ಎಂಬ ಪದದಿಂದ ಸಾಮಾನ್ಯ ಜನರಿಗೆ ಸ್ಪಷ್ಟವಾಗಿ ತಿಳಿದುಬರುತ್ತವೆ. 'ಸಲೇಶಂ' ಎಂಬ ಪದವನ್ನು ತೊರೆದರೆ ಇದು ಶಬ್ದಶಕ್ತಿಮೂಲಧ್ವನಿಯ ಉದಾಹರಣವಾಗುತ್ತದೆ. ಆಗ ಇಲ್ಲಿ ಗುಣೀಭೂತವ್ಯಂಗ್ಯದ ಪ್ರಸಕ್ತಿಯೇ ಇರುವುದಿಲ್ಲ. ಎಲ್ಲಿ ವಸ್ತು, ಅಲಂಕಾರ, ರಸ ಎಂಬ ಈ ಮೂರು ಬಗೆಯ ವ್ಯಂಗ್ಯಾರ್ಥಗಳೂ ಬೇರೊಂದು ರಸಕ್ಕೆ ಪೋಷಕವಾಗಿರುತ್ತವೆಯೋ ಅಲ್ಲಿ ಪ್ರಧಾನವಾದ ಅಂಶವನ್ನು ಇಟ್ಟುಕೊಂಡೇ ಆ ಕೃತಿಯನ್ನು ಕಾವ್ಯವೆಂದು ಕರೆಯಬೇಕು." ಇದನ್ನು ಧ್ವನಿಕಾರರೇ ತಿಳಿಸಿದ್ದಾರೆ. "ಇಲ್ಲಿ ಹೇಳಿದ ಬಗೆಯು

ಗುಣೀಭೂತವ್ಯಂಗ್ಯವಾದರೂ ಸಹ ಧ್ವನಿ ಎನಿಸುತ್ತದೆ. ರಸವನ್ನು ಪ್ರಕಾಶಗೊಳಿಸುವ ಉದ್ದೇಶದಿಂದ ಕವಿಯು ಇಂತಹ ಗುಣೀಭೂತವ್ಯಂಗ್ಯವನ್ನು ಪ್ರಯೋಗಿಸುವುದರಿಂದ ಕವಿಯ ತಾತ್ಪರ್ಯದಂತೆ ಅದನ್ನೂ ಸಹ ಧ್ವನಿ ಎಂದೇ ಭಾವಿಸಬೇಕು. ಅದರೆ ಎಲ್ಲಿ ರಸಭಾವಗಳು ಸಾಮಾನ್ಯವಾದ ಲೌಕಿಕವಸ್ತುವಿಗೆ ಪೋಷಕವಾಗಿರುತ್ತವೆಯೋ ಅಲ್ಲಿ ಮಾತ್ರ ಕವಿಗೆ ಅವುಗಳಿಂದ ರಸವನ್ನು ಪ್ರಕಾಶಗೊಳಿಸುವ ಉದ್ದೇಶವಿಲ್ಲದಿದ್ದರೂ ಅಲ್ಲಿ ಗುಣೀಭೂತವ್ಯಂಗ್ಯವೆನಿಸುವ ರಸಭಾವಗಳಿಂದಲೇ ಆ ಕೃತಿಯನ್ನು ಕಾವ್ಯವೆಂದು ವ್ಯವಹರಿಸಬೇಕು. ಇದನು ಉದಾಹರಿಸುತ್ತಾನೆ. "ಯಾವ ನಗರದಲ್ಲಿ ದೂರದ ಆಕಾಶದವರೆಗೂ ವ್ಯಾಪಿಸಿರುವ ಪದ್ಮರಾಗಮಣಿಗಳ ರಶ್ಮಿಯು ಅಕಾಲದಲ್ಲಿ ಇದು ಸಂಧ್ಯಾಕಾಲವೆಂಬ ಭ್ರಾಂತಿಯನ್ನು ಹೊಂದಿ ಮದಿಸಿದ್ದ ಸ್ತ್ರೀಜನರಿಗೆ ಸಂಭೋಗಕ್ಕೆ ಬೇಕಾದ ಸನ್ನಿವೇಶವನ್ನು ದೊರಕಿಸುತ್ತದೆಯೋ" ಇಲ್ಲಿ ಶೃಂಗಾರರಸವು ನಗರದ ಸ್ತ್ರೀಯರ ವೃತ್ತಾಂತಕ್ಕೆ ಪೋಷಕವಾದ್ದರಿಂದ ಇದು ಇತರಾಂಗವೆಂಬ ಗುಣೀಭೂತವ್ಯಂಗ್ಯದ ಬಗೆ ಎನಿಸಿದೆ. ಆದರೂ ಶೃಂಗಾರಕಾವ್ಯವೆಂದೇ ಇದನ್ನು ವ್ಯವಹರಿಸಬೇಕು; ನಗರ ಸ್ತ್ರೀಯರ ವೃತ್ತಾಂತವನ್ನು ವರ್ಣಿಸುವ ಕಾವ್ಯವೆಂದು ವ್ಯವಹರಿಸಬಾರದು. ಈ ಬಗ್ಗೆ ಚಂಡೀದಾಸನೆಂಬ ಕವಿಪಂಡಿತನು "ಏಕಾಗ್ರಬುದ್ಧಿಯವರಿಗೆ ಮಾತ್ರವೇ ತಿಳಿದುಬರುವ ಕಾವ್ಯದ ವಿಷಯಗಳೆನಿಸಿದ ರಸಭಾವಗಳನ್ನು ಅವರು ತನ್ಮಯೀಭಾವದಿಂದ ಆಸ್ವಾದಿಸುವಾಗ ಅವರಿಗೆ ಇದು ಪ್ರಧಾನವಾದದ್ದು, ಇದು ಅಪ್ರಧಾನವಾದದ್ದು ಎಂಬ ಭಾವನೆಯು ಅನುಭವಕ್ಕೆ ಬರುವುದಿಲ್ಲ. ಆದರೆ ಕಾವ್ಯಾರ್ಥವನ್ನು ಅನುಭವಿಸಿಯಾದ ಮೇಲೆ ಗುಣಪ್ರಧಾನಭಾವವು ತೋರಿದರೂ ಅದರಿಂದ ಒಂದು ಕಾವ್ಯವನ್ನು ರಸಕಾವ್ಯವೆಂದು ಕರೆಯಲಿಕ್ಕೆ ಅದು ಅಡ್ಡಿಯಾಗುವುದಿಲ್ಲ. ಒಂದು ಕೃತಿಯು ಆಸ್ವಾದಯೋಗ್ಯವಾಗಿದ್ದರೆ ಮಾತ್ರವೇ ಕಾವ್ಯವೆನಿಸುವುದು. ಎಷ್ಟರಮಟ್ಟಿಗೆ ಸಹೃದಯರಿಗೆ ಆಸ್ವಾದಕ್ಕೆ ಯೋಗ್ಯವಾಗಿದೆಯೋ ಅದನ್ನು ಗಮನಿಸಿಯೇ 'ವ್ಯವಹಾರವು ಬಂದಿರುವುದು' ಹೀಗೆ ಅಭಿಪ್ರಾಯಪಟ್ಟಿರುವನು.

ಕೆಲವರು ಚಿತ್ರವೆಂಬ ಕಾವ್ಯದ ಮೂರನೆಯ ಬಗೆಯನ್ನು ಹೇಳುತ್ತಾರೆ. ಶಬ್ದದಿಂದಲೂ ವಾಚ್ಯಾರ್ಥದಿಂದಲೂ ಸುಂದರವಾಗಿದ್ದು ವ್ಯಂಗ್ಯಾರ್ಥವಿಲ್ಲದೆ ಇರುವ ಕಾವ್ಯವೇ ಅಧಮಕಾವ್ಯವೆನಿಸುವುದು. ಅವ್ಯಂಗ್ಯಂ ಎಂಬ ಪದದಿಂದ ವಸ್ತು, ಅಲಂಕಾರವೇ ಮೊದಲಾದ ಯಾವ ವ್ಯಂಗ್ಯಾರ್ಥವೂ ಇಲ್ಲದ್ದರಿಂದ ಒಂದು ಕೃತಿಯು ಅಧಮಕಾವ್ಯವೆನಿಸುತ್ತದೆ ಎಂದು ತಿಳಿದುಬರುತ್ತದೆ. ಯಾವುದಾದರೂ ವ್ಯಂಗ್ಯವಿದ್ದರೆಯೇ ಒಂದು ಕೃತಿಯು ಕಾವ್ಯವೆನಿಸುವ ಪ್ರಯುಕ್ತ ವ್ಯಂಗ್ಯವೇ ಇಲ್ಲದ್ದನ್ನು ಹೇಗೆ ಕಾವ್ಯವೆಂದು ಕರೆಯಬಹುದು ಎಂದು ಆಕ್ಷೇಪವು ಬರುತ್ತದೆ. ಅವ್ಯಂಗ್ಯಂ ಎಂಬಲ್ಲಿ ಈಷತ್ ಎಂಬ ಅರ್ಥದಲ್ಲಿ ನಿಷೇಧವು ಬಂದಿದೆ ಎಂದು ಭಾವಿಸಿ ವ್ಯಂಗ್ಯಾರ್ಥವು ಕೊಂಚ ಮಾತ್ರವೇ ಇದ್ದರೂ ಅದರಿಂದಲೇ ಒಂದು ಕೃತಿಗೆ ಕಾವ್ಯವೆಂಬ ವ್ಯವಹಾರವು ಬರಬಹುದೆಂದು ಹೇಳುವುದಾದರೆ 'ಕೊಂಚವಾದರೂ ವ್ಯಂಗ್ಯವಿದ್ದರೆ ಸಾಕು' ಎಂಬು

ದಕ್ಕೆ ಅರ್ಥವೇನೆಂದು ಕೇಳಬೇಕಾಗುತ್ತದೆ? ಸಹೃದಯರಿಗೆ ಆಸ್ವಾದಿಸಲು ಯೋಗ್ಯವಾದ ವ್ಯಂಗ್ಯವಿರಬೇಕೆ ಬೇಡವೇ ಎಂಬ ವಿಕಲ್ಪಗಳಾಗುತ್ತವೆ. ಆಸ್ವಾದಿಸಲು ಯೋಗ್ಯವಾದ ಭೇದವಿರಬೇಕೆಂದು ಹೇಳುವುದಾದರೆ ಆಗ 'ಕೊಂಚವಾದರೂ ವ್ಯಂಗ್ಯಾರ್ಥ'ವಿರುವಂತಹ ಕೃತಿಯು ಕಾವ್ಯದ ಪ್ರಾಚೀನವಿಭಾಗದಲ್ಲಿಯೇ ಸೇರಿಕೊಳ್ಳುತ್ತದೆ. ಆಗ ಅವ್ಯಂಗ್ಯವೆಂಬ ಕಾವ್ಯದ ಮೂರನೆಯ ಬಗೆಯನ್ನು ಹೇಳಿದ್ದೇ ವ್ಯರ್ಥವಾಗುತ್ತದೆ. ಆಸ್ವಾದಿಸಲು ಯೋಗ್ಯವಲ್ಲದ ವ್ಯಂಗ್ಯವಿರುವುದೆಂಬ ಎರಡನೆಯ ಪಕ್ಷವನ್ನು ತಿಳಿಸುವುದಾದರೆ ಅದು ಕಾವ್ಯವೇ ಆಗದೇ ಹೋಗುತ್ತದೆ. ಒಂದು ಕೃತಿಯು ಆಸ್ವಾದ್ಯವಾಗಬೇಕಾದರೆ ಅದು ಧ್ವನಿಯೋ, ಗುಣೀಭೂತವ್ಯಂಗ್ಯವೋ ಆಗಿರಲೇಬೇಕು. ಒಂದು ಕಾವ್ಯವು ಗುಣೀಭೂತವ್ಯಂಗ್ಯವೆನಿಸಿದ್ದರೂ ರಸಪ್ರತೀತಿಗೆ ಉತ್ತೇಜನವಿದ್ದರೆ ಅಲ್ಲಿಯೂ ರಸಕಾವ್ಯವೆಂದೇ ವ್ಯವಹಾರವಿರುತ್ತದೆ. ಎಲ್ಲಿ ರಸಪ್ರತೀತಿಗೆ ಉತ್ತೇಜನವಿಲ್ಲವೋ ಅಲ್ಲಿ ಗುಣೀಭೂತವ್ಯಂಗ್ಯದ ಒಂದು ಬಗೆ ಎಂದೇ ವ್ಯವಹರಿಸಲಾಗುವುದು. ಆಗ ಕೊಂಚವೇ ವ್ಯಂಗ್ಯವಿರುವ ಕೃತಿಯು ಗುಣೀಭೂತವ್ಯಂಗ್ಯದೊಳಗೇ ಸೇರುವ ಪ್ರಯುಕ್ತ ಅವ್ಯಂಗ್ಯವೆಂಬುದೇ ಸಿದ್ಧಿಸುವುದಿಲ್ಲ. ಎಲ್ಲಿ ವ್ಯಂಗ್ಯಾರ್ಥವು ಆಸ್ವಾದ್ಯ ವೆನಿಸಿದೆಯೋ ಆಗ ಅಂತಹ ಕಾವ್ಯವು ಅಧಮವೆನಿಸಲಾರದು. ಅಧಮವೆನಿಸಿದ್ದು ಎಂದೆಂದಿಗೂ ಸಹೃದಯರಿಗೆ ಆಸ್ವಾದ್ಯವಾಗಲಾರದು. ಧ್ವನಿಕಾರನು ಹೀಗೆ ಹೇಳಿದ್ದಾನೆ. "ವ್ಯಂಗ್ಯವು ಪ್ರಧಾನವೆನಿಸಿರುವ ಕಾವ್ಯವನ್ನು ಧ್ವನಿ ಎಂದೂ, ಅಪ್ರಧಾನವೆನಿಸಿರುವ ಕಾವ್ಯವನ್ನು ಗುಣೀಭೂತವ್ಯಂಗ್ಯವೆಂದೂ ವ್ಯವಸ್ಥೆ ಮಾಡಲಾಗಿದೆ. ಇವೆರಡಕ್ಕಿಂತ ಬೇರೆ ಯಾವುದುಂಟೋ ಅದು ಚಿತ್ರಕಾವ್ಯವೆನಿಸುತ್ತದೆ." ಹೀಗೆ ವ್ಯಂಗ್ಯವಿಲ್ಲದ ಕಾವ್ಯವನ್ನು ಚಿತ್ರಕಾವ್ಯವೆಂದು ಕರೆಯಬಹುದೇ ಹೊರತು ಮಹಾಕಾವ್ಯವೆಂದು ಕರೆಯುವುದು ಯುಕ್ತವಲ್ಲ.

## ಐದನೇಯಃ ಪರಿಚ್ಛೇದಃ

ಅಥ ಕೇಯಂ ಅಭಿನವಾ ವ್ಯಂಜನಾ ನಾಮ ವೃತ್ತಿರಿತ್ಯುಚ್ಯತೇ—

ವೃತ್ತೀನಾಂ ವಿಶ್ರಾಂತೇರಭಿಧಾತಾತ್ಪರ್ಯಲಕ್ಷಣಾಖ್ಯಾನಾಮ್ ।
ಅಂಗೀಕಾರ್ಯಾ ತುರ್ಯಾ ವೃತ್ತಿರ್ಬೋಧೇ ರಸಾದೀನಾಮ್ ॥

ಅಭಿಧಾಯಾಃ ಸಂಕೇತಿತಾರ್ಥಮಾತ್ರಬೋಧನವಿರತಾಯಾಃ ನ ವಸ್ತ್ವಲಂಕಾರರಸಾದಿವ್ಯಂಗ್ಯಬೋಧನೇ ಕ್ಷಮತ್ವಂ. ನ ತು ಸಂಕೇತಿತೋ ರಸಾದಿಃ. ನ ಹಿ ವಿಭಾವಾದ್ಯಭಿಧಾನಮೇವ ತದಭಿಧಾನಮ್. ತದೈಕರೂಪ್ಯಾನಂಗೀಕಾರಾತ್. ಯತ್ರ ಚ ಸ್ವಶಬ್ದೇನ ಅಭಿಧಾನಂ ತತ್ರ ಪ್ರತ್ಯುತ ದೋಷ ಏವೇತಿ ವಕ್ಷ್ಯಾಮಃ. ಕ್ವಚಿಚ್ಚ ಶೃಂಗಾರರಸೋಽಯಂ ' ಇತ್ಯಾದೌ ಸ್ವಶಬ್ದೇನ ಅಭಿಧಾನೇಽಪಿ ನ ತತ್ಪ್ರತೀತಿಃ, ತಸ್ಯ ಸ್ವಪ್ರಕಾಶಾನಂದರೂಪತ್ವಾತ್.

ಅಭಿಹಿತಾನ್ವಯವಾಧಿಭಿರಂಗೀಕೃತಾ ತಾತ್ಪರ್ಯಖ್ಯಾ ವೃತ್ತಿರಪಿ ಸಂಸರ್ಗ ಮಾತ್ರೇ ಪರಿಕ್ಷೀಣಾ ನ ವ್ಯಂಗ್ಯಬೋಧಿನೀ.

ಯಚ್ಚ ಕೇಚಿದಾಹುಃ 'ಸೋಽಯಮಿಷೋರಿವ ದೀರ್ಘದೀರ್ಘತರೋಽಭಿಧಾ ವ್ಯಾಪಾರಃ, ಇತಿ. ಯಚ್ಚ ಧ್ವನಿಕೃತೋಕ್ತಮ್—

'ತಾತ್ಪರ್ಯವ್ಯತಿರೇಕಾಚ್ಚ ವ್ಯಂಜಕತ್ವಸ್ಯ ನ ಧ್ವನಿಃ।

ಯಾವತ್ ಕಾರ್ಯಪ್ರಸಾರಿತ್ವಾತ್ ತಾತ್ಪರ್ಯಂ ನ ತುಲಾಧೃತಮ್. ಇತಿ॥

ತಯೋರುಪರಿ 'ಶಬ್ದಬುದ್ಧಿಕರ್ಮಣಾಂ ವಿರಮ್ಯ ವ್ಯಾಪಾರಬಾವ ಇತಿ ವಾದಿ ಭಿರೇವ ಪಾತನೀಯೋ ದಂಡಃ. ಏವಂ ಚ ಕಿಮಿತಿ ಲಕ್ಷಣಾಪ್ಯುಪಾಸ್ಯ, ದೀರ್ಘ ದೀರ್ಘತರಾಽಭಿಧಾವ್ಯಾಪಾರೇಣಾಪಿ ತದರ್ಥಬೋಧ ಸಿದ್ಧೇಃ. ಕಿಮಿತಿ ಚಬ್ರಾಹ್ಮಣ! ಪುತ್ರಸ್ತೇ ಜಾತಃ! ಕನ್ಯಾ ತೇ ಗರ್ಭಿಣೀ' ಇತ್ಯಾದಾವಪಿ ಹರ್ಷಶೋಕಾ ದೀನಾಮುಪಿ ನ ವಾಚ್ಯತ್ವಮ್.

ಯತ್ ಪುನರುಕ್ತಂ ಪೌರುಷೇಯಮಪೌರುಷೇಯಂ ಚ ವಾಕ್ಯಂ ಸರ್ವಮೇವ ಕಾರ್ಯಪರಂ, ಅತತ್ಪರತ್ವೇ ಅನುಪಾದೇಯತ್ವಾದುನ್ಮತ್ತವಾಕ್ಯವತ್. ತತಶ್ಚ ಕಾವ್ಯ ಶಬ್ದಾನಾಂ ನಿರತಿಶಯಸುಖಾಸ್ವಾದವ್ಯತಿರೇಕೇಣ ಪ್ರತಿಪಾದ್ಯಪ್ರತಿಪಾದಕಯೋಃ ಪ್ರವೃತ್ತ್ಯೌಪಯಿಕಪ್ರಯೋಜನಾಂತರಾನುಪಲಬ್ಧೇರ್ನಿರತಿಶಯಸುಖಾಸ್ವಾದ ಏವ ಕಾರ್ಯತ್ವೇನಾವಧಾರ್ಯತೇ; 'ಯತ್ಪರಃ ಶಬ್ದಃ ಸ ಶಬ್ದಾರ್ಥ' ಇತಿ ನ್ಯಾಯಾತ್."

ತತ್ರ ಪ್ರಷ್ಟವ್ಯಂ ಕಿಮಿದಂ ತತ್ಪರತ್ವಂ ನಾಮ, ತದರ್ಥತ್ವಂ ವಾ ತಾತ್ಪರ್ಯ ವೃತ್ತ್ಯಾ ತದ್ಬೋಧಕತ್ವಂ ವಾ? ಆದ್ಯೇ ನ ವಿವಾದಃ. ವ್ಯಂಗ್ಯತ್ವೇಽಪಿ ತದರ್ಥತಾನಪಾ ಯಾತ್. ದ್ವಿತೀಯೇ ತು ಕೇಯಂ ತಾತ್ಪರ್ಯಖ್ಯಾ ವೃತ್ತಿಃ? ಅಭಿಹಿತಾನ್ವಯವಾದಿಭಿ ರಂಗೀಕೃತಾ ವಾ, ತದನ್ಯಾ ವಾ? ಆದ್ಯೇ ದತ್ತಮೇವೋತ್ತರಮ್. ದ್ವಿತೀಯೇ ತು ನಾಮಮಾತ್ರೇ ವಿವಾದಃ. ತನ್ಮತೇಽಪಿ ತುರೀಯವೃತ್ತಿಸಿದ್ಧೇಃ.

ನನ್ವಸ್ತು ಯುಗಪದೇವ ತಾತ್ಪರ್ಯಶಕ್ತ್ಯಾ ವಿಭಾವಾದಿಸಂಸರ್ಗಸ್ಯ ರಸಾದೇಶ್ಚ ಪ್ರಕಾಶನಮಿತಿ ಚೇನ್ನ ತಯೋರ್ಹೇತುಫಲಭಾವಾಂಗೀಕಾರಾತ್. ಯದಾಹ ಮುನಿಃ 'ವಿಭಾವಾನುಭಾವವ್ಯಭಿಚಾರಿಸಂಯೋಗಾದ್ರಸನಿಷ್ಪತ್ತಿಃ' ಇತಿ. ಸಹಭಾವೇ ಚ ಕುತಃ ಸವ್ಯೇತರವಿಷಾಣಯೋರಿವ ಕಾರ್ಯಕಾರಣಭಾವಃ ಪೌರ್ವಾಪರ್ಯವಿಪರ್ಯ ಯಾತ್. 'ಗಂಗಾಯಾಂ ಘೋಷಃ' ಇತ್ಯಾದೌ ತಟಾದ್ಯರ್ಥಮಾತ್ರಬೋಧನವಿರ ತಯಾಃ ಲಕ್ಷಣಾಯಾಶ್ಚ ಕುತಃ ಶೀತತ್ವಪಾವನತ್ವಾದಿವ್ಯಂಗ್ಯಬೋಧಕತಾ? ತೇನ ತುರೀಯಾ ವೃತ್ತಿರುಪಾಸ್ಯೈವೇತಿ ನಿರ್ವಿವಾದಮೇತತ್.

ನೈಯಾಯಿಕರು ವೈಯಾಕರಣರು ಮೊದಲಾದವರು ವ್ಯಂಜನಾವೃತ್ತಿಯನ್ನು ಒಪ್ಪದೆ ಇರುವುದರಿಂದ ಅದರಿಂದ ತಿಳಿದುಬರುವ ವ್ಯಂಗ್ಯವೆಂಬ ಅರ್ಥವೇ ಇಲ್ಲದೇ ಇರುವ ಪ್ರಯುಕ್ತ ಅದನ್ನು ಇಟ್ಟುಕೊಂಡು ಕಾವ್ಯವನ್ನು ಧ್ವನಿ ಗುಣೀಭೂತವ್ಯಂಗ್ಯವೆಂದು ಎರಡು ಬಗೆ ಎಂದು ತಿಳಿಸಿರುವುದರಿಂದ ವ್ಯಂಜನೆ ಎಂದು ನವೀನರು ಮಾತ್ರವೇ ಒಪ್ಪಿ ರುವ ಈ ವೃತ್ತಿ ಎಂತಹದು ಎಂಬುದನ್ನು ತಿಳಿಸುತ್ತಾನೆ. ಅಭಿಧೆ, ತಾತ್ಪರ್ಯ, ಲಕ್ಷಣೆ

ಎಂಬ ಮೂರು ವೃತ್ತಿಗಳು ತಮ್ಮ ಕೆಲವನ್ನು ಮಾಡಿ ಮುಗಿಸಿದಮೇಲೆ ರಸ, ಭಾವ, ರಸಾಭಾಸ, ಭಾವಾಭಾಸ, ಭಾವಗಳ ಸಂಧಿ, ಪ್ರಶಮ, ಶಬಲತೆ ಇವನ್ನೂ, ವಸ್ತು ಅಲಂಕಾರ ಇವನ್ನೂ ಬೋಧಿಸಲು ನಾಲ್ಕನೆಯದೊಂದು ವೃತ್ತಿಯನ್ನು ಅವಶ್ಯವಾಗಿ ಒಪ್ಪಬೇಕು. ಅದನ್ನೇ ವ್ಯಂಜನೆ ಎಂದು ಕರೆಯಲಾಗಿದೆ. ಅಭಿಧಾವೃತ್ತಿಯು ಒಂದು ಶಬ್ದಕ್ಕೆ ಯಾವ ಅರ್ಥದಲ್ಲಿ ಸಂಕೇತವಿದೆಯೋ ಅಷ್ಟನ್ನು ಮಾತ್ರವೇ ತಿಳಿಸಿ ಕೊನೆಯಾಗುತ್ತದೆ. ಅಷ್ಟಾದಮೇಲೆ ಅದರಿಂದ ಬೇರೆ ಯಾವ ಕೆಲಸವೂ ಆಗುವಂತಿಲ್ಲ. ವಸ್ತು, ಅಲಂಕಾರ, ರಸ ಮೊದಲಾದ ವ್ಯಂಗ್ಯಾರ್ಥಗಳನ್ನು ತಿಳಿಸಲು ಅದಕ್ಕೆ ಶಕ್ತಿ ಇಲ್ಲ. ಒಂದು ಶಬ್ದಕ್ಕೆ ಇಂತಹ ರಸಭಾವಗಳಲ್ಲಿಯೇ ಸಂಕೇತವಿದೆ ಎಂದು ಹಿಂದಿನಿಂದಲೂ ಯಾರೂ ವ್ಯವಸ್ಥೆ ಮಾಡಿಲ್ಲ. ವಿಭಾವ ಮೊದಲಾದವುಗಳಿಂದ ರಸವು ತೋರುವುದಾದರೂ ಅವನ್ನು ತಿಳಿಸಿದ್ದರಿಂದಲೇ ರಸವನ್ನು ತಿಳಿಸಿದಂತಾಗುವುದಿಲ್ಲ. ವಿಭಾವ ಮೊದಲಾದವನ್ನೂ ರಸಭಾವಗಳನ್ನೂ ಒಂದೇ ಎಂದು ಯಾರೂ ಅಂಗೀಕರಿಸಿಲ್ಲ. ವಿಭಾವಾದಿಗಳು ತಿಳಿಯಬೇಕಾದ ವಿಷಯಗಳು. ರಸಭಾವಗಳು ಜ್ಞಾನದ ಬಗೆಗಳು. ಆದ್ದರಿಂದ ಅವುಗಳಿಗೆ ಪರಸ್ಪರವಾಗಿ ಭೇದವಿರುವ ಪ್ರಯುಕ್ತ ಒಂದನ್ನು ತಿಳಿದರೆ ಮತ್ತೊಂದನ್ನು ತಿಳಿದಂತಾಗುವುದಿಲ್ಲ.

'ಉದಿತಂ ಚಂದ್ರಮಾಲೋಕ್ಯ ಶೃಂಗಾರೇ ಮಗ್ನಮಂತರಂ' (ಚಂದ್ರನು ಉದಯಿಸಿದ್ದನ್ನು ನೋಡಿ ಶೃಂಗಾರರಸದಲ್ಲಿ ಮನಸ್ಸು ಮುಳುಗಿತು) ಎಂದು ಶೃಂಗಾರ ಶಬ್ದದಿಂದಲೇ ರಸವನ್ನು ತಿಳಿಸುವುದಾದರೆ ಎಲ್ಲಿ ಅಂತಹ ಶಬ್ದವಿಲ್ಲವೋ ಅಲ್ಲಿಯೂ ಹಾಗೆಯೇ ಭಾವಿಸುವುದರಿಂದ ರಸದ ಅನುಭವವಾಗಲಿ ಎಂದು ಹೇಳುವುದಾದರೆ ಅದೂ ಸರಿಯಲ್ಲವೆಂದು ತಿಳಿಸುತ್ತಾನೆ. ರಸಭಾವಗಳನ್ನು ಆಯಾ ಶಬ್ದಗಳಿಂದ ತಿಳಿಸುವುದರಿಂದ ರಸದ ಅನುಭವವಾಗುವುದರ ಬದಲು ಅದೂ ಒಂದು ಬಗೆಯ ದೋಷವೇ ಆಗುವುದೆಂದು ಸಪ್ತಮಪರಿಚ್ಛೇದದಲ್ಲಿ 'ರಸಸ್ಯೋಕ್ತಿಃ ಸ್ವಶಬ್ದೇನ' ಎಂಬಲ್ಲಿ ತಿಳಿಸಲಾಗುವುದು. 'ಉದಿತಂ ಚಂದ್ರಮಾಲೋಕ್ಯ' ಎಂಬ ಕಡೆಯೂ ಸಹ ಶೃಂಗಾರವೆಂಬ ಶಬ್ದದಿಂದ ಶೃಂಗಾರದ ಅನುಭವವಾಗುವುದಿಲ್ಲ; ಆದರೆ ವ್ಯಂಜನೆಯಿಂದಲೇ ಅದರ ಅನುಭವವು ಸಹೃದಯರಿಗೆ ಆಗಬೇಕಾಗಿದೆ. ಕೆಲವು ಕಡೆ ಇದನ್ನು ಶೃಂಗಾರರಸ ಎಂದು ಶಬ್ದದಿಂದ ತಿಳಿಸಿದ್ದರೂ ರಸವು ತನ್ನನ್ನು ತಾನೇ ಪ್ರಕಾಶಿಸುತ್ತ ಆನಂದಮಯವಾಗಿರುವ ಪ್ರಯುಕ್ತ ಅಲ್ಲಿ ರಸದ ಅನುಭವವಾಗುವಂತಿಲ್ಲ.

ಹಾಗಾದರೆ ತಾತ್ಪರ್ಯವೆಂಬ ವೃತ್ತಿಯೇ ರಸ ಭಾವ ಮೊದಲಾದ ವ್ಯಂಗ್ಯಾರ್ಥಗಳನ್ನು ಬೋಧಿಸಲಿ ಎಂದರೆ ಅದೂ ಹೊಂದುವುದಿಲ್ಲವೆಂದು ತಿಳಿಸುತ್ತಾನೆ. ಅಭಿಹಿತಾನ್ವಯವಾದಿಗಳು ಹೇಳುವಂತೆ ತಾತ್ಪರ್ಯವೆಂಬ ವೃತ್ತಿಯೂ ಸಹ ವಾಚ್ಯಾರ್ಥವನ್ನು ತಿಳಿಸುವ ಪದಗಳಿಗೆ ಪರಸ್ಪರ ಅನ್ವಯವನ್ನು ತಿಳಿಸುವಷ್ಟರಲ್ಲಿಯೇ ತನ್ನ ಶಕ್ತಿಯನ್ನು ಕಳೆದುಕೊಳ್ಳುತ್ತದೆ. ವಾಕ್ಯದಲ್ಲಿ ತಿಳಿಸಿರುವ ಅನೇಕ ಪದಗಳಿಗೆ ಶಾಬ್ದಬೋಧವಾಗುವಂತೆ ಪರಸ್ಪರವಾಗಿ ಅನ್ವಯವನ್ನು ತಿಳಿಸಿಯಾದಮೇಲೆ ಬೇರೊಂದು ಅರ್ಥವನ್ನು ತಿಳಿಸಲು

ತಾತ್ಪರ್ಯವೆಂಬ ವೃತ್ತಿಗೆ ಸಾಮರ್ಥ್ಯವಿಲ್ಲದ ಪ್ರಯುಕ್ತ ಅದು ವ್ಯಂಗ್ಯಾರ್ಥವನ್ನು ತಿಳಿಸಲಾರದು.

ವ್ಯಂಗ್ಯಾರ್ಥವನ್ನು ತಿಳಿಸಲಿಕ್ಕೂ ಸಹ ಅಭಿಧಾವೃತ್ತಿಗೇ ಸಾಧ್ಯವಿದೆ ಎಂದು ಕೆಲವರು ಹೇಳುತ್ತಾರೆ. ಬಾಣದಂತೆ ಅಭಿಧಾವ್ಯಾಪಾರವು ಹೆಚ್ಚು ಹೆಚ್ಚಾಗಿ ವ್ಯಾಪಿಸುವಂತಹದೆಂದು ಅವರು ಅಭಿಪ್ರಾಯಪಡುವರು. ಬಲಶಾಲಿಯಾದ ಧನುರ್ಧಾರಿಯು ಒಂದು ಬಾಣವನ್ನು ಪ್ರಯೋಗಿಸಿದರೆ ಅದು ಗುರಿಯನ್ನು ಭೇದಿಸಿ ಅಲ್ಲಿಂದ್ದ ಮುಂದೆ ಹೋಗಿ ಆಚೆಗೆ ಇರುವ ವಸ್ತುವಿಗೂ ತಗುಲಿ ಅದನ್ನೂ ಭೇದಿಸಬಲ್ಲದು. ಅದರಂತೆ ಶಬ್ದದ ಹಿರಿಯ ಶಕ್ತಿ ಎನಿಸಿದ ಅಭಿಧೆಯೂ ಸಹ ಸ್ವಾರ್ಥವನ್ನು ಮೊದಲು ತಿಳಿಸಿ ಅನಂತರ ವ್ಯಂಗ್ಯಾರ್ಥವನ್ನು ತಿಳಿಸುತ್ತದೆ ಎಂಬುದು ಅವರ ಆಶಯ. ಈ ಬಗ್ಗೆ ಧ್ವನಿಕಾರನು ಹೀಗೆ ಹೇಳಿದ್ದಾನೆ. "ತಾತ್ಪರ್ಯವೆಂಬ ವೃತ್ತಿಯೊಂದು ಬೇರೆ ಇಲ್ಲದ್ದರಿಂದ ವ್ಯಂಜನೆ ಎಂಬ ನೂತನವೃತ್ತಿಯು ಧ್ವನಿಯನ್ನು ತಿಳಿಸಲಾರದು. ಆದ್ದರಿಂದ ಈ ನೂತನವಾದ ವ್ಯಂಜನೆ ಎಂಬ ವೃತ್ತಿಯು ತಾತ್ಪರ್ಯವೆಂಬ ವೃತ್ತಿಯಲ್ಲಿಯೇ ಸೇರಬಹುದಾದ್ದರಿಂದ ಈ ತಾತ್ಪರ್ಯವೆಂಬ ವೃತ್ತಿಯೇ ಧ್ವನಿಯನ್ನು ತಿಳಿಸಬಲ್ಲದು. ಆದ್ದರಿಂದ ವ್ಯಂಜನೆಯೊಂದನ್ನು ವಿಶೇಷವಾಗಿ ಒಪ್ಪಿದರೆ ಗೌರವದೋಷವು ಬರುವ ಪ್ರಯುಕ್ತ ಅದನ್ನು ಒಪ್ಪಬೇಕಾಗಿಲ್ಲ. ಆದರೆ ನೀವು ತಿಳಿಸುವ ತಾತ್ಪರ್ಯವೃತ್ತಿಯು ಪದಗಳಿಗೆ ಪರಸ್ಪರವಾಗಿ ಅನ್ವಯವನ್ನು ತಿಳಿಸಿ ಅಷ್ಟರಲ್ಲಿಯೇ ಕೊನೆಗಾಣುವುದರಿಂದ ಅದು ವ್ಯಂಗ್ಯಾರ್ಥವನ್ನು ಹೇಗೆ ತಿಳಿಸಬಹುದು ? ಅದರೊಳಗೆಯೇ ಸೇರಿರುವ ವ್ಯಂಜನೆಯಾದರೂ ಬೇರೊಂದು ಅರ್ಥವನ್ನು ಹೇಗೆ ತಿಳಿಸಬಲ್ಲದು ? ಎಂದು ಕೇಳಿದರೆ ಎಷ್ಟು ಅರ್ಥವನ್ನು ಅದು ತಿಳಿಸಬೇಕೋ ಅಷ್ಟನ್ನು ಮಾತ್ರವೇ ತಿಳಿಸಿ ಅಲ್ಲಿಂದ ಮುಂದೆ ಅದು ಏನನ್ನೂ ತಿಳಿಸಲಾರದು ಎಂಬ ನಿಯಮವನ್ನು ಯಾರೂ ಮಾಡಿಲ್ಲ. ಅಭಿಧೆ ಲಕ್ಷಣೆಗಳಿಂದ ತಿಳಿಯವೇ ಇರುವ ಅರ್ಥಗಳನ್ನು ಅದು ತಿಳಿಸಬಲ್ಲದು. ಯಾವ ವೃತ್ತಿಯೇ ಆಗಲಿ ಇಷ್ಟೇ ಅರ್ಥವನ್ನು ತಿಳಿಸಬೇಕೆಂದು ಯಾರೂ ನಿಗದಿಮಾಡಿಲ್ಲ. ತೂಕನಾಡಿ ಇಷ್ಟೇ ವಸ್ತುವಿದೆ ಎಂದು ನಿರ್ಣಯಿಸುವಂತೆ ವೃತ್ತಿಗಳು ಇಷ್ಟನ್ನೇ ಬೋಧಿಸಬೇಕು, ಅಷ್ಟನ್ನು ಬೋಧಿಸಬಾರದು ಎಂಬ ನಿಯಮವೇನೂ ಇಲ್ಲ. ಆದ್ದರಿಂದ ತಾತ್ಪರ್ಯವೃತ್ತಿಯು ಪದಗಳಿಗೆ ಅನ್ವಯವನ್ನು ಬೋಧಿಸಿಯಾದಮೇಲೆ ವ್ಯಂಗ್ಯಾರ್ಥವನ್ನು ತಿಳಿಸಬಹುದು" ಹೀಗೆ ಹೇಳಿದ್ದಾರೆ. ಇದರಿಂದ ಇಲ್ಲಿ ಎರಡು ಮತಗಳಾದವು.

"ದೀರ್ಘದೀರ್ಘತರವಾದ ಅಭಿಧಾವೃತ್ತಿಯಿಂದಲೇ ವ್ಯಂಗ್ಯಾರ್ಥವು ತಿಳಿಯುವುದು" ಎಂಬ ವಾದ ಒಂದಿದೆ. ತಾತ್ಪರ್ಯವೃತ್ತಿಯಿಂದಲೇ ವ್ಯಂಗ್ಯಾರ್ಥವು ತಿಳಿದುಬರುವುದು'' ಎಂಬ ಮತ್ತೊಂದು ವಾದವಿದೆ. ಇವೆರಡು ಮತಗಳಲ್ಲಿ ಒಂದು ದೋಷವನ್ನು ಪ್ರದರ್ಶಿಸಲಾಗಿದೆ. ಅಭಿಧಾವೃತ್ತಿಯು ಸಂಕೇತಿತವಾದ ಅರ್ಥವನ್ನು ತಿಳಿಸಿದಮೇಲೆ ತನ್ನ ಶಕ್ತಿಯನ್ನು ಕಳೆದುಕೊಂಡು ಹೇಗೆ ವ್ಯಂಗ್ಯಾರ್ಥವನ್ನು ತಿಳಿಸಬಲ್ಲದು ? ತಾತ್ಪರ್ಯವೃತ್ತಿಯು ಪದಗಳಿಗೆ ಪರಸ್ಪರವಾಗಿ ಅನ್ವಯವನ್ನು ತಿಳಿಸಿದ

ಮೇಲೆ ನಿರ್ಣೀಯವಾಗುವ ಪ್ರಯುಕ್ತ ವ್ಯಂಗ್ಯಾರ್ಥವನ್ನು ಹೇಗೆ ತಿಳಿಸಬಲ್ಲದು? ಅವೆರಡೂ ಅಷ್ಟಷ್ಟನ್ನು ಮಾತ್ರವೇ ತಿಳಿಸಬೇಕೆಂದು ನಿಯಮನಮಾಡಿರುವುದರಿಂದ ಮುಂದೆ ಅವಕ್ಕೆ ತಮ್ಮ ಬಾಲವನ್ನು ಬಿಚ್ಚಲಿಕ್ಕೆ ಅವಕಾಶವೇ ಇಲ್ಲವೆಂದು ತಿಳಿಯ ಬೇಕು. 'ಶಬ್ದಬುದ್ಧಿಕರ್ಮಣಾಂ ವಿರಮ್ಯ ವ್ಯಾಪಾರಾಭಾವಃ' ಎಂದು ವಾದಿಸು ವವರೇ ಹಿಂದಿನ ಎರಡು ಮತಗಳಮೇಲೆ ದೋಷವನ್ನು ಆರೋಪಿಸುತ್ತಾರೆ. ಅವರು ಮಾತ್ರವೇ ಅಭಿಧೆ ಮತ್ತು ತಾತ್ಪರ್ಯವೃತ್ತಿಗಳಿಗೆ ಮುಂದೆ ವ್ಯಂಗ್ಯಾರ್ಥವನ್ನು ತಿಳಿಸ ಲಿಕ್ಕೆ ಸಾಮರ್ಥ್ಯವಿಲ್ಲವೆಂದೂ, ಅವೆರಡು ವ್ಯಾಪಾರಗಳು ಅಷ್ಟರಲ್ಲಿಯೇ ಮುಗಿಯುವು ದರಿಂದ ಮುಂದೆ ವ್ಯಂಜನಾವ್ಯಾಪಾರವನ್ನು ಒಪ್ಪಬೇಕೆಂದೂ ತಿಳಿಸುತ್ತಾರೆ. ಆದರೆ ಶಬ್ದಬುದ್ಧಿಕರ್ಮಣಾಂ ಎಂಬಲ್ಲಿ ಹೇಳುವ ಈ ವಾದವು ರಾಜಾಜ್ಞೆ ಏನೂ ಅಲ್ಲ. ಹಾಗೆ ಇದ್ದರೆ ಅದನ್ನು ನಾವು ಒಪ್ಪುವುದಿಲ್ಲವೆಂದು ತಿಳಿಸುತ್ತಾನೆ. ಆದ್ದರಿಂದ ಈ ಮತವನ್ನು ತಿರಸ್ಕರಿಸಿ ಅಭಿಧೆಯಿಂದಲೋ ತಾತ್ಪರ್ಯದಿಂದಲೋ ವ್ಯಂಗ್ಯಾರ್ಥವನ್ನು ತಿಳಿಯಬಹುದೆಂದು ಹೇಳುವುದಾದರೆ ಈ ರೀತಿಯಲ್ಲಿ ಅಭಿಧೆಯಿಂದಲೇ ಲಕ್ಷ್ಯಾರ್ಥವೂ ತಿಳಿದುಬರುವ ಪ್ರಯುಕ್ತ ಲಕ್ಷಣಾವೃತ್ತಿಯೂ ಬೇರಾಗಿಯೇ ಇಲ್ಲವೆಂದು ಹೇಳಬೇಕಾ ಗುತ್ತದೆ. "ಬ್ರಾಹ್ಮಣನೇ, ನಿನಗೆ ಮಗನು ಹುಟ್ಟಿದನು; ನಿನ್ನ ಮಗಳು ಗರ್ಭಿಣಿ ಯಾದಳು" ಎಂದು ಹೇಳುವಾಗ ಒಂದು ಕಡೆ ಸಂತೋಷವೂ, ಮತ್ತೊಂದುಕಡೆ ದುಃಖವೂ ಹೇಗೆ ಸಂಭವಿಸುತ್ತದೆ? ಮಗನು ಹುಟ್ಟಿದನು ಎಂಬುವನ್ನು ಕೇಳಿದಾಗ ಅವನಿಗೆ ಸಂತೋಷವಾಗುತ್ತದೆ. 'ನನ್ನ ಮಗಳು ಇನ್ನು ಋತಿಮತಿಯಾಗಿಲ್ಲದಿದ್ದರೂ ಗರ್ಭಿಣಿಯಾದಳು' ಎಂಬ ಮಾತನ್ನು ಕೇಳಿದಾಗ ಅವನಿಗೆ ವ್ಯಥೆಯಾಗುತ್ತದೆ. ಹೀಗೆ ಸುಖದುಃಖಗಳನ್ನು ಆ ಪದಗಳು ಹೇಗೆ ಅಭಿಧೆಯಿಂದ ತಿಳಿಸಬಲ್ಲವು? ಅಭಿ ಧೆಯೇ ಮುಂದೆ ನುಗ್ಗಿ ಈ ಬಗೆಯ ಸುಖದುಃಖಗಳನ್ನು ತಿಳಿಸಬಲ್ಲದೆಂದು ಹೇಳುವು ದಾದರೆ ಪ್ರಾಚೀನರು ಅಭಿಧೆ ಮೊದಲಾದ ವೃತ್ತಿಗಳಿಗೆ ಇಷ್ಟೇ ಶಕ್ತಿ ಎಂದು ನಿಗದಿ ಮಾಡಿರುವುದು ಉನ್ಮತ್ತಪ್ರಲಾಪವೇ ಆಗಬೇಕಾದೀತು.

ತಾತ್ಪರ್ಯದ ಮೂಲಕವೇ ವ್ಯಂಗ್ಯಾರ್ಥವೂ ಸಹ ಅನುಮಾನದಿಂದ ತಿಳಿದು ಬರುವುದೆಂಬ ಮತವನ್ನು ಈಗ ದೂಷಿಸುತ್ತಾನೆ. ಲೋಕದಲ್ಲಿ ಪ್ರಯೋಗಿಸುವ 'ಗಾಂ ಆನಯ' ಎಂಬ ಮಾತೇ ಆಗಲಿ, ಸ್ವರ್ಗಕಾಮನು ಯಜ್ಞವನ್ನಾಚರಿಸಬೇಕು' ಎಂಬ ವೈದಿಕಪ್ರಯೋಗವೇ ಆಗಲಿ ಇವೆರಡೂ ಯಾವುದೋ ಒಂದು ಕಾರ್ಯವನ್ನು ಸಾಧಿಸ ಲಿಕ್ಕಾಗಿಯೇ ಹೊರಟವೆ. ಅಷ್ಟರಲ್ಲಿಯೇ ಅದಕ್ಕೆ ತಾತ್ಪರ್ಯವಿದೆ. ಅದನ್ನು ಅವು ನಡೆಸದೇ ಹೋದರೆ ಆ ವಾಕ್ಯಗಳು ನಮಗೆ ಹಿತವೆನಿಸುವುದಿಲ್ಲ. ಅವು ಹುಚ್ಚರ ಮಾತಿ ನಂತೆ ವ್ಯರ್ಥವಾಗುತ್ತವೆ. ಆದ್ದರಿಂದ 'ಶೂನ್ಯಂ ವಾಸಗೃಹಂ' ಎಂದು ಮುಂತಾದ ಕಾವ್ಯಶಬ್ದಗಳನ್ನು ಕೇಳಿದವರಿಗೂ ಹೇಳುವವರಿಗೂ ಬೇರೆ ಯಾವ ಪ್ರಯೋಜನವೂ ಕಂಡುಬರುವುದಿಲ್ಲ. ಆ ನಿರತಿಶಯವಾದ ಸುಖವನ್ನು ಸಹೃದಯರು ಅನುಭವಿಸುವುದೇ ಕಾವ್ಯಶಬ್ದಗಳ ಪ್ರಯೋಜನವೆನಿಸಿದೆ. ಈ ಬಗೆಯ ಅನುಭವವನ್ನು ದೊರಕಿಸುವುದ

ಕ್ಕಾಗಿಯೇ ಕಾವ್ಯಶಬ್ದಗಳು ಹೊರಟವೆಯಾದ್ದರಿಂದ ಇವಕ್ಕೆ ಅದೇ ಕಾರ್ಯವೆನಿಸಿದೆ. ಆದ್ದರಿಂದ ಕಾವ್ಯದಲ್ಲಿ ಉಚ್ಚರಿಸುವ ಶಬ್ದಗಳೇ ರಸ, ಭಾವ ಮೊದಲಾದ ವ್ಯಂಗ್ಯಾರ್ಥಗಳನ್ನು ಬೋಧಿಸುತ್ತವೆ. ಹಾಗೆ ಬೋಧಿಸುವುದರಲ್ಲಿಯೇ ಅವಕ್ಕೆ ತಾತ್ಪರ್ಯವಿದೆ. ಇಲ್ಲವಾದರೆ ಅವು ಹುಚ್ಚರ ಮಾತುಗಳಾಗಿ ಪರಿಣಮಿಸುತ್ತವೆ. ಹೀಗೆ ಕಾವ್ಯಶಬ್ದಗಳಿಂದ ರಸವು ತಿಳಿದುಬರುವಾಗ ವ್ಯಂಜನೆ ಏಕೆ ಬೇಕು ಎಂದು ಈ ಮತದ ಅಭಿಪ್ರಾಯ. ಈ ಮತದಲ್ಲಿ ವಿಕಲ್ಪಗಳನ್ನು ಸೂಚಿಸಿ ಅದನ್ನು ದೂಷಿಸುತ್ತಾನೆ. "ಒಂದು ಶಬ್ದವು ಯಾವುದರಲ್ಲಿ ಆಸಕ್ತವಾಗಿದೆಯೋ ಅದನ್ನೇ ಆ ಶಬ್ದವು ತಿಳಿಸುತ್ತದೆ. ಅದೇ ಆ ಶಬ್ದದ ಅರ್ಥ"ವೆಂದು ನೀವು ಹೇಳಿರುವಿರಿ. ಇಲ್ಲಿ ತತ್ಪರತ್ವವೆಂಬುದಕ್ಕೆ ಅರ್ಥವೇನು ? ತತ್ಪರತ್ವವೆಂದರೆ ಸಾಮಾನ್ಯವಾಗಿ ಶಬ್ದದ ಅರ್ಥವನ್ನು ತಿಳಿಸಬೇಕೆಂದು ಅರ್ಥವೇ ಅಥವಾ ತಾತ್ಪರ್ಯವೃತ್ತಿಯಿಂದ ಆ ಅರ್ಥವನ್ನು ತಿಳಿಸಬೇಕು ಎಂದು ಅರ್ಥವೆ? ಈ ಬಗೆಯ ವಿಕಲ್ಪಗಳು ಇಲ್ಲಿ ಸಂಭವಿಸುತ್ತವೆ. ಇವುಗಳಲ್ಲಿ ಆಯಾಯ ಪದದ ಅರ್ಥವನ್ನು ತಿಳಿಸುವುದರಲ್ಲಿಯೇ ಆ ಪದವು ಆಸಕ್ತವಾಗಿದೆ ಎಂಬ ಮೊದಲನೆಯ ವಿಕಲ್ಪವನ್ನು ಒಪ್ಪುವುದಾದರೆ ವ್ಯಂಜನಾವೃತ್ತಿಯಿಂದ ವ್ಯಂಗ್ಯಾರ್ಥವನ್ನೂ ತಿಳಿಸುವುದರಲ್ಲಿಯೂ ಅಭಿಧಾವೃತ್ತಿಯಿಂದ ಸಂಕೇತಿತವಾದ ಅರ್ಥವನ್ನು ತಿಳಿಸುವಂತೆಯೇ ಒಂದು ಶಬ್ದಕ್ಕೆ ಸಾಮರ್ಥ್ಯವಿರುವ ಪ್ರಯುಕ್ತ ಆ ಬಗ್ಗೆ ವಿವಾದವೇ ಹುಟ್ಟುವುದಿಲ್ಲ. ತಾತ್ಪರ್ಯವೆಂಬ ವೃತ್ತಿಯಿಂದ ಒಂದು ಪದವು ಒಂದು ಅರ್ಥವನ್ನು ತಿಳಿಸುವುದಷ್ಟೇ ಒಂದು ಪದಕ್ಕೆ ಸಂಬಂಧಿಸಿದ್ದೆಂಬ ಎರಡನೆಯ ವಿಕಲ್ಪವನ್ನು ಒಪ್ಪುವುದಾದರೆ ಈ ತಾತ್ಪರ್ಯವೆಂಬ ವೃತ್ತಿ ಎಂತಹದೆಂದು ಕೇಳಬೇಕಾಗುತ್ತದೆ. ಅಭಿಹಿತಾನ್ವಯವಾದಿಗಳು ಹೇಳುವಂತೆ ಪದಗಳಿಗೆ ಅನ್ವಯವನ್ನು ತಿಳಿಸುವ ತಾತ್ಪರ್ಯವೃತ್ತಿಯೇ ಅಥವಾ ವ್ಯಂಗ್ಯಾರ್ಥವನ್ನು ತಿಳಿಸುವುದು ಇದೊಂದು ಬೇರೆಯೇ?ಇಲ್ಲ.ಅವರು ಹೇಳುವ ವೃತ್ತಿಯೇ ತಾತ್ಪರ್ಯವೃತ್ತಿ ಎಂದು ಹೇಳಿದರೆ ಆ ಬಗ್ಗೆ ಉತ್ತರವನ್ನು ಆಗಲೇ ನೀವೇ ಹೇಳಿರುವಿರಿ. "ಪದಗಳಿಗೆ ಪರಸ್ಪರ ಅನ್ವಯವನ್ನು ತಿಳಿಸುವುದಷ್ಟೇ ತಾತ್ಪರ್ಯವೃತ್ತಿಯ ಕೆಲಸ. ಅಷ್ಟನ್ನು ತಿಳಿಸಿದೊಡನೆ ಅದರ ಕೆಲಸವು ಮುಗಿಯಿತು. ಇನ್ನು ಅದು ಪ್ರವರ್ತಿಸುವಂತೆಯೇ ಇಲ್ಲ" ಎಂದು ನೀವೆ ಉತ್ತರವನ್ನು ಕೊಟ್ಟಿರುವಿರಿ. ವ್ಯಂಗ್ಯಾರ್ಥವನ್ನು ತಾತ್ಪರ್ಯವೃತ್ತಿಯೇ ತಿಳಿಸುವುದೆಂದು ನೀವು ಒಪ್ಪಿರುವುದರಿಂದ ಅಂತಹ ತಾತ್ಪರ್ಯವೃತ್ತಿಯನ್ನೇ ಇಲ್ಲಿ ಹೇಳಬೇಕು ಎಂಬ ಎರಡನೆಯ ವಿಕಲ್ಪವನ್ನು ತಂದೊಡ್ಡಿದರೆ ಈ ಬಗ್ಗೆ ಕೇವಲ ಹೆಸರಿನಲ್ಲಿ ವಿವಾದವನ್ನು ಮಾಡಬೇಕಾಗುತ್ತದೆ. ಅಲ್ಲಿಗೆ ವ್ಯಂಗ್ಯಾರ್ಥವೆಂಬುದೊಂದಿದೆ ಎಂದು ಒಪ್ಪಿದಂತಾಯಿತು. ಅದನ್ನು ತಾತ್ಪರ್ಯವೃತ್ತಿಯು ತಿಳಿಸುತ್ತದೆ ಎಂದು ನೀವು ಹೇಳಿರುವಿರಿ. ವ್ಯಂಜನಾವೃತ್ತಿಯು ಅದನ್ನು ತಿಳಿಸುತ್ತದೆ ಎಂದು ನಾವು ಹೇಳಿದ್ದೇವೆ. ಒಟ್ಟಿನಲ್ಲಿ ವ್ಯಂಗ್ಯಾರ್ಥವನ್ನು ಒಪ್ಪಿ ಅದು ಯಾತರಿಂದ ತೋರುತ್ತದೆ ಎಂಬ ಬಗ್ಗೆ ನಮ್ಮಿರಿಗೂ ವಿವಾದವಷ್ಟೇ ವ್ಯರ್ಥವಾಗಿ ನಡೆದಂತಾಗುತ್ತದೆ. ಒಟ್ಟನಲ್ಲಿ ನಿಮ್ಮ ಮತದಂತೆಯೂ ನಾಲ್ಕನೆಯದೊಂದು ವ್ಯಂಜನ ಎಂಬ ವೃತ್ತಿಯೂ ಸಿದ್ಧಿಸಿದಂತಾಯಿತು.

ನೈರ್ಮಲ್ಯಾದಿನೇತಿ ನಿಮಿತ್ತಭೇದಃ, ಪ್ರತೀತಿಮಾತ್ರಚಮತ್ಕಾರಕರಣಾಚ್ಚ ಕಾರ್ಯಭೇದಃ. ಕೇವಲರೂಪತಯಾ ಚಮತ್ಕಾರಿತಯಾಚ ಪ್ರತೀತಿಭೇದಃ. ಪೂರ್ವಪಶ್ಚಾದ್ಭಾವೇನ ಚ ಕಾಲಭೇದಃ. ಶಬ್ದಾಶ್ರಯತ್ವೇನ ಚ ಶಬ್ದತದೇಕದೇಶತದರ್ಥವರ್ಣಸಂಘಟನಾಶ್ರಯತ್ವೇನ ಚ ಆಶ್ರಯಭೇದಃ.

ಕಸ್ಯ ನ ವಾ ಭವತಿ ರೋಷೋ ದೃಷ್ಟ್ವಾ ಪ್ರಿಯಾಯಾಃ ಸವ್ರಣಮಧರಮ್ ।
ಸಭ್ರಮರಪದ್ಮಾಘ್ರಾಯಿಣಿ ! ವಾರಿತವಾಮೇ ! ಸಹಸ್ವೇದಾನೀಮ್ ॥

ಇತಿ ಸಖೀತತ್ಕಾಂತವಿಷಯತ್ವೇನ ವಿಷಯಭೇದಃ. ತಸ್ಮಾನ್ನಾಭಿಧೇಯ ಏವ ವ್ಯಂಗ್ಯಃ.

ತಥಾ—ಪ್ರಾಗಸತ್ತ್ವಾದ್ರಸಾದೇರ್ನೋ ಬೋಧಿಕೇ ಲಕ್ಷಣಾಭಿಧೇ !
ಕಿಂಚ ಮುಖ್ಯಾರ್ಥಬಾಧಸ್ಯ ವಿರಹಾದಪಿ ಲಕ್ಷಣಾ ॥

ನ ಬೋಧಿಕೇತಿ ಶೇಷಃ. ನಹಿ ಕೋಽಪಿ ರಸನಾತ್ಮಕವ್ಯಾಪಾರಾದ್ಭಿನ್ನೋ ರಸಾದಿಪದಪ್ರತಿಪಾದ್ಯಃ ಪದಾರ್ಥಃ ಪ್ರಮಾಣಸಿದ್ಧೋಽಸ್ತಿ, ಯಮಿಮೇ ಲಕ್ಷಣಾಭಿಧೇ ಬೋಧಯೇತಾಮ್. ಕಿಂಚ ಯತ್ರ 'ಗಂಗಾಯಾಂ ಘೋಷಃ' ಇತ್ಯಾದೌ ಉಪಾತ್ತಶಬ್ದಾರ್ಥಾನಾಂ ಬುಭೂಷನ್ನೇವಾನ್ವಯಃ ಅನುಪಪತ್ತ್ಯಾ ಬಾಧ್ಯತೇ ತತ್ರೈವ ಹಿ ಲಕ್ಷಣಾಯಾಃ ಪ್ರವೇಶಃ. ಯದುಕ್ತಂ ನ್ಯಾಯಕುಸುಮಾಂಜಲೌ ಉದಯನಾಚಾರ್ಯೈಃ

ಶ್ರುತಾನ್ವಯಾದನಾಕಾಂಕ್ಷಂ ನ ವಾಕ್ಯಂ ಹ್ಯನ್ಯದಿಚ್ಛತಿ ।
ಪದಾರ್ಥಾನ್ವಯವೈಧುರ್ಯಾತ್ ತದಾಕ್ಷಿಪ್ತೇನ ಸಂಗತಿಃ ॥

ನ ಪುನಃ 'ಶೂನ್ಯಂ ವಾಸಗೃಹಮ್' ಇತ್ಯಾದೌ ಮುಖ್ಯಾರ್ಥಬಾಧಃ. ಯದಿ ಚ 'ಗಂಗಾಯಾಂ ಘೋಷಃ' ಇತ್ಯಾದೌ ಪ್ರಯೋಜನಂ ಲಕ್ಷ್ಯಂ ಸ್ಯಾತ್ ತೀರಸ್ಯ ಮುಖ್ಯಾರ್ಥತ್ವಂ ಬಾಧಿತತ್ವಂ ಚ ಸ್ಯಾತ್. ತಸ್ಯಾಪಿ, ಚ ಲಕ್ಷ್ಯತಯಾ ಪ್ರಯೋಜನಾಂತರಂ, ತಸ್ಯಾಪಿ ಪ್ರಯೋಜನಾಂತರಂ ಇತ್ಯನವಸ್ಥಾಪಾತಃ. ನ ಚಾಪಿ ಪ್ರಯೋಜನವಿಶಿಷ್ಟ ಏವ ತೀರೇ ಲಕ್ಷಣಾ ವಿಷಯಪ್ರಯೋಜನಯೋರ್ಯುಗಪತ್ ಪ್ರತೀತ್ಯನಭ್ಯುಪಗಮಾತ್ ನೀಲಾದಿಸಂವೇದನಾನಾಂತರಮೇವ ಹಿ ಜ್ಞಾತತಾಯಾಃ ಅನುವ್ಯವಸಾಯಸ್ಯ ವಾ ಸಂಭವಃ.

ನಾನುಮಾನಂ ರಸಾದೀನಾಂ ವ್ಯಂಗ್ಯಾನಾಂ ಬೋಧನಕ್ಷಮಮ್।
ಆಭಾಸತ್ವೇ ನ ಹೇತೂನಾಂ ಸ್ಮೃತಿರ್ನ ಚ ರಸಾದಿಧೀಃ ॥

ವ್ಯಕ್ತಿವಿವೇಕಕಾರೇಣ ಹಿ "ಯಾಪಿ ವಿಭಾವಾದಿಭ್ಯೋ ರಸಾದೀನಾಂ ಪ್ರತೀತಿಃ ಸಾ ಅನುಮಾನ ಏವಾಂತರ್ಭವಿತುಮರ್ಹತಿ. ವಿಭಾವಾನುಭಾವವ್ಯಭಿಚಾರಿಪ್ರತೀತಿರ್ಹಿ ರಸಾದಿಪ್ರತೀತೇಃ ಸಾಧನಮಿಷ್ಯತೇ. ತೇ ಹಿ ರತ್ಯಾದೀನಾಂ ಭಾವಾನಾಂ ಕಾರಣಕಾರ್ಯಸಹಕಾರಿಭೂತಾಸ್ತಾನನುಮಾಪಯಂತ ಏವ ರಸಾದೀನ್ ನಿಷ್ಪಾದಯಂತಿ. ತ ಏವ ಹಿ ಪ್ರತೀಯಮಾನಾ ಆಸ್ವಾದಪದವೀಂ ಗತಾಸ್ಸಂತೋ ರಸಾ ಉಚ್ಯಂತೇ ಇತ್ಯವಶ್ಯಂಭಾವೀ ಪ್ರತೀತಿಕ್ರಮಃ, ಕೇವಲಂ ಆಶುಭಾವಿತಯಾ

ವ್ಯಂಗ್ಯಾರ್ಥವನ್ನು ತಾತ್ಪರ್ಯವೃತ್ತಿಯನ್ನು ತಿಳಿಸಲು ನಾನು ಒಪ್ಪುವುದಿಲ್ಲ. ಆದರೆ ತಾತ್ಪರ್ಯಶಕ್ತಿಯಿಂದ ವಿಭಾವ ಅನುಭಾವ ವ್ಯಭಿಚಾರಿಭಾವಗಳಿಗೆ ಪರಸ್ಪರ ಸಂಬಂಧವೇರ್ಪಟ್ಟು ಆಗಲೇ ಅದರೊಡನೆಯೇ ರಸವು ಪ್ರಕಾಶವಾಗುತ್ತದೆ ಎಂಬುದಷ್ಟೇ ನಮಗೆ ಸಮತ್ಮವೆಂದು ಹೇಳುವುದಾದರೆ ಆಗ ವಿಭಾವ ಅನುಭಾವ ವ್ಯಬಿಚಾರಿಭಾವಗಳಿಗೂ ರಸಕ್ಕೂ ಕಾರ್ಯಕಾರಣಭಾವವನ್ನು ಒಪ್ಪಿದ್ದು ತಪ್ಪಿಹೋಗಬೇಕಾಗುತ್ತದೆ. ಇದು ಆಲಂಕಾರಿಕಸಿದ್ಧಾಂತಕ್ಕೆ ಹೊಂದುವುದಿಲ್ಲ. ಇದನ್ನು ಭರತಮಹರ್ಷಿಯು ಸ್ಪಷ್ಟಪಡಿಸಿರುವನು. ವಿಭಾವ ಅನುಭಾವ ವ್ಯಭಿಚಾರಿಭಾವಗಳೆಲ್ಲವೂ ಒಟ್ಟಿಗೆ ಸೇರುವುದರಿಂದ ರಸದ ಅನುಭವವಾಗುವ ಪ್ರಯುಕ್ತ ಇಲ್ಲಿ ಕಾರ್ಯಕಾರಣಭಾವವು ಇದ್ದೇ ಇರಬೇಕು. ಎಲ್ಲವೂ ಒಟ್ಟಿಗೆ ಸೇರಿ ಅನುಭವಕ್ಕೆ ಬರುವಾಗ ಹಿಂದಿನದು ಕಾರಣ, ಮುಂದಿನದು ಕಾರ್ಯವೆಂಬುದು ಕಂಡುಬರುವುದಿಲ್ಲವೆಂಬುದು ಬೇರೆಯ ವಿಷಯ. ಜಿಂಕೆಯ ಎಡಬಲಕೊಂಬುಗಳಂತೆ ವಿಭಾವ ಅನುಭಾವ ವ್ಯಭಿಚಾರಿಭಾವಗಳ ಬೋಧೆ ಮತ್ತು ರಸದ ಬೋಧೆ ಇವೆರಡರಲ್ಲಿ ಒಂದು ಮೊದಲು 'ಮತ್ತೊಂದು ಅನಂತರ ತೋರುವುದೆಂಬ ನಿಯಮವಿರುವ ಪ್ರಯುಕ್ತ ತಾತ್ಪರ್ಯವೃತ್ತಿಯಿಂದ ವಿಭಾವಾದಿಗಳ ಜ್ಞಾನವೂ ರಸದ ಜ್ಞಾನವೂ ಒಟ್ಟಿಗೆ ಏಕಕಾಲದಲ್ಲಿ ಆಗುತ್ತವೆ ಎಂಬುದನ್ನು ಒಪ್ಪಲಾಗುವುದಿಲ್ಲ. ಹಾಗಾದರೆ ಲಕ್ಷಣೆಯಿಂದಲೇ ವ್ಯಂಗ್ಯಾರ್ಥವೂ ತಿಳಿಯುವುದೆಂದು ಹೇಳುವುದಾದರೆ ಅದೂ ಸರಿಯಲ್ಲವೆಂದು ತಿಳಿಸುತ್ತಾನೆ. 'ಗಂಗಾಯಾಂ ಘೋಷಃ' ಎಂಬಲ್ಲಿ ಗಂಗಾಪದವು ಲಕ್ಷಣೆಯಿಂದ ತೀರವೆಂಬ ಅರ್ಥವನ್ನು ತಿಳಿಸಿ ತನ್ನ ಶಕ್ತಿಯನ್ನು ಕಳೆದುಕೊಂಡಮೇಲೆ ಅದು ಆ ಹಳ್ಳಿಯಲ್ಲಿ ಎಲ್ಲರಿಗೂ ಅನುಭವಕ್ಕೆ ಬರುವಂತಹ ಶೈತ್ಯ, ಪಾವನತ್ವ ಮೊದಲಾದ ವ್ಯಂಗ್ಯಾರ್ಥಗಳನ್ನು ಹೇಗೆ ತಿಳಿಸಬಲ್ಲದು ? ಈ ಬಗೆಯ ಅರ್ಥವನ್ನು ತಿಳಿಸಲಿಕ್ಕಾಗಿ ವ್ಯಂಜನೆ ಎಂಬ ನಾಲ್ಕನೆಯ ವೃತ್ತಿಯನ್ನು ಅವಶ್ಯವಾಗಿ ಅಂಗೀಕರಿಸಲೇಬೇಕು.

ಕಿಂ ಚ— ಬೋದ್ಧೃಸ್ವರೂಪಸಂಖ್ಯಾನಿಮಿತ್ತಕಾರ್ಯಪ್ರತೀತಿಕಾಲಾನಾಮ್ ।
ಆಶ್ರಯವಿಷಯಾದೀನಾಂ ಭೇದಾದ್ಭಿನ್ನೋಽಭಿಧೇಯತೋ ವ್ಯಂಗ್ಯಃ ॥

ವಾಚ್ಯಾರ್ಥ ವ್ಯಂಗ್ಯಾರ್ಥಯೋರ್ಹಿ ಪದತದರ್ಥಮಾತ್ರನಿಪುಣೈಃ ವೈಯಯಕರಣೈರಪಿ ಸಹೃದಯ್ಯೈರೇವ ಚ ಸಂವೇದ್ಯತಯಾ ಬೋದ್ಧೃಭೇದಃ. 'ಭ್ರಮ ಧಾರ್ಮಿಕ' ಇತ್ಯಾದೌ ಕ್ವಚಿದ್ವಾಚ್ಯೇ ವಿಧಿರೂಪೇ ನಿಷೇಧರೂಪತಯಾ, ಕ್ವಚಿತ್ "ನಿಶ್ಶೇಷಚ್ಯುತಚಂದನಂ" ಇತ್ಯಾದೌ ನಿಷೇಧರೂಪೇ ವಿಧಿರೂಪತಯಾ ಚ ಸ್ವರೂಪಭೇದಃ. 'ಗತೋಽಸ್ತಮರ್ಕಃ' ಇತ್ಯಾದೌ ಜ ವಾಚ್ಯೋಽರ್ಥಃ ಏಕ ಏವ ಪ್ರತೀಯತೇ, ವ್ಯಂಗ್ಯಸ್ತು ತದ್ಬೋದ್ಧ್ರಾದಿಭೇದಾತ್ ಕ್ವಚಿತ್ 'ಕಾಂತಮಭಿಸರ' ಇತಿ, 'ಗಾವೋ ನಿರುಧ್ಯಂತಾಂ' ಇತಿ, 'ನಾಯಕಸ್ಯಾಯಮಾಗಮನಾವಸರಃ' ಇತಿ ಸಂತಾಪೋಽಧುನಾ ನಾಸ್ತಿ, ಇತ್ಯಾದಿ ರೂಪೇಣ ಅನೇಕ ಇತಿ ಸಂಖ್ಯಾಭೇದಃ.

ವಾಚ್ಯಾರ್ಥಃ ಶಬ್ದೋಚ್ಚಾರಣಮಾತ್ರೇಣ ವೇದ್ಯಃ, ಏಷ ತು ತಥಾವಿಧಪ್ರತಿಭಾ

ಅಸೌ ನ ಲಕ್ಷ್ಯತೇ, ಯತೋಽಯಮದ್ಯಾಪಿ ಅಭಿವ್ಯಕ್ತಕ್ರಮಃ” ಇತಿ ಯದುಕ್ತಂ ತತ್ರ ಪ್ರಷ್ಟವ್ಯಮ್—ಕಿಂ ಶಬ್ದಾಭಿನಯಸಮರ್ಪಿತವಿಭಾವಾದಿಪ್ರತ್ಯಯಾನುಮಿತರಾಮಾದಿಗತ ರಾಗಾದಿಜ್ಞಾನಮೇವ ರಸತ್ವೇನಾಭಿಮತಂ ಭವತಃ? ತದ್ಭಾವನಯಾ ಭಾವಕೈರ್ಭಾವ್ಯಮಾನಃ ಸ್ವಪ್ರಕಾಶಾನಂದೋ ವಾ? ಅದ್ಯೇ ನ ವಿವಾದಃ; ಕಿಂತು ರಾಮಾದಿಗತರಾಗಾದಿಜ್ಞಾನಂ ರಸಸಂಜ್ಞಯಾ ನೋಚ್ಯತೇಽಸ್ಮಾಭಿರಿತ್ಯೇವ ವಿಶೇಷಃ. ದ್ವಿತೀಯಸ್ತು ವ್ಯಾಪ್ತಿಗ್ರಹಣಾಭಾವಾತ್ ಹೇತೋರಾಭಾಸತಯಾ ಅಸಿದ್ಧ ಏವ.

ಅಭಿಧೆ ಲಕ್ಷಣೆ ತಾತ್ಪರ್ಯವೆಂಬ ವೃತ್ತಿಗಳಿಗಿಂತ ವ್ಯಂಜನಾವೃತ್ತಿಯು ಬೇರೆ ಎಂಬುದನ್ನು ಈವರಿವಿಗೆ ಪ್ರತಿಪಾದಿಸಿ ಈಗ ವಾಚ್ಯಲಕ್ಷ್ಯತಾತ್ಪರ್ಯಾರ್ಥ ಇವುಗಳಿಗಿಂತಲೂ ವ್ಯಂಗ್ಯಾರ್ಥವು ಬೇರೆ ಎಂಬುದನ್ನು ತಿಳಿಸುತ್ತಾನೆ. ಹೇಳಿದ ಮಾತನ್ನು ಕೇಳಿ ತಿಳಿಯುವವನು,ಮಾತಿನ ಸ್ವರೂಪ ಅಥವಾ ಅವನ ಸ್ವಭಾವ,ತಿಳಿಯುವ ಅರ್ಥವು ಏಕವೇ ಅನೇಕವೇ ಎಂಬ ಸಂಖ್ಯೆ, ಆ ಮಾತನ್ನು ಹೇಳಲಿಕ್ಕೆ ಕಾರಣ, ಅದರಿಂದುಂಟಾಗುವ ಪರಿಣಾಮ, ಆ ಮಾತನ್ನು ಹೇಳಿಲಿಕ್ಕೆ ಆಧಾರ, ಆ ಮಾತಿನಲ್ಲಿ ಅಡಗಿರುವ ಉದ್ದೇಶ, ಹೇಳುವವನ ಅಭಿಪ್ರಾಯ ಇವುಗಳು ಅನೇಕ ಬಗೆಯಾಗಿರುವುದರಿಂದ ವ್ಯಂಗ್ಯಾರ್ಥವು ವಾಚ್ಯಾರ್ಥಕ್ಕಿಂತಲೂ ಬೇರೆ ಎನಿಸಿದೆ. ಅದರಂತೆಯೇ ಲಕ್ಷ್ಯಾರ್ಥ ಮತ್ತು ತಾತ್ಪರ್ಯಾರ್ಥಗಳಿಗಿಂತಲೂ ಬೇರೆ ಎನಿಸಿದೆ.

ಕಾರಿಕೆಯಲ್ಲಿ ಹೇಳಿರುವ ಅಂಶಗಳನ್ನು ಮುಂದೆ ವಿವರಿಸುತ್ತಾನೆ. ಕೇಳುವವರ ಭೇದದಿಂದ ವ್ಯಂಗ್ಯಾರ್ಥವು ವಾಚ್ಯ ಲಕ್ಷ್ಯ ವ್ಯಂಗ್ಯಗಳಿಂದ ಬೇರೆ ಎನಿಸಿರುವುದನ್ನು ಈಗ ತಿಳಿಸಿ ಉದಾಹರಿಸುತ್ತಾನೆ. ವಾಚಕಲಕ್ಷಕ ಪದಗಳು ಮತ್ತು ಅವುಗಳ ಅರ್ಥಗಳು ಇವನ್ನು ತಿಳಿಯುವುದರಲ್ಲಿ ನಿಪುಣರಾದ ವೈಯಾಕರಣರು ಮಾತ್ರವೇ ಆ ಬಗೆಯ ಅರ್ಥಗಳನ್ನು ತಿಳಿಯಬಲ್ಲರು. ಕಾವ್ಯದ ಹೃದಯವನ್ನು ಅರಿತ ಸಹೃದಯರು ಮಾತ್ರವೇ ವ್ಯಂಗ್ಯಾರ್ಥವನ್ನು ತಿಳಿಯಬಲ್ಲರು. ಹೀಗೆ ಕೇಳುವವರಲ್ಲಿ ಭೇದವಿರುವುದರಿಂದ ವ್ಯಂಗ್ಯಾರ್ಥವು ಆ ಅರ್ಥಗಳಿಗಿಂತ ಬೇರೆ ಎನಿಸಿದೆ. ಇಲ್ಲಿ, ವಾಚ್ಯಾಲಕ್ಷ್ಯತಾತ್ಪರ್ಯಾರ್ಥಗಳಿಗಿಂತಲೂ ವ್ಯಂಗ್ಯಾರ್ಥವು ಸ್ವರೂಪದಿಂದಲೇ ಬೇರೆಯಾಗಿರುವುದನ್ನು ಉದಾಹರಿಸುತ್ತಾನೆ. 'ಭ್ರಮ ಧಾರ್ಮಿಕ' ಎಂಬ ಪದ್ಯದಲ್ಲಿ ವಾಚ್ಯಾರ್ಥವು "ಧಾರ್ಮಿಕನೇ ಇಲ್ಲಿ ಸ್ವಚ್ಛಂದವಾಗಿ ತಿರುಗಾಡು" ಎಂದು ವಿಧಿರೂಪವಾಗಿದ್ದರೆ, ವ್ಯಂಗ್ಯಾರ್ಥವು 'ನೀನು ಇಲ್ಲಿ ತಿರುಗಾಡಬಾರದು' ಎಂದು ನಿಷೇಧರೂಪವಾಗಿದೆ. "ನಿಶ್ಶೇಷಚ್ಯುತಚಂದನಂ" ಎಂಬಲ್ಲಿ ವಾಚ್ಯಾರ್ಥವು "ನೀನು ಆ ನೀಚನ ಬಳಿಗೆ ಹೋಗಿರಲಿಲ್ಲ" ಎಂದು ನಿಷೇಧರೂಪವಾಗಿದ್ದರೆ ವ್ಯಂಗ್ಯಾರ್ಥವು 'ಅವನಲ್ಲಿಗೆ ರಮಿಸಲಿಕ್ಕಾಗಿ ಹೋಗಿದ್ದೆ' ಎಂಬ ಅರ್ಥವನ್ನು ತಿಳಿಸುತ್ತದೆ. ಹೀಗೆ ವ್ಯಂಗ್ಯಾರ್ಥವು ಬೇರೆ ಅರ್ಥಗಳಿಗಿಂತ ಸ್ವರೂಪದಲ್ಲಿ ವಿಲಕ್ಷಣದೆನಿಸಿದೆ.

ಈಗ ಸಂಖ್ಯಾಭೇದವನ್ನು ವಿವರಿಸುತ್ತಾನೆ. ವಾಚ್ಯಮೊದಲಾದ ಅರ್ಥಗಳು ಅನೇಕ ಬಗೆಯಾಗಿದ್ದರೆ ವ್ಯಂಗ್ಯಾರ್ಥವು ಒಂದೇ ಬಗೆಯಾಗಿರುತ್ತದೆ. "ಸೂರ್ಯನು

ಮುಳುಗಿದನು" ಎಂಬ ಮಾತಿನಲ್ಲಿ ವಾಚ್ಯಾರ್ಥವು ಒಂದೇ ಬಗೆಯಾಗಿದೆ. ಆ ಮಾತಿಗೆ ಒಂದೇ ಅರ್ಥವೆಂದು ನಿಷ್ಕರ್ಷವಾಗಿದೆ. ವ್ಯಂಗ್ಯಾರ್ಥವಾದರೋ ಕೇಳುವವರ ವೈವಿಧ್ಯ ದಿಂದ ಅನೇಕ ಬಗೆ ಎನಿಸಿದೆ. ಕೆಲವುಕಡೆ ಇದು 'ನಿನ್ನ ಪ್ರಿಯನನ್ನು ಹುಡುಕಿಕೊಂಡು ಹೊರಡಲು ಈಗ ಕಾಲ ಒದಗಿದೆ.' ಎಂದು ಅಭಿಸಾರಿಕೆಗೆ ತಿಳಿಸುತ್ತದೆ. ಗೋವುಗಳನ್ನು ಕಾಯುವವನಿಗೆ "ಮೇಯುತ್ತಿರುವ ಗೋವುಗಳನ್ನು ಒಂದೆಡೆಗೆ ಸೇರಿಸಿಕೋ' ಎಂದು ತಿಳಿಸುತ್ತದೆ. "ನಾಯಕನು ಈಗ ಬರುವಕಾಲವಾದ್ದರಿಂದ ನಿನ್ನ ಸಂತಾಪವು ತೊಲಗಿತು" ಎಂದು ವಿರಹಿಣಿಗೆ ಅರ್ಥವಾಗುತ್ತದೆ. ಕಳ್ಳನಿಗೆ ಮತ್ತೊಬ್ಬ ಕಳ್ಳನು ಇದನ್ನು ಹೇಳಿದರೆ 'ಕಳ್ಳತನಕ್ಕೆ ಹೊರಡುವಕಾಲ ಸಮಿಾಪಿಸಿತು' ಎಂದು ಅರ್ಥವಾಗುತ್ತದೆ. ಹೀಗೆ 'ಗತೋಽಸ್ತಮರ್ಕಃ' ಎಂಬ ಒಂದೇ ವಾಕ್ಯವು ಕೇಳುವವರ ಇಚ್ಛೆಗನುಗುಣವಾಗಿ ಅನೇಕಬಗೆಯಾಗುತ್ತದೆ.

ಈಗ ನಿಮಿತ್ತಭೇದವನ್ನು ತಿಳಿಸುತ್ತಾನೆ. ವಾಚ್ಯಾರ್ಥವು ಶಬ್ದವನ್ನು ಉಚ್ಚರಿಸಿದ್ದರಿಂದಲೇ ತಿಳಿದುಬರುತ್ತದೆ. ವ್ಯಂಗ್ಯಾರ್ಥವಾದರೋ ನಿರ್ಮಲಹೃದಯರೂ ಸೂಕ್ಷ್ಮಬುದ್ಧಿಯುಳ್ಳವರೂ ಭ್ರಾಂತಿಸಂಶಯಗಳಿಲ್ಲದವರೂ ಆದ ರಸಿಕರಿಗೆ ಮಾತ್ರವೇ ತಿಳಿದುಬರುವುದು. ಹೀಗೆ ವ್ಯಂಗ್ಯಾರ್ಥಕ್ಕೂ ಇತರ ಅರ್ಥಗಳಿಗೂ ನಿಮಿತ್ತದಲ್ಲಿ ಭೇದವಿದೆ.

ಈಗ ಪರಿಣಾಮದಲ್ಲಿ ಭೇದವನ್ನು ತಿಳಿಸುತ್ತಾನೆ. ವಾಚ್ಯಾರ್ಥವು ಶಬ್ದಕ್ಕೆ ವಿಷಯವೆನಿಸಿದ್ದರಿಂದ ಅದರ ಪರಿಚಯವನ್ನು ಮಾತ್ರವೇ ಅದು ದೊರಕಿಸುತ್ತದೆ; ಅಷ್ಟಲ್ಲದೆ ಬೇರೆ ಯಾವ ಚಮತ್ಕಾರವನ್ನೂ ತಿಳಿಸುವುದಿಲ್ಲ. ವ್ಯಂಗ್ಯಾರ್ಥವಾದರೋ ತನ್ನ ಪರಿಚಯವನ್ನು ಮಾಡಿಸುವುದಲ್ಲದೆ ಚಮತ್ಕಾರವನ್ನೂ ಹುಟ್ಟಿಸುತ್ತದೆ. ಹೀಗೆ ಪರಿಣಾಮದಲ್ಲೂ ವ್ಯಂಗ್ಯಾರ್ಥವು ಬೇರೆ ಅರ್ಥಗಳಿಗಿಂತ ವಿಲಕ್ಷಣವೆನಿಸಿದೆ.

ಈಗ ಪ್ರತೀತಿಭೇದವನ್ನು ತಿಳಿಸುತ್ತಾನೆ. ವಾಚ್ಯಾರ್ಥದ ಅರಿವು ಕೇಳುವವರಿಗೆ ಕೇವಲ ಶಾಬ್ದಬೋಧದಿಂದಲೇ ಆಗುತ್ತದೆ. ವ್ಯಂಗ್ಯಾರ್ಥವಾದರೋ ಚಮತ್ಕಾರವನ್ನು ಹುಟ್ಟಿಸುವುದರಿಂದಲೇ ತಿಳಿದುಬರುತ್ತದೆ. ಎಲ್ಲಿ ಸ್ವಾರಸ್ಯವಿದೆಯೋ ಅಲ್ಲಿ ಮಾತ್ರವೇ ವ್ಯಂಗ್ಯಾರ್ಥವಿರುವುದೆಂಬ ಜ್ಞಾನವು ಸಹೃದಯರಿಗೆ ಸಹಜವಾಗಿ ಆಗುತ್ತದೆ. ಹೀಗೆ ವ್ಯಂಗ್ಯಾರ್ಥಕ್ಕೂ ಇತರ ಅರ್ಥಗಳಿಗೂ ತಿಳಿಯುವುದರಲ್ಲಿ ಭೇದವಿದೆ.

ವಾಚ್ಯಾರ್ಥವು ಶಬ್ದವನ್ನು ಕೇಳಿದೊಡನೆಯೇ ತಿಳಿದುಬರುವುದು. ವ್ಯಂಗ್ಯಾರ್ಥವು ಅನಂತರ ತಿಳಿದುಬರುವುದು. ಹೀಗೆ ಇದಕ್ಕೂ ಬೇರೆ ಅರ್ಥಗಳಿಗೂ ಕಾಲಭೇದವಿದೆ.

ವಾಚ್ಯಾರ್ಥವು ಕೇವಲ ಶಬ್ದವನ್ನು ಆಶ್ರಯಿಸಿರುತ್ತದೆ. ವ್ಯಂಗ್ಯಾರ್ಥವಾದರೋ ಶಬ್ದವನ್ನೂ, ಅದರ ಏಕದೇಶವಾದ ಪ್ರಕೃತಿಪ್ರತ್ಯಯಗಳನ್ನೂ, ಅದರ ಅರ್ಥವನ್ನೂ, ಅಕ್ಷರಗಳನ್ನೂ, ಪದಗಳ ಜೋಡಣೆಯನ್ನೂ ಆಶ್ರಯಿಸಿರುವುದು. ಆದ್ದರಿಂದ ಇದಕ್ಕೆ ಬೇರೆ ಅರ್ಥಗಳಿಗಿಂತಲೂ ಆಶ್ರಯಭೇದವಿದೆ.

ಈಗ ವಿಷಯಭೇದವನ್ನು ತಿಳಿಸುತ್ತಾನೆ. "ಪ್ರಿಯೆಯ ಕೆಳತುಟಿಯು ಗಾಯಗೊಂಡಿರುವುದನ್ನು ನೋಡಿ ಯಾರು ತಾನೆ ಸಿಟ್ಟಿಗೇಳಲಾರರು ? ಎಲ್ಲರಿಗೂ ಸಿಟ್ಟು ಬರುವುದು ಸಹಜ. ಆದರೂ ಅದರಲ್ಲಿ ಏನೊಂದಿಷ್ಟು ದೋಷವೂ ಕಾಣಲಾರದು. ದುಂಬಿಯೊಡಗೂಡಿದ ಪದ್ಮವನ್ನು ನೀನು ಮೂಸಿ ನೋಡುತ್ತಿದ್ದಾಗ ಹಾಗೆ ಮಾಡಬೇಡವೆಂದರೂ ನೀನು ಮಾಡಿದ್ದಕ್ಕಾಗಿ ಈ ವ್ಯಥೆಯನ್ನು ನೀನು ಸಹಿಸಿಕೊಳ್ಳಬೇಕು. ಇನ್ನೂ ಬೇರೆ ದಾರಿಯೇ ಇಲ್ಲ. ಕಮಲವನ್ನು ಮೂಸಿನೋಡುವಾಗ ದುಂಬಿಯು ಕಚ್ಚಿ ಹೀಗೆ ಆಗಿದೆ. ನಿಷಿದ್ಧವಾದ್ದನ್ನು ಮಾಡಿದ್ದಕ್ಕೆ ಆಗಿರುವ ಫಲವನ್ನೂ, ಪತಿಯು ಕೋಪಿಸಿಕೊಂಡದ್ದರಿಂದ ಆಗಿರುವ ದುಃಖವನ್ನೂ, ದುಂಬಿಯು ತುಟಿಯನ್ನು ಕಚ್ಚಿದ್ದರಿಂದ ಆಗಿರುವ ಕಷ್ಟವನ್ನೂ ನೀನು ಸಹಿಸಿಕೋ.'' ಇಲ್ಲಿ ಈ ಮಾತನ್ನು ಹೇಳುವ ಸಖಿಗೆ 'ತುಟಿಯ ನೋವು ದುಂಬಿಯ ಕಡಿತದಿಂದ ಆಗಿದೆ. ಇದು ಪರಪುರುಷನೊಬ್ಬ ಕಚ್ಚಿದ್ದರಿಂದ ಆಗಿದ್ದಲ್ಲ' ಎಂಬುದು ಉದ್ದೇಶವಿದೆ. ಆದರೆ ಇಲ್ಲಿ ತೋರುವ ವ್ಯಂಗ್ಯಾರ್ಥವು 'ಇದರಿಂದ ಪತಿಗೆ ಆಕ್ರೋಶವುಂಟಾಗಿದೆ. ಇದು ಸ್ವಯಂಕೃತಾಪರಾಧವಾದ್ದರಿಂದ ಇದನ್ನು ಹೇಗಾದರೂ ನೀನು ಸಹಿಸಲೇ ಬೇಕು' ಎಂಬುದು ವ್ಯಂಗ್ಯಾರ್ಥದ ಉದ್ದೇಶ. ಹೀಗೆ ಉದ್ದೇಶವು ಬೇರೆಯಾದ್ದರಿಂದ ತಿಳಿಸಬೇಕಾದ ವಿಷಯದಲ್ಲಿ ಭೇದವಿದೆ. ಆದ್ದರಿಂದ ಎಲ್ಲಾ ಬಗೆಗಳಲ್ಲೂ ಭೇದವಿರುವುದರಿಂದ ವ್ಯಂಗ್ಯಾರ್ಥವು ವಾಚ್ಯಾರ್ಥದಿಂದ ಬೇರೆ ಎನಿಸಿದೆ.

ಸಹೃದಯನು ರಸವನ್ನು ಅನುಭವಿಸುವುದಕ್ಕೆ ಮೊದಲು ಅದು ಇಲ್ಲದೇ ಇರುವ ಪ್ರಯುಕ್ತ ಲಕ್ಷಣೆ ಮತ್ತು ಅಭಿಧೆ ಇವೆರಡೂ ರಸವನ್ನು ಬೋಧಿಸಲಾರವು. ಯಾವ ವಸ್ತುವನ್ನು ನಾವು ಅನುಭವಿಸುವೆವೋ ಅದು ನಮ್ಮ ಅನುಭವಕ್ಕೆ ಬರುವ ಮುನ್ನ ಪ್ರತ್ಯಕ್ಷವೇ ಮೊದಲಾದ ಪ್ರಮಾಣದಿಂದ ಸಿದ್ಧವಾಗಿರಬೇಕು. ಅಂತಹ ವಸ್ತುವನ್ನೇ ಲಕ್ಷಣೆ ಮತ್ತು ಅಭಿಧೆ ಇವೆರಡೂ ತಿಳಿಸುತ್ತವೆ. ಘಟಶಬ್ದಕ್ಕೆ ಸಂಬಂಧಿಸಿದ ಅಭಿಧಾವೃತ್ತಿಯು ಮೊದಲೇ ಸಿದ್ಧವಾಗಿರುವ ಒಂದು ಪದಾರ್ಥವನ್ನೇ ಬೋಧಿಸುತ್ತದೆ. ಹಾಗೆಯೇ ಗಂಗಾಪದದಲ್ಲಿರುವ ಲಕ್ಷಣಾವೃತ್ತಿಯು ಮೊದಲೇ ಪ್ರತ್ಯಕ್ಷವಾಗಿ ಸಿದ್ಧವಾಗಿರುವ ತೀರವನ್ನು ತಿಳಿಸುತ್ತದೆ. ರಸ ಭಾವ ಮೊದಲಾದವು ನಮ್ಮ ಒಂದು ಬಗೆಯ ಅನುಭವವೆನಿಸಿದ್ದರಿಂದ ಅನುಭವಕ್ಕೆ ಬರುವ ಮೊದಲು ಯಾವ ಪ್ರಮಾಣದಿಂದಲೂ ಸಿದ್ಧವಾಗಿರುವುದಿಲ್ಲ. ಆದ್ದರಿಂದ ರಸವನ್ನು ವ್ಯಕ್ತಪಡಿಸಲು ಅಭಿಧೆಗೂ ಲಕ್ಷಣೆಗೂ ಸಾಧ್ಯವಾಗುವುದಿಲ್ಲ. ಲಕ್ಷಣೆಯಾದರೋ ಮುಖ್ಯಾರ್ಥಕ್ಕೆ ಬಾಧವಿಲ್ಲದಿದ್ದರೆ ಪ್ರವರ್ತಿಸುವಂತೆಯೇ ಇಲ್ಲ. ಹೀಗೆ ಮುಖ್ಯಾರ್ಥಕ್ಕೆ ಬಾಧವಿಲ್ಲದ ಪ್ರಯುಕ್ತ ರಸಭಾವಗಳು ಲಕ್ಷಣೆಗೆ ವಿಷಯವಾಗಲಾರವು. ರಸನವೆಂಬ ವ್ಯಾಪಾರಕ್ಕಿಂತ ಬೇರೆ ಯಾವ ಶಕ್ತಿಯೂ ರಸವನ್ನು ಹೊರಪಡಿಸಲಾರದು. ರಸನವೆಂದರೆ ಚಮತ್ಕಾರದೊಡಗೂಡಿದ ಒಂದು ಬಗೆಯ ಅನುಭವ. ಇದರಿಂದಲೇ ಸಹೃದಯನಿಗೆ ರಸವು ಸಿದ್ಧಿಸಬೇಕು. ಇದನ್ನು ಬಿಟ್ಟು ಬೇರೆ ಯಾವ ಸಾಧನವೂ ರಸಪ್ರತೀತಿಗೆ ಅನುಕೂಲವಾಗಿಲ್ಲ. ಹಾಗೆ ಇದ್ದಿದ್ದರೆ

ಅದನ್ನು ಲಕ್ಷಣೆ ಮತ್ತು ಅಭಿಧೆ ಇವೇ ತಿಳಿಸಬಹುದಾಗಿತ್ತು. ರಸನವೆಂಬ ವ್ಯಾಪಾರವಾದರೋ ಅಭಿಧೆ ಲಕ್ಷಣೆ ಇವನ್ನು ಮೀರಿದ್ದು. 'ಗಂಗಾಯಾಂ ಘೋಷಃ' ಎಂಬಲ್ಲಿ ತಿಳಿಸಿರುವ ಶಬ್ದಾರ್ಥಗಳಿಗೆ ಆಗಬೇಕಾಗಿರುವ ಅನ್ವಯವು ಹೊಂದದೇ ಇರುವ ಪ್ರಯುಕ್ತ ಅಲ್ಲಿಯೇ ಲಕ್ಷಣೆಯು ಪ್ರವೇಶಿಸುತ್ತದೆ. ನ್ಯಾಯಕುಸುಮಾಂಜಲಿಯಲ್ಲಿ ಉದಯನಾಚಾರ್ಯರು ಹೀಗೆ ಹೇಳಿದ್ದಾರೆ. 'ನಾವು ಕೇಳುವ ಶಬ್ದಗಳಿಗೆ ಪರಸ್ಪರ ಸಂಬಂಧವಿದ್ದು ಬೇರೊಂದು ಅರ್ಥದ ಆಕಾಂಕ್ಷೆ ಇಲ್ಲದೆ ಇರುವ ವಾಕ್ಯವು ಬೇರೆ ಯಾವ ಅರ್ಥವನ್ನೂ ಇಚ್ಛಿಸುವುದಿಲ್ಲ. ಆದರೆ ಶಬ್ದಗಳಿಗೆ ಪರಸ್ಪರ ಅನ್ವಯವಿಲ್ಲದೆ ಮುಖ್ಯಾರ್ಥದೊಡನೆ ಅನ್ವಯವನ್ನು ದೊರಕಿಸಲಿಕ್ಕಾಗಿ ಯಾವ ಬೇರೊಂದು ಅರ್ಥವನ್ನು ಎಲ್ಲಿ ಗ್ರಹಿಸುವೆವೋ ಅಲ್ಲಿ ಅದು ಆ ಮುಖ್ಯಾರ್ಥಕ್ಕೆ ಸಂಬಂಧಪಟ್ಟಿರಬೇಕು' 'ಶೂನ್ಯಂ ವಾಸಗೃಹಂ' ಎಂಬ ಶ್ಲೋಕದಲ್ಲಿ ಪ್ರತಿಯೊಂದು ಪದವೂ ತನ್ನ ಅರ್ಥವನ್ನು ತಿಳಿಸಿದ್ದರಿಂದ ಅಲ್ಲಿ ಎಲ್ಲಿಯೂ ಮುಖ್ಯಾರ್ಥಕ್ಕೆ ಬಾಧವಿಲ್ಲದ ಪ್ರಯುಕ್ತ ಲಕ್ಷಣೆಗೆ ಅವಕಾಶವಿಲ್ಲ. 'ಗಂಗಾಯಾಂ ಘೋಷಃ'ಎಂಬಲ್ಲಿ ತೀರದಲ್ಲಿ ಶೈತ್ಯ ಪಾವನತ್ವ ಇವು ಹೆಚ್ಚಾಗಿ ನೆಲಸಿವೆ ಎಂಬುದನ್ನು ತಿಳಿಸಲಿಕ್ಕಾಗಿ ಗಂಗೆ ಎಂಬ ಪದವನ್ನು ಪ್ರಯೋಗಿಸಿರುವುದರಿಂದ ತೀರ ಮತ್ತು ಶೈತ್ಯ ಮೊದಲಾದ ಪ್ರಯೋಜನ ಇವೆರಡೂ ಲಕ್ಷ್ಯಾರ್ಥಗಳೇ ಆಗುವಂತೆ 'ಶೂನ್ಯಂ ವಾಸಗೃಹಂ' ಎಂಬಲ್ಲಿ ಹೇಳಿರುವ ಶಬ್ದಗಳಿಗೂ ಹಾಗೆ ಪ್ರಯೋಗವಿರುವುದರಿಂದಲೇ ತಿಳಿದುಬರಲಿ ಎಂದು ಆಶಂಕಿಸಿದರೆ ಅದನ್ನು ಪರಿಹರಿಸುತ್ತಾನೆ. ತೀರವನ್ನು ಗಂಗಾಪದದ ಮುಖ್ಯಾರ್ಥವೆಂದು ಭಾವಿಸಿ ಅದಕ್ಕೆ ಸಂಬಂಧಿಸಿದ್ದರಿಂದ ಶೈತ್ಯ ಮೊದಲಾದ ಪ್ರಯೋಜವೇ ಲಕ್ಷ್ಯಾರ್ಥವೆನಿಸಬೇಕಾದರೆ ಆಗ ಗಂಗಾಪದಕ್ಕೆ ತೀರವೇ ಶಕ್ಯಾರ್ಥವೆಂದು ಗ್ರಹಿಸಬೇಕಾದೀತು. ಆ ಪದಕ್ಕೆ ತೀರ ಎಂಬ ಅರ್ಥದಲ್ಲಿ ಸಂಕೇತವಿಲ್ಲದ್ದರಿಂದ ಅದು ಮುಖ್ಯಾರ್ಥವೆನಿಸಲಾರದು. ಅದೇ ಮುಖ್ಯಾರ್ಥವಾಗಿದ್ದರೆ ಅದಕ್ಕೆ ಬಾಧವಿದೆ ಎಂದು ಭಾವಿಸಿ ಅದಕ್ಕೆ ಸಂಬಂಧಿಸಿದ ಶೈತ್ಯ ಮೊದಲಾದ ಪ್ರಯೋಜನವನ್ನು ಲಕ್ಷ್ಯಾರ್ಥವೆಂದು ಭಾವಿಸಬಹುದಾಗಿತ್ತು. ಇದೂ ಅಲ್ಲದೆ ಶೈತ್ಯ ಪಾವನತ್ವ ಮೊದಲಾದ ಪ್ರಯೋಜನವೇ ಇಲ್ಲಿ ತಿಳಿದುಬರುವುದರಿಂದ ಅದಕ್ಕೆ ಬೇರೊಂದು ಪ್ರಯೋಜನವನ್ನು ಕಲ್ಪಿಸಬೇಕಾಗುತ್ತದೆ. ಮತ್ತೆ ಅದೂ ಲಕ್ಷ್ಯಾರ್ಥವಾಗುವ ಪ್ರಯುಕ್ತ ಅದಕ್ಕೆ ಬೇರೊಂದು ಪ್ರಯೋಜನವನ್ನು ಸ್ವೀಕರಿಸಬೇಕಾದೀತು. ಹೀಗೆ ಕಲ್ಪಿಸುತ್ತ ಹೋದರೆ ಕೊನೆಯೇ ಇಲ್ಲದಂತಾಗುವುದು. ಲಕ್ಷಣೆಗೆ ಪ್ರಯೋಜವೂ ಒಂದು ಹೇತುವಾದ್ದರಿಂದ ಪ್ರಯೋಜನವಿಲ್ಲದಮೇಲೆ ಲಕ್ಷಣೆಯೇ ಬಾರದ ಪ್ರಯುಕ್ತ ರೂಢಿಯೂ ಸಹ ಇಲ್ಲಿ ಸಂಭವಿಸುವಂತಿಲ್ಲ. 'ಪಶುನಾ ಯಜೇತ' ಎಂಬಲ್ಲಿ ಗಂಡು ಪಶು ಒಂದನ್ನೇ ಯಜ್ಞದಲ್ಲಿ ಆಹುತಿಕೊಡಬೇಕೆಂದು ಅರ್ಥವಾಗುವಂತೆ 'ಗಂಗಾಯಾಂ ಘೋಷಃ' ಎಂಬಲ್ಲೂ ಲಕ್ಷಣೆಯಿಂದಲೇ ಶೈತ್ಯ ಮೊದಲಾದ ಪ್ರಯೋಜನವುಳ್ಳ ತೀರ ಎಂಬ ಅರ್ಥವು ಒಮ್ಮೆಗೆ ತಿಳಿದುಬರುತ್ತದೆ. ಹಾಗೆ ಹೇಳಿದರೆ ಅನವಸ್ಥಾದೋಷವು ಬರುವಂತಿಲ್ಲ. ಆದ್ದರಿಂದ ಲಕ್ಷಣೆಯಿಂದಲೇ ಲಕ್ಷ್ಯಾರ್ಥವೂ, ಪ್ರಯೋಜನವೆನಿಸಿದ ವ್ಯಂಗ್ಯಾರ್ಥವೂ ತಿಳಿದು

ಬರುತ್ತವೆ ಎಂದು ಹೇಳುವುದಾದರೆ ಅದೂ ಹೊಂದುವುದಿಲ್ಲ. ಗಂಗಾಪದಕ್ಕೆ ಲಕ್ಷಣೆಯನ್ನು ಹೇಳಬೇಕಾದರೆ ಆ ಲಕ್ಷಣೆಯಿಂದ ಯಾವವಿಷಯವು ತೋರುವುದೆಂಬುದು ಎಲ್ಲರಿಗೂ ತಿಳಿದದ್ದೇ ಆಗಿದೆ. ಹಾಗೆಯೇ ಅಲ್ಲಿ. ಲಕ್ಷಣೆಯನ್ನು ಹೇಳಲು ಶೈತ್ಯ ಮೊದಲಾದ ಪ್ರಯೋಜನವಿರಬೇಕೆಂಬುದೂ ಎಲ್ಲರಿಗೂ ತಿಳಿದಿದೆ. ಅದರೆ ತೀರ ಪ್ರಯೋಜನ ಇವೆರಡೂ ಏಕಕಾಲದಲ್ಲಿ ಒಟ್ಟಿಗೆ ತೋರಲಾರವು. ಮೊದಲು ತೀರವೆಂಬ ಅರ್ಥವು ತೋರಿ ಆಮೇಲೆ ಅದರ ಪ್ರಯೋಜನವು ನಮ್ಮ ಅನುಭವಕ್ಕೆ ಬರಬೇಕು. ಕಾರಣ ಮತ್ತು ಕಾರ್ಯ ಇವೆರಡೂ ಬೇರೆಬೇರೆ ಕಾಲಗಳಲ್ಲಿ ಇರಬೇಕೆಂಬುದಕ್ಕೆ ದಾರ್ಶನಿಕರ ಒಪ್ಪಿಗೆಯನ್ನು ತಿಳಿಸುತ್ತಾನೆ. 'ಇದು ನೀಲಘಟ' ಎಂದು ನೀಲವರ್ಣದ ಜ್ಞಾನವಾದ ಮೇಲೆಯೇ 'ಇದನ್ನು ನೀಲಘಟವೆಂದು ನಾನು ತಿಳಿದೆನು' ಎಂದು ಹಿಂದಿನದಕ್ಕೆ ಸಂಬಂಧಿಸಿದ ಬೇರೊಂದು ಜ್ಞಾನವು ಹುಟ್ಟುತ್ತದೆ ಎಂದು ಮೀಮಾಂಸಕರು ಹೇಳುತ್ತಾರೆ. ನೀಲವರ್ಣದ ಜ್ಞಾನವಿಲ್ಲದೆ ನೀಲಘಟದ ಜ್ಞಾನವಂತೂ ಹುಟ್ಟುವಂತಿಲ್ಲ. ಹಾಗೆಯೇ ನೈಯಾಯಿಕಮತದಲ್ಲಿ ನೀಲವರ್ಣದ ಜ್ಞಾನವಾದಮೇಲೆಯೇ 'ಈ ಘಟವನ್ನು ನಾನು ನೋಡುತ್ತೇನೆ' ಎಂದು ಅದರ ಬಗ್ಗೆ ಬೇರೊಂದು ಜ್ಞಾನ ಹುಟ್ಟುತ್ತದೆ. ಹೀಗೆ ತೀರ ಮತ್ತು ಪ್ರಯೋಜನ ಎರಡರ ಜ್ಞಾನವೂ ಒಟ್ಟಿಗೆ ಆಗುವಂತಿಲ್ಲ. ಮೊದಲು ತೀರದ ಜ್ಞಾನವು ಲಕ್ಷಣೆಯಿಂದ ಆಗಿ ಅನಂತರವೇ ಗಂಗಾತೀರದಲ್ಲಿ ಇದಕ್ಕೆ ಅನೇಕ ಪ್ರಯೋಜನ ಉಂಟೆಂಬ ಜ್ಞಾನವು ಆಗಬೇಕಾಗಿದೆ. ಆ ಪ್ರಯೋಜನವನ್ನು ಲಕ್ಷಣೆಯು ತಿಳಿಸಲಾರದು. ಆದ್ದರಿಂದ ಪ್ರಯೋಜನವನ್ನು ತಿಳಿಸಲಿಕ್ಕಾಗಿ ವ್ಯಂಜನಾವೃತ್ತಿಯನ್ನು ಅವಶ್ಯವಾಗಿ ಒಪ್ಪಲೇಬೇಕು. ಹಾಗೆಯೇ ರಸ ಭಾವಗಳನ್ನು ಬೋಧಿಸಲಿಕ್ಕೆ ಲಕ್ಷಣೆಗೆ ಸಾಧ್ಯವಿದೆ ಎಂದು ಕಲ್ಪಿಸುವುದು ಸರ್ವಥಾ ಯುಕ್ತವಲ್ಲ.

'ಕಾವ್ಯಂ ರಸಾದಿಮತ್-ವಿಭಾವಾದಿಮತ್ತ್ವಾತ್.' ಎಂಬ ಅನುಮಾನದಿಂದ ರಸ ಭಾವಗಳ ಜ್ಞಾನವಾಗುವವಾಗ ವ್ಯಂಜನೆ ಏಕೆ ಬೇಕು? ಎಂದು ವಾದಿಸುವ ವ್ಯಕ್ತಿವಿವೇಕಕಾರನೆನಿಸಿದ ಮಹಿಮಭಟ್ಟನ ಮತವನ್ನು ಈಗ ನಿರಾಕರಿಸುತ್ತಾನೆ. ರಸ ಭಾವ ಮೊದಲಾದ ವ್ಯಂಗ್ಯಾರ್ಥಗಳನ್ನು ಬೋಧಿಸಲು ಅನುಮಾನದಿಂದ ಸಾಧ್ಯವಾಗುವುದಿಲ್ಲ, ಯಾಕೆಂದರೆ ಪ್ರತಿವಾದಿಗಳು ಈ ಬಗ್ಗೆ ತಿಳಿಸುವ ಹೇತುಗಳೆಲ್ಲವೂ ಸದ್ಧೇತುಗಳೆನಿಸದೆ ಆಭಾಸವೆನಿಸಿವೆ. ಹಾಗೆ ಹೇತುಗಳು ಆಭಾಸವೆನಿಸಿದ್ದರಿಂದಲೇ ರಸಜ್ಞಾನವು ಸಂಸ್ಕಾರದಿಂದ ಹುಟ್ಟುವ ಸ್ಮೃತಿ ಎನಿಸಲಾರದು. ಮುಂದಿನ ವ್ಯಾಖ್ಯಾನದಲ್ಲಿ ಕಾರಿಕೆಯ ಅರ್ಥವು ವಿಶದವಾಗುವುದು. ವ್ಯಕ್ತಿವಿವೇಕಕಾರನ ಅಭಿಪ್ರಾಯವು ಹೀಗಿದೆ. "ವಿಭಾವ ಅನುಭಾವ ವ್ಯಭಿಚಾರಿಭಾವಗಳ ಜ್ಞಾನದೊಡನೆ ರಸದ ಜ್ಞಾನವಾಗುತ್ತದೆ. ಎಲ್ಲೆಲ್ಲಿ ವಿಭಾವಾದಿಗಳಿರುವುವೋ ಅಲ್ಲೆಲ್ಲಾ ರಸಭಾವಗಳ ಅನುಭವವಾಗುತ್ತದೆ. ಆದ್ದರಿಂದ ರಸಜ್ಞಾನವು ಅನುಮಾನದಿಂದಲೇ ಆಗಬಲ್ಲದು. ರಸಪ್ರತೀತಿಗೆ ವಿಭಾವ ಅನುಭಾವ ವ್ಯಭಿಚಾರಿಭಾವಗಳ ಜ್ಞಾನವೇ ಕಾರಣವೆನಿಸಿದೆ. ಅವುಗಳಲ್ಲಿ ರಸಪ್ರತೀತಿಗೆ ವಿಭಾವವು ಕಾರಣವೂ, ಅನುಭವವು ಕಾರ್ಯವೂ, ವ್ಯಭಿಚಾರಿಭಾವವು ಸಹಕಾರಿಯೂ ಆಗಿದ್ದು

ಅವೇ ರತ್ಯಾದಿಸ್ಥಾಯಿಭಾವಗಳನ್ನು ಅನುಮಾನದಿಂದ ಸಿದ್ಧಪಡಿಸಿ ಆ ಮೂಲಕ ರಸ ಭಾವಗಳನ್ನು ಹುಟ್ಟಿಸುತ್ತವೆ. ಆ ವಿಭಾವಾದಿಗಳೇ ಕಾವ್ಯದಲ್ಲೂ ನಾಟ್ಯದಲ್ಲೂ ಮೊದಲು ಸಾಮಾನ್ಯವಾಗಿ ತೋರಿ ಆಮೇಲೆ ಸಹೃದಯರ ಆಸ್ವಾದನೆಗೆ ಯೋಗ್ಯವೆನಿಸುತ್ತವೆ. ವಿಭಾವಾದಿಗಳ ಜ್ಞಾನವೇ ಅಪೂರ್ವವಾದ ಸನ್ನಿವೇಶದಿಂದ ಚಮತ್ಕಾರವನ್ನು ಹುಟ್ಟಿಸುತ್ತ ರಸರೂಪದಿಂದ ಪರಿಣಮಿಸುತ್ತವೆ. ದಂಡ ಚಕ್ರ ಇವುಗಳ ವ್ಯಾಪಾರದಿಂದ ಮಣ್ಣು ಗಡಿಗೆಗೆ ಕಾರಣವಾದಂತೆ ವಿಭಾವಾದಿಗಳ ಜ್ಞಾನವೇ ರಸ ಪ್ರತೀತಿಗೆ ಕಾರಣವೆನಿಸುತ್ತದೆ. ಹಾಗೆಯೇ ಆದಕ್ಕೆ ಅಭೇದವೂ ಹೊಂದುತ್ತದೆ. ಈ ರೀತಿಯಲ್ಲಿ ವಿಭಾವಾದಿಗಳ ಜ್ಞಾನದಿಂದ ರಸಜ್ಞಾನವಾಗುವ ಪ್ರಯುಕ್ತ ಇವೆರಡಕ್ಕೂ ಹಿಂದುಮುಂದೆಂಬ ಕ್ರಮವಿದ್ದೇ ಇರಬೇಕು. ಆದರೆ ವಿಭಾವಾದಿಗಳ ಜ್ಞಾನವಾದೊಡನೆಯೇ ಬೇಗನೆ ರಸಪ್ರತೀತಿಯಾಗುವ ಪ್ರಯುಕ್ತ ಅಲ್ಲಿರುವ ಕ್ರಮವು ಕಂಡು ಬರುವುದಿಲ್ಲ. ವ್ಯಂಜನಾವೃತ್ತಿಯಿಂದ ರಸದ ಅನುಭವವಾಗುವುದೆಂಬ ಮತದಂತೆಯೇ ಅನುಮಾನದಿಂದ ರಸದ ಪ್ರತೀತಿಯುಂಟಾಗುವುದೆಂಬ ಈ ಮತದಲ್ಲಿಯೂ ರಸವು ಸಹೃದಯರಿಗೆ ಅನುಭವಗೋಚರವಾಗುವ ಮಾರ್ಗವು ಇದೇ ಎಂದು ನಿಷ್ಕರ್ಷವಾಗಿದೆ." ಹೀಗೆ ವೃತ್ತಿವಿವೇಕಕಾರನು ಹೇಳುತ್ತಾನೆ. ಇಲ್ಲಿ ವಿಚಾರ ಮಾಡಲಾಗುವುದು. ಈ ಮತವನ್ನು ವಿಕಲ್ಪಿಸಿ ಹೀಗೆ ನಿರಾಕರಿಸುತ್ತಾನೆ. ದೃಶ್ಯಕಾವ್ಯದಲ್ಲೂ ಶ್ರವ್ಯಕಾವ್ಯದಲ್ಲೂ ನಮಗೆ ದೊರಕುವ ವಿಭಾದಿಗಳ ಜ್ಞಾನದಿಂದ ರಾಮನಿಗೆ ಸೀತೆಯಲ್ಲಿದ್ದ ಅನುರಾಗದ ಜ್ಞಾನವನ್ನು ಅನುಮಾನದ ಮೂಲಕ ನಾವು ಪಡೆಯುವೆವು. ಹೀಗೆ ನಾವು ಪಡೆಯುವ ಜ್ಞಾನವೇ ರಸವೆಂಬುದು ನಿಮಗೆ ಅಭಿಮತವೇ? ಅಥವಾ ಆ ರಾಮನಲ್ಲಿ ಸೀತೆಯ ಬಗ್ಗೆ ಇದ್ದ ಅನುರಾಗದ ಚಿಂತೆಯಿಂದ ಸಭ್ಯರು ಭಾವಿಸಿ ತಿಳಿದು ತಮ್ಮಲ್ಲಿಯೇ ಅನುಭವಿಸುವ ಆನಂದವೇ ರಸವೆಂಬುದು ನಿಮಗೆ ಸಮ್ಮತವೇ? ಎಂದು ಎರಡು ವಿಕಲ್ಪಗಳು ಇಲ್ಲಿ ಸಂಭವಿಸುತ್ತವೆ. ವಿಭಾವಾದಿಜ್ಞಾನದಿಂದ ರಾಮನಿಗೆ ಸೀತೆಯಲ್ಲಿದ್ದ ಅನುರಾಗವು ಅನುಮಾನದ ಮೂಲಕ ಸಭ್ಯರಿಗೆ ತೋರಿ ರಸವಾಗುವುದೇ ಅಥವಾ ರಾಮನಿಗೆ ಸೀತೆಯ ಬಗ್ಗೆ ಇದ್ದ ಅನುರಾಗವನ್ನೇ ಚಿಂತಿಸುವುದರಿಂದ ಅವರಿಗೆ ತೋರುವ ಸ್ವಪ್ರಕಾಶಾನಂದವೇ ರಸವಾಗುವುದೇ ? ಎಂದು ಎರಡು ವಿಕಲ್ಪಗಳು ಒದಗುತ್ತವೆ. ಮೊದಲನೆಯ ವಿಕಲ್ಪವನ್ನು ನೀವು ಒಪ್ಪಿದರೆ ನಮಗೂ ಆ ಬಗ್ಗೆ ವಿರೋಧವಿಲ್ಲ. ಸೀತೆಯೇ ವಿಭಾವವೆನಿಸಿದ್ದರಿಂದ ಆಕೆಗೆ ರಾಮನಲ್ಲಿ ಅನುರಾಗವಿತ್ತೆಂದು ರಾಮಾಯಣಾದಿಕಾವ್ಯಗಳು ತಿಳಿಸುತ್ತವೆ. ಹೀಗೆ ಹೇಳುವುದರಿಂದ ಅನುಮಾನಕ್ಕೆ ಹೇತ್ವಾಭಾಸವಿಲ್ಲದ ಪ್ರಯುಕ್ತ ವ್ಯಾಪ್ತಿಜ್ಞಾನವು ಸಂಭವಿಸಿ ಎಲ್ಲವೂ ಹೊಂದಿಕೆಯಾಗುತ್ತದೆ. ನಮಗೂ ಇದೇ ಸಮ್ಮತವಾದ್ದರಿಂದ ಈ ಬಗ್ಗೆ ಹೆಚ್ಚು ಆಡಂಬರವೇ ಬೇಕಾಗಿಲ್ಲ. ಸೀತೆಯ ಬಗ್ಗೆ ರಾಮನಲ್ಲಿದ್ದ ಅನುರಾಗವನ್ನು ಅನುಮಾನದಿಂದ ತಿಳಿಯಬೇಕೆಂಬುದೊಂದೇ ನಮಗೂ ನಿಮಗೂ ಇರುವ ಭೇದ. ರಾಮನಿಗೆ ಸೀತೆಯ ಬಗ್ಗೆ ಇದ್ದ ಅನುರಾಗವು ಮೊದಲು ರಸವಲ್ಲದಿದ್ದರೂ ವಿಭಾವಾದಿಗಳ ಪರಸ್ಪರಸಂಬಂಧದಿಂದ ರಸವಾಗುವುದೆಂಬ ಬಗ್ಗೆ

ಯಾರಿಗೂ ವಿವಾದವಿಲ್ಲ. ಆದರೆ ರಾಮನಲ್ಲಿದ್ದ ಆ ಅನುರಾಗದ ಜ್ಞಾನವನ್ನೇ ರಸವೆಂಬ ಸಂಜ್ಞೆಯಿಂದ ನಾವು ಕರೆಯುವುದಿಲ್ಲ, ಆದರೆ ಆ ಅನುರಾಗವೇ ವಿಭಾವಾದಿಗಳ ಸಂಪರ್ಕದಿಂದ ರಸವಾಗಿ ಪರಿಣಮಿಸುತ್ತದೆ ಎಂದು ನಾವು ಹೇಳುತ್ತೇವೆ. ಈ ಅನುರಾಗವು ರಸವಾಗಿ ಪರಿಣಮಿಸಲು ವ್ಯಂಜನಾವೃತ್ತಿಯನ್ನು ಸಾಧನವೆಂದು ನಾವು ಅಂಗೀಕರಿಸಿದ್ದೇವೆ. ವಿಭಾವಾದಿಜ್ಞಾನದಿಂದ ರಸಜ್ಞಾನವು ಸಭ್ಯರಿಗೆ ಆಗಲು ಅನುಮಾನವೇ ಸಾಧನವೆಂದು ನೀವು ಹೇಳುವಿರಿ. ನಮಗೂ ನಿಮಗೂ ಸಾಧನದಲ್ಲಿ ಭೇದವೇ ಹೊರತು ಸಾಧ್ಯಾಂಶದಲ್ಲಿ ಏನೂ ಭೇದವಿಲ್ಲ. ರಾಮನಿಗೆ ಸೀತೆಯಲ್ಲಿದ್ದ ಅನುರಾಗವನ್ನು ಚಿಂತಿಸುವ ಸಭ್ಯನಿಗೆ ತೋರುವ ಸ್ವಪ್ರಕಾಶಾನಂದವೇ ರಸವಾಗುವುದೆಂಬ ಎರಡನೆಯ ವಿಕಲ್ಪವನ್ನು ನೀವು ಒಪ್ಪುವುದಾದರೆ "ಕಾವ್ಯಂ ರಸವತ್ ವಿಭಾವಾದಿಮತ್ತ್ವಾತ್'' ವಿಭಾವ ಮೊದಲಾದವುಗಳನ್ನು ತಿಳಿಸಿರುವುದರಿಂದ ಕಾವ್ಯದಲ್ಲಿ ರಸವಿದೆ ಎಂದು ನೀವು ಹೇಳುವ ಅನುಮಾನದ ಪ್ರಕಾರ ವಿಭಾವಾದಿಗಳ ಜ್ಞಾನ ಎಲ್ಲಿ ಇರುವುದೋ ಅಲ್ಲಿಯೇ ರಸಜ್ಞಾನವಾಗುತ್ತದೆ ಎಂಬ ವ್ಯಾಪ್ತಿಯು ಇಲ್ಲಿ ಹೊಂದುವುದಿಲ್ಲ. ಆದ್ದರಿಂದ ಹೇತು ಇಲ್ಲಿ ಅಸಿದ್ಧವೆನಿಸುತ್ತದೆ. ಸಭ್ಯರಲ್ಲಿ ವಿಭಾವಾದಿಗಳ ಜ್ಞಾನವಿರುತ್ತದೆಯೇ ಹೊರತು ಕಾವ್ಯದಲ್ಲಿ ಇರುವುದಿಲ್ಲ. ಹೀಗೆ ಹೇತುವಿಗೆ ಸ್ವರೂಪಾಸಿದ್ಧಿ ಎಂಬ ದೋಷವು ಬರುತ್ತದೆ. ಈ ಬಗೆಯ ಹೇತ್ವಾಭಾಸವಿರುವ ಪ್ರಯುಕ್ತ ಎರಡನೆಯ ವಿಕಲ್ಪವು ಅನುಮಾನಕ್ಕೆ ಹೊಂದುವುದಿಲ್ಲ.

ಯಚ್ಚೋಕ್ತಂ ತೇನೈವ "ಯತ್ರ ಯತ್ರ ಏವಂವಿಧಾನಾಂ ವಿಭಾವಾನುಭಾವಸಾತ್ತ್ವಿಕಸಂಚಾರಿಣಾಂ ಅಭಿಧಾನಂ ಅಭಿನಯೋ ವಾ ತತ್ರ ತತ್ರ ಶೃಂಗಾರಾದಿರಸಾವಿರ್ಭಾವಃ" ಇತಿ ಸುಗ್ರಹೈವ ವ್ಯಾಪ್ತಿಃ ಪಕ್ಷಧರ್ಮತಾ ಚ.

ತಥಾ— ಯೋಽರ್ಥಾಂತರಾಭಿವ್ಯಕ್ತೌ ವಃ ಸಾಮಗ್ರೀಷ್ಟಾ ನಿಬಂಧನಮ್ ।
ಸೈವಾನುಮಿತಿಪಕ್ಷೇ ನೋ ಗಮಕತ್ವೇನ ಸಮ್ಮತಾ ॥

ಇದಮಪಿ ನೋ ನ ವಿರುದ್ಧಮ್. ನ ಹ್ಯೇವಂವಿಧಾ ಪ್ರತೀತಿರಾಸ್ವಾದ್ಯತ್ವೇನಾಸ್ಮಾಕಮಭಿಮತಾ ಕಿಂ ತು ಸ್ವಪ್ರಕಾಶಾನಂದವಿಶ್ರಾಂತಃ ಸಾಂದ್ರಾನಂದಾವಿರ್ಭಾವಃ. ತೇನಾತ್ರ ಸಿಷಾಧಯಿಷಿತಾತ್ ಅರ್ಥಾಂತರಸ್ಯ ಸಾಧನಾತ್ ಹೇತೋರಾಭಾಸತಾ.

ವಿಭಾವ ಅನುಭಾವವ್ಯಭಿಚಾರಿಭಾವಗಳ ಜ್ಞಾನದಿಂದ ರಸಭಾವಗಳ ಜ್ಞಾನವನ್ನು ಅನುಮಾನದಿಂದ ಪಡೆಯಲಿಕ್ಕೆ ವ್ಯಾಪ್ತಿಯು ಹೊಂದುವುದಿಲ್ಲವೆಂಬ ಕಾರಣದಿಂದ ಎರಡನೆಯ ವಿಕಲ್ಪವನ್ನು ಅಲ್ಲಗಳೆದಹಾಗಾಯಿತು. ಹೇತುಸಾಧ್ಯಗಳು ಒಂದೆ ತೆಗೆ ಇರುವಂತೆ ಬೇರೆ ರೀತಿಯಿಂದ ವ್ಯಾಪ್ತಿಯನ್ನು ಪ್ರತಿಪಾದಿಸಿ ರಸಭಾವಗಳು ಅನುಮಾನದಿಂದಲೇ ಸಿದ್ಧಿಸುತ್ತವೆ ಎಂಬುದನ್ನು ತೋರಿಸಲು ವ್ಯಕ್ತಿವಿವೇಕಕಾರನು ಹೇಳಿದ್ದನ್ನು ಅನುವಾದಮಾಡಿ ದೂಷಿಸುತ್ತಾನೆ. ಅವನೇ ಹಾಗೆ ಹೇಳಿದ್ದಾನೆ. "ಹಿಂದೆ ತಿಳಿಸಿದಂತಹ ವಿಭಾವ, ಅನುಭಾವ, ಸಾತ್ತ್ವಿಕಭಾವ, ಸಂಚಾರಿಭಾವಗಳನ್ನು ಎಲ್ಲೆಲ್ಲಿ ಹೇಳಿದೆಯೋ ಅಥವಾ ಅಭಿನಯಿಸಿದೆಯೋ ಅಲ್ಲೆಲ್ಲಾ ಶೃಂಗಾರಾದಿರಸಗಳು ಆವಿರ್ಭವಿ

ಸುತ್ತವೆ" ಹೀಗೆ ವಿಭಾವಾದಿಗಳ ಜ್ಞಾನಕ್ಕೂ ರಸಾವಿರ್ಭಾವಕ್ಕೂ ವ್ಯಾಪ್ತಿಯನ್ನು ಗ್ರಹಿಸ ಬಹುದಾಗಿದೆ. ಅಲ್ಲಿಗೆ ಹೇತುವು ಪಕ್ಷವೆನಿಸಿದ ರಾಮಾಯಣಾದಿಕಾವ್ಯದಲ್ಲಿ ಸಂಬಾಧಿಸುವ ಪ್ರಯುಕ್ತ ಅನುಮಾನಕ್ಕೆ ಹೇತ್ವಾಭಾಸವಿಲ್ಲದೆ ವ್ಯಾಪ್ತಿಯೂ ಸಂಭವಿಸುತ್ತದೆ. ವ್ಯಂಜನಾವೃತ್ತಿಯನ್ನು ಅಂಗೀಕರಿಸುವ ನಿಮ್ಮ ಮತದಲ್ಲಿ ವಾಚ್ಯಲಕ್ಷ್ಯಗಳಿಂದ ಬೇರೆಯಾದ ವ್ಯಂಗ್ಯಾರ್ಥವನ್ನು ಪ್ರಕಾಶಪಡಿಸಲು ಶಾಬ್ದಬೋಧವೆಂಬ ಸಾಮಗ್ರಿಯು ಇಷ್ಟಪಾದ ಕಾರಣವೆನಿಸಿದೆ. ರಸಾಭಾವಗಳು ಅನುಮಾನದಿಂದ ತಿಳಿದು ಬರುತ್ತವೆ ಎಂದು ಹೇಳುವ ನಮ್ಮ ಮತದಲ್ಲೂ ಅದೇ ಶಾಬ್ದಬೋಧವೇ ಅನುಮಾನವನ್ನು ಪ್ರತಿಪಾದಿಸಲಿಕ್ಕೂ ಸಾಮಗ್ರಿ ಎನಿಸುವುದು. ಹೀಗೆ ವ್ಯಕ್ತಿವಿವೇಕಾರಾರನು ಹೇಳಿರುವುದು ಆಲಂಕಾರಿಕರಿಗೂ ಸಮ್ಮತವೆನಿಸಿದೆ. ಇವರಲ್ಲಿ ಯಾವ ವಿರೋಧವೂ ಇಲ್ಲ. ಆದರೆ ಸಭ್ಯನಿಗೆ ವಿಭಾವಾದಿಗಳ ಜ್ಞಾನವಿರುವುದರಿಂದ ರಸಜ್ಞಾನವಿದೆ ಎಂಬ ಅನುಮಾನದಿಂದ ಉಂಟಾಗುವ ರಸಪ್ರತೀತಿಯು ನಮಗೆ ಸಮ್ಮತವೆನಿಸಿಲ್ಲ, ನಮ್ಮ ದೃಷ್ಟಿಯಲ್ಲಿ ರಸವು ತಾನಾಗಿಯೇ ಪ್ರಕಾಶಿಸುವಂತಹದು; ನಿರಾತಿಶಯವಾದ ಆನಂದವೇ ಅದರ ಸ್ವರೂಪ. ಇದೂ ಒಂದು ಬಗೆಯ ಜ್ಞಾನವಿಶೇಷವೇ ಇಂತಹದೇ ರಸವೆಂದು ಎಲ್ಲರಿಗೂ ಅನುಭವಗೋಚರವಾಗಿದೆ. ಇದರಿಂದ 'ಸಭ್ಯೋ ರಸಪ್ರತೀತಿಮಾನ್ ವಿಭಾವಾದಿಪ್ರತೀತಿಮತ್ತ್ವಾತ್' ಎಂಬ ಅನುಮಾನದಿಂದ ಸಾಧಿಸಲಿಕ್ಕೆ ಇಷ್ಟವಾದ ಆನಂದಮಯವೂ ಸ್ವಪ್ರಕಾಶಜ್ಞಾನರೂಪವೂ ಆದ ರಸಕ್ಕಿಂತ ಬೇರೊಂದು ಅರ್ಥವನ್ನು ಅಲ್ಲಿ ಪ್ರತಿಪಾದಿಸುವ ಪ್ರಯುಕ್ತ ಇದು ದುಷ್ಟಹೇತುವೆನಿಸಿದೆ. ಪ್ರತ್ಯಕ್ಷವಾಗಿ ಸಭ್ಯರು ರಸವನ್ನು ಅನುಭವಿಸುವ ಪ್ರಯುಕ್ತ ಅದರ ಪ್ರತೀತಿಯನ್ನು ಅನುಮಾನದಿಂದ ಪಡೆಯುವುದು ಅದಕ್ಕಿಂತ ಬೇರೆಯಾಗುತ್ತದೆ. ರಸಾನುಭವ ಮತ್ತು ಪ್ರತೀತಿ ಎರಡೂ ಬೇರೆ ಎನಿಸುತ್ತವೆ. ಅನುಮಾನವು ರಸಾನುಭಾವವನ್ನು ಪ್ರತಿಪಾತಿಸದೆ ರಸ ಪ್ರತೀತಿಯನ್ನು ಸಾಧಿಸುತ್ತದೆ. ಹೀಗೆ ಇಲ್ಲಿ ಸಾಧಿಸಬೇಕಾಗಿರುವುದಕ್ಕಿಂತ ವಿರುದ್ಧವಾದದ್ದು ಸ್ಥಾಪನೆಯಾಗುವ ಪ್ರಯುಕ್ತ ಹೇತು ದುಷ್ಟವೆನಿಸಿದೆ.

ಯಚ್ಚ 'ಭ್ರಮ, ಧಾರ್ಮಿಕ' ಇತ್ಯಾದೌ ಪ್ರತೀಯಮಾನಂ ವಸ್ತು—

ಜಲಕೇಲಿತರಲಕರತಲಮುಕ್ತಪುನಃಪಿಹಿತರಾಧಿಕಾವದನಃ ।
ಜಗದವತು ಕೋಕಯೋರ್ವಿಘಟನಸಂಘಟನಕೌತುಕೀ ಕೃಷ್ಣಃ ॥

ಇತ್ಯಾದೌ ಚ ರೂಪಕಾಲಂಕಾರಾದಯೋಽನುಮೇಯಾ ಏವ. ತಥಾಹಿ ಅನುಮಾನಂ ನಾಮ ಪಕ್ಷಸತ್ತ್ವ-ಸಪಕ್ಷಸತ್ತ್ವ-ವಿಪಕ್ಷವ್ಯಾವೃತ್ತತ್ವವಿಶಿಷ್ಟಾಲ್ಲಿಂಗಾಲ್ಲಿಂಗಿನೋ ಜ್ಞಾನಮ್. ತತಶ್ಚ ವಾಚ್ಯಾದಸಂಬಂಧೋಽರ್ಥಸ್ತಾವನ್ನ ಪ್ರತೀಯತೇ, ಅನ್ಯಥಾತಿಪ್ರಸಂಗಃ ಸ್ಯಾದಿತಿ ಬೋಧ್ಯಬೋಧಕಯೋರರ್ಥಯೋಃ ಕಶ್ಚಿತ್ಸಂಬಂಧೋಽಸ್ತ್ಯೇವ. ತತಶ್ಚ ಬೋಧಕೋಽರ್ಥೋ ಲಿಂಗಮ್, ಬೋಧ್ಯಶ್ಚ ಲಿಂಗೀ; ಬೋಧಕಸ್ಯ ಚಾರ್ಥಸ್ಯ ಪಕ್ಷಸತ್ತ್ವಂ ನಿಬದ್ಧಮೇವ. ಸಪಕ್ಷಸತ್ತ್ವವಿಪಕ್ಷವ್ಯಾವೃತ್ತತ್ವೇ ಅನಿಬದ್ಧೇ ಅಪಿ ಸಾಮರ್ಥ್ಯಾದವಸೇಯೇ. ತಸ್ಮಾದತ್ರ ಯದ್ವಾಚ್ಯಾರ್ಥಾಲ್ಲಿಂಗರೂ

ಷಾತ್ ಲಿಂಗಿನೋ ವ್ಯಂಗ್ಯಾರ್ಥಸ್ಯ ಅವಗಮಸ್ತದನುಮಾನ ಏವ ಪರ್ಯವಸ್ಯತಿ" ಇತಿ ತನ್ನ, ತಥಾ ಹ್ಯತ್ರ, 'ಭ್ರಮ ಧಾರ್ಮಿಕ' ಇತ್ಯಾದೌ ಗೃಹೇ ಶ್ವನಿವೃತ್ತ್ಯಾ ವಿಹಿತಂ ಭ್ರಮಣಂ ಗೋದಾವರೀತೀರೇ ಸಿಂಹೋಪಲಬ್ಧೇರಭ್ರಮಣಮನುಮಾಪಯತೀತಿ ಯದ್ವಕ್ತವ್ಯಂ ತತ್ರ ಅನೈಕಾಂತಿಕೋ ಹೇತುಃ, ಭೀರೋರಪಿ ಗುರೋಃ ಪ್ರಭೋರ್ವಾ ನಿರ್ದೇಶೇನ ಪ್ರಿಯಾನುರಾಗೇಣ ವಾ ಗಮನಸ್ಯ ಸಂಭವಾತ್. ಪುಂಶ್ಚಲ್ಯಾ ವಚನಂ ಪ್ರಾಮಾಣಿಕಂ ನ ವೇತಿ ಸಂದಿಗ್ಧಾಸಿದ್ಧೇಶ್ಚ.

"ಜಲಕೇಲಿ" ಇತ್ಯತ್ರ "ಯ ಆತ್ಮದರ್ಶನಾದರ್ಶನಾಭ್ಯಾಂ ಚಕ್ರವಾಕವಿಘಟನ ಸಂಘಟನಕಾರೀ ಸ ಚಂದ್ರ ಏವ" ಇತ್ಯನುಮಿತಿರೇವೇಯಮಿತಿ ನ ವಾಚ್ಯಮ್ ಉಕ್ತಾ ಸಕಾಪೌ ಅನೈಕಾಂತಿಕತ್ವಾತ್. "ಏವಂವಿಧೋಽರ್ಥಃ ಏವಂವಿಧಾರ್ಥಬೋಧಕಃ ಏವಂವಿಧಾರ್ಥತ್ವಾತ್, ಯನ್ನೈವಂ ತನ್ನೈವಮ್" ಇತ್ಯನುಮಾನೇಽಪಿ ಆಭಾಸ ಮಾನಯೋಗಕ್ಷೇಮೋ ಹೇತುಃ, ಏವಂವಿಧಾರ್ಥತ್ವಾದಿತಿ ಹೇತುನಾ ಏವಂವಿಧಾನಿಷ್ಟಾ ರ್ಥಸಾಧನಸ್ಯಾಪ್ಯುಪಪತ್ತೇಃ. ತಥಾ ಯತ್ 'ದೃಷ್ಟಿಂ ಹೇ ಪ್ರತಿವೇಶಿನಿ ಕ್ಷಣಮಿಹಾ ಪ್ಯಸ್ಮದ್ಗೃಹೇ" ಇತ್ಯಾದೌ ನಲಗ್ರಂಥೀನಾಂ ತನುಲಿಖನಮ್, ಏಕಾಕಿತಯಾ ಚ ಸ್ರೋತೋಗಮನಂ, ತಸ್ಯಾಃ ಪರಕಾಮುಕೋಪಭೋಗಸ್ಯ ಲಿಂಗಿನೋ ಲಿಂಗಮಿತ್ಯು ಚ್ಯತೇ, ತಚ್ಚ ತತ್ಪ್ರೈವಾಭಿಹಿತೇನ ಸ್ವಕಾಂತಸ್ನೇಹೇ ನಾಪಿಸಂಭವತೀತಿ ಅನೈ ಕಾಂತಿಕೋ ಹೇತುಃ.

ವ್ಯಂಜನಾವಾದಿಗಳ ಮತದಲ್ಲಿ ವ್ಯಂಗ್ಯವೆನಿಸಿದ ವಸ್ತು ಅಲಂಕಾರಗಳನ್ನೂ ಸಹ ಅನುಮಾನದಿಂದಲೇ ತಿಳಿಯಬಹುದೆಂದು ವಾದಿಸುವ ವ್ಯಕ್ತಿವಿವೇಕಕಾರನ ಮತವನ್ನು ಈಗ ನಿರಾಕರಿಸುತ್ತಾನೆ 'ಭ್ರಮ ಧಾರ್ಮಿಕ' ಎಂಬಲ್ಲಿ ವಾಚ್ಯಾರ್ಥಕ್ಕಿಂತ ಬೇರೆ ಎಂದು ತಿಳಿಯ ಬರುವ 'ತಿರುಗಾಡಬೇಡ' ಎಂಬ ನಿಷೇಧರೂಪವಾದ ವಸ್ತುವೂ ಸಹ ಅನು ಮೇಯವೇ ಆಗುವುದೇ ಹೊರತು ವ್ಯಂಗ್ಯವೆನಿಸಲಾರದು. ಹಾಗೆಯೇ ಈ ಕೆಳಗಿನ ಶ್ಲೋಕದಲ್ಲಿ ಕಂಡುಬರುವ ಅಲಂಕಾರಧ್ವನಿಯೂ ಸಹ ಅನುಮೇಯವೇ ಆಗುತ್ತದೆ. "ಕೃಷ್ಣನು ರಾಧೆಯೊಡನೆ ಜಲಕ್ರೀಡೆಯನ್ನು ಆಡುತ್ತಿದ್ದಾಗ ನೀರನ್ನು ಎರಚಿದ್ದರಿಂದ ಚಂಚಲಗೊಂಡ ಕೈಗಳಿಂದ ಆಕೆಯ ಮುಖವನ್ನು ಮುಚ್ಚುತ್ತಲೂ ಬಿಡುತ್ತಲೂ ಮತ್ತೆ ಮತ್ತೆ ಮುಚ್ಚುತ್ತಲೂ ಹಾಗೆಯೇ ಅವನು ಚಕ್ರವಾಕದಂಪತಿಗಳಿಗೆ ವಿಯೋಗವನ್ನೂ ಸಂಯೋಗವನ್ನೂ ಉಂಟುಮಾಡುವುದರಲ್ಲಿ ಆಸಕ್ತನೂ ಆಗಿದ್ದನು. ಇಂತಹ ಕೃಷ್ಣನು ಜಗತ್ತನ್ನು ರಕ್ಷಿಸಲಿ.' ಚಕ್ರವಾಕಪಕ್ಷಿಗಳೆರಡಕ್ಕೂ ರಾತ್ರಿಯವೇಳೆ ವಿಯೋಗವೂ, ಹಗಲು ಸಂಯೋಗವೂ ಇರುವುದಾಗಿ ಪ್ರಸಿದ್ಧಿಯಿದೆ. ಇಲ್ಲಿ ರಾಧೆಯ ಮುಖವು ಚಂದ್ರನೇ ಆಗಿಪ್ಪುದರಿಂದ ಕೃಷ್ಣನು ರಾಧೆಯ ಮುಖಕ್ಕೆ ಮುಚ್ಚಿದ ತನ್ನ ಕೈಯನ್ನು ತೆಗೆದಾಗ ಚಂದ್ರೋದಯದಿಂದ ರಾತ್ರಿಯಾಗುತ್ತಿತ್ತು. ಆಗ ಚಕ್ರವಾಕಪಕ್ಷಿಗಳಿಗೆ ಪರಸ್ಪರ ವಿಯೋಗವುಂಟಾಗುತ್ತಿತ್ತು. ಮತ್ತೆ ಕೃಷ್ಣನು ಕೈಗಳಿಂದ ಅವಳ ಮುಖವನ್ನು ಮುಚ್ಚಿದಾಗ ಚಂದ್ರನಿಲ್ಲದ ಪ್ರಯುಕ್ತ ಹಗಲಾಗುತ್ತಿತ್ತು. ಹೀಗೆ ಮತ್ತೆ ಮತ್ತೆ

ಮುಖವನ್ನು ಮುಚ್ಚುತ್ತಲೂ ತೆಗೆಯುತ್ತಲೂ ಇದ್ದುದರಿಂದ ಚಕ್ರವಾಕಪಕ್ಷಿಗಳಿಗೆ ವಿಘಟನೆ ಮತ್ತು ಸಂಘಟನೆ ಇವೆರಡನ್ನೂ ಮಾಡುತ್ತಿದ್ದನು. ಇಲ್ಲಿ ರಾಧೆಯ ಮುಖವನ್ನು ಚಂದ್ರನೆಂದು ಆರೋಪಿಸಲಾಗಿದೆ. ಆದರೆ ಇದು ವಾಚ್ಯವೆನಿಸದೆ ವ್ಯಂಗ್ಯವಾಗಿ ತೋರುತ್ತದೆ. ಇಲ್ಲಿ ತೋರುವ ರೂಪಕಾಲಂಕಾರವೂ ಸಹ ಅನುಮಾನದಿಂದಲೇ ಸಿದ್ಧಿಸುತ್ತದೆ. "ರಾಧೆಯ ಮುಖವು ದರ್ಶನದಿಂದ ಚಕ್ರವಾಕದಂಪತಿಗಳಿಗೆ ವಿಯೋಗವನ್ನು ಉಂಟುಮಾಡುವುದರಿಂದಲೂ ಅದರ್ಶನದಿಂದ ಸಂಯೋಗವನ್ನು ಉಂಟುಮಾಡುವುದರಿಂದಲೂ ಚಂದ್ರನೆನಿಸಿದೆ" ಈ ಬಗೆಯ ಅನುಮಾನದಿಂದಲೇ ಮುಖದಲ್ಲಿ ಚಂದ್ರನೆಂಬ ಆರೋಪವನ್ನು ಹೇಳಬಹುದು. ಹೀಗೆ ವಸ್ತು ಅಲಂಕಾರ ರಸಭಾವಗಳು ಇವೆಲ್ಲವನ್ನು ಅನುಮಾನಪ್ರಮಾಣದಿಂದಲೇ ಸಾಧಿಸಬಹುದಾದ್ದರಿಂದ ಅನುಮಾನದ ಸ್ವರೂಪವನ್ನು ಈಗ ತಿಳಿಸುತ್ತಾನೆ. ಇದರಲ್ಲಿ ಮೂರು ಅಂಶಗಳನ್ನು ಗಮನಿಸಬೇಕು. ಸಾಧಿಸಬೇಕಾದ ಅಂಶವನ್ನು ಸಾಧಿಸಲಿಕ್ಕೆ ಅನುಕೂಲವಾದ ಆಶ್ರಯವೇ ಪಕ್ಷ. ಅದರಲ್ಲಿ ಹೇತುವಿರಬೇಕು. ಸಾಧ್ಯಾಂಶವುಳ್ಳದ್ದೆಂದು ನಿಶ್ಚಿತವಾದ ಸಪಕ್ಷದಲ್ಲೂ ಹೇತುವಿರಬೇಕು. ಸಾಧಿಸಬೇಕಾದ ಅಂಶಕ್ಕೆ ಸಂಬಂಧಿಸದೇ ಇರುವ ಉದಾಹರಣವೇ ವಿಪಕ್ಷವೆನಿಸುವುದು. ಅದರಲ್ಲಿ ಹೇತುವಿರಬಾರದು. ಈ ಮೂರು ಗುಣಗಳಿರುವ ಲಿಂಗವೇ ಸದ್ಧೇತುವೆನಿಸುತ್ತದೆ. ಇದರಿಂದ ಸಾಧ್ಯಾಂಶವನ್ನು ಸಾಧಿಸುವುದೇ ಅನುಮಾನವೆನಿಸುವುದು. ಇದರಿಂದ ಬರುವ ಜ್ಞಾನವೇ ಅನುಮಿತಿ ಎನಿಸುವುದು. ಪರ್ವತೋ ವಹ್ನಿಮಾನ್ ಧೂಮಾತ್' ಎಂಬಲ್ಲಿ ಧೂಮವೆಂಬ ಹೇತುವು ಪರ್ವತದಲ್ಲಿ ಇರುವುದಾಗಿ ಮೊದಲು ಕಂಡುಬಂದಿರುವುದರಿಂದ ಪಕ್ಷವೃತ್ತಿ ಎನಿಸಿದೆ. ಅಲ್ಲಿಗೆ ಹೇತುವಿನಲ್ಲಿ ಪಕ್ಷಸತ್ತ್ವವು ಬಂದಿತು. ಅಡಿಗೆ ಮನೆಯಲ್ಲಿ ಹೊಗೆಇರುವುದರಿಂದ ಬೆಂಕಿಯೂ ಇರುವುದಾಗಿ ಕಂಡುಬಂದದ್ದರಿಂದ ಸಪಕ್ಷವೆನಿಸಿದ ಅಡಿಗೆಮನೆಯಲ್ಲೂ ಹೇತುವಿರುವ ಪ್ರಯುಕ್ತ ಹೇತುವಿಗೆ ಸಪಕ್ಷಸತ್ತ್ವವೂ ಬಂದಿತು. ಮಡುವಿನಲ್ಲಿ ಹೊಗೆಯಿಲ್ಲದ್ದರಿಂದ ಬೆಂಕಿಯೂ ಇಲ್ಲವಾದ ಪ್ರಯುಕ್ತ ವಿಪಕ್ಷಾಸತ್ತ್ವವೂ ಬಂದಿತು. ಆದ್ದರಿಂದ ಧೂಮವೆಂಬ ಸದ್ಧೇತುವಿನಿಂದ ಪರ್ವತದಲ್ಲಿ ಬೆಂಕಿ ಇದೆ ಎಂದು ಊಹಿಸುತ್ತೇವೆ. ಹೀಗೆ ಹೊಗೆಯಿಂದ ಬೆಂಕಿಯನ್ನು ಊಹಿಸಬೇಕಾದರೆ ಅವೆರಡೂ ಒಂದೆಡೆ ಇರುವುದನ್ನೂ ಮೊದಲು ನಾವು ಕಂಡಿರಬೇಕು. ಹೀಗೆ ವ್ಯಂಗ್ಯಾರ್ಥವನ್ನು ನಾವು ಊಹಿಸಬೇಕಾದರೆ ಅದು ವಾಚ್ಯಾರ್ಥಕ್ಕೆ ಮೊದಲು ಸಂಬಂಧಿಸಿರಬೇಕು. ಸಂಬಂಧಿಸದೇ ಇರುವ ವ್ಯಂಗ್ಯವು ತೋರುವುದೇ ಇಲ್ಲ. ಹಾಗೆ ತೋರುವುದಾದರೆ ಯಾವುದರಿಂದ ಯಾವುದಾದರೂ ತೋರಿ ಅತಿಪ್ರಸಂಗವುಂಟಾದೀತು. ಆದ್ದರಿಂದ ತಿಳಿಸುವ ಮತ್ತು ತಿಳಿದುಬರುವ ಎರಡು ಅರ್ಥಗಳಿಗೂ ಒಂದು ಸಂಬಂಧವಿರಬೇಕು. ಹೀಗೆ ತಿಳಿಸುವ ಅರ್ಥವೇ ಹೇತುವೆನಿಸಿ ತಿಳಿದುಬರುವ ಅರ್ಥವೇ ಸಾಧ್ಯವೆನಿಸುವ ಪ್ರಯುಕ್ತ ತಿಳಿಸುವ ಅರ್ಥವು ಪಕ್ಷದಲ್ಲಿ ಇರುವುದೆಂಬ ನಿಶ್ಚಯವು ನಮಗೆ ಇರಬೇಕು. ಹಾಗೆಯೇ ಅದು ಸಪಕ್ಷದಲ್ಲಿ ಇದ್ದು ವಿಪಕ್ಷದಲ್ಲಿ ಇಲ್ಲದಂತಾಗಬೇಕು. ಇಲ್ಲಿ ಅನುಮೇಯವಾದ ಅರ್ಥವೇ ಸಾಧ್ಯ. ಅನು

ಮಾಪಕವಾದ (ಬೋಧಿಸುವ) ಅರ್ಥವೇ ಹೇತು (ಲಿಂಗ). ಇದೇ ವಾಚ್ಯಾರ್ಥ. ಇದ್ ಪಕ್ಷವೆನಿಸಿದ ರಾಧೆಯ ಮುಖದಲ್ಲಿ ಸಮವಾಯಸಂಬಂಧದಿಂದ ಸೇರಿರಬೇಕು. ಹಾಗೆಯೇ ಪಕ್ಷವೆನಿಸಿದ ಮುಖಕ್ಕೆ ಸದೃಶವಾದ ಬೇರೊಂದು ವಸ್ತುವಿನಲ್ಲೂ ಹೇತುವೆನಿಸಿದ ವಾಚ್ಯಾರ್ಥವು ಸಂಬಂಧಿಸಿರಬೇಕು. ಅದಕ್ಕೆ ವಿರುದ್ಧವಾದೆಡೆಯಲ್ಲಿ ವಾಚ್ಯಾರ್ಥವು ಸಂಬಂಧಿಸಿರಬಾರದು. ಇದು ರಾಧೆಯ ಮುಖದಲ್ಲಿ ಹೊಂದಿಕೆಯಾಗುವುದರಿಂದ ವಾಚ್ಯಾರ್ಥದಿಂದ ವ್ಯಂಗ್ಯಾರ್ಥವನ್ನು ಅನುಮಾನದಿಂದಲೇ ತಿಳಿಯಬಹುದು. ಮುಖದಲ್ಲಿ ಚಂದ್ರತ್ವಾರೋಪವು ಅನುಮೇಯವೇ ಹೊರತು ವ್ಯಂಗ್ಯವೆನಿಸಲಾರದು, ಹಾಗೆ ಮಹಿಮಭಟ್ಟನು ವಾದಿಸುತ್ತಾನೆ.

ಈಗ ಅವನ ವಾದವನ್ನು ವಿಮರ್ಶಿಸಿ ದೂಷಿಸುತ್ತಾನೆ. 'ಭ್ರಮ ಧಾರ್ಮಿಕ' ಎಂಬಲ್ಲಿ ಧಾರ್ಮಿಕನು ಮನೆಯಲ್ಲಿ ನಾಯಿಗೆ ಹೆದರುತ್ತಿದ್ದುದರಿಂದ ಆ ನಾಯಿಯನ್ನು ಗೋದಾವರೀತೀರದಲ್ಲಿ ವಾಸಮಾಡುವ ಸಿಂಹವು ತಿಂದು ಹಾಕಿತು. 'ಹಾಗೆ ನಾಯಿ ತೊಲಗಿದ್ದರಿಂದ ನೀನು ಸ್ವಸ್ಥವಾಗಿ ತಿರುಗಾಡಬಹುದು.' ಎಂಬುದೇ ಇಲ್ಲಿ ಹೇತು, (ವಾಚ್ಯಾರ್ಥ) 'ಗೋದಾವರೀತೀರದಲ್ಲಿ ಸಿಂಹವಿರುವುದರಿಂದ ನೀನು ಅಲ್ಲಿ ತಿರುಗಾಡಬಾರದು' ಎಂಬ ಅರ್ಥವನ್ನು ಇದು ಊಹಿಸಿಕೊಡುತ್ತದೆ. "ಮನೆಯಲ್ಲಿದ್ದ ನಾಯಿಗೇ ನೀನು ಹೆದರುತ್ತಿದ್ದೆ. ಈಗ ಆ ನಾಯಿಯನ್ನು ಗೋದಾವರೀತೀರದಲ್ಲಿರುವ ಸಿಂಹವು ತಿಂದು ಹಾಕಿತು. ಇನ್ನು ಗೋದಾವರೀತೀರದಲ್ಲಿ ನೀನು ಹೇಗೆ ತಿರುಗಾಡಲಿಕ್ಕೆ ಆದೀತು! ಅಲ್ಲಿ ನೀನು ತಿರುಗಾಡಬೇಡ'' ಎಂದು ಸ್ವೈರಿಣಿಸ್ತ್ರೀಯೊಬ್ಬಳು ಕಾಮುಕನ ಬರುವಿಕೆಗಾಗಿ ಕಾಯುತ್ತಿದ್ದು ಅಲ್ಲಿ ತಿರುಗಾಡುತ್ತಿದ್ದ ಧಾರ್ಮಿಕನೊಬ್ಬನಿಗೆ ಹೇಳಿದಳು. ನಾಯಿಗೆ ಹೆದರುತ್ತಿದ್ದ ಧಾರ್ಮಿಕನು ಅದು ಸತ್ತದ್ದರಿಂದ ಮನೆಯ ಹತ್ತಿರ ಮಾತ್ರವೇ ತಿರುಗಾಡಬಲ್ಲನು' ಎಂಬ ಹೇತುವಿಗೆ ಇಲ್ಲಿ ವ್ಯಭಿಚಾರದೋಷವು ಬರುವುದರಿಂದ ಇದು ಅನೈಕಾಂತಿಕ ಹೇತ್ವಾಭಾಸವೆನಿಸುತ್ತದೆ. ಹೇತುವು ಏಕಾಂತವಾಗಿ ಪಕ್ಷದಲ್ಲಿಯೇ ಇರಬೇಕು. ಅದು ಭಯಸ್ಥನಾದ ಧಾರ್ಮಿಕನಲ್ಲಿ ಇರುವಂತೆ ಬೇರೆ ಕಡೆಗಳಲ್ಲಿ ಅಂದರೆ ವಿಪಕ್ಷದಲ್ಲಿ ಇರಬಾರದು. ಹೀಗೆ ಹೇತು ಅಸಾಧಾರಣವೆನಿಸಿ ಪಕ್ಷಸಪಕ್ಷಗಳಲ್ಲಿ ಮಾತ್ರವೇ ಇದ್ದು ವಿಪಕ್ಷದಲ್ಲಿ ಇರಬಾರದು. ಇಲ್ಲಿ ಇದು ಸಾಧಾರಣವೆನಿಸಿದ ಪ್ರಯುಕ್ತ ಅಭಾಸವೆನಿಸಿದೆ. ಧಾರ್ಮಿಕನು ನಾಯಿಗೆ ಹೆದವವನಾದರೂ ಗುರುವಿನ ಅಥವಾ ಪ್ರಭುವಿನ ಅಪ್ಪಣೆಯಂತೆಯೋ ಅಥವಾ ಪ್ರಿಯೆಯ ಮೇಲಿನ ಅನುರಾಗದಿಂದಲೋ ಗೋದಾವರೀನದಿಯ ದಂಡೆಯಲ್ಲಿ ತಿರುಗಾಡಬಹುದು. ಹಾಗೆ ತಿರುಗಾಡುವ ಸಂಭವವಿದೆ. ಗುರುವಿನ ಆಜ್ಞೆಯಿಂದ ಭಯಸ್ಥನಿಗೂ ಭಯವು ತೊಲಗುಗಬಹುದು. ಇಲ್ಲಿ ಗೋದಾವರೀನದಿಯ ದಂಡೆಯಲ್ಲಿ ಧಾರ್ಮಿಕನು ತಿರುಗಾಡುಬಾರದು ಎಂಬುದನ್ನು ಸಾಧಿಸುವುದರ ಬದಲು ಅಲ್ಲಿ ಅವನು ತಿರುಗಾಡಬಲ್ಲನು ಎಂಬುದನ್ನು ಸಾಧಿಸಿದಂತಾಗುವ ಪ್ರಯುಕ್ತ ವಿನಾಯಕನನ್ನು ಮಾಡಲಿಕ್ಕೆ ಹೋಗಿ ಕೋತಿಯನ್ನು ಮಾಡಿದಂತಾಯಿತು. ಅಲ್ಲಿ "ಅವನು ತಿರುಗಾಡಲಾರನು" ಎಂಬುದನ್ನು

ಸಾಧಿಸುವ ಬದಲು ಅವನು ಅಲ್ಲಿ ತಿರುಗಾಡಬಲ್ಲನು ಎಂಬುದನ್ನು ಸಾಧಿಸಿದಂತಾಯಿತು. ಹೀಗೆ ಹೇತ್ವಾಭಾಸದೋಷವಿರುವ ಪ್ರಯುಕ್ತ ಅನುಮಾನವು ಇಲ್ಲಿ ಹೊಂದುವುದಿಲ್ಲ. ಧಾರ್ಮಿಕನು ಮನೆಯ ಹತ್ತಿರ ತಿರುಗಾಡುವಾಗ ಗೋದಾವರೀನದಿಯ ದಂಡೆಯಲ್ಲಿ ತಿರುಗಾಡುವುದಿಲ್ಲ. ಆದ್ದರಿಂದ ಬೇರೆಕಾಲದಲ್ಲಿ ಗುರುವಿನ ಆಜ್ಞೆಯಿಂದ ಅವನು ಅಲ್ಲಿ ತಿರುಗಾಡಿದರೂ ಆಗ ಮನೆಯ ಹತ್ತಿರ ತಿರುಗಾಡವೇ ಇರುವುದರಿಂದ ಹೇತ್ವಾಭಾಸವು ಹೇಗೆ ಬರುತ್ತದೆ?" ಇಲ್ಲಿ "ಭ್ರಮ ಧಾರ್ಮಿಕ" ಎಂಬ ಮಾತನ್ನು ವ್ಯಭಿಚಾರಿಣಿಯು ಹೇಳುತ್ತಿದ್ದಾಳೆ. ಈ ಮಾತು ಸತ್ಯವೋ ಅಲ್ಲವೊ ಎಂಬ ಬಗ್ಗೆ ಸಂದೇಹವಿರುವುದ ರಿಂದ ಇಂತಹ ಸಂದೇಹವುಳ್ಳ ಧಾರ್ಮಿಕನೇ ಪಕ್ಷವೆನಿಸಿದ್ದು ಮನೆಯ ಹತ್ತಿರವೇ ತಿರುಗಾಡಬೇಕು.' ಎಂಬ ಹೇತುವೇ ಅವನಲ್ಲಿ ಹೊಂದದೆ ಹೋಗುತ್ತದೆ. ಆಕೆಯ ಮಾತು ಸುಳ್ಳೆಂಬ ಜ್ಞಾನವು ಅವನಿಗೆ ಇರುವುದರಿಂದ ಹಿಂದಿನಂತೆ ಇಂದೂ ಸಹ ಗೋದಾವರೀನದಿಯ ತೀರದಲ್ಲಿ ಅವನಿಗೆ ತಿರುಗಾಡುವ ಸಂಭವವು ಇದ್ದೇ ಇದೆ. ಹೀಗೆ 'ಮಡುವಿನಲ್ಲಿ ಹೊಗೆ ಇರುವುದರಿಂದ ಅದು ಒಂದು ವಸ್ತುವೆನಿಸಿದೆ' ಎಂಬಲ್ಲಿರುವಂತೆ ಇಲ್ಲಿ ಹೇತುವಿನ ಮೂಲಕ್ಕೇ ಕೊಡಲಿಪೆಟ್ಟು ತಗಲಿ ಅದರಲ್ಲಿ ಸ್ವರೂಪಾಸಿದ್ಧಿ ಎಂಬ ಹೇತ್ವಾಭಾಸವು ಸಂಭವಿಸುತ್ತದೆ. ಆದ್ದರಿಂದ 'ಭ್ರಮ ಧಾರ್ಮಿಕ' ಎಂಬ ಶ್ಲೋಕ ದಲ್ಲಿ ನಾಯಿ ತೊಲಗಿದ್ದಕ್ಕಾಗಿ ಮನೆಯಹತ್ತಿರ ತಿರುಗಾಡಿದನೆಂಬ ಕಾರಣದಿಂದ ಆ ನಾಯಿಯನ್ನು ಕೊಂದ ಸಿಂಹವಿರುವ ಪ್ರಯುಕ್ತ ಗೋದಾವರೀನದಿಯ ದಂಡೆಯಲ್ಲಿ ತಿರುಗಾಡಬೇಡ ಎಂಬ ನಿಷೇಧರೂಪವಾದ ಅರ್ಥವು ಅನುಮಾನದಿಂದ ಸಿದ್ಧಿಸುವುದೆಂಬ ವಾದವನ್ನು ಇಲ್ಲಿ ನಿರಾಕರಿಸಲಾಗಿದೆ.

ಹೀಗೆ ವಸ್ತುವೆನಿಸಿದ ಅರ್ಥವು ಅನುಮೇಯವೆಂಬುದನ್ನು ನಿರಾಕರಿಸಿ ಅಲಂಕಾರ ವೆನಿಸಿದ ಅರ್ಥವು ಅನುಮೇಯವೆಂಬುದನ್ನು ಈಗ ನಿರಾಕರಿಸುತ್ತಾನೆ. 'ಜಲಕೇಲಿ' ಎಂಬ ಶ್ಲೋಕದಲ್ಲಿ "ಮುಖವು ಕಾಣಿಸಿದ್ದರಿಂದ ಚಕ್ರವಾಕಗಳಿಗೆ ವಿಯೋಗವೂ ಅದು ಕಾಣದೇ ಇದ್ದುದರಿಂದ ಅವಕ್ಕೆ ಸಂಯೋಗವೂ ಉಂಟಾದ್ದರಿಂದ ಮುಖವು ಚಂದ್ರನೇ" ಎಂಬ ಅನುಮಾನದಿಂದಲೇ ಮುಖದಲ್ಲಿ ಚಂದ್ರತ್ವಾರೋಪವು ಸಿದ್ಧಿಸಿ ಅನುಮಿತಿ ಎನಿಸಿ ದೆಯೇ ಹೊರತು ವ್ಯಂಜನಾವೃತ್ತಿಯಿಂದ ತೋರಿ ಅದು ವ್ಯಂಗ್ಯವೆನಿಸಲಾರದು ಎಂದು ಹೇಳಿದ್ದು ಹೊಂದುವುದಿಲ್ಲ. ಉತ್ತ್ರಾಸಕನಲ್ಲಿಯೂ ಇವು ಸಂಭವಿಸುವ ಪ್ರಯುಕ್ತ ವಿಪಕ್ಷವೃತ್ತಿತ್ವವೆಂಬ ದೋಷವು ಸಂಭವಿಸುತ್ತದೆ. ಒಬ್ಬನು ಕೈಯಲ್ಲಿ ದಂಡವನ್ನು ಹಿಡಿದುಕೊಂಡು ಬೆದರಿಸಿದರೂ ಸಹ ಚಕ್ರವಾಕಪಕ್ಷಿಗಳಿಗೆ ವಿಯೋಗವುಂಟಾತ್ತದೆ. ಒಬ್ಬನು ಕೊಂಚ ಆಹಾರವನ್ನು ಕೊಟ್ಟು ಆ ಪಕ್ಷಿಗಳನ್ನು ಕೂಡಿಸಬಹುದು. ಇದರಿಂದ ಮುಖದಲ್ಲಿ ಚಂದ್ರನೆಂಬುದನ್ನು ಆರೋಪಿಸುವಂತೆಯೇ ಭಯವನ್ನು ಹುಟ್ಟಿಸುವವನಲ್ಲೂ ಆಹಾರವನ್ನು ಕೊಡುವವನಲ್ಲೂ ಅದೇ ಹೇತುವು ಸಂಭವಿಸುವುದರಿಂದ ಚಂದ್ರನೆಂಬು ದನ್ನು ಆರೋಪಿಸಬೇಕಾಗುತ್ತದೆ. ಮುಖವು ಹೇಗೆ ಚಂದ್ರನೋ ಹಾಗೆಯೇ ಭಯದಾ ತೃವೂ ಅನ್ನದಾತೃವೂ ಚಂದ್ರನೇ ಆಗಬೇಕಾದೀತು. ಇವರಲ್ಲೂ ಆ ಪಕ್ಷಿಗಳ ವಿಘಟನ

ಸಂಘಟನ ಮಾಡುವ ಯೋಗ್ಯತೆ ಇರುವುದರಿಂದ ಸಾಧ್ಯಾಂಶವು ಇಲ್ಲಿಯೂ ಅನ್ವಯಿಸ ಬೇಕಾಗುತ್ತದೆ. ಹೀಗೆ ಸಾಧಾರಣವೆಂಬ ಅನೈಕಾಂತಿಕಹೇತ್ವಭಾಸವಿರುವ ಪ್ರಯುಕ್ತ ಮುಖವಲ್ಲಿ ಚಂದ್ರನೆಂಬುದನ್ನು ಅನುಮಾನವು ಆರೋಪಿಸಲಾರದು. "ಇಂತಹ ಅರ್ಥದಲ್ಲಿ ಇಂತಹ ಅರ್ಥವಿರುವುದರಿಂದ ಅದು ಇಂತಹ ಅರ್ಥವನ್ನು ಬೋಧಿಸುತ್ತದೆ ಎಲ್ಲಿ ಯಾವ ಅರ್ಥವು ಇರುವುದಿಲ್ಲವೋ ಅಲ್ಲಿ ಅದು ಆ ಅರ್ಥವನ್ನು ಬೋಧಿಸಲಾರದು." ಹೀಗೆ ಅನುಮಾನವನ್ನು ತಿಳಿಸಿದರೆ, ಹೇತುವಿಗೆ ವ್ಯಭಿಚಾರದೋಷವು ಸಂಭವಿಸುವು ದಿಲ್ಲವೆಂದು ಹೇಳಿದರೆ ಅದೂ ಕೂಡ ಹೊಂದುವುದಿಲ್ಲವೆಂದು ತಿಳಿಸುತ್ತಾನೆ. ಈ ಬಗೆಯ ಅರ್ಥವೆಂದರೆ 'ಮನೆಯ ಹತ್ತಿರ ತಿರುಗಾಡು' ಎಂಬುದು. ತಿಳಿಸಬೇಕಾಗಿರುವ ಅರ್ಥ ವೆಂದರೆ 'ಗೋದಾವರೀನದಿಯ ತೀರದಲ್ಲಿ ತಿರುಗಾಡಬೇಡ'ಎಂಬುದು ಗೋದಾವರೀಯ ತೀರದಲ್ಲಿ ಸಿಂಹವಿರುವುದರಿಂದ ಮನೆಯ ಹತ್ತಿರವೇ ತಿರುಗಾಡು ಎಂಬುದೇ ಹೇತುವೆನಿ ಸಿದ ಅರ್ಥ. ಹೀಗೆ ಹೇಳುವುದರಿಂದ ಹೇತುವಿಗೆ ಯಾವ ಕಡೆಯಿಂದಲೂ ವ್ಯಭಿಚಾರ ದೋಷವು ಬರುವುದಿಲ್ಲವೆಂದು ವ್ಯಕ್ತಿವಿವೇಕಕಾರನು ಹೇಳುತ್ತಾನೆ. ಆದರೆ ಈ ಹೇತುವು ಪಕ್ಷದಲ್ಲಿ ಇಲ್ಲದಿರುವುದರಿಂದ ಅದಕ್ಕೆ ಅನ್ವಯೋದಾಹರಣವು ಸಂಭವಿಸದೇ ಇರುವ ಪ್ರಯುಕ್ತ ವ್ಯತಿರೇಕೋದಾಹರಣವನ್ನು ಇಲ್ಲಿ ತಿಳಿಸಿದ್ದಾನೆ. ಆದರೂ ಹೇತುವು ದುಷ್ಟ ಹೇತುವಿಗೆ ಸಮಾನವಾದ ಯೋಗಕ್ಷೇಮವುಳ್ಳದ್ದಾಗಿದೆ. ಇಲ್ಲಿ ಹೇಳಿದಂತೆ ಇಂತಹ ಅರ್ಥ ವಿರುವುದರಿಂದ' ಎಂಬ ಹೇತುವು ಇಲ್ಲಿ ತಿಳಿಸದೆ ಇರುವ ಬೇರೊಂದು ಅರ್ಥವನ್ನು ಸಾಧಿಸುವುದರಿಂದ ಆಭಾಸವೆನಿಸುತ್ತದೆ. ಇಲ್ಲಿ ಅನಿಷ್ಟವೆನಿಸಿದ ಗಡಿಗೆ ಬಟ್ಟೆ ಮೊದಲಾದವನ್ನೂ ಸಹ ಈ ಹೇತುವು ಸಾಧಿಸಬಹುದಾದ್ದರಿಂದ ಏವಂವಿಧ' ಎಂಬ ಶಬ್ದವು ಒಂದು ನಿರ್ದಿಷ್ಟವಾದ ಅರ್ಥವನ್ನು ತಿಳಿಸದೇ ಇರುವ ಪ್ರಯುಕ್ತ ಇಲ್ಲಿ ಏವಂವಿಧ ಎಂಬುದಕ್ಕೆ ಘಟ ಪಟ ಎಂಬುದೂ ಅರ್ಥವಾಗಬಹುದು. ಆದ್ದರಿಂದ 'ಇಂತಹ ಅರ್ಥವನ್ನು ಬೋಧಿಸುತ್ತದೆ, ಎಂಬಲ್ಲಿ ಗಡಿಗೆ, ಮೊದಲಾದ ಅರ್ಥವನ್ನು ಬೋಧಿಸಬಲ್ಲದೆಂದು ಹೇಳಲಿಕ್ಕೂ ಬರುತ್ತದೆ. ನೀವು ಹೇಳಿದ ಹೇತು ದುಷ್ಟವೆನಿಸುವ ಪ್ರಯುಕ್ತ ಆ ಶ್ಲೋಕದಲ್ಲಿ ಅಲಂಕಾರವು ಅನುಮೇಯವೆಂಬುದನ್ನು ಒಪ್ಪಲಿಕ್ಕಾಗುವು ದಿಲ್ಲ. ಹಾಗೆಯೇ "ದೃಷ್ಟಿಂ ಹೇ ಪ್ರತಿವೇಶಿನಿ" ಎಂಬ ಶ್ಲೋಕದಲ್ಲಿ ನಳ ಎನಿಸಿದ ಜೊಂಡುಹುಲ್ಲು ಮೈಯಲ್ಲಿ ಗೀಚುವುದು, ಒಬ್ಬಳೇ ನದಿಯ ಬಳಿಗೆ ಹೋಗುವುದು ಇವೆಲ್ಲವೂ ಆಕೆಯು ಕಾಮುಕನೊಬ್ಬನೊಡನೆ ಭೋಗಿಸಿದಳೆಂಬುವನ್ನು ಸಾಧಸಲು ಹೇತು ವೆನಿಸುತ್ತವೆ ಎಂದು ಹೇಳುವುದೂ ಸಹ ಹೊಂದುವುದಿಲ್ಲ. ಇಲ್ಲಿ ಹೇಳಿದ ಕಾರಣಗಳು ಕಾಮುಕನೊಡನೆ ಭೋಗಿಸಲು ಸಿದ್ಧಳಾದ ನಾಯಿಕೆ ಎಂಬ ಪಕ್ಷದಲ್ಲಿ ಇರುವಂತೆಯೇ ತನ್ನ ಪತಿಯಮೇಲಿನ ಪ್ರೇಮದಿಂದ ನೀರುತರಲಿಕ್ಕಾಗಿ ಬಾವಿಯ ಬಳಿಗೆ ಹೋಗಿ ರುವ ನಾಯಿಕೆಯಲ್ಲಿಯೂ ಅನ್ವಯಿಸುವುದರಿಂದ ಹೇತುವು ಪಕ್ಷವಿಪಕ್ಷಗಳೆರಡರಲ್ಲೂ ಅನ್ವಯಿಸುವುದರಿಂದ ಅಸಾಧಾರಣವೆನಿಸದೆ ಇರುವ ಪ್ರಯುಕ್ತ ಸಾಧಾರಣವೆನಿಸಿತು. ಆ ನಾಯಿಕೆಯು ಪರಪುರುಷನೊಡನೆ ಭೋಗಿಸಲಿಕ್ಕಾಗಿ ನದಿಯಬಳಿಗೆ ಹೋಗಿ

ಹುಲ್ಲಿನಿಂದ ಗೀಚಿಸಿಕೊಳ್ಳುವಂತೆಯೇ ತನ್ನ ಪತಿಯಮೇಲಿನ ಪ್ರೇಮದಿಂದಲೂ ಹೋಗಿ ಹಾಗೆ ಗೀಚಿಸಿಕೊಂಡಿರಬಹುದು. ಆಕೆಗೆ ಪತಿಯಮೇಲೆ ಪ್ರೇಮವಿದೆ ಎಂಬು ದನ್ನೂ ಶ್ಲೋಕದಲ್ಲಿಯೇ ತಿಳಿಸಿದೆ. ಸಾಧ್ಯಾಂಶವನ್ನೊಳಗೊಂಡ ಪಕ್ಷದಲ್ಲಿ ಮಾತ್ರವೇ ಇರಬೇಕಾದ ಹೇತು ಅದರ ಅಭಾವವನ್ನೊಳಗೊಂಡ ವಿಪಕ್ಷದಲ್ಲಿಯೂ ಇರುವುದರಿಂದ ಇದು ದುಷ್ಟಹೇತುವೆನಿಸಿತು. ಆದ್ದರಿಂದ ವ್ಯಂಗ್ಯವನ್ನು ಇಲ್ಲಿ ತೋರುವ ಅನುಮೇಯ ವೆಂದು ಒಪ್ಪಲಾಗುವುದಿಲ್ಲ.

ಯಚ್ಚ 'ನಿಶ್ಶೇಷಚ್ಯುತಚಂದನಮ್' ಇತ್ಯಾದೌ ದೂತ್ಯಾಃ ತತ್ಕಾಮುಕೋಪ ಭೋಗೋಽನುಮೀಯತೇ, ತತ್ಕಿಂ ಪ್ರತಿಪಾದ್ಯಯಾ ದೂತ್ಯಾ? ತತ್ಕಾಲಸನ್ನಿಹಿತೈ ರ್ವಾನ್ಯೈರ್ವಾ? ತತ್ಕಾವ್ಯಾರ್ಥಭಾವನಯಾ ವಾ ಸಹೃದಯೈಃ? ಆದ್ಯಯೋರ್ನ ವಿವಾದಃ ತೃತೀಯೇ ತು ತಥಾವಿಧಾಭಿಪ್ರಾಯವಿರಹಸ್ಥಲೇ ವ್ಯಭಿಚಾರಃ. ನನು ವಕ್ತ್ರಾ ದ್ಯವಸ್ಥಾಸಹಕೃತತ್ವೇನ ವಿಶೇಷ್ಯೋ ಹೇತುರಿತಿ ನ ವಾಚ್ಯಮ್. ಏವಂವಿಧವ್ಯಾಪ್ತ್ಯ ನುಸಂಧಾನಸ್ಯ ಅಭಾವಾತ್. ಕಿಂಚ ಏವಂವಿಧಾನಾಂ ಕಾವ್ಯಾನಾಂ ಕವಿಪ್ರತಿಭಾಮಾತ್ರ ಜನ್ಮನಾಂ ಪ್ರಾಮಾಣ್ಯಾನಾವಶ್ಯಕತ್ವೇನ ಸಂದಿಗ್ಧಾಸಿದ್ಧತ್ವಂ ಹೇತೋಃ. ವ್ಯಕ್ತಿವಾ ದಿನಾ ತೇನ ಚ ಅಧಮಪದಸಹಾಯಾನಾಮೇವೈಷಾಂ ಪದಾರ್ಥಾನಾಂ ವ್ಯಂಜಕತ್ವ ಮುಕ್ತಮ್, ತೇನ ಚ ತತ್ಕಾಂತಸ್ಯ ಅಧಮತ್ವಂ ಪ್ರಾಮಾಣಿಕಂ ನ ವೇತಿ ಕಥಮನು ಮಾನಮ್.

ಏತೇನ ಅರ್ಥಾಪತ್ತಿವೇದ್ಯತ್ವಮಪಿ ವ್ಯಂಗ್ಯಾನಾಮಪಾಸ್ತಮ್, ಅರ್ಥಾಪ ತ್ತೇರಪಿ ಪೂರ್ವಸಿದ್ಧವ್ಯಾಪ್ತಿಚ್ಛಾಯಾಂ ಉಪಜೀವ್ಯೈವ ಪ್ರವೃತ್ತೇಃ. ಯಥಾ 'ಯೋ ಜೀವತಿ ಸಃ ಕುತ್ರಾಪ್ಯವತಿಷ್ಠತೇ, ಜೀವತಿ ಚಾತ್ರ ಗೋಷ್ಠ್ಯಾಮವಿದ್ಯಮಾನ ಶ್ಚೈತ್ರಃ' ಇತ್ಯಾದಿ.

ಕಿಂಚ ವಸ್ತ್ರವಿಕ್ರಯಾದೌ ತರ್ಜನೀತೋಲನೇನ ದಶಶಸಂಖ್ಯಾದಿವತ್ ಸೂಚನ ಬುದ್ಧಿವೇದ್ಯೋಽಪ್ಯಯಂ ನ ಭವತಿ. ಸೂಚನಬುದ್ಧೇರಪಿ ಸಂಕೇತಾದಿಲೌಕಿಕಪ್ರಮಾ ಣಸಾಪೇಕ್ಷತ್ವೇನ ಅನುಮಾನಪ್ರಕಾರತಾಂಗೀಕಾರಾತ್.

ಯಚ್ಚ 'ಸಂಸ್ಕಾರಜನ್ಯತ್ವಾತ್ ರಸಾದಿಬುದ್ಧಿಃ ಸ್ಮೃತಿಃ' ಇತಿ ಕೇಚಿತ್. ತತ್ರಾಪಿ ಪ್ರತ್ಯಭಿಜ್ಞಾಯಾಂ ಅನೈಕಾಂತಿಕತಯಾ ಹೇತೋರಾಭಾಸತಾ. "ದುರ್ಗಾ ಲಂಘಿತ" ಇತ್ಯಾದೌ ಚ 'ದ್ವಿತೀಯಾರ್ಥೋ ನಾಸ್ತ್ಯೇವ' ಇತಿ ಯದುಕ್ತಂ ಮಹಿ ಮಭಟ್ಟೇನ ತದನುಭವಸಿದ್ಧಮಪಲಪತೋ ಗಜನಿಮೀಲಿಕೈವ.

ತದೇವಮನುಭವಸಿದ್ಧಸ್ಯ ತಸ್ಯ ರಸಾದಿಲಕ್ಷಣಾರ್ಥಸ್ಯ ಅಶಕ್ಯಾಪಲಾಪ ತಯಾ ತತ್ತಚ್ಛಬ್ದಾನ್ವಯವ್ಯತಿರೇಕಾನುವಿಧಾಯಿತಯಾ ಚ ಅನುಮಾನಾದಿಪ್ರಮಾ ಣಾವೇದ್ಯತಯಾ ಚ ಅಭಿಧಾದಿವೃತ್ತಿತ್ರಯಾಬೋಧ್ಯತಯಾ ಚ ತುರೀಯಾ ವೃತ್ತಿಃ ಉಪಾಸ್ಯೈವೇತಿ ಸಿದ್ಧಮ್. ಇಯಂ ಚ ವ್ಯಾಪ್ತ್ಯಾದ್ಯನುಸಂಧಾನಂ ವಿನಾಪಿ ಭವತೀತ್ಯ ಖಿಲಂ ನಿರ್ಮಲಮ್.

ಸಾ ಚೇಯಂ ವ್ಯಂಜನಾ ನಾಮ ವೃತ್ತಿರಿತ್ಯುಚ್ಯತೇ ಬುಧೈಃ ।
ರಸವ್ಯಕ್ತೌ ಪುನರ್ವೃತ್ತಿಂ ರಸನಾಖ್ಯಾಂ ಪರೇ ವಿದುಃ ॥

ಏತಚ್ಚ ವಿವಿಚ್ಯೋಕ್ತಂ ರಸನಿರೂಪಣಪ್ರಸ್ತಾವ ಇತಿ ಸರ್ವಮವದಾತಮ್ ॥

ಈಗ ಬೇರೊಂದು ಉದಾಹರಣವಲ್ಲೂ ವ್ಯಂಗ್ಯಾರ್ಥವನ್ನು ಅನುಮೇಯವೆಂದು ಮಹಿಮಭಟ್ಟನು ಹೇಳಿದ್ದನ್ನು ವಿಮರ್ಶಿಸುತ್ತಾನೆ. 'ನಿಶ್ಶೇಷಚ್ಯುತಚಂದನಮ್' ಎಂಬಲ್ಲಿ ದೂತಿಯು ಸ್ನಾನಮಾಡಿದ್ದಕ್ಕಿಂತಲೂ ಬೇರೆ ರೀತಿಯಲ್ಲಿ ಸ್ತನತಟದಲ್ಲಿ ಮಾತ್ರವೇ ಶ್ರೀಗಂಧವು ಪೂರ್ತಿಯಾಗಿ ತೊಲಗಿದ್ದುದರಿಂದ ಆಕೆಯು ಸ್ನಾನವನ್ನು ಮಾಡಿಲ್ಲ, ಆದರೆ ಕಾಮುಕನೊಡನೆ ಭೋಗವನ್ನೇ ಮಾಡಿರುವಳು ಎಂಬ ಅರ್ಥವು ಅನುಮಾನದಿಂದಲೇ ಸಿದ್ಧಿಸುತ್ತದೆ. ಸ್ನಾನವನ್ನು ಮಾಡಿದ್ದರೆ ದೇಹದ ಎಲ್ಲಾ ಅವಯವಗಳಲ್ಲೂ ಶ್ರೀಗಂಧವು ತೊಲಗಬೇಕಾಗಿತ್ತು. ಈಗ ಸ್ತನಗಕಲ್ಲಿ ಮಾತ್ರವೇ ಅದು ಪೂರ್ತಿಯಾಗಿ ತೊಲಗಿರುವುದರಿಂದ ಅವಳು ಕಾಮುಕನೊಡನೆ ರಹಸ್ಯವಾಗಿ ಭೋಗಿಸಿರುವಳು ಎಂಬುದು ಅನುಮೇಯವೇ ಹೊರತು ವ್ಯಂಗ್ಯವಾಗಲಾರದು ಎಂದು ಮಹಿಮಭಟ್ಟನು ವಾದಿಸುತ್ತಾನೆ. ಇಲ್ಲಿ ವಿಚಾರವು ಹೀಗೆ ನಡೆಯಲಿದೆ. ಇಲ್ಲಿ ದೂತಿಯು ಕಾಮುಕನೊಡನೆ ಭೋಗಿಸಿದಳು ಎಂಬ ಅರ್ಥವನ್ನು ಸಹೃದಯರು ಅನುಮಾನದಿಂದ ತಿಳಿಯಬೇಕಾದರೆ ಈ ಮಾತನ್ನು ದೂತಿಗೆ ಹೇಳಿದ್ದೇ ಕಾರಣವೋ ಅಥವಾ ಈ ಮಾತನ್ನು ಹೇಳುವ ಕಾಲದಲ್ಲಿ ಅಲ್ಲಿ ಹಾಜರಿದ್ದ ಸಖಿ ಮೊದಲಾದ ಬೇರೆ ಜನರ ಸಾನ್ನಿಧ್ಯವು ಕಾರಣವೋ ಅಥವಾ ಅಲ್ಲಿ ಹೇಳಿದ ಅಂಶವನ್ನು ಗ್ರಹಿಸಿದ ಸಹೃದಯರೇ ಕಾರಣವೊ ? ಈ ಮೂರು ಕಾರಣಗಳಲ್ಲಿ ಯಾವುದರಿಂದ "ದೂತಿಯು ಸ್ನಾನ ಮಾಡಲಿಲ್ಲ. ಆದರೆ ಕಾಮುಕನೊಡನೆ ಭೋಗಿಸಿದಳು" ಎಂಬ ಅನುಮಿತಿಯು ಹುಟ್ಟುತ್ತದೆ ಎಂಬುದು ಇಲ್ಲಿ ವಿಚಾರಮಾಡಬೇಕಾದ ಅಂಶ. ಮೊದಲಿನ ಎರಡು ವಿಕಲ್ಪಗಳನ್ನು ಹೇಳುವುದಾದರೆ ಹೇತುವಿಗೆ ವ್ಯಭಿಚಾರದೋಷವು ಸಂಭವಿಸಿದ ಪ್ರಯುಕ್ತ ಅನುಮಾನವೇನೋ ಹೊಂದುತ್ತದೆ. ಆದರೆ ಮೂರನೆಯ ವಿಕಲ್ಪವನ್ನು ಅಂಗೀಕರಿಸಿದರೆ ಸಹೃದಯರಿಗೆ ಬೇರೆ ರೀತಿಯಲ್ಲೂ ದೂತಿಗೆ ಶ್ರೀಗಂಧವು ತೊಲಗಿರಬೇಕೆಂಬ ಜ್ಞಾನವು ಹುಟ್ಟುವುದರಿಂದ ಅನುಮಾನದಲ್ಲಿ ಹೇತ್ವಾಭಾಸವು ಸಂಭವಿಸುತ್ತದೆ. ಆಕೆಯು ಸಂಭೋಗವನ್ನು ಮಾಡದೆ ಕುತ್ತಿಗೆಯವರೆಗೆ ಮಾತ್ರವೇ ಸ್ನಾನಮಾಡಿದ್ದರಿಂದ ಹಾಗೆ ಸ್ತನಗಳಲ್ಲಿದ್ದ ಶ್ರೀಗಂಧವು ಪೂರ್ತಿಯಾಗಿ ತೊಲಗಿದೆ ಎಂಬುದೇ ಆಕೆಯ ಅಭಿಪ್ರಾಯವೆಂದು ಸಹೃದಯರು ತಿಳಿಯಬಹುದು. ಇದರಿಂದ ಆಕೆಯು ಸಂಭೋಗವನ್ನೇ ಮಾಡಿದಳೆಂಬ ಅರ್ಥವು ಇಲ್ಲಿ ಅನುಮಾನದಿಂದ ತೋರುವುದಿಲ್ಲವೆಂಬುದು ಸ್ಪಷ್ಟವಾಯಿತು. ಶ್ರೀಗಂಧವು ಸ್ತನಗಳಲ್ಲಿ ಮಾತ್ರವೇ ಪೂರ್ತಿಯಾಗಿ ತೊಲಗಿತ್ತೆಂಬ ಹೇತುವಿನಲ್ಲಿ ಒಂದು ವಿಶೇಷಣವನ್ನು ಕೊಟ್ಟರೆ ಇಲ್ಲಿ ದೋಷವು ತೊಲಗುತ್ತದೆ ಎಂದು ಹೇಳುತ್ತಾನೆ. ದೂತಿಯು ಮುಖವು ವಿಕಸಿತವಾಗಿರುವ ಪ್ರಯುಕ್ತ ಶ್ರೀಗಂಧವು ತೊಲಗಿತ್ತೆಂಬ ಹೇತುವಿನಲ್ಲಿ "ಸಂಭೋಗದ ಪ್ರಯುಕ್ತ ವಿಕಸಿತವಾದ

ಮುಖವುಳ್ಳವುಳ್ಳವಳು" ಎಂಬ ವಿಶೇಷಣವನ್ನು ಕೊಡೋಣ. ದೂತಿಯ ಸ್ತನದಲ್ಲಿ ಶ್ರೀ ಗಂಧವು ತೊಲಗಿತ್ತೆಂದು ಅಷ್ಟೇ ಹೇಳುವುದು ಬೇಕಾಗಿಲ್ಲ. ಸಂತೋಷದಿಂದ ಕೂಡಿದ್ದ ದೂತಿಗೆ ಶ್ರೀಗಂಧವು ತೊಲಗಿತ್ತು ಎಂಬುದನ್ನು ಹೇತುವೆಂದು ಭಾವಿಸೋಣ. ಆಗ ದೋಷವು ಅಂಟುವುದಿಲ್ಲ. ಸ್ನಾನದಿಂದಲಾದರೋ ಮುಖವು ವಿಕಾಸಗೊಳ್ಳುವುದಿಲ್ಲ. ಆದರೆ ಈಗ ಅದು ವಿಕಾಸಗೊಂಡಿರುವ ಪ್ರಯುಕ್ತ ಹೇತುವಿನಲ್ಲಿ ವ್ಯಭಿಚಾರದೋಷ ಬರುವುದಿಲ್ಲ. ಶ್ಲೋಕದಲ್ಲಿ ಹೇಳದೇ ಇರುವ ವಿಶೇಷಣವನ್ನು ಪ್ರಯೋಗಿಸಬಾರ ದೆಂದು ವೇದದ ಆಜ್ಞೆಏನೂ ಇಲ್ಲವಾದ್ದರಿಂದ ಅಂತಹ ವಿಶೇಷಣವನ್ನು ಇಲ್ಲಿ ಕೊಟ್ಟರೆ ದೋಷವೇನು; ಕೊಡೋಣ ಎಂದು ಹೇಳಿದರೆ ಕೇವಲ ಪ್ರತಿಭೆಯಿಂದಲೇ ಹುಟ್ಟುವ ಕಾವ್ಯಗಳಿಗೆ ವೇದಗಳಂತೆ ಪ್ರಾಮಾಣ್ಯವಿರಬೇಕೆಂಬ ನಿಯಮವಿಲ್ಲದ್ದರಿಂದ ಇಲ್ಲಿ ಹೇಳಿ ರುವ ಚಂದನಚ್ಯವನ (ಶ್ರೀಗಂಧವು ತೊಲಗಿತು) ಇದೇ ಮೊದಲಾದ ಹೇತುಗಳು ನಿಜವೋ ಸುಳ್ಳೋ ಎಂದು ಸಹೃದಯರಿಗೆ ಸಂದೇಹವಿರುವ ಪ್ರಯುಕ್ತ ಹೇತುವಿಗೆ ಸ್ವರೂಪಾಸಿದ್ಧಿಯುಂಟಾಯಿತು. ವ್ಯಕ್ತಿವಾದಿಗಳೂ ಸಹ "ತಸ್ಯಾಧಮಸ್ಯಾಂತಿಕಂ" ಎಂಬಲ್ಲಿ ಹೇಳಿರುವ ಅಧಮ ಎಂಬ ಪದಕ್ಕೆ ಸಂಬಂಧಿಸಿರುವ ನಿಶ್ಶೇಷ ಮೊದಲಾದ ವುಗಳು "ಶ್ರೀಗಂಧವೆಲ್ಲವೂ ಪೂರ್ತಿಯಾಗಿ ತೊಲಗಿತು" ಎಂಬ ಅರ್ಥವನ್ನು ವ್ಯಂಜನೆ ಯಿಂದಲೇ ತಿಳಿಸುತ್ತವೆ ಎಂದು ಒಪ್ಪಿರುವರು. ನೀಚಜಾತಿಯ ದೂತಿಯೊಡನೆ ನಾಯಕನು ಭೋಗಿಸಿದ್ದರಿಂದ ಅಧಮನೆನಿಸಿರುವನು. ಆದರೆ ದೂತಿಯ ಅವಯವಗ ಳಲ್ಲಿ ಶ್ರೀಗಂಧ ಮೊದಲಾದವು ಪೂರ್ತಿಯಾಗಿ ತೊಲಗಿವೆ ಎಂಬ ಅರ್ಥವನ್ನು ಸಹೃದ ಯರು ಇಲ್ಲಿ ತಿಳಿಯುವುದರಿಂದ ಇಲ್ಲಿ ಹೇಳಿರುವ ಅಂಶಗಳಿಗೆ ಪ್ರಾಮಾಣ್ಯವೇನೂ ಬೇಕಾ ಗಿಲ್ಲ. ಆದರೂ ಆಕೆಗೆ ಶ್ರೀಗಂಧ ಮೊದಲಾದವು (ಪೂರ್ತಿಯಾಗಿ) ತೊಲಗಿರುವುದರಿಂದ ನಾಯಕನು ಆಕೆಯೊಡನೆ ಭೋಗಿಸಿರುವನೆಂಬುದೇ ಸುಳ್ಳೆಂದು ತೋರುವ ಪ್ರಯುಕ್ತ ಅವನನ್ನು ಅಧಮನೆಂದು ಕರೆದದ್ದು ಯುಕ್ತವೆ? ಎಂಬ ಸಂದೇಹವು ಬರುತ್ತದೆ. ಆದ್ದರಿಂದ ಇಲ್ಲಿ ಅನುಮಾನವೇ ಹೊಂದುವುದಿಲ್ಲ. ಹೀಗೆ ಅವನು ಆಕೆಯೊಡನೆ ಭೋಗಿಸಿದನೆಂಬುದು ಸುಳ್ಳಾಗಿ ತೋರುವುದರಿಂದ ಅನುಮಾನಕ್ಕೆ ಪ್ರಸಕ್ತಿಯೇ ಇಲ್ಲ.

ಹೀಗೆ ಹೇತುವು ಎಲ್ಲೆಡೆಯಲ್ಲೂ ಆಭಾಸವೆನಿಸಿದ್ದರಿದ ವೇದಾಂತಮತದಲ್ಲಿ ಐದನೆಯ ಪ್ರಮಾಣವೆಂದು ಒಪ್ಪಿರುವ ಅರ್ಥಾಪತ್ತಿಯಿಂದ ವ್ಯಂಗ್ಯಾರ್ಥಗಳನ್ನು ತಿಳಿಯಬಹುದು ಎಂದು ಹೇಳೋಣವೆಂದು ಕೇಳಿದರೆ ಅದನ್ನು ಇಲ್ಲಿ ನಿರಾಕರಿಸು ತ್ತಾನೆ. ತಿಳಿಸಬೇಕಾದ್ದನ್ನು ತಿಳಿಸಲಿಕ್ಕೆ ಒಂದು ಯುಕ್ತಿಯನ್ನು ಕಲ್ಪಿಸುವುದೇ ಅರ್ಥಾಪತ್ತಿ ಎನಿಸುವುದು. ಇದರಲ್ಲಿ ವ್ಯಾಪ್ತಿಯೇ ಬೇಕಾಗಿಲ್ಲವಾದ್ದರಿಂದ ಹೇತುವಿ ನಲ್ಲಿ ದೋಷವಿದ್ದರೆ ಹಾನಿ ಏನು ? ಎಂದು ವ್ಯಕ್ತಿವಾದಿಯು ಹೇಳುವುದಾದರೆ ಅದನ್ನು ದೂಷಿಸುತ್ತಾನೆ. ಅರ್ಥಾಪತ್ತಿಯೂ ಸಹ ಹಿಂದೆ ಸಿದ್ಧವಾಗಿದ್ದ ವ್ಯತಿರೇಕವ್ಯಾಪ್ತಿ ಯನ್ನು ಆಶ್ರಯಿಸಿಕೊಂಡೇ ಪ್ರವರ್ತಿಸುತ್ತದೆ. "ಯಾವನು ಬದುಕಿರುವನೋ ಅವನು ಎಲ್ಲಿಯಾದರೂ ಇರುತ್ತಾನೆ. ಇಲ್ಲಿ ಸಭೆಯಲ್ಲಿ ಇಲ್ಲದಿದ್ದರೂ ಚೈತ್ರನು ಬದುಕಿ

ದ್ದಾನೆ'' ಬದುಕಿರುವವನು ಎಲ್ಲಿಯಾದರೂ ಇರಲೇಬೇಕು. ಸಭೆಯಲ್ಲಿ ಇಲ್ಲದ ಚೈತ್ರನು ಬದುಕಿರುವನೆಂಬ ಅರಿವಿನಿಂದ ಎಲ್ಲಿಯಾದರೂ ಇರಲೇಬೇಕೆಂಬುದನ್ನು ಕಲ್ಪಿಸುವುದೇ ಅರ್ಥಾಪತ್ತಿ ಎನಿಸುವುದು." ಇಲ್ಲಿ ಇಲ್ಲದ ಚೈತ್ರನು ಬೇರೆ ಕಡೆ ಇದ್ದಾನೆ. ಇಲ್ಲವಾದರೆ ಅವನು ಬದುಕಿರುವುದೇ ಅಸಂಭವವೆನಿಸೀತು." ಹೀಗೆ ವ್ಯತಿರೇಕ ವ್ಯಾಪ್ತಿಯ ಮೂಲಕವೇ ಅರ್ಥಾಪತ್ತಿಯು ಪ್ರವೇಶಿಸಲಿರುವುದು. ಹೀಗೆ ಇದು ಅನುಮಾನದಲ್ಲಿಯೇ ಸೇರುವುದರಿಂದ ಬೇರೊಂದು ಪ್ರಮಾಣವೇ ಆಗುವುದಿಲ್ಲವೆಂದು ನೈಯಾಯಿಕರು ಹೇಳುತ್ತಾರೆ. ಇದನ್ನು ದೃಷ್ಟಿಯಲ್ಲಿಟ್ಟುಕೊಂಡೇ ರಸಭಾವಗಳು ಅನುಮಾನದಿಂದ ತಿಳಿದು ಬರುವುದಿಲ್ಲವೆಂದು ಗ್ರಂಥಕಾರನು ಕಾರಿಕೆಯಲ್ಲಿ ಅನುಮಾನದೊಳಗೇ ಅರ್ಥಾಪತ್ತಿಯನ್ನು ಸೇರಿಸಿ ತಿಳಿಸಿದ್ದಾನೆ. ಆದರೆ ಇಲ್ಲಿ ವೇದಾಂತ ಮತವನ್ನು ಆಶ್ರಯಿಸಿ ಅರ್ಥಾಪತ್ತಿಯ ಬಗ್ಗೆ ತಿಳಿಸಿ ದೂಷಿಸಲಾಗಿದೆ. 'ಶೂನ್ಯಂ ವಾಸಗೃಹಂ' ಎಂಬ ಕಾವ್ಯವನ್ನು ತಿಳಿದದ್ದರಿಂದ ಶೃಂಗಾರ ಮೊದಲಾದ ರಸಗಳ ಅರಿವು ಆಗಬೇಕಾದರೆ ಅದರಲ್ಲಿ ಆ ರಸಗಳ ಉಪಪಾದನವಿರಲೇಬೇಕೆಂದು ಅರ್ಥಾಪತ್ತಿಯನ್ನು ಕಲ್ಪಿಸುವುದಾದರೆ ರಸಗಳು ಸಹೃದಯರಿಗೆ ಆಸ್ವಾದನಕಾಲದಲ್ಲಿಯೇ ಹುಟ್ಟುವ ಪ್ರಯುಕ್ತ ಹಿಂದೆ ಸಿದ್ಧವಾಗಿಲ್ಲದ್ದರಿಂದ ವ್ಯತಿರೇಕವ್ಯಾಪ್ತಿಯೇ ಬರುವಂತಿಲ್ಲ. ಕಾವ್ಯದಲ್ಲಿ ರಸವು ಹಿಂದೆ ಇದ್ದಿದ್ದರೆ ಅಲ್ಲಿ ಅದನ್ನು ಪ್ರತಿಪಾದಿಸಬಹುದಾಗಿತ್ತು. ಹಿಂದೆ ಇಲ್ಲದಿದ್ದ ಪ್ರಯುಕ್ತ ವ್ಯಾಪ್ತಿಯು ಬರುವಂತಿಲ್ಲ. ಆದ್ದರಿಂದ ಅರ್ಥಾಪತ್ತಿಯಿಂದ ರಸಾನುಭವವಾಗಲಾರದು.

ಈಗ ಬೇರೊಂದು ಮತವನ್ನು ನಿರಾಕರಿಸುತ್ತಾನೆ. ಒಬ್ಬನು ಬಟ್ಟೆಗಳನ್ನು ಮಾರುವಾಗ ಕೊಳ್ಳುವವನ ಹತ್ತಿರ ಬಂದು ಗುರುತನ್ನು ತಿಳಿಸುತ್ತಾನೆ. ಕೊಳ್ಳುವವರು ಅನೇಕರಿರುವಾಗ ಒಬ್ಬನು ವಸ್ತ್ರದ ಬೆಲೆಯನ್ನು ತಿಳಿಯಲಿಚ್ಛಿಸಿದ್ದರಿಂದ ಬೇರೆಯವರಿಗೆ ತಿಳಿಯದಂತೆ ತರ್ಜನಿ ಅಂಗುಲಿ ಎರಡು ಬೆರಳುಗಳನ್ನು ಅಳ್ಳಾಡಿಸುವುದರಿಂದ ಕೊಳ್ಳುವವನು ಅದಕ್ಕೆ ಹತ್ತು ಆಣೆಗಳ ಬೆಲೆ ಎಂದು ತಿಳಿಯುವನು. ಹೀಗೆ ಸೂಚಿಸುವುದು ಸಹ ಅನುಮತಿಯೇ ಆಗುವುದು. ಹಿಂದೆ ಸೂಚಿಸಿದಂತೆ ಬೆರಳನ್ನು ಅಳ್ಳಾಡಿಸಿದ ಪ್ರಯುಕ್ತ ಈ ವಸ್ತ್ರಕ್ಕೆ ಹತ್ತು ಆಣೆಗಳ ಬೆಲೆ ಎಂಬುದು ಅನುಮಾನದಿಂದಲೇ ತಿಳಿದುಬರುವುದು. ಹೀಗೆ ಕೈ ಮೊದಲಾದ ಅವಯವಗಳ ಸಂಕೇತಗಳಿಂದ ರಸ ಭಾವ ಮೊದಲಾದ ವ್ಯಂಗ್ಯಾರ್ಥಗಳನ್ನು ತಿಳಿಯಬಹುದಲ್ಲವೆ ? ಇಂತಹ ಸಂಕೇತಗಳನ್ನು ತಿಳಿಯುವುದರಿಂದ ಕಾವ್ಯದಲ್ಲಿ ರಸಾದಿಗಳಿವೆ ಎಂಬ ಜ್ಞಾನವು ಪ್ರತ್ಯಕ್ಷ ಮೊದಲಾದ ಪ್ರಮಾಣವನ್ನು ಅಪೇಕ್ಷಿಸುವುದರಿಂದ ಈ ಪ್ರತ್ಯಕ್ಷದ ಆಧಾರದಮೇಲೆ ಹೊರಡುವ ಅನುಮಾನದಲ್ಲಿಯೇ ಈ ಸಂಕೇತಜ್ಞಾನವು ಸೇರುವ ಪ್ರಯುಕ್ತ ಕಾವ್ಯಶಬ್ದಗಳಲ್ಲಿ ರಸವನ್ನು ತಿಳಿಸಲಿಕ್ಕೆ ಅಂತಹ ಸಂಕೇತಗಳಿಗೆ ಅವಕಾಶವೇ ಇರುವುದಿಲ್ಲ. ಸಂಕೇತಜ್ಞಾನದಿಂದ ತಿಳಿಯುವ ಪ್ರಯುಕ್ತ ಕಾವ್ಯದಲ್ಲಿ ರಸಾದಿಗಳಿವೆ ಎಂಬ ಅನುಮಾನವು 'ಇದು ಕುದುರೆಯಾದ್ದರಿಂದ ಗೋವೆನಿಸಿದೆ' ಎಂಬಂತೆ ಇಲ್ಲಿ ವಿರುದ್ಧವೆನಿಸುತ್ತದೆ.

ಈಗ ರಸಜ್ಞಾನವು ಸ್ಮೃತಿರೂಪವಲ್ಲವೆಂಬುದನ್ನು ಪ್ರತಿಪಾದಿಸುತ್ತಾನೆ. ಕೆಲವರು 'ರಸಜ್ಞಾನವು ಸಂಸ್ಕಾರದಿಂದ ಹುಟ್ಟುವ ಪ್ರಯುಕ್ತ ಸ್ಮೃತಿ ಎನಿಸಿದೆ' ಎಂಬ ಅನುಮಾನದಿಂದ ರಸಭಾವಗಳೆಂಬ ವ್ಯಂಗ್ಯಾರ್ಥವನ್ನನ್ನೇ ಸ್ಮೃತಿಗೆ ವಿಷಯವೆಂದು ಹೇಳುತ್ತಾರೆ. ಸಂಸ್ಕಾರವೆಂದರೆ ಹಿಂದಿನವನ್ನು ಭಾವಿಸುವುದೆಂದು ಅರ್ಥ. ಹಿಂದೆ ಇದ್ದ ಗಡಿಗೆ ಮೊದಲಾದವನ್ನು ತಿಳಿಯುವಂತೆ ಕಾವ್ಯಾರ್ಥಗಳನ್ನು ಭಾವಿಸುವುದರಿಂದ ಸಹೃದಯರಿಗೆ ಆಗುವ ರಸಪ್ರತೀತಿಯೇ ಸ್ಮೃತಿ ಎನಿಸುತ್ತದೆ. ಅದಕ್ಕಾಗಿ ವ್ಯಂಜನೆಯನ್ನು ಒಪ್ಪಿದ್ದು ವ್ಯರ್ಥವೇ ಆಗುತ್ತದೆ. ಹಾಗೆ ಅವರು ವಾದಿಸುತ್ತಾರೆ. ಇಲ್ಲಿ ಹೇಳಿದ 'ಸಂಸ್ಕಾರಜನ್ಯ' ವೆಂಬ ಹೇತುವು ಪ್ರತ್ಯಭಿಜ್ಞೆಯಲ್ಲೂ ಸಹ ಸಂಭವಿಸುತ್ತದೆ. ಪಕ್ಷದಲ್ಲಿ ಮಾತ್ರವೇ ಇರಬೇಕಾದ ಹೇತುವು ವಿಪಕ್ಷದಲ್ಲೂ ಇರುವುದರಿಂದ ಅನುಮಾನವು ಹೊಂದುವುದಿಲ್ಲ. ಪ್ರತ್ಯಭಿಜ್ಞೆ ಎಂದರೆ ಹಿಂದೆ ಅನುಭವಿಸಿದ್ದನ್ನು ಮತ್ತೆ ಅನುಭವಿಸುವುದು 'ಕಾಶಿಯಲ್ಲಿ ನೋಡಿದ್ದ ಆ ಇವನೇ ದೇವದತ್ತನು' ಎಂಬುದೇ ಪ್ರತ್ಯಭಿಜ್ಞೆ ಎನಿಸಿದೆ. ಇದೂ ಸಹ ಭಾವನೆ ಎಂಬ ಸಂಸ್ಕಾರದಿಂದ ಹುಟ್ಟುವ ಪ್ರಯುಕ್ತ ಹಿಂದಿನಂತೆಯೇ ಹೇತುವು ಸಾಧಾರಣವೆನಿಸಿತು. ಆದ್ದರಿಂದ ರಸಾದಿಗಳು ಸ್ಮೃತಿಯಿಂದ ತಿಳಿದು ಬರುತ್ತವೆ ಎಂಬುವನ್ನು ಒಪ್ಪಲಾಗುವುದಿಲ್ಲ.

ಅನುಮಾನಸಾಮಗ್ರಿಗಳಿಲ್ಲದ ಕಡೆ ವ್ಯಂಗ್ಯಾರ್ಥವನ್ನು ಹೇಗೆ ತಿಳಿಯಬೇಕು ಎಂಬುದಕ್ಕೆ ವ್ಯಕ್ತಿವಿವೇಕಕಾರನು ಹೇಳಿದ್ದನ್ನು ಈಗ ದೂಷಿಸುತ್ತಾನೆ. 'ದುರ್ಗಾ, ಲಂಘಿತ' ಎಂಬ ಶ್ಲೋಕದಲ್ಲಿ ಪಾರ್ವತೀವಲ್ಲಭನೆಂಬ ಎರಡನೆಯ ಅರ್ಥವೇ ತೋರುವುದಿಲ್ಲವೆಂದು ಮಹಿಮಭಟ್ಟನು ಹೇಳಿದ್ದಾನೆ. ಹೀಗೆ ಸರ್ವರಿಗೂ ಅನುಭವಗೋಚರವಾಗಿರುವ ಅರ್ಥವನ್ನು ಇಲ್ಲವೆಂದು ಹೇಳುವುದು ಕೇವಲ ಮೂರ್ಖತನವಲ್ಲದೆ ಸಹೃದಯತೆ ಎನಿಸುವುದಿಲ್ಲ. ಹೀಗೆ ಸರ್ವಾನುಭವಸಿದ್ಧವಾದ ರಸ, ಭಾವ ಮೊದಲಾದ ವ್ಯಂಗ್ಯಾರ್ಥವನ್ನು ಎಂದೆಂದಿಗೂ ನಿರಾಕರಿಸಲಿಕ್ಕೆ ಆಗದೇ ಇರುವುದರಿಂದಲೂ, ಆಯಾಯ ಶಬ್ದಗಳಿದ್ದರೆಯೇ ರಸ ಭಾವ ಮೊದಲಾದ ವ್ಯಂಗ್ಯಾರ್ಥವು ತೋರುವುದೆಂದೂ ಅಂತಹ ಶಬ್ದಗಳಿಲ್ಲದಿದ್ದರೆ ಆ ಬಗೆಯ ವ್ಯಂಗ್ಯಾರ್ಥವೂ ತೋರುವುದಿಲ್ಲವೆಂಬ ನಿಯಮವಿರುವುದರಿಂದಲೂ, ಅನುಮಾನ ಮೊದಲಾದ ಪ್ರಮಾಣಗಳಿಂದ ತಿಳಿಯಲಿಕ್ಕಾಗದ್ದರಿಂದಲೂ, ಅಭಿಧೆ ಮೊದಲಾದ ವೃತ್ತಿಗಳಿಂದ ತಿಳಿಯದೇ ಇರುವುದರಿಂದಲೂ ನಾಲ್ಕನೆಯದೊಂದು ವೃತ್ತಿಯನ್ನು ಅವಶ್ಯವಾಗಿ ಆಶ್ರಯಿಸಲೇಬೇಕೆಂಬುದು ಸಿದ್ಧವಾಯಿತು. ಹಾಗಾದರೆ ಈ ವೃತ್ತಿಗೆ ಹೆಸರೇನು ಇರಬೇಕು? ಇದೇಯೇ ವ್ಯಂಜನಾವೃತ್ತಿ ಎನಿಸಿದೆ. ವ್ಯಾಪ್ತಿ ಹೇತ್ವಾಭಾಸಗಳ ಅರಿವಿಲ್ಲದೆಯೇ ರಸ ಮೊದಲಾದ ವ್ಯಂಗ್ಯಾರ್ಥವನ್ನು ಬೋಧಿಸಲು ಇದೇ ಸಮರ್ಥವೆನಿಸಿದೆ. 'ವಸ್ತು ಅಲಂಕಾರಗಳನ್ನು ಬೋಧಿಸಲು ವ್ಯಂಜನಾವೃತ್ತಿಯೇ ಇದ್ದರೂ ರಸಭಾವಗಳನ್ನು ಪ್ರಕಾಶಪಡಿಸಲು ರಸನೆ ಎಂಬ ಐದನೆಯ ವೃತ್ತಿಯೇ ಬೇಕು' ಎಂದು ಅಭಿನವಗುಪ್ತಮತಾವಲಂಬಿಗಳು ಹೇಳುತ್ತಾರೆ. ಸಾಮಾನ್ಯವಾಗಿ ವಸ್ತು ಅಲಂಕಾರಗಳಂತೆ ರಸಾದಿಗಳೂ ಸಹ ವ್ಯಂಜನೆಯಿಂದಲೇ

ತಿಳಿದುಬರುವಾಗ ಬೇರೊಂದು ವೃತ್ತಿಯನ್ನು ಅಂಗೀಕರಿಸುವುದು ನಿರರ್ಥಕವೆನಿಸುತ್ತದೆ. ರಸಸ್ವರೂಪವನ್ನು ನಿರೂಪಿಸುವ ಪ್ರಕರಣದಲ್ಲಿ ಇದನ್ನು ವಿಶದಪಡಿಸಲಾಗಿದೆ. ಹೀಗೆ ರಸ, ಭಾವ, ರಸಭಾಸ, ಭಾವಾಭಾಸ, ಭಾವಸಂಧಿ, ಭಾವಪ್ರಶಮ, ಭಾವಶಬಲತೆ ಇವೆಲ್ಲವೂ ವ್ಯಂಗ್ಯವೆಂಬುದು ಸ್ಪಷ್ಟವಾಯಿತು. ಇದರಿಂದ ಎಲ್ಲವೂ ಸಮಂಜಸ ವೆನಿಸಿತು.

## ಆರನೇಯ ಪರಿಚ್ಛೇದ

ಏವಂ ಧ್ವನಿಗುಣೀಭೂತವ್ಯಂಗ್ಯತ್ವೇನ ಕಾವ್ಯಸ್ಯ ಭೇದದ್ವಯಮುಕ್ತ್ವಾ ಪುನ ರ್ದೃಶ್ಯಶ್ರವ್ಯತ್ವೇನ ಭೇದದ್ವಯಮಾಹ—

ದೃಶ್ಯಶ್ರವ್ಯತ್ವಭೇದೇನ ಪುನಃ ಕಾವ್ಯಂ ದ್ವಿಧಾ ಮತಮ್ ।
ದೃಶ್ಯಂ ತತ್ರಾಭಿನೇಯಂ ತದ್ರೂಪಾರೋಪಾತ್ತು ರೂಪಕಮ್ ॥

ತತ್ ದೃಶ್ಯಂ ಕಾವ್ಯಂ ನಟೇ ರಾಮಾದಿಸ್ವರೂಪಾರೋಪಾತ್ ರೂಪಕಮಿತ್ಯು ಚ್ಯತೇ. ತಸ್ಯ ರೂಪಕಸಂಜ್ಞಾ ಹೇತುಮಾಹ.

ಕೋಽಸಾವಭಿನಯ ಇತ್ಯಾಹ—

ಭವೇದಭಿನಯೋಽವಸ್ಥಾನುಕಾರಃ ಸ ಚತುರ್ವಿಧಃ ।
ಆಂಗಿಕೋ ವಾಚಿಕಶ್ಚೈವಮಾಹಾರ್ಯಃ ಸಾತ್ತ್ವಿಕಸ್ತಥಾ ॥

ನಟೈರಂಗಾದಿಭಿಃ ರಾಮಯುಧಿಷ್ಠಿರಾದೀನಾಮವಸ್ಥಾನುಕರಣಮಭಿನಯಃ.

ರೂಪಕಸ್ಯ ಭೇದಾನಾಹ—

ನಾಟಕಮಥ ಪ್ರಕರಣಂ ಭಾಣವ್ಯಾಯೋಗಸಮವಕಾರಡಿಮಾಃ ।
ಈಹಾಮೃಗಾಂಕವೀಥ್ಯಃ ಪ್ರಹಸನಮಿತಿ ರೂಪಕಾಣಿ ದಶ ॥

ಕಿಂ ಚ—ನಾಟಿಕಾ ತ್ರೋಟಕಂ ಗೋಷ್ಠೀ ಸಟ್ಟಕಂ ನಾಟ್ಯರಾಸಕಮ್ ।
ಪ್ರಸ್ಥಾನೋಲ್ಲಾಪ್ಯಕಾವ್ಯಾನಿ ಪ್ರೇಂಖಣಂ ರಾಸಕಂ ತಥಾ ॥
ಸಲ್ಲಾಪಕಂ ಶ್ರೀಗದಿತಂ ಶಿಲ್ಪಕಂ ಚ ವಿಲಾಸಿಕಾ ।
ದುರ್ಮಲ್ಲಿಕಾಪ್ರಕರಣೀ ಹಲ್ಲೀಶೋ ಭಾಣಿಕೇತಿ ಚ ॥
ಅಷ್ಟಾದಶ ಪ್ರಾಹುರುಪರೂಪಕಾಣಿ ಮನೀಷಿಣಃ ।
ವಿನಾ ವಿಶೇಷಂ ಸರ್ವೇಷಾಂ ಲಕ್ಷ್ಮ ನಾಟಕವನ್ಮತಮ್ ॥

ತತ್ರ— ನಾಟಕಂ ಖ್ಯಾತವೃತ್ತಂ ಸ್ಯಾತ್ ಪಂಚಸಂಧಿಸಮನ್ವಿತಮ್ ।
ವಿಲಾಸರ್ದ್ಧ್ಯಾದಿಗುಣವತ್ ಯುಕ್ತಂ ನಾನಾವಿಭೂತಿಭಿಃ ॥
ಸುಖದುಃಖಸಮುದ್ಭೂತಿನಾನಾರಸನಿರಂತರಮ್ ।
ಪಂಚಾದಿಕಾ ದಶಪರಾಸ್ತತ್ರಾಂಕಾಃ ಪರಿಕೀರ್ತಿತಾಃ ॥
ಪ್ರಖ್ಯಾತವಂಶೋ ರಾಜರ್ಷಿರ್ಧೀರೋದಾತ್ತಃ ಪ್ರತಾಪವಾನ್ ।

ದಿವ್ಯೋಽಥ ದಿವ್ಯಾದಿವ್ಯೋ ವಾ ಗುಣವಾನ್ ನಾಯಕೋ ಮತಃ ॥
ಏಕ ಏವ ಭವೇದಂಗೀ ಶೃಂಗಾರೋ ವೀರ ಏವ ವಾ ।
ಅಂಗಮನ್ಯೇ ರಸಾಸ್ಸರ್ವೇ ಕಾರ್ಯಂ ನಿರ್ವಹಣೇಽದ್ಭುತಮ್ ॥
ಚತ್ವಾರಃ ಪಂಚ ವಾ ಮುಖ್ಯಾಃ ಕಾರ್ಯವ್ಯಾಪೃತಪೂರುಷಾಃ ।
ಗೋಪುಚ್ಛಸಮಾಗ್ರಂ ತು ಬಂಧನಂ ತಸ್ಯ ಕೀರ್ತಿತಮ್ ॥

ಖ್ಯಾತಂ ರಾಮಾಯಣಾದಿಪ್ರಸಿದ್ಧಂ ವೃತ್ತಮ್. ಯಥಾ ರಾಮಚರಿತಾದಿ. ಸಂಧಯೋ ವಕ್ಷ್ಯಂತೇ. ನಾನಾವಿಭೂತಿಭಿರ್ಯುಕ್ತಮಿತಿ ಮಹಾಸಹಾಯಮ್. ಸುಖ ದುಃಖಸಮುದ್ಭೂತಂ ರಾಮಯುಧಿಷ್ಠಿರಾದಿವೃತ್ತಾಂತೇಷ್ವಭಿವ್ಯಕ್ತಮ್. ರಾಜರ್ಷಯೋ ದುಷ್ಯಂತಾದಯಃ. ದಿವ್ಯಾಃ ಶ್ರೀಕೃಷ್ಣಾದಯಃ. ದಿವ್ಯಾದಿವ್ಯೋ ಯೋ ದಿವ್ಯೋಽಪ್ಯಾತ್ಮನಿ ನರಾಭಿಮಾನೀ. ಯಥಾ ಶ್ರೀರಾಮಚಂದ್ರಃ. ಗೋಪುಚ್ಛಾಗ್ರಸಮಾಗ್ರಮಿತಿ·ಕ್ರಮೇಣಾಂಕಾಃ ಸೂಕ್ಷ್ಮಾಃ ಕರ್ತವ್ಯಾಃ' ಇತಿ ಕೇಚಿತ್. ಅನ್ಯೇ ತ್ವಾಹುಃ "ಯಥಾ ಗೋಪುಚ್ಛೇ ಕೇಚಿದ್ವಾಲಾಃ ಹ್ರಸ್ವಾಃ, ಕೇಚಿದ್ದೀರ್ಘಾಃ, ತಥೇಹ ಕಾನಿಚಿತ್ ಕಾರ್ಯಾಣಿ ಮುಖಸಂಧೌ ಸಮಾಪ್ತಾನಿ, ಕಾನಿಚಿತ್ ಪ್ರತಿಮುಖೇ, ಏವಮನ್ಯೇಷ್ವಪಿ ಕಾನಿಚಿತ್ ಕಾನಿಚಿತ್" ಇತಿ.

ಧ್ವನಿ, ಗುಣೀಭೂತವ್ಯಂಗ್ಯವೆಂದು ಕಾವ್ಯವು ಎರಡು ಬಗೆಯಾಗಿರುವುದೆಂಬುದನ್ನು ತಿಳಿಸಿ ಮತ್ತೆ ಅದೇ ಕಾವ್ಯವು ದೃಶ್ಯ, ಶ್ರವ್ಯ ಎಂದು ಎರಡು ಬಗೆಯಾಗುವುದೆಂಬುವನ್ನು ಈಗ ತಿಳಿಸುತ್ತಾನೆ. ಒಟ್ಟಿನಲ್ಲಿ ಕಾವ್ಯವು ಮುಖ್ಯವಾಗಿ ನಾಲ್ಕು ಬಗೆಯಾಗಿದೆ ಎಂದು ತಿಳಿಯಬೇಕು. ಅವುಗಳಲ್ಲಿ ಅಭಿನಯಕ್ಕೆ ಯೋಗ್ಯವಾದುದು ದೃಶ್ಯ ಕಾವ್ಯವೆನಿಸುತ್ತದೆ. ಶ್ರವ್ಯಕಾವ್ಯದಲ್ಲಿ ನಟರು ಇಲ್ಲದ ಪ್ರಯುಕ್ತ ಅದನ್ನು ಅಭಿನಯಿಸಲಾಗುವುದಿಲ್ಲ. ಕಣ್ಣಿನಿಂದ ನೋಡಿ ಅನುಭವಿಸುವಂತಹದೇ ದೃಶ್ಯಕಾವ್ಯ. ಕಿವಿಯಿಂದ ಕೇಳಿ ತಿಳಿಯುವಂತಹುದೇ ಶ್ರವ್ಯಕಾವ್ಯ. ಮಾತುಗಳಿಂದಲೇ ಅಭಿನಯಿಸುವಾಗ ಶ್ರವ್ಯಕಾವ್ಯವೂ ದೃಶ್ಯವಾಗಬಲ್ಲದೆಂದು ಹೇಳಿದರೆ ಅದು ಸರಿಯಲ್ಲ ; ಮಾತಿನಿಂದಲೂ ಅಭಿನಯಿಸಲಿಕ್ಕೆ ಸಾಧ್ಯವಾಗುವುದಾದರೂ 'ಅಧಿಕೇನ ವ್ಯಪದೇಶಾ ಭವಂತಿ' ಎಂಬ ನ್ಯಾಯದಿಂದ ಮಾತನ್ನು ಮುಖ್ಯವಾಗಿ ಕೇಳಿ ತಿಳಿಯಬೇಕಾದ ಪ್ರಯುಕ್ತ ಅಂತಹ ಕಾವ್ಯವನ್ನು ಶ್ರವ್ಯವೆಂದೇ ಕರೆಯಲಾಗಿದೆ.

ರಾಮ ಮೊದಲಾದವರ ಆಕಾರಗಳನ್ನು ನಟರಲ್ಲಿ ಆರೋಪಿಸುವುದರಿಂದಲೂ, ಆ ನಟರು ಅವನ್ನು ಅಭಿನಯಿಸುವುದರಿಂದಲೂ ದೃಶ್ಯಕಾವ್ಯಗಳನ್ನು ಅಭಿನೇಯ ಮತ್ತು ರೂಪಕಗಳೆಂದು ಕರೆಯಲಾಗಿದೆ. ನಟನಲ್ಲಿ ರಾಮ ಮೊದಲಾದ ನಾಯಕರ ಸ್ವರೂಪವನ್ನು ಆರೋಪಿಸುವುದರಿಂದ ಇದು ರೂಪಕವೆನಿಸಿದೆ. ದೃಶ್ಯಕಾವ್ಯವು ನಟರ ಮೂಲಕ ರಾಮ ಮೊದಲಾದವರನ್ನು ಅನುಕರಿಸುತ್ತದೆ. ಮುಖದಲ್ಲಿ ಪದ್ಮವನ್ನು ಆರೋಪಿಸುವುದು ರೂಪಕವೆನಿಸುವಂತೆ ನಟನಲ್ಲಿ ನಾಯಕನನ್ನು ಆರೋಪಿಸುವುದೂ ರೂಪಕವೇ ಆಗಿದೆ. ಅಭಿನಯವೆಂತಹದೆಂಬುದನ್ನು ಈಗ ತಿಳಿಸುತ್ತಾನೆ. ವಾಸ್ತವಿಕವಾದ

ರಾಮು ಮೊದಲಾದ ನಾಯಕರ ಸ್ವರೂಪಗಳನ್ನು ಅನುಕರಣಮಾಡುವುದೇ ಅಭಿನಯ ವೆನಿಸುವುದು. ಅದು ನಾಲ್ಕು ಬಗೆಯಾಗಿದೆ. ಕೈ, ಕಣ್ಣು ಮೊದಲಾದ ಅವಯವಗಳ ಚಲನೆಯಿಂದ ಅಭಿನಯಿಸುವುದು ಆಂಗಿಕವೆನಿಸಿಸುವುದು, ಮಾತಿನಿಂದ ಅಭಿನಯಿಸು ವುದು ವಾಚಿಕವೆನಿಸುವುದು. ಯಾವುದಾದರೂ ವಸ್ತುವನ್ನು ತರುವುದೇ ಮೊದ ಲಾದ್ದನ್ನು ಅಭಿನಯಿಸುವುದು ಆಹಾರ್ಯವೆನಿಸುವುದು. ಸ್ತಬ್ಧವಾಗಿ ನಿಲ್ಲುವುದು, ರೋಮಾಂಚಗೊಳ್ಳುವುದು, ಬೆವರು ಸುರಿಸುವುದು ಮೊಲಾದ ಸಾತ್ತ್ವಿಕಭಾವಗಳನ್ನು ಪ್ರಕಟಿಸುವುದು ಸಾತ್ತ್ವಿಕಾಭಿನಯವೆನಿಸುವುದು. ಆಂಗಿಕ, ಆಹಾರ್ಯ, ಸಾತ್ತ್ವಿಕ ಅಭಿನಯಗಳಲ್ಲಿ ರಸಾತ್ಮಕವಾಕ್ಯವೇ ಇಲ್ಲದ್ದರಿಂದ ಅಂತಹ ಅಭಿನಯಗಳು ಕಾವ್ಯವೆನಿ ಸದೇ ಹೋಗುವುದಿಲ್ಲವೆ ? ಆಯಾಯ ಅಂಶದಲ್ಲಿ ಅಂತಹ ಭಾಗವು ಕಾವ್ಯವೆನಿಸದೆ ಇದ್ದರೂ ಇರಲಿ. ಅದು ನೋಡಲಿಕ್ಕೆ ಯೋಗ್ಯವಾದದ್ದು ಎಂಬ ಅಂಶದಿಂದ ಅದನ್ನು ಕಾವ್ಯವೆಂದು ಕರೆಯೋಣವೆಂದರೆ, ಆ ಅಂಶದಲ್ಲೂ ರಸವಿರುವ ಪ್ರಯುಕ್ತ ಅದನ್ನು ಗೌಣಕಾವ್ಯವೆಂದು ಕರೆಯೋಣ, ಬಾಯಿಂದ ಹೇಳುವ ಭಾಗದಲ್ಲಿ ರಸಾತ್ಮಕವಾದ ವಾಕ್ಯವಿರುವುದರಿಂದ ಮುಖ್ಯಕಾವ್ಯವೆಂದೇ ಕರೆಯೋಣವೆಂದು ಸಮಾಧಾನಮಾಡ ಲಾಗಿದೆ. ರೂಪಕನಲ್ಲಿ ನಾಟಕ, ಪ್ರಕರಣ, ಭಾಣ, ವ್ಯಾಯೋಗ, ಸಮವಕಾರ, ಡಿಮ, ಈಹಾಮೃಗ, ಅಂಕ, ವೀಥಿ, ಪ್ರಹಸನ ಎಂದು ಹತ್ತು ಬಗೆಗಳಿವೆ. ಇದರಮೇಲೆ ಹದಿನೆಂಟು ಉಪರೂಪಕಗಳಿವೆ. ನಾಟಕ, ತ್ರೋಟಕ, ಗೋಷ್ಠೀ, ಸಟ್ಟಕ, ನಾಟ್ಯ-ರಾಸಕ, ಪ್ರಸ್ಥಾನ, ಉಲ್ಲಾಪ್ಯ, ಕಾವ್ಯ, ಪ್ರೇಂಖಣ, ರಾಸಕ, ಸಂಲಾಪಕ, ಶ್ರೀಗದಿತ, ಶಿಲ್ಪಕ, ವಿಲಾಸಕ, ದುರ್ಮಲ್ಲಿಕೆ, ಪ್ರಕರಣಿ, ಹಲ್ಲೀಶ, ಭಾಣಿಕೆ ಇವೇ ಆ ಹದಿನೆಂಟು ಬಗೆಗಳು. ಇವುಗಳಲ್ಲಿ ಒಂದೊಂದರಲ್ಲೂ ಬೇರೆ ಯಾವ ವಿಶೇಷವೂ ಇಲ್ಲದೆ ಎಲ್ಲಕ್ಕೂ ನಾಟಕದಂತೆಯೇ ಲಕ್ಷಣವು ಹೊಂದಿಕೆಯಾಗುತ್ತದೆ. ಪ್ರಕರಣ ಮೊದಲಾದ ರೂಪ ಕಗಳಿಗೂ, ನಾಟಕ ಮೊದಲಾದ ಉಪರೂಪಕಳಿಗೂ ನಾಟಕದ ಲಕ್ಷಣವೇ ಅನ್ವಯಿಸು ತ್ತದೆಯಾದ್ದರಿಂದ ನಾಟಕದ ಲಕ್ಷಣವನ್ನು ಈಗ ತಿಳಿಸುತ್ತಾನೆ.

ನಾಟಕದಲ್ಲಿ ಲೋಕವಿಖ್ಯಾತವಾದ ವೃತ್ತಾಂತವಿರಬೇಕು. ಅದು ಪ್ರಕರಣದಲ್ಲಿ ರುವಂತೆ ಕವಿಕಲ್ಪಿತವಾದದ್ದು ಆಗಬಾರದು. ಇಂತಹ ವೃತ್ತಾಂತವನ್ನೊಳಗೊಂಡ ದೃಶ್ಯಕಾವ್ಯವೇ ನಾಟಕವೆನಿಸುವುದು. ಇದರಲ್ಲಿ ಮುಖ, ಪ್ರತಿಮುಖ, ಗರ್ಭ, ವಿಮರ್ಶ, ಉಪಸಂಹೃತಿ ಎಂದು ಐದು ಸಂಧಿಗಳಿರುತ್ತವೆ. ಇವನ್ನು ಮುಂದೆ ವಿವರಿಸಲಾಗುವುದು. ಗಂಭೀರವಾದ ನೋಟ, ಔನ್ನತ್ಯ, ಪ್ರಿಯಪ್ರಾಪ್ತಿ ಮೊದಲಾದ ಗುಣವುಳ್ಳ ನಾಯಕನ ಅನೇಕ ಬಗೆಯ ವೈಭವಗಳನ್ನು ಇದು ತಿಳಿಸಬೇಕು. ಸುಖ ದುಃಖಗಳು ಒಂದಾದಮೇಲೊಂದು ಸಂಭವಿಸುವುದರಿಂದ ತೋರಿಬರುವ ಶೃಂಗಾರ ಕರುಣ ಮೊದಲಾದ ಅನೇಕ ಬಗೆಯ ರಸಗಳನ್ನು ನಾಟಕವು ಪ್ರಕಾಶಗೊಳಿಸಬೇಕು. ಸುಖದುಃಖಗಳಲ್ಲಿ ಅನೇಕ ಬಗೆಗಳಿವೆ. ಅವುಗಳಲ್ಲಿ ಯಾವುದಾದರೊಂದು ಸಂಭವಿಸಿ ದಾಗಲೂ ಯಾವುದಾದರೊಂದು ರಸವು ಅವಶ್ಯವಾಗಿ ಸಂಭವಿಸುತ್ತದೆ. ಹೀಗೆ

ಒಂದೊಂದು ಸನ್ನಿವೇಶದಲ್ಲಿ ಒಂದೊಂದು ರಸವೋ ಅಥವಾ ಎರಡು ರಸಗಳೋ ಪರಸ್ಪರ ವಿರೋಧವಿಲ್ಲದೆ ತೋರುತ್ತಿರಬೇಕು. ಇದರಲ್ಲಿ ಐದು ಮೊದಲಾಗಿ ಹತ್ತರವರೆಗೂ ಅಂಕಗಳಿರಬೇಕು. ಇಲ್ಲಿ ಬರುವ ನಾಯಕನಲ್ಲಿ ಋಷಿಗೆ ಯೋಗ್ಯವೆನಿಸಿದ ದಯೆ, ದಾಕ್ಷಿಣ್ಯ,ಕ್ಷಮೆ ಮೊದಲಾದ ಗುಣಗಳಿರಬೇಕು: ಆದರೆ ನಾಯಕನು ಋಷಿಗೆ ಸದೃಶನಾದ ಕ್ಷತ್ರಿಯವಂಶದ ರಾಜನೇ ಆಗಿರಬೇಕೆಂಬ ನಿರ್ಬಂಧವಿಲ್ಲ, ಹಾಗೆ ಹೇಳಿದರೆ ಚಂದ್ರಗುಪ್ತನು ಶೂದ್ರನಾದ್ದರಿಂದ ಮುದ್ರಾರಾಕ್ಷಸವು ನಾಟಕವೇ ಆಗದೇಹೋದೀತು. ಹೀಗೆ ನಾಯಕನು ಗುಣವಲ್ಲಿ ರಾಜರ್ಷಿ ಎನಿಸಿರಬೇಕು .ಹಾಗೆಯೇ ಧೀರೋದಾತ್ತನೂ ಆಗಿರಬೇಕು.ಅವನಲ್ಲಿ ಪ್ರತಾಪವಿರಬೇಕು; ಹೀಗೆಯೇ ದೇವಮಾನವಗುಣಗಳೂ ಇರಬೇಕು. ದೇವಗುಣವೆಂದರೆ ವರ್ಚಸ್ಸು, ಮಾನವಗುಣವೆಂದರೆ ಇತರರಿಗೆ ನೀಡುವುದೇ ಮೊದಲಾದ ಶಾಂತಧಾರ್ಮಿಕಕ್ರಿಯೆಗಳನ್ನಾಚರಿಸುವ ಮನೋಭಾವವು.ಇಂತಹ ನಾಯಕನೇ ನಾಟಕಕ್ಕೆ ಭೂಷಣವೆನಿಸುವನು.ಇದರಲ್ಲಿ ಶೃಂಗಾರರಸವಾಗಲೀ ವೀರರಸವಾಗಲೀ ಶತ್ರುವಾಗಲೀ ಪ್ರಧಾನವಾಗಿದ್ದು ಉಳಿದ ರಸಗಳು ಪೋಷಕವಾಗಿರಬೇಕು. ಪ್ರಧಾನ ಚಂದ್ರೋದಯದಲ್ಲಿ ಶಾಂತರಸವು ಪ್ರಧಾನವಾದ್ದರಿಂದಲೇ ನಾಟಕವೆನಿಸಿದೆ. ಅದರಲ್ಲಿ ಯಾವ ಪ್ರಸಿದ್ಧವಾದ ವೃತ್ತಾಂತವಿಲ್ಲದಿದ್ದರೂ ಆ ರಸವು ಪ್ರಧಾನವೆನಿಸಿದೆ. ಕೊನೆಯ ನಿರ್ವಾಹಣಸಂಧಿಯಲ್ಲಿ ಯಾವುದಾದರೂ ಅದ್ಭುತವಾದ ಕೃತಿಯನ್ನು ತಿಳಿಸಬೇಕು. ನಾಯಕನ ಕಾರ್ಯವನ್ನು ನಡೆಸಲಿಕ್ಕೆ ನಾಲ್ವರೋ ಐವರೋ ಮುಖ್ಯರಾದ ಜನರು ಇರಬೇಕು. ಗೋವಿನ ಬಾಲದ ತುದಿಯಷ್ಟೇ ಪ್ರಮಾಣದಲ್ಲಿ ನಾಟಕದ ರಚನೆಯ ಕೊನೆಯಾಗಬೇಕು. "ಕ್ರಮವಾಗಿ ಅಂಕಗಳು ಚಿಕ್ಕವಾಗಬೇಕು" ಎಂದು ಕೆಲವರು ಇಲ್ಲಿ ಅರ್ಥಮಾಡುತ್ತಾರೆ. ಕೆಲವರು "ಗೋವಿನ ಬಾಲಗಳಲ್ಲಿ ಕೆಲವು ಮೋಟಾಗಿಯೂ, ಕೆಲವು ಉದ್ದವಾಗಿಯೂ ಇರುವಂತೆ ನಾಟಕದಲ್ಲಿ ಕೆಲವು ಕಾರ್ಯಗಳನ್ನು ಮುಖಸಂಧಿಯಲ್ಲಿ ಮುಗಿಸಬೇಕು. ಕೆಲವನ್ನು ಪ್ರತಿಮುಖಸಂಧಿಯಲ್ಲೂ, ಉಳಿದವನ್ನು ಇತರ ಸಂಧಿಗಳಲ್ಲೂ ಏರ್ಪಡಿಸಬೇಕು" ಎಂದು ಅರ್ಥಮಾಡುತ್ತಾರೆ. ನಾಟಕದಲ್ಲಿ ದಿವ್ಯಗುಣಗಳುಳ್ಳ ನಾಯಕನೆಂದರೆ ಕೃಷ್ಣ ಮೊದಲಾದವರು. ದಿವ್ಯಾದಿವ್ಯನೆಂದರೆ ದಿವ್ಯನಾದರೂ ತನ್ನನ್ನು ನರನೆಂದು ಭಾವಿಸಿದವನು. ವಿಷ್ಣುವಿನ ಅವತಾರನಾದರೂ ತನ್ನನ್ನು ಮನುಷ್ಯನೆಂದು ಭಾವಿಸಿದ ರಾಮನೇ ದಿವ್ಯಾದಿವ್ಯನಾಯಕನೆನಿಸಿರುವನು.

ಪ್ರತ್ಯಕ್ಷನೇತೃಚರಿತೋ ರಸಭಾವಸಮುಜ್ಜ್ವಲಃ ।
ಭವೇದ್ಗೂಢಶಬ್ದಾರ್ಥಃ ಕ್ಷುದ್ರಚೂರ್ಣಕಸಂಯುತಃ ॥
ವಿಚ್ಛಿನ್ನಾವಾಂತರೈಕಾರ್ಥಃ ಕಿಂಚಿತ್ಸಂಲಗ್ನಬಿಂದುಕಃ ।
ಯುಕ್ತೋ ನ ಬಹುಭಿಃ ಕಾರ್ಯೈಃ ಬೀಜಸಂಹತಿಮಾನ್ ನ ಚ ॥
ನಾನಾವಿಧಾನಸಂಯುಕ್ತೋ ನಾತಿಪ್ರಚುರಪದ್ಯವಾನ್ ।
ಆವಶ್ಯಕಾನಾಂ ಕಾರ್ಯಾಣಾಂ ಅವಿರೋಧಾದ್ವಿನಿರ್ಮಿತಃ ॥
ನಾನೇಕದಿನನಿರ್ವರ್ತ್ಯಕಥಯಾ ಸಂಪ್ರಯೋಜಿತಃ ।

ಆಸನ್ನನಾಯಕಃ ಪಾತ್ರೈರ್ಯುತಸ್ತ್ರಿಚತುರೈಸ್ತಥಾ ||
ದೂರಾಹ್ವಾನಂ ವಧೋ ಯುದ್ಧಂ ರಾಜ್ಯದೇಶಾದಿವಿಪ್ಲವಃ |
ವಿವಾಹೋ ಭೋಜನಂ ಶಾಪೋತ್ಸರ್ಗೌ ಮೃತ್ಯೂ ರತಂ ತಥಾ ||
ದಂತಚ್ಛೇದ್ಯಂ ನಖಚ್ಛೇದ್ಯಂ ಅನ್ಯದ್ವ್ರೀಡಾಕರಂ ಚ ಯತ್ |
ಶಯನಾಧರಪಾನಾದಿನಗರಾದ್ಯವರೋಧನಮ್ ||
ಸ್ನಾನಾನುಲೇಪನೇ ಚೈಭಿರ್ವರ್ಜಿತೋ ನಾತಿವಿಸ್ತರಃ |
ದೇವೀಪರಿಜನಾದೀನಾಂ ಅಮಾತ್ಯವಣಿಜಾಮಪಿ ||
ಪ್ರತ್ಯಕ್ಷಚಿತ್ರಚರಿತೈರ್ಯುಕ್ತೋ ಭಾವರಸೋದ್ಭವೈಃ |
ಅಂತನಿಷ್ಕ್ರಾಂತನಿಖಿಲಪಾತ್ರೋಽಂಕ ಇತಿ ಕೀರ್ತಿತಃ ||

ಬಿಂದ್ವಾದಯೋ ವಕ್ಷ್ಯಂತೇ ಆವಶ್ಯಕಂ ಸಂಧ್ಯಾವಂದನಾದಿ.

ಅಂಕಪ್ರಸ್ತಾವಾದ್ಗರ್ಭಾಂಕಮಾಹ—

ಅಂಕೋದರಪ್ರವಿಷ್ಟೋ ಯೋ ರಂಗದ್ವಾರಮುಖಾದಿಮಾನ್ |
ಅಂಕೋಽಪರಃ ಸ ಗರ್ಭಾಂಕಃ ಸಬೀಜಃ ಫಲವಾನಪಿ ||

ಯಥಾ ಬಾಲರಾಮಾಯಣೇ ರಾವಣಂ ಪ್ರತಿ ಕಂಚುಕೀ—

ಶ್ರವಣೈಃ ಪೇಯಮನೇಕೈರ್ದೃಶ್ಯಂ ದೀರ್ಘೈಶ್ಚ ಲೋಚನೈರ್ಬಹುಭಿಃ |
ಭವದರ್ಥಮಿವ ನಿಬದ್ಧಂ ನಾಟ್ಯಂ ಸೀತಾಸ್ವಯಂವರಣಮ್ ||

ಇತ್ಯಾದಿನಾ ವಿರಚಿತಃ ಸೀತಾಸ್ವಯಂವರೋ ನಾಮ ಗರ್ಭಾಂಕಃ

ತತ್ರ ಪೂರ್ವಂ ಪೂರ್ವರಂಗಃ ಸಭಾಪೂಜಾ ತತಃ ಪರಮ್ |
ಕಥನಂ ಕವಿಸಂಜ್ಞಾದೇರ್ನಾಟಕಸ್ಯಾಪ್ಯಥಾಮುಖಮ್ ||

ತತ್ರೇತಿ ನಾಟಕೇ—ಯನ್ನಾಟ್ಯವಸ್ತುನಃ ಪೂರ್ವಂ ರಂಗವಿಘ್ನೋಪಶಾಂತಯೇ |
ಕುಶೀಲವಾಃ ಪ್ರಕುರ್ವಂತಿ ಪೂರ್ವರಂಗಃ ಸ ಉಚ್ಯತೇ ||
ಪ್ರತ್ಯಾಹಾರಾದಿಕಾನ್ಯಂಗಾನ್ಯಸ್ಯ ಭೂಯಾಂಸಿ ಯದ್ಯಪಿ |
ತಥಾಪ್ಯವಶ್ಯಂ ಕರ್ತವ್ಯಾ ನಾಂದೀ ವಿಘ್ನೋಪಶಾಂತಯೇ ||
ಆಶೀರ್ವಚನಸಂಯುಕ್ತಾ ಸ್ತುತಿರ್ಯಸ್ಮಾತ್ಪ್ರಯುಜ್ಯತೇ |
ದೇವದ್ವಿಜನೃಪಾದೀನಾಂ ತಸ್ಮಾನ್ನಾಂದೀತಿ ಸಂಜ್ಞಿತಾ ||
ಮಂಗಲ್ಯಶಂಖಚಂದ್ರಾಬ್ಜಕೋಕಕೈರವಶಂಸಿನೀ |
ಪದೈರ್ಯುಕ್ತಾ ದ್ವಾದಶಭಿರಷ್ಟಾಭಿರ್ವಾ ಪದೈರುತ ||

ಅಷ್ಟಪದಾ ಯಥಾ ಅನರ್ಘರಾಘವೇ 'ನಿಷ್ಪ್ರತ್ಯೂಹಮ್' ಇತ್ಯಾದಿ.

ದ್ವಾದಶಪದಾ ಯಥಾ ಮಮ ತಾತಪಾದಾನಾಂ ಪುಷ್ಪಮಾಲಾಯಾಮ್

ಶಿರಸಿ ಧೃತಸುರಾಪಗೇ ಸ್ಮರಾರಾವರುಣಮುಖೇಂದುರುಚಿರ್ಗಿರೀಂದ್ರಪುತ್ರೀ |
ಅಥ ಚರಣಯುಗಾನತೇ ಸ್ವಕಾಂತೇ ಸ್ಮಿತಸರಸಾ ಭವತೋಽಸ್ತು ಭೂತಿಹೇತುಃ ||

ಏವಮನ್ಯತ್ರ. ಏತನ್ನಾಂದೀತಿ ಕಸ್ಯಚಿನ್ಮತಾನುಸಾರೇಣೋಕ್ತಮ್. ವಸ್ತುತಸ್ತು "ಪೂರ್ವರಂಗಸ್ಯ ರಂಗದ್ವಾರಾಭಿಧಾನಮಂಗಮ್" ಇತ್ಯುಚ್ಯತೇ. ಏತದುಕ್ತಮ್

ಯಸ್ಮಾದಭಿನಯೋ ಹ್ಯತ್ರ ಪ್ರಾಥ್ಯಮ್ಯಾದವತಾರ್ಯತೇ ।
ರಂಗದ್ವಾರಮತೋ ಜ್ಞೇಯಂ ವಾಗಂಗಾಭಿನಯಾತ್ಮಕಮ್ ॥ ಇತಿಃ.

ಉಕ್ತಪ್ರಕಾರಾಯಾಶ್ಚ ನಾಂದ್ಯಾಃ ರಂಗದ್ವಾರಾತ್ ಪ್ರಥಮಂ ನಟೈರೇವ ಕರ್ತವ್ಯತಯಾ ನ ಮಹರ್ಷಿಣಾ ನಿರ್ದೇಶಃ ಕೃತಃ.

ಕಾಳಿದಾಸಾದಿಮಹಾಕವಿಪ್ರಬಂಧೇಷು ಚ—

ವೇದಾಂತೇಷು ಯಮಾಹುರೇಕಪುರುಷಂ ವ್ಯಾಪ್ಯ ಸ್ಥಿತಂ ರೋದಸೀ
ಯಸ್ಮಿನ್ನೀಶ್ವರ ಇತ್ಯನನ್ಯವಿಷಯಃ ಶಬ್ದೋ ಯಥಾರ್ಥಾಕ್ಷರಃ ।
ಅಂತರ್ಯಶ್ಚ ಮುಮುಕ್ಷುಭಿರ್ನಿಯಮಿತಪ್ರಾಣಾದಿಭಿರ್ಮೃಗ್ಯತೇ
ಸ ಸ್ಥಾಣುಃ ಸ್ಥಿರಭಕ್ತಿಯೋಗಸುಲಭೋ ನಿಶ್ಶ್ರೇಯಸಾಯಾಸ್ತು ವಃ ॥

ಏವಮಾದಿಷು ನಾಂದೀಲಕ್ಷಣಾಯೋಗಾತ್ ಉಕ್ತಂ ಚ-ರಂಗದ್ವಾರಮಾರಭ್ಯ ಕವಿಃ ಕುರ್ಯಾತ್ 'ಇತ್ಯಾದಿ. ಅತ ಏವ ಪ್ರಾಕ್ತನಪುಸ್ತಕೇಷು ನಾಂದ್ಯಂತೇ ಸೂತ್ರಧಾರಃ' ಇತ್ಯನಂತರಮೇವ 'ವೇದಾಂತೇಷು'ಇತ್ಯಾದಿಶ್ಲೋಕಲಿಖನಂ ದೃಶ್ಯತೇ. ಯಚ್ಚ ಪಶ್ಚಾತ್ 'ನಾಂದ್ಯಂತೇ ಸೂತ್ರಧಾರಃ' ಇತಿ ಲಿಖನಂ,ತಸ್ಯಾಭಿಪ್ರಾಯಃ'ನಾಂದ್ಯಂತೇ ಸೂತ್ರಧಾರಃ ಇದಂ ಪ್ರಯೋಜಿತವಾನ್''ಇತಃ ಪ್ರಭೃತಿ ಮಯಾ ನಾಟಕಂ ಉಪಾದೀಯತೇ' ಇತಿ ಕವೇರಭಿಪ್ರಾಯಃ ಸೂಚಿತ ಇತಿ.

ನಾಟಕದ ಲಕ್ಷಣವಲ್ಲಿ ಹೇಳಿರುವ ವಿಲಾಸ, ರಸ ಮೊದಲಾದ ಕೆಲವು ಅಂಶಗಳನ್ನು ಹಿಂದೆಯೇ ತಿಳಿಸಿರುವುದರಿಂದ ಅದನ್ನು ಬಿಟ್ಟು ಉಳಿದ ಅಂಶಗಳನ್ನು ಇಲ್ಲಿ ವಿವರಿಸುತ್ತಾನೆ. ಅದರಲ್ಲಿ ಐದರಿಂದ ಹತ್ತಕ್ಕೆ ಮೀರದಂತೆ ಅಂಕಗಳಿರಬೇಕೆಂದು ಹೇಳಿದೆ. ಈಗ ಅಂಕದ ಲಕ್ಷಣವನ್ನು ತಿಳಿಸುತ್ತಾನೆ. ನಾಯಕನ ಚರಿತ್ರೆಯನ್ನು ಪ್ರತ್ಯಕ್ಷವಾಗಿ ತಿಳಿಸುತ್ತಲೂ ರಸ, ಭಾವ, ರಸಾಭಾಸ, ಭಾವಾಭಾಸ, ಭಾವಸಂಧಿ, ಭಾವಪ್ರಶಮ, ಭಾವಶಬಲತೆ ಇವನ್ನು ಪ್ರಕಾಶಿಸುತ್ತಲೂ, ಶಬ್ದಾರ್ಥವನ್ನು ಯಾಸವಾಗಿ ತಿಳಿಸುತ್ತಲೂ ಇದ್ದು ಅಂಕವು ಚಿಕ್ಕ ಸಮಾಸಗಳಿರುವ ಸಣ್ಣ ಸಣ್ಣ ವಾಕ್ಯಗಳಿಂದ ಕೂಡಿರಬೇಕು. (ಇದರಿಂದ ಭವಭೂತಿಯು ಬರೆದಿರುವ ಮೂರು ರೂಪಕಗಳಲ್ಲೂ ಉದ್ದವಾದ ಸಮಾಸಗಳಿಂದ ಕೂಡಿದ ಗದ್ಯವೇ ಹೆಚ್ಚಾಗಿರುವುದು ದೋಷವೆಂದು ತಿಳಿದುಬರುವುದು) ನಾಟಕದೊಳಗಿನ ವಿಷಯಗಳಲ್ಲಿ ಯಾವುದಾದರೊಂದು ಅಂಶವು ಅಲ್ಲಿಯೇ ಕೊನೆಯಾಗಬೇಕು. ನಾಟಕದೊಳಗಿನ ಒಂದು ಅಂಶವು ಕೊನೆಯಾದರೆ ಅದು ಅಲ್ಲಿಗೆ ಕೊನೆಯಾಗದಂತೆ ಮುಂದುವರಿಸುವುದೇ ಬೀಜವೆನ್ನುವುದು. ಇಂತಹದೊಂದು ಅಂಶವನ್ನು ಕೊನೆಯಲ್ಲಿ ಹೇಗಾದರೂ ಸೇರಿಸಿರಬೇಕು. ಪ್ರಧಾನವೆನಿಸಿ ಒಂದು ಕಾರ್ಯವಿರಬೇಕೇ ಹೊರತು ಅಂತವು ಅನೇಕವು ಇರಬಾರದು. ಕೊನೆಯ ಅಂಕವನ್ನು ಬಿಟ್ಟು ಇತರ ಅಂಕಗಳಲ್ಲಿ ಬೀಜವು ಕೊನೆಯಾಗಬಾರದು. ಕೊನೆಯ

ಅಂಕದಲ್ಲಿ ಮಾತ್ರವೇ ಎಲ್ಲವನ್ನು ಕೊನೆಮಾಡಬೇಕು. ಅನೇಕ ಬಗೆಯ ಘಟನೆಗಳಿರಬೇಕು. ಗದ್ಯಕ್ಕಿಂತಲೂ ಹೆಚ್ಚು ಪದ್ಯಗಳಿರಬಾರದು. ಆವಶ್ಯಕವೆನಿಸಿದ ಸಂಧ್ಯಾವಂದನ ಮೊದಲಾದ ಕರ್ಮಗಳನ್ನು ಆಯಾಯ ಪಾತ್ರಗಳಿಗೆ ಪರಸ್ಪರ ವಿರೋಧವಾಗದಂತೆ ಸೇರಿಸಬೇಕು. ಬಹುಕಾಲದಮೇಲೆ ನಡೆಯಬೇಕಾದ ವೃತ್ತಾಂತವನ್ನು ಸೇರಿಸದೆ ಕೆಲವೇ ದಿವಸಗಳಲ್ಲಿ ಮುಗಿದು ಪಾತ್ರಗಳಿಗೆ ಪರಸ್ಪರವಾಗಿ ಹೊಂದುವಂತೆ ಕಥೆಗಳನ್ನು ಜೋಡಿಸಬೇಕು. ನಾಯಕನ ಚರಿತ್ರೆಯು ಪ್ರತಿಯೊಂದು ಅಂಕದಲ್ಲೂ ಬಾರದಿದ್ದರೂ ಮುಂದೆ ಬರುವಂತೆ ತೋರುತ್ತಿರಬೇಕು. ಎರಡು ಮೂರು ಪಾತ್ರಗಳು ಸಂಭಾಷಣಮಾಡುತ್ತಿರಬೇಕು. ಈಗ ತಿಳಿಸುವ ಕೆಲವು ಅಂಶಗಳನ್ನು ಅಲ್ಲಿ ತಿಳಿಸದಿರಬೇಕು. ದೂರದಿಂದ ಒಬ್ಬನನ್ನು ಕರೆಯುವುದು, ಒಬ್ಬನ ಕೊಲೆ, ಯುದ್ಧ, ರಾಜ್ಯದಲ್ಲೂ ದೇಶದಲ್ಲೂ ಸಂಭವಿಸುವ ವಿಪತ್ತು, ವಿವಾಹ, ಭೋಜನ, ಶಾಪ, ಜಲಮಲ ವಿಸರ್ಜನೆ,ಸಾವು, ಸಂಭೋಗ, ಹಲ್ಲಿನ ಕಡಿತ,ಉಗುರಿನಿಂದಿ ಕಡಿತ, ಲಜ್ಜೆಯನ್ನುಂಟುಮಾಡುವ ಬೇರೆ ಕೆಲಸಗಳು, ಮಲಗುವುದು, ತುಟಿಯನ್ನು ಕಚ್ಚುವುದು, ಬಟ್ಟೆಯನ್ನು ಬಿಚ್ಚುವುದು, ನಗರವನ್ನು ಮುತ್ತುವುದು, ಸ್ನಾನಮಾಡುವುದು, ಗಂಧವನ್ನು ಮೈಗೆಹಚ್ಚಿಕೊಳ್ಳುವುದು ಇಂತಹವನ್ನು ತಿಳಿಸಬಾರದು. ದೇವಿ,ಆಕೆಯ ಸೇವಕರು,ಮಂತ್ರಿ ವ್ಯಾಪಾರಿಗಳು ಇವರ ಆಶ್ಚರ್ಯಕರವಾದ ಸಮಾಚಾರಗಳನ್ನು ಬಾಯಿಂದ ತಿಳಿಸದೆ ಪ್ರತ್ಯಕ್ಷವಾಗಿ ತೋರಿಸಬೇಕು. ಈ ಸಮಾಚಾರಗಳೆಲ್ಲವೂ ಸಹ ಭಾವ ರಸ ಇವನ್ನು ಪ್ರಕಾಶಿಸುವಂತಿರಬೇಕು. ಅಂಕವು ಕೊನೆಯಾಗುವ ವೇಳೆಗೆ ಪಾತ್ರಗಳೆಲ್ಲರೂ ರಂಗಸ್ಥಳದಿಂದ ಹೊರಗೆ ಹೋಗಿರಬೇಕು. ಈ ಬಗೆಯ ಲಕ್ಷಣವುಳ್ಳದ್ದು ಅಂಕವೆನಿಸುತ್ತದೆ.

ಅಂಕದ ಸ್ವರೂಪವನ್ನು ತಿಳಿಸುವ ಸಂದರ್ಭದಲ್ಲಿ ಗರ್ಭಾಂಕದ ಸ್ವರೂಪವನ್ನು ತಿಳಿಸುತ್ತಾನೆ. ಯಾವುದಾದರೊಂದು ಅಂಕದೊಳಗೆ ಪ್ರವೇಶಿಸುವ ಚಿಕ್ಕದೊಂದು ಅಂಕವೇ ಗರ್ಭಾಂಕವೆನಿಸುವುದು, ಇದು ರಂಗಸ್ಥಳದಲ್ಲಿ ಮೊದಲು ಬರತಕ್ಕ ಮಂಗಳಾಚರಣ, ಆಮುಖ,ಅಥವಾಪ್ರಸ್ತಾವನೆ,ಸಭಾಪೂಜೆ ಇಂತಹವನ್ನು ತಿಳಿಸುತ್ತಲೂ, ಕಥೆಯ ಮೂಲವೆನಿಸಿದ ಬೀಜವನ್ನು ಸೂಚಿಸುತ್ತಲೂ, ಮುಖ್ಯವಾದ ಯಾವುದಾದರೊಂದು ಉದ್ದೇಶ್ಯದೊಡಗೂಡಿಯೂ ಇರಬೇಕು. ಬಾಲರಾಮಾಯಣದಲ್ಲಿ ರಾವಣನಿಗೆ ಕಂಚುಕಿಯು "ಮಧುರವಾದ್ದರಿಂದ ಅನೇಕ ಕವಿಗಳಿಂದ ಕೇಳಲು ಯೋಗ್ಯವೆನಿಸಿಯೂ ನೋಡಲಿಕ್ಕೆ ಯೋಗ್ಯವಾದ್ದರಿಂದ ವಿಶಾಲಗೊಳ್ಳುವ ಕಣ್ಣುಗಳಿಂದ ನೋಡಬಹುದಾಗಿಯೂ ಇರುವ ಸೀತಾಸ್ವಯಂವರವೆಂಬ ನಾಟ್ಯವನ್ನು ನಿನಗಾಗಿ ಜನಕನು ಏರ್ಪಡಿಸಿದ್ದಾನೆ'' ಎಂದು ಹೇಳುತ್ತಾನೆ. ಹೀಗೆ ಅಂಕದೊಳಗೆ ಸೇರಿಸಿರುವ ಸೀತಾಸ್ವಯಂವರವೇ ಗರ್ಭಾಂಕವೆನಿಸಿದೆ.

ನಾಟಕದಲ್ಲಿ ಮೊದಲು ಪೂರ್ವರಂಗವೆಂಬ ಮಂಗಳಾಚರಣವೂ, ಆಮೇಲೆ ಕವಿಯ ಹೆಸರು, ಗೋತ್ರ ಮೊದಲಾದವೂ, ನಾಟಕದ ಹೆಸರು ಇವನ್ನು

ತಿಳಿಸಿ ಆಮೇಲೆ ಪ್ರಸ್ತಾವನೆಯನ್ನು ತಿಳಿಸಬೇಕು. ನಟರು ಅಭಿನಯವನ್ನು ಆರಂಭಿಸುವ ಮೊದಲು ರಂಗಸ್ಥಳದಲ್ಲಿ ಸಂಭವಿಸಬಹುದಾದ ವಿಘ್ನವನ್ನು ತಡೆಯಲಿಕ್ಕಾಗಿ ಮಾಡಬೇಕಾದ್ದೆಲ್ಲವೂ ಪೂರ್ವರಂಗವೆನಿಸುತ್ತದೆ. ಈ ಪೂರ್ವರಂಗಕ್ಕೆ ಪ್ರತ್ಯಾಹಾರ ಮೊದಲಾಗಿ ಇಪ್ಪತ್ತೆರಡು ಅಂಗಗಳಿವೆ. ಇವುಗಳೆಲ್ಲವನ್ನೂ ಕವಿಯು ತನ್ನ ಇಷ್ಟದಂತೆ ಆವಶ್ಯಕತೆ ಇದ್ದರೆ ಸೇರಿಸಬಹುದು; ಆದರೆ ವಿಘ್ನಶಾಂತಿಗಾಗಿ ನಾಂದಿಯನ್ನು ಮಾತ್ರ ಆಚರಿಸಲೇಬೇಕು. ಇಷ್ಟಾರ್ಥವನ್ನು ತನಗಾಗಲೀ ಇತರರಿಗಾಗಲೀ ಬಯಸುವಂತೆ ತಿಳಿಸುವ ಮಾತೇ ಆಶೀರ್ವಚನವೆನಿಸುವುದು. ಇಂತಹ ಮಾತನ್ನೊಳಗೊಂಡು ದೇವತೆಗಳು, ಬ್ರಹ್ಮಜ್ಞಾನಿಗಳು, ರಾಜರು ಗುರುಗಳು ಮೊದಲಾದವರ ಗುಣಗಳನ್ನು ಪ್ರಶಂಸಿಸುವುದೇ ನಾಂದಿ ಎನಿಸುವುದು. ದೇವಾದಿಗಳನ್ನು ಪ್ರಶಂಸಿಸಿ ಸಂತೋಷ ಪಡಿಸುವ ಮಾತೇ ನಾಂದಿ ಎನಿಸುವುದು. ಇದರಲ್ಲಿ ಮಂಗಳಸೂಚಕವಾದ ಶಂಖ, ಚಂದ್ರ, ಕಮಲ, ಚಕ್ರವಾಕ, ಕನ್ನೈದಿಲೆ ಇವುಗಳ ಹೆಸರು ಬಂದಿರಬೇಕು. ಇದರಲ್ಲಿ ಎಂಟು ಅಥವಾ ಹನ್ನೆರಡು ಪದಗಳಿರಬೇಕು. ಅನರ್ಘರಾಘವದಲ್ಲಿ ಎಂಟು ಪದಗಳ ನಾಂದಿ ಇದೆ. ಇಲ್ಲಿ ಪದಗಳೆಂದರೆ ಶ್ಲೋಕದ ಪದಗಳೂ ಆಗಬಹುದು. ಇಲ್ಲವೇ ಸುಬಂತತಿಙಂತ ಪದಗಳೂ ಆಗಬಹುದು. ಅವಾಂತರವಾಕ್ಯವಾದರೂ ಆಗಬಹುದು. ವೇಣೀಸಂಹಾರದಲ್ಲಿ ಮೂರು ನಾಂದೀ ಪದ್ಯಗಳು ಬಂದು ಒಟ್ಟು ಹನ್ನೆರಡು ಪದಗಳಿರುವುದರಿಂದ ಅದು ಹನ್ನೆರಡು ಪದಗಳ ನಾಂದಿ ಎನಿಸಿದೆ. ಮಾಲತಿಮಾಧವದಲ್ಲಿ ಎರಡು ಶ್ಲೋಕಗಳಿರುವುದರಿಂದ ನಾಂದಿಯು ಅಷ್ಟಪದಿ ಎನಿಸಿದೆ. ಸುಪ್ತಿಙಂತಪದಗಳು ಹನ್ನೆರಡು ಇರುವ ನಾಂದೀಪದ್ಯವನ್ನು ಪುಷ್ಪಮಾಲೆಯಿಂದ ಇಲ್ಲಿ ಉದಾಹರಿಸಿದೆ. "ಶಿವನು ಶಿರಸ್ಸಿನಲ್ಲಿ ಗಂಗೆಯನ್ನು ಧರಿಸಿರಲು, ಸವತಿಯಾದ ಆಕೆಯನ್ನು ಕಂಡು ಕೋಪದಿಂದ ಮುಖಚಂದ್ರನನ್ನು ಕೆಂಪಗೆಮಾಡಿಕೊಂಡು, ಆಮೇಲೆ ಶಿವನು ತನ್ನ ಪಾದಗಳಲ್ಲಿ ಬೀಳಲಾಗಿ ಮತ್ತೆ ಮುಗುಳುನಗೆಯಿಂದ ಸಂತೋಷಗೊಂಡ ಪಾರ್ವತೀ ದೇವಿಯು ನಿಮಗೆ ಸಂಪತ್ತನ್ನು ಅನುಗ್ರಹಿಸಲಿ" ಇಲ್ಲಿ ಎರಡು ಪಾದಗಳಲ್ಲೂ ಒಟ್ಟು ಎಂಟು ಪದಗಳು ಮಾತ್ರವೇ ಇರುವುದರಿಂದ ಇದು ಅಷ್ಟಪದೀ ನಾಂದಿ ಎನಿಸಿದೆ. ನಾಂದಿಯಲ್ಲಿ ದೇವಾದಿಗಳ ಪ್ರಶಂಸೆ ಇರಬೇಕೆಂಬುವನ್ನು "ದಶರೂಪಕ"ವೆಂಬ ಅಲಂಕಾರಗ್ರಂಥದ ಪ್ರಕಾರ ಸಾಮಾನ್ಯವಾಗಿ ತಿಳಿಸಿದೆಯಾದರೂ ಅದು ಇಲ್ಲಿ ಸಮ್ಮತವೆನಿಸಿಲ್ಲ. ನಟನು ರಂಗಸ್ಥಳಕ್ಕೆ ಬರುವ ಮೊದಲು ಪೂರ್ವರಂಗದ ಅಂಗವೆನಿಸಿದ ರಂಗದ್ವಾರವೆಂಬ ಕರ್ಮವನ್ನು ನಡೆಸಬೇಕು. ಅದರಲ್ಲಿಯೇ ದೇವಾದಿಗಳ ಸ್ತುತಿಯು ಬರುತ್ತದೆಯಾದ್ದರಿಂದ ನಾಂದಿಯಲ್ಲಿ ಮಂಗಳಕರವಾದ ಶಬ್ದಗಳ ಪ್ರಯೋಗವಷ್ಟೇ ಇರಬೇಕು.ಹೀಗೆ ನಾಂದೀಪದ್ಯಗಳನ್ನು ಹೇಳುವ ಮೊದಲು ರಂಗದ್ವಾರವೆಂಬುದನ್ನು ಆಚರಿಸಬೇಕೆಂದು ಭರತಮುನಿಯೂ ಹೇಳಿದ್ದಾನೆ. "ರಂಗಸ್ಥಳದಲ್ಲಿ ಯಾವುದನ್ನು ಮೊದಲು ಮಾಡಿಕೊಂಡು ಅಭಿನಯವನ್ನು ನಟರು ತೋರಿಸುವರೋ ಈ ಅಭಿನಯವೂ ಸಹ ಕೈ ತಲೆ ಮೊದಲಾದ ಅವಯವಗಳ ಚಲನೆಯಿಂದಲೂ ದೇವಾದಿಗಳನ್ನು ಸ್ತುತಿಸುವ

ನೂತಿನಿಂದಲೂ ಎಲ್ಲಿ ನಡೆಯುವುದೋ ಅದೇ ರಂಗದ್ವಾರವೆನಿಸುವುದು ? ಹೀಗೆ ಇದರಲ್ಲಿಯೇ ಆಶೀರ್ವಾದದೊಡಗೂಡಿದ ದೇವಾದಿಗಳ ಸ್ತುತಿಯು ಬರುವುದೆಂಬುದು ನಾಟ್ಯಚಾರ್ಯನಿಗೆ ಸಮ್ಮತವಾದ್ದರಿಂದ ನಾಂದಿಯಲ್ಲಿ ಇದನ್ನು ಸೇರಿಸುವುದು ಯುಕ್ತವಲ್ಲ. ಇಲ್ಲಿ ಹೇಳಿರುವ ನಾಂದಿಯನ್ನು ಈ ರಂಗದ್ವಾರಕ್ಕಿಂತಲೂ ಹಿಂದೆಯೇ ನಟರು ನಡೆಸುವುದರಿಂದ ನಾಟ್ಯಾಚಾರ್ಯನು ಅದನ್ನು ಆಚರಿಸಬೇಕೆಂದು ತಿಳಿಸಿಲ್ಲ. ಕಾಳಿದಾಸನ ಪದ್ಯಗಳಲ್ಲಿ ನಾಂದಿಗೆ ಹೇಳಿದ ಹಿಂದಿನ ಲಕ್ಷಣವು ಹೊಂದುವುದಿಲ್ಲ. "ಸ್ವರ್ಗಮರ್ತ್ಯಗಳೆರಡನ್ನು ವ್ಯಾಪಿಸಿರುವ ಪರಂಜ್ಯೋತಿಯನ್ನು ಅದ್ವಿತೀಯನೆಂದು ವೇದಾಂತಗಳು ತಿಳಿಸಿವೆ. ಅವನಲ್ಲಿ ಈಶ್ವರನೆಂಬ ಶಬ್ದವು ಯಥಾರ್ಥವೆನಿಸಿ ಬೇರೆ ಯಾರಲ್ಲೂ ಅನ್ವಯಿಸುವುದಿಲ್ಲ. ಮುಮುಕ್ಷುಗಳು ಪ್ರಾಣವಾಯುವನ್ನು ತಡೆದು ಆ ಮೂಲಕ ಅವನನ್ನು ತಮ್ಮಲ್ಲಿಯೇ ಅನುಭವಿಸುವರು. ಹಾಗೆ ಸ್ಥಿರಭಕ್ತಿಯೋಗದಿಂದಲೇ ದೊರಕುವ ಇಂತಹ ಪರಮಾತ್ಮನು ನಿಮಗೆ ಮೋಕ್ಷಸುಖವನ್ನು ಅನುಗ್ರಹಿಸಲಿ" ಇಲ್ಲಿ ನಾಂದಿಯ ಲಕ್ಷಣವೇ ಹೊಂದುವುದಿಲ್ಲ. ಇದರಿಂದ ಕವಿಯು ತನ್ನ ಕೃತಿಗೆ ಸಂಭವಿಸುವ ವಿಘ್ನಗಳನ್ನು ತಡೆಯಲಿಕ್ಕಾಗಿ ರಂಗದ್ವಾರವೆಂಬ ಮಂಗಳವನ್ನು ಮೊದಲು ಆಚರಿಸುತ್ತಾನೆ. ಆಮೇಲೆ ನಟರು ತಮ್ಮ ಅಭಿನಯದಲ್ಲಿ ಒದಗುವ ವಿಘ್ನವನ್ನು ತಡೆಯಲಿಕ್ಕಾಗಿ ಅದನ್ನೇ ಹೇಳುತ್ತಾರೆ" ಹೀಗೆ ಭಾವಿಸುವುದು ಯುಕ್ತವಾಗಿ ಕಾಣುತ್ತದೆ. ಆದ್ದರಿಂದ ಶಾಕುಂತಲ ನಾಟಕದ ಕೆಲವು ಪ್ರತಿಗಳಲ್ಲಿ 'ನಾಂದ್ಯಂತೇ ಸೂತ್ರಧಾರಃ' ಎಂಬುದು ಬಂದೊಡನೆ 'ವೇದಾಂತೇಷು' ಎಂಬ ಶ್ಲೋಕವು ಬಂದಿದೆ. ಈ ಶ್ಲೋಕವಾದಮೇಲೆ "ನಾಂದ್ಯಂತೇ ಸೂತ್ರಧಾರಃ" ಎಂದು ಕೆಲವು ಕಡೆ ಬಂದಿದೆ. ಇದರ ಅಭಿಪ್ರಾಯವಿಷ್ಟೇ. 'ನಾಂದಿಯ ಕೊನೆಯಲ್ಲಿ ಸೂತ್ರಧಾರನು ಇದನ್ನು ಪ್ರಯೋಗಿಸಿದ್ದಾನೆ. ಇನ್ನು ಮುಂದೆ ನಾಟಕವು ಆರಂಭವಾಗುತ್ತದೆ' ಎಂಬುದೇ ಇಲ್ಲಿಯ ಅಭಿಪ್ರಾಯ. ಇದೇ ಕವಿಯ ಅಭಿಪ್ರಾಯವೆಂಬುದು ಇಲ್ಲಿ ಸೂಚಿತವಾಗುತ್ತದೆ.

ಪೂರ್ವರಂಗಂ ವಿಧಾಯೈವ ಸೂತ್ರಧಾರೋ ನಿವರ್ತತೇ ।
ಪ್ರವಿಶ್ಯ ಸ್ಥಾಪಕಸ್ತದ್ವತ್ ಕಾವ್ಯಮಾಸ್ಥಾಪಯೇತ್ತತಃ ॥
ದಿವ್ಯಮರ್ತ್ಯೇ ಸ ತದ್ರೂಪೋ ಮಿಶ್ರಮನ್ಯತರಸ್ತಯೋಃ ।
ಸೂಚಯೇದ್ವಸ್ತು ಬೀಜಂ ವಾ ಮುಖಂ ಪಾತ್ರಮಥಾಪಿ ವಾ ॥

ಕಾವ್ಯಸ್ಯಾರ್ಥಸ್ಯ ಸ್ಥಾಪನಾತ್ ಸ್ಥಾಪಕಃ. ತದ್ವದಿತಿ ಸೂತ್ರಧಾರಸದೃಶಗುಣಾಕಾರಃ. ಇದಾನೀಂ ಪೂರ್ವರಂಗಸ್ಯ ಸಮ್ಯಕ್ ಪ್ರಯೋಗಾಭಾವಾತ್ ಏಕ ಏವ ಸೂತ್ರಧಾರಃ ಸರ್ವಂ ಪ್ರಯೋಜಯತೀತಿ ವ್ಯವಹಾರಃ. ಸ ಸ್ಥಾಪಕೋ ದಿವ್ಯಂ ವಸ್ತು ದಿವ್ಯೋ ಭೂತ್ವಾ ಮರ್ತ್ಯಂ ಮರ್ತ್ಯೋ ಭೂತ್ವಾ ಮಿಶ್ರಂ ಚ ದಿವ್ಯಮರ್ತ್ಯಯೋರನ್ಯತರೋ ಭೂತ್ವಾ ಸೂಚಯೇತ್. ವಸ್ತು ಇತಿವೃತ್ತಮ್. ಯಥಾ ಉದಾತ್ತರಾಘವೇ–

ರಾಮೋ ಮೂರ್ಧ್ನಿ ನಿಧಾಯ ಕಾನನಮಗಾನ್ಮಾಲಾಮಿವಾಜ್ಞಾಂ ಗುರೋಃ
ತದ್ಭಕ್ತ್ಯಾ ಭರತೇನ ರಾಜ್ಯಮಖಿಲಂ ಮಾತ್ರಾ ಸಹೈವೋಜ್ಝಿತಮ್ ।

ತಾ ಸುಗ್ರೀವವಿಭೀಷಣಾವನುಗತೌ ನೀತೌ ಪರಾಂ ಸಂಪದಂ
ಪ್ರೋತ್ಸಿಕ್ತಾ ದಶಕಂಧರಪ್ರಭೃತಯೋ ಧ್ವಸ್ತಾಃ ಸುಮಸ್ತಾ ದ್ವಿಷಃ ॥

ಬೀಜಂ ಯಥಾ ರತ್ನಾವಳ್ಯಾಮ್-

ದ್ವೀಪಾದನ್ಯಸ್ಮಾದಪಿ ಮಧ್ಯಾದಪಿ ಜಲನಿಧೇರ್ದಿಶೋಽಪ್ಯಂತಾತ್ ।
ಆನೀಯ ಝಟಿತಿ ಘಟಯತಿ ವಿಧಿರಭಿಮತಮಭಿಮುಖೀಭೂತಃ ॥

ಅತ್ರ ಹಿ ಸಮುದ್ರೇ ಪಹಿತ್ರಭಂಗಮಗ್ನೋತ್ಥಿತಾಯಾಃ ರತ್ನಾವಳ್ಯಾಃ ಅನುಕೂಲದೈವಲಾಲಿತೋ ವತ್ಸರಾಜಗೃಹಪ್ರವೇಶೋ ಯೌಗಂಧರಾಯಣವ್ಯಾಪಾರಮಾರಭ್ಯ ರತ್ನಾವಳೀಪ್ರಾಪ್ತೌ ಬೀಜಮ್.

ಮುಖಂ ಶ್ಲೇಷಾದಿನಾ ಪ್ರವೃತ್ತವೃತ್ತಾಂತಪ್ರತಿಪಾದಕೋ ವಾಗ್ವಿಶೇಷಃ.

ಯಥಾ— ಆಸಾದಿತಪ್ರಕಟನಿರ್ಮಲಚಂದ್ರಹಾಸಃ

ಪ್ರಾಪ್ತಃ ಶರತ್ಸಮಯ ಏಷ ವಿಶುದ್ಧಕಾಂತಿಃ ।
ಉತ್ಖಾಯ ಗಾಢತಮಸಂ ಘನಕಾಲಮುಗ್ರಂ।
ರಾಮೋ ದಶಾಸ್ಯಮಿವ ಸಂಭೃತಬಂಧುಜೀವಃ ॥

ಪಾತ್ರಂ ಯಥಾ ಶಾಕುಂತಲೇ—ತವಾಸ್ಮಿ ಗೀತರಾಗೇಣ ಹರಿಣಾ ಪ್ರಸಭಂ ಹೃತಃ ।
ಏಷ ರಾಜೇವ ದುಷ್ಯಂತಃ ಸಾರಂಗೇಣಾತಿರಂಹಸಾ ॥

ರಂಗಂ ಪ್ರಸಾದ್ಯ ಮಧುರೈಃ ಶ್ಲೋಕೈಃ ಕಾವ್ಯಾರ್ಥಸೂಚಕೈಃ ।
ರೂಪಕಸ್ಯ ಕವೇರಾಖ್ಯಾಂ ಗೋತ್ರಾದ್ಯಪಿ ಸ ಕೀರ್ತಯೇತ್ ॥
ಋತುಂ ಚ ಕಂಚಿತ್ ಪ್ರಾಯೇಣ ಭಾರತೀಂ ವೃತ್ತಿಮಾಶ್ರಿತಃ ।

ಸಃ ಸ್ಥಾಪಕಃ. ಪ್ರಾಯೇಣೇತಿ ಕ್ವಚಿದೃತೋರಕೀರ್ತನಮಪಿ. ಯಥಾ-ರತ್ನಾವಳ್ಯಾಮ್. ಭಾರತೀವೃತ್ತಿಸ್ತು—

ಭಾರತೀ ಸಂಸ್ಕೃತಪ್ರಾಯೋ ವಾಗ್ವ್ಯಾಪಾರೋ ನರಾಶ್ರಯಃ ।

ಸಂಸ್ಕೃತಬಹುಲೋ ವಾಕ್ಪ್ರಧಾನೋ ವ್ಯಾಪಾರೋ ಭಾರತೀ—

ತಸ್ಯಾಃ ಪ್ರರೋಚನಾ ವೀಥೀ ತಥಾ ಪ್ರಹಸನಾಮುಖೇ।
ಅಂಗಾನ್ಯತ್ರೋನ್ಮುಖೀಕಾರಃ ಪ್ರಶಂಸಾತಃ ಪ್ರರೋಚನಾ ॥

ಪ್ರಸ್ತುತಾಭಿನಯೇಷು ಪ್ರಶಂಸಾತಃ ಶ್ರೋತೃಣಾಂ ಪ್ರವೃತ್ತ್ಯುನ್ಮುಖೀಕರಣಂ ಪ್ರರೋಚನಾ. ಯಥಾ ರತ್ನಾವಳ್ಯಾಮ್—

ಶ್ರೀಹರ್ಷೋ ನಿಪುಣಃ ಕವಿಃ ಪರಿಷದಪ್ಯೇಷಾ ಗುಣಗ್ರಾಹಿಣೀ ।
ಲೋಕೇ ಹಾರಿ ಚ ವತ್ಸರಾಜಚರಿತಂ ನಾಟ್ಯೇ ಚ ದಕ್ಷಾ ವಯಮ್ ॥
ವಸ್ತ್ವೇಕೈಕಮಪೀಹ ವಾಂಛಿತಫಲಪ್ರಾಪ್ತೇಃ ಪದಂ ಕಿಂ ಪುನಃ ।
ಮದ್ಭಾಗ್ಯೋಪಚಯಾದಯಂ ಸಮುದಿತಃ ಸರ್ವೋ ಗುಣಾನಾಂ ಗಣಃ ॥

ವೀಥೀಪ್ರಹಸನೇ ವಕ್ಷ್ಯೇತೇ.

ನಟೀ ವಿದೂಷಕೋ ವಾಪಿ ಪಾರಿಪಾರ್ಶ್ವಿಕ ಏವ ವಾ ।
ಸೂತ್ರಧಾರೇಣ ಸಹಿತಾಃ ಸಂಲಾಪಂ ಯತ್ರ ಕುರ್ವತೇ ॥
ಚಿತ್ರೈರ್ವಾಕ್ಯೈಃ ಸ್ವಕಾರ್ಯೋತ್ಥೈಃ ಪ್ರಸ್ತುತಾಕ್ಷೇಪಿಭಿರ್ಮಿಥಃ ।
ಆಮುಖಂ ತತ್ತು ವಿಜ್ಞೇಯಂ ನಾಮ್ನಾ ಪ್ರಸ್ತಾವನಾಪಿ ಸಾ ॥

ಸೂತ್ರಧಾರಸದೃಶತ್ವಾತ್ ಸ್ಥಾಪಕೋಽಪಿ ಸೂತ್ರಧಾರ ಉಚ್ಯತೇನೆ ತಸ್ಯಾನುಚರಃ ಪಾರಿಪಾರ್ಶ್ವಿಕಸ್ತಸ್ಮಾತ್ ಕಿಂಚಿದೂನೋ ನಟಃ.

ಉದ್ಘಾತ್ಯಕಃ ಕಥೋದ್ಘಾತಃ ಪ್ರಯೋಗಾತಿಶಯಸ್ತಥಾ ।
ಪ್ರವರ್ತಕಾವಲಗಿತೇ ಪಂಚ ಪ್ರಸ್ತಾವನಾಭಿಧಾಃ ॥

ತತ್ರ— ಪದಾನಿ ತ್ವಗತಾರ್ಥಾನಿ ತದರ್ಥಗತಯೇ ನರಾಃ ।
ಯೋಜಯಂತಿ ಪದೈರನ್ಯೈಃ ಸ ಉದ್ಘಾತ್ಯಕ ಉಚ್ಯತೇ ॥

ಯಥಾ ಮುದ್ರಾರಾಕ್ಷಸೇ ಸೂತ್ರಧಾರಃ—
ಕ್ರೂರಗ್ರಹಃ ಸಕೇತುಶ್ಚಂದ್ರಮಸಂಪೂರ್ಣಮಂಡಲಮಿದಾನೀಮ್
ಅಭಿಭವಿತುಮಿಚ್ಛತಿ ಬಲಾತ್—

ಅನಂತರಂ "ನೇಪಥ್ಯೇ–ಆಃ ? ಕ ಏಷ ಮಯಿ ಜೀವತಿ ಚಂದ್ರಗುಪ್ತಮಭಿಭವಿತುಮಿಚ್ಛತಿ'' ಇತಿ.

ಅತ್ರ ಅನ್ಯಾರ್ಥವಂತ್ಯಪಿ ಪದಾನಿ ಹೃದಯಸ್ಥಾರ್ಥಗತ್ಯಾ ಅರ್ಥಾಂತರೇ ಸಂಕ್ರಮಯ್ಯ ಪಾತ್ರಪ್ರವೇಶಃ.

ರಂಗಸ್ಥಳಕ್ಕೆ ಬಂದು ನಾಟಕದ ಕಥಾವಸ್ತುವನ್ನು ಮೊದಲು ಸೂಚಿಸುವವನೇ ಸೂತ್ರಧಾರನೆನಿಸುವನು. ಇವನು ನಾಟಕದ ಆರಂಭದಲ್ಲಿ ವಿಘ್ನಪರಿಹಾರಕ್ಕಾಗಿ ದೇವತಾ ಪ್ರಾರ್ಥನೆ ಎನಿಸಿದ ನಾಂದೀ ಪದ್ಯಗಳನ್ನು ಹೇಳುವ ಮೂಲಕವೇ ನಾಟಕದ ಮುಂದಿನ ಕಥೆಯನ್ನು ಸೂಚಿಸಿ ರಂಗಸ್ಥಳದಿಂದ ಹೊರಡುವನು. ಆಗ ಅವನಂತೆಯೇ ಮತ್ತೊಬ್ಬ ನಟನು ಅಲ್ಲಿಗೆ ಬಂದು ಕಥೆಯ ವಿಷಯವನ್ನು ಸೂಚಿಸುವನು. ಅವನು ಸ್ಥಾಪಕನೆನಿಸುವನು. ಆ ಸ್ಥಾಪಕನು ದಿವ್ಯನೆನಿಸಿ ದಿವ್ಯವಾದ ವಸ್ತುವನ್ನಾಗಲೀ ಮುಖವನ್ನಾಗಲೀ ಪಾತ್ರವನ್ನಾಗಲೀ ಸೂಚಿಸುವನು. ಅವನು ಮರ್ತ್ಯನೆನಿಸಿ ಈ ಲೋಕಕ್ಕೆ ಸಂಬಂಧಿಸಿದ ವಸ್ತು ಮುಖ ಪಾತ್ರಗಳನ್ನು ಸೂಚಿಸುವನು. ದಿವ್ಯಮರ್ತ್ಯಗಳೆರಡೂ ಮಿಶ್ರವಾಗಿರುವ ವಸ್ತು ಪಾತ್ರಗಳನ್ನು ಮತ್ತೊಬ್ಬನು ಸೂಚಿಸುವನು. ಹೀಗೆ ಸೂತ್ರಧಾರನು ನಾಂದೀ ಪದ್ಯಗಳನ್ನು ಮಾತ್ರವೇ ತಿಳಿಸುವನು. ಆ ಮೂಲಕ ಅವನು ಕಥೆಯ ವಸ್ತುವಿನ ಬಗ್ಗೆ ಸೂಚನೆಯನ್ನು ಕೆಲವೆಡೆಗಳಲ್ಲಿ ಕೊಡುವನು. ಹಾಗೆ ಸೂಚಿಸುವುದೇ ಮುದ್ರಾಲಂಕಾರವೆನಿಸುವುದು. ಇಂತಹ ಸೂಚನೆಯು ಎಲಾಕಡೆಗಳಲ್ಲೂ ಇರುವುದಿಲ್ಲ. ಅದು ಇಲ್ಲದ ಕಡೆ ದೇವರ ಪ್ರಾರ್ಥನೆ ಎನಿಸಿದ ನಾಂದೀಪದ್ಯವನ್ನು ಹೇಳಿಹೋಗುವನು. ಅವನು ರಂಗಸ್ಥಳದಿಂದ ಹೋದೊಡನೆಯೇ ಅವನಂತೆ ಮತ್ತೊಬ್ಬನು ರಂಗಸ್ಥಳಕ್ಕೆ ಬಂದು ಪೂರ್ವರಂಗದ ಕೆಲಸವನ್ನು ಪೂರ್ಣಗೊಳಿಸುವನು. ಸೂತ್ರಧಾರನು ಪೂರ್ವರಂಗದ ಕೆಲಸವನ್ನು

ಚೆನ್ನಾಗಿ ನಡಸದೇ ಇದ್ದುದರಿಂದ ಅವನ್ನು ಸ್ಥಾಪಕನೆಂಬ ಬೇರೊಬ್ಬನು ನಡೆಸಿ ಆ ಒಬ್ಬ ಸೂತ್ರಧಾರನೇ ಎಲ್ಲವನ್ನೂ ನಡೆಸುತ್ತಿರುವನೆಂಬ ಭಾವನೆಯನ್ನು ಹುಟ್ಟಿಸುವನು. ಈ ಸ್ಥಾಪಕನು ದಿವ್ಯನೆನಿಸಿ ದಿವ್ಯವಸ್ತುವನ್ನೂ, ಮರ್ತ್ಯನೆನಿಸಿ ಮರ್ತ್ಯವಸ್ತುವನ್ನೂ ಮಿಶ್ರನೆನಿಸಿ ಮಿಶ್ರವಸ್ತುವನ್ನೂ ಸೂಚಿಸುವನು. ವಸ್ತುವೆಂದರೆ ಕಥೆಯ ಇತಿವೃತ್ತ ; ಹಿಂದಿನ ಸಮಾಚಾರ. ಉದಾತ್ತರಾಘವದಲ್ಲಿ ಅದು ಹೀಗೆ ಬಂದಿದೆ. "ರಾಮನು ತಂದೆಯ ಆಜ್ಞೆಯನ್ನು ಪುಷ್ಪಮಾಲಿಕೆಯಂತೆ ಶಿರಸಾವಹಿಸಿ ನಡೆಸಲಿಕ್ಕಾಗಿ ಕಾಡಿಗೆ ತೆರಳಿದನು. ಭರತನು ಆ ರಾಮನಲ್ಲಿಟ್ಟಿದ್ದ ಭಕ್ತಿಯಿಂದ ತನ್ನ ತಾಯಿ ಕೈಕೆಯೊಡನೆಯೇ ಸಮಸ್ತರಾಜ್ಯವನ್ನು ತೊರೆದನು. ಸುಗ್ರೀವ ವಿಭೀಷಣರು ಹಿಂದೆ ಕಳೆದುಕೊಂಡಿದ್ದ ರಾಜ್ಯಗಳನ್ನು ಪಡೆದು ವೈಭವದಿಂದ ನೆಲಸಿದರು. ದುರಹಂಕಾರದಿಂದ ಮೆರೆದ ರಾವಣನೇ ಮೊದಲಾದ ದುಷ್ಟಶತ್ರುಗಳು ನಾಶಗೊಂಡರು." ಕಥೆಯ ಆರಂಭದಲ್ಲಿ ಸೂತ್ರಧಾರನು ಪೂರ್ವರಂಗವನ್ನು ಮುಗಿಸಿ ರಂಗಸ್ಥಳದಿಂದ ತೊಲಗಿದ ಮೇಲೆ ಈ ಪದ್ಯವನ್ನು ಸ್ಥಾಪಕನು ಸಾಮಾನ್ಯವಾಗಿ ಸೂಚಿಸಿದಂತಾಯಿತು. ಇಲ್ಲಿ ತಿಳಿಸಿರುವ ವಸ್ತು ದಿವ್ಯವ್ಯಕ್ತಿಗಳಿಗೆ ಸಂಬಂಧಿಸಿರುವುದರಿಂದ ಅದನ್ನು ಸೂಚಿಸುವ ಸ್ಥಾಪಕನು ದಿವ್ಯನೆನಿಸಿರುವನು. ಹಾಗೆಯೇ ಸ್ಥಾಪಕನು ಕಥೆಯ ಬೀಜವನ್ನು ಸೂಚಿಸುವನು. ಇದು ರತ್ನಾವಳಿಯಲ್ಲಿ ಚೆನ್ನಾಗಿ ತಿಳಿದುಬರುತ್ತದೆ. "ವಿಧಿಯು ಪ್ರಸನ್ನವಾದರೆ ಬೇರೊಂದು ದ್ವೀಪದಿಂದಾಗಲೀ, ಸಮುದ್ರದ ಮಧ್ಯದಿಂದಾಗಲೀ, ದಿಕ್ಕಿನ ಕೊನೆಯಿಂದಾಗಲೀ ಅನುಕೂಲವಾದ ವಸ್ತುವನ್ನು ತಂದು ಬೇಗನೆ ನಮಗೆ ದೊರಕಿಸುತ್ತದೆ." ಅಸಾಧ್ಯವಾದ ಕಡೆಯಿಂದ ತಂದು ನಮಗೆ ಅನುಭವಿಸಲಿಕ್ಕೆ ಯೋಗ್ಯವಾಗುವಂತೆ ಮಾಡುವ ಲೀಲೆ ವಿಧಿಯಲ್ಲಿ ಅಡಗಿದೆ ಎಂದು ಅವನು ತಿಳಿಸುವುದರಿಂದ ರತ್ನಾವಳೀನಾಟಕೆಯಲ್ಲಿ ಕಥೆಯ ಮುಂದಿನ ಬೀಜವನ್ನು ಸೂಚಿಸಿದಂತಾಯಿತು. ಸಮುದ್ರದಲ್ಲಿ ಹಡಗು ಮುರಿದುಹೋದ್ದರಿಂದ ಮೊದಲು ಮುಳುಗಿದ್ದು ಆಮೇಲೆ ಆಕಸ್ಮಿಕವಾಗಿ ಮೇಲಕ್ಕೆ ಎದ್ದುಬಂದ ರತ್ನಾವಳಿ ಎಂಬ ನಾಯಿಕೆಯು ಅನುಕೂಲವಾದ ದೈವದ ಸಂಘಟನೆಯಿಂದ ವತ್ಸರಾಜನ ಮನೆಗೆ ಹೋಗುವಂತಾಯಿತು. ಹೀಗೆ ಅವಳು ಬಂದದ್ದು ಯೌಗಂಧರಾಯಣನ ಪ್ರಯತ್ನದಿಂದ ಆರಂಭವಾಗಿ ವತ್ಸರಾಜನಿಗೆ ಆಕೆಯು ದೊರೆಯುವುದಕ್ಕೆ ಬೀಜವೆನಿಸಿದೆ. ಯೌಗಂಧರಾಯಣನ ಸಂಧಾನದಿಂದ ಆರಂಭವಾಗಿ ವತ್ಸರಾಜನ ಅರಮನೆಗೆ ರತ್ನಾವಳಿಯು ಬಂದದ್ದು. ಮುಂದೆ ಅವಳು ವತ್ಸರಾಜನಿಗೆ ದೊರಕುವುದಕ್ಕೆ ಬೀಜವೆನಿಸಿದೆ. ಹೀಗೆ ಕಥೆಯ ಹಿಂದಿನ ವಸ್ತುವನ್ನೂ ಮುಂದಿನ ಬೀಜವನ್ನೂ ಸೂಚಿಸುವಂತೆಯೇ ಸ್ಥಾಪಿತನು ಕಥೆಯ ಮುಖವನ್ನು ತಿಳಿಸುವವನು. ಪ್ರಕೃತವಸ್ತುವನ್ನು ಶ್ಲೇಷದ ಮೂಲಕತಿಳಿಸುವ ಮಾತೇ ಮುಖವೆನಿಸುವುದು ಈ ಮುಂದಿನ ಪದ್ಯದಲ್ಲಿ ಇದನ್ನು ಕಾಣಬಹುದು "ವಿಶದವೂ ನಿರ್ಮಲವೂ ಆದ ಚಂದ್ರನ ವಿಕಾಸವನ್ನು ಹೊಂದಿ (ತೀಕ್ಷ್ಣವಾದ ಚಂದ್ರಹಾಸನೆಂಬ ಖಡ್ಗವನ್ನು ಪಡೆದು) ಮೇಘಗಳೆಲ್ಲವೂ ತೊಲಗಿದ್ದುದರಿಂದ ಪ್ರಕಾಶಮಾನವಾದ ಕಾಂತಿಯಿಂದ ಶೋಭಿಸುತ್ತಿದ್ದು (ಶತ್ರುವನ್ನು ಸೋಲಿಸಿದ್ದ

ರಿಂದ ವಿಕಸಿತವಾದ ಕಾಂತಿಯನ್ನು ಹೊಂದಿ) ಬಂಧುಜೀವಗಳೆಂಬ ಪುಷ್ಪಗಳನ್ನು ಅರಳಿಸಿದ (ರಾವಣನನ್ನು ಕೊಂದಿದ್ದರಿಂದ ಅವನ ಸಂಬಂಧಿಗಳಾದ ವಿಭೀಷಣ ಮೊದಲಾದವರಿಗೆ ಸುಖಪಡಿಸಿದ) ಶರತ್ಕಾಲವು ರಾವಣನನ್ನು ರಾಮನು ನಾಶಮಾಡಿ ಭೀಕರವಾದ ಅಜ್ಞಾನವನ್ನು ತೊಲಗಿಸಿದಂತೆ ಮೇಘದ ಆವರಣದಿಂದ ಎಲ್ಲೆಲ್ಲಿಯೂ ಗಾಢಾಂಧಕಾರದಿಂದ ತುಂಬಿಕೊಂಡು ಭಯಂಕರವಾಗಿದ್ದ ವರ್ಷಾಕಾಲವನ್ನು ತೊಲಗಿಸುತ್ತಲೇ ವ್ಯಾಪಿಸಿತು. ರಾಮನಿಗೂ ಶರತ್ಕಾಲಕ್ಕೂ ಅನ್ವಯಿಸುವಂತೆ ಶ್ಲೇಷದಿಂದ ಪದಗಳನ್ನು ಪ್ರಯೋಗಿಸುವ ಮೂಲಕ ರಾಮನು ರಾವಣನನ್ನು ಕೊಂದು ಅವನ ಬಂಧುಗಳಿಗೆ ಅನುಕೂಲಪಡಿಸಿ ಜನರ ಭಯಶೋಕ ಅಜ್ಞಾನಗಳನ್ನು ತೊಲಗಿಸಿದನೆಂದು ರಾಮನ ವೃತ್ತಾಂತವನ್ನು ಸೂಚಿಸಲಾಗಿದೆ. ಶಾಕುಂತಲದ ಕಥೆಯಲ್ಲಿ ಮುಂದೆ ಬರುವ ಪಾತ್ರದ ಸೂಚನೆ ಇರುವುದನ್ನು ಕಾಣಬಹುದು. 'ಹೆಚ್ಚು ವೇಗದಿಂದಕೂಡಿ ದೂರಪ್ರದೇಶಕ್ಕೆ ಸೆಳೆದುಕೊಂಡ. ಹೋದ ಜಿಂಕೆಗೆ ಈ ದುಷ್ಯಂತನು ವಶದಾದಂತೆ ಮನೋಹರವಾಗಿರುವ ನಿನ್ನ ಗಾನಸ್ವರದಿಂದ ಆಕೃಷ್ಟನಾಗಿ ನಾನು ನಿನಗೆ ವಶನಾಗಿರುವೆನು.' ಇಲ್ಲಿ ದುಷ್ಯಂತನೆಂಬ ಪಾತ್ರದ ಪ್ರವೇಶವನ್ನು ಸೂಚಿಸಿದಂತಾಯಿತು. ಈ ಸ್ಥಾಪಕನು ಇಷ್ಟು ಕೆಲಸವನ್ನು ಮಾಡಬೇಕಾಗಿದೆ. ಇವೆಲ್ಲವನ್ನು ಸೂಚಿಸಿಲು ಅನುಕೂಲವಾಗುವಂತೆ ಮಧುರವಾದ ಶ್ಲೋಕಗಳನ್ನು ಹೇಳಿ ಸಭ್ಯರನ್ನು ಪ್ರಸನ್ನಗೊಳಿಸಿ ನಾಟಕದ ಹೆಸರು, ಕವಿಯ ಹೆಸರು ಗೋತ್ರ, ವಂಶ ಮೊದಲಾದವನ್ನು ತಿಳಿಸಬೇಕು. ಯಾವುದಾದರೊಂದು ಋತುವನ್ನು ಅವನು ಸೂಚಿಸಬೇಕು. ಇದು ಕೆಲವುಕಡೆ ಇರುವುದಿಲ್ಲ. ಅವನು ಭಾರತೀ ಎಂಬ ವೃತ್ತಿಯನ್ನು ಅನುಸರಿಸಬೇಕು. ಸಂಸ್ಕೃತದಲ್ಲಿ ವ್ಯವಹರಿಸವುದೇ ಭಾರತೀವೃತ್ತಿ ಎನಿಸುವುದು. ಕೇವಲ ಮನುಷ್ಯರ ವಿಷಯವಾಗಿ ಹಾಗೆ ವ್ಯವಹರಿಸುವುದೇ ಅಂತಹ ವೃತ್ತಿ ಎನಿಸುವುದು. ಅಂದರೆ ಹೆಚ್ಚಿನ ಸಂಸ್ಕೃತವನ್ನು ಉಪಯೋಗಿಸಿ ಕೊಂಚ ಪ್ರಾಕೃತವನ್ನು ಉಪಯೋಗಿಸಬಹುದೆಂದು ಇದರಿಂದ ತಿಳಿದುಬರುವುದು. ಹಾಗೆ ತಿಳಿಸುವಾಗ ಕೊಂಚವಾಗಿ ದೇಹದ ಅವಯವಗಳ ಮೂಲಕ ಅಭಿನಯವನ್ನು ಅವನು ನಡೆಸಬೇಕು. ಪ್ರರೋಚನೆ, ವೀಥಿ, ಪ್ರಹಸನ-ಆಮುಖ ಇವು ಈ ಭಾರತೀವೃತ್ತಿಯ ಅಂಗಗಳು, ಈ ನಾಲ್ಕರಲ್ಲಿ ಪ್ರರೋಚನೆಯು ಕವಿಯನ್ನೂ ಕಾವ್ಯವನ್ನೂ ಸಭ್ಯರನ್ನೂ ಪ್ರಶಂಸೆ ಮಾಡುವ ಮೂಲಕ ಸಭ್ಯರಿಗೆ ನಾಟಕದಲ್ಲಿ ರುಚಿ ಹುಟ್ಟುವಂತೆ ಮಾಡುತ್ತದೆ. ಅವರಿಗೆ ಕಥೆಯನ್ನು ಕೇಳುವುದರಲ್ಲಿ ಪ್ರವೃತ್ತಿಯನ್ನು ಹುಟ್ಟಿಸುವುದೇ ಪ್ರರೋಚನೆ. ರತ್ನಾವಳಿಯಲ್ಲಿ ಇದನ್ನು ಕಾಣಬಹುದು. "ಶ್ರೀಹರ್ಷನು ನಿಪುಣನಾದ ಕವಿ. ಸಭ್ಯರೂ ಸಹ ಗುಣಗಾನಗಳು ಗ್ರಾಹಿ ಕತೆಯಂತೂ ವತ್ಸರಾಜನಿಗೆ ಸಂಬಂಧಿಸಿದ್ದರಿಂದ ಮನೋಹರವೆನಿಸಿದೆ. ಇದನ್ನು ಅಭಿನಯಿಸುವುದ ರಲ್ಲಿ ನಾವೂ ಸಹ ಚೆನ್ನಾಗಿ ಪಳಗಿದವೆವು. ಇಲ್ಲಿ ಒಂದೊಂದೇ ಅಂಶವೂ ಸಹ ಅವರವರ ಇಷ್ಟಾರ್ಥವನ್ನು ಸಲ್ಲಿಸಲು ಸಮರ್ಥವೆನಿಸಿದು ನನ್ನ ಸುದೈವನ ಏಳಿಗೆಯಂದ ಜನರಿಗೆ ಸಂತೋಷವನ್ನುಂಟುಮಾಡುವಂತಹ ಗುಣಗಳೆಲ್ಲವೂ ಇಲ್ಲಿ ಸೇರಿವೆ" ಇಲ್ಲಿ ಎಲ್ಲರ ಪ್ರಶಂಸೆಯು ಬಂದು ಪ್ರೋತ್ಸಾಹಗಳಿಗೆ ಮುಂದೆ ನಡೆಯುವ

ನಾಟಕವನ್ನು ನೋಡಲಿಕ್ಕೆ ರುಚಿಯುಂಟಾಗುತ್ತದೆ. ವೀಥಿ ಮತ್ತು ಪ್ರಹಸನಗಳೆಂಬ ಅಂಗಗಳನ್ನು ಮುಂದೆ ತಿಳಿಸಲಾಗುವುದು. ಈಗ ಆಮುಖವೆಂಬ ಅಂಗವನ್ನು ತಿಳಿಸುತ್ತಾನೆ. ನಟಿಯಾಗಲೀ ವಿದೂಷಕನಾಗಲೀ ಪಾರಿಪಾರ್ಶ್ವಿಕನಾಗಲೀ ಸೂತ್ರಧಾರನೊಡನೆ ಸಂಲಾಪವನ್ನು ನಡೆಸುತ್ತ ತಮ್ಮ ಕಾರ್ಯಕ್ಕೆ ಸಂಬಂಧಿಸಿದಂತೆಯೂ ಪ್ರಕೃತ ವಸ್ತುವನ್ನು ತಿಳಿಸುವಂತೆಯೇ ಚಮತ್ಕಾರವನ್ನು ಹುಟ್ಟಿಸುವ ಮಾತುಗಳನ್ನು ಪ್ರಯೋಗಿಸುವುದೇ ಆಮುಖವೆನಿಸುವುದು. ಇದನ್ನು ಪ್ರಸ್ತಾವನೆ ಎಂದೂ ಕರೆಯಲಾಗಿದೆ. ಇಲ್ಲಿ ಸೂತ್ರಧಾರನು ಇಷ್ಟೆಲ್ಲವನ್ನೂ ಮಾಡುವನೆಂದು ಹೇಳಿದ್ದು ಹೇಗೆ ಹೊಂದುತ್ತದೆ? ಎಂದು ಆಕ್ಷೇಪವು ಬರುತ್ತದೆ. ಅದರಲ್ಲಿ ಯಾವ ದೋಷವೂ ಇಲ್ಲ. ಅಲ್ಲಿ ತಿಳಿಯಬೇಕಾದ ಅಂಶವಿಷ್ಟು. ಅವನು ರಂಗಸ್ಥಳವನ್ನು ಬಿಟ್ಟು ಹೋದಮೇಲೆ ಅವನಿಗೆ ಸದೃಶನಾದ ಮತ್ತೊಬ್ಬ ನಟನು ಬರುವನು. ಇವನು ಸ್ಥಾಪಕನೆನಿಸುವನು. ಈ ಸ್ಥಾಪಕನು ಗುಣದಲ್ಲಿ ವೇಷದಲ್ಲಿ ಮಾತಿನಲ್ಲಿ ಸೂತ್ರಧಾರನಿಗೆ ಸದೃಶನಾದ್ದರಿಂದ ಅವನನ್ನು ಸೂತ್ರಧಾರನೆಂದೇ ಕರೆಯಲಾಗಿದೆ. ಅವನಿಗೆ ಜೊತೆಯಲ್ಲಿಯೇ ಇದ್ದು ವೇಷಭೂಷಣಗಳಲ್ಲಿ ಅವನಿಗೆ ಕೊಂಚ ಕಡಮೆ ದರ್ಜೆಯವನನ್ನು ಪಾರಿಪಾರ್ಶ್ವಕನೆಂದು ಕರೆಯಲಾಗಿದೆ.

ಈ ಪ್ರಸ್ತಾವನೆಯಲ್ಲಿ ಉದ್ಘಾತ್ಯಕ, ಕಥೋದ್ಘಾತ, ಪ್ರಯೋಗಾತಿಶಯ, ಪ್ರವರ್ತಕ, ಅವಲಗಿತ ಎಂದು ಐದು ಬಗೆಗಳಿವೆ. ಅವುಗಳಲ್ಲಿ ಉದ್ಘಾತ್ಯಕವನ್ನು ಇಲ್ಲಿ ತಿಳಿಸುತ್ತಾನೆ. ಪ್ರಸ್ತಾವನೆಯಲ್ಲಿ ನಟಿ ಮೊದಲಾದವರು ಪ್ರಯೋಗಿಸುವ ಪದಗಳಿಗೆ ಅನೇಕ ಅರ್ಥಗಳು ಸಂಭವಿಸುವುದರಿಂದ ಪ್ರಕೃತಸಂದರ್ಭಕ್ಕೆ ಇದೇ ಅರ್ಥವೆಂಬ ನಿರ್ಣಯವು ಸಭ್ಯರಿಗೆ ಆಗುವಂತೆ ಬೇರೆ ಪದಗಳನ್ನುಪ್ರಯೋಗಿಸಿ ಅದನ್ನು ವಿಶದಪಡಿಸುವುದೇ ಉದ್ಘಾತ್ಯಕವೆನಿಸುತ್ತದೆ.ಇದನ್ನು ಮುದ್ರಾರಾಕ್ಷಸವೆಂಬ ನಾಟಕದಲ್ಲಿ ನಾವು ಕಾಣಬಹುದು. ಅಲ್ಲಿ ಸೂತ್ರಧಾರನು ಹೀಗೆ ತಿಳಿಸುತ್ತಾನೆ. "ಅಶುಭವಾದ ಫಲವನ್ನು ಕೊಡುವುದರಿಂದ ಹಿಂಸಿಸುವ ಸ್ವಭಾವವುಳ್ಳ (ಕ್ರೂರಬುದ್ಧಿಯುಳ್ಳ) ರಾಕ್ಷಸನು (ಮಲಯಕೇತುವಿನೊಡಗೂಡಿ) ಕೆಲವು ಕಲೆಗಳೊಡನೆ ಮಾತ್ರವೇ ಶೋಭಿಸುತ್ತಿರುವ ಚಂದ್ರನನ್ನು (ಈಗಷ್ಟೆತಾನೆ ಸಿಂಹಾಸನವನ್ನೇರಿ ಇನ್ನೂ ಹೆಚ್ಚು ಶಕ್ತಿಯನ್ನು ಗಳಿಸದೇ ಇರುವ ಚಂದ್ರಗುಪ್ತನನ್ನು) ಬಲಪ್ರಯೋಗದಿಂದ ತಿರಸ್ಕಸಲಿಕ್ಕೆ (ನುಂಗಲಿಕ್ಕೆ) ಪ್ರಯತ್ನಿಸುತ್ತಿರುವನು," ಅವನು ಇಷ್ಟನ್ನು ಹೇಳುತ್ತಿರುವಾಗ ಅಷ್ಟರೊಳಗೆ ರಂಗಸ್ಥಳದ ಹಿಂಭಾಗದಲ್ಲಿ "ನಾನು ಇರುವಾಗ ಚಂದ್ರಗುಪ್ತನನ್ನು ಅವಮಾನಗಳಿಸಲು ಯಾವನಿಗೆ ಸಾಮರ್ಥ್ಯವಿದೆ' ಎಂಬ ಮಾತು ಕೇಳಿಬರುವುದು. ಇಲ್ಲಿ ಪ್ರಯೋಗಿಸಿರುವ ಪದಗಳು ಶ್ಲೇಷದಿಂದ ಚಂದ್ರನಿಗೂ ಚಂದ್ರಗುಪ್ತನಿಗೂ, ಹಾಗೆಯೇ ರಾಹುವಿಗೂ ರಾಕ್ಷಸನಿಗೂ ಅನ್ವಯಿಸುವುದರಿಂದ ಪ್ರಕೃತವಸ್ತುವನ್ನು ಜನರಿಗೆ ತಿಳಿಸಲಿಕ್ಕಾಗಿ ಮುಂದೆ ಚಂದ್ರಗುಪ್ತನ ಸಮಾಚಾರವನ್ನು ತಿಳಿಸಿದೆ. ಹೀಗೆ ತಿಳಿಸುವುದೆ ಉದ್ಘಾತ್ಯಕವೆನಿಸುವುದು.

ಸೂತ್ರಧಾರಸ್ಯ ವ ಕ್ಯಂ ವಾ ಸಮಾದಾಯಾರ್ಥಮಸ್ಯ ವಾ ।
ಭವೇತ್ಪಾತ್ರಪ್ರವೇಶಶ್ಚೇತ್ ಕಥೋದ್ಘಾತಃ ಸ ಉಚ್ಯತೇ ॥

ವಾಕ್ಯಂ ಯಥಾ ರತ್ನಾವಳ್ಯಾಮ್ 'ದ್ವೀಪಾದನಸ್ಯಾಸ್ಮದಪಿ' ಇತ್ಯಾದಿ. ಸೂತ್ರ ಧಾರೇಣ ಪಠಿತೇ –ನೇಪಥ್ಯೇ "ಏವಮೇತತ್ ಕ ಸಂದೇಹಃ" "ದ್ವೀಪಾದನ್ಯಸ್ಮಾದಪಿ" ಇತ್ಯಾದಿ ಪಠಿತ್ವಾ ಯೌಗಂಧರಾಯಣಸ್ಯ ಪ್ರವೇಶಃ.

ವಾಕ್ಯಾರ್ಥೋ ಯಥಾ ವೇಣ್ಯಾಮ್

ನಿರ್ವಾಣವೈರದಹನಾಃ ಪ್ರಶಮಾದರೀಣಾಂ
ನಂದಂತು ಪಾಂಡುತನಯಾಃ ಸಹ ಮಾಧವೇನ ।
ರಕ್ತಪ್ರಸಾಧಿತಭುವಃ ಕ್ಷತವಿಗ್ರಹಾಶ್ಚ
ಸ್ವಸ್ಥಾ ಭವಂತು ಕುರುರಾಜಸುತಾಃ ಸಭೃತ್ಯಾಃ ॥

ಇತಿ ಸೂತ್ರಧಾರೇಣ ಪಠಿತಸ್ಯ ವಾಕ್ಯಸ್ಯ ಅರ್ಥಂ ಗೃಹೀತ್ವಾ ನೇಪಥ್ಯೇ "ಆ ದುರಾತ್ಮನ್ ! ವೃಥಾ ಅಮಂಗಳಪಾಠಕ! ಕಥಂ ಸ್ವಸ್ಥಾ ಭವಂತು ಮಯಿ ಜೀವತಿ ಧಾರ್ತರಾಷ್ಟ್ರಾಃ" ತತಃ ಸೂತ್ರಧಾರನಿಷ್ಕ್ರಾಂತೌ ಭೀಮಸೇನಸ್ಯ ಪ್ರವೇಶಃ,

ಯದಿ ಪ್ರಯೋಗ ಏಕಸ್ಮಿನ್ ಪ್ರಯೋಗೋಽನ್ಯಃ ಪ್ರಯುಜ್ಯತೇ ।
ತೇನ ಪಾತ್ರಪ್ರವೇಶಶ್ಚೇತ್ ಪ್ರಯೋಗಾತಿಶಯಸ್ತದಾ ॥

ಯಥಾ ಕುಂದಮಾಲಾಯಾಮ್–ನೇಪಥ್ಯೇ ಇತ ಇತೋಽವತರತ್ವಾರ್ಯಾ. ಸೂತ್ರಧಾರಃ–ಕೋಽಯಂ ಖಲ್ವಾರ್ಯಾಹ್ವಾನೇನ ಸಾಹಾಯ್ಯಕಂ ಮೇ ಸಂಪಾದ ಯತಿ ? ವಿಲೋಕ್ಯ–ಕಷ್ಟಮತಿಕರುಣಂ ವರ್ತತೇ—

ಲಂಕೇಶ್ವರಸ್ಯ ಭವನೇ ಸುಚಿರಂ ಸ್ಥಿತೇತಿ ರಾಮೇಣ ಲೋಕಪರಿವಾದಭಯಾಕುಲೇನ ।
ನಿರ್ವಾಸಿತಾಂ ಜನಪದಾದಪಿ ಗರ್ಭಗುರ್ವೀಂ ಸೀತಾಂ ವನಾಯ ಪರಿಕರ್ಷತಿ ಲಕ್ಷ್ಮಣೋಽಯಮ್ ॥

ಅತ್ರ ನೃತ್ಯಪ್ರಯೋಗಾರ್ಥಂ ಸ್ವಭಾರ್ಯಾಹ್ವಾನಮಿಚ್ಛತಾ ಸೂತ್ರಧಾರೇಣ "ಸೀತಾಂ ವನಾಯ ಪರಿಕರ್ಷತಿ ಲಕ್ಷ್ಮಣೋಽಯಮ್" ಇತಿ ಸೀತಾಲಕ್ಷ್ಮಣಯೋಃ ಪ್ರವೇಶಂ ಸೂಚಯಿತ್ವಾ ನಿಷ್ಕ್ರಾಂತೇನ ಸ್ವಪ್ರಯೋಗಮತಿಶಯಾನ ಏವ ಪ್ರಯೋಗಃ ಪ್ರಯೋಜಿತಃ.

ಕಾಲಂ ಪ್ರವೃತ್ತಮಾಶ್ರಿತ್ಯ ಸೂತ್ರಧೃಗ್ಯತ್ರ ವರ್ಣಯೇತ್ ।
ತದಾಶ್ರಯಶ್ಚ ಪಾತ್ರಸ್ಯ ಪ್ರವೇಶಸ್ತತ್ಪ್ರವರ್ತಕಮ್ ॥

ಯಥಾ—ಆಸಾದಿತೇತ್ಯಾದಿ. ತತಃ ಪ್ರವಿಶತಿ ಯಥಾ ನಿರ್ದಿಷ್ಟೋ ರಾಮಃ

ಯತ್ರೈಕತ್ರ ಸಮಾವೇಶಾತ್ ಕಾರ್ಯಮನ್ಯತ್ ಪ್ರಸಾಧ್ಯತೇ ।
ಪ್ರಯೋಗೇ ಖಲು ತಜ್ಜ್ಞೇಯಂ ನಾಮ್ನಾಽವಲಗಿತಂ ಬುಧೈಃ ॥

ಯಥಾ ಶಾಕುಂತಲೇ ಸೂತ್ರಧಾರೋ ನಟೀಂ ಪ್ರತಿ 'ತವಾಸ್ಮಿ ಗೀತರಾಗೇಣ' ಇತ್ಯಾದಿ. ತತೋ ರಾಜ್ಞಃ ಪ್ರವೇಶಃ—

ಯೋಽನ್ಯತ್ರ ಯಥಾಲಾಭಂ ವಿದಧ್ಯಂಗಾನಿ ...ಪಿ ।

ಅತ್ರ ಆಮುಖೇ ಉದ್ಘಾತ್ಯಕಾವಲಗಿತಯೋರಿತರಾಣಿ ವೀಥ್ಯಂಗಾನಿ ವಕ್ಷ್ಯಮಾಣಾನಿ. ನಖಕುಟ್ಟಸ್ತು—

ನೇಪಥ್ಯೋಕ್ತಂ ಶ್ರುತಂ ತತ್ರ ತ್ವಾಕಾಶವಚನಂ ತಥಾ ।
ಸಮಾಶ್ರಿತ್ಯಾಪಿ ಕರ್ತವ್ಯಮಾಮುಖಂ ನಾಟಕಾದಿಷು ॥
ಏಷಾಮಾಮುಖಭೇದಾನಾಮೇಕಂ ಕಂಚಿತ್ಪ್ರಯೋಜಯೇತ್ ।
ತೇನಾರ್ಥಮಥ್ಯೆ ಪಾತ್ರಂ ವಾ ಸಮಾಕ್ಷಿಪ್ಯೈವ ಸೂತ್ರಧೃಕ್ ॥
ಪ್ರಸ್ತಾವನಾಂತೇ ನಿರ್ಗಚ್ಛೇತ್ ತತೋ ವಸ್ತು ಪ್ರಯೋಜಯೇತ್ ।

ವಸ್ತ್ವಿತಿವೃತ್ತಮ್. ಇದಂ ಪುನರ್ವಸ್ತು ಬುಧೈರ್ದ್ವಿವಿಧಂ ಪರಿಕಲ್ಪ್ಯತೇ ।

ಆಧಿಕಾರಿಕಮೇಕಂ ಸ್ಯಾತ್ ಪ್ರಾಸಂಗಿಕಮಥಾಪರಮ್ ॥
ಅಧಿಕಾರಃ ಫಲೇ ಸ್ವಾಮ್ಯಂ ಅಧಿಕಾರೀ ಚ ತತ್ಪ್ರಭುಃ ।
ತಸ್ಯೇತಿವೃತ್ತಂ ಕವಿಭಿರಾಧಿಕಾರಿಕಮುಚ್ಯತೇ ॥

ಫಲೇ ಪ್ರಧಾನಫಲೇ. ಯಥಾ ಬಾಲರಾಮಾಯಣೇ ರಾಮಚರಿತಮ್ ।

ಅಸ್ಯೋಪಕರಣಾರ್ಥಂ ತು ಪ್ರಾಸಂಗಿಕಮಿತೀರ್ಯತೇ ॥

ಅಸ್ಯಾಧಿಕಾರಿಕೇತಿವೃತ್ತಸ್ಯ ಉಪಕರಣನಿಮಿತ್ತಂ ಯಚ್ಚರಿತಂ ತತ್ ಪ್ರಾಸಂಗಿಕಮ್.

ಯಥಾ—ಸುಗ್ರೀವಾದಿಚರಿತಮ್.

ಪತಾಕಾಸ್ಥಾನಕಂ ಯೋಜ್ಯಂ ಸುವಿಚಾರ್ಯೇಹ ವಸ್ತುನಿ ।

ಇಹ ನಾಟ್ಯೇ ಯತ್ರಾರ್ಥೇ ಚಿಂತಿತೇಽನ್ಯಸ್ಮಿನ್‌ತಲ್ಲಿಂಗೋಽನ್ಯಃ ಪ್ರಯುಜ್ಯತೇ
ಆಗತುಂಕೇನ ಭಾವೇನ ಪತಾಕಾಸ್ಥಾನಕಂ ತು ತತ್ ॥

ತದ್ಭೇದಾನಾಹ—ಸಹಸೈವಾರ್ಥಸಂಪತ್ತಿರ್ಗುಣವತ್ಯುಪಚಾರತಃ ।
ಪತಾಕಾಸ್ಥಾನಕಮಿದಂ ಪ್ರಥಮಂ ಪರಿಕೀರ್ತಿತಮ್ ॥

ಯಥಾ ರತ್ನಾವಳ್ಯಾಮ್ 'ವಾಸವದತ್ತೇಯಂ' ಇತಿ ರಾಜಾ ಯದಾ ತತ್ಕಂಠಪಾಶಂ ಮೋಚಯತಿ ತದಾ ತದುಕ್ತ್ಯಾ 'ಸಾಗರಿಕೇಯಮ್' । ಇತಿ ಪ್ರತ್ಯಭಿಜ್ಞಾಯ 'ಕಥಂ ಪ್ರಿಯಾ ಮೇ ಸಾಗರಿಕಾ ? ಅಲಮಲಂ ಅತಿಮಾತ್ರಮ್' ಇತ್ಯಾದಿ. ಅತ್ರ ಫಲರೂಪಾರ್ಥಸಂಪತ್ತಿಃ ಪೂರ್ವಾಪೇಕ್ಷಯಾ ಉಪಚಾರಾತಿಶಯಾದ್ಗುಣವತೀ ಉತ್ಕೃಷ್ಟಾ. ॥

ಸೂತ್ರಧಾರನ ವಾಕ್ಯವನ್ನೇ ಪೂರ್ತಿಯಾಗಿ ಉಚ್ಚರಿಸುತ್ತಲೋ ಅಥವಾ ಅವನು ತಿಳಿಸಿದ ವಿಷಯದಂತೆಯೋ ಕಥೆಗೆ ಸಂಬಂಧಪಟ್ಟವನೊಬ್ಬನು ಪ್ರವೇಶಿಸುವುದೇ ಕಥೋದ್ಘಾತವೆನಿಸುವುದು. ಕಥೆಯಿಂದ ಉದ್ಘಾತ ಅಂದರೆ ಸೂತ್ರಧಾರನ ಮಾತಿನಂತೆ ಬೇರೊಂದು ಪಾತ್ರದ ಪ್ರವೇಶವೆಂದು ಅರ್ಥ. ರತ್ನಾವಳಿಯಲ್ಲಿ "ದ್ವೀಪಾದನ್ಯಾಸ್ಮಾದಪಿ' ಎಂಬ ಮಾತನ್ನು ಸೂತ್ರಧಾರನು ಹೇಳಲು 'ನೇಪಥ್ಯೇ ಏವಮೇತತ್—ಕಃ ಸಂದೇಹಃ ದ್ವೀಪಾದನ್ಯಸ್ಮಾದಪಿ'' ಎಂದು ಹೇಳುತ್ತಲೇ ಯೌಗಂಧರಾಯಣನು ಪ್ರವೇಶಿಸುವನು. ಇಲ್ಲಿ ಸೂತ್ರಧಾರನು ಹೇಳಿದ ಮಾತನ್ನೇ ಹೇಳುತ್ತ ಯೌಗಂಧರಾಯ

ಣನು ರಂಗಸ್ಥಳವನ್ನು ಪ್ರವೇಶಿಸುವನು. ಸೂತ್ರಧಾರನ ಮಾತಿನ ಅರ್ಥವನ್ನು ಅನು ಸರಿಸಿಕೊಂಡೇ ಪಾತ್ರ ಒಂದರ ಪ್ರವೇಶವನ್ನು ಈಗ ತಿಳಿಸುತ್ತಾನೆ. ವೇಣೀ ಸಂಹಾರ ದಲ್ಲಿ ಇದನ್ನು ಕಾಣಬಹುದು. "ದುರ್ಯೋಧನ ಮೊದಲಾದ ಶತ್ರುಗಳ ನಾಶದಿಂದ ಶತ್ರುತ್ವವೆಂಬ ಬೆಂಕಿಯು ಹಾರಿಹೋಗಲು ಪಾಂಡವರು ಕೃಷ್ಣನೊಡನೆ ಆನಂದಪಡಲಿ. ರಕ್ತದಿಂದ ಭೂಮಿಯನ್ನು ಅಲಂಕರಿಸಿ ಶರೀರವನ್ನು ಕಳೆದುಕೊಂಡು ಕೌರವರು ಸೇವಕ ರೊಡನೆ ಸುಖವಾಗಿ ಸ್ವರ್ಗವನ್ನು ಸೇರಲಿ" ಹೀಗೆ ಸೂತ್ರಧಾರನು ಹೇಳಿದ ಮಾತಿನ ಅರ್ಥವನ್ನು ತಿಳಿದುಕೊಂಡು ಭೀಮಸೇನನು ತೆರೆಯ ಹಿಂಭಾಗದಲ್ಲಿ "ಎಲೈ ದುಷ್ಟನೇ ಅನಿಷ್ಟವನ್ನು ಹಾರೈಸುವವನೇ, ನಾನಿರುವಾಗ ಕೌರವರು ಹೇಗೆ ನನ್ಮಿಂದ ಯಿಂದ ಇದ್ದಾರು ! ಎಂದು ಹೇಳುತ್ತ ಸೂತ್ರಧಾರನು ಹೊರಟೊಡನೆಯೇ ಭೀಮನು ಪ್ರವೇಶಿ ಸುವನು.

ಸೂತ್ರಧಾರನು ಒಂದು ವಿಷಯವನ್ನು ಆಲೋಚನೆಮಾಡುತ್ತಿರುವಾಗಲೇ ಬೇರೊಂದು ವಿಷಯವನ್ನು ಆಲೋಚನ ಮಾಡುವನು. ಹಾಗೆ ಬೇರೊಂದು ವಿಷಯ ವನ್ನು ಪ್ರಯೋಗಿಸುವಾಗ ಕಥಾವಸ್ತುವಿಗೆ ಸಂಬಂಧಿಸಿದವನೊಬ್ಬನು ಪ್ರವೇಶಿಸುವನು. ಇದು ಪ್ರಯೋಗಾತಿಶಯವೆನಿಸುವುದು. ಪ್ರಸ್ತಾವನೆಯಲ್ಲಿ ಇದೂ ಒಂದು ಭಾಗ. ಈ ಪ್ರಯೋಗದಿಂದ ಹಿಂದಿನ ಪ್ರಯೋಗಕ್ಕೆ ಕಳೆಯುಂಟಾಗುವುದರಿಂದ ಇದಕ್ಕೆ ಆ ಹೆಸರು ಬಂದಿದೆ. ಕುಂದಮಾಲೆಯಲ್ಲಿ ಇದಕ್ಕೆ ಉದಾಹರಣವಿದೆ. ತೆರೆಯುಮರೆಯಲ್ಲಿ "ಪ್ರಿಯೆ ಈ ಕಡೆಗೆ ಆಗಮಿಸಬೇಕು." ಎಂದು ಸೂತ್ರಧಾರನು ಆರ್ಯೆ ಎಂದು ತನ್ನ ಹೆಂಡತಿ ಯನ್ನು ಕರೆಯುವನು. ಆರ್ಯಾ ಎಂದು ಕರೆದು ನನಗೆ ಸಹಾಯಮಾಡಲು ಯಾರೋ ಸಿದ್ಧವಾಗಿರುವಂತೆ ಕಾಣುವುದು ಎಂದು ಹೇಳುತ್ತ ಮೇಲೆ ನೋಡಿ "ಬಹಳ ಕಷ್ಟ ವಾದ ಪರಿಸ್ಥಿತಿ ಇದೆ.'' "ರಾವಣನ ಮನೆಯಲ್ಲಿ ಸೀತೆಯು ಬಹಳ ಕಾಲ ನೆಲಸಿದ್ದ ಳೆಂಬ ಕಾರಣದಿಂದ ಲೋಕದ ಜನರು ಹರಡಿದ್ದ ಅಪವಾದಕ್ಕೆ ವ್ಯಾಕುಲಗೊಂಡ ರಾಮನು ಸೀತೆಯನ್ನು ಮನೆಯಿಂದ ಆಚೆಗೆ ಹೊರಡಿಸಲು ಗರ್ಭದ ಹೊರೆಯನ್ನು ಹೊತ್ತು ವ್ಯಥೆ ಪಡುತ್ತಿರುವ ಆ ಸೀತೆಯನ್ನು ಲಕ್ಷ್ಮಣನು ಕಾಡಿಗೆ ಕರೆದುಕೊಂಡು ಹೋಗುತ್ತಿರುವನು." ಇಲ್ಲಿ ನೃತ್ಯವನ್ನು ಪ್ರಯೋಗಿಸಲಿಕ್ಕಾಗಿ ತನ್ನ ಹೆಂಡತಿಯನ್ನು ಕರೆಯಲು ಇಚ್ಛಿಸಿದ ಸೂತ್ರಧಾರನು ಲಕ್ಷ್ಮಣನು ಸೀತೆಯನ್ನು ಕಾಡಿಗೆ ಒಯ್ಯಲು ಕರೆ ಯುತ್ತಿರುವನು ಎಂದು ಹೇಳಿ ಸೀತೆ ಲಕ್ಷ್ಮಣ ಇವರ ಪ್ರವೇಶವನ್ನು ಸೂಚಿಸಿ ಹೊರಡು ವನು. ಸೂತ್ರಧಾರನು ತನ್ನ ಹೆಂಡತಿಯೊಡನೆ ಮಾಡುವ ಪ್ರಯೋಗಕ್ಕಿಂತಲೂ ಸೀತೆ ಲಕ್ಷ್ಮಣರು ಪ್ರವೇಶಿಸುವರೆಂಬುವ ಪ್ರಯೋಗವು ಸಭ್ಯರಿಗೆ ಹೆಚ್ಚು ಕುತೂಹಲ ವನ್ನು ಹುಟ್ಟಿಸುವುದು. ಹಿಂದಿನ ಪ್ರಯೋಗಕ್ಕಿಂತಲೂ ಮುಂದಿನ ಪ್ರಯೋಗದಲ್ಲಿ ಅತಿ ಶಯವಿರುವುದರಿಂದ ಇಂತಹ ಪ್ರಯೋಗವು ಪ್ರಯೋಗಾತಿಶಯವೆನಿಸುವುದು. ಸೂತ್ರ ಧಾರಿಯು ಆ ಕಾಲದಲ್ಲಿ ಪ್ರಭಾವದಲ್ಲಿರುವ ವಸಂತ ಮೊದಲಾದ ಕಾಲವಿಶೇಷವನ್ನಾ ಶ್ರಯಿಸಿ ವರ್ಣಿಸುವನು. ಆ ವರ್ಣನೆಯಲ್ಲಿ ಶ್ಲೇಷದ ಮೂಲಕ ಎರಡು ಅರ್ಥಗಳಿದ್ದು

ಒಂದು ಆ ಕಾಲಕ್ಕೆ ಅನ್ವಯಿಸಲು, ಮತ್ತೊಂದು ಅರ್ಥವನ್ನು ಭಾಷಿಸುತ್ತಲೇ ಕಥೆಗೆ ಸಂಬಂಧಿಸಿದ ಬೇರೊಬ್ಬ ವ್ಯಕ್ತಿಯು ಪ್ರವೇಶಿಸುವುದೇ ಪ್ರವರ್ತಕವೆನಿಸುವುದು. ಒಂದು ಪಾತ್ರವನ್ನು ಅಭಿನಯದಲ್ಲಿ ತೊಡಗಿಸುವುದರಿಂದ ಇದು ಪ್ರವರ್ತಕವೆನಿಸಿದೆ. ಇದಕ್ಕೆ ಆಮುಖವೆಂಬ ಹೆಸರಿದೆ. 'ಆಸಾದಿತ' ಎಂಬ ಹಿಂದಿನ ಪದ್ಯದಲ್ಲಿ ಶರತ್ಕಾಲದ ವರ್ಣನೆಯಿದ್ದರೂ ರಾಮನಿಗೂ ಅನ್ವಯಿಸುವ ಪದಗಳ ಪ್ರಯೋಗವಿದ್ದುದರಿಂದ ಸೂತ್ರಧಾರನ ಮಾತು ಮುಗಿದೊಡನೆಯೇ ರಾಮನು ಪ್ರವೇಶಿಸುವನು. ಆ ಮಾತು ಮುಗಿದು ಸೂತ್ರಧಾರನು ಹೊರಟ ಮೇಲೆ ರಾಮನ ಪ್ರವೇಶವನ್ನು ಅಲ್ಲಿ ಸೂಚಿಸಿದೆ. ಸೂತ್ರಧಾರನು ಒಂದು ವಿಷಯಕ್ಕೆ ಸಾದೃಶ್ಯವನ್ನು ತಿಳಿಸಿದ್ದರಿಂದ ಅದನ್ನು ಪೂರ್ತಿಗೊಳಿಸಲಿಕ್ಕಾಗಿ ಉಪಮಾನವೆನಿಸಿದ ಬೇರೊಬ್ಬನ ಪ್ರವೇಶವನ್ನು ಸೂಚಿಸುವುದೇ ಅವಲಗಿತವೆನಿಸುವುದೆಂದು ಅನುಭವಿಗಳು ಹೇಳಿದ್ದಾರೆ. ಬೇರೊಂದು ಪಾತ್ರದ ಪ್ರವೇಶದಿಂದ ಪ್ರಕೃತ ವಿಷಯವನ್ನು ಸಂಬಂಧಿಸುವಂತೆ ಮಾಡುವ ಪ್ರಯುಕ್ತ ಇದು ಅವಲಂಗಿತವೆನಿಸುವುದು. ಶಾಕುಂತಲದಲ್ಲಿ ಸೂತ್ರಧಾರನು ನಟಿಗೆ 'ದುಷ್ಯಂತನನ್ನು ಜಿಂಕೆಯು ದೂರಕ್ಕೆ ಒಯ್ದಂತೆ ನಿನ್ನ ಸಂಗೀತವು ನನ್ನನ್ನು ದೂರಕ್ಕೆ ಒಯ್ದಿದೆ' ಎಂದು ಹೇಳಲು ಅವರಂತೆಯೇ ಅವರಿಬ್ಬರೂ ರಂಗಸ್ಥಳವನ್ನು ಬಿಟ್ಟೊಡನೆ ದುಷ್ಯಂತನು ಪ್ರವೇಶಿಸುವನು. ಇಲ್ಲಿ ದುಷ್ಯಂತನನಗೆ ಉಪಮಾನವೆನಿಸಿದ್ದಾನೆ. ಅಂತಹನ ಪ್ರವೇಶವನ್ನು ಇಲ್ಲಿ ಸೂಚಿಸಿದ್ದರಿಂದ ಇದು ಅವಲಗಿತವೆನಿಸಿದೆ. ಒಂದೇ ಸಾದೃಶ್ಯವನ್ನು ತಿಳಿಸಿದ್ದರಿಂದ ಅದಕ್ಕೆ ಬೇಕಾದ ಉಪಮಾನವನ್ನೊದಗಿಸುವ ಪಾತ್ರದ ಪ್ರವೇಶವೇ ಅವಲಗಿತವೆನಿಸುವುದಾದರೆ 'ರಾಮೋ ಪರಶುರಾಮ...' ಎಂದು ಪ್ರವರ್ತಕಕ್ಕೆ ಉದಾಹರಿಸಿರುವ ಪದ್ಯದಲ್ಲಿಯೂ ಸಾದೃಶ್ಯವಿದ್ದು ಉಪಮಾನವೆನಿಸಿದ ರಾಮನ ಪ್ರವೇಶವೇ ಸೂಚಿತವಾಗುವ ಪ್ರಯುಕ್ತ ಅದೂ ಅವಲಂಗಿತವೇ ಆಗಲಿ, ಎಂದರೆ ಅದು ಸರಿಯಿಲ್ಲ. ಎಲ್ಲಿ ಶ್ಲೇಷದಿಂದ ಉಪಮಾನವನ್ನು ತಿಳಿಸಿದೆಯೋ ಅಲ್ಲಿ ಪ್ರವರ್ತಕವೆಂದು ತಿಳಿಯುವುದು. ಶ್ಲೇಷವಿಲ್ಲದೆ ಸ್ಪಷ್ಟವಾಗಿ ಉಪಮಾನವನ್ನು ತಿಳಿಸಿದರೆ ಅಲ್ಲಿ ಉಪಮಾನವೆನಿಸಿದ ವ್ಯಕ್ತಿಯ ಪ್ರವೇಶವನ್ನು ಅವಲಗಿತವೆಂದು ತಿಳಿಯಬೇಕು. ಉದ್ಘಾತ್ಯಕ ಅವಲಗಿತಗಳಿಂದ ಬೇರೆಯಾಗಿ ವೀಥಿ ಎಂಬ ರೂಪಕದ ಕೆಲವು ಭೇದಗಳನ್ನು ಆಮುಖದಲ್ಲಿ ಸೇರಿಸಿಕೊಳ್ಳಬೇಕು. ಈ ಬಗ್ಗೆ ನಖಕುಟ್ಟನು ಹೀಗೆ ಹೇಳಿದ್ದಾನೆ. ತೆರೆಯ ಮರೆಯಲ್ಲಿ ಹೇಳಿದ್ದನ್ನು ಕೇಳಿಯೋ ಅಥವಾ ಆಕಾಶದಲ್ಲಿ ಆಡಿದ ಮಾತನ್ನು ಕೇಳಿಸಿಕೊಂಡೋ ನಾಟಕಗಳಲ್ಲಿ ಪ್ರಸ್ತಾವನೆಯನ್ನು ನಡೆಸಬಹುದು. ಆಗ ಸೂತ್ರಧಾರಿಯು ಉದ್ಘಾತ್ಯಕ ಮೊದಲಾದ ಆಮುಖದ ಐದು ಬಗೆಗಳಲ್ಲಿ ಯಾವುದಾದರೊಂದನ್ನು ಪ್ರಯೋಗಿಸಬೇಕು. ಹೀಗೆ ಆಮುಖದ ಪ್ರಯೋಗದಿಂದ ಒಂದು ವೃತ್ತಾಂತವನ್ನೋ ಅಥವಾ ಒಂದು ಪಾತ್ರವನ್ನೋ ಸೂಚಿಸಿಯೇ ಸೂತ್ರಧಾರನು ರಂಗಸ್ಥಳವನ್ನು ತೊರೆಯಬೇಕು. ಅಲ್ಲಿಂದ ಮುಂದೆ ನಾಟಕದ ವಸ್ತುವನ್ನು ಅಭಿನಯಿಸಲಿಕ್ಕೆ ಆರಂಭವಾಗುವುದು. ಈ ನಖಕುಟ್ಟನ ಕಾರಿಕೆಯಲ್ಲಿ ಹೇಳಿದ ವಸ್ತು ಎರಡು ಬಗೆಯಾಗಿದೆ. ಅವುಗಳಲ್ಲಿ ಒಂದು ಆಧಿಕಾರಿಕ, ಮತ್ತೊಂದು

ಪ್ರಾಸಂಗಿಕ. ನಾಟಕದಲ್ಲಿ ತಿಳಿಸಬೇಕಾಗಿರುವ ಮುಖ್ಯಫಲವನ್ನು ಭೋಗಿಸುವುದೇ ಅಧಿಕಾರ. ಹಾಗೆ ಭೋಗಿಸುವವನೇ ಆಧಿಕಾರಿ. ಅವನ ವೃತ್ತಾಂತವೇ ಆಧಿಕಾರಿಕ ವೆನಿಸುತ್ತದೆ. ಬಾಲರಾಮಾಯಣದಲ್ಲಿ ಬರುವ ರಾಮಚರಿತವೂ ಆಧಿಕಾರಕ ಎನಿಸುವುದು. ಈ ಅಧಿಕಾರಿಯ ವೃತ್ತಾಂತವನ್ನು ಪುಷ್ಟೀಕರಿಸಲಿಕ್ಕಾಗಿ ತಿಳಿಸಬೇಕಾದ ಚರಿತ್ರವು ಪ್ರಾಸಂಗಿಕವಸ್ತುವೆನಿಸುವುದು. ರಾಮನ ಚರಿತ್ರವನ್ನು ಪುಷ್ಟೀಕರಿಸಲಿಕ್ಕಾಗಿ ತಿಳಿಸುವ ಸುಗ್ರೀವನ ವೃತ್ತಾಂತವೇ ಪ್ರಾಸಂಗಿಕವಸ್ತುವೆನಿಸುವುದು.

ಕವಿಯೇ ಚೆನ್ನಾಗಿ ಪರ್ಯಾಲೋಚಿಸಿ ನಾಟ್ಯಕ್ಕೆ ಸಂಬಂಧಿಸಿದ ಈ ವಸ್ತುವಿನಲ್ಲಿ ಪತಾಕಾಸ್ಥಾನಕವೆಂಬುದನ್ನು ಸೇರಿಸಬಹುದು. ವಿಷಯವು ಇಲ್ಲಿ ಪ್ರಕೃತವೆಂದು ತಿಳಿದು ಬರುವಾಗ ಬೇರೊಂದು ಅನಿರೀಕ್ಷಿತವಾದ ರೀತಿಯಲ್ಲಿ ಅದನ್ನು ತಿಳಿಸುವ ಮತ್ತೊಂದು ವಿಷಯವನ್ನು ಪ್ರಯೋಗಿಸುವುದೇ ಪತಾಕಾಸ್ಥಾನಕವೆನಿಸುತ್ತದೆ. ಧ್ವಜದಂತೆ ನಾಟ್ಯದ ಪ್ರಸಿದ್ಧಿಯನ್ನು ಹರಡುವುದರಿಂದ ಅಂತಹ ಬಂಧವು ಪತಾಕೆ ಎನಿಸುತ್ತದೆ. ಅದರ ಬಗೆಗಳನ್ನು ತಿಳಿಸುತ್ತಾನೆ. ಅನಿರೀಕ್ಷಿತವಾಗಿಯೇ ಹೆಚ್ಚು ಪ್ರೀತಿಯನ್ನು ಆಚರಿಸುವುದರಿಂದ ವಿಶೇಶವಾದ ಫಲವು ದೊರಕುವುದೇ ಮೊದಲನೆಯ ಪತಾಕಾಸ್ಥಾನಕವೆನಿಸುವುದು. ರತ್ನಾವಳಿಯಲ್ಲಿ 'ಈಕೆ ವಾಸವದತ್ತೆ' ಎಂದು ರಾಜನು ಆಕೆಯ ಕುತ್ತಿಗೆಗೆ ಕಟ್ಟಿದ್ದ ಪಾಶವನ್ನು ಬಿಡಿಸುತ್ತಾನೆ. ಆಗ ಆ ಮಾತನ್ನು ಕೇಳಿ 'ಈಕೆ ಸಾಗರಿಕೆ' ಎಂದು ತಿಳಿದು 'ನನ್ನ ಪ್ರಿಯೆ ಸಾಗರಿಕೆ ಇಲ್ಲಿ ಹೇಗೆ ಬಂದಳು? ಹೀಗೆ ಹೆಚ್ಚು ಸಾಹಸಪಡುವುದು ಬೇಕಾಗಿಲ್ಲ. ಪ್ರಿಯೆ, ಈ ಲತಾಪಾಶವನ್ನು ತೊರೆದು ಬಿಸಾಡು. ನನ್ನ ಕುತ್ತಿಗೆಯಲ್ಲಿ ನಿನ್ನ ಈ ಬಾಹುಪಾಶವನ್ನು ಇರಿಸು" ಎಂದು ಹೇಳುವನು. ಇಲ್ಲಿ 'ಸಾಗರಿಕೆ ಯಾರು? ಅವಳ ಸ್ವರೂಪವೇನು?' ಎಂಬುದನ್ನು ತಿಳಿಯಬೇಕೆಂಬುದೇ ಫಲ. ಇದನ್ನು ಸಾಧಿಸಲು ರಾಜನಿಗೆ ಬಹುಕಾಲದಿಂದಲೂ ಇಚ್ಛೆಯಿತ್ತು. ಈಗ ಅದು ದೊರೆಯಿತು. ಇದು ಹಿಂದೆ ಅವನಿಗೆ ವಾಸವದತ್ತೆಯು ದೊರೆತಿದ್ದಕ್ಕಿಂತಲೂ ಹೆಚ್ಚು ಪ್ರೀತಿಯನ್ನು ಹುಟ್ಟಿಸಿದ್ದರಿಂದಲೂ, 'ಈಕೆ ವಾಸವದತ್ತೆಯೇ ಇರಬೇಕು' ಎಂಬುವ ಅಂಶವನ್ನು ಆಲೋಚಿಸುತ್ತಿರುವಾಗ ಆಕೆಯ ಸಾಕ್ಷಾತ್ಕಾರವೆಂಬ ಅನಿರೀಕ್ಷಿತವಾದ ವಿಷಯದಿಂದ ಸಾಗರಿಕೆ ಎಂಬ ಬೇರೊಂದು ವ್ಯಕ್ತಿಯ ವಿಷಯವನ್ನು ಪ್ರಯೋಗಿಸಿದ್ದರಿಂದಲೂ ಇದು ಪತಾಕಾಸ್ಥಾನಕದ ಮೊದಲನೆಯ ಬಗೆ ಎನಿಸಿದೆ.

ವಚಃ ಸಾತಿಶಯಶ್ಲಿಷ್ಟಂ ನಾನಾಬಂಧಸಮಾಶ್ರಯಮ್ ।
ಪತಾಕಾಸ್ಥಾನಕಮಿದಂ ದ್ವಿತೀಯಮಿತಿ ಪರಿಕೀರ್ತಿತಮ್ ॥

ಯಥಾ ವೇಣ್ಯಾಂ ಸೂತ್ರಧಾರಃ—

ರಕ್ತಪ್ರಸಾಧಿತಭುವಃ ಕ್ಷತವಿಗ್ರಹಾಶ್ಚ ಸ್ವಸ್ಥಾ ಭವಂತು ಕುರುರಾಜಸುತಾಸ್ಸಭೃತ್ಯಾಃ ।

ಅತ್ರ ರಕ್ತಾದೀನಾಂ ರುಧಿರಶರೀರಾರ್ಥಹೇತುಕಶ್ಲೇಷವಶೇನ ಬೀಜಾರ್ಥಪ್ರತಿಪಾದನಾತ್ ನೇತೃಮಂಗಲಪ್ರತಿಪತ್ತೌ ಸತ್ಯಾಂ ದ್ವಿತೀಯಮಿದಂ ಪತಾಕಾಸ್ಥಾನಮ್.

ಅರ್ಥೋಪಕ್ಷೇಪಕಂ ಯತ್ತು ಲೀನಂ ಸವಿನಯಂ ಭವೇತ್ ।
ಶ್ಲಿಷ್ಟಪ್ರತ್ಯುತ್ತರೋಪೇತಂ ತೃತೀಯಮಿದಮುಚ್ಯತೇ ॥

ಲೀನಮವ್ಯಕ್ತಾರ್ಥಮ್. ಶ್ಲಿಷ್ಟೇನ ಸಂಬಂಧಯೋಗ್ಯೇನ ಅಭಿಪ್ರಾಯಾಂತರ ಪ್ರಯುಕ್ತೇನ ಪ್ರತ್ಯುತ್ತರೇಣ ಉಪೇತಮ್. ಸವಿನಯಂ ವಿಶೇಷನಿಶ್ಚಯಪ್ರಾಪ್ತ್ಯಾ ಸಹಿತಂ ಸಂಪದ್ಯತೇ ಯತ್ ತತ್ ತೃತೀಯಂ ಪತಾಕಾಸ್ಥಾನಮ್. ಯಥಾ ವೇಣ್ಯಾಂ ದ್ವಿತೀಯೇಽಂಕೇ "ಕಂಚುಕೀ—ದೇವ ! ಭಗ್ನಮ್. ರಾಜಾ—ಕೇನ ? ಕಂಚುಕೀ—ಭೀಮೇನ. ರಾಜಾ—ಕಸ್ಯ ? ಕಂಚುಕೀ—ಭವತಃ. ರಾಜಾ—ಆಃ ಕಿಂ ಪ್ರಲಪಸಿ ? ಕಂಚುಕೀ—(ಸಭಯಂ) ದೇವ ನನು ಬ್ರವೀಮಿ ಭಗ್ನಂ ಭೀಮೇನ ಭವತಃ. ರಾಜಾ—ಧಿಕ್ ವೃದ್ಧಾಪಸದ ! ಕೋಽಯಮದ್ಯ ತೇ ವ್ಯಾಮೋಹಃ ? ಕಂಚುಕೀ ದೇವ, ನ ವ್ಯಾಮೋಹಃ; ಸತ್ಯಮೇವ.

ಭಗ್ನಂ ಭೀಮೇನ ಭವತೋ ಮರುತಾ ರಥಕೇತನಮ್ ।
ಪಾತಿತಂ ಕಿಂಕಿಣೀಜಾಲಬದ್ಧಾಕ್ರಂದಮಿವ ಕ್ಷಿತೌ ॥

ಅತ್ರ ದುರ್ಯೋಧನೋರುಭಂಗರೂಪ್ರವಸ್ತುತಸಂಕ್ರಾಂತಮರ್ಥೋಪಕ್ಷೇಪಣಮ್.

ದ್ವ್ಯರ್ಥೋ ವಚನವಿನ್ಯಾಸಃ ಸುಶ್ಲಿಷ್ಟಃ ಕಾವ್ಯಯೋಜಿತಃ ।
ಪ್ರಧಾನಾರ್ಥಾಂತರಾಕ್ಷೇಪೀ ಪತಾಕಾಸ್ಥಾನಕಂ ಪರಮ್ ॥

ರತ್ನಾವಳ್ಯಾಂ-ಉದ್ದಾಮೋತ್ಕಲಿಕಾಂ ವಿಪಾಂಡುರರುಚಿಂ ಪ್ರಾರಬ್ಧಜೃಂಭಾಂಕ್ಷಣಾತ್
ಆಯಾಸಂ ಶ್ವಸನೋದ್ಗಮೈರವಿರಳೈರಾತನ್ವತೀಮಾತ್ಮನಃ ।
ಅದ್ಯೋದ್ಯಾನಲತಾಮಿಮಾಂ ಸಮದನಾಂ ನಾರೀಮಿವಾನ್ಯಾಂ ಧ್ರುವಂ
ಪಶ್ಯನ್ ಕೋಪವಿಪಾಟಲದ್ಯುತಿ ಮುಖಂ ದೇವ್ಯಾಃ ಕರಿಷ್ಯಾಮ್ಯಹಮ್ ॥

ಅತ್ರ ಭಾವ್ಯರ್ಥಃ ಸೂಚಿತಃ. ಏತಾನಿ ಚತ್ವಾರಿ ಪತಾಕಾಸ್ಥಾನಕಾನಿ ಕ್ವಚಿನ್ಮಂಗಳಾರ್ಥಂ ಕ್ವಚಿದಮಂಗಳಾರ್ಥಮಪಿ ಸರ್ವಸಂಧಿಷು ಭವಂತಿ. ಕಾವ್ಯಕರ್ತುರಿಚ್ಛಾವಶಾತ್ ಭೂಯೋಽಪಿ ಭವಂತಿ. ಯತ್ಪುನಃ ಕೇನಚಿದುಕ್ತಂ 'ಮುಖಸಂಧಿಮಾರಭ್ಯ ಸಂಧಿಚತುಷ್ಟಯೇ ಕ್ರಮೇಣ ಭವಂತಿ' ಇತಿ ತದನ್ಯೇ ನ ಮನ್ಯಂತೇ; ಏಷಾಮತ್ಯಂತಮುಪಾದೇಯಾನಾಂ ಅನಿಯಮೇನ ಸರ್ವತ್ರಾಪಿ ಸರ್ವೇಷಾಮಪಿ ಭವಿತುಂ ಯುಕ್ತತ್ವಾತ್.

ಯತ್ಸ್ಯಾದನುಚಿತಂ ವಸ್ತು ನಾಯಕಸ್ಯ ರಸಸ್ಯ ವಾ ।
ವಿರುದ್ಧಂ ತತ್ಪರಿತ್ಯಾಜಂ ಅನ್ಯಥಾ ವಾ ತತ್ಪ್ರಕಲ್ಪಯೇತ್ ॥

ಅನುಚಿತಮಿತಿವೃತ್ತಮ್. ಯಥಾ ರಾಮಸ್ಯ ಛದ್ಮನಾ ವಾಲಿವಧಃ. ತಚ್ಚ ಉದಾತ್ತರಾಘವೇ ನೋಕ್ತಮೇವ, ವೀರಚರಿತೇ ಚ ವಾಲೀ ರಾಮವಧಾರ್ಥಮಾಗತೋ ರಾಮೇಣ ಹತ ಇತ್ಯನ್ಯಥಾ ಕೃತಃ.

ಅಂಕೇಷ್ವದರ್ಶನೀಯಾ ಯಾ ವಕ್ತವ್ಯೈವ ಚ ಸಮ್ಮತಾ ।
ಯಾ ಚ ಸ್ಯಾದ್ವರ್ಷಪರ್ಯಂತಂ ಕಥಾ ದಿನದ್ವಯಾದಿಜಾ ॥

ಅನ್ಯಾ ಚ ವಿಸ್ತರಾ ಸೂಚ್ಯಾ ಸಾರ್ಥೋಽಪಕ್ಷೇಪಕೈರ್ಬುಧೈಃ
ಅಂಕೇಷ್ವದರ್ಶನೀಯಾ ಕಥಾ ಯುದ್ಧಾದಿಕಥಾ.

ವರ್ಷಾದೂರ್ಧ್ವಂ ತು ಯದ್ವಸ್ತು ತತ್ಸ್ಯಾದ್ವರ್ಷಾದಧೋಭವಮ್
ಉಕ್ತಂ ಹಿ ಮುನಿನಾ—ಅಂಕಚ್ಛೇದೇ ಕಾರ್ಯಂ ಮಾಸಕೃತಂ ವರ್ಷಸಂಚಿತಂ ವಾಪಿ।
ತತ್ಸರ್ವಂ ಕರ್ತವ್ಯಂ ವರ್ಷಾದೂರ್ಧ್ವಂ ನ ತು ಕದಾಚಿತ್ ॥

ಏವಂ ಚ ಚತುರ್ದಶವರ್ಷವ್ಯಾಪಿನ್ಯಪಿ ರಾಮವನವಾಸೇ ಯೇ ಯೇ ವಿರಾಧವಧಾದಯಃ ಕಥಾಂಶಾ ತೇ ತೇ ವರ್ಷವರ್ಷಾವಯವಿನಸಂಗ್ರಾಮಾದೀನಾಂ ಏಕಶಮೇನ ಸೂಚನೀಯಾ ನ ವಿರುದ್ಧಾಃ.

ದಿನಾವಸಾನೇ ಕಾರ್ಯಂ ಯದ್ದಿನೇನೈವೋಪಪದ್ಯತೇ ।
ಅರ್ಥೋಽಪಕ್ಷೇಪಕಂ ವಾಚ್ಯಂ ಅಂಕಚ್ಛೇದ್ಯಂ ವಿಧಾಯ ತತ್ ॥

ಕೇ ತೇ ಅರ್ಥೋಽಪಕ್ಷೇಪಕಾ ಇತ್ಯಾಕಾಂಕ್ಷಾಯಾಮಾಹ—

ಅರ್ಥೋಽಪಕ್ಷೇಪಕಾಃ ಪಂಚ ವಿಷ್ಕಂಭಕಪ್ರವೇಶಕೌ ।
ಚೂಲಿಕಾಂಕಾವತಾರೋಽಥ ಸ್ಯಾದಂಕಮುಖಮಿತ್ಯಪಿ ॥
ವೃತ್ತವರ್ತಿಷ್ಯಮಾಣಾನಾಂ ಕಥಾಂಶಾನಾಂ ನಿದರ್ಶಕಃ ।
ಸಂಕ್ಷಿಪ್ತಾರ್ಥಸ್ತು ವಿಷ್ಕಂಭಃ ಆದಾವಂಕಸ್ಯ ದರ್ಶಿತಃ ।
ಮಧ್ಯೇನ ಮಧ್ಯಮಾಭ್ಯಾಂ ವಾ ಪಾತ್ರಾಭ್ಯಾಂ ಸಂಪ್ರಯೋಜಿತಃ ।
ಶುದ್ಧಃ ಸ್ಯಾತ್ಸ ತು ಸಂಕೀರ್ಣೋ ನೀಚಮಧ್ಯಮಕಲ್ಪಿತಃ

ತತ್ರ ಶುದ್ಧೋ ಯಥಾ ಮಾಲತೀಮಾಧವೇ ಶ್ಮಶಾನೇ ಕಪಾಲಕುಂಡಲಾ ಸಂಕೀರ್ಣೋ ಯಥಾ ರಾಮಾಭಿನಂದೇ ಕ್ಷಪಣಕಕಾಪಾಲಿಕೌ.

ಪತಾಕಾಸ್ಥಾನದ ಮೊದಲನೆಯ ಬಗೆಯನ್ನು ತಿಳಿಸಿ ಈಗ ಅದರ ಎರಡನೆಯ ಬಗೆಯನ್ನು ತಿಳಿಸುತ್ತಾನೆ. ಅನೇಕ ಅರ್ಥಗಳನ್ನು ತಿಳಿಸುವ ಅನೇಕ ಶಬ್ದಗಳನ್ನೊಳಗೊಂಡು ಅನೇಕ ಬಗೆಯ ಬಂಧಗಳಿಗೆ ಆಶ್ರಯವನ್ನು ನೀಡುವ ವಾಕ್ಯವೇ ಪತಾಕಾಸ್ಥಾನದ ಎರಡನೆಯ ಬಗೆ ಎನಿಸುತ್ತದೆ. ವೇಣೀಸಂಹಾರದಲ್ಲಿ ಸೂತ್ರಧಾರನು 'ಕೌರವರು ಸೇವಕರೊಡನೆ ಸ್ವಸ್ಥರಾಗಲಿ' ಎಂದು ಹೇಳುವಾಗ ರಕ್ತ ಮೊದಲಾದ ಪದಗಳು 'ರಕ್ತದಿಂದ ಭೂಮಿಯನ್ನು ಅಲಂಕರಿಸಿದ್ದರು, ಶರೀರವನ್ನು ನೀಳಿಸಿಕೊಂಡು ನೆಲದಮೇಲೆ ಬಿದ್ದಿದ್ದರು' ಎಂದು ಎರಡು ಅರ್ಥಗಳನ್ನು ಶ್ಲೇಷದಿಂದ ಸೂಚಿಸುವ ಒಂದು ರಚನೆಯಿದೆ. ಹೀಗೆ ಶ್ಲೇಷದ ಮೂಲಕ ಭೀಮಸೇನನ ಕ್ರೋಧದಿಂದ ಪುಷ್ಟಿ ಹೊಂದಿದ ಯುಧಿಷ್ಠಿರನ ಉತ್ಸಾಹವು ಇಲ್ಲಿ ಸೂಚಿತವಾಗುತ್ತದೆ. ನಾಯಕನೆನಿಸಿದ ಯುಧಿಷ್ಠಿರನ ಉತ್ಸಾಹದಿಂದ ಶತ್ರುಗಳು ನಾಶವಾಗಿ ಮುಂದೆ ಅವನಿಗೆ ರಾಜ್ಯವು ದೊರಕುವುದೆಂದು ಸೂಚಿಸಿದ್ದರಿಂದ ಇದು ಪತಾಕಾಸ್ಥಾನದ ಎರಡನೆಯ ಬಗೆ ಎನಿಸಿದೆ. ಪ್ರತಿನಾಯಕನಾದ ದುರ್ಯೋಧನನು ಭೂಮಂಡಲವನ್ನೆಲ್ಲಾ ಜಯಿಸಬೇಕೆಂಬ ಮಂಗಳವನ್ನು ಇಲ್ಲಿ ಆಶೋಚಿಸುತ್ತಿರುವಾಗ ಆಕಸ್ಮಿಕವಾಗಿ ಭೀಮನ ಕ್ರೋಧವನ್ನು

ತಿಳಿಸಿದ್ದರಿಂದ ಯುದ್ಧದಲ್ಲಿ ಯುಧಿಷ್ಠಿರನಿಗೆ ಉತ್ಸಾಹ ಹುಟ್ಟಿತೆಂಬ ಅಂಶವನ್ನು ತಿಳಿಸುವ ಪ್ರಯುಕ್ತ ಇಲ್ಲಿ ಪತಾಕಾಸ್ಥಾನದ ಸಾಮಾನ್ಯಲಕ್ಷಣವು ಸಂಭವಿಸುತ್ತದೆ.

ಈಗ ಪತಾಕಾಸ್ಥಾನದ ಮೂರನೆಯ ಬಗೆಯನ್ನು ತಿಳಿಸುತ್ತಾನೆ. ಪ್ರಧಾನವಾದ ವಿಷಯವನ್ನು ವ್ಯಕ್ತವಾಗದಂತೆಯೂ ಆದರೆ ನಿಶ್ಚಿತವಾಗುವಂತೆಯೂ ಸೂಚಿಸುತ್ತ ಶ್ಲೇಷದಿಂದ ಪ್ರಕೃತಸಂದರ್ಭಕ್ಕೆ ಅನುಗುಣವಾದ ಬೇರೊಂದು ಅಭಿಪ್ರಾಯವನ್ನೊಳಗೊಂಡ ಪ್ರತ್ಯುತ್ತರವನ್ನು ಕೊಡುವ ವಾಕ್ಯವು ಪತಾಕಾಸ್ಥಾನದ ಮೂರನೆಯ ಬಗೆ ಎನಿಸುತ್ತದೆ. ಇಲ್ಲಿ ಸವಿನಯ ಎಂಬುದರಿಂದ ವಾಕ್ಯವು ಅರ್ಥವಿಶೇಷವನ್ನು ಹೀಗೆಯೇ ಎಂದು ನಿಶ್ಚಯಿಸಲು ಸಮರ್ಥವಾಗಿರಬೇಕೆಂಬುದು ತಿಳಿದು ಬರುತ್ತದೆ. ವೇಣೀಸಂಹಾರದ ದ್ವಿತೀಯಾಂಕದಲ್ಲಿ ಕಂಚುಕಿಯು ದುರ್ಯೋಧನನೊಡನೆ ವ್ಯವಹರಿಸುವಾಗ ಇದು ಸ್ಪಷ್ಟವಾಗಿ ತಿಳಿದು ಬರುತ್ತದೆ. "ಸ್ವಾಮಿ, ಮುರಿಯಿತು, ಮುರಿಯಿತು, ಯಾರಿಂದ? ಭೀಮನಿಂದ. ಯಾರದು? ತಮ್ಮ ... ಆಹಾ ಏಕೆ ಗೋಳಾಡುವೆ? (ಕಂಚುಕಿಯು ಭಯದಿಂದ) ಸ್ವಾಮಿ. ಹೇಳುತ್ತೇನೆ ಕೇಳಬೇಕು. ಭೀಮನಿಂದ ತಮ್ಮದು ಮುರಿಯಿತು: ನೀಚನಾದ ಮುದುಕನೇ, ನಿನಗೆ ಏಕೆ ಈ ವ್ಯಾಮೋಹವು ಬಂದಿತು? ಸ್ವಾಮಿ ವ್ಯಾಮೋಹದಲ್ಲ; ಇದು ನಿಜಾಂಶ. ಭೀಕರವಾದ ಗಾಳಿಯಿಂದ ಮುರಿದ ನಿಮ್ಮ ರಥದ ಧ್ವಜವು ಸಣ್ಣ ಗಂಟೆಗಳ ಸಮೂಹದ ಶಬ್ದದೊಡಗೂಡಿದ ಜನರ ಗೋಳಾಟದ ಧ್ವನಿಯನ್ನು ಎಲ್ಲಾ ಕಡೆಗಳಲ್ಲೂ ಹುಟ್ಟಿಸುತ್ತ ನೆಲದಮೇಲೆ ಬಿದ್ದಿತು. ಯುದ್ಧದಲ್ಲಿ ಒಬ್ಬ ವೀರನ ಹೊಡೆತದಿಂದ ಮತ್ತೊಬ್ಬ ವೀರನು ಗೋಳಾಡುತ್ತ ನೆಲದಮೇಲೆ ಹುರುಳುವಂತೆ ಧ್ವಜವು ಕೆಳಕ್ಕೆ ಉರುಳಿತು. ಇಲ್ಲಿ ಭೀಮನಿಂದ ದುರ್ಯೋಧನನಿಗೆ ಊರುಭಂಗವಾಯಿತು ಎಂಬುದೇ ಅಪ್ರಕೃತವಸ್ತು. ಅದನ್ನು ಧ್ವಜವು ಗಾಳಿಯ ಹೊಡೆತದಿಂದ ಕೆಳಗೆ ಉರುಳಿತು ಎಂದು ಪ್ರಕೃತವೆನಿಸಿದ ಅರ್ಥದಲ್ಲಿ ಸೇರಿಸಿ ತಿಳಿಸಲಾಗಿದೆ. ಪ್ರಕೃತವಸ್ತುವಿನಿಂದ ಅಪ್ರಕೃತವನ್ನು ಸೂಚಿಸಲಾಗಿದೆ. ರಥದ ಧ್ವಜವು ಕೆಳಗೆ ಬಿತ್ತು ಎಂಬ ಅರ್ಥವನ್ನು ಆಲೋಚಿಸುತ್ತಿರುವಾಗ ಆಗಂತುಕವಾಗಿ ದುರ್ಯೋಧನನ ತೊಡೆ ಮುರಿಯಿತು ಎಂಬ ಅರ್ಥವನ್ನು ಪ್ರಯೋಗಿಸಿದ್ದರಿಂದ ಇದು ಪತಾಕಾಸ್ಥಾನವೆನಿಸಿದೆ. ಇಲ್ಲಿ ಭಗ್ನಂ ಎಂದು ಗದ್ಯದಲ್ಲಿ ಅಷ್ಟನ್ನು ಮಾತ್ರವೇ ಹೇಳಿದ್ದರಿಂದ 'ಯಾವುದು ಮುರಿಯಿತು' ಎಂಬುದನ್ನು ತಿಳಿಸದೇ ಇರುವ ಪ್ರಯುಕ್ತ ಅರ್ಥವು ಸ್ಪಷ್ಟವಾಗಿ ತೋರುವುದಿಲ್ಲ. ಪದ್ಯದಲ್ಲಿ 'ಭೀಮೇನ ಮರುತಾ ಭಗ್ನಂ' ಎಂದು ಹೇಳಿದ್ದರಿಂದ ಒಂದು ಅಂಶದಲ್ಲಿ ನಿಶ್ಚಯವುಂಟಾಗಿದೆ. ವಾಯುವು ಧ್ವಜವನ್ನು ಬೀಳಿಸಿತು. ಭೀಮನು ತೊಡೆಯನ್ನು ಮುರಿದನು ಎಂಬ ಅರ್ಥಗಳು ಇಲ್ಲಿ ಶ್ಲೇಷದಿಂದ ತೋರುತ್ತವೆ. ಇಲ್ಲಿ ವಾಯುವಿಗೂ ಭೀಮನಿಗೂ ಸಂಬಂಧವಿರುವುದರಿಂದ ಪ್ರಕೃತವೆನಿಸಿದ ರಥದ ಧ್ವಜವು ಮುರಿಯುವುದಕ್ಕೂ ಅಪ್ರಕೃತವೆನಿಸಿದ ದುರ್ಯೋಧನನ ತೊಡೆ ಮುರಿಯುವುದಕ್ಕೂ ಸಂಬಂಧವಿದೆ.

ಈಗ ಪತಾಕಾಸ್ಥಾನದ ನಾಲ್ಕನೆಯ ಬಗೆಯನ್ನು ತಿಳಿಸುತ್ತಾನೆ. ಎರಡು

ಪಕ್ಷಗಳಿಗೂ ಅನ್ವಯಿಸುವಂತೆ ಅರ್ಥಗಳನ್ನು ಕಾವ್ಯದೊಳಗೆ ಸೇರಿಸಿ ಬೇರೊಂದು ಪ್ರಧಾನವಾದ ಅರ್ಥವನ್ನು ಸೂಚಿಸುವಂತೆ ವಾಕ್ಯವನ್ನು ಪ್ರಯೋಗಿಸುವುದೇ ಪತಾಕಾ ಸ್ಥಾನದ ನಾಲ್ಕನೆಯ ಬಗೆ ಎನಿಸುವುದು. ರತ್ನಾವಳಿಯಲ್ಲಿ "ಹೆಚ್ಚಾಗಿ ಮೊಗ್ಗುಗಳನ್ನು ಬಿಟ್ಟು (ಹೆಚ್ಚು ಉತ್ಕಂಠೆಯುಳ್ಳ) ಪುಷ್ಪವಿಕಾಸದಿಂದ (ವಿರಹದಿಂದ) ಬಿಳುಪಾಗಿ ಶೋಭಿಸುತ್ತಲೂ (ಆಕಳಿಸುತ್ತಲೂ) ನಿರಂತರವಾಗಿ ಬರುತ್ತಿರುವ ಗಾಳಿಯ ಸಂಪರ್ಕ ದಿಂದ (ನಿಟ್ಟುಸಿರಿನಿಂದ) ಒಂದು ಕ್ಷಣಕಾಲದಲ್ಲಿಯೇ ಹೊರಗೆ ಹೊರಡುವಂತಹ ಸುವಾಸನೆಯನ್ನು (ತನಗೆ ಉಂಟಾಗಿರುವ ಆಯಾಸವನ್ನು) ಪ್ರಕಟಿಸುತ್ತಲೂ ಕಾಮೋ ದ್ರೇಕದಿಂದ ಕೂಡಿರುವ ಬೇರೊಬ್ಬ ನಾರಿಯೋ ಏನೋ ಎಂಬಂತೆ ಮದನವೃಕ್ಷದೊಡ ಗೂಡಿದ ಈ ಉದ್ಯಾನಲತೆಯನ್ನು ಸಾವಕಾಶವಾಗಿ ನೋಡುತ್ತ ದೇವಿಯ ಮುಖ ವನ್ನು ಕೋಪದಿಂದ ಕೆಂಪೇರುವಂತೆ ಮಾಡುವೆನು" ಇಲ್ಲಿ ಹೆಚ್ಚು ಉತ್ಕಂಠೆಯಿಂದ ಕೂಡಿ ವಿರಹದಿಂದ ಆಕಳಿಸುತ್ತ ನಿಟ್ಟುಸಿರನ್ನು ನಿರಂತರವೂ ಬಿಡುತ್ತ ತನ್ನ ಆಯಾಸ ವನ್ನು ಹೊರಪಡಿಸುತ್ತಲೂ ಇರುವ ಸಾಗರಿಕೆಯನ್ನು ವತ್ಸರಾಜನು ನೋಡಿದ್ದರಿಂದ ವಾಸವದತ್ತೆಗೆ ಮುಖವು ಕೋಪದಿಂದ ಕೆಂಪೇರುವುದೆಂಬ ಅರ್ಥವನ್ನು ಶ್ಲೇಷದಿಂದ ಸೂಚಿಸಲಾಗಿದೆ. ಲತೆಯು ಹೊಸದಾಗಿ ಚಿಗುರು ಹೂವುಗಳಿಂದ ಶೋಭಿಸುತ್ತಿದ್ದು ದನ್ನು ನೋಡುತ್ತ ಇಷ್ಟು ವಿಳಂಬವಾದ ಪ್ರಯುಕ್ತ ದೇವಿಗೆ ಮುಖವು ಕೋಪದಿಂದ ಕೆಂಪೇರಿತು ಎಂಬ ವಿಷಯವನ್ನು ಚಿಂತಿಸುತ್ತಿರುವಾಗ ಸಾಗರಿಕೆಯನ್ನು ಸ್ವೀಕರಿಸುವ ವಿಚಾರವು ಆಕಸ್ಮಿಕವಾಗಿ ಬಂದೊದಗಿ ಆಕೆಯಮೇಲೆ ರಾಜನಿಗೆ ಪ್ರೇಮದೃಷ್ಟಿಯು ಬಿದ್ದುದರಿಂದ ದೇವಿಗೆ ಮುಂದೆ ಕೋಪವುಂಟಾಗುವುದೆಂಬ ವಿಷಯವನ್ನು ಪ್ರಯೋಗಿಸಿ ರುವ ಪ್ರಯುಕ್ತ ಇದು ಪತಾಕಾಸ್ಥಾನದ ನಾಲ್ಕನೆಯ ಬಗೆ ಎನಿಸಿದೆ.' ಹೀಗೆ ಇಲ್ಲಿ ಮುಂದೆ ದೇವಿಗೆ ಉಂಟಾಗುವ ಕೋಪವನ್ನು ಸೂಚಿಸಲಾಗಿದೆ. ಪತಾಕಾಸ್ಥಾನವೆನಿ ಸಿದ ಈ ನಾಲ್ಕು ಬಗೆಯ ವಾಕ್ಯಗಳು ಕೆಲವು ನಾಯಕನ ಕ್ಲೇಶಕ್ಕೂ, ಕೆಲವು ಕಡೆ ಅವನಿಗೆ ಅಮಂಗಳಕ್ಕೂ ಎಲ್ಲಾ ಸಂಧಿಗಳಲ್ಲೂ ಬರುತ್ತವೆ. ಕಾವ್ಯಕರ್ತೃವಿನ ಇಚ್ಛೆ ಯಂತೆ ಅನೇಕ ಕಡೆಗಳಲ್ಲಿ ಇವು ಬರುತ್ತವೆ. ಈ ಬಗ್ಗೆ ಒಬ್ಬ ವಿಮರ್ಶಕನು 'ಮುಖ ಸಂಧಿಯಿಂದ ಆರಂಭಿಸಿ ನಾಲ್ಕು ಸಂಧಿಗಳಲ್ಲಿ ಕ್ರಮವಾಗಿ ಇವು ಬರುತ್ತವೆ' ಎಂದು ಹೇಳಿದ್ದಾನೆ. ಇವನ್ನು ಇತರರು ಒಪ್ಪುವುದಿಲ್ಲ. ಇವು ಹೆಚ್ಚು ಪ್ರಯೋಜನವೆನಿಸಿ ದ್ದರಿಂದ ಯಾವ ನಿಯಮವೂ ಇಲ್ಲದೆ ಎಲ್ಲಾ ಕಡೆಗಳಲ್ಲೂ ಎಲ್ಲವೂ ಬರುವುದೇ ಯುಕ್ತ ವೆನಿಸಿದೆ ಎಂದು ಇತರರು ಹೇಳುತ್ತಾರೆ.

ಯಾವುದಾದರೂ ಇತಿವೃತ್ತವು ನಾಯಕನಿಗಾಗಲೀ ರಸಕ್ಕಾಗಲೀ ಅಯುಕ್ತ ವೆನಿಸಿದ್ದರಿಂದ ಅಸಂಗತವೂ ವಿರುದ್ಧವೂ ಆಗಿದ್ದರೆ ಅಂತಹವನ್ನು ಬಿಡಬೇಕು. ಅಥವಾ ಅದನ್ನು ಬೇರೆ ರೀತಿಯಲ್ಲಿ ಬದಲಾಯಿಸಿಕೊಳ್ಳಬೇಕು. ರಾಮನು ವ್ಯಾಜ ದಿಂದ ವಾಲಿಯನ್ನು ಕೊಲ್ಲುವುದು ಅನುಚಿತವಾದ ವಸ್ತು. ಇಂತಹದನ್ನು ಹೇಳಬಾರದು. ಉದಾತ್ತರಾಘವದಲ್ಲಿ ಇದನ್ನು ತಿಳಿಸಿಯೇ ಇಲ್ಲ. ಮಹಾವೀರಚರಿತವಲ್ಲಾದರೋ

ವಾಲಿಯು ರಾಮನ ವಧಕ್ಕಾಗಿ ಹೋಗಿ ರಾಮನಿಂದಲೇ ಹತನಾದನು ಎಂದು ಬೇರೆ ರೀತಿಯಲ್ಲಿ ತಿಳಿಸಿದೆ. ದೂರದಿಂದ ಕರೆಯುವುದು, ಯುದ್ಧ ಮೊದಲಾದ ವೃತ್ತಾಂತಗಳನ್ನು ಅಂಕದಲ್ಲಿ ತೋರಿಸಬಾರದೆಂದು ನಿಷೇಧಿಸಿರುವ ಪ್ರಯುಕ್ತ ಅವನ್ನು ಕವಿಯು ಸೇರಿಸಬಾರದು. ಅವಶ್ಯವಾಗಿ ಹೇಳಲೇಬೇಕೆಂದು ಎಲ್ಲರಿಗೂ ಸಮ್ಮತವೆನಿಸಿದ್ದನ್ನು ಮಾತ್ರವೇ ಹೇಳಬೇಕು ಎರಡುದಿನಗಳಿಂದ ಮೊದಲ್ಗೊಂಡು ಒಂದುವರ್ಷದವರೆಗೂ ನಡೆಯುವ ಕಥೆಯನ್ನಾಗಲೀ–ಬೇರೊಂದು ಹೆಚ್ಚು ವಿಸ್ತಾರವಾದುದನ್ನಾಗಲೀ ವಿಷ್ಕಂಭಕಗಳಲ್ಲಿ ಸೂಚಿಸಬೇಕು; ಅಂತವನ್ನು ಅಂಕದೊಳಕ್ಕೆ ತರಬಾರದು. ಪುರಾಣಗಳಲ್ಲಿ ವರ್ಷದಿಂದಾಚೆಗೆ ನಡೆಯುವಂತೆ ತಿಳಿಸಿರುವ ವೃತ್ತಾಂತವನ್ನೂ ವರ್ಷದೊಳಗೆ ನಡೆಯುವಂತೆ ವರ್ಣಿಸಬೇಕು. "ಒಂದು ಮಾಸದಲ್ಲಿ ಆಗಬೇಕಾದ್ದನ್ನೂ ಒಂದು ವರ್ಷದವರೆಗೂ ನಡೆಯಬೇಕಾದ್ದನ್ನೂ ಅಂಕದ ಕೊನೆಯಲ್ಲಿಯೇ ಮುಗಿಸಬೇಕು. ಅದೆಲ್ಲವನ್ನೂ ಒಂದುವರ್ಷ ಕಳೆದಮೇಲೆಯೂ ನಡೆಸಲಿಕ್ಕೆ ಎಳೆಯಬಾರದೆಂದು ಭರತಮುನಿಯು ಹೇಳಿದ್ದಾನೆ. ಇದರಿಂದ ಹದಿನಾಲ್ಕುವರ್ಷಗಳವರೆಗೂ ವ್ಯಾಪಿಸಿದ ರಾಮನ ವನವಾಸದಲ್ಲಿ ವಿರಾಧನೆಂಬ ರಾಕ್ಷಸನ ಕೊಲೆ ಮೊದಲಾದ ಕಥೆಯ ಭಾಗಗಳನ್ನು ಒಂದು ವರ್ಷದಲ್ಲೋ ಅಥವಾ ತಿಂಗಳಲ್ಲೋ, ಎರಡು ದಿವಸಗಳಲ್ಲೋ ಅಥವಾ ಒಂದು ದಿವಸದಲ್ಲೋ ನಡೆದಂತೆ ಸೂಚಿಸಬೇಕು. ಹಾಗೆ ಸೂಚಿಸುವುದರಲ್ಲಿ ದೋಷವಿಲ್ಲ. ಇಂತಹ ನೀರಸವಾದ ವೃತ್ತಾಂತಗಳನ್ನು ಸಂಕ್ಷೇಪವಾಗಿ ತಿಳಿಸಿದರೆ ಜನರಿಗೆ ಎಷ್ಟೋ ಸಂತೋಷವುಂಟಾಗುವುದು. ಒಂದು ವರ್ಷದಲ್ಲಿ ಒಂದು ಕಾರ್ಯವು ನಡೆಯಿತೆಂದು ಪುರಾಣದಲ್ಲಿ ವರ್ಣಿತವಾಗಿದ್ದರೆ ಅದನ್ನು ಒಂದು ದಿನದ ಕೊನೆಯಲ್ಲಿ ನಡೆಯುವಂತೆ ಏರ್ಪಡಿಸಬೇಕು. ಅಲ್ಲಿಗೆ ಅಂಕವನ್ನು ಮುಗಿಸಿ ಸಂಜೆ ನಡೆಯುವ ಕಾರ್ಯವನ್ನು ವಿಷ್ಕಂಭಕದಲ್ಲಿ ತಿಳಿಸಬೇಕು. ಅರ್ಥೋಪಕ್ಷೇಪಗಳಲ್ಲಿ ವಿಷ್ಕಂಭಕ, ಪ್ರವೇಶಕ, ಚೂಲಿಕೆ, ಅಂಕಾವತಾರ, ಅಂಕಮುಖ ಎಂದು ಐದು ಬಗೆಗಳಿವೆ. ಇವುಗಳನ್ನು ವಿಷ್ಕಂಭಕವನ್ನು ಇಲ್ಲಿ ವಿವರಿಸುತ್ತಾನೆ. ನಾಟಕದ ಕಥೆಗಳಲ್ಲಿ ಹಿಂದೆ ಕಳೆದುಹೋದವನ್ನೂ ಮುಂದೆ ನಡೆಯಲಿರುವುವನ್ನೂ ತಿಳಿಸುತ್ತ, ಅಂಕಕ್ಕಿಂತ ಚಿಕ್ಕದಾಗಿರುವ ಭಾಗವೇ ವಿಷ್ಕಂಭಕವೆನಿಸುವುದು. ಅಂಕದ ಆರಂಭದಲ್ಲಿ ಇದನ್ನು ಸೇರಿಸಬೇಕು. ಮಿಶ್ರ ಶುದ್ಧ ಎಂದು ಇದು ಎರಡುಬಗೆಯಾಗಿದೆ. ಇದರಲ್ಲಿ ಶುದ್ಧವೆನಿಸಿದ್ದರಲ್ಲಿ ಮಧ್ಯಮದರ್ಜೆಯ ಒಂದು ಪಾತ್ರವು ಭಾಗವಹಿಸಬೇಕು. ಮಿಶ್ರವೆನಿಸಿದ್ದರಲ್ಲಿ ನೀಚಪಾತ್ರಗಳೂ ಮಧ್ಯಮದರ್ಜೆಯ ಪಾತ್ರಗಳೂ ಭಾಗವಹಿಸಬೇಕು. ಅವುಗಳಲ್ಲಿ ಶುದ್ಧವಿಷ್ಕಂಭಕ್ಕೆ ಮಾಲತೀಮಾಧವದಲ್ಲಿ ಸ್ಮಶಾನದಲ್ಲಿ ಕಪಾಲಕುಂಡಲೆಯು ಭಾಗವಹಿಸುವುದನ್ನೂ, ಮಿಶ್ರವಿಷ್ಕಂಭಕ್ಕೆ ರಾಮಾಭಿನಂದದಲ್ಲಿ ಕ್ಷಪಣಿಕಕಾಪಾಲಿಕರು ಭಾಗವಹಿಸುವುದನ್ನು ಕಾಣಬಹುದು.

ಅಥ ಪ್ರವೇಶಕಃ— ಪ್ರವೇಶಕೋಽನುದಾತ್ತೋಕ್ತ್ಯಾ ನೀಚಪಾತ್ರಪ್ರಯೋಜಿತಃ ।
ಅಂಕದ್ವಯಾಂತರ್ವಿಜ್ಞೇಯಃ ಶೇಷಂ ವಿಷ್ಕಂಭಕೇ ಯಥಾ ॥

ಅಂಕವ್ಯಯಸ್ಯಾಂತರಿತಿ ಪ್ರಥಮಾಂಕೇಽಸ್ಯ ಪ್ರತಿಷೇಧಃ. ಯಥಾ ವೇಣೀಸಂಹಾರೆ ಅಶ್ವತ್ಥಾಮಾಂಕೇ ರಾಕ್ಷಸಮಿಥುನಮ್. ಅಥ ಚೂಲಿಕಾ.

ಅಂತರ್ಜವನಿಕಾಸಂಸ್ಥೈಃ ಸೂಚನಾಽರ್ಥಸ್ಯ ಚೂಲಿಕಾ ।

ಯಥಾ ವೀರಚರಿತೇ ಚತುರ್ಥಾಂಕಸ್ಯಾದೌ "ನೇಪಥ್ಯೇ— ಭೋ ಭೋಃ ವೈಮಾನಿಕಾಃ ಪ್ರವರ್ತ್ಯಂತಾಂ ರಂಗಮಂಗಳಾದಿ" ಇತ್ಯಾದಿ ರಾಮೇಣ ಪರಶುರಾಮೋ ಜಿತ ಇತಿ ನೇಪಥ್ಯೇ ಪಾತ್ರೈಃ ಸೂಚಿತಮ್.

ಅಥ ಅಂಕಾವತಾರಃ—ಅಂಕಾಂತೇ ಸೂಚಿತಃ ಪಾತ್ರೈಃ ತದಂಕಸ್ಯಾವಿಭಾಗತಃ ।
ಯತ್ರಾಂಕೋಽವತರತ್ಯೇಷೋಽಂಕಾವತಾರ ಇತಿ ಸ್ಮೃತಃ ॥

ಯಥಾ ಅಭಿಜ್ಞಾನೇ ಪಂಚಮಾಂಕೇ ಪಾತ್ರೈಃ ಸೂಚಿತಃ ಷಷ್ಠಾಂಕಸ್ತದಂಕಸ್ಯಾಂಗವಿಶೇಷ ಇವಾವತೀರ್ಣಃ.

ಅಥ ಅಂಕಮುಖಮ್- ಯತ್ರ ಸ್ಯಾದಂಕ ಏಕಸ್ಮಿನ್ನಂಕಾನಾಂ ಸೂಚನಾಽಖಿಲಾ ।
ತದಂಕಮುಖಮಿತ್ಯಾಹುರ್ಬೀಜಾರ್ಥವ್ಯಾಪಕಂ ಚ ತತ್ ॥

ಯಥಾ ಮಾಲತೀಮಾಧವೇ ಪ್ರಥಮಾಂಕಾದೌ ಕಾಮಂದಕ್ಯವಲೋಕಿತೇ ಭೂರಿವಸುಪ್ರಭೃತೀನಾಂ ಭಾವಿಭೂಮಿಕಾನಾಂ ಪರಿಕ್ಷಿಪ್ತಕಥಾಪ್ರಬಂಧಸ್ಯ ಚ ಪ್ರಸಂಗಾತ್ ಸನ್ನಿವೇಶಂ ಸೂಚಿತವತ್ಯಾ.

ಅಂಕಾಂತಪಾತ್ರೈರ್ವಾಂಕಾಸ್ಯಂ ಛಿನ್ನಾಂಕಸ್ಯಾರ್ಥಸೂಚನಾತ್.

ಅಂಕಾಂತಪಾತ್ರೈರಂಕಾಂತೇ ಪ್ರವಿಷ್ಟೈಃ ಪಾತ್ರೈಃ. ಯಥಾ ವೀರಚರಿತೇ ದ್ವಿತೀಯಾಂಕಾಂತೇ (ಪ್ರವಿಶ್ಯ) "ಸುಮಂತ್ರಃ—ಭಗವಂತೌ ವಸಿಷ್ಠವಿಶ್ವಾಮಿತ್ರೌ ಭವತಃ ಸಭಾರ್ಗವಾನ್ ಆಹ್ವಯತಃ. ಇತರೇ—ಕ್ವ ಭಗವಂತೌ ? ಸುಮಂತ್ರಃ—ಮಹಾರಾಜದಶರಥಸ್ಯಾಂತಿಕೇ. ಇತರೆ—ತತ್ತತ್ರೈವ ಗಚ್ಛಾಮಃ" ಇತ್ಯಂಕಪರಿಸಮಾಪ್ತೌ "ತತಃ ಪ್ರವಿಶ್ಯಂತ್ಯುಪವಿಷ್ಟಾ ವಸಿಷ್ಠವಿಶ್ವಾಮಿತ್ರಪರಶುರಾಮಾಃ" ಇತ್ಯತ್ರ ಪೂರ್ವಾಂಕಾಂತ ಏವ ಪ್ರವಿಷ್ಟೇನ ಸುಮಂತ್ರಪಾತ್ರೇಣ ಶತಾನಂದಜನಕಕಥಾವಿಚ್ಛೇದೇ ಉತ್ತರಾಂಕಮುಖಸೂಚನಾದಂಕಾಸ್ಯಮಿತಿ. ಏತಚ್ಚ ಧ್ವನಿಕಮತಾನುಸಾರೇಣೋಕ್ತಮ್ ಅನ್ಯೇ ತು 'ಅಂಕಾವತಾರೇಣೈವೇದಂ ಗತಾರ್ಥಮ್' ಇತ್ಯಾಹುಃ.

ಅಪೇಕ್ಷಿತಂ ಪರಿತ್ಯಜ್ಯ ನೀರಸಂ ವಸ್ತು ವಿಸ್ತರಮ್ ।
ಯದಾ ಸಂದರ್ಶಯೇಚ್ಛೇಷಂ ಆಮುಖಾನಂತರಂ ತದಾ ॥
ಕಾರ್ಯೋ ವಿಷ್ಕಂಭಕೋ ನಾಟ್ಯೇ ಆಮುಖಾಕ್ಷಿಪ್ತಪಾತ್ರಕಃ ॥

ಯಥಾ ರತ್ನಾವಳ್ಯಾಂ ಯೌಗಂಧರಾಯಣಪ್ರಯೋಜಿತಃ.

ಯದಾ ತು ಸರಸಂ ವಸ್ತು ಮೂಲಾದೇವ ಪ್ರವರ್ತತೇ ।
ಆದಾವೇವ ತದಾಂತಃ ಸ್ಯಾದಾಮುಖಾಕ್ಷೇಪಸಂಶ್ರಯಃ ॥

ಯಥಾ ಶಾಕುಂತಲೇ—

ವಿಷ್ಕಂಭಕಾದ್ಯೈರಪಿ ನೋ ವಧೋ ವಾಚ್ಯೋಽಧಿಕಾರಿಣಃ ।

ಅನ್ಯೈರ್ನ ತಿರೋಧಾನಂ ನ ಕುರ್ಯಾದ್ರಸವಸ್ತುನೋಃ ||
ರಸಃ ಶೃಂಗಾರಾದಿಃ. ಯದುಕ್ತಂ ಧ್ವನಿಕೇನ
ನ ಚಾತಿ ರಸತೋ ವಸ್ತು ದೂರಂ ವಿಚ್ಛಿನ್ನತಾಂ ನಯೇತ್ |
ರಸಂ ವಾ ನ ತಿರೋದಧ್ಯಾತ್ ವಸ್ತ್ವಲಂಕಾರಲಕ್ಷಣೈಃ ||
ಬೀಜಂ ಬಿಂದುಃ ಪತಾಕಾ ಚ ಪ್ರಕರೀ ಕಾರ್ಯಮೇವ ಚ |
ಅರ್ಥಪ್ರಕೃತಯಃ ಪಂಚ ಜ್ಞಾತ್ವಾ ಯೋಜ್ಯಾ ಯಥಾವಿಧಿ ||
ಅರ್ಥಪ್ರಕೃತಯಃ ಪ್ರಯೋಜನಸಿದ್ಧಿಹೇತವಃ.
ತತ್ರ ಬೀಜಮ್— ಅಲ್ಪಮಾತ್ರಂ ಸಮುದ್ದಿಷ್ಟಂ ಬಹುಧಾ ಯದ್ವಿಸರ್ಪತಿ |
ಫಲಸ್ಯ ಪ್ರಥಮೋ ಹೇತುರ್ಬೀಜಂ ತದಭಿಧೀಯತೇ ||

ಯಥಾ ರತ್ನಾವಳ್ಯಾಂ ವತ್ಸರಾಜಸ್ಯ ರತ್ನಾವಳೀಪ್ರಾಪ್ತಿಹೇತುಃ ದೈವಾನುಕೂಲಲಾಲಿತೋ ಯೌಗಂಧರಾಯಣವ್ಯಾಪಾರಃ. ಯಥಾ ವಾ ವೇಣ್ಯಾಂ ದ್ರೌಪದೀಕೇಶಸಂಯಮನಹೇತುಃ ಭೀಮಸೇನಕ್ರೋಧೋಪಚಿತೋ ಯುಧಿಷ್ಠಿರೋತ್ಸಾಹಃ.

ಅವಾಂತರಾರ್ಥವಿಚ್ಛೇದೇ ಬಿಂದುರಚ್ಛೇದಕಾರಣಮ್ |

ಯಥಾ ರತ್ನಾವಳ್ಯಾಂ ಅನಂಗಪೂಜಾಪರಿಸಮಾಪ್ತೌ ಕಥಾರ್ಥವಿಚ್ಛೇದೇ ಸತಿ 'ಉದಯನಸ್ಯೇಂದೋರಿವೋದ್ವೀಕ್ಷತೇ' ಇತಿ ಸಾಗರಿಕಾ ಶ್ರುತ್ವಾ (ಸಹರ್ಷಮ್) ಕಥಮೇಷ ಸ ಉದಯನನರೇಂದ್ರಃ ಇತ್ಯಾದಿರವಾಂತರಾರ್ಥಹೇತುಃ.

ವ್ಯಾಪಿ ಪ್ರಾಸಂಗಿಕಂ ವೃತ್ತಂ ಪತಾಕೇತ್ಯಭಿಧೀಯತೇ ||

ಯಥಾ ರಾಮಚರಿತೇ ಸುಗ್ರೀವಾದೇಃ, ವೇಣ್ಯಾಂ ಭೀಮಾದೇಃ, ಶಾಕುಂತಲೇ ವಿದೂಷಕಸ್ಯ ಚರಿತಮ್.

ಪತಾಕಾ ನಾಯಕಸ್ಯ ಸ್ಯಾನ್ನ ಸ್ವಕೀಯಫಲಾಂತರಮ್ |
ಗರ್ಭೇ ಸಂಧೌ ವಿಮರ್ಶೇ ವಾ ನಿರ್ವಾಹಸ್ತಸ್ಯ ಜಾಯತೇ ||
ಸುಗ್ರೀವಾದೇ ರಾಜ್ಯಪ್ರಾಪ್ತ್ಯಾದಿಃ. ಯತ್ತು ಮುನಿನೋಕ್ತಮ್—
ಆಗರ್ಭಾದಾವಿಮರ್ಶಾತ್ ಪತಾಕಾ ವಿನಿವರ್ತತೇ || ಇತಿ

ತತ್ರ—"ಪತಾಕೇತಿ. ಪತಾಕಾ ನಾಯಕಫಲಮ್. ನಿರ್ವಹಣಪರ್ಯಂತಮಪಿ ಪತಾಕಾಯಾಃ ಪ್ರವೃತ್ತಿದರ್ಶನಾತ್" ಇತಿ ವ್ಯಾಖ್ಯಾತಮಭಿನವಗುಪ್ತಪಾದೈಃ.

ಪ್ರಾಸಂಗಿಕಂ ಪ್ರದೇಶಸ್ಥಂ ಚರಿತಂ ಪ್ರಕರೀ ತಥಾ |
ಯಥಾ ಕುಲಪತ್ಯಂಕೇ ರಾವಣಸ್ಯ ಜಟಾಯುಸಂವಾದಃ ||
ಪ್ರಕರೀ—ನಾಯಕಸ್ಯ ಸ್ಯಾನ್ನ ಸ್ವಕೀಯಂ ಫಲಾಂತರಮ್ |
ಅಪೇಕ್ಷಿತಂ ತು ಯತ್ಸಾಧ್ಯಮಾರಂಭೋ ಯನ್ನಿಬಂಧನಃ ||
ಸಮಾಪನಂ ತು ಯತ್ಸಿದ್ಧ್ಯೈ ತತ್ಕಾರ್ಯಮಿತಿ ಸಮ್ಮತಮ್ |
ಯಥಾ ರಾಮಚರಿತೇ ರಾವಣವಧಃ ||

ಸರಸವಾದ ವೃತ್ತಾಂತಗಳನ್ನು ಸಭ್ಯರಿಗೆ ತಿಳಿಯಪಡಿಸುವಂತಹ ಸಂದರ್ಭಗಳೇ ಅರ್ಥೋಪಕ್ಷೇಪಕಗಳೆನಿಸುವುವೆಂದು ಹಿಂದೆ ತಿಳಿಸಿದೆ. ಅದರ ಐದು ಬಗೆಗಳಲ್ಲಿ ಮೊದಲನಯದಾದ ವಿಷ್ಕಂಭಕದ ಸ್ವರೂಪವನ್ನು ತಿಳಿಸಿಯಾದಮೇಲೆ ಈಗ ಪ್ರವೇಶಕ ಸ್ವರೂಪವನ್ನು ತಿಳಿಸುತ್ತಾನೆ. ನೀಚಪಾತ್ರಗಳು ರಂಗಸ್ಥಳವನ್ನು ಪ್ರವೇಶಿಸಿ ಸಂಸ್ಕೃತ ಭಾಷೆಯೆನ್ನುಳಿದ ಇತರ ಪ್ರಾಕೃತಭಾಷೆಯಲ್ಲಿ ವ್ಯವಹರಿಸುತ್ತ ಕಥೆಯ ಹಿಂದಿನ ಮುಂದಿನ ಸಮಾಚಾರಗಳನ್ನು ಸಂಕ್ಷೇಪವಾಗಿ ತಿಳಿಸಿಕೊಡುವ ಸಂದರ್ಭವೇ ಪ್ರವೇಶಕ ವೆನಿಸುವುದು. ಎರಡು ಅಂಕಗಳ ಮಧ್ಯದಲ್ಲಿ ಇದು ಬರುವುದು. ಆದ್ದರಿಂದಲೇ ಇದು ಮೊದಲನೆಯ ಅಂಕದ ಆರಂಭದಲ್ಲಿ ಬರುವಂತಿಲ್ಲ. ವೇಣೀಸಂಹಾರದ ಅಶ್ವತ್ಥಾಮಾಂಕ ದಲ್ಲಿ ರಾಕ್ಷಸರಿಬ್ಬರು ರಂಗಸ್ಥಳಕ್ಕೆ ಬಂದು ವ್ಯವಹರಿಸುವುದು ಪ್ರವೇಶಕವೆನಿಸಿದೆ.

ಈಗ ಮೂರನೆಯ ಬಗೆ ಎನಿಸಿದ ಚೂಲಿಕೆಯನ್ನು ವಿವರಿಸುತ್ತಾನೆ. ತೆರೆಯ ಮರೆಯೊಳಗೆ ಇರುವ ಜನರು ಕಥೆಯ ವಸ್ತುವನ್ನು ಸೂಚಿಸುವುದೇ ಚೂಲಿಕೆ ಎನಿಸು ವುದು. ಮಹಾವೀರಚರಿತದಲ್ಲಿ ನಾಲ್ಕನೆಯ ಅಂಕದ ಮೊದಲು "ಎಲೈ ವೈಮಾನಿಕರೇ, ರಂಗಸ್ಥಳಕ್ಕೆ ಬೇಕಾದ ಮಂಗಳಕಾರ್ಯಗಳು ಆರಂಭವಾಗಲಿ" ಎಂದು ಹೇಳಿದ ಮೇಲೆ ತೆರೆಯ ಹಿಂದೆ "ರಾಮನು ಪರಶುರಾಮನನ್ನು ಜಯಿಸಿದನು" ಎಂದು ತಿಳಿಸಿದೆ. ಹೀಗೆ ತಿಳಿಸುವುದೇ ಚೂಲಿಕೆ ಎನಿಸಿದೆ. ಈಗ ಅಂಕಾವತಾರವನ್ನು ತಿಳಿಸು ತ್ತಾನೆ. ಒಂದು ಅಂಕದ ಕೊನೆಯಲ್ಲಿ ಆ ಅಂಕಕ್ಕೆ ಬೇರೆ ಎನಿಸಿದಂತೆ ಮುಂದಿನ ಅಂಕ ವನ್ನು ಸೇರಿಸುವುದೇ ಅಂಕಾವತಾರವೆನಿಸುವುದು' ಅಭಿಜ್ಞಾನಶಾಕುಂತಲದ ಐದನೆಯ ಅಂಕದಲ್ಲಿ ಪಾತ್ರಗಳು ಸೂಚಿಸಿದಂತೆ ಆರನೆಯ ಅಂಕವು ಆ ಅಂಕಕ್ಕೆ ಅಂಗವೆನಿಸಿ ದಂತೆ ಬಂದಿದೆ. ಈ ಬಗೆಯ ಸನ್ನಿವೇಶವಿರುವುದರಿಂದ ಇದು ಅಂಕಾವತಾರವೆನಿಸಿದೆ. ಈಗ ಅಂಕಮುಖವನ್ನು ತಿಳಿಸುತ್ತಾನೆ. ಒಂದೇ ಅಂಕದಲ್ಲಿ ಎಲ್ಲಾ ಅಂಕಗಳ ಸೂಚನೆಯನ್ನು ಸೇರಿಸುವುದೇ ಅಂಕಮುಖವೆನಿಸುವುದು. ಮುಂದೆ ತಿಳಿಸುವಂತಹ ಅರ್ಥವಿಶೇಷವನ್ನು ಇಲ್ಲಿ ಸೂಚಿಸಲಾಗುವುದು. ಎಲ್ಲಾ ಅಂಕಗಳ ವಿಷಯವನ್ನು ತಿಳಿಸುತ್ತ ಅವಕ್ಕೆ ಮೊದಲು ಬರುವುದರಿಂದ ಇಂತಹ ಸನ್ನಿವೇಶವು ಅಂಕಮುಖವೆನಿಸು ತ್ತದೆ. ಮಾಲತೀಮಾಧವದಲ್ಲಿ ಮೊದಲನೆಯ ಅಂಕದ ಆರಂಭದಲ್ಲಿ ಕಾಮಂದಕೀ ಅವ ಲೋಕಿತೆ ಇವರಿಬ್ಬರೂ ಮುಂದೆ ಬರುವ ಭೂರಿವಸು ಮೊದಲಾದ ಪಾತ್ರಗಳನ್ನೂ. ಎಲ್ಲಾ ಅಂಕಗಳ ಸಂಕ್ಷೇಪವಾದ ವೃತ್ತಾಂತವನ್ನೂ ಅಲ್ಲಿಯ ಸನ್ನಿವೇಶವನ್ನೂ ಸೂಚಿಸುತ್ತಾರೆ. ವಿಷ್ಕಂಭಕದಲ್ಲಿ ಈ ಬಗೆಯ ಸನ್ನಿವೇಶವನ್ನು ಸೇರಿಸಿದ್ದರಿಂದ ಅದು ಅಂಕಮುಖ ವೆನಿಸಿದೆ. ಧ್ವನಿಕನೆಂಬ ವಿಮರ್ಶಕನ ಮತದಂತೆ ಅಂಕಮುಖವು, ಅಂಕದ ಕೊನೆಯಲ್ಲಿ ಪ್ರವೇಶಿಸುವ ಪಾತ್ರಗಳಿಂದ ಬೇರೊಂದು ಅಂಕದ ಅಭಿಪ್ರಾಯವನ್ನು ಸೂಚಿಸಬೇಕು. ಮಹಾವೀರಚರಿತದ ಎರಡನೆಯ ಅಂಕದ ಕೊನೆಯಲ್ಲಿ ಸುಮಂತ್ರನು ಪ್ರವೇಶಿಸಿ "ಪೂಜ್ಯರಾದ ವಸಿಷ್ಠ ವಿಶ್ವಾಮಿತ್ರರು ನಿಮ್ಮನ್ನು ಕರೆಯುತ್ತಾರೆ" ಎಂದು ಹೇಳಲು ಬೇರೆಯವರು 'ಪೂಜ್ಯರು ಎಲ್ಲಿರುವರು' ಎಂದು ಕೇಳುವರು. ಆಗ

ಸುಮಂತ್ರನು 'ಮಹಾರಾಜ ದಶರಥನ ಹತ್ತಿರದಲ್ಲಿ ಇರುವರು' ಎಂದು ಹೇಳುವರು. 'ಹಾಗಾದರೆ ನಾವೂ ಅಲ್ಲಿಗೆ ಹೋಗೋಣ' ವೆಂದು ಬೇರೆಯವರು ಹೇಳುವರು. ಅಲ್ಲಿಗೆ ಅಂಕವು ಕೊನೆಯಾಗಲು, ವಸಿಷ್ಠ ವಿಶ್ವಾಮಿತ್ರ ಪರಶುರಾಮರು ಕುಳಿತುಕೊಂಡಿರುವುದನ್ನು ತೋರಿಸಲಾಗುವುದು. ಹೀಗೆ ಹಿಂದಿನ ಅಂಕದ ಕೊನೆಯಲ್ಲಿ ಬರುವ ಸುಮಂತ್ರನು ಶತಾನಂದ ಜನಕ ಇವರ ಕಥೆಯನ್ನು ಅಲ್ಲಿಗೆ ಮುಗಿಸಿ ಮುಂದಿನ ಅಂಕದ ಆರಂಭದಲ್ಲಿ ಆಗಬೇಕಾದ ವಸಿಷ್ಠ ವಿಶ್ವಾಮಿತ್ರರ ಪ್ರವೇಶವನ್ನು ಸೂಚಿಸಿದ್ದಾನೆ. ಇದು ಅಂಕ ಮುಖವೆನಿಸಿದೆ. ಇದನ್ನು ಧ್ವನಿಕನೆಂಬ ಆಲಂಕಾರಿಕನ ಅಭಿಪ್ರಾಯದಂತೆ ತಿಳಿಸಿದೆ. ಬೇರೆಯವರು ಇಂತಹ ಸನ್ನಿವೇಶವನ್ನು ಅಂಕಾವತಾರದಲ್ಲಿಯೇ ಸೇರಿಸುತ್ತಾರೆ. ಹಿಂದಿನ ಅಂಕದ ಕೊನೆಯಲ್ಲಿ ಮುಂದಿನ ಅಂಕದ ಆರಂಭವನ್ನು ಸೂಚಿಸುವುದರಿಂದ ಇದೂ ಸಹ ಅಂಕಾವತಾರವೇ ಆಗಲರ್ಹವೆನಿಸಿದೆ.

ಒಂದು ವೃತ್ತಾಂತಕ್ಕೆ ಸಂಬಂಧಿಸಿದಂತಿರುವ ವಸ್ತುವು ವಿಸ್ತಾರವಾಗಿಯೂ ನೀರಸವಾಗಿಯೂ ಇದ್ದರೆ ಅಂತಹವನ್ನು ಬಿಟ್ಟು ಉಳಿದ ರಸವತ್ತರವಾದ ಭಾಗವನ್ನು ಪ್ರಸ್ತಾವನೆಯಾದನಂತರ ಸೇರಿಸಿದರೆ ಆಗ ಪ್ರಸ್ತಾವನೆಯಲ್ಲಿ ಮುಂದಿನ ಪಾತ್ರಗಳನ್ನು ಸೂಚಿಸುವಂತೆ ವಿಷ್ಕಂಭಕವನ್ನೇ ಸೇರಿಸಬೇಕು. ರತ್ನಾವಳಿಯಲ್ಲಿ ಯೌಗಂಧರಾಯಣನ ಪ್ರಯೋಗವು ಇಂತಹ ಸನ್ನಿವೇಶವನ್ನು ತಿಳಿಸುತ್ತದೆ. ಮೊದಲೇ ಸರಸವಾದ ವೃತ್ತಾಂತವು ಬರುವುದಾದರೆ ಆಗ ಪ್ರಸ್ತಾವನೆಯಿಂದ ಮುಂದಿನ ಪಾತ್ರಗಳ ಪ್ರವೇಶವನ್ನು ಸೂಚಿಸುವಂತೆ ಅಂಕವನ್ನೇ ಕವಿಯು ಸೇರಿಸಬೇಕು. ಶಾಕುಂತಲದಲ್ಲಿ ಇಂತಹ ಸನ್ನಿವೇಶವನ್ನು ಕಾಣಬಹುದು.

ವಿಷ್ಕಂಭಕಗಳಲ್ಲಿ ಅಧಿಕಾರಿಗಳ ವಧವನ್ನು ತಿಳಿಸಬಾರದು. ರಸಕ್ಕೂ ಕಥೆಯ ವಸ್ತುವಿಗೂ ಪರಸ್ಪರ ವ್ಯವಧಾನವುಂಟಾಗದಂತೆ ಕವಿಯು ನೋಡಿಕೊಳ್ಳಬೇಕು. ರಸದಿಂದ ವಸ್ತುವಿಗೂ ವಸ್ತುವಿನಿಂದ ರಸಕ್ಕೂ ತೊಂದರೆಯಾಗದಂತೆ ಏರ್ಪಡಿಸಬೇಕು. ರಸವನ್ನು ಗಮನಿಸದೆ ವೃತ್ತಾಂತವನ್ನು ತಿಳಿಸುವುದೇ ಆಗಲಿ, ವೃತ್ತಾಂತವನ್ನು ವರ್ಣಿಸದೆ ರಸವನ್ನು ಪ್ರಕಾಶಪಡಿಸುವುದೇ ಆಗಲಿ ಯುಕ್ತವೆನಿಸುವುದಿಲ್ಲ. ಅಂದರೆ ರಸದೊಡಗೂಡಿದ ವೃತ್ತಾಂತವನ್ನೇ ತಿಳಿಸಬೇಕು. "ವೃತ್ತಾಂತವು ರಸದಿಂದ ಬಹಳ ದೂರವೆನಿಸಿದರೆ ಅದರಿಂದ ಸಭ್ಯರಿಗೆ ಸಂತೋಷವಾಗುವುದಿಲ್ಲ. ಹಾಗೆಯೇ ವಸ್ತು ಅಲಂಕಾರಗಳೆನಿಸಿದ ವೃತ್ತಾಂತಗಳಿಂದ ರಸವನ್ನು ಮರೆಮಾಡದಂತಹ ಸನ್ನಿವೇಶವನ್ನು ಹೊಂದಿಸಬೇಕು. ವಸ್ತು ಅಲಂಕಾರಗಳೇ ಹೆಚ್ಚಾಗಿಬಂದು ರಸಭಾವಕ್ಕೆ ಅವಕಾಶವಿಲ್ಲದಂತಾಗಬಾರದು." ಎಂದು ಧ್ವನಿಕನು ಹೇಳಿದ್ದಾನೆ.

ಬೀಜ, ಬಿಂದು, ಪತಾಕೆ, ಪ್ರಕರೀ, ಕಾರ್ಯ ಎಂದು ಅರ್ಥಪ್ರಕೃತಿಗಳು ಐದು ಬಗೆ ಎನಿಸಿವೆ. ಇವನ್ನು ಆಯಾ ಸಂದರ್ಭಕ್ಕೆ ಅನುಗುಣವಾಗಿ ಸೇರಿಸಬೇಕು. ಕಥೆಯಲ್ಲಿ ಮೂಲಪ್ರಯೋಜನವು ಸಿದ್ಧಿಸಲಿಕ್ಕೆ ಕಾರಣವೆನಿಸಿದ ಅಂಶಗಳೇ ಅರ್ಥಪ್ರಕೃತಿಗಳು. ಇವುಗಳಲ್ಲಿ ಬೀಜದ ಸ್ವರೂಪವನ್ನು ಈಗ ತಿಳಿಸುತ್ತಾನೆ. ಮೊದಲು

ಸ್ವಲ್ಪವಷ್ಟನ್ನೇ ಮೊಳಕೆಯಂತೆ ತೋರಿಸಿದ್ದು ಆಮೇಲೆ ಕ್ರಮವಾಗಿ ಸಹಕಾರಿಕಾರಣಗಳ ಮೂಲಕ ಅನೇಕ ಬಗೆಯ ಅವಾಂತರಕಾರ್ಯಗಳನ್ನು ಸಾಧಿಸುತ್ತಲೇ ವಿಸ್ತಾರಗೊಳ್ಳುವ ವಸ್ತುವೇ ನಾಯಕನಿಗೆ ಮುಖ್ಯಫಲವನ್ನು ದೊರಕಿಸಲು ಕಾರಣವಾಗುವ ಪ್ರಯುಕ್ತ ಇದು ಬೀಜವೆನಿಸುವುದು. ರತ್ನಾವಳಿಯಲ್ಲಿ ವತ್ಸರಾಜನಿಗೆ ರತ್ನಾವಳಿಯು ದೊರೆಯಲಿಕ್ಕೆ ದೈವಾನುಕೂಲ್ಯದಿಂದ ಕೂಡಿದ ಯೌಗಂಧರಾಯಣನ ವ್ಯಾಪಾರವೇ ಬೀಜವೆನಿಸಿದೆ. ವೇಣೀಸಂಹಾರದಲ್ಲಿ ಭೀಮಸೇನನ ಕೋಪದಿಂದ ಬೆಳೆದ ಯುಧಿಷ್ಠಿರನ ಉತ್ಸಾಹವು ದ್ರೌಪದಿಯು ತನ್ನ ಕೂದಲನ್ನು ಕಟ್ಟಲು ಕಾರಣವೆನಿಸಿದೆ. ಈ ಉತ್ಸಾಹವೇ ಆ ಕಾರ್ಯಸಾಧನೆಗೆ ಬೀಜವೆನಿಸಿದೆ.

ಸಂಪೂರ್ಣವೃತ್ತಾಂತದಲ್ಲಿ ಒಂದು ಭಾಗವು ಮುಗಿಯಲು ಅದನ್ನು ಅಲ್ಲಿಯೇ ಕೊನೆಗಾಣಿಸದಂತೆ ಬೇರೊಂದು ವೃತ್ತಾಂತವನ್ನು ಜೋಡಿಸುವುದೇ ಬಿಂದುವೆನಿಸುವುದು. ರತ್ನಾವಳೀನಾಟಕೆಯಲ್ಲಿ ಮನ್ಮಥನ ಪೂಜೆಯನ್ನು ಮುಗಿಸಿದಮೇಲೆ ಕಥೆಯ ವಸ್ತುವು ಕೊನೆಗೊಳ್ಳಲು, ಮನಸ್ಸು ಚಂದ್ರನನ್ನು ಬಯಸುವಂತೆ ಉದಯನನ್ನು ನಿರೀಕ್ಷಿಸುತ್ತಲಿದೆ, ಎಂದು ಕೊನೆಯಲ್ಲಿ ಹೇಳಿದ ಮಾತನ್ನು ಸಾಗರಿಕೆಯು ಕೇಳಿ ಸಂತೋಷದಿಂದ ಆ ಉದಯನಮಹಾರಾಜನು ಇವನೇ ಆಗಿರುವನು ಎಂದು ಹೇಳುವಳು. ಇದರಿಂದ ಆ ನಾಟಕೆಯ ಮುಖ್ಯವೃತ್ತಾಂತದ ಬೇರೊಂದು ಭಾಗಕ್ಕೆ ಹೇತುವೆನಿಸಿದ ಈ ವೃತ್ತಾಂತವನ್ನು ಇಲ್ಲಿ ಸೇರಿಸಿದ್ದು ಬಿಂದುವೆನಿಸಿದೆ. ಇದು ವತ್ಸರಾಜನ ಮೇಲೆ ಸಾಗರಿಕೆಗೆ (ಇದು ರತ್ನಾವಳಿಗೆ ಬೇರೆ ಹೆಸರು) ಇದ್ದ ಅನುರಾಗವನ್ನು ಸೂಚಿಸುತ್ತದೆ. ಆ ಅಂಕದಲ್ಲಿ ಹೇಳದೆ ಇರುವ ಈ ವಿಷಯವನ್ನು ಹೀಗೆ ಸೂಚಿಸಿದ್ದರಿಂದ ಇದು ಬಿಂದುವೆನಿಸಿದೆ. ಕೊನೆಯವರೆಗೂ ಮುಂದುವರೆಯುವ ವೃತ್ತಾಂತ ಒಂದನ್ನು ಪ್ರಸಂಗದಿಂದ ಜೋಡಿಸುವುದೇ ಪತಾಕೆ ಎನಿಸುವುದು. ರಾಮನ ಚರಿತ್ರೆಯನ್ನು ಹೇಳುವಾಗ ಅಲ್ಲಲ್ಲಿ ಬರುವ ಸುಗ್ರೀವನ ವೃತ್ತಾಂತವು ಕೊನೆಯತನಕ ಬರುವುದರಿಂದ ಪತಾಕೆ ಎನಿಸಿದೆ. ಹೀಗೆಯೇ ವೇಣೀಸಂಹಾರದಲ್ಲಿ ಭೀಮನ ವೃತ್ತಾಂತವೂ, ಶಾಕುಂತಲದಲ್ಲಿ ವಿದೂಷಕನ ವೃತ್ತಾಂತವೂ ಪತಾಕೆ ಎನಿಸಿವೆ. ಇದು ನಿರ್ವಹಣಸಂಧಿಯವರೆಗೂ ನಾಯಕನ ಕಾರ್ಯವನ್ನು ಸಾಧಿಸುತ್ತದೆ. ಸುಗ್ರೀವ, ಭೀಮ, ವಿದೂಷಕ ಇಂತಹವರ ವೃತ್ತಾಂತವು ಮೊದಲಿನಿಂದ ಕೊನೆಯವರೆಗೆ ಬಂದರೂ ಅವರಿಗೆ ಯಾವ ಫಲವನ್ನೂ ಸಾಧಿಸದೆ ನಾಯಕನಿಗೆ ಆಗಬೇಕಾದ ಪ್ರಧಾನಕಾರ್ಯವನ್ನು ಸಾಧಿಸಿಕೊಡಲು ಅದು ಅನುಕೂಲವೆನಿಸಿದೆ. ಗರ್ಭಸಂಧಿಯಲ್ಲೋ ವಿಮರ್ಶಸಂಧಿಯಲ್ಲೋ ಆರಂಭವಾಗಿ ನಿರ್ವಹಣಸಂಧಿಯವರೆಗೂ ಈ ಪತಾಕೆ ಎನಿಸಿದ ವೃತ್ತಾಂತವು ಮುಂದುವರೆಯುತ್ತದೆ. ಈ ಪತಾಕೆ ಎನಿಸಿದ ವೃತ್ತಾಂತಕ್ಕೆ ನಾಯಕನೆನಿಸಿದವನು ತನಗೆ ಆಗಬೇಕಾದ ಫಲವನ್ನು ಮುಖ್ಯನಾಯಕನ ಚರಿತ್ರೆಯ ಮಧ್ಯಭಾಗದಲ್ಲಿಯೇ ಪಡೆದರೂ ಸಹ ಅವನು ಅಷ್ಟಕ್ಕೆ ನಿಲ್ಲದೆ ಕೊನೆಯವರೆಗೂ ಮುಖ್ಯನಾಯಕನ ಕಾರ್ಯಸಾಧನೆಗೆ ಸಹಾಯಕನಾಗಿ ನಿಲ್ಲುವನು. ಸುಗ್ರೀವನಿಗೆ ರಾಜ್ಯವು ದೊರಕುವುದೇ ಇಲ್ಲಿ ಪತಾಕೆ ಎನಿಸಿದೆ. ಆದರೆ

ಇದು ಅಷ್ಟಕ್ಕೇ ನಿಲ್ಲದೆ ಮುಂದೆ ರಾಮನಿಗೆ ರಾಜ್ಯವು ದೊರಕುವವರೆಗೂ ಮುಂದುವರಿಯುತ್ತದೆ. ಸುಗ್ರೀವನು ತನ್ನಿಷ್ಟಕ್ಕೆ ರಾಜ್ಯದಲ್ಲಿ ನೆಲಸದೆ ಪ್ರಧಾನನಾಯಕನ ಕಾರ್ಯವನ್ನು ನೆರವೇರಿಸಲು ಸೊಂಟವನ್ನು ಕಟ್ಟಿಕೊಂಡು ನಿಂತಿರುವನು. ಇಂತಹ ಸನ್ನಿವೇಶವನ್ನು ಕಲ್ಪಿಸುವುದೇ ಪತಾಕೆ ಎನಿಸುವುದು. "ಗರ್ಭಸಂಧಿಯಾಗಲೀ ವಿಮರ್ಶಸಂಧಿಯಾಗಲೀ ಮುಗಿಯುವ ಮೊದಲು ಪತಾಕೆಯು ಕೊನೆಯಾಗುತ್ತದೆ." ಎಂದು ಭರತಮುನಿಯು ಹೇಳಿದ್ದಾನೆ. ಇಲ್ಲಿ ಪತಾಕೆಯು ಮುಖ್ಯನಾಯಕನ ಕಾರ್ಯವನ್ನು ನಿರ್ವಹಣಸಂಧಿಯವರೆಗೂ ನಿರ್ವಹಿಸುವುದಕ್ಕಾಗಿಯೇ ಎದ್ದು ಕಾಣುತ್ತದೆ ಎಂದು ಅಭಿನವಗುಪ್ತರು ವ್ಯಾಖ್ಯಾನಮಾಡಿರುವರು. ಧ್ವಜವು ಸೈನ್ಯದಲ್ಲಿ ಮೇಲೆ ಕಾಣುತ್ತಲೇ ನಾಯಕನ ಇರುವಿಕೆಯನ್ನು ತಿಳಿಸುವಂತೆ ಮಧ್ಯದಲ್ಲಿ ಬರುವ ಸುಗ್ರೀವ ಮೊದಲಾದವರ ವೃತ್ತಾಂತವು ಪತಾಕೆ ಎನಿಸಿದ್ದು ನಾಯಕನ ಫಲಪ್ರಾಪ್ತಿಯನ್ನು ಮುಂದುವರಿಸುತ್ತದೆ. ಇವಿಷ್ಟನ್ನು ತಿಳಿಸಿ ಉಳಿದಿರುವ ಪ್ರಕರಿಯ ಸ್ವರೂಪವನ್ನು ಈಗ ತಿಳಿಸುತ್ತಾನೆ. ನಾಯಕನ ಚರಿತ್ರೆಯನ್ನು ತಿಳಿಸುವ ಪ್ರಸಂಗದಲ್ಲಿ ಬಂದು ಯಾವುದೋ ಒಂದು ಕಡೆಯಲ್ಲಿ ಮಾತ್ರವೇ ಇರುವಂತಹ ವೃತ್ತಾಂತವು ಪ್ರಕರಿ ಎನಿಸುವುದು. ರಾವಣನೊಡನೆ ಜಟಾಯುವಿಗೆ ನಡೆಯುವ ಸಂವಾದವು ನಾಟಕದ ಒಂದು ಭಾಗದಲ್ಲಿ ಬಂದು ಅಲ್ಲಿಯೇ ಮುಗಿಯುತ್ತತೆ. ಅದು ಪತಾಕೆಯಂತೆ ಕೊನೆಯ ತನಕ ಮುಂದುವರೆಯುವುದಿಲ್ಲ. ಆದರೂ ಅದು ಅಷ್ಟರಲ್ಲಿಯೇ ನಾಯಕನಿಗೆ ಮುಖ್ಯ ಫಲವನ್ನು ದೊರಕಿಸಲು ಸಹಾಯವೆನಿಸುತ್ತದೆ. ಇಷ್ಟವಾದದ್ದನ್ನು ನಡೆಸಲು ಅವಶ್ಯಕವೆನಿಸಿ, ಸ್ವಶಕ್ತಿಯಿಂದ ಸಾಧಿಸಲು ಸಾಧ್ಯವೆನಿಸಿ, ಯಾವುದೇ ಒಂದು ಉದ್ದೇಶವನ್ನು ಸಾಧಿಸಲಿಕ್ಕೆ ಆರಂಭವಾಗಿ, ಅದರ ಸಿದ್ಧಿಗೆ ಬೇಕಾದ ಉಪಾಯಗಳನ್ನು ಸಂಗ್ರಹಿಸುವುದೇ ಕಾರ್ಯವೆನಿಸುವುದು. ರಾಮನ ಚರಿತ್ರೆಯನ್ನು ತಿಳಿಸುವಾಗ ರಾವಣನ ವಧವನ್ನು ವರ್ಣಿಸುವುದೇ ಕಾರ್ಯವೆನಿಸಿದೆ. ಇದು ರಾಮನ ಸರ್ವತೋಮುಖವಾದ ಸಂಮೃದ್ಧಿಗೆ ಸಾಧಕವೆನಿಸಿದ್ದರಿಂದ ಕಾರ್ಯವೆನಿಸಿದೆ.

ಅವಸ್ಥಾಃ ಪಂಚ ಕಾರ್ಯಸ್ಯ ಪ್ರಾರಬ್ಧಸ್ಯ ಫಲಾರ್ಥಿಭಿಃ ।
ಆರಂಭಯತ್ನಪ್ರಾಪ್ತ್ಯಾಶಾನಿಯತಾಪ್ತಿಫಲಾಗಮಾಃ ।
ತತ್ರ—ಭವೇದಾರಂಭ ಔತ್ಸುಕ್ಯಂ ಯನ್ಮುಖ್ಯಫಲಸಿದ್ಧಯೇ

ಯಥಾ—ರತ್ನಾವಳ್ಯಾಮ್. ರತ್ನಾವಳ್ಯಂತಃಪುರನಿವೇಶಾರ್ಥಂ ಯೌಗಂಧರಾಯಣಸ್ಯ ಔತ್ಸುಕ್ಯಮ್ ಏವಂ ನಾಯಕನಾಯಿಕಾದೀನಾಮಪಿ ಔತ್ಸುಕ್ಯಮಾಕರೇಷು ಬೋದ್ಧವ್ಯಮ್.

ಪ್ರಯತ್ನಸ್ತು ಫಲಾವಾಪ್ತೌ ವ್ಯಾಪಾರೋಽತಿತ್ವರಾನ್ವಿತಃ ।

ಯಥಾ ರತ್ನಾವಳ್ಯಾಂ 'ತಥಾಪಿ ನಾಸ್ತಿ ಅನ್ಯೋ ದರ್ಶನೋಪಾಯ ಇತಿ ಯಥಾ ತಥಾ ಆಲಿಖ್ಯ ಯಥಾಸಮೀಹಿತಂ ಕರಿಷ್ಯಾಮಿ' ಇತ್ಯಾದಿನಾ ಪ್ರತಿಪಾ

ದಿತೋ ರತ್ನಾವಳ್ಯಾಃ ಚಿತ್ರಲೇಖನಾದಿಃ ವತ್ಸರಾಜ ಸಂಗಮೋಽಪಾಯಃ. ಯಥಾ ಚ ರಾಮಚರಿತೇ ಸಮುದ್ರಬಂಧನಾದಿಃ.

ಉಪಾಯಾಪಾಯಶಂಕಾಭ್ಯಾಂ ಪ್ರಾಪ್ತ್ಯಾಶಾ ಪ್ರಾಪ್ತಿಸಂಭವಃ ।

ಯಥಾ— ರತ್ನಾವಳ್ಯಾಂ ತೃತೀಯೇಽಂಕೇ ವೇಶಪರಿವರ್ತನಾಭಿಸರಣಾದೇಃ ಸಂಗಮೋಪಾಯಾತ್ ವಾಸವದತ್ತಾಲಕ್ಷಣಾಪಾಯಶಂಕಯಾ ಚ ಅನಿರ್ಧಾರಿತೈಕಾಂತಸಂಗಮರೂಪಫಲಪ್ರಾಪ್ತಿ ಪ್ರತ್ಯಾಶಾ. ಏವಮನ್ಯತ್ರ.

ಅಪಾಯಾಭಾವತ್ ಪ್ರಾಪ್ತಿರ್ನಿಯತಾಪ್ತಿಸ್ತು ನಿಶ್ಚಿತಾ ।

ಅಪಾಯಾಭಾವಾನ್ನಿರ್ಧಾರಿತೈಕಾಂತಪ್ರಾಪ್ತಿರ್ನಿಯತಾಪ್ತಿ. ಯಥಾ ರತ್ನಾವಳ್ಯಾಂ ರಾಜಾ 'ದೇವೀಪ್ರಸಾದನಂ ತ್ಯಕ್ತ್ವಾ ನಾನ್ಯಮತ್ರೋಪಾಯಂ ಪಶ್ಯಾಮಿ' ಇತೀ ದೇವೀ ಲಕ್ಷಣಾಪಾಯಸ್ಯ ಪ್ರಸಾದನೇನ ನಿವಾರಣಾತ್ ಫಲ ಪ್ರಾಪ್ತಿಃ ಸೂಚಿತಾ.

ಸಾವಸ್ಥಾ ಫಲಯೋಗಃ ಸ್ಯಾತ್ ಯಃ ಸಮಗ್ರಫಲೋದಯಃ ।

ಯಥಾ ರತ್ನಾವಳ್ಯಾಂರತ್ನಾವಳೀಲಾಭಶ್ಚಕ್ರವರ್ತಿತ್ವಲಕ್ಷಣಫಲಾಂತರಲಾಭಸಹಿತಃ. ಏವಮನ್ಯತ್ರ.

ಯಥಾಸಂಖ್ಯಮವಸ್ಥಾಭಿರಾಭಿರ್ಯೋಗಾತ್ತು ಪಂಚಭಿಃ ।
ಪಂಚಧೈವೇತಿವೃತ್ತಸ್ಯ ಭಾಗಾಃ ಸ್ಯುಃ ಪಂಚ ಸಂಧಯಃ ॥

ತಲ್ಲಕ್ಷಣಮಾಹ—ಅಂತರೈಕಾರ್ಥಸಂಬಂಧಃ ಸಂಧಿರೇಕಾನ್ವಯೇ ಸತಿ ।

ಏಕೇನಪ್ರಯೋಜನೇನ ಅನ್ವಿತಾನಾಂ ಕಥಾಂಶಾನಾಂ ಅವಾಂತರೈಕ ಪ್ರಯೋಜನ ಸಂಬಂಧಃ ಸಂಧಿಃ.

ತದ್ಭೇದಾನಾಹ— ಮುಖಂ ಪ್ರತಿಮುಖಂ ಗರ್ಭೋ ವಿಮರ್ಶ ಉಪಸಂಹೃತಿಃ ।
ಇತಿ ಪಂಚಾಸ್ಯ ಭೇಧಾಃ ಸ್ಯುಃ ಕ್ರಮಾಲ್ಲಕ್ಷಣಮುಚ್ಯತೇ ॥

ಯಥೋದ್ದೇಶಂ ಲಕ್ಷಣಮಾಹ—

ಯತ್ರ ಬೀಜಸಮುತ್ಪತ್ತಿಃ ನಾನಾರ್ಥರಸಸಂಭವಾ ।
ಪ್ರಾರಂಭೇಣ ಸಮಾಯುಕ್ತ ತನ್ಮುಖಂ ಪರಿಕೀರ್ತಿತಮ್ ॥

ಯಥಾ ರತ್ನಾವಳ್ಯಾಂ ಪ್ರಥಮೇಽಂಕೇ—

ಫಲಪ್ರಧಾನೋಪಾಯಸ್ಯ ಮುಖಸಂಧಿನಿವೇಶಿನಃ ।
ಲಕ್ಷ್ಯಾಲಕ್ಷ್ಯ ಇವೋದ್ಭೇದೋ ಯತ್ರ ಪ್ರತಿಮುಖಂ ಚ ತತ್ ॥

ಯಥಾ ರತ್ನಾವಳ್ಯಾಂ ದ್ವಿತೀಯೇಽಂಕೇ ವತ್ಸರಾಜಸಾಗರಿಕಾ ಸಮಾಗಮಹೇತೋರನುರಾಗಬೀಜಸ್ಯ ಪ್ರಥಮಾಂಕೋಪಕ್ಷಿಪ್ತಸ್ಯ ಸುಸಂಗತಾವಿದೂಷಕಾಭ್ಯಾಂ ಜ್ಞಾಯಮಾನತಯಾ ಕಿಂಚಿಲ್ಲಕ್ಷ್ಯಸ್ಯ ವಾಸವದತ್ತಯಾ ಚಿತ್ರಫಲಕವೃತ್ತಾಂತೇನ ಕಿಂಚಿದುನ್ನೀಯಮಾನಸ್ಯ ಉದ್ದೇಶರೂಪ ಉದ್ಭೇದಃ.

ಫಲಪ್ರಧಾನೋಪಾಯಸ್ಯ ಪ್ರಾಗುದ್ಭಿನ್ನಸ್ಯ ಕಿಂಚನ ।
ಗರ್ಭೋ ಯತ್ರ ಸಮುದ್ಭೇದೋ ಹ್ರಾಸಾನ್ವೇಷಣವಾನ್ ಮುಹುಃ ॥

ಫಲಸ್ಯ ಗರ್ಭೀಕರಣಾದ್ಗರ್ಭಃ ಯಥಾ ರತ್ನಾವಳ್ಯಾಂ ದ್ವಿತೀಯೇಽಂಕೇ 'ಸಖಿ' ಅದಕ್ಷಿಣಾ ಇದಾನೀಮಸಿ ತ್ವಂ, ಯಾ ಏವಂ ಭರ್ತ್ರಾ ಹಸ್ತೇ ನ ಗೃಹೀತಾಪಿ ಕೋಪಂ ನ ಮುಂಚಸಿ ಇತ್ಯಾದೌ ಸಮುದ್ಭೇದಃ. ಪುನರ್ವಾಸವದತ್ತಾ ಪ್ರವೇಶೇ ಹ್ರಾಸಃ. ತೃತೀಯೇಽಂಕೇ 'ತದ್ವಾರ್ತಾನ್ವೇಷಣಾಯ ಗತಃ ಕಥಂ ಚಿರಯತಿ ವಸಂತಕಃ' ಇತ್ಯನ್ವೇಷಣಮ್. "ವಿದೂಷಕಃ–ಹೀ, ಹೀ ಭೋಃ ಕೌಶಾಂಬೀರಾಜ್ಯಲಾಭೇನಾಪಿ ನ ತಾದೃಶಃ ಪ್ರಿಯವಯಸ್ಯಸ್ಯ ಪರಿತೋಷಃ, ಯಾದೃಶೋ ಮಮ ಸಕಾಶಾತ್ ಪ್ರಿಯವಚನಂ ಶ್ರುತ್ವಾ ಭವಿಷ್ಯತಿ" ಇತ್ಯಾದೌ ಉದ್ಭೇದಃ. ಪುನರಪಿ ವಾಸವದತ್ತಾ ಪ್ರತ್ಯಭಿಜ್ಞಾನಾತ್ ಹ್ರಾಸಃ. ಸಾಗರಿಕಾಯಾಃ ಸಂಕೇತಸ್ಥಾನಾಗಮನೇ ಅನ್ವೇಷಣಮ್. ಪುನರ್ಲತಾಪಾಶಕರಣೇ ಉದ್ಭೇದಃ.

ಫಲವನ್ನು ಬಯಸುವವರು ಪ್ರಾರಂಭಿಸಿದ ಕಾರ್ಯಕ್ಕೆ ಆರಂಭ, ಯತ್ನ, ಪ್ರಾಪ್ತಿಯ ಆಶೆ, ನಿಯತಾಪ್ತಿ. ಫಲಾಗಮ ಎಂದು ಐದು ಅವಸ್ಥೆಗಳಿರುತ್ತವೆ. ಅವುಗಳಲ್ಲಿ ಆರಂಭವೆಂಬುದನ್ನು ಈಗ ತಿಳಿಸುತ್ತಾನೆ. ನಾಯಕನ ಪ್ರಧಾನವಾದ ಉದ್ದೇಶವನ್ನು ನೆರವೇರಿಸಲಿಕ್ಕೆ ಅವನಿಗೆ ಇರುವ ಉತ್ಸಾಹವೂ ಅದರಂತೆ ಅವನ ಜೊತೆಯವರಿಗೆ ಆ ಬಗ್ಗೆ ಇರುವ ಪ್ರಬಲವಾದ ಇಚ್ಛೆಯೂ ಕಾರ್ಯದ ಆರಂಭವೆನಿಸುತ್ತವೆ. ಉತ್ಸಾಹ ಇಚ್ಛೆಗಳಿಂದಲೇ ಒಂದು ಕಾರ್ಯವು ಆರಂಭವಾಗಲಿದೆ, ರತ್ನಾವಳಿಯನ್ನು ಅಂತಃಪುರದಲ್ಲಿ ಇರಿಸಲಿಕ್ಕೆ ಯೌಗಂಧರಾಯಣನಿಗೆ ಇದ್ದ ಉತ್ಕಟವಾದ ಇಚ್ಛೆಯೇ ಆಕೆಯನ್ನು ವತ್ಸರಾಜನಿಗೆ ದೊರಕಿಸುವ ಕಾರ್ಯದ ಆರಂಭವನ್ನು ಸೂಚಿಸುತ್ತದೆ. ನಾಯಕ ಮತ್ತು ನಾಯಿಕೆ ಇವರಿಗೆ ಇರುವ ಉತ್ಸಾಹದಿಂದ ಆರಂಭವಾಗುವ ಕಾರ್ಯಗಳನ್ನು ಬೇರೆ ಗ್ರಂಥಗಳಿಂದ ತಿಳಿಯವುದು. ಫಲವನ್ನು ನಾಯಕನಿಗಾಗಲೀ ನಾಯಿಕೆಗಾಗಲೀ ದೊರಕಿಸಲಿಕ್ಕಾಗಿ ಹೆಚ್ಚು ಉತ್ಸಾಹದಿಂದ ಪ್ರತಿಯೊಬ್ಬನು ಮಾಡುವುದೆಲ್ಲವೂ ಪ್ರಯತ್ನವೆನಿಸುವುದು. ರತ್ನಾವಳಿಯಲ್ಲಿ ವತ್ಸರಾಜನು ನನಗೆ ದೊರೆಯದೇ ಇದ್ದರೂ ಅವನನ್ನು ನೋಡಲಿಕ್ಕಾದರೂ ಬೇರೆ ಯಾವ ಉಪಾಯವೂ ದೊರೆಯದೆಂದು ಭಾವಿಸಿ ಹೇಗಾದರೂ ಬಂದು ಚಿತ್ರವನ್ನು ಬರೆದು ನನಗೆ ಇಚ್ಛೆ ಬಂದ ಹಾಗೆ ನೋಡಿ ಸಂತೋಷಪಡುವೆನು.' ಹೀಗೆ ಆಕೆಯೇ ಹೇಳುವುದರಿಂದ ರಾಜನ ಚಿತ್ರವನ್ನು ಬರೆದದ್ದು ಅವನ ಸಮಾಗಮಕ್ಕೆ ಉಪಾಯವೆಂದು ತಿಳಿದುಬರುವುದು. ಇಲ್ಲಿ ಫಲಸಿದ್ಧಿಗೆ ರಾಜನ ಚಿತ್ರವನ್ನು ಬರೆಯುವುದೇ ಪ್ರಯತ್ನವೆನಿಸಿದೆ. ಹಾಗೆಯೇ ರಾಮಚರಿತದಲ್ಲಿ ಸಮುದ್ರಬಂಧನ ಮೊದಲಾದವು ರಾವಣನ ಸೋಲಿಗೆ ಮಾಡಬೇಕಾದ ಪ್ರಯತ್ನವೆನಿಸುತ್ತವೆ. ಫಲವು ಸಿದ್ಧಿಸಲು ಬೇಕಾಗಿರುವ ಕಾರಣವನ್ನೂ ಅದಕ್ಕೆ ಒದಗುವ ಅತಂಕಗಳನ್ನೂ ಪರಿಶೀಲಿಸುವುದರಿಂದ ಫಲವು ದೊರೆಯಬಹುದೆಂದು ಊಹಿಸುವುದೇ ಪ್ರಾಪ್ತ್ಯಾಶೆ ಎನಿಸುವುದು. ರತ್ನಾವಳಿಯಲ್ಲಿ ಮೂರನೇ ಅಂಕದಲ್ಲಿ ಬಟ್ಟೆಗಳನ್ನು ಬದಲಾಯಿಸುವುದು, ನಾಯಕನನ್ನು ಹುಡುಕಿಕೊಂಡು ಹೋಗುವುದು ಇದೇ ಮೊದಲಾದ ಸಮಾಗಮದುಪಾಯಗಳು ಇದ್ದುದರಿಂದಲೂ ವಾಸವದತ್ತೆಯಿಂದ ತೊಂದರೆಯುಂಟಾಗುವದೆಂಬ ಭಯದಿಂದಲೂ

ರಹಸ್ಯವಾಗಿ ವತ್ಸರಾಜನೊಡನೆ ಸಮಾಗಮವು ದೊರೆಯುವುದೆಂಬ ಬಗ್ಗೆ ಸಂಶಯವಿದ್ದು ದ್ದನ್ನು ಕಾಣಬಹುದು. ಹೀಗೆ ಉಪಾಯ ಅಪಾಯಗಳ ಪರಿಶೀಲನೆಯಿಂದ ಫಲವು ದೊರಕಬಹುದೆಂಬ ಸಂಭಾವನೆಯೇ ಪ್ರಾಪ್ತ್ಯಾಶೆ ಎನಿಸುತ್ತದೆ. ಅಪಾಯಗಳು ತೊಲಗಿದರೆ ಫಲವು ದೊರಕುವುದೆಂಬ ನಿಶ್ಚಯವನ್ನು ಗಳಿಸುವುದೇ ನಿಯತಾಪ್ತಿ ಎನಿಸು ವುದು. ರತ್ನಾವಳಿಯಲ್ಲಿ ರಾಜನು 'ದೇವಿಯನ್ನು ಸಮಾಧಾನಗೊಳಿಸುವುದನ್ನು ಬಿಟ್ಟರೆ ಈ ಬಗ್ಗೆ ಬೇರೆ ಯಾವ ಉಪಾಯವನ್ನೂ ನಾನು ಕಾಣೆ' ಎಂದು ಹೇಳುತ್ತಾನೆ. ಇದ ರಿಂದ ದೇವಿಯ ಕೋಪವನ್ನು ಶಮನಮಾಡುವ ಪ್ರಯುಕ್ತ ಆಕೆಯಿಂದ ಒದಗಬಹು ದಾದ ವಿಪತ್ತು ತೊಲಗಿ ನಿಶ್ಚಯವಾಗಿ ಫಲವು ದೊರಕುವುದೆಂಬ ಭಾವನೆ ಕಂಡುಬರು ವುದು. ಕಾರ್ಯದಿಂದ ಬರಬೇಕಾದ ಫಲಗಳೆಲ್ಲವೂ ದೊರಕುವ ಅವಸ್ಥೆಯೇ ಫಲಾಗಮ ವೆನಿಸುವುದು. ರತ್ನಾವಳಿಯಲ್ಲಿ ರಾಜನಿಗೆ ರತ್ನಾವಳಿಯು ದೊರೆತದ್ದು ಅವನು ಚಕ್ರ ವರ್ತಿ ಎನಿಸಿಕೊಳ್ಳಲು ಅನುಕೂಲವೆನಿಸುವಂತಹ ಫಲವನ್ನು ದೊರಕಿಸಿದ್ದರಿಂದ ಆ ಫಲಾಗಮದ ಅವಸ್ಥೆಯು ಚೆನ್ನಾಗಿ ಕಂಡುಬರುವುದು. ಶಕುಂತಲೆಯ ಲಾಭವು ದುಷ್ಯಂತನಿಗೆ ಸರ್ವದಮನನೆಂಬ ಮಗನ ಲಾಭದೊಡಗೂಡಿದೆ. ಹೀಗೆ ಒಂದು ಫಲವು ದೊರಕಿದರೆ ಅದರ ಜೊತೆಯಲ್ಲಿ ಬೇರೆ ಎಲ್ಲವೂ ಬರುತ್ತವೆ. ನಾಟಕದ ವೃತ್ತಾಂತ ವನ್ನು ಈ ಐದು ಅವಸ್ಥೆಗಳೊಡನೆ ಹೊಂದಿಸಿಕೊಳ್ಳುವುದರಿಂದ ಅದರಲ್ಲಿ ಐದು ಬಗೆ ಗಳೇರ್ಪಟ್ಟು ಅವು ಸಂಧಿಗಳೆನಿಸುತ್ತವೆ. ಒಂದು ಮುಖ್ಯಪ್ರಯೋಜನವನ್ನು ಹೊಂದಿಸುವ ವೃತ್ತಾಂತದೊಡನೆ ಸೇರಿರುವ ಅದರ ಇತರ ಭಾಗಗಳನ್ನು ಅವರೊಳಗಿನ ಪ್ರಯೋಜನದೊಡನೆ ಹೊಂದಿಸುವುದೇ ಸಂಧಿ ಎನಿಸುವುದು. ಇವರಲ್ಲಿ ಐದು ಭಾಗಗಳಿವೆ. ಮುಖ ಪ್ರತಿಮುಖ ಗರ್ಭ ವಿಮರ್ಷ ಉಪಸಂಹೃತಿ ಇವೇ ಆ ಐದು ಬಗೆಗಳು. ಇವು ಗಳಿಗೆ ಲಕ್ಷಣವನ್ನು ಈಗ ತಿಳಿಸುತ್ತಾನೆ. ಅನೇಕ ವೃತ್ತಾಂತಗಳಿಂದಲೂ ಶೃಂಗಾರವೇ ಮೊದಲಾದ ರಸಗಳಿಂದಲೂ ಸಂಭವಿಸಿ ಆರಂಭವೆಂಬ ಅವಸ್ಥೆಯೊಡಗೂಡಿ ಬೀಜ ವನ್ನು ಹುಟ್ಟಿಸುವ ಸ್ಥಿತಿಯೇ ಮುಖಸಂಧಿ ಎನಿಸುವುದು. ರತ್ನಾವಳಿಯ ಪ್ರಥಮಾಂಕ ದಲ್ಲಿ ಈ ಮುಖಸಂಧಿಯು ಕಂಡುಬರುತ್ತದೆ. ಮುಖಸಂಧಿಯಲ್ಲಿ ಹುಟ್ಟಿ ಮುಖ್ಯ ಪ್ರಯೋಜನಕ್ಕೆ ಕಾರಣವೆನಿಸಿದ್ದನ್ನು ಸ್ವಲ್ಪ ಕಾಣುವಂತೆಯೂ, ಕೊಂಚ ಕಾಣ ದಂತೆಯೂ ಪ್ರಕಾಶಪಡಿಸುವುದೇ ಪ್ರತಿಮುಖಸಂಧಿ ಎನಿಸುವುದು. ರತ್ನಾವಳಿಯ ಎರಡನೆ ಅಂಕದಲ್ಲಿ ವತ್ಸರಾಜ ಸಾಗರಿಕೆ ಇವರ ಸಮಾಗಮಕ್ಕೆ ಕಾರಣವೆನಿಸಿದ ಅನು ರಾಗದ ಬೀಜವನ್ನು ಮೊದಲನೆ ಅಂಕದಲ್ಲಿ ನೆಟ್ಟದ್ದು ಸುಸಂಗತೆ ವಿದೂಷಕ ಇದರಿಂದ ತಿಳಿದು ಬಂದ ಪ್ರಯುಕ್ತ ಕೊಂಚ ಕಾಣುವಂತಿದ್ದು ರಾಜನ ಚಿತ್ರವನ್ನು ಬರೆದಿದ್ದ ಹಲಗೆಯ ವರ್ತಮಾನದಿಂದ ವಾಸವದತ್ತೆಯ ಊಹೆಗೆ ಒಳಪಟ್ಟು ಅದು ಮುಂದೆ ಪ್ರಕಾಶಕ್ಕೆ ಬರುವುದರಿಂದ ಇದು ಪ್ರತಿಮುಖಸಂಧಿ ಎನಿಸಿದೆ. ಹಿಂದಿನ ಸಂಧಿಗಳೆರಡ ರಲ್ಲಿ ಕೊಂಚ ಪ್ರಕಾಶಗೊಂಡು ಫಲಸಿದ್ಧಿಗೆ ಮುಖ್ಯಪ್ರಯೋಜನವೆನಿಸಿದ ಅಂಶವು ಕ್ಷೀಣವಾಗವುದೆಂದು ಊಹಿಸುತ್ತಿರುವಾಗಲೇ ಪ್ರಕಾಶಗೊಳ್ಳುವುದೇ ಗರ್ಭಸಂಧಿ

ಸುವುದು. ಮುಖ್ಯಫಲವನ್ನು ತನ್ನೊಳಗೆ ಸೇರಿಸಿಕೊಂಡದ್ದರಿಂದ ಇದಕ್ಕೆ ಗರ್ಭಸಂಧಿ ಎಂಬ ಹೆಸರು ಅನ್ವರ್ಥವೆನಿಸಿದೆ. ರತ್ನಾವಳಿಯ ದ್ವಿತೀಯಾಂಕದಲ್ಲಿ 'ಸಖಿ ನೀನು ಈಗ ದಾಕ್ಷಿಣ್ಯಪ್ರಕೃತಿಯಿಲ್ಲದವಳಾಗಿರುವೆ. ರಾಜನು ನಿನ್ನನ್ನು ತನ್ನ ಕೈಯಿಂದಲೇ ಹಿಡಿದುಕೊಂಡರೂ ನೀನು ಕೋಪವನ್ನು ಬಿಟ್ಟಿಲ್ಲ.' ಈ ಮಾತಿನಿಂದ ರಾಜನಿಗೆ ನಾಯಿಕೆಯಲ್ಲಿ ಇದ್ದ ಅನುರಾಗವು ಪ್ರಕಾಶವಾಗುತ್ತದೆ, ಮತ್ತೆ ವಾಸವದತ್ತೆಯ ಪ್ರವೇಶದಿಂದ ಅನುರಾಗವು ಮರೆಯಾಗುತ್ತದೆ. ಇದು ಮತ್ತೆ ಮೂರನೇ ಅಂಕದಲ್ಲಿ ಪ್ರಕಾಶಗೊಳ್ಳುತ್ತದೆ. ಆಕೆಯ ವಾರ್ತೆಯನ್ನು ಹುಡುಕಿ ತರಲಿಕ್ಕಾಗಿಯೇ ಹೋದ ವಸಂತಕನು ಏಕೆ ಇಷ್ಟು ಸಾವಕಾಶವಾಗಿ ಬರುತ್ತಿರುವನು ಎಂದು ರಾಜನು ಹೇಳುವ ಮಾತಿನಿಂದ ಅನುರಾಗವು ಕೊಂಚ ಬೆಳೆಯುತ್ತದೆ. ಕೊನೆಯಲ್ಲಿ ವಿದೂಷಕನ ಮಾತಿನಿಂದ ರಾಜನಿಗೆ ಸಾಗರಿಕೆಯಲ್ಲಿದ್ದ ಅನುರಾಗವು ಬೆಳೆಯುವುದು. "ಕೌಶಾಂಬಿಯ ರಾಜ್ಯವು ದೊರೆತದ್ದರಿಂದಲೂ ನನ್ನ ಗೆಳೆಯನಿಗೆ ಇಷ್ಟೊಂದು ಸಂತೋಷವಾಗಿರಲಿಲ್ಲ. ನನ್ನ ಕಡೆಯಿಂದ ಪ್ರಿಯಾವಾಕ್ಯವನ್ನು ಕೇಳಿದರೆ ಅವನಿಗೆ ಆಗಬಹುದಾದ ಸಂತೋಷವು ಹೆಚ್ಚಿನದು" ಎಂದು ಅವನು ಹೇಳುವ ಮಾತಿನಿಂದ ಅನುರಾಗವು ಬೆಳದಿತ್ತೆಂಬುದು ತಿಳಿದು ಬರುವುದು. ಮತ್ತೆ ವಾಸವದತ್ತೆಯ ಸ್ಮರಣದಿಂದ ಅದು ಕಡಿಮೆಯಾಗಿದ್ದು ಸಾಗರಿಕೆ ಸಂಕೇತಸ್ಥಾನಕ್ಕೆ ಬಂದ ಮೇಲೆ ಬೆಳೆದು ಮತ್ತೆ ಲತೆಯ ಪಾಶವನ್ನು ಆಕೆಯು ಹಾಕಿಕೊಂಡಾಗ ಅದು ಹೆಚ್ಚು ಪ್ರಕಾಶವಾಗುವುದು. ಇವೆಲ್ಲವೂ ಗರ್ಭಸಂಧಿಯಲ್ಲಿ ಆಗಬೇಕಾದ ಕೆಲಸ.

ಅಥ ವಿಮರ್ಶಃ— ಯತ್ರ ಮುಖ್ಯಫಲೋಪಾಯ ಉದ್ಭಿನ್ನೋ ಗರ್ಭತೋಽಧಿಕಃ ।
ಶಾಪಾದ್ಯೈಃ ಸಾಂತರಾಯಶ್ಚ ಸ ವಿಮರ್ಶ ಇತಿ ಸ್ಮೃತಃ ॥

ಯಥಾ ಶಾಕುಂತಲೇ ಚತುರ್ಥಾಂಕಾದೌ "ಅನಸೂಯಾ—ಪ್ರಿಯಂವದೇ ಯದ್ಯಪಿ ಗಾಂಧರ್ವೇಣ ವಿವಾಹೇನ ನಿರ್ವೃತ್ತಕಲ್ಯಾಣಾ ಪ್ರಿಯಸಖೀ ಶಕುಂತಲಾ ಅನುರೂಪಭರ್ತೃಭಾಗಿನೀ ಸಂವೃತ್ತೇತಿ ನಿರ್ವೃತಂ ಮೇ ಹೃದಯಮ್. ತಥಾಪಿ ಏತಾವಚ್ಚಿಂತನೀಯಮ್" ಇತ್ಯತ್ರ ಆರಭ್ಯ ಸಪ್ತಮಾಂಕೋಪಕ್ಷಿಪ್ತಾತ್ ಶಕುಂತಲಾಪ್ರತ್ಯಭಿಜ್ಞಾನಾತ್ ಪ್ರಾಗರ್ಥಸಂಚಯಃ ಶಕುಂತಲಾವಿಸ್ಮರಣರೂಪವಿಘ್ನಾಲಿಂಗಿತಃ—

ಬೀಜವಂತೋ ಮುಖಾದ್ಯರ್ಥಾ ವಿಪ್ರಕೀರ್ಣಾ ಯಥಾಯಥಮ್ ।
ಏಕಾರ್ಥಮುಪನೀಯಂತೇ ಯತ್ರ ನಿರ್ವಹಣಂ ಹಿ ತತ್ ॥

ಯಥಾ ವೇಣ್ಯಾಂ—"ಕಂಚುಕೀ (ಉಪಸೃತ್ಯ ಸಹರ್ಷಂ) ಮಹಾರಾಜ! ವರ್ಧಸೇ ಅಯಂ ಖಲು ಭೀಮಸೇನೋ ದುರ್ಯೋಧನಕ್ಷತಜಾರುಣೀಕೃತಸರ್ವಶರೀರೋ ದುರ್ಲಕ್ಷ್ಯವ್ಯಕ್ತಿಃ" ಇತ್ಯಾದಿನಾ ದ್ರೌಪದೀಕೇಶಸಂಯಮನಾದಿಮುಖಸಂಧ್ಯಾದಿಬೀಜಾನಾಂ ನಿಜನಿಜಸ್ಥಾನೋಪಕ್ಷಿಪ್ತಾನಾಂ ಏಕಾರ್ಥಯೋಜನಮ್.

ಯಥಾ ವಾ ಶಾಕುಂತಲೇ ಸಪ್ತಮಾಂಕೇ ಶಕುಂತಲಾಭಿಜ್ಞಾನಾತ್ ಉತ್ತರೋಽರ್ಥರಾಶಿಃ.

ಏಷಾಮಂಗಾನ್ಯಾಹ—

ಉಪಕ್ಷೇಪಃ ಪರಿಕರೋ ಪರಿನ್ಯಾಸೋ ವಿಲೋಭನಮ್ ।
ಯುಕ್ತಿಃ ಪ್ರಾಪ್ತಿಃ ಸಮಾಧಾನಂ ವಿಧಾನಂ ಪರಿಭಾವನಾ
ಉದ್ಭೇದಃ ಕರಣಂ ಭೇಧ ಏತಾನ್ಯಂಗಾನಿ ವೈ ಮುಖೇ ॥

ಯಥೋದ್ದೇಶಂ ಲಕ್ಷಣಮಾಹ—

ಕಾವ್ಯಾರ್ಥಸ್ಯ ಸಮುತ್ಪತ್ತಿಃ ಉಪಕ್ಷೇಪ ಇತಿ ಸ್ಮೃತಃ ।
ಕಾವ್ಯಾರ್ಥ ಇತಿವೃತ್ತಲಕ್ಷಣಪ್ರಸ್ತುತಾಭಿಧೇಯಃ. ಯಥಾ—

ವೇಣ್ಯಾಂ ಭೀಮಃ— ಲಾಕ್ಷಾಗೃಹಾನಲವಿಷಾನ್ನಸಭಾಪ್ರವೇಶೈಃ ।
ಪ್ರಾಣೇಷು ವಿತ್ತನಿಚಯೇಷು ಚ ನಃ ಪ್ರಹೃತ್ಯ ।
ಆಕೃಷ್ಯ ಪಾಂಡವವಧೂಪರಿಧಾನಕೇಶಾನ್ ।
ಸ್ವಸ್ಥಾ ಭವಂತಿ ಮಯಿ ಜೀವತಿ ಧಾರ್ತರಾಷ್ಟ್ರಾಃ ॥

ಸಮುತ್ಪನ್ನಾರ್ಥಬಾಹುಳ್ಯಂ ಜ್ಞೇಯಃ ಪರಿಕರಃ ಪುನಃ ।

ಯಥಾ ತತ್ರೈವ—ಪ್ರವೃತ್ತಂ ಯದ್ವೈರಂ ಮಮ ಖಲು ಶಿಶೋರೇವ ಕುರುಭಿಃ ।
ನ ತತ್ರಾರ್ಯೋ ಹೇತುರ್ನ ಭವತಿ ಕಿರೀಟೀ ನ ಚ ಯುವಾಮ್॥
ಜರಾಸಂಧಸ್ಯೋರಸ್ಥಲಮಿವ ವಿರೂಢಂ ಪುನರಪಿ ॥
ಕ್ರುಧಾ ಭೀಮಃ ಸಂಧಿಂ ವಿಘಟಯತಿ ಯೂಯಂ ಘಟಯತ ॥

ತನ್ನಿಷ್ಪತ್ತಿಃ ಪರಿನ್ಯಾಸಃ ಗುಣಾಖ್ಯಾನಂ ವಿಲೋಭನಮ್ ।

ಯಥಾ ತತ್ರೈವ— ಚಂಚದ್ಭುಜಭ್ರಮಿತಚಂಡಗದಾಭಿಘಾತ
ಸಂಚೂರ್ಣಿತೋರುಯುಗಲಸ್ಯ ಸುಯೋಧನಸ್ಯ ।
ಸ್ತ್ಯಾನಾವಬದ್ಧಘನಶೋಣಿತಶೋಣಪಾಣಿಃ
ಉತ್ತಂಸಯಿಷ್ಯತಿ ಕಚಾಂಸ್ತವ ದೇವಿ ಭೀಮಃ ॥

ಅತ್ರ ಉಪಕ್ಷೇಪೊ ನಾಮ ಇತಿವೃತ್ತಲಕ್ಷಣಸ್ಯ ಕಾವ್ಯಾಭಿಧೇಯಸ್ಯ ಸಂಕ್ಷೇಪೇಣ ಉಪಕ್ಷೇಪಣಮಾತ್ರಮ್, ಪರಿಕರಸ್ತಸ್ಯೈವ ಬಹುಲೀಕರಣಮ್. ಪರಿನ್ಯಾಸಸ್ತತೋಽಪಿ ನಿಶ್ಚಯಾಪತ್ತಿರೂಪತಯಾ ಪರಿತೋ ಹೃದಯೇ ನ್ಯಸನಮಿತ್ಯೇಷಾಂ ಭೇದಃ.

ಏತಾನಿ ಚಾಂಗಾನಿ ಉಕ್ತೇನೈವ ಪೌರ್ವಾಪರ್ಯೇಣ ಭವಂತಿ ಅಂಗಾಂತರಾಣಿ ತ್ವನ್ಯಥಾಪಿ.

ವಿಲೋಭನಂ ಯಥಾ ತತ್ರೈವ ದ್ರೌಪದೀ—ನಾಥ! ಕಿಂ ದುಷ್ಕರಂ ತ್ವಯಾ "ಕುಪಿತೇನ ಯಥಾ ಮಮ ಚಂದ್ರಕಲಾಯಾಂ ಚಂದ್ರಕಲಾವರ್ಣನೇ" 'ಸೇಯಂ ತಾರುಣ್ಯಸ್ಯ ವಿಲಾಸಃ' ಇತ್ಯಾದಿ.

ಯತ್ತು ಶಾಕುಂತಲಾದಿಷು "ಗ್ರೀವಾಭಂಗಾಭಿರಾಮಂ'' ಇತ್ಯಾದಿ ಮೃಗಾದಿಗುಣವರ್ಣನಂ ತದ್ಬೀಜಾರ್ಥಸಂಬಂಧಾಭಾವಾನ್ನ ಸಂಧ್ಯಂಗಮ್. ಏವಮಂಗಾಂತರಿಣಾಮುಪ್ಯೂಹ್ಯಮ್.

ಸಂಪ್ರಧಾರಣಮರ್ಥಾನಾಮ್ ಯುಕ್ತಿಃ ಪ್ರಾಪ್ತಿಃ ಸುಖಾಗಮಃ ।

ವೇಣ್ಯಾಂ ಸಹದೇವೋ ಭೀಮಂ ಪ್ರತಿ "ಆರ್ಯ ಕಿಂ ಮಹಾರಾಜಸಂದೇಶಃ ಅವ್ಯುತ್ಪನ್ನ ಏವ ಆರ್ಯೇಣ ಗೃಹೀತ'' ಇತ್ಯತಃ ಪ್ರಭೃತಿ ಯಾವದ್ಭೀಮವಚನಮ್.

ಯಸ್ಮಾನ್ ಹ್ರೇಪಯತಿ ಕ್ರೋಧಾಲ್ಲೋಕೇ ಶತ್ರುಕುಲಕ್ಷಯಃ ।
ನ ಲಜ್ಜಯಿತಿ ದಾರಾಣಾಂ ಸಭಾಯಾಂ ಕೇಶಕರ್ಷಣಮ್ ॥

ಪ್ರಾಪ್ತಿರ್ಯಥಾ ತತ್ರೈವ 'ಮಥ್ನಾಮಿ ಕೌರವಶತಂ ಸಮರೇ ನ ಕೋಪಾತ್' ಇತ್ಯಾದಿ ಶ್ರುತ್ವಾ "ದ್ರೌಪದೀ (ಸಹರ್ಷಂ) ನಾಥ ಅಶ್ರುತಪೂರ್ವಂ ಖಲ್ವೇತದ್ವಚನಂ, ತತ್ಪುನಃ ಪುನರ್ಭಣ'' ಇತಿ.

ಮುಖ್ಯ ಫಲವನ್ನು ದೊರಕಿಸುವಂತಾಗುವ ಗರ್ಭಸಂಧಿಗಿಂತಲೂ ಹೆಚ್ಚು ಪ್ರಕಾಶಗೊಂಡು ದೊಡ್ಡವರ ಶಾಪವೇ ಮೊದಲಾದ ಕಾರಣಗಳಿಂದ ಅಡಚಣೆಗಳಿಗೆ ಸಿಲುಕುವುದಾಗಿ ತಿಳಿದುಬರುವುದೇ ವಿಮರ್ಶಸಂಧಿ ಎನಿಸುವುದು. ಶಾಕುಂತಲದ ನಾಲ್ಕನೇ ಅಂಕದಲ್ಲಿ ಅನಸೂಯ ಪ್ರಿಯಂವದೆಗೆ ಹೀಗೆ ಹೇಳುತ್ತಾಳೆ. "ಗಾಂಧರ್ವವಿವಾಹದಿಂದ ನಮ್ಮ ಪ್ರಿಯಸಖಿ ಶಕುಂತಲೆಗೆ ಆಶ್ರಮದಲ್ಲಿ ಕಲ್ಯಾಣವು ಆಗಲೇ ನಡೆಯಿತು. ಆದರೂ ಅನುಗುಣನಾದ ಪತಿಯು ದೊರೆತನಾದ್ದರಿಂದ ಮನಸ್ಸಿಗೆ ನೆಮ್ಮದಿಯುಂಟಾಯಿತು. ಹಾಗಾದರೂ ಇಲ್ಲಿ ಇಷ್ಟನ್ನು ಆಲೋಚಿಸಬೇಕು'' ಹೀಗೆ ಹೇಳಿದ ಮೇಲೆ ಏಳನೆಯ ಅಂಕದಲ್ಲಿ ಕವಿಯು ತಿಳಿಸುವಂತೆ ಶಕುಂತಲೆಯ ಸ್ಮರಣವು ರಾಜನಿಗೆ ಆಗುವುದಕ್ಕೆ ಮೊದಲು ಮಾಡಿದ ಪ್ರಯತ್ನಗಳೆಲ್ಲವೂ ಶಕುಂತಲೆಯ ಮರವೆಯಿಂದ ಕೂಡಿರುವುವು. ಆಯಾಯ ಸ್ಥಾನದಲ್ಲಿ ಬೀಜದೊಡನೆ ಸೇರಿಸಿ ತಿಳಿಸಿರುವ ಮುಖ್ಯಸಂಧಿಯೇ ಮೊದಲಾದವುಗಳಲ್ಲಿ ಬಂದ ವಿಷಯಗಳನ್ನು ಮುಖ್ಯಪ್ರಯೋಜನಕ್ಕೆ ಹೊಂದಿಸುವುದೇ ನಿರ್ವಹಣಸಂಧಿ ಎನಿಸುವುದು. ಮುಂದೆ ಇವನ್ನು ಉದಾಹರಿಸಲಾಗಿದೆ. ವೇಣೀಸಂಹಾರದಲ್ಲಿ ಕಂಚುಕಿಯು ಮಹಾರಾಜನ ಒಳಗೆ ಹೋಗಿ ಸಂತೋಷದಿಂದ ಹೇಳುವನು. ಮಹಾರಾಜನಿಗೆ ಜಯವಾಗಲಿ. ಈ ಭೀಮಸೇನನು ದುರ್ಯೋಧನ ರಕ್ತದಿಂದ ತನ್ನ ಮೈಯನ್ನೆಲ್ಲಾ ಒದ್ದೆ ಮಾಡಿಕೊಂಡು ನೋಡಲಿಕ್ಕಾಗದ ರೀತಿಯಲ್ಲಿರುವನು' ಇದರಿಂದ ದ್ರೌಪದಿಯ ಕೂದಲನ್ನು ಕಟ್ಟುವುದೇ ಮೊದಲಾದ ಅಂಶಗಳು ಬೀಜರೂಪದಲ್ಲಿ ಮುಖಸಂಧಿ ಮೊದಲಾದೆಡೆಗಳಲ್ಲಿ ಬಿತ್ತಿದ್ದು ಹಿಂದಿನಿಂದಲೂ ಆಯಾಯ ಸ್ಥಾನಗಳಲ್ಲಿ ಬೆಳೆದಿದ್ದು ನಿರ್ವಹಣಸಂಧಿಯಲ್ಲಿ ಮುಖ್ಯಾರ್ಥದೊಡನೆ ಹೊಂದಿಕೆಯಾಗುತ್ತವೆ. ಹೀಗೆಯೇ ಶಾಕುಂತಲದಲ್ಲಿ ಏಳನೆಯ ಅಂಕದಲ್ಲಿ ಶಕುಂತಲೆಯ ಸ್ಮರಣದಿಂದ ಮುಂದೆ ನಡೆಯುವ ವಿಷಯಗಳೆಲ್ಲವೂ ಮುಂದಿನ ಫಲದಲ್ಲಿ ಹೊಂದಿಕೊಳ್ಳುತ್ತವೆ.

ಇವುಗಳ ಅಂಗಗಳನ್ನು ಈಗ ತಿಳಿಸುತ್ತಾನೆ. ಉಪಕ್ಷೇಪ, ಪರಿಕರ, ಪರಿನ್ಯಾಸ. ವಿಲೋಭನ, ಯುಕ್ತಿ, ಪ್ರಾಪ್ತಿ, ಸಮಾಧಾನ, ವಿಧಾನ, ಪರಿಭಾವನೆ, ಉದ್ಭೇದ, ಕಾರಣ, ಭೇದ ಇವೆಷ್ಟು ಮುಖಸಂಧಿಯ ಅಂಗಗಳು. ಮುಂದೆ ಇವುಗಳ ಲಕ್ಷಣವನ್ನು

ತಿಳಿಸುತ್ತಾನೆ. ಕಾವ್ಯದಲ್ಲಿ ತಿಳಿಸಬೇಕಾಗಿರುವ ವಸ್ತುವನ್ನು ಮೊದಲುಬಾರಿಗೆ ತಿಳಿಸುವುದೇ ಉಪಕ್ಷೇಪವೆನಿಸುವುದು. ಇಲ್ಲಿ ಕಾವ್ಯದಲ್ಲಿ ತಿಳಿಸಬೇಕಾಗಿರುವ ವಸ್ತುವೆಂದರೆ ಪ್ರಕೃತಸಂದರ್ಭಕ್ಕೆ ಅನ್ವಯಿಸುವ ಇತಿವೃತ್ತವೆಂಬ ಅರ್ಥ. ವೇಣೀಸಂಹಾರದಲ್ಲಿ ಭೀಮಸೇನನ ಈ ಮಾತಿನಲ್ಲಿ ಇತಿವೃತ್ತವು ಕಂಡುಬರುವುದು. "ಅರಗಿನಮನೆಯ ಬೆಂಕಿಗೆ ನಮ್ಮನ್ನು ಸಿಕ್ಕಿಸಿದ್ದು, ನಮಗೆ ವಿಷಾನ್ನವನ್ನು ಕೊಟ್ಟದ್ದು, ಜೂಜಾಟದಲ್ಲಿ ಸೋಲಿಸಿದ್ದು ಇಂತವುಗಳಿಂದಲೂ, ಪ್ರಾಣ, ಹಣ ಮೊದಲಾದ ಎಲ್ಲಾ ಬಗೆಗಳಲ್ಲೂ ನಮ್ಮನ್ನು ಹಿಂಸಿಸಿ, ನಮ್ಮ ಹೆಂಡತಿಯ ಬಟ್ಟೆ ಕೂದಲುಗಳನ್ನು ಸೆಳೆದು ಅವಮಾನಗೊಳಿಸಿದ್ದರಿಂದ ಈ ದುರ್ಯೋಧನಾದಿಗಳು ನಾನು ಬದುಕಿರುವಾಗ ಹೇಗೆ ಸುಖಿಗಳಾದಾರು?" ಇಲ್ಲಿ ವೇಣೀಸಂಹಾರನಾಟಕದ ಯುದ್ಧವೃತ್ತಾಂತವೆಂಬ ಕಾವ್ಯಾರ್ಥವನ್ನು ಮೊದಲಿಗೆ ಸೂಚಿಸಲಾಗಿದೆ.

ಹಿಂದೆ ತಿಳಿಯಪಡಿಸಿದ ಕಾವ್ಯಾರ್ಥವನ್ನು ಹೆಚ್ಚು ಬೆಳೆಸುವುದೇ ಪರಿಕರವೆನಿಸುವುದು. ಅಲ್ಲಿಯೇ "ನಾನು ಶಿಶುವಾಗಿರುವಾಗಲೇ ಕೌರವರೊಡನೆ ದ್ವೇಷವು ಬೆಳೆಯಿತು. ಈ ಬಗ್ಗೆ ಹಿರಿಯ ಅಣ್ಣನಾಗಲೀ, ಅರ್ಜುನನಾಗಲೀ, ನಕುಲಸಹದೇವರಾಗಲಿ, ಕಾರಣರೆನಿಸಿಲ್ಲ. ಆ ಬಗ್ಗೆ ನಾನೇ ಕಾರಣವೆನಿಸುವೆನು. ಈ ಸಂಧಿಯಿಂದ ನನಗೆ ಶಾಂತಿಯಾಗಲಾರದು. ಆದ್ದರಿಂದಲೇ ಭೀಮನು ಸಿಟ್ಟನಿಂದ ಹಿಂದೆ ಜರಾಸಂಧನ ತೊಡೆಯನ್ನು ಸೀಳಿದಂತೆ ನಿಮ್ಮೆಲ್ಲರ ಪ್ರಯತ್ನದಿಂದಲೂ ಸಂಭವಿಸುವ ಸಂಧಿಯನ್ನು ಮತ್ತೆ ಸೀಳಲಿರುವೆನು. ನಾವು ಸಮರ್ಥರಾದರೆ ಮತ್ತೆ ಅದನ್ನು ಕೂಡಿಸಿರಿ." ಇಲ್ಲಿ ಸಂಧಿಯನ್ನು ಭೇದಿಸುವ ಮೂಲಕ (ಹಿಂದೆ ಹುಟ್ಟಿದ ಯುದ್ಧವೃತ್ತಾಂತವೆಂಬ ಕಾವ್ಯಾರ್ಥವನ್ನು) ಬೆಳೆಸಲಾಗಿದೆ. ಹೀಗೆ ಬೆಳೆದ ವೃತ್ತಾಂತವನ್ನು ನಿಶ್ಚಯವೆಂದು ಮನಸ್ಸಿನಲ್ಲಿ ಭಾವಿಸಿ ಹೃದಯದಲ್ಲಿ ನಿಲ್ಲಿಸಿಕೊಳ್ಳುವುದೇ ಪರಿನ್ಯಾಸವೆನಿಸುವುದು. ಇದನ್ನು ಅಲ್ಲಿಯೇ ಕಾಣಬಹುದು. "ಎಲೈ ಧರ್ಮಪತ್ನಿ ದ್ರೌಪದಿಯೇ, ಭೀಮಸೇನನು ಚಂಚಲವಾದ ಭುಜದಿಂದಅಳ್ಳಾಡಿಸಿದ ಭಯಂಕರವಾದ ಗದೆಯ ಹೊಡೆತದಿಂದ ದುರ್ಯೋಧನನ ತೋಳುಗಳನ್ನು ಪುಡಿಮಾಡಿ ಅವನ ದೇಹದಲ್ಲಿ ಬಂದೆಡೆಗೆ ಸೇರಿಕೊಂಡ ಗಾಢವಾದ ರಕ್ತದಲ್ಲಿ ಕೈಯನ್ನು ಅದ್ದಿ ಕೆಂಪಗೆ ಮಾಡಿಕೊಂಡು ದುಶ್ಶಾಸನನು ಮುಟ್ಟಿದಾಗಿನಿಂದಲೂ ಬಿಚ್ಚಿರುವ ನಿನ್ನ ಕೂದಲುಗಳನ್ನು ಹದಗೊಳಿಸುವೆನು." ಹೀಗೆ ಭೀಮನು ಹೇಳುವ ಮಾತಿನಿಂದ ಹಿಂದೆ ಪ್ರಕಟವಾಗಿ ಬೆಳೆದಿದ್ದ ದುರ್ಯೋಧನ ಊರುಭಂಗವೆಂಬ ಕಾವ್ಯಾರ್ಥವು ನಿಶ್ಚಯಗೊಂಡು ಹೃದಯದಲ್ಲಿ ನೆಲಸಿರುವುದಾಗಿ ತಿಳಿದುಬರುವುದು. ಉಪಕ್ಷೇಪದಲ್ಲಿ ಇದು ಉತ್ಪನ್ನವಾಗಿ ಪರಿನ್ಯಾಸದಲ್ಲಿ ನೆಲೆಗೊಳ್ಳುವುದು. ಹೀಗೆ ಇವು ಮೂರು ಒಂದಾದಮೇಲೆ ಒಂದರಂತೆ ಕ್ರಮವಾಗಿ ಸಂಭವಿಸುತ್ತವೆ. ವಿಲೋಭನ ಮೊದಲಾದ ಬೇರೆ ಅಂಗಗಳಲ್ಲಿಯಾದರೋ. ಇಂತಹದೇ ಮೊದಲು ಬರುವುದೆಂಬ ವ್ಯವಸ್ಥೆಯ ಕ್ರಮದಲ್ಲಿ ವ್ಯತ್ಯಾಸವಿರಬಹುದು. ಅಲ್ಲಿ ಹೇಳಿರುವ ಕ್ರಮದಲ್ಲೂ ಬೇರೆ ಕ್ರಮದಲ್ಲೂ ಬರಬಹುದು. ಒಂದೊಂದು ಪಾತ್ರಕ್ಕೆ ಸಂಬಂಧಿಸಿದ ಶೌರ್ಯ, ಸೌಂದರ್ಯ ಮೊದಲಾದ

ಗುಣಗಳನ್ನು ತಿಳಿಸುವುದೇ ವಿಲೋಭನವೆನಿಸುವುದು.ಮಾಡಬೇಕಾದ ಕೆಲಸದಲ್ಲಿ ವಿಶೇಷ ವಾದ ಆಶೆಯನ್ನು ಹುಟ್ಟಿಸುವುದರಿಂದ ಇದು ವಿಲೋಭನವೆನಿಸಿದೆ. ಅಲ್ಲಿ ದ್ರೌಪದಿಯು 'ಸ್ವಾಮಿ ನೀನು ಕೋಪಗೊಂಡರೆ ಯಾವುದು ತಾನೇ ಅಸಾಧ್ಯವೆನಿಸೀತು?' ಹೀಗೆಂದು ಇಲ್ಲಿ ಭೀಮನ ಶೌರ್ಯವನ್ನು ಪ್ರಶಂಸೆಮಾಡಿದ್ದರಿಂದ ದುರ್ಯೋಧನನ ಮರಣದಲ್ಲಿ ಆಶೆಯನ್ನು ಹುಟ್ಟಿಸುವುದರಿಂದ ಇದು ವಿಲೋಭನವೆಂಬ ಸಂಧ್ಯಾಂಗವೆನಿಸಿದೆ. 'ಇದು ಯೌವನದ ವಿಲಾಸವೆನಿಸಿದೆ' ಎಂದು ಚಂದ್ರಕಲೆಯ ವರ್ಣನೆಯಿಂದ ನಾಯಕೆಯಲ್ಲಿ ತನಗೆ ಇರುವ ಆಶೆಯನ್ನು ತಿಳಿಸಿರುವ ಪ್ರಯುಕ್ತ ಅದು ವಿಲೋಭವೆನಿಸಿದೆ. ಶಾಕುಂತ ದಲ್ಲಿ ಗ್ರೀವಾಭಂಗಾಭಿರಾಮಂ ಎಂಬಲ್ಲಿ ಮೃಗದ ಗುಣವನ್ನು ವರ್ಣಿಸಲಾಗಿದೆ. ಇದು ಕಥೆಯ ಬೀಜವಸ್ತುವಿಗೆ ಸಂಬಂಧಿಸದೇ ಇರುವುದರಿಂದ ಸಂಧಿಯ ಅಂಗವೆನಿಸಿಲ್ಲ. ಹೀಗೆಯೇ ಬೇರೆ ಅಂಗಗಳಲ್ಲೂ ತಿಳಿಯುವುದು. ಯಾವುದು ಮೂಲಕಥೆಯ ಬೀಜಕ್ಕೆ ಸಂಬಂಧಿಸಿಲ್ಲವೋ ಅದು ಸಂಧ್ಯಂಗವೆನಿಸುವುದಿಲ್ಲವೆಂದು ತಿಳಿಯುವುದು.

ಈಗ ನಾಲ್ಕು ಅಂಗಗಳನ್ನು ವಿವರಿಸಿ ಯುಕ್ತಿ ಎಂಬ ಐದನೆಯ ಸಂಧ್ಯಂಗದ ಸ್ವರೂಪವನ್ನು ತಿಳಿಸುತ್ತಾನೆ. ತಿಳಿಯಬೇಕಾಗಿರುವ ವಿಷಯಗಳನ್ನು ನಿಶ್ಚಯಿ ಸುವುದೇಯುಕ್ತಿ ಎನಿಸುವುದು. ಇದೇ ಸಿದ್ಧಾಂತವೆಂದು ಭಾವಿಸುವುದೇ ಯುಕ್ತಿ. ವೇಣೀ ಸಂಹಾರದಲ್ಲಿ ಸಹದೇವನು ಭೀಮನಿಗೆ 'ಪೂಜ್ಯನೇ, ಮಹಾರಾಜನ ಆಜ್ಞೆಗೆ ಅರ್ಥವಿಲ್ಲ ವೆಂದು ನೀನುತಿಳಿದಿರುವೆಯಾ' ಎಂದು ಕೇಳುವನು. ಇಲ್ಲಿಂದ ಮುಂದೆ ಭೀಮನ ಮಾತು ಬರುವವರೆಗೂ ಇರುವುದೆಲ್ಲವೂ ಯುಕ್ತಿ ಎನಿಸಿದೆ. "ಸಿಟ್ಟಿನಿಂದ ಶತ್ರುಗಳ ವಂಶವನ್ನು ನಾಶಮಾಡುವುದು ನಿಮಗೆ ಲೋಕದಲ್ಲಿ ನಾಚಿಕೆಯನ್ನು ಹುಟ್ಟಿಸುತ್ತದೆ. ಹೆಂಡತಿಗೆ ಸಭೆ ಯಲ್ಲಿ ಕೂದಲನ್ನು ಶತ್ರುವು ಸೆಳೆದದ್ದರಿಂದ ಆದ ಅವಮಾನವು ನಿಮಗೆ ನಾಚಿಕೆ ಯನ್ನು ಹುಟ್ಟಿಸುವುದಿಲ್ಲ. ಇದು ನಿಜವಾಗಿಯೂ ಆಶ್ಚರ್ಯ" ಇಲ್ಲಿ ಶತ್ರುವಿನ ವಂಶವನ್ನು ನಾಶಮಾಡಬೇಕಾದ್ದು ಆವಶ್ಯಕವೆಂಬುದನ್ನು ನಿಶ್ಚಯಿಸುವುದರಿಂದ ಇದೇ ಯುಕ್ತಿ ಎನಿ ಸಿದೆ. ಆಯಾಯ ಪಾತ್ರಗಳಿಗೆ ಸುಖವನ್ನು ದೊರಕಿಸುವುದೇ ಪ್ರಾಪ್ತಿ ಎನಿಸುವುದು 'ಕೌರವರನ್ನು ಯುದ್ಧದಲ್ಲಿ ಕೋಪದಿಂದ ನಾನು ನಾಶಮಾಡುವುದಿಲ್ಲವೇ ?' ಹೀಗೆ ಭೀಮನು ಹೇಳುವ ಮಾತನ್ನು ಕೇಳಿಸಿಕೊಂಡು ದ್ರೌಪದಿಯು ಸಂತೋಷಗೊಂಡು 'ಸ್ವಾಮಿ ನಿನ್ನ ಈ ಮಾತನ್ನು ನಾನು ಹಿಂದೇ ಕೇಳಿರಲಿಲ್ಲ. ಇದನ್ನು ಮತ್ತೆ ಮತ್ತೆ ಹೇಳು' ಎಂದು ಹೇಳುವಳು. ಇಲ್ಲಿ ಭೀಮನ ಮಾತನ್ನು ಕೇಳಿದ್ದರಿಂದ ದ್ರೌಪದಿಗೆ ಸುಖವು ದೊರೆತದ್ದರಿಂದ ಇದು ಪ್ರಾಪ್ತಿ ಎಂಬ ಸಂಧ್ಯಾಂಗವೆನಿಸಿದೆ

ಬೀಜಸ್ಯಾಗಮನಂ ಯತ್ತು ತತ್ ಸಮಾಧಾನಮುಚ್ಯತೇ।

(ನೇಪಥ್ಯೇ) ಯಥಾ ತತ್ರೈವ

ಭೋ ಭೋ ವಿರಾಟದ್ರುಪದಪ್ರಭೃತಯಃ! ಶ್ರೂಯತಾಂ.
ಯತ್ಸತ್ಯವ್ರತಭಂಗಭೀರುಮನಸಾ ಯತ್ನೇನ ಮಂದೀಕೃತಂ
ಯದ್ವಿಸ್ಮರ್ತುಮಪೀಹಿತಂ ಶಮವತಾ ಶಾಂತಿಂ ಕುಲಸ್ಯೇಚ್ಛತಾ।
ತದ್ದ್ಯೂತಾರಣಿಸಂಭೃತಂ ನೃಪಸುತಾಕೇಶಾಂಬರಾಕರ್ಷಣೈಃ

ಕ್ರೋಧಜ್ಯೋತಿರಿದಂ ಮಹತ್ಕುರುವನೇ ಯೌಧಿಷ್ಠಿರಂ ಜೃಂಭತೇ ||

ಅತ್ರ 'ಸ್ವಸ್ಥಾ ಭವಂತಿ ಮಯಿ ಜೀವತಿ' ಇತಿ ಆದಿಬೀಜಸ್ಯ ಪ್ರಧಾನ ನಾಯಕಾಭಿಮತತ್ವೇನ ಸಮ್ಯಗಾಹಿತತ್ವಾತ್ಸಮಾಧಾನಮ್.

ಸುಖದುಃಖಕೃತೋ ಯೋಽರ್ಥಸ್ತದ್ವಿಧಾನಮಿತಿ ಸ್ಮೃತಮ್ |

ಯಥಾ ಬಾಲಚರಿತೇ—

ಉತ್ಸಾಹಾತಿಶಯಂ ವತ್ಸ ತವ ಬಾಲ್ಯಂ ಚ ಪಶ್ಯತಃ |
ಮಮ ಹರ್ಷವಿಷಾದಾಭ್ಯಾಂ ಆಕ್ರಾಂತಂ ಯುಗಪನ್ಮನಃ ||

ಯಥಾ ಮಮ ಪ್ರಭಾವತ್ಯಾಮ್ "ನಯನಯುಗಾಸೇಚನಕಂ" ಇತ್ಯಾದಿ.

ಕುತೂಹಲೋತ್ತರಾ ವಾಚಃ ಪ್ರೋಕ್ತಾ ತು ಪರಿಭಾವನಾ |

ಯಥಾ—ವೇಣ್ಯಾಂ ದ್ರೌಪದೀ 'ಯುದ್ಧಂ ಸ್ಯಾನ್ನ ವಾ' ಇತಿ ಸಂಶಯಾನಾ ತೂರ್ಯಶಬ್ದಾನಂತರಂ 'ನಾಥ! ಕಿಮಿದಾನೀಂ ಏಷ ಪ್ರಳಯಜಲಧರಸ್ತನಿತ ಮಂಥರಃ ಸಮರದುಂದುಭಿಸ್ತಾಡ್ಯತೇ.'

ಬೀಜಾರ್ಥಸ್ಯ ಪ್ರರೋಹಃ ಸ್ಯಾದುದ್ಭೇದಃ ಕರಣಂ ಪುನಃ| ಯಥಾ ತತ್ರೈವ-
ದ್ರೌಪದೀ—ನಾಥ! ಮನರಪಿ ತ್ವಯಾ ಸಮಾಸಾದಯಿತವ್ಯಾ.
ಭೀಮಃ—ಭೂಯಃ ಪರಿಭಾವಕ್ಲಾಂತಿಲಜ್ಜಾವಿಧುರಿತಾನನಮ್ |
ಅನಿಃಶೇಷಿತಕೌರವ್ಯಂ ನ ಪಶ್ಯಸಿ ವೃಕೋದರಮ್ ||
ಪ್ರಕೃತಾರ್ಥಸಮಾರಂಭಃ ಬೇಧಃ ಸಂಹತಿಭೇದನಮ್.

ಯಥಾ ತತ್ರೈವ-ದೇವಿ! ಗಚ್ಛಾಮೋ ವಯಮಿದಾನೀಂ ಕುರುಕುಲಕ್ಷಯಾಯ ಇತಿ. ಅತ ಏವಾದ್ಯ ಪ್ರಭೃತಿ ಭಿನ್ನೋಽಹಂ ಭವದ್ಭ್ಯಃ ಇತಿ ಭೇದಃ. ಕೇಚಿತ್ತು ಭೇದಃ ಪ್ರೋತ್ಸಾಹನಃ ಇತಿ ವದಂತಿ.

ಕಥೆಯ ಮೂಲಕಾರಣವೆನಿಸಿದ ಬೀಜವು ನಾಯಕನಿಗೆ ಸಂಬಂಧಿಸಿರುವುದೆಂಬ ಅರಿವೇ ಸಮಾಧಾನವೆನಿಸುತ್ತದೆ. ವೇಣೀಸಂಹಾರದಲ್ಲಿ ತೆರೆಯ ಮರೆಯಲ್ಲಿ "ಎಲೈ ವಿರಾಟ ದ್ರುಪದ ಮೊದಲಾದ ವೀರರೆ, ಕೇಳಿರಿ. ಸತ್ಯವನ್ನು ರಕ್ಷಿಸಬೇಕೆಂಬ ನಿಯಮವು ಎಲ್ಲಿ ತಪ್ಪುವುದೋ ಎಂದು ಮನಸ್ಸಿನಲ್ಲಿ ಹೆದರಿ ಯುಧಿಷ್ಠರನು ಪ್ರಯತ್ನವನ್ನು ಕಡಿಮೆಮಾಡಿ ದ್ದನು. ಅವನು ಸಹಜವಾಗಿ ಶಾಂತಿಪ್ರಿಯನಾದ್ದರಿಂದ ವಂಶಕ್ಕೆ ಶಾಂತಿಯನ್ನು ಬಯಸಿ ಅವನ್ನು ಮರೆಯಲಿಕ್ಕೂ ತಯಾರಿದ್ದನು. ಇಷ್ಟೆಲ್ಲಾ ಇದ್ದರೂ ಸಹ ಹಿಂದೆ ಕೌರವರು ಮಾಡಿದ್ದ ಪಗಡೆಯಾಟವೆಂಬ ಅರಣಿಯಿಂದ ಹುಟ್ಟಿ, ರಾಜನ ಮಗಳಿಗೆ ಕೇಶವನ್ನೂ ಸೀರೆಯನ್ನೂ ಸೆಳೆದದ್ದರಿಂದ ಮತ್ತಷ್ಟು ಪುಷ್ಟಿಹೊಂದಿದ ಯುಧಿಷ್ಟರನ ಕ್ರೋಧ ವೆಂಬ ಬೆಂಕಿಯು ವಿಶೇಷವಾಗಿ ವ್ಯಾಪಿಸಿದೆ." 'ನಾನಿರುವಾಗ ಕೌರವರು ಹೇಗೆ ಬದುಕಿ ಯಾರು ?' ಎಂದು ಭೀಮನು ಹಿಂದೆ ಹೇಳಿದ್ದ ಮಾತಿನಲ್ಲಿ ಅಡಗಿರುವ ಬೀಜವು ಪ್ರಧಾನನಾಯಕನನೆಸಿದ ಯುಧಿಷ್ಟರನಿಗೆ ಇಷ್ಟವೆನಿಸಿತ್ತೆಂಬ ಅಂಶವನ್ನು ಇಲ್ಲಿ ಸ್ಪಷ್ಟ ವಾಗಿ ತಿಳಿಸಿರುವುದರಿಂದ ಇದು ಸಮಾಧಾನವೆನಿಸಿದೆ.

ಸುಖದಿಂದಲೂ ದುಃಖದಿಂದಲೂ ಕೂಡಿಕೊಂಡಿರುವ ಸ್ಥಿತಿಯೇ ವಿಧಾನವೆನಿಸಿಸು ವುದು. ಬಾಲಚರಿತದಲ್ಲಿ ಇದನ್ನು ಕಾಣಬಹುದು. "ಎಲೈ ಮಗುವೇ ನಿನ್ನ ಹೆಚ್ಚಿನ ಉತ್ಸಾಹವನ್ನೂ ಬಾಲ್ಯವನ್ನೂ ನೋಡಿದ ನನಗೆ ಏಕಕಾಲದಲ್ಲಿ ಸಂತೋಷವೂ ದುಃಖವೂ ಆದ್ದರಿಂದ ನನ್ನ ಮನಸ್ಸು ಅವೆರಡರಿಂದಲೂ ತುಂಬಿಕೊಂಡಿದೆ." ಇಲ್ಲಿ ಶ್ರೀರಾಮನಿಗೆ ಪರಶುರಾಮನು ಹೇಳುವಾಗ ತನ್ನ ಮನಸ್ಸಿನಲ್ಲಿ ಸುಖದುಃಖಗಳೆರಡ ರಿಂದಲೂ ಮನಸ್ಸು ಆಕ್ರಮಿಸಿತ್ತೆಂದು ಹೇಳಿರುವುದರಿಂದ ಇದು ವಿಧಾನವೆನಿಸಿದೆ. ಪ್ರಭಾವತಿಗೆ ಹೃದಯದಲ್ಲಿ ಆನಂದ ಸಂತಾಪ ಇವೆರಡೂ ಸಂಬಂಧಿಸಿದ್ದವೆಂಬ ಅಂಶವು 'ನಯನಯುಗಾಸೇಚನಕಮ್' ಎಂಬಲ್ಲಿ ತಿಳಿಸಲಾಗಿದೆ.

ಕುತೂಹಲದಿಂದ ಹೊರಡುವ ಮಾತೇ ಪರಿಭಾವನೆ ಎನಿಸುವುದು. ಹೀಗೆ ಎಲ್ಲಡೆ ಯಲ್ಲೂ ಕುತೂಹಲವನ್ನು ಹುಟ್ಟಿಸುವುದೇ ಪರಿಭಾವನೆ ಎಂದು ಹೇಳಿದಂತಾಯಿತು. ವೇಣೀಸಂಹಾರದಲ್ಲಿ "ಯುದ್ಧವು ನಡೆಯುವುದೋ ಇಲ್ಲವೋ" ಎಂದು ದ್ರೌಪದಿಗೆ ಸಂಶಯವುಂಟಾಗಿರಲು ಯುದ್ಧಾರಂಭದಲ್ಲಿ ನಗಾರಿಯ ಶಬ್ದವನ್ನು ಕೇಳಿ ಆಕೆಯು "ಸ್ವಾಮಿ, ಪ್ರಳಯಕಾಲದ ಮೇಘದ ಗುಡುಗಿನಂತೆ ಭಯಂಕರವಾದ ರಣಕಹಳೆಯು ಈಗಲೇ ಕೇಳಿಬರುತ್ತಿದೆ'ಎಂದು ಹೇಳುವಳು. ಹೀಗೆ ದ್ರೌಪದಿಯು ಕುತೂಹಲದಿಂದ ಹೇಳಿರುವುದರಿಂದ ಇಂತಹ ಮಾತು ಪರಿಭಾವನೆ ಎನಿಸಿದೆ.

'ಅಲ್ಪಮಾತ್ರಂ ಸಮುದ್ದಿಷ್ಟಂ ಎಂಬಲ್ಲಿ ತಿಳಿಸಿದ ಬೀಜವನ್ನು ಮತ್ತೆ ಬೆಳೆಸು ವುದೇ ಉದ್ಭೇದವೆನಿಸುವುದು. ಅಲ್ಲಿಯೇ ದ್ರೌಪದಿಯು "ಸ್ವಾಮಿ, ಮತ್ತೆ ನೀನು ನನ್ನ ಬಳಿಗೆ ಬರಬೇಕು" ಎಂದು ಹೇಳಲು ಅದಕ್ಕೆ ಭೀಮನು "ಶತ್ರುಗಳು ಮಾಡಿದ ಅವಮಾನದಿಂದ ಕಷ್ಟವನ್ನು ಅನುಭವಿಸುತ್ತಲೂ" ನಾಚಿಕೆ ಪಡುತ್ತಲೂ ಚಿಂತೆಗೆ ಸಿಕ್ಕಿ ರುವ ಈ ಭೀಮನ ಮುಖವನ್ನು ಕೌರವರೆಲ್ಲರು ಪೂರ್ಣನಾಶವಾಗುವವರಿವಿಗೂ ನೀನು ನೋಡಲಾರೆ." ಹೀಗೆಂದುಶತ್ರುಗಳನ್ನು ಜಯಿಸಲಿಕ್ಕೆ ಬೇಕಾದ ಉತ್ಸಾಹವು ಭೀಮನಿಗೆ ಇದೆ ಎಂಬುದನ್ನು ಮತ್ತೆ ತೋರಿಸಿರುವುದರಿಂದ ಇದು ಉದ್ಭೇದವೆಂಬ ಅಂಗವೆನಿಸಿದೆ.

ನಾಯಕನಿಗೆ ಸಂಬಂಧಿಸಿದ ಪ್ರಕೃತಕಾರ್ಯವನ್ನು ಆರಂಭಿಸುವುದೇ ಕರಣವೆನಿ ಸುವುದು. "ದೇವಿ ನಾವು ಈಗ ಕುರುವಂಶದ ನಾಶಕ್ಕಾಗಿ ಹೊರಡುತ್ತೇವೆ." ಹೀಗೆ ಇಲ್ಲಿ ಹೇಳಿರುವುದರಿಂದ ಪ್ರಕೃತಕಾರ್ಯವೆನಿಸಿದ ಯುದ್ಧದ ಉದ್ಯೋಗವು ಆರಂಭ ವಾಯಿತೆಂದು ತಿಳಿದುಬರುವುದು. ಇದು ಕರಣವೆನಿಸಿದೆ. ಕಾರ್ಯಸಾಧನೆಗಾಗಿ ಜೊತೆ ಯವರಿಂದ ಬೇರೆಯಾಗುವುದೇ ಭೇದವೆನಿಸುತ್ತದೆ. "ಇಲ್ಲಿಂದ ಮುಂದೆ ನಾನು ನಿಮ್ಮಿಂದ ಬೇರೆಯಾಗಿರುವೆನು" ಎಂದು ಭೀಮನು ಹೇಳುವ ಮಾತಿನಿಂದ ಅವನು ಯುದ್ಧೋ ದ್ಯೋಗದ ನಿಮಿತ್ತವಾಗಿ ಸೋದರವರ್ಗದಿಂದ ಬೇರೆಯಾಗುವುದನ್ನು ಇಲ್ಲಿ ಕಾಣ ಬಹುದು. ಇಲ್ಲಿ ಕೆಲವರು "ಬೇರೆಯವರನ್ನು ಪ್ರಕೃತಕಾರ್ಯದಲ್ಲಿ ಪ್ರೋತ್ಸಾಹಿಸು ವುದೇ ಭೇದ" ವೆಂದು ಹೇಳುತ್ತಾರೆ.

ವಿಲಾಸಃ ಪರಿಸರ್ಪಶ್ಚ ವಿಧೃತಂ ತಾಪನಂ ತಥಾ ।
ನರ್ಮ ನರ್ಮದ್ಯುತಿಶ್ಚೈವ ತಥಾ ಪ್ರಗಮನಂ ಪುನಃ ॥
ವಿರೋಧಶ್ಚ ಪ್ರತಿಮುಖೇ ತಥಾ ಸ್ಯಾತ್ಪರ್ಯುಪಾಸನಮ್ ।
ಪುಷ್ಪಂ ವಜ್ರಮುಪನ್ಯಾಸೋ ವರ್ಣಸಂಹಾರ ಇತ್ಯಪಿ ॥

ತತ್ರ—ಸಮೀಹಾ ರತಿಭೋಗಾರ್ಥಾ ವಿಲಾಸ ಇತಿ ಕಥ್ಯತೇ ।

ರತಿಲಕ್ಷಣಸ್ಯಭಾವಸ್ಯ ಯೋ ಹೇತುಭೂತೋ ಭೋಗೋ ವಿಷಯಃ ಪ್ರಮದಾ ಪುರುಷೋ ವಾ ತದರ್ಥಾ ಸಮೀಹಾ ವಿಲಾಸಃ ಯಥಾ.

ಶಾಕುಂತಲೇ—ಕಾಮಂ ಪ್ರಿಯಾ ನ ಸುಲಭಾ ಮನಸ್ತು ತದ್ಭಾವದರ್ಶನಾಶ್ವಾಸಿ ।
ಅಕೃತಾರ್ಥೇಽಪಿ ಮನಸಿಜೇ ರತಿಮುಭಯಪ್ರಾರ್ಥನಾ ಕುರುತೇ ॥

ಇಷ್ಟನಷ್ಟಾನುಸರಣಂ ಪರಿಸರ್ಪಶ್ಚ ಕಥ್ಯತೇ ।

ಯಥಾ ಶಾಕುಂತಲೇ–"ರಾಜಾ–ಭವಿತವ್ಯಮತ್ರ ತಯಾ. ತಥಾ—
ಅಭ್ಯುನ್ನತಾ ಪುರಸ್ತಾದವಗಾಢಾ ಜಘನಗೌರವಾತ್ ಪಶ್ಚಾತ್ ।
ದ್ವಾರೇಽಸ್ಯ ಪಾಂಡುಸಿಕತೇ ಪದಪಂಕ್ತಿರ್ದೃಶ್ಯತೇಽಭಿನವಾ ॥

ಕೃತಸ್ಯಾನುನಯಸ್ಯಾದೌ ವಿಧೃತಂ ತ್ವಪರಿಗ್ರಹಃ ।

ಯಥಾ ತತ್ರೈವ–ಅಲಂ ವಃ ಅಂತಃಪುರವಿರಹಪರ್ಯುತ್ಸುಕೇನ ರಾಜರ್ಷಿಣಾ ಉಪರುದ್ಧೇನ ಕೇಚಿತ್ತು 'ವಿಧೃತಂ ಸ್ಯಾದರತಿಃ.' ಇತಿ ವದಂತಿ.

ಉಪಾಯಾದರ್ಶನಂ ಯತ್ತು ತಾಪನಂ ನಾಮ ತದ್ಭವೇತ್ ।

ಯಥಾ ರತ್ನಾವಳ್ಯಾಂ ಸಾಗರಿಕಾ—
ದುರ್ಲಭಜನಾನುರಾಗಃ ಲಜ್ಜಾ ಗುರ್ವೀ ಪರವಶ ಆತ್ಮಾ ।
ಪ್ರಿಯಸಖಿ ವಿಷಮಂ ಪ್ರೇಮ ಮರಣಂ ಶರಣಂ ಕೇವಲಮೇಕಮ್ ॥

ಪರಿಹಾಸವಚೋ ನರ್ಮಧೃತಿಸ್ತು ಪರಿಹಾಸಜಾ ।

ಯಥಾ ರತ್ನಾವಳ್ಯಾಂ–'ಸುಸಂಗತಾ–ಸಖಿ ಯಸ್ಯ ಕೃತೇ ತ್ವಮಾಗತಾ ಸೋಽಯಂ ತೇ ಪುರತಸ್ತಿಷ್ಠತಿ ? ಸಾಗರಿಕಾ (ಸಾಭ್ಯಸೂಯಂ) ಕಸ್ಯ ಕೃತೇ ಅಹಮಾಗತಾ ? ಸುಸಂಗತಾ–ಅಯಿ ಅನ್ಯ ಶಂಕಿತೇ ! ನನು ಚಿತ್ರಫಲಕಸ್ಯ'

ನರ್ಮದ್ಯುತಿಃ ಪ್ರಗಮನಂ ವಾಕ್ಯಂ ಸ್ಯಾದುತ್ತರೋತ್ತರಮ್ ॥

ಯಥಾ ತತ್ರೈವ "ಸುಸಂಗತಾ–ಸಖಿ ! ಅದಕ್ಷಿಣೇದಾನೀಮಸಿ ತ್ವಂ, ಯಾ ಏವಂ ಭರ್ತ್ರಾ ಹಸ್ತಾವಲಂಬಿತಾಪಿ ಕೋಪಂ ನ ಮುಂಚಸಿ, ಸಾಗರಿಕಾ–(ಸಭ್ರೂಭಂಗಮೀಷದ್ವಿಹಸ್ಯ) ಸುಸಂಗತೇ ಇದಾನೀಮಪಿ ಕ್ರೀಡಿತುಂ ನ ವಿರಮಸಿ."

ಕೇಚಿತ್ತು "ದೋಷಸ್ಯಾಚ್ಛಾದನಂ ಹಾಸ್ಯಂ ನರ್ಮದ್ಯುತಿಃ" ಇತಿ ವದಂತಿ.

ಉತ್ತರೋತ್ತರಂ ವಾಕ್ಯಂ ಪ್ರಗಮನಂ ಸ್ಯಾತ್. ಯಥಾ ವಿಕ್ರಮೋರ್ವಶ್ಯಾಂ "ಉರ್ವಶೀ–ಜಯತು ಮಹಾರಾಜಃ. ರಾಜಾ–'ಮಯಾ ನಾಮ ಜಿತಂ ಯಸ್ಯ ತ್ವಯಾ ಜಯ ಉದೀರ್ಯತೇ'' ಇತ್ಯಾದಿ.

ವಿರೋಧೋ ವ್ಯಸನಪ್ರಾಪ್ತಿಃ ಕೃತಸ್ಯಾನುನಯಃ ಪುನಃ ।
ಸ್ಯಾತ್ಪರ್ಯುಪಾಸನಂ ಪುಷ್ಪಂ ವಿಶೇಷವಚನಂ ಮತಮ್ ॥

ಯಥಾ ಚಂಡಕೌಶಿಕೇ– "ರಾಜಾ– ನೂನಮಸಮೀಕ್ಷ್ಯಕಾರಿಣಾ ಮಯಾ ಅಂಧೇನೇವ ಸ್ಫುರಚ್ಛಿಖಾಕಲಾಪೋಜ್ವಲನಃ ಪಥ್ಯಾಂ ಸಮಾಕ್ರಾಂತಃ.

ಕೃತಸ್ಯ ದೋಷಸ್ಯ ಕ್ಷಾಲನಾಯ ಪುನರನುನಯಃ ಪರ್ಯುಪಾಸನಂ. ಯಥಾ ರತ್ನಾವಳ್ಯಾಂ–"ವಿದೂಷಕಃ–ಭೋಃ ಮಾ ಕುಪ್ಯ, ಏಷಾ ಹಿ ಕದಳೀಗೃಹಾಂತರಂ ಗತಾ" ಇತ್ಯಾದಿ. ವಿಶೇಷವಚನಂ ಪುಷ್ಪಂ ನಾಮ ಅಂಗಂ. ಯಥಾ ತತ್ರೈವ ರಾಜಾ–(ಹಸ್ತೇ ಗೃಹೀತ್ವಾ ಸ್ಪರ್ಶಂ ನಾಟಯತಿ) ವಿದೂಷಕಃ—ಭೋ ವಯಸ್ಯ, ಸತ್ಯಮ್,

ಶ್ರೀರೇಷಾ ಪಾಣಿರಪ್ಯಸ್ಯಾಃ ಪಾರಿಜಾತಸ್ಯ ಪಲ್ಲವಃ ।
ಕುತೋಽನ್ಯಥಾ ಪ್ರವತ್ಯೇಷಃ ಸ್ವೇದಚ್ಛದ್ಮಾಮೃತದ್ರವಃ ॥

ಯಥಾ ತತ್ರೈವ– "ರಾಜಾ– ಕಥಮಿಹಸ್ಥೋಽಹಂ ತ್ವಯಾ ಜ್ಞಾತಃ ಸುಸಂಗತಾ–ನ ಕೇವಲಂ ತ್ವಂ, ಸಮಂ ಚಿತ್ರಫಲಕೇನ. ತದ್ಯಾವದ್ಗತ್ವಾ ದೇವ್ಯೈ ನಿವೇದಯಿಷ್ಯಾಮಿ"

ಪ್ರಸಾದನಂ ಪ್ರಸನ್ನತಾಜನನಂ ಉಪನ್ಯಾಸೋ ನಾಮಾಂಗಮ್.

ಯಥಾ ತತ್ರೈವ–"ಸುಸಂಗತಾ–ಭರ್ತಃ, ಅಲಂ ಶಂಕಯಾ. ಮಯಾಪಿ ಭರ್ತ್ರ್ಯಾಃ ಪ್ರಸಾದೇನ ಕ್ರೀಡಿತಮೇವ ಏತೈಃ, ತತ್ಕಿಂ ಕರ್ಣಾಭರಣೇನ. ಅತೋಽಪಿ ಗುರುತರಃ ಪ್ರಸಾದ ಏಷಃ, ಯತ್ ತ್ವಯಾ ಅಹಮತ್ರ ಆಲಿಖಿತೇತಿ ಕುಪಿತಾ ಮೇ ಪ್ರಿಯಸಖೀ ಸಾಗರಿಕಾ, ಏಷೈವ ಪ್ರಸಾದ್ಯತಾಮ್."

ಕೇಚಿತ್ತು 'ಉಪಪತ್ತಿಕೃತೋ ಯೋಽರ್ಥ ಉಪನ್ಯಾಸಃ ಸ ಕೀರ್ತಿತಃ' ಇತಿ ವದಂತಿ ಉದಾಹರಂತಿ ಚ ತತ್ರೈವ–'ಅತಿಮುಖರಾ ಖಲು ಸಾ ಗರ್ಭದಾಸೀ' ಇತಿ.

ಚಾತುರ್ವರ್ಣ್ಯೋಪಗಮನಂ ವರ್ಣಸಂಹಾರ ಇಷ್ಯತೇ ॥

ಯಥಾ ಮಹಾವೀರಚರಿತೇ ತೃತೀಯೇಽಂಕೇ—

ಪರಿಷದಿಯಮೃಷೀಣಾಮೇಷ ವೀರೋ ಯುಧಾಜಿತ್ ।
ಸಹ ನೃಪತಿರಮಾತ್ಯೈಃ ಲೋಮಪಾದಶ್ಚ ವೃದ್ಧಃ ।
ಅಯಮವಿರತಯಜ್ಞೋ ಬ್ರಹ್ಮವಾದೀ ಪುರಾಣಃ ।
ಪ್ರಭುರಪಿ ಜನಕಾನಾಮಂಗ ಭೋ ಯಾಚಕಾಸ್ತೇ ॥

ಇತ್ಯತ್ರ ಋಷಿಕ್ಷತ್ರಾದೀನಾಂ ಮೇಲನಮ್. ಅಭಿನವಗುಪ್ತಪಾದಾಸ್ತು "ವರ್ಣ ಶಬ್ದೇನ ಪಾತ್ರಾಣ್ಯುಪಲಕ್ಷ್ಯಂತೇ, ಸಂಹಾರೋ ಮೇಲನಮ್" ಇತಿ ವ್ಯಾಚಕ್ಷತೇ ಉದಾಹರಂತಿ ಚ.

ರತ್ನಾವಳ್ಯಾಂ ದ್ವಿತೀಯೇಽಂಕೇ "ಅತೋಽಪಿ ಮೇ ಅಯಂ ಗುರುತರಃ ಪ್ರಸಾದಃ. ನನು ಹಸ್ತೇ ಗೃಹೀತ್ವಾ ಪ್ರಸಾದಯ ಏನಾಮ್. ರಾಜಾ–ಕ್ವಾಸೌ ಕ್ವಾಸೌ" ಇತ್ಯಾದಿ—

ಮುಖಸಂಧಿಯ ಅಂಗಗಳನ್ನು ತಿಳಿಸಿ ಈಗ ಪ್ರತಿಮುಖಸಂಧಿಯ ಅಂಗಗಳನ್ನು ತಿಳಿಸುತ್ತಾನೆ. ವಿಲಾಸ, ಪರಿಸರ್ಪ, ವಿಧೃತ, ತಾಪನ, ನರ್ಮ, ನರ್ಮದ್ಯುತಿ, ಪ್ರಗಮನ, ವಿರೋಧ, ಪರ್ಯುಪಾಸನ, ಪುಷ್ಪ, ವಜ್ರ, ಉಪನ್ಯಾಸ, ವರ್ಣಸಂಹಾರ ಇವು ಪ್ರತಿಮುಖಸಂಧಿಯ ಅಂಗಗಳು. ಇವುಗಳ ಸ್ವರೂಪವನ್ನು ಈಗ ತಿಳಿಸುತ್ತಾನೆ. ಪ್ರೀತಿಪಾತ್ರರೆನಿಸಿದ ಸ್ತ್ರೀಪುರುಷರಲ್ಲಿ ಒಬ್ಬರ ಬಗ್ಗೆ ಮತ್ತೊಬ್ಬರಿಗೆ ಇರುವ ಇಚ್ಛೆಯೇ ವಿಲಾಸವೆನಿಸುವುದು. ರತಿ ಎನಿಸಿದ ಭಾವಕ್ಕೆ ಕಾರಣವೆನಿಸಿದ ಸ್ತ್ರೀಯಾಗಲೀ ಪುರುಷನಾಗಲೀ ಅದನ್ನು ಪಡೆಯಲಿಕ್ಕಾಗಿ ಬಯಸುವುದೇ ಈ ಬಗೆಯ ವಿಲಾಸ. ಶಾಕುಂತಲದಲ್ಲಿ ದುಷ್ಯಂತನ ಮಾತಿನಲ್ಲಿ ಇದು ತೋರುತ್ತದೆ. ನನಗೆ ಪ್ರಿಯೆಯು ಸುಲಭವಾಗಿ ದೊರೆಯಲಾರಳು. ನನ್ನ ಮನಸ್ಸಾದರೋ ಆಕೆಗೆ ನನ್ನಮೇಲೆ ಇದ್ದ ಅನುರಾಗವನ್ನೇ ಊಹಿಸುತ್ತಲಿದೆ. ಸಂಭೋಗವನ್ನು ದೊರಕಿಸದೆಯೇ ಕಾಮವು ವ್ಯರ್ಥವಾದರೂ ಸಹ ನಾಯಕನಾಯಿಕೆಯರಿಬ್ಬರಿಗೂ ಒಬ್ಬರಿಗೊಬ್ಬರಿಗೆ ಸೇರಬೇಕೆಂಬ ಇಚ್ಛೆಯನ್ನಾದರೂ ಹುಟ್ಟಿಸುತ್ತದೆ." ಇಲ್ಲಿ ದುಷ್ಯಂತನಿಗೆ ಶಕುಂತಲೆಯನ್ನು ಹೊಂದಬೇಕೆಂಬ ಇಚ್ಛೆಯು ತೋರುವುದರಿಂದ ಇದು ವಿಲಾಸವೆಂಬ ಅಂಗವೆನಿಸಿದೆ.

ಒಬ್ಬನಿಗೆ ಇಷ್ಟವಾದ ವಸ್ತುವು ನಷ್ಟವಾಗಿದ್ದರೆ ಅದನ್ನು ಹುಡುಕುವುದೇ ಪರಿಸರ್ಪವೆನಿಸುವುದು. ಶಾಕುಂತಲದಲ್ಲಿ ರಾಜನು "ಲತಾಮಂಟಪದಲ್ಲಿ ಶಕುಂತಲೆ ಇರಬೇಕು-ಯಾಕೆಂದರೆ ಬಿಳುಪಾದ ಮರಳಿರುವ ಈ ಲತಾಮಂಟಪದ ಬಾಗಿಲಿನಲ್ಲಿ ಮುಂದುಗಡೆ ಬಹಳ ದೊಡ್ಡದಾಗಿದ್ದು ಶರೀರದ ಹಿಂಭಾಗದ ಭಾರದಿಂದ ಹಿಂದೆ ಕೊಂಚ ಮೊಟಕಾಗಿದ್ದು ಈಗ ತಾನೆ ಇಟ್ಟಿರುವ ಹೆಜ್ಜೆಯ ಗುರುತು ಕಾಣಿಸುತ್ತಲಿದೆ." ಹೀಗೆ ಹೇಳುವುದರಿಂದ ಅವನಿಗೆ ಇಷ್ಟವಾದ ಶಕುಂತಲೆಯು ಕಾಣಿಸದೇ ಇದ್ದ ಪ್ರಯುಕ್ತ ಅವಳಿಗಾಗಿ ಅವನು ಹುಡುಕುವುದನ್ನು ತಿಳಿಸಿದ್ದರಿಂದ ಇದು ಪರಿಸರ್ಪವೆನಿಸಿದೆ.

ಮೊದಲು ಮಾಡಿಕೊಂಡ ಸಮಾಧಾನವನ್ನು ಒಪ್ಪದಿರುವುದೇ ವಿಧೃತವೆನಿಸಿವುದು. 'ಅಂತಃಪುರಸ್ತ್ರೀಯರ ವಿರಹದಿಂದ ಈಗಲೇ ಹೆಚ್ಚು ವ್ಯಥೆಗೊಂಡಿರುವ ರಾಜರ್ಷಿಯನ್ನು ನೀವು ನನಗಾಗಿ ಸಮಾಧಾನಮಾಡುವುದು ಬೇಕಿಲ್ಲ' ಹೀಗೆ ಶಕುಂತಲೆಯು ಅನಸೂಯೆ ಪ್ರಿಯಂವದೆಯರಿಗೆ ಹೇಳುತ್ತಾಳೆ. ಇದರಿಂದ ಶಕುಂತಲೆಯು ಮನಸ್ಸಿನಲ್ಲಿ ಮಾಡಿಕೊಂಡಿದ್ದಂತೆ ರಾಜನನ್ನು ಒಪ್ಪಿಸಲಿಕ್ಕೆ ಸಖಿಯರಿಗೆ ಪ್ರಯತ್ನ ಮಾಡಬೇಕಾಗಿಲ್ಲವೆಂದು ಆಕೆ ತಿಳಿಸಿದಂತಾಯಿತು. ಹೀಗೆ ಆಕೆಯು ತನ್ನ ಮನಸ್ಸಿನ ಹಿಂದಿನ ಸಮಾಧಾನವನ್ನು ಸ್ವೀಕರಿಸದಿರುವ ಪ್ರಯುಕ್ತ ಇದು ವಿಧೃತಿಎನಿಸಿದೆ. ಒಬ್ಬನ ಅಭಿಪ್ರಾಯದಲ್ಲಿ ಮತ್ತೊಬ್ಬನಿಗೆ ಸಮ್ಮತಿ ಇಲ್ಲವೆಂದು ತಿಳಿಸುವುದೇ ವಿಧೃತಿ ಎಂದು ದಶರೂಪಕಕಾರನು ಹೇಳಿದ್ದಾನೆ.

ಕಷ್ಟವು ಸಂಭವಿಸಿದಾಗ ಅದನ್ನು ಹೇಗೆ ತೊಲಗಿಸಿಕೊಳ್ಳಬೇಕೆಂಬುದನ್ನು ಕಾಣದಿರುವುದೇ ತಪನವೆನಿಸುವುದು. ರತ್ನಾವಳಿಯಲ್ಲಿ ಸಾಗರಿಕೆಯು "ನನಗೆ ಸುಲಭವಾಗಿ ದೊರಕದೇ ಇರುವ ವ್ಯಕ್ತಿಯಲ್ಲಿ ನನಗೆ ಪ್ರೇಮವು ಅಂಟಿಕೊಂಡಿದೆ.

ಆವನನ್ನು ಅನುಸರಿಸಿಕೊಂಡು ಹೋಗಲು ವಿಶೇಷವಾದ ನಾಚಿಕೆಯು ತಡೆಯಾಗಿದೆ. ನಾನು ಪರಾಧೀನಳಾಗಿದ್ದರಿಂದ ಹುಡುಕಿಕೊಂಡು ಹೋಗಲಿಕ್ಕೂ ಆಗುವುದಿಲ್ಲ. ನನ್ನ ಪ್ರೇಮವಾದರೋ ವಿಷಮವೆನಿಸಿದೆ. ಈ ಸಂದರ್ಭದಲ್ಲಿ ನನಗೆ ಮರಣವೊಂದೇ ಉಳಿದಿರುವ ಮಾರ್ಗ." ಇಲ್ಲಿ ಸಾಗರಿಕೆಗೆ ಒದಗಿದ ನಷ್ಟವನ್ನು ಪರಿಹರಿಸಿಕೊಳ್ಳುವ ಉಪಾಯವು ಕಾಣದೆ ಇರುವ ಪ್ರಯುಕ್ತ ಆಕೆಯು ಅನುಭವಿಸುವ ವ್ಯಥೆಯು ಇಲ್ಲಿ ತಿಳಿದುಬರುತ್ತದೆ. ಇದು ತಾಪನವೆನಿಸಿದೆ. ತನಗೆ ಕಷ್ಟ ಬಂದ ಕಾಲದಲ್ಲಿ ಮನಸ್ಸಿನಲ್ಲಿ ಸಮಾಧಾನಕ್ಕಾಗಿ ಬೇರೆಯವರಲ್ಲಿ ಕೊಂಚ ಹಾಸ್ಯಮಾಡುವುದೇ ನರ್ಮವೆನಿಸುವುದು. ರತ್ನಾವಳಿಯಲ್ಲಿ ಸುಸಂಗತೆಯು ಸಾಗರಿಕೆಯೊಡನೆ ಮಾತನಾಡುವಾಗ ಹೀಗೆ ಹಾಸ್ಯ ಮಾಡುವಳು, 'ಸಖಿ, ಯಾರಿಗಾಗಿ ನಾನು ಇಲ್ಲಿಗೆ ಬಂದೆಯೋ ಅವನು ನಿನ್ನ ಮುಂದೆ ನಿಂತಿರುವನು' ಎಂದೆ ಆಕೆ ಹೇಳಲು, ಅದಕ್ಕೆ ಸಾಗರಿಕೆಯು 'ಯಾರಿಗಾಗಿ ನಾನು ಇಲ್ಲಿಗೆ ಬಂದೆನು' ಎಂದು ಕೇಳುವಳು. ಆಗ ಸುಸಂಗತೆಯು 'ಎಲೈ ಸಂಶಯಪ್ರಕೃತಿ ಯವಳೇ, ಈ ಚಿತ್ರದ ಹಲಗೆಗೋಸ್ಕರ ನೀನು ಇಲ್ಲಿಗೆ ಬಂದಿರುವೆ' ಎಂದು ಹೇಳುವಳು. ಇಲ್ಲಿ ಸಖಿಯ ಮಾತಿನಲ್ಲಿ ಪರಿಹಾಸವಿರುವುದರಿಂದ ಇದು ನರ್ಮವೆಂಬ ಅಂಗವೆನಿಸಿದೆ.

ಹೀಗೆ ಪರಿಹಾಸವಿದ್ದರೂ ತೋರುವ ಧೈರ್ಯವೇ ನರ್ಮದ್ಯುತಿ ಎನಿಸಿದೆ. ಬೇರೆಯವರು ಮಾಡಿದ ಪರಿಹಾಸವನ್ನು ಧೈರ್ಯದಿಂದ ತಡೆದುಕೊಳ್ಳುವುದೆಂಬುದೇ ಈ ಪದದ ಅರ್ಥ. ರತ್ನಾವಳಿಯಲ್ಲಿ ಸುಸಂಗತೆಯು 'ಸಖಿ, ನೀನು ಈಗ ದಾಕ್ಷಿಣ್ಯ ಪ್ರಕೃತಿಯನ್ನು ತೊರೆದಿರುವೆ. ಪತಿಯು ನಿನಗೆ ಕರಾವಲಂಬನವನ್ನು ಅನುಗ್ರಹಿಸಿ ದ್ದರೂ ಸಹ ನೀನು ಕೋಪವನ್ನು ಬಿಟ್ಟಿಲ್ಲ' ಎಂದು ಹೇಳಲು ಅವಕ್ಕೆ ಸಾಗರಿಕೆಯು 'ಸುಸಂಗತೆ, ಈಗಲೂ ಹಾಸ್ಯಮಾಡುವುದನ್ನು ನೀನು ಬಿಡುವುದಿಲ್ಲವೇ ?' ಎಂದು ಹೇಳುವಳು. ಇವರಿಂದ ಸುಸಂಗತೆಯು ಪರಿಹಾಸವನ್ನು ಮಾಡಿದರೂ ಸಹ ಸಾಗರಿ ಕೆಯು ಧೈರ್ಯವನ್ನಾಶ್ರಯಿಸಿದ್ದರಿಂದ ಇದು ನರ್ಮದ್ಯುತಿ ಎನಿಸಿದೆ. ಒಬ್ಬನ ದೋಷವನ್ನು ಮುಚ್ಚಲಿಕ್ಕಾಗಿ ಮಾಡುವ ಹಾಸ್ಯವೇ ನರ್ಮದ್ಯುತಿಯೆಂದು ಕೆಲವರು ಹೇಳುತ್ತಾರೆ. ಮುಂದು ಮುಂದಿನ ಮಾತು ಉತ್ಕೃಷ್ಟವಾಗಿರುವಂತೆ ಮಾತನಾಡು ವುದೇ ಪ್ರಗಮನವೆನಿಸುವುದು. ಮುಂದುಮುಂದೆ ಪ್ರಕರ್ಷವನ್ನು ಹೊಂದುವುದೇ ಪ್ರಗಮನಶಬ್ದದ ಅರ್ಥ. ವಿಕ್ರಮೋರ್ವಶೀಯದಲ್ಲಿ ಊರ್ವಶಿಯು ಮಹಾರಾಜನಿಗೆ ಜಯವಾಗಲಿ ಎಂದು ಹೇಳಲು ಆಗ ರಾಜನು 'ನೀನು ಜಯಶಬ್ದವನ್ನು ಉಚ್ಚರಿಸಿದ ಮೇಲೆ ನಾನು ನಿಜವಾಗಿಯೂ ಜಯಿಸಿದಂತಾಯಿತು" ಎಂದು ಪುರೂರವನು ಹೇಳುವನು. ಇಲ್ಲಿ 'ಮಯಾ' ಎ ಉತಂದ್ಕ್ರುಷ್ಟವಾದ ಉತ್ತರವನ್ನು ತಿಳಿಸುವ ವಾಕ್ಯವನ್ನು ಉಪಯೋಗಿಸುವುದರಿಂದ ಇದು ಪ್ರಗಮನವೆನಿಸಿದೆ. ಯಾವುದಾದರೂ ವಿಪತ್ತು ಸಂಭವಿಸುವುದೇ ವಿರೋಧವೆನಿಸುವುದು. ಸಂಪತ್ಪ್ರಾಪ್ತಿಗೆ ವಿರೋಧವೆನಿಸಿದ್ದ ರಿಂದ ಇದಕ್ಕೆ ಆ ಹೆಸರು ಬಂದಿದೆ. ಚಂಡಕೌಶಿಕದಲ್ಲಿ ರಾಜನು ಹಿಂದುಮುಂದು

ಆಲೋಚಿಸದೆ ಕುರುಡನಂತೆ ಕಾರ್ಯವನ್ನು ಆರಂಭಿಸಿದ ನಾನು ಚೆನ್ನಾಗಿ ಉರಿಯುತ್ತಿರುವ ಬೆಂಕಿಯನ್ನು ಕಾಲಿನಿಂದ ಮುಟ್ಟಿದ್ದಾಯಿತು' ಎಂದು ಹೇಳುವನು. ಇದರಿಂದ ಹರಿಶ್ಚಂದ್ರನಿಗೆ ವಿಶ್ವಾಮಿತ್ರನಿಂದ ವಿಪತ್ತು ಒದಗಿತ್ತೆಂದು ಹೇಳುವ ಪ್ರಯುಕ್ತ ಇದು ವಿರೋಧವೆನಿಸಿದೆ. ತಾನು ಮಾಡಿದ ತಪ್ಪನ್ನು ತೊಳೆದುಕೊಳ್ಳಲು ಸಮಾಧಾನ ಮಾಡಿಕೊಳ್ಳುವುದೇ ಪರ್ಯುಪಾಸನವೆನಿಸುವುದು. ರತ್ನಾವಳಿಯಲ್ಲಿ ವಿದೂಷಕನು 'ಅಯ್ಯ ಮಿತ್ರನೇ ಕೋಪಿಸಿಕೊಳ್ಳಬೇಡ. ಆಕೆ ಇಲ್ಲಿಯೇ ಕದಳೀಗೃಹಕ್ಕೆ ಹೋಗಿರುವಳು' ಎಂದು ಹೇಳುವನು. ಇದರಿಂದ ತಾನು ವಿವೇಚನಮಾಡದೇ ಇಟ್ಟ ತಪ್ಪನ್ನು ತೊಳೆದುಕೊಳ್ಳಲಿಕ್ಕಾಗಿ ವಿದೂಷಕನು ರಾಜನಿಗೆ ಸಮಾಧಾನಮಾಡುವುದರಿಂದ ಇದು ಪರ್ಯುಪಾಸನವೆನಿಸಿದೆ. ಹೆಚ್ಚಿನ ಉತ್ಕರ್ಷವನ್ನು ತಿಳಿಸುವ ಮಾತೇ ಪುಷ್ಪವೆನಿಸುವುದು. ಹೂವಿನಂತೆ ಅದು ಚಿತ್ತವನ್ನು ಆಕರ್ಷಿಸುವುದರಿಂದ ಪುಷ್ಪವೆನಿಸಿದೆ. ರಾಜನು ವಿದೂಷಕನನ್ನು ಕೈಯಲ್ಲಿ ಹಿಡಿದುಕೊಳ್ಳಲು ಆಗ ವಿದೂಷಕನು 'ಅಯ್ಯ ಮಿತ್ರವರ್ಯ' ನೀನು ಅಪೂರ್ವವಾದ ವೈಭವವನ್ನು ಪಡೆದಿರುವೆ" ಎಂದು ಹೇಳಲು ಅದಕ್ಕೆ ರಾಜನು "ಸ್ನೇಹಿತನೆ, ನೀನು ಹೇಳಿದ್ದು ನಿಜ. "ಈ ನಾಯಿಕೆ ಸಾಕ್ಷಾತ್ ಲಕ್ಷ್ಮಿಯೇ, ಈಕೆಯ ಹಸ್ತವು ಪಾರಿಜಾತವೃಕ್ಷದ ಚಿಗುರೇ. ಹಾಗೆ ಇರದಿದ್ದರೆ ಬೆವರಿನ ನೆಪದಿಂದ ಅಮೃತರಸವು ಇದರಿಂದ ಹೇಗೆ ತೊಟ್ಟಿಕ್ಕುತ್ತಿತ್ತು' ಇಲ್ಲಿ ಸಾಗರಿಕೆಯ ಸೌಂದರ್ಯವೇ ಮೊದಲಾದ ಉತ್ಕರ್ಷವನ್ನು ತಿಳಿಸಿರುವುದರಿಂದ ಇದು ಪುಷ್ಪವೆನಿಸಿದೆ. ಕೇಳುವವರಿಗೆ ಕಠಿಣವಾಗಿ ತೋರುವ ಮಾತು ವಜ್ರವೆನಿಸುವುದು. ರಾಜನು 'ನಾನು ಇಲ್ಲಿ ಇದ್ದುದನ್ನು ನೀನು ಹೇಗೆ ತಿಳಿದೆ' ಎಂದು ಕೇಳಲು ಅದಕ್ಕೆ ಸುಸಂಗತೆಯು ! ನಿನ್ನನ್ನುಮಾತ್ರವೆ ಅಲ್ಲದೆ ಈ ಚಿತ್ರಫಲಕವಿದ್ದುದ್ದನ್ನೂ ತಿಳಿದೆನು. ಇದನ್ನು ದೇವಿಗೆ ತಿಳಿಸಲು ಹೋಗುವೆನು" ಎಂದು ಹೇಳುವಳು. ಇದರಿಂದ ದೇವಿಗೆ ತಿಳಿಸುವೆನು ಎಂದು ರಾಜನಿಗೆ ಆಕೆ ಹೇಳಿದ ಮಾತು ಎದುರಿಗೆ ನಿಷ್ಠುರವಾಗಿರುವುದರಿಂದ ಇದು ವಜ್ರವೆನಿಸಿದೆ. ಕೋಪಗೊಂಡವನನ್ನು ಪ್ರಸನ್ನನನ್ನಾಗಿ ಮಾಡುವುದೇ ಉಪನ್ಯಾಸವೆನಿಸುವುದು. ಒಬ್ಬನು ಪ್ರಸನ್ನನಾಗುವಂತೆ ಮಾಡುವುದೇ ಈ ಶಬ್ದದ ಅರ್ಥ. ಅಲ್ಲಿಯೇ ಸುಸಂಗತೆ' 'ಸ್ವಾಮಿ, ಸಂಶಯದಿಂದ ಫಲವಿಲ್ಲ. ನಾನೂ ಸಹ ಮಹಾರಾಣಿಯ ಅನುಗ್ರಹದಿಂದ ಇವರೊಡನೆ ವಿನೋದಗೊಂಡಿರುವೆ. ನನ್ನ ಕಿವಿಗೆ ಈ ಆಭರಣದಿಂದ ಆಗಬೇಕಾದದ್ದು ಏನಿದೆ? ಇದಕ್ಕಿಂತಲೂ ಈ ನಿನ್ನ ಪ್ರಸಾದವೇ ದೊಡ್ಡದು. ಈ ಚಿತ್ರವನ್ನು ಇಲ್ಲಿ ಬರೆದೆನು. ಅದಕ್ಕಾಗಿ ಈ ನನ್ನ ಪ್ರಿಯ ಸಖಿಯು ಕೋಪಗೊಂಡಿರುವಳು. ಇವಳನ್ನು ಮೊದಲು ಸಮಾಧಾನಮಾಡಬೇಕಾಗಿದೆ" ಎಂದು ಹೇಳುವಳು, ತನಗೆ ರಾಜನನ್ನು ಪ್ರಸನ್ನನನ್ನಾಗಿ ಆಕೆಯು ಮಾಡಿಕೊಂಡಿದ್ದರಿಂದ ಇದು ಉಪನ್ಯಾಸವೆಂಬ ಅಂಗವೆನಿಸಿದೆ. ಯುಕ್ತಿಯಿಂದ ಸಾಧಿಸಿದ ಅರ್ಥವೇ ಉಪನ್ಯಾಸವೆನಿಸುವುದೆಂದು ಕೆಲವರು ಹೇಳುತ್ತಾರೆ. ಯಾವುದಾದರೊಂದು ವಿಷಯವನ್ನು ಯುಕ್ತಿಯಿಂದ ಉಪಪಾದನಮಾಡಿದ್ದರಿಂದ ಇದು ಉಪನ್ಯಾಸವೆನಿಸು

ತ್ತದೆ. 'ಈ ಗರ್ಭದಾಸಿಯು ಹೆಚ್ಚು ಮಾತನಾಡುವಳು' ಈ ದಾಸಿಯು ಬಹಳ ನಿಕೃಷ್ಟಳಾದ್ದರಿಂದ ಹೆಚ್ಚು ಮಾತನಾಡುವಳೆಂದು ಯುಕ್ತಿಯಿಂದ ಉಪಪಾದನಮಾಡಿರುವ ಪ್ರಯುಕ್ತ ಇದು ಉಪನ್ಯಾಸವೆನಿಸಿದೆ. ಹೀಗೆ ಪ್ರತಿಮುಖಸಂಧಿಯ ಎಲ್ಲಾ ಅಂಗಗಳನ್ನೂ ತಿಳಿಸಿ ಕೊನೆಯ ಅಂಗವೆನಿಸಿದ ವರ್ಣಸಂಹಾರವನ್ನು ತಿಳಿಸುತ್ತಾನೆ. "ಬ್ರಾಹ್ಮಣರೇ ಮೊದಲಾದ ನಾಲ್ಕು ವರ್ಣದವರನ್ನು ಒಂದೆಡೆಗೆ ಸೇರಿಸುವುದೇ ವರ್ಣಸಂಹಾರವೆನಿಸುವುದು. ಮಹಾವೀರಚರಿತದ ಮೂರನೆಯ ಅಂಕದಲ್ಲಿ 'ಎಲೈ ಪರಶುರಾಮನೇ, ಇದು ಋಷಿಗಳ ಸಭೆ. ಇಲ್ಲಿರುವ ವೀರನು ಯುಧಾಜಿತನೆಂಬ ರಾಜನು. ಮಂತ್ರಿಗಳೊಡನೆ ಲೋಮಪಾದವೆಂಬ ರಾಜನೂ ಇಲ್ಲಿಗೆ ಬಂದಿರುವನು. ಯಾವಾಗಲೂ ಯಜ್ಞಗಳನ್ನಾಚರಿಸುತ್ತ ಬ್ರಹ್ಮವಾದಿ ಎನಿಸಿ ಜನಕನ ವಂಶೀಯರಿಗೆ ಪ್ರಭುವೆನಿಸಿ ಹಳಬನಾದ ಸೀರಧ್ವಜನೂ ಇಲ್ಲಿಯೇ ಇರುವನು. ಇವರೆಲ್ಲರೂ ನಿನ್ನಲ್ಲಿ ಶಾಂತಿಭಿಕ್ಷೆಗಾಗಿ ಬಂದಿರುವರು'' ಇಲ್ಲಿ ಋಷಿಗಳು, ಕ್ಷತ್ರಿಯರು, ವೈಶ್ಯರು, ಶೂದ್ರರು ಎಲ್ಲರೂ ಸೇರಿರುವರೆಂದು ತಿಳಿಸಿದ್ದರಿಂದ ಇದು ವರ್ಣಸಂಹಾರವೆಂಬ ಅಂಗವೆನಿಸಿದೆ. ಅಭಿನವಗುಪ್ತರು ವರ್ಣ ಎಂಬ ಶಬ್ದದಿಂದ ಪಾತ್ರಗಳನ್ನು ಗ್ರಹಿಸಿದ್ದಾರೆ. ನಾಟಕದಲ್ಲಿ ಬರುವ ವ್ಯಕ್ತಿಗಳು ಒಂದೆಡೆಗೆ ಸೇರುವುದೇ ವರ್ಣಸಂಹಾರವೆಂದು ಇಲ್ಲಿ ಅವರು ಹೇಳುತ್ತಾರೆ, ರತ್ನಾವಳಿಯ ದ್ವಿತೀಯಾಂಕದಲ್ಲಿ, 'ಅದಕ್ಕಿಂತಲೂ ಇದೇ ನನಗೆ ಹೆಚ್ಚಿನ ಪ್ರಸಾದ. ಕೈಯಲ್ಲಿ ಹಿಡಿದು ಆಕೆಗೆ ಸಮಾಧಾನಮಾಡು, ಎಂದು ಸುಸಂಗತೆಯು ಹೇಳಲು ಅದಕ್ಕೆ ರಾಜನು 'ಆಕೆ ಈಗ ಎಲ್ಲಿ ಇರುವಳು' ಎಂದು ಕೇಳುವನು. ಹೀಗೆ ಇಲ್ಲಿ ರಾಜ, ವಿದೂಷಕ, ಸಾಗರಿಕೆ, ಸುಸಂಗತೆ ಇಂತಹ ಪಾತ್ರಗಳೆಲ್ಲರೂ ಒಂದೆಡೆಗೆ ಸೇರುವುದರಿಂದ ಇದು ವರ್ಣಸಂಹಾರವೆನಿಸುವುದೆಂದು ಭರತನಾಟ್ಯಶಾಸ್ತ್ರವನ್ನು ವ್ಯಾಖ್ಯಾನಮಾಡಿರುವ ಅಭಿನವಗುಪ್ತರು ಹೇಳಿದ್ದಾರೆ.

ಅಥ ಗರ್ಭಾಂಗಾನಿ — ಅಭೂತಾಹರಣಂ ಮಾರ್ಗೋ ರೂಪೋದಾಹರಣೇ ಕ್ರಮಃ ।
ಸಂಗ್ರಹಶ್ಚಾನುಮಾನಂ ಚ ಪ್ರಾರ್ಥನಾಕ್ಷಿಪ್ತಿರೇವ ಚ ॥
ತೋಟಕಾಧಿಬಲೋದ್ವೇಗಾ ಗರ್ಭೇ ಸ್ಯುರ್ವಿದ್ರವಸ್ತಥಾ ।

ತತ್ರ—ವ್ಯಾಜಾಶ್ರಯಂ ವಾಕ್ಯಂ ಅದ್ಭುತಾಹರಣಂ ಮತಮ್ ।

ಯಥಾ ಅಶ್ವತ್ಥಾಮಾಂಕೇ—

ಅಶ್ವತ್ಥಾಮಾ ಹತ ಇತಿ ಪೃಥಾಸೂನುನಾ ಸ್ಪಷ್ಟಮುಕ್ತ್ವಾ ।
ಸ್ವೈರಂ ಶೇಷೇ ಗಜ ಇತಿ ಪುನರ್ವ್ಯಾಹೃತಂ ಸತ್ಯವಾಚಾ ॥

ತತ್ತ್ವಾರ್ಥಕಥನಂ ಮಾರ್ಗಃ ರೂಪಂ ವಾಚ್ಯಂ ವಿತರ್ಕವತ್ ।

ಯಥಾ ಚಂಡಕೌಶಿಕೇ ರಾಜಾ—ಭಗವನ್ !

ಗೃಹ್ಯತಾಮರ್ಜಿತಮಿದಂ ಭಾರ್ಯಾತನಯವಿಕ್ರಯಾತ್ ।
ಶೇಷಸ್ಯಾರ್ಥೇ ಕರಿಷ್ಯಾಮಿ ಚಂಡಾಲೇಽಪ್ಯಾತ್ಮವಿಕ್ರಯಮ್ ॥

ವಿತರ್ಕವದ್ವಾಕ್ಯಂ ಯಥಾ ರತ್ನಾವಲ್ಯಾಮ್—ರಾಜಾ

ಮನಃ ಪ್ರಕೃತ್ಯೈವ ಚಲಂ ದುರ್ಲಕ್ಷ್ಯಂ ಚ ತಥಾಪಿ ಮೇ ।
ಕಾಮೇನೈತತ್ಕಥಂ ವಿದ್ಧಂ ಸಮಂ ಸರ್ವೈಃ ಶಿಲೀಮುಖೈಃ ॥

ಉದಾಹರಣಮುತ್ಕರ್ಷಯುಕ್ತಂ ವಚನಮುಚ್ಯತೇ ।

ಯಥಾ ಅಶ್ವತ್ಥಾಮಾಂಕೇ—

ಯೋ ಯಃ ಶಸ್ತ್ರಂ ಬಿಭರ್ತಿ ಸ್ವಭುಜಗುರುಮದಾತ್ಪಾಂಡವೀನಾಂ ಚಮೂನಾಂ
ಯೋ ಯಃ ಪಾಂಚಾಲಗೋತ್ರೇ ಶಿಶುರಧಿಕವಯಾ ಗರ್ಭಶಯ್ಯಾಂ ಗತೋ ವಾ
ಯೋ ಯಸ್ತತ್ಕರ್ಮಸಾಕ್ಷೀ ಚರತಿ ಮಯಿ ರಣೇ ಯಶ್ಚ ಯಶ್ಚ ಪ್ರತೀಪಃ ।
ಕ್ರೋಧಾಂಧಸ್ತಸ್ಯ ತಸ್ಯ ಸ್ವಯಮಿಹ ಜಗತಾಮಂತಕಸ್ಯಾಂತಕೋಽಹಮ್ ॥

ಭಾವತತ್ತ್ವೋಪಲಬ್ಧಿಸ್ತು ಕ್ರಮಃ ಸ್ಯಾತ್ಸಂಗ್ರಹಃ ಪುನಃ ।
ಸಾಮದಾನಾರ್ಥಸಂಪನ್ನಃ ಲಿಂಗಾದೂಹೋಽನುಮಾನತಾ ॥

ಯಥಾ ಶಾಂಕುಂತಲೇ ಕ್ರಮಃ—"ರಾಜಾ—ಸ್ಥಾನೇ ವಿಸ್ಮೃತನಿಮೇಷೇಣ ಚಕ್ಷುಷಾ ಪ್ರಿಯಾಮವಲೋಕಯಾಮಿ. ತಥಾಹಿ—

ಉನ್ನಮಿತೈಕಭ್ರೂಲತಮಾನನಮಸ್ಯಾಃ ಪದಾನಿ ರಚಯಂತ್ಯಾಃ ।
ಪುಲಕಾಂಚಿತೇನ ಕಥಯತಿ ಮಯ್ಯನುರಾಗಂ ಕಪೋಲೇನ ॥

ಯಥಾ ರತ್ನಾವಳ್ಯಾಂ—ಸಂಗ್ರಹಃ "ರಾಜಾ—ಸಾಧು ವಯಸ್ಯ ! ಇದಂ ತೇ ಪಾರಿತೋಷಿಕಮ್. (ಇತಿ ಕಟಕಂ ದದಾತಿ).

ಜಾನಕೀರಾಘವೇ ನಾಟಕೇ ಊಹೋಯಥಾ "ರಾಮಃ—

ಲೀಲಾಗತೈರಪಿ ತರಂಗಯತೋ ಧರಿತ್ರೀಮಾಲೋಕನೈರ್ನಮಯತೋ
ಜಗತಾಂ ಶಿರಾಂಸಿ ।
ತಸ್ಯಾನುಮಾಪಯತಿ ಕಾಂಚನಕಾಂತಿಗೌರಕಾಯಸ್ಯ ಸೂರ್ಯತನ
ಯತ್ವಮಧೈರ್ಯತಾಂಚ ॥

ರತಿಹರ್ಷೋತ್ಸವಾನಾಂ ತು ಪ್ರಾರ್ಥನಂ ಪ್ರಾರ್ಥನಾ ಭವೇತ್ ।

ಯಥಾ ರತ್ನಾವಳ್ಯಾಂ "ಪ್ರಿಯೇ ಸಾಗರಿಕೆ"

ಶೀತಾಂಶುರ್ಮುಖಮುತ್ಪಲೇ ತವ ದೃಶೌ ಪದ್ಮಾನುಕಾರೌ ಕರೌ
ರಂಭಾಸ್ತಂಭನಿಭಂ ತಥೋರುಯುಗಳಂ ಬಾಹೂ ಮೃಣಲೋಪಮೌ ।
ಇತ್ಯಾಹ್ಲಾದಕರಾಖಿಲಾಂಗಿ ! ರಭಸಾನ್ನಿಶ್ಯಂಕಮಾಲಿಂಗ್ಯ ಮಾಂ
ಅಂಗಾನಿ ತ್ವಮನಂಗತಾಪವಿಧುರಾಣ್ಯೇಹ್ಯೇಹಿ ನಿರ್ವಾಪಯ ॥

ಇದಂ ಚ ಪ್ರಾರ್ಥನಾಖ್ಯಮಂಗಂ ಯನ್ಮತೇ ನಿರ್ವಹಣೇ ಇಹ ಭೂತಾವಸರತ್ವಾತ್ ಪ್ರಶಸ್ತಿನಾಮಾಂಗಂ ನಾಸ್ತಿ ತನ್ಮತಾನುಸಾರೇಣೋಕ್ತಮ್. ಅನ್ಯಥಾ ಅಂಗಾನಾಂ ಪಂಚಷಷ್ಠಿಸಂಖ್ಯತ್ವಪ್ರಸಂಗಾತ್.

ರಹಸ್ಯಾರ್ಥಸ್ಯ ತದ್ಭೇದಃ ಕ್ಷಿಪ್ತಿಃ ಸ್ಯಾತ್ ತ್ರೋಟಕಂ ಪುನಃ ।
ಸಂರಬ್ಧವಾಕ್ ಅಧಿಬಲಮಭಿಸಂಧಿಚ್ಛಲೇನ ಯಃ ॥

ಯಥಾ ಅಶ್ವತ್ಥಾಮಾಂಕೇ ಉದ್ಭೇದಃ—
ಏಕಸ್ಯೈವ ವಿಪಾಕೋಽಯಂ ದಾರುಣೋ ಭುವಿ ವರ್ತತೇ।
ಕೇಶಗ್ರಹೇ ದ್ವಿತೀಯೇಽಸ್ಮಿನ್ ನೂನಂ ನಿಃಶೇಷಿತಾ ಪ್ರಜಾಃ॥

ಯಥಾ ಚಂಡಕೌಶಿಕೇ ತ್ರೋಟಿಕಂ—ಕೌಶಿಕಃ ಆಃ! ಪುನಃ ಕಥಮದ್ಯಾಪಿ ನ ಸಂಭೂತಾಃ ಸ್ವರ್ಣದಕ್ಷಿಣಾಃ!

ಯಥಾ ರತ್ನಾವಳ್ಯಾಂ ಅಧಿಬಲಮ್-"ಕಾಂಚನಮಾಲಾ-ಭರ್ತ್ರಿ! ಇಯಂ ಸಾ ಚಿತ್ರಶಾಲಿಕಾ ತದ್ಯಾವದ್ವಸಂತಕಸ್ಯ ಸಂಜ್ಞಾಂ ಕರೋಮಿ" ಇತ್ಯಾದಿ.

ನೃಪಾದಿಜನಿತಾ ಭೀತಿರುದ್ವೇಗಃ ಪರಿಕೀರ್ತಿತಃ।

ಯಥಾ ವೇಣ್ಯಾಮ್— ಪ್ರಾಪ್ತಾವೇಕರಥಾರೂಢೌ ಪೃಚ್ಛಂತೌ ತ್ವಾಮಿತಸ್ತತಃ।
ಸ ಕರ್ಣಾರಿಃ ಸ ಚ ಕ್ರೂರೋ ವೃತಕರ್ಮಾ ವೃಕೋದರಃ॥

ಶಂಕಾಭಯತ್ರಾಸಕೃತಃ ಸಂಭ್ರಮೋ ವಿದ್ರವೋ ಮತಃ।

ಯಥಾ— ಕಾಲಾಂತಕಕರಾಲಾಸ್ಯಂ ಕ್ರೋಧೋದ್ಭೂತಂ ದಶಾನನಮ್।
ವಿಲೋಕ್ಯ ವಾನರಾನೀಕೇ ಸಂಭ್ರಮಃ ಕೋಽಪ್ಯಜಾಯತ॥

ಗರ್ಭಸಂಧಿಯ ಅಂಗಗಳನ್ನು ತಿಳಿಸುತ್ತಾನೆ. ಅಭೂತಾಹರಣ, ಮಾರ್ಗ, ರೂಪ, ಉದಾಹರಣ, ಕ್ರಮ, ಸಂಗ್ರಹ, ಅನುಮಾನ, ಪ್ರಾರ್ಥನೆ, ಆಕ್ಷಿಪ್ತಿ, ತೋಟಕ, ಅಧಿಬಲ, ಉದ್ವೇಗ, ವಿದ್ರವ ಇವಿಷ್ಟು ಗರ್ಭಸಂಧಿಯ ಅಂಗಗಳೆನಿಸಿವೆ. ಈ ಹದಿ ಮೂರು ಅಂಗಗಳಲ್ಲಿ ಮೊದಲನೆಯ ಅಭೂತಾಹರಣವೆಂಬುವನ್ನು ಈಗ ವಿವರಿಸುತ್ತಾನೆ. ಅಸತ್ಯವಾದ ಅಂಶವನ್ನು ಚಮತ್ಕಾರವಾದ ರೀತಿಯಲ್ಲಿ ಪ್ರಕಟಿಸುವುದೇ ಇದು. ಕಪಟ ದಿಂದ ಕೂಡಿದ ಮಾತನ್ನಾಡುವುದೇ ಅಭೂತಾಹರಣವೆನಿಸುವುದು. ಅಶ್ವತ್ಥಾಮಾಂಕ ದಲ್ಲಿ (ವೇಣೀಸಂಹಾರದ ಮೂರನೆಯ ಅಂಕ) "ಅಶ್ವತ್ಥಾಮನು ಸತ್ತನು ಎಂದು ಯುಧಿಷ್ಠಿರನು ಸ್ಪಷ್ಟವಾಗಿ ಎಲ್ಲರಿಗೂ ಕೇಳಿಸುವಂತೆ ಹೇಳಿ ಕೊನೆಯಲ್ಲಿ ಮೆಲ್ಲಗೆ ಬೇರೆ ಯಾರಿಗೂ ಕೇಳಿಸದಂತೆ ಆ ಹೆಸರಿನ ಆನೆಯು ಸತ್ತಿತೆಂದು ಸತ್ಯವಾದ ಮಾತಿನಿಂದ ತಿಳಿಸಿದನು" ಇಲ್ಲಿ ಮಾತಿನಲ್ಲಿ ವಂಚನೆಯಿರುವುದರಿಂದ ಹೀಗೆ ತಿಳಿಸಿದ್ದು ಅಭೂತಾ ಹರಣವೆನಿಸಿದೆ.

ಯಥಾರ್ಥವಾಗಿ ಮಾಡಬೇಕಾದ್ದನ್ನು ತಿಳಿಸುವುದೇ ಮಾರ್ಗವೆನಿಸುವುದು. ಧಾರ್ಮಿಕರು ಸತ್ಯವಾದ್ದೆಂದು ಒಂದು ವಿಷಯವನ್ನು ತಿಳಿಸುವುದೇ ಮಾರ್ಗ. ಚಂಡಕೌ ಶಿಕದಲ್ಲಿ ರಾಜನು "ಸ್ವಾಮಿ," ಈ ಹೆಂಡತಿ ಮಗ ಇವರನ್ನು ಮಾರಾಟಮಾಡಿದ್ದ ರಿಂದ ಬಂದಿರುವ ಈ ಹಣವನ್ನು ದಯವಿಟ್ಟು ಸ್ವೀಕರಿಸಿ. ಉಳಿದ ಹಣವನ್ನು ತೀರಿಸಲು ಚಂಡಾಲನಲ್ಲಿಯಾದರೂ ನನ್ನನ್ನು ಮಾರಿಕೊಳ್ಳುವೆನು." ಇಲ್ಲಿ ಹರಿಶ್ಚಂದ್ರನು ತನ್ನ ಕರ್ತವ್ಯ ಯಾವುದೆಂಬುದನ್ನು ತಿಳಿಸಿರುವುದರಿಂದ ಇದು ಮಾರ್ಗವೆನಿಸಿದೆ. ವಿಚಾರದಿಂದ ಕೂಡಿದ ಮಾತು ರೂಪವೆನಿಸುತ್ತದೆ. ರತ್ನಾವಳಿಯಲ್ಲಿ ರಾಜನು "ಮನಸ್ಸು ಸಹಜವಾಗಿ ಚಂಚಲವಾದುದು. ಆದ್ದರಿಂದಲೇ ಅದು ಯಾರಿಗೂ ಸಿಕ್ಕುವಂತಹದಲ್ಲ. ಆದರೂ

ಮನ್ಮಥನು ನನ್ನ ಈ ಮನಸ್ಸನ್ನು ತನ್ನ ಬಾಣಗಳಿಂದ ಒಂದೇ ಕಾಲದಲ್ಲಿ ಹೇಗೆ ಹಿಂಸಿಸುತ್ತಿರುವನು!'' ಇಲ್ಲಿ ರಾಜನು ತನ್ನ ಮನಸ್ಸಿನ ಬಗ್ಗೆ ವಿಚಾರಮಾಡಿ ತಿಳಿಸಿರುವುದರಿಂದ ಇದು ರೂಪವೆನಿಸಿದೆ.

ತನಗಾಗಲೀ ಇತರರಿಗಾಗಲೀ ಉತ್ಕರ್ಷವನ್ನು ಸೂಚಿಸುವ ಮಾತು ಉದಾಹರಣವೆನಿಸುತ್ತದೆ. ಅಶ್ವತ್ಥಾಮಾಂಕದಲ್ಲಿ ಅಶ್ವತ್ಥಾಮನು ಹೀಗೆ ಹೇಳುತ್ತಾನೆ. ''ಪಾಂಡವರ ಸೈನ್ಯದಲ್ಲಿ ಭುಜಬಲದಿಂದಲೂ ಅಭಿಮಾನದಿಂದಲೂ ಯಾವನು ಶಸ್ತ್ರವನ್ನು ಹಿಡಿದಿರುವನೋ, ಪಾಂಚಾಲವಂಶದಲ್ಲಿ ಹುಡುಗನೋ ಯುವಕನೋ ಅಥವಾ ಗರ್ಭದಲ್ಲಿರುವ ಗಂಡುಗೂಸೋ ಯಾರಾದರೂ ಆಗಲೀ, ಯಾವಯಾವನು ನನ್ನ ತಂದೆಯ ವಧವನ್ನು ಕಣ್ಣಿನಿಂದ ನೋಡಿದನೋ, ಹಾಗೆಯೇ ನಾನು ಯುದ್ಧಭೂಮಿಯಲ್ಲಿ ಸಂಚರಿಸುತ್ತಿರಲು ಯಾವಯಾವನು ವಿರುದ್ಧವಾಗಿರುವನೋ ಅಂತವರೆಲ್ಲರಿಗೂ ನಾನು ಕೋಪಗೊಂಡು ಹಿರಿಯ ಯಮನೇ ಆಗಿದ್ದೇನೆ." ಹೀಗೆ ಅವನು ಹೇಳಿರುವುದರಿಂದ ತನ್ನ ವೀರ್ಯದ ಉತ್ಕರ್ಷವನ್ನು ಸೂಚಿಸಿದ ಪ್ರಯುಕ್ತ ಇದು ಉದಾಹರಣವೆನಿಸಿದೆ.

ಒಬ್ಬನು ಆಚರಿಸುತ್ತಿರುವ ಚೇಷ್ಟೆಯ ಮರ್ಮವನ್ನು ತಿಳಿಯುವುದೇ ಕ್ರಮವೆನಿಸ್ಸುವುದು. ಶಾಕುಂತಲದಲ್ಲಿ "ರಾಜನು ರೆಪ್ಪೆ ಹೊಡೆದ ಕಣ್ಣಿನಿಂದ ಪ್ರೇಯಸಿಯನ್ನು ನಾನು ನೋಡುತ್ತಿರುವುದು. ಯುಕ್ತವೇ ಆಗಿದೆ; ಯಾಕೆಂದರೆ, ಸುಬಂತವೂ ಮತ್ತು ತಿಙಂತವೂ ಆದ ಪದಗಳನ್ನು ನನಗೆ ಬರೆಯಲಿಕ್ಕಾಗಿ ರಚಿಸುತ್ತಲಿರುವ ಈ ಶಕುಂತಲೆಯ ಮುಖವು ಹುಬ್ಬನ್ನು ಮೇಲಕ್ಕೆ ಎತ್ತಿಕೊಂಡು ರೋಮಾಂಚಗೊಂಡ ಕೆನ್ನೆಯಿಂದ ನನ್ನಲ್ಲಿ ಅನುರಾಗವನ್ನು ಸೂಚಿಸುತ್ತಲಿದೆ.'' ಇಲ್ಲಿ ಪದಗಳ ಜೋಡಣೆ ಎಂಬ ಚೇಷ್ಟೆಯು ಆಕೆಯಲ್ಲಿದ್ದ ಅನುರಾಗವೆಂಬ ಮರ್ಮವನ್ನು ತಿಳಿಸುವುದರಿಂದ ಇದು ಕ್ರಮವೆನಿಸಿದೆ. ಒಳ್ಳೆಯ ಮಾತನ್ನಾಡುತ್ತಲೇ ಕೊಡುವ ದಾನದಿಂದ ಹಣವನ್ನು ಗಳಿಸುವುದೇ ಸಂಗ್ರಹವೆನಿಸುವುದು. ರತ್ನಾವಳಿಯಲ್ಲಿ ರಾಜನು–'ಮಿತ್ರನೇ, ನೀನು ಮಾಡಿದ್ದು ಒಳ್ಳೆಯದಾಯಿತು–ಇಗೋ ಇದು ನಿನಗೆ ಅದಕ್ಕಾಗಿ ಮಾಡುವ ಬಹುಮಾನ' ಎಂದು ಹೇಳುತ್ತ ಕೈಕಡಗವನ್ನು ಕೊಡುತ್ತಾನೆ. ಇಲ್ಲಿ ಒಳ್ಳೆಯ ಮಾತನ್ನಾಡುತ್ತಲೇ ರಾಜನು ಕೈಕಡಗವನ್ನು ಕೊಟ್ಟಿದ್ದರಿಂದ ವಿದೂಷಕನು ಅದನ್ನು ತೆಗೆದುಕೊಳ್ಳಲು ಇದು ಸಂಗ್ರಹವೆನಿಸಿದೆ. ಸಾಧಿಸಬೇಕಾಗಿರುವ ಫಲವನ್ನು ಸಾಧಿಸಲು ಕಾರಣವಿದೆ ಎಂದು ಊಹಿಸುವುದೇ ಅನುಮಾನವೆನಿಸಿದೆ. ಜಾನಕೀರಾಘವ ನಾಟಕದಲ್ಲಿ ರಾಮನು "ಭೂಮಿಯನ್ನೂ ಸಹ ನಡುಗಿಸುವ ಮಂದಗಮನಗಳು, ಜಗತ್ತಿನ ಜನರ ತಲೆಗಳನ್ನು ಬಗ್ಗಿಸುವ ಕಣ್ಣಿನ ನೋಟಗಳು ಸುವರ್ಣದ ಬಣ್ಣದಂತೆ ಬಿಳುಪಾದ ದೇಹವಿರುವ ಆ ಲಕ್ಷ್ಮಣನು ಸೂರ್ಯವಂಶದಲ್ಲಿ ಹುಟ್ಟಿದವನೆಂಬುದನ್ನೂ, ಬೇರೆಯವರಿಂದ ಅವಮಾನವನ್ನು ಹೊಂದುವವನಲ್ಲವೆಂಬುದನ್ನೂ ತಿಳಿಸಿಕೊಡುತ್ತವೆ." ಇಲ್ಲಿ ಭೂಮಿಯನ್ನು ನಡುಗಿಸುವಿಕೆ, ಜಗತ್ತಿನ ಜನರ ಶಿರಸ್ಸುಗಳನ್ನು ಬಗ್ಗಿಸುವಿಕೆ ಇವುಗಳಿಂದ ಅವನು ಸೂರ್ಯನ ಮಗನೆಂದೂ ಅಜೇಯನೆಂದೂ ಅರಿವಾಗುವುದರಿಂದ ಇದು ಅನುಮಾನವೆನಿಸಿದೆ.

ಸುರತ, ಪ್ರೀತಿ, ಉತ್ಸವ ಇವುಗಳನ್ನು ನಡೆಸಲಿಕ್ಕಾಗಿ ಯೋಚಿಸುವುದೇ ಪ್ರಾರ್ಥನೆ ಎನಿಸುತ್ತದೆ. ರತ್ನಾವಳಿಯಲ್ಲಿ "ಪ್ರಿಯೆ ಸಾಗರಿಕೆ, ನಿನ್ನ ಮುಖವು ಚಂದ್ರನೇ ಆಗಿದೆ. ನಿನ್ನ ಕಣ್ಣುಗಳು ಕನ್ನೈದಿಲೆಗಳೇ ಆಗಿವೆ. ಕೈಗಳು ಕಮಲಗಳಿಗೆ ಸದೃಶವೆನಿಸಿವೆ. ನಿನ್ನ ತೊಡೆಗಳು ರತ್ನಸ್ತಂಭಗಳಿಗೆ ಸಮಾನವಾಗಿವೆ. ತೋಳುಗಳು ತಾವರೆ ದಂಟಿಗೆ ಸಮವೆನಿಸಿವೆ. ಹೀಗೆ ಅವಯವಗಳೆಲ್ಲವೂ ಸಂತೋಷಪಡಿಸುತ್ತಿರುವುದರಿಂದ ನೀನು ಬೇಗನೆ ಬಂದು ನನ್ನನ್ನು ಆಲಿಂಗಿಸಿ ನನ್ನ ಅವಯವಗಳಲ್ಲಿ ಅಂಟಿಕೊಂಡಿರುವ ಕಾಮಸಂತಾಪವನ್ನು ಪರಿಹರಿಸು" ಎಂದು ವತ್ಸರಾಜನು ದೇವಿಯಲ್ಲಿ ಪ್ರಾರ್ಥಿಸುವನು. ಇಲ್ಲಿ ಅವನು ಸುರತಕ್ಕಾಗಿ ಪ್ರಾರ್ಥಿಸಿರುವುದರಿಂದ ಪ್ರಾರ್ಥನೆ ಎನಿಸಿದೆ. ಹರ್ಷ ಮತ್ತು ಉತ್ಸವಗಳಿಗಾಗಿ ಮಾಡಿರುವ ಪ್ರಾರ್ಥನೆಗೆ ಉದಾಹರಣವನ್ನು ಹೀಗೆಯೇ ಊಹಿಸಿಕೊಳ್ಳುವುದು. ನಿರ್ವಹಣಸಂಧಿಯಲ್ಲಿ ಪ್ರಶಸ್ತಿ ಎಂಬ ಒಂದು ಅಂಗವನ್ನು ತಿಳಿಸಿರುವುದರಿಂದ ಇಲ್ಲಿ ಪ್ರಾರ್ಥನೆ ಎಂಬ ಒಂದು ಅಂಗವನ್ನು ಬೇರೆಯವರ ಅಭಿಪ್ರಾಯದಂತೆ ತಿಳಿಸಲಾಗಿದೆ. ಇಲ್ಲವಾದರೆ ಅಂಗಗಳ ಸಂಖ್ಯೆ ಅರವತ್ತೈದು ಆಗಬೇಕಾಗುತ್ತದೆ. ಅಂಗಗಳು ಅರವತ್ತನಾಲ್ಕು ಇವೆ ಎಂದು ಮುಂದೆ ತಿಳಿಸಿದೆ. ಆದ್ದರಿಂದ ಗರ್ಭಸಂಧಿಯಲ್ಲಿ ಇವನ್ನು ಸೇರಿಸುವ ಬಗ್ಗೆ ಭಿನ್ನಾಭಿಪ್ರಾಯವಿದೆ.

ಗೋಪ್ಯವಾದ ವಿಷಯವನ್ನು ಪ್ರಕಾಶಪಡಿಸುವುದೇ ಕ್ಷಿಪ್ತಿ ಎನಿಸುವುದು. ಅಶ್ವತ್ಥಾಮಾಂಕದಲ್ಲಿ "ದ್ರೌಪದಿಯ ಕೂದಲನ್ನು ಹಿಡಿದು ಎಳೆದಿದ್ದರ ಪರಿಣಾಮವಾಗಿ ಈ ಯುದ್ಧದಲ್ಲಿ ಇಷ್ಟೊಂದು ಜನರ ಕೊಲೆಯಾಯಿತು. ಈಗ ಧೃಷ್ಟದ್ಯುಮ್ನನು ದ್ರೋಣನ ಕೂದಲನ್ನು ಹಿಡಿದು ಎಳೆದಿದ್ದರಿಂದ ನಿಶ್ಚಯವಾಗಿಯೂ ಲೋಕದ ಪ್ರಜೆಗಳೆಲ್ಲರೂ ಪೂರ್ತಿಯಾಗಿ ನಾಶವಾಗುವರು" ಹೀಗೆ ಅಶ್ವತ್ಥಾಮನು ಹೇಳುವುದರಿಂದ ದೈವಸಂಕಲ್ಪದಂತೆ ಸಮಸ್ತಪ್ರಜೆಗಳೂ ನಾಶವಾಗಲಿರುವರೆಂಬ ರಹಸ್ಯಾರ್ಥವನ್ನೂ ಬಾಯಿಂದ ಪ್ರಕಟಿಸಿದ ಪ್ರಯುಕ್ತ ಇದು ಉದ್ವೇಗವೆನಿಸಿದೆ. ಕೋಪಗೊಂಡವನು ತನ್ನ ಕೋಪವನ್ನು ತಿಳಿಸುವ ಮಾತು ತ್ರೋಟಕವೆನಿಸುತ್ತದೆ. ಚಂಡಕೌಶಿಕದಲ್ಲಿ ಕೌಶಿಕನು "ನನಗೆ ಬರಬೇಕಾದ ಸುವರ್ಣದಕ್ಷಿಣೆಯನ್ನು ಇನ್ನೂ ನೀನು ಕೊಟ್ಟಿಲ್ಲ" ಎಂದು ತಿಳಿಸುವನು. ಇಲ್ಲಿ ವಿಶ್ವಮಿತ್ರನ ಕ್ರೋಧವನ್ನು ಪ್ರಕಟಿಸುವುದರಿಂದ ಈ ಮಾತು ತ್ರೋಟಕವೆನಿಸಿದೆ. ಛಲದಿಂದ ಅಭಿಪ್ರಾಯವನ್ನು ತಿಳಿಯುವುದು ಅಧಿಬಲವೆನಿಸುತ್ತದೆ. ಬುದ್ಧಿಬಲದ ಆಧಾರದಮೇಲೆ ತಿಳಿಯುವುದೇ ಅಧಿಬಲ. ರತ್ನಾವಳಿಯಲ್ಲಿ ಕಾಂಚನಮಾಲೆಯು, "ದೇವಿ; ಇದೇ ಆ ಚಿತ್ರಶಾಲೆ. ಅದರೊಳಗೆ ಇರುವ ವಸಂತಕನಿಗೆ ನೀನು ಬಂದಿರುವುದನ್ನು ತಿಳಿಸುತ್ತೇನೆ." ಇಲ್ಲಿ ಕಾಂಚನಮಾಲೆ ಮತ್ತು ವಾಸವದತ್ತೆ ಇವರಿಬ್ಬರೂ ಛಲದಿಂದ ರಾಜನ ಮತ್ತು ವಿದೂಷಕನ ಅಭಿಪ್ರಾಯವನ್ನು ತಿಳಿಯುವುದರಿಂದ ಇದು ಅಧಿಬಲವೆನಿಸಿದೆ. ರಾಜನೇ ಮೊದಲಾದವರಿಂದ ಹುಟ್ಟುವ ಭಯವೆ ಉದ್ವೇಗವೆನಿಸುವುದು—ವೇಣೀಸಂಹಾರದಲ್ಲಿ "ಕರ್ಣನ ಶತ್ರುವೆನಿಸಿದ ಅರ್ಜುನ, ಹುಲಿಯಂತೆ ಕ್ರೂರಕರ್ಮಗಳನ್ನು ಆಚರಿಸುವ ಭೀಮಸೇನ ಇವರು 'ದುರ್ಯೋಧ

ನನು ಎಲ್ಲಿದ್ದಾನೆ' ಎಂದು ಎಲ್ಲಾ ಕಡೆಗಳಲ್ಲೂ ಕೇಳುತ್ತ ಒಂದೇ ರಥದಲ್ಲಿ ಕುಳಿತು ಬರುತ್ತಿರುವರು "ಎಂದು ಹೇಳಿರುವುದರಿಂದ ದುರ್ಯೋಧನನಿಗೆ ಶತ್ರುವೆನಿಸಿದ ಭೀಮಾರ್ಜುನರಿಂದ ಉಂಟಾದ ಭಯವನ್ನು ತಿಳಿಸಿರುವುದರಿಂದ ಇದು ಉದ್ವೇಗವೆನಿಸಿದೆ. ಅನಿಷ್ಟವನ್ನು ಊಹಿಸುವ ಶಂಕೆ, ಮುಂದೆ ಅನಿಷ್ಟವಾಗುವುದೆಂಬ ಭಯ ಇವುಗಳಿಂದ ಚಿತ್ತವು ಚಲಿಸುವುದೇ ವಿದ್ರವವೆನಿಸುವುದು. "ಪ್ರಳಯಕಾಲದ ಯಮನಂತೆ ಭಯಂಕರವಾದ ಮುಖವಿದ್ದು ಕ್ರೋಧದಿಂದ ದೇಹವನ್ನು ಅಳ್ಳಾಡಿಸುತ್ತಿರುವ ರಾವಣನನ್ನು ನೋಡಿ ಕಪಿಸೈನ್ಯದಲ್ಲಿ ಒಂದು ಬಗೆಯ ಸಂಭ್ರಮ ಉಂಟಾಯಿತು " ಇಲ್ಲಿ ಕಪಿಸೈನ್ಯಕ್ಕೆ ಶಂಕೆ ಮತ್ತು ತ್ರಾಸಗಳಿಂದ ಗಾಬರಿಯೂದ ಪ್ರಯುಕ್ತ ಇದು ವಿದ್ರವವೆನಿಸಿದೆ.

ಅಥ ವಿಮರ್ಷಾಂಗಾನಿ-ಅಪವಾದೋಽಥ ಸಂಫೇಟೋ ವ್ಯವಸಾಯೋ ದ್ರವೋ ದ್ಯುತಿಃ।

ಶಕ್ತಿಃ ಪ್ರಸಂಗಃ ಖೇದಶ್ಚ ಪ್ರತಿಷೇಧೋ ವಿರೋಧನಮ್ ।

ಪ್ರರೋಚನಾ ವಿಮರ್ಶಂ ಸ್ಯಾದಾದಾನಂ ಛಾದನಂ ತಥಾ ॥

ದೀಷಪ್ರಖ್ಯಾಽಪವಾದಃ ಸ್ಯಾತ್ ಸಂಫೇಟೋ ರೋಷಭಾಷಣಮ್ ।

ಯಥಾ ವೇಣ್ಯಾಂ--" ಯುಧಿಷ್ಠಿರಃ—ಪಾಂಚಾಲಕ ! ಕ್ವಚಿದಾಸಾದಿತಾ ತಸ್ಯ ದುರಾತ್ಮನಃ ಕೌರವ್ಯಾಪಸದಸ್ಯ ಪದವೀ ? ಪಾಂಚಾಲಕಃ—ನ ಕೇವಲಂ ಪದವೀ ಸ ಏವ ದುರಾತ್ಮ ದೇವೀಕೇಶಪಾಶಸ್ಪರ್ಶಪಾತಕಪ್ರಧಾನಹೇತುರುಪಲಬ್ಧಃ.''

ಸಂಫೇಟೋ ಯಥಾ ತತ್ರೈವ—" ರಾಜಾ-ಅರೇ ರೇ ಮರುತ್ತನಯ। ವೃದ್ಧಸ್ಯ ರಾಜ್ಞಃ ಪುರತೋ ನಿಂದಿತಮಪ್ಯಾತ್ಮಕರ್ಮ ಶ್ಲಾಘಸೇ. ಶೃಣು.

ಕೃಷ್ಟಾ ಕೇಶೇಷು ಭಾರ್ಯಾ ತವ ತತ್ರ ಚ ಪಶೋಸ್ತಸ್ಯ ರಾಜ್ಞಸ್ತಯೋರ್ವಾ
ಪ್ರತ್ಯಕ್ಷಂ ಭೂಪತೀನಾಂ ಮಮ ಭುಜಗಪತೇರಾಜ್ಞಯಾ ದ್ಯೂತದಾಸೀ ।
ತಸ್ಮಿನ್ ವೈರಾನುಬಂಧೇ ವದ ಕಿಮಪಕೃತಂ ತೈರ್ಹತಾ ಯೇ ನರೇಂದ್ರಾ
ಬಾಹ್ವೋರ್ವೀರ್ಯಾತಿಭಾರದ್ರವಿಣಗುರುಮದಂ ಮಾಮಜಿತ್ವೈವ ದರ್ಪಃ ॥

ಭೀಮಃ (ಕ್ರೋಧಾತ್) ಆಃ ಪಾಪ ! ರಾಜಾ—ಆಃ ಪಾಪ !" ಇತ್ಯಾದಿ.

ವ್ಯವಸಾಯಶ್ಚ ವಿಜ್ಞೇಯಃ ಪ್ರತಿಜ್ಞಾ ಹೇತುಸಂಭವಃ।

ಯಥಾ ತತ್ರೈವ ಭೀಮಃ-ನಿಹತಾಶೇಷಕೌರವ್ಯಃ ಕ್ಷೀಬೋ ದುಶ್ಶಾಸನಾಸೃಜಾ ।
ಭಂಕ್ತಾ ದುರ್ಯೋಧನಸ್ಯೋರ್ವೋರ್ಭೀಮೋಽಯಂ ಶಿರಸಾ ನತಃ ।

ದ್ರವೋ ಗುರುವ್ಯತಿಕ್ರಾಂತಿಃ ಶೋಕಾವೇಗಾದಿಸಂಭವಾ ।

ಯಥಾ ತತ್ರೈವ-" ಯುಧಿಷ್ಠಿರಃ-ಭಗವನ್ ಕೃಷ್ಣಾಗ್ರಜ! ಸುಭದ್ರಾಭ್ರಾತಃ !

ಜ್ಞಾತಿಪ್ರೀತಿರ್ಮನಸಿ ನ ಕೃತಾ ಕ್ಷತ್ರಿಯಾಣಾಂ ನ ಧರ್ಮೋ
ರೂಢಂ ಸಖ್ಯಂ ತದಪಿ ನ ಗಣಿತಂ ನಾನುಜಸ್ಯಾರ್ಜುನೇನ ।
ತುಲ್ಯಃ ಕಾಮಂ ಭವತು ಭವತಃ ಶಿಷ್ಯಯೋಃ ಸ್ನೇಹಬಂಧಃ
ಕೋಽಯಂ ಪಂಥಾ ಯದಸಿ ವಿಮುಖೋ ಮಂದಭಾಗ್ಯೇ ಮಯಿ ತ್ವಮ್.

ತರ್ಜನೋದ್ವೇಜನೇ ಪ್ರೋಕ್ತಾ ದ್ಯುತಿಃ ಶಕ್ತಿಃ ಪುನರ್ಭವೇತ್ ।

ಯಥಾ ತತ್ರೈವ ದುರ್ಯೋಧನಂ ಪ್ರತಿ ಕುಮಾರವೃಕೋದರೇಣೋಕ್ತಮ್.

ಜನ್ಮೇಂದೋರ್ವಿಮಲೇ ಕುಲೇ ವ್ಯಪದಿಶಸ್ಯದ್ಯಾಪಿ ಧತ್ಸೇ ಗದಾಂ
ಮಾಂ ದುಶ್ಶಾಸನಕೋಷ್ಣಶೋಣಿತಮಧುಕ್ಷೀಬಂ ರಿಪುಂ ಮನ್ಯಸೇ ।
ದರ್ಪಾಂಧೋ ಮಧುಕೈಟಭದ್ವಿಷಿ ಹರಾವಪ್ಯುದ್ಧತಂ ಚೇಷ್ಟಸೇ
ಆಸಾನ್ಮೇ ನೃಪಶೋ ವಿಹಾಯ ಸಮರಂ ಪಂಕೇಽಧುನಾ ಲೀಯಸೇ ॥

ವಿರೋಧಸ್ಯ ಪ್ರಶಮನಂ ಪ್ರಸಂಗೋ ಗುರುಕೀರ್ತನಮ್

ಯಥಾ ತತ್ರೈವ–ಕುರ್ವಂತ್ವಾಪ್ತಾ ಹತನಾಂ ರಣಶಿರಸಿ ಜನಾ ಭಸ್ಮಸಾದ್ದೇಹಭಾರಾ ನ್
ಅಶ್ರೂನ್ಮಿಶ್ರಂ ಕಥಂಚಿದ್ದದತು ಜಲಮಮೀ ಬಾಂಧವಾ ಬಾಂಧವೇಭ್ಯಃ ।
ಮಾರ್ಗಂತಾಂ ಜ್ಞಾತಿದೇಹಾನ್ ಹೃತನರಗಹನೇ ಖಂಡಿತಾನ್ ಗೃಧ್ರಕಂಕೈಃ
ಅಸ್ತಂ ಭಾಸ್ವಾನ್ ಪ್ರಯಾತಃ ಸಹ ರಿಪುಭಿರಯಂ ಸಂಹ್ರಿಯಾತಾಂ ಜಲಾನಿ॥

ಪ್ರಸಂಗೋ ಯಥಾ ಮೃಚ್ಛಕಟಿಕಾಯಾಂ. "ಚಾಂಡಾಲಕಃ—ಏಷ ಖಲು ಸಾಗರದತ್ತಸ್ಯ ಸುತಃ ಆರ್ಯವಿಶ್ವದತ್ತಸ್ಯ ಸಪ್ತಾ ಚಾರುದತ್ತೋ ವ್ಯಾಪಾದಯಿತುಂ ನೀಯತೇ. ಏತೇನ ಕಿಲ ಗಣಿಕಾ ವಸಂತಸೇನಾ ಸುವರ್ಣಲೋಭೇನ ವ್ಯಾಪಾದಿತಾ."

ಚಾರುದತ್ತಃ—ಮಖಶತಪರಿಪೂತಂ ಗೋತ್ರಮುದ್ಭಾಸಿತಂ ಯತ್
ಸದಸಿ ನಿಬಿಡಚೈತ್ಯಬ್ರಹ್ಮಘೋಷೈಃ ಪುರಸ್ತಾತ್ ।
ಮಮ ನಿಧನದಶಾಯಾಂ ವರ್ತಮಾನಸ್ಯ ಪಾಪೈಃ
ತದಸದೃಶಮನುಷ್ಯೈರ್ಘುಷ್ಯತೇ ಘೋಷಣಾಯಾಮ್ ॥

ಇತ್ಯನೇನ ಚಾರುದತ್ತವಧಾಭ್ಯುದಯಾನುಕೂಲಪ್ರಸಾಂಗತ್ ಗುರುಕೀರ್ತನಮಿತಿ ಪ್ರಸಂಗಃ.

ಮನಶ್ಚೇಷ್ಟಾಸಮುತ್ಪನ್ನಃ ಶ್ರಮಃ ಖೇದ ಇತಿ ಸ್ಮೃತಃ।

ಮನಸ್ಸಮುತ್ಪನ್ನೋ ಯಥಾ ಮಾಲತೀಮಾಧವೇ—

ದಲತಿ ಹೃದಯಂ ಗಾಢೋದ್ವೇಗೋ ದ್ವಿಧಾ ನ ತು ಭಿದ್ಯತೇ
ವಹತಿ ವಿಕಲಃ ಕಾಯೋ ಮೋಹಂ ನ ಮುಂಚತಿ ಚೇತನಾಮ್ ।
ಜ್ವಲಯತಿ ತನೂಮಂತರ್ದಾಹಃ ಕರೋತಿ ನ ಭಸ್ಮಸಾತ್
ಪ್ರಹರತಿ ವಿಧಿರ್ಮರ್ಮಚ್ಛೇದೀ ನ ಕೃಂತತಿ ಜೀವಿತಮ್ ॥

ಏವಂ ಚೇಷ್ಟಾಸಮುತ್ಪನ್ನೋಽಪಿ.

ಈಪ್ಸಿತಾರ್ಥಪ್ರತೀಘಾತಃ ಪ್ರತಿಷೇಧ ಇತೀಷ್ಯತೇ ।

ಯಥಾ ಮಮ ಪ್ರಭಾವತ್ಯಾಂ ವಿದೂಷಕಂ ಪ್ರತಿ ಪ್ರದ್ಯುಮ್ನಃ—ಸಖೇ, ಕಥಮಿಹ ತ್ವಮೇಕಾಕೀ ವರ್ತಸೇ ? ಕ್ವ ನು ಪುನಃ ಪ್ರಿಯಸಖೀಜನಾನುಗಮ್ಯಮಾನಾ ಪ್ರಿಯತಮಾ ಮೇ ಪ್ರಭಾವತೀ ? ವಿದೂಷಕಃ–ಅಸುರಪತಿನಾ ಆಕಾರ್ಯ್ಯ ಕಸ್ಮಿನ್ನಪಿ ನೀತಾ. ಪ್ರದ್ಯುಮ್ನಃ—(ದೀರ್ಘಂ ನಿಶ್ವಸ್ಯ)

ಹಾ ಪೂರ್ಣಚಂದ್ರಮುಖಿ ! ಮತ್ತಚಕೋರನೇತ್ರೇ !
ಮಾಮಾನತಾಂಗಿ ! ಪರಿಹಾಯ ಕುತೋ ಗತಾಸಿ
ಗಚ್ಛ ತ್ವಮದ್ಯ ನನು ಜೀವಿತ ! ತೂರ್ಣಮೇವ
ದೇವಂ ಕದರ್ಥನಪರಂ ಕೃತಕೃತ್ಯಮಸ್ತು "
ಕಾರ್ಯಾತ್ಯಯೋಪಗಮನಂ ವಿರೋಧನಮಿತಿ ಸ್ಮೃತಮ್ ।

ಯಥಾ ವೇಣ್ಯಾಂ ಯುಧಿಷ್ಠಿರಃ—

ತೀರ್ಣೇ ಭೀಷ್ಮಮಹೋದಧೌ ಕಥಮಪಿ ದ್ರೋಣಾನಲೇ ನಿರ್ವೃತೇ
ಕರ್ಣಾಶೀವಿಷಭೋಗಿನಿ ಪ್ರಶಮಿತೇ ಶಲ್ಯೇ ಚ ಯಾತೇ ದಿವಮ್ ।
ಭೀಮೇನ ಪ್ರಿಯಸಾಹಸೇನ ರಭಸಾದಲ್ಪಾವಶೇಷೇ ಜಯೇ
ಸರ್ವಂ ಜೀವಿತಸಂಶಯಂ ವಯಮಮೀ ವಾಚಾ ಸಮಾರೋಪಿತಾಃ॥

ಪ್ರರೋಚನಾ ತು ವಿಜ್ಞೇಯಾ ಸಂಹಾರಾರ್ಥಪ್ರದರ್ಶಿನೀ ।

ಯಥಾ ವೇಣ್ಯಾಂ 'ಪಾಂಚಾಲಕಃ—ಅಹಂ ದೇವೇನ ಚಕ್ರಪಾಣಿನಾ ಸಹಿತಃ' ಇತ್ಯುಪಕ್ರಮ್ಯ "ಕೃತಂ ಸಂದೇಹೇನ.

ಪೂರ್ಯಂತಾಂ ಸಲಿಲೇನ ರತ್ನಕಲಶಾ ರಾಜ್ಯಾಭಿಷೇಕಾಯ ತೇ
ಕೃಷ್ಣಾತ್ಯಂತಚಿರೋಜ್ಝಿತೇ ತು ಕಬರೀಬಂಧೇ ಕರೋತು ಕ್ಷಣಮ್ ।
ರಾಮೇ ಶಾತಕುಠಾರಭಾಸ್ವರಕರೇ ಕ್ಷತ್ರದ್ರುಮೋಚ್ಛೇದಿನಿ
ಕ್ರೋಧಾಂಧೇ ಚ ವೃಕೋದರೇ ಪರಿಪತತ್ಯಾಜೌ ಕೃತಃ ಸಂಶಯಃ"॥

ಕಾರ್ಯಸಂಗ್ರಹ ಆದಾನಂ ತದಾಹುಶ್ಛಾದನಂ ಪುನಃ ।
ಕಾರ್ಯಾರ್ಥಮಪಮಾನಾದೇಃ ಸಹನಂ ಖಲು ಯದ್ಭವೇತ್ ॥

ಯಥಾ ವೇಣ್ಯಾಂ ಆದಾನಂ—ಭೋ ಭೋಃ ಸಮಂತಪಂಚಕಚಾರಿಣಃ—

ನಾಹಂ ರಕ್ಷೋ ನ ಭೂತೋ ರಿಪುರುಧಿರಜಲಾಹ್ಲಾದಿತಾಂಗಃ ಪ್ರಕಾಮಂ
ನಿಸ್ತೀರ್ಣೋರುಪ್ರತಿಜ್ಞಾಜಲನಿಧಿಗಹನಃ ಕ್ರೋಧನಃ ಕ್ಷತ್ರಿಯೋಽಸ್ಮಿ ।
ಭೋ ಭೋ ರಾಜನ್ಯವೀರಾಃ ಸಮರಶಿಖಿಶಿಖಾಭುಕ್ತಶೇಷಾಃ ! ಕೃತಂ ವಃ
ತ್ರಾಸೇನಾನೇನ ಲೀನೈರ್ಹತಕರಿತುರಗಾಂತರ್ಹಿತೈರಾಸ್ಯತೇ ಯತ್ ॥

ಅತ್ರ ಸಮಸ್ತರಿಪುವಧಕಾರ್ಯಸ್ಯ ಸಂಗೃಹೀತತ್ವಾದಾದಾನಮ್.

ಯಥಾ ತತ್ರೈವ ಛಾದನಮ್—"ಅರ್ಜುನಃ—ಆರ್ಯ ! "

ಅಪ್ರಿಯಾಣಿ ಕರೋತ್ವೇಷ ವಾಚಾ ಶಕ್ತೋ ನ ಕರ್ಮಣಾ ।
ಹೃತಭ್ರಾತೃಶತೋ ದುಃಖೀ ಪ್ರಲಾಪೈರಸ್ಯ ಕಾ ವ್ಯಥಾ? ॥

ಈಗ ವಿಮರ್ಶಸಂಧಿಯ ಅಂಗಗಳನ್ನು ತಿಳಿಸುತ್ತಾನೆ, ಅಪವಾದ, ಸಂಫೇಟ, ವ್ಯವಸಾಯ, ದ್ರವ, ದ್ಯುತಿ, ಶಕ್ತಿ, ಪ್ರಸಂಗ, ಭೇದ, ಪ್ರತಿಷೇಧ, ವಿರೋಧನ, ಪ್ರರೋಚನ, ಆದಾನ, ಛಾದನ ಇವೇ ಇದರ ಅಂಗಗಳು. ಇವುಗಳಲ್ಲಿ ಅಪವಾದವನ್ನು ಈಗ ತಿಳಿಸುತ್ತಾನೆ. ಒಬ್ಬನು ತನ್ನಲ್ಲಿರುವ ದೋಷವನ್ನು ತಿಳಿಸುವುದೇ ಅಪವಾದವೆನಿಸುತ್ತದೆ.

ವೇಣೀಸಂಹಾರದಲ್ಲಿ ಯುಧಿಷ್ಟರನು "ಪಾಂಚಾಲಕನೇ, ಆ ನೀಚನೂ ದುಷ್ಟನೂ. ಆದ ದುರ್ಯೋಧನನು ಹೋಗಿರುವ ಮಾರ್ಗವನ್ನು ತಿಳಿದೆಯೋ ? ಎಂದು ಕೇಳಲು, ಆಗ ಪಾಂಚಾಲಕನು 'ಮಾರ್ಗವಷ್ಟೇ ಅಲ್ಲದೇ ಹಿಂದೆ ದೇವಿಯ ಕೇಶವನ್ನು ಮುಟ್ಟಿದ ಮಹಾಪಾಪಕ್ಕೆ ಮೂಲಕಾರಣವೆನಿಸಿದ ಆ ದುಷ್ಟನೇ ಸಿಕ್ಕಿದನು" ಹೀಗೆ ಹೇಳುವನು. ಹಾಗೆ ದುರ್ಯೋಧನನಲ್ಲಿದ್ದ ದೋಷವನ್ನು ತಿಳಿಸಿರುವುದರಿಂದ ಇದು ಅಪವಾದ ವೆನಿಸುತ್ತದೆ.

ಸಿಟ್ಟಿನಿಂದ ಬಿರುಸಾಗಿ ಮಾತನಾಡುವುದೇ ಸಂಫೇಟವೆನಿಸುವುದು. ವೇಣೀ ಸಂಹಾರದಲ್ಲಿ ಭೀಮಾರ್ಜುನರಿಗೆ ದುರ್ಯೋಧನನು ಹೇಳುವ ಮಾತಿನಲ್ಲಿ ಇದು ತಿಳಿ ಯುವುದು. "ಎಲೈ ಭೀಮನೇ, ನಿಂದಾರ್ಹವಾದ ನಿನ್ನ ಕೆಲಸವನ್ನು ಮುದಿರಾಜನ ಎದುರಿಗೆ ಹೊಗಳುತ್ತಿರುವೆ? ನೀಚನೇ, ಕೇಳು. ಜಗದೀಶ್ವರನೆನಿಸಿದ ನನ್ನ ಆಜ್ಞೆಯಿಂದ ಜೂಜಿನಲ್ಲಿ ಪಡೆದ ಆ ದಾಸಿಯು ಪಶುವೆನಿಸಿರುವ ನಿನಗೂ ಮತ್ತು ಅರ್ಜುನನಿಗೂ, ಆ ರಾಜನಾದ ಯುಧಿಷ್ಟರನಿಗೂ ಮತ್ತು ನಕುಲಸಹದೇವರಿಗೂ ಹೆಂಡತಿಯಾಗಿರುವಳು. ಅಂತವಳ ಕೇಶಗಳನ್ನು ಸಭೆಯಲ್ಲಿದ್ದ ರಾಜರೆಲ್ಲರ ಎದುರಿಗೆ ಎಳೆದದ್ದಾಯಿತು. ಹಾಗೆ ನನಗೂ ನಿಮಗೂ ದ್ವೇಷವು ಬೆಳೆದಿರಲು ಇಲ್ಲಿ ನೆರೆದಿರುವ ರಾಜರು ನಿಮಗೆ ಯಾವ ಅಪರಾಧವನ್ನು ತಾನೆ ಮಾಡಿದ್ದರು. ? ಬೇರೊಬ್ಬರ ಅಪರಾಧದಿಂದ ಬೇರೆ ಯವರಿಗೆ ಶಿಕ್ಷೆಯನ್ನು ವಿಚಾರಮಾಡದೇ ಮಾಡಿದ್ದರಿಂದ ನೀವು ಪಶುಗಳಲ್ಲದೆ ಬೇರೆ ಯಲ್ಲ. ಇದು ಅಲ್ಲದೆ, ಆ ದ್ರೌಪದಿಯಾದರೂ ಸೂಳೆಯಂತೆ ಐದು ಜನರಿಗೆ ಸಮಾನ ವಾಗಿ ಭೋಗ್ಯಳೆನಿಸಿದವಳು. ನೀವು ಇಷ್ಟು ಜನರಿದ್ದರೂ ಈವರೆವಿಗೂ ಯಾವ ಪ್ರತೀ ಕಾರವನ್ನೂ ಮಾಡಲಿಕ್ಕಾಗದಷ್ಟು ಹೇಡಿಗಳಾಗಿರುವಿರಿ. ಬಾಹುಬಲವೆಂಬ ಐಶ್ವರ್ಯ ದಿಂದ ಮದಿಸಿರುವ ಈ ದುರ್ಯೋಧನನನ್ನು ಜಯಿಸದೆ ನಿಮಗೆ ದರ್ಪವೆಲ್ಲಿಂದ ಬಂದೀತು ?

ಹೀಗೆ ದುರ್ಯೋಧನನು ಮೂದಲಿಸಲು ಭೀಮನೂ ಯುಧಿಷ್ಟರನೂ ಕೋಪದಿಂದ ಹಾ! ಪಾಪಿ! ಹಾ! ಪಾಪಿ! ಎಂದು ಮುಂತಾಗಿ ಹೇಳುವರು. ಹೀಗೆ ಅವರು ಸಿಟ್ಟಿನಿಂದ ಮಾತನಾಡಿದ್ದು ಸಂಫೇಟವೆನಿಸಿದೆ.

ಕರ್ತವ್ಯವನ್ನು ಸೂಚಿಸುವುದೇ ಪ್ರತಿಜ್ಞೆ. ಇಂತಹ ಪ್ರತಿಜ್ಞೆಯನ್ನು ನಡೆಸಲು ಸಂಭವಿಸುವ ಉದ್ಯಮವೇ ವ್ಯವಸಾಯವೆನಿಸುವುದು. ಅಲ್ಲಿಯೇ ಭೀಮನು "ಸಂಪೂರ್ಣವಾಗಿ ಕೌರವರೆಲ್ಲರನ್ನೂ ಕೊಂದು ದುಶ್ಶಾಸನನ ರಕ್ತದಿಂದ ಮದಿಸಿ ದುರ್ಯೋಧನನ ತೊಡೆಗಳನ್ನು ಮುರಿದ ಈ ಭೀಮನು ನಿನಗೆ ತಲೆಬಾಗಿ ನಮಸ್ಕರಿಸು ತ್ತಾನೆ" ಹೀಗೆ ಧರ್ಮರಾಜನಿಗೆ ತಿಳಿಸುವನು. ಇದರಿಂದ ದ್ರೌಪದಿಯ ಕೇಶಾಕರ್ಷಣ ಮೊದಲಾದ ಹೇತುವಿನಿಂದ ಹಿಂದೆ ಮಾಡಿದ್ದ ಪ್ರತಿಜ್ಞೆಯನ್ನು ಹೇಗೆ ನೆರವೇರಿಸಿದನೆಂಬು ದನ್ನು ಇಲ್ಲಿ ತಿಳಿಸಿರುವುದರಿಂದ ಇದು ವ್ಯವಸಾಯವೆನಿಸಿದೆ.

ಶೋಕದಿಂದಲೂ, ಕ್ರೋಧದಿಂದಲೂ, ಗುರುಜನರನ್ನು ಅತಿಕ್ರಮಿಸಿ ನಡೆಯುವುದೇ ದ್ರವವೆನಿಸುವುದು. ಕರ್ತವ್ಯದಿಂದ ದ್ರವಿಸುವುದು ಅಂದರೆ ಕ್ರಮ ತಪ್ಪಿ ನಡೆಯುವುದೆಂದು ಅರ್ಥ. ದುರ್ಯೋಧನನೊಡನೆ ಅನ್ಯಾಯದಿಂದ ಯುದ್ಧವನ್ನು ಮಾಡುತ್ತಿರುವ ಭೀಮನಿಗೆ ಬಲರಾಮನು ಕೋಪಿಸಿಕೊಳ್ಳಲು ಯುಧಿಷ್ಠಿರನು ಬಲರಾಮನಿಗೆ ಹೀಗೆ ಹೇಳುವನು. ''ಪೂಜ್ಯನೇ, ಕೃಷ್ಣನ ಅಣ್ಣನೇ, ಸುಭದ್ರೆಯ ಸೋದರನೇ, ಒಂದೇ ವಂಶದಲ್ಲಿ ಹುಟ್ಟಿರುವೆ ಎಂಬ ಪ್ರೀತಿಯನ್ನು ನೀನು ಮನಸ್ಸಿನಲ್ಲಿ ಇಟ್ಟುಕೊಳ್ಳಲಿಲ್ಲ. ಬಲದಲ್ಲಿ ಕಡಿಮೆ ಇರುವ ಕಡೆ ಬಲವನ್ನು ತುಂಬಬೇಕು ಎಂಬ ಕ್ಷತ್ರಿಯರ ಧರ್ಮವನ್ನೂ ಸಹ ನೀನು ಗಮನಿಸಲಿಲ್ಲ. ನಿನ್ನ ಸೋದರನಾದ ಕೃಷ್ಣನಿಗೆ ಅಣ್ಣನೊಡನೆ ಇರುವ ಬಲವತ್ತರವಾದ ಸ್ನೇಹವನ್ನೂ ಗಮನಿಸಲಿಲ್ಲ. ನಿನ್ನ ಶಿಷ್ಯರೆನಿಸಿದ ಭೀಮ ದುರ್ಯೋಧನ ಇವರಿಬ್ಬರ ವಿಷಯದಲ್ಲೂ ನಿನ್ನ ಪ್ರೇಮವು ಸಮಾನವಾಗಿ ನೆಲಸಲಿ. ಆದರೆ ಮಂದಭಾಗ್ಯನೆನಿಸಿದ ನನ್ನಲ್ಲಿ ನಾನು ಭೀಮನ ಬಗ್ಗೆ ಕೋಪಿಸಿಕೊಂಡಿದ್ದರಿಂದಲೇ ನೀನು ವಿರುದ್ಧನಾಗಿರುವೆಯಲ್ಲಾ ? ಇದು ಯಾವ ಮಾರ್ಗ ? ಇದು ನಿನಗೆ ಸರಿಯೆ ?'' ಹೀಗೆ ತಿಳಿಸಿದ್ದರಿಂದ ಯುಧಿಷ್ಠಿರನು ಹಿರಿಯನಾದ ಬಲರಾಮನಲ್ಲಿರುವ ಅವಿವೇಕವನ್ನು ಸೂಚಿಸುವ ಮೂಲಕ ಅವನ ಗೌರವವನ್ನು ಉಲ್ಲಂಘಿಸಿದ್ದರಿಂದ ಇದು ದ್ರವವೆನಿಸುತ್ತದೆ.

ಒಬ್ಬನನ್ನು ಗದರಿಸುವುದೋ ಅಥವಾ ಬೆದರಿಸುವುದೋ ದ್ಯುತಿ ಎನಿಸುವುದು. ದುರ್ಯೋಧನನಿಗೆ ಕುಮಾರಭೀಮನು ಹೇಳುವ ಮಾತಿನಿಂದ ಇದು ಹೊರಬೀಳುತ್ತದೆ. "ನಿರ್ದೋಷವಾದ ಚಂದ್ರವಂಶದಲ್ಲಿ ಹುಟ್ಟಿರುವೆ ಎಂದು ಹೇಳುತ್ತಿರುವೆ. ಈಗಲೂ ಗದೆಯನ್ನು ಹಿಡಿದಿರುವೆ. ದುಶ್ಶಾಸನನ ಬಿಸಿರಕ್ತವೆಂಬ ಮದ್ಯದಿಂದ ಮದಿಸಿರುವ ನನ್ನನ್ನು ಶತ್ರುವೆಂದು ತಿಳಿದಿರುವೆ. ಹಾಗೆಯೇ ಅಹಂಕಾರದಿಂದ ಯುಕ್ತಾಯುಕ್ತ ವಿವೇಕವನ್ನು ಕಳೆದುಕೊಂಡು ಆ ಕೃಷ್ಣನಲ್ಲಿಯೂ ದರ್ಪದಿಂದ ಮಾತನಾಡುತ್ತಿರುವೆ. ಎಲೈ ಮನುಜಪಶುವೇ, ಯುದ್ಧರಂಗವನ್ನು ಬಿಟ್ಟು ದ್ವೈಪಾಯನವೆಂಬ ಮಡುವಿನ ಕೆಸರಿನೊಳಗೆ ಸಿಕ್ಕಿಕೊಂಡಿರುವೆ. ಹಿಂದೆ ಇಂತಹ ಮಹಾಪರಾಧಗಳನ್ನೆಸಗಿ ಇಂದು ಮಡುವಿನಲ್ಲಿ ಅವಿತುಕೊಂಡಿರುವೆ.'' ಹೀಗೆ ಅವನು ದುರ್ಯೋಧನನನ್ನು ಮೂದಲಿಸಿ ಮಾತನಾಡಿದ್ದರಿಂದ ಇದು ದ್ಯುತಿ ಎನಿಸಿದೆ.

ಪರಸ್ಪರವಾಗಿ ಸಂಭವಿಸುವ ವಿವಾದವನ್ನು ಪರಿಹರಿಸಿಕೊಳ್ಳುವುದೇ ಶಕ್ತಿ ಎನಿಸುವುದು. ಶಕ್ತಿಯಿಂದಲೇ ಇದು ಆಗಬೇಕಾದ್ದರಿಂದ ಇದನ್ನೂ ಸಹ ಶಕ್ತಿ ಎಂದು ಕರೆಯಲಾಗಿದೆ. "ಆತ್ಮೀಯರೆನಿಸಿದ ಜನರು ಯುದ್ಧರಂಗದಲ್ಲಿ ಸತ್ತಿರುವವರ ಶರೀರಗಳನ್ನು ಸುಡಲಿ, ಯುದ್ಧದಲ್ಲಿ ಸತ್ತಿರುವ ಬಂಧುಗಳಿಗೆ ಕಣ್ಣೀರಿನೊಡನೆ ತಿಲಾಂಜಲಿಯನ್ನು ಅವರವರ ಬಂಧುಗಳು ಹೇಗಾದರೂ ಸಮರ್ಪಿಸಲಿ. ರಣಪಕ್ಷಿಗಳು ತಿಂದು ಉಳಿದಿರುವ ದೇಹಭಾಗಗಳನ್ನು ಉಳಿದ ಹೆಣಗಳ ಮಧ್ಯದಲ್ಲಿ ಸುಡಲಿಕ್ಕಾಗಿ ಹುಡುಕಿಕೊಳ್ಳಲಿ. ಸೂರ್ಯನು ಶತ್ರುಗಳೊಡನೆ ಅಸ್ತಮಾದನು. ಅದ್ದರಿಂದಲೇ ಅವರವರ

ಸೈನ್ಯಗಳು ಯುದ್ಧದಿಂದ ತೊಲಗಲಿ" ಹೀಗೆ ಇಲ್ಲಿ ಸೈನ್ಯಗಳು ಯುದ್ಧವನ್ನು ನಿಲ್ಲಿಸಲೆಂದು ಹೇಳಿರುವುದರಿಂದ ತಾತ್ಕಾಲಿಕವಾಗಿ ವಿರೋಧವು ಶಮನವಾಗಿದೆ ಎಂಬುದು ತಿಳಿದುಬರುವ ಪ್ರಯುಕ್ತ ಇದು ಶಕ್ತಿ ಎನಿಸಿದೆ.

ತಂದೆ ಮೊದಲಾದ ಹಿರಿಯರ ಹೆಚ್ಚುಗಾರಿಕೆಯನ್ನು ತಿಳಿಸುವುದೇ ಪ್ರಸಂಗವೆನಿಸುವುದು. ಮೃಚ್ಛಕಟಿಕೆಯಲ್ಲಿ ಚಂಡಾಲನು "ಸಾಗರದತ್ತನ ಮಗನೂ, ಪೂಜ್ಯ ವಿಶ್ವದತ್ತನ ಅಳಿಯನೂ ಆದ ಚಾರುದತ್ತನನ್ನು ಕೊಲೆಗಾಗಿ ಒಯ್ಯಲಾಗಿದೆ. ಇವನು ವಸಂತಸೇನೆ ಎಂಬ ವೇಶ್ಯೆಯನ್ನು ಭಂಗಾರದ ಆಶೆಯಿಂದ ಕೊಂದಿದ್ದನು" ಹೀಗೆ ಹೇಳುವನು. ಆಗ ಚಾರುದತ್ತನು "ಅನೇಕ ಯಜ್ಞಗಳನ್ನಾಚರಿಸಿರುವ ನಮ್ಮ ವಂಶವು ಹಿಂದೆ ವೇದಪಾಠಕರಿಂದ ಶೋಭಿಸುತ್ತಿತ್ತು. ಮರಣಾವಸ್ಥೆಯಲ್ಲಿರುವ ಈ ನನ್ನ ವಂಶದ ಬಗ್ಗೆ ಈ ಅಯೋಗ್ಯರಾದ ನೀಚಜನರು 'ಬಂಗಾರದ ಆಶೆಯಿಂದ ನಾನು ವಸಂತಸೇನೆಯನ್ನು ಕೊಂದೆನು' ಹೀಗೆ ಹೇಳುತ್ತ ಪಾಪಕರ್ಮವನ್ನು ಆರೋಪಿಸುತ್ತಿರುವರು. ಇದು ನನಗೆ ನೋವನ್ನು ಕೊಡುತ್ತಿದೆ. ನನ್ನ ಮರಣದ ಬಗ್ಗೆ ನನಗೆ ನೋವಿಲ್ಲ; ಆದರೆ ನನ್ನ ಪವಿತ್ರವಾದ ವಂಶದ ಬಗ್ಗೆ ಇವರು ಕಳಂಕವನ್ನು ಹೊರಿಸುತ್ತಿರುವುದರಿಂದ ನನಗೆ ನೋವಾಗಿದೆ" ಇಲ್ಲಿ ಚಾರುದತ್ತನ ಈಗಿನ ವಧವನ್ನೂ ಅವನ ಹಿಂದಿನ ಅಭ್ಯುದಯವನ್ನೂ ತಿಳಿಸಿರುವುದರಿಂದ ಅವನ ವಂಶವು ಅನೇಕ ಯಜ್ಞಗಳ ಅನುಷ್ಠಾನದಿಂದ ಪವಿತ್ರವಾಗಿತ್ತೆಂಬುದು ತಿಳಿದುಬರುವ ಪ್ರಯುಕ್ತ ಹಿಂದಿನ ಹಿರಿಯರ ಸೂಚನೆ ಇರುವುದರಿಂದ ಇದು ಪ್ರಸಂಗವೆನಿಸುವುದು.

ಶೋಕವೇ ಮೊದಲಾದ ಮಾನಸಿಕವ್ಯಾಪಾರದಿಂದಾಗಲೀ, ದೈಹಿಕವ್ಯಾಪಾರದಿಂದಾಗಲೀ ಹುಟ್ಟಿದ ಆಯಾಸವೇ ಖೇದವೆನಿಸುವುದು. ಮನಸ್ಸಿನಿಂದ ಹುಟ್ಟಿದ ಆಯಾಸವನ್ನು ಉದಾಹರಿಸುತ್ತಾನೆ. ಮಾಲತೀಮಾಧವದಲ್ಲಿ ಮಾಧವನು "ಪ್ರಿಯೆಯ ವಿರಹದಿಂದ ಹುಟ್ಟಿದ ದುಃಖದ ಈ ಆವೇಶವು ಹೃದಯವನ್ನು ನೋಯಿಸುತ್ತದೆ; ಆದರೆ ಎರಡು ಭಾಗವಾಗಿ ಸೀಳುತ್ತಿಲ್ಲ. ದುಃಖದಿಂದ ವ್ಯಥೆಗೊಂಡಿರುವ ದೇಹವು ಮೂರ್ಛೆಯನ್ನು ಹೊಂದಿದೆ; ಆದರೆ ಇದು ಚೈತನ್ಯವನ್ನು ತೊರೆದಿಲ್ಲ. ಒಳಗಿನ ಸಂತಾಪವು ಶರೀರವನ್ನು ಉರಿಸುತ್ತದೆ. ಆದರೆ ಒಮ್ಮೆಗೆ ಬೂದಿಯನ್ನಾಗಿ ಮಾಡುತ್ತಿಲ್ಲ. ಹಾಗೆಯೇ ಮರ್ಮವನ್ನು ಛೇದಿಸಿದ ದೈವವು ಕಾಡಿಸುತ್ತಿದೆ; ಆದರೆ ಪ್ರಾಣವನ್ನು ಕತ್ತರಿಸಿಲ್ಲ.' ಹೀಗೆ ಹೇಳುತ್ತಾನೆ. ಉತ್ತರರಾಮಚರಿತ್ರೆಯಲ್ಲಿ ಸೀತೆಯ ವಿಯೋಗವನ್ನು ಸಹಿಸಲಾರದೆ ರಾಮನೂ ಹೀಗೆಯೇ ಹೇಳಿದ್ದಾನೆ. ಇಲ್ಲಿ ಪ್ರಿಯೆಯ ವಿಯೋಗದಿಂದ ಹೆಚ್ಚು ದುಃಖವುಂಟಾಗಿ ಅದರಿಂದ ಆಗಿರುವ ಮನಸ್ಸಿನ ವ್ಯಥೆಯನ್ನು ತಿಳಿಸಿರುವ ಪ್ರಯುಕ್ತ ಇದು ಖೇದವೆನಿಸಿದೆ. ಹಾಗೆಯೇ ಶರೀರದ ಚೇಷ್ಟೆಯಿಂದ ಉಂಟಾಗುವ ಶ್ರಮವನ್ನು ಊಹಿಸಿಕೊಳ್ಳುವುದು.

ಇಷ್ಟಾರ್ಥವನ್ನು ಹೊಂದಲು ಇರುವ ತಡೆಯನ್ನು ತಿಳಿಸುವುದೇ ಪ್ರತಿಷೇಧವೆನಿಸುವುದು. ಪ್ರಭಾವತೀ ಎಂಬ ನಾಟಿಕೆಯಲ್ಲಿ ವಿದೂಷಕನಿಗೆ ಪ್ರದ್ಯುಮ್ನನ

'ಮಿತ್ರನೇ, ನೀನು ಏಕೆ ಒಬ್ಬನೇ ಇರುವೆ ? ' ಪ್ರಿಯಸಖಿಯರೊಡನೆ ಬಂದ ನನ್ನ ಪ್ರಿಯತಮೆ ಪ್ರಭಾವತಿ ಎಲ್ಲಿರುವಳು ? ಎಂದು ಕೇಳಲು ಅದಕ್ಕೆ ವಿದೂಷಕನು 'ರಾಕ್ಷಸರಾಜನು ಕರೆದು ಆಕೆಯನ್ನು ಎಲ್ಲಿಗೋ ಒಯ್ದನು' ಎಂದು ಹೇಳಲು ಆಗ ಪ್ರದ್ಯುಮ್ನನು ದೀರ್ಘವಾಗಿ ನಿಟ್ಟುಸಿರುಬಿಟ್ಟು ''ಹಾ, ಪೂರ್ಣಚಂದ್ರನಂತೆ ಮುಖವುಳ್ಳವಳೇ, ಮದಿಸಿದ ಚಕೋರದಂತೆ ಕಣ್ಣುಳ್ಳವಳೇ, ಎಲೈ ಕೃಶಾಂಗಿಯೇ, ನನ್ನನ್ನು ತೊರೆದು ನೀನು ಎಲ್ಲಿಗೆ ಹೋದೆ ? ಎಲೈ ಪ್ರಾಣವೇ ! ನೀನು ಬೇಗನೆ ಹೊರಡು. ಹಾಗಾದರೆ ಹೀಗೆ ದುಃಖವನ್ನು ಕೊಡುವುದರಲ್ಲಿಯೇ ಆಸಕ್ತವೆನಿಸಿರುವ ದೈವಕ್ಕೆ ಸಂತೋಷವಾಗಲಿ'' ಹೀಗೆ ಹೇಳುವನು. ಇದರಿಂದ ಅವನಿಗೆ ಇಷ್ಟಳೆನಿಸಿದ ಪ್ರಭಾವತಿಯು ದೊರಕಲು ತಡೆಯಿರುವುದನ್ನು ತಿಳಿಸಿರುವ ಪ್ರಯುಕ್ತ ಇದು ಪ್ರತಿಷೇಧವೆನಿಸಿದೆ. ಮಾಡಬೇಕಾದ ಕರ್ತವ್ಯದಲ್ಲಿ ಅಡಚಣೆಗಳು ಸಂಭವಿಸುವುದೇ ವಿರೋಧವೆನಿಸುವುದು. ವೇಣೀಸಂಹಾರದಲ್ಲಿ ಯುಧಿಷ್ಠಿರನು "ಭೀಷ್ಮನೆಂಬ ಸಾಗರವನ್ನು ದಾಟಿಯಾದಮೇಲೆ, ದ್ರೋಣನೆಂಬ ಬೆಂಕಿಯು ಆರಿದಮೇಲೆ, ಕರ್ಣನೆಂಬ ವಿಷಸರ್ಪವು ನಷ್ಟವಾದಮೇಲೆ, ಶಲ್ಯನೆಂಬ ಮೊಸಳೆಯು ಸ್ವರ್ಗಕ್ಕೆ ಹೋದಮೇಲೆ ಇನ್ನು ಜಯವು ಸ್ವಲ್ಪದರಲ್ಲಿಯೇ ಉಳಿದಿರಲು ಪ್ರಿಯನೂ ಸಾಹಸಿಯೂ ಆದ ಭೀಮನು ಆತುರದಿಂದ ದುರ್ಯೋಧನನ ಬಳಿಗೆ ಹೋಗಿ 'ನಮ್ಮಗಳ ಮಧ್ಯದಲ್ಲಿ ನೀನು ಯಾರನ್ನು ಒಪ್ಪುವೆಯೋ ಅವನೊಡನೆ ಯುದ್ಧವನ್ನು ಮಾಡಬಹುದು" ಎಂಬ ಮಾತನ್ನು ಹೇಳಿದ್ದರಿಂದ ನಾವು ಈಗ ಬದುಕುವುದೇ ಸಂಶಯವೆನಿಸಿದೆ'' ಇಲ್ಲಿ ಯುದ್ಧದಲ್ಲಿ ಪೂರ್ಣಜಯವು ದೊರೆಯಬೇಕಾಗಿರಲು ಭೀಮನ ಮಾತಿನಿಂದ ವಿಘ್ನವು ಸಂಭವಿಸುವ ಪ್ರಯುಕ್ತ ಇದು ವಿರೋಧವೆನಿಸಿದೆ.

ಹಿಡಿದ ಕಾರ್ಯವು ಕೊನೆಯಾಗುವುದೆಂಬುದನ್ನು ತಿಳಿಸುವ ಮಾತು ಪ್ರರೋಚನೆ ಎನಿಸುವುದು. ವೇಣೀ ಸಂಹಾರದಲ್ಲಿ ಪಾಂಚಾಲಕನು "ನಾನು ವಿಷ್ಣುವಿನೊಡಗೂಡಿ" ಎಂದು ಆರಂಭಿಸಿ ''ಈ ಬಗ್ಗೆ ಸಂದೇಹವೇ ಬೇಕಾಗಿಲ್ಲ. ರಾಜ್ಯದಲ್ಲಿ ಸೇವಕರು ಅಭಿಷೇಕಕ್ಕಾಗಿ ರತ್ನಕಲಶಗಳಲ್ಲಿ ನೀರನ್ನು ತುಂಬಿಡಲಿ. ಹಾಗೆಯೇ ದ್ರೌಪದಿಯು ಬಹುಕಾಲದಿಂದಲೂ ಕಟ್ಟದೆಯೇ ಬಿಟ್ಟದ್ದ ಕೂದಲನ್ನು ಕಟ್ಟಿಕೊಂಡು ಸಂತೋಷಗೊಳ್ಳಲಿ ಹರಿತವಾದ ಪರಶುವಿನಿಂದ ಪ್ರಕಾಶಗೊಂಡ ಹಸ್ತದಿಂದ ಕ್ಷತ್ರಿಯರ ವಂಶವನ್ನು ನಿರ್ಮೂಲನಮಾಡಿದ ಪರಶುರಾಮನೂ ಕೋಪಗೊಂಡಿರುವ ಭೀಮನೂ ಯುದ್ಧರಂಗಕ್ಕೆ ಬರಲು ಜಯದ ಬಗ್ಗೆ ಯಾರಿಗೆ ತಾನೆ ಸಂದೇಹವಿದ್ದೀತು ? " ಹೀಗೆ ಹೇಳುವನು. ಇಲ್ಲಿ ಶ್ಲೋಕದ ಮೊದಲನೆಯ ಎರಡುಪಾದಗಳಲ್ಲಿ ಯುದ್ಧವು ಕೊನೆಯಾಗುವುದನ್ನು ತಿಳಿಸಿರುವುದರಿಂದ ಇದು ಪ್ರರೋಚನೆ ಎನಿಸಿದೆ. ಮಾಡಬೇಕಾಗಿರುವ ಕೆಲಸಗಳನ್ನು ಒಂದೆಡೆಗೆ ಕೂಡಿಸುವುದೇ ಆದಾನವೆನಿಸುವುದು. ವೇಣೀಸಂಹಾರದಲ್ಲಿ 'ಎಲೈ ಕುರುಕ್ಷೇತ್ರನಿವಾಸಿಗಳೇ, ನಾನು ರಾಕ್ಷಸನಲ್ಲ, ಭೂತವಲ್ಲ; ಆದರೆ ಶತ್ರುಗಳ ರಕ್ತಗಳೆಂಬ ನೀರಿನಿಂದ ಅವಯವಗಳನ್ನು ನೆನೆಸಿಕೊಂಡು, ಮಹಾಪ್ರತಿಜ್ಞೆ ಎಂಬ

ಸಾಗರವನ್ನು ಪೂರ್ತಿಯಾಗಿ ದಾಟಿದ್ದರಿಂದಲೇ ಬೇರೆಯವರಿಗೆ ಸುಲಭವಾಗಿ ದೊರೆಯದೆ ಸಿಟ್ಟಿಗೆದ್ದಿರುವ ಒಬ್ಬ ಕ್ಷತ್ರಿಯನಿರುವೆನು. ಯುದ್ಧವೆಂಬ ಬೆಂಕಿಯ ಉರಿಯಲ್ಲಿ ಬೆಂದು ಉಳಿದಿರುವ ಎಲೈ ಕ್ಷತ್ರಿಯವೀರರೇ, ಸತ್ತಿರುವ ಆನೆಕುದುರೆಗಳನ್ನೊಳಗೊಂಡು ಸತ್ತವರಂತೆ ಇರುವ ನೀವೆಲ್ಲರೂ ಭಯಗೊಂಡಿರುವಿರಿ. ಈ ಭಯವನ್ನು ನಿಲ್ಲಿಸಿರಿ.' ಹೀಗೆ ಭೀಮನು ಹೇಳುವನು. ಇದರಲ್ಲಿ ಶತ್ರುಗಳ ಸಂಹಾರಕ್ಕೆ ಸಂಬಂಧಿಸಿದ ಕಾರ್ಯಗಳೆಲ್ಲವನ್ನು ಸಂಗ್ರಹಿಸಿರುವುದರಿಂದ ಇದು ಆದಾನವೆನಿಸಿದೆ.

ಕರ್ತವ್ಯವನ್ನು ಸಾಧಿಸಲಿಕ್ಕಾಗಿ ಅವಮಾನ ಮೊದಲಾದವನ್ನು ಸಹಿಸಿಕೊಳ್ಳುವುದೇ ಛಾದನವೆನಿಸುವುದು. ವೇಣೀಸಂಹಾರದಲ್ಲಿ ಅರ್ಜುನನು-"ಪೂಜ್ಯನೇ, ನೂರುಜನ ಸೋದರರನ್ನು ಕಳೆದುಕೊಂಡು ದುಃಖಪಡುತ್ತಿರುವ ಈ ದುರ್ಯೋಧನನು ಬಾಯಿಂದ ಅಪ್ರಿಯವನ್ನಾಡಲಿ. ಆದರೆ ಕಾರ್ಯತಃ ಅದನ್ನು ಆಚರಿಸುವಂತಿಲ್ಲ. ಆದ್ದರಿಂದಲೇ ಇವನ ಉನ್ಮತ್ತಪ್ರಲಾಪಗಳಿಂದ ನಮಗೆ ವ್ಯಥೆಯಾಗುವುದು ?" ಇಲ್ಲಿ ದುರ್ಯೋಧನನ ತೀಕ್ಷ್ಣವಾದ ಮಾತುಗಳಿಂದ ಉಂಟಾಗುವ ಅವಮಾನವನ್ನು ಸಹಿಸಬೇಕೆಂದು ತಿಳಿಸಿರುವ ಪ್ರಯುಕ್ತ ಇದು ಛಾದನವೆನಿಸದೆ. ಇಲ್ಲಿಗೆ ವಿಮರ್ಷ ಸಂಧಿಯ ಅಂಗಗಳೆಲ್ಲವನ್ನು ತಿಳಿಸಿಯಾಯಿತು.

ಅಥ ನಿರ್ವಹಣಾಂಗಾನಿ-ಸಂಧಿರ್ವಿಬೋಧೋ ಗ್ರಥನಂ ನಿರ್ಣಯಃ ಪರಿಭಾಷಣಮ್।

ಕೃತಿಃ ಪ್ರಸಾದ ಆನಂದೋ ಸಮಯೋऽಭ್ಯುಪಗೂಹನಮ್॥

ಭಾಷಣಂ ಪೂರ್ವವಾಕ್ಯಂ ಚ ಕಾವ್ಯಸಂಹಾರ ಏವ ಚ।

ಪ್ರಶಸ್ತಿರಿತಿ ಸಂಹಾರೇ ಜ್ಞೇಯಾನ್ಯಂಗಾನಿ ನಾಮತಃ॥

ಬೀಜೋಪಗಮನಂ ಸಂಧಿಃ ವಿಬೋಧಃ ಕಾರ್ಯಮಾರ್ಗಣಮ್।

ಯಥಾ ವೇಣ್ಯಾಂ ಸಂಧಿಃ "ಭೀಮಃ-ಭವತಿ ! ಯಜ್ಞವೇದಿಸಂಭವೇ, ಸ್ಮರತಿ ಭವತೀ ಯನ್ಮಯೋಕ್ತಂ "ಚಂಚದ್ಭುಜೇ" ತ್ಯಾದಿ.

ಅನೇನ ಮುಖೇ ಕ್ಷಿಪ್ತಬೀಜಸ್ಯ ಪುನರುಪಗಮನಮಿತಿ ಸಂಧಿಃ.

ಯಥಾ ತತ್ರೈವ ವಿಬೋಧಃ- "ಭೀಮಃ-ಮುಂಚತು ಮಾಮಾರ್ಯಃ ಕ್ಷಣಮೇಕಮ್. ಯುಧಿಷ್ಠಿರಃ-ಕಿಮಪರಮನವಶಿಷ್ಟಮ್ ಭೀಮಃ-ಸುಮಹದವಶಿಷ್ಟಮ್. ಸಂಯಮಯಾಮಿ ತಾವದನೇನ ಸುಯೋಧನಶೋಣಿತೋಕ್ಷಿತೇನ ಪಾಣಿನಾ ಪಾಂಚಾಲ್ಯಾ ದುಶ್ಯಾಸನಾವಕೃಷ್ಟಂ ಕೇಶಹಸ್ತಮ್. ಯುಧಿಷ್ಠಿರಃ-ಗಚ್ಛತು ಭವಾನ್, ಅನುಭವತು ತಪಸ್ವಿನೀ ವೇಣೀಸಂಹಾರಮ್" ಇತಿ,

ಅನೇನ ಕೇಶಸಂಯಮನಕಾರ್ಯಸ್ಯಾನ್ವೇಷಣಾದ್ವಿಬೋಧಃ.

ಉಪನ್ಯಾಸಸ್ತು ಕಾರ್ಯಾಣಾಂ ಗ್ರಥನಂ ನಿರ್ಣಯಃ ಪುನಃ।

ಅನುಭೂತಾರ್ಥಕಥನಂ ವದಂತಿ ಪರಿಭಾಷಣಮ್॥

ಪರಿವಾದಕೃತಂ ವಾಕ್ಯಂ ಲಬ್ಧಾರ್ಥಶಮನಂ ಕೃತಿಃ।

ಯಥಾ ತತ್ರೈವ ಗ್ರಥನಮ್ "ಭೀಮಃ-ಪಾಂಚಾಲಿ! ನ ಖಲು ಮಯಿ ಜೀವತಿ ಸಂಹರ್ತವ್ಯಾ ದುಶ್ಶಾಸನವಿಲುಲಿತಾ ವೇಣಿರಾತ್ಮಪಾಣಿಭ್ಯಾಮ್. ತಿಷ್ಠ! ಸ್ವಯಮೇವಾಹಂ ಸಂಹರಾಮಿ" ಇತ್ಯನೇನ ಕಾರ್ಯಸ್ಯೋಪಕ್ಷೇಪಾತ್ ಗ್ರಥನಮ್.

ಯಥಾ ತತ್ರೈವ ನಿರ್ಣಯಃ. ಭೀಮ-ದೇವ! ಅಜಾತಶತ್ರೋ! ಅದ್ಯಾಪಿ ದುರ್ಯೋಧನಹತಕಃ. ಮಯಾ ಹಿ ತಸ್ಯ ದುರಾತ್ಮನಃ—

-ಭೂಮೌ ಕ್ಷಿಪ್ತಂ ಶರೀರಂ ನಿಹಿತಮಿದಮಸೃಕ್ಚಂದನಾಭಂ ನಿಜಾಂಗೇ।
ಲಕ್ಷ್ಮೀರಾರ್ಯೇ ನಿಷಿಕ್ತಾ ಚತುರುದಧಿಪಯಃಸೀಮಯಾ ಸಾರ್ಧಮುರ್ವ್ಯಾ॥
ಭೃತ್ಯಾ ಮಿತ್ರಾಣಿ ಯೋಧಾಃ ಕುರುಕುಲಮನುಜಾ ದಗ್ಧಮೇತದ್ರಣಾಗ್ನೌ।
ನಾಮೈಕಂ ಯದ್ಬ್ರವೀಷಿ ಕ್ಷಿತಿಪ ತದಧುನಾ ಧಾರ್ತರಾಷ್ಟ್ರಸ್ಯ ಶೇಷಮ್॥

ಯಥಾ ಶಾಕುಂತಲೇ ಪರಿಭಾಷಣಮ್ "ರಾಜಾ-ಆರ್ಯೇ! ಅಥ ಸಾ ತತ್ರ ಭವತೋ ಕಿಮಾಖ್ಯಸ್ಯ ರಾಜರ್ಷೇಃ ಪತ್ನೀ? ತಾಪಸೀ-ಕಸ್ತಸ್ಯ ಧರ್ಮದಾರ ಪರಿತ್ಯಾಗಿನೋ ನಾಮ ಗ್ರಹೀಷ್ಯತಿ?"

ಯಥಾ ವೇಣ್ಯಾಂ ಕೃತಿಃ-"ಕೃಷ್ಣಃ-ಏತೇ ಭಗವಂತೋ ವ್ಯಾಸವಾಲ್ಮೀಕಿ ಪ್ರಭೃತಯೋಽಭಿಷೇಕಂ ಧಾರಯಂತಸ್ತಿಷ್ಠಂತಿ" ಇತಿ. ಅನೇನ ಪ್ರಾಪ್ತರಾಜ್ಯಸ್ಯ ಅಭಿಷೇಕಮಂಗಳೈಃ ಸ್ಥಿರೀಕರಣಂ ಕೃತಿಃ.

ಶುಶ್ರೂಷಾದಿಃ ಪ್ರಸಾದಃ ಸ್ಯಾದಾನಂದೋ ವಾಂಛಿತಾಗಮಃ।

ಯಥಾ ತತ್ರೈವ ಭೀಮೇನ ದ್ರೌಪದ್ಯಾಃ ಕೇಶಸಂಯಮನಮ್.

ಯಥಾ ತತ್ರೈವ ಆನಂದಃ. "ದ್ರೌಪದೀ-ವಿಸ್ಮೃತಮೇತಂ ವ್ಯಾಪಾರಂ ನಾಥಸ್ಯ ಪ್ರಸಾದೇನ ಪುನರಪಿ ಶಿಕ್ಷಿಷ್ಯೇ."

ಸಮಯೋ ದುಃಖನಿರ್ಯಾಣಂ ತದ್ಭವೇದುಪಗೂಹನಮ್।
ಯತ್ಸ್ಯಾದದ್ಭುತಸಂಪ್ರಾಪ್ತಿಃ ಸಾಮದಾನಾದಿಭಾಷಣಮ್

ಯಥಾ ರತ್ನಾವಳ್ಯಾಮ್-ವಾಸವದತ್ತಾ (ರತ್ನಾವಳೀಮಾಲಿಂಗ್ಯ) ಸಮಾಶ್ವಸಿಹಿ ಭಗಿನಿ! ಸಮಾಶ್ವಸಿಹಿ" ಇತಿ

ಉಪಗೂಹನಂ ಯಥಾ-ಮಮ ಪ್ರಭಾವತ್ಯಾಂ ನಾರದದರ್ಶನಾತ್ ಪ್ರದ್ಯುಮ್ನಃ ಊರ್ಧ್ವಮವಲೋಕ್ಯ—

ದಧದ್ವಿದ್ಯುಲ್ಲೇಖಾಮಿವ ಕುಸುಮಮಾಲಾಂ ಪರಿಮಲ
ಭ್ರಮದ್ಭೃಂಗಶ್ರೇಣೀಧ್ವನಿಭಿರುಪಗೀತಾಂ ತತ ಇತಃ।
ದಿಗಂತಂ ಜ್ಯೋತಿರ್ಭಿಸ್ತುಹಿನಕರಗೌರೈರ್ಧವಲಯನ್
ಇತಃ ಕೈಲಾಸಾದ್ರಿಃ ಪತತಿ ವಿಯತಃ ಕಿಂ ಪುನರಿದಮ್॥

ಭಾಷಣಂ ಯಥಾ ಚಂಡಕೌಶಿಕೇ-"ಧರ್ಮಃ-ತದೇಹಿ ಧರ್ಮಲೋಕಮುದಿತಿಷ್ಠ"

ಪೂರ್ವವಾಕ್ಯಂ ತು ವಿಜ್ಞೇಯಂ ಯಥೋಕ್ತಾರ್ಥೋಪದರ್ಶನಮ್

ಯಥಾ ವೇಣ್ಯಾಂ–''ಭೀಮಃ–ಬುದ್ಧಿಮತಿಕೆ,ಕ್ವ ಸಾ ಭಾನುಮತೀ, ಪರಿಭವತು ಸಂಪ್ರತಿ ಪಾಂಡವದಾರಾನ್.''

ವರಪ್ರದಾನಸಂಪ್ರಾಪ್ತಿಃ ಕಾವ್ಯಸಂಹಾರ ಇಷ್ಯತೇ।

ಯಥಾ ಸರ್ವತ್ರ ''ಕಿಂ ತೇ ಭೂಯಃ ಪ್ರಿಯಮುಪಕರೋಮಿ'' ಇತಿ.

ನೃಪದೇಶಾದಿಶಾಂತಿಸ್ತು ಪ್ರಶಸ್ತಿರಭಿಧೀಯತೇ।

ಯಥಾ ಪ್ರಭಾವತ್ಯಾಂ–ರಾಜಾನಃ ಸುತನಿರ್ವಿಶೇಷಮಧುನಾ ಪಶ್ಯಂತು ನಿತ್ಯಂ ಪ್ರಜಾಃ
ಜೀಯಾಸುಃ ಸದಸದ್ವಿವೇಕಪಟವಃ ಸಂತೋ ಗುಣಗ್ರಾಹಿಣಃ।
ಶಸ್ಯ ಸ್ವರ್ಣಸಮೃದ್ಧಯಃ ಸಮಧಿಕಾಃ ಸಂತು ಕ್ಷಮಾಮಂಡಲೇ
ಭೂಯಾದವ್ಯಭಿಚಾರಿಣೀ ತ್ರಿಜಗತೋ ಭಕ್ತಿಶ್ಚ ನಾರಾಯಣೇ॥

ಇಹ ಚ ಮುಖಸಂಧೌ ಉಪಕ್ಷೇಪಪರಿಹರಪರಿನ್ಯಾಸಯುಕ್ತ್ಯುದ್ಭೇದ,ಸಮಾಧಾನಾನಾಂ, ಪ್ರತಿಮುಖೇ ಚ ಪರಿಸರ್ಪಣಪ್ರಗಮನವಜ್ರೋಪನ್ಯಾಸಪುಷ್ಪಾಣಾಂ, ಗರ್ಭೇ ಅಭೂತಾಹರಣಮಾರ್ಗತ್ರೋಟಕಾಧಿಬಲಕ್ಷೇಪಾಣಾಂ, ವಿಮರ್ಶೇ ಅಪವಾದ ಶಕ್ತಿವ್ಯವಸಾಯಪ್ರರೋಚನಾದಾನಾನಾಂ ಪ್ರಾಧಾನ್ಯಮ್. ಅನ್ಯೇಷಾಂ ಚ ಯಥಾ ಸಂಭವಂ ಸ್ಥಿತಿಃ'' ಇತಿ ಕೇಚಿತ್.

ಚತುಃಷಷ್ಟಿವಿಧಂ ಹ್ಯೇತದಂಗಂ ಪ್ರೋಕ್ತಂ ಮನೀಷಿಭಿಃ।
ಕುರ್ಯಾದನಿಯತೇ ತಸ್ಯ ಸಂಧಾವಪಿ ನಿವೇಶನಮ್॥
ರಸಾನುಗುಣತಾಂ ವೀಕ್ಷ್ಯ ರಸಸ್ಯೈವ ಹಿ ಮುಖ್ಯತಾ।

ಯಥಾ ವೇಣೀಸಂಹಾರೇ ತೃತೀಯಾಂಕೇ ದುರ್ಯೋಧನಕರ್ಣಯೋರ್ಮಹತ್ಸಂಪ್ರಧಾರಣಮ್. ಏವಮನ್ಯತ್ರಾಪಿ. ಯತ್ತು ರುದ್ರಟಾದಿಭಿಃ 'ನಿಯಮ ಏವ, ಇತ್ಯುಕ್ತಂ ತಲ್ಲಕ್ಷ್ಯವಿರುದ್ಧಮ್.

ಸಂಧಿ, ವಿಬೋಧ, ಗ್ರಥನ, ನಿರ್ಣಯ, ಪರಿಭಾಷಣ, ಕೃತಿ, ಪ್ರಸಾದ, ಆನಂದ, ಸಮಯ, ಉಪಗೂಹನ, ಭಾಷಣ, ಪೂರ್ವವಾಕ್ಯ, ಕಾವ್ಯಸಂಹಾರ, ಪ್ರಶಸ್ತಿ ಇವಿಷ್ಟು ನಿರ್ವಹಣಸಂಧಿಯ ಅಂಗಗಳೆಸಿವೆ. ಇವಕ್ಕೆ ಉಪಸಂಹಾರಸಂಧಿ ಎಂದು ಬೇರೊಂದು ಹೆಸರೂ ಇದೆ. ಈಗ ಇವುಗಳ ಸ್ವರೂಪವನ್ನು ತಿಳಿಸುತ್ತಾನೆ. ಮುಖಸಂಧಿಯಲ್ಲಿ ಆರಂಭಿಸಿದ ಬೀಜವೆಂಬ ಮುಖ್ಯಾರ್ಥವನ್ನು ಮತ್ತೆ ನಮ್ಮ ಗಮನಕ್ಕೆ ತರುವುದೇ ಸಂಧಿ ಎನಿಸುವುದು. ವೇಣೀಸಂಹಾರದಲ್ಲಿ ಭೀಮನು, ತನ್ನ ಧರ್ಮಪತ್ನಿ ದ್ರೌಪದಿಗೆ 'ಚಂಚದ್ಭುಜ, ಎಂಬ ಶ್ಲೋಕದಲ್ಲಿ ಹೇಳಿದ್ದ ಅಭಿಪ್ರಾಯವು ಜ್ಞಾಪಕವಿದೆಯೇ ?' ಎಂದು ಕೇಳುವನು, ಹೀಗೆ ಹಿಂದೆ ಮುಖಸಂಧಿಯಲ್ಲಿ ನೆಟ್ಟಿದ್ದ ಬೀಜವನ್ನು ಮತ್ತೆ ನಮ್ಮ ಗಮನಕ್ಕೆ ತಂದಿರುವುದರಿಂದ ಇದು ಸಂಧಿ ಎನಿಸಿದೆ. ಆಗಾಗ ಮಾಡಬೇಕಾದ ಕಾರ್ಯವು ಯಾವುದು ಎಂಬುದನ್ನು ನಿಶ್ಚಯಿಸುವುದೇ ವಿಬೋಧವೆನಿಸುವುದು. ಅಲ್ಲಿಯೇ ಭೀಮನು ಯುಧಿಷ್ಠಿರನಿಗೆ ಒಂದು ಕ್ಷಣಕಾಲ ತನ್ನನ್ನು ಕಳುಹಿಸುವಂತೆ ಕೇಳುವನು. ಅದಕ್ಕೆ ಯುಧಿಷ್ಠಿರನು, ಮತ್ತೇನು ಉಳಿದಿದೆ,

ಎಂದು ಕೇಳಲು ಆಗ ಭೀಮನು ಇನ್ನೂ 'ಹೆಚ್ಚಿನ ಕೆಲಸ ಉಳಿದಿದೆ. ದುರ್ಯೋಧನನ ರಕ್ತದಿಂದ ನೆಂದಿರುವ ಈ ಹಸ್ತದಿಂದ ಹಿಂದೆ ದುಶ್ಯಾಸನನು ಸೆಳೆದಿದ್ದ ದ್ರೌಪದಿಯ ಕೂದಲನ್ನು ಕಟ್ಟುವೆನು,' ಎಂದು ಹೇಳುವನು.ಆಗ ಯುಧಿಷ್ಠಿರನು–'ಹೌದು, ಅದೊಂದು ಕಾರ್ಯವು ಉಳಿದಿದೆ. ನೀನು ಹೋಗಿ ಆ ಕೆಲಸವನ್ನು ಮುಗಿಸು. ದುಃಖಿನಿಯಾದ ದ್ರೌಪದಿಯು ವೇಣೀಸಂಹಾರವನ್ನು ಅನುಭವಿಸಲಿ' ಎಂದು ಅನುಮೋದಿಸುವನು. ಇದರಿಂದ ಆಗ ಉಳಿದಿದ್ದ ಕೇಶಸಂಯಮನವೆಂಬ ಕಾರ್ಯವನ್ನು ಇಲ್ಲಿ ಹುಡುಕಿಕೊಂಡದ್ದರಿಂದ ಇದು ವಿಬೋಧವೆನಿಸಿದೆ.

ಮಾಡಬೇಕಾದ ಕಾರ್ಯಗಳನ್ನು ಒಂದೊಂದಾಗಿ ಉಲ್ಲೇಖಮಾಡುವುದು ಅಥವಾ ಪ್ರಕೃತಸಂದರ್ಭಕ್ಕೆ ಹೊಂದಿಸಿಕೊಳ್ಳುವುದು ಯೋಜನವೆನಿಸುವುದು. ಅಲ್ಲಿಯೇ ಭೀಮನು 'ಪಾಂಚಾಲಿ, ದುಶ್ಯಾಸನನಿಂದ ಬಿಚ್ಚಿದ್ದ ಕೂದಲನ್ನು ನಾನಿರುವಾಗ ನೀನು ನಿನ್ನ ಕೈಗಳಿಂದ ಕಟ್ಟಕೊಳ್ಳಬಾರದು. ನಿಲ್ಲು. ನಾನೇ ಅದನ್ನು ಕಟ್ಟುವೆನು.' ಹೀಗೆ ಹೇಳಿದ್ದರಿಂದ ಕಾರ್ಯವನ್ನು ಬಾಯಿಂದ ಸ್ಪಷ್ಟವಾಗಿ ತಿಳಿಸಿರುವ ಪ್ರಯುಕ್ತ ಇದು ಉಪನ್ಯಾಸವೆನಿಸಿದೆ. ಪ್ರತ್ಯಕ್ಷವಾಗಿ ತಿಳಿದ ವಿಷಯವನ್ನು ಮತ್ತೆ ತಿಳಿಸುವುದು ನಿರ್ಣಯವೆನಿಸುವುದು. ಅಲ್ಲಿಯೇ ಭೀಮನು, 'ಸ್ವಾಮಿ, ಅಜಾತಶತ್ರುವೇ, ಆ ದುಷ್ಟದುರ್ಯೋಧನನು ಈಗ ಎಲ್ಲಿದ್ದಾನೆ? ಅವನ ಶರೀರವನ್ನು ನೆಲದಮೇಲೆ ಕೆಡವಿದ್ದಾಯಿತು. ಶ್ರೀಗಂಧಕ್ಕೆ ಸದೃಶವಾದ ದುರ್ಯೋದನನ ಈ ರಕ್ತವನ್ನು ನನ್ನ ಅಂಗದಲ್ಲಿ ಬಳಿದುಕೊಂಡಿದ್ದಾಯಿತು. ನಾಲ್ಕು ಸಮುದ್ರಗಳೇ ಎಲ್ಲೆಯಾಗಿರುವ ವಿಶಾಲವಾದ ಈ ಭೂಮಿಯೊಡನೆ 'ರಾಜ್ಯಸಂಪತ್ತನ್ನು ನಿನ್ನಲ್ಲಿ ನೆಲೆಗೊಳಿಸಿದ್ದಾಯಿತು. ಕೌರವನ ಕಡೆಯ ಜನರು ಸೇವಕರು, ಸ್ನೇಹಿತರು, ಯೋಧರು ಇಂತವರೆಲ್ಲರೂ ಈ ರಣಾಗ್ನಿಯಲ್ಲಿ ಬೆಂದರು. ಎಲೈ ರಾಜನೆ, ನೀನು ಹೇಳುವಂತೆ ಧಾರ್ತರಾಷ್ಟ್ರನೆಂಬ ಹೆಸರು ಭೂಮಿಯನ್ನೇ ಕಟ್ಟಿಕೊಂಡಿರುವ ಆ ಧೃತರಾಷ್ಟ್ರನ ಮಗನಿಗೆ ಅಂಟಿಸಿಕೊಂಡು ಉಳಿದಿದೆ.' ಇಲ್ಲಿ ಭೀಮನು ತಾನು ಮಾಡಿದ್ದೆಲ್ಲವನ್ನೂ ಎದುರಿಗೆ ಕಂಡಂತೆ ತಿಳಿಸಿರುವುದರಿಂದ ಇದು ನಿರ್ಣಯವೆನಿಸಿದೆ. ಅಪವಾದವನ್ನು ಸೂಚಿಸುವ ವಾಕ್ಯವು ಪರಿಭಾಷಣವೆನಿಸುತ್ತದೆ. ಶಾಕುಂತಲದಲ್ಲಿ ರಾಜನು 'ಆರ್ಯಳೇ, ಈ ಪೂಜ್ಯಳು ಯಾವ ರಾಜರ್ಷಿಯ ಹೆಂಡತಿಯಾಗಿರುವಳು?' ಎಂದು ಕೇಳಲು ತಾಪಸಿಯು 'ಇಂತಹ ಧರ್ಮಪತ್ನಿಯನ್ನು ತೊರೆದಿರುವವನ ಹೆಸರನ್ನು ಯಾರು ಹೇಳಿಯಾರು?'–ಎಂದು ಹೇಳುವಳು. ಇದು ದುಷ್ಯಂತನ ಮೇಲಿನ ಅಪವಾದವನ್ನು ಸೂಚಿಸಿರುವುದರಿಂದ ಪರಿಭಾಷಣವೆನಿಸಿದೆ. ನಿರ್ದಿಷ್ಟವಾದ ಫಲವನ್ನು ಪಡೆದು ದುಃಖವನ್ನು ತಡೆದು ಮನಸ್ಸನ್ನು ಸ್ಥಿರಗೊಳಿಸುವುದೇ ಕೃತಿ ಎನಿಸುವುದು. ವೇಣೀಸಂಹಾರದಲ್ಲಿ ಕೃಷ್ಣನು 'ವ್ಯಾಸ ವಾಲ್ಮೀಕಿ ಮೊದಲಾದ ಮಹರ್ಷಿಗಳು ಅಭಿಷೇಕಕ್ಕಾಗಿ ನೀರನ್ನು ಹಿಡಿದುಕೊಂಡು ನಿಂತಿದ್ದಾರೆ' ಎಂದು ತಿಳಿಸುವನು. ಹೀಗೆ ರಾಜ್ಯವನ್ನು ಪಡೆದ ಯುಧಿಷ್ಠಿರನಿಗೆ ಅಭಿಷೇಕವೆಂಬ ಮಂಗಳವನ್ನು ಸ್ಥಿರಗೊಳಿಸಿರುವುದರಿಂದ ಇದು ಕೃತಿ ಎನಿಸುವುದು.

ಕೈಯಿಂದ ಸೇವೆ ಮಾಡುವುದು, ಚಾಮರವನ್ನು ಬೀಸುವುದು ಮೊದಲಾದವು ಪ್ರಸಾದವೆನಿಸುವುವು. ಅಲ್ಲಿಯೇ ಭೀಮನು ದ್ರೌಪದಿಯ ಕೂದಲನ್ನು ಹದಗೊಳಿಸಿ ಕಟ್ಟುವುದರಿಂದ ಇದು ಪ್ರಸಾದವೆನಿಸಿದೆ. ಇಷ್ಟಾರ್ಥವು ಸಿದ್ಧಿಸಿದ್ದರಿಂದ ಹುಟ್ಟುವ ಪ್ರೀತಿಯು ಆನಂದವೆನಿಸುವುದು. ಅಲ್ಲಿಯೇ ದ್ರೌಪದಿಯು 'ನಾನು ಮರೆತಿದ್ದ ಈ ಕೆಲಸವನ್ನು ನಿನ್ನ ಪ್ರಸಾದದಿಂದ ಮತ್ತೆ ಕಲಿತೆನು' ಎಂದು ಹೇಳಿದ್ದರಿಂದ ದ್ರೌಪದಿಗೆ ಹದಿಮೂರುವರ್ಷಗಳಿಂದ ಕೂದಲನ್ನು ಬಾಚುವ ಅಭ್ಯಾಸವು ಮರೆತಿದ್ದು ಈಗ ಭೀಮನು ಬಾಚಿದ್ದರಿಂದ ಅದನ್ನು ತಾನು ಮತ್ತೆ ಕಲಿತಂತಾಯಿತೆಂದು ಹೇಳಿರುವಳು. ಇದರಿಂದ ಆಕೆಗೆ ತನ್ನ ಇಷ್ಟಾರ್ಥವು ಸಿದ್ಧಿಸಿತೆಂಬ ಪ್ರೀತಿಯುಂಟಾಯಿತು. ದುಃಖವು ಕೊನೆಗಾಣುವುದೇ ಸಮಯವೆನಿಸುವುದು. ರತ್ನಾವಳಿಯಲ್ಲಿ ವಾಸವದತ್ತೆಯು ರತ್ನಾವಳಿಯನ್ನು ಆಲಿಂಗಿಸುತ್ತ "ಸೋದರಿ ! ಸಮಾಧಾನದಿಂದಿರು" ಎಂದು ಹೇಳುವಳು. ಇದರಿಂದ ಅವಳಿಗೆ ವಿರಹದುಃಖವು ತೊಲಗುವ ಪ್ರಯುಕ್ತ ಇದು ಸಮಯವೆನಿಸಿದೆ. ಅದ್ಭುತವಾದ ಸಂಘಟನೆಯುನ್ನು ಅನುಭವಿಸುವುದೇ ಉಪಗೂಹನವೆನಿಸುವುದು. ಪ್ರಭಾವತೀ ನಾಟಕೆಯಲ್ಲಿ ನಾರದನನ್ನು ಕಂಡದ್ದರಿಂದ ಪ್ರದ್ಯುಮ್ನನು ಮೇಲೆ ನೋಡಿ ಹೀಗೆ ಹೇಳುವನು. "ಸುಗಂಧವನ್ನು ಕುಡಿಯಲಿಕ್ಕಾಗಿ ಸುತ್ತಾಡುವ ದುಂಬಿಗಳ ಝೇಂಕಾರದಿಂದ ಕೂಡಿ ಮಿಂಚಿನಂತೆ ಶೋಭಿಸುವ ಪುಷ್ಪಮಾಲೆಯನ್ನು ಧರಿಸಿ ಚಂದ್ರನಿಗೆ ಸದೃಶವಾದ ಶರೀರದ ಕಾಂತಿಯಿಂದ ದಿಕ್ಪ್ರದೇಶಗಳನ್ನು ಎಲ್ಲೆಡೆಯಲ್ಲೂ ಬೆಳ್ಳಗೆ ಮಾಡುತ್ತಿರುವ ಕೈಲಾಸಪರ್ವತವು ಆಕಾಶದಿಂದ ಕೆಳಕ್ಕೆ ಬೀಳುತ್ತಿದೆ. ಇದು ಎಂತಹ ಆಶ್ಚರ್ಯ !" ಇಲ್ಲಿ ಪ್ರದ್ಯುಮ್ನನಿಗೆ ಅದ್ಭುತವಾದ ಸಂಘಟನೆಯು ಕಾಣುತ್ತಿರುವುದರಿಂದ ಇದು ಉಪಗೂಹನವೆನಿಸಿದೆ. ಸಂತೋಷವನ್ನುಂಟುಮಾಡುವ ಮಾತನ್ನಾಡುವುದು, ದಾನಮಾಡುವುದು ಇದೆಲ್ಲವೂ ಭಾಷಣವೆನಿಸುವುದು. ಚಂಡಕೌಶಿಕದಲ್ಲಿ ಯಮಧರ್ಮರಾಜನು ಹರಿಶ್ಚಂದ್ರನಿಗೆ ಧರ್ಮಲೋಕದಲ್ಲಿ ವಾಸಮಾಡುವಂತೆ ಕರೆಯುವನು. ಹೀಗೆ ಇಲ್ಲಿ ಸಂತೋಷಕರವಾದ ಮಾತನ್ನಾಡಿದ್ದರಿಂದ ಇದು ಭಾಷಣವೆನಿಸಿದೆ. ಹಿಂದೆ ತಿಳಿಸಿದ್ದಕ್ಕೆ ಅನುಗುಣವಾದ ವಿಷಯವನ್ನು ತಿಳಿಸುವುದೇ ಪೂರ್ವವಾಕ್ಯವೆನಿಸುವುದು. ವೇಣೀಸಂಹಾರದಲ್ಲಿ ಭೀಮನು "ದುರ್ಯೋಧನನ ಹೆಂಡತಿಯಾದ ಭಾನುಮತಿಯು ಎಲ್ಲಿರುವಳು ? ಪಾಂಡವರ ಧರ್ಮಪತ್ನಿಯನ್ನು ಆಕೆ ಈಗ ಅವಮಾನಗೊಳಿಸಲಿ" ಎಂದು ಅವಳ ಸಖಿ ಬುದ್ಧಿಮತಿಕೆಗೆ ಹೇಳುವನು. "ಕೌರವರನ್ನು ನಾನು ಯುದ್ಧದಲ್ಲಿ ನಾಶಮಾಡಿಯೇ ಮಾಡುವೆನು" ಎಂದು ಹಿಂದೆ ತಿಳಿಸಿದ್ದ ಮಾತಿಗೆ ತಕ್ಕಹಾಗೆ ಈಗ ಭಾನುಮತಿಯು ಹಿಂದಿನಂತೆ ದ್ರೌಪದಿಯನ್ನು ಹೀಯಾಳಿಸಲಾರಳೆಂದು ಹೇಳಿದ್ದರಿಂದ ಇದು ಪೂರ್ವವಾಕ್ಯವೆನಿಸಿದೆ.

ಒಬ್ಬನಿಗೆ ಇಷ್ಟವಾದ್ದನ್ನು ನೆರವೇರಿಸಿಕೊಡುವುದೇ ಕಾವ್ಯಸಂಹಾರವೆನಿಸುವುದು. 'ನಿನಗೆ ಮತ್ತೆ ಪ್ರಿಯವಾದ್ದು ಏನನ್ನು ಮಾಡಲಿ' ಎಂದು ಭೀಮನು ದ್ರೌಪದಿಯ ಬಗ್ಗೆ ಮತ್ತೆ ಮತ್ತೆ ಕೇಳುವನು. ರಾಜ, ದೇಶ, ದೇವತೆಗಳು ಇವರಿಂದ ಶಾಂತಿಯುಂಟಾಗ

ಲೆಂದು ಬಯಸುವುದೇ ಪ್ರಶಸ್ತಿ ಎನಿಸುವುದು. ಪ್ರಭಾವತೀನಾಟಿಕೆಯಲ್ಲಿ "ಈಗ ರಾಜರು ಯಾವಾಗಲೂ ಪ್ರಜೆಗಳನ್ನು ತಮ್ಮ ಮಕ್ಕಳಂತೆ ಕಾಣಲಿ. ಒಳ್ಳೆಯದು ಕೆಟ್ಟದ್ದು ಇವುಗಳ ವಿವೇಚನೆಯಲ್ಲಿ ಶಕ್ತರೆನಿಸಿದ ಜನರು ಸುಖವಾಗಿ ಬಾಳಲಿ. ಭೂಮಂಡಲದಲ್ಲಿ ಹೆಚ್ಚಿನ ಸಸ್ಯಗಳ ಮತ್ತು ಐಶ್ವರ್ಯದ ಸಮೃದ್ಧಿಗಳುಂಟಾಗಲಿ. ಮೂರು ಲೋಕಗಳಲ್ಲಿರುವ ಜನರಿಗೂ ನಾರಾಯಣನಲ್ಲಿ ನಿರಂತರವಾಗಿ ಭಕ್ತಿಯು ನೆಲಸಲಿ." ಇಲ್ಲಿ ರಾಜನಿಂದ ಲೋಕಕ್ಕೆ ಶಾಂತಿಯುಂಟಾಗಲೆಂದು ಪ್ರಾರ್ಥಿಸಿರುವುದ ರಿಂದ ಇದು ಪ್ರಶಸ್ತಿ ಎನಿಸಿದೆ.

"ನಾಟ್ಯದಲ್ಲಿ ಬರುವ ಸಂಧಿಗಳ ಪೈಕಿ ಮುಖಸಂಧಿಗೆ ಸಂಬಂಧಿಸಿದ ಉಪಕ್ಷೇಪ ಪರಿಕರ, ಪರಿನ್ಯಾಸ, ಯುಕ್ತ್ಯುಛ್ಛೇದ ಮತ್ತು ಸಮಾಧಾನಗಳಿಗೂ, ಪ್ರತಿಮುಖ ಸಂಧಿಯಲ್ಲಿ ಹೇಳಿರುವ ಪರಿಸರ್ಪಣ, ಪ್ರಗಮನ, ವಜ್ರೋಪನ್ಯಾಸ ಮತ್ತು ಪುಷ್ಪ ಗಳಿಗೂ, ಗರ್ಭಸಂಧಿಯ ಅಭೂತಾಹರಣ, ಮಾರ್ಗ, ತ್ರೋಟಕ, ಅಧಿಬಲ ಮತ್ತು ಕ್ಷೇಪ ಇವುಗಳಿಗೂ, ವಿಮರ್ಷಣಸಂಧಿಯ ಅಪವಾದ, ಶಕ್ತಿ, ವ್ಯವಸಾಯ, ಪ್ರರೋಚನೆ ಮತ್ತು ದಾನ ಇವುಗಳಿಗೂ ಪ್ರಾಧಾನ್ಯವಿದೆ. ಇವು ಎಲ್ಲೆಡೆಯಲ್ಲೂ ನಿಯತವಾಗಿ ಸಂಭವಿಸುತ್ತವೆ. ಉಳಿದ ವಿಲೋಭನ ಮೊದಲಾದವು ಅವಶ್ಯವಿದ್ದರೆ ಸಂಭವಿಸುತ್ತವೆ. ಒಂದುವೇಳೆ ಇಲ್ಲದಿದ್ದರೂ ಬಾಧಕವಿಲ್ಲ''ವೆಂದು ಕೆಲವರು ಹೇಳುತ್ತಾರೆ. ಗ್ರಂಥಕಾರನು ತನ್ನ ಅಭಿಪ್ರಾಯವನ್ನು ಇಲ್ಲಿ ತಿಳಿಸುತ್ತಾನೆ. ಒಟ್ಟಿನಲ್ಲಿ ಮುಖಸಂಧಿಯಲ್ಲಿ ಹನ್ನೆರಡು ಅಂಗಗಳು, ಪ್ರತಿಮುಖ ಮೊದಲಾದ ನಾಲ್ಕು ಸಂಧಿಗಳಲ್ಲಿ ಒಂದೊಂದಕ್ಕೂ ಹದಿಮೂರು ಅಂಗಗಳು ಹೀಗೆ ಅರವತ್ತನಾಲ್ಕು ಅಂಗಗಳಾಗುತ್ತವೆ. ಇವೆಲ್ಲವನ್ನು ಆಯಾಯ ಸನ್ನಿವೇಶದಲ್ಲಿ ಅಕ್ರಮವಾಗಿ ಸೇರಿಸುವುದರಲ್ಲೂ ದೋಷವೇನೂ ಇಲ್ಲ. ಆದರೆ ಇದರಿಂದ ರಸಪ್ರಕಾಶಕ್ಕೆ ತೊಂದರೆಯಾಗಬಾರದು. ರಸವೇ ಕಾವ್ಯದಲ್ಲಿ ಮುಖ್ಯವೆನಿಸಿದ್ದರಿಂದ ಈ ಸಂಧ್ಯಂಗಗಳನ್ನು ರಸಕ್ಕೆ ಅನುಗುಣವಾಗಿ ಸೇರಿಸಬೇಕು. ವೇಣೀಸಂಹಾರದ ತೃತೀಯಾಂಕದಲ್ಲಿ ದುರ್ಯೋಧನ ಕರ್ಣ ಇವರಿಬ್ಬರಿಗೂ ಕರ್ತವ್ಯ ವನ್ನು ನಿರ್ಣಯಿಸುವ ಬಗ್ಗೆ ಯುಕ್ತಿ ಎಂಬ ಮುಖಸಂಧಿಯ ಅಂಗವನ್ನು ರಸಾನು ಗುಣವಾಗಿ ಉಪಯೋಗಿಸಿದೆ. ರುದ್ರಟ ಎಂಬುವನು ಆಯಾಯ ಅಂಗವನ್ನು ಅಲ್ಲಲ್ಲಿಯೇ ಉಪಯೋಗಿಸಬೇಕೆಂದು ಹೇಳಿರುವನು, ಅದು ಅನೇಕ ನಾಟಕೆಗಳಿಗೆ ಹೊಂದುವುದಿಲ್ಲ.

ಇಷ್ಟಾರ್ಥರಚನಾಶ್ಚರ್ಯಲಾಭೋ ವೃತ್ತಾಂತವಿಸ್ತರಃ ।
ರಾಗಪ್ರಾಪ್ತಿಃ ಪ್ರಯೋಗಸ್ಯ ಗೋಪ್ಯಾನಾಂ ಗೋಪನಂ ತಥಾ ॥
ಪ್ರಕಾಶನಂ ಪ್ರಕಾಶ್ಯಾನಾಂ ಅಂಗಾನಾಂ ಷಡ್ವಿಧಂ ಫಲಮ್ ।
ಅಂಗಹೀನೋ ನರೋ ಯದ್ವತ್ ನೈವಾರಂಭಕ್ಷಮೋ ಭವೇತ್ ॥
ಅಂಗಹೀನಂ ತಥಾ ಕಾವ್ಯಂ ನ ಪ್ರಯೋಗಾಯ ಯುಜ್ಯತೇ ।
ಸಂಪಾದಯೇತಾಂ ಸಂಧ್ಯಂಗಂ ನಾಯಕಪ್ರತಿನಾಯಕೌ॥
ತದಭಾವೇ ಪತಾಕಾದ್ಯಾಃ ತದಭಾವೇ ತಥೇತರತ್ ।

ಪ್ರಾಯೇಣ ಪ್ರಧಾನಪುರುಷಪ್ರಯೋಜ್ಯಾನಿ ಸಂಧ್ಯಂಗಾನಿ ಭವಂತಿ ಕಿಂತು ಉಪಕ್ಷೇಪಾದಿತ್ರಯಂ ಬೀಜಸ್ಯ ಅಲ್ಪಮಾತ್ರಸಮುದ್ದಿಷ್ಟತ್ವಾತ್ ಅಪ್ರಧಾನಪುರುಷ ಪ್ರಯೋಜಿತಮೇವ ಸಾಧು.

ರಸವ್ಯಕ್ತಿಮುಪೇಕ್ಷ್ಯೈಷಾಂ ಅಂಗಾನಾಂ ಸನ್ನಿವೇಶನಮ್ ।
ನ ತು ಕೇವಲಯಾ ಶಾಸ್ತ್ರಸ್ಥಿತಿಸಂಪಾದನೇಚ್ಛಯಾ ॥

ತಥಾ ಚ ಯದ್ವೇಣ್ಯಾಂ ದುರ್ಯೋಧನಸ್ಯ ಭಾನುಮತ್ಯಾ ಸಹ ವಿಪ್ರಲಂಭೋ ದರ್ಶಿತಸ್ತತ್ತಾದೃಶೇಽವಸರೇಽತ್ಯಂತಮನುಚಿತಮ್.

ಅವಿರುದ್ಧಂ ತು ಯದ್ವೃತ್ತಂ ರಸಾದಿವ್ಯಕ್ತಯೇಽಧಿಕಮ್ ।
ತದಪ್ಯನ್ಯಥಯೇದ್ಧೀಮಾನ್ ನ ವದೇದ್ವಾ ಕದಾಚನ ॥

ಅನಯೋರುದಾಹರಣಂ ಸತ್ಪ್ರಬಂಧೇಷ್ವಭಿವ್ಯಕ್ತಮೇವ ।

ಅಥ ವೃತ್ತಯಃ—ಶೃಂಗಾರೇ ಕೌಶಿಕೀ ವೀರೇ ಸಾತ್ತ್ವತ್ಯಾರಭಟೀ ಪುನಃ ।
ರಸೇ ರೌದ್ರೇ ಚ ಬೀಭತ್ಸೇ ವೃತ್ತಿಃ ಸರ್ವತ್ರ ಭಾರತೀ ॥
ಚತಸ್ರೋ ವೃತ್ತಯೋ ಹ್ಯೇತಾಃ ಸರ್ವನಾಟ್ಯಸ್ಯ ಮಾತೃಕಾಃ ।
ಸ್ಯುರ್ನಾಯಿಕಾದಿವ್ಯಾಪಾರವಿಶೇಷಾ ನಾಟಕಾದಿಷು ॥

ತತ್ರ ಕೌಶಿಕೀ–ಯಾ ಶ್ಲಕ್ಷ್ಣನೇಪಥ್ಯವಿಶೇಷಚಿತ್ರಾ ಸ್ತ್ರೀಸಂಕುಲಾ ಪುಷ್ಕಲನೃತ್ಯಗೀತಾ
ಕಾಮೋಪಭೋಗಪ್ರಭವೋಪಚಾರಾ ಸಾ ಕೌಶಿಕೀ ಚಾರುವಿಲಾಸಯುಕ್ತಾ ॥

ನರ್ಮ ಚ ನರ್ಮಸ್ಫೂರ್ಜೋ ನರ್ಮಸ್ಫೋಟೋಽಥ ನರ್ಮಗರ್ಭಶ್ಚ ।
ಚತ್ವಾರ್ಯಂಗಾನ್ಯಸ್ಯಾಃ ವೈದಗ್ಧ್ಯಕ್ರೀಡಿತಂ ನರ್ಮ ॥
ಇಷ್ಟಜನಾವರ್ಜನಕೃತ್ ತಚ್ಚಾಪಿ ತ್ರಿವಿಧಂ ಮತಮ್ ।
ವಿಹಿತಂ ಶುದ್ಧಹಾಸ್ಯೇನ ಸಶೃಂಗಾರಭಯೇನ ಚ ॥

ತತ್ರ ಕೇವಲಹಾಸ್ಯೇನ ವಿಹಿತಂ ಯಥಾ ರತ್ನಾವಳ್ಯಾಮ್–"ವಾಸವದತ್ತಾ-(ಫಲಕಮುದ್ದಿಶ್ಯ ಸಹಾಸಂ) ಏಷಾಪ್ಯಪರಾ ತವ ಸಮೀಪೇ ಯಾ ಲಿಖಿತಾ, ಏತತ್ ಕಿಮಾರ್ಯವಸಂತಸ್ಯ ವಿಜ್ಞಾನಮ್.

ಸ ಶೃಂಗಾರಹಾಸ್ಯೇನ ಯಥಾ ಶಾಕುಂತಲೇ–ರಾಜಾನಂ ಪ್ರತಿ ಶಕುಂತಲಾ–ಅಸಂತೋಷೇ ಪುನಃ ಕಿಂ ಕರೋತಿ ? ರಾಜಾ– ಇದಮ್ (ಇತಿ ವ್ಯವಸಿತಃ)ಶಕುಂತಲಾ ವಕ್ತ್ರಂ ಢೌಕತೇ.

ಸಭಯಹಾಸ್ಯೇನ ಯಥಾ ರತ್ನಾವಳ್ಯಾಂ ಆಲೇಖ್ಯದರ್ಶನಾವಸರೇ "ಸುಸಂಗತಾ–ಜ್ಞಾತೋ ಮಯಾ ಏಷ ವೃತ್ತಾಂತಃ ಸಮಂ ಚಿತ್ರಫಲಕೇನ ತದ್ದೇವ್ಯೈಗತ್ವಾ ನಿವೇದಯಿಷ್ಯಾಮಿ.

ಏತದ್ವಾಕ್ಯಸಂಬಂಧಿ ನರ್ಮ ಉದಾಹೃತಮ್. ಏವಂ ವೇಶಚೇಷ್ಟಾಸಂಬಂಧ್ಯಪಿ.

ನರ್ಮಸ್ಫೂರ್ಜಃ ಸುಖಾರಂಭೋ ಭಯಾಂತೋ ನವಸಂಗಮಃ ।

ಯಥಾ ಮಾಲವಿಕಾಯಾಂ ಸಂಕೇತನಾಯಕಮಭಿಸೃತಾಯಾಂ ನಾಯಕಃ.

ವಿಸೃಜ ಸುಂದರಿ! ಸಂಗಮಸಾಧ್ವಸಂ ನನು ಚಿರಾತ್ಪ್ರಭೃತಿ ಪ್ರಣಯೋನ್ಮುಖೇ ।
ಪ್ರತಿಗೃಹಾಣ ಗತೇ ಸಹಕಾರತಾಂ ತ್ವಮತಿಮುಕ್ತಲತಾಚರಿತಂ ಮಯಿ ॥

ಮಾಲವಿಕಾ-'ಭರ್ತಃ ! ದೇವಾವ್ಯಾ ಭಯೇನ ಆತ್ಮನೋಽಪಿ ಹಿತಂ ಕರ್ತುಂ ನ ಪಾರಯಾಮಿ' ಇತ್ಯಾದಿ.— ಅಥ ನರ್ಮಸ್ಫೋಟಃ

ನರ್ಮಸ್ಫೋಟೋ ಭಾವಲೇಶೈಃ ಸೂಚಿತೋಽಲ್ಪರಸೋ ಮತಃ ।

ಯಥಾ ಮಾಲತೀಮಾಧವೇ—ಗಮನಮಲಸಂ ಶೂನ್ಯಾ ದೃಷ್ಟಿಃ ಶರೀರಮಸೌಷ್ಠವಂ
ಶ್ವಸಿತರುಧಿರಂ ಕಿಂ ನ್ವೇತತ್ ಸ್ಯಾತ್ಕಿಮನ್ಯದಿತೋಽಥವಾ ।
ಭ್ರಮತಿ ಭುವನೇ ಕಂದರ್ಪಾಜ್ಞಾ ವಿಕಾರಿ ಚ ಯೌವನಂ
ಲಲಿತಮಧುರಾಸ್ತೇ ತೇ ಭಾವಾಃ ಕ್ಷಿಪಂತಿ ಚ ಧೀರತಾಮ್॥

ಅಲಸಗಮನಾದಿಭಿರ್ಭಾವಲೇಶೈಃ ಮಾಧವಸ್ಯ ಮಾಲತ್ಯಾಂ ಅನುರಾಗಃ ಸ್ತೋಕಃ ಪ್ರಕಾಶಿತಃ.

ನರ್ಮಗರ್ಭೋ ವ್ಯವಹೃತಿರ್ನೇತುಃ ಪ್ರಚ್ಛನ್ನವರ್ತಿನಃ ।

ತತ್ರೈವ ಸಖೀರೂಪಧಾರಿಣಾ ಮಾಧವೇನ ಮಾಲತ್ಯಾಃ ಮರಣವ್ಯವಸಾಯ-ವಾರಣಮ್. ಅಥ ಸಾತ್ತ್ವತೀ—

ಸಾತ್ತ್ವತೀ ಬಹುಳಾ ಸತ್ತ್ವಶೌರ್ಯತ್ಯಾಗದಯಾರ್ಜವೈಃ ।
ಸಹರ್ಷಾ ಕ್ಷುದ್ರಶೃಂಗಾರಾ ವಿಶೋಕಾ ಸಾದ್ಭುತಾ ತಥಾ ॥
ಉತ್ಥಾಪಕೋಽಥ ಸಾಂಘಾತ್ಯಃ ಸಂಲಾಪಃ ಪರಿವರ್ತಕಃ !
ಉತ್ತೇಜನಕರೀ ಶತ್ರೋರ್ವಾಗುತ್ಥಾಪಕ ಉಚ್ಯತೇ ॥

ಯಥಾ ಮಹಾವೀರಚರಿತೇ—

ಆನಂದಾಯ ಚ ವಿಸ್ಮಯಾಯ ಚ ಮಯಾ ದೃಷ್ಟೋಽಸಿ ದುಃಖಾಯ ವಾ
ವೈತೃಷ್ಣ್ಯಂ ತು ಮಮಾಪಿ ಸಂಪ್ರತಿ ಕೃತಸ್ತ್ವದ್ದರ್ಶನೇ ಚಕ್ಷುಷಃ ।
ತ್ವತ್ಸಾಂಗತ್ಯಸುಖಸ್ಯ ನಾಸ್ಮಿ ವಿಷಯಸ್ತತ್ಕಿಂ ವೃಥಾ ವ್ಯಾಹೃತೈಃ
ಅಸ್ಮಿನ್ ವಿಶ್ರುತಜಾಮದಗ್ನ್ಯದಮನೇ ಪಾಣೌ ಧನುರ್ಜೃಂಭತಾಮ್ ॥

ಹಿಂದೆ ಹೇಳಿದ ಸಂಧ್ಯಂಗಗಳಿಗೆ ಪ್ರಯೋಜನವೇನೆಂಬುದನ್ನು ಈಗ ತಿಳಿಸುತ್ತಾನೆ. ಇಷ್ಟಾರ್ಥವು ನಾಯಕನಿಗೆ ದೊರಕುವಂತೆ ಏರ್ಪಡಿಸುವುದು, ನೋಡುವವನಿಗೆ ಆಶ್ಚರ್ಯವನ್ನು ಹುಟ್ಟಿಸುವುದು, ತಿಳಿಸಬೇಕಾದ ಸಮಾಚಾರವನ್ನು ವಿಶಾಲಗೊಳಿಸುವುದು, ನೋಡುವವನಿಗೆ ಅಭಿನಯದಲ್ಲಿ ಇಚ್ಛೆಯನ್ನು ಹುಟ್ಟಿಸುವುದು, ಗೋಪ್ಯವಾದ ಅಂಶಗಳನ್ನು ಮುಚ್ಚುವುದು, ಪ್ರಕಾಶಿಸಬೇಕಾದ ವಿಷಯಗಳನ್ನು ಪ್ರಕಾಶಗೊಳಿಸುವುದು ಇವಿಷ್ಟು ಫಲಗಳು ಅಂಗಗಳಿಂದ ದೊರಕಲಿವೆ. ಹಸ್ತ ಪಾದ ಮೊದಲಾದ ಅವಯವಗಳಿಲ್ಲದವನು ಯಾವ ಕಾರ್ಯವನ್ನು ಆರಂಭಿಸಲಿಕ್ಕೂ ಅಶಕ್ತನಾಗುವಂತೆ ಇಲ್ಲಿ ಹೇಳಿರುವ ಸಂಧ್ಯಂಗಗಳಿಲ್ಲದ ರೂಪಕವು ಪ್ರಯೋಗಕ್ಕೆ ಅರ್ಹವಾಗುವುದಿಲ್ಲ.

ನಾಯಕಪ್ರತಿನಾಯಕರು ಸಂಧ್ಯಂಗಗಳನ್ನು ಗಳಿಸಬೇಕು. ಇಲ್ಲವಾದರೆ ಪತಾಕೆ ಗಳನ್ನಾಗಲೀ, ಕಾರ್ಯವೇ ಮೊದಲಾದ ಅರ್ಥಪ್ರಕೃತಿಗಳನ್ನಾಗಲಿ ಅಥವಾ ನಾಟ್ಯದ ಬೀಜವನ್ನಾಗಲಿ ಗಳಿಸಬೇಕು. ಸಾಮಾನ್ಯವಾಗಿ ಸಂಧ್ಯಂಗಗಳನ್ನು ಪ್ರಧಾನಪುರುಷರೇ ಪ್ರತಿಸಿಧಿಸುವರು; ಆದರೆ ಉಪಕ್ಷೇಪವೇ ಮೊದಲಾದ ಮುಖಸಂಧಿಯ ಮೂರು ಅಂಗಗಳನ್ನು ಮಾತ್ರ ಇತರರು ಗಳಿಸಬಹುದು. ಅಲ್ಲಿ ಕಥೆಯು ಬೀಜ ವನ್ನು ಪೂರ್ತಿಯಾಗಿ ಸೂಚಿಸದೇ ಇರುವುದರಿಂದ ಅವನ್ನು ಬೇರೆಯವರು ನಿರ್ವಹಿಸ ಬಹುದು.

ಈ ಎಲ್ಲಾ ಅಂಗಗಳನ್ನೂ ರಸಪ್ರಕಾಶಕ್ಕನುಗುಣವಾಗಿಯೇ ಸೇರಿಸಬೇಕು, ತನಗೆ ಶಾಸ್ತ್ರದ ಪರಿಚಯವಿದೆ ಎಂಬುವನ್ನು ತೋರಿಸಲಿಕ್ಕಾಗಿಯೇ ಕವಿಯು ಅವನ್ನು ಸೇರಿಸುವುದು ಯುಕ್ತವಲ್ಲ. ವೇಣೀಸಂಹಾರದಲ್ಲಿ ಕೌರವಪಾಂಡವರ ಸೈನ್ಯಗಳು ಯುದ್ಧಕ್ಕಾಗಿ ಸೇರಿರುವಾಗ ದುರ್ಯೋಧನನಿಗೆ ಭಾನುಮತಿಯೊಡನೆ ವಿಪ್ರಲಂಭ ಶೃಂಗಾರವನ್ನು ಚಿತ್ರಿಸಿರುವುದು ಅತ್ಯಂತ ಅನುಚಿತವೆನಿಸಿದೆ. ರಸಪ್ರಕಾಶಕ್ಕೆ ಯಾವ ವೃತ್ತಾಂತವು ವಿರುದ್ಧವಲ್ಲವೋ ಅಥವಾ ಯಾವುದು ಅನಾವಶ್ಯಕವೋ ಅದನ್ನು ಕವಿಯು ಬೇರೆ ರೀತಿಯಲ್ಲಿ ಪ್ರಯೋಗಿಸಬೇಕು. ಅಥವಾ ಕೆಲವುವೇಳೆ ಅದನ್ನು ಹೇಳದೆ ಬಿಡಬಹುದು. ರಸಕ್ಕೆ ಉಪಯೋಗವಿಲ್ಲದ ಇತಿವೃತ್ತವನ್ನು ಬೇರೆ ರೀತಿಯಲ್ಲಿ ಏರ್ಪಡಿಸಿರುವುದಕ್ಕೂ ಅಥವಾ ಹೇಳದೇ ಇರುವುದಕ್ಕೂ ಶಾಕುಂತಲ ಮೊದಲಾದ ಕಡೆ ಗಳಲ್ಲಿ ಉದಾಹರಣಗಳನ್ನು ಕಾಣಬಹುದು. ವೇಣೀಸಂಹಾರದಲ್ಲಿ ಕರ್ಣಪರ್ವದ ರಾಜಹಂಸ ಕಾಕ ಇವುಗಳ ವೃತ್ತಾಂತವನ್ನು ಹೇಳಿಯೇ ಇಲ್ಲ. ಮಹಾಭಾರತದಲ್ಲಿ ಹೇಳಿರುವಂತೆ ದೈವವಾಣಿಯ ವ್ಯಕ್ತಿಯೊಬ್ಬಳು ಅನಿರೀಕ್ಷಿತವಾಗಿ ಬಂದು ಶಕುಂತಲೆ ಯನ್ನು ಕರೆದುಕೊಂಡು ಹೋದಳೆಂಬುದನ್ನು ಶಾಕುಂತಲನಾಟಕದಲ್ಲಿ ತಿಳಿಸದೆ ವಿಪ್ರಲಂಭಶೃಂಗಾರವನ್ನು ವಿಶೇಷವಾಗಿ ತೋರಿಸಲಿಕ್ಕಾಗಿ ಶಕುಂತಲೆಯು ಕಣ್ಮರೆ ಯಾಗುವ ವಿಧಾನವನ್ನು ಬೇರೆ ರೀತಿಯಾಗಿ ಬದಲಾಯಿಸಿದೆ.

ಇನ್ನು ವೃತ್ತಿಗಳ ಬಗ್ಗೆ ತಿಳಿಸುತ್ತಾನೆ. ಶೃಂಗಾರರಸವನ್ನು ಪ್ರಕಾಶಗೊಳಿಸಲು ಕೌಶಿಕೀವೃತ್ತಿಯೂ, ವೀರರಸವನ್ನು ಪ್ರಕಾಶಪಡಿಸಲು ಸಾತ್ತ್ವತೀ ಆರಭಟೀ ಈ ವೃತ್ತಿಗಳೂ, ರೌದ್ರಬೀಭತ್ಸರಸಗಳನ್ನು ಪ್ರಕಾಶಿಸಲು ಭಾರತೀವೃತ್ತಿಯೂ ಅನು ಕೂಲವಾಗಿರುತ್ತವೆ. ಈ ನಾಲ್ಕು ವೃತ್ತಿಗಳು ಎಲ್ಲಾ ಬಗೆಯ ಅಭಿನಯಕ್ಕೂ ಹೊಂದಿಕೆಯಾಗುತ್ತವೆ. ನಾಯಿಕೆ, ನಾಯಕ, ಪ್ರತಿನಾಯಕ ಇವರ ಚೇಷ್ಟೆಗಳೆನಿಸಿದ ಈ ವೃತ್ತಿಗಳು ರೂಪಕಗಳಲ್ಲಿ ರಸಪ್ರಕಾಶಕ್ಕೆ ಅನುಕೂಲವೆನಿಸಿದೆ. ಇವುಗಳಲ್ಲಿ ಕೌಶಿಕೀವೃತ್ತಿಯು ಮನೋಹರವಾದ ವಿಲಾಸವೈಭವಗಳಿಂದ ಕೂಡಿರುತ್ತದೆ; ಕಾಮಸುಖವನ್ನು ಅನುಭವಿಸಲು ಬೇಕಾದ ಉಪಚಾರಗಳನ್ನು ದೊರಕಿಸುತ್ತದೆ. ಇದರಲ್ಲಿ ಪುಷ್ಕಳವಾದ ನೃತ್ಯವೂ ಹೆಚ್ಚು. ಸ್ತ್ರೀ ಪಾತ್ರಗಳೂ ಬರುತ್ತವೆ. ನಾಯಿಕೆ ಮೊದಲಾದವರು ಧರಿಸಿದ ಸುಂದರವಾದ ವೇಶಭೂಷಣಗಳಿಂದಲೂ, ಚೇಷ್ಟೆಗಳಿಂದಲೂ

ಮಾತಿನಿಂದಲೂ ಕೇಳಲಿಕ್ಕೆ ಇದು ಮನೋಹರವಾಗಿರುವುದು. ಇದರಲ್ಲಿ ನರ್ಮ, ನರ್ಮ-ಸ್ಫೂರ್ಜ, ನರ್ಮಸ್ಫೋಟ, ನರ್ಮಗರ್ಭ ಎಂದು ನಾಲ್ಕು ಅಂಗಗಳಿವೆ. ಅವುಗಳಲ್ಲಿ ನರ್ಮವನ್ನು ಈಗ ವಿವರಿಸುತ್ತಾನೆ. ಇಷ್ಟರಾದ ಜನರಿಗೆ ಸಂತೋಷವನ್ನುಂಟು ಮಾಡುವಂತೆ ನೈಪುಣ್ಯದಿಂದ ಪ್ರೀತಿಸುವುದೇ ನರ್ಮವೆನಿಸುವುದು. ಅದೂ ಸಹ ಮೂರುಬಗೆಯಾಗಿದೆ. ಹಾಸ್ಯವಷ್ಟರಿಂದಲೇ ಕೂಡಿದ್ದು, ಶೃಂಗಾರಹಾಸ್ಯದಿಂದ ಕೂಡಿದ್ದು, ಭಯಹಾಸ್ಯದಿಂದ ಕೂಡಿದ್ದು ಹಾಗೆ ನರ್ಮವು ಮೂರು ಬಗೆಯಾಗಿದೆ. ಅವುಗಳಲ್ಲಿ ಕೇವಲ ಹಾಸ್ಯದಿಂದ ಮಾಡುವ ನರ್ಮವು ರತ್ನಾವಳಿಯಲ್ಲಿ ಹೀಗೆ ಬಂದಿದೆ. ವಾಸವದತ್ತೆಯು ಚಿತ್ರದ ಹಲಗೆಯ ಬಗ್ಗೆ ಹಾಸ್ಯಮಾಡುತ್ತ 'ನಿನ್ನ ಸಮೀಪದಲ್ಲಿ ಇವಳೊಬ್ಬಳನ್ನು ಬರೆದಿದೆಯಲ್ಲಾ ಇದೇನು ಆರ್ಯವಸಂತಕನ ಚಾತುರ್ಯವೇ ?' ಎಂದು ಕೇಳುವಳು. ಇಲ್ಲಿ ಶೃಂಗಾರವಾಗಲಿ ಭಯವಾಗಲೀ ಯಾವುದೂ ಸೇರದೇ ಇರುವ ಹಾಸ್ಯದಿಂದ ವಾಸವದತ್ತೆಯ ಕ್ರೀಡಾಚಾತುರ್ಯವು ತಿಳಿದು ಬರುತ್ತದೆ. ಶೃಂಗಾರದಿಂದ ಕೂಡಿದ ಹಾಸ್ಯದೊಡನೆ ಅನುಭವಿಸುವ ನರ್ಮವನ್ನು ಶಾಕುಂತಲದಲ್ಲಿ ತಿಳಿಯಬಹುದು. ರಾಜನಿಗೆ ಶಕುಂತಲೆಯು "ನಿನಗೆ ಸಂತೋಷವಿಲ್ಲ ದಿದ್ದರೆ ಏನು ಮಾಡುವೆ" ಎಂದು ಕೇಳಲು ರಾಜನು ಇದನ್ನು ಮಾಡುವೆನೆಂದು ಹೇಳುತ್ತ ಆಕೆಗೆ ಮುತ್ತಿಡಲು ಇಚ್ಛಿಸುವನು. ಆಗ ಶಕುಂತಲೆಯು ಮುಖವನ್ನು ಬೇರೆ ಕಡೆಗೆ ತಿರುಗಿಸುವಳು. ಇಲ್ಲಿ ಶೃಂಗಾರದಿಂದ ಕೂಡಿದ ಹಾಸ್ಯವನ್ನು ಕಾಣ ಬಹುದು. ಭಯದಿಂದ ಕೂಡಿದ ಹಾಸ್ಯವನ್ನು ರತ್ನಾವಳಿಯಲ್ಲಿ ಚಿತ್ರವನ್ನು ನೋಡುವಕಾಲದಲ್ಲಿ ಕಾಣಬಹುದು. 'ಈ ವೃತ್ತಾಂತವು ನನಗೆ ಚಿತ್ರಫಲಕದೊಡನೆ ತಿಳಿಯಿತು. ಇದನ್ನು ದೇವಿಗೆ ತಿಳಿಸುವೆನು' ಸುಸಂಗತೆಯು ಹೇಳಿದ್ದರಿಂದ ಇಲ್ಲಿ ಭಯದಿಂದ ಕೂಡಿದ ಹಾಸ್ಯವನ್ನು ಕಾಣಬಹುದು. ಈವರೆವಿಗೂ ವಾಕ್ಯದಲ್ಲಿ ಕಂಡು ಬರುವ ನರ್ಮವನ್ನು ತಿಳಿಸಿಯಾಯಿತು. ಹೀಗೆಯೇ ಉಡುಪು-ಚೇಷ್ಟೆಮೊದಲಾದವು ಗಳಿಂದ ತಿಳಿದುಬರುವ ನರ್ಮದ ಬಗ್ಗೆ ಉದಾಹರಣಗಳನ್ನು ಊಹಿಸಿಕೊಳ್ಳುವುದು.

ನರ್ಮವನ್ನು ತಿಳಿಸಿಯಾದಮೇಲೆ ನರ್ಮಸ್ಫೂರ್ಜವನ್ನು ತಿಳಿಸುತ್ತಾನೆ. ಪ್ರಾರಂಭದಲ್ಲಿ ಸುಖವನ್ನು ಕೊಟ್ಟು ಕೊನೆಗೆ ಭಯವನ್ನು ಹುಟ್ಟಿಸುವ ಇಬ್ಬರು ಪ್ರೇಮಿಗಳ ಮೊದಲನೆಯ ಸಮಾಗಮವೇ ನರ್ಮಸ್ಫೂರ್ಜವೆನಿಸುವುದು. ಸಂಕೇತಸ್ಥಾನದಲ್ಲಿದ್ದ ಮಾಲವಿಕೆಯನ್ನು ಅನುಸರಿಸಿಕೊಂಡು ಹೋದ ಅಗ್ನಿಮಿತ್ರನು "ಎಲೈ ಸುಂದರಿ, ಬಹು ಕಾಲದಲ್ಲಿ ಪ್ರಣಯಕಾಲವನ್ನು ಬಯಸುತ್ತಿದ್ದ ನನ್ನೊಡನೆ ನಿನ್ನ ಸಮಾಗಮದಿಂದ ನಿನಗೆ ಆಗಿರುವ ಭಯವನ್ನು ಬಿಡು. ನಿನ್ನ ಪ್ರೇಮವನ್ನೇ ಬಯಸುತ್ತ ನಿನಗೆ ಸಹಕಾರ (ಮಾವಿನಮರ) ವೆನಿಸಿರುವ ನನ್ನಲ್ಲಿ ನೀನು ಮಾಧವೀಲತೆಯ ವ್ಯವಹಾರವನ್ನು ಸ್ವೀಕರಿಸು. ಮಾವಿನಮರವನ್ನು ಮಾಧವೀಲತೆಯಂತೆ ನೀನು ನನ್ನನ್ನು ಆಲಿಂಗಿಸಿಕೋ" ಎಂದು ಹೇಳುವನು. ಆಗ ಮಾಲವಿಕೆಯು 'ದೇವಿಯ ಭಯದಿಂದ ನನ್ನ ಹಿತವನ್ನು ಸಾಧಿಸಲಿಕ್ಕೂ ನಾನು ಸಮರ್ಥಳಾಗಿಲ್ಲ' ಎಂದು ಹೇಳುವಳು. ಇಲ್ಲಿ

ಪ್ರಿಯತಮನಾದ ಅಗ್ನಿಮಿತ್ರನ ಸಂದರ್ಶನದಿಂದಲೂ ಸುಂದರಿ ಎಂಬ ಸಂಬೋಧನೆ ದಿಂದಲೂ ಸುಖವಾಗಿ ಆರಂಭಿಸಿ ಭಯದಲ್ಲಿ ಕೊನೆಯಾದ ನಾಯಕನಾಯಿಕೆಯರ ಪ್ರಥಮಸಮಾಗಮವನ್ನು ತಿಳಿಸಲಾಗಿದೆ.

ಈಗ ನರ್ಮಸ್ಫೋಟವನ್ನು ವಿವರಿಸುತ್ತಾನೆ. ಮನಸ್ಸಿನ ಸೂಕ್ಷ್ಮವಿಕಾರಗಳಿಂದ ಪ್ರೇಮವನ್ನು ಸ್ವಲ್ಪವೇ ಸೂಚಿಸುವುದಕ್ಕೆ ನರ್ಮಸ್ಫೋಟವೆಂದು ಕರೆಯಲಾಗಿದೆ. ಮಾಲತೀಮಾಧವದಲ್ಲಿ ಮಾಧವನು ಬರುತ್ತಿರುವುದನ್ನು ನೋಡಿ ಮಕರಂದನು ಹೀಗೆ ಹೇಳುತ್ತಾನೆ. 'ಮಾಧವನ ಗಮನವು ಆಲಸ್ಯದಿಂದ ಕೂಡಿದೆ. ದೃಷ್ಟಿಯು ಚಿಂತೆಯಿಂದ ಕೂಡಿ ಕಾಂತಿಹೀನವಾಗಿದೆ. ಶರೀರವು ಸೌಂದರ್ಯವನ್ನು ಕಳೆದುಕೊಂಡಿದೆ. ಹೆಚ್ಚು ನಿಟ್ಟುಸಿರನ್ನು ಬಿಡುತ್ತಿರುವುದು ಅವನ ಆಯಾಸವನ್ನು ತಿಳಿಸುತ್ತದೆ. ಇದೆಲ್ಲವೂ ಏಕಿರಬಹುದು! ಅಥವಾ ಇದೆಲ್ಲವೂ ಮನ್ಮಥನದೇ ಬಾಧೆಯಲ್ಲದೆ ಇನ್ನೇನು? ಮನ್ಮಥನ ಆಜ್ಞೆಯು ಪ್ರಪಂಚದಲ್ಲೆಲ್ಲಾ ಸುತ್ತುತ್ತಿದೆ. ಯೌವನವು ಎಂತಹ ವಿಕಾರವನ್ನು ಹುಟ್ಟಿಸುತ್ತದೆ! ಕೋಮಲವೂ ಸುಂದರವೂ ಆದ ಚಂದ್ರ ಚಂದನ ಮೊದಲಾದ ವಸ್ತುಗಳು ಧೈರ್ಯವನ್ನು ಕೆಡಿಸಿವೆ." ಇಲ್ಲಿ ಆಲಸ್ಯದ ಸಂಚಾರ ಮೊದಲಾದ ಕೆಲವು ಮನೋವಿಕಾರಗಳಿಂದಲೇ ಮಾಧವನಿಗೆ ಮಾಲತಿಯಲ್ಲಿ ಅನುರಾಗವು ಅಂಟಿಕೊಂಡಿತ್ತೆಂಬುದು ಸ್ವಲ್ಪವೇ ಪ್ರಕಾಶವಾಗಿದೆ. ಆದ್ದರಿಂದಲೇ ಇಲ್ಲಿ ನರ್ಮಸ್ಫೋಟವನ್ನು ಸಹೃದಯರು ಕಾಣಬಹುದು. ಗೋಪ್ಯವೇಷದಿಂದ ನಾಯಕನು ನಡೆಸುವ ವ್ಯವಹಾರವೇ ನರ್ಮಗರ್ಭವೆನಿಸುವುದು. ಮಾಲತೀಮಾಧವದ ಕೊನೆಯ ಅಂಕದಲ್ಲಿ ಸಖಿಯ ರೂಪವನ್ನು ಧರಿಸಿರುವ ಮಾಧವನು ಮಾಲತಿಯು ಸಾಯಲಿಕ್ಕಾಗಿ ಮಾಡುತ್ತಿದ್ದ ಪ್ರಯತ್ನವನ್ನು ತಡೆಯುವನು. ಇದು ಗುಪ್ತವೇಷದಿಂದ ನಾಯಕನ ವ್ಯವಹಾರವನ್ನು ತಿಳಿಸುವುದರಿಂದ ನರ್ಮಗರ್ಭವೆನಿಸಿದೆ.

ಕೌಶಿಕೀವೃತ್ತಿಯನ್ನು ತಿಳಿಸಿ ಈಗ ಸಾತ್ತ್ವತೀವೃತ್ತಿಯ ಸ್ವರೂಪವನ್ನು ತಿಳಿಸುತ್ತಾನೆ. ನಿಶ್ಚಯ, ಬಲ, ದಾನಶಕ್ತಿ, ದಯೆ, ಸರಳತನ ಇವುಗಳಿಂದ ತುಂಬಿ ಹರ್ಷ ಮತ್ತು ಅದ್ಭುತಗಳೊಡನೆ ಬೆರೆತು ಶೋಕವಿಲ್ಲದೆ, ಕೊಂಚವೇ ಶೃಂಗಾರವಿರುವ ರಚನೆಯೇ ಸಾತ್ತ್ವಕೀವೃತ್ತಿ ಎನಿಸುವುದು. ಇದರಲ್ಲಿ ಉತ್ಥಾಪಕ, ಸಾಂಘಾತ್ಯ, ಸಂಲಾಪ, ಪರಿವರ್ತಕ ಎಂದು ನಾಲ್ಕು ಬಗೆಗಳಿವೆ. ಶತ್ರುವನ್ನು ಉತ್ತೇಜನಗೊಳಿಸುವ ಮಾತೇ ಉತ್ಥಾಪಕವೆನಿಸುವುದು. ಮಹಾವೀರಚರಿತದಲ್ಲಿ ರಾವಣನ ಪ್ರೇರಣೆಯಂತೆ ವಾಲಿಯು ರಾಮನಿಗೆ ಹೀಗೆ ಹೇಳುತ್ತಾನೆ. "ನಿನ್ನ ಪ್ರಿಯದರ್ಶನದಿಂದ ಆನಂದವೂ, ಅಲೌಕಿಕಸೌಂದರ್ಯದಿಂದ, ವಿಸ್ಮಯವೂ ನಿನ್ನಿಂದಲೇ ಕೊಲೆಯಾಗಬೇಕಾದ್ದರಿಂದ ದುಃಖವೂ ನನಗೆ ಸಂಭವಿಸಿವೆ. ಆದರೂ ಈಗ ವಿನಾಶಕಾಲವಲ್ಲಿ ನಿನ್ನನ್ನು ನೋಡಿದ್ದರಿಂದ ನನ್ನ ಕಣ್ಣಿನ ಆಶೆಯು ಹೇಗೆ ತೊಲಗಿತು? ಆಮ ಬಹುಕಾಲ ಇರುವಂತೆಯೇ ಇಲ್ಲ. ನಿನ್ನ ಸಂಮೇಳನದಿಂದ ನನಗೆ ಯಾವ ಸುಖವುಂಟಾಗಿದೆಯೋ ಅವನ್ನು ಅನುಭವಿಸಲು ನಾನು ಅರ್ಹನೆನಿಸಿಲ್ಲ. ಆದ್ದರಿಂದ

ವ್ಯರ್ಥವಾಗಿ ಮಾತನಾಡಿದ್ದರಿಂದ ಆಗುವ ಪ್ರಯೋಜನವೇನು ? ಮಹಾವೀರನೆಂದು ಪ್ರಸಿದ್ಧನಾದ ಪರಶುರಾಮನನ್ನು ನಾಶಮಾಡುವ ಈ ಕೈಯಲ್ಲಿ ಧನುಸ್ಸು ಯುದ್ಧಕ್ಕಾಗಿ ಸಿದ್ಧವಾಗಲಿ'' ಇಲ್ಲಿ ರಾಮನಿಗೆ ಉತ್ತೇಜನವನ್ನು ಕೊಡಲಿಕ್ಕಾಗಿ ಹೊರಟಿರುವ ವಾಲಿಯ ಈ ಮಾತು ಉತ್ಥಾಪಕವೆನಿಸಿದೆ.

ಮಾತ್ರಾರ್ಥದೈವಶಕ್ತ್ಯಾದೇಃ ಸಾಂಘಾತ್ಯಃ ಸಂಘಭೇದನಮ್ ।

ಮಂತ್ರಶಕ್ತ್ಯಾ ಯಥಾ ಮುದ್ರಾರಾಕ್ಷಸೇ ರಾಕ್ಷಸಸಹಾಯಾನಾಂ ಚಾಣಕ್ಯೇನ ಸುಬುದ್ಧ್ಯಾ ಭೇದನಮ್. ಅರ್ಥಶಕ್ತ್ಯಾಪಿ ತತ್ರೈವ. ದೈವಶಕ್ತ್ಯಾ ಯಥಾ ರಾಮಾಯಣೇ ರಾವಣಾದ್ವಿಭೀಷಣಸ್ಯ ಭೇದಃ.

ಸಂಲಾಪಃ ಸ್ಯಾದಭೀರೋಕ್ತಿರ್ನಾನಾಭಾವಸಮಾಶ್ರಯಃ ।

ಯಥಾ ವೀರಚರಿತೇ ರಾಮಃ-"ಅಯಂ ಸಃ, ಯಃ ಕಿಲ ಸಪರಿವಾರಕಾರ್ತಿಕೇಯವಿಜಯಾವರ್ಜಿತೇನ ಭಗವತಾ ನೀಲಲೋಹಿತೇನ ಪರಿವತ್ಸರಸಹಸ್ರಾಂತೇವಾಸಿನೇ ತುಭ್ಯಂ ಪ್ರಸಾದೀಕೃತಃ ಪರಶುಃ ? ಪರಶುರಾಮಃ—ರಾಮ! ದಾಶರಥೇ! ಸ ಏವಾಯಂ ಆರ್ಯಪಾದಾನಾಂ ಪ್ರಿಯಃ ಪರಶುಃ" ಇತ್ಯಾದಿ.

ಪ್ರಾರಬ್ಧಾದನ್ಯಕಾರ್ಯಾಣಾಂ ಕರಣಂ ಪರಿವರ್ತಕಃ

ಯಥಾ ವೇಣ್ಯಾಂ-"ಭೀಮಃ-ಸಹದೇವ ! ಗಚ್ಛ ತ್ವಂ ಗುರುಮನುವರ್ತಸ್ವ. ಅಹಮಪ್ಯಸ್ತ್ರಾಗಾರಂ ಪ್ರವಿಶ್ಯ ಆಯುಧಸಹಾಯೋ ಭವಾಮಿ ಅಥವಾ ಆಮಂತ್ರಯಿತವ್ಯೈವ ಮಯಾ ಪಾಂಚಾಲೀ.

ಅಥ ಆರಭಟೀ-- ಮಾಯೇಂದ್ರಜಾಲಸಂಗ್ರಾಮಕ್ರೋಧೋದ್ಭ್ರಾಂತಾದಿಚೇಷ್ಟಿತಂ
ಸಂಯುಕ್ತಾ ವಧಬಂಧಾದ್ಯೈರುದ್ಧತಾರಭಟೀ ಮತಾ ।
ವಸ್ತೂತ್ಥಾಪನಸಂಫೇಟೌ ಸಂಕ್ಷಿಪ್ತಿರವಪಾತನಮ್
ಇತಿ ಭೇದಾಸ್ತು ಚತ್ವಾರಃ ಆರಭಟ್ಯಾಃ ಪ್ರಕೀರ್ತಿತಾಃ ॥
ಮಾಯಾದ್ಯುತ್ಥಾಪಿತಂ ವಸ್ತೂತ್ಥಾಪನಮುಚ್ಯತೇ

ಯಥೋದಾತ್ತರಾಘವೇ-- ಜೀಯಂತೇ ಜಯಿನೋಽಪಿ ಸಾಂದ್ರತಿಮಿರವ್ರಾತೈರ್ವಿಯದ್ವ್ಯಾಪಿಭಿಃ
ಭಾಸ್ವಂತಃ ಸಕಲಾ ರವೇರಪಿ ಕರಾಃ ಕಸ್ಮಾದಕಸ್ಮಾದಮೀ।
ಏತೇ ಚೋಗ್ರಕಬಂಧಕಂಠರುಧಿರೈರಾಧ್ಮಾಯಮಾನೋದರಾಃ
ಮುಂಚಂತ್ಯಾನನಕಂದರಾನಲಮುಚಸ್ತೀವ್ರಾನ್ ರವಾನ್ ಫೇರವಾಃ॥

ಸಂಫೇಟಸ್ತು ಸಮಾಘಾತಃ ಕ್ರುದ್ಧಸತ್ವರಯೋರ್ದ್ವಯೋಃ ।
ಯಥಾ ಮಾಲತ್ಯಾಂ ಮಾಧವಾಘೋರಘಂಟಯೋಃ.
ಸಂಕ್ಷಿಪ್ತವಸ್ತುರಚನಾ ಶಿಲ್ಪೈರಿತರಥಾಪಿ ವಾ ।
ಸಂಕ್ಷಿಪ್ತಿಃ ಸ್ಯಾನ್ನಿವೃತ್ತೌ ಚ ನೇತುರ್ನೇತ್ರಂತರಗ್ರಹಃ ॥

ಯಥಾ ಉದಯನಚರಿತೇ ಕಿಲಿಂಜಹಸ್ತಿಪ್ರಯೋಗಃ. ದ್ವಿತೀಯಂ ಯಥಾ-

ವಾಲಿನಿವೃತ್ತ್ಯಾ ಸುಗ್ರೀವಃ. ಯಥಾ ವಾ–ಪರಶುರಾಮಸ್ಯ ಔದ್ಧತ್ಯನಿವೃತ್ತ್ಯಾ ಶಾಂತತ್ವಾಪಾದನಮ್ "ಪುಣ್ಯಾ ಬ್ರಾಹ್ಮಣಜಾತಿಃ" ಇತಿ.

ಪ್ರವೇಶತ್ರಾಸನಿಷ್ಕ್ರಾಂತಿಹರ್ಷವಿದ್ರವಸಂಭವಮ್ ।
ಅವಪಾತನಮಿತ್ಯುಕ್ತಮ್ ಪೂರ್ವಮುಕ್ತೈವ ಭಾರತೀ ॥

ಯಥಾ ಕೃತ್ಯರಾವಣೇ ಷಷ್ಠೇಽಂಕೇ–(ಪ್ರವಿಶ್ಯ ಖಡ್ಗಹಸ್ತಃ, ಪುರುಷಃ ಇತ್ಯತ ಪ್ರಭೃತಿ ನಿಷ್ಕ್ರಮಣಪರ್ಯಂತಮ್.

ಅಥ ನಾಟ್ಯೋಕ್ತಯಃ—ಅಶ್ರಾವ್ಯಂ ಖಲು ಯದ್ವಸ್ತು ತದಿಹ ಸ್ವಗತಂ ಮತಮ್ ।
ಸರ್ವಶ್ರಾವ್ಯಂ ಪ್ರಕಾಶಂ ಸ್ಯಾತ್ ತದ್ಭವೇದಪವಾರಿತಮ್ ॥
ರಹಸ್ಯಂ ತು ಯದನ್ಯಸ್ಯ ಪರಾವೃತ್ಯ ಪ್ರಕಾಶ್ಯತೇ ।
ತ್ರಿಪಾತಕಕರೇಣಾನ್ಯಾನ್ ಅಪವಾರ್ಯಾಂತರಾ ಕಥಾಮ್
ಅನ್ಯೋನ್ಯಾಮಂತ್ರಣಂ ಯತ್ಸ್ಯಾಜ್ಜನಾಂತಿಕಮ್ ।
ಕಿಂ ಬ್ರವೀಷೀತಿ ಯನ್ನಾಟ್ಯೇ ವಿನಾ ಪಾತ್ರಂ ಪ್ರಯುಜ್ಯತೇ ॥
ಶ್ರುತ್ವೇವಾನುಕ್ತಮಪ್ಯರ್ಥಂ ತತ್ಸ್ಯಾದಾಕಾಶಭಾಷಿತಮ್ ।

ಯಃ ಕಶ್ಚಿದರ್ಥೋ ಯಸ್ಮಾದ್ಗೋಪನೀಯಸ್ತಸ್ಯಾಂತರತಃ, ಊರ್ಧ್ವಂ ಸರ್ವಾಂಗುಲಿನಾಮಿಕಾನಾಮಿಕಂ ತ್ರಿಪತಾಕಲಕ್ಷಣಂ ಕರಂ ಕೃತ್ವಾ ಅನ್ಯೇನ ಸಹ ಯನ್ಮಂತ್ರ್ಯತೇ ತಜ್ಜನಾಂತಿಕಮ್. ಪರಾವೃತ್ಯಾಽನ್ಯಸ್ಯ ರಹಸ್ಯಕಥನಮಪವಾರಿತಮ್. ಶೇಷಂ ಸ್ಪಷ್ಟಮ್.

ದತ್ತಾಂ ಸಿದ್ಧಾಂ ಚ ಸೇನಾಂ ಚ ವೇಶ್ಯಾನಾಂ ನಾಮ ದರ್ಶಯೇತ್ ।
ದತ್ತಪ್ರಾಯಾಣಿ ವಣಿಜಾಂ ಚೇಟಚೇಟ್ಯೋಸ್ತಥಾ ಪುನಃ ॥
ವಸಂತಾದಿಷು ವರ್ಣ್ಯಸ್ಯ ವಸ್ತುನೋ ನಾಮ ಯದ್ಭವೇತ್ ।

ವೇಶ್ಯಾ ಯಥಾ–ವಸಂತಸೇನಾದಿಃ. ವಣಿಕ್ ವಿಷ್ಣುದತ್ತಾದಿಃ. ಚೇಟಃ ಕಲಹಂಸಾದಿಃ. ಚೇಟೀ ಮಂದರಿಕಾದಿಃ.

ನಾಮ ಕಾರ್ಯಂ ನಾಟಕಸ್ಯ ಗರ್ಭಿತಾರ್ಥಪ್ರಕಾಶಕಮ್.

ಯಥಾ ರಾಮಾಭ್ಯುದಯಾದಿಃ—

ನಾಯಿಕಾನಾಯಕಾಖ್ಯಾನಾಂ ಸಂಜ್ಞಾ ಪ್ರಕರಣಾದಿಷು ।

ಯಥಾ ರತ್ನಾವಳೀಕರ್ಪೂರಮಂಜರ್ಯಾದಿಃ—

ಪ್ರಾಯೇಣ ಣ್ಯಂತಕಃ ಸಾಧಿಃ ಗಮೇಃ ಸ್ಥಾನೇ ಪ್ರಯುಜ್ಯತೇ ।

ಯಥಾ ಶಾಕುಂತಲೇ. ಋಷೀ–ಗಚ್ಛಾವ ಇತ್ಯರ್ಥೇ ಸಾಧಯಾವಸ್ತಾವತ್.

ಜೊತೆಗೂಡಿರುವವರನ್ನು ಮಂತ್ರಶಕ್ತಿಯಿಂದಲೋ, ಹಣದಿಂದಲೋ, ದೈವಬಲದಿಂದಲೋ ಬೇರ್ಪಡಿಸುವುದೇ ಸಾಂಘಾತ್ಯವೆನಿಸುವುದು. ಮಂತ್ರದಿಂದ ಭೇದಿಸುವುದು ಮುದ್ರಾರಾಕ್ಷಸದಲ್ಲಿ ಕಾಣುತ್ತದೆ. ರಾಕ್ಷಸನ ಕಡೆಯವರನ್ನು ಚಾಣಕ್ಯನು ಸ್ವಬುದ್ಧಿಯಿಂದಲೇ ಭೇದಿಸುತ್ತಾನೆ. ಹಣದ ಮೂಲಕ ಭೇದವನ್ನು ಅಲ್ಲಿಯೇ ಅನೇಕಕಡೆಗಳಲ್ಲಿ ಕಾಣ

ಬಹುದು. ದೈವಶಕ್ತಿಯಿಂದ ಭೇದಿಸುವುದನ್ನು ರಾಮಾಯಣದಲ್ಲಿ ರಾವಣನಿಂದ ವಿಭೀಷಣನನ್ನು ಭೇದಿಸುವಾಗ ಕಾಣಬಹುದು. ಅನೇಕ ಅಭಿಪ್ರಾಯಗಳನ್ನು ತಿಳಿಸುವಂತಹ ಗಂಭೀರವಾದ ವಾಣಿಯೇ ಸಂಲಾಪವೆನಿಸುವುದು. ಮಹಾವೀರಚರಿತದಲ್ಲಿ ರಾಮನು "ಪರಿವಾರಸಮೇತನಾಗಿ ಬಂದ ಕಾರ್ತಿಕೇಯನನ್ನು ಸೋಲಿಸಿದ್ದರಿಂದ ಸಂತೋಷಗೊಂಡ ಮಹಾದೇವನು ಸಾವಿರ ವರ್ಷಗಳವರೆಗೆ ಶಿಷ್ಯನಾಗಿದ್ದ ನಿನಗೆ ಪ್ರಸಾದವಾಗಿ ಅನುಗ್ರಹಿಸಿದ ಪರಶುವಿದು" ಎಂದು ಹೇಳಲು ಈಗ ಪರಶುರಾಮನು "ದಶರಥಪುತ್ರನಾದ ರಾಮನೇ, ಪೂಜ್ಯರಿಗೆ ಪ್ರಿಯವೆನಿಸಿದ ಆ ಪರಶುವೇ ಇದು" ಎಂದು ಹೇಳುವನು. ಇಲ್ಲಿ ಪರಿವಾರಸಮೇತನಾದ ಕಾರ್ತಿಕೇಯನನ್ನು ಸೋಲಿಸಿದ್ದರಿಂದಲೂ, ಮಹಾದೇವನಿಗೆ ಪ್ರಿಯವೆನಿಸಿ ಪಡೆದದ್ದರಿಂದಲೂ, ಪರಶು ಉತ್ಕೃಷ್ಟವಾದುದೆಂಬುದು ಇಲ್ಲಿ ಸೂಚಿತವಾಗುವುದರಿಂದ ಇದೇ ಸಂಲಾಪವೆನಿಸಿದೆ. ಆರಂಭಿಸಿದ್ದಕ್ಕಿಂತಲೂ ಬೇರೆ ಕಾರ್ಯಗಳನ್ನು ನಡೆಸುವುದು ಪರಿವರ್ತಕವೆನಿಸಿದೆ. ವೇಣೀಸಂಹಾರದಲ್ಲಿ ಭೀಮಸೇನನು 'ಸಹದೇವನೇ, ನೀನು ಹೋಗು. ಹಿರಿಯ ಅಣ್ಣನನ್ನು ಅನುಸರಿಸಿಕೊಂಡಿರು. ನಾನೂ ಸಹ ಅಸ್ತ್ರಗೃಹಕ್ಕೆ ಹೋಗಿ ಆಯುಧಗಳನ್ನು ತೆಗೆದುಕೊಳ್ಳುವೆನು ಅಥವಾ ನಾನೇ ಪಾಂಚಾಲಿಯನ್ನು ಕರೆಯುವೆನು' ಎಂದು ಹೇಳುವನು. ಇದರಿಂದ (ಅಥವಾ) ಎಂದು ಬೇರೊಂದು ಕಾರ್ಯವನ್ನು ಮಾಡುವುದಾಗಿ ತಿಳಿಸಿದ್ದರಿಂದ ಇದು ಪರಿವರ್ತಕವೆನಿಸಿದೆ.

ಇನ್ನು ಆರಭಟೀ ವೃತ್ತಿಯನ್ನು ವಿವರಿಸುತ್ತಾನೆ. ಮಾಯ, ಇಂದ್ರಜಾಲಪ್ರಯೋಗ ಯುದ್ಧ, ಕ್ರೋಧದಿಂದ ಭ್ರಮೆಗೊಂಡು ಹೆದರುವುದು. ಸಾಹಸಕೃತ್ಯಗಳನ್ನೆಸಗುವುದು ಇವುಗಳಿಂದಲೂ, ವಧ, ಬಂಧ ಮೊದಲಾದ ವ್ಯಾಪಾರಗಳಿಂದಲೂ ಕೂಡಿದ ಭಯಂಕರವಾದ ವೃತ್ತಿಯು ಆರಭಟೀ ಎನಿಸುವುದು. ಇದರಲ್ಲಿ ವಸ್ತೂತ್ಥಾಪನ, ಸಂಫೇಟ, ಸಂಕ್ಷಿಪ್ತಿ ಅವಪಾತನ ಎಂದು ನಾಲ್ಕು ಬಗೆಗಳಿವೆ. ಮಾಯಾ, ಇಂದ್ರಜಾಲಪ್ರಯೋಗ ಇವುಗಳಿಂದ ವಸ್ತುವನ್ನು ಪ್ರಕಟಿಸುವುದೇ ವಸ್ತೂತ್ಥಾಪನವೆನಿಸುವುದು. ಉದಾತ್ತರಾಘವದಲ್ಲಿ "ಅಕಸ್ಮಾತ್ತಾಗಿ ಆಕಾಶವನ್ನು ವ್ಯಾಪಿಸಿದ ಗಾಢಾಂಧಕಾರಸಮೂಹಗಳು ಎಲ್ಲರನ್ನೂ ತಿರಸ್ಕರಿಸುವಷ್ಟು ಹೆಚ್ಚಾಗಿ ಪ್ರಕಾಶಿಸುವಂತಹ ಸೂರ್ಯನ ಕಿರಣಗಳೆಲ್ಲವನ್ನು ಮುಚ್ಚುತ್ತಲಿವೆ. ತಲೆಯಿಲ್ಲದ ಭಯಂಕರವಾದ ಶರೀರಗಳ ಕುತ್ತಿಗೆಗಳಿಂದ ಸುರಿಯುವ ರಕ್ತದಿಂದ ಮಧ್ಯಪ್ರದೇಶವನ್ನು ತುಂಬಿಕೊಂಡು ಮುಖಗಳೆಂಬ ಗವಿಗಳಿಂದ ಬೆಂಕಿಯನ್ನು ಸುರಿಸುತ್ತಿರುವ ಈ ನರಿಗಳು ತೀವ್ರವಾಗಿ ಶಬ್ದಮಾಡುತ್ತಿವೆ" ಇಲ್ಲಿ ಮಾಯೆಯಿಂದ ಗಾಢಾಂಧಾಕಾರವೇ ಮೊದಲಾದ ವಸ್ತುಗಳನ್ನು ಹುಟ್ಟಿಸಿರುವುದಾಗಿ ತಿಳಿಸಿದ್ದರಿಂದ ಇದು ವಸ್ತೂತ್ಥಾಪನವೆನಿಸಿದೆ. ಕೋಪಗೊಂಡವರಿಬ್ಬರು ಮತ್ತು ಆತುರಪಡುವವರಿಬ್ಬರು ಇವರೊಳಗೆ ಪರಸ್ಪರವಾಗಿ ಹೊಡೆದಾಟವಾಗುವುದೇ ಸಂಫೇಟವೆನಿಸುವುದು. ಮಾಲತೀಮಾಧವದಲ್ಲಿ ಮಾಧವನಿಗೂ ಅಘೋರಘಂಟನಿಗೂ ಇಂತಹ ಹೊಡೆದಾಟವು ನಡೆದಿರುವುದನ್ನು ಕಾಣಬಹುದು. ಶಿಲ್ಪದಿಂದಾಗಲೀ ಬೇರೆ ರೀತಿಯಿಂದಾಗಲೀ ಒಂದು ವಸ್ತುವನ್ನು ನಿರ್ಮಿಸುವುದೇ ಸಂಕ್ಷಿಪ್ತಿ ಎನಿಸುವುದು. [illegible] ಒಳಗೆ ಹೋದ

ಮೇಲೆ ಮತ್ತೊಬ್ಬನು ನಾಯಕನ ಬಳಿಗೆ ಬರುವುದೆಂಬ ಜ್ಞಾನವೂ ಸಹ ಸಂಕ್ಷಿಪ್ತಿ ಎನಿಸು ವುದು. ಉದಯನಚರಿತದಲ್ಲಿ ಕಟ್ಟಿಗೆಯಿಂದ ಮಾಡಿದ ಕೃತ್ರಿಮವಾದ ಆನೆಯು ಕಾಣಿಸು ವುದೇ ಮೊದಲನೆಯದಕ್ಕೆ ಉದಾಹರಣವೆನಿಸಿದೆ. ಎರಡನೆಯದಕ್ಕೆ ವಾಲಿಯು ತೊಲ ಗಿದಮೇಲೆ ರಾಮನ ಜೊತೆಗೆ ಸುಗ್ರೀವನು ಬರುವುದೇ ಉದಾಹರಣವೆನಿಸಿದೆ. ಪರಶು ರಾಮನಿಗೆ ಮೊದಲಿದ್ದ ಗರ್ವವು ತೊಲಗಿ ಶಾಂತಸ್ಥಿತಿಯುಂಟಾಗುವುದನ್ನು ಇಲ್ಲಿ ಉದಾಹರಿಸಬಹುದು. "ಪುಣ್ಯಾ ಬ್ರಾಹ್ಮಣಜಾತಿಃ" ಎಂದು ಅವನು ಹೇಳುವ ಮಾತಿನಿಂದ ಇದು ತಿಳಿಯುತ್ತದೆ. ಪ್ರವೇಶ, ಭಯ, ನಿರ್ಗಮನ, ಹರ್ಷ, ಪಲಾಯನ ಇವುಗಳಿಂದ ಉಂಟಾಗುವ ಸಂಘರ್ಷಣವೇ ಅವಪಾತನವೆನಿಸುತ್ತದೆ. ಕೃತ್ಯರಾವಣದ ಆರನೆಯ ಅಂಕದಲ್ಲಿ 'ಖಡ್ಗಧಾರಿಯಾದ ಪುರುಷನು ಪ್ರವೇಶಿಸಿ' ಎಂದು ಹೇಳಿದ್ದರಿಂದ ಮುಂದೆ ಅವನು ಹೊರಡುವವರಿವಿಗೂ ನಡೆಯುವುದೆಲ್ಲವೂ ಅವಪಾತವೆನಿಸಿದೆ.

ಭಾರತೀವೃತ್ತಿಯ ಸ್ವರೂಪವನ್ನು ಹಿಂದೆ ತಿಳಿಸಿದೆ. ಸಂಸ್ಕೃತದಲ್ಲಿಯೇ ಹೆಚ್ಚಾಗಿಯೂ ಇತರ ಪ್ರಾಕೃತ ಮೊದಲಾದ ಭಾಷೆಗಳಲ್ಲಿಯೂ ಸಹ ವ್ಯವಹರಿಸುವುದೇ ಭಾರತೀವೃತ್ತಿ ಎನಿಸುವುದು. ಗಂಡಸರು ಪರಸ್ಪರವಾಗಿ ವ್ಯವಹರಿಸುವಾಗ ಈ ವೃತ್ತಿ ಯನ್ನು ಉಪಯೋಗಿಸಬೇಕು.

ಇನ್ನು ಮುಂದೆ ನಾಟ್ಯದಲ್ಲಿ ಪ್ರಯೋಗಿಸುವ ಮಾತುಗಳ ಸ್ವರೂಪವನ್ನು ತಿಳಿಸು ತ್ತಾನೆ. ಬೇರೆಯವರಿಗೆ ಕೇಳಿಸದಂತೆ ಆಡುವ ಮಾತು ಸ್ವಗತವೆನಿಸುವುದು. ಎಲ್ಲರಿಗೂ ಕೇಳಿಸುವಂತೆ ಆಡುವ ಮಾತು ಪ್ರಕಾಶವೆನಿಸುವುದು. ಒಬ್ಬನೊಡನೆ ಮಾತನಾಡು ತ್ತಿರುವಾಗ ಮತ್ತೊಬ್ಬನ ಕಡೆಗೆ ತಿರುಗಿ ರಹಸ್ಯವನ್ನು ತಿಳಿಸುವುದು ಅಪವಾರಿತವೆನಿ ಸುವುದು. ಬೇರೆಯವರ ಜೊತೆಯಲ್ಲಿ ಮಾತನಾಡುತ್ತಿರುವಾಗ ಅವರಿಗೆ ಕೇಳಿಸದಂತೆ ಇಬ್ಬರು ಸ್ವಲ್ಪದೂರ ಮುಂದಕ್ಕೆ ಹೋಗಿ ತಮ್ಮಲ್ಲಿಯೇ ಗೊಣಗುಟ್ಟಿಕೊಳ್ಳುವುದು ಜನಾಂತಿಕವೆನಿಸುವುದು. ಹೇಳುವವನು ಕಾಣಿಸಿಕೊಳ್ಳದಿದ್ದರೂ, 'ನಾನು ಏನು ಹೇಳಿದೆ' ಎಂದು ಹೇಳುತ್ತ, ಯಾರೂ ಹೇಳದೆ ಇರುವುದನ್ನೂ ಸಹ ತಾನು ಕೇಳಿಸಿ ಕೊಂಡಂತೆ ಭಾವಿಸಿಕೊಂಡು ಮಾತನಾಡುವುದೇ ಆಕಾಶಭಾಷಿತವೆನಿಸುವುದು.

ಮೂಲದಲ್ಲಿ ಹೇಳಿರುವ 'ತ್ರಿಪತಾಕಕರೇಣ' ಎಂಬುದನ್ನು ಇಲ್ಲಿ ವಿವರಿಸುತ್ತಾನೆ. ಒಬ್ಬನ ಜೊತೆಯಲ್ಲಿ ಮತ್ತೊಬ್ಬನು ಮಾತನಾಡುತ್ತಿರುವಾಗ ಅವನಿಗೆ ತಿಳಿಯದಂತೆ ಏನನ್ನಾದರೂ ಬೇರೊಬ್ಬನಿಗೆ ಹೇಳಬೇಕಾಗಿದ್ದರೆ ಆಗ ಅಂತವನು ತನ್ನ ಕೈಯಲ್ಲಿ ಉಂಗುರದ ಬೆರಳನ್ನು ಮಡಚಿಕೊಂಡು ಉಳಿದ ಬೆರಳುಗಳನ್ನು ಮೇಲಕ್ಕೆ ಎತ್ತುವ ರೀತಿಯಲ್ಲಿ ಅವನಿಗೆ ಅದನ್ನು ತಿಳಿಸುವುದೇ ಜನಾಂತಿಕವೆನಿಸುತ್ತದೆ.

ವೇಶ್ಯೆಯರನ್ನು ದತ್ತಾ, ಸಿದ್ಧಿ, ಸೇನಾ ಎಂಬ ಹೆಸರುಗಳಿಂದಲೂ, ವೈಶ್ಯರನ್ನು ಸಾಮಾನ್ಯವಾಗಿ ದತ್ತ ಎಂಬ ಶಬ್ದದಿಂದಲೂ, ಚೇಟ ಚೇಟಿಯರನ್ನು ವಸಂತಕಾಲ ದಲ್ಲಿ ವರ್ಣಿಸಬೇಕಾಗಿರುವ ವಸ್ತುಗಳ ಹೆಸರುಗಳಿಂದಲೂ ಕರೆಯಬೇಕು. ವಸಂತಸೇನೆ ಎಂಬ ಹೆಸರು ವೇಶ್ಯೆಗೂ, ವಿಷ್ಣುದತ್ತ ಎಂಬುದು ವರ್ತಕನಿಗೂ, ಕಲಹಂಸ ಎಂಬುದು

ಚೇಟನಿಗೂ, ಮಂದಾರಿಕೆ ಎಂಬುದು ಚೇಟಿಗೂ ಹೆಸರು ಇರುವುದನ್ನು ಗಮನಿಸ
ಬಹುದು. ನಾಟಕಕ್ಕೆ ಇರುವ ಹೆಸರು ಅರ್ಥಪೂರ್ಣವಾಗಿರಬೇಕು. ನಾಟಕಕ್ಕೆ ಕಥಾ
ವಸ್ತುವನ್ನು ಪ್ರಕಾಶಪಡಿಸುವಂತಹ ಹೆಸರನ್ನೇ ಇಡಬೇಕು. ರಾಮಾಭ್ಯುದಯವೆಂಬ
ಹೆಸರು ರಾಮನ ಸರ್ವತೋಮುಖವಾದ ಅಭಿವೃದ್ಧಿಯನ್ನು ತಿಳಿಸುತ್ತ ಅನ್ವರ್ಥವೆನಿ
ಸಿದೆ. ಪ್ರಕರಣಗಳಿಗೆ ನಾಯಿಕೆ ಅಥವಾ ನಾಯಕನ ಹೆಸರನ್ನು ಇಡಬಹುದು. ಮಾಲತೀ
ಮಾಧವಚಾರುದತ್ತ ಇವೇ ಅದಕ್ಕೆ ಉದಾಹರಣಗಳು. ನಾಟಿಕೆ, ಸಟ್ಟಕ ಮೊದಲಾದವು
ಗಳಿಗೆ ನಾಯಿಕೆಯ ಹೆಸರನ್ನಿಡಬೇಕು. ರತ್ನಾವಳೀ, ಕರ್ಪೂರಮಂಜರೀ ಇವೇ ಇಲ್ಲಿ
ಉದಾಹರಣಗಳೆನಿಸಿವೆ. ಪಾತ್ರಗಳು ಎಲ್ಲಾ ಕಡೆಯಲ್ಲೂ ವ್ಯವಹರಿಸುವಾಗ ಗಮ್
ಧಾತುವಿಗೆ ಬದಲಾಗಿ ಸಾಧ್‌ಧಾತುವಿನ ಣಿಜಂತರೂಪವನ್ನು 'ಹೋಗು' ಎಂಬ ಅರ್ಥ
ದಲ್ಲಿ ಉಪಯೋಗಿಸುವುದು ನಾಟ್ಯಗಳಲ್ಲಿ ಒಂದು ವಿಶೇಷವೆನಿಸಿದೆ. ಶಾಂಕುತಲದಲ್ಲಿ
ಋಷಿಗಳಿಬ್ಬರು ರಂಗಸ್ಥಳದಿಂದ ಹೋಗುವಾಗ 'ಗಚ್ಛಾವಃ' ಎಂಬುದರ ಬದಲು
'ಸಾಧಯಾವಸ್ತಾವತ್' ಎಂದು ಹೇಳುವುದನ್ನು ವಾಚಕರು ಗಮನಿಸಬಹುದು.

ರಾಜಾ ಸ್ವಾಮಿನ್ನಿತಿ ದೇವೇತಿ ಭೃತ್ಯೈರ್ಭಟ್ಟೇತಿ ಚಾಧಮೈಃ. |
ರಾಜರ್ಷಿಭಿರ್ವಯಸ್ಯೇತಿ ತಥಾ ವಿದೂಷಕೇಣ ಚ ||
ರಾಜನ್ನಿತ್ಯೃಷಿಭಿರ್ವಾಚ್ಯಃ ಸೋಽಪತ್ಯಪ್ರತ್ಯಯೇನ ಚ |
ಸ್ವೇಚ್ಛಯಾ ನಾಮಭಿರ್ವಿಪ್ರೈಃ ವಿಪ್ರ ಆರ್ಯೇತಿ ಚೇತರೈಃ ||
ವಯಸ್ಯೇತ್ಯಥವಾ ನಾಮ್ನೋ ವಾಚ್ಯೋ ರಾಜ್ಞೋ ವಿದೂಷಕಃ |
ವಾಚ್ಯೌ ನಟೀಸೂತ್ರಧಾರಾವಾರ್ಯನಾಮ್ನಾ ಪರಸ್ಪರಮ್ ||
ಸೂತ್ರಧಾರಂ ವದೇದ್ಭಾವ ಇತಿ ವೈ ಪಾರಿಪಾರ್ಶ್ವಕಃ |
ಸೂತ್ರಧಾರೋ ಮಾರಿಷೇತಿ ಹಂಡೇ ಇತ್ಯಧಮೈಃ ಸಮಾಃ ||
ವಯಸ್ಯೇತ್ಯುತ್ತಮೈರ್ಹಂಹೋ ಮಧ್ಯೈರಾರ್ಯೇತಿ ಚಾಗ್ರಜಃ |
ಭಗವನ್ನಿತಿ ವಕ್ತವ್ಯಾಃ ಸರ್ವೈರ್ದೇವರ್ಷಿಲಿಂಗಿನಃ ||
ವದೇದ್ರಾಜ್ಞೀಂ ಚ ಚೇಟೀಂ ಚ ಭವತೀತಿ ವಿದೂಷಕಃ |
ಆಯುಷ್ಮನ್ ರಥಿನಂ ಸೂತೋ ವೃದ್ಧಂ ತಾತೇತಿ ಚೇತರಃ ||
ವತ್ಸ ಪುತ್ರಕ ತಾತೇತಿ ನಾಮ್ನಾ ಗೋತ್ರೇಣ ವಾ ಸುತಃ |
ಶಿಷ್ಯೋಽನುಜಶ್ಚ ವಕ್ತವ್ಯೋಽಮಾತ್ಯ ಆರ್ಯೇತಿ ಚಾಧಮೈಃ ||
ವಿಪ್ರೈರಯಮಮಾತ್ಯೇತಿ ಸಚಿವೇತಿ ಚ ಭಣ್ಯತೇ |
ಸಾಧೋ ಇತಿ ತಪಸ್ವೀ ಚ ಪ್ರಶಾಂತಶ್ಚೋಚ್ಯತೇ ಬುಧೈಃ ||
ಅಗೃಹೀತಾಭಿಧಃ ಪೂಜ್ಯಃ ಶಿಷ್ಯಾದ್ಯೈರ್ವಿನಿಗದ್ಯತೇ ||
ಉಪಾಧ್ಯಾಯೇತಿ ಚಾಚಾರ್ಯೋ ಮಹಾರಾಜೇತಿ ಭೂಪತಿಃ ||
ಸ್ವಾಮಿನ್ನಿತಿ ಯುವರಾಜಸ್ತು ಕುಮಾರೋ ಭರ್ತೃದಾರಕಃ |
ಸೌಮ್ಯ ಭದ್ರಮುಖೇತ್ಯೇವಂ ಅಧಮೈಸ್ತು ಕುಮಾರಕಃ ||

ವಾಚ್ಯಾ ಪ್ರಕೃತಿಭೀ ರಾಜ್ಞಃ ಕುಮಾರೀ ಭರ್ತೃದಾರಿಕಾ ।
ಪತಿರ್ಯಥಾ ತಥಾ ವಾಚ್ಯಾ ಜ್ಯೇಷ್ಠಮಧ್ಯಾಧಮೈಃ ಸ್ತ್ರಿಯಃ ॥
ಹಲೇತಿ ಸದೃಶೀ ಪ್ರೇಷ್ಯಾ ಹಂಜೇ ವೇಶ್ಯಾಽಜ್ಜುಕಾ ತಥಾ ।
ಕುಟ್ಟನ್ಯಂಬೇತ್ಯನುಗತೈಃ ಪೂಜ್ಯಾ ಚ ಜರತೀ ಜನೈಃ ॥
ಆಮಂತ್ರಣೈಶ್ಚ ಪಾಷಂಡಾ ವಾಚ್ಯಾಃ ಸ್ವಸಮಯಾಗತೈಃ ।
ಶಕಾದಯಶ್ಚ ಸಂಭಾಷ್ಯಾಃ ಭದ್ರದತ್ತಾದಿನಾಮಭಿಃ ॥
ಯಸ್ಯ ಯತ್ಕರ್ಮ ಶಿಲ್ಪಂ ವಾ ವಿದ್ಯಾ ವಾ ಜಾತಿರೇವ ವಾ ।
ತೇನೈವ ನಾಮ್ನಾ ವಾಚ್ಯೋಽಸೌ ಜ್ಞೇಯಾಶ್ಚಾನ್ಯೇ ಯಥೋಚಿತಮ್

ರಾಜನನ್ನು ಭೃತ್ಯನೇ ಮೊದಲಾದವರು ಸ್ವಾಮಿ ಎಂದೂ, ದೇವನೆಂದೂ, ನೀಚರು ಭಟ್ಟನೆಂದೂ, ರಾಜರ್ಷಿಗಳು ಮತ್ತು ವಿದೂಷಕನು ವಯಸ್ಯನೆಂದೂ ಕರೆಯಬೇಕು. ವಿದೂಷಕನು ರಾಜನ್ ಎಂದೂ ಕರೆಯಬಹುದು. ಋಷಿಗಳು ಅವನನ್ನು ಅಪತ್ಯಪ್ರತ್ಯಯಾಂತ ಪದದಿಂದ ಕರೆಯಬೇಕು. ('ಪಾಂಡವ, ದಾಶರಥಿ ಎಂಬ ಪದಗಳಲ್ಲಿ ಪಾಂಡು, ದಶರಥ ಎಂಬ ಪದಗಳಿಗೆ ಅಪತ್ಯ (ಮಗ) ಎಂಬ ಅರ್ಥದಲ್ಲಿ ತದ್ಧಿತಪ್ರತ್ಯಯವನ್ನು ಹಚ್ಚಿದೆ.') ಒಬ್ಬ ಬ್ರಾಹ್ಮಣನನ್ನು ಬೇರೆ ಬ್ರಾಹ್ಮಣರು ಅವನ ಹೆಸರಿನಿಂದಲೇ ಕರೆಯಬಹುದು. ಬೇರೆಯವರು ಅವನನ್ನು ಆರ್ಯ ಎಂದು ಕರೆಯಬೇಕು. ರಾಜನು ವಿದೂಷಕನನ್ನು ವಯಸ್ಯ ಎಂದಾಗಲೀ ಅಥವಾ ಅವನ ಹೆಸರಿನಿಂದಾಗಲೀ ಕರೆಯಬಹುದು. ನಟೀ ಸೂತ್ರಧಾರ ಇವರು ತಮ್ಮಲ್ಲಿಯೇ ಆರ್ಯ ಆರ್ಯೆ ಎಂದೂ ವ್ಯವಹರಿಸಬೇಕು. ಸೂತ್ರಧಾರನನ್ನು ಪಾರಿಪಾರ್ಶ್ವಕನು 'ಭಾವ' ಎಂದು ಕರೆಯಬೇಕು. ನೀಚರು ತಮಗೆ ಸಮಾನರಾದವರನ್ನು ಹಂಡೇ ಎಂದು ಕರೆಯಬೇಕು. ಉತ್ತಮರು ತಮ್ಮ ಸಮಾನರನ್ನು ವಯಸ್ಯ ಎಂದೂ, ಮಧ್ಯಮವರ್ಗದವರು ಹಂಹೋ ಎಂದೂ ಕರೆಯಬೇಕು. ಅಣ್ಣನನ್ನು ಆರ್ಯ ಎಂದು ಕರೆಯಬೇಕು. ದೇವತೆಗಳನ್ನೂ ಋಷಿಗಳನ್ನೂ ಸಂನ್ಯಾಸಿ ಅಥವಾ ಬ್ರಹ್ಮಚಾರಿಗಳನ್ನೂ ಎಲ್ಲರೂ ಭಗವನ್ ಎಂದು ಕರೆಯಬೇಕು. ವಿದೂಷಕನು ರಾಣಿ, ಚೇಟಿ ಇವರನ್ನು 'ಭವತಿ' ಎಂದು ಕರೆಯಬೇಕು. ಸಾರಥಿಯು ರಥದಲ್ಲಿ ಕುಳಿತಿರುವ ನಾಯಕನನ್ನು 'ಆಯುಷ್ಮನ್' ಎಂದು ಕರೆಯಬೇಕು. ಹಾಗೆಯೇ ಮುದುಕನನ್ನು ಬೇರೆಯವರು 'ತಾತ' ಎಂದು ಕರೆಯಬೇಕು, ಮಗನನ್ನು ವತ್ಸ, ಪುತ್ರಕ, ತಾತ ಎಂದು ಅವನ ಹೆಸರಿನಿಂದಲೂ ವಂಶದ ಹೆಸರಿನಿಂದಲೂ ಕರೆಯಬೇಕು. ಶಿಷ್ಯನನ್ನೂ ತಮ್ಮನನ್ನೂ ಕರೆಯಬೇಕು. ಮಂತ್ರಿಯನ್ನು ನೀಚಜನರು ಆರ್ಯ ಎಂದು ಕರೆಯಬೇಕು. ಹಾಗೆಯೇ ಬ್ರಾಹ್ಮಣರು ಇವನನ್ನು ಆಮಾತ್ಯನೆಂದೂ ಸಚಿವನೆಂದೂ ಕರೆಯಬೇಕು. ವಿದ್ವಾಂಸರು ಶಾಂತಸ್ವಭಾವದ ವ್ಯಕ್ತಿಯನ್ನು ಸಾಧು, ತಪಸ್ವಿ ಎಂದು ಕರೆಯಬೇಕು. ಶಿಷ್ಯರೇ ಮೊದಲಾದವರು ಗುರುಗಳನ್ನು ಹೆಸರಿನಿಂದ ಕರೆಯದೆ ಪೂಜ್ಯ ಎಂದು ಕರೆಯಬೇಕು, ಆಚಾರ್ಯನನ್ನು ಉಪಾಧ್ಯಾಯನೆಂದೂ, ರಾಜನನ್ನು ಮಹಾರಾಜನೆಂದೂ

ಯುವರಾಜನನ್ನು ಸ್ವಾಮಿ ಎಂದೂ, ರಾಜಪುತ್ರನನ್ನು ಕುಮಾರನೆಂದೂ ಕರೆಯಬೇಕು. ನೀಚರು ರಾಜಕುಮಾರನನ್ನು ಸೌಮ್ಯ ಭದ್ರಮುಖ ಎಂದು ಕರೆಯಬೇಕು. ಪ್ರಜೆಗಳು ರಾಜನ ಮಗಳನ್ನು ಭರ್ತೃದಾರಿಕೆ ಎಂದು ಕರೆಯಬೇಕು. ಉತ್ತಮ ಮಧ್ಯಮ ಅಧಮ ದರ್ಜೆಯ ಜನರು ಹೆಂಗಸರನ್ನು ಅವರ ಪತಿಯು ಕರೆಯುವರಂತೆ ಕರೆಯಬೇಕು. ಹೆಂಗಸರಲ್ಲಿಯೇ ಪರಿಚಿತವೆನಿಸಿದವಳು ಮತ್ತೊಬ್ಬಳನ್ನು 'ಹಲಾ' ಎಂದೂ, ದಾಸಿಯನ್ನು 'ಹಂಜೇ' ಎಂದೂ ವೇಶ್ಯೆಯನ್ನು ಅಜ್ಜುಕೆ, ಕುಟ್ಟನಿ ಎಂದೂ ಕರೆಯಬೇಕು. ಸೇವಕಜನರು ಗುರುಪತ್ನೀಮೊದಲಾದ ಪೂಜ್ಯಸ್ತ್ರೀಯರನ್ನೂ ಮುದುಕಿಯರನ್ನೂ 'ಅಂಬ' ಎಂದು ಕರೆಯಬೇಕು, ಕಾಪಾಲಿಕ ಮೊದಲಾದವರನ್ನು ಆಯಾ ಕಾಲಕ್ಕೆ ಅನುಗುಣವಾಗಿ ಆಯಾ ಹೆಸರುಗಳಿಂದಲೇ ಕರೆಯಬೇಕು. ಒಬ್ಬನ ಕರ್ಮ ಶಿಲ್ಪ, ವಿದ್ಯೆ, ಜಾತಿ ಇವರನ್ನು ನೋಡಿಕೊಂಡು ಅವನನ್ನು ಆಯಾ ಹೆಸರಿನಿಂದಲೇ ಕರೆಯಬೇಕು. ತಾಂಬೂಲವನ್ನು ತಂದುಕೊಡುವವನಿಗೆ ತಾಂಬೂಲಿಕನೆಂದೂ, ಚಿತ್ರಕೆಲಸವನ್ನು ಮಾಡುವವನಿಗೆ ಚೈತ್ರಿಕನೆಂದೂ, ವ್ಯಾಕರಣವಿದ್ಯೆಯನ್ನು ಓದಿದವವನಿಗೆ ವೈಯಾಕರಣನೆಂದೂ, ಬಟ್ಟೆಗಳನ್ನು ಹೊಗೆಯುವವನಿಗೆ ರಜಕನೆಂದೂ ಕರೆಯಲಾಗಿದೆ. ಹೀಗೆಯೇ ಉಳಿದವರನ್ನೂ ಅವರವರ ವೃತ್ತಿಯನ್ನೂ ಗಮನಿಸಿ ಕರೆಯಬಹುದು.

ಅಥ ಭಾಷಾವಿಭಾಗಾಃ—

ಪುರುಷಾಣಾಮನೀಚಾನಾಂ ಸಂಸ್ಕೃತಂ ಸ್ಯಾತ್ ಕೃತಾತ್ಮನಾಮ್ ।
ಶೌರಸೇನೀ ಪ್ರಯೋಕ್ತವ್ಯಾ ತಾದೃಶೀನಾಂ ಚ ಯೋಷಿತಾಮ್ ॥
ಆಸಾಮೇವ ತು ಗಾಥಾಸು ಮಹಾರಾಷ್ಟ್ರೀಂ ಪ್ರಯೋಜಯೇತ್ ।
ಅತ್ರೋಕ್ತಾ ಮಾಗಧೀ ಭಾಷಾ ರಾಜಾಂತಃಪುರಚಾರಿಣಾಮ್ ॥
ಚೇಟಾನಾಂ ರಾಜಪುತ್ರಾಣಾಂ ಶ್ರೇಷ್ಠಿನಾಂ ಚಾರ್ಧಮಾಗಧೀ ।
ಪ್ರಾಚ್ಯಾ ವಿದೂಷಕಾದೀನಾಂ ಧೂರ್ತಾನಾಂ ಸ್ಯಾದವಂತಿಜಾ ॥
ಯೋಧನಾಗರಿಕಾದೀನಾಂ ದಾಕ್ಷಿಣಾತ್ಯಾ ಹಿ ದೀವ್ಯತಾಮ್ ।
ಶಬರಾಣಾಂ ಶಕಾದೀನಾಂ ಶಾಬರೀಂ ಸಂಪ್ರಯೋಜಯೇತ್ ॥
ಬಾಹ್ಲೀಕಭಾಷೋದೀಚ್ಯಾನಾಂ ದ್ರಾವಿಡೀ ದ್ರಾವಿಡಾದಿಷು ।
ಆಭೀರೇಷು ತಥಾಭೀರೀ ಚಾಂಡಾಲೀ ಪುಕ್ಕಸಾದಿಷು ॥
ಆಭೀರೀ ಶಾಬರೀ ಚಾಪಿ ಕಾಷ್ಠಪತ್ರೋಪಜೀವಿಷು ।
ತಥೈವಾಂಗಾರಕಾರಾದೌ ಪೈಶಾಚೀ ಸ್ಯಾತ್ಪಿಶಾಚವಾಕ್ ॥
ಚೇಟೀನಾಮಪ್ಯನೀಚಾನಾಂ ಅಪಿ ಸ್ಯಾತ್ ಶೌರಸೇನಿಕಾ ।
ಬಾಲಾನಾಂ ಷಂಡಕಾನಾಂ ಚ ನೀಚಗ್ರಹವಿಚಾರಿಣಾಮ್ ॥
ಉನ್ಮತ್ತಾನಾಮಾತುರಾಣಾಂ ಸೈವ ಸ್ಯಾತ್ಸಂಸ್ಕೃತಂ ಕ್ವಚಿತ್ ।
ಐಶ್ವರ್ಯೇಣ ಪ್ರಮತ್ತಸ್ಯ ದಾರಿದ್ರ್ಯೋಪಸ್ಕೃತಸ್ಯ ಚ ॥
ಭಿಕ್ಷುವಲ್ಕಧರಾದೀನಾಂ ಪ್ರಾಕೃತಂ ಸಂಪ್ರಯೋಜಯೇತ್ ।

ಸಂಸ್ಕೃತಂ ಸಂಪ್ರಯೋಕ್ತವ್ಯಂ ಲಿಂಗಿನೀಷೂತ್ತಮಾಸು ಚ ॥
ದೇವೀಮಂತ್ರಿಸುತಾವೇಶ್ಯಾಸ್ವಪಿ ಕೈಶ್ಚಿತ್ತಥೋದಿತಮ್ ।
ಯದ್ದೇಶ್ಯಂ ನೀಚಪಾತ್ರಂ ತು ತದ್ದೇಶ್ಯಂ ತಸ್ಯ ಭಾಷಿತಮ್ ॥
ಕಾರ್ಯತಶ್ಚೋತ್ತಮಾದೀನಾಂ ಕಾರ್ಯೋ ಭಾಷಾವಿಪರ್ಯಯಃ ।
ಯೋಷಿತ್ಸಖೀಬಾಲವೇಶ್ಯಾಕಿತವಾಪ್ಸರಸಾಂ ತಥಾ ।
ವೈದಗ್ಧ್ಯಾರ್ಥಂ ಪ್ರದಾತವ್ಯಂ ಸಂಸ್ಕೃತಂ ಚಾಂತರಾಂತರಾ ॥

ಏಷಾಮುದಾಹರಣಾನ್ಯಾಕರೇಷು ಬೋದ್ಧವ್ಯಾನಿ. ಭಾಷಾಲಕ್ಷಣಾನಿ ಮಮ ತಾತಪಾದಾನಾಂ ಭಾಷಾರ್ಣವೇ—

ಷಟ್ತ್ರಿಂಶಲ್ಲಕ್ಷಣಾನ್ಯತ್ರ ನಾಟ್ಯಾಲಂಕೃತಯಸ್ತಥಾ ।
ತ್ರಯಸ್ತ್ರಿಂಶತ್ ಪ್ರಯೋಜ್ಯಾನಿ ವೀಥ್ಯಂಗಾನಿ ತ್ರಯೋದಶ ॥
ಲಾಸ್ಯಾಂಗಾನಿ ದಶ ಯಥಾಲಾಭಂ ರಸವ್ಯಪೇಕ್ಷಯಾ ।

ಯಥಾಲಾಭಂ ಪ್ರಯೋಜ್ಯಾನೀತಿ ಸಂಬಂಧಃ. ಅತ್ರೇತಿ ನಾಟಕೇ.

ತತ್ರ ಲಕ್ಷಣಾನಿ--ಭೂಷಣಾಕ್ಷರಸಂಘಾತೌ ಶೋಭೋದಾಹರಣಂ ತಥಾ ।
ಹೇತುಸಂಶಯದೃಷ್ಟಾಂತಾಸ್ತುಲ್ಯತರ್ಕಃ ಪದೋಚ್ಚಯಃ
ನಿದರ್ಶನಾಭಿಪ್ರಾಯೌ ಚ ಜ್ಞಪ್ತಿರ್ವಿಚಾರ ಏವ ಚ ।
ದಿಷ್ಟೋಪದಿಷ್ಟೇ ಚ ಗುಣಾತಿಪಾತಾತಿಶಯೌ ತಥಾ ॥
ವಿಶೇಷಣನಿರುಕ್ತೌ ಚ ಸಿದ್ಧಿರ್ಭ್ರಂಶವಿಪರ್ಯಯೌ ।
ದಾಕ್ಷಿಣ್ಯಾನುನಯೌ ಮಾಲಾರ್ಥಾಪತ್ತಿರ್ಗರ್ಹಣಂ ತಥಾ ॥
ಪೃಚ್ಛಾ ಪ್ರಸಿದ್ಧಿಃ ಸಾರೂಪ್ಯಂ ಸಂಕ್ಷೇಪೋ ಗುಣಕೀರ್ತನಮ್ ।
ಲೇಶೋ ಮನೋರಥೋಽನುಕ್ತಸಿದ್ಧಿಃ ಪ್ರಿಯವಚಸ್ತಥಾ ॥

ತತ್ರ–ಲಕ್ಷಣಾನಿ ಗುಣೈಃ ಸಾಲಂಕಾರೈರ್ಯೋಗಸ್ತು ಭೂಷಣಮ್.

ಯಥಾ— ಆಕ್ಷಿಪಂತ್ಯರವಿಂದಾನಿ ಮುಗ್ಧೇ ತವ ಮುಖಶ್ರಿಯಮ್ ।
ಕೋಷದಂಡಸಮಗ್ರಾಣಾಂ ಕಿಮೇಷಾಮಸ್ತಿ ದುಷ್ಕರಮ್ ॥
ವರ್ಣನಾಕ್ಷರಸಂಘಾತಶ್ಚಿತ್ರಾರ್ಥೈರಕ್ಷರೈರ್ಮಿತೈಃ ।

ಯಥಾ ಶಾಕುಂತಲೇ "ರಾಜಾ–ಕಚ್ಚಿತ್ಸಖೀಂ ವೋ ನಾತಿಬಾಧತೇ ಶರೀರ ಸಂತಾಪಃ? ಪ್ರಿಯಾಂವದಾ–ಸಾಂಪ್ರತಂ ಲಬ್ಧೌಷಧ ಉಪಶಮಂ ಗಮಿಷ್ಯತಿ"

ಸಿದ್ಧೈರರ್ಥೈಃ ಸಮಂ ಯತ್ರಾಪ್ರಸಿದ್ಧೋಽರ್ಥಃ ಪ್ರಕಾಶತೇ ।
ಶ್ಲಿಷ್ಟಲಕ್ಷಣಚಿತ್ರಾರ್ಥಾ ಸಾ ಶೋಭೇತ್ಯಭಿಧೀಯತೇ ॥

ಯಥಾ—ಸದ್ವಂಶಸಂಭವಃ ಶುದ್ಧಃ ಕೋಟಿದೋಽಪಿ ಗುಣಾನ್ವಿತಃ ।
ಕಾಮಂ ಧನುರಿವ ಕ್ರೂರೋ ವರ್ಜನೀಯಃ ಸತಾಂ ಪ್ರಭುಃ ॥
ಯತ್ರ ತುಲ್ಯಾರ್ಥಯುಕ್ತೇನ ವಾಕ್ಯೇನಾಭಿಪ್ರದರ್ಶನಾತ್ ॥
ಸಾಧ್ಯತೇಽಭಿಮತಶ್ಚಾರ್ಥಸ್ತದುದಾಹರಣಂ ಮತಮ್ ॥

ಯಥಾ—ಅನುಯಾಂತ್ಯಾ ಜನಾತೀತಂ ಕಾಂತಂ ಸಾಧು ತ್ವಯಾ ಕೃತಮ್ ।
ಕಾ ದಿನಶ್ರೀರ್ವಿನಾರ್ಕೇಣ ಕಾ ನಿಶಾ ಶಶಿನಾ ವಿನಾ ॥

ಆಯಾಯ ಪಾತ್ರಗಳು ವ್ಯವಹಾರಕ್ಕೆ ಉಪಯೋಗಿಸಿಕೊಳ್ಳುವ ಭಾಷೆಗಳ ವ್ಯವಸ್ಥೆಯನ್ನು ಈಗ ತಿಳಿಸುತ್ತಾನೆ. ಸುಶಿಕ್ಷಿತರೂ ಉತ್ತಮರೂ ಎನಿಸಿದವರು ಸಂಸ್ಕೃತಭಾಷೆಯನ್ನು ಉಪಯೋಗಿಸಬೇಕು. ಸ್ತ್ರೀಯರು ಹಾಗೆಯೇ ಸುಸಂಸ್ಕೃತೆಯರೂ ಉತ್ತಮಸ್ವಭಾವದರೂ ಆಗಿದ್ದರೆ ಶೌರಸೇನೀಭಾಷೆಯನ್ನು ಉಪಯೋಗಿಸಬೇಕು. ಇಂತಹ ಸ್ತ್ರೀಯರು ಗೀತೆಗಳನ್ನು ಹೇಳುವಾಗ ಮಹಾರಾಷ್ಟ್ರೀಭಾಷೆಯನ್ನು ಉಪಯೋಗಿಸಬೇಕು. ಅಂತಃಪುರದಲ್ಲಿ ಸಂಚರಿಸುವವರು ಮಾಗಧೀಭಾಷೆಯಲ್ಲಿ ವ್ಯವಹರಿಸಬೇಕು. ರಾಜನ ಸೇವಕರು, ರಾಜಪುತ್ರರು ಅರಮನೆಯಲ್ಲಿ ವ್ಯಾಪಾರ ಮಾಡುವ ವೈಶ್ಯರು ಅರ್ಧಮಾಗಧಿಯನ್ನು ಉಪಯೋಗಿಸಬೇಕು. ವಿದೂಷಕ ಮೊದಲಾದವರು ಪ್ರಾಚ್ಯವೆನಿಸಿದ ಗೌಡೀಯಭಾಷೆಯಲ್ಲಿ ವ್ಯವಹರಿಸಬೇಕು. ಧೂರ್ತರು ಅವಂತೀಭಾಷೆಯಲ್ಲೂ, ಯೋಧರು, ಜೂಜಾಡುವವರು ಮೊದಲಾದವರು ದಾಕ್ಷಿಣಾತ್ಯಭಾಷೆಯಲ್ಲೂ, ಬೇಡರು, ಶಕ ಮೊದಲಾದ ಜಾತಿಯವರು ಶಾಬರೀ ಭಾಷೆಯಲ್ಲೂ ವ್ಯವಹರಿಸಬೇಕು. ಔತ್ತರೇಯರು ವಾಹ್ಲೀಕಭಾಷೆಯಲ್ಲೂ, ದ್ರಾವಿಡರು ದ್ರಾವಿಡಭಾಷೆಯಲ್ಲೂ, ಅಂಜುಬುರುಕರು ಆಭೀರೀ ಎಂಬ ಭಾಷೆಯಲ್ಲೂ, ಚಂಡಾಲರು ಚಾಂಡಾಲೀಭಾಷೆಯಲ್ಲೂ ವ್ಯವಹರಿಸಬೇಕು. ಕಟ್ಟಿಗೆಗಳನ್ನೂ ಎಲೆಗಳನ್ನೂ ಮಾರಿ ಜೀವಿಸುವವರು ಆಭೀರೀ, ಶಾಬರೀಭಾಷೆಗಳನ್ನೂ, ಉಪಯೋಗಿಸಬೇಕು. ಇಜ್ಜಲನ್ನು ತಯಾರಿಸುವವರೂ ಹಾಗೆಯೇ ವ್ಯವಹರಿಸಬೇಕು. ಪಿಶಾಚಿಗಳು ಆಡುವ ಮಾತು ಪೈಶಾಚಿ ಎನಿಸುವುದು. ಸೇವಕಿಯರು ಈ ಭಾಷೆಯನ್ನು ಉಪಯೋಗಿಸಬೇಕು. ಅವರು ಉತ್ತಮಸ್ವಭಾವದವರಾಗಿದ್ದರೆ ಶೌರಸೇನಿಯನ್ನು ಉಪಯೋಗಿಸಹುದು, ಬಾಲಕರು, ಷಂಡರು, ಸಾಮಾನ್ಯರೆನಿಸಿದ ಜ್ಯೋತಿಷ್ಕರು, ಉನ್ಮತ್ತರು, ರೋಗಿಗಳು ಇದೇ ಭಾಷೆಯಲ್ಲಿ ವ್ಯವಹರಿಸಬೇಕು. ಕೆಲವು ವೇಳೆ ಸಂಸ್ಕೃತವನ್ನು ಉಪಯೋಗಿಸಬಹುದು, ಐಶ್ವರ್ಯದಿಂದ ಮದಿಸಿದವನು, ಬಡತನದಿಂದ ಶೋಭಿಸುವವನು, ಭಿಕ್ಷುಕ, ನಾರುಮಡಿಯನ್ನು ಉಟ್ಟುವನು ಇವರೆಲ್ಲರೂ ಪ್ರಾಕೃತದಲ್ಲಿ ವ್ಯವಹರಿಸಬೇಕು. ಉತ್ತಮಸ್ವಭಾವದ ಸನ್ಯಾಸಿಗಳಿಗೆ ಸಂಸ್ಕೃತವನ್ನು ಉಪಯೋಗಿಸಬಹುದು. ದೇವಿ, ಮಂತ್ರಿಯ ಮಗಳು, ವೇಶ್ಯೆ ಇವರೂ ಸಹ ಸಂಸ್ಕೃತವನ್ನು ಉಪಯೋಗಿಸಬಹುದೆಂದು ಕೆಲವರು ಹೇಳಿದ್ದಾರೆ. ನೀಚಪಾತ್ರಗಳು ಯಾವ ದೇಶದಲ್ಲಿ ಹುಟ್ಟಿದರೂ ಆ ದೇಶದಲ್ಲಿ ರೂಢಿಯಲ್ಲಿರುವ ಭಾಷೆಯನ್ನು ಉಪಯೋಗಿಸಬಹುದು. ಉತ್ತಮಸ್ವಭಾವದ ಜನರ ಕಾರ್ಯಗಳಿಗೆ ಅನುಗುಣವಾಗಿ ಭಾಷೆಯಲ್ಲಿ ವ್ಯತ್ಯಾಸವನ್ನು ಮಾಡಬಹುದು. ಸ್ತ್ರೀಯರು, ಸಖಿಯರು, ಬಾಲಕರು, ವೇಶ್ಯೆಯರು, ಧೂರ್ತರು, ಅಪ್ಸರೆಯರು ತಮ್ಮ ವಾಕ್ಚಾತುರ್ಯವನ್ನು ತೋರಿಸಲಿಕ್ಕಾಗಿ ಮಧ್ಯದಲ್ಲಿ ಅವಕಾಶವು ಸಿಕ್ಕಿದಾಗ ಸಂಸ್ಕೃತದಲ್ಲಿ ಮಾತನಾಡಬಹುದು.

ಇಲ್ಲಿ ಹೇಳಿರುವಂತೆ ಆಯಾಯ ಪಾತ್ರಗಳು ಆಯಾಯ ಭಾಷೆಗಳಲ್ಲಿ ವ್ಯವಹರಿಸುವರೆಂಬುದನ್ನು ನಾಟ್ಯಗ್ರಂಥಗಳಿಂದ ತಿಳಿಯುವುದು. ಆಯಾಯ ಭಾಷೆಗಳ ಸ್ವರೂಪವೈಲಕ್ಷಣ್ಯಗಳನ್ನು ಭಾಷಾರ್ಣವವೆಂಬ ಗ್ರಂಥದಿಂದ ತಿಳಿಯಬಹುದು. (ಇದು ವಿಶ್ವನಾಥನ ತಾತನವರು ಬರೆದದ್ದು.)

ನಾಟಕದ ಇತರ ಅಂಗಗಳನ್ನು ತಿಳಿಸುತ್ತಾನೆ, ಮುವತ್ತಾರು ಲಕ್ಷಣಗಳು, ಮೂವತ್ತಮೂರು ಅಲಂಕೃತಿಗಳು, ಮೂವತ್ತಮೂರು ವೀಥ್ಯಂಗಗಳು, ಹತ್ತು ಲಾಸ್ಯಾಂಗಗಳು ಇಷ್ಟನ್ನು ನಾಟಕದಲ್ಲಿ ರಸಕ್ಕೆ ಅನುಗುಣವಾಗಿರುವಂತೆ ವ್ಯವಸ್ಥೆಯಿಂದ ಕವಿಯು ಪ್ರಯೋಗಿಸಬೇಕು. ರಸಕ್ಕೆ ಅನುಕೂಲವಾಗಿಲ್ಲದಿದ್ದರೆ ಇವುಗಳನ್ನು ಪ್ರಯೋಗಿಸಲೇಬಾರದು. ಅಂದರೆ ಇದನ್ನು ಆವಶ್ಯಕತೆಯಿದ್ದರೆ ಆಯಾ ಪ್ರಕರಣದಲ್ಲಿಯೇ ಉಪಯೋಗಿಸಬೇಕು. ನಾಟಕದ ಸ್ವರೂಪವನ್ನು ತಿಳಿಯಲು ಅನುಕೂಲವಾಗುವ ಮೂವತ್ತಾರು ಲಕ್ಷಣಗಳನ್ನು ಈಗ ತಿಳಿಸುತ್ತಾನೆ. ಭೂಷಣ, ಅಕ್ಷರಸಮೂಹ, ಶೋಭೆ, ಉದಾಹರಣ, ಹೇತು, ಸಂಶಯ, ದೃಷ್ಟಾಂತ, ಅನುಕೂಲತರ್ಕ, ಪದಸಮೂಹ, ನಿದರ್ಶನೆ, ಅಭಿಪ್ರಾಯ, ಜ್ಞಪ್ತಿ, ವಿಚಾರ, ದಿಷ್ಟ, ಉಪದಿಷ್ಟ, ಗುಣಾತಿಪಾತ, ಗುಣಾತಿಶಯ, ವಿಶೇಷಣ, ನಿರುಕ್ತಿ, ಸಿದ್ಧಿ, ಭ್ರಂಶ, ವಿಪರ್ಯಯ, ದಾಕ್ಷಿಣ್ಯ, ಅನುನಯ, ಮಾಲೆ, ಅರ್ಥಾಪತ್ತಿ, ಗರ್ಹಣ, ಪೃಚ್ಛೆ, ಪ್ರಸಿದ್ಧಿ, ಸಾರೂಪ್ಯ, ಸಂಕ್ಷೇಪ, ಗುಣಕೀರ್ತನ, ಲೇಶ, ಮನೋರಥ, ಅನುಕ್ತಸಿದ್ಧಿ, ಪ್ರಿಯವಚನ ಇವಿಷ್ಟು ಲಕ್ಷಣಗಳೆನಿಸಿವೆ. ಇಲ್ಲಿ ಹೇಳಿರುವ ನಾಟಕಲಕ್ಷಣಗಳಿಗೆ ಲಕ್ಷಣವನ್ನು ಮೊದಲು ತಿಳಿಸುತ್ತಾನೆ. ರೂಪಕ ಮೊದಲಾದ ಅಲಂಕಾರಗಳ ಮತ್ತು ಮಾಧುರ್ಯ, ಓಜಸ್ಸು ಮೊದಲಾದ ಗುಣಗಳ ಪರಸ್ಪರ ಮೇಳನವು ನಾಟಕವನ್ನು ಅಲಂಕರಿಸುವುದರಿಂದ ಅವು ಅದಕ್ಕೆ ಭೂಷಣಗಳೆನಿಸಿವೆ. ಹಿಂದೆ ಹೇಳಿದ ಮೂವತ್ತಾರು ಅಂಶಗಳು ನಾಟಕವನ್ನು ಅಲಂಕರಿಸುವುದರಿಂದ ಲಕ್ಷಣಗಳೆನಿಸಿವೆ. "ಎಲೈ ಪ್ರೇಯಸಿ, ಕಮಲಗಳು ನಿನ್ನ ಮುಖದ ಸೌಂದರ್ಯವನ್ನು ತಿರಸ್ಕರಿಸಲಿಕ್ಕಾಗಿ ಸಿದ್ಧವಾಗಿ (ಇವಕ್ಕೆ ಮುಖಶೋಭೆಯನ್ನು ತಿರಸ್ಕರಿಸಲು ಅಂತಹ ಶಕ್ತಿಯಾವುದಿದೆ ಎಂಬುದನ್ನು ತಿಳಿಸುತ್ತಾನೆ) ಬೀಜಕೋಶವೆಂಬ ಭಂಡಾರದಿಂದಲೂ, ನಾಶವೆಂಬ ದಂಡನೀತಿಯಿಂದಲೂ ತುಂಬಿರುವ ಈ ಕಮಲಗಳಿಗೆ (ರಾಜರಿಗೆ) ಯಾವ ಕಾರ್ಯವು ಅಸಾಧ್ಯವೆನಿಸೀತು ?" ಇಲ್ಲಿ ಭೇದದಲ್ಲಿ ಅಭೇದವನ್ನು ತಿಳಿಸುವ ಅತಿಶಯೋಕ್ತಿಯು ಶ್ಲೇಷದ ಮೂಲಕ ತೋರುತ್ತದೆ. ಕಾರಣದಿಂದ ಕಾರ್ಯವನ್ನು ಸಮರ್ಥನಮಾಡುವ ಅರ್ಥಾಂತರನ್ಯಾಸವೂ ಅರ್ಥಪತ್ತ್ಯಲಂಕಾರವೂ ಇದೆ. ಹಾಗೆಯೇ ಮೊದಲನೆಯ ಪಾದದಲ್ಲಿ ಮಾಧುರ್ಯಗುಣವೂ ಎರಡನೆಯ ಪಾದದಲ್ಲಿ ಪ್ರಸಾದಗುಣವೂ ಇವೆ. ಹಾಗೂ ಅಲಂಕಾರ ಮತ್ತು ಗುಣಗಳ ಸಂಮ್ಮೇಳನದಿಂದ ಇದು ಭೂಷಣವೆನಿಸಿದೆ.

ಈಗ ಎರಡನೆಯ ಲಕ್ಷಣವನ್ನು ತಿಳಿಸುತ್ತಾನೆ. ವಿಚಿತ್ರವಾದ ಅರ್ಥವನ್ನು ತಿಳಿಸುವ ಮಿತವಾದ ಅಕ್ಷರಗಳಿಂದ ತಿಳಿಸಬೇಕಾಗಿರುವ ಅಂಶವನ್ನು ತಿಳಿಸುವುದು.

ಅಕ್ಷರಸಂಘಾತವೆನಿಸುವುದು. ನಾಟಕವನ್ನು ಅಲಂಕರಿಸಲು ಇದೂ ಒಂದು ಬಗೆಯ ಲಕ್ಷಣ. ಶಾಕುಂತಲದಲ್ಲಿ ರಾಜನು 'ಶರೀರವ ಸಂತಾಪವು ನಿಮ್ಮ ಸಖಿಯನ್ನು ಹೆಚ್ಚು ಬಾಧಿಸುವುದಿಲ್ಲವೇ'? ಎಂದು ಕೇಳಲು ಅದಕ್ಕೆ ಪ್ರಿಯವಂದೆಯು "ಈಗ ಪ್ರಿಯನಾದ ನೀನೇ ಔಷಧವಾಗಿ ದೊರೆತಿರುವುದರಿಂದ ಸಂತಾಪವು ಬೇಗನೆ ಶಮನವಾಗುವುದು" ಎಂದು ಹೇಳಿದಳು. ಇಲ್ಲಿ ಇಷ್ಟು ಮಿತವಾದ ಒಂದೆರಡು ಅಕ್ಷರಗಳಿಂದ 'ನಿನ್ನಿಂದಲೇ ಇವಳ ಮನೋವ್ಯಥೆಯು ಬಗೆಹರಿಯಬೇಕು.' ಎಂಬ ವಿಚಿತ್ರವಾದ ಅರ್ಥವನ್ನು ತಿಳಿಸಿರುವುದರಿಂದ ಇದು ಅಕ್ಷರಸಂಘಾತವೆಂಬ ಲಕ್ಷಣವೆನಿಸಿದೆ. ಹೀಗೆ ವಿಶೇಷವೂ ಗಂಭೀರವೂ ಆದ ಅರ್ಥವನ್ನು ಮಿತವಾದ ಅಕ್ಷರಗಳಿಂದ ತಿಳಿಸುವುದು ನಾಟಕಕ್ಕೆ ಒಂದು ಬಗೆಯ ಅಲಂಕಾರವೆನಿಸಿದೆ.

ಈಗ ಶೋಭೆ ಎಂಬ ಮೂರನೆಯ ಲಕ್ಷಣವನ್ನು ತಿಳಿಸುತ್ತಾನೆ. ಪ್ರಸಿದ್ಧವಾದ ಅರ್ಥದೊಡನೆ ಅಪ್ರಸಿದ್ಧವಾದ ಅರ್ಥವು ಎಲ್ಲಿ ಶೋಭಿಸುವುದೋ, ಶ್ಲೇಷದಿಂದ ಎರಡು ಬಗೆಯ ಅರ್ಥವು ಎಲ್ಲಿ ತೋರುವುದೋ ಅಲ್ಲಿ ಶೋಭೆಯು ನಾಟ್ಯವನ್ನು ಅಲಂಕರಿಸುತ್ತದೆ. "ಸತ್ಪುರುಷರ ವಂಶದಲ್ಲಿ ಹುಟ್ಟಿ ಶುದ್ಧನೆನಿಸಿದವನು ಕೋಟಿ ಸಂಖ್ಯೆಯಷ್ಟು ಹಣವನ್ನು ಕೊಡುವನಾದರೂ ಅಹಂಕಾರದಿಂದ ಮೆರೆಯದೆ ಸದ್ಗುಣಗಳಿಂದ ಶೋಭಿಸುವನು. ನಿಷ್ಠುರಸ್ವಭಾವದ ಪ್ರಭುವನ್ನು ಸತ್ಪುರಷರು ತಾವಾಗಿಯೇ ತ್ಯಜಿಸುವರು. ಬಿದುರುಮೆಳೆಯಿಂದ ದೊರೆತ ಬಿದುರಿನಿಂದ ಮಾಡಿಕೊಂಡ ಧನುಸ್ಸು ಕೋಟಿ ಸಂಖ್ಯೆಯ ಶತ್ರುಗಳನ್ನು ನಾಶಮಾಡಿದರೂ ಶಿಂಜಿನಿಯೊಡಗೂಡಿಯೇ ಇರುತ್ತದೆ. ಇಂತಹ ಧನುಸ್ಸು ಯೋಗ್ಯನಾದ ಪ್ರಭುವಿಗೆ ದೊರೆಯುವುದೇ ಹೊರತು ಕ್ರೂರನ ಕೈಗೆ ಸಿಕ್ಕಲಾರದು" ಹೀಗೆ ಇಲ್ಲಿ ಸತ್ಕುಲದಲ್ಲಿ ಹುಟ್ಟಿದವನ ಸಮಾಚಾರದೊಡನೆ ಅಪ್ರಸಿದ್ಧವಾದ ಉತ್ಕೃಷ್ಟವೇಣುಜಾತಿಯ ಧನುಸ್ಸಿನ ಉತ್ಕರ್ಷವನ್ನು ಶ್ಲೇಷದ ಮೂಲಕ ತಿಳಿಸಿರುವುದರಿಂದ ಇದು ಶೋಭೆ ಎನಿಸಿದೆ.

ಈಗ ಉದಾಹರಣವೆಂಬ ಲಕ್ಷಣವನ್ನು ತಿಳಿಸುತ್ತಾನೆ. ಪ್ರಕೃತ ಸಂದರ್ಭಕ್ಕೆ ಅನುಗುಣವಾದ ಅರ್ಥವನ್ನು ತಿಳಿಸುವ ವಾಕ್ಯದಿಂದ ಒಬ್ಬನ ಅಭಿಪ್ರಾಯವನ್ನು ತಿಳಿಸುವ ಮೂಲಕ ತನ್ನ ಅಭಿಮತವಾದ ಅರ್ಥವನ್ನು ಪ್ರಕಟಿಸುವುದಾದರೆ ಅದು ಉದಾಹರಣವೆನಿಸುತ್ತದೆ. "ಲೋಕೋತ್ತರವಾದ ಗುಣಗಳಿರುವ ಪತಿಯನ್ನು ಅನುಸರಿಸಿದ ನೀನು ಒಳ್ಳೆಯದನ್ನೇ ಮಾಡಿರುವೆ. ಸೂರ್ಯನಿಲ್ಲದಿದ್ದರೆ ಹಗಲಿನಲ್ಲಿ ಕಾಂತಿ ಎಲ್ಲಿಂದ ಬಂದೀತು ? ಚಂದ್ರನಿಲ್ಲದಿದ್ದರೆ ರಾತ್ರಿ ಹೇಗೆ ಶೋಭಿಸೀತು" ಇಲ್ಲಿ ಪ್ರಕೃತ ವಿಷಯಕ್ಕೆ ಸಮಾನವಾದ ಅರ್ಥವನ್ನು ತಿಳಿಸುವ ದ್ವಿತೀಯಾರ್ಥದ ಮಾತುಗಳಿಂದ ಒಬ್ಬನ ಅಭಿಪ್ರಾಪ್ರಾಯವನ್ನು ತಿಳಿದು "ಪತಿಯೊಡಗೂಡಿದ್ದರೆಯೇ ಹೆಂಡತಿಯು ಶೋಭಿಸುತ್ತಾಳೆ" ಎಂಬ ಅಭಿಮತವಾದ ಅರ್ಥವನ್ನು ಸಾಧಿಸಿರುವುದರಿಂದ ಇದು ಉದಾಹರಣವೆನಿಸಿದೆ.

ಹೇತುರ್ವಾಕ್ಯಂ ಸಮಾಸೋಕ್ತಮಿಷ್ಟಕೃದ್ಧೇತುದರ್ಶನಾತ್ ।

ಯಥಾ ವೇಣ್ಯಾಂ-"ಭೀಮಂ ಪ್ರತಿ ಚೇಟೀ--ಏವಂ ಮಯಾ ಭಣಿತಮ್ 'ಭಾನುಮತಿ ! ಯುಷ್ಮಾಕಂ ಅಮುಕ್ತೇಷು, ಕೇಶೇಷು ಕಥಮಸ್ಮಾಕಂ ದೇವ್ಯಾಃ ಕೇಶಾಃ ಸಂಗೃಹ್ಯಂತ ಇತಿ"

ಸಂಶಯೋಽಜ್ಞಾತತತ್ತ್ವಸ್ಯ ವಾಕ್ಯೇ ಸ್ಯಾದ್ಯದನಿಶ್ಚಯಃ।

ಯಥಾ ಯಯಾತಿವಿಜಯೇ:-ಇಯಂ ಸ್ವರ್ಗಾಧಿನಾಥಸ್ಯ ಲಕ್ಷ್ಮೀಃ ಕಿಂ ಯಜ್ಞಕನ್ಯಕಾ

ಕಿಂ ಚಾಸ್ಯ ವಿಷಯಸ್ಯೈವ ದೇವತಾ ಕಿಮು ಪಾರ್ವತೀ ॥

ದೃಷ್ಟಾಂತೋ ಯತ್ತು ಪಕ್ಷಾರ್ಥಸಾಧನಾಯ ನಿದರ್ಶನಮ್ ।

ಯಥಾ ವೇಣ್ಯಾಮ್ "ಭೀಮಃ-ಆರ್ಯೇ ! ಉಚಿತಮೇವೈತತ್ತಸ್ಯಾಃ, ಯತೋ ದುರ್ಯೋಧನಕಳತ್ರಂ ಹಿ ಸಾ" ಇತ್ಯಾದಿ.

ತುಲ್ಯತರ್ಕೋ ಯದನ್ಯೇನ ತರ್ಕಃ ಪ್ರಕೃತಿಗಾಮಿನಾ ।

ಯಥಾ ತತ್ರೈವ— ಪ್ರಾಯೇಣೈವ ಹಿ ದೃಶ್ಯಂತೇ ಕಾಮಂ ಸ್ವಪ್ನಾಃ ಶುಭಾಶುಭಾಃ ।

ಶತಸಂಖ್ಯಾ ಪುನರಿಯಂ ಸಾನುಜಂ ಸ್ಪೃಶತೀವ ಮಾಮ್ ॥

ಸಂಚಯೋಽರ್ಥಾನುರೂಪೋ ಯಃ ಪದಾನಾಂ ಸ ಪದೋಚ್ಚಯಃ ।

ಯಥಾ ಶಾಕುಂತಲೇ-ಅಧರಃ ಕಿಸಲಯರಾಗಃ ಕೋಮಲವಿಟಪಾನುಕಾರಿಣೌ ಬಾಹೂ।

ಕುಸುಮಮಿವ ಲೋಭನೀಯಂ ಯೌವನಮಂಗೇಷು ಸನ್ನದ್ಧಮ್॥

ಅತ್ರ ಪದಪದಾರ್ಥಯೋಃ ಸೌಕುಮಾರ್ಯಂ ಸದೃಶಮೇವ.

ಯತ್ರಾರ್ಥಾನಾಂ ಪ್ರಸಿದ್ಧಾನಾಂ ಕ್ರಿಯತೇ ಪರಿಕೀರ್ತನಮ್ ।

ಪರಪಕ್ಷವ್ಯುದಾಸಾರ್ಥಂ ತನ್ನಿದರ್ಶನಮುಚ್ಯತೇ ॥

ಯಥಾ—ಕ್ಷತ್ರಧರ್ಮೋಚಿತೈಃ ಧರ್ಮೈರಲಂ ಶತ್ರುವಧೇ ನೃಪಾಃ ।

ಕಿನ್ನು ವಾಲಿನಿ ರಾಮೇಣ ಮುಕ್ತೋ ಬಾಣಃ ಪರಾಙ್ಮುಖೇ ॥

ಅಭಿಪ್ರಾಯಸ್ತು ಸಾದೃಶ್ಯಾತ್ ಅದ್ಭುತಾರ್ಥಸ್ಯ ಕಲ್ಪನಾ ।

ಇದಂ ಕಿಲಾವ್ಯಾಜಮನೋಹರಂ ವಪುಃ ತಪಃಕ್ಷಮಂ ಸಾಧಯಿತುಂ ಯ ಇಚ್ಛತಿ ।

ಧ್ರುವಂ ಸ ನೀಲೋತ್ಪಲಪತ್ರಧಾರಯಾ ಶಮೀಲತಾಂ ಛೇತ್ತುಮೃಷಿರ್ವ್ಯವಸ್ಯತಿ॥

ಜ್ಞಪ್ತಿಃ ಕೇನಚಿದಂಶೇನ ಕಿಂಚಿದ್ಯತ್ರಾನುಮೀಯತೇ ॥

ಯಥಾ ಮಮ ಪ್ರಭಾವತ್ಯಾಂ 'ಅನೇನ ಖಲು ಸರ್ವತಶ್ಚರತಾ ಚಂಚರೀಕೇಣ ಅವಶ್ಯಂ ವಿದಿತಾ ಭವಿಷ್ಯತಿ ಪ್ರಿಯತಮಾ ಮೇ ಪ್ರಭಾವತೀ '

ವಿಚಾರೋ ಯುಕ್ತವಾಕ್ಯೈರ್ಯದಪ್ರತ್ಯಕ್ಷಾರ್ಥಸಾಧನಮ್ ॥

ಯಥಾ ಮಮ ಚಂದ್ರಕಲಾಯಾಂ-ರಾಜಾ-ನೂನಮಿಯಮಂತಃಪಿಹಿತಮದನ ವಿಕಾರಾ ವರ್ತತೇ-ಯತಃ—

ಹಸತಿ ಪರಿತೋಷರಹಿತಂ ನಿರೀಕ್ಷ್ಯಮಾಣಾಪಿ ನೇಕ್ಷತೇ ಕಿಂಚಿತ್ ।

ಸಖ್ಯಾಮುದಾಹರಂತ್ಯಾಮಸಮಂಜಸಮುತ್ತರಂ ದತ್ತೇ ॥

ಯಥಾ ವೇಣ್ಯಾಂ–ಯದ್ವೈದ್ಯುತಮಿವ ಜ್ಯೋತಿರಾರ್ಯೇ ಕ್ರುದ್ಧೇಽದ್ಯ ಸಂಭೃತಮ್
ಸಹದೇವಃ. ತತ್ಪ್ರಾವೃಡಿವ ಕೃಷ್ಣೋಽಯಂ ನೂನಂ ಸಂವರ್ಧಯಿಷ್ಯತಿ ॥

ಉಪದಿಷ್ಟಂ ಮನೋಹಾರಿ ವಾಕ್ಯಂ ಶಾಸ್ತ್ರಾನುಸಾರತಃ ।

ಯಥಾ ಶಾಕುಂತಲೇ–ಶುಶ್ರೂಷಸ್ವ ಗುರೂನ್ ಕುರು ಪ್ರಿಯಸಖೀವೃತ್ತಿಂ ಸಪತ್ನೀಜನೇ
ಭರ್ತುರ್ವಿಪ್ರಕೃತಾಪಿ ರೋಷಣತಯಾ ಮಾಸ್ಮ ಪ್ರತೀಪಂ ಗಮಃ॥

ಗುಣಾತಿಪಾತಃ ಕಾರ್ಯಂ ಯದ್ವಿಪರೀತಂ ಗುಣಾನ್ ಪ್ರತಿ ।

ಯಥಾ ಮಮ ಚಂದ್ರಕಲಾಯಾಂ ಚಂದ್ರಂ ಪ್ರತಿ—

ಯದಿ ಸಂಹ್ರಿಯತೇ ತಮೋ ಧಾರ್ಯತೇ ಸಕಲೈಸ್ತೇ ಪಾದಃ ।
ವಸಸಿ ಶಿರಸಿ ಪಶುಪತೇ ತಥಾಪಿ ಹಾ ಸ್ತ್ರಿಯೋ ಜೀವನಂ ಹರತಿ ॥

ಯಃ ಸಾಮಾನ್ಯಗುಣೋದ್ರೇಕಃ ಸ ಗುಣಾತಿಶಯೋ ಮತಃ ।

ಯಥಾ ತತ್ರೈವ–ರಾಜಾ (ಚಂದ್ರಕಲಾಯಾ ಮುಖಂ ನಿರ್ದಿಶ್ಯ)

ಅಸಾವಂತಶ್ಚಂಚದ್ವಿಕಚನವಲೀಲಾಬ್ಜಯುಗಳ
ಸ್ತಲಸ್ಫೂರ್ಜತ್ಕಂಬುರ್ವಿಲಸದಲಿಸಂಘಾತ ಉಪರಿ ।
ವಿನಾ ದೋಷಾಸಂಗಂ ಸತತಪರಿಪೂರ್ಣಾಖಿಲಕಲಃ
ಕೃತಃ ಪ್ರಾಪ್ತಶ್ಚಂದ್ರೋ ವಿಗಲಿತಕಳಂಕಃ ಸುಮುಖಿ ! ತೇ ॥

ಸಿದ್ಧಾನರ್ಥಾನ್ ಬಹೂನುಕ್ತ್ವಾ ವಿಶೇಷೋಕ್ತಿರ್ವಿಶೇಷಣಮ್ ।

ಯಥಾ— ತೃಷ್ಣಾಪಹಾರೋ ವಿಮಲೋ ದ್ವಿಜಾವಾಸೋ ಜನಪ್ರಿಯಃ ।
ಹ್ರದಃ ಪದ್ಮಾಕರಃ ಕಿಂತು ಬುಧಸ್ತ್ವಂ ಸ ಜಲಾಶಯಃ ॥

ಪೂರ್ವಸಿದ್ಧಾರ್ಥಕಥನಂ ನಿರುಕ್ತಿರಿತಿ ಕೀರ್ತ್ಯತೇ ।

ಯಥಾ ವೇಣ್ಯಾಂ—'ನಿಹತಾಶೇಷಕೌರವ್ಯಃ' ಇತ್ಯಾದಿ.

ಬಹೂನಾಂ ಕೀರ್ತನಂ ಸಿದ್ಧಿರಭಿಪ್ರೇತಾರ್ಥಸಿದ್ಧಯೇ ।

ಯಥಾ—ಯದ್ವೀರ್ಯಂ ಕೂರ್ಮರಾಜಸ್ಯ ಯಶ್ಚ ಶೇಷಸ್ಯ ವಿಕ್ರಮಃ ।
ಪೃಥಿವ್ಯಾ ರಕ್ಷಣೇ ರಾಜನ್ನೇಕತ್ರ ತ್ವಯಿ ತತ್ ಸ್ಥಿತಮ್ ।

ದೃಷ್ಟಾಂತಾದೀನಾಂ ಭವೇದ್ ಭ್ರಂಶೋ ವಾಚ್ಯಾದನ್ಯತರದ್ವಚಃ।

ಯಥಾ ವೇಣ್ಯಾ ಕಂಚುಕಿನಂ ಪ್ರತಿ ದುರ್ಯೋಧನಃ—

ಸಹಭೃತ್ಯಗಣಂ ಸಬಾಂಧವಂ ಸಹಮಿತ್ರಂ ಸಸುತಂ ಸಹಾನುಜಮ್ ।
ಸ್ವಬಲೇನ ನಿಹಂತಿ ಸಂಯುಗೇ ನ ಚಿರಾತ್ಪಾಂಡುಸುತಃ ಸುಯೋಧನಮ್ ॥

ಉಪಯುಕ್ತವಾದ ಕಾರಣವನ್ನು ತೋರಿಸಿ ಸಂಕ್ಷೇಪವಾಗಿ ಇಷ್ಟಾರ್ಥವನ್ನು ಸೂಚಿಸುವ ವಾಕ್ಯವೇ ಹೇತುವೆಂಬ ಲಕ್ಷಣವೆನಿಸುತ್ತದೆ. ಈ ವಾಕ್ಯಕ್ಕೆ ಹೇತುವಿನ ಸಂಬಂಧವಿರುವುದರಿಂದ ಇದು ಹೇತುವೆನಿಸುತ್ತದೆ. ವೇಣೀಸಂಹಾರದಲ್ಲಿ ಚೇಟಿಯು ಭೀಮನಿಗೆ 'ಭಾನುಮತಿ, ನಿಮ್ಮ ಕೂದಲನ್ನು ಬಿಚ್ಚಡೆಯೇ ನಮ್ಮ ದೇವಿಯು ತನ್ನ ಕೂದಲನ್ನು ಹೇಗೆ ಕಟ್ಟುವಳು ಎಂದು ನಾನು ಕೇಳಿದೆನು' ಎಂದು ತಿಳಿಸಿದಳು. ಇಲ್ಲಿ

ಭಾನುಮತಿಯ ಕೂದಲನ್ನು ಬಿಚ್ಚುವುದೇ ದ್ರೌಪದಿಯ ಕೂದಲನ್ನು ಕಟ್ಟಲು ಕಾರಣ ವೆಂದು ತೋರಿಸಿ ದುರ್ಯೋಧನನ ಮರಣವೆಂಬ ಇಷ್ಟಾರ್ಥವನ್ನು ಸಂಕೇತವಾಗಿ ಸೂಚಿಸುವ ವಾಕ್ಯವನ್ನು ಇಲ್ಲಿ ಹೇಳಿರುವುದರಿಂದ ಇದೇ ಹೇತುವೆನಿಸಿದೆ. ಯಥಾರ್ಥ ವನ್ನು ತಿಳಿಯದೇ ಇರುವವನ ಮಾತಿನಲ್ಲಿ ನಿಶ್ಚಯವಿಲ್ಲದಿರುವುದೇ ಸಂಶಯವೆನಿಸು ವುದು. ಯಯಾತಿವಿಜಯದಲ್ಲಿ 'ಈಕೆಯು ಸ್ವರ್ಗಾಧಿಪತಿಯಾದ ಇಂದ್ರನ ಲಕ್ಷ್ಮಿಯೋ ಅಥವಾ ಯಜ್ಞದಲ್ಲಿ ಹುಟ್ಟಿದ ಕನ್ಯೆಯೋ? ಅಥವಾ ಈ ದೇಶದ ದೇವತೆಯೋ ಅಥವಾ ಪಾರ್ವತಿಯೋ ?'' ಎಂದು ಈಕೆ ಯಾರೆಂಬ ಬಗ್ಗೆ ನಿಜಾಂಶವು ತಿಳಿಯದೇ ಇರುವುದರಿಂದ ಯಯಾತಿಯ ಮಾತಿನಲ್ಲಿ ಅನೇಕ ಬಗೆಯ ಸಂಶಯವಿದೆ. ಪಕ್ಷದಲ್ಲಿ ಸಾಧ್ಯಾಂಶವಿದೆ ಎಂದು ಸಾಧಿಸಲಿಕ್ಕಾಗಿ ಒಂದು ಕಾರಣವನ್ನು ಸೂಚಿಸುವುದೇ ದೃಷ್ಟಾಂತವೆನಿಸುವುದು. ವೇಣೀಸಂಹಾರದಲ್ಲಿ ಭೀಮನು 'ಆರ್ಯನೇ-ಇದು ಆಕೆಗೆ ಯೋಗ್ಯವೇ ಆಗಿದೆ; ಯಾಕೆಂದರೆ ಆಕೆ ದುರ್ಯೋಧನನ ಹೆಂಡತಿಯಷ್ಟೆ!' ಎಂದು ಹೇಳುವನು ಇಲ್ಲಿ ಭಾನುಮತಿಯ ರೂಪದ ಬಗ್ಗೆ ಪರಿಹಾಸಮಾಡುವುದು ಉಚಿತವೆಂಬು ದನ್ನು ಸಾಧಿಸಲಿಕ್ಕಾಗಿ ಈಕೆ ದುರ್ಯೋಧನನ ಹೆಂಡತಿ ಎಂಬ ಹೇತುವನ್ನು ತೋರಿಸಿ ರುವುದರಿಂದ ಇದು ದೃಷ್ಟಾಂತವೆನಿಸಿದೆ.

ಪ್ರಕೃತಸಂದರ್ಭಕ್ಕೆ ಅನುಗುಣವಾದ ವಿಷಯದ ಮೂಲಕ ಮುಂದಿನ ವಿಷಯ ವನ್ನು ಭಾವಿಸುವುದೇ ಸಮಾನತರ್ಕವೆನಿಸುವುದು. "ಸಾಮಾನ್ಯವಾಗಿ ಒಳ್ಳೆಯವೂ ಕೆಟ್ಟವೂ ಆದ ಸ್ವಪ್ನಗಳು ಎಲ್ಲರಿಗೂ ಯಥೇಚ್ಛವಾಗಿ ಕಾಣಿಸಿಕೊಳ್ಳುತ್ತವೆ. ಆದರೆ ಈ ನೂರು ಸ್ವಪ್ನಗಳ ಸಂಖ್ಯೆಯು ದುಶ್ಯಾಸನ ಮೊದಲಾದ ನೂರು ತಮ್ಮಂದಿರೊಡನೆ ನನಗೆ ಪ್ರತ್ಯೇಕವಾಗಿ ಸಂಬಂಧಿಸಿದೆ.'' ಇಲ್ಲಿ ಪ್ರಕೃತಸಂದರ್ಭಕ್ಕೆ ಅನುಗುಣವಾಗಿ ಅನೇಕ ಸಹೋದರರ ಮರಣವನ್ನು ಊಹಿಸುವ ಮೂಲಕ ತನ್ನ ಮರಣವನ್ನು ಊಹಿ ಸುವುದರಿಂದ ಇದು ಸಮಾನವಾದ ತರ್ಕವೆನಿಸಿದೆ. ಅರ್ಥಕ್ಕೆ ಅನುಗುಣವಾಗಿ ಅಂದರೆ ಕೋಮಲವಾದ ಅರ್ಥಕ್ಕೆ ಕೋಮಲವಾಗಿಯೂ, ಕಟುವಾದ ಅರ್ಥಕ್ಕೆ ಕಟುವಾಗಿಯೂ ಇರುವ ಪದಗಳ ಸಮೂಹವೇ ಪದೋಚ್ಚಯವೆನಿಸಿದೆ. "ಕೆಳತುಟಿಯು ಚಿಗುರಿನಂತೆ ಕೆಂಪಾಗಿದೆ. ತೋಳುಗಳು ಸುಕುಮಾರವಾದ ಕೊಂಬೆಗಳಿಗೆ ಸದೃಶವೆನಿಸಿವೆ. ಸ್ತ್ರೀ ಯರ ಅವಯವಗಳಲ್ಲಿ ಯೌವನವು ಯುವಕರಿಗೆ ಮೋಹವನ್ನು ಹುಟ್ಟಿಸಲು ಸಿದ್ಧವಾ ಗುವಂತೆ ಬ್ರಹ್ಮನು ಸೇರಿಸಿರುವನು." ಇಲ್ಲಿ ಪದಕ್ಕೂ ಪದಾರ್ಥಕ್ಕೂ ಸೌಕುಮಾರ್ಯವು ಅನುಗುಣವಾಗಿದೆ. ಯೋಗ್ಯವಾದ ಅರ್ಥವನ್ನು ತಿಳಿಸಲು ತಕ್ಕ ಪದಗಳ ಜೋಡಣೆ ಯನ್ನು ಇಲ್ಲಿ ಕಾಣಬಹುದು. ಹೀಗೆಯೇ ವಿಕಟವಾದ ಅರ್ಥವನ್ನು ತಿಳಿಸಲು ವಿಕಟ ವಾದ ಪದಗಳನ್ನು ಪ್ರಯೋಗಿಸಲಾಗುವುದು. ಇದನ್ನು 'ಝಣಜ್ಝಣಿತಕಂಕಣ' ಎಂಬಲ್ಲಿ ಉತ್ತರರಾಮಚರಿತ್ರದಲ್ಲಿ ಕಾಣಬಹುದು.

ಎದುರಾಳಿಯನ್ನು ನಿರಾಕರಿಸಲಿಕ್ಕಾಗಿ ಪ್ರಸಿದ್ಧವಾದ ವಿಷಯಗಳನ್ನು ತಿಳಿಸು ವುದು ನಿದರ್ಶನವೆನಿಸುವುದು. "ಕ್ಷತ್ರಿಯಜಾತಿಗೆ ಯೋಗ್ಯವಾದ ನಿಯಮಗಳಿಂದ

ಎದುರಿಗೆ ಯುದ್ಧವನ್ನು ಮಾಡುತ್ತ ಶತ್ರುವನ್ನು ಕೊಲ್ಲಲು ರಾಜರು ಸಮರ್ಥರಾಗಿರಬೇಕು. ವಾಲಿಯು ಎದುರಿಗೆ ಇಲ್ಲದಿರುವಾಗ ಮೋಸದಿಂದ ರಾಮನು ಅವನಿಗೆ ಬಾಣವನ್ನು ಪ್ರಯೋಗಿಸಿದ್ದು ಯುಕ್ತವೇ ?" ಇಲ್ಲಿ ಪ್ರಥಮಾರ್ಧದಲ್ಲಿ ಹೇಳಿರುವಂತೆ ಶತ್ರುಪಕ್ಷವನ್ನು ತಿರಸ್ಕರಿಸಲಿಕ್ಕಾಗಿ ಉತ್ತರಾರ್ಧದಲ್ಲಿ ಪ್ರಸಿದ್ಧವಾದ ಅರ್ಥವನ್ನು ತಿಳಿಸಿರುವುದರಿಂದ ಇದು ನಿದರ್ಶನವೆನಿಸಿದೆ. ಸಾದೃಶ್ಯದಿಂದ ಅಸಂಭವವಾದ ವಿಷಯವನ್ನು ಕಲ್ಪಿಸುವುದೇ ಅಭಿಪ್ರಾಯವೆನಿಸುವುದು. ಸಹಜವಾಗಿ ಸುಂದರವಾಗಿರುವ ಶಕುಂತಲೆಯ ಶರೀರವನ್ನು ತಪಸ್ಸಿನಿಂದ ಬಳಲಿಸಲು ಯಾವನು ಇಚ್ಛಿಸುವನೋ ಅಂತಹ ಕಣ್ವ ಋಷಿಯು ಕನ್ನೈದಿಲೆಯ ದಳದ ಅಗ್ರಭಾಗದಿಂದ ಅತಿಕಠಿನವಾದ ಶಮೀಲತೆಯನ್ನು ಕತ್ತರಿಸಲು ನಿಶ್ಚಯಿಸಿ ಪ್ರಯತ್ನಿಸಿರುವಂತೆ ಕಾಣುತ್ತದೆ." ಇಲ್ಲಿ ಕನ್ನೈದಿಲೆಯ ದಳದ ಅಗ್ರಭಾಗದಿಂದ ಶಮೀತರುವನ್ನು ಕತ್ತರಿಸುವುದು ಅಸಂಭವವೆನಿಸಿದೆ ಅದನ್ನು ಕಲ್ಪಿಸಿದ್ದು ಒಂದು ಬಗೆಯ ಅಭಿಪ್ರಾಯವಾದ್ದರಿಂದ, ಇದು ಅಭಿಪ್ರಾಯವೆಂಬ ಲಕ್ಷಣವೆನಿಸಿದೆ.

ಯಾವುದೋ ಒಂದು ಅಂಶವನ್ನು ತಿಳಿಸುವ ವಾಕ್ಯದಿಂದ ಬೇರೊಂದು ಅಂಶವನ್ನು ಊಹಿಸುವುದೇ ಜ್ಞಪ್ತಿ ಎನಿಸುವುದು. ತನ್ನನ್ನು ತಿಳಿಸಿಕೊಡುವುದರಿಂದ ಇದು ಜ್ಞಪ್ತಿ ಎನಿಸಿದೆ. "ಎಲ್ಲಾ ಕಡೆಗಳಲ್ಲೂ ಸಂಚರಿಸುವ ಈ ದುಂಬಿಗೆ ನನ್ನ ಪ್ರಿಯತಮೆ ಪ್ರಭಾವತಿಯು ಎಲ್ಲಿರುವಳೆಂಬುದು ತಿಳಿದಿರಬಹುದು. ಇಲ್ಲಿ 'ಎಲ್ಲಾ ಕಡೆಯಲ್ಲೂ ಸಂಚರಿಸುವಂತಹದು.' ಎಂಬ ಅಂಶದಿಂದ ಆ ದುಂಬಿಯು ಪ್ರಭಾವತಿಯ ಬಗ್ಗೆ ತಿಳಿದಿರಬಹುದು' ಎಂಬುದನ್ನು ಊಹಿಸಿದ್ದರಿಂದ ಇದು ಜ್ಞಪ್ತಿ ಎನಿಸಿದೆ. ಯುಕ್ತಿಯುಕ್ತವಾದ ಮಾತುಗಳಿಂದ ಪರೋಕ್ಷವಾದ ವಿಷಯವನ್ನು ನಿರೂಪಿಸುವುದೇ ವಿಚಾರವೆನಿಸುವುದು. "ಈಕೆಗೆ ನಿಜವಾಗಿಯೂ ಹೃದಯದೊಳಗೆ ಕಾಮನಿಂದ ಉಂಟಾದ ವಿಕಾರವು ಕಾಡಿಸುತ್ತಿರಬೇಕು. ಆಕೆ ಸಂತೋಷವಿಲ್ಲದಂತೆ ನಗುತ್ತಾಳೆ. ಅವಳನ್ನು ಬೇರೆಯವರು ಗಮನಿಸಿದರೂ ಅವಳು ಯಾರನ್ನು ಗಮನಿಸುವುದಿಲ್ಲ. ಸಖಿಯು ಏನನ್ನಾದರೂ ಹೇಳುತ್ತಿರಲು ಈಕೆಯು ಅಯುಕ್ತವಾದ ಉತ್ತರವನ್ನು ಕೊಡುತ್ತಾಳೆ." ಬೇರೊಬ್ಬರ ಮನಸ್ಸಿನಲ್ಲಿ ಅನುಭವಿಸುತ್ತಿರುವ ಕಾಮವಿಕಾರವನ್ನು ಇಲ್ಲಿ ತಿಳಿಸಿರುವುದರಿಂದ ಇದು ವಿಚಾರವೆನಿಸಿದೆ. ದೇಶಕಾಲಗಳಿಗೆ ಸಮಾನವಾದ ಧರ್ಮವುಳ್ಳದ್ದೆಂದು ವರ್ಣಿಸುವುದೇ ದಿಷ್ಟವೆಂಬ ಲಕ್ಷಣವೆನಿಸುತ್ತದೆ. ದೇಶಕಾಲಗಳನ್ನು ಸ್ವರೂಪದಿಂದಲೇ ಉದ್ದೇಶಿಸುವುದರಿಂದ ಇದು ದಿಷ್ಟವೆನಿಸಿದೆ. ವೇಣೀಸಂಹಾರದಲ್ಲಿ ಸಹದೇವನು 'ಈಗ ಕೋಪಗೊಂಡಿರುವ ಪೂಜ್ಯಭೀಮನಲ್ಲಿ ಮಿಂಚಿನಲ್ಲಿರುವಂತಹ ತೇಜಸ್ಸು ಉತ್ಪನ್ನವಾಗಿದೆ. ಈ ದ್ರೌಪದಿಯು ವರ್ಷಕಾಲದಲ್ಲಿ ಜ್ಯೋತಿಯಂತೆ ಶೋಭಿಸುತ್ತಿರುವಳು' ಇಲ್ಲಿ ಆಯಾ ಕಾಲದ ಪರಿಸ್ಥಿತಿಗೆ ತಕ್ಕಹಾಗೆ ಭೀಮ ದ್ರೌಪದಿಯರನ್ನು ವರ್ಣಿಸಿರುವುದರಿಂದ ಇದು ದಿಷ್ಟವೆನಿಸಿದೆ. ಶಾಸ್ತ್ರಾನುಗುಣವಾದ ವಾಕ್ಯವನ್ನು ಮನೋಹರವಾಗುವಂತೆ ತಿಳಿಸುವುದೇ ಉಪದಿಷ್ಟವೆನಿಸುವುದು. ಶಾಕುಂತಲದಲ್ಲಿ ಕಣ್ವಋಷಿಯು ಶಕುಂತಲೆಯನ್ನು

ಗಂಡನ ಮನೆಗೆ ಕಳುಹಿಸುವಾಗ ಹೀಗೆ ಉಪದೇಶಿಸುತ್ತಾನೆ. "ಅತ್ತೆ ಮೊದಲಾದ ಹಿರಿಯರಿಗೆ ನೀನು ಸೇವೆಮಾಡು. ಸವತಿಯೊಡನೆ ಪ್ರಿಯಸಖಿಯಂತೆ ವ್ಯವಹರಿಸು. ಗಂಡನು ನಿನಗೆ ವಿರೋಧವನ್ನು ಮಾಡಿದರೂ ಸಹ ನೀನು ಅವನಲ್ಲಿ ಕೋಪದಿಂದ ವಿರೋಧವನ್ನು ಮಾಡಬೇಡ. ಸೇವಕರ ಬಗ್ಗೆ ಉದಾರಸ್ವಭಾವದಿಂದ ವರ್ತಿಸು. ಐಶ್ವರ್ಯವನ್ನು ಅನುಭವಿಸುವಾಗ ಗರ್ವಪಡಬೇಡ. ಹೀಗೆ ಬಾಳುತ್ತಲೇ ಯುವತಿಯರು ಮನೆಗೆ ಭಾಗ್ಯವೆನಿಸುತ್ತಾರೆ. ಇದಕ್ಕೆ ವಿರುದ್ಧವಾಗಿ ಬಾಳುವವರು ತಮಗೂ ಇತರರಿಗೂ ಮನೋವ್ಯಥೆಯನ್ನು ಕೊಡುವರು" ಹೀಗೆ ಇಲ್ಲಿ ಸ್ಮೃತಿಶಾಸ್ತ್ರಗಳಿಗೆ ಅನುಸಾರವಾಗಿ ಮನೋಹರವಾದ ರೀತಿಯಲ್ಲಿ ತಿಳಿಸಿರುವುದರಿಂದ ಇದು ಉಪದಿಷ್ಟವೆನಿಸಿದೆ. ಒಬ್ಬನಲ್ಲಿ ಇರುವ ಗುಣಗಳಿಗೆ ವಿರುದ್ಧವಾಗಿ ಆಚರಿಸುವುದೇ ಗುಣಾತಿಪಾತವೆನಿಸುತ್ತದೆ. ಚಂದ್ರಕಲಾನಾಟಿಕೆಯಲ್ಲಿ ಚಂದ್ರನನ್ನು ಕುರಿತು "ನೀನು ಕತ್ತಲೆಯನ್ನು ಪರಿಹರಿಸಿದರೂ, ಎಲ್ಲರೂ ನಿನ್ನ ತಂಪಾದ ಕಿರಣವನ್ನು ಅನುಭವಿಸಿ ಸಂತೋಷಪಟ್ಟರೂ, ನೀನು ಶಿವನ ಶಿರಸ್ಸಿನಲ್ಲಿ ಮೇಲಾಗಿದ್ದರೂ, ನೀನು ವಿರಹಿಣಿಯ ಜೀವನವನ್ನು ಕಾಮಾಗ್ನಿಯಿಂದ ಉರಿಸುವೆ.'' ಎಂದು ನಾಯಕಿಯು ನಿಂದಿಸುತ್ತಾಳೆ. ಇಲ್ಲಿ ಮಹತ್ವಗುಣವನ್ನು ವಿರೋಧಿಸುವ ಸ್ತ್ರೀಯರ ಜೀವನವನ್ನು ಹಾಳುಮಾಡುವುದಾಗಿ ತಿಳಿಸಿರುವುದರಿಂದ ಇದು ಗುಣಾತಿಪಾತವೆನಿಸಿದೆ. ಉಪಮಾನ ಮತ್ತು ಉಪಮೇಯ ಇವುಗಳಲ್ಲಿರುವ ಸಾಧಾರಣಧರ್ಮದಿಂದ ಉಪಮೇಯವಲ್ಲಿರುವ ಬೇರೆ ಯಾವುದಾದರೊಂದು ಧರ್ಮವನ್ನು ಹೆಚ್ಚೆಂದು ತೋರಿಸುವುದೆ; ಗುಣಾತಿಶಯವೆನಿಸುವುದು. ಅಲ್ಲಿಯೇ ರಾಜನು ಚಂದ್ರಕಲೆಯ ಮುಖವನ್ನು ನಿರ್ದೇಶಿಸಿ 'ಎಲೈ ಸುಮುಖಿಯೇ, ಒಳಗಡೆ ಪ್ರಕಾಶಿಸುತ್ತಿರುವ ವಿಕಸಿತವೂ ನೂತನವೂ ಆದ ಕಣ್ಣುಗಳೆಂಬ ವಿಹಾರಪದ್ಮಗಳಿದ್ದು ಕೆಳಭಾಗದಲ್ಲಿ ಶೋಭಿಸುತ್ತಿರುವ ಶಂಖವಿದ್ದು, ಮೇಲ್ಭಾಗದಲ್ಲಿ ಚಂಚಲವಾದ ಹುಬ್ಬುಗಳೆಂಬ ದುಂಬಿಗಳಿದ್ದು, ಯಾವಾಗಲೂ ಕಲೆಗಳಿಂದ ತುಂಬಿಕೊಂಡು ಕಳಂಕವಿಲ್ಲದಿರುವ ಈ ಮುಖವೆಂಬ ಚಂದ್ರನು ರಾತ್ರಿಯ ಸಂಪರ್ಕವಿಲ್ಲದೆಯೇ ನಿನ್ನ ಸಮೀಪಕ್ಕೆ ಬಂದಿರುವನು.'' ಇಲ್ಲಿ ಉಪಮಾನವೆನಿಸಿದ ಚಂದ್ರನಿಗಿಂತಲೂ ಉಪಮೇಯವೆನಿಸಿದ ನಾಯಿಕೆಯ ಮುಖವೇ ಕಳಂಕವಿಲ್ಲದ್ದರಿಂದ ನಿರ್ಮಲವೆನಿಸಿದೆ ಎಂದು ಭಾವಿಸಿ ಈ ನಿಷ್ಕಳಂಕತ್ವವೆಂಬ ಹೆಚ್ಚಿನ ಧರ್ಮವನ್ನು ತಿಳಿಸಿದ್ದರಿಂದ ಇದು ಗುಣಾತಿಶಯವೆನಿಸಿದೆ. ಪ್ರಸಿದ್ಧವಾದ ಅನೇಕ ಸಾಮಾನ್ಯಧರ್ಮಗಳನ್ನು ತಿಳಿಸಿ, ಯಾವುದಾದರೊಂದು ಧರ್ಮವನ್ನು ವಿಶೇಷವೆಂದು ತಿಳಿಸುವುದು ಉಕ್ತಿ ಎಂಬ ಲಕ್ಷಣವೆನಿಸುವುದು. "ಹೊಂಡವು ನಿನ್ನ ನೀರಡಿಕೆಯನ್ನು ಹಣದ ಬಯಕೆಯನ್ನೂ ನೀರಿನಿಂದಲೂ (ಹಣದಿಂದಲೂ) ಪರಿಹರಿಸುತ್ತಲಿದೆ. ಹಾಗೆಯೇ ಅದು ನಿರ್ಮಲವೆನಿಸಿದೆ. ಪಕ್ಷಿಗಳಿಗೆ (ಬ್ರಾಹ್ಮಣರಿಗೆ) ಆಶ್ರಯವಾಗಿರುವುದು; ಶೀತಲವಾದ್ದರಿಂದ (ಮಧುರವಾಗಿ ಮಾತನಾಡುವುದರಿಂದ) ಸಂತೋಷಕರವಾಗಿದೆ. ಹಾಗೆಯೇ ಪದ್ಮಗಳಿಗೆ (ಲಕ್ಷ್ಮಿಗೆ) ಗಣಿ ಎನಿಸಿದೆ. ನಿನಗೂ ಈ ಹಳ್ಳಕ್ಕೂ ಇದೆಲ್ಲವೂ ಸಮಾನವೆನಿಸಿದೆ. ಆದರೆ ನೀನು

ವಿದ್ವಾಂಸನಿರುವೆ; ಈ ಹೊಂಡವು ನೀರಿಗೆ (ಮೂಢರಿಗೆ) ಆಶ್ರಯವೆನಿಸಿದೆ." ನಿನಗೂ ಹೊಂಡಕ್ಕೂ ಬಾಯರಿಕೆಯನ್ನೂ ಭಿಕ್ಷುಕರ ಇಷ್ಟಾರ್ಥವನ್ನೂ ಪರಿಹರಿಸುವುದೇ ಮೊದಲಾದ ಗುಣಗಳು ಸಮಾನವೆನಿಸಿದ್ದರೂ ಸಹ ನೀನು ವಿದ್ವಾಂಸನೆನಿಸಿ ಆ ಹೊಂಡವು ಅಜ್ಞಾನಿ ಎನಿಸಿದ್ದರಿಂದ ಇಬ್ಬರಿಗೂ ಆ ಬಗೆಯ ವಿಶೇಷವನ್ನು ಇಲ್ಲಿ ತಿಳಿಸಿರುವ ಪ್ರಯುಕ್ತ ಇದು ವಿಶೇಷವೆನಿಸಿದೆ.

ಹಿಂದಿನಿಂದಲೂ ಪ್ರಸಿದ್ಧವೆನಿಸಿರುವ ವಿಷಯಗಳನ್ನು ತಿಳಿಸುವುದೇ ನಿರುಕ್ತಿ ಎನಿಸುವುದು ಹಿಂದೆ ಸಿದ್ಧವಾಗಿರುವುದರಿಂದಲೇ - ಇದನ್ನು ನಿಶ್ಚಯವೆಂದು ತಿಳಿಸುವ ಪ್ರಯುಕ್ತ ಇದು ನಿರುಕ್ತಿ ಎನಿಸಿದೆ. ವೇಣೀಸಂಹಾರದಲ್ಲಿ "ನಿಹತಾಶಶೇ ಕೌರವ್ಯಃ!" ಎಂಬ ಪದ್ಯದಲ್ಲಿ ಭೀಮನು ತಾನು ಹಿಂದೆ ಮಾಡಿದ ಕೃತ್ಯಗಳೆಲ್ಲವನ್ನು ಸ್ಪಷ್ಟವಾಗಿ ತಿಳಿಸಿರುವುದರಿಂದ ಅದು ನಿರುಕ್ತಿ ಎನಿಸಿದೆ. ತನ್ನ ಮನಸ್ಸಿನಲ್ಲಿ ನಿಶ್ಚಯಿಸಿರುವ ಇಷ್ಟಾರ್ಥವನ್ನು ಪಡೆಯಲಿಕ್ಕಾಗಿ ಅನೇಕ ಬಗೆಯ ಅರ್ಥಗಳನ್ನು ತಿಳಿಸುವುದೇ ಸಿದ್ಧಿ ಎನಿಸುವುದು. "ಎಲೈ ರಾಜನೇ, ವಿಷ್ಣುವನ್ನು ಹೊತ್ತಿರುವ ಆನಂತನೆಂಬ ಸರ್ಪರಾಜನನ್ನೂ ಸಹ ಹೊತ್ತುಕೊಂಡಿರುವ ಆಮೆಯ ವೀರ್ಯವು ಯಾವುದು ಉಂಟೋ, ಈ ಭೂಮಿಯನ್ನು ಹೊತ್ತಿರುವ ಅನಂತನೆಂಬ ಸರ್ಪದ ಹೆಚ್ಚಿನ ಶಕ್ತಿ ಯಾವುದ ಇದೆಯೋ ಇವೆರಡೂ ಸಹ ಈ ಭೂಮಿಯ ರಕ್ಷಣೆಯಲ್ಲಿ ಅನುಕೂಲವಾಗುವಂತೆ ನಿನ್ನಲ್ಲಿ ಸೇರಿಕೊಂಡಿವೆ." ಇಲ್ಲಿ ರಾಜನನ್ನು ಸಂತೋಷಪಡಿಸಬೇಕೆಂಬುದೇ ಕವಿಗೆ ಇಷ್ಟವಾದ ಅಂಶ. ಇದನ್ನು ಸಾಧಿಸಲಿಕ್ಕಾಗಿ ಕೂರ್ಮರಾಜ, ಅನಂತನೆಂಬ ಸರ್ಪ ಇವರ, ಸಾಮರ್ಥ್ಯಗಳನ್ನು ತಿಳಿಸಿದ್ದರಿಂದ ಇದು ಸಿದ್ಧಿ ಎನಿಸಿದೆ. ಗರ್ವಪಡುತ್ತಿರುವವನೂ ಸಂತೋಷಪಡುತ್ತಿರುವವನೂ, ದುಃಖದಲ್ಲಿ ನರಳುತ್ತಿರುವವನೂ ಇಂತವರ ವಿಷಯವನ್ನು ತಿಳಿಸದೆ ಬೇರೊಂದು ವಿಷಯವನ್ನು ತಿಳಿಸುವ ಮಾತು ಭ್ರಂಶವೆನಿಸುವುದು. ವೇಣೀಸಂಹಾರದಲ್ಲಿ ಕಂಚುಕಿಗೆ ದುರ್ಯೋಧನನು "ಯುಧಿಷ್ಠಿರನು ತನ್ನ ಬಲದಿಂದ ಕೌರವರ ಈ ಬಂಧುಗಳನ್ನೂ ಸೋದರರನ್ನೂ ಸ್ನೇಹಿತರನ್ನೂ ಮಕ್ಕಳನ್ನೂ ಸೇವಕರನ್ನೂ ಹಾಗೆಯೇ ದುರ್ಯೋಧನನ್ನೂ ಶೀಘ್ರವಾಗಿ ಯುದ್ಧದಲ್ಲಿ ಕೊಲ್ಲುತ್ತಾನೆ.'' ಎಂದು ಹೇಳುವನು. ಇಲ್ಲಿ 'ಯುಧಿಷ್ಠಿರನನ್ನು ದುರ್ಯೋಧನನು ಕೊಲ್ಲುತ್ತಾನೆ' ಎಂದು ಅವನು ಹೇಳಬೇಕಾಗಿತ್ತು. ಆದರೆ ದುರ್ಯೋಧನನು ಗರ್ವದಿಂದ ಮಡಿಸಿದ್ದುದರಿಂದ 'ಪಾಂಡುಸುತಃ ಸುಯೋಧನಂ' ಎಂದು ಹೇಳುವನು. ಆದ್ದರಿಂದ ಇದು ಭ್ರಂಶವೆನಿಸಿದೆ. ತಾನು ಯುಧಿಷ್ಠಿರನನ್ನು ನಿರ್ಮೂಲಗೊಳಿಸುವನೆಂದು ಹೇಳುವ ಬದಲು ಯುಧಿಷ್ಠಿರನು ತನ್ನನ್ನು ನಿರ್ಮೂಲಗೊಳಿಸುವನೆಂದು ಇಲ್ಲಿ ಹೇಳಿದಂತಾಯಿತು.

ವಿಚಾರಸ್ಯಾನ್ಯಥಭಾವಃ ಸಂದೇಹಾತ್ತು ವಿಪರ್ಯಯಃ।

ಯಥಾ—ಮತ್ವಾ ಲೋಕಮದಾತಾರಂ ಸಂತೋಷೇ ಯೈಃ ಕೃತಾ ಮತಿಃ।
ತ್ವಯಿ ರಾಜನಿ ತೇ ರಾಜನ್ ನ ತಥಾ ವ್ಯವಸಾಯಿನಃ॥
ದಾಕ್ಷಿಣ್ಯಂ ಚೇತ್ ... ಪಠಿತ್ವಾ ... ನಃ

ವಾಚಾ ಯಥಾ--ಪ್ರಸಾಧಯ ಪುರೀಂ ಲಂಕಾಂರಾಜಾ ತ್ವಂ ಹಿ ವಿಭೀಷಣ ।
ಆರ್ಯೇಣಾನುಸುಗೃಹಿತಸ್ಯ ನ ವಿಘ್ನಃ ಸಿದ್ಧಿಮಂತರಾ ॥
ಏವಂ ಚೇಷ್ಟಯಾಪಿ. ವಾಕ್ಯೈಃ ಸ್ನಿಗ್ಧೈರ ನುನಯೇ ಭವೇದರ್ಥಸ್ಯ ಸಾಧನಮ್.

ಯಥಾ ವೇಣ್ಯಾಂ ಅಶ್ವತ್ಥಾಮಾನಂ ಪ್ರತಿ ಕೃಪಃ—ದಿವ್ಯಾಸ್ತ್ರಗ್ರಾಮ ಕೋವಿದೇ ಭಾರದ್ವಾಜತುಲ್ಯಪರಾಕ್ರಮೇ ಕಿಂ ನ ಸಂಭಾವ್ಯತೇ ತ್ವಯಿ ?

ಮಾಲ್ಯಾ ಸಾಧ್ಯದಭೀಷ್ಟಾರ್ಥಂ ನೈಕಾರ್ಥಪ್ರತಿಪಾದಮ್ ।

ಯಥಾ ಶಾಂಕುತಲೇ ರಾಜಾ—ಕಿಂ ಶೀಕರೈಃ ಕ್ಲಮವಿಮರ್ದಿಭಿರಾದ್ರ್ರವಾತಂ
ಸಂಚಾರಯಾಮಿ ನಳೀನೀದಳತಾಳವೃಂತಮ್ ।
ಅಂಕೇ ನಿವೇಶ್ಯ ಚರಣಾವುತ ಪದ್ಮತಾಮ್ರೌ
ಸಂವಾಹಯಾಮಿ ಕರಭೋರು ಯಥಾ ಸುಖಂ ತೇ ॥

ಅರ್ಥಾಪತ್ತಿರ್ಯದನ್ಯಾರ್ಥೋಽರ್ಥಾಂತರೋಕ್ತೇಃ ಪ್ರತೀಯತೇ ।

ಯಥಾ ವೇಣ್ಯಾಂ ದ್ರೋಣೋಽಶ್ವತ್ಥಾಮಾನಂ ರಾಜ್ಯೇಽಭಿಷೇಕ್ತುಮಿಚ್ಛತೀತಿ ಕಥಯಂತಂ ಕರ್ಣಂ ಪ್ರತಿ " ರಾಜಾ—ಸಾಧು ಅಂಗರಾಜ ! ಸಾಧು.

ದತ್ತ್ವಾಽಭಯಂ ಸೋಽತಿರಥೋ ವಧ್ಯಮಾನಂ ಕಿರೀಟನಾ।
ಸಿಂಧುರಾಜಮುಪೇಕ್ಷೇತ ನೈವಂ ಚೇತ್ಕಥಮನ್ಯಥಾ ॥

ದೂಷಣೋದ್ವೇಷಣಾಯಾಂ ತು ಭರ್ತ್ಸನಾ ಗರ್ಹಣಂ ತು ತತೌ ।

ಯಥಾ ತತ್ರೈವ ಕರ್ಣಂ ಪ್ರತಿ ಅಶ್ವತ್ಥಾಮಾ—
ನಿರ್ವೀರ್ಯಂ ಗುರುಶಾಪಭಾಷಿತವಶಾತ್ ಕಿಂ ಮೇ ತವೇವಾಯುಧಂ
ಸಂಪ್ರತ್ಯೇವ ಭಯಾದ್ವಿಹಾಯ ಸಮರಂ ಪ್ರಾಪ್ತೋಽಸ್ಮಿ ಕಿಂ ತ್ವಂ ಯಥಾ ।
ಜಾತೋಽಹಂ ಸ್ತುತಿವಂಶಕೀರ್ತನವಿದಾಂ ಕಿಂ ಸಾರಥೀನಾಂ ಕುಲೇ
ಕ್ಷುದ್ರಾರಾತಿಕೃತಾಪ್ರಿಯಂ ಪ್ರತಿಕರೋಮ್ಯಸ್ರೇಣ ನಾಸ್ತ್ರೇಣ ಕಿಮ್ ॥

ಅಭ್ಯರ್ಥನಾಪರೈರ್ವಾಕ್ಯೈಃ ಪೃಚ್ಛಾಽರ್ಥಾನ್ವೇಷಣಂ ಮತಮ್ ।

ಯಥಾ ತತ್ರೈವ "ಸುಂದರಕಃ—ಆರ್ಯಾಃ ! ಅಪಿ ನಾಮ ಸಾರಥಿದ್ವಿತೀಯೋ ದೃಷ್ಟೋ ಯುಷ್ಮಾಭಿರ್ಮಹಾರಾಜೋ ದುರ್ಯೋಧನೋ ನ ವೇತಿ."

ಪ್ರಸಿದ್ಧಿರ್ಲೋಕಸಿದ್ಧಾರ್ಥೈರುತ್ಕೃಷ್ಟೈರರ್ಥಸಾಧನಮ್ ।

ಯಥಾ ವಿಕ್ರಮೋರ್ವಶ್ಯಾಂ-ರಾಜಾ.

ಸೂರ್ಯಾಚಂದ್ರಮಸೌ ಯಸ್ಯ ಮತಾಮಹಪಿತಾಮಹೌ ।
ಸ್ವಯಂ ವೃತಃ ಪತಿರ್ದ್ವಾಭ್ಯಾಂ ಉರ್ವಶ್ಯಾ ಚ ಭುವಾ ಚ ಯಃ॥

ಸಾರೂಪ್ಯಮಭಿಭೂತಸ್ಯ ಸಾರೂಪ್ಯಾತ್ ಕ್ಷೋಭವರ್ತನಮ್ ।

ಯಥಾ ವೇಣ್ಯಾಮ್ ದುರ್ಯೋಧನಭ್ರಾಂತ್ಯಾ ಭೀಮಂ ಪ್ರತಿ " ಯುಧಿಷ್ಠಿರಃ—ದುರಾತ್ಮನ್ ದುರ್ಯೋಧನಹತಕ !" ಇತ್ಯಾದಿ.

ಸಂಕ್ಷೇಪೋ ಯತ್ತು ಸಂಕ್ಷೇಪಾತ್ ಆತ್ಮಾನ್ಯಾರ್ಥೇ ಪ್ರಯುಜ್ಯತೇ ।

ಯಥಾ ಮಮ ಚಂದ್ರಕಲಾಯಾಂ—"ರಾಜಾ—ಪ್ರಿಯೇ !

ಅಂಗಾನಿ ಖೇದಯಸಿ ಕಿಂ ಶಿರೀಷಕುಸುಮಪರಿಪೇಲವಾನಿ ಮುಧಾ ।

(ಆತ್ಮಾನಂ ನಿರ್ದಿಶ್ಯ)

ಅಯಮೀಹಿತಕುಸುಮಾನಾಂ ಸಂಪಾದಯಿತಾ ತವಾಸ್ಮಿ ದಾಸಜನಃ ॥

ಗುಣಾನಾಂ ಕೀರ್ತನಂ ಯತ್ತು ತದೇವ ಗುಣಕೀರ್ತನಮ್ ।

ಯಥಾ ತತ್ರೈವ 'ನೇತ್ರೇ ಖಂಜನಗಂಜನೇ' ಇತ್ಯಾದಿ.

ಸ ಲೇಶೋ ಭಣ್ಯತೇ ವಾಕ್ಯಂ ಯತ್ಸಾದೃಶ್ಯಪುರಸ್ಸರಮ್ ॥

ಯಥಾ ವೇಣ್ಯಾಂ ರಾಜಾ-ಹತೇ ಜರತಿ ಗಾಂಗೇಯೇ ಪುರಸ್ಕೃತ್ಯ ಶಿಖಂಡಿನಮ್ ।

ಯಾ ಶ್ಲಾಘಾ ಪಾಂಡುಪುತ್ರಾಣಾಂ ಸೈವಾಸ್ಮಾಕಂ ಭವಿಷ್ಯತಿ ॥

ಮನೋರಥಸ್ತ್ವಭಿಪ್ರಾಯಸ್ಯೋಕ್ತಿರ್ಭಂಗ್ಯಂತರೇಣ ಯತ್ ।

ಯಥಾ—ರತಿಕೇಲಿಕಲಃ ಕಶ್ಚಿದೇಷ ಮನ್ಮಥಮಂಥರಃ ।

ಪಶ್ಯ ಸುಭ್ರು ಸಮಾಶ್ವಸ್ತಾಂ ಕಾದಂಬಶ್ಚುಂಬತಿ ಪ್ರಿಯಾಮ್ ॥

ವಿಶೇಷಾರ್ಥೋಽತಿವಿಸ್ತಾರೋಽನುಕ್ತಸಿದ್ಧಿರುದೀರ್ಯತೇ ।

ಯಥಾ ಗೃಹವೃಕ್ಷವಾಟಿಕಾಯಾಮ್—

ದೃಶ್ಯತೇ ತನ್ವಿ ಯಾವೇತೌ ಚಾರುಚಂದ್ರಮಸಂ ಪ್ರತಿ ।

ಪ್ರಾಜ್ಞೇ ಕಲ್ಯಾಣನಾಮಾನೌ ಉಭೌ ತಿಷ್ಯಪುನರ್ವಸೂ ॥

ಸ್ಯಾತ್ ಪ್ರಮಾಣಯಿತುಂ ಪೂಜ್ಯಂ ಪ್ರಿಯೋಕ್ತಿರ್ಹರ್ಷಭಾಷಣಮ್ ।

ಯಥಾ ಶಾಕುಂತಲೇ—

ಉದೇತಿ ಪೂರ್ವಂ ಕುಸುಮಂ ತತಃ ಫಲಂ ಘನೋದಯಃ ಪ್ರಾಕ್ ತದನಂತರಂ ಪಯಃ
ನಿಮಿತ್ತನೈಮಿತ್ತಿಕಯೋರಯಂ ವಿಧಿಸ್ತವ ಪ್ರಸಾದಸ್ಯ ಪುರಸ್ತು ಸಂಪದಃ ॥

ಯಾವುದೋ ಒಂದು ಬಗೆಯ ಸಂಶಯವು ತೋರಿದ ಪ್ರಯುಕ್ತ ಹಿಂದೆ ಮಾಡಿಕೊಂಡಿದ್ದ ನಿಶ್ಚಯವನ್ನು ಬದಲಾಯಿಸುವುದೇ ವಿಪರ್ಯಯವೆನಿಸುವುದು. "ಲೋಕದ ಜನರು ದಾನಮಾಡುವುದಿಲ್ಲವೆಂದು ತಿಳಿದು ಅವರನ್ನು ಪ್ರಾರ್ಥನೆ ಮಾಡಿದ್ದರಿಂದ ಹಣವು ಬರದೇ ಇದ್ದರೂ ಸಹ ಸಂತೋಷಪಡಬೇಕಾಗುತ್ತದೆ ಎಂದು ಯಾರು ಭಾವಿಸುವರೋ ಅವರು ಎಲೈ ರಾಜನೇ, ನೀನು ರಾಜನಾಗಿರುವಾಗ ಹಾಗೆ ಪ್ರಾರ್ಥನೆಯಿಂದ ಹಣವನ್ನು ಪಡೆಯದೆಂತೋ ಸಂತೋಷಪಡುವಂತವರಾಗುವುದಿಲ್ಲ. ಆದರೆ ನೀನು ಹೆಚ್ಚಾಗಿ ದಾನಮಾಡುವೆ ಎಂದು ಭಾವಿಸಿಯೇ ನಿನ್ನನ್ನು ಪ್ರಾರ್ಥಿಸುತ್ತಾರೆ." ಇಲ್ಲಿ ಲೋಕದ ಜನರೆಲ್ಲರೂ ದಾನಮಾಡುವವರಲ್ಲವೆಂಬ ನಿಶ್ಚಯವು ಈ ರಾಜನು ದಾನಮಾಡುವವನೋ ಅಲ್ಲವೋ ಎಂಬ ಸಂಶಯದಿಂದ ಬದಲಾವಣೆಯಾಗಿದೆಯೆಂದು ತಿಳಿಸುವುದರಿಂದ ಇದು ವಿಪರ್ಯಯವೆನಿಸಿದೆ. ದೇಹದ ಚೇಷ್ಟೆಯಿಂದಾಗಲೀ, ವಾಕ್ಯದಿಂದಾಗಲೀ ಬೇರೊಬ್ಬರ ಮನಸ್ಸನ್ನು ಸಂತೋಷಪಡಿಸುವುದೇ

ದಾಕ್ಷಿಣ್ಯವೆನಿಸುವುದು. ಮಾತಿನಿಂದ ಒಬ್ಬನ ಮನಸ್ಸನ್ನು ಅನುಸರಿಸುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ಎಲೈ ವಿಭೀಷಣನೇ, ನೀನು ಲಂಕೆಯಲ್ಲಿ ನೆಲಸಿ ಅದನ್ನು ಅಲಂಕರಿಸು. ಇನ್ನು ಅಲ್ಲಿಗೆ ನೀನೆ ರಾಜನೆನಿಸಿರುವೆ. ರಾಮಚಂದ್ರನು ಅನುಗ್ರಹಿಸಿದ ಜನರಿಗೆ ಕಾರ್ಯಸಿದ್ಧಿಯ ವಿನಹಾ ಬೇರೆ ಯಾವ ವಿಘ್ನವೂ ಬರುವಂತಿಲ್ಲ" ಹೀಗೆ ಮಾತನಾಡುತ್ತ ವಿಭೀಷಣನ ಮನಸ್ಸನ್ನು ಸಂತೋಷಗಡಿಸುವುದೇ ದಾಕ್ಷಿಣ್ಯವೆನಿಸಿವೆ. ಹೀಗೆಯೇ ಚೇಷ್ಟೆಯಿಂದಲೂ ಒಬ್ಬನ ಮನಸ್ಸನ್ನು ಸಂತೋಷಪಡಿಸಬಹುದು.

ಸ್ನೇಹವನ್ನು ತಿಳಿಸುವ ಮಾತುಗಳಿಂದ ಕಾರ್ಯವನ್ನು ಸಾಧಿಸುವುದು ಅನುನಯವೆನಿಸುತ್ತದೆ. ವೇಣೀಸಂಹಾರದಲ್ಲಿ ಅಶ್ವತ್ಥಾಮನಿಗೆ ಕೃಪನು "ದಿವ್ಯಾಸ್ತ್ರಗಳ ತತ್ತ್ವವನ್ನು ತಿಳಿದು ಪರಾಕ್ರಮದಲ್ಲಿ ದ್ರೋಣನಿಗೆ ಸಮಾನನೆನಿಸಿರುವ ನಿನಗೆ ಯಾವುದು ತಾನೆ ಸಾಧ್ಯವಾಗದೇ ಇದ್ದೀತು?" ಎಂದು ಸ್ನೇಹವನ್ನು ತಿಳಿಸುವ ಮಾತಿನಿಂದ ಅಶ್ವತ್ಥಾಮನನ್ನು ಉತ್ತೇಜನಗೊಳಿಸಿರುವುದರಿಂದ ಇದು ಅನುನಯವೆನಿಸಿದೆ. ಇಷ್ಟಾರ್ಥವನ್ನು ಸಂಪಾದಿಸಲಿಕ್ಕಾಗಿ ಅನೇಕ ವಿಷಯಗಳನ್ನು ಪ್ರಕಾಶಗೊಳಿಸುವುದೇ ಮಾಲೆ ಎನಿಸುವುದು. ಶಾಕುಂತಲದಲ್ಲಿ ರಾಜನು 'ಗ್ಲಾನಿಯನ್ನು ತೊಲಗಿಸುವ ನೀರಿನ ತುಂತುರುಗಳಿಂದ ನೆಂದಿರುವ ಗಾಳಿಯಿಂದ ಕೂಡಿರುವ ಕಮಲದ ದಳವೆಂಬ ಬೀಸಣಿಗೆಯಿಂದ ನಿನಗೆ ಬೀಸಲೇ? ಅಥವಾ ಕಮಲದಂತೆ ಕೆಂಪಗಿರುವ ನಿನ್ನ ಪಾದಗಳನ್ನು ತೊಡೆಗಳಮೇಲೆ ಇಟ್ಟುಕೊಂಡು ನಿನಗೆ ಸುಖವಾಗುವಂತೆ ಹಿಸುಕಲೆ?" ಹೀಗೆಂದು ಶಕುಂತಲೆಯ ಅನುರಾಗವೆಂಬ ಇಷ್ಟಾರ್ಥವು ತನಗೆ ದೊರೆಯಲೆಂದು ರಾಜನು ಬೀಸಣಿಗೆಯನ್ನು ಬೀಸುತ್ತಲೂ, ಕಾಲುಗಳನ್ನು ಹಿಸುಕುತ್ತಲೂ ಅನೇಕ ಬಗೆಯ ಕಾರ್ಯಗಳನ್ನು ಪ್ರಕಟಿಸುವುದರಿಂದ ಇದು ಮಾಲೆ ಎಂಬ ಲಕ್ಷಣವೆನಿಸಿದೆ.

ಯಾವುದೋ ಒಂದು ಅರ್ಥವನ್ನು ತಿಳಿಸುವುದರಿಂದ ಬೇರೊಂದು ಅರ್ಥವು ತೋರುವುದೇ ಅರ್ಥಾಪತ್ತಿ ಎನಿಸುವುದು. ವೇಣೀಸಂಹಾರದಲ್ಲಿ ದ್ರೋಣನು ಅಶ್ವತ್ಥಾಮನನ್ನು ರಾಜ್ಯದಲ್ಲಿ ಪಟ್ಟಾಭಿಷೇಕಮಾಡಿ ನೆಲೆಗೊಳಿಸಲಿಚ್ಛಿಸುವನೆಂದು ಹೇಳುತ್ತಿದ್ದ ಕರ್ಣನಿಗೆ ದುರ್ಯೋಧನನು "ಅಂಗರಾಜನೆನಿಸಿದ ನೀನು ಹೇಳಿದ್ದು ಯುಕ್ತವಾಗಿದೆ. ಹೀಗೆ ಹೇಳಿದ್ದು ಬೇರೆಯಾಗದೆ ಹೋಗಿದ್ದರೆ ಆಗ ಅತಿರಥನೆನಿಸಿದ ದ್ರೋಣನು ಜಯದ್ರಥನಿಗೆ ಅಭಯವನ್ನು ಕೊಟ್ಟು ಅರ್ಜುನನಿಂದಲೇ ಜಯದ್ರಥನ ಕೊಲೆಯಾಗುವಾಗ ಅದನ್ನು ನೋಡಿಯೂ ಹೇಗೆ ಉಪೇಕ್ಷೆಮಾಡಿದನು?" ಹೀಗೆ ಹೇಳುವನು. ಇಲ್ಲಿ ಸಿಂಧುದೇಶದ ದೊರೆಯಾದ ಜಯದ್ರಥನನ್ನು ದ್ರೋಣನು ಹೇಗೆ ಉಪೇಕ್ಷೆಮಾಡಿದನು ಎಂದು ಬೇರೊಂದು ವಿಷಯವನ್ನು ತಿಳಿಸಿರುವುದರಿಂದ ದ್ರೋಣನು ಅಶ್ವತ್ಥಾಮನನ್ನು ರಾಜ್ಯದಲ್ಲಿ ನೆಲೆಗೊಳಿಸಲು ಇಚ್ಛಿಸಿರುವನೆಂಬ ಬೇರೊಂದು ಅರ್ಥವು ತೋರುವ ಪ್ರಯುಕ್ತ ಇದು ಅರ್ಥಾಪತ್ತಿ ಎನಿಸಿದೆ.

ಒಬ್ಬನಲ್ಲಿರುವ ದೋಷವನ್ನು ಪ್ರಕಟಿಸುವ ಕಾಲದಲ್ಲಿ ಆವನನ್ನು ನಿಂದಿಸುವುದೇ ಗರ್ಹಣವೆನಿಸುವುದು. ಅಲ್ಲಿಯೇ ಕರ್ಣನಿಗೆ ಅಶ್ವತ್ಥಾಮನು 'ನಿನ್ನಂತೆ

ನನಗೂ ಸಹ ಆಯುಧವು ಗುರುವಿನ ಶಾಪದಿಂದ ಬಲಹೀನವಾಗಿದೆಯೇ ? ನಿನ್ನಂತೆ ನಾನೂ ಸಹ ಈಗಲೇ ಭಯದಿಂದ ಯುದ್ಧವನ್ನು ಬಿಟ್ಟು ಶಿಬಿರಕ್ಕೆ ಬಂದಿರುವೆನೆ ? ನಾನು ರಾಜವಂಶವನ್ನು ಹೊಗಳುವ ಸಾರಥಿಗಳ ವಂಶದಲ್ಲಿ ಹುಟ್ಟಿರುವೆನೆ ? ನೀಚ ನಾದ ಶತ್ರುವು ಮಾಡಿರುವ ಕೆಡುಕನ್ನು ಕಣ್ಣೀರಿನಿಂದ ಹಿಂತಿರುಗಿಸಲೆ ? ಆಗಲಿ ! ಅದನ್ನು ಅಸ್ತ್ರದಿಂದಲೇ ಹಿಂತಿರುಗಿಸುವೆನು. ಬಾಣದಿಂದ ಏನನ್ನು ತಾನೇ ಮಾಡಲಿಕ್ಕಾಗುವುದಿಲ್ಲ.?' ಹೀಗೆ ಶತ್ರುಗಳನ್ನು ಅವನು ಗರ್ಜಿಸಿ ನುಡಿದಿರುವುದರಿಂದ ಇದು ಗರ್ಹಣವೆನಿಸಿದೆ.

ಗೌರವಪೂರ್ವಕರಾಗಿ ಪ್ರಾರ್ಥಿಸುವುದನ್ನು ತಿಳಿಸುವ ವಾಕ್ಯದಿಂದ ವಿಷಯ ಗಳನ್ನು ಹುಡುಕುವುದೇ ಪೃಚ್ಛೆ ಎನಿಸುವುದು. ಅಲ್ಲಿಯೇ ಸುಂದರಕನು "ಆರ್ಯರೇ ಸಾರಥಿಯೊಡನೆ ಮಹಾರಾಜನಾದ ದುರ್ಯೋಧನನು ಎಲ್ಲಿಗೆ ಹೋದನು.? ನೀವೇ ನಾದರೂ ಅವನನ್ನೂ ಕಂಡಿರಾ?" ಇಲ್ಲಿ ಆರ್ಯ ಎಂದು ಗೌರವದಿಂದ ಪ್ರಾರ್ಥಿ ಸುವುದನ್ನು ಸೂಚಿಸುವ ಮಾತಿನಿಂದ ದುರ್ಯೋಧನನನ್ನು ಹುಡುಕಿದ್ದರಿಂದ ಇದು ಪೃಚ್ಛೆ ಎನಿಸಿದೆ. ಲೋಕಪ್ರಸಿದ್ಧವೂ ಉತ್ಕೃಷ್ಟವೂ ಆಗಿರುವ ವಸ್ತುಗಳಿಂದ ಪ್ರಕೃತವಿಷಯವನ್ನು ಸಂಪಾದಿಸುವುದೇ ಪ್ರಸಿದ್ಧಿ ಎನಿಸುವುದು. ವಿಕ್ರಮೋರ್ವ ಶೀಯನಾಟಕದಲ್ಲಿ ರಾಜನು "ಸೂರ್ಯಚಂದ್ರರಿಬ್ಬರೂ ಯಾವನಿಗೆ ಪೂಜ್ಯರೆನಿ ಸಿರುವರೋ, ಯಾವನನ್ನು ಊರ್ವಶಿ ಮತ್ತು ಭೂದೇವಿ ಇಬ್ಬರೂ ಪತಿಯನ್ನಾಗಿ ವರಿಸಿರುವರೋ" ಎಂದು ತನ್ನ ಬಗ್ಗೆ ಹೇಳುತ್ತಾನೆ. ಇದರಿಂದ ಅವನಿಗೆ ಉತ್ಕೃಷ್ಟ ವಾದ ಸೂರ್ಯಚಂದ್ರರೊಡನೆ ಪರಿಚಯವುಂಟೆಂದು ತಿಳಿಸಿರುವ ಪ್ರಯುಕ್ತ ಇಲ್ಲಿ ಪ್ರಸಿದ್ಧಿ ಎಂಬ ಲಕ್ಷಣವಿದೆ.

ತಿರಸ್ಕಾರವನ್ನು ಹೊಂದಿದವನು ವಿರೋಧಿಜನರಿಗೆ ಸಮಾನವೆನಿಸಿದ್ದರಿಂದ ವಿಷಾದದಿಂದಲೂ ಆಧೈರ್ಯದಿಂದಲೂ ಬಾಳುವುದು ಸಾರೂಪ್ಯವೆನಿಸುವುದು. ವೇಣೀಸಂಹಾರದಲ್ಲಿ ದುರ್ಯೋಧನನೆಂಬ ಭ್ರಾಂತಿಯಿಂದ ಭೀಮನನ್ನು ಯುಧಿಷ್ಠಿರನು ದುಷ್ಟ, ನೀಚ ದುರ್ಯೋಧನ ! ಎಂದು ಮುಂತಾಗಿ ಕರೆಯುವನು. 'ದುರ್ಯೋಧನ ನಿಂದ ಭೀಮನು ಸತ್ತನು' ಎಂದು ಚಾರ್ವಾಕನು ಹೇಳಿದ ಮಾತಿನಿಂದ ದುಃಖಿತನಾದ ಯುಧಿಷ್ಠಿರನು ದುರ್ಯೋಧನನನ್ನು ಕೊಂದ ಭೀಮನಲ್ಲಿ ದುರ್ಯೋಧನನ ಸಾರೂಪ ವನ್ನು ಕಂಡು 'ದುರಾತ್ಮನ್' ಎಂದು ಮುಂತಾಗಿ ಕೋಪದಿಂದ ಮಾತನಾಡುವನು. ಆದ್ದರಿಂದ ಇದು ಸಾರೂಪ್ಯವೆಂಬ ಲಕ್ಷಣವೆನಿಸಿದೆ.

ತನ್ನನ್ನು ಸಂಕ್ಷೇಪವಾಗಿ ಕಡಿಮೆ ಎಂದು ಬೇರೆಯವರ ಸ್ಥಾನದಲ್ಲಿ ಹೇಳಿಕೊಳ್ಳು ವುದೇ ಸಂಕ್ಷೇಪವೆನಿಸುತ್ತವೆ. ಚಂದ್ರಕಲಾನಾಟಕೆಯಲ್ಲಿ ರಾಜನು ಪ್ರಿಯೆಗೆ 'ಮಲ್ಲಿಗೆ ಹೂವಿನಂತೆ ಮೃದುವಾದ ಅವಯವಗಳನ್ನು ಏಕೆ ವ್ಯರ್ಥವಾಗಿ ಆಯಾಸ ಗೊಳಿಸುವೆ ?' ಎಂದು ಹೇಳಿ ತನ್ನನ್ನು ಉದ್ದೇಶಿಸಿ "ನೀನು ಕೊಯ್ಯಬೇಕಾದ ಪುಷ್ಪ ಗಳನ್ನು ನಾನು ನಿನಗಾಗಿ ಕೀಳುವ ದಾಸನಾಗಿರುವೆನು" ಎಂದು ಹೇಳಿಕೊಳ್ಳುವನು.

ಹೀಗೆ ಹೇಳುವುದರಿಂದ ಇಂತಹ ಸಂಕ್ಷಿಪ್ತವಾಕ್ಯದಿಂದಲೇ ರಾಜನು, ತನ್ನನ್ನು ನಾಯಿಕೆಯ ದಾಸನನ್ನಾಗಿ ತಿಳಿಸಿಕೊಂಡಿರುವ ಪ್ರಯುಕ್ತ ಇದು ಸಂಕ್ಷೇಪವೆಂಬ ಲಕ್ಷಣ ವೆನಿಸಿದೆ. ಒಬ್ಬನು ಮತ್ತೊಬ್ಬನಲ್ಲಿರುವ ಗುಣಗಳನ್ನು ಹೇಳಿಕೊಳ್ಳುವುದೇ ಗುಣ ಕೀರ್ತನವೆನಿಸುತ್ತದೆ. ಅಲ್ಲಿಯೇ 'ನೇತ್ರೇ ಖಂಜನಗಂಜನೇ' ಎಂಬ ಪದ್ಯದಲ್ಲಿ ನಾಯಿಕೆಯ ಸೌಂದರ್ಯಗುಣವನ್ನು ಬಾಯಿಂದ ತಿಳಿಸಿರುವ ಪ್ರಯುಕ್ತ ಇದು ಗುಣ ಕೀರ್ತನವೆನಿಸಿದೆ. ಬೇರೊಬ್ಬನ ಸಾದೃಶ್ಯವನ್ನು ತಿಳಿಸುವ ಉದ್ದೇಶದಿಂದ ಒಂದು ವಾಕ್ಯವನ್ನು ಪ್ರಯೋಗಿಸುವುದೇ ಲೇಶವೆನಿಸುತ್ತದೆ, ವೇಣೀಸಂಹಾರದಲ್ಲಿ ರಾಜನ "ಶಿಖಂಡಿಯನ್ನು ಮುಂದಿಟ್ಟುಕೊಂಡು ಮುಮುಕನಾದ ಭೀಷ್ಮನನ್ನು ಅರ್ಜುನನು ಕೊಲ್ಲಲು ಪಾಂಡವರಿಗೆ ಯಾವ ಪ್ರಶಂಸೆ ಬಂದಿತೋ ಅಂತಹದು ಅನೇಕ ಜನರು ಸೇರಿ ಅಭಿಮನ್ಯುವನ್ನು ಕೊಂದಿದ್ದಕ್ಕಾಗಿ ನಮಗೂ ಸಹ ಬರುವುದು." ಎಂದು ಹೇಳುವನು. ಸಾದೃಶ್ಯವನ್ನು ತೋರಿಸಲಿಕ್ಕಾಗಿ ಹಿಂದಿನ ವಾಕ್ಯವನ್ನು ಪ್ರಯೋಗಿಸಿರುವುದರಿಂದ ಇದು ಲೇಶವೆನಿಸಿದೆ. ಬೇರೆ ರೀತಿಯಿಂದ ತನ್ನ ಅಭಿಪ್ರಾಯವನ್ನು ತಿಳಿಸುವುದೇ ಮನೋರಥ ವೆನಿಸುವುದು. "ರತಿಕ್ರೀಡೆಯಲ್ಲಿ ಮನೋಹರವಾಗಿ ಶಬ್ದಮಾಡುತ್ತ ಕಾಮವೇಗದಿಂದ ಆಲಸ್ಯಗೊಂಡಿರುವ ಈ ಕಲಹಂಸಪಕ್ಷಿಯು ತನ್ನೊಡನೆ ಸೇರಿದ್ದರಿಂದ ಸಂತೋಷಗೊಂಡ ಪ್ರಿಯೆಯಾದ ಹಂಸಿಗೆ ಮುತ್ತಿಡುವುದನ್ನು ತಿಳಿಸುವ ಮೂಲಕ ತನ್ನ ಪ್ರಿಯೆಯನ್ನು ಚುಂಬಿಸುವ ಅಭಿಪ್ರಾಯವನ್ನು ಸೂಚಿಸಿದ್ದರಿಂದ ಇದು ಮನೋರಥವೆನಿಸಿದೆ. ಯಾವು ದಾದರೊಂದು ವಿಶೇಷವನ್ನು ಸೂಚಿಸುವ ಉದ್ದೇಶದಿಂದ ಒಂದು ವಸ್ತುವಿಗೆ ಮತ್ತೊಂದು ವಸ್ತುವಿನ ಅಭೇದವನ್ನು ಆರೋಪಿಸುವುದೇ ಅನುಕ್ತಸಿದ್ಧಿ ಎನಿಸುತ್ತದೆ.

ರಾಮುಲಕ್ಷ್ಮಣರನ್ನು ಕರೆದುಕೊಂಡು ಬಂದ ವಿಶ್ವಾಮಿತ್ರನನ್ನು ನೋಡಿ ಈಶ್ವರನ ಧನುಸ್ಸನ್ನು ಮುರಿಯುವುದಕ್ಕೆ ಮೊದಲು ಸೀತೆಗೆ ಅವಳ ಸಖಿಯು ಹೇಳುವ ಮಾತಿದು. "ಎಲೈ ಕೃಶಾಂಗಿಯೇ, ಸುಂದರನಾದ ಚಂದ್ರನ ಬಳಿಯಲ್ಲಿ ಯಾವ ಇಬ್ಬರು ಇರುವರೋ ಅವರೇ ಮಂಗಳಕರವಾದ ಹೆಸರಿರುವ ಪುಷ್ಯಪುನರ್ವಸುನಕ್ಷತ್ರಗಳೆನಿ ಸಿರುವರು ಅಂದರೆ ರಾಮುಲಕ್ಷ್ಮಣರು ಸೂರ್ಯಚಂದ್ರನಿಗೆ ಸದೃಶರೆನಿಸಿರುವರು ಎಂದು ಅರ್ಥ." ಇಲ್ಲಿ ವಿಶ್ವಾಮಿತ್ರ ಸೂರ್ಯ ಚಂದ್ರ ಇವರ ಹೆಚ್ಚಿನ ಸೌಂದರ್ಯವನ್ನು ತಿಳಿಸ ಲಿಕ್ಕಾಗಿ ಅವರಲ್ಲಿ ಚಂದ್ರ ಪುಷ್ಯ ಪುನರ್ವಸು ಇವರ ಅಭೇದವನ್ನು ಆರೋಪಿಸಿರುವುದ ರಿಂದ ಇದು ಅನುಕ್ತಸಿದ್ಧಿ ಎನಿಸಿದೆ. ಪೂಜ್ಯನನ್ನು ಗೌರವಿಸಲಿಕ್ಕಾಗಿ ಅವರಿಗೆ ಆನಂದ ವುಂಟಾಗುವಂತೆ ಆಡುವ ವಾಕ್ಯವೇ ಪ್ರಿಯೋಕ್ತಿ ಎನಿಸುವುದು. ಶಾಕುಂತಲದಲ್ಲಿ ಕಶ್ಯಪಮಹರ್ಷಿಗೆ ರಾಜನು ಹೇಳುವ ಮಾತಿನಲ್ಲಿ ಇದು ತಿಳಿದುಬರುತ್ತದೆ. "ಮೊದಲು ಪುಷ್ಪವು ಕಾಣಿಸುತ್ತದೆ. ಅಮೇಲೆ ಫಲವು ಜಡುತ್ತದೆ. ಮೊದಲು ಮೇಘವು ಉದಯಿ ಸುತ್ತದೆ. ಆಮೇಲೆ ಮಳೆಯು ನೀರು ತುಂಬಿಕೊಳ್ಳುತ್ತದೆ." ಮೊದಲು ಕಾರಣವೆನಿಸಿದ ಪುಷ್ಪಮೇಘಗಳು ಕಾಣಿಸಿ ಆಮೇಲೆ ಕಾರ್ಯಗಳು ಕಾಣಿಸಿಕೊಳ್ಳುತ್ತವೆ. ಇದು ವಾಸ್ತವ ಪರಿಸ್ಥಿತಿ. ಕಾರ್ಯಕಾರಣಗಳ ನಿಯಮವು ಮೊದಲಿಂದಲೂ ಹೀಗೆಯೇ ನಡೆಯುತ್ತ

ಬಂದಿದೆ. ಆದರೆ ನಿನ್ನ ಪ್ರಸಾದಕ್ಕಾದರೋ ಮೊದಲೇ ಸಂಪತ್ಸಮೃದ್ಧಿ ರೂಪವಾದ ಫಲವು ಕಾಣಿಸಿಕೊಳ್ಳುವುದು. ಮೊದಲೇ ಕಾರ್ಯರೂಪವಾದ ಫಲವು ಸಿದ್ಧಿಸುವುದರಿಂದ ನಿನ್ನ ಪ್ರಸಾದದ ಮಹಿಮೆಯು ಅದ್ಭುತವೆನಿಸಿದೆ. ಲೋಕಪ್ರಸಿದ್ಧವಾದ ಕಾರ್ಯಕಾರಣಭಾವವು ವ್ಯತ್ಯಾಸವನ್ನು ಹೊಂದಿ ನಿನ್ನ ಪ್ರಸಾದವು ದೊರೆಯುವ ಮೊದಲೇ ಜನರಿಗೆ ಸಂಪತ್ಸಮೃದ್ಧಿಯುಂಟಾಗುವುದೆಂದು ದುಷ್ಯಂತನು ತಿಳಿಸುತ್ತಾನೆ. ಇಲ್ಲಿ ಕಶ್ಯಪ ಮಹರ್ಷಿಯನ್ನು ಗೌರವಿಸಲಿಕ್ಕಾಗಿ ಅವನಿಗೆ ಸಂತೋಷವಾಗುವಂತೆ ರಾಜನು ಮಾತನಾಡುವುದರಿಂದ ಇದು ಪ್ರಿಯೋಕ್ತಿ ಎನಿಸಿದೆ.

ಅಥ ನಾಟ್ಯಾಲಂಕಾರಾಃ—ಆಶೀರಾಕ್ರಂದಕಪಟಾಕ್ಷಮಾಗರ್ವೋದ್ಯಮಾಶ್ರಯಾಃ।
ಉತ್ಪ್ರಾಸನಸ್ಪೃಹಾಕ್ಷೋಭಪಶ್ಚಾತ್ತಾಪೋಪಪತ್ತಯಃ ॥
ಆಶಂಸಾಧ್ಯವಸಾಯೌ ಚ ವಿಸರ್ಪೋಲ್ಲೇಖಸಂಜ್ಞಿತೌ ।
ಉತ್ತೇಜನಂ ಪರೀವಾದೋ ನೀತಿರರ್ಥವಿಶೇಷಣಮ್ ॥
ಪ್ರೋತ್ಸಾಹನಂ ಚ ಸಾಹಾಯ್ಯಮಭಿಮಾನೋಽನುವರ್ತನಮ್ ।
ಉತ್ಕೀರ್ತನಂ ತಥಾ ಯಾಚ್ಞಾ ಪರೀಹಾರೊ ನಿವೇದನಮ್ ॥
ಪ್ರವರ್ತನಾಖ್ಯಾನಯುಕ್ತಿಪ್ರಹರ್ಷಾಶ್ಚೋಪದೇಶನಮ್ ।
ಇತಿ ನಾಟ್ಯಾಲಂಕೃತಯೋ ನಾಟ್ಯಭೂಷಣಹೇತವಃ ॥

ಆಶೀರಿಷ್ಟಜನಾಶಂಸಾ ಆಕ್ರಂದಃ ಪ್ರಲಪಿತಂ ಶುಚಾ ।

ಯಥಾ ಶಾಕುಂತಲೇ—ಯಯಾತೇರಿವ ಶರ್ಮಿಷ್ಠಾ ಪತ್ಯುರ್ಬಹುಮತಾ ಭವ ।
ಪುತ್ರಂ ತ್ವಮಿಹ ಸಮ್ರಾಜಂ ಸೇವ ಪೂರುಮವಾಪ್ನುಹಿ ॥

ಯಥಾ ವೇಣ್ಯಾಂ ಪ್ರಲಪಿತಂ-ಕಂಚುಕೀ-ಹಾ ದೇವಿ ! ಕುಂತಿ ! ರಾಜಭವನಪತಾಕೇ! ಇತ್ಯಾದಿ.

ಕಪಟಂ ಮಾಯಯಾ ಯತ್ರ ರೂಪಮನ್ಯದ್ವಿಭಾವ್ಯತೇ ।

ಯಥಾ ಕುಲಪತ್ಯಂಕೇ-ಮೃಗರೂಪಂ ಪರಿತ್ಯಜ್ಯ ವಿಧಾಯ ಕಪಟಂ ವಪುಃ ।
ನೀಯತೇ ರಕ್ಷಸಾ ತೇನ ಲಕ್ಷ್ಮಣೋ ಯುಧಿ ಸಂಶಯಮ್ ॥

ಅಕ್ಷಮಾ ಸಾ ಪರಿಭವಃ ಸ್ವಲ್ಪೋಽಪಿ ನಾಭಿಸಹ್ಯತೇ ।

ಯಥಾ ಶಾಕುತಲೇ ರಾಜಾ- ಭೋಃ ಸತ್ಯವಾದಿನ್ ! ಅಭ್ಯುಪಗತಂ ತಾವದಸ್ಮಾಭಿಃ. ಏವಂವಿಧಾ ಏವ ವಯಮ್. ಕಿಂ ಪುನರಿಮಾಮಭಿಸಂಧಾಯ ? ಲಭ್ಯತೇ ಶಿಕ್ಷೌರನಃ-ನಿಪಾತಃ” ಇತ್ಯಾದಿ.

ಗರ್ವೋಽವಲೇಪಜಂ ವಾಕ್ಯಂ ಕಾರ್ಯಸ್ಯಾರಂಭ ಉದ್ಯಮಃ ।

ಯಥಾ ತತ್ರೈವ-ರಾಜಾ-ಮಮಾಪಿ ನಾಮ ಸತ್ತ್ವೈರಭಿಭೂಯಂತೇ ಗೃಹಾಃ॥
ಯಥಾ ಕುಂಭಾಂಕೇ ರಾವಣಃ-ಪಶ್ಯಾಮಿ ಶೋಕವಿವಶೋಽಂತಕಿಮೇವ ತಾವತ್.

ಗ್ರಹಣಂ ಗುಣವತ್ಕಾರ್ಯಹೇತೋರಾಶ್ರಯ ಉಚ್ಯತೇ ।

ಯಥಾ ವಿಭೀಷಣನಿರ್ಭರ್ತ್ಸನಾಂಕೇ ವಿಭೀಷಣಃ–ರಾಮಮೇವಾಶ್ರಯಿಷ್ಯಾಮಿ ಇತಿ.

ಉತ್ಪ್ರಾಸನಂ ತೂಪಹಾಸೋ ಯೋಽಸಾಧೌ ಸಾಧುಮಾನಿನಿ ।

ಯಥಾ ಶಾಕುಂತಲೇ—ಶಾರ್ಙ್ಗರವಃ-ರಾಜನ್। ಅಥ ಪುನಃ ಪೂರ್ವವೃತ್ತಾಂತಮನ್ಯಸಂಗಾದ್ವಿಸ್ಮೃತೋ ಭವಾನ್. ತತ್ ಕಥಮಧರ್ಮಭೀರೋರ್ದಾರಪರಿತ್ಯಾಗಃ?

ಆಕಾಂಕ್ಷಾ ರಮಣೀಯತ್ವಾದ್ವಸ್ತುನೋ ಯಾ ಸ್ಪೃಹಾ ತು ಸಾ ।

ಯಥಾ ತತ್ರೈವ ರಾಜಾ—ಚಾರುಣಾ ಸ್ಫುರಿತೇನಾಯಮಪರಿಕ್ಷತಕೋಮಲಃ ।
ಪಿಪಾಸತೋ ಮಮಾನುಜ್ಞಾಂ ದದಾತೀವ ಪ್ರಿಯಾಧರಃ॥

ಅಧಿಕ್ಷೇಪವಚಃಕಾರೀ ಕ್ಷೋಭಃ ಪ್ರೋಕ್ತಃ ಸ ಏವ ತು ।

ಯಥಾ-ತ್ವಯಾ ತಪಸ್ವಿಚಾಂಡಾಲ! ಪ್ರಚ್ಛನ್ನವಧವರ್ತಿನಾ ।
ನ ಕೇವಲಂ ಹತೋ ವಾಲೀ ಸ್ವಾತ್ಮಾ ಚ ಪರಲೋಕತಃ॥

ಮೋಹಾದಧೀರತಾರ್ಥಸ್ಯ ಪಶ್ಚಾತ್ತಾಪಃ ಸ ಏವ ತು ॥

ಯಥಾ ಅನುತಾಪಾಂಕೇ ರಾಮಃ—

ಕಿಂ ದೇವ್ಯಾ ನ ವಿಂಚುಂಬಿತೋಽಸ್ಮಿ ಬಹುಶೋ ಮಿಥ್ಯಾಭಿಶಪ್ತಸ್ತದಾ ಇತಿ.

ಉಪಪತ್ತಿರ್ಮತಾ ಹೇತೋರುಪನ್ಯಾಸೋಽರ್ಥಸಿದ್ಧಯೇ।
ಆಶಂಸನಂ ಸ್ಯಾದಾಶಂಸಾ ಪ್ರತಿಜ್ಞಾಧ್ಯವಸಾಯಕಃ ॥

ಯಥಾ ಸ್ಮಶಾನೇ ಮಾಧವಃ—

ತತ್ಪಶ್ಯೇಯಮನಂಗಮಂಗಲಗೃಹಂ ಭೂಯೋಽಪಿ ತಸ್ಯಾಮುಖಮ್ ಇತಿ.

ಯಥ ಮಮ ಪ್ರಭಾವತ್ಯಾಃ ವಜ್ರನಾಭಃ—

ಅಸ್ಯ ವಕ್ಷಃ ಕ್ಷಣೇನೈವ ನಿರ್ಮಥ್ಯ ಗದಾಯಾನಯಾ ।
ಲೀಲಯೋನ್ಮೂಲಯಾಮ್ಯೇವ ಭುವನದ್ವಯಮದ್ಯ ವಃ ॥

ವಿಸರ್ಪೋ ಯತ್ಸಮಾರಬ್ಧಂ ಕರ್ಮಾನಿಷ್ಟಫಲಪ್ರದಮ್ ।

ಯಥಾ ವೇಣ್ಯಾಂ 'ಏತಸ್ಯ ತಾವತ್ ಪಾಕೋಽಯಮ್' ಇತ್ಯಾದಿ.

ನಾಟ್ಯದಲ್ಲಿ ಬರುವ ಅಲಂಕಾರಗಳನ್ನು ಈಗ ತಿಳಿಸುತ್ತಾನೆ. ಆಶೀರ್ವಾದ, ಆಕ್ರಂದ, ಕಪಟ, ಅಕ್ಷಮೆ, ಗರ್ವ,ಉದ್ಯಮ, ಆಶ್ರಯ,ಉತ್ಪ್ರಾಸನ,ಸ್ಪೃಹೆ, ಕ್ಷೋಭ, ಪಶ್ಚಾತ್ತಾಪ, ಉಪಪತ್ತಿ, ಆಶಂಸೆ, ಅಧ್ಯವಸಾಯ, ವಿಸರ್ಪ, ಉಲ್ಲೇಖ, ಉತ್ತೇಜನ, ಪರೀವಾದ, ನೀತಿ, ಅರ್ಥವಿಶೇಷಣ, ಪ್ರೋತ್ಸಾಹನ, ಸಾಹಾಯ್ಯ, ಅಭಿಮಾನ, ಅನುವರ್ತನ, ಉತ್ಕೀರ್ತನ, ಯಾಚ್ಞಾ, ಪರಿಹಾರ, ನಿವೇದನ, ಪ್ರವರ್ತನ, ಆಖ್ಯಾನ, ಯುಕ್ತಿ, ಪ್ರಹರ್ಷ, ಉಪದೇಶನ ಈ ಮೂವತ್ತ ಮೂವತ್ತಮೂರು ಅಂಶಗಳು ನಾಟ್ಯದಲ್ಲಿ ಶೋಭೆಯನ್ನು ಹುಟ್ಟಸುತ್ತ ನಾಟ್ಯಾಲಂಕೃತಿಗಳೆನಿಸಿವೆ. ಈಗ ಒಂದೊಂದನ್ನು ವಿವರಿಸುತ್ತಾನೆ. ಇಷ್ಟವಾದ ಯಾವುದಾದರೊಂದು ಒಳ್ಳೆಯ ಫಲವು ದೊರಕಲೆಂದು ಹೇಳುವುದೇ ಆಶಿಸ್ಸೆಂಬ ಅಲಂಕಾರವೆನಿಸುತ್ತದೆ. ಶಾಕುಂತಲದಲ್ಲಿ ಶಕುಂತಲೆಗೆ ಕಣ್ವಮಹರ್ಷಿಯು ಹೀಗೆ ಆಶೀರ್ವಾದ ಮಾಡುತ್ತಾನೆ. " ಯಯಾತಿಗೆ ಶರ್ಮಿಷ್ಠೆಯಂತೆ

ನೀನು ಪತಿಗೆ ಪ್ರೇಮಪಾತ್ರಳಾಗಿರು. ಹಾಗೆಯೂ ಶರ್ಮಿಷ್ಠೆಯು ಪೂರುವೆಂಬ ಸತ್ಪುತ್ರನನ್ನು ಪಡೆವಂತೆ ನೀನೂ ಸಹ ಬಲಿಷ್ಠನಾದ ಮಗನನ್ನು ಪಡೆ." ಇಲ್ಲಿ ಇಷ್ಟವಾದ ಮಗನು ದೊರಕಲೆಂದು ಹೇಳಿರುವುದರಿಂದ ಇದು ಆಶಿಸ್ಸೆನಿಸಿದೆ. ದುಃಖದಿಂದ ಗೋಳಾಡುವುದೇ ಆಕ್ರಂದವೆಂಬ ಅಲಂಕಾರವೆನಿಸಿದೆ. ವೇಣೀಸಂಹಾರದಲ್ಲಿ ಕಂಚುಕಿಯು "ಕುಂತೀದೇವಿಯೇ, ಅರಮನೆಯಲ್ಲಿ ನಿನ್ನ ಸಚ್ಚಾರಿತ್ರ್ಯದಿಂದ ಧ್ವಜವಂತೆ ಗೌರವಾರ್ಹಳೆನಿಸಿದವಳೇ" ಎಂದು ಮುಂತಾಗಿ ದುಃಖದಿಂದ ಗೋಳಾಡುವನು. ಯಾವುದೋ ನೆಪದಿಂದ ಬೇರೊಂದು ರೂಪವನ್ನು ಭಾವಿಸಿಕೊಳ್ಳುವುದೇ ಕಪಟವೆನಿಸುವುದು. "ಮಾರೀಚನೆಂಬ ರಾಕ್ಷಸನು ಮೃಗದ ವೇಷವನ್ನು ತೊರೆದು ಹಿಂದಿನಂತೆ ರಾಕ್ಷಸ ದೇಹವನ್ನು ಧರಿಸಿ ಲಕ್ಷ್ಮಣನು ಯುದ್ಧದಲ್ಲಿ ಬದುಕುವುದಕ್ಕೇ ಸಂಶಯವನ್ನುಂಟು ಮಾಡುತ್ತಿದ್ದಾನೆ." ಕುಲಪತ್ಯಂಕದಲ್ಲಿ ಮಾಯೆಯಿಂದ ಮಾರೀಚನು ಜಿಂಕೆಯ ವೇಷವನ್ನು ಧರಿಸಿದನೆಂದು ಹೇಳಿರುವುದರಿಂದ ಇದು ಕಪಟವೆನಿಸುತ್ತದೆ. ಸ್ವಲ್ಪವಾದರೂ ತಿರಸ್ಕಾರವನ್ನು ಸಹಿಸದಿರುವುದೇ ಅಕ್ಷಮೆ ಎನಿಸುವುದು. ಶಾಕುಂತಲದಲ್ಲಿ ರಾಜನು "ಎಲೈ ಸತ್ಯವಾದಿಯೇ, ನಾನು ಇಂತಹವನೆಂಬುದನ್ನು ನಾನೇ ಒಪ್ಪಿಕೊಂಡಿರುವೆನು. ಈ ಶಕುಂತಲೆಯನ್ನು ವಂಚಿಸಿದರೆ ನನಗೆ ಆಗುವ ಫಲವೆಂತಹದು?" ಎಂದು ಹೇಳಲು ಆಗ ಶಾರ್ಙ್ಗರವನು "ಇದರಿಂದ ನಿನಗೆ ವಿನಾಶವುಂಟಾಗುವುದು ನಿಶ್ಚಿತ" ಎಂದು ಹೇಳುವನು. ಇಲ್ಲಿ ರಾಜನು ಶಾರ್ಙ್ಗರವನನ್ನು ಸತ್ಯವಾದಿನ್ ಎಂದು ಗರ್ವದಿಂದ ಸಂಬೋಧಿಸಿದ್ದರಿಂದ ತೋರುವ ಅವಮಾನವನ್ನು ಶಾರ್ಙ್ಗರವನು ಸಹಿಸದೇ ಇದ್ದುದರಿಂದ ಇದು ಅಕ್ಷಮೆ ಎನಿಸಿದೆ. ಅಹಂಕಾರದಿಂದ ಆಡುವ ಮಾತೇ ಗರ್ವವೆನಿಸುವುದು. ಅಲ್ಲಿಯೇ ರಾಜನು "ನನ್ನ ಮನೆಯಲ್ಲೂ ಸಹ ಭೂತಗಳು ನೆಲಸಿವೆಯೇ?" ಎಂದು ಹೇಳುವನು. ಇಲ್ಲಿ 'ಮಮಾಪಿ' ಎಂಬುದರಿಂದ ರಾಜನ ಗರ್ವವು ಸೂಚಿತವಾಗುತ್ತದೆ. ಯಾವುದೋ ಒಂದು ಕಾರ್ಯವನ್ನು ಆರಂಭಿಸುವುದೇ ಉದ್ಯಮವೆನಿಸುವುದು. ಕುಂಭಾಂಕದಲ್ಲಿ ರಾವಣನು "ದುಃಖದಿಂದ ಪರಾಧೀನನಾಗಿ ಮರಣವನ್ನು ಹೊಂದುವೆನು" ಎಂದು ಹೇಳುವನು. ಇಲ್ಲಿ ರಾವಣನು ಯುದ್ಧವೆಂಬ ಕಾರ್ಯವನ್ನು ಆರಂಭಿಸಿದನೆಂಬುದನ್ನು ಪಶ್ಯಾಮಿ ಎಂಬಲ್ಲಿ ಸೂಚಿಸಿರುವುದರಿಂದ ಇದು ಉದ್ಯಮವೆನಿಸಿದೆ. ಯಾವುದೋ ಒಂದು ಪ್ರಯೋಜನವನ್ನು ಸಾಧಿಸಬೇಕೆಂಬ ಉದ್ದೇಶದಿಂದ ಉತ್ಕೃಷ್ಟ ವ್ಯಕ್ತಿಯೊಬ್ಬನನ್ನು ಆಶ್ರಯಿಸುವುದೇ ಆಶ್ರಯವೆನಿಸುವುದು. ರಾವಣನು ವಿಭೀಷಣನನ್ನು ತಿರಸ್ಕರಿಸಿದ ಪ್ರಕರಣದಲ್ಲಿ ಅವನು "ರಾಮನನ್ನೇ ಆಶ್ರಯಿಸುತ್ತೇನೆ" ಎಂದು ಹೇಳುವನು. ಇಲ್ಲಿ ವಿಭೀಷಣನು ರಾಜ್ಯಪ್ರಾಪ್ತಿಗಾಗಿ ರಾಮನನ್ನು ಆಶ್ರಯಿಸಿದನೆಂದು ತಿಳಿಸಿರುವುದರಿಂದ ಇದು ಆಶ್ರಯವೆನಿಸಿದೆ. ತನ್ನನ್ನು ಸಾಧುವೆಂದು ಭಾವಿಸಿದ ಒಬ್ಬ ಅಸಾಧುವಿನ ಬಗ್ಗೆ ಮಾಡುವ ಉಪಹಾಸವೇ ಉತ್ಪ್ರಾಸನವೆನಿಸುತ್ತದೆ. ಶಾಕುಂತಲದಲ್ಲಿ ಶಾರ್ಙ್ಗರವನು 'ರಾಜನೇ, ಶಕುಂತಲೆಯನ್ನು ಮದುವೆಯಾದೆನೆಂಬ ಹಿಂದಿನ ವೃತ್ತಾಂತವನ್ನು ನೀನು ಬೇರೆ ಸ್ತ್ರೀಯರ ಸಂಗದಿಂದ ಮರೆತಿರುವೆ. ಹೀಗೆ ಅಧರ್ಮಕ್ಕಾಗಿ

ಹೆದರುವ ನೀನು ಹೇಗೆ ಹೆಂಡತಿಯನ್ನು ತೊರೆದೆ?" ಹೀಗೆ ಹೇಳುವನು. ದುಷ್ಟ ನಾಗಿದ್ದರೂ ತನ್ನನ್ನು ಸದ್ವರ್ತನಶೀಲನೆಂದು ಭಾವಿಸಿರುವ ದುಷ್ಯಂತನಿಗೆ ಶಾರ್ಙ್ಗ ರವನು ಉಪಹಾಸಮಾಡಿರುವುದರಿಂದ ಇದು ಉತ್ಪ್ರಾಸನವೆನಿಸಿದೆ. ಯಾವುದಾದ ರೊಂದು ವಸ್ತುವು ರಮಣೀಯವಾದ್ದೆಂಬ ಕಾರಣದಿಂದ ಅದರಲ್ಲಿ ಆಶೆ ಮಾಡುವುದೇ ಸ್ಪೃಹೆ ಎನಿಸುವುದು. ಅಲ್ಲಿಯೇ ರಾಜನು "ಬೇರೆಯವರು ಕಚ್ಚದಿರುವುದರಿಂದ ಕೋಮಲವೆನಿಸಿದ ಈ ಶಕುಂತಲೆಯ ಕೆಳತುಟಿಯು ಮನೋಹರವಾಗಿ ಅದುರುತ್ತಿರು ವುದರಿಂದ ಪಾನಮಾಡಬೇಕೆಂಬ ಇಚ್ಛೆಯನ್ನು ಅದು ನನಗೆ ತಾನಾಗಿಯೇ ಹುಟ್ಟಿ ಸುತ್ತಲಿದೆ" ಎಂದು ಹೇಳುವನು. ಇಲ್ಲಿ ಶಕುಂತಲೆಯ ಕೆಳತುಟಿಯು ರಮಣೀಯವಾದ್ದ ರಿಂದ ದುಷ್ಯಂತನು ಅದನ್ನು ಇಚ್ಛಿಸುವುದೇ ಸ್ಪೃಹೆ ಎನಿಸಿದೆ. ತಿರಸ್ಕಾರದ ಮಾತನ್ನು ತಿಳಿಸುವ ಮನೋವಿಕಾರವೇ ಕ್ಷೋಭವೆನಿಸುವುದು. "ಎಲೈ ತಪಸ್ವಿವೇಷದ ಚಂಡಾಲ ರಾಮನೇ, ನನ್ನ ಕೊಲೆಗಾಗಿ ನೀನು ಗೊಪ್ಯವಾಗಿ ನಿಂತುಕೊಂಡಿ ದ್ದರಿಂದ ನೀನು ವಾಲಿಯನ್ನಷ್ಟೇ ಕೊಲ್ಲಲಿಲ್ಲ; ಪರಲೋಕಕ್ಕೆ ನಿನ್ನ ಆತ್ಮವು ಸೇರ ದಂತೆಯೂ ಮಾಡಿಕೊಂಡೆ. ಇದರಿಂದ ನಿನಗೆ ದೊಡ್ಡದಾದ ಪಾಪವೇ ಸಂಭವಿಸಿತು." ಇಲ್ಲಿ ವಾಲಿಯು ರಾಮನನ್ನು ಹೀಗೆ ತಿರಸ್ಕರಿಸಿ ಮಾತನಾಡಿದ್ದರಿಂದ ರಾಮನ ಮನಸ್ಸಿನಲ್ಲಿ ಕ್ಷೋಭೆಯನ್ನುಂಟುಮಾಡುವುದೇ ಕ್ಷೋಭವೆನಿಸುವುದು. ಮೋಹದಿಂದ ತಿರಸ್ಕರಿಸಿದ ವಿಷಯದ ಬಗ್ಗೆ ಅನುತಾಪಪಡುವುದೇ ಪಶ್ಚಾತ್ತಾಪವೆನಿಸುತ್ತದೆ. ಅನು ತಾಪಾಂಕದಲ್ಲಿ ರಾಮನು "ಸುಳ್ಳಾದ ಅವಮಾನಕ್ಕೆ ಗುರಿಯಾಗಿರುವ ನನ್ನನ್ನು ಸೀತೆಯು ಅನೇಕವೇಳೆ ಚುಂಬಿಸಲಿಲ್ಲವೆ?" ಇಲ್ಲಿ ಚಿತ್ತಭ್ರಮದಿಂದ ತಾನು ಸೀತೆ ಯನ್ನು ತೊರೆದಿದ್ದು ತನಗೆ ಅಂಟಿಕೊಂಡಿದ್ದಕ್ಕಾಗಿ ರಾಮನು ಅನುತಾಪಪಡುವುದ ರಿಂದ ಇದು ಪಶ್ಚಾತ್ತಾಪವೆನಿಸಿದೆ. ಯಾವುದೋ ಒಂದು ಕಾರ್ಯವು ಸಿದ್ಧಿಸಲಿಕ್ಕಾಗಿ ಕಾರಣವನ್ನು ತಿಳಿಸುವುದೇ ಉಪಪತ್ತಿ ಎನಿಸುವುದು. ವಧ್ಯಶಿಲೆಯಲ್ಲಿ "ನೀನು ಸಾಯುವಾಗ ಯಾವಳು ಸಾಯುವಳೋ, ನೀನು ಬದುಕಿರುವಾಗ ಯಾವಳು ಬದುಕಿ ರುವಳೋ ಅಂತವಳು ಬದುಕಿರಲೆಂದು ನೀನು ಇಚ್ಛಿಸಿದರೆ ಆಗ ನನ್ನ ಪ್ರಾಣವನ್ನು ಉಳಿಸಲು ನಿನ್ನನ್ನು ರಕ್ಷಿಸಿಕೋ "ಹೀಗೆ ನಾಯಿಕೆಯು ಬದುಕಬೇಕೆಂಬುದು ಸಿದ್ಧಿಸಲಿ ಕ್ಕಾಗಿ ನಾಯಕನು ಬದುಕಬೇಕೆಂಬ ಕಾರಣವನ್ನು ತಿಳಿಸಿರುವುದರಿಂದ ಇದು ಉಪಪತ್ತಿ ಎನಿಸಿದೆ. ಇಷ್ಟವಾದ ವಸ್ತುವು ದೊರಕಲೆಂದು ಪ್ರಾರ್ಥಿಸುವುದೇ ಆಶಂಸೆ ಎನಿಸುವುದು. ಇಷ್ಟವಾದ ಜನರು ದೊರಕಲೆಂದು ಆಶಿಸುವುದು ಆಶೀರ್ವಾದವೆನಿಸಿದರೆ ಇಷ್ಟವಾದ ವಸ್ತುವು ದೊರಕಲೆಂದು ಆಶಿಸುವುದು ಆಶಂಸೆ ಎನಿಸುತ್ತದೆ. ಇದೇ ಇವೆರಡಕ್ಕೂ ಇರುವ ಭೇದ. ಸ್ಮಶಾನದಲ್ಲಿ ಮಾಧವನು "ಮನ್ಮಥನ ಮಂಗಳಗೃಹವೆನಿಸಿದ ಮಾಲ ತಿಯ ಮುಖವನ್ನು ಮತ್ತೆ ನೋಡಬೇಕೆಂದು ಇಲ್ಲಿ ಬಯಸಿರುವುದರಿಂದ ಇದು ಆಶಂಸೆ ಎನಿಸಿದೆ. ಮಾಡಬೇಕಾದ ಕರ್ತವ್ಯವನ್ನು ನಿಶ್ಚಯಿಸುವುದೇ ಅಧ್ಯವಸಾಯ ವೆನಿಸುವುದು. "ಈ ಕ್ಷಣದಲ್ಲಿಯೇ ಈ ಗಸೆಯಿಂದ ಇವನ ವಕ್ಷಃಸ್ಥಳವನ್ನು ಸೀಳಿ

ನಿಮ್ಮ ಸಮೀಪದಲ್ಲಿಯೇ ಇದ್ದು ಅನಾಯಾಸದಿಂದ ಮರ್ತ್ಯಲೋಕ ಮತ್ತು ಪಾತಾಳ ಇವೆರಡನ್ನೂ ನಾಶಮಾಡುವೆನು '' ಇಲ್ಲಿ ಎರಡು ಲೋಕಗಳನ್ನು ನಾಶಮಾಡುವೆನೆಂದು ತನ್ನ ಕರ್ತವ್ಯವನ್ನು ನಿಶ್ಚಯಿಸಿರುವುದರಿಂದ ಇದು ಅಧ್ಯವಸಾಯವೆನಿಸಿದೆ. ಅನಿಷ್ಟವಾದ ಫಲವನ್ನು ಕೊಡುವ ಯಾವ ಕರ್ಮವುಂಟೋ ಅದೇ ವಿಸರ್ಪವೆನಿಸುತ್ತದೆ. ವೇಣೀಸಂಹಾರದಲ್ಲಿ ''ಹಿಂದೆ ಒಮ್ಮೆ ದುಶ್ಶಾಸನನು ದ್ರೌಪದಿಯ ಕೇಶವನ್ನು ಹಿಡಿದು ಆಕೆಯನ್ನು ಎಳೆದದ್ದರಿಂದ ಇಷ್ಟೊಂದು ಅನಾಹುತವುಂಟಾಯಿತು. ಈಗ ಎರಡನೆಯ ಸಾರಿ ಧೃಷ್ಟದ್ಯುಮ್ನನು ದ್ರೋಣನ ಕೂದಲನ್ನು ಹಿಡಿದು ಎಳೆದದ್ದರಿಂದ ಲೋಕದ ಪ್ರಜೆಗಳೆಲ್ಲರೂ ನಾಶವಾಗುವರು''ಎಂದು ಅಶ್ವತ್ಥಾಮನು ಕೋಪದಿಂದ ಹೇಳುತ್ತಾನೆ. ಇಲ್ಲಿ ಅನಿಷ್ಟವನ್ನುಂಟುಮಾಡುವ ದ್ರೋಣನ ಕೇಶಗ್ರಹಣವೆಂಬ ಕರ್ಮವನ್ನು ಧೃಷ್ಟದ್ಯುಮ್ನನು ಆರಂಭಿಸಿದ್ದರಿಂದ ಇದು ವಿಸರ್ಪವೆನಿಸಿದೆ.

ಕಾರ್ಯಗ್ರಹಣಮುಲ್ಲೇಖಃ ಉತ್ತೇಜನಮಿತೀಷ್ಯತೇ ।

ಯಥಾ ಶಾಕುಂತಲೇ ರಾಜಾನಂ ಪ್ರತಿ "ತಾಪಸೌ—ಸಮಿದಾಹರಣಾಯ ಪ್ರಸ್ಥಿತಾವಾವಾಮ್. ಇಹ ಚ ಅಸ್ಮದ್ಗುರೋಃ ಕಾಶ್ಯಪಸ್ಯ ಸಾಧಿದೈವತ ಇವ ಶಕುಂತಲಯಾ ಅನುಮಾಲಿನೀತೀರಮಾಶ್ರಮೋ ದೃಶ್ಯತೇ. ನ ಚೇದನ್ಯಕಾರ್ಯಾತಿಪಾತಃ ಪ್ರವಿಶ್ಯ ಗೃಹ್ಯತಾಂ ಅತಿಥಿಸತ್ಕಾರಃ ಇತಿ.

ಸ್ವಕಾರ್ಯಸಿದ್ಧಯೇಽನ್ಯಸ್ಯ ಪ್ರೇರಣಾಯ ಕಠೋರವಾಕ್।

ಯಥಾ—ಇಂದ್ರಜಿಚ್ಚಂಡವೀರ್ಯೋಽಸಿ ನಾಮ್ನೈವ ಬಲವಾನಸಿ।
ಧಿಕ್ ! ಧಿಕ್ ! ಪ್ರಚ್ಛನ್ನರೂಪೇಣ ಯುಧ್ಯಸೇಽಸ್ಮದ್ಭಯಾಕುಲಃ ॥

ಭರ್ತ್ಸನಾ ತು ಪರಿವಾದಃ ನೀತಿಃ ಶಾಸ್ತ್ರೇಣ ವರ್ತನಮ್,

ಯಥಾ ಸುಂದರಾಂಕೇ ದುರ್ಯೋಧನಃ—ಧಿಕ್ ಸೂತ ! ಕಿಂ ಕೃತವಾನಸಿ ? ವತ್ಸಸ್ಯ ಮೇ ದುರ್ಲಲಿತಸ್ಯ ಪಾಪಃ, ಪಾಪಂ ವಿಧಾಸ್ಯತಿ'' ಇತ್ಯಾದಿ

ಯಥಾ ಶಾಕುಂತಲೇ ನೀತಿಃ—

ದುಷ್ಯಂತಃ— "ವಿನೀತವೇಶಪ್ರವೇಶ್ಯಾನಿ ತಪೋವನಾನಿ '' ಇತಿ.

ಉಕ್ತಸ್ಯಾರ್ಥಸ್ಯ ಯತ್ತು ಸ್ಯಾದುತ್ಕೀರ್ತನಮನೇಕಧಾ ।
ಉಪಾಲಂಭಸ್ವರೂಪೇಣ ತತ್ಸ್ಯಾದರ್ಥವಿಶೇಷಣಮ್ ॥

ಯಥಾ ಶಾಕುಂತಲೇ ರಾಜಾನಂ ಪ್ರತಿ ಶಾರ್ಙ್ಗರವಃ—ಆಃ ಕಥಮಿದಂ ನಾಮ ಕಿಮಿದಮುಪನ್ಯಸ್ತಮಿತಿ? ನನು ಭವಾನೇವ ನಿತರಾಂ ಲೋಕವೃತ್ತಾಂತೇ ನಿಷ್ಣಾತಃ.

ಸತೀಮಪಿ ಜ್ಞಾತಿಕುಲೈಕಸಂಶ್ರಯಾಂ ಜನೋಽನ್ಯಥಾ ಭರ್ತೃಮತೀಂ ವಿಶಂಕತೇ ।
ಅತಃ ಸಮೀಪೇ ಪರಿಣೇತುರಿಷ್ಯತೇ ಪ್ರಿಯಾಪ್ರಿಯಾ ವಾ ಪ್ರಮದಾ ಸ್ವಬಂಧುಭಿಃ ॥

ಪ್ರೋತ್ಸಾಹನಂ ಸಾದುತ್ಸಾಹಗಿರ ಕಸ್ಯಾಪಿ ಯಾಚನಮ್.

ಯಥಾ ಬಾಲರಾಮಾಯಣೇ—ಕಾಲರಾತ್ರಿಕರಾಲೇಯಂ ಸ್ತ್ರೀತಿ ಕಿಂ ವಿಚಿಕಿತ್ಸಸಿ ।
ತಜ್ಜಗತ್ತ್ರಿತಯಂ ತ್ರಾತುಂ ತಾತ ತಾಡಯ ತಾಡಕಾಮ್ ॥

ಸಾಹಾಯ್ಯಂ ಸಂಕಟೇ ಯತ್ ಸ್ಯಾದಾನುಕೂಲ್ಯಂ ಪರಸ್ಯ ಚ ।

ಯಥಾ ವೇಣ್ಯಾಂ ಕೃಪಂ ಪ್ರತಿ ಅಶ್ವತ್ಥಾಮಾ—ತ್ವಮಪಿ ತಾವದ್ರಾಜ್ಞಃ ಪಾರ್ಶ್ವವರ್ತೀ ಭವ. ಕೃಪಃ—ವಾಂಛಾಮ್ಯಹಮದ್ಯ ಪ್ರತಿಕರ್ತುಮ್ ಇತ್ಯಾದಿ.

ಅಭಿಮಾನಃ ಸ ಏವ ಸ್ಯಾತ್ ಪ್ರಶ್ರಯಾದನುವರ್ತನಮ್ ।

ಅನುವೃತ್ತಿಃ ; ಭೂತಕಾರ್ಯಾಖ್ಯಾನಮುತ್ಕೀರ್ತನಂ ಸ್ಯಾತ್ ॥

ಯಥಾ ತತ್ರೈವ ದುರ್ಯೋಧನಃ—ಮಾತಃ ! ಕಿಮಪ್ಯಸದೃಶಂ ಕೃಪಣಂ ವಚಸ್ತೇ ಇತ್ಯಾದಿ.

ಯಥಾ ಬಾಲರಾಮಾಯಣೇ—ಅತ್ರಾಸೀತ್ಫಣಿಪಾಶಬಂಧನವಿಧಿಃ ಶಕ್ತ್ಯಾ ಭವದ್ದೇವರೇ ।

ಗಾಢಂ ವಕ್ಷಸಿ ತಾಡಿತೇ ಹನುಮತಾ ದ್ರೋಣಾದ್ರಿರತ್ರಾಹೃತಃ ॥ ಇತ್ಯಾದಿ.

ಯಾಚ್ಞಾ ತು ಕ್ವಾಪಿ ಯಾ ಚ್ಞಾ ಯಾ ಸ್ವಯಂ ದೂತಮುಖೇನ ವಾ ।

ಯಥಾ—"ಅದ್ಯಾಪಿ ದೇಹಿ ವೈದೇಹೀಂ ದಯಾಳುಸ್ತ್ವಯಿ ರಾಘವಃ ।

ಶಿರೋಭಿಃ ಕಂದುಕಕ್ರೀಡಾಂ ಕಿಂ ಕಾರಯಸಿ ವಾನರಾನ್ ? ॥

ಪರಿಹಾರ ಇತಿ ಪ್ರೋಕ್ತಃ ಕೃತಾನುಚಿತಮಾರ್ಜನಮ್ ।

ಯಥಾ ರಾಘವಾಭ್ಯುದಯೇ ಲಕ್ಷ್ಮಣಃ–ಆರ್ಯ ! ಸಮುದ್ರಾಭ್ಯರ್ಥನಯಾ ಗಂತುಮುದ್ಯತೋಽಸಿ, ತತ್ ಕಿಮೇತತ್ ?

ಪ್ರವರ್ತನಂ ತು ಕಾರ್ಯಸ್ಯ ಯತ್ ಸ್ಯಾತ್ ಸಾಧುಪ್ರವರ್ತನಮ್ ।

ಯಥಾ ವೇಣ್ಯಾಂ ರಾಜಾ—ಕಂಚುಕಿನ್ ! ದೇವಸ್ಯ ದೇವಕೀನಂದನಸ್ಯ ಬಹುಮಾನಾತ್ ವತ್ಸಸ್ಯ ಭೀಮಸೇನಸ್ಯ ವಿಜಯಮಂಗಳಾಯ ಪ್ರವರ್ತ್ಯಂತಾಂ ತತ್ರೋಪಚಿತಾಃ ಸಮಾರಂಭಾಃ—

ಆಖ್ಯಾನಂ ಪೂರ್ವವೃತ್ತೋಕ್ತಿಃ ಯುಕ್ತಿರರ್ಥಾವಧಾರಣಮ್ ।

ಯಥಾ ತತ್ರೈವ–"ದೇಶಃ ಸೋಽಯಮರಾತಿಶೋಣಿತಜಲೈರ್ಯಸ್ಮಿನ್ ಹ್ರದಾಃ ಪೂರಿತಾಃ" ಇತ್ಯಾದಿ. ಯಥಾ ತತ್ರೈವ ಯುಕ್ತಿಃ—

ಯದಿ ಸಮರಮಪಾಸ್ಯ ನಾಸ್ತಿ ಮೃತ್ಯೋರ್ಭಯಮಿತಿ ಯುಕ್ತಮಿತೋಽನ್ಯತಃ ಪ್ರಯಾತುಮ್ ।

ಅಥ ಮರಣಮವಶ್ಯಮೇವ ಜಂತೋಃ ಕಿಮಿತಿ ಮುಧಾ ಮಲಿನಂ ಯಶಃ ಕುರುಧ್ವಮ್ ॥

ಪ್ರಹರ್ಷಃ ಪ್ರಮುದಾಧಿಕ್ಯಂ ಶಿಕ್ಷಾ ಸ್ಯಾದುಪದೇಶನಮ್.

ಯಥಾ ಶಾಂಕುತಲೇ "ರಾಜಾ—ತತ್ಕಿಮಿದಾನೀಮಾತ್ಮಾನಂ ಪೂರ್ಣಮನೋರಥಂ ನಾಭಿನಂದಾಮಿ " ಇತಿ.

ಯಥಾ ತತ್ರೈವ ಶಿಕ್ಷಾ–"ಸಖಿ!–ನ ಯುಕ್ತಮಾಶ್ರಮವಾಸಿನೋ ಜನಸ್ಯ ಅಕೃತಸತ್ಕಾರಮತಿಥಿವಿಶೇಷಮುಜ್ಝಿತ್ವಾ ಸ್ವಚ್ಛಂದತೋ ಗಮನಮ್.

ಏಷಾಂ ಚ ಲಕ್ಷಣನಾಟ್ಯಾಲಂಕಾರಾಣಾಂ ಸಾಮಾನ್ಯತ ಏಕರೂಪತ್ವೇಽಪಿ ಭೇದೇನ ವ್ಯಪದೇಶೋ ಗಡ್ಡಲಿಕಾಪ್ರವಾಹೇಣ. ಏಷು ಚ ಕೇಷಾಂಚಿತ್

ಗುಣಾಲಂಕಾರಭಾವಸಂಧ್ಯಂಗವಿಶೇಷಾಂತರ್ಭಾವೇಽಪಿ ನಾಟಕೇ ಪ್ರಯತ್ನತಃ ಕರ್ತವ್ಯತ್ವಾತ್ ತದ್ವಿಶಿಷೋಕ್ತಿಃ. ಏತಾನಿ ಚ—

ಪಂಚಸಂಧಿ ಚತುರ್ವೃತ್ತಿ ಚತುಃಷಷ್ಟ್ಯಂಗಸಂಯುತಮ್ ।
ಷಟ್ತ್ರಿಂಶಲ್ಲಕ್ಷಣೋಪೇತಮಲಂಕಾರೋಪಶೋಭಿತಮ್ ॥
ಮಹಾರಸಂ ಮಹಾಭೋಗಂ ಉದಾತ್ತರಚನಾನ್ವಿತಮ್ ।
ಮಹಾಪುರುಷಸತ್ಕಾರಂ ಸಾಧ್ವಾಚಾರಂ ಜನಪ್ರಿಯಮ್ ॥
ಸುಶ್ಲಿಷ್ಟಸಂಧಿಯೋಗಂ ಚ ಸುಪ್ರಯೋಗಂ ಸುಖಾಶ್ರಯಮ್ ।
ಮೃದುಶಬ್ದಾಭಿಧಾನಂ ಚ ಕವಿಃ ಕುರ್ಯಾತ್ತು ನಾಟಕಮ್ ॥

ಇತಿ ಮುನಿನೋಕ್ತತ್ವಾತ್ ನಾಟಕೇಽವಶ್ಯಂ ಕರ್ತವ್ಯಾನ್ಯೇವ.

ಮಾಡಬೇಕಾಗಿರುವ ಕಾರ್ಯವನ್ನು ಸ್ವೀಕರಿಸುವುದೇ ಉಲ್ಲೇಖವೆಂಬ ನಾಟ್ಯಾಲಂಕಾರವೆನಿಸುವುದು. ಶಾಕುಂತಲದಲ್ಲಿ ರಾಜನಿಗೆ ತಪಸ್ವಿಗಳು "ಸಮಿತ್ತನ್ನು ತರಲಿಕ್ಕಾಗಿ ನಾವು ಹೊರಟಿದ್ದೇವೆ. ಇಲ್ಲಿಯೇ ಮಾಲಿನೀನದಿಯ ತೀರದಲ್ಲಿ ನಮ್ಮ ಗುರುಗಳಾದ ಕಣ್ವಮಹರ್ಷಿಗಳ ಅಧಿಷ್ಠಾನದೇವತೆಯೋ ಏನೋ ಎನಿಸಿದ ಆಶ್ರಮವಿದೆ. ಅಲ್ಲಿಯೇ ಶಕುಂತಲೆಯೂ ಇರುವಳು. ಬೇರೆ ಯಾವುದಾದರೂ ರಾಜಕಾರ್ಯವನ್ನು ಈಗ ನಿರ್ವಹಿಸುವ ಆವಶ್ಯಕತೆ ಇಲ್ಲದಿದ್ದರೆ ಅಲ್ಲಿಗೆ ಹೋಗಿ ಅತಿಥಿಸತ್ಕಾರವನ್ನು ಸ್ವೀಕರಿಸಬಹುದು" ಎಂದು ಹೇಳುವರು. ಇಲ್ಲಿ ದುಷ್ಯಂತನಿಗೆ ಅತಿಥಿಸತ್ಕಾರವನ್ನು ಸ್ವೀಕರಿಸಬೇಕೆಂದು ಹೇಳಿರುವುದರಿಂದ ಇದು ಉಲ್ಲೇಖವೆನಿಸಿದೆ. ತನ್ನ ಕಾರ್ಯವು ಸಿದ್ಧಿಸಲಿಕ್ಕಾಗಿ ಬೇರೆಯವರೂ ಅಲ್ಲಿ ಪ್ರವರ್ತಿಸಲೆಂದು ಕಠಿಣವಾಗಿ ಮಾತನಾಡುವುದೇ ಉತ್ತೇಜನವೆನಿಸುತ್ತದೆ, "ಎಲೈ ಇಂದ್ರಜಿತ್ಕುಮಾರನೇ, ನೀನು ಹೆಚ್ಚು ಪರಾಕ್ರಮಶಾಲಿಯಾಗಿರುವೆ. ಇಂದ್ರಜಿತ್ತೆಂಬ ಹೆಸರಿನಿಂದಲೇ ನೀನು ಬಲಿಷ್ಠನೆಂದು ಪ್ರಸಿದ್ಧನಾಗಿರುವೆ. ಆದರೂ ನಮ್ಮ ಭಯದಿಂದ ವ್ಯಾಕುಲಗೊಂಡು ಗೋಪ್ಯವಾದ ರೀತಿಯಲ್ಲಿ ಯುದ್ಧವನ್ನು ಮಾಡುತ್ತಿರುವೆ. ಅದ್ದರಿಂದಲೇ ನಿನ್ನನ್ನು ಧಿಕ್ಕರಿಸುತ್ತೇನೆ" ಇಲ್ಲಿ ಜಯವೆಂಬ ಕಾರ್ಯವನ್ನು ಗಳಿಸುವುದಕ್ಕೋಸ್ಕರ ಇಂದ್ರಜಿತ್ತನ್ನು ಎಲ್ಲರ ಎದುರಿಗೆ ನೇರವಾಗಿ ಯುದ್ಧಮಾಡಲು ಪ್ರೇರಿಸಲಿಕ್ಕಾಗಿ ಲಕ್ಷ್ಮಣನು ತೀಕ್ಷ್ಣವಾಗಿ ಮಾತಾಡಿರುವುದರಿಂದ ಇದು ಉತ್ತೇಜನವೆನಿಸಿದೆ. ಒಬ್ಬನನ್ನು ತಿರಸ್ಕರಿಸುವುದೇ ಪರೀವಾದವೆನಿಸುವುದು. ಸುಂದರಾಂಕದಲ್ಲಿ ದುರ್ಯೋಧನನು 'ಸಾರಥಿಯೇ, ನಿನಗೆ ಧಿಕ್ಕಾರವಿರಲಿ. ಅಹಾ ! ಏನು ಮಾಡಿರುವೆ ? ಆಯುಧವನ್ನು ಮೇಲಕ್ಕೆ ಎತ್ತಿರುವ ಈ ಪಾಪಿ ಭೀಮನು ಬಹಳ ಕ್ಲೇಶದಿಂದ ತೊಡೆಯಮೇಲೆ ಬೆಳೆದು ನನಗೆ ಪ್ರಿಯನೆನಿಸಿದ ದುಶ್ಶಾಸನನಿಗೆ ಪಾಪದಿಂದ ಉಂಟಾಗುವ ಮರಣವೆಂಬ ಅಮಂಗಳವನ್ನು ನೇರವಾಗಿ ದೊರಕಿಸಿರುವನು. ಈ ವಿಷಯದಲ್ಲಿ ತಡೆಯಲು ಪ್ರಯತ್ನಿಸುವ ನನ್ನನ್ನು ನೀನು ಏಕೆ ತಡೆಯುವೆ ? ಆದ್ದರಿಂದಲೇ ನಿನಗೆ ಕ್ರೋಧವಿಲ್ಲ, ಕರುಣೆಯಿಲ್ಲ, ಹಾಗೆಯೇ ನಾಚಿಕೆಯೂ ಇಲ್ಲ" ಇಲ್ಲಿ ಸಾರಥಿಯನ್ನು ದುರ್ಯೋಧನನು ನಿಂದಿಸಿ ಮಾತನಾಡಿರುವುದರಿಂದ ಇದು ಪರೀವಾದವೆನಿಸಿದೆ.

ಶಾಸ್ತ್ರಕ್ಕೆ ಅನುಗುಣವಾಗಿ ಪ್ರವರ್ತಿಸುವುದೇ ನೀತಿ ಎನಿಸುವುದು. ಶಾಕುಂತಲದಲ್ಲಿ ದುಷ್ಯಂತನು "ತಪೋವನಗಳನ್ನು ನಮ್ರವರ್ತನೆಯಿಂದಲೂ, ಸ್ವಚ್ಛವಾದ ಉಡುಪಿನಿಂದಲೂ ಪ್ರವೇಶಿಸಬೇಕು" ಎಂದು ಹೇಳುವನು. ಇಲ್ಲಿ ಗುರುವಿನ ಬಗ್ಗೆ ವಿನಯದಿಂದ ನಡೆದುಕೊಳ್ಳಬೇಕೆಂಬುದು ಶಾಸ್ತ್ರಕ್ಕೆ ಅನುಗುಣವಾಗಿ ಇರುವುದರಿಂದ ನೀತಿ ಎನಿಸಿದೆ. ಹೇಳಿದ ವಿಷಯವನ್ನು ನಿಂದೆಯ ರೂಪದಿಂದ ಅನೇಕ ಬಗೆಯಾಗಿ ಸ್ಪಷ್ಟವಾಗಿ ತಿಳಿಸುವುದೇ ಅರ್ಥವಿಶೇಷಣವೆನಿಸುತ್ತದೆ. ಪ್ರಕೃತವಿಷಯವನ್ನು ನಿಶ್ಚಯಿಸುವುದೇ ಅರ್ಥವಿಶೇಷಣವೆಂಬ ಪದದ ಅರ್ಥವಾಗುತ್ತದೆ. ಶಾಂಕುತಲದಲ್ಲಿ ರಾಜನಿಗೆ ಶಾರ್ಙ್ಗರವನು "ಇದೇನು ಇಷ್ಟೊಂದು ಉಪನ್ಯಾಸ ಮಾಡಿದಿರಿ'' ಎಂದು ಹೇಳುವೆಯೋ ? ನೀನೇನೋ ಲೋಕವೃತ್ತಾಂತದಲ್ಲಿ ಚೆನ್ನಾಗಿ ಪಳಗಿರುವೆ. ಗಂಡನುಳ್ಳ ಸಾಧ್ವಿಯು ತಂದೆಯ ಮನೆಯಲ್ಲಿಯೇ ಬಹುಕಾಲ ಇದ್ದರೆ ಅವಳನ್ನು ವ್ಯಭಿಚಾರಿ ಎಂದು ಜನರು ಸಂಶಯಪಡುತ್ತಾರೆ. ಆದ್ದರಿಂದ ಪ್ರಿಯಳಾಗಲೀ, ಅಪ್ರಿಯಳಾಗಲೀ ಒಬ್ಬ ಸ್ತ್ರೀಯನ್ನು ತಂದೆಯೇ ಮೊದಲಾದ ಆಕೆಯ ಬಂಧುಗಳು ಗಂಡನ ಸಮಿಪದಲ್ಲಿಯೇ ಹೀಗೆ ತಿಳಿಸುವನು. ಬಿಡಲಿಕ್ಕೆ ಇಚ್ಛಿಸುತ್ತಾರೆ.'' ಇಲ್ಲಿ 'ನೀವೇನು ಇಷ್ಟುಹೊತ್ತು ಹೇಳಿದ್ದು' ಎಂದು ರಾಜನು ಶಾರ್ಙ್ಗರವ ಮೊದಲಾದವರಿಗೆ ನಿಂದೆಯ ರೂಪದಿಂದ ಅನೇಕ ಬಗೆಯಾಗಿ ತಿಳಿಸಿರುವುದರಿಂದ ಇದು ಅರ್ಥವಿಶೇಷಣವೆನಿಸಿದೆ. ಒಬ್ಬನಿಗೆ ಒಂದು ಕಾರ್ಯದಲ್ಲಿ ಉತ್ಸಾಹವನ್ನು ಹುಟ್ಟಿಸುವ ಮಾತಿನಿಂದ ಅವನು ಆ ಕಾರ್ಯದಲ್ಲಿ ಪ್ರವರ್ತಿಸುವಂತೆ ಮಾಡುವುದೇ ಪ್ರೋತ್ಸಾಹನವೆನಿಸುವುದು. "ಕಾಲರಾತ್ರಿಯಂತೆ ಭೀಕರವಾಗಿರುವ ಈ ತಾಟಕಿಯನ್ನು ಸ್ತ್ರೀ ಎಂದು ತಿಳಿದು ಕೊಲ್ಲಲು ಏಕೆ ಸಂಶಯಪಡುತ್ತಿರುವೆ ? ಆದ್ದರಿಂದ, ಎಲೈ ರಾಮನೇ, ಮೂರು ಲೋಕವನ್ನು ಭಯದಿಂದ ರಕ್ಷಿಸಲಿಕ್ಕಾಗಿ ಮೊದಲು ಈ ತಾಟಕಿಯನ್ನು ಕೊಲ್ಲು." ಹೀಗೆ ಇಲ್ಲಿ ತಾಟಕಿಯ ವಧದಲ್ಲಿ ರಾಮನನ್ನು ನೇಮಿಸಿರುವುದರಿಂದ ಇದು ಪ್ರೋತ್ಸಾಹವೆನಿಸಿದೆ. ಆಪತ್ಕಾಲದಲ್ಲಿ ಬೇರೊಬ್ಬನಿಗೆ ಅನುಕೂಲಪಡಿಸುವುದೇ ಸಾಹಾಯ್ಯವೆನಿಸುವುದು. ವೇಣೀಸಂಹಾರದಲ್ಲಿ ಕೃಪನಿಗೆ ಅಶ್ವತ್ಥಾಮನು 'ನೀನೂ ಸಹ ರಾಜನ ಹತ್ತಿರದಲ್ಲಿಯೇ ಇರು' ಎಂದು ಹೇಳಲು ಕೃಪನು "ನಾನು ಈಗ ಶತ್ರುವಿಗೆ ಪ್ರತೀಕಾರವನ್ನು ಮಾಡಲು ಅಪೇಕ್ಷಿಸುತ್ತೇನೆ'' ಎಂದು ಹೇಳುವನು. ಇದರಿಂದ ರಣದ ಸಂಕಟದಲ್ಲಿರುವ ದುರ್ಯೋಧನನಿಗೆ ಕೃಪನು ಸಹಾಯಮಾಡಲು ಪ್ರವರ್ತಿಸುವುದರಿಂದ ಇದು ಸಾಹಾಯ್ಯವೆನಿಸಿದೆ. ಇದರಂತೆಯೇ ಒಬ್ಬನು ಅಹಂಕಾರದಿಂದ ಮಾತನಾಡುವುದೇ ಅಭಿಮಾನವೆನಿಸುತ್ತದೆ. ಅಲ್ಲಿಯೇ ದುರ್ಯೋಧನನು "ತಾಯಿ ! ಕ್ಷತ್ರಿಯವಂಶದಲ್ಲಿ ಹುಟ್ಟಿರುವ ನೀನೆಲ್ಲಿ ? ಈ ದೈನ್ಯವೆಲ್ಲಿ ? ದೀನತನದ ಈ ಸಣ್ಣಮಾತು ನಿನಗೆ ಎಂದಿಗೂ ಹೊಂದಿಕೆಯಾಗುವುದಿಲ್ಲ. ನೂರುಜನ ಮಕ್ಕಳು ಸತ್ತಿದ್ದನ್ನು ನೀನು ಗಮನಿಸದೆ ಅಯೋಗ್ಯನಾದ ನನ್ನೊಬ್ಬನನ್ನು ರಕ್ಷಿಸುತ್ತಿರುವೆ ?" ಹೀಗೆ ಹೇಳುವನು. ಇದರಿಂದ ದುರ್ಯೋಧನನ ಅಭಿಮಾನವು ತೋರಿಬರುವ ಪ್ರಯುಕ್ತ ಇದು ಅಭಿಮಾನ

ವೆನಿಸಿದೆ. ವಿನಯದಿಂದ ಒಬ್ಬನನ್ನು ಅನುಸರಿಸಿಕೊಂಡು ಹೋಗುವುದೇ ಅನುವೃತ್ತಿ ಎನಿಸುವುದು. ಶಾಕುಂತಲದಲ್ಲಿ ರಾಜನು ಶಕುಂತಲೆಗೆ "ಸೌಮ್ಯಳೇ, ನಿನ್ನ ತಪಸ್ಸು ಹೆಚ್ಚುತ್ತಿದೆಯೋ' ಎಂದು ಕೇಳಲು ಆಗ ಅನಸೂಯೆಯು "ಈಗ ಒಬ್ಬ ಮಾನ್ಯನಾದ ಅತಿಥಿಯು ದೊರೆತದ್ದರಿಂದ ತಪಸ್ಸು ಹೆಚ್ಚಿದಂತಾಯಿತು" ಎಂದು ತಿಳಿಸುವಳು. ಇಲ್ಲಿ ಇಬ್ಬರ ಮಾತಿನಿಂದಲೂ ಇಬ್ಬರೂ ಅನುಸರಿಸಿಕೊಂಡು ಹೋಗುವುದನ್ನು ತಿಳಿಸಿರುವ ಪ್ರಯುಕ್ತ ಇದು ಅನುವೃತ್ತಿ ಎನಿಸಿದೆ. ಹಿಂದೆ ಕಳೆದುಹೋದ ಸಮಾಚಾರವನ್ನು ತಿಳಿಸುವುದೇ ಉತ್ಕೀರ್ತನವೆನಿಸುವುದು. ಬಾಲರಾಮಾಯಣದಲ್ಲಿ "ಎಲೈ ಪ್ರೇಯಸಿ, ಇಲ್ಲಿ ನಮ್ಮಿಬ್ಬರಿಗೂ ಇಂದ್ರಜಿತ್ಕುಮಾರನಿಂದ ನಾಗಪಾಶದಿಂದ ಬಂಧನವಾಗಿತ್ತು. ಇದೇ ಸ್ಥಾನದಲ್ಲಿ ಲಕ್ಷ್ಮಣನಿಗೆ ಶಕ್ತಿ ಎಂಬ ಬಾಣವನ್ನು ರಾವಣನು ಪ್ರಯೋಗಿಸಿ ವಕ್ಷಸ್ಥಳದಲ್ಲಿ ಗಟ್ಟಿಯಾಗಿ ಹೊಡೆದಿದ್ದನು. ಆಗಲೇ ಹನುಮಂತನು ಗಂಧಮಾದನಪರ್ವತವನ್ನು ಇಲ್ಲಿಗೆ ತಂದನು." ಹೀಗೆ ಹೇಳಿರುವುದರಿಂದ ನಾಗಪಾಶ ಬಂಧನ ಮೊದಲಾದ ಹಿಂದಿನ ಕಾರ್ಯಗಳನ್ನು ಇಲ್ಲಿ ತಿಳಿಸಿದ್ದರಿಂದ ಇದು ಉತ್ಕೀರ್ತನವೆನಿಸಿದೆ. ತಾನಾಗಿಯೋ ಅಥವಾ ದೂತರ ಮೂಲಕವೋ ಎಲ್ಲಿಯಾದರೂ ಯಾವುದಾದರೂ ವಿಷಯಕ್ಕಾಗಿ ಪ್ರಾರ್ಥಿಸುವುದೇ ಯಾಚನೆ ಎನಿಸುವುದು. "ಎಲೈ ಲಂಕೇಶ್ವರನೇ, ಈಗಲಾದರೂ ಸೀತೆಯನ್ನು ಅವಳ ಪತಿಯ ಮನೆಗೆ ಕಳುಹಿಸು. ನಿನ್ನ ಬಗ್ಗೆ ರಾಮನು ದಯಾಳುವಾಗಿರುವನು. ನೀನು ಹತ್ತು ತಲೆಗಳಿಂದಲೂ ಕೋತಿಗಳಿಗೆ ಚೆಂಡಾಟವನ್ನು ಆಡಿಸುವೆಯೋ?" ಹೀಗೆ ದೂತರ ಮೂಲಕ ರಾವಣನಿಗೆ ಹೇಳಿಕಳುಹಿಸಿದ್ದರಿಂದ ಇದು ಯಾಚನೆ ಎನಿಸಿದೆ. "ಎಲೈ ಲಂಕೇಶ್ವರನೇ, ಸೀತೆಯನ್ನು ನನಗೆ ಬಿಟ್ಟುಕೊಡು" ಎಂದು ಕೇಳುವುದು ರಾಮನುಮಾಡುವ ಯಾಚನೆ ಎನಿಸುತ್ತದೆ. ಮಾಡಿದ ಅನೌಚಿತ್ಯವನ್ನು ತೊಳೆಯುವುದೇ ಪರಿಹಾರವೆನಿಸುವುದು. "ನಿನ್ನ ಏಟಿನಿಂದ ಪ್ರಾಣವು ತೊಲಗುವಂತಾಗಲು ಆ ಸಮಯದಲ್ಲಿ ದುಃಖದಿಂದ ಪೀಡಿತನಾಗಿ ಅಸಂಬದ್ಧವಾಗಿ ಏನೇನೋ ಮಾತನಾಡಿರುವೆ. ಅದನ್ನು ಕ್ಷಮಿಸು. ಇದೂ ಅಲ್ಲದೆ, ನನ್ನ ತಮ್ಮನಾದ ಸುಗ್ರೀವನನ್ನು ನಿನಗೆ ಅರ್ಪಿಸಿದ್ದೇನೆ." ಎಂದು ವಾಲಿಯು ಹಿಂದೆ ತಿರಸ್ಕೃತವಾಗಿದ್ದ ಅಂಶವನ್ನು ಕರ್ತವ್ಯವೆಂದು ತಿಳಿಸುವುದೇ ನಿವೇದನವೆನಿಸುವುದು. ರಾಘವಾಭ್ಯುದಯದಲ್ಲಿ ಲಕ್ಷ್ಮಣನು "ಪೂಜ್ಯನೇ, ಸಮುದ್ರರಾಜನ ಪ್ರಾರ್ಥನೆಯಂತೆ ಹೋಗಲಿಕ್ಕೆ ಉದ್ಯುಕ್ತನಾಗಿರುವೆ. ಇದೇನು ಹೀಗೆ ಮಾಡಿದೆ?" ಎಂದು ಕೇಳುವನು. ಇಲ್ಲಿ ಹಿಂದೆ ಸಮುದ್ರದ ಒಳಗೆ ಹೋಗಬೇಕೆಂಬುದು ತಿರಸ್ಕೃತವಾಗಿದ್ದರೂ ಅದನ್ನು ಈಗ ನಡೆಸಲೇಬೇಕೆಂದು ಜ್ಞಾಪಿಸಿದ್ದರಿಂದ ಇದು ನಿವೇದನವೆನಿಸಿದೆ. ಯಾವುದಾದರೊಂದು ಕಾರ್ಯವನ್ನು ಚೆನ್ನಾಗಿ ಆರಂಭಿಸುವುದೇ ಪ್ರವರ್ತನವೆನಿಸುವುದು. ವೇಣೀಸಂಹಾರದಲ್ಲಿ ರಾಜನು 'ಕಂಚುಕಿಯೇ, ದೇವಕಿಯ ಮಗನಾದ ಶ್ರೀಕೃಷ್ಣನ ಆಜ್ಞೆಯಂತೆ ಪತ್ನಭೀಮನ ವಿಜಯುವಮಂಗಳವನ್ನು ಸೂಚಿಸಲಿಕ್ಕಾಗಿ ಯೋಗ್ಯವಾದ ಪ್ರಯತ್ನಗಳು ಸಿದ್ಧವಾಗಲಿ.' ಹೀಗೆ ಭೀಮನ ವಿಜಯವನ್ನು ಗೌರವಿ

ಸಲು ಅವನು ಬರುವಾಗ ಮನೆಯ ಬಾಗಿಲಲ್ಲಿ ಪೂರ್ಣಕುಂಭಗಳನ್ನಿಡುವುದೇ ಮೊದಲಾದ ಮಂಗಳಕಾರ್ಯಗಳನ್ನು ಯುಕ್ತವಾದ ರೀತಿಯಲ್ಲಿ ಆರಂಭಿಸಬೇಕೆಂದು ಹೇಳಿರುವುದರಿಂದ ಇದು ಪ್ರವರ್ತನವೆನಿಸಿದೆ. ಹಿಂದೆ ಕಳೆದುಹೋದ ಸಂಘಟನೆಯನ್ನು ತಿಳಿಸುವುದೇ ಆಖ್ಯಾನವೆನಿಸುವುದು. ತನಗೆ ಸಂಬಂಧಿಸಿದ ಹಿಂದಿನ ಘಟನೆಯನ್ನು ತಿಳಿಸುವುದೇ ಉತ್ಕೀರ್ತನವೆನಿಸುವುದು. ಬೇರೆಯವರಿಗೆ ಸಂಬಂಧಿಸಿದ ಹಿಂದಿನ ಘಟನೆಯನ್ನು ತಿಳಿಸುವುದು ಆಖ್ಯಾನವೆನಿಸುವುದು. ಇದೇ ಇವೆರಡಕ್ಕೂ ಇರುವ ಭೇದ. "ಸರೋವರಗಳನ್ನು ಶತ್ರುಗಳ ರಕ್ತದ ಪ್ರವಾಹದಿಂದ ತುಂಬಿದ ಸ್ಥಳವೇ ಇದು" ಹೀಗೆ ಹೇಳಿದ್ದರಿಂದ ಪರಶುರಾಮನು ಹಿಂದೆ ಏರ್ಪಡಿಸಿದ್ದ ಸಂಘಟನೆಯನ್ನು ಇಲ್ಲಿ ತಿಳಿಸಿರುವುದರಿಂದ ಇದು ಆಖ್ಯಾನವೆನಿಸಿದೆ. ವಿಷಯವು ಇಂತಹದೆಂದು ನಿಶ್ಚಯಿಸುವುದೇ ಯುಕ್ತಿ ಎನಿಸುವುದು. "ಯುದ್ಧರಂಗವನ್ನು ಬಿಟ್ಟು ಮೃತ್ಯುವಿನ ಭಯವಿಲ್ಲವೆಂದು ಭಾವಿಸಿ ಇಲ್ಲಿಂದ ಬೇರೆಕಡೆಗೆ ಹೋಗುವುದು ಯುಕ್ತವೆನಿಸಿದರೆ ಆಗ ಮನುಷ್ಯನಿಗೆ ಮರಣವು ನಿಶ್ಚಯವೆನಿಸುತ್ತದೆ ಎಂಬ ಕಾರಣದಿಂದ ಇಲ್ಲಿಂದ ಹಿಮ್ಮೆಟ್ಟುವ ಮೂಲಕ ವ್ಯರ್ಥವಾಗಿ ಕೀರ್ತಿಯನ್ನು ಏಕೆ ಮಲಿನಗೊಳಿಸಿಕೊಳ್ಳುವೆ?" ಎಂದು ಅಲ್ಲಿಯೇ ತಿಳಿಸಿರುವ ಪ್ರಯುಕ್ತ ಇಲ್ಲಿ ಸಾಯುವುದೇ ನಿಶ್ಚಯವೆಂದು ಭಾವಿಸಿ ಯುದ್ಧವನ್ನು ಮಾಡಲೇಬೇಕೆಂದು ನಿರ್ಣಯವನ್ನು ತಿಳಿಸಿರುವುದರಿಂದ ಇದು ಯುಕ್ತಿ ಎನಿಸಿದೆ. ಒಬ್ಬನು ಅನುಭವಿಸುವ ಹೆಚ್ಚಿನ ಆನಂದವೇ ಪ್ರಹರ್ಷವೆನಿಸುವುದು. ಶಾಕುಂತಲದಲ್ಲಿ ರಾಜನು "ನನ್ನ ಇಷ್ಟಾರ್ಥಗಳೆಲ್ಲವೂ ದೊರೆತದ್ದರಿಂದ ನನಗೆ ಸಂತೋಷವಾಗುವುದಿಲ್ಲವೇ?" ಎಂದು ಹೇಳುವನು. ಇದರಿಂದ ರಾಜನಿಗೆ ಹೆಂಡತಿ ಮಗ ಇವರು ದೊರೆತು ಹೆಚ್ಚು ಸಂತೋಷವುಂಟಾಯಿತೆಂದು ತಿಳಿಸಿರುವ ಪ್ರಯುಕ್ತ ಇದು ಪ್ರಹರ್ಷವೆನಿಸಿದೆ. "ಆಶ್ರಮದಲ್ಲಿರುವವರು ಅತಿಥಿಗೆ ಸೇವೆಯನ್ನು ಮಾಡದೆ ಅವನನ್ನು ತೊರೆದು ಮನಬಂದಂತೆ ಬೇರೆಕಡೆಗೆ ಹೋಗುವುದು ಯುಕ್ತವಲ್ಲ" ವೆಂದು ಅಲ್ಲಿಯೇ ತಿಳಿಸಿದೆ. ಇಲ್ಲಿ ಅತಿಥಿಯ ಸೇವೆಯನ್ನು ಮಾಡದೆ ಬೇರೆಕಡೆಗೆ ಹೋಗುವುದು ಯುಕ್ತವಲ್ಲವೆಂದು ಶಕುಂತಲೆಗೆ ತಿಳಿಸಿರುವುದರಿಂದ ಇದು ಶಿಕ್ಷೆ ಎನಿಸಿದೆ. ಈವರಿವಿಗೆ ತಿಳಿಸಿರುವ ಲಕ್ಷಣಗಳೆಲ್ಲವೂ ವಾಸ್ತವವಾಗಿ ಒಂದೇ ಬಗೆಯಾಗಿದ್ದರೂ ಅವನ್ನು ಬೇರೆ ಬೇರೆಯಾಗಿ ತಿಳಿಸುವಾಗ ನದಿಯ ಪ್ರವಾಹಕ್ಕನುಗುಣವಾಗಿ ಹಿಂದಿನ ಪರಂಪರೆಯನ್ನು ಅನುಸರಿಸಲಾಗಿದೆ. ಭೂಷಣಗಳಲ್ಲೂ ಅಲಂಕಾರಗಳಲ್ಲೂ ನಾಟ್ಯವನ್ನು ಅಲಂಕರಿಸುವ ಸಾಧಾರಣ ಧರ್ಮವಿರುವ ಪ್ರಯುಕ್ತ ಎರಡನ್ನೂ ಒಂದೇ ಬಗೆ ಎಂದು ಹೇಳುವುದೇ ಯುಕ್ತವಾಗಿರುವಾಗ ಬೇರೆ ಬೇರೆ ಎಂದು ತಿಳಿಸಿದ್ದಕ್ಕೆ ಪ್ರಾಚೀನಪರಂಪರೆಯೇ ಕಾರಣವೆನಿಸಿದೆ. ಇವುಗಳಲ್ಲಿ ಕೆಲವು ಭೂಷಣಗಳನ್ನು ಪ್ರಸಾದವೇ ಮೊದಲಾದ ಗುಣಗಳಲ್ಲೂ ಮತ್ತೆ ಕೆಲವನ್ನು ನಿದರ್ಶನ ಮೊದಲಾದ ಅಲಂಕಾರಗಳಲ್ಲೂ, ಬೇರೆ ಕೆಲವನ್ನು ಮತಿ ಮೊದಲಾದ ಭಾವಗಳಲ್ಲೂ, ಭಾವಸಂಧಿಯಲ್ಲೂ ಸೇರಿಸಲಿಕ್ಕೆ ಬರುತ್ತದೆ. ಹಾಗೆಯೇ ಆಶೀರ್ವಾದವೆಂಬುದನ್ನು ಪ್ರಸಾದವೇ ಮೊದಲಾದ ಗುಣಗಳಲ್ಲಿಯೂ, ಉಪಪತ್ತಿ

ಎಂಬುವನ್ನು ಕಾವ್ಯಲಿಂಗ ಮೊದಲಾದ ಅಲಂಕಾರಗಳಲ್ಲೂ, ಆಕ್ರಂದವೆಂಬ ಅಲಂಕಾರವನ್ನು ಶೋಕವೆಂಬ ಸ್ಥಾಯಿಭಾವದಲ್ಲೂ, ಯುಕ್ತಿಯನ್ನು ಯುಕ್ತಿ ಎಂಬ ಸಂಧ್ಯಂಗದಲ್ಲೂ ಸೇರಿಸಬಹುದು. ರಸಪುಷ್ಟಿಗೆ ಅನುಕೂಲವಾಗುವ ಸನ್ನಿವೇಶವಿದ್ದರೆ ಗುಣ, ಅಲಂಕಾರ,ಭಾವ ಇವನ್ನೂ,ಸಂಧ್ಯಂಗಗಳನ್ನೂ ಯಥೇಚ್ಛವಾಗಿ ಉಪಯೋಗಿಸಬಹುದು. ಆಗ ನಾಟ್ಯಲಕ್ಷಣಗಳನ್ನೂ ನಾಟ್ಯಾಲಂಕಾರಗಳನ್ನೂ ಅವಶ್ಯವಾಗಿ ತಿಳಿಸಬೇಕು.

ಅಲ್ಲಿಗೆ ನಾಟಕವನ್ನು ಕವಿಯು ಹೇಗೆ ರಚಿಸಬೇಕೆಂಬುದನ್ನು ಈಗ ತಿಳಿಸುತ್ತಾನೆ. ಅದರಲ್ಲಿ ಐದು ಸಂಧಿಗಳೂ, ಕೌಶಿಕೀ ಮೊದಲಾದ ವೃತ್ತಿಗಳೂ, ಅರವತ್ತನಾಲ್ಕು ಅಂಗಗಳೂ, ಮೂವತ್ತಾರು ಲಕ್ಷಣಗಳೂ, ಆಶೀರ್ವಾದವೇ ಮೊದಲಾದ ಅಲಂಕಾರಗಳೂ ತುಂಬಿಕೊಂಡಿರಬೇಕು. ಶೃಂಗಾರ ಅಥವಾ ವೀರರಸವು ಪುಷ್ಕಳವಾಗಿರಬೇಕು. ಹಾವಭಾವವಿಲಾಸಗಳನ್ನು ಚೆನ್ನಾಗಿ ತೋರಿಸುತ್ತಿರಬೇಕು. ಅದರಲ್ಲಿ ಉತ್ಕೃಷ್ಟವಾದ ರಚನೆ ಇರಬೇಕು. ಧೀರೋದಾತ್ತನಾಯಕನ ಸಭ್ಯವ್ಯವಹಾರವಿರಬೇಕು, ಬೇರೆ ಪಾತ್ರಗಳ ವರ್ತನೆ ಯುಕ್ತವೆನಿಸಿರಬೇಕು. ಒಟ್ಟನಲ್ಲಿ ಅದು ಜನರಿಗೆ ಪ್ರಿಯವಾಗಿರಬೇಕು. ಸಂಧಿಗಳ ಸಂಘಟನೆಯು ಹೊಂದಿಕೊಂಡಿರಬೇಕು. ಒಳ್ಳೆಯ ಅಭಿನಯವಿರಬೇಕು. ನೋಡುವವರಿಗೆ ಸುಖವನ್ನುಂಟುಮಾಡಬೇಕು. ಕೋಮಲವಾದ ಶಬ್ದಗಳನ್ನು ಪ್ರಯೋಗಿಸಬೇಕು. ಇಂತಹ ನಾಟಕವನ್ನೇ ಕವಿಯು ಪ್ರಯೋಗಿಸಬೇಕು. ಹೀಗೆ ಭರತಮುನಿಯು ತಿಳಿಸಿರುವುದರಿಂದ ಹಿಂದೆ ಹೇಳಿದ ಭೂಷಣಗಳನ್ನೂ ಅಲಂಕಾರಗಳನ್ನೂ ನಾಟಕದಲ್ಲಿ ಅವಶ್ಯವಾಗಿ ಕವಿಯು ಹೊಂದಿಕೊಳ್ಳುವಂತೆ ಸೇರಿಸಬೇಕು. ವೀಥ್ಯಂಗಗಳನ್ನು ಮುಂದೆ ತಿಳಿಸಲಾಗುವುದು.

ಲಾಸ್ಯಾಂಗಾನ್ಯಾಹ– ಗೇಯಪದಂ ಸ್ಥಿತಪಾಠ್ಯಮಾಸೀನಂ ಪುಷ್ಪಗಂಡಿಕಾ ।
ಪ್ರಚ್ಛೇದಕಸ್ತ್ರಿಗೂಢಂ ಚ ಸೈಂಧವಾಖ್ಯಂ ದ್ವಿಗೂಢಕಮ್ ॥
ಉತ್ತಮೋತ್ತಮಕಂ ಚಾನ್ಯದುಕ್ತಪ್ರತ್ಯುಕ್ತಮೇವ ಚ ।
ಲಾಸ್ಯೇ ದಶವಿಧಂ ಹ್ಯೇತದಂಗಮುಕ್ತಂ ಮನೀಷಿಭಿಃ ॥

ತತ್ರ– ತಂತ್ರೀಭಾಂಡಂ ಪುರಸ್ಕೃತ್ಯೋಪವಿಷ್ಟಸ್ಯಾಸನೇ ಪುರಃ ।
ಶುದ್ಧಂ ಗಾನಂ ಗೇಯಪದಮ್ ಸ್ಥಿತಪಾಠ್ಯಂ ತದುಚ್ಯತೇ ॥
ಮದನೋತ್ತಾಪಿತಾ ಯತ್ರ ಪಠತಿ ಪ್ರಾಕೃತಂ ಸ್ಥಿತಾ ।

ಯಥಾ—ಗೌರೀಗೃಹೇ ವೀಣಾಂ ವಾದಯಂತೀ ಮಲಯವತೀ—
ಉತ್ಫುಲ್ಲಕಮಲಕೇಸರಪರಾಗಗೌರದ್ಯುತೇ ಮಮ ಹಿ ಗೌರಿ !
ಅಭಿವಾಂಛಿತಂ ಪ್ರಸಿದ್ಧ್ಯತು ಭಗವತಿ ! ಯುಷ್ಮತ್ಪ್ರಸಾದೇನ ॥

ಅಭಿನವಗುಪ್ತಪಾದಾಸ್ತ್ವಾಹುಃ " ಉಪಲಕ್ಷಣಂ ಚೈತತ್ ಕ್ರೋಧಾತ್ ಭ್ರಾಂತಸ್ಯಾಪಿ ಪ್ರಾಕೃತಪಠನಂ ಸ್ಥಿತಪಾಠ್ಯಮ್ " ಇತ್ಯಾದಿ.

ನಿಖಿಲಾತೋದ್ಯರಹಿತಂ ಶೋಕಚಿಂತಾನ್ವಿತಾಬಲಾ ।
ಅಪ್ರಸಾಧಿತಗಾತ್ರಂ ಯತ್ ಆಸೀನಾಸೀನಮುಚ್ಯತೇ ॥

ಆತೋದ್ಯಮಿಶ್ರಿತಂ ಗೇಯಂ ಛಂದಾಂಸಿ ವಿವಿಧಾನಿ ಚ ।
ಸ್ತ್ರೀಪುಂಸಯೋರ್ವಿಪರ್ಯಾಸಚೇಷ್ಟಿತಂ ಪುಷ್ಪಗಂಡಿಕಾ ॥
ಅನ್ಯಾಸಕ್ತಂ ಪತಿಂ ಮತ್ವಾ ಪ್ರೇಮವಿಚ್ಛೇದಮನ್ಯುನಾ ।
ವೀಣಾಪುರಸ್ಸರಂ ಗಾನಂ ಸ್ತ್ರಿಯಾಃ ಪ್ರಚ್ಛೇದಕೋ ಮತಃ ।
ಸ್ತ್ರೀವೇಷಧಾರಿಣಾಂ ಪುಂಸಾಂ ನಾಟ್ಯಂ ಶ್ಲಕ್ಷ್ಣಂ ತ್ರಿಗೂಢಕಮ್ ॥

ಯಥಾ ಮಾಲತ್ಯಾಮ್– " ಮಕರಂದಃ ಏಷೋಽಸ್ಮಿ ಮಾಲತೀ ಸಂವೃತ್ತಃ".

ಕಶ್ಚನ ಭ್ರಷ್ಟಸಂಕೇತಃ ಸುವ್ಯಕ್ತಕರಣಾನ್ವಿತಃ ।
ಪ್ರಾಕೃತಂ ವಚನಂ ವಕ್ತಿ ಯತ್ರ ತತ್ ಸೈಂಧವಂ ವಿದುಃ ॥

ಕರಣಂ ವೀಣಾದಿಕ್ರಿಯಾ.

ಚತುರಸ್ರಪದಂ ಗೀತಂ ಮುಖಪ್ರತಿಮುಖಾನ್ವಿತಮ್ ।
ದ್ವಿಗೂಢಂ ರಸಭಾವಾಢ್ಯಂ ಉತ್ತಮೋತ್ತಮಕಂ ಪುನಃ ॥
ಕೋಪಪ್ರಸಾದಜಮಧಿಕ್ಷೇಪಯುಕ್ತಂ ರಸೋತ್ತರಮ್ ।
ಹಾವಹೇಲಾನ್ವಿತಂ ಚಿತ್ರಶ್ಲೋಕಬಂಧಮನೋಹರಮ್ ॥
ಉಕ್ತಿಪ್ರತ್ಯುಕ್ತಿಸಂಯುಕ್ತಂ ಸೋಪಾಲಂಭಮಲೀಕವತ್ ।
ವಿಲಾಸಾನ್ವಿತಗೀತಾರ್ಥಮುಕ್ತಪ್ರತ್ಯುಕ್ತಮುಚ್ಯತೇ ॥

ಸ್ಪಷ್ಟಾನ್ಯುದಾಹರಣಾನಿ–

ಏತದೇವ ಯದಾ ಸರ್ವೈಃ ಪತಾಕಾಸ್ಥಾನಕೈರ್ಯುತಮ್ ।
ಅಂಕೈಶ್ಚ ದಶಭಿರ್ಧೀರಾ ಮಹಾನಾಟಕಮೂಚಿರೇ ॥

ಏತದೇವ ನಾಟಕಮ್–ಯಥಾ ಬಾಲರಾಮಾಯಣಮ್.

ಅಥ ಪ್ರಕರಣಮ್–ಭವೇತ್ಪ್ರಕರಣೇ ವೃತ್ತಂ ಲೌಕಿಕಂ ಕವಿಕಲ್ಪಿತಮ್ ।
ಶೃಂಗಾರೋಽಂಗೀ ನಾಯಕಸ್ತು ವಿಪ್ರೋಽಮಾತ್ಯೋಽಥವಾ ವಣಿಕ್ ॥
ಸಾಪಾಯಧರ್ಮಕಾಮಾರ್ಥಪರೋ ಧೀರಪ್ರಶಾಂತಕಃ ।

ವಿಪ್ರನಾಯಕಂ ಯಥಾ ಮೃಚ್ಛಕಟಿಕಮ್. ಅಮಾತ್ಯನಾಯಕಂ ಮಾಲತೀ ಮಾಧವಮ್, ವಣಿಜ್ನಾಯಕಂ ಪುಷ್ಪಭೂಷಿತಮ್.

ನಾಯಿಕಾ ಕುಲಜಾ ಕ್ವಾಪಿ ವೇಶ್ಯಾ ಕ್ವಾಪಿ ದ್ವಯಂ ಕ್ವಚಿತ್ ।
ತೇನ ಭೇದಾಸ್ತ್ರಯಸ್ತಸ್ಯ ತತ್ರ ಭೇದಸ್ತೃತೀಯಕಃ ॥
ಕಿತವದ್ಯೂತಕಾರಾದಿವಿಟಚೇಟಕಸಂಕುಲಃ ।

ಕುಲಸ್ತ್ರೀ ಪುಷ್ಪಭೂಷಿತೇ. ವೇಶ್ಯಾ ತು ತರಂಗವೃತ್ತೇ. ದ್ವೇ ಅಪಿ ಮೃಚ್ಛಕಟಿಕೇ. ಅಸ್ಯ ನಾಟಕಪ್ರಕೃತಿತ್ವಾತ್ ಶೇಷಂ ನಾಟಕವತ್.

ಅಥ ಭಾಣಃ–ಭಾಣಃ ಸ್ಯಾದ್ಧೂರ್ತಚರಿತೋ ನಾನಾವಸ್ಥಾಂತರಾತ್ಮಕಃ ।
ಏಕಾಂಕ ಏಕ ಏವಾತ್ರ ನಿಪುಣಃ ಪಂಡಿತೋ ವಿಟಃ ।
ರಂಗೇ ಪ್ರಕಾಶಯೇತ್ ಸ್ವೇನಾನುಭೂತಮಿತರೇಣ ವಾ ॥

ಸಂಬೋಧನೋಕ್ತಿ ಪ್ರತ್ಯುಕ್ತೌ ಕುರ್ಯಾದಾಕಾಶಭಾಷಿತೈಃ ।
ಸೂಚಯೇದ್ವೀರಶೃಂಗಾರೌ ಶೌರ್ಯಸೌಭಾಗ್ಯವರ್ಣನೈಃ ॥
ತತ್ರೇತಿವೃತ್ತಮುತ್ಪಾದ್ಯಂ ವೃತ್ತಿಃ ಪ್ರಾಯೇಣ ಭಾರತೀ ।
ಮುಖನಿರ್ವಹಣೇ ಸಂಧೀ ಲಾಸ್ಯಾಂಗಾನಿ ದಶಾಪಿ ಚ ॥

ಅತ್ರ ಆಕಾಶಭಾಷಿತರೂಪಂ ಪರವಚನಮಪಿ ಸ್ವಯಮೇವಾನುವದನ್ ಉತ್ತರ ಪ್ರತ್ಯುತ್ತರೇ ಕುರ್ಯಾತ್. ಶೃಂಗಾರವೀರರಸೌ ಚ ಸೌಭಾಗ್ಯಶೌರ್ಯವರ್ಣನಯಾ ಸೂಚಯೇತ್. ಪ್ರಾಯೇಣ ಭಾರತೀ ಕ್ವಾಪಿ ಕೌಶಿಕ್ಯಪಿ ವೃತ್ತಿರ್ಭವತಿ. ಲಾಸ್ಯಾಂಗಾನಿ ಗೇಯಪದಾದೀನಿ. ಉದಾಹರಣಂ ಲೀಲಾಮಧುಕರಃ.

ಅಥ ವ್ಯಾಯೋಗಃ–ಖ್ಯಾತೇತಿವೃತ್ತೋ ವ್ಯಾಯೋಗಃ ಸ್ವಲ್ಪಸ್ತ್ರೀಜನಸಂಯುತಃ ।
ಹೀನೋ ಗರ್ಭವಿಮರ್ಶಾಭ್ಯಾಂ ನರೈರ್ಬಹುಭಿರಾಶ್ರಿತಃ ॥
ಏಕಾಂಕಶ್ಚ ಭವೇದಸ್ತ್ರೀನಿಮಿತ್ತಸಮರೋದಯಃ ।
ಕೌಶಿಕೀವೃತ್ತಿರಹಿತಃ ಪ್ರಖ್ಯಾತಸ್ತತ್ರ ನಾಯಕಃ ॥
ರಾಜರ್ಷಿರಥ ದಿವ್ಯೋ ವಾ ಭವೇದ್ಧೀರೋದ್ಧತಶ್ಚ ಸಃ ।
ಹಾಸ್ಯಶೃಂಗಾರಶಾಂತೇಭ್ಯಃ ಇತರೇಽತ್ರಾಂಗಿನೋ ರಸಾಃ ॥

ಯಥಾ ಸೌಗಂಧಿಕಾಹರಣಮ್. ಅಥ ಸಮವಕಾರಃ—

ವೃತ್ತಂ ಸಮವಕಾರೇ ತು ಖ್ಯಾತಂ ದೇವಾಸುರಾಶ್ರಯಮ್ ।
ಸಂಧಯೋ ನಿರ್ವಿಮರ್ಶಾಸ್ತು ತ್ರಯೋಽಂಕಾಸ್ತತ್ರ ಚಾದಿಮೇ ॥
ಸಂಧೀ ದ್ವಾವಂತ್ಯಯೋಸ್ತದ್ವದೇಕ ಏಕೋ ಭವೇತ್ಪುನಃ ।
ನಾಯಕಾ ದ್ವಾದಶೋದಾತ್ತಾಃ ಪ್ರಖ್ಯಾತಾ ದೇವಮಾನವಾಃ ॥
ಫಲಂ ಪೃಥಕ್ ಪೃಥಕ್ ತೇಷಾಂ ವೀರಮುಖ್ಯೋಽಖಿಲೋ ರಸಃ ॥
ವೃತ್ತಯೋ ಮಂದಕೌಶಿಕ್ಯೋ ನಾತ್ರ ಬಿಂದುಪ್ರವೇಶಕೌ ।
ವೀಥ್ಯಂಗಾನಿ ಚ ತತ್ರ ಸ್ಯುಃ ಯಥಾಲಾಭಂ ತ್ರಯೋದಶ ॥
ಗಾಯತ್ರ್ಯುಷ್ಣಿಙ್ಮುಖಾನ್ಯತ್ರ ಛಂದಾಂಸಿ ವಿವಿಧಾನಿ ಚ ।
ತ್ರಿಶೃಂಗಾರಸ್ತ್ರಿಕಪಟಃ ಕಾರ್ಯಶ್ಚಾಯಂ ತ್ರಿವಿದ್ರವಃ ॥
ವಸ್ತು ದ್ವಾದಶನಾಡೀಭಿಃ ನಿಷ್ಪಾದ್ಯಂ ಪ್ರಥಮಾಂಕಗಮ್ ।
ದ್ವಿತೀಯೇಽಂಕೇ ಚ ತಿಸೃಭಿರ್ದ್ವಾಭ್ಯಾಮಂಕೇ ತೃತೀಯಕೇ ॥

ನಾಡಿಕಾ ಘಟಿಕಾದ್ವಯಮುಚ್ಯತೇ. ಬಿಂದುಪ್ರವೇಶಕೌ ಚ ನಾಟಕೋಕ್ತಾವಪಿ ನೇಹ ವಿಧಾತವ್ಯೌ–ತತ್ರ.

ಧರ್ಮಾರ್ಥಕಾಮೈಸ್ತ್ರಿವಿಧಃ ಶೃಂಗಾರಃ ಕಪಟಃ ಪುನಃ ।
ಸ್ವಾಭಾವಿಕಃ ಕೃತ್ರಿಮಶ್ಚ ದೈವಜೋ ವಿದ್ರವಃ ಪುನಃ ॥
ಅಚೇತನೈಶ್ಚೇತನೈಶ್ಚ, ಚೇತನಾಚೇತನೈಃ ಕೃತಃ ।

ತತ್ರ ಶಾಸ್ತ್ರಾವಿರೋಧೇನ ಕೃತೋ ಧರ್ಮಶೃಂಗಾರಃ, ಅರ್ಥಲಾಭಾರ್ಥಕಂಪಿತಃ ಅರ್ಥಶೃಂಗಾರಃ, ಪ್ರಹಸನಶೃಂಗಾರಃ, ಕಾಮಶೃಂಗಾರಃ. ತತ್ರ ಕಾಮಶೃಂಗಾರಃ ಪ್ರಥಮಾಂಕ ಏವ, ಅನ್ಯಯೋಸ್ತು ನ ನಿಯಮ ಇತ್ಯಾಹುಃ. ಚೇತನಾಚೇತನಾ ಗಜಾದಯಃ ಸಮವಕೀರ್ಯಂತೇ ಬಹವೋರ್ಥಾ ಅಸ್ಮಿನ್ನಿತಿ ಸಮವಕಾರಃ. ಯಥಾ ಸಮುದ್ರಮಥನಮ್.

ವಿದ್ವಾಂಸರು ಲಾಸ್ಯವನ್ನು ಹತ್ತು ಬಗೆ ಎಂದು ತಿಳಿಸಿದ್ದಾರೆ. ಗೇಯಪದ, ಸ್ಥಿತಪಾಠ್ಯ. ಆಸೀನ, ಪುಷ್ಪಗಂಡಿಕಾ, ಪ್ರಚ್ಛೇದಕ, ತ್ರಿಗೂಢ, ಸೈಂಧವ, ದ್ವಿಗೂಢಕ, ಉತ್ತಮೋತ್ತಮಕ, ಉಕ್ತಪ್ರತ್ಯುಕ್ತ ಇವು ಆ ಬಗೆಗಳು. ಅವುಗಳಲ್ಲಿ ಗೇಯಪದವನ್ನು ಈಗ ವಿವರಿಸುತ್ತಾನೆ. ವೀಣೆಯೇ ಮೊದಲಾದ ತಂತಿಯುಳ್ಳ ಯಂತ್ರವನ್ನು ಮುಂದೆ ಇಟ್ಟುಕೊಂಡು ದೇವತೆಯ ಮುಂದೆ ಇಟ್ಟಿರುವ ಆಸನದಲ್ಲಿ ಕುಳಿತುಕೊಂಡು ಯಾವ ದೋಷವೂ ಇಲ್ಲದಂತೆ ಹಾಡುವುದೇ ಗೇಯಪದವೆನಿಸುವುದು. ಗೌರೀಗೃಹದಲ್ಲಿ ವೀಣೆಯನ್ನು ಬಾರಿಸುತ್ತಿದ್ದ ಮಲಯವತಿಯು "ವಿಕಸಿತವಾದ ಕಮಲದ ದಳಗಲ್ಲಿರುವ ಪರಾಗದಂತೆ ಬೆಳ್ಳಗಿರುವ ಎಲೈ ಗೌರೀದೇವತೆಯೇ, ಪೂಜ್ಯಳೇ, ನಿನ್ನ ಪ್ರಸಾದದಿಂದ ನನ್ನ ಇಷ್ಟಾರ್ಥವು ಸಿದ್ಧಿಸಲಿ" ಹೀಗೆ ಶುದ್ಧವಾದ ಗಾನದಿಂದ ಇಲ್ಲಿ ಮಲಯವತಿಯು ಹಾಡಿರುವುದರಿಂದ ಇದು ಗೇಯಪದವೆನಿಸಿದೆ.

ಕಾಮಬಾಧೆಗೆ ಸಿಲುಕಿದವಳು ಪ್ರಾಕೃತಭಾಷೆಯಲ್ಲಿ ಹಾಡುವುದೇ ಸ್ಥಿತಪಾಠ್ಯವೆನಿಸುತ್ತದೆ. ಅಭಿನವಗುಪ್ತರು "ಸೂಚನೆಗಾಗಿ ಇದನ್ನು ಕೊಟ್ಟಿದೆ. ಕ್ರೋಧದಿಂದ ಭ್ರಮಿಸಿದವನೂ ಸಹ ಪ್ರಾಕೃತಭಾಷೆಯಲ್ಲಿ ಹಾಡುವುದಾದರೆ ಅದು ಸ್ಥಿತಪಾಠ್ಯವೆನಿಸುವುದು. ಶೋಕಚಿಂತೆಗಳೊಡಗೂಡಿದವಳು ಒಂದೆಡೆಯಲ್ಲಿ ಕುಳಿತುಕೊಂಡಿದ್ದು ಎಲ್ಲಾ ಬಗೆಯ ಸಾಮಗ್ರಿಗಳೂ ಇಲ್ಲದಿರುವಂತೆಯೂ ದೇಹವನ್ನು ಅಲಂಕಾರಮಾಡಿಕೊಳ್ಳದಂತೆಯೂ ಹಾಡುವುದೇ ಆಸೀನವೆನಿಸುವುದು. ವಾದ್ಯಸಾಮಗ್ರಿಗಳೊಡನೆ ಕೂಡಿದ ಗಾನವನ್ನು ಬೇರೆ ಬೇರೆ ವೃತ್ತದ ಪದ್ಯಗಳಲ್ಲಿ ಹಾಡುವುದೇ ಪುಷ್ಪಗಂಡಿಕೆ ಎನಿಸುವುದು. ಸ್ತ್ರೀಪುರುಷರು ತಮ್ಮ ಸ್ವಭಾವಕ್ಕೆ ವಿರುದ್ಧವಾಗಿ ಹಾಡುವುದು ಸಹ ಪುಷ್ಪಗಂಡಿಕೆ ಎನಿಸುವುದು. ಪತಿಯು ಬೇರೆಕಡೆಯಲ್ಲಿ ಆಸಕ್ತನಾಗಿರುವನೆಂಬುದನ್ನು ತಿಳಿದು ಒಬ್ಬ ಸ್ತ್ರೀಯು ತನ್ನ ಪ್ರೇಮವು ತೊಲಗಿದ್ದರಿಂದ ಹುಟ್ಟಿದ ಕೋಪದಿಂದ ವೀಣೆಯನ್ನು ಬಾರಿಸುತ್ತಲೇ ಹಾಡುವುದೇ ಪ್ರಚ್ಛೇದಕವೆನಿಸುವುದು. ಸ್ತ್ರೀಯರ ವೇಷವನ್ನು ಧರಿಸಿದ ಪುರುಷರು ನಾಟ್ಯವನ್ನು ಅಭಿನಯಿಸುವುದೇ ತ್ರಿಗೂಢಕವೆನಿಸುವುದು. ಮಾಲತೀಮಾಧವದಲ್ಲಿ ಮಕರಂದನು "ಈ ನಾನು ಮಾಲತಿಯಾದೆನು" ಎಂದು ಹೇಳುವನು. ಇದು ತ್ರಿಗೂಢಕದ ಉದಾಹರಣವೆನಿಸಿದೆ.

ಒಬ್ಬ ನಾಯಕನು ಸಂಕೇತಸ್ಥಾನದಲ್ಲಿ ಪ್ರೇಯಸಿಯನ್ನು ಕಾಣದೆ ನಿರಾಶನಾಗಿ ವೀಣೆ ಮೊದಲಾದ ಸಂಗೀತದ ಸಾಮಗ್ರಿಗಳೊಡನೆ ಪ್ರಾಕೃತದಲ್ಲಿ ಹಾಡುವುದೇ ಸೈಂಧವವೆನಿಸುವುದು. ನಾಲ್ಕು ಬಗೆಯಾಗಿ ವಿಂಗಡಿಸಿದ ಪದಗಳಿದ್ದು ಮುಖ ಅಥವಾ

ಪ್ರತಿಮುಖಸಂಧಿಯೊಡಗೂಡಿ ರಸಭಾವಗಳೊಡನೆ ಸೇರಿದ್ದು ದ್ವಿಗೂಢವೆನಿಸುವುದು. ಇಲ್ಲಿ ರಸಭಾವಗಳೆರಡೂ ಗೋಪ್ಯವಾಗಿರುತ್ತವೆ. ಕೋಪದಿಂದಲೂ ಪ್ರಸಾದದಿಂದಲೂ ಅಥವಾ ಇವುಗಳಲ್ಲಿ ಒಂದರಿಂದಲೋ ಹುಟ್ಟಿ ನಿಂದೆಯಿಂದ ಕೂಡಿದ್ದರೂ ರಸಕ್ಕೆ ಶ್ರೇಷ್ಠತೆ ಯಿದ್ದು ಹಾವಭಾವಗಳೆಂಬ ವಿಲಾಸಗಳಿಂದಲೂ, ಚಿತ್ರವೆಂಬ ಬಂಧದಿಂದಲೂ ಮನೋಹರವಾಗಿರುವ ಲಾಸ್ಯಾಂಗವನ್ನು ಉತ್ತಮೋತ್ತಮವೆಂದು ತಿಳಿಯಬೇಕು. ಪ್ರಶ್ನೋತ್ತರಗಳೊಡಗೂಡಿ ತಿರಸ್ಕಾರವಿದ್ದರೂ ಸುಳ್ಳಾಗಿ ತೋರುತ್ತಲೇ ವಿಲಾಸದಿಂದ ಕೂಡಿರುವ ಗೀತಾರ್ಥವೇ ಉಕ್ತಪ್ರತ್ಯುಕ್ತವೆನಿಸುತ್ತದೆ. ಇದಕ್ಕೆ ಉದಾಹರಣಗಳ್ನು ನಾಟಕಗಳಿಂದ ಆರಿಸಿಕೊಳ್ಳುವುದು. ನಾಟಕವು ಎಲ್ಲಾ ಬಗೆಯ ಪತಾಕಾಸ್ಥಾನಕಗಳೊಡಗೂಡಿ ಹತ್ತು ಅಂಕಗಳಿಂದಲೂ ಸೇರಿದ್ದರೆ ಅದನ್ನು ಮಹಾನಾಟಕವೆಂದು ಜ್ಞಾನಿಗಳು ಹೇಳುತ್ತಾರೆ. ಬಾಲರಾಮಾಯಣದಲ್ಲಿ ಈ ಲಕ್ಷಣವನ್ನು ಕಾಣಬಹುದು. ಕುರುಡನಿಗೆ ಪದ್ಮಲೋಚನ ಎಂಬ ಸಂಜ್ಞೆ ಇರುವಂತೆ ಹನುಮಂತನು ರಚಿಸಿದ ಕಾವ್ಯದಲ್ಲಿ ನಾಟಕದ ಲಕ್ಷಣ ಬಗ್ಗೆ ಕೊಂಚ ನ್ಯೂನತೆ ಯಿದ್ದರೂ ಅದಕ್ಕೆ ಮಹಾನಾಟಕವೆಂಬ ಸಂಜ್ಞೆ ಇದೆ ಎಂದು ತಿಳಿಯಬೇಕು.

ಹೀಗೆ ನಾಟಕದ ಲಕ್ಷಣವನ್ನು ವಿವರಿಸಿ ಈಗ ಪ್ರಕರಣದ ಸ್ವರೂಪವನ್ನು ತಿಳಿಸುತ್ತಾನೆ. ಪ್ರಕರಣದಲ್ಲಿ ವೃತ್ತಾಂತವು ಪ್ರಪಂಚದ ನಿತ್ಯಜೀವನದಲ್ಲಿ ನಡೆಯುವಂತಹದಾಗಿರಬೇಕು. ಆದರೆ ಮರ್ತ್ಯಲೋಕದಲ್ಲಿ ಸಂಭವಿಸದೆ ಕೇವಲ ಸ್ವರ್ಗ ಮೊದಲಾದ ಲೋಕಗಳಿಗೆ ಮಾತ್ರವೇ ಅನ್ವಯಿಸುವಂತಹದಾಗಿರಬಾರದು, ಹಾಗೆಯೇ ಪುರಾಣ ಭಾರತ ಮೊದಲಾದವುಗಳಿಂದ ವಸ್ತುವನ್ನು ತೆಗೆದುಕೊಳ್ಳದೆ ಕವಿಯ ಕಲ್ಪನೆಯಿಂದಲೇ ಅದು ಹೊರಬೀಳಬೇಕು. ಶೃಂಗಾರವೇ ಅಲ್ಲಿ ಪ್ರಧಾನರಸವಾಗಿರಬೇಕು. ಬ್ರಾಹ್ಮಣ ಜಾತಿಯವನಾಗಲೀ, ಬ್ರಾಹ್ಮಣೇತರ ಮಂತ್ರಿಯಾಗಲೀ, ಧೀರನೂ ಪ್ರಶಾಂತನೂ ಆದ ವರ್ತಕನಾಗಲೀ ನಾಯಕನಾಗಿರಬೇಕು. ಅವನು ಇಲ್ಲಿಯೂ ಮುಂದೆಯೂ ಕ್ಷಣಿಕವಾದ ಸುಖಸಂಪತ್ತುಗಳನ್ನು ದೊರಕಿಸುವಷ್ಟು ಅಪಾಯಕಾರಿಗಳೆನಿಸಿದ ಧರ್ಮಕಾಮ ಅರ್ಥಗಳನ್ನು ಸಂಪಾದಿಸುವುದರಲ್ಲಿ ಆಸಕ್ತನಾಗಿರಬೇಕು.

ಬ್ರಾಹ್ಮಣ ನಾಯಕನನ್ನು ಮೃಚ್ಛಕಟಿಕದಲ್ಲೂ, ಮಂತ್ರಿಯೇ ನಾಯಕನಾಗಿರುವುದನ್ನು ಮಾಲತೀಮಾಧವದಲ್ಲೂ, ವೈಶ್ಯನಾಯಕನನ್ನು ಪುಷ್ಪಭೂಷಿತದಲ್ಲೂ ಕಾಣಬಹುದು. ಕೆಲವು ಪ್ರಕರಣಗಳಲ್ಲಿ ಸತ್ಕುಲಪ್ರಸೂತೆಯಾದ ಹೆಂಗಸೇ ನಾಯಿಕೆ ಎನಿಸಿರುವಳು. ಕೆಲವು ಕಡೆ ವೇಶ್ಯೆಯೇ ನಾಯಿಕೆಯಾಗಿರುವಳು. ಕೆಲವು ಕಡೆಗಳಲ್ಲಿ ಇಬ್ಬರೂ ನಾಯಿಕೆಯಾಗಿರುವರು. ಆದ್ದರಿಂದ ಪ್ರಕರಣದಲ್ಲಿ ಮೂರು ಬಗೆಗಳುಂಟು. ಅವುಗಳಲ್ಲಿ ಸದ್ವಂಶದ ಸ್ತ್ರೀ ಮತ್ತು ವೇಶ್ಯೆ ಇಬ್ಬರೂ ನಾಯಿಕೆಯರೆನಿಸಿರುವ ಮೂರನೆಯ ಭೇದವು ಕಿತವ, ದ್ಯೂತಕಾರ, ವಿಟ, ಚೇಟ ಇವರುಗಳಿಂದ ಕೂಡಿರುತ್ತದೆ. ಪುಷ್ಪಭೂಷಿತದಲ್ಲಿ ಕುಲಸ್ತ್ರೀಯೇ ನಾಯಿಕೆಯಾಗಿರುವಳು. ಅತಂತಸ್ತ್ರತ್ತ ವೆಂಬ ಪ್ರಕರಣದಲ್ಲಿ

ವೇಶ್ಯೆಯೇ ನಾಯಿಕೆಯಾಗಿರುವಳು. ಇಬ್ಬರೂ ನಾಯಿಕೆಯರಾಗಿರುವುದನ್ನು ಮೃಚ್ಛ ಕಟಿಕವಲ್ಲಿ ಕಾಣಬಹುದು. ಇದರಲ್ಲಿ ನಾಟಕದಂತೆಯೇ ಉಳಿದ ಅಂಶಗಳಿರುತ್ತವೆ.

ಪ್ರಕರಣವನ್ನು ತಿಳಿಸಿಯಾದಮೇಲೆ ಭಾಣವೆಂಬ ಮೂರನೇ ಬಗೆಯ ರೂಪಕ ವನ್ನು ಈಗ ವಿವರಿಸುತ್ತಾನೆ. ಧೂರ್ತನಾಯಕನ ಚರಿತ್ರವಿದ್ದು ಅನೇಕಬಗೆಯ ಅವಸ್ಥೆಗಳಿದ್ದು ಒಂದೇ ಅಂಕವಿರುವ ರೂಪಕವೇ ಭಾಣವೆನಿಸುವುದು. ಇಲ್ಲಿ ಪಂಡಿ ತನೂ ಚತುರನೂ ಆದ ವಿಟನೊಬ್ಬನೇ ತಾನು ಅನುಭವಿಸಿದ್ದನ್ನಾಗಲೀ ಬೇರೆ ಯವರು ಅನುಭವಿಸಿದ್ದನ್ನಾಗಲೀ ತಾನಾಗಿಯೇ ಯಾವುದೋ ಉಪಾಯದಿಂದ ತಿಳಿದು ರಂಗಸ್ಥಳದಲ್ಲಿ ಪ್ರಕಾಶಗೊಳಿಸುವನು. ಹಾಗೆಯೇ ಅವನು ಆಕಾಶಭಾಷಿತ ಗಳಿಂದ ಸಂಬೋಧಿಸುವ ಮೂಲಕ ಪ್ರಶ್ನೋತ್ತರಗಳನ್ನು ತಿಳಿಸುವನು. ಶೌರ್ಯ ವನ್ನೂ, ಸೌಭಾಗ್ಯವನ್ನೂ ತಿಳಿಸುವ ವರ್ಣನಗಳಿಂದಲೇ ವೀರರಸವನ್ನೂ ಶೃಂಗಾರ ರಸವನ್ನೂ ಅವನು ಸೂಚಿಸಬೇಕು. ಸಾಮಾನ್ಯವಾಗಿ ಭಾರತೀವೃತ್ತಿಯನ್ನೇ ಅಲ್ಲಿ ಉಪಯೋಗಿಸಬೇಕು. ಹಾಗೆಯೇಮುಖ ಸಂಧಿ ಮತ್ತು ನಿರ್ವಹಣಸಂಧಿಇವನ್ನೂ ಹತ್ತು ಲಾಸ್ಯಾಂಗಗಳನ್ನೂ ಇಲ್ಲಿ ಪ್ರಯೋಗಿಸಬೇಕು. ಇನ್ನು ಉಳಿದದ್ದೆಲ್ಲವೂ ನಾಟಕದ ಲಕ್ಷಣದಂತೆಯೇ ಇಲ್ಲೂ ಇರುತ್ತವೆ. ಆಕಾಶಭಾಷಿತವೆನಿಸಿದ ಬೇರೆಯವರ ಮಾತನ್ನೂ ಸಹ ತಾನೇ ಅನುವಾದಮಾಡುತ್ತ ವಿಟನು ಅದಕ್ಕೆ ಉತ್ತರವನ್ನೂ ಪ್ರತ್ಯುತ್ತರವನ್ನೂ ಕೊಡುವನು. ಶೃಂಗಾರ ರಸವನ್ನು ಸೌಭಾಗ್ಯದ ವರ್ಣನದಿಂದಲೂ ವೀರರಸವನ್ನು ಶೌರ್ಯದ ವರ್ಣದಿಂದಲೂ ಸೂಚಿಸಬೇಕು. ಸಾಮಾನ್ಯವಾಗಿ ಭಾರತೀ ವೃತ್ತಿಯನ್ನು ಕೆಲವುಕಡೆ ಕೌಶಿಕೀವೃತ್ತಿಯನ್ನೂ ಪ್ರಯೋಗಿಸಬೇಕು. ಗೇಯಪದ ಮೊದ ಲಾದ ಹತ್ತು ಲಾಸ್ಯಾಂಗಳೂ ಸೇರಿರಬೇಕು. ಲೀಲಾಮಧುಕರವೆಂಬುದು ಇದಕ್ಕೆ ಉದಾ ಹರಣವೆನಿಸುತ್ತದೆ.

ಈಗ ವ್ಯಾಯೋಗವೆಂಬ ರೂಪಕದ ಸ್ವರೂಪವನ್ನು ತಿಳಿಸುತ್ತಾನೆ. ಪ್ರಸಿದ್ಧವಾದ ಇತಿವೃತ್ತವಿದ್ದು ಕೆಲವೇ ಸ್ತ್ರೀಪಾತ್ರಗಳಿದ್ದು, ಗರ್ಭವಿಮರ್ಶಸಂಧಿಗಳಿಲ್ಲದೆ ಅನೇಕ ಗಂಡಸರಿಂದ ನಿರ್ವಹಿಸಬೇಕಾದ ರೂಪಕವೇ ವ್ಯಾಯೋಗವೆನಿಸುವುದು. ಇದರಲ್ಲಿ ಒಂದೇ ಅಂಕವಿರುತ್ತದೆ. ಸ್ತ್ರೀಯನ್ನು ಉದ್ದೇಶಿಸಿ ಇಲ್ಲಿ ಯುದ್ಧವನ್ನಾರಂಭಿಸುವ ಪ್ರಸಂಗವಿಲ್ಲ. ಕೌಶಿಕೀವೃತ್ತಿಗೂ ಇಲ್ಲಿ ಅವಕಾಶವಿಲ್ಲ.ಪ್ರಸಿದ್ಧನಾದ ನಾಯಕನೇ ಇಲ್ಲಿಯೂ ಇರುವನು. ಅವನು ರಾಜರ್ಷಿಯೋ ಅಥವಾ ಸ್ವರ್ಗಲೋಕದವನೋ ಆಗಿದ್ದು ಧೀರೋದಾತ್ತ ನೆನಿಸಿರಬೇಕು. ಹಾಸ್ಯ ಶೃಂಗಾರ ಶಾಂತ ಈ ಮೂರನ್ನು ಬಿಟ್ಟು ಉಳಿದ ರಸಗಳು ಇಲ್ಲಿ ಪ್ರಧಾನವೆನಿಸಿರಬೇಕು. ಸೌಗಂಧಿಕಾಹರಣವೆಂಬುದರಲ್ಲಿ ವ್ಯಾಯೋಗದ ಲಕ್ಷಣವನ್ನು ಕಾಣಬಹುದು.

ಈಗ ಸಮವಕಾರವೆಂಬ ರೂಪಕದ ಲಕ್ಷಣವನ್ನು ತಿಳಿಸುತ್ತಾನೆ. ಇಲ್ಲಿ ದೇವಾಸುರರಿಗೆ ಸಂಬಂಧಿಸಿದ ಪ್ರಸಿದ್ಧವೃತ್ತಾಂತವಿರಬೇಕು. ವಿಮರ್ಶಸಂಧಿಯನ್ನು ಉಳಿದು ಇತರ ನಾಲ್ಕು ಸಂಧಿಗಳು ಇರಬೇಕು. ಮೂರು ಅಂಕಗಳಿದ್ದು ಮೊದಲನೆಯ

ದರಲ್ಲಿ ಮುಖ ಪ್ರತಿಮುಖ ಸಂಧಿಗಳಿರಬೇಕು. ಎರಡು ಮೂರನೆಯ ಅಂಕಗಳಲ್ಲಿ ಒಂದೊಂದು ಸಂಧಿ ಇರಬೇಕು. ದ್ವಿತೀಯಾಂಕದಲ್ಲಿ ಗರ್ಭಸಂಧಿಯೂ ತೃತೀಯಾಂಕ ದಲ್ಲಿ ಉಪಸಂಹಾರಸಂಧಿಯೂ ಸೇರಿರಬೇಕು. ಧೀರೋದಾತ್ತರೆನಿಸಿ ಪ್ರಸಿದ್ಧರಾದ ಹನ್ನೆರಡು ಜನ ನಾಯಕರು ಇರಬೇಕು. ಅವರು ದೇವಮಾನವಗುಣಗಳಿಂದ ಶೋಭಿ ಸುತ್ತಿರಬೇಕು. ಅವರಲ್ಲಿ ಒಬ್ಬೊಬ್ಬರಿಗೂ ನಿರ್ದಿಷ್ಟವಾದ ಫಲವು ದೊರಕಬೇಕು. ವೀರರಸವು ಪ್ರಧಾನವಾಗಿ ಶೋಭಿಸುತ್ತಿರಬೇಕು. ಕೌಶಿಕೀವೃತ್ತಿಯನ್ನು ಮಿತ ವಾಗಿಯೂ ಇತರ ವೃತ್ತಿಗಳನ್ನು ಹೇರಳವಾಗಿಯೂ ಉಪಯೋಗಿಸಬಹುದು. ಬಿಂದು ವನ್ನೂ ಪ್ರವೇಶಕವನ್ನೂ ಅಲ್ಲಿ ಪ್ರಯೋಗಿಸಬಾರದು. ಹದಿಮೂರು ವೀಥ್ಯಂಗಗಳನ್ನು ಮಾತ್ರವೇ ಪ್ರಯೋಗಿಸಬೇಕು. ಆರು ಅಕ್ಷರಗಳ ಗಾಯತ್ರಿ ಮತ್ತು ಏಳು ಅಕ್ಷರಗಳ ಉಷ್ಣಿಕ್ ಇವೇ ಮೊದಲಾದ ಅನೇಕ ಬಗೆಯ ಛಂದಸ್ಸುಗಳನ್ನು ಕವಿಯು ಪ್ರಯೋಗಿಸ ಬೇಕು. ಮೊದಲನೆಯ ಅಂಕದಲ್ಲಿರುವ ವಸ್ತು ಇಪ್ಪತ್ತನಾಲ್ಕು ಗಳಿಗೆಗಳಲ್ಲಿ ಮುಗಿಯು ವಂತಿರಬೇಕು. ಎರಡನೆಯ ಅಂಕದ ವಸ್ತು ಆರುಗಳಿಗೆಯಲ್ಲಿ ಮುಗಿಯಬೇಕು. ಮೂರನೆಯ ಅಂಕದ ವಸ್ತು ನಾಲ್ಕುಗಳಿಗೆಗಳಲ್ಲಿ ಮುಗಿಯಬೇಕು. ಶಂಕೆ, ಭಯ, ತ್ರಾಸಗಳಿಂದ ಹುಟ್ಟುವ ಸಂಭ್ರಮವೇ ವಿದ್ರವವೆಂದೂ, ಅದು ಗರ್ಭಸಂಧಿಯ ಅಂಗ ಗಳಲ್ಲೊಂದೆಂದೂ ಹಿಂದೆ ತಿಳಿಸಿದೆ. ಅದು ಇಲ್ಲಿ ಸಹಜವಾಗಿ ಇದ್ದರೂ ಸಹ ಮೂರು ಬಗೆಯ ವಿದ್ರವವಿರಬೇಕೆಂದು ಇಲ್ಲಿ ಮತ್ತೊಮ್ಮೆ ತಿಳಿಸಿದೆ. ನಾಡಿಕೆ ಎಂದರೆ ಎರಡುಗಳಿಗೆ ಗಳೆಂದು ಅರ್ಥ. ಬಿಂದು ಪ್ರವೇಶಕಗಳು ನಾಟಕದಲ್ಲಿದ್ದರೂ ಇಲ್ಲಿ ಬರಬೇಕಾಗಿಲ್ಲ.

ಧರ್ಮ ಅರ್ಥ ಕಾಮುಗಳಿಂದ ಶೃಂಗಾರವು ಧರ್ಮಶೃಂಗಾರ, ಅರ್ಥಶೃಂಗಾರ, ಕಾಮಶೃಂಗಾರ ಎಂದುಮೂರು ಬಗೆಯಾಗುತ್ತದೆ. ಕಪಟವೂ ಸಹ ಸ್ವಾಭಾವಿಕವಾದದ್ದು ಕೃತಿಮವಾದದ್ದು ಅದೃಷ್ಟದಿಂದ ಒದಗಿದ್ದು ಹೀಗೆ ಮೂರು ಬಗೆ ಎನಿಸಿದೆ. ವಿದ್ರವವೂ ಸಹ ಜಡವಾದ ಪಾಷಾಣ ಮೊದಲಾದವುಗಳಿಂದ ಆದದ್ದು, ಚೇತನರೆನಿಸಿದ ಮನುಷ್ಯ ರಿಂದ ಆದದ್ದು, ಚೇತನರೂ ಅಚೇತನರೂ ಆದ ಆನೆ ಮೊದಲಾದ ಪಶುಗಳಿಂದ ಸಂಭವಿಸಿದ್ದು ಹೀಗೆ ಮೂರು ಬಗೆಯಾಗಿದೆ. ಶಾಸ್ತ್ರಕ್ಕೆ ವಿರೋಧವಿಲ್ಲದೆ ಗಳಿಸಿದ್ದು ಧರ್ಮಶೃಂಗಾರವೆನಿಸುವುದು. ಅರ್ಥಲಾಭಕ್ಕಾಗಿ ಕಲ್ಪಿತವಾದದ್ದು ಅರ್ಥಶೃಂಗಾರ. (ವೇಶ್ಯಾಸ್ತ್ರೀಯು ಅನುಭವಿಸುವಂತಹದು.) ಹಾಸ್ಯಕ್ಕಾಗಿ ಅನುಭವಿಸುವ ಶೃಂಗಾರವೇ ಕಾಮಶೃಂಗಾರ. ಹಾಸ್ಯಾರ್ಣವದಲ್ಲಿ ಈ ಬಗೆಯ ಶೃಂಗಾರವನ್ನು ಕಾಣಬಹುದು. ಅವುಗಳಲ್ಲಿ ಕಾಮಶೃಂಗಾರವು ಪ್ರಥಮಾಂಕದಲ್ಲಿ ಮಾತ್ರವೇ ಬರಬೇಕು. ಬೇರೆ ಅಂಕಗಳಲ್ಲಿ ಅಂತಹ ನಿಯಮವಿಲ್ಲವೆಂದು ತಜ್ಞರು ಹೇಳುತ್ತಾರೆ. ಆನೆ ಮೊದಲಾದ ಪಶುಗಳಲ್ಲಿ ಚೈತನ್ಯವಿರುವುದರಿಂದ ಅವು ಚೇತನರೆನಿಸಿವೆ; ಮನುಷ್ಯರಂತೆ ವಿವೇಕಕ್ಕೆ ಬೇಕಾದ ವಿಶೇಷಚೈತನ್ಯವಿಲ್ಲದ್ದರಿಂದ ಅಚೇತನರೆನಿಸಿವೆ. ಆದ್ದರಿಂದ ಗಜ ಮೊದ ಲಾದವು, ಇತರ ಪಶುಗಳು ಚೇತನಾಚೇತನರೆನಿಸಿವೆ. ಅನೇಕ ವಿಷಯಗಳನ್ನು ಒಂದೆಡೆಗೆ ಕವಿಯು ಸೇರಿಸುವುದರಿಂದ ಈ ಬಗೆಯ ರೂಪಕಕ್ಕೆ ಸಮವಕಾರವೆಂಬ ಹೆಸರು

ಅನ್ವಯಿಸುತ್ತದೆ. ಸಮುದ್ರಮಥನವೆಂಬುದು ಇದಕ್ಕೆ ನಿರ್ದಿಷ್ಟವಾದ ಉದಾಹರಣ ವೆನಿಸಿದೆ.

ಅಥ ಡಿಮಃ—ಮಾಯೇಂದ್ರಜಾಲಸಂಗ್ರಾಮಕ್ರೋಧೋದ್ಭ್ರಾಂತಾದಿಚೇಷ್ಟಿತೈಃ ।
ಉಪರಾಗೈಶ್ಚ ಭೂಯಿಷ್ಠೋ ಡಿಮಃ ಖ್ಯಾತೇತಿವೃತ್ತಕಃ ।
ಅಂಗೀ ರೌದ್ರರಸಸ್ತತ್ರ ಸರ್ವೇಽಂಗಾನಿ ರಸಾಃ ಪುನಃ ।
ಚತ್ವಾರೋಽಂಕಾ ಮತಾ ನೇಹ ವಿಷ್ಕಂಭಕಪ್ರವೇಶಕೌ ॥
ನಾಯಕಾ ದೇವಗಂಧರ್ವಯಕ್ಷರಕ್ಷೋಮಹೋರಗಾಃ ।
ಭೂತಪ್ರೇತಪಿಶಾಚಾದ್ಯಾ ಷೋಡಶಾತ್ಯಂತಮುದ್ಧತಾಃ ॥
ವೃತ್ತಯಃ ಕೌಶಿಕೀಹೀನಾಃ ನಿರ್ವಿಮರ್ಶಾಶ್ಚ ಸಂಧಯಃ ।
ದೀಪ್ತಾಃ ಸ್ಯುಃ ಷಡ್ರಸಾಃ ಶಾಂತಹಾಸ್ಯಶೃಂಗಾರವರ್ಜಿತಾಃ ॥

ಅತ್ರೋದಾಹರಣಂ ಚ 'ತ್ರಿಪುರದಾಹಃ' ಇತಿ ಮಹರ್ಷಿಃ—

ಅಥೇಹಾಮೃಗಃ—ಈಹಾಮೃಗೋ ಮಿಶ್ರವೃತ್ತಶ್ಚತುರಂಕಃ ಪ್ರಕೀರ್ತಿತಃ ।
ಮುಖಪ್ರತಿಮುಖೇ ಸಂಧೀ ತತ್ರ ನಿರ್ವಹಣಂ ತಥಾ ॥
ನರದಿವ್ಯಾವನಿಯಮೌ ನಾಯಕಪ್ರತಿನಾಯಕೌ ।
ಖ್ಯಾತೌ ಧೀರೋದ್ಧತಾವನ್ಯೋ ಗೂಢಭಾವಾದಯುಕ್ತಕೃತ್ ॥
ದಿವ್ಯಸ್ತ್ರಿಯಮನಿಚ್ಛಂತೀಮಪಹಾರಾದಿನೇಚ್ಛತಃ ।
ಶೃಂಗಾರಾಭಾಸಮಪ್ಯಸ್ಯ ಕಿಂಚಿತ್ಕಿಂಚಿತ್ಪ್ರದರ್ಶಯೇತ್ ॥
ಪತಾಕಾನಾಯಕಾ ದಿವ್ಯಾ ಮರ್ತ್ಯಾ ವಾಪಿ ದಶೋದ್ಧತಾಃ ।
ಯುದ್ಧಮಾನೀಯ ಸಂರಂಭಂ ಪರಂ ವ್ಯಾಜಾನ್ನಿವರ್ತತೇ ॥
ಮಹಾತ್ಮಾನೋ ವಧಪ್ರಾಪ್ತಾ ಅಪಿ ವಧ್ಯಾಃ ಸ್ಯುರತ್ರ ನೋ ।
ಏಕಾಂಕೋ ದೇವ ಏವಾತ್ರ ನೇತೇತ್ಯಾಹುಃ ಪರೇ ಪುನಃ ॥
ದಿವ್ಯಸ್ತ್ರೀಹೇತುಕಂ ಯುದ್ಧಂ ನಾಯಕಾಃ ಷಡಿತೀತರೇ ।

ಮಿಶ್ರಂ ಖ್ಯಾತಾಖ್ಯಾತಮ್. ಅನ್ಯಃ ಪ್ರತಿನಾಯಕಃ. ಪತಾಕಾನಾಯಕಾಸ್ತು ನಾಯಕಪ್ರತಿನಾಯಕಯೋರ್ಮಿಳಿತಾ ದಶ. ನಾಯಕೋ ಮೃಗವದಲಭ್ಯಾಂ ನಾಯಿಕಾಮತ್ರ ಈಹತೇ ವಾಂಛತೀತಿ ಈಹಾಮೃಗಃ. ಯಥಾ ಕುಸುಮಶೇಖರ ವಿಜಯಾದಿಃ.

ಅಥ ಅಂಕಃ—ಉತ್ಸೃಷ್ಟಿಕಾಂಕ ಏಕಾಂಕೋ ನೇತಾರಃ ಪ್ರಾಕೃತಾ ನರಾಃ ।
ರಸೋಽತ್ರ ಕರುಣಃ ಸ್ಥಾಯೀ ಬಹುಸ್ತ್ರೀಪರಿದೇವಿತಮ್ ।
ಪ್ರಖ್ಯಾತಮಿತಿವೃತ್ತಂ ಚ ಕವಿರ್ಬುದ್ಧ್ಯಾ ಪ್ರಪಂಚಯೇತ್ ।
ಭಾಣವತ್ಸಂಧಿವೃತ್ತ್ಯಂಗಾನ್ಯಸ್ಮಿನ್ ಜಯಪರಾಜಯೌ ।
ಯುದ್ಧಂ ಚ ವಾಚಾ ಕರ್ತವ್ಯಂ ನಿರ್ವೇದವಚನಂ ಬಹು ।

ಇಮಂ ಚ ಕೇಚಿತ್ ನಾಟಕಾದ್ಯಂತಃಪಾತ್ಯೇಕಪರಿಚ್ಛೇದಾರ್ಥಂ ಉತ್ಸೃಷ್ಟಿ

ಕಾಂಕನಾಮಾನಮಾಪುಃ. ಅನ್ಯೇ ತು ಉತ್ಕ್ರಾಂತಾ ವಿಲೋಮರೂಪಾ ಸೃಷ್ಟಿ ರ್ಯತ್ರ ಇತಿ ಉತ್ಸೃಷ್ಟಿಕಾಂಕಃ ಇತಿ ವದಂತಿ. ಯಥಾ ಶರ್ಮಿಷ್ಠಾಯಯಾತಿಃ.

ಅಥ ವೀಥೀ—ವೀಥ್ಯಾಮೇಕೋ ಭವೇದಂಕಃ ಕಶ್ಚಿದೇಕೋಽತ್ರ ಕಲ್ಪ್ಯತೇ ।
ಆಕಾಶಭಾಷಿತೈರುಕ್ತೈಃ ಚಿತ್ರಾಂ ಪ್ರತ್ಯುಕ್ತಿಮಾಶ್ರಿತಃ ।
ಸೂಚಯೇದ್ಭೂರಿಶೃಂಗಾರಂ ಕಿಂಚಿದನ್ಯಾನ್ ರಸಾನಪಿ ।
ಮುಖನಿರ್ವಹಣೇ ಸಂಧೀ ಅರ್ಥಪ್ರಕೃತಯೋಽಖಿಲಾಃ ॥

ಕಶ್ಚಿದಿತ್ಯುತ್ತಮೋ ಮಧ್ಯಮೋಽಧಮೋ ವಾ. ಶೃಂಗಾರಬಹುಳತ್ವಾಚ್ಚ ಅಸ್ಯಾಃ ಕೌಶಿಕೀವೃತ್ತಿಬಹುಳತ್ವಮ್.

ಅಸ್ಯಾಸ್ತ್ರಯೋದಶಾಂಗಾನಿ ನಿರ್ದಿಶಂತಿ ಮನೀಷಿಣಃ ।
ಉದ್ಘಾತ್ಯಕಾವಲಗಿತೇ ಪ್ರಪಂಚಸ್ತ್ರಿಗತಂ ಛಲಮ್ ॥
ವಾಕ್ಕೇಲ್ಯಧಿಬಲೇ ಗಂಡಮವಸ್ಯಂದಿತನಾಲಿಕೇ ।
ಅಸತ್ಪ್ರಲಾಪವ್ಯಾಹಾರಮೃದವಾನಿ ಚ ತಾನಿ ತು ॥

ತತ್ರೋದ್ಘಾತ್ಯಕಾವಲಗಿತೇ ಪ್ರಸ್ತಾವನಾಪ್ರಸ್ತಾವೇ ಸೋದಾಹರಣಂ ಲಕ್ಷಿತೇ.

ಮಿಥೋ ವಾಕ್ಯಮಸದ್ಭೂತಂ ಪ್ರಪಂಚೋ ಹಾಸ್ಯಕೃನ್ಮತಃ ।

ಯಥಾ ವಿಕ್ರಮೋರ್ವಶ್ಯಾಂ ವಲಭೀಸ್ಥವಿದೂಷಕಚೇಟ್ಯೋರನ್ಯೋನ್ಯವಚನಮ್.

ತ್ರಿಗತಂ ಸ್ಯಾದನೇಕಾರ್ಥಯೋಜನಂ ಶ್ರುತಿಸಾಮ್ಯತಃ ।

ಯಥಾ ತತ್ರೈವ ರಾಜಾ—ಸರ್ವಕ್ಷಿತಿಭೃತಾಂ ನಾಥ ದೃಷ್ಟಾ ಸರ್ವಾಂಗಸುಂದರೀ ।
ರಾಮಾ ರಮ್ಯೇ ವನಾಂತೇಽಸ್ಮಿನ್ಮಯಾ ವಿರಹಿತಾ ತ್ವಯಾ॥

ನೇಪಥ್ಯೇ ತತ್ರೈವ ಪ್ರತಿಶಬ್ದಃ. ರಾಜಾ—ಕಥಂ ದೃಷ್ಟೇತ್ಯಾಹ. ತಥಾ ಪ್ರಶ್ನವಾಕ್ಯಮೇವೋತ್ತರತ್ವೇನ ಯೋಜಿತಮ್. 'ನಟಾದಿತ್ರಿತಯವಿಷಯಮೇವೇದಂ' ಇತಿ ಕಶ್ಚಿತ್.

ಪ್ರಿಯಾಭೈರಪ್ರಿಯೈರ್ವಾಕ್ಯೈರ್ವಿಲೋಭ್ಯ ಚ್ಛಲನಾ ಚ್ಛಲಮ್ ।

ಯಥಾ ವೇಣ್ಯಾಂ ಭೀಮಾರ್ಜುನೌ—

ಕರ್ತಾ ದ್ಯೂತಚ್ಛಲಾನಾಂ ಜತುಮಯಶರಣೋದ್ದೀಪನಃ ಸೋಽಭಿಮಾನೀ
ರಾಜಾ ದುಶ್ಶಾಸನಾದೇರ್ಗುರುರನುಜಶತಸ್ಯಾಂಗರಾಜಸ್ಯ ಮಿತ್ರಮ್ ।
ಕೃಷ್ಣಾಕೇಶೋತ್ತರೀಯವ್ಯಪನಯನಪಟುಃ ಪಾಂಡವಾ ಯಸ್ಯ ದಾಸಾಃ
ಕ್ವಾಸ್ತೇ ದುರ್ಯೋಧನೋಽಸೌ ಕಥಯತ ನ ರುಷಾ ದ್ರಷ್ಟುಮಭ್ಯಾಗತೌ ಸ್ವಃ॥

ಅನ್ಯೇ ತ್ವಾಹುಶ್ಛಲಂ ಕಿಂಚಿತ್ಕಾರ್ಯಮುದ್ದಿಶ್ಯ ಕಸ್ಯಚಿತ್ ।
ಉದೀರ್ಯತೇ ಯದ್ವಚನಂ ವಂಚನಾರೋಪಹಾಸ್ಯಕೃತ್ ।
ವಾಕ್ಕೇಲಿರ್ಹಾಸ್ಯಸಂಬಂಧೋ ದ್ವಿತ್ರಿಪ್ರತ್ಯುಕ್ತಿತೋ ಭವೇತ್ ॥

ದ್ವಿತ್ರೀತ್ಯುಪಲಕ್ಷಣಂ ಯಥಾ—

ಭಿಕ್ಷೋ ಮಾಂಸನಿಷೇವಣಂ ಪ್ರಕುರುಷೇ ಕಿಂ ತೇನ ಮದ್ಯಂ ವಿನಾ

ಮದ್ಯಂ ಚಾಪಿ ತವ ಪ್ರಿಯಮ್ ? ಪ್ರಿಯಮಹೋ ವಾರಾಂಗನಾಭಿಃ ಸಹ ।
ವೇಶ್ಯಾಪ್ಯರ್ಥರುಚಿಃ ಕುತಸ್ತವ ಧನಂ ದ್ಯೂತೇನ ಚೌರ್ಯೇಣ ವಾ
ಚೌರ್ಯದ್ಯೂತಪರಿಶ್ರಮೋಽಪಿ ಭವತಃ ? ನಷ್ಟಸ್ಯ ಕಾನ್ಯಾ ಗತಿಃ ॥

ಕೇಚಿತ್ ಪ್ರಕ್ರಾಂತವಾಕ್ಯಸ್ಯ ಸಾಕಾಂಕ್ಷಸ್ಯೈವ ನಿವೃತ್ತಿರ್ವಾಕ್ಕೇಲಿಃ ಇತ್ಯಾಹುಃ. ಅನ್ಯೇ ಚ ಅನೇಕಸ್ಯ ಪ್ರಶ್ನಸ್ಯೈಕಮುತ್ತರಮ್ ಇತಿ ॥

ಈಗ ಡಿಮವೆಂಬ ರೂಪಕದ ಸ್ವರೂಪವನ್ನು ತಿಳಿಸುತ್ತಾನೆ. ಮಾಯೆ, ಇಂದ್ರಜಾಲ, ಯುದ್ಧ, ಸಿಟ್ಟು, ಭ್ರಾಂತಿಗೊಳ್ಳುವುದು, ಹುಚ್ಚು, ರೋಗದಿಂದ ನರಳುವುದು ಇಂತಹ ವ್ಯವಹಾರಗಳಿಂದ ಸಾಮಾನ್ಯವಾಗಿ ತುಂಬಿಕೊಂಡು, ಚಂದ್ರಗ್ರಹಣವನ್ನು ಸೂಚಿಸುತ್ತ ಪ್ರಸಿದ್ಧವಾದ ಇತಿವೃತ್ತದಿಂದ ಶೋಭಿಸುವ ರೂಪಕವೇ ಡಿಮವೆನಿಸಿದೆ. ಇದರಲ್ಲಿ ವೀರರಸವೇ ಪ್ರಧಾನವಾಗಿದ್ದು ಉಳಿದ ರಸಗಳು ಅದಕ್ಕೆ ಪೋಷಕವಾಗಿರುತ್ತವೆ. ನಾಲ್ಕು ಅಂಕಗಳಿದ್ದರೂ ವಿಷ್ಕಂಭಕಪ್ರವೇಶಕಗಳು ಇರುವುದಿಲ್ಲ. ದೇವತೆಗಳು, ಗಂಧರ್ವರು, ಯಕ್ಷರಾಕ್ಷಸರು, ಮಹಾಸರ್ಪ, ಭೂತ, ಪೀಡೆ, ಪಿಶಾಚಿ ಮೊದಲಾದವೇ ಇಲ್ಲಿ ನಾಯಕರೆನಿಸುವರು, ಇವೆಲ್ಲವೂ ಸಹ ಬಹಳ ಉದ್ಧತಸ್ವಭಾವದಿಂದ ವರ್ತಿಸುತ್ತಿರುವುವು. ಕೌಶಿಕಿಯನ್ನು ಬಿಟ್ಟು ಉಳಿದ ವೃತ್ತಿಗಳೂ, ವಿಮರ್ಷವನ್ನು ಬಿಟ್ಟು ಉಳಿದ ಸಂಧಿಗಳೂ ಇರುತ್ತವೆ. ಶಾಂತ, ಹಾಸ್ಯ, ಶೃಂಗಾರ ಈ ಮೂರನ್ನು ಬಿಟ್ಟು ಉಳಿದ ಆರು ರಸಗಳು ಸ್ಪಷ್ಟವಾಗಿ ಪ್ರಕಾಶಗೊಂಡಿರುವುವು. ತ್ರಿಪುರದಾಹವೆಂಬುದು ಈ ಬಗೆಯ ರೂಪಕವೆನಿಸಿದೆ.

ಈಗ ಈಹಾಮೃಗವೆಂಬ ರೂಪಕವನ್ನು ವಿವರಿಸುತ್ತಾನೆ. ಇದರಲ್ಲಿ ಇತಿವೃತ್ತವು ಕೊಂಚ ಪ್ರಸಿದ್ಧವೂ ಕೊಂಚ ಕಲ್ಪಿತವೂ ಆಗಿರುತ್ತದೆ. ನಾಲ್ಕು ಅಂಕಗಳಿರುತ್ತವೆ. ಮುಖಪ್ರತಿಮುಖಸಂಧಿಗಳೂ ನಿರ್ವಹಣಸಂಧಿಯೂ ಇರುತ್ತವೆ. ಮರ್ತ್ಯರೂ ದಿವ್ಯರೂ ಆದ ನಾಯಕಪ್ರತಿನಾಯಕರಿದ್ದು ಅವರು ಪ್ರಸಿದ್ಧರೂ ಧೀರೋದ್ಧತರೂ ಆಗಿರಬೇಕು. ಇವರು ಪೂರ್ತಿಯಾಗಿ ಮರ್ತ್ಯರೇ ಅಥವಾ ದಿವ್ಯರೇ ಆಗಿರಬೇಕೆಂಬ ನಿಯಮವಿಲ್ಲ. ಪ್ರತಿನಾಯಕನು ಗೋಪ್ಯವಾಗಿ ಅಯುಕ್ತವಾದ ಕಾರ್ಯವನ್ನು ಮಾಡುವಂತವನಾಗಿರಬೇಕು. ತನ್ನನ್ನು ಬಯಸದಿರುವ ಸ್ತ್ರೀಯನ್ನು ಅಪಹರಿಸಲು ಇಚ್ಛೆಯುಳ್ಳ ಈ ಪ್ರತಿನಾಯಕನ ಶೃಂಗಾರಾಭಾಸವನ್ನು ಕವಿಯು ಕೊಂಚ ಕೊಂಚವಾಗಿ ತೋರಿಸಬೇಕು. ಪತಾಕಾನಾಯಕರು ಹತ್ತು ಜನರಿದ್ದು ಒವ್ವರೂ ಮರ್ತ್ಯರೂ ಆಗಿರಬೇಕು. ಪ್ರತಿನಾಯಕನಿಗೆ ಕೋಪವನ್ನು ಹುಟ್ಟಿಸಿರುವ ನಾಯಕನು ಬೇರೆ ಯಾವುದೋ ಕಾರ್ಯದ ನೆಪದಿಂದ ಯುದ್ಧದಿಂದ ತೊಲಗುವನು. ಮಹಾತ್ಮರು ಕೊಲೆಗೆ ಸಿಕ್ಕಿದರೂ ಕೊಲೆಯಾಗುವುದಿಲ್ಲ. ಇಲ್ಲಿ ಒಂದೇ ಅಂಕವಿರುತ್ತದೆ. ದೇವತೆಗಳಲ್ಲೊಬ್ಬನು ನಾಯಕನಾಗಿರುವನು ; ದಿವ್ಯಸ್ತ್ರೀಯನ್ನು ಪಡೆಯಲಿಕ್ಕಾಗಿ ಬೇರೆ ಆರುಜನ ನಾಯಕರು ಯುದ್ಧವನ್ನು ಮಾಡುತ್ತಾರೆ" ಎಂದು ಕೆಲವು ವಿಮರ್ಶಕರು ಹೇಳುತ್ತಾರೆ.

ಮೂಲದಲ್ಲಿ ಹೇಳಿದ ಪದಗಳನ್ನು ವಿವರಿಸುತ್ತಾನೆ. ಮಿಶ್ರವೃತ್ತವೆಂದರೆ ವೃತ್ತಾಂತವು ಲೋಕಪ್ರಸಿದ್ಧ ಕವಿಕಲ್ಪನೆ ಇವೆರಡರಿಂದಲೂ ಕೂಡಿರಬೇಕೆಂದು ಅರ್ಥ. ಪತಾಕಾ ನಾಯಕರು ನಾಯಕಪ್ರತಿನಾಯಕರೊಡಗೂಡಿ ಒಟ್ಟು ಹತ್ತು ನಾಯಕರಿರುವರು. ಜಿಂಕೆಯಂತೆ ಸುಲಭವಾಗಿ ಸಿಕ್ಕದೇ ಇರುವ ನಾಯಿಕೆಯನ್ನು ನಾಯಕನು ಮೃಗದಂತೆ ಹುಡುಕುವುದರಿಂದ ಇದು ಈಹಾಮೃಗವೆನಿಸಿದೆ. ಕುಸುಮಶೇಖರವಿಜಯವೇ ಈ ಬಗೆಯ ರೂಪಕವೆನಿಸಿದೆ.

ಇನ್ನುಮುಂದೆ ಅಂಕವೆಂಬ ರೂಪಕದ ಲಕ್ಷಣವನ್ನು ತಿಳಿಸುತ್ತಾನೆ. ಇದರಲ್ಲಿ ಒಂದೇ ಅಂಕವಿದ್ದು ಅದಕ್ಕೆ ಉತ್ಸೃಷ್ಟಿಕಾಂಕವೆಂಬ ಹೆಸರಿರುವುದು. ಸಾಮಾನ್ಯಜನರೇ ಇಲ್ಲಿ ನಾಯಕರೆನಿಸುವರು. ಕರುಣವೇ ಇಲ್ಲಿ ಪ್ರಧಾನವಾದ ರಸವೆನಿಸುತ್ತದೆ. ಅನೇಕ ಸ್ತ್ರೀಯರು ರೋದನಮಾಡುತ್ತಾರೆ. ಕಥಾವಸ್ತುವು ಕಲ್ಪಿತವೆನಿಸದೆ ಪ್ರಸಿದ್ಧವೇ ಆಗಿರುತ್ತದೆ. ಆದರೆ ಅದನ್ನು ಕವಿಯು ಸ್ವಬುದ್ಧಿಯಿಂದ ವಿಸ್ತಾರಗೊಳಿಸುವನು. ಭಾಣವೆಂಬ ರೂಪಕದಲ್ಲಿರುವಂತೆ ಮುಖಪ್ರತಿಮುಖಸಂಧಿಗಳು ಇರುತ್ತವೆ. ವಿಶೇಷವಾಗಿ ಭಾರತೀವೃತ್ತಿಯೂ ಮಿತವಾಗಿ ಕೌಶಿಕೀವೃತ್ತಿಯೂ, ಹತ್ತು ಲಾಸ್ಯಾಂಗಗಳೂ ಇಲ್ಲಿ ಬರುತ್ತವೆ. ನಾಯಕಪ್ರತಿನಾಯಕರ ಜಯಪರಾಜಯಗಳನ್ನು ಇಲ್ಲಿ ತಿಳಿಸಬೇಕು. ಯುದ್ಧವನ್ನು ಬಾಯಿಮಾತಿನಿಂದ ತಿಳಿಸಬೇಕು. ಇದರ ತುಂಬ ದುಃಖವನ್ನು ಸೂಚಿಸುವ ಮಾತುಗಳನ್ನು ಕವಿಯು ಪ್ರಯೋಗಿಸಬೇಕು. ನಾಟಕದೊಳಗೆ ಬರುವ ಅಂಕದಿಂದ ಪ್ರತ್ಯೇಕಿಸಲಿಕ್ಕಾಗಿ ಉತ್ಸೃಷ್ಟಿಕಾಂಕವೆಂದು ಇದನ್ನು ಕೆಲವು ವಿಮರ್ಶಕರು ಕರೆದಿದ್ದಾರೆ. ಇದರಲ್ಲಿ ಪ್ರತಿಮುಖಸಂಧಿ ಇಲ್ಲದ ಪ್ರಯುಕ್ತ ವಿಪರೀತವಾದ ರಚನೆ ಇರುವುದರಿಂದ ಇದು ಉತ್ಸೃಷ್ಟಿಕಾಂಕವೆನಿಸಿದೆ ಎಂದು ಬೇರೆಯವರು ಅಭಿಪ್ರಾಯಪಡುತ್ತಾರೆ. ಶರ್ಮಿಷ್ಠಾಯಯಾತಿ ಎಂಬುದೇ ಈ ಬಗೆಯ ರೂಪಕವೆನಿಸಿದೆ.

ಇನ್ನುಮುಂದೆ ವೀಥಿ ಎಂಬ ರೂಪಕದ ಸ್ವರೂಪವನ್ನು ನಿವರಿಸುತ್ತಾನೆ. ಇದರಲ್ಲಿ ಒಂದೇ ಅಂಕವಿರುತ್ತದೆ. ಒಬ್ಬನೇ ನಾಯಕನಿರುವನು. ಅವನು ಆಕಾಶಭಾಷಿತಗಳನ್ನು ಕೇಳಿ ಚಿತ್ರವಿಚಿತ್ರವಾಗಿ ಮಾತನಾಡುತ್ತ ಅವಕ್ಕೆ ಉತ್ತರಗಳನ್ನು ಕೊಡುವನು. ಹೆಚ್ಚು ಶೃಂಗಾರರಸವು ಬಂದು ಉಳಿದ ರಸಗಳೂ ಸೇರಿಕೊಂಡಿರುವುವು. ಮುಖನಿರ್ವಹಣಸಂಧಿಗಳೂ ಬೀಜವೇ ಮೊದಲಾದ ಐದು ಬಗೆಯ ಅರ್ಥಪ್ರಕೃತಿಗಳೂ ಇರುತ್ತವೆ. ಮೂಲದಲ್ಲಿ ಕಶ್ಚಿನ್ನಾಯಕಃ ಎಂದು ಹೇಳಿದ್ದರಿಂದ ನಾಯಕನು ಉತ್ತಮನೋ ಮಧ್ಯಮನೋ ಅಧಮನೋ ಆಗಿರಬೇಕೆಂಬುದು ಅರ್ಥವಾಗುತ್ತದೆ. ಶೃಂಗಾರವೇ ಹೆಚ್ಚಾಗಿ ಬರುವುದರಿಂದ ಇಲ್ಲಿ ಕೌಶಿಕೀವೃತ್ತಿಯೇ ಹೆಚ್ಚು ಬರುತ್ತದೆ. ಇದಕ್ಕೆ ಉದ್ಘಾತ್ಯಕ, ಅವಲಗಿತ, ಪ್ರಪಂಚ, ತ್ರಿಗತ, ಛಲ, ವಾಕ್ಕೇಲಿ, ಅಧಿಬಲ, ಗಂಡ, ಅವಸ್ಯಂದಿತ, ನಾಲಿಕೆ, ಅಸತ್ಪ್ರಲಾಸ, ವ್ಯಾಹಾರ, ಮೃದವವೆಂಬ ಹದಿಮೂರು ಅಂಗಗಳುಂಟೆಂದು ವಿದ್ವಾಂಸರು ಹೇಳುತ್ತಾರೆ. ಇವುಗಳಲ್ಲಿ ಉದ್ಘಾತ್ಯಕ ಅವಲಗಿತಗಳನ್ನು ಪ್ರಸ್ತಾವನೆಯ ಸ್ವರೂಪವನ್ನು ತಿಳಿಸುವಾಗ ಉದಾಹರಣೆಗಳೊಡನೆ ತಿಳಿಸಲಾಗಿದೆ. ಉಳಿದ ಹನ್ನೆರಡು

ಅಂಗಗಳ ಸ್ವರೂಪವನ್ನು ಈಗ ತಿಳಿಸುತ್ತಾನೆ. ಅವುಗಳಲ್ಲಿ ಮೊದಲನೆಯದಾದ ಪ್ರಪಂಚವೆಂಬುದನ್ನು ಈಗ ತಿಳಿಸುತ್ತಾನೆ. ಒಂದಕ್ಕೊಂದು ಸೇರಿ ಸುಳ್ಳೆನಿಸುವ ಹಾಸ್ಯವಾದ ಮಾತೇ ಪ್ರಪಂಚವೆಂಬ ವೀಥ್ಯಂಗವೆನಿಸುವುದು. ವಿಕ್ರಮೋರ್ವಶೀಯದಲ್ಲಿ ಚಂದ್ರಶಿಲೆಯ ಮೇಲ್ಭಾಗದ ಮನೆಯಲ್ಲಿ ವಿದೂಷಕನು ಚೇಟಿಯೊಡನೆ ಆಡುವ ವ್ಯವಹಾರವೇ ಇದಕ್ಕೆ ಉದಾಹರಣವೆನಿಸಿದೆ. ಆ ಮಾತೆಲ್ಲವೂ ಪರಸ್ಪರವಾಗಿ ಸುಳ್ಳಾದರೂ ಹಾಸಳಿಂದ ತುಂಬಿಕೊಂಡಿದೆ. ಆದ್ದರಿಂದ ಆ ಮಾತು ಪ್ರಪಂಚವೆನಿಸಿದೆ. ಶಬ್ದಗಳ ಸಾಮ್ಯದಿಂದ ಅನೇಕಾರ್ಥಗಳ ಕಲ್ಪನೆಯೇ ತ್ರಿಗತವೆಂಬ ವೀಥ್ಯಂಗವೆನಿಸಿಸುವುದು. ಹೇಳುವವನು ಕೇಳುವವನು ಅಭಿನಯಿಸುವವನು ಈ ಮೂವರಿಗೂ ಸಂಬಂಧಿಸಿದ್ದರಿಂದ ಇದು ತ್ರಿಗತವೆನಿಸಿದೆ. ಇಲ್ಲಿ ಹೇಳುವವನ ಅಭಿಪ್ರಾಯವನ್ನು ಅನುಸರಿಸಿ ಈ ಬಗೆಯ ಕಲ್ಪನೆ ಬರುವುದಿಲ್ಲ. ಕೇವಲ ಶಬ್ದಸಾಮ್ಯದಿಂದ ಇಂತಹ ಕಲ್ಪನೆ ಹೊರಬೀಳುತ್ತದೆ. ವಿಕ್ರಮೋರ್ವಶೀಯದಲ್ಲಿ ರಾಜನು–"ಪರ್ವತಗಳೆಲ್ಲಕ್ಕೂ ಶ್ರೇಷ್ಠನೇ, ಈ ಮನೋಹರವಾದ ಪ್ರದೇಶದಲ್ಲಿ ನನ್ನಿಂದ ಬೇರ್ಪಟ್ಟಿರುವ ಒಬ್ಬ ಸ್ತ್ರೀಯಳನ್ನು ನೀನು ಕಂಡೆಯಾ" ಎಂದು ಪ್ರಶ್ನೆ ಮಾಡುತ್ತಾನೆ. ಅದಕ್ಕೆ ಉತ್ತರವು "ರಾಜರೆಲ್ಲರಿಗೂ ಶ್ರೇಷ್ಠನೆನಿಸಿದವನೇ, ಈ ಕಾಡಿನಲ್ಲಿ ನಿನ್ನಿಂದ ಬೇರ್ಪಟ್ಟಿರುವ ಸರ್ವಾಂಗಸುಂದರಿಯೊಬ್ಬಳನ್ನು ನಾನು ಕಂಡೆನು'' ಎಂದು ಹೊರಬೀಳುವುದು. ತೆರೆಯ ಹಿಂಭಾಗದಲ್ಲಿ ಅಲ್ಲಿಯೇ ಇದಕ್ಕೆ ಪ್ರತಿಶಬ್ದವು ಹೊರಬೀಳುವುದು. ಆಗ ರಾಜನು 'ಆಹಾ ! ನಿನಗೆ ಹೇಗೆ ಆಕೆ ಕಾಣಿಸಿಕೊಂಡಳು ಎಂದು ಹೇಳುವನು. ಇಲ್ಲಿ ಪ್ರಶ್ನವಾಕ್ಯವೇ ಕಾಕುವೆಂಬ ಸ್ವರವಿಕಾರದಿಂದ ಉತ್ತರವನ್ನು ದೊರಕಿಸುವುದು. ಆದ್ದರಿಂದಲೇ ಇದು ತ್ರಿಗತವೆನಿಸಿದೆ. ನಟನು (ಅಭಿನಯಿಸುವವನು) ನಟೀ, ಪ್ರತಿನಟ ಇವರು ಮೂವರಿಂದ ಇದು ನಡೆಯುವಂತಹದೆಂದು ಕೆಲವರು ಹೇಳುತ್ತಾರೆ. ಪ್ರಿಯವಾದಂತೆ ತೋರುತ್ತ ಅಪ್ರಿಯವೆನಿಸಿದ ವಾಕ್ಯಗಳಿಂದ ತನ್ನ ಅಭಿಪ್ರಾಯದ ಬಗ್ಗೆ ಒಬ್ಬನಿಗೆ ಆಶೆಯನ್ನು ಹುಟ್ಟಿಸಿ ವಂಚನೆ ಮಾಡುವುದೇ ಛಲವೆಂಬ ವೀಥ್ಯಂಗವೆನಿಸುತ್ತದೆ. ವೇಣೀಸಂಹಾರದಲ್ಲಿ ಭೀಮಾರ್ಜುನರು ರಣರಂಗದಿಂದ ತಪ್ಪಿಸಿಕೊಂಡಿದ್ದ ದುರ್ಯೋಧನನನ್ನು ಹೀಯಾಳಿಸಿ ಮಾತನ್ನಾಡುತ್ತಾರೆ. "ಮೋಸದಿಂದ ಪಗಡೆಯನ್ನಾಡಿ, ಲಾಕ್ಷಾಗೃಹದಲ್ಲಿ ಇದ್ದವರಿಗೆ ಬೆಂಕಿಯನ್ನು ಹತ್ತಿಸಿ ದುಶ್ಶಾಸನನೇ ಮೊದಲಾದ ನೂರು ಸಹೋದರರಿಗೆ ದೊಡ್ಡವನೂ ಕರ್ಣನ ಮಿತ್ರನೂ ಆಗಿ ದ್ರೌಪದಿಯ ಸೀರೆಯನ್ನೂ ಜುಟ್ಟನ್ನೂ ಸೆಳೆಯುವುದರಲ್ಲಿ ನಿಪುಣನಾಗಿ ಪಾಂಡವರನ್ನು ದಾಸರನ್ನಾಗಿ ಮಾಡಿಕೊಂಡು ಮೆರೆದ ಆ ದುರಭಿಮಾನಿ ದುರ್ಯೋಧನನು ಎಲ್ಲಿ ಇದ್ದಾನೆ ಹೇಳಿರಿ. ಕೋಪದಿಂದ ನಾವು ಅವನನ್ನು ನೋಡಲು ಬಂದಿಲ್ಲ; ಆದರೆ ಶಾಂತಿಪ್ರೇಮದಿಂದಲೇ ಬಂದಿರುವೆವು.'' ಇಲ್ಲಿ ಹೀಗೆ ಮಾತಿನಿಂದ ಮೇಲೆ ಮೇಲೆ ದುರ್ಯೋಧನನ ಪ್ರಭಾವು ತೋರಿದರೂ ಒಳಗೆ ಅವನು ಮಾಡಿದ ಅಪರಾಧಗಳೇ ತುಂಬಿಕೊಂಡಿರುವುದರಿಂದ ಈ ಮಾತು ಅಪ್ರಿಯವೇ ಆಗಿದೆ. ಇಂತವನನ್ನು ಕೋಪದಿಂದ ನೋಡಲು ನಾವು ಬಂದಿಲ್ಲವೆಂದು ವಂಚಿಸಿ ಇಲ್ಲಿ ಹೇಳುತ್ತಿರುವುದರಿಂದ

ಇದು ಛಲವೆನಿಸಿದೆ. ಯಾವನೊಬ್ಬನು ಮಾಡುವ ಯಾವುದೋ ಕಾರ್ಯವನ್ನು ಉದ್ದೇಶಿಸಿ ವಂಚನೆ, ಹಾಸ್ಯ, ಸಿಟ್ಟು, ಇವೆಲ್ಲವೂ ಪ್ರಕಾಶಿಸುವಂತೆ ಅವನಿಗೆ ಹೇಳುವ ಮಾತೇ ಛಲವೆನಿಸಿವುದೆಂದು ಕೆಲವರು ಹೇಳುತ್ತಾರೆ. ಮಾಲವಿಕಾಗ್ನಿಮಿತ್ರದಲ್ಲಿ ವಿದೂಷಕನ ಮಾತಿನಲ್ಲಿ ಇದನ್ನು ಕಾಣಬಹುದು. ಅನೇಕ ಪ್ರಶ್ನೋತ್ತರಗಳಿಂದ ಒಬ್ಬನನ್ನು ಹಾಸ್ಯ ಮಾಡುವ ವಾಕ್ಚಾತುರ್ಯವೇ ಈ ಬಗೆಯ ಛಲವೆನಿಸಿಸುವುದು. ಧುರ್ವ್ಯವಹಾರದ ಭಿಕ್ಷುವಿನೊಡನೆ ಒಬ್ಬನು ಹೀಗೆ ವ್ಯವಹರಿಸುವನು. "ಭಿಕ್ಷುವೇ, ನೀನು ಮಾಂಸವನ್ನು ಸೇವಿಸುವೆಯೋ?'' ಎಂಬುದು ಪ್ರಶ್ನೆ. ಅದಕ್ಕೆ ಉತ್ತರವನ್ನು ಅವನು 'ಹೆಂಡವಿಲ್ಲದೆ ಇದ್ದರೆ ಆ ಮಾಂಸದಿಂದ ಏನಾದೀತು ?' ಎಂದು ತಿಳಿಸುವನು. 'ಅಹಾ ? ಮದ್ಯವೂ ನಿನಗೆ ಇಷ್ಟವೋ?' ಇದು ಎರಡನೆಯ ಪ್ರಶ್ನೆ. 'ಅದಷ್ಟೇ ಅಲ್ಲದೆ ವೇಶ್ಯೆಯರೊಡನೆ ಅದು ಇಷ್ಟವೆನಿಸಿದೆ.' ಇದು ಭಿಕ್ಷುವಿನ ಎರನೆಯ ಉತ್ತರ. 'ವೇಶ್ಯಗೆ ಹಣದಲ್ಲಿ ಆಶೆ ಇರುತ್ತದೆ. ನಿನಗೆ ಹಣವು ಎಲ್ಲಿಂದ ಬರುತ್ತದೆ ? ಎಂಬುದು ಮೂರನೆಯ ಪ್ರಶ್ನೆ' "ಜೂಜಿನಿಂದಾಗಲೀ ಕಳ್ಳತನದಿಂದಾಗಲೀ ಹಣವು ಬರುತ್ತದೆ" ಎಂಬುದು ಭಿಕ್ಷುವಿನ ಮೂರನೆಯ ಉತ್ತರ. ಅದಕ್ಕೆ 'ಜೂಜು ಕಳ್ಳತನಗಳ ಪರಿಚಯವೂ ನಿನಗೆ ಇದೆಯೇ ?' ಎಂಬುದು ನಾಲ್ಕನೆಯ ಪ್ರಶ್ನೆ. 'ಅಹಾ ! ಎಲ್ಲಾ ಬಗೆಯಿಂದಲೂ ಪತಿತನಾದವನಿಗೆ ಜೂಜು ಕಳ್ಳತನಗಳಲ್ಲದೆ ಬೇರೆ ದಾರಿ ಏನಿದೆ ?' ಎಂದು ನಾಲ್ಕನೆಯ ಉತ್ತರವು ಹೊರಟಿದೆ." ಇಲ್ಲಿ ನಾಲ್ಕುಬಗೆಯ ಪ್ರಶ್ನೋತ್ತರಗಳಿಂದ ಭಿಕ್ಷುವನ್ನು ನೋಡಿ ಹಾಸ್ಯ ಮಾಡಿರುವ ಪ್ರಯುಕ್ತ ಇದು ವಾಕ್ಕೇಲಿ ಎನಿಸಿದೆ. ವಾಕ್ಯವನ್ನು ಕೊನೆಗಾಣಿಸುವ ಕ್ರಿಯಾಪದವೇ ಮೊದಲಾದವು ಇಲ್ಲದ್ದರಿಂದ ಆರಂಭಿಸಿದ ವಾಕ್ಯವನ್ನು ತೊರೆಯುವುದೇ ವಾಕ್ಕೇಲಿ ಎಂದು ಕೆಲವರು ಅಭಿಪ್ರಾಯಪಡುವರು. ಬೇರೆಯವರಾದರೋ 'ಒಬ್ಬನು ಕೇಳುವ ಅನೇಕ ಪ್ರಶ್ನೆಗಳಿಗೆ ಒಂದೇ ಉತ್ತರವು ಎಲ್ಲಿ ದೊರೆಯುವುದೋ ಅದನ್ನು ವಾಕ್ಕೇಲಿ' ಎಂದು ಕರೆಯುತ್ತಾರೆ.

ಅನ್ಯೋನ್ಯವಾಕ್ಯಾಧಿಕ್ಯೋಕ್ತಿಃ ಸ್ಪರ್ಧಯಾಧಿಬಲಂ ಮತಮ್ ।

ಯಥಾ ಮಮ ಪ್ರಭಾವತ್ಯಾಂ ವಜ್ರನಾಭಃ—

ಅಸ್ಯ ವಕ್ಷಃ ಕ್ಷಣೇನೈವ ನಿರ್ಮಥ್ಯ ಗದಯಾನಯಾ ।
ಲೀಲಯೋನ್ಮೂಲಯಿಷ್ಯಾಮಿ ಭುವನದ್ವಯಮದ್ಯ ವಃ ॥

ಪ್ರದ್ಯುಮ್ನಃ—ಅರೇ ರೇ ಅಸುರಾಪಸದ ! ಅಲಮಮುನಾ ಬಹುಪ್ರಲಾಪೇನ. ಮಮ ಖಲು — ಅದ್ಯ ಪ್ರಚಂಡಭುಜದಂಡಸಮರ್ಪಿತೋರು
ಕೋದಂಡನಿರ್ಗಲಿತಕಾಂಡಸಮೂಹಪಾತೈಃ ।
ಆಸ್ತಾಂ ಸಮಸ್ತದಿತಿಜಕ್ಷತಜೋಕ್ಷಿತೇಯಂ
ಕ್ಷೋಣೀ ಕ್ಷಣೇನ ಪಿಶಿತಾಶನಲೋಭನೀಯಾ ॥

ಗಂಡಂ ಪ್ರಸ್ತುತಸಂಬಂಧಿ ಭಿನ್ನಾರ್ಥಂ ಸತ್ವರಂ ವಚಃ ।

ಯಥಾ ವೇಣ್ಯಾಂ ರಾಜಾ—ಅಧ್ಯಾಸಿತುಂ ತವ ಚಿರಾಜ್ಜಘನಸ್ಥಲಸ್ಯ ।
ಪರ್ಯಾಪ್ತಮೇವ ಕರಭೋರು ಮಮೋರುಯುಗ್ಮಮ್ ॥

ಅನಂತರಂ "ಪ್ರವಿಶ್ಯ ಕಂಚುಕೀ-ದೇವ! ಭಗ್ನಂ ಭಗ್ನಮ್" ಇತ್ಯಾದಿ. ಅತ್ರ ರಥಕೇತನಭಂಗಾರ್ಥವಚನಮೂರುಭಂಗಾರ್ಥೇ ಸಂಬದ್ಧೇ ಸಂಬದ್ಧಮ್

ವ್ಯಾಖ್ಯಾನಂ ಸ್ವರಸೋಕ್ತಸ್ಯಾನ್ಯಥಾವಸ್ಯಂದಿತಂ ಭವೇತ್ ।

ಯಥಾ ಛಲಿತರಾಮೇ-ಸೀತಾ-ಜಾತ! ಕಲ್ಯಂ ಖಲು ಅಯೊಧ್ಯಾಯಾಂ ಗಂತವ್ಯಮ್. ತತ್ರ ಸ ರಾಜಾ ವಿನಯೇನ ಪಣಾಯಿತವ್ಯಃ. ಲವಃ-ಅಥ ಕಿಮಾವಾಭ್ಯಾಂ ರಾಜೋಪಜೀವಿಭ್ಯಾಂ ಭವಿತವ್ಯಮ್? ಸೀತಾ-ಸ ಯುಷ್ಮಾಕಂ ಪಿತಾ. ಲವಃ—ಕಿಮಾವಯೋಃ ರಘುಪತಿಃ ಪಿತಾ? ಸೀತಾ (ಸಾಶಂಕಂ) ಮಾ ಅನ್ಯಥಾ ಶಂಕಧ್ವಂ ಸ ಖಲು ಯುಷ್ಮಾಕಂ ಸಕಲಾಯಾ ಏವ ಪೃಥಿವ್ಯಾಃ."

ಪ್ರಹೇಳಿಕೈವ ಹಾಸ್ಯೇನ ಯುಕ್ತಾ ಭವತಿ ನಾಲಿಕಾ ॥

ಸಂವರಣಕಾರ್ಯುತ್ತರಂ ಪ್ರಹೇಳಿಕಾ. ಯಥಾ ರತ್ನಾವಳ್ಯಾಂ—
ಸುಸಂಗತಾ—ಸಖಿ! ಯಸ್ಯ ಕೃತೇ ತ್ವಮಾಗತಾ ಸ ಇತ ಏವ ತಿಷ್ಠತಿ.
ಸಾಗರಿಕಾ ಕಸ್ಯ ಕೃತೇ ಅಹಮಾಗತಾ? ಸುಸಂಗಾತಾ-ನನು ಚಿತ್ರಫಲಕಸ್ಯ.

ಅತ್ರ ರಾಜ್ಞಃ ಕೃತೇ ಆಗತೇತ್ಯರ್ಥಃ ಸಂವೃತಃ.

ಅಸತ್ಪ್ರಲಾಪೋ ಯದ್ವಾಕ್ಯಂ ಅಸಂಬದ್ಧಂ ತಥೋತ್ತರಮ್ ।
ಅಗೃಹೀತೋಽಪಿ ಮೂರ್ಖಸ್ಯ ಪುರೋ ಯಚ್ಚ ಹಿತಂ ವಚಃ ॥

ತತ್ರ ಆದ್ಯಂ ಯಥಾ ಮಮ ಪ್ರಭಾವತ್ಯಾಂ-ಪ್ರದ್ಯುಮ್ನಃ-(ಸಹಕಾರವಲ್ಲೀಂ ಅವಲೋಕ್ಯ ಸಾನಂದಂ)-ಅಹೋ! ಕಥಮಿಹೈವ—

ಅಲಿಕುಲಮಂಜುಕೇಶೀ ಪರಿಮಲಬಹುಲಾ ರಸಾವಹಾ ತನ್ವೀ ।
ಕಿಶಲಯಪೇಶಲಪಾಣಿಃ ಕೋಕಿಲಭಾಷಿಣೀ ಪ್ರಿಯತಮಾ ಮೇ ॥

ಏವಮಸಂಬದ್ಧೋತ್ತರೇಽಪಿ. ತೃತೀಯಂ ಯಥಾ ವೇಣ್ಯಾಂ ದುರ್ಯೋಧನಂ ಪ್ರತಿ ಗಾಂಧಾರೀವಾಕ್ಯಮ್.

ವ್ಯಾಹಾರೋ ಯತ್ ಪರಸ್ಯಾರ್ಥೇ ಹಾಸ್ಯಕ್ಷೋಭಕರಂ ವಚಃ ।

ಯಥಾ ಮಾಲವಿಕಾಗ್ನಿಮಿತ್ರೇ ಲಾಸ್ಯಪ್ರಯೋಗಾವಸಾನೇ ಮಾಲವಿಕಾ ನಿರ್ಗಂತುಮಿಚ್ಛತಿ. ವಿದೂಷಕಃ 'ಮಾ ತಾವತ್, ಉಪದೇಶಶುದ್ಧಾ, ಗಮಿಷ್ಯಸಿ' ಇತ್ಯುಪಕ್ರಮೇಣ. ಗಣದಾಸಃ ವಿದೂಷಕಂ ಪ್ರತಿ 'ಆರ್ಯ! ಉಚ್ಯತಾಂ ಯಸ್ತ್ವಯಾ ಕ್ರಮಭೇದೋ ಲಕ್ಷಿತಃ? ವಿದೂಷಕಃ-ಪ್ರಥಮಂ ಬ್ರಾಹ್ಮಣಪೂಜಾ ಭವತಿ, ಸಾ ಅನಯಾ ಲಂಘಿತಾ. ಮಾಲವಿಕಾ-ಸ್ಮಯತೇ" ಇತ್ಯಾದಿನಾ ನಾಯಕಸ್ಯ ವಿಶುದ್ಧ ನಾಯಿಕಾದರ್ಶನೇನ ಹಾಸಲೋಭಕಾರಿಣಾ ವಚಸಾ ವ್ಯವಹಾರಃ.

ದೋಷಾ ಗುಣಾ ಗುಣಾ ದೋಷಾ ಯತ್ರ ಸ್ಯುರ್ಮೃದವಂ ಹಿ ತತ್.

ಕ್ರಮೇಣ ಯಥಾ—ಪ್ರಿಯ ! ಜೀವಿತತಾಕ್ರೌರ್ಯಂ ನಿಃಸ್ನೇಹತ್ವಂ ಕೃತಘ್ನತಾ।
ಭೂಯಸ್ತ್ವದ್ದರ್ಶನಾದೇವ ಮಮೈತೇ ಗುಣತಾಂ ಗತಾಃ ॥
ತಸ್ಯಾಸ್ತದ್ರೂಪಸೌಂದರ್ಯಂ ಭೂಷಿತಂ ಯೌವನಶ್ರಿಯಾ ।
ಸುಖೈಕಾಯತನಂ ಜಾತಂ ದುಃಖಾಯೈವ ಮಮಾಧುನಾ ॥

ಏತಾನಿ ಚಾಂಗಾನಿ ನಾಟಕಾದಿಷು ಸಂಭವಂತ್ಯಪಿ ವೀಥ್ಯಾಂ ಅವಶ್ಯಂವಿಧೇಯಾನಿ ವಿಸ್ಪಷ್ಟತಯಾ ನಾಟಕಾದಿಷು ವಿನಿವಿಷ್ಟಾನ್ಯಪೀಹ ಉದಾಹೃತಾನಿ. ವೀಥ್ಯಾಮಿವ ನಾನಾರಸಾನಾಂ ಚಾತ್ರ ಮಾಲಾರೂಪತಯಾ ಸ್ಥಿತತ್ವಾತ್ ವೀಥೀಯಮ್ ಯಥಾ ಮಾಲವಿಕಾ.

ವೀಥಿ ಎಂಬ ರೂಪಕದ ಅಂಗಗಳಲ್ಲಿ ಆರನ್ನು ವಿವರಿಸಿ ಈಗ ಅಧಿಬಲವೆಂಬ ಏಳನೆಯ ಅಂಗವನ್ನು ತಿಳಿಸುತ್ತಾನೆ. ಸ್ಪರ್ಧೆಯಿಂದ ಒಬ್ಬರಿಗೊಬ್ಬರಿಗೆ ನಡೆಯುವ ಮಾತುಗಳಿಂದ ಇಬ್ಬರೂ ಪ್ರಧಾನರೆಂದು ತಿಳಿಯುವುದೇ ಅಧಿಬಲವೆನಿಸುವುದು. ಪ್ರಭಾವತೀನಾಟಕೆಯಲ್ಲಿ ವಜ್ರನಾಭನು 'ಇವನ ವಕ್ಷಸ್ಸನ್ನು ಒಂದೇ ಕ್ಷಣದಲ್ಲಿ ಈ ಗದೆಯಿಂದ ತೊಡೆದುಹಾಕಿ ಭೂಮಿಸ್ವರ್ಗಗಳೆರಡನ್ನೂ ಈಗ ಲೀಲೆಯಿಂದ ನಾಶಮಾಡುವೆನು' ಎಂದು ಹೇಳುವನು. ಅದಕ್ಕೆ ಪ್ರದ್ಯುಮ್ನನು–'ಎಲೌ ಧೂರ್ತರಾಕ್ಷಸನೇ, ನಿನ್ನ ಈ ಹೆಚ್ಚುಮಾತಿನಿಂದ ಫಲವೇನು ? ನನ್ನ ಈ ಭಯಂಕರವಾದ ಬಾಹುಗಳಲ್ಲಿ ತೊಟ್ಟಿರುವ ವಿಶೇಷವಾದ ಧನುಸ್ಸನಿಂದ ಹೊರಟ ಬಾಣಗಳ ಏಟನಿಂದ ಈ ಭೂಮಿ ಎಲ್ಲವೂ ಸಮಸ್ತರಾಕ್ಷಸರ ರಕ್ತದಿಂದ ನೆನೆದು ಮಾಂಸವನ್ನು ತಿನ್ನುವ ನರಿ ಮೊದಲಾದ ಪ್ರಾಣಿಗಳಿಗೆ ಆ ಬಗೆಯ ಆಶೆಯನ್ನು ಹುಟ್ಟಿಸಲಿ" ಹೀಗೆ ಹೇಳುವನು. ಹೀಗೆ ಸ್ಪರ್ಧೆಯಿಂದ ಹೊರಡುವ ವಜ್ರನಾಭ ಪ್ರದ್ಯುಮ್ನ ಇವರ ಮಾತುಗಳಿಂದ ಇಬ್ಬರ ಆಧಿಕ್ಯವೂ ತೋರುವುದರಿಂದ ಇದು ಅಧಿಬಲವೆನಿಸಿದೆ.

ಪ್ರಕೃತವಿಷಯಕ್ಕೆ ಸಂಬಂಧಿಸಿದ್ದರೂ ಬೇರೆ ಅರ್ಥವನ್ನು ತಿಳಿಸುತ್ತ ಆತುರದಿಂದ ಆಡುವ ಮಾತು ಗಂಡವೆನಿಸುವುದು. ವೇಣೀಸಂಹಾರದಲ್ಲಿ ರಾಜನು "ಎಲೈ ಪ್ರೇಯಸಿ! ನನ್ನ ತೊಡೆಗಳೆರಡು ನಿನ್ನ ಜಘನಸ್ಥಲದಮೇಲೆ ಕ್ರೀಡಿಸಲಿಕ್ಕಾಗಿ ನೆಲೆಸಲು ಯೋಗ್ಯ" ಎಂದು ಹೇಳಿ ಮುಂದೆ ಹೇಳಬೇಕಾದ್ದನ್ನು ಹೇಳುತ್ತಿರುವಷ್ಟರಲ್ಲಿಯೇ ಕಂಚುಕಿಯು ಪ್ರವೇಶಿಸಿ 'ಸ್ವಾಮಿ, ಮುರಿಯಿತು ಮುರಿಯಿತು" ಎಂದು ಮುಂತಾಗಿ ತಿಳಿಸುವನು. ಇಲ್ಲಿ 'ಊರುಯುಗಂ' ಎಂದು ದುರ್ಯೋಧನನು ಹೇಳುವಷ್ಟರಲ್ಲಿಯೇ ಕಂಚುಕಿಯು ಬಂದು 'ಭಗ್ನಂ' ಎಂದು ಹೇಳುವನು. ರಥದ ಧ್ವಜವು ಮುರಿಯಿತೆಂಬುದನ್ನು ತಿಳಿಸಲು ಕಂಚುಕಿಯು ಬರುವನು. 'ಮುರಿಯಿತು' ಎಂದಷ್ಟನ್ನೇ ಅವನು ತಿಳಿಸುವನು. ಅವನು ಅದನ್ನು ಹೇಳುವಷ್ಟರಲ್ಲಿ ದುರ್ಯೋಧನನು 'ಊರುದ್ವಯಂ' ಎಂದು ಹೇಳಿದ್ದನು. ಅಲ್ಲಿಗೆ (ಉರುದ್ವಯಂ ಭಗ್ನಂ) ತೊಡೆಗಳೆರಡು ಮುರಿದವು ಎಂದು ಮುಂದಿನ ಊರುಭಂಗದ ಸಂಬಂಧವನ್ನು ಇಲ್ಲಿ ಎರಡು ಪದಗಳಿಗೂ ಕಲ್ಪಿಸಿದಂತಾಯಿತು. ಕಂಚುಕಿಯ

ಆತುರದ ಮಾತು ಬೇರೆಕಡೆಗೆ ಸಂಬಂಧಿಸಿದ್ದಾದರೂ ಇಲ್ಲಿ ಪ್ರಕೃತವೆನಿಸಿದ ಊರು ದ್ವಯಕ್ಕೆ ಅನ್ವಯಿಸಂದಂತಾಯಿತು.

ಸ್ವರಸವಾಗಿ ತನ್ನ ಅಭಿಪ್ರಾಯವನ್ನು ತಿಳಿಸಲಿಕ್ಕಾಗಿ ಹೇಳುವ ಮಾತಿನಿಂದ ಬೇರೆಯ ಅರ್ಥವನ್ನು ಕಲ್ಪಿಸುವುನು ಅವಸ್ಯಂದಿತವೆನಿಸುವುದು. ಛಲಿತರಾಮ ವೆಂಬ ವೀಥಿಯಲ್ಲಿ ಸೀತೆಯು ಮಗನಿಗೆ 'ಬೆಳಗ್ಗೆ ನಾವು ಅಯೋಧ್ಯೆಗೆ ಹೊರಡಬೇಕು. ಅಲ್ಲಿ ನೀನು ರಾಜನೊಡನೆ ವಿನಯದಿಂದ ವ್ಯವಹರಿಸಬೇಕು' ಎಂದು ಹೇಳುವಳು. 'ರಾಜನನ್ನು ಆಶ್ರಯಿಸುವುದರಿಂದ ನಮಗೆ ಆಗಬೇಕಾದ್ದೇನಿದೆ' ಎಂದು ಲವನು ಕೇಳುವನು. 'ಮಗನೇ ಅವನು ನಿಮ್ಮ ತಂದೆ' ಎಂದು ಆಕೆ ಹೇಳುವಳು. ಆಗ ಲವನು 'ರಾಘವನು ನಮ್ಮ ತಂದೆಯೆ ?' ಎಂದು ಕೇಳುವನು. ಆಗ ಸೀತೆಯು ಶಂಕೆಪಡುತ್ತಾ "ಬೇರೆ ರೀತಿಯಾಗಿ ಶಂಕಿಸಬೇಡಿರಿ. ಅವನು ನಿಮಗಷ್ಟೇ ಅಲ್ಲದೆ ಸಮಸ್ತ ಭೂಮಿಗೂ ತಂದೆ" ಎಂದು ಹೇಳು ವಳು. ರಾಮನು ಕುಶಲವರಿಗೆ ಮಾತ್ರವೇ ತಂದೆ ಎಂಬುದೇ ಸೀತೆಯ ಅಭಿಪ್ರಾಯ. ಇದನ್ನು ತಿಳಿಸುವ ಇಚ್ಛೆಯಿಂದಲೇ ಸೀತೆ ಹಾಗೆ ಹೇಳುತ್ತಾಳೆ. 'ಅವನು ನಿಮ್ಮ ತಂದೆ' ಎಂದು ಸೀತೆ ಹೇಳಿದ ಮಾತಿಗೆ 'ತಂದೆಯೆ ?' ಎಂದು ಕೇಳಲು ಲವನಿಗೆ ವಾಸ್ತವವಾದ ವೃತ್ತಾಂತವು ತಿಳಿಯದೆಂಬ ಆಶಂಕೆಯಿಂದ ಸೀತೆಯು 'ಅವನು ನಿಮಗಷ್ಟೇ ಅಲ್ಲದೆ ಭೂಮಿಗೆಲ್ಲಕ್ಕೂ ತಂದೆ' ಎಂದು ಬೇರೆ ರೀತಿಯಾಗಿ ತನ್ನ ಮಾತಿಗೆ ವ್ಯಾಖ್ಯಾನವನ್ನು ಮಾಡಿದ್ದರಿಂದ ಇದು ಅವಸ್ಯಂದಿತವೆನಿಸಿದೆ.

ಹಾಸ್ಯದಿಂದ ಕೂಡಿದ ಪ್ರಹೇಳಿಕೆಯ ಮಾತೇ ನಾಳಿಕೆ ಎನಿಸುವುದು. ಹೃದಯ ದಲ್ಲೂ ಬುದ್ಧಿಯಲ್ಲೂ ಪ್ರವೇಶಿಸುವುದರಿಂದ ಇಂತಹ ಮಾತು ನಾಳಿಕೆ ಎನಿಸಿದೆ. ಒಮ್ಮೆ ಪ್ರಕಾಶಿಸಿದ ಅರ್ಥವನ್ನು ಬೇರೆ ರೀತಿಯಾಗಿ ತಿಳಿಸುವುದರಿಂದ ಅದನ್ನು ಮುಚ್ಚಿದಂತಾ ಯಿತು. ಹಾಗೆ ಅದನ್ನು ಮುಚ್ಚುವಾಗ ಕೊಡುವ ಉತ್ತರವೇ ನಾಳಿಕೆ ಎನಿಸುವುದು. ರತ್ನಾವಳಿಯಲ್ಲಿ ಸುಸಂಗತೆಯು ಸಾಗರಿಕೆಗೆ "ಸುಖಿ ! ನೀನು ಯಾರಿಗೋಸ್ಕರ ಇಲ್ಲಿಗೆ ಬಂದೆಯೋ ಅವನೇ ಇಲ್ಲಿ 'ನಿಂತಿರುವನು' ಎಂದು ಹೇಳಲು 'ನಾನು ಯಾರಿಗಾಗಿ ಬಂದೆನು" 'ಎಂದು ಸಾಗರಿಕೆಯು ಕೇಳಲು ಇಗೋ ಈ ಚಿತ್ರಫಲಕವನ್ನು ನೋಡಲಿ ಕ್ಕಾಗಿ' ಎಂದು ಸುಸಂಗತೆಯು ತಿಳಿಸುವಳು. 'ರಾಜನಿಗೋಸ್ಕರ ನೀನು ಇಲ್ಲಿಗೆ ಬಂದಿ ರುವೆ' ಎಂಬುವನ್ನು ಹೇಳಬೇಕಾಗಿತ್ತು. ಅದನ್ನು ಇಲ್ಲಿ ತಿಳಿಸದೆ ಮುಚ್ಚಿ ಅದಕ್ಕೆ ಬೇರೆ ಉತ್ತರವನ್ನು ಕೊಟ್ಟಿದ್ದರಿಂದ ಇಂತಹ ಮಾತು ನಾಳಿಕೆ ಎನಿಸಿದೆ.

ಹಿಂದಿನ ಮುಂದಿನ ಸಂಬಂಧವಿಲ್ಲದಂತೆ ಮಾತನಾಡುವುದು, ಹಾಗೆಯೇ ಉತ್ತರ ವನ್ನು ಕೊಡುವುದು, ಅದನ್ನು ಕೇಳಿದವನೂ ಸಹ ಅದನ್ನು ಅನುಸರಿಸದೇ ಇರುವುದು. ಹೀಗೆ ಹೇಳುವ ಮೂರ್ಖನಿಗೆ ಮುಂದೆ ಹಿತವಾಗಿ ಕಾಣುವ ಮಾತು ಅಸತ್ಪ್ರಲಾಪ ವೆನಿಸುವುದು. ಪ್ರಭಾವತಿಯಲ್ಲಿ ಪ್ರದ್ಯುಮ್ನನು ಮಾವಿನ ಮರಕ್ಕೆ ಅಂಟಿಕೊಂಡು ಬೆಳೆಯುತ್ತಿರುವ ಬಳ್ಳಿಯನ್ನು ನೋಡಿ ಹೇಳುವನು. "ಆಹಾ ! ದುಂಬಿಗಳ ಸಮೂಹ ವೆಂಬ ಸುಂದರವಾದ ಕೇಶಗಳಿದ್ದು ಹೆಚ್ಚು ಸುಗಂಧವಿದ್ದು ಅನುರಾಗವನ್ನು ಹೆಚ್ಚಿಸು

ತ್ತಿರುವ ಚಿಗುರಿನಂತೆ ಸುಂದರವಾದ ಹಸ್ತವಿದ್ದು ಕೋಗಿಲೆಯಂತೆ ಮಧುರವಾಗಿ ಮಾತ ನಾಡುತ್ತ ಕೃಶಳಾಗಿರುವ ನನ್ನ ಪ್ರಿಯತಮಳು ಇಲ್ಲಿಯೇ ಇರುವಳಲ್ಲಾ!" ಎಂದು ಲತೆಯನ್ನು ತನ್ನ ಪ್ರಿಯೆ ಎಂದು ಅಸಂಬದ್ಧವಾಗಿ ಮಾತನಾಡುವವನು ಇಲ್ಲಿ ಲತೆಗೆ ಅನ್ವ ಯಿಸುವಂತೆ ಪದಗಳು ಸೇರಿದ್ದರೂ ಅವು ಪ್ರಿಯಗೆ ಅನ್ವಯಿಸುವಂತಹ ಅರ್ಥವನ್ನು ವ್ಯಂಗ್ಯವಾಗಿ ತಿಳಿಸುತ್ತವೆ. ಪ್ರಿಯೆಯಾದ ಪ್ರಭಾವತಿಯನ್ನು ಪ್ರದ್ಯುಮ್ನನು ಲತೆಯಲ್ಲಿ ಕಾಣುತ್ತಾನೆ. ಮಾವಿನಮರ, ಅದಕ್ಕೆ ಅಂಟಿಕೊಂಡಿರುವ ಲತೆ ಇವುಗಳ ವಿಚಾರವೇ ಇಲ್ಲಿ ಹಿಂದಿನಿಂದಲೂ ಬಂದಿರುವ ಪ್ರಕರಣ. ಇದರೊಡನೆ ಪ್ರದ್ಯುಮ್ನನು ತನ್ನ ಪ್ರಿಯೆಯ ಸಮಾಚಾರವನ್ನು ಸೇರಿಸಿ ಹೇಳಿದ್ದು ಅಸತ್ಪ್ರಲಾಪವೆನಿಸಿದೆ. ಅಸಂಬದ್ಧವಾದ ಉತ್ತರ ವನ್ನು ತಿಳಿಸುವ ಕಡೆಯಲ್ಲೂ ಇದೇ ಅಸತ್ಪ್ರಲಾಪವೇ ಇರುತ್ತದೆ. ಇವಕ್ಕೆ ಉದಾಹರಣ ವನ್ನು ಊಹಿಸಿಕೊಳ್ಳುವುದು. ಹೇಳಿದ ಮಾತನ್ನು ತಿಳಿದುಕೊಳ್ಳದ ಮೂರ್ಖನು ಮುಂದೆ ಹಿತವಾಗಿ ಮಾತನಾಡುವುದೂ ಸಹ ಅಸತ್ಪ್ರಲಾಪವೆಂಬ ಮೂರನೆಯ ಬಗೆ ಎಂದು ಹಿಂದೆ ತಿಳಿಸಿತ್ತು. ಅದಕ್ಕೆ ವೇಣೀಸಂಹಾರದಲ್ಲಿ ದುರ್ಯೋಧನನಿಗೆ ಗಾಂಧಾರಿಯು ಹೇಳುವ ಮಾತು ಉದಾಹರಣವೆನಿಸುತ್ತದೆ.

ಬೇರೊಬ್ಬನನ್ನು ನಿಮಿತ್ತವಾಗಿಟ್ಟುಕೊಂಡು ಹಾಸ್ಯದಿಂದಲೂ ಆಶೆಯಿಂದಲೂ ಮಾತನಾಡುವುದೇ ವ್ಯಾಹಾರವೆನಿಸುವುದು. ಮಾಲವಿಕಾಗ್ನಿಮಿತ್ರದಲ್ಲಿ ಮಾಲವಿಕೆಯು ತನ್ನ ನರ್ತನವು ಮುಗಿದೊಡನೆ ಹೊರಡಲು ಇಚ್ಛಿಸುತ್ತಾಳೆ. ಆಗ ವಿದೂಷಕನು 'ಕೊಂಚ, ನಿಲ್ಲು, ಉಪದೇಶದಲ್ಲಿ ಶುದ್ಧಳೆನಿಸಿಕೊಂಡೇ ನೀನು ಹೊರಡಬೇಕಾಗಿದೆ' ಎಂದು ಮುಂತಾಗಿ ಹೇಳುವನು. ಆಗ ಗಣದಾಸನು ವಿದೂಷಕನಿಗೆ 'ಪೂಜ್ಯನೇ, ಈಕೆಯ ನರ್ತನದಲ್ಲಿ ಯಾವ ಕ್ರಮಭೇದವನ್ನು ಕಂಡೆ. ಬೇಗನೆ ಹೇಳು' ಎಂದು ಕೇಳು ವನು. ಆಗ ವಿದೂಷಕನು "ನಾಟ್ಯಾರಂಭದಲ್ಲಿ ಈಕೆಯು ಬ್ರಾಹ್ಮಣನಿಗೆ ಪೂಜೆಯನ್ನು ಸಲ್ಲಿಸಬೇಕಾಗಿತ್ತು. ಅದನ್ನು ಮಾಡದೇ ಇದ್ದದ್ದು ತಪ್ಪು" ಎಂದು ಹೇಳುವನು. ಆಗ ಮಾಲವಿಕೆಯು 'ಅದನ್ನು ಸಕಾಲದಲ್ಲಿ ಸ್ಮರಿಸಿಕೊಳ್ಳಲಾಗುವುದು' ಎಂದು ಹೇಳು ವಳು. ಇದರಿಂದ ನಾಯಕನಿಗೆ ಪರಿಶುದ್ಧಳಾದ ನಾಯಿಕೆಯನ್ನು ಇನ್ನು ಕೊಂಚ ಹೊತ್ತು ತೋರಿಸಲಿಕ್ಕೆ ಅನುಕೂಲವಾಯಿತು. ಈ ಕಾರ್ಯವನ್ನು ಹಾಸ್ಯದ ಮತ್ತು ಆಶೆಯ ಮಾತುಗಳಿಂದ ಸಾಧಿಸಿರುವ ಪ್ರಯುಕ್ತ ಇದು ವ್ಯಾಹಾರವೆನಿಸಿದೆ.

ದೋಷಗಳೇ ಗುಣಗಳಾಗಿಯೂ, ಗುಣಗಳೇ ದೋಷವಾಗಿಯೂ ಪರಿಣಮಿಸು ವುದೇ ಮೃದವವೆಂಬ ವೀಥ್ಯಂಗವೆನಿಸುವುದು. ಮೃದುವಾದ್ದರಿಂದ ಇಂತಹ ವಾಕ್ಯವು ಮೃದವವೆನಿಸಿದೆ. 'ಪ್ರಿಯನೇ, ನಿನ್ನ ವಿರಹಕಾಲದಲ್ಲಿಯೂ ನಾನು ಬದುಕಿರುವೆ ನೆಂಬುದೇ ಒಂದು ಕಾಠಿನ್ಯವೆನಿಸಿದೆ. ಅದೇ ಒಂದು ಬಗೆಯ ಪ್ರೇಮವಿಲ್ಲದಿ ರುವ ಸ್ಥಿತಿ ಎನಿಸಿದೆ. ನಿನ್ನ ವಿರಹಕಾಲದಲ್ಲೂ ಮುಂದೆ ನಿನ್ನೊಡನೆ ಬದುಕುವೆನೆಂಬುದೇ ಒಂದು ಕೃತಘ್ನತೆ ಎನಿಸಿದೆ. ಇಲ್ಲವಾದರೆ ನಿನ್ನ ವಿರಹವನ್ನು ಸಹಿಸಲಾರದೆ ನನ್ನ ಪ್ರಾಣವೇ ಹೋಗಬೇಕಾಗಿತ್ತು. ನಿನ್ನ ವಿರಹಕಾಲದಲ್ಲಿ ನನಗೆ ಹೆಚ್ಚಿನ ಪ್ರೇಮವಿದ್ದಿ

ದ್ದರೆ ನಾನು ಹೇಗೆ ಬದುಕಿರುತ್ತಿದ್ದೆ ? ನಿನ್ನ ವಿರಹಕಾಲದಲ್ಲಿ ನಿನ್ನನ್ನು ನಾನು ಸೇರಿಕೊಂಡಿದ್ದರೆ ನಿನಗೆ ಕಷ್ಟವಾಗುತ್ತೆಂದು ನಿನ್ನನ್ನು ಮರೆತದ್ದರಿಂದ ನಾನು ಬದುಕಿರುವುದು ನಿನ್ನ ಬಗ್ಗೆ ನನ್ನ ಕೃತಘ್ನತೆಯನ್ನು ಸೂಚಿಸುತ್ತದೆ. ಇವೆಲ್ಲವೂ ನಿನ್ನ ವಿರಹಕಾಲದಲ್ಲಿ ನನಗೆ ದೋಷಗಳಾಗಿದ್ದವು, ಮತ್ತೆ ನಿನ್ನನ್ನು ನೋಡುವುದರಿಂದ ಇವೆಲ್ಲವೂ ನನ್ನಲ್ಲಿ ಗುಣಗಳಾಗಿ ಬದಲಾಯಿಸುವುವು. ನನ್ನಲ್ಲಿ ಅಂತಹ ಕ್ರೌರ್ಯವಿದ್ದು ಅನುರಾಗವಿಲ್ಲದ್ದರಿಂದಲೇ ನಾನು ಹೇಗೋ ಬದುಕಲು ಅನುಕೂಲವಾಯಿತು. ಅದರಿಂದ ನನಗೆ ನಿನ್ನ ಸಮಾಗಮವುಂಟಾಯಿತು. ನನ್ನಲ್ಲಿ ಕೃತಘ್ನತೆಯಿದ್ದು ನಿನ್ನನ್ನು ಮರೆತು ನಾನು ಬದುಕಿದ್ದುದರಿಂದ ನೀನು ಈಗ ನನ್ನಲ್ಲಿಗೆ ಬಂದೆ" ಹೀಗೆ ದೋಷಗಳೇ ಗುಣಗಳಾಗಿ ಮಾರ್ಪಡುವುದನ್ನು ಇಲ್ಲಿ ತಿಳಿಸಿರುವುದರಿಂದ ಇದು ಮೃದವವೆನಿಸಿದೆ. ಇದು ದೋಷವನ್ನು ಗುಣವನ್ನಾಗಿ ಮಾರ್ಪಡಿಸುವುದಕ್ಕೆ ಉದಾಹರಣವೆನಿಸಿದೆ.

ಈಗ ಗುಣವನ್ನು ದೋಷವನ್ನಾಗಿ ಮಾರ್ಪಡಿಸುವುದಕ್ಕೆ ಉದಾಹರಣವನ್ನು ತಿಳಿಸುತ್ತಾನೆ. "ಯೌವನದ ಸಂಪತ್ತಿನಿಂದ ಭೂಷಿತವಾದ ಆ ನಾಯಿಕೆಯ ರೂಪ ಸೌಂದರ್ಯವು ನನ್ನ ಸುಖಕ್ಕೆ ಮುಖ್ಯ ಕಾರಣವೆನಿಸಿದ್ದರೂ ವಿರಹಕಾಲದಲ್ಲಿ ಅದರಿಂದ ದುಃಖವೇ ಆಗುತ್ತಲಿದೆ." ಯಾವಾಗಲ್ಲೂ ಅದನ್ನೇ ಸ್ಮರಿಸುತ್ತಿರುವುದರಿಂದ ದುಃಖವುಂಟಾಗುತ್ತಿರುವ ಪ್ರಯುಕ್ತ ಇಲ್ಲಿ ಗುಣವೇ ದೋಷವಾಗಿ ಪರಿಣಮಿಸಿದೆ. ಆದ್ದರಿಂದ ಇದು ಮೃದವದ ಎರಡನೆಯ ಬಗೆ ಎನಿಸಿದೆ. ಇಲ್ಲಿ ತಿಳಿಸಿದ ಅಂಗಗಳ ನಾಟಕ ಮೊದಲಾದ ಇತರ ಒಂಭತ್ತು ರೂಪಕಗಳಲ್ಲಿ ಸಾಮಾನ್ಯವಾಗಿ ಬಂದರೂ ವೀಥಿ ಎಂಬ ರೂಪಕದಲ್ಲಿ ಅನಿವಾರ್ಯವೆನಿಸಿದೆ. ನಾಟಕಗಳಲ್ಲಿ ಅಗತ್ಯವಿದ್ದರೆಯೇ ಇವು ಬರುತ್ತವೆಯಾದರೂ ವೀಥಿಯಲ್ಲಿ ಮಾತ್ರ ಇವು ಬಂದೇ ಬರಬೇಕೆಂಬ ನಿಯಮವಿದೆ ಪುಷ್ಪಮಾಲಿಕೆಯಲ್ಲಿರುವಂತೆ ಇಲ್ಲಿಯೂ ಅನೇಕ ಬಗೆಯ ರಸಗಳು ಸೇರಿಕೊಂಡಿರುವ ಪ್ರಯುಕ್ತ ಈ ರೂಪಕವು ವೀಥಿ ಎನಿಸಿದೆ. ಮಾಲವಿಕೆ ಎಂಬುದೇ ಈ ಬಗೆಯ ಉಪರೂಪಕವೆನಿಸಿದೆ.

ಅಥ ಪ್ರಹಸನಮ್— ಭಾಣವತ್ಸಂಧಿಸಂಧ್ಯಂಗಲಾಸ್ಯಾಂಗಾಂಕೈರ್ವಿನಿರ್ಮಿತಮ್ ।
ಭವೇತ್ಪ್ರಹಸನಂ ವೃತ್ತಂ ನಿಂದ್ಯಾನಾಂ ಕವಿಕಲ್ಪನಮ್ ॥
ಅತ್ರ ನಾರಭಟೀ ನಾಪಿ ವಿಷ್ಕಂಭಕಪ್ರವೇಶಕೌ ।
ಅಂಗೀ ಹಾಸ್ಯರಸಸ್ತತ್ರ ವೀಥ್ಯಂಗಾನಾಂ ಸ್ಥಿತಿರ್ನವ ॥
ತಪಸ್ವಿಭಗವದ್ವಿಪ್ರಪ್ರಭೃತಿಷ್ವತ್ರ ನಾಯಕಃ ।
ಏಕೋ ಯತ್ರ ಭವೇದ್ಧೃಷ್ಟೋ ಹಾಸ್ಯಂ ತಚ್ಛುದ್ಧಮುಚ್ಯತೆ ॥

ಯಥಾ ಕಂದರ್ಪಕೇಲಿಃ—

ಆಶ್ರಿತ್ಯ ಕಂಚನ ಜನಂ ಸಂಕೀರ್ಣಮಿತಿ ತದ್ವಿದುಃ-ಯಥಾ ಧೂರ್ತಚರಿತಮ್
ವೃತ್ತಂ ಬಹೂನಾಂ ಧೃಷ್ಟಾನಾಂ ಸಂಕೀರ್ಣಂ ಕೇಚಿದೂಚಿರೇ ।
ತತ್ಪುನರ್ಭವತಿ ದ್ವ್ಯಂಕಮಥವೈಕಾಂಕನಿರ್ಮಿತಮ್ ॥

ಯಥಾ ನಟಕಮೇಲಕಾದಿಃ— ಮುನಿಸ್ತ್ವಾಹ—

ವೇಶ್ಯಾಚೇಷ್ಟನಪುಂಸಕವಿಟಧೂರ್ತಾ ಬಂಧಕೀ ಚ ಯತ್ರ ಸ್ಯುಃ ।
ಅವಿಕೃತವೇಶಪರಿಚ್ಛೇದಚೇಷ್ಟಿತಕರಣಂ ತು ಸಂಕೀರ್ಣಮ್ ॥
ವಿಕೃತಂ ತು ವಿದುರ್ಯತ್ರ ಷಂಡಕಂಚುಕಿತಾಪಸಾಃ ।
ಭುಜಂಗಚಾರಣಭಟಪ್ರಭೃತೇರ್ವೇಶವಾಗ್ಯುತಾಃ ॥

ಇದಂ ತು ಸಂಕೀರ್ಣೇನೈವ ಗತಾರ್ಥಮಿತಿ ಮುನಿನಾ ಪೃಥಕ್ ನೋಕ್ತಮ್.

ಅಥೋಪರೂಪಕಾಣಿ. ತತ್ರ ನಾಟಿಕಾ—

ನಾಟಿಕಾ ಕ್ಲಪ್ತವೃತ್ತಾ ಸ್ಯಾತ್ ಸ್ತ್ರೀಪ್ರಾಯಾ ಚತುರಂಕಿಕಾ ।
ಪ್ರಖ್ಯಾತೋ ಧೀರಲಲಿತಸ್ತತ್ರ ಸ್ಯಾನ್ನಾಯಕೋ ನೃಪಃ ॥
ಸ್ಯಾದಂತಃಪುರಸಂಬದ್ಧಾ ಸಂಗೀತವ್ಯಾಪೃತಾಽಥವಾ ।
ನವಾನುರಾಗಾ ಕನ್ಯಾತ್ರ ನಾಯಿಕಾ ನೃಪವಂಶಜಾ ॥
ಸಂಪ್ರವರ್ತೇತ ನೇತಾಽಸ್ಯಾಂ ದೇವ್ಯಾಸ್ತ್ರಾಸೇನ ಶಂಕಿತಃ ।
ದೇವೀ ಪುನರ್ಭವೇಜ್ಜ್ಯೇಷ್ಠಾ ಪ್ರಗಲ್ಭಾ ನೃಪವಂಶಜಾ ॥
ಪದೇಪದೇ ಮಾನವತೀ ತದ್ವಶಃ ಸಂಗಮೋ ದ್ವಯೋಃ ।
ವೃತ್ತಿಃ ಸ್ಯಾತ್ಕೈಶಿಕೀ ಸ್ವಲ್ಪವಿಮರ್ಶಾಃ ಸಂಧಯಃ ಪುನಃ ॥

ದ್ವಯೋರ್ನಾಯಕನಾಯಿಕಯೋಃ. ಯಥಾ ರತ್ನಾವಳೀವಿದ್ಧಶಿಲಭಂಜಿಕಾದಿಃ.

ಅಥ ತ್ರೋಟಕಮ್—ಸಪ್ತಾಷ್ಟನವಪಂಚಾಂಕಂ ದಿವ್ಯಮಾನುಷಸಂಶ್ರಯಮ್ ।
ತ್ರೋಟಕಂ ನಾಮ ತತ್ ಪ್ರಾಹುಃ ಪ್ರತ್ಯಂಕಂ ಸವಿದೂಷಕಮ್ ॥

ಪ್ರತ್ಯಂಕಂ ಸವಿದೂಷಕತ್ವಾದೇವಾತ್ರ ಶೃಂಗಾರೋಽಂಗೀ. ಸಪ್ತಾಂಕಂ ಯಥಾ ಸ್ತಂಭಿತರಂಭಮ್. ಪಂಚಾಂಕಂ ಯಥಾ ವಿಕ್ರಮೋರ್ವಶೀ.

ಅಥ ಗೋಷ್ಠೀ— ಪ್ರಾಕೃತೈರ್ನವಭಿರ್ದಶಭಿರ್ವಾಪ್ಯಲಂಕೃತಾ ।
ನೋದಾತ್ತವಚನಾ ಗೋಷ್ಠೀ ಕೌಶಕೀವೃತ್ತಿಶಾಲಿನೀ ॥
ಹೀನಾ ಗರ್ಭವಿಮರ್ಶಾಭ್ಯಾಂ ಪಂಚಷಡ್ಯೋಷಿದನ್ವಿತಾ ।
ಕಾಮಶೃಂಗಾರಸಂಯುಕ್ತಾ ಸ್ಯಾದೇಕಾಂಕವಿನಿರ್ಮಿತಾ ॥

ಯಥಾ—ರೈವತಮದನಿಕಾ— ಅಥ ಸಟ್ಟಕಮ್—

ಸಟ್ಟಕಂ ಪ್ರಾಕೃತಾಶೇಷಪಾಠ್ಯಂ ಸ್ಯಾದಪ್ರವೇಶಕಮ್ ।
ನ ಚ ವಿಷ್ಕಂಭಕೋಽಪ್ಯತ್ರ ಪ್ರಚುರಶ್ಚಾದ್ಭುತೋ ರಸಃ ॥
ಅಂಕಾ ಜುವನಿಕಾಖ್ಯಾಃ ಸ್ಯುಃ ಸ್ಯಾದನ್ಯನ್ನಾಟಿಕಾಸಮಮ್ ।

ಯಥಾ ಕರ್ಪೂರಮಂಜರೀ. ಅಥ ನಾಟ್ಯರಾಸಕಮ್—

ನಾಟ್ಯರಾಸಕಮೇಕಾಂಕಂ ಬಹುತಾಲಲಯಸ್ಥಿತಿ ।
ಉದಾತ್ತನಾಯಕಂ ತದ್ವತ್ ಪೀಠಮರ್ದೋಪನಾಯಕಮ್ ॥
ಹಾಸ್ಯೋಽಂಗ್ಯತ್ರ ಸಶೃಂಗಾರೋ ನಾರೀ ವಾಸಕಸಜ್ಜಿಕಾ ।

ಮುಖನಿರ್ವಹಣೇ ಸಂಧೀ ಲಾಸ್ಯಾಂಗಾನಿ ದಶಾಪಿ ಚ ॥
ಕೇಚಿತ್ಪ್ರತಿಮುಖಂ ಸಂಧಿಮಿಹ ನೇಚ್ಛಂತಿ ಕೇವಲಮ್ ।

ತತ್ರ ಸಂಧಿದ್ವಯವತೀ ಯಥಾ-ಸರ್ಮವತೀ. ಸಂಧಿಚತುಷ್ಟಯವತೀ ಯಥಾ-ವಿಲಾಸವತೀ— ಅಥ ಪ್ರಸ್ಥಾನಮ್—

ಪ್ರಸ್ಥಾನೇ ನಾಯಕೋ ದಾಸೋ ಹೀನಃ ಸ್ಯಾದುಪನಾಯಕಃ ।
ದಾಸೀ ಚ ನಾಯಿಕಾ ವೃತ್ತಿಃ ಕೌಶಿಕೀ ಭಾರತೀ ತಥಾ ॥
ಸುರಾಪಾನಸಮಾಯೋಗಾತ್ ಉದ್ದಿಷ್ಟಾರ್ಥಸ್ಯ ಸಂಹೃತಿಃ ।
ಅಂಕೌ ದ್ವೌ ಲಯತಾಲಾದಿರ್ವಿಲಾಸೋ ಬಹುಲಸ್ತಥಾ ॥

ಯಥಾ ಶೃಂಗಾರತಿಲಕಮ್. ಅಥೋಲ್ಲಾಪ್ಯಮ್—

ಉದಾತ್ತನಾಯಕಂ ದಿವ್ಯವೃತ್ತಮೇಕಾಂಕಭೂಷಿತಮ್ ।
ಶಿಲ್ಪಕಾಂಗೈರ್ಯುತಂ ಹಾಸ್ಯಶೃಂಗಾರಕರುಣೈ ರಸೈಃ ॥
ಉಲ್ಲಾಪ್ಯಂ ಬಹುಸಂಗ್ರಾಮಂ ಅಸ್ತ್ರಗೀತಮನೋಹರಮ್ ।
ಚತಸ್ರೋ ನಾಯಿಕಾಸ್ತತ್ರ ತ್ರಯೋಽಂಕಾ ಇತಿ ಕೇಚನ ॥

ಶಿಲ್ಪಕಾಂಗಾನಿ ವಕ್ಷ್ಯಮಾಣಾನಿ. ಯಥಾ ದೇವೀಮಹಾದೇವಮ್.

ಅಥ ಕಾವ್ಯಮ್—ಕಾವ್ಯಮಾರಭಟೀಹೀನಮೇಕಾಂಕಂ ಹಾಸ್ಯಸಂಕುಲಮ್ ।
ಖಂಡಮಾತ್ರಾದ್ವಿಪದಿಕಾಭಗ್ನತಾಲೈರಲಂಕೃತಮ್ ॥
ವರ್ಣಮಾತ್ರಾಚ್ಛಡ್ಡಲಿಕಾಯುತಂ ಶೃಂಗಾರಭಾಷಿತಮ್ ।
ನೇತಾ ಸ್ತ್ರೀ ಚಾಪ್ಯುದಾತ್ತಾತ್ರ ಸಂಧೀ ಆದ್ಯೌ ತಥಾಂತಿಮಃ ॥

ಯಥಾ ಯಾದವೋದಯಃ— ಅಥ ಪ್ರೇಂಕಣಮ್—

ಗರ್ಭವಿಮರ್ಶರಹಿತಂ ಪ್ರೇಂಕಣಂ ಹೀನನಾಯಕಮ್ ।
ಅಸೂತ್ರಧಾರಮೇಕಾಂಕಂ ಅವಿಷ್ಕಂಭಪ್ರವೇಶಕಮ್ ॥
ನಿಯುದ್ಧಸಂಪೇಟಯುತಂ ಸರ್ವವೃತ್ತಿಸಮಾಶ್ರಿತಮ್ ।
ನೇಪಥ್ಯೇ ಗೀಯತೇ ನಾಂದೀ ತಥಾ ತತ್ರ ಪ್ರರೋಚನಾ ॥

ಯಥಾ ವಾಲಿವಧಃ.

ಈಗ ಪ್ರಹಸನವೆಂಬ ರೂಪಕವನ್ನು ವಿವರಿಸುತ್ತಾನೆ. ಭಾಣವೆಂಬ ರೂಪಕದಲ್ಲಿರುವಂತೆ ಇಲ್ಲಿಯೂ ಮುಖನಿರ್ವಹಣಸಂಧಿಗಳೂ, ಸಂಧ್ಯಂಗಗಳೂ, ಲಾಸ್ಯಾಂಗಗಳೂ, ಒಂದು ಅಂಕವೂ ಇರುತ್ತವೆ. ನಿಂದಾರ್ಹರಾದ ಜನರ ವೃತ್ತಾಂತವನ್ನು ಇಲ್ಲಿ ಕವಿಯು ಕಲ್ಪಿಸುತ್ತಾನೆ. ಇಂತಹದೇ ಪ್ರಹಸನವೆನಿಸುವುದು. ಇಲ್ಲಿ ಆರಭಟೀವೃತ್ತಿಯಾಗಲೀ ವಿಷ್ಕಂಭಕಪ್ರವೇಶಕಗಳಾಗಲೀ ಇರುವುದಿಲ್ಲ. ಹಾಸ್ಯರಸವೇ ಪ್ರಧಾನವೆನಿಸಿರುತ್ತದೆ. ವೀಥ್ಯಂಗಗಳೂ ಸಹ ಇಲ್ಲಿ ಬರುವುದಿಲ್ಲ. ತಪಸ್ವಿಗಳು, ಕೃಚ್ಛ್ರಚಾಂದ್ರಾಯಣ ಮೊದಲಾದ ವ್ರತಗಳನ್ನಾಚರಿಸುವವರು, ಬ್ರಾಹ್ಮಣರು ಇಂತವರಲ್ಲಿ ಯಾವನಾದರೊಬ್ಬನು ಇಲ್ಲಿ ನಾಯಕನಾಗಿರುವನು. ಇದೂ ಸಹ ಶುದ್ಧ, ಸಂಕೀರ್ಣ, ವಿಕೃತ ಎಂದು

ಮೂರು ಬಗೆಯಾಗಿದೆ. ಎಲ್ಲಿ ಧೃಷ್ಟನಾಯಕನಿದ್ದು ಪ್ರಹಸನವು ಹಾಸ್ಯದಿಂದ ಕೂಡಿರುವುದೋ ಅದು ಶುದ್ಧವೆನಿಸುತ್ತದೆ. ಕಂಪರ್ಪಕೇಲಿ ಎಂಬುದು ಈ ಬಗೆಯ ಪ್ರಹಸನ. ಧೃಷ್ಟನಲ್ಲದೆ ಬೇರೊಬ್ಬನು ನಾಯಕನಾಗಿರುವ ಪ್ರಹಸನವೇ ಸಂಕೀರ್ಣವೆನಿಸುವುದು. ಧೂರ್ತಚರಿತವೇ ಈ ಬಗೆಯ ಪ್ರಹಸನವೆನಿಸಿದೆ. ಅನೇಕ ಧೃಷ್ಟನಾಯಕರ ಉಪಾಖ್ಯಾನವೇ ಸಂಕೀರ್ಣವೆಂಬ ಪ್ರಹಸನವೆನಿಸುವುದೆಂದು ಕೆಲವರು ಹೇಳುತ್ತಾರೆ. ಅಂತಹ ಪ್ರಹಸನದಲ್ಲಿ ಒಂದು ಅಥವಾ ಎರಡು ಅಂಕಗಳಿರುತ್ತವೆ. ನಟಕಮೇಲಕವೇ ಇಂತಹ ಪ್ರಹಸನವೆನಿಸಿದೆ. ಈ ಬಗ್ಗೆ ಭರತಮುನಿಯು 'ವೇಶ್ಯೆ, ಚೇಟರು, ನಪುಂಸಕರು, ವಿಟರು, ಧೂರ್ತರು, ತಲೆ ಹಿಡಿಯುವವರು ಇದ್ದು ಸ್ವಾಭಾವಿಕವಾದ ವೇಶಭೂಷಣಗಳಿಂದಲೂ, ನಡೆನುಡಿಗಳಿಂದಲೂ ಕೂಡಿರುವ ಪ್ರಹಸನವೇ ಸಂಕೀರ್ಣವೆನಿಸುವುದು' ಎಂದು ಹೇಳಿದ್ದಾನೆ. ನಪುಂಸಕರು, ಕಂಚುಕಿಯರು, ತಾಪಸರು, ವಿಟರು, ನಟರು, ಭಟರು, ರಾಜಪುರುಷರು ಇವರ ನಡೆನುಡಿಗಳಿಂದ ಕೂಡಿದ ಪ್ರಹಸನವೇ ವಿಕೃತವೆನಿಸುವುದು. ಇದನ್ನು ಸಂಕೀರ್ಣವೆಂಬ ಪ್ರಹಸನದಲ್ಲಿಯೇ ಸೇರಿಸಬಹುದಾದ್ದರಿಂದ ಭರತನು ಬೇರೆಯಾಗಿ ತಿಳಿಸಿಲ್ಲ.

ದಶರೂಪಕಗಳ ಸ್ವರೂಪವನ್ನು ಈವರಿವಿಗೂ ತಿಳಿಸಿ ಇನ್ನು ಮುಂದೆ ಉಪರೂಪಕಗಳನ್ನು ತಿಳಿಸುತ್ತಾನೆ. ಅವುಗಳಲ್ಲಿ ಮೊದಲನೆಯದಾದ ನಾಟಿಕೆಯ ಸ್ವರೂಪವನ್ನು ಈಗ ತಿಳಿಸುತ್ತಾನೆ. ಇದರಲ್ಲಿ ಕವಿಯೇ ಕಲ್ಪಿಸಿದ ಇತಿವೃತ್ತವಿರುವುದು. ಇಲ್ಲಿ ನಾಲ್ಕು ಅಂಕಗಳಿದ್ದು ಸ್ತ್ರೀಯರೇ ಹೆಚ್ಚಾಗಿ ಭಾಗವಹಿಸುವರು ; ಧೀರಲಲಿತನೆಂಬ ಪ್ರಸಿದ್ಧ ನಾಯಕನಿರುವನು. ಅವನು ಒಂದು ದೇಶದ ರಾಜನಾಗಿರಬೇಕು. ರಾಜವಂಶದ ಕನ್ಯೆಯೇ ನಾಯಿಕೆಯಾಗಿರಬೇಕು. ಆಕೆಯಲ್ಲಿ ನಾಯಕನ ಮೇಲೆ ಹೆಚ್ಚು ಅನುರಾಗವಿರಬೇಕು. ಆಕೆಯು ಅಂತಃಪುರದ ಸಂಬಂಧವನ್ನು ಹೊಂದಿರಬೇಕು. ಇಲ್ಲವೇ ಸಂಗೀತದ ಪರಿಚಯವುಳ್ಳವಳಾಗಿರಬೇಕು. ನಾಯಕನು ಈಕೆಯನ್ನು ಪ್ರೀತಿಸುತ್ತಿರಬೇಕು. ಆದರೆ ಅವನಿಗೆ ಪಟ್ಟಮಹಿಷಿಯ ಭಯದ ಶಂಕೆಯಿರಬೇಕು. ಪಟ್ಟಮಹಿಷಿಯಾದರೋ ವಯಸ್ಸಿನಲ್ಲಿ ಹಿರಿಯಳೂ ಪ್ರೌಢಳೂ ರಾಜವಂಶದಲ್ಲಿ ಹುಟ್ಟಿದವಳೂ ಆಗಿರಬೇಕು. ಅವಳಿಗೆ ಆಗಾಗ್ಗೆ ಪ್ರಣಯಕೋಪವು ಬರುತ್ತಿರಬೇಕು. ನಾಯಕನಾಯಿಕೆಯರ ಸಮಾಗಮವು ಆಕೆಗೆ ಅಧೀನವಾಗಿರಬೇಕು. ಕೌಶಿಕೀವೃತ್ತಿಯಿದ್ದು ವಿಮರ್ಷಸಂಧಿಯ ಸ್ವಲ್ಪಭಾಗವಿದ್ದು ಉಳಿದ ಸಂಧಿಗಳು ಹೆಚ್ಚಾಗಿ ಸೇರಿರಬೇಕು. ರತ್ನಾವಳೀ, ವಿದ್ಧಶಾಲಂಜಿಕೆ ಮೊದಲಾದವು ಈ ಬಗೆಯ ನಾಟಿಕೆಗಳು.

ಈಗ ತ್ರೋಟಕವೆಂಬ ಉಪರೂಪಕದ ಲಕ್ಷಣವನ್ನು ತಿಳಿಸುತ್ತಾನೆ. ಇದರಲ್ಲಿ ಏಳು, ಎಂಟು, ಒಂಭತ್ತು ಅಥವಾ ಐದು ಅಂಕಗಳಿರುತ್ತವೆ. ದೇವಮಾನುಷರಿಬ್ಬರ ಚರಿತ್ರೆಗಳಿಂದಲೂ ಕೂಡಿದ್ದು ಪ್ರತಿಯೊಂದು ಅಂಕದಲ್ಲೂ ವಿದೂಷಕನಿರುವನು. ತನ್ನ ಉತ್ಕರ್ಷದಿಂದ ಬೇರೆ ರೂಪಕಗಳನ್ನು ಕೀಳುಮಾಡುವುದರಿಂದ ಇದನ್ನು ತ್ರೋಟಕ

ವೆಂದು ಕರೆಯಲಾಗಿದೆ. ಸ್ತಂಭಿತರಂಭೆವೆಂಬುದು ಏಳು ಅಂಕಗಳಿರುವ ತ್ರೋಟಕವೆನಿಸಿದೆ. ವಿಕ್ರಮೋರ್ವಶೀಯವು ಐದು ಅಂಕಗಳಿರುವ ತ್ರೋಟಕವೆನಿಸಿದೆ.

ಈಗ ಗೋಷ್ಠಿ ಎಂಬ ಉಪರೂಪಕದ ಲಕ್ಷಣವನ್ನು ತಿಳಿಸುತ್ತಾನೆ. ಸಾಮಾನ್ಯವಾದ ಶಿಕ್ಷಣವನ್ನು ಪಡೆದಿರುವ ಒಂಭತ್ತು ಅಥವಾ ಹತ್ತುಮಂದಿ ಗಂಡಸರು ಇದರಲ್ಲಿ ಭಾಗವಹಿಸುವರು. ಇವರಲ್ಲಿ ಉದಾತ್ತವಾದ ನಡೆನುಡಿಗಳಿರುವುದಿಲ್ಲ. ಕೌಶಿಕೀ ವೃತ್ತಿಯಿಂದ ಕೂಡಿ ಗರ್ಭವಿಮರ್ಶಸಂಧಿಗಳಿಲ್ಲದೆ ಐದು ಆರು ಜನ ಹೆಂಗಸರಿದ್ದು ಅವರು ಕಾಮಶೃಂಗಾರದಲ್ಲಿ ತೊಡಗಿರಬೇಕು. ಒಂದೇ ಅಂಕದಲ್ಲಿ ಕತೆಯು ಮುಗಿಯಬೇಕು. ಇಂತಹ ಉಪರೂಪಕವೇ ಗೋಷ್ಠಿ ಎನಿಸುವುದು. ರೈವತಮದನಿಕೆ ಎಂಬುದೇ ಈ ಬಗೆಯ ಉಪರೂಪಕವೆನಿಸಿದೆ. ಇನ್ನು ಸಟ್ಟಕವೆಂಬ ಉಪರೂಪಕವನ್ನು ವಿವರಿಸುತ್ತಾನೆ. ಇದರಲ್ಲಿ ಪ್ರಯೋಗಿಸುದ ವಾಕ್ಯಗಳು ಪೂರ್ತಿಯಾಗಿ ಪ್ರಾಕೃತಭಾಷೆಯಲ್ಲಿಯೇ ಇರಬೇಕು. ಇಲ್ಲಿ ಪ್ರವೇಶಕ ವಿಷ್ಕಂಭಕಗಳು ಇರುವುದಿಲ್ಲ. ಅದ್ಭುತರಸವೇ ವಿಶೇಷವಾಗಿ ವಿಕಾಸಗೊಂಡಿರುವುದು. ಇಲ್ಲಿ ಅಂಕಗಳಿಗೆಯವನಿಕೆ ಎಂಬ ಶಬ್ದವನ್ನು ಉಪಯೋಗಿಸಲಾಗುವುನು. ಇದಿಷ್ಟನ್ನು ಬಿಟ್ಟರೆ ಉಳಿದ ಅಂಶಗಳೆಲ್ಲವೂ ನಾಟಕೆಯಲ್ಲಿ ಇರುವಂತೆಯೇ ಇರುವುವು. ಕರ್ಪೂರಮಂಜರಿಯೇ ಈ ಬಗೆಯ ಸಟ್ಟಕವೆನಿಸಿದೆ.

ಮುಂದೆ ನಾಟ್ಯರಾಸಕವೆಂಬ ಉಪರೂಪಕವನ್ನು ವಿವರಿಸುತ್ತಾನೆ. ಇದರಲ್ಲಿ ಒಂದೇ ಅಂಕವಿರುತ್ತದೆ. ಅನೇಕ ಬಗೆಯ ತಾಳಲಯಗಳು ಇಲ್ಲಿ ಸೇರಿರುತ್ತವೆ. ಧೀರೋದಾತ್ತನಾಯಕನೂ, ಪೀಠಮರ್ದನೆಂಬ ಉಪನಾಯಕನೂ ಇರುವರು. ಶೃಂಗಾರದೊಡಗೂಡಿದ ಹಾಸ್ಯವೇ ಇಲ್ಲಿ ಪ್ರಧಾನವೆನಿಸಿರುವುದು. ವಾಸಕಸಜ್ಜಿಕೆ ಎನಿಸಿದ ಹೆಂಗಸೇ ಇಲ್ಲಿ ನಾಯಿಕೆಯಾಗಿರುವಳು. ಮುಖನಿರ್ವಹಣಸಂಧಿಗಳೂ, ಹತ್ತು ಲಾಸ್ಯಾಂಗಗಳೂ ಸೇರಿರುತ್ತವೆ. ಪ್ರತಿಮುಖಸಂಧಿಯೊಂದನ್ನು ಬಟ್ಟು ಉಳಿದ ಸಂಧಿಗಳು ಇಲ್ಲಿ ಸೇರಿರುವುದಾಗಿ ಕೆಲವರು ಹೇಳುತ್ತಾರೆ. ಎರಡು ಸಂಧಿಗಳಿರುವಂತಹುದು ನರ್ಮವತಿ ಎಂಬುದು. ನಾಲ್ಕುಸಂಧಿಗಳಿರುವಂತಹುದು ವಿಲಾಸವತಿ ಎಂಬುದು.

ಪ್ರಸ್ಥಾನವೆಂಬ ಉಪರೂಪಕದ ಲಕ್ಷಣವನ್ನು ತಿಳಿಸುತ್ತಾನೆ. ರಸವು ವಿಶೇಷವಾಗಿ ಪ್ರಕಾಶಿಸುವುದರಿಂದ ಸಹೃದಯರ ಮನಸ್ಸಿಗೆ ಬೇಗನೆ ಪ್ರವೇಶಿಸಬಹುದಾದ್ದರಿಂದ ಇದು ಪ್ರಸ್ಥಾನವೆನಿಸಿದೆ. ಇದರಲ್ಲಿ ದಾಸನೇ ನಾಯಕನಾಗಿದ್ದು ಅವನಿಗಿಂತಲೂ ನಿಕೃಷ್ಟವಾದ ಜಾತಿಯಲ್ಲಿ ಹುಟ್ಟಿದವನು ಉಪನಾಯಕನಾಗಿರುವನು. ದಾಸಿಯೇ ನಾಯಿಕೆಯಾಗಿರುವಳು. ಕೌಶಿಕೀಭಾರತೀವೃತ್ತಿಗಳನ್ನು ಇಲ್ಲಿ ಪ್ರಯೋಗಿಸಲಾಗುವುದು. ಮದ್ಯಪಾನದ ಸಂಬಂಧದಿಂದ ಕವಿಯು ಕತೆಯನ್ನು ಕೊನೆಗಾಣಿಸುವನು. ಇದರಲ್ಲಿ ಎರಡು ಅಂಕಗಳಿರುತ್ತವೆ. ಲಯ ತಾಳ ಮೊದಲಾದ ವಿಲಾಸಗಳು ಹೇರಳವಾಗಿ ಬರುತ್ತವೆ. ಶೃಂಗಾರತಿಲಕವೆಂಬುದೇ ಈ ಬಗೆಯ ಪ್ರಸ್ಥಾನವೆನಿಸಿದೆ.

ಈಗ ಉಲ್ಲಾಪ್ಯವೆಂಬ ಉಪರೂಪಕದ ಲಕ್ಷಣವನ್ನು ತಿಳಿಸುತ್ತಾನೆ. ಧೀರೋದಾತ್ತನಾಯಕನಿದ್ದು ಸ್ವರ್ಗೀಯ ಉಪಾಖ್ಯಾನವೇ ಇಲ್ಲಿ ಕಥೆಯ ವಸ್ತುವೆನಿಸಿರುತ್ತದೆ.

ಇದರಲ್ಲಿ ಒಂದೇ ಅಂಕವಿರುತ್ತದೆ. ಆಶಂಸೆಯೇ ಮೊದಲಾದ ಶಿಲ್ಪಕಾಂಗಗಳಿಂದ ಕೂಡಿ ಹಾಸ್ಯ ಶೃಂಗಾರ ಕರುಣರಸಗಳಿಂದ ಇದು ಶೋಭಿಸುತ್ತದೆ. ಇಲ್ಲಿ ಅನೇಕಬಗೆಯ ಯುದ್ಧಗಳನ್ನು ಅಭಿನಯಿಸಬೇಕು. ತೆರೆಯ ಹಿಂದೆ ಹಾಡುವ ಗೀತೆಗಳು ಹೆಚ್ಚಾಗಿರಬೇಕು. ನಾಲ್ವರು ನಾಯಿಕೆಯರು ಇರಬೇಕು. ಮೂರು ಅಂಕಗಳಿರಬೇಕೆಂದು ಕೆಲವರು ಹೇಳಿದ್ದಾರೆ. ಶಿಲ್ಪಕಾಂಗಗಳನ್ನು ಮುಂದೆ ತಿಳಿಸಲಾಗುವುದು. ದೇವೀಮಹಾದೇವ ಎಂಬುದೇ ಈ ಬಗೆಯ ಉಲ್ಲಾಪ್ಯವೆನಿಸಿದೆ.

ಮುಂದೆ ಕಾವ್ಯವೆಂಬ ಉಪರೂಪಕವನ್ನು ತಿಳಿಸುತ್ತಾನೆ. ಆರಭಟೀವೃತ್ತಿಯನ್ನು ಬಿಟ್ಟು ಬೇರೆ ವೃತ್ತಿಗಳಿಂದ ಕೂಡಿ ಒಂದೇ ಅಂಕದಲ್ಲಿ ಹಾಸ್ಯದಿಂದ ತುಂಬಿರುವ ಉಪರೂಪಕವೇ ಕಾವ್ಯವೆನಿಸುವುದು. ಖಂಡಮಾತ್ರೆ, ದ್ವಿಪದಿಕೆ, ಭಗ್ನತಾಳ ಎಂಬ ಗೀತಗಳಿಂದ ಇದು ಅಲಂಕೃತವಾಗಿರುವುದು. ವರ್ಣಮಾತ್ರೆ, ಛಡ್ಡಲಿಕೆ ಎಂಬ ಛಂದಸ್ಸಿನಿಂದ ಪದ್ಯಗಳ ರಚನೆಯಾಗಿರಬೇಕು. ನಾಯಕನಾಯಿಕೆಯರು ಉದಾತ್ತವರ್ತನೆಯುಳ್ಳವರಾಗಿರಬೇಕು. ಅವರ ಪ್ರಣಯಕತೆಯೇ ಇಲ್ಲಿ ವಸ್ತುವಾಗಿರಬೇಕು. ಪ್ರತಿಮುಖನಿರ್ವಹಣಸಂಧಿಗಳು ಮಾತ್ರವೇ ಇಲ್ಲಿ ಸೇರಿರಬೇಕು. ಯಾದವೋದಯವೇ ಈ ಬಗೆಯ ಉಪರೂಪಕವೆನಿಸಿದೆ. ಇವನ್ನು ಕಾವ್ಯವೆಂದು ಕರೆದಿದ್ದರೂ ಶ್ರವ್ಯಕಾವ್ಯವೆನಿಸದೆ ಇದು ದೃಶ್ಯರೂಪಕದ ಒಂದು ಬಗೆ ಎನಿಸಿದೆ.

ಇನ್ನು ಪ್ರೇಂಖಣವೆಂಬ ಉಪರೂಪಕದ ಸ್ವರೂಪವನ್ನು ತಿಳಿಸುತ್ತಾನೆ. ಗರ್ಭ ಮತ್ತು ವಿಮರ್ಶಸಂಧಿಗಳನ್ನು ಬಿಟ್ಟು ಉಳಿದ ಸಂಧಿಗಳಿಂದ ಕೂಡಿ, ಹೀನಸ್ವಭಾವದ ನಾಯಕನಿದ್ದು ಸೂತ್ರಧಾರನಿಲ್ಲದೆ ವಿಷ್ಕಂಭಕ ಪ್ರವೇಶಕಗಳಿಲ್ಲದೆ ಒಂದೇ ಅಂಕದಲ್ಲಿ ಬಾಹುಯುದ್ಧದಿಂದಲೂ ಸಿಟ್ಟಿನ ಮಾತಿನಿಂದಲೂ ಕತೆಯು ಮುಂದುವರಿಯುತ್ತದೆ. ಕೌಶಿಕೀ ಮೊದಲಾದ ನಾಲ್ಕು ವೃತ್ತಿಗಳಿಗೂ ಇಲ್ಲಿ ಅವಕಾಶವಿದೆ. ರಸಾನುಭವದ ಆನಂದದಿಂದ ಸಹೃದಯರ ಮನಸ್ಸನ್ನು ಸೂರೆಗೊಳ್ಳುವ ಪ್ರಯುಕ್ತ ಇದಕ್ಕೆ ಪ್ರೇಂಖಣವೆಂಬ ಹೆಸರಿದೆ. ಸೂತ್ರಧಾರನಿಲ್ಲದ್ದರಿಂದ ನಾಂದೀಪದ್ಯವನ್ನೂ ಪ್ರರೋಚನೆಯನ್ನೂ ತೆರೆಯ ಹಿಂದೆ ಹೇಳಲಾಗುವುದು. ವಾಲಿವಧವೇ– ಈ ಬಗೆಯ ಉಪರೂಪಕವೆನಿಸಿದೆ.

ಅಥ ರಾಸಕಮ್—ರಾಸಕಂ ಪಂಚಪಾತ್ರಂ ಸ್ಯಾನ್ಮುಖನಿರ್ವಹಣಾನ್ವಿತಮ್ ।
ಭಾಷಾವಿಭಾಷಾಭೂಯಿಷ್ಠಂ ಭಾರತೀಕೌಶಿಕೀಯುತಮ್ ॥
ಅಸೂತ್ರಧಾರಮೇಕಾಂಕಂ ಸವೀಥ್ಯಂಕಂ ಕಲಾನ್ವಿತಮ್ ।
ಶ್ಲಿಷ್ಟನಾಂದೀಯುತಂ ಖ್ಯಾತನಾಯಿಕಂ ಮೂರ್ಖನಾಯಕಮ್ ॥
ಉದಾತ್ತಭಾವವಿನ್ಯಾಸಸಂಶ್ರಿತಂ ಚೋತ್ತರೋತ್ತರಮ್ ॥
ಇಹ ಪ್ರತಿಮುಖಂ ಸಂಧಿಮಪಿ ಕೇಚಿತ್ಪ್ರಚಕ್ಷತೇ ॥

ಯಥಾ ಮೇನಕಾಹಿತಮ್

ಅಥ ಸಂಲಾಪಕಮ್—

ಸಂಲಾಪಕೇಽಂಕಾಶ್ಚತ್ವಾರಃ ತ್ರಯೋ ವಾ ನಾಯಕಃ ಪುನಃ ।

ಪಾಷಂಡಃ ಸ್ಯಾದ್ರಸಸ್ತತ್ರ ಶೃಂಗಾರಕರುಣೇತರಃ ॥
ಭವೇಯುಃ ಪುರಸಂರೋಧಚ್ಛಲಸಂಗ್ರಾಮವಿದ್ರವಾಃ ।
ನ ತತ್ರ ವೃತ್ತಿರ್ಭವತಿ ಭಾರತೀ ನ ಚ ಕೌಶಿಕೀ ॥

ಯಥಾ ಮಾಯಾಕಾಪಾಲಿಕಮ್. ಅಥ ಶ್ರೀಗದಿತಮ್—

ಪ್ರಖ್ಯಾತವೃತ್ತಮೇಕಾಂಕಂ ಪ್ರಖ್ಯಾತೋದಾತ್ತನಾಯಕಮ್ ।
ಪ್ರಸಿದ್ಧನಾಯಿಕಂ ಗರ್ಭವಿಮರ್ಷಾಭ್ಯಾಂ ವಿವರ್ಜಿತಮ್ ॥
ಭಾರತೀವೃತ್ತಿಬಹುಳಂ ಶ್ರೀತಿಶಬ್ದೇನ ಸಂಕುಲಮ್ ।
ಮತಂ ಶ್ರೀಗದಿತಂ ನಾಮ ವಿದ್ವದ್ಭಿರೂಪರುಪಕಮ್ ॥

ಯಥಾ ಕ್ರೀಡಾರಸಾತಲಮ್.

ಶ್ರೀರಾಸೀನಾ ಶ್ರೀಗದಿತೇ ಗಾಯೇತ್ಕಿಂಚಿತ್ಪಠೇದಪಿ ।
ಏಕಾಂಕೋ ಭಾರತೀಪ್ರಾಯಃ ಇತಿ ಕೇಚಿತ್ಪ್ರಚಕ್ಷತೇ ॥

ಊಹ್ಯಮುದಾಹರಣಮ್. ಅಥ ಶಿಲ್ಪಕಮ್—

ಚತ್ವಾರಃ ಶಿಲ್ಪಕೇಽಂಕಾಃ ಸ್ಯುಶ್ಚತಸ್ರೋ ವೃತ್ತಯಸ್ತಥಾ ।
ಅಶಾಂತಹಾಸ್ಯಾಶ್ಚ ರಸಾಃ ನಾಯಕೋ ಬ್ರಾಹ್ಮಣೋ ಮತಃ ॥
ವರ್ಣನಾತ್ರ ಶ್ಮಶಾನಾದೇರ್ಹೀನಃ ಸ್ಯಾದುಪನಾಯಕಃ ।
ಸಪ್ತವಿಂಶತಿರಂಗಾನಿ ಭವಂತ್ಯೇತಸ್ಯ ತಾನಿ ತು ॥
ಆಶಂಸಾತರ್ಕಸಂದೇಹತಾಪೋದ್ವೇಗಪ್ರಸಕ್ತಯಃ ।
ಪ್ರಯತ್ನಗ್ರಥನೋತ್ಕಂಠಾವಹಿತ್ಥಾಪ್ರತಿಪತ್ತಯಃ ॥
ವಿಲಾಸಾಲಸ್ಯಬಾಷ್ಪಾಣಿ ಪ್ರಹರ್ಷಾಶ್ವಾಸಮೂಢತಾಃ ।
ಸಾಧನಾನುಗಮಾಚ್ಛ್ವಾಸವಿಸ್ಮಯಪ್ರಾಪ್ತಯಸ್ತಥಾ ।
ಲಾಭವಿಸ್ಮೃತಿಸಂಪೇಟಾ ವೈಶಾರದ್ಯಂ ಪ್ರಬೋಧನಮ್ ॥
ಚಮತ್ಕೃತಿಶ್ಚೇತ್ಯಮೀಷಾಂ ಸ್ಪಷ್ಟತ್ವಾಲ್ಲಕ್ಷ್ಮ ನೋಚ್ಯತೇ ।

ಸಂಫೇಟಗ್ರಥನಯೋಃ ಪೂರ್ವಮುಕ್ತತ್ವಾದೇವ ಲಕ್ಷ್ಮ ಸಿದ್ಧಮ್. ಯಥಾ—
ಕನಕಾವತೀಮಾಧವಃ. ಅಥ ವಿಲಾಸಿಕಾ—

ಶೃಂಗಾರಬಹುಲೈಕಾಂಕಾ ದಶಲಾಸ್ಯಾಂಗಸಂಯುತಾ ।
ವಿದೂಷಕವಿಟಾಭ್ಯಾಂ ಚ ಪೀಠಮರ್ದೇನ ಭೂಷಿತಾ ।
ಹೀನಾ ಗರ್ಭವಿಮರ್ಷಾಭ್ಯಾಂ ಸಂಧಿಭ್ಯಾಂ ಹೀನನಾಯಿಕಾ ।
ಸ್ವಲ್ಪವೃತ್ತಾ ಸುನೇಪಥ್ಯಾ ವಿಖ್ಯಾತಾ ಸಾ ವಿಲಾಸಿಕಾ ।

ಕೇಚಿತ್ತತ್ರ ವಿಲಾಸಿಕಾಸ್ಥಾನೇ ವಿನಾಯಿಕೇತಿ ಪಠಂತಿ. "ತಸ್ಯಾಸ್ತು ದುರ್ಮಲ್ಲಿಕಾಯಾಮಂತರ್ಭಾವಃ" ಇತ್ಯನ್ಯೇ. ಅಥ ದುರ್ಮಲ್ಲಿಕಾ—

ದುರ್ಮಲ್ಲೀ ಚತುರಂಕಾ ಸ್ಯಾತ್ಕೌಶಿಕೀ ಭಾರತೀ ತಥಾ ।
ಅಗರ್ಭಾ ನಾಗರನರಾ ನ್ಯೂನನಾಯಕಭೂಷಿತಾ ॥

ತ್ರಿನಾಳಿಃ ಪ್ರಥಮೋಽಂಕೋಽಸ್ಯಾಂ ವಿಟಕ್ರೀಡಾಮಯೋ ಭವೇತ್ ।
ಪಂಚನಾಲಿರ್ದ್ವಿತೀಯೋಽಂಕೋ ವಿದೂಷಕವಿಲಾಸವಾನ್ ॥
ಷಣ್ಣಾಲಿಕಸ್ತೃತೀಯಸ್ತು ಪೀಠಮರ್ದವಿಲಾಸವಾನ್ ।
ಚತುರ್ಥೋ ದಶನಾಲಿಃ ಸ್ಯಾತ್ ಅಂಕಃ ಕ್ರೀಡಿತನಾಯಕಃ ॥

ಯಥಾ ಬಿಂದುಮತೀ— ಅಥ ಪ್ರಕರಣಿಕಾ—

ನಾಟಿಕೈವ ಪ್ರಕರಣೀ ಸಾರ್ಥವಾಹಾದಿನಾಯಕಾ ।
ಸಮಾನವಂಶಜಾ ನೇತುರ್ಭವೇದ್ಯತ್ರ ಚ ನಾಯಿಕಾ ॥

ಮೃಗ್ಯಮುದಾಹರಣಮ್. ಅಥ ಹಲ್ಲೀಶಃ—

ಹಲ್ಲೀಶ ಏಕ ಏವಾಂಕಃ ಸಪ್ತಾಷ್ಟೌ ದಶ ವಾ ಸ್ತ್ರಿಯಃ ।
ವಾಗುದಾತ್ತೈಕಪುರುಷಃ ಕೌಶಿಕೀವೃತ್ತಿರುಜ್ಜ್ವಲಾ ॥
ಮುಖಾಂತಿಮೌ ತಥಾ ಸಂಧೀ ಬಹುಕಾಲಲಯಸ್ಥಿತಿಃ ।

ಯಥಾ ಕೇಲಿರೈವತಕಮ್. ಅಥ ಭಾಣಿಕಾ—

ಭಾಣಿಕಾ ಶ್ಲಕ್ಷ್ಣನೇಪಥ್ಯಾ ಮುಖನಿರ್ವಹಣಾನ್ವಿತಾ ।
ಕೌಶಿಕೀಭಾರತೀವೃತ್ತಿಯುಕ್ತೈಕಾಂಕವಿನಿರ್ಮಿತಾ ॥
ಉದಾತ್ತನಾಯಿಕಾ ಮಂದಪುರುಷಾತ್ರಾಂಕಸಪ್ತಕಮ್ ।
ಉಪನ್ಯಾಸೋಽಥ ವಿನ್ಯಾಸೋ ವಿಬೋಧಃ ಸಾಧ್ವಸಂತಥಾ ॥
ಸಮರ್ಪಣಂ ನಿವೃತ್ತಿಶ್ಚ ಸಂಹಾರ ಇತಿ ಸಪ್ತಮಃ ।
ಉಪನ್ಯಾಸಃ ಪ್ರಸಂಗೇನ ಭವೇತ್ಕಾರ್ಯಸ್ಯ ಕೀರ್ತನಮ್ ॥
ನಿರ್ವೇದವಾಕ್ಯವ್ಯುತ್ಪತ್ತಿರ್ವಿನ್ಯಾಸ ಇತಿ ಸಂಸ್ಮೃತಃ ।
ಭ್ರಾಂತಿನಾಶೋ ವಿಬೋಧಃ ಸ್ಯಾತ್ ಮಿಥ್ಯಾಖ್ಯಾನಂ ತು ಸಾಧ್ವಸಮ್
ಸೋಪಾಲಂಭವಚಃ ಕೋಪಪೀಡಯೇಹ ಸಮರ್ಪಣಮ್ ॥
ನಿದರ್ಶನಸ್ಯೋಪನ್ಯಾಸೋ ನಿವೃತ್ತಿರಿತಿ ಕಥ್ಯತೇ ।
ಸಂಹಾರ ಇತಿ ಚ ಪ್ರಾಹುರ್ಯತ್ಕಾರ್ಯಸ್ಯ ಸಮಾಪನಮ್ ॥

ಸ್ಪಷ್ಟಾನ್ಯುದಾಹರಣಾನಿ. ಯಥಾ ಕಾಮದತ್ತಾ—

ಏತೇಷಾಂ ಸರ್ವೇಷಾಂ ನಾಟಕಪ್ರಕೃತಿಕತ್ವೇಽಪಿ ಯಥೌಚಿತ್ಯಂ ಯಥಾ ಲಾಭಂ ನಾಟಕೋಕ್ತವಿಶೇಷಪರಿಗ್ರಹಃ. ಯತ್ರ ಚ ನಾಟಕೋಕ್ತಸ್ಯಾಪಿ ಪುನರುಪಾದಾನಂ ತತ್ರ ತತ್ಸದ್ಭಾವಸ್ಯ ನಿಯಮಃ.

ಈಗ ರಾಸಕವೆಂಬ ಉಪರೂಪಕದ ಲಕ್ಷಣವನ್ನು ತಿಳಿಸುತ್ತಾನೆ. ಇದರಲ್ಲಿ ಐದು ಪಾತ್ರಗಳು ಮಾತ್ರವೇ ಭಾಗವಹಿಸುತ್ತಾರೆ. ಮುಖನಿರ್ವಹಣಸಂಧಿಗಳೂ ಭಾರತೀ ಕೌಶಿಕೀ ವೃತ್ತಿ ಗಳೂ ಸೇರಿರುತ್ತವೆ. ಸಂಸ್ಕೃತಪ್ರಾಕೃತಭಾಷೆಗಳು ವಿಶೇಷವಾಗಿರುತ್ತವೆ. ಸೂತ್ರಧಾರನಿಲ್ಲದೆ ಒಂದೇ ಅಂಕದಲ್ಲಿ ಇದು ವೀಥ್ಯಂಗಗಳೊಡನೆಯೂ ನೃತ್ಯಗೀತಾದಿ ಕಲೆಗಳೊಡನೆಯೂ ಕೂಡಿಕೊಂಡಿರುವುದು. ಸಾಂಧೀಷಸ್ಯವು ಎತಹು ಅರ್ಥಗಳನ್ನು

ಕೊಡುವಂತಹದಿರುತ್ತದೆ. ಪ್ರಸಿದ್ಧನಾದ ನಾಯಿಕೆಯೂ ಮೂರ್ಖನಾದ ನಾಯಕನೂ ಇರುವರು. ಕತೆಯು ಮುಂದುವರಿದಂತೆ ನಾಯಿಕೆ ಉದಾತ್ತವರ್ತದೆಯನ್ನು ತೋರಿಸಬೇಕು. 'ಇದರಲ್ಲಿ ಪ್ರತಿಮುಖಸಂಧಿಯೂ ಬರುತ್ತದೆ' ಎಂದು ಕೆಲವರು ಹೇಳುತ್ತಾರೆ. ತನಗೆ ಸೂಕ್ತವಾಗಿ ಬೋಧಿಸಿ ಉದ್ಧರಿಸಬಲ್ಲದಾದ್ದರಿಂದ ಇಂತಹ ರೂಪಕವು ರಾಸಕವೆನಿಸಿದೆ. ಮೇನಕಾಹಿತವೆಂಬುದು ಈ ಬಗೆಯ ರೂಪಕವೆನಿಸಿದೆ.

ಮುಂದೆ ಸಂಲಾಪಕವೆಂಬ ಉಪರೂಪಕದ ಲಕ್ಷಣವನ್ನು ತಿಳಿಸುತ್ತಾನೆ. ಇದರಲ್ಲಿ ನಾಲ್ಕು ಅಥವಾ ಮೂರು ಅಂಕಗಳಿರುತ್ತವೆ. ನಾಯಕನು ಮಾತ್ರ ಪಾಷಂಡನೆನಿಸಿರುವನು. ಶೃಂಗಾರಕರುಣಗಳೆರಡನ್ನು ಬಿಟ್ಟು ಉಳಿದ ರಸಗಳಿರುತ್ತವೆ. ನಗರವನ್ನು ಮುತ್ತಿಗೆ ಹಾಕುವುದು, ಪರಹಿತವಾಗಿರುವಂತೆ ತೋರುವ ಅಹಿತವಾದ ವಾಕ್ಯಗಳಿಂದ ವಂಚಿಸುವುದು, ಯುದ್ಧ, ಸಂಭ್ರಮ ಇಂತಹವುಗಳು ಅಲ್ಲಿ ವಿಶೇಷವಾಗಿ ಬರಬೇಕು. ಭಾರತೀ ಕೌಶಿಕೀವೃತ್ತಿಗಳನ್ನು ಅಲ್ಲಿ ಪ್ರಯೋಗಿಸಬಾರದು. ಈ ಬಗೆಯ ಲಕ್ಷಣದಿಂದ ಕೂಡಿದ್ದು ಸಂಲಾಪಕವೆನಿಸುವುದು. ಮಾಯಾಕಾಪಾಲಿಕವೆಂಬುದು ಈ ಬಗೆಯ ಉಪರೂಪಕವೆನಿಸಿದೆ.

ಮುಂದೆ ಶ್ರೀಗದಿತವೆಂಬ ಉಪರೂಪಕದ ಸ್ವರೂಪವನ್ನು ತಿಳಿಸುತ್ತಾನೆ. ಇದರಲ್ಲಿ ಲೋಕಪ್ರಸಿದ್ಧವಾದ ಇತಿವೃತ್ತವಿರಬೇಕು, ಒಂದೇ ಅಂಕವಿರಬೇಕು ; ಪ್ರಸಿದ್ಧನಾದ ಧೀರೋದಾತ್ತನಾಯಕನಿರಬೇಕು. ಪ್ರಸಿದ್ಧಳಾದ ನಾಯಿಕೆ ಇರಬೇಕು. ಗರ್ಭ ಮತ್ತು ವಿಮರ್ಷಸಂಧಿಗಳನ್ನು ಬಟ್ಟು ಇತರ ಸಂಧಿಗಳಿರಬೇಕು. ಭಾರತೀವೃತ್ತಿಯನ್ನೇ ವಿಶೇಷವಾಗಿ ಪ್ರಯೋಗಿಸಿರಬೇಕು. ಶ್ರೀ ಎಂಬ ಶಬ್ದವನ್ನು ಇಲ್ಲಿ ಪ್ರಯೋಗಿಸಿರಬೇಕು. ಇಂತಹ ಉಪರೂಪಕವನ್ನು ಶ್ರೀಗದಿತವೆಂದು ವಿದ್ವಾಂಸರು ಕರೆಯುತ್ತಾರೆ. ಕ್ರೀಡಾರಸಾತಲವೆಂಬುದು ಈ ಬಗೆಯ ಉಪರೂಪಕವೆನಿಸಿದೆ. "ಶ್ರೀಗದಿತವೆಂಬ ಈ ಉಪರೂಪಕದಲ್ಲಿ ಲಕ್ಷ್ಮಿಯ ಪಾತ್ರವನ್ನು ಅಭಿನಯಿಸುವ ಚೇಟಿಯು ಕುಳಿತುಕೊಂಡೇ ಕೊಂಚ ಕೊಂಚವಾಗಿ ಆಡಬೇಕು ಮತ್ತು ಹಾಡಬೇಕು. ಒಂದೇ ಅಂಕವಿರಬೇಕು. ಭಾರತೀವೃತ್ತಿಯನ್ನೇ ಇಲ್ಲಿ ಸಾಮಾನ್ಯವಾಗಿ ಪ್ರಯೋಗಿಸಿರಬೇಕು.'' ಹೀಗೆ ಕೆಲವರು ಇದರ ಲಕ್ಷಣವನ್ನು ಹೇಳಿದ್ದಾರೆ.

ಈಗ ಶಿಲ್ಪಕವೆಂಬ ಉಪರೂಪಕದ ಲಕ್ಷಣವನ್ನು ತಿಳಿಸುತ್ತಾನೆ. ಶಿಲ್ಪಕದಲ್ಲಿ ನಾಲ್ಕು ಅಂಕಗಳೂ, ನಾಲ್ಕು ವೃತ್ತಿಗಳೂ ಬರುತ್ತವೆ. ಶಾಂತ ಹಾಸ್ಯ ಇವೆರಡನ್ನು ಬಿಟ್ಟು ಉಳಿದ ರಸಗಳು ಬರುತ್ತವೆ. ಬ್ರಾಹ್ಮಣನು ನಾಯಕನೆನಿಸಿರುವನು. ಸ್ಮಶಾನ ಮೊದಲಾದವುಗಳ ವರ್ಣನೆ ಬರುತ್ತದೆ. ಉಪನಾಯಕನು ಹೀನಜಾತಿಯವನಾಗಿರುವನು. ಇದಕ್ಕೆ ಇಪ್ಪತ್ತೇಳು ಅಂಗಗಳಿರುತ್ತವೆ. ಆಶಂಸೆ, ತರ್ಕ, ಸಂದೇಹ, ತಾಪ ಉದ್ವೇಗ, ಪ್ರಸಕ್ತಿ, ಪ್ರಯತ್ನ, ಗ್ರಥನ, ಉತ್ಕಂಠೆ, ಅವಹಿತ್ಥೆ, ಪ್ರತಿಪತ್ತಿ, ವಿಲಾಸ, ಆಲಸ್ಯ, ಬಾಷ್ಪ, ಪ್ರಹರ್ಷ, ಆಶ್ವಾಸ, ಮೂಢತೆ, ಸಾಧನ, ಅನುಗಮ, ಉಚ್ಛ್ವಾಸ, ವಿಸ್ಮಯ, ಪ್ರಾಪ್ತಿ, ಲಾಭ, ವಿಸ್ಮೃತಿ, ಸಂಫೇಟ, ವೈಶಾರದ್ಯ, ಪ್ರಬೋಧನ, ಚಮ

ತ್ಕೃತಿ ಇವಿಷ್ಟು ಶಿಲ್ಪಕದ ಅಂಗಗಳೆನಿಸಿವೆ. ಸಂಘೇಟ, ಗ್ರಥನ ಇವುಗಳ ಲಕ್ಷಣ ವನ್ನು ಹಿಂದೆ ತಿಳಿಸಿದೆ. ಉಳಿದವು ಸ್ಪಷ್ಟವಾದ್ದರಿಂದ ಅವುಗಳ ಲಕ್ಷಣವನ್ನು ಇಲ್ಲಿ ತಿಳಿಸಿಲ್ಲ. ಕನಕಾವತೀಮಾಧವ ಎಂಬುದೇ ಈ ಬಗೆಯ ಉಪರೂಪಕವೆನಿಸಿದೆ.

ಮುಂದೆ ವಿಲಾಸಿಕೆ ಎಂಬ ಉಪರೂಪಕದ ಲಕ್ಷಣವನ್ನು ತಿಳಿಸುತ್ತಾನೆ. ಇದ ರಲ್ಲಿ ಒಂದೇ ಅಂಶವಿರುತ್ತದೆ. ಶೃಂಗಾರರಸವೇ ವಿಶೇಷವಾಗಿ ಪ್ರಕಾಶಿತವಾಗುತ್ತದೆ. ಲಾಸ್ಯದ ಹತ್ತು ಬಗೆಯ ಅಂಗಗಳೂ ಇರುತ್ತವೆ. ವಿದೂಷಕ, ವಿಟ, ಪೀಠಮರ್ದ ಇವರಿಂದ ಇದು ಶೋಭಿಸುತ್ತದೆ. ಇವರಲ್ಲಿ ಗರ್ಭವಿಮರ್ಶಸಂಧಿಗಳಿರುವುದಿಲ್ಲ. ನಾಯಕನು ಹೀನವಂಶದವನೂ, ಹೀನಸ್ವಭಾವದವನೂ ಆಗಿರುವನು. ಇಲ್ಲಿ ಬರುವ ಇತಿವೃತ್ತವೂ ಮಿತವಾಗಿರುತ್ತದೆ. ಒಟ್ಟಿನಲ್ಲಿ ಸಹೃದಯರನ್ನು ವಿಶೇಷವಾಗಿ ವಿಲಾಸಗೊಳಿಸಿರುವುದರಿಂದ ಇದು ವಿಲಾಸಿಕೆ ಎನಿಸಿದೆ. ಕೆಲವರು ವಿಲಾಸಿಕೆ ಎಂಬ ಸ್ಥಾನದಲ್ಲಿ ವಿನಾಯಿಕೆ ಎಂದೂ ಕರೆದಿದ್ದಾರೆ. ಇವನ್ನು ದುರ್ಮಲ್ಲಿಕೆ ಎಂಬ ಉಪ ರೂಪಕವಲ್ಲಿ ಸೇರಿಸಬೇಕೆಂದು ಬೇರೆಯವರು ಹೇಳಿದ್ದಾರೆ.

ಇನ್ನು ದುರ್ಮಲ್ಲಿಕೆ ಎಂಬ ಉಪರೂಪಕವನ್ನು ವಿವರಿಸುತ್ತಾನೆ. ಇದರಲ್ಲಿ ನಾಲ್ಕು ಅಂಕಗಳಿರುತ್ತವೆ. ಕೌಶಿಕೀ ಹಾಗೂ ಭಾರತೀವೃತ್ತಿಗಳನ್ನು ಪ್ರಯೋಗಿಸ ಲಾಗುವುದು. ಗರ್ಭಸಂಧಿಯನ್ನುಳಿದು ಬೇರೆ ಸಂಧಿಗಳು ಇರಬೇಕು. ಪಾತ್ರಗಳು ಎಲ್ಲಾ ವಿಷಯಗಳಲ್ಲೂ ಸಾಕಷ್ಟು ಅನುಭವವನ್ನು ಪಡೆದಿರುವರು. ನಾಯಕನು ಉತ್ತಮ ಸ್ವಭಾವದವನಿರುವನು. ಇದರಲ್ಲಿ ಮೊದಲನೆಯ ಅಂಕವು ಮೂರು ನಾಡಿ ಗಳಲ್ಲಿ ವಿಟನ ಕ್ರೀಡೆಯೊಡನೆ ಕೊನೆಗಾಣುವುದು. ಎರಡನೆಯ ಅಂಕವು ಐದು ನಾಡಿಗಳಲ್ಲಿ ವಿದೂಷಕನ ವಿಲಾಸದೊಡನೆ ಕೊನೆಯಾಗುವುದು. ಮೂರನೆಯದು ಆರು ನಾಡಿಗಳಲ್ಲಿ ಪೀಠಮರ್ದನ ವಿಲಾಸದೊಡನೆ ಕೊನೆಗಾಣುವುದು. ನಾಲ್ಕನೆ ಯದು ಹತ್ತು ನಾಡಿಗಳಲ್ಲಿ ನಾಯಕನ ಚರಿತ್ರದೊಡನೆ ಮುಗಿಯುವುದು. ಸುವಾಸನೆ ಯಿಲ್ಲದ ಮಲ್ಲಿಗೆ ಹೂವಿನಂತೆ ಇರುವುದರಿಂದ ಇದಕ್ಕೆ ದುರ್ಮಲ್ಲಿಕೆ ಎಂದು ಹೆಸರು ಬಂದಿದೆ. ಬಿಂದುಮತೀ ಎಂಬುದು ಈ ಬಗೆಯ ಉಪರೂಪಕವೆನಿಸಿದೆ.

ಈಗ ಪ್ರಕರಣಿಕೆ ಎಂಬುದನ್ನು ತಿಳಿಸುತ್ತಾನೆ. ನಾಟಿಕೆಯಂತೆ ಪ್ರಕರಣಿ ಕೆಯೂ ಇರುತ್ತದೆ. ಇದರಲ್ಲಿ ವರ್ತಕನೇ ಮೊದಲಾದವರು ನಾಯಕರೆನಿಸಿರುವರು. ಅವನಿಗೆ ನಾಯಿಕೆಯೂ ಸಹ ಸಮಾನವಾದವಂಶದಲ್ಲಿ ಹುಟ್ಟಿದವಳೇ ಆಗಿರುವಳು. ಇದಕ್ಕೆ ಉದಾಹರಣವನ್ನು ಹುಡುಕಿಕೊಳ್ಳುವುದು. ಈಗ ಹಲ್ಲೀಶವೆಂಬ ಉಪ ರೂಪಕವನ್ನು ತಿಳಿಸುತ್ತಾನೆ. ಇದರಲ್ಲಿ ಒಂದೇ ಅಂಕವಿರುತ್ತದೆ. ಏಳು, ಎಂಟು ಅಥವಾ ಹತ್ತು ಜನ ಹೆಂಗಸರು ಭಾಗವಹಿಸುವರು. ಶೌರಸೇನೀ ಎಂಬ ಉತ್ಕೃಷ್ಟ ವಾದ ಭಾಷೆಯಲ್ಲಿ ವ್ಯವಹಾರವು ನಡೆಯುವುದು. ಒಬ್ಬನೇ ಗಂಡಸು ಅಷ್ಟು ಜನ ಹೆಂಗಸರೊಡನೆ ವ್ಯವಹರಿಸುವನು. ಇಲ್ಲಿಕೌಶಿಕೀವೃತ್ತಿಯನ್ನ ಪ್ರಯೋಗಿಸಬೇಕು. ಮುಖ ಮತ್ತು ನಿರ್ವಹಣ ಸಂಧಿಗಳೆರಡನ್ನು ಮಾತ್ರ ಇಲ್ಲಿ ಪ್ರಯೋಗಿಸಲಾಗಬೇಕು.

ಅನೇಕ ಬಗೆಯ ತಾಳಲಯಗಳು ಸೇರಿಕೊಂಡಿರುವುದನ್ನು ಇಲ್ಲಿ ಕಾಣಬಹುದು. ಕೇಲಿ ರೈವತಕ ಎಂಬುದು ಇದಕ್ಕೆ ಉದಾಹರಣವೆನಿಸಿದೆ.

ಈಗ ಭಾಣಿಕೆ ಎಂಬ ಉಪರೂಪಕದ ಲಕ್ಷಣವನ್ನು ತಿಳಿಸುತ್ತಾನೆ. ಇದರಲ್ಲಿ ಪಾತ್ರಗಳು ಸುಂದರವಾದ ವೇಷಭೂಷಣಗಳನ್ನು ಉಪಯೋಗಿಸುತ್ತಾರೆ. ಮುಖ ಮತ್ತು ನಿರ್ವಹಣ ಸಂಧಿಗಳು ಬರುತ್ತವೆ. ಕೌಶಿಕೀಭಾರತೀ ವೃತ್ತಿಗಳ ಪ್ರಯೋಗ ವಿರುತ್ತದೆ. ಒಂದೇ ಅಂಕದಲ್ಲಿ ಇದರ ರಚನೆಯಾಗಿರುತ್ತದೆ. ನಾಯಿಕೆ ಉದಾತ್ತ ಸ್ವಭಾವನವಳಾಗಿರುವಳು. ನಾಯಕನು ನಿಕೃಷ್ಟಸ್ವಭಾವದವನಾಗಿರುವನು. ಇದ ರಲ್ಲಿ ಏಳು ಅಂಕಗಳು ಇರುತ್ತವೆ. ಅವಕ್ಕೆ ಉಪನ್ಯಾಸ, ವಿನ್ಯಾಸ, ವಿಭೋಧ, ಸಾಧ್ವಸ, ಸಮರ್ಪಣ, ನಿವೃತ್ತಿ, ಸಂಹಾರ ಈ ಬಗೆಯ ಹೆಸರುಗಳಿರುತ್ತವೆ. ಬೇರೆ ಯಾವುದೋ ಸಂದರ್ಭವನ್ನು ಕಲ್ಪಿಸಿಕೊಂಡು ಆ ಮೂಲಕ ನಾಟಕದ ವಸ್ತುವನ್ನು ತಿಳಿಸುವುದೇ ಉಪನ್ಯಾಸವೆನಿಸುವುದು. ನಿರ್ವೇದವನ್ನು ತಿಳಿಸುವ ವಾಕ್ಯವನ್ನು ಪ್ರಯೋಗಿಸುವುದೇ ವಿನ್ಯಾಸವೆನಿಸುವುದು. ಭ್ರಾಂತಿಯು ಸಂಭವಿಸಿ ತೊಲಗು ವುದೇ ವಿಬೋಧವೆನಿಸುವುದು. ಸುಳ್ಳಾದ ಕಥೆಯನ್ನು ಕಲ್ಪಿಸುವುದೇ ಸಾಧ್ವಸಾಂಕ ವೆನಿಸುವುದು. ಕೋಪದ ಹಿಂಸೆಯಿಂದ ಒಬ್ಬನನ್ನು ನಿಂದಿಸಲಿಕ್ಕೆ ಮಾತನ್ನಾಡುವುದೇ ಸಮರ್ಪಣಾಂಕವೆನಿಸುವುದು. ದೃಷ್ಟಾಂತವನ್ನು ತಿಳಿಸುವುದೇ ನಿವೃತ್ತ್ಯಂಕವೆನಿಸುವುದು. ಆರಂಭಿಸಿದ ಕಾರ್ಯವನ್ನು ಕೊನೆಗಾಣಿಸುವುದೇ ಸಂಹಾರಾಂಕವೆನಿಸುವುದು. ಕಾವ್ಯ ದತ್ತೆ ಎಂಬುದು ಈ ಬಗೆಯ ಉಪರೂಪಕವೆನಿಸುವುದು. ಇವೆಲ್ಲವೂ ನಾಟಕದ ಸ್ವಭಾವವನ್ನೇ ಹೊಂದಿದ್ದರೂ ಸಹ, ಅವಶ್ಯಕತೆ ಬಿದ್ದಾಗ, ಸಂದರ್ಭೋಚಿತವಾಗಿ ಇವನ್ನು ಬೇರೆ ಬೇರೆ ಬಗೆಯ ರೂಪಕಗಳಾಗಿ ಪ್ರಯೋಗಿಸಲಾಗುವುದು. ನಾಟಕ ದಲ್ಲಿ ಹೇಳಿದ ಅಂಶವನ್ನು ಇಲ್ಲಿ ಮತ್ತೆ ತಿಳಿಸಿದ್ದರೂ ಅವು ಹೊಂದುತ್ತದೆ. ಆದರೆ ನಾಂದೀ ಪ್ರಸ್ತಾಪನೆ ಮೊದಲಾದ ಸಾಮಾನ್ಯಾಂಶವು ಅಲ್ಲಿಯಂತೆ ಇಲ್ಲೂ ಬರಬಹುದು. ಆದರೆ ಖ್ಯಾತವೃತ್ತ ಮೊದಲಾದ ನಾಟಕದ ವಿಶೇಷಲಕ್ಷಣವು ಇಲ್ಲಿ ಅನ್ವಯಿಸಲಾರದು:

ಅಥ ಶ್ರವ್ಯಕಾವ್ಯಾನಿ—ಶ್ರವ್ಯಂ ಶ್ರೋತವ್ಯಮಾತ್ರಂ ತತ್ಪದ್ಯಗದ್ಯಮಯಂ ದ್ವಿಧಾ ।
ತತ್ರ ಪದ್ಯಮಯಾನ್ಯಾಹ-ಛಂದೋಬದ್ಧಪದಂ ಪದ್ಯಂ ತೇನೈಕೇನ ಚ ಮುಕ್ತಕಮ್ ।
ದ್ವಾಭ್ಯಾಂ ತು ಯುಗ್ಮಕಂ ಸಂದಾನಿತಕಂ ತ್ರಿಭಿರಿಷ್ಯತೇ ॥
ಕಲಾಪಕಂ ಚತುರ್ಭಿಶ್ಚ ಪಂಚಭಿಃ ಕುಲಕಂ ಮತಮ್ ।

ತತ್ರ ಮುಕ್ತಕಂ ಯಥಾ ಮಮ—

ಸಾಂದ್ರಾನಂದಮನಂದಮವ್ಯಯಮಜಂ ಯದ್ಯೋಗಿನೋಽಪಿ ಕ್ಷಣಂ
ಸಾಕ್ಷಾತ್ಕರ್ತುಮುಪಾಸತೇ ಪ್ರತಿಮುಹುರ್ಧ್ಯಾನೈಕತಾನಾಃ ಪರಮ್ ।
ಧನ್ಯಾಸ್ತಾ ಮಥುರಾಪುರೀಯುವತಯಸ್ತದ್ಬ್ರಹ್ಮ ಯಾಃ ಕೌತುಕಾತ್
ಆಲಿಂಗಂತಿ ಸಮಾಲಪಂತಿ ಶತಧಾ ಕುರ್ವಂತಿ ಚುಂಬಂತಿ ಚ ॥

ಯುಗ್ಮಕಂ ಯಥಾ—ಕಿಂ ಕರೋಮಿ ಕರೋಽಸಾಂತೇ ಕಾಂತೇ ಗಂಡಸ್ಥಲೀಮಿಮಾಮ್।

ಪ್ರಣಯಪ್ರವಣೇ ಕಾಂತೇಽನ್ಯೈಕಾಂತೇ ನೋಚಿತಾಃ ಕ್ರುಧಃ ||
ಇತಿ ಯಾವತ್ಕುರಂಗಾಕ್ಷೀಂ ವಕ್ತುಮೀಹಾಮಹೇ ವಯಮ್ |
ತಾವದಾವಿರಭೂಚ್ಚೂತೇ ಮಧುರೋ ಮಧುಪಧ್ವನಿಃ ||

ಏವಮನ್ಯತ್ರಾಪಿ— ಮಹಾಕಾವ್ಯಸ್ಯ ಲಕ್ಷಣಮಾಹ—

ಸರ್ಗಬಂಧೋ ಮಹಾಕಾವ್ಯಂ ತತ್ರೈಕೋ ನಾಯಕಃ ಸುರಃ |
ಸದ್ವಂಶಃ ಕ್ಷತ್ರಿಯೋ ವಾಪಿ ಧೀರೋದಾತ್ತಗುಣಾನ್ವಿತಃ ||
ಏಕವಂಶಭವಾ ಭೂಪಾಃ ಕುಲಜಾ ಬಹವೋಽಪಿ ವಾ ||
ಶೃಂಗಾರವೀರಶಾಂತಾನಾಂ ಏಕೋಽಂಗೀ ರಸ ಇಷ್ಯತೇ ||
ಅಂಗಾನಿ ಸರ್ವೇಽಪಿ ರಸಾಃ ಸರ್ವೇ ನಾಟಕಸಂಧಯಃ |
ಇತಿಹಾಸೋದ್ಭವಂ ವೃತ್ತಂ ಅನ್ಯದ್ವಾ ಸಜ್ಜನಾಶ್ರಯಮ್ ||
ಚತ್ವಾರಸ್ತಸ್ಯ ವರ್ಗಾಃ ಸ್ಯುಃ ತೇಷ್ವೇಕಂ ಚ ಫಲಂ ಭವೇತ್ |
ಆದೌ ನಮಸ್ಕ್ರಿಯಾಶೀರ್ವಾ ವಸ್ತುನಿರ್ದೇಶ ಏವ ವಾ ||
ಕ್ವಚಿನ್ನಿಂದಾ ಖಲಾದೀನಾಂ ಸತಾಂ ಚ ಗುಣಕೀರ್ತನಮ್ |
ಏಕವೃತ್ತಮಯೈಃ ಪದ್ಯೈಃ ಅವಸಾನೇಽನ್ಯವೃತ್ತಕೈಃ ||
ನಾತಿಸ್ವಲ್ಪಾ ನಾತಿದೀರ್ಘಾಃ ಸರ್ಗಾ ಅಷ್ಟಾಧಿಕಾ ಇಹ |
ನಾನಾವೃತ್ತಮಯಃ ಕ್ವಾಪಿ ಸರ್ಗಃ ಕಶ್ಚನ ದೃಶ್ಯತೇ ||
ಸರ್ಗಾಂತೇ ಭಾವಿಸರ್ಗಸ್ಯ ಕಥಾಯಾಃ ಸೂಚನಂ ಭವೇತ್ |
ಸಂಧ್ಯಾಸೂರ್ಯೇಂದುರಜನೀಪ್ರದೋಷಧ್ವಾಂತವಾಸರಾಃ ||
ಪ್ರಾತರ್ಮಧ್ಯಾಹ್ನಮೃಗಯಾಶೈಲರ್ತುವನಸಾಗರಾಃ |
ಸಂಭೋಗವಿಪ್ರಲಂಭೌ ಚ ಮುನಿಸ್ವರ್ಗಪುರಾಧ್ವರಾಃ ||
ರಣಪ್ರಯಾಣೋಪಯಮಮಂತ್ರಪುತ್ರೋದಯಾದಯಃ |
ವರ್ಣನೀಯಾ ಯಥಾಯೋಗಂ ಸಾಂಗೋಪಾಂಗಾ ಅಮೀ ಇಹ ||
ಕವೇರ್ವೃತ್ತಸ್ಯ ವಾ ನಾಮ್ನಾ ನಾಯಕಸ್ಯೇತರಸ್ಯ ವಾ |
ನಾಮಾಸ್ಯ ಸರ್ಗೋಪಾದೇಯಕಥಯಾ ಸರ್ಗನಾಮ ತು ||

ಸಂಧ್ಯಂಗಾನಿ ಯಥಾಲಾಭಮತ್ರ ವಿಧೇಯಾನಿ. "ಅವಸಾನೇಽನ್ಯವೃತ್ತಕೈಃ" ಇತಿ ಬಹುವಚನಮವಿವಕ್ಷಿತಮ್. ಸಾಂಗೋಪಾಂಗಾ ಇತಿ ಜಲಕೇಲಿಮಧುಪಾನಾದಯಃ. ಯಥಾ ರಘುವಂಶಶಿಶುಪಾಲವಧನೈಷಧಾದಯಃ! ಯಥಾ ರಾಘವವಿಲಾಸಾದಿಃ.

ಅಸ್ಮಿನ್ನಾರ್ಷೇ ಪುನಃ ಸರ್ಗಾ ಭವಂತ್ಯಾಖ್ಯಾನಸಂಜ್ಞಕಾಃ |

ಅಸ್ಮಿನ್ ಮಹಾಕಾವ್ಯೇ–ಯಥಾ ಮಹಾಭಾರತಮ್.

ಪ್ರಾಕೃತೈರ್ನಿರ್ಮಿತೇ ತಸ್ಮಿನ್ ಸರ್ಗಾ ಆಶ್ವಾಸಸಂಜ್ಞಕಾಃ |
ಛಂದಸಾ ಸ್ಕಂಧಕೇನೈತತ್ ಕ್ವಚಿದ್ಗಲಿತಕೈರಪಿ ||

ಯಥಾ ಸೇತುಬಂಧಃ. ಯಥಾ ಚ ಮಮ ಕುವಲಯಾಶ್ವಚರಿತಮ್ |

ಅಪಭ್ರಂಶನಿಬಂಧೇಽಸ್ಮಿನ್ ಸರ್ಗಾಃ ಕುಡವಕಾಭಿಧಾಃ ।
ತಥಾಪಭ್ರಂಶಯೋಗ್ಯಾನಿ ಛಂದಾಂಸಿ ವಿವಿಧಾನ್ಯಪಿ ॥

ಯಥಾ ಕರ್ಣಪರಾಕ್ರಮಃ.

ಭಾಷಾವಿಭಾಷಾನಿಯಮಾತ್ ಕಾವ್ಯಂ ಸರ್ಗಸಮುಜ್ಝಿತಮ್ ।
ಏಕಾರ್ಥಪ್ರವಣೈಃ ಪದ್ಯೈಃ ಸಂಧಿಸಾಮಗ್ರ್ಯವರ್ಜಿತಮ್ ॥

ಯಥಾ ಭಿಕ್ಷಾಟನಂ, ಆರ್ಯಾವಿಲಾಸಶ್ಚ.

ಖಂಡಕಾವ್ಯಂ ಭವೇತ್ಕಾವ್ಯಸ್ಯೈಕದೇಶಾನುಸಾರಿ ಚ ।

ಯಥಾ ಮೇಘದೂತಾದಿಃ.

ಕೇಳಲಿಕ್ಕೆ ಮಾತ್ರಯೋಗ್ಯವಾಗಿರುವಂತಹದು ಶ್ರವ್ಯಕಾವ್ಯವೆನಿಸುತ್ತದೆ. ಇದು ಪದ್ಯಮಯವೂ ಗದ್ಯಮಯವೂ ಆಗಿರುವುದು. ಈಗ ಪದ್ಯಮಯವಾದ ಕಾವ್ಯದ ಸ್ವರೂಪವನ್ನು ತಿಳಿಸುತ್ತಾನೆ. ಗಾಯತ್ರಿ ಮೊದಲಾದ ವೃತ್ತದಲ್ಲಿ ಪದಗಳನ್ನು ಜೋಡಿಸಿರುವಂತಹದೇ ಪದ್ಯವೆನಿಸುವುದು. ಎರಡು ಪದ್ಯಗಳು ಸೇರಿದ್ದರೆ ಅದು ಯುಗ್ಮಕವೆನಿಸುವುದು. ಮೂರು ಪದ್ಯಗಳು ಸೇರಿ ಒಂದು ಅರ್ಥವನ್ನು ತಿಳಿಸುವುದಾದರೆ ಅಂತಹ ಜೋಡಣೆಯು ಸಂದಾನಿತಕವೆನಿಸುವುದು. ನಾಲ್ಕು ಪದ್ಯಗಳು ಸೇರಿರುವುದಕ್ಕೆ ಕಲಾಪಕವೆಂಬ ಹೆಸರಿದೆ. ಐದು ಪದ್ಯಗಳು ಕೂಡಿರುವುದಕ್ಕೆ ಕುಲಕವೆಂದು ಹೆಸರಿದೆ. ಒಂದೇ ಪದ್ಯದಲ್ಲಿ ನಿರ್ದಿಷ್ಟವಾದ ಅರ್ಥವನ್ನು ತಿಳಿಸುವುದು ಮುಕ್ತಕವೆನಿಸುವುದು. ಅದನ್ನು ಉದಾಹರಿಸುತ್ತಾನೆ. 'ಪ್ರತಿ ನಿಮಿಷವೂ ಸಹ ಧ್ಯಾನದಲ್ಲಿಯೇ ಆಸಕ್ತರಾಗಿರುವ ಯೋಗಿಗಳೂ ಸಹ ಒಂದು ಕ್ಷಣವಾದರೂ ಅನುಭವಿಸಲಿಕ್ಕಾಗಿ ಆನಂದಮಯವೂ, ಎಲ್ಲೆ ಕೊನೆಗಳಿಲ್ಲದೆಯೂ, ಹುಟ್ಟುನಾಶಗಳಿಲ್ಲದೆಯೂ ಇರುವ ಯಾವ ಪರಮಾತ್ಮನನ್ನು ಉಪಾಸನಮಾಡುವರೋ ಅಂತವನನ್ನು ಮಥುರಾ ನಗರದ ಸ್ತ್ರೀಯರು ಕುತೂಹಲದಿಂದ ಆಲಿಂಗಿಸಿ ಅನೇಕ ಬಗೆಯಾಗಿ ಎಳೆದು ಮುಟ್ಟಿ ಅವನೊಡನೆ ಸೇರವಾಗಿ ಮಾತನಾಡಿ ಸಂತೋಷಪಡುತ್ತಿರುವರು. ಅವರೇ ಧನ್ಯರು' ಇಲ್ಲಿ ಧನ್ಯಾ ಭವಂತಿ ಎಂದು ಹೇಳಿದ್ದರಿಂದ ಅಲ್ಲಿಯೇ ಕ್ರಿಯೆಯೂ ಕೊನೆಗಾಣುವುದರಿಂದ ಅನ್ವಯವು ಹೊಂದಿಕೆಯಾಗಿ ಮುಂದಿನ ಪದ್ಯದ ಅರ್ಥವನ್ನು ಹುಡುಕಿಕೊಂಡು ಹೋಗುವ ಅವಶ್ಯಕತೆಯಿಲ್ಲದ ಪ್ರಯುಕ್ತ ಇದು ಮುಕ್ತಕಕಾವ್ಯವೆನಿಸಿದೆ. ಯುಗ್ಮಕ ಕಾವ್ಯವನ್ನು ಈಗ ತಿಳಿಸುತ್ತಾನೆ. 'ಎಲೈ ಕಾಂತೆಯೇ, ಕೈಗಳ ಸಮೀಪದಲ್ಲಿ ಈ ಕೆನ್ನೆಯನ್ನು ಇಡುವೆಯೊ ? ನಿನ್ನ ಪತಿಯು ಬೇರೆ ಯಾರಲ್ಲೂ ಆಸಕ್ತನಾಗದೆ ನಿನ್ನಲ್ಲಿಯೇ ಪೂರ್ಣವಾಗಿ ಮನಸ್ಸಿಟ್ಟಿರುವಾಗ ಅವನ ಮೇಲೆ ಹೀಗೆ ಕೋಪಮಾಡುವುದು ನ್ಯಾಯವಲ್ಲವೆಂದು ನಾಯಿಕೆಗೆ ನಾವು ಎಷ್ಟರೊಳಗೆ ತಿಳಿಸಲು ಇಚ್ಛಿಸಿದೆವೋ। ಅಷ್ಟರೊಳಗೆ ಮಾವಿನಮರದಲ್ಲಿ ದುಂಬಿಗಳ ಮಧುರವಾದ ಝೇಂಕಾರನಾದವು ಆರಂಭವಾಯಿತು.' ಇಲ್ಲಿ ಅವಿರಭೂತ್ ಎಂಬ ಕೊನೆಯ ಕ್ರಿಯಾಪದದಲ್ಲಿ ಎರಡು ಪದ್ಯ

ಗಳಿಗೂ ಅನ್ವಯವು ಬಂದು ಎರಡಕ್ಕೂ ಪರಸ್ಪರವಾಗಿ ಸಂಘಟನೆ ಇರುವುದರಿಂದ ಇವೆರಡೂ ಸೇರಿ ಯುಗ್ಮಕಕಾವ್ಯವೆನಿಸಿವೆ. ಹೀಗೆಯೇ ಬೇರೆಯುವನ್ನು ತಿಳಿಯುವುದು.

ಈಗ ಮಹಾಕಾವ್ಯದ ಲಕ್ಷಣವನ್ನು ತಿಳಿಸುತ್ತಾನೆ. ರಸವತ್ತರವಾದ ಪದ್ಯಗಳ ಸಮೂಹವೇ ಮಹಾಕಾವ್ಯವೆನಿಸುವುದು. ಇಲ್ಲಿ ಧೀರೋದಾತ್ತಗುಣದಿಂದ ಕೂಡಿ ದೇವತಾಸ್ವರೂಪವೆನಿಸಿದ ಒಬ್ಬ ನಾಯಕನಿರುವನು. ಅವನು ಸದ್ವಂಶದಲ್ಲಿ ಹುಟ್ಟಿರಬೇಕು. ಇಲ್ಲವೇ ಕ್ಷತ್ರಿಯವಂಶದವನೂ ಆಗಬಹುದು. ಒಂದೇ ವಂಶದಲ್ಲಿ ಹುಟ್ಟಿದ ಅನೇಕ ರಾಜರ ಚರಿತ್ರೆಯನ್ನಾದರೂ ಅದು ತಿಳಿಸಬಹುದು. ಸದ್ವಂಶದಲ್ಲಿ ಹುಟ್ಟಿದ ಅನೇಕ ಜನರ ಚರಿತ್ರೆಯನ್ನೂ ಅದು ತಿಳಿಸಬಹುದು. ಶೃಂಗಾರ ವೀರ ಶಾಂತರಸಗಳಲ್ಲಿ ಒಂದು ಪ್ರಧಾನವಾಗಿರಬೇಕು. ಇತರ ಎಲ್ಲಾ ರಸಗಳೂ ಅದಕ್ಕೆ ಪೋಷಕವಾಗಿರಬೇಕು. ನಾಟಕದಲ್ಲಿ ಬರುವ ಸಂಧಿಗಳೆಲ್ಲವೂ ಇಲ್ಲಿಯೂ ಬರಬೇಕು. ಇತಿಹಾಸದಿಂದ ತಿಳಿದುಬರುವ ಇತಿವೃತ್ತವಿರಬೇಕು. ಅಥವಾ ಅದು ಸಜ್ಜನರಿಗೆ ಆಶ್ರಯವನ್ನು ನೀಡುವಂತಹದಾಗಿರಬೇಕು. ಧರ್ಮ ಅರ್ಥ ಕಾಮ ಮೋಕ್ಷಗಳನ್ನು ತಿಳಿಸಿ ಅವುಗಳಲ್ಲಿ ಒಂದನ್ನು ಫಲವಾಗಿ ಅದು ದೊರಕಿಸಬೇಕು. ಪ್ರಾರಂಭದಲ್ಲಿ ದೇವರಿಗೆ ನಮಸ್ಕಾರವಾಗಲೀ, ಹಿರಿಯರ ಆಶೀರ್ವಾದವಾಗಲೀ, ಒಂದು ವಸ್ತುವಿನ ಸೂಚನೆಯಾಗಲೀ ಬರಬೇಕು. ಕೆಲವು ಕಡೆ ನೀಚರ ನಿಂದೆಯೂ, ಸತ್ಪುರುಷರ ಗುಣಪ್ರಶಂಸೆಯೂ ಬರುತ್ತವೆ. ಪದ್ಯಗಳೆಲ್ಲವೂ ಒಂದೇ ವೃತ್ತದಲ್ಲಿದ್ದು ಕೊನೆಯಲ್ಲಿ ಬೇರೆ ಬೇರೆ ವೃತ್ತಗಳಿರುತ್ತವೆ. ಸರ್ಗಗಳು ಎಂಟಕ್ಕಿಂತ ಹೆಚ್ಚಾಗಿದ್ದು ಬಹಳ ಕಡಮೆಯೂ ಬಹಳ ಉದ್ದವೂ ಆಗದಂತೆ ಇರಬೇಕು. ಕೆಲವು ಕಡೆ ಅನೇಕ ವೃತ್ತಗಳಿಂದ ಕೂಡಿದ ಒಂದು ಸರ್ಗವಿರುತ್ತದೆ. ಸರ್ಗದ ಕೊನೆಯಲ್ಲಿ ಮುಂದಿನ ಸರ್ಗದ ಕಥೆಯನ್ನು ಸೂಚಿಸಬೇಕು. ಸಂಧ್ಯಾಕಾಲ, ಸೂರ್ಯಚಂದ್ರರ ಉದಯಾಸ್ತಗಳು, ರಾತ್ರಿ, ಪ್ರದೋಷಕಾಲ, ಕತ್ತಲೆ, ಹಗಲು, ಪ್ರಾತಃಕಾಲ, ಮಧ್ಯಾಹ್ನಸಮಯ, ಬೇಟೆ, ಬೆಟ್ಟಗಳು, ಋತುಗಳು, ಅರಣ್ಯಗಳು, ಸಾಗರ, ಸಂಭೋಗ, ವಿಪ್ರಲಂಭಶೃಂಗಾರಗಳು, ಋಷಿಗಳು, ಸ್ವರ್ಗ, ಪಟ್ಟಣಗಳು, ಯಾಗಗಳು, ಯುದ್ಧ, ಪ್ರಯಾಣ, ವಿವಾಹ, ಸಂಧಿವಿಗ್ರಹಾದಿ ಮಂತ್ರಸಮಾಲೋಚನೆ, ಪುತ್ರೋತ್ಪತ್ತಿ ಇವೇ ಮೊದಲಾದ ಅಂಶಗಳನ್ನು ಸಾಂಗೋಪಾಂಗವಾಗಿ ಸಂದರ್ಭಕ್ಕೆ ತಕ್ಕಹಾಗೆ ವರ್ಣಿಸಬೇಕು. ಕವಿಯ ಅಥವಾ ಇತಿವೃತ್ತದ ಹೆಸರನ್ನೂ, ನಾಯಕನ ಅಥವಾ ಬೇರೆಯವರ ಹೆಸರನ್ನೂ ಸೂಚಿಸಬೇಕು. ಮಾಘ, ಭಾರವಿ, ಕುಮಾರಸಂಭವ, ಕೀಚಕವಧೆ, ರಘುವಂಶ, ನೈಷಧ ಹೀಗೆಯೂ, ಮಾರ್ಕಂಡೇಯಪುರಾಣ ಎಂಬಂತೆಯೂ ನಾಯಕನ ಹೆಸರಿನಿಂದಲೂ ಅವನು ಕರೆಯಬಹುದು. ಸರ್ಗದ ಹೆಸರನ್ನು ಅಲ್ಲಿ ವರ್ಣಿಸಿರುವ ಕಥೆಯಿಂದ ತಿಳಿಸಬೇಕು.' ಪ್ರಭಾತವರ್ಣನವೆಂಬ ಹನ್ನೊಂದನೆಯ ಸರ್ಗವಿದು' ಹೀಗೆ ಅವನ್ನು ತಿಳಿಸಬೇಕು.

ಋಷಿಯಲ್ಲದವನು ಇಂತಹ ಕಾವ್ಯವನ್ನು ಬರೆಯಲಾರನು. ಇಂತಹ ಆರ್ಷಕಾವ್ಯದಲ್ಲಿ ಸರ್ಗಗಳಿಗೆ ಆಶ್ವಾಸವೆಂಬ ಸಂಜ್ಞೆಯನ್ನು ಪ್ರಯೋಗಿಸುವುದು ರೂಢಿ

ಯಲ್ಲಿದೆ. ಪ್ರಾಕೃತಭಾಷೆಗಳಲ್ಲಿ ರಚಿಸಿರುವ ಕಾವ್ಯದಲ್ಲಿಯೂ ಸರ್ಗಗಳಿಗೆ ಆಶ್ವಾಸ ವೆಂಬ ಸಂಜ್ಞೆ ಇರುತ್ತದೆ. ಇಂತಹ ಕಾವ್ಯವು ಕೆಲವು ಅಂಶಗಳಲ್ಲಿ ಸ್ಕಂಧಕವೆಂಬ ಛಂದಸ್ಸಿನಿಂದಲೂ, ಕೆಲವು ಅಂಶಗಳಲ್ಲಿ ಗಳಿತಕವೆಂಬ ಛಂದಸ್ಸಿನಿಂದಲೂ ರಚಿತವಾಗಿರುತ್ತದೆ. ಸೇತುಬಂಧವೆಂಬುದು ಇದಕ್ಕೆ ಉದಾಹರಣವೆನಿಸಿದೆ. ಕುವಲಯಾಶ್ವಚರಿತವೂ ಈ ಬಗೆಯ ಮಹಾಕಾವ್ಯವೆನಿಸಿದೆ. ಅಪಭ್ರಂಶವೆಂಬ ಭಾಷೆಯಲ್ಲಿ ವಿರಚಿತವಾದ ಕಾವ್ಯದಲ್ಲಿ ಸರ್ಗಗಳಿಗೆ ಕುಡವಕ ಎಂಬ ಹೆಸರಿದೆ. ಹಾಗೆಯೇ ಅಪಭ್ರಂಶ ಭಾಷೆಗೆ ಯೋಗ್ಯವಾದ ಅನೇಕ ಬಗೆಯ ಛಂದಸ್ಸುಗಳಲ್ಲಿ ಪದ್ಯಗಳ ರಚನೆಯಾಗಿರುತ್ತದೆ. ಕರ್ಣನ ಪರಾಕ್ರಮವೇ ಇದಕ್ಕೆ ಉದಾಹರಣವೆನಿಸಿದೆ. 'ಸಂಸ್ಕೃತಭಾಷೆಯಲ್ಲಿ ಆರಂಭಿಸಿದ್ದನ್ನು ಆ ಭಾಷೆಯಲ್ಲಿಯೇ ಮುಂದುವರಿಸಬೇಕು. ಬೇರೆ ಭಾಷೆಯಲ್ಲಿ ಆರಂಭಿಸಿದ್ದನ್ನು ಅದರಲ್ಲಿಯೇ ಮುಂದುವರಿಸಿ ಮುಗಿಸಬೇಕು.' ಎಂಬ ನಿಯಮದಿಂದ ಕಾವ್ಯವು ಸರ್ಗಗಳಿಲ್ಲದೆ, ಸಂಧಿ ಸಾಮಾಗ್ರಿಗಳಿಲ್ಲದೆ ಒಂದೇ ವಿಷಯವನ್ನು ತಿಳಿಸುವ ಪದ್ಯಗಳಿಂದ ಕೂಡಿರಬೇಕು, ಭಿಕ್ಷಾಟನ, ಆರ್ಯವಿಲಾಸ ಇವೇ ಉದಾಹರಣಗಳೆನಿಸಿವೆ. ಮಹಾಕಾವ್ಯದ ಒಂದು ಭಾಗವೆನಿಸಲರ್ಹವಾದ ಕಾವ್ಯವೇ ಖಂಡಕಾವ್ಯವೆನಿಸುತ್ತದೆ. ಮೇಘದೂತ ಮೊದಲಾದವು ಖಂಡಕಾವ್ಯಗಳು.

ಕೋಷಃ ಶ್ಲೋಕಸಮೂಹಸ್ತು ಸ್ಯಾದನ್ಯೋನ್ಯಾನಪೇಕ್ಷಕಃ ।
ವ್ರಜ್ಯಾಕ್ರಮೇಣ ರಚಿತಃ ಸ ಏವಾತಿಮನೋರಮಃ ॥

ಸಜಾತೀಯಾನಾಂ ಏಕತ್ರ ಸನ್ನಿವೇಶೋ ವ್ರಜ್ಯಾ. ಯಥಾ ಮುಕ್ತಿವಲ್ಯಾಃ.

ಅಥ ಗದ್ಯಕಾವ್ಯಾನಿ— ತತ್ರ ಗದ್ಯಮ್.

ವೃತ್ತಬಂಧೋಜ್ಝಿತಂ ಗದ್ಯಂ ಮುಕ್ತಕಂ ವೃತ್ತಗಂಧಿ ಚ ।
ಭವೇದುತ್ಕಲಿಕಾಪ್ರಾಯಂ ಚೂರ್ಣಕಂ ಚ ಚತುರ್ವಿಧಮ್ ॥
ಆದ್ಯಂ ಸಮಾಸರಹಿತಂ ವೃತ್ತಭಾಗಯುತಂ ಪರಮ್ ।
ಅನ್ಯದ್ದೀರ್ಘಸಮಾಸಾಢ್ಯಂ ತುಲ್ಯಂ ಚಾಲ್ಪಸಮಾಸಕಮ್ ॥

ಮುಕ್ತಕಂ ಯಥಾ 'ಗುರುರ್ವಚಸಿ ಪೃಥುರುರಸಿ' ಇತ್ಯಾದಿ.

ವೃತ್ತಗಂಧಿ ಯಥಾ ಮಮ–ಸಮರಕಂಡೂಯನನಿಬಿಡಭುಜದಂಡಕುಂಡಲೀಕೃತಕೋದಂಡಶಿಂಜಿನೀಟಂಕಾರೋಜ್ಜಾಗರಿತವೈರಿನಾಗರ" ಇತ್ಯಾದಿ ಅತ್ರ ಕುಂಡಲೀಕೃತಕೋದಂಡ' ಇತ್ಯನುಷ್ಟುಪ್ ವೃತ್ತಸ್ಯ ಪಾದಃ ಸಮರಕಂಡೂಯನೇತಿ ಚ ಪ್ರಥಮಾಕ್ಷರದ್ವಯರಹಿತಸ್ತಸ್ಯೈವ ಪಾದಃ.

ಉತ್ಕಲಿಕಾಪ್ರಾಯಂ ಯಥಾ ಮಮೈವ–ಅನಿಶವಿಸೃಮರನಿಶಿತಶರವಿಸರವಿದಳಿತ ಸಮರಪಂಗಿತಪ್ರವರಪರಬಲ" ಇತ್ಯಾದಿ.

ಚೂರ್ಣಕಂ ಯಥಾ ಮಮ "ಗುಣರತ್ನಸಾಗರ ! ಜಗದೇಕನಾಗರ ! ಕಾಮಿನೀಮದನ ! ಜನರಂಜನ ! " ಇತ್ಯಾದಿ.

ಕಥಾಯಾಂ ಸರಸಂ ವಸ್ತು ಗದ್ಯೈರೇವ ವಿನಿರ್ಮಿತಮ್ ॥
ಕ್ವಚಿದತ್ರ ಭವೇದಾರ್ಯಾ ಕ್ವಚಿತ್ ವಕ್ತ್ರಾಪವಕ್ತ್ರಕೇ
ಆದೌ ಪದ್ಯೈರ್ನಮಸ್ಕಾರಃ ಖಲಾದೇರ್ವೃತ್ತಕೀರ್ತನಮ್ ॥

ಯಥಾ ಕಾದಂಬರ್ಯಾದಿಃ.

ಆಖ್ಯಾಯಿಕಾ ಕಥಾವತ್ಸ್ಯಾತ್ ಕವೇರ್ವಂಶಾನುಕೀರ್ತನಮ್ ।
ಅಸ್ಯಾಮನ್ಯಕವೀನಾಂ ಚ ವೃತ್ತಂ ಪದ್ಯಂ ಕ್ವಚಿತ್ ಕ್ವಚಿತ್ ॥
ಕಥಾಂಶಾನಾಂ ವ್ಯವಚ್ಛೇದ ಆಶ್ವಾಸ ಇತಿ ಬಧ್ಯತೇ ।
ಆರ್ಯಾವಕ್ತ್ರಾಪವಕ್ತ್ರಾಣಾಂ ಛಂದಸಾ ಯೇನ ಕೇನಚಿತ್ ।
ಅನ್ಯಾಪದೇಶೇನಾಶ್ವಾಸಮುಖೇ ಭಾವ್ಯರ್ಥಸೂಚನಮ್ ॥

ಯಥಾ ಹರ್ಷಚರಿತಾದಿಃ—

'ಅಪಿ ತ್ವನಿಯಮೋ ದೃಷ್ಟಸ್ತತ್ರಾಪ್ಯನ್ಯೈರುದೀರಣಾತ್' ಇತಿ ದಂಡ್ಯಾಚಾರ್ಯವಚನಾತ್ ಕೇಚಿತ್ 'ಆಖ್ಯಾಯಿಕಾ ನಾಯಕೇನೈವ ನಿಬದ್ಧವ್ಯಾ' ಇತ್ಯಾಹುಃ. ತದಯುಕ್ತಮ್. ಆಖ್ಯಾನಾದಯಶ್ಚ ಕಥಾಖ್ಯಾಯಿಕಯೋರೇವಾಂತರ್ಭಾವಾತ್ ನ ಪೃಥಗುಕ್ತಾಃ ಯದುಕ್ತಂ ದಂಡಿನೈವ 'ಅತ್ರೈವಾಂತರ್ಭವಿಷ್ಯಂತಿ ಶೇಷಾಶ್ಚಾಖ್ಯಾನಜಾತಯಃ. ಏಷಾಮುದಾಹರಣಂ ಪಂಚತಂತ್ರಾದಿ.

ಯಥಾ ಗದ್ಯಪದ್ಯಮಯಾನಿ. ಗದ್ಯಪದ್ಯಮಯಂ ಕಾವ್ಯಂ ಚಂಪೂರಿತ್ಯಭಿಧೀಯತೇ

ಯಥಾ ದೇಶರಾಜಚರಿತಮ್.

ಗದ್ಯಪದ್ಯಮಯೀ ರಾಜಸ್ತುತಿರ್ಬಿರುದಮುಚ್ಯತೇ ।

ಯಥಾ ಬಿರುದಮಣಿಮಾಲಾ.

ಕರಂಭಕಂ ತು ಭಾಷಾಭಿರ್ವಿವಿಧಾಭಿರ್ವಿನಿರ್ಮಿತಮ್ ॥
ಯಥಾ ಷೋಡಶಭಾಷಾಮಯೀ ಪ್ರಶಸ್ತಿರತ್ನಾವಳೀ.

ಏವಮನ್ಯೇಽಪಿ ಭೇದಾ ಉದ್ದೇಶಮಾತ್ರಪ್ರಸಿದ್ಧತ್ವಾತ್ ಉಕ್ತಭೇದಾನತಿಕ್ರಮಾಚ್ಚ ನ ಪೃಥಕ್ ಲಕ್ಷಿತಾಃ.

ಒಂದನ್ನೊಂದು ಅಪೇಕ್ಷಿಸದಂತೆ ಸ್ವತಂತ್ರವೆನಿಸಿರುವ ಶ್ಲೋಕಗಳ ಸಮೂಹವೇ ಕೋಷವೆನಿಸುತ್ತದೆ. ಒಂದೇ ರೀತಿಯಲ್ಲಿ ಅನೇಕ ಪದಾರ್ಥಗಳನ್ನು ಜೋಡಿಸುವಂತೆ ಈ ಪದ್ಯಗಳ ಜೋಡಣೆಯು ಮನೋಹರವಾಗಿರುತ್ತದೆ. ಒಂದೇ ಜಾತಿಯ ಪದ್ಯಗಳನ್ನು ಒಂದೆಡೆಗೆ ಸೇರಿಸುವುದೇ ವ್ರಜ್ಯವೆನಿಸುವುದು. ಮುಕ್ತಾವಳಿ ಮೊದಲಾದವು ವ್ರಜ್ಯವೆನಿಸಿವೆ. ಇದರಂತೆಯೇ ಕೋಷವಿರುತ್ತದೆ.

ಇನ್ನು ಮುಂದೆ ಗದ್ಯಕಾವ್ಯಗಳನ್ನು ವಿವರಿಸುತ್ತಾನೆ. ಛಂದಸ್ಸಿಗೆ ಸಂಬಂಧಿಸಿದ ಹ್ರಸ್ವದೀರ್ಘಮೊದಲಾದ ನಿಯಮಗಳಿಲ್ಲದಿರುವಂತಹ ಕಾವ್ಯವೇ ಗದ್ಯವೆನಿಸುತ್ತದೆ. ಇದು ಮುಕ್ತಕ, ವೃತ್ತಗಂಧಿ, ಉತ್ಕಲಿಕಾಪ್ರಾಯ, ಚೂರ್ಣಕ ಎಂದು ನಾಲ್ಕುಬಗೆ ಎನಿಸಿದೆ. ಸಮಾಸಗಳಿಲ್ಲದ್ದು ಮುಕ್ತಕವೆನಿಸುವುದು. ವೃತ್ತದ ಕೊಂಚ ಭಾಗದಿಂದ

ಕೂಡಿದ್ದು ವೃತ್ತಗಂಧಿ ಎನಿಸುವುದು. ದೀರ್ಘಸಮಾಸಗಳಿರುವಂತಹದು ಉತ್ಕಲಿಕಾ ಪ್ರಾಯವೆನಿಸುವುದು. ದೊಡ್ಡ ದೊಡ್ಡ ಅಲೆಗಳಂತೆ ಇಲ್ಲಿ ಸಮಾಸಗಳಿರುತ್ತವೆ. ಎರಡು ಮೂರು ಪದಗಳ ಸಮಾಸಗಳಿಂದ ಕೂಡಿದ್ದು ಚೂರ್ಣಕವೆನಿಸುವುದು. 'ಗುರುರ್ವಚಸಿ ಪೃಥುರುರಸಿ" ಎಂಬಲ್ಲಿ ಸಮಾಸವೇ ಇಲ್ಲದ್ದರಿಂದ ಇದು ಮುಕ್ತಕವೆನಿಸಿದೆ. (ಇವನು ಮಾತಿನಲ್ಲಿ ಗೌರವವುಳ್ಳವನೂ ವಕ್ಷಸ್ಥಳದಲ್ಲಿ ವಿಶಾಲವೂ ಆಗಿರುವನು) ಅಲ್ಲಲ್ಲಿ ಕೊಂಚವಾಗಿ ವೃತ್ತದ ವಾಸನೆಯನ್ನೊಳಗೊಂಡಿದ್ದು ವೃತ್ತಗಂಧಿ ಎನಿಸುತ್ತದೆ. ಅದನ್ನು 'ಸಮರಕಂಡೂಯನ' ಎಂಬ ಉದಾಹರಣದಲ್ಲಿ ಕಾಣಬಹುದು. 'ಕುಂಡಲೀಕೃತಕೋದಂಡ' ಎಂಬುದು ಅನುಷ್ಟುಪ್‌ವೃತ್ತದ ಪಾದವೆನಿಸಿದೆ. ಸಮರಕಂಡೂಯನ ಎಂಬಲ್ಲಿ ಸಮ ಎಂಬ ಮೊದಲನೆಯ ಎರಡು ಅಕ್ಷರಗಳನ್ನು ಬಿಟ್ಟರೆ ಅದೂ ಸಹ ಅನುಷ್ಟುಪ್‌ವೃತ್ತದ ಭಾಗವೇ ಆಗುತ್ತದೆ. ಆದ್ದರಿಂದ ಈ ಬಗೆಯ ಗದ್ಯವು ವೃತ್ತ ವೃತ್ತಸಂಧಿ ಎನಿಸುತ್ತದೆ. "ಯುದ್ಧದ ನೆವದಿಂದ ನಿಬಿಡವಾದ ಭುಜದಂಡಗಳಿಂದ ಸಂಪೂರ್ಣವಾಗಿ ಸೆಳೆದ ಧನುಸ್ಸಿನ ಶಿಂಜಿನಿಯ ಧ್ವನಿಯಿಂದ ಶತ್ರುರಾಜರಿಗೆ ನಿದ್ರೆಯನ್ನು ಬಿಡಿಸಿ ಮೇಲಕ್ಕೆ ಏಳಿಸುತ್ತಿರುವ ಮಹಾರಾಜನೇ!" ಇದು ಈ ವಚನದ ಅರ್ಥ. ಹೆಚ್ಚು ಸಮಾಸಗಳಿರುವ ಗದ್ಯವೇ ಉತ್ಕಲಿಕಾಪ್ರಾಯವೆನಿಸುವುದು. (ಯಾವಾಗಲೂ ತಡೆಯಿಲ್ಲದಂತೆ ಸುರಿಯುವ ಬಾಣಗಳ ಸಮೂಹದಿಂದ ಶತ್ರುಗಳ ತಂಡವನ್ನು ನಾಶಗೊಳಿಸುವವನೇ) ಇಲ್ಲಿ ಹೇಳಿರುವ ವಾಕ್ಯವೆಲ್ಲವೂ ಒಂದೇ ದೀರ್ಘಸಮಾಸವೆನಿಸಿರುವುದರಿಂದ ಇದು ಉತ್ಕಲಿಕಾಪ್ರಾಯವೆನಿಸಿದೆ. "ಗುಣರತ್ನಸಾಗರ, ಜಗದೇಕನಾಗರ! ಕಾಮಿನೀಮದನ! ಜನರಂಜನ" ಇಲ್ಲಿ ಎರಡು ಮೂರು ಪದಗಳಿಂದ ಆಗಿರುವ ಸಮಾಸಗಳಿರುವ ಪ್ರಯುಕ್ತ ಇದು ಚೂರ್ಣಕವೆನಿಸಿದೆ.

ಕಥೆಯಲ್ಲಿ ಸ್ವಾರಸ್ಯವಾದ ವಸ್ತುವನ್ನು ಗದ್ಯಗಳಿಂದಲೇ ರಚಿಸಲಾಗುವುದು. ಕೆಲವು ಕಡೆಗಳಲ್ಲಿ ಆರ್ಯಾವೃತ್ತದಲ್ಲೂ ಕೆಲವುಕಡೆ ವಕ್ತ್ರ ಅಪವಕ್ತ್ರವೃತ್ತಗಳಲ್ಲೂ ಪದ್ಯಗಳು ಬಂದಿರುತ್ತವೆ. ಮೊದಲು ಪದ್ಯಗಳಲ್ಲಿ ದೇವರ ಬಗ್ಗೆ ನಮಸ್ಕಾರವೂ ನೀಚರ ದುರ್ವರ್ತನೆಯೂ ಬಂದಿರುತ್ತವೆ. ಕಾದಂಬರಿಯೇ ಇದಕ್ಕೆ ಉದಾಹರಣವೆನಿಸಿದೆ. ಆಖ್ಯಾಯಿಕೆಯೂ ಕಥೆಯಂತೆಯೇ ಇರುತ್ತದೆ. ಆದರೆ ಇದರಲ್ಲಿ ಕವಿಯ ವಂಶವರ್ಣನೆ ವಿಶೇಷವಾಗಿ ಬರುತ್ತದೆ. ಇದೇ ಆಖ್ಯಾಯಿಕೆಯ ಲಕ್ಷಣವೆನಿಸುತ್ತದೆ. ಕಥೆಯಲ್ಲೂ ಇದು ಕೆಲವು ವೇಳೆ ಬಂದಿರುವುದಾಗಿ ಕಂಡಿದೆ. ಆಖ್ಯಾಯಿಕೆಯಲ್ಲಿ ಬೇರೆ ಕವಿಗಳ ವೃತ್ತಪದ್ಯಗಳು ಅಲ್ಲಲ್ಲಿ ಸೇರಿರುತ್ತವೆ. ಕಥಾಂಶಗಳ ಪರಿಚ್ಛೇದವನ್ನು ಆಶ್ವಾಸಗಳಾಗಿ ಆರ್ಯ, ವಕ್ತ್ರ, ಅಪವಕ್ತ್ರ ವೃತ್ತಗಳಲ್ಲಿ ಕವಿಯು ರಚಿಸುತ್ತಾನೆ. ಆಶ್ವಾಸದ ಆರಂಭದಲ್ಲಿ ಯಾವುದಾದರೂ ನೆಪದಿಂದ ಮುಂದಿನ ವಿಷಯವನ್ನು ಸೂಚಿಸಲಾಗುವುದು. ಹರ್ಷಚರಿತವೇ ಈ ಬಗೆಯ ಆಖ್ಯಾಯಿಕೆ ಎಂದು ಪ್ರಸಿದ್ಧವಾಗಿದೆ. ಆಖ್ಯಾಯಿಕೆಯನ್ನು ನಾಯಕನೇ ಹೇಳಬೇಕು" ಎಂದು ಕೆಲವರು ಹೇಳುತ್ತಾರೆ. ಇದು ಯುಕ್ತವಲ್ಲ. ಆಖ್ಯಾಯಿಕೆಯಲ್ಲಿ ಕೆಲವು ಭಾಗಗಳನ್ನು

ನಾಯಕನಲ್ಲದೆ ಇತರರೂ ಹೇಳಿರುವುದರಿಂದ ಅವನೇ ಹೇಳಬೇಕೆಂಬ ನಿಯಮವು ಕಂಡು ಬರುವುದಿಲ್ಲವೆಂಮ ದಂಡಿಯು ಹೇಳಿದ್ದಾನೆ. ಆಖ್ಯಾನ ಮೊದಲಾದವು ಕಥೆ ಆಖ್ಯಾಯಿಕೆ ಇವುಗಳಲ್ಲಿಯೇ ಸೇರುವುದರಿಂದ ಅವನ್ನು ಬೇರೆಯಾಗಿ ತಿಳಿಸಿಲ್ಲ. "ಆಖ್ಯಾನ ಮೊದಲಾದವೆಲ್ಲವೂ ಇವೆರಡರಲ್ಲಿಯೇ ಸೇರಿಕೊಳ್ಳುತ್ತವೆ." ಎಂದು ದಂಡಿಯೂ ಹೇಳಿದ್ದಾನೆ. ಮುಂದೆ ಗದ್ಯಪದ್ಯಮಯವಾದ ಕಾವ್ಯವನ್ನು ತಿಳಿಸುತ್ತಾನೆ. ಅಂತಹ ಕಾವ್ಯವನ್ನು ಚಂಪೂ ಎಂದು ಕರೆಯಲಾಗಿದೆ. ದೇಶರಾಜಚರಿತವೇ ಇಂತಹ ಕಾವ್ಯವೆನಿಸಿದೆ. ಗದ್ಯದಲ್ಲೂ ಪದ್ಯದಲ್ಲೂ ರಚಿತವಾಗಿರುವ ರಾಜರ ಸ್ತೋತ್ರವು ಬಿರುದ ಎನಿಸಿದೆ. ಬಿರುದಮಣಿಮಾಲೆಯೇ ಇದಕ್ಕೆ ಉದಾಹರಣವೆನಿಸಿದೆ. ಅನೇಕ ಬಗೆಯ ಭಾಷೆಗಳಿಂದ ವಿರಚಿತದಾದ ಕಾವ್ಯವು ಕರಂಭಕವೆನಿಸುತ್ತದೆ. ಹದಿನಾರು ಭಾಷೆಗಳಲ್ಲಿ ರಚಿಸಿರುವ ಪ್ರಶಸ್ತಿರತ್ನಾವಳಿ ಎಂಬುದೇ ಇಂತಹ ಕಾವ್ಯವೆನಿಸಿದೆ. ಹೀಗೆಯೇ ಬೇರೆ ಕಡೆಗಳಲ್ಲಿ ಉದಾಹರಣ, ಚಕ್ರಬಾಲಕ, ಭೋಗಾವಳೀ, ಬಿರುದಾವಳೀ, ತಾರಾವಳೀ, ವಿಶ್ವಾವಳೀ, ರತ್ನಾವಳೀ, ಸಂಚಾನನಾವಳೀ ಮೊದಲಾದ ಕಾವ್ಯಗಳೂ ಇವೆ. ಇವು ಕೇವಲ ಹೆಸರಿನಿಂದ ಪ್ರಸಿದ್ಧವಾಗಿವೆ. ಇವುಗಳಲ್ಲಿ ಕೆಲವು ಹಿಂದೆ ಹೇಳಿರುವ ಕಾವ್ಯಗಳಲ್ಲಿಯೇ ಸೇರಲಿವೆ. ಆದ್ದರಿಂದ ಇವನ್ನು ಬೇರೆಯಾಗಿ ತಿಳಿಸಿಲ್ಲ.

## ಏಳನೆಯ ಪರಿಚ್ಛೇದ

ಇಹ ಪ್ರಥಮತಃ ಕಾವ್ಯೇ ದೋಷಗುಣರೀತ್ಯಲಂಕಾರಾಣಾಂ ಅವಸ್ಥಿತಿಕ್ರಮೋ ದರ್ಶಿತಃ. ಸಂಪ್ರತಿ ಕೇ ತೇ ಇತ್ಯಪೇಕ್ಷಾಯಾಂ ಉದ್ದೇಶಕ್ರಮಪ್ರಾಪ್ತಾನಾಂ ದೋಷಾಣಾಂ ಸ್ವರೂಪಮಾಹ—

ರಸಾಪಕರ್ಷಕಾ ದೋಷಾಃ ತೇ ಪುನಃ ಪಂಚಧಾ ಮತಾಃ ।
ಪದೇ ಪದಾಂಶೇ ವಾಕ್ಯೇಽರ್ಥೇ ಸಂಭವಂತಿ ರಸೇಽಪಿ ಯತ್ ॥

ಅಸ್ಯಾರ್ಥಃ ಪ್ರಾಗೇವ ಸ್ಫುಟೀಕೃತಃ. ತದ್ವಿಶೇಷಾಸ್ತ್ವತ್ರಾಭಿಹಿತಾಃ.

ತತ್ರ—ದುಃಶ್ರವತ್ರಿವಿಧಾಶ್ಲೀಲಾನುಚಿತಾರ್ಥಾಪ್ರಯುಕ್ತತಾಃ ।
ಗ್ರಾಮ್ಯಾಪ್ರತೀತಸಂದಿಗ್ಧನೇಯಾರ್ಥನಿಹತಾರ್ಥತಾಃ ॥
ಅವಾಚಕತ್ವಂ ಕ್ಲಿಷ್ಟತ್ವಂ ವಿರುದ್ಧಮತಿಕಾರಿತಾ ।
ಅವಿಮೃಷ್ಟವಿಧೇಯಾಂಶಭಾವಶ್ಚ ಪದವಾಕ್ಯಯೋಃ ॥
ದೋಷಾಃ ಕೇಚಿದ್ಭವಂತ್ಯೇಷು ಪದಾಂಶೇಽಪಿ ಪದೇ ಪರೇ ।
ನಿರರ್ಥಕಾಸಮರ್ಥತ್ವೇ ಚ್ಯುತಸಂಸ್ಕಾರತಾ ತಥಾ ॥

ಪರುಷವರ್ಣತಯಾ ಶ್ರುತಿದುಃಖಾವಹತ್ವಂ ದುಃಶ್ರವತ್ವಮ್.

ಯಥಾ—ಕಾರ್ತಾರ್ಥ್ಯಂ ಯಾತು ತನ್ವಂಗೀ ಕದಾನಂಗವಶಂವದಾ ।

ಅಶ್ಲೀಲತ್ವಂ ವ್ರೀಡಾಜುಗುಪ್ಸಾಽಮಂಗಳವ್ಯಂಜಕತ್ವಾತ್ ತ್ರಿವಿಧಮ್ ॥

ಕ್ರಮೇಣೋದಾಹರಣಮ್—ದೃಪ್ತಾರಿವಿಜಯೇ ರಾಜನ್ ಸಾಧನಂ ಸುಮಹತ್ತವ ।

ಪ್ರಸಸಾರ ಶನೈರ್ವಾಯುರ್ವಿನಾ ಶೇ ತನ್ವಿ ! ತೇ ಮುದಾ ॥

ಅತ್ರ ಸಾಧನವಾಯುವಿನಾಶಶಬ್ದಾಃ ಅಶ್ಲೀಲಾಃ.

ಶೂರಾ ಅಮರತಾಂ ಯಾಂತಿ ಪಶುಭೂತಾ ರಣಾಧ್ವರೇ ।

ಅತ್ರ ಪಶುಪದಂ ಕಾತರ್ಯಮಭಿವ್ಯನಕ್ತೀತ್ಯನುಚಿತಾರ್ಥತ್ವಮ್. ಯಥಾ 'ಭಾತಿ ಪದ್ಮಃ ಸರೋವರೇ'ಅತ್ರ ಪದ್ಮಶಬ್ದಃ ಪುಲ್ಲಿಂಗಃ.ಗ್ರಾಮ್ಯತ್ವಂ ಯಥಾ'ಕಟಿಸ್ತೇ ಹರತೇ ಮನಃ' ಅತ್ರ ಕಟಿಶಬ್ದೋ ಗ್ರಾಮ್ಯಃ. ಅಪ್ರತೀತತ್ವಮೇಕದೇಶಮಾತ್ರಪ್ರಸಿದ್ಧತ್ವಮ್ ಯಥಾ 'ಯೋಗೇನ ದಲಿತಾಶಯಃ' ಇತಿ. ಅತ್ರ ಯೋಗಶಾಸ್ತ್ರ ಏವ ವಾಸನಾರ್ಥ ಆಶಯಶಬ್ದಃ.

ಆಶೀಃಪರಂಪರಾಂ ವಂದ್ಯಾಂ ಕರ್ಣೇ ಕೃತ್ವಾ ಕೃಪಾಂ ಕುರು ।

ಅತ್ರ 'ವಂದ್ಯಾಂ' ಇತಿ ಕಿಂ ವಂದೀಭೂತಾಯಾಂ ಉತ ವಂದನೀಯಾಮಿತಿ ಸಂದೇಹಃ.

ನೇಯಾರ್ಥತ್ವಂ ರೂಢಿಪ್ರಯೋಜನಾಭಾವಾದಶಕ್ತಿಕೃತಂ ಲಕ್ಷ್ಯಾರ್ಥಪ್ರಕಾಶನಮ್. ಯಥಾ 'ಕಮಲೇ ಚರಣಾಘಾತಂ ಮುಖಂ ಸುಮುಖಿ! ತೇಽಕರೋತ್, ಅತ್ರ ಚರಣಾಘಾತೇನ ನಿರ್ಜಿತತ್ವಂ ಲಕ್ಷ್ಯಮ್.

ನಿಹತಾರ್ಥತ್ವಂ ಉಭಯಾರ್ಥಸ್ಯ ಶಬ್ದಸ್ಯಾಪ್ರಸಿದ್ಧೇಽರ್ಥೇ ಪ್ರಯೋಗಃ 'ಯಥಾ ಯಮುನಾಶಂಬರಮಂಬರಂ ವ್ಯತಾನೀತ್' ಅತ್ರ ಶಂಬರಶಬ್ದೋ ದೈತ್ಯೇ ಪ್ರಸಿದ್ಧಃ, ಇಹ ತು ಜಲೇ ನಿಹತಾರ್ಥಃ.

'ಗೀತೇಷು ಕರ್ಣಮಾದತ್ತೇ' ಅತ್ರ ಆಙಪೂರ್ವೋ ದಾಧಾತುರ್ದಾನಾರ್ಥೇ ಅವಾಚಕಃ. ಯಥಾ ವಾ 'ದಿನಂ ಮೇ ತ್ವಯಿ ಸಂಪ್ರಾಪ್ತೇ ಧ್ವಾಂತಚ್ಛನ್ನಾಪಿ ಯಾಮಿನೀ' ಅತ್ರ ದಿನಮಿತಿ ಪ್ರಕಾಶಮಯಾರ್ಥೇ ಅವಾಚಕಮ್.

ಕ್ಲಿಷ್ಟತ್ವಂ ಅರ್ಥಪ್ರತೀತೇರ್ವ್ಯವಹಿತತ್ವಮ್. ಯಥಾ— "ಕ್ಷೀರೋದಜಾಜನ್ಮಭುವಃ ಪ್ರಸನ್ನಾಃ" ಅತ್ರ ಕ್ಷೀರೋದಜಾಲಕ್ಷ್ಮೀಸ್ತಸ್ಯಾ ವಸತಿಃ ಪದ್ಮಂ, ತಸ್ಯ ಜನ್ಮಭುವೋ ಜಲಾನಿ ಇತ್ಯರ್ಥಪ್ರತೀತೌ ವ್ಯವಧಾನಮ್.

'ಭೂತಯೇಽಸ್ತುಃ ಭವಾನೀಶಃ, ಅತ್ರ ಭವಾನೀಶಬ್ದೋ ಭವಾನ್ಯಾಃ ಪತ್ಯಂತರಪ್ರತೀತಿಕಾರಿತ್ವಾತ್ ವಿರುದ್ಧಮತಿಕೃತ್.

ವಿಧೆ ಯಸ್ಯಾಂಶಸ್ಯ ವಿಮರ್ಶಾಭಾವೇನ ಗುಣೀಭೂತತ್ವಂ ಅವಿಮೃಷ್ಟವಿಧೇಯಾಂಶತ್ವಮ್. ಯಥಾ– 'ಸ್ವರ್ಗಗ್ರಾಮಟಿಕಾವಿಲುಂಠನವೃಥೋಚ್ಛೂನೈಃ ಕಿಮೇಭಿರ್ಭುಜೈಃ'ಅತ್ರ ವೃಥಾತ್ವಂ ವಿಧೇಯಮ್.ತಚ್ಚ ಸಮಾಸೇ ಗುಣೀಭಾವಾದನುವಾದ್ಯತ್ವಪ್ರತೀತಿಕೃತ್.

ಯಥಾ ವಾ 'ರಕ್ಷಾಂಸ್ಯಪಿ ಪುರಃ ಸ್ಥಾತುಮಲಂ ರಾಮಾನುಜಸ್ಯ ಮೇ' ಅತ್ರ ರಾಮಸ್ಯೇತಿ ವಾಚ್ಯಮ್. ಯಥಾ ವಾ 'ಆಸಮುದ್ರಕ್ಷಿತೀಶಾನಾಮ್' ಅತ್ರ ಆಸಮುದ್ರಂ ಇತಿ ವಾಚ್ಯಮ್.

ಯಥಾ ವಾ–'ಯತ್ರ ತೇ ಪತತಿ ಸುಭ್ರು ! ಕಟಾಕ್ಷಃ ಷಷ್ಠಬಾಣ ಇವ ಪಂಚಶರಸ್ಯ' ಅತ್ರ ಷಷ್ಠ ಏವ ಇತ್ಯುತ್ಪ್ರೇಕ್ಷ್ಯಮ್.

ಯಥಾ ವಾ 'ಅಮುಕ್ತಾ ಭವತಾ ನಾಥ ಮುಹೂರ್ತಮಪಿ ಸಾ ಪುರಾ' ಅತ್ರ ಅಮುಕ್ತೇತ್ಯತ್ರ ನಞಃ ಪ್ರಸಜ್ಯಪ್ರತಿಷೇಧತ್ವಮಿತಿ ವಿಧೇಯತ್ವಮೇವೋಚಿತಮ್.

ಯದಾಹುಃ—ಅಪ್ರಾಧಾನ್ಯಂ ವಿಧೇರ್ಯತ್ರ ಪ್ರತಿಷೇಧೇ ಪ್ರಧಾನತಾ ।
ಪ್ರಸಜ್ಯ ಪ್ರತಿಷೇಧೋಽಸೌ ಕ್ರಿಯಯಾ ಸಹ ಯತ್ರ ನಞ ॥

ಯಥಾ 'ನವಜಲಧರಃ ಸನ್ನದ್ಧೋಽಯಂ ನ ದೃಪ್ತನಿಶಾಚರಃ'

ಉಕ್ತೋದಾಹರಣೇ ತು ತತ್ಪುರುಷಸಮಾಸೇ ಗುಣೀಭಾವೇ ನಞಃ ಪರ್ಯುದಾಸತಯಾ ನಿಷೇಧಸ್ಯ ವಿಧೇಯತಯಾಽನವಗಮಃ.

ಯದಾಹುಃ—ಪ್ರಧಾನತ್ವಂ ವಿಧೇರ್ಯತ್ರ ಪ್ರತಿಷೇಧೇಽಪ್ರಧಾನತಾ ।
ಪರ್ಯುದಾಸಃ ಸ ವಿಜ್ಞೇಯೋ ಯತ್ರೋತ್ತರಪದೇನ ನಞ ॥

ತೇನ—ಜುಗೋಪಾತ್ಮಾನಮತ್ರಸ್ತೋ ಭೇಜೇ ಧರ್ಮಮನಾತುರಃ ॥
ಅಗೃಧ್ನುರಾದದೇ ಸೋಽರ್ಥಾನ್ ಅಸಕ್ತಃ ಸುಖಮನ್ವಭೂತ್ ॥

ಅತ್ರ ಅತ್ರಸ್ತತಾದ್ಯನೂದ್ಯ ಆತ್ಮಗೋಪನಾದ್ಯೇವ ವಿಧೇಯಮಿತಿ ನಞಃ ಪರ್ಯುದಾಸತಯಾ ಗುಣಭಾವೋ ಯುಕ್ತಃ.

ನನು ಅಶ್ರಾದ್ಧಭೋಜೀ ಬ್ರಾಹ್ಮಣಃ 'ಅಸೂರ್ಯಂಪಶ್ಯಾ ರಾಜದಾರಾಃ' ಇತ್ಯತ್ರಾಪಿ ಪ್ರಸಜ್ಯಪ್ರತಿಷೇಧೋ ಭವತೀತಿ ಚೇತ್ ನ, ಅತ್ರಾಪಿ ಯದಿ ಭೋಜನಾದಿ ರೂಪಕ್ರಿಯಾಂಶೇನ ನಞಃ ಸಂಬಂಧಃ ಸ್ಯಾತ್, ತದೈವ ತತ್ರ ಪ್ರಸಜ್ಯಪ್ರತಿಷೇಧತ್ವಂ ವಕ್ತುಂ ಶಕ್ಯಮ್. ನ ಚ ತಥಾ' ವಿಶೇಷ್ಯತಯಾ ಪ್ರಧಾನೇನ ತದ್ಭೋಜ್ಯಾದ್ಯರ್ಥೇನ ಕರ್ತ್ರಂಶೇನೈವ ನಞಃ ಸಂಬಂಧಾತ್.

ಯದಾಹುಃ—ಶ್ರಾದ್ಧಭೋಜನಶೀಲೋ ಹಿ ಯತಃ ಕರ್ತಾ ಪ್ರತೀಯತೇ ।
ನ ತದ್ಭೋಜನಮಾತ್ರಂ ತು ಕರ್ತರೀನೇರ್ವಿಧಾನತಃ ॥ ಇತಿ.

'ಅಮುಕ್ತಾ' ಇತ್ಯತ್ರ ತು ಕ್ರಿಯಯೈವ ಸಹ ಸಂಬಂಧ ಇತಿ ದೋಷ ಏವ. ಏತೇ ಚ ಕ್ಲಿಷ್ಟತ್ವಾದಯಃ ಸಮಾಸಗತಾ ಏವ ಪದದೋಷಾಃ.

ಕಾವ್ಯದಲ್ಲಿ ದೋಷಗಳು, ಗುಣಗಳು, ರೀತಿ, ಅಲಂಕಾರಗಳು ಇರಬೇಕಾದ ಕ್ರಮವನ್ನು ಹಿಂದೆ ತೋರಿಸಿಯಾಯಿತು. ಈಗ ಅವು ಯಾವುವೆಂದು ತಿಳಿಸಲಿಕ್ಕಾಗಿ ಇಲ್ಲಿ ಹೇಳಿರುವ ಕ್ರಮದಂತೆ ಮೊದಲು ದೋಷಗಳ ಸ್ವರೂಪವನ್ನು ತಿಳಿಸುತ್ತಾನೆ. ರಸ, ಭಾವ, ಅವುಗಳ ಅಭಾಸ, ಭಾವಸಂಧಿ, ಭಾವಪ್ರಶಮ, ಭಾವಶಬಲತೆ ಇವುಗಳಲ್ಲಿ ಯಾವುದೊಂದನ್ನಾಗಲೀ ನೇರವಾಗಿಯೋ, ಬೇರೊಂದರ ಮೂಲಕವೋ ಸಭ್ಯರಿಗೆ ಆಸ್ವಾದನಮಾಡಿಸಿಕೊಡದೇ ಇರುವ ಅಂಶವೇ ದೋಷವೆನಿಸುವುದು. ಇದರಿಂದ ರಸಾನುಭವಕ್ಕೆ ಅಡಚಣೆಯನ್ನು ತಂದೊಡ್ಡುವ ಧರ್ಮವೇ ದೋಷವೆಂದು ಹೇಳಿದಂತಾಯಿತು. ಇವು ಐದು ಬಗೆಯಾಗಿರುವುವು. ಪದದಲ್ಲೂ, ಪದದ ಅವಯವಗಳಲ್ಲಿ

ಸಿದ ಸುಪ್, ತಿಙಪ್ರತ್ಯಯಗಳಲ್ಲೂ, ವಾಕ್ಯದಲ್ಲೂ, ಅರ್ಥದಲ್ಲೂ, ರಸದಲ್ಲೂ ಇವು ಸಂಭವಿಸುತ್ತವೆ. ದುಃಶ್ರವತ್ವ, ಮೂರು ಬಗೆಯ ಅಶ್ಲೀಲತೆ, ಅನುಚಿತಾರ್ಥತ್ವ, ಅಪ್ರಯುಕ್ತತೆ, ಗ್ರಾಮ್ಯತೆ, ಅಪ್ರತೀತತ್ವ, ಸಂದಿಗ್ಧತೆ, ನೇಯಾರ್ಥತ್ವ, ಅವಾಚಕತ್ವ, ಕ್ಲಿಷ್ಟತ್ವ, ವಿರುದ್ಧಮತಿಕಾರಿತ್ವ, ಅವಿಮೃಷ್ಟಾವಿಧೇಯಾಂಶತ್ವ ಈ ಬಗೆಯ ಹದಿಮೂರು ದೋಷಗಳು ಪದದಲ್ಲೂ, ವಾಕ್ಯದಲ್ಲೂ ಸಂಭವಿಸುತ್ತವೆ. ಇಲ್ಲಿ ಹೇಳಿರುವ ಕೆಲವು ದೋಷಗಳು ಪದಾಂಶದಲ್ಲೂ ಇರುತ್ತವೆ ಎಂದು ಕೆಲವರು ಹೇಳುತ್ತಾರೆ. ದುಃಶ್ರವತ್ವ, ಅಶ್ಲೀಲತ್ವ, ನಿಹತಾರ್ಥತ್ವ, ಅವಾಚಕತ್ವ, ನೇಯಾರ್ಥತ್ವ ಇವು ಪದಾಂಶದಲ್ಲೂ ಇರುತ್ತವೆ. ಹಾಗೆಯೇ ನಿರರ್ಥಕತ್ವ, ಅಸಮರ್ಥತ್ವ, ಚ್ಯುತಸಂಸ್ಕಾರತ್ವ ಇವು ಮೂರು ದೋಷಗಳು ಪದದಲ್ಲಿ ಮಾತ್ರವೇ ಸಂಭವಿಸುತ್ತವೆ.

ಈಗ ಕ್ರಮವಾಗಿ ಒಂದೊಂದನ್ನು ವಿವರಿಸುತ್ತಾನೆ. ಶಬ್ದದಲ್ಲಿ ಕರ್ಕಶವಾದ ಅಕ್ಷರಗಳಿರುವುದರಿಂದ ಕೇಳುವಾಗ ಕ್ಲೇಶವನ್ನುಂಟುಮಾಡುವ ದೋಷವೇ ದುಃಶ್ರವತ್ವವೆನಿಸುವುದು. ಕೇಳುವಾಗ ದುಃಖವನ್ನುಂಟುಮಾಡುವುದೇ ಈ ಬಗೆಯ ದೋಷವೆನಿಸಿದೆ. ಒಂದೇ ಪದದಲ್ಲಿರುವ ಈ ಬಗೆಯ ದೋಷವನ್ನು ಉದಾಹರಿಸುತ್ತಾನೆ. "ಮನ್ಮಥನಿಗೆ ಅಧೀನಳಾಗಿರುವ ಈಕೆಯು ಪ್ರಿಯನ ಸಂಪರ್ಕದಿಂದ ಯಾವಾಗ ಕೃತಾರ್ಥತೆಯನ್ನು ಹೊಂದಿಯಾಳು !" ಇಲ್ಲಿ ಕೃತಾರ್ಥಶಬ್ದದ ಮೇಲೆ ಭಾವಾರ್ಥದಲ್ಲಿ ಯತ್ ಪ್ರತ್ಯಯವನ್ನು ಹಚ್ಚಿದ್ದರಿಂದ ಕಾರ್ತಾರ್ಥ್ಯ ಎಂಬ ಪದವು ಸಿದ್ಧವಾಗಿದೆ. ಇವರಲ್ಲಿ ಕಠಿಣವಾದ ಅಕ್ಷರಗಳೆರಡು ಇರುವುದರಿಂದ ರಸವನ್ನು ಆಸ್ವಾದಿಸಲು ಇಚ್ಛಿಸುವ ಸಹೃದಯನಿಗೆ ಈ ಪದವನನ್ನು ಕೇಳುವಾಗಲೇ ದುಃಖವಾಗುವ ಪ್ರಯುಕ್ತ ರಸಾಸ್ವಾದವೇ ಆಗುವಂತಿಲ್ಲ. ಹೀಗೆ ರಸಾಸ್ವಾದಕ್ಕೆ ಹಾನಿಯಾಗುವುದರಿಂದ ಇಲ್ಲಿ ದುಶ್ರವವೆಂಬ ದೋಷವಿದೆ.

ವ್ರೀಡೆ, ಜುಗುಪ್ಸೆ, ಅಮಂಗಳವನ್ನು ಸೂಚಿಸುವುದರಿಂದ ಅಶ್ಲೀಲವೆಂಬ ದೋಷವು ಮೂರು ಬಗೆಯಾಗಿದೆ. "ಎಲೈ ರಾಜನೇ, ಗರ್ವಿಷ್ಟರಾದ ಶತ್ರುಗಳನ್ನು ಜಯಿಸುವುದರಲ್ಲಿ ನಿನಗೆ ಸೈನ್ಯ, ಶಸ್ತ್ರ ಮೊದಲಾದ ಉಪಾಯಗಳೆಲ್ಲವೂ ಸಿದ್ಧವಾಗಿದೆ" ಇಲ್ಲಿ ಸಾಧನ ಪದವು ಲಜ್ಜೆಯನ್ನು ಸೂಚಿಸುತ್ತ ರಾಜನ ರತಿಭಾವನ್ನು ಅನುಭವಿಸಲಿಕ್ಕೆ ಅಡಚಣೆಯನ್ನು ತಂದೊಡ್ಡುತ್ತದೆ. "ಎಲೈ ಕೃಶಾಂಗಿಯೇ, ಆಗ ನೀನು ಕಾಣಿಸದೇ ಇದ್ದುದರಿಂದ ಗಾಳಿಯು ಮೆಲ್ಲಗೆ ಸುಳಿದಾಡುತ್ತಿತ್ತು" ಇಲ್ಲಿ ಪ್ರಥಮಪಾದದಲ್ಲಿ ಸೃಧಾತುವಿಗೆ ಕರ್ತೃವೆನಿಸಿದ ವಾಯುವನ್ನು ತಿಳಿಸುವ ಪದವು ಜುಗುಪ್ಸೆಯನ್ನು ಹುಟ್ಟಿಸುವುದರಿಂದ ಕೇಳುವವನಿಗೆ ರಸಾನುಭವಕ್ಕೆ ಅಡಚಣೆಯಾಗುತ್ತದೆ. ಎರಡನೆಯ ಪದದಲ್ಲಿ ವಿನಾಶವೆಂಬ ಪದವು ಮರಣವೆಂಬ ಅಂಗಳಾರ್ಥವನ್ನು ತಿಳಿಸುವುದರಿಂದ ಕೇಳುವವನಿಗೆ ಉದ್ವೇಗ ಉಂಟಾಗಿ ಇದರಿಂದ ರಸದ ಪ್ರಾಮುಖ್ಯತೆಗೆ ಭಂಗವುಂಟಾಗುವುದು. ಈ ಮೂರು ಬಗೆಯ ಅಶ್ಲೀಲವೂ ಕಾವ್ಯದೋಷವೆನಿಸುತ್ತದೆ. "ವೀರರು ಯುದ್ಧಯಜ್ಞದಲ್ಲಿ ಮೇಕೆ ಮೊದಲಾದ ಪಶುಗಳಂತೆ ಕುತ್ತಿಗೆಯನ್ನು ಸಮರ್ಪಿಸಿ ಸ್ವರ್ಗಕ್ಕೆ

ಹೋಗುತ್ತಾರೆ" ಇಲ್ಲಿ ಪಶುಪದವು ವೈಮನಸ್ಯವನ್ನು ಹುಟ್ಟಿಸುವುದರಿಂದ ರಸಪ್ರಕರ್ಷಕ್ಕೆ ಅಡಚಣೆ ಎನಿಸಿದೆ. ಕೋಶ ಮೊದಲಾದ ಕಡೆಗಳಲ್ಲಿ ಒಂದು ಪದವು ಪ್ರಸಿದ್ಧವೆನಿಸಿದ್ದರೂ ಅದನ್ನು ಅನೇಕರು ವಾಕ್ಯದಲ್ಲಿ ಉಪಯೋಗಿಸದೇ ಇದ್ದರೆ ಅದು ಅಪ್ರಯುಕ್ತವೆಂಬ ದೋಷವೆನಿಸುವುದು. 'ಪದ್ಮವು ಸರೋವರದಲ್ಲಿ ಶೋಭಿಸುತ್ತಿದೆ' ಎಂಬಲ್ಲಿ ಪದ್ಮಪದವನ್ನು ಪುಲ್ಲಿಂಗದಲ್ಲಿ ವಿಕಲ್ಪವಾಗಿ ಉಪಯೋಗಿಸಬಹುದೆಂದು ಅಮರಕೋಶದಲ್ಲಿ ಹೇಳಿದ್ದರೂ ಯಾರೂ ಹಾಗೆ ಪ್ರಯೋಗಿಸದೆ ಇರುವುದರಿಂದ ಇಲ್ಲಿ ಅಂತಹ ಪಯೋಗವು ರಸಕ್ಕೆ ಕುಂದುಕವಾಗುವುದು. "ನಿನ್ನ ಕಟಿಪ್ರದೇಶವು ಮನಸ್ಸನ್ನು ಅಪಹರಿಸುತ್ತದೆ" ಇಲ್ಲಿ ಕಟಿಶಬ್ದವು ಗ್ರಾಮ್ಯವೆನಿಸಿದೆ. ಎಲ್ಲೋ ಒಂದುಕಡೆ ಮಾತ್ರ ಪ್ರಸಿದ್ಧವೆನಿಸಿ ಬೇರೆ ಎಲ್ಲೂ ರೂಢಿಯಲ್ಲಿಲ್ಲದ ಪದವನ್ನು ಪ್ರಯೋಗಿಸುವುದು ಅಪ್ರತೀತವೆಂಬ ದೋಷವೆನಿಸು ಸುತ್ತದೆ. "ಚಿತ್ತವೃತ್ತಿಯ ನಿರೋಧದಿಂದ ಹೀನಸಂಸ್ಕಾರವನ್ನು ಕಳೆದುಕೊಳ್ಳಬೇಕು" ಎಂಬಲ್ಲಿ ಯೋಗಶಾಸ್ತ್ರದಲ್ಲಿ ಮಾತ್ರವೇ ಆಶ್ರಯಶಬ್ದವು ವಾಸನೆ ಎಂಬ ಅರ್ಥವನ್ನು ತಿಳಿಸುತ್ತದೆ. ಬೇರೆಕಡೆ ಈ ಅರ್ಥವು ತೋರುವುದಿಲ್ಲ. ಇಂತಹ ಪ್ರಯೋಗವು ಅಪ್ರತೀತ ವೆನಿಸಿ ಇದರಿಂದ ರಸಸ್ಫೂರ್ತಿಗೆ ಅಡಚಣೆಯಾಗುತ್ತದೆ.

ಈಗ ಪದದಲ್ಲಿರುವ ಸಂದಿಗ್ಧತೆ ಎಂಬ ದೋಷವನ್ನು ತಿಳಿಸುತ್ತಾನೆ. "ವಂದ್ಯ ವೆನಿಸಿದ ಆಶೀರ್ವಾದಸಮೂಹವನ್ನು ಕೇಳಿ ಕೃಪೆಮಾಡು" ಇಲ್ಲಿ ಯುದ್ಧದಲ್ಲಿ ಸೇರೆಸಿಕ್ಕಿ ರುವವನು ಬಂದೀ ಎನಿಸುವುಂತೆ ವಂದನಾರ್ಹನೂ ವಂದ್ಯನೆನಿಸುವುದರಿಂದ ಯಾವ ಅರ್ಥವನ್ನು ಗ್ರಹಿಸಬೇಕೆಂಬ ಬಗ್ಗೆ ಸಂದೇಹವಿರುವ ಪ್ರಯುಕ್ತ ಇಲ್ಲಿ ರಸಪ್ರಕರ್ಷಕ್ಕೆ ಅಡಚಣೆಯಾಗುತ್ತದೆ. ಕೇಳುವವನಿಗೆ ಇದೋ ಅದೋ ಎಂಬ ನಿಶ್ಚಯವಿಲ್ಲದಿರುವುದ ರಿಂದ ರಾಜನ ಬಗ್ಗೆ ರತಿಭಾವವು ವಿಳಂಬವಾಗಿ ತೋರುವುದು. ರೂಢಿಯಾಗಲೀ ಪ್ರಯೋಜನವಾಗಲೀ ಇಲ್ಲದಿರುವಾಗ ಒಂದು ಪದದಲ್ಲಿ ಲಕ್ಷ್ಯಾರ್ಥವನ್ನು ಗ್ರಹಿಸುವುದು ನೇಯಾರ್ಥವೆನಿಸುವುದು. ಇದು ಕವಿಗೆ ಶಬ್ದಪ್ರಯೋಗದಲ್ಲಿ ಸಾಕಷ್ಟು ಶಕ್ತಿಯಿಲ್ಲ ವೆಂಬುದನ್ನು ತಿಳಿಸುವುದು. "ಎಲೈ ಸುಮುಖಿಯೇ, ನಿನ್ನ ಮುಖವು ಕಮಲದಲ್ಲಿ ಪದ ಪ್ರಹಾರವನ್ನುಂಟುಮಾಡಿತು." ಇಲ್ಲಿ ಮುಖವು ಕಮಲವನ್ನು ಜಯಿಸಿತು ಎಂಬ ಅರ್ಥವು ಲಕ್ಷಣೆಯಿಂದ ತೋರುವುದೆಂಬುದೇ ಒಂದು ದೋಷವೆನಿಸಿದೆ. ಮುಖಕ್ಕೆ ಪಾದವಿಲ್ಲದ್ದ ರಿಂದ ಅವರಲ್ಲಿ ಪಾದಘಾತವು ಸಂಭವಿಸುವುದಿಲ್ಲವೆಂದು ಚರಣಾಘಾತವೆಂಬ ಪದದಿಂದ ಜಯಿಸಿತೆಂಬ ಲಕ್ಷ್ಯಾರ್ಥವನ್ನು ಗ್ರಹಿಸಲಾಗಿದೆ. ಆದರೆ ಹೀಗೆ ಗ್ರಹಿಸಲು ಇಲ್ಲಿ ರೂಢಿಯಾಗಲೀ ಪ್ರಯೋಜನವಾಗಲೀ ಯಾವುದೂ ಕಾಣುವುದಿಲ್ಲ. ಹೀಗಿದ್ದರೂ ಇಲ್ಲಿ ಲಕ್ಷಣೆಯಿಂದ ಲಕ್ಷ್ಯಾರ್ಥವನ್ನು ಗ್ರಹಿಸಿದ ಪ್ರಯುಕ್ತ ಇದು ನೇಯಾರ್ಥವೆಂಬ ದೋಷವೆನಿಸಿದೆ.

ಎರಡು ಅರ್ಥಗಳನ್ನು ತಿಳಿಸುವ ಪದಕ್ಕೆ ಪ್ರಸಿದ್ಧಾರ್ಥವನ್ನು ಬಿಟ್ಟು ಅಪ್ರಸಿದ್ಧ ವಾದ ಅರ್ಥದಲ್ಲಿ ಪ್ರಯೋಗಿಸುವುದೇ ನಿಹತಾರ್ಥವೆನಿಸುವುದು. 'ಯಮುದಾನದಿಯ ನೀರು ಆಕಾಶವನ್ನು ವ್ಯಾಪಿಸಿತು' ಇಲ್ಲಿ ಶಂಬರಶಬ್ದವು ದೈತ್ಯನನ್ನು ತಿಳಿಸುವುದಾಗಿ

ಪ್ರಸಿದ್ಧಿ ಇದೆ. ಅದು ನೀರೆಂಬ ಅರ್ಥವನ್ನು ತಿಳಿಸುವುದು ಪ್ರಸಿದ್ಧವೆನಿಸಿಲ್ಲ. ಆದ್ದರಿಂದ ಇಂತಹ ಪ್ರಯೋಗವು ನಿಹತಾರ್ಥವೆನಿಸುವುದರಿಂದ. ರಸಪ್ರಕರ್ಷಕ್ಕೆ ಅಡಚಣೆಯಾಗುತ್ತದೆ."ಗೀತಗಳಲ್ಲಿ ಕಿವಿಯನ್ನು ಅರ್ಪಿಸುತ್ತಾನೆ'ಎಂಬಲ್ಲಿ ಆಜಪೂರ್ವಕವಾದ ದಾಧಾತು 'ಅರ್ಪಿಸು' ಎಂಬ ಅರ್ಥವನ್ನು ಬೋಧಿಸುತ್ತದೆ' ಆದ್ದರಿಂದ ಇಂತಹ ಪ್ರಯೋಗವು ಅವಾಚಕವೆಂಬ ದೋಷವೆನಿಸುತ್ತದೆ. "ನೀನು ಎದುರಿಗೆ ಇದ್ದರೆ ಕತ್ತಲೆ ಎಲ್ಲವೂ ತೊಲಗಿ ರಾತ್ರಿಯು ಹಗಲಾಗುತ್ತದೆ." ಇಲ್ಲಿ ದಿನಶಬ್ದವು ಸೂರ್ಯಕಿರಣಗಳಿಂದ ವ್ಯಾಪಿಸಿದ ಕಾಲವನ್ನು ತಿಳಿಸುವುದರಿಂದ 'ರಾತ್ರಿಯು ಪ್ರಕಾಶಮಯವಾಗಿರುತ್ತದೆ' ಎಂಬ ಅರ್ಥವನ್ನು ತಿಳಿಸದೇ ಇರುವ ಪ್ರಯುಕ್ತ ಇದು ಅವಾಚಕವೆಂಬ ದೋಷವೆನಿಸಿದೆ. ಒಂದು ಪದವನ್ನು ಕೇಳಿದಾಗ ವಿವಕ್ಷಿತವಾದ ಅರ್ಥವು ತಡವಾಗಿ ತೋರುವುದಾದರೆ ಅಲ್ಲಿ ಕ್ಲಿಷ್ಟವೆಂಬ ದೋಷವು ಸಂಭವಿಸುತ್ತದೆ. "ಕ್ಷೀರಸಮುದ್ರದಲ್ಲಿ ಹುಟ್ಟಿದ ಲಕ್ಷ್ಮಿಗೆ? ಆವಾಸವೆನಿಸಿದ ಕಮಲಕ್ಕೆ ಆಶ್ರಯವಾದದ್ದು ನೀರು' ಎಂಬ ಅರ್ಥ ಸಮಸ್ತಪದದಿಂದಲೂ ತೋರಲಿಕ್ಕೆ ಬಹಳ ವಿಳಂಬವಾಗುವ ಪ್ರಯುಕ್ತ ಇದು ದೋಷವೆನಿಸಿದೆ. "ಭವಾನಿಯ ಪತಿ ಎನಿಸಿದ ಈಶ್ವರನು ನಿಮಗೆ ಐಶ್ವರ್ಯವನ್ನು ಕೊಡಲಿ" ಇಲ್ಲಿ ಭವಾನೀಶ ಎಂಬ ಶಬ್ದದಲ್ಲಿ ಭವಪದದ ಮೇಲೆ ಆನಜಪ್ರತ್ಯಯವು ಪತ್ನೀ ಎಂಬ ಅರ್ಥದಲ್ಲಿ ಬಂದು ಭವಾನೀ ಎಂದು ಆಗಿದೆ. ಭವನ ಹೆಂಡತಿ ಎಂಬುದೇ ಇದರ ಅರ್ಥ. ಭವನ ಹೆಂಡತಿಗೆ ಈಶನೆಂದು ಹೇಳಿದ್ದರಿಂದ ಈ ಪದವು ದೇವದತ್ತನ ಪತ್ನಿಯ ಪತಿ ಎಂಬಂತೆ ಭವಾನಿಗೆ ಬೇರೊಬ್ಬ ಪತಿ ಇರುವನೆಂಬ ಅಸಂಭಾವಿತವಾದ ಅರ್ಥವನ್ನು ತಿಳಿಸುತ್ತದೆ. ಆದ್ದರಿಂದ ಇದು ಕೇಳುವವರಿಗೆ ವಿರುದ್ಧವಾದ ಭಾವನೆಯನ್ನು ಹುಟ್ಟಿಸುವ ಪ್ರಯುಕ್ತ ದೋಷವೆನಿಸಿದೆ. ವಿಧೇಯಾಂಶವನ್ನು ಪ್ರಧಾನವಾಗಿ ತಿಳಿಸದೆ ಮತ್ತೊಂದಕ್ಕೆ ವಿಶೇಷಣವಾಗಿ ತಿಳಿಸುವುದೇ ಅವಿಮೃಷ್ಟವಿಧೇಯಾಂಶವೆಂಬ ದೋಷವೆನಿಸುವುದು. ತಿಳಿಸಬೇಕಾದ ಅಂಶವನ್ನು ಪ್ರಧಾನವಾಗಿ ತಿಳಿಸಬೇಕೇ ಹೊರತು ಮತ್ತೊಂದರಲ್ಲಿ ವಿಶೇಷಣವಾಗಿ ಸೇರಿರುವಂತೆ ಪ್ರಯೋಗಿಸಬಾರದು. 'ಸ್ವರ್ಗವೆಂಬ ಸಣ್ಣ ಹಳ್ಳಿಯನ್ನು ದರೋಡೆ ಮಾಡಿದ್ದರಿಂದ ವ್ಯರ್ಥವಾಗಿ ಬೆಳೆದಿರುವ ಈ ಭುಜಗಳಿಂದ ಏನು ಫಲ ?' ಇಲ್ಲಿ ಭುಜಗಳ ವೈಯರ್ಥ್ಯವನ್ನು ತಿಳಿಸುವುದೇ ಮುಖ್ಯವಾದ ಅಂಶ. ಅದೇ ಇಲ್ಲಿ ವಿಧೇಯಾಂಶ. ಅದು ಪ್ರಧಾನವಾಗಿ ನಿರ್ದಿಷ್ಟವಾಗದೆ ಸಮಾಸದಲ್ಲಿ ವಿಶೇಷಣವಾಗಿರುವುದರಿಂದ ಅನುವಾದ್ಯವೆಂಬ ಭಾವನೆಯನ್ನು ಹುಟ್ಟಿಸುತ್ತದೆ. ವಿಧೇಯಾಂಶವು ವಿಧೇಯವಾಗಿರಬೇಕೇ ಹೊರತು ಅನುವಾದ್ಯವಾಗಬಾರದು. "ರಾಮನ ಅನುಜನಾದ ನನಗೆ ರಾಕ್ಷಸರು ಹೇಗೆ ಎದುರಿಗೆ ನಿಲ್ಲಬಲ್ಲರು ?' ಇಲ್ಲಿ ರಾಮಪದವನ್ನು ಸ್ವತಂತ್ರವಾಗಿ ಉಪಯೋಗಿಸದೆ ಸಮಾಸದಲ್ಲಿ ಸೇರಿಸಿದ್ದರಿಂದ ಅದು ವಿಧೇಯವೆನಿಸದೆ ಅನುವಾದ್ಯವೆಂಬ ಭಾವನೆಯನ್ನು ಹುಟ್ಟಿಸಿದೆ. 'ಆಸಮುದ್ರಕ್ಷಿತಿಶಾನಾಂ' ಎಂಬಲ್ಲಿ (ಸಮುದ್ರದವರೆಗೂ ವ್ಯಾಪಿಸಿರುವ ಭೂಮಿಗೆ ಅಧೀಶರೆನಿಸಿದವರು) ಆಸಮುದ್ರಂ ಎಂಬ ಪದವನ್ನೇ ಪ್ರತ್ಯೇಕವಾಗಿ ಉಪಯೋಗಿಸಬೇಕಾಗಿತ್ತು. ಆ ರಾಜರಿಗೆ ಸಮುದ್ರಗಳ

ಮೇಲೂ ಯಾಜಮಾನ್ಯವಿತ್ತೆಂಬುದನ್ನು ತಿಳಿಸುವುದೇ ಕವಿಯ ಆಶಯ. ಇದು 'ಆ ಸಮುದ್ರಕ್ಷಿತೀಶಾನಾಂ' ಎಂಬದರಿಂದ ತೋರುವುದಿಲ್ಲ. 'ಸಮುದ್ರದವರೆಗೂ ಇರುವ ಭೂಮಿಯಮೇಲೆ ಅವರಿಗೆ ಅಧಿಕಾರವಿತ್ತು' ಎಂಬ ಅರ್ಥವಷ್ಟೇ ಇಲ್ಲಿ ತೋರುತ್ತದೆ. 'ಆಸಮುದ್ರಂ ಕ್ಷಿತೀಶಾನಾಂ' ಎಂದಿದ್ದರೆ ಸಮುದ್ರದಮೇಲೆಯೂ ಅವರಿಗೆ ಅಧಿಕಾರ ವಿತ್ತು ಎಂಬ ಅರ್ಥವು ತೋರುತ್ತಿತ್ತು. ಇಲ್ಲಿ ಸಮುದ್ರಪದವು ಸಮಾಸದಲ್ಲಿ ಸೇರಿ ಕೊಂಡು ತನ್ನ ಪ್ರಾಧಾನ್ಯವನ್ನು ಕಳೆದುಕೊಂಡಿರುವುದರಿಂದ ಇದು ವಿಧೇಯಾವಿಮರ್ಶ ವೆಂಬ ದೋಷವೆನಿಸಿದೆ. ಬೇರೊಂದು ಉದಾಹರಣವನ್ನು ತಿಳಿಸುತ್ತಾನೆ. "ಎಲೈ ಕೋಮಲಾಂಗಿ, ನಿನ್ನ ಓರೆನೋಟವು ಎಲ್ಲಿ ಬೀಳುವುದೋ ಅಲ್ಲಿ ಅದು ಮನ್ಮಥನ ಆರನೆಯ ಬಾಣವೇ ಆಗುತ್ತದೆ" ಇಲ್ಲಿ ಷಷ್ಠಪದವು ಸಮಾಸದಲ್ಲಿ ಸೇರಿಕೊಂಡು ತನ್ನ ಪ್ರಧಾನ್ಯವನ್ನು ಕಳೆದುಕೊಂಡಿದೆ. ಮನ್ಮಥನಿಗೆ ಐದು ಬಾಣಗಳಿರುವುದರಿಂದ ಆರನೇ ಬಾಣವಿರುವುದೇ ಅಸಂಭವ. ಆದ್ದರಿಂದ ಅವನಲ್ಲಿ ಆರನೆಯ ಬಾಣವನ್ನು ಉತ್ಪ್ರೇಕ್ಷಿಸ ಬೇಕಾಗಿದೆ. ಇಲ್ಲಿ ಕಟಾಕ್ಷವೇ ಆರನೆಯ ಬಾಣವೆಂದು ಉತ್ಪ್ರೇಕ್ಷಿಸಬೇಕಾದ್ದರಿಂದ ಷಷ್ಠಪದವನ್ನು ಪ್ರತ್ಯೇಕವಾಗಿ ಪ್ರಯೋಗಿಸಬೇಕಾಗಿತ್ತು. ಮನ್ಮಥನಿಗೆ ಬಾಣಗಳಿ ರುವುದು ಅಸಂಭವವಲ್ಲ, ಆದರೆ ಆರನೆಯದಿರುವುದು ಮಾತ್ರ ಅಸಂಭವವೆನಿಸಿದೆ. ಹೀಗೆ ಅಸಂಭವವೆನಿಸಿದ ಅಂಶವನ್ನು ಪ್ರಧಾನವಾಗಿ ತಿಳಿಸಿದ್ದರೆ ಕಟಾಕ್ಷವನ್ನು ಆರನೆಯ ಬಾಣವೆಂದು ಉತ್ಪ್ರೇಕ್ಷಿಸಲು ಆನುಕೂಲವಾಗುತ್ತಿತ್ತು. 'ಎಲೈ ಸ್ವಾಮಿನಿಯೇ, ನೀನು ಆಕೆಯನ್ನು ಹಿಂದೆ ಒಂದು ಗಳಿಗೆಯೂ ಬಿಟ್ಟಿರಲಿಲ್ಲ' ಇಲ್ಲಿ 'ಅಮುಕ್ತಾ' ಎಂಬಲ್ಲಿ ನಕಾರವು ಪ್ರಸಕ್ತವಾದ್ದನ್ನು ನೇರವಾಗಿ ನಿಷೇಧಿಸುವುದರಿಂದ ಅದಕ್ಕೆ ಕ್ರಿಯೆಯೊಡನೆ ಅನ್ವಯವು ಬರುವುದೇ ಯುಕ್ತವೆನಿಸಿದೆ. ನಿಷೇಧವೇ ಇಲ್ಲಿ ಕೊನೆಯಲ್ಲಿ ಸ್ಪಷ್ಟವಾಗಿ ತಿಳಿದು ಬರುತ್ತದೆ.'ಎಲ್ಲಿ ವಿಧಿಗೆ ಪ್ರಧಾನ್ಯವಿಲ್ಲದೆ ನಿಷೇಧವೇ ಪ್ರಧಾನವೆನಿಸುತ್ತದೆಯೋ ಅಲ್ಲಿ ನಕಾರವು ಕ್ರಿಯೆಯೊಡನೆ ನೇರವಾಗಿ ಅನ್ವಯಿಸುತ್ತದೆ." ಹೀಗೆ ಪ್ರಸಜ್ಯ ಪ್ರತಿಷೇಧದ ಲಕ್ಷಣವನ್ನು ಹೇಳಲಾಗಿದೆ. ಇವನ್ನು ಇಲ್ಲಿ ಉದಾಹರಿಸುತ್ತಾನೆ. "ಈಗ ಆಕಾಶದಲ್ಲಿ ಕಾಣುತ್ತಿರುವುದು ಗಾಳಿಯಿಂದ ನಿಶ್ಚಲಗೊಂಡಿರುವ ಹೊಸಮೇಘವೇ ಹೊರತು ಮದಿಸಿದ ರಾಕ್ಷಸನಲ್ಲ" ಇಲ್ಲಿ 'ಇದು ರಾಕ್ಷಸನಲ್ಲ' ಎಂಬ ಅರ್ಥವೇ ನಕಾರ ದಿಂದ ಪ್ರಧಾನವಾಗಿ ತೋರುತ್ತದೆ. ನ ಎಂಬುದಕ್ಕೆ 'ಭವತಿ' ಎಂಬ ಅಧ್ಯಾಹೃತ ಕ್ರಿಯೆಯೊಡನೆ ಅನ್ವಯವಾಗುತ್ತದೆ. ಹೀಗೆ ನಿಷೇಧಕ್ಕೆ ಇಲ್ಲಿ ಪ್ರಧಾನ್ಯವಿರುವ ಪ್ರಯುಕ್ತ ಇದು ಪ್ರಸಜ್ಯಪ್ರತಿಷೇಧವೆನಿಸಿದೆ. ಆದರೆ 'ಅಮುಕ್ತಾ ಭವತಾ' ಎಂಬಲ್ಲಿಯಾದರೋ ನ+ಮುಕ್ತಾ=ಅಮುಕ್ತಾ ಎಂದು ನಕಾರವು ಸಮಾಸದಲ್ಲಿ ವಿಶೇಷಣವಾಗಿ ತನ್ನ ಪ್ರಾಧಾನ್ಯವನ್ನು ಕಳೆದುಕೊಂಡಿದೆ. ಆದ್ದರಿಂದ ಅದು ಅಲ್ಲಿ ವಿಧೇಯವೆಂದು ತಿಳಿದುಬರುವುದಿಲ್ಲ. ಹೀಗೆ ಪ್ರಧಾನ್ಯವನ್ನು ಕಳೆದುಕೊಂಡದ್ದರಿಂದ ನಕಾರವು ಅಮುಖ್ಯವಾದ್ದನ್ನು ನಿಷೇಧಿಸುತ್ತದೆ. 'ವಿಧೇಯಾಂಶವು ಎಲ್ಲಿ ಪ್ರಧಾನ ವಾಗಿದ್ದು ನಿಷೇಧಾಂಶವು ಅಪ್ರಧಾನವಾಗಿರುವುದೋ ಅಲ್ಲಿ ನಿಷೇಧವು ಪರ್ಯುದಾಸ

(ಅಮುಖ್ಯ) ವೆನಿಸಿದ್ದು ಉತ್ತರಪದದೊಡನೆ ನಕಾರವು ಅನ್ವಯಿಸುತ್ತದೆ." ಎಂದು ಹಿರಿಯರು ಪರ್ಯುದಾಸಪ್ರತಿಷೇದದ ಲಕ್ಷಣವನ್ನು ತಿಳಿಸಿದ್ದಾರೆ. ಎಲ್ಲಿ ನಕಾರವು ಪ್ರಧಾನವಾಗಿರುವುದೋ ಅಲ್ಲಿ ಕ್ರಿಯೆಯೊಡನೆ ಅನ್ವಯಿಸುತ್ತದೆ. ಎಲ್ಲಿ ಅದು ಅಪ್ರಧಾನವಾಗಿರುವುದೋ ಅಲ್ಲಿ ಅದು ಕ್ರಿಯೆಗೆ ಸಂಬಂಧಿಸದೆ ಪಕ್ಕದಲ್ಲಿರುವ ಪದದೊಡನೆ ಅನ್ವಯಿಸುತ್ತದೆ. "ದಿಲೀಪನು ಭಯಪಡದೆಯೇ ತನ್ನನ್ನು ರಕ್ಷಿಸಿಕೊಂಡನು. ಆತುರಪಡದೆಯೇ ಧರ್ಮವನ್ನಾಚರಿಸಿದನು. ಆಶೆಮಾಡದೆಯೇ ಹಣವನ್ನು ಸಂಪಾದಿಸಿದನು. ಯಾವ ಆಸಕ್ತಿಯೂ ಇಲ್ಲದೆಯೇ ಸುಖವನ್ನು ಅನುಭವಿಸಿದನು." ಇಲ್ಲಿ ನಕಾರವು ನ+ತ್ರಸ್ತಃ=ಅತ್ರಸ್ತ ಎಂದು ಮುಂತಾಗಿ ನಾಲ್ಕು ಕಡೆಗಳಲ್ಲೂ ಸಮಾಸದಲ್ಲಿ ವಿಶೇಷಣವಾಗಿ ತನ್ನ ಪ್ರಾಧಾನ್ಯವನ್ನು ಕಳೆದುಕೊಂಡು ಕ್ರಿಯೆಯೊಡನೆ ಅನ್ವಯಿಸುತ್ತಿಲ್ಲ. ಇಲ್ಲಿ ಅತ್ರಸ್ತತ್ವ, ಅನಾತುರತ್ವ ಅಗೃಧ್ನುತ್ವ ಅನಾಸಕ್ತತ್ವ ಇವನ್ನು ಅನುವಾದಮಾಡಿ ಇವುಗಳಿಂದ ಆತ್ಮಗೋಪನ, ಧರ್ಮಚರಣ, ಅರ್ಥಸ್ವೀಕಾರ, ಸುಖಾನುಭವ ಇವೆಲ್ಲವೂ ರಾಜನಲ್ಲಿದ್ದವೆಂದು ಇದನ್ನೇ ವಿಧೇಯವನ್ನಾಗಿ ಇಲ್ಲಿ ತಿಳಿಸಿದೆ. ಹೀಗೆ ನಿಷೇಧವು ಇಲ್ಲಿ ಪ್ರಧಾನವಲ್ಲದ್ದರಿಂದ ಸಮಾಸದಲ್ಲಿ ವಿಶೇಷಣವಾಗಿರುವುದು ಯುಕ್ತವೇ ಆಗಿದೆ. ಹೀಗೆ ಇಲ್ಲಿ ವಿಧೇಯಾವಿಮರ್ಶದೋಷವಿಲ್ಲವೆಂಬುದು ಸ್ಪಷ್ಟಪಡುತ್ತದೆ. ಅದರಂತೆಯೇ ಅಮುಕ್ತಾ ಭವತಾ" ಎಂಬ ಪದ್ಯದಲ್ಲಿ ಈ ದೋಷವನ್ನು ಶಂಕಿಸಬೇಕಾಗಿಲ್ಲ. ಹಾಗೆ ತಿಳಿಸಿದ್ದರೂ ಇದರಮೇಲೆ ಆಕ್ಷೇಪವನ್ನು ಮತ್ತೆ ಮಾಡುತ್ತಾನೆ. 'ಬ್ರಾಹ್ಮಣನು ಶ್ರಾದ್ಧದ ಅನ್ನವನ್ನು ತಿನ್ನುವುದಿಲ್ಲ.' 'ರಾಜಪತ್ನಿಯರು ಸೂರ್ಯನನ್ನು ನೋಡುವುದಿಲ್ಲ' ಎಂಬಲ್ಲಿ ನಿಷೇಧಕಪದವು ಸಮಾಸದಲ್ಲಿ ಬೇರೆ ಪದಕ್ಕೆ ವಿಶೇಷಣವಾಗಿದ್ದರೂ ಕ್ರಿಯೆಯೊಡನೆ ಅನ್ವಯವಿರುವುದರಿಂದ ಪ್ರಧಾನ್ಯವಿರುವಂತೆ 'ಅಮುಕ್ತಾ ಭವತಾ' ಎಂಬಲ್ಲಿ ನಕಾರವು ಬೇರೊಂದು ಪದದೊಡನೆ ಸೇರಿಕೊಂಡಿದ್ದರೂ ಸಹ ಕ್ರಿಯೆಯೊಡನೆ ಅನ್ವಯವು ಬರಲಿ. ಆಗ ವಿಧೇಯಾವಿಮರ್ಶದೋಷವು ಹೇಗೆ ಸಂಭವಿಸೀತು ? ಎಂದು ಆಕ್ಷೇಪವು ಬರುತ್ತದೆ. ಅದಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ಇಲ್ಲಿಯೂ ಸಹ ಭೋಜನಕ್ರಿಯೆಯೊಡನೆ ನಿಷೇಧಾರ್ಥಕಪದಕ್ಕೆ ಸಂಬಂಧವಿರುವುದಾದರೆ ಆಗ ಅಲ್ಲಿ ಅದಕ್ಕೆ ಪ್ರಾಧಾನ್ಯವನ್ನು ಹೇಳಲಿಕ್ಕೆ ಅಡ್ಡಿಯಿಲ್ಲ. ಆದರೆ 'ಅಶ್ರಾದ್ಧಭೋಜೀ' ಎಂಬಲ್ಲಿ ಹಾಗೆ ನಕಾರಕ್ಕೆ ಪ್ರಾಧಾನ್ಯವಿಲ್ಲ. ಅದರೆ ನಕಾರಕ್ಕೆ ಕರ್ತ್ರಂಶದೊಡನೆ ಅನ್ವಯವಿದೆ. ಅಲ್ಲಿ ವಿಶೇಷ್ಯವಾದ್ದರಿಂದ ಪ್ರಧಾನವೆನಿಸಿದ ಭೋಜ್ಯವೆಂಬ ಅರ್ಥದೊಡನೆಯೇ ನಕಾರವು ಸಂಬಂಧಿಸಿದೆ. ಬ್ರಾಹ್ಮಣನು ಶ್ರಾದ್ಧದಲ್ಲಿ ಭೋಜ್ಯವಸ್ತುಗಳನ್ನು ಭೋಗಿಸುವುದಿಲ್ಲ ಎಂಬುದೇ ಇಲ್ಲಿಯ ಅರ್ಥ. ಇಲ್ಲಿ ನಕಾರವು ಭೋಜನವೆಂಬ ಕ್ರಿಯಾಂಶದೊಡನೆ ಅನ್ವಯಿಸದೆ ಭೋಜ್ಯವೆನಿಸಿದ ಕರ್ತ್ರಂಶದೊಡನೆ ಅನ್ವಯಿಸುತ್ತದೆ. ಆದ್ದರಿಂದ ಇಲ್ಲಿ ಪರ್ಯುದಾಸಪ್ರತಿಷೇಧವೇ ಹೊರತು ಪ್ರಸಜ್ಯಪ್ರತಿಷೇಧಕ್ಕೆ ಅವಕಾಸವೇ ಇಲ್ಲ. ಆದರಂತೆ 'ಅಮುಕ್ತಾ ಭವತಾ' ಎಂಬಲ್ಲೂ ಪರ್ಯುದಾಸಪ್ರತಿಷೇದ ಇರುವ ಪ್ರಯುಕ್ತ ವಿಧೇಯಾವಿಮರ್ಶದೋಷವಿದ್ದೇ ಇದೆ. ಈ ಬಗ್ಗೆ ವೈಯ್ಯಾಕರಣರ

ಸಮ್ಮತಿಯನ್ನು ತಿಳಿಸುತ್ತಾನೆ. "ಅಶ್ರಾದ್ಧ ಭೋಜೀ ಎಂಬಲ್ಲಿ ಬ್ರಾಹ್ಮಣನಿಗೆ ಶ್ರಾದ್ಧ ದಲ್ಲಿ ಭೋಜನ ಮಾಡುವ ಸ್ವಭಾವವಿಲ್ಲವೆಂಬುದು ತೋರುತ್ತದೆ. ಕರ್ತ್ರರ್ಥದಲ್ಲಿ ಣಿನಿಪ್ರತ್ಯಯವನ್ನು ವಿಧಿಸಿರುವುದರಿಂದ ಶ್ರಾದ್ಧಕಾಲದಲ್ಲಿ ಊಟವನ್ನು ಮಾಡುವ ಸ್ವಭಾವವಿಲ್ಲದ ಕರ್ತನನ್ನೇ ಆ ಪದವು ತಿಳಿಸುತ್ತದೆ.ಆದರೆ ಅವನು ಮಾಡುವ ಭೋಜನ ವನ್ನೇ ಆ ಪದದಿಂದ ಅಲ್ಲಿ ತೋರುವುದಿಲ್ಲ" ಹೀಗೆ ವೈಯಾಕರಣರು ತಿಳಿಸಿದ್ದಾರೆ. ಇಲ್ಲಿ ಪ್ರಧಾನವೆನಿಸಿದ್ದರಿಂದ ಕರ್ತೃವಿನೊಡನೆಯೇ ನಿಷೇಧಾರ್ಥಕಪದವು ಸಂಬಂಧಿ ಸುತ್ತದೆ. ಕೇವಲ ಭೋಜನ ಕ್ರಿಯೆಯಲ್ಲಿ ಅದು ಅನ್ವಯಿಸುವುದಿಲ್ಲ. ಅಮುಕ್ತಾ ಎಂಬಲ್ಲಿಯಾದರೋ ನಿಷೇದಾರ್ಥಕಪದವು ಮೋಚನಕ್ರಿಯೆಯೊಡನೆಯೇ ಸಂಬಂಧಿ ಸಿರುವ ಪ್ರಯುಕ್ತ ಇಲ್ಲಿ ವಿಧೇಯಾವಿಮರ್ಶದೋಷವಿದ್ದೇ ಇರುತ್ತದೆ. ಕ್ಲಿಷ್ಟತ್ವ, ವಿರುದ್ಧಮತಿಕಾರಿತ್ವ, ವಿಧೇಯಾವಿಮರ್ಶತ್ವ ಈ ಮೂರು ದೋಷಗಳು ಸಮಾಸದಲ್ಲಿ ದ್ದರೂ ಪದಕ್ಕೆ ಸಂಬಂಧಿಸಿದ ದೋಷಗಳೇ ಆಗಿವೆ.

ವಾಕ್ಯೇ ದುಃಶ್ರವತ್ವಂ ಯಥಾ—

ಸ್ಮರಾರ್ತ್ಯಂಧಃ ಕದಾ ಲಪ್ಸ್ಯೇ ಕಾರ್ತಾರ್ಥ್ಯಂ ವಿರಹೇ ತವ ।

ಕೃತಪ್ರವೃತ್ತಿರನ್ಯಾರ್ಥೇ ಕವಿರ್ವಾಂತಂ ಸಮುಶ್ನುತೇ ॥

ಅತ್ರ ಜಿಗುಪ್ಸಾವ್ಯಂಜಕಾಶ್ಲೀಲತಾಂ.

"ಉದ್ಯತ್ಕಮಲಲೌಹಿತ್ಯೈರ್ವಕ್ತ್ರಾಭಿರ್ಭೂಷಿತಾ ತನೂಃ ॥

ಅತ್ರ ಕಮಲಲೌಹಿತ್ಯಂ ಪದ್ಮರಾಗಃ, ವಕ್ತ್ರಾಭಿರ್ವಾಮಾಭಿರಿತಿ ನೇಯಾರ್ಥತಾ.

ಧಮ್ಮಿಲ್ಲಸ್ಯ ನ ಕಸ್ಯ ಪ್ರೇಕ್ಷ್ಯ ನಿಕಾಮಂ ಕುರಂಗಶಾಬಾಕ್ಷ್ಯಾಃ ।
ರಜ್ಯತ್ಯಪೂರ್ವಬಂಧವ್ಯುತ್ಪತ್ತೇರ್ಮಾನಸಂ ಶೋಭಾಮ್ ॥

ಅತ್ರ ಧಮ್ಮಿಲ್ಲಸ್ಯ ಶೋಭಾಂ ಪ್ರೇಕ್ಷ್ಯ ಕಸ್ಯ ಮಾನಸಂ ನ ರಜ್ಯತೀತಿ ಸಂಬಂಧಃ ಕ್ಲಿಷ್ಟಃ

'ನ್ಯಕ್ಕಾರೋ ಹ್ಯಯಮೇವ ಮೇ ಯದರಯಃ' ಇತಿ. ಅತ್ರ ಚ ಅಯಮೇವ ನ್ಯಕ್ಕಾರ ಇತಿ ನ್ಯಕ್ಕಾರಸ್ಯ ವಿಧೇಯತ್ವಂ ವಿವಕ್ಷಿತಮ್. ತಚ್ಚ ಶಬ್ದರಚನಾವೈಪರೀ ತ್ಯೇನ ಗುಣೀಭೂತಮ್ ರಚನಾ ಚ ಪದದ್ವಯಸ್ಯ ವಿಪರೀತೇತಿ ವಿಕ್ಯದೋಷಃ.

ಆನಂದಯತಿ ತು ನೇತ್ರೇ ಯೋಽಸೌ ಸುಭ್ರು ! ಸಮಾಗತಃ ।

ಇತ್ಯಾದಿಷು ಯತ್ತದೋರ್ನಿತ್ಯಃ ಸಂಬಂಧಃ ಇತಿ ನ್ಯಾಯಾದುಪಕ್ರಾಂತಸ್ಯ ಯಚ್ಛಬ್ದಸ್ಯ ನಿರಾಕಾಂಕ್ಷತ್ವಪ್ರತಿಪತ್ತಯೇ ತಚ್ಛಬ್ದಸಮಾನಾರ್ಥತಯಾ ಪ್ರತಿ ಪಾದ್ಯಮಾನಾಃ ಇದಮೇತದದಃಶಬ್ದಾಃ ವಿಧೇಯಾ ಏವ ಭವಿತುಂ ಯುಕ್ತಾಃ. ಅತ್ರ ತು ಯಚ್ಛಬ್ದನಿಕಟಸ್ಥತಯಾ ಅನುವಾದ್ಯತ್ವಪ್ರತೀತಿಕೃತ್.

ತಚ್ಛಬ್ದಸ್ಯಾಪಿ ಯಚ್ಛಬ್ದನಿಕಟಸ್ಥಿತಸ್ಯ ಪ್ರಸಿದ್ಧಪರಾಮರ್ಶಿತ್ವಮಾತ್ರಮ್.

ಯಥಾ-ಯಸ್ಯ ಮೇ ನಯನಾನಂದಕರಃ ಸುಭ್ರು ! ಸ ಆಗತಃ ।
ಯಚ್ಛಬ್ದಸ್ಯನದಾನೇನ ಸ್ಥಿತಾಸ್ತು ನಿರಾಕಾಂಕ್ಷತ್ವಮವಗಮಯಂತಿ.
ಯಥಾ ಆನಂದಯತಿ ತೇ ನೇತ್ರೇ ಯೋಽಧುನಾಽಸೌ ಸಮಾಗತಃ'
ಏವಮಿದಮಾದಿಶಬ್ದೋಪಾದಾನೇಽಪಿ.

ಯತ್ರ ಯತ್ತದೋರೇಕಸ್ಯ ಅರ್ಥತ್ವಂ ಸಂಭವತಿ ತತ್ರೈಕಸ್ಯೋಪಾದಾನೇಽಪಿ ನಿರಾಕಾಂಕ್ಷತ್ವಪ್ರತೀತಿರಿತಿ ನ ಕ್ಷತಿಃ. ತಥಾಹಿ ಯಚ್ಛಬ್ದಸ್ಯೋತ್ತರವಾಕ್ಯಗತತ್ವೇನ ಉಪಾದಾನೇ ಸಾಮರ್ಥ್ಯಾತ್ ಪೂರ್ವವಾಕ್ಯೇ ತಚ್ಛಬ್ದಸ್ಯ ಅರ್ಥತ್ವಮ್. ಯಥಾ ಆತ್ಮಾ ಜಾನಾತಿ ಯತ್ಪಾಪಮ್ ಇತಿ. ಏವಮ್—

'ಯಂ ಸರ್ವಶೈಲಾಃ ಪರಿಕಲ್ಪ್ಯ ವತ್ಸಂ ಮೇರೌ ಸ್ಥಿತೇ ದೋಗ್ಧರಿದೋಹದಕ್ಷೇ ।
ಭಾಸ್ವಂತಿ ರತ್ನಾನಿ ಮಹೌಷಧೀಶ್ಚ ಪೃಥೂಪದಿಷ್ಟಾಂ ದುದುಹುರ್ಧರಿತ್ರೀಮ್ ॥

ಇತ್ಯಾದಾವಪಿ ತಚ್ಛಬ್ದಸ್ಯ ಪ್ರಕ್ರಾಂತಪ್ರಸಿದ್ಧಾನುಭೂತಾರ್ಥತ್ವೇ ಯಚ್ಛಬ್ದಸ್ಯ ಅರ್ಥತ್ವಮ್. ಕ್ರಮೇಣ-ಯಥಾ.

ಸ ಹತ್ವಾ ವಾಲಿನಂ ವೀರಸ್ತತ್ಪದೇ ಚಿರಕಾಂಕ್ಷಿತೇ ।
ಧಾತೋಃ ಸ್ಥಾನ ಇವಾದೇಶಂ ಸುಗ್ರೀವಂ ಸಂನ್ಯವೇಶಯತ್ ॥
ಸ ವಃ ಶಶಿಕಲಾಮೌಲಿಸ್ತಾದಾತ್ಮ್ಯಾಯೋಪಕಲ್ಪತಾಮ್ ।
ತಾಮಿಂದುಸುಂದರಮುಖೀಂ ಹೃದಿ ಚಿಂತಯಾಮಿ ॥

ಯತ್ರ ಚ ಯಚ್ಛಬ್ದನಿಕಟಸ್ಥಿತಾನಾಮಪಿ ಇದಮಾದಿಶಬ್ದಾನಾಂ ಭಿನ್ನಲಿಂಗ ವಿಭಕ್ತಿತ್ವಂ ತತ್ರಾಪಿ ನಿರಾಕಾಂಕ್ಷತ್ವಮೇವ. ಕ್ರಮೇಣ ಯಥಾ—

ವಿಭಾತಿ ಮೃಗಶಾಬಾಕ್ಷೀ ಯೇದಂ ಭುವನಭೂಷಣಮ್ ।
ಇಂದುರ್ವಿಭಾತಿ ಯಸ್ತೇನ ದಗ್ಧಾ ಪಥಿಕಯೋಷಿತಃ ॥

ಕ್ವಚಿದನುಪಾತ್ತಯೋರ್ದ್ವಯೋರಪಿ ಸಾಮರ್ಥ್ಯಾದವಗಮಃ ಯಥಾ.

ನ ಮೇ ಶಮಯಿತಾ ಕೋಽಪಿ ಭಾರಸ್ಯೇತ್ಯುರ್ವಿ! ಮಾ ಶುಚಃ ।
ನಂದಸ್ಯ ಭವನೇ ಕೋಽಪಿ ಬಾಲೋಽಸ್ತ್ಯದ್ಭುತಪೌರುಷಃ ॥

ಅತ್ರ ಯೋಽಸ್ತಿ ಸ ತೇ ಭಾರಸ್ಯ ಶಮಯಿತೇತಿ ಬಧ್ಯತೇ.
ಯದ್ಯದ್ವಿರಹದುಃಖಂ ಮೇ ತತ್ಕೋ ವಾಽಪಹರಿಷ್ಯತಿ.

ಇತ್ಯತ್ರೈಕೋ ಯಚ್ಛಬ್ದಃ ಸಾಕಾಂಕ್ಷ ಇತಿ ನ ವಾಚ್ಯಮ್. ತಥಾ ಹಿ ಯದ್ಯದಿತ್ಯನೇನ ಯೇನ ಕೇನಚಿದ್ರೂಪೇಣ ಸ್ಥಿತಂ ಸರ್ವಾತ್ಮಕಂ ವಸ್ತು ವಿವಕ್ಷಿತಮ್ ತಥಾಭೂತಸ್ಯ ತಸ್ಯ ತಚ್ಛಬ್ದೇನ ಪರಾಮರ್ಶಃ.

ಏವಮನ್ಯೇಷಾಮಪಿ ವಾಕ್ಯಗತತ್ವೇನೋದಾಹರಣಂ ಬೋಧ್ಯಮ್ ।
ಪದಾಂಶೇ ಪ್ರತಿಕಟುರ್ಯಥಾ-ತದಗ್ಗಚ್ಛ ಸಿದ್ಧ್ಯೈ ಕುರು ದೇವಕಾರ್ಯಮ್ ।
"ಧಾತುಮತ್ತಾಂ ಗಿರಿರ್ಧತ್ತೇ" ಅತ್ರ ಮತ್ತಾಶಬ್ದಃ ಕ್ಷೀಬಾರ್ಥೇ ನಿಹಿತಃ ॥
ವರ್ಣ್ಯತೇ ಕಿಂ ಮಹಾಸೇನೋ ವಿಜೇಯೋ ಯಸ್ಯ ತಾರಕಃ ॥
ಅತ್ರ ವಿಜೇಯ ಇತಿ ಕೃತ್ಯಪ್ರತ್ಯಯಃ ಕ್ತಪ್ರತ್ಯಯಾರ್ಥೇಽವಾಚಕಃ ॥

'ಪಾಣಿಃ ಪಲ್ಲವಪೇಲವಃ' ಅತ್ರ ಪೇಲವಶಬ್ದಸ್ಯ ಆದ್ಯಾಕ್ಷರೇ ಅಶ್ಲೀಲೇ.

ಸಂಗ್ರಾಮೇ ನಿಹತಾಃ ಶೂರಾಃ ವಚೋಬಾಣತ್ವಮಾಗತಾಃ ।

ಅತ್ರ ವಚಃಶಬ್ದಸ್ಯ ಗೀಃಶಬ್ದವಾಚಕತ್ವೇ ನೇಯಾರ್ಥತ್ವಮ್. ತಥಾ ತತ್ರೈವ ಬಾಣಸ್ಥಾನೇ ಶರೇ ಶಿಪಾಠೇ. ಅತ್ರಪದದ್ವಯಮಪಿ ನ ಪರಿವೃತ್ತಿಸಹಮ್.

ಜಲಧ್ಯಾದೌ ತು ಉತ್ತರಪದಮ್. ಒಡಬಾನಲಾದೌ ತು ಪೂರ್ವಪದಮ್.

ಏವಮನ್ಯೇಽಪಿ ಯಥಾಸಂಭವಂ ಪದಾಂಶದೋಷಾ ಜ್ಞೇಯಾಃ ।

ನಿರರ್ಥಕತ್ವಾದೀನಾಂ ತ್ರಯಾಣಾಂ ಚ ಪದಮಾತ್ರಗತತ್ವೇನೈವ ಲಕ್ಷ್ಯೇ ಸಂಭವಃ ॥

ಕ್ರಮೇಣ ಯಥಾ–'ಮುಂಚ ಮಾನಂ ಹಿ ಮಾನಿನಿ !

ಅತ್ರ ಹಿ ಶಬ್ದೋ ವೃತ್ತಿಪೂರಣಮಾತ್ರಪ್ರಯೋಜನಃ. 'ಕುಂಜಂ ಹಂತಿ ಕೃಶೋದರೀ' ಅತ್ರ ಹಂತೀತಿ ಗಮನಾರ್ಥೇ ಪಠಿತಮಿತಿ ನ ತತ್ರ ಸಮರ್ಥಮ್.

ಗಾಂಡೀವೀ ಕನಕಶಿಲಾನಿಭಂ ಭುಜಾಭ್ಯಾಂ ।

ಆಜಘ್ನೇ ವಿಷಮ ವಿಲೋಚನಸ್ಯ ವಕ್ಷಃ ।

'ಆಙೋ ಯಮಹನಃ'—'ಸ್ವಾಂಗಕರ್ಮಕಾಚ್ಚ' ಇತ್ಯನುಶಾಸನಬಲಾತ್ ಆಙಪೂರ್ವಸ್ಯ ಹನಃ ಸ್ವಾಂಗಕರ್ಮಕಸ್ಯೈವ ಆತ್ಮನೇಪದಂ ನಿಯಮಿತಮ್. ಇಹ ತು ತಲ್ಲಂಘಿತಮಿತಿ ವ್ಯಾಕರಣಲಕ್ಷಣಹೀನತ್ವಾತ್ ಚ್ಯುತಸಂಸ್ಕಾರತ್ವಮ್.

ನನ್ವತ್ರ 'ಆಜಘ್ನೇ ಇತಿ ಪದಸ್ಯ ಸ್ವತೋ ನ ದುಷ್ಟತಾ, ಅಪಿ ತು ಪದಾಂತರಾಪೇಕ್ಷಯೈವ, ಇತ್ಯಸ್ಯ ವಾಕ್ಯದೋಷತಾ. ನೈವಮ್. ತಥಾಹಿ ಗುಣದೋಷಾಲಂಕಾರಾಣಾಂ ಶಬ್ದಾರ್ಥಗತತ್ವೇನ ವ್ಯವಸ್ಥಿತೇಸ್ತದನ್ವಯವ್ಯತಿರೇಕಾನುವಿಧಾಯಿತ್ವಂ ಹೇತುಃ. ಇಹ ತು ದೋಷಸ್ಯ 'ಆಜಘ್ನೇ' ಇತಿ ಪದಮಾತ್ರಸ್ಯೈವ ಅನ್ವಯವ್ಯತಿರೇಕಾನುವಿಧಾಯಿತ್ವಮ್. ಪದಾಂತರಾಣಾಂ ಪರಿವರ್ತನೇಽಪಿ ತಸ್ಯ ತಾದವಸ್ಥ್ಯಾದೇವೇತಿ ಪದದೋಷ ಏವ. ತಥಾ ಯಥೇಹಾತ್ಮನೇಪದಸ್ಯ ಪರಿವೃತ್ತಾವಪಿ ನ ಪದದೋಷಃ.

ಏವಂ ಪದ್ಮ ಇತ್ಯತ್ರ ಅಪ್ರಯುಕ್ತಸ್ಯ ಪದಗತತ್ವಂ ಬೋಧ್ಯಮ್.

ಏವಂ ಪ್ರಾಕೃತಾದಿವ್ಯಾಕರಣಲಕ್ಷಣಹಾನಾವಪಿ ಚ್ಯುತಸಂಸ್ಕಾರತ್ವಮೂಹ್ಯಮ್. ಇಹ ತು ಶಬ್ದಾನಾಂ ಸರ್ವಥಾ ಪ್ರಯೋಗಾಭಾವೇ ಅಸಮರ್ಥತ್ವಮ್. ವಿರಳಪ್ರಯೋಗೇ ನಿಹತಾರ್ಥತ್ವಮ್. ನಿಹತಾರ್ಥತ್ವಮನೇಕಾರ್ಥಶಬ್ದವಿಷಯಮ್. ಅಪ್ರತೀತತ್ವಂತೇಕಾರ್ಥಸ್ಯಾಪಿ ಶಬ್ದಸ್ಯ ಸಾರ್ವತ್ರಿಕಪ್ರಯೋಗವಿರಹಃ. ಅಪ್ರಯುಕ್ತತ್ವಮೇಕಶಬ್ದವಿಷಯಮ್, ಅಸಮರ್ಥತ್ವಮನೇಕಾರ್ಥಶಬ್ದವಿಷಯಮ್. ಅಸಮರ್ಥತ್ವೇ ಹಂತ್ಯಾದಯೋಽಪಿ ಗಮನಾರ್ಥಂ ಪಠಿತಾಃ, ಅವಾಚಕತ್ವೇ ದಿನಾದಯಃ ಪ್ರಕಾಶಮಯಾದ್ಯರ್ಥೇ ನಾ ತಥಾ, ಇತಿ ಪರಸ್ಪರಭೇದಃ.

ವಾಕ್ಯದಲ್ಲಿ ದುಃಶ್ರವತ್ರವೆಂಬ ದೋಷವನ್ನು ಉದಾಹರಿಸುತ್ತಾನೆ. ಹಿಂದೆ ಪದವಲ್ಲಿರುವ ದುಃಶ್ರವತ್ವವನ್ನು ಉದಾಹರಿಸಿಯಾಗಿತ್ತು. ಈಗ ಪದಸಮೂಹ

ವೆನಿಸಿದ ವಾಕ್ಯವು ಕೇಳಲಿಕ್ಕೆ ಕಠಿಣವಾಗಿರುವುದರಿಂದ ರಸಪ್ರಕರ್ಷಕ್ಕೆ ಹೇಗೆ ಅಡ ಚಣೆಯಾಗುವುದೆಂಬುದನ್ನು ತಿಳಿಸುತ್ತಾನೆ. "ನಿನ್ನ ವಿರಹದಿಂದ ಕಾಮಬಾಧೆಗೆ ಸಿಲುಕಿ ವಿವೇಕಶೂನ್ಯನಾಗಿರುವ ಪ್ರಯುಕ್ತ ಯಾವಾಗ ಜನ್ಮಸಾಫಲ್ಯವನ್ನು ಹೊಂದುವೆನು ?" ಇಲ್ಲಿ ಸ್ಮರಾರ್ತ್ಯಂಧಃ, ಕಾರ್ತಾರ್ಥ್ಯ ಇವೆರಡು ಪದಗಳಲ್ಲಿ ಪರುಷ ವರ್ಣಗಳಿರುವುದರಿಂದ ವಾಕ್ಯವು ಕಿವಿಯಿಂದ ಕೇಳಲು ಅಸಹ್ಯವೆನಿಸಿದೆ. ಈಗ ವಾಕ್ಯದಲ್ಲಿ ಜುಗುಪ್ಸೆಯನ್ನು ಹುಟ್ಟಿಸುವ ಅಶ್ಲೀಲತೆ ಎಂಬ ದೋಷವನ್ನು ತಿಳಿಸು ತ್ತಾನೆ. "ಬೇರೆ ಕವಿಗಳು ಸಂಗ್ರಹಿಸಿದ ಭಾವವನ್ನೂ, ಶಬ್ದಗಳನ್ನೂ ತೆಗೆದುಕೊಳ್ಳ ಲಿಚ್ಛಿಸುವ ಕವಿಯು ಕೋಳಿಯಂತೆ ನಿಂದಾರ್ಹನೆನಿಸುತ್ತಾನೆ" ಇಲ್ಲಿ ವಾಂತಂ ಸಮ ಶ್ನತೇ ಎಂಬ ವಾಕ್ಯವು ವಾಂತಿಮಾಡುತ್ತಾನೆ ಎಂಬ ಅರ್ಥವನ್ನು ತಿಳಿಸುವುದರಿಂದ ಅದು ಕೇಳುವವರಿಗೆ ಜುಗುಪ್ಸೆಯನ್ನು ಹುಟ್ಟಿಸುವ ಪ್ರಯುಕ್ತ ಅಶ್ಲೀಲವೆನಿಸಿದೆ.

ವಾಕ್ಯದಲ್ಲಿರುವ ನೇಯಾರ್ಥತೆ ಎಂಬ ದೋಷವನ್ನು ಉದಾಹರಿಸುತ್ತಾನೆ. 'ಸುಂದರಿಯರ ಪ್ರಕಾಶಮಾನವಾದ ಪದ್ಮರಾಗಮಣಿಗಳಿಂದ ಶರೀರವು ಅಲಂಕೃತ ವಾಗಿದೆ' ಇಲ್ಲಿ ಕಮಲಲೌಹಿತ್ಯವೆಂಬ ಪದವು ಕಮಲದಲ್ಲಿರುವ ಕೆಂಪು ಬಣ್ಣವನ್ನು ತಿಳಿಸುತ್ತದೆ. ಆದರೆ ಪದ್ಮರಾಗವೆಂಬ ಮಣಿಯನ್ನು ಬೋಧಿಸುವುದಿಲ್ಲ. ವಕ್ರಾ ಶಬ್ದವು ಕುಟಿಲಸ್ವಭಾವದವಳು ಎಂಬ ಅರ್ಥವನ್ನು ತಿಳಿಸುವುದೇ ಹೊರತು ಸುಂದರಿ ಎಂಬು ದನ್ನು ತಿಳಿಸುವುದಿಲ್ಲ. ಆದ್ದರಿಂದ ಇಲ್ಲಿ ರೂಢಿ ಪ್ರಯೋಜನಗಳಲ್ಲಿ ಯಾವುದೂ ಇಲ್ಲ ದಿದ್ದರೂ ಕಮಲಲೌಹಿತ್ಯಪದದಿಂದ ಪದ್ಮರಾಗಮಣಿ ಎಂಬ ಅರ್ಥವನ್ನೂ, ವಾಮಾ ಪದದಿಂದ ಸುಂದರಿ ಎಂಬ ಅರ್ಥವನ್ನೂ ಲಕ್ಷಣೆಯಿಂದ ಇಲ್ಲಿ ಗ್ರಹಿಸಲಾಗಿದೆ. ಅನೇಕ ಪದಗಳೆನಿಸಿದ ವಾಕ್ಯದಲ್ಲಿ ಹೀಗೆ ರೂಢಿಪ್ರಯೋಜನಗಳಿಲ್ಲದೆಯೇ ಲಕ್ಷ್ಯಾರ್ಥವನ್ನು ಸ್ವೀಕರಿಸಿದ್ದರಿಂದ ಇಲ್ಲಿ ನೇಯಾರ್ಥತೆ ಎಂಬ ವಾಕ್ಯದೋಷವು ಸಂಭವಿಸಿದೆ.

ವಾಕ್ಯದಲ್ಲಿರುವ ಕ್ಲಿಷ್ಟತ್ವವೆಂಬ ದೋಷವನ್ನು ತಿಳಿಸುತ್ತಾನೆ. 'ಜಿಂಕೆಯ ಮರಿಯಂತೆ ಕಣ್ಣುಗಳಿರುವ ಪ್ರೇಯಸಿಯು ಕುತೂಹಲವನ್ನು ಹುಟ್ಟಿಸುವಂತೆ ಜೋಡಿಸಿ ಕಟ್ಟಿರುವ ಕೇಶಪಾಶದ ಶೋಭೆಯನ್ನು ನೋಡಿ ಯಾವನ ಮನಸ್ಸು ವಿಶೇಷ ವಾದ ಅನುರಾಗವನ್ನು ಹೊಂದುವುದಿಲ್ಲ ?' ಇಲ್ಲಿ "ಕೇಶಪಾಶದ ಶೋಭೆಯನ್ನು ನೋಡಿ ಯಾವನ ಮನಸ್ಸು ಮೋಹಿಸುವುದಿಲ್ಲ?" ವೆಂಬ ಅರ್ಥಕ್ಕೆ ಬಹಳ ಕ್ಲೇಶದಿಂದ ಹೊಂದಿಕೆಯಾಗಬೇಕಾಗಿರುವುದರಿಂದ ಇಲ್ಲಿ ಕ್ಲಿಷ್ಟಾನ್ವಯವಿರುವ ಪ್ರಯುಕ್ತ ಈ ವಾಕ್ಯವು ದುಷ್ಟವೆನಿಸಿದೆ.

ವಾಕ್ಯದಲ್ಲಿರುವ ವಿಧೇಯಾವಿಮೃಷ್ಟವೆಂಬ ದೋಷವನ್ನು ಉದಾಹರಿಸುತ್ತಾನೆ. "ನನಗೆ ಶತ್ರುಗಳಿರುವರೆಂಬ ತಿರಸ್ಕಾರವು ಇದೇಯೇ' ಎಂದು ಹೇಳಿದ್ದರಿಂದ ವಿಧೇಯ ವೆನಿಸಿದ ನ್ಯಕ್ಕಾರವು ಪ್ರಾಧಾನ್ಯವನ್ನು ಕಳೆದುಕೊಂಡು ಅನುವಾದ್ಯವೆನಿಸಿತು. 'ಇದೇಯೇ ತಿರಸ್ಕಾರ' ವೆಂದು ಹೇಳಿದ್ದರೆ ತಿರಸ್ಕಾರವು ವಿಧೇಯವೆನಿಸುತ್ತಿತ್ತು. ಹೀಗೆ ತಿಳಿಸುವುದೇ ಇಲ್ಲಿ ಕವಿಗೆ ವಿವಕ್ಷಿತವೆನಿಸಿದೆ. ಇಲ್ಲಿ ಶಬ್ದಗಳನ್ನು ಜೋಡಿಸುವಾಗ

'ಅಯಮೇವ ನ್ಯಕ್ಕಾರಃ' ಎಂಬುದಕ್ಕೆ ಬದಲಾಗಿ 'ನ್ಯಾಕ್ಕಾರೋ ಹ್ಯಯಮೇವ' ಎಂದು ಪ್ರಯೋಗಿಸಿದ್ದು ತಪ್ಪಾಯಿತು. ವಿಧೇಯಾಂಶವು ಗೌಣವೆನಿಸಿತು. ಇಲ್ಲಿ ಇದಂ ಎಂಬ ಪದವನ್ನು ವಿಪರೀತವಾಗಿ ಪ್ರಯೋಗಿಸಿದ್ದರಿಂದ ವಾಕ್ಯದೋಷವಿದೆ. ಬೇರೊಂದು ರೀತಿಯಿಂದ ವಿಧೇಯಾವಿಮರ್ಶದೋಷವನ್ನು ಉದಾಹರಿಸುತ್ತಾನೆ. "ಎಲೈ ಸುಂದರಾಂಗಿ, ಯಾವನು ನಿನ್ನೊಡನೆ ಕೂಡಿರುವನೋ ಅವನು ಕಣ್ಣುಗಳನ್ನು ಸಂತೋಷಗೊಳಿಸುತ್ತಾನೆ" ಇಲ್ಲಿ ಯತ್‌ತತ್ ಎಂಬ ಪದಗಳಿಗೆ ಒಂದನ್ನೊಂದು ಪರಸ್ಪರವಾಗಿ ಅಪೇಕ್ಷಿಸುವ ಸಂಬಂಧವಿರುವ ಪ್ರಯುಕ್ತ ಯಚ್ಛಬ್ದವಿದ್ದ ಮೇಲೆ ತಚ್ಛಬ್ದವಿರಲೇಬೇಕಾದ್ದರಿಂದ ಆ ಬಗೆಯ ಆಕಾಂಕ್ಷೆಯನ್ನು ತುಂಬಿಸಲಿಕ್ಕಾಗಿ ತಚ್ಛಬ್ದಕ್ಕೆ ಸಮಾನವಾದ ಅರ್ಥವುಳ್ಳದ್ದೆಂದು ಇದಂ ಶಬ್ದವನ್ನು ಇಲ್ಲಿ ಪ್ರಯೋಗಿಸಲಾಗಿದೆ. ಇದರಂತೆಯೇ ಕೆಲವು ಕಡೆ ಏತತ್, ಅದಸ್ ಈ ಶಬ್ದಗಳನ್ನು ಪ್ರಯೋಗಿಸಲಾಗುವುದು. ತಚ್ಛಬ್ದಕ್ಕೆ ಬದಲಾಗಿ ಉಪಯೋಗಿಸಿದ ಈ ಬಗೆಯ ಸರ್ವನಾಮಗಳು ವಿಧೇಯಗಳೆನಿಸುವುವೇ ಹೊರತು ಉದ್ದೇಶ್ಯವನ್ನು ತಿಳಿಸುವುದಿಲ್ಲ. 'ಯೋಽಸೌ ಸುಭ್ರು !' ಎಂಬಲ್ಲಿ ಯಾದರೋ ಅದಸ್ ಎಂಬ ಶಬ್ದವು ಉದ್ದೇಶ್ಯವೆನಿಸಿದೆಯೇ ಹೊರತು ವಿಧೇಯವೆನಿಸಿಲ್ಲ. ಆದ್ದರಿಂದ ಇಲ್ಲಿಯೂ ಸಹ ನ್ಯಾಕ್ಕಾರೋ ಹ್ಯಯಮೇವ ಎಂಬಂತೆಯೇ ವಿಧೇಯಾವಿಮರ್ಶದೋಷವಿದೆ. "ಯಾವ ಈತನು ನಿನ್ನ ಬಳಿಗೆ ಬರುವನೋ (ಅವನು) ನಿನ್ನ ಕಣ್ಣುಗಳಿಗೆ ಸಂತೋಷಗೊಳಿಸುತ್ತಾನೆ" ಎಂದು ಅನರ್ಥವನ್ನು ಹುಟ್ಟಿಸುವುದರಿಂದ ವಿಧೇಯಾಂಶವನ್ನು ತಿಳಿಸುವ ತಚ್ಛಬ್ದವನ್ನು ಉದ್ದೇಶ್ಯಾಂಶವನ್ನು ತಿಳಿಸುವ ಯಚ್ಛಬ್ದಕ್ಕಿಂತಲೂ ಮೊದಲೇ ಅಧ್ಯಾಹಾರಮಾಡಿಕೊಳ್ಳಬೇಕಾಗುತ್ತದೆ. ಹೀಗೆ ಪ್ರಯೋಗಿಸಿದ್ದರಿಂದ ವಿಧೇಯವೆನಿಸಬೇಕಾದ ತಚ್ಛಬ್ದವು ಉದ್ದೇಶವಾಗುವ ಪ್ರಯುಕ್ತ ಇಲ್ಲಿ ವಿಧೇಯಾವಿಮರ್ಶದೋಷವು ಸಂಭವಿಸಿದೆ. ಯಚ್ಛಬ್ದದ ಹತ್ತಿರದಲ್ಲಿಯೇ ತಚ್ಛಬ್ದವಿದ್ದರೆ ಮಾತ್ರವೇ ಅದು ಪ್ರಸಿದ್ಧವಾದ ವಸ್ತುವನ್ನು ತಿಳಿಸಿಕೊಡುತ್ತದೆ. ಯಚ್ಛಬ್ದದಿಂದ ತೋರುವ ಆಕಾಂಕ್ಷೆಯನ್ನು ಪೂರೈಸುವುದಷ್ಟೇ ಅಲ್ಲದೆ ಪ್ರಸಿದ್ಧವಸ್ತು ಒಂದನ್ನು ತಚ್ಛವು ತಿಳಿಸಿಕೊಡುತ್ತದೆ. ಇಲ್ಲಿ ತಚ್ಛಬ್ದದಿಂದ ಏತತ್, ಇದಂ, ಅದಸ್ ಈ ಶಬ್ದಗಳನ್ನೂ ಗ್ರಹಿಸಬೇಕು. "ಎಲೈ ಸುಂದರಿಯೇ ! ಯಾವನು ನಿನ್ನ ಕಣ್ಣುಗಳಿಗೆ ಆನಂದವನ್ನು ಕೊಡಬಲ್ಲನೋ ಅವನು ಬಂದನು" ಇಲ್ಲಿ ಯತ್‌ಪದದ ಹತ್ತಿರದಲ್ಲಿಯೇ ಇರುವ 'ಸಃ' ಎಂಬುದು ಒಬ್ಬ ಪ್ರಸಿದ್ಧನೆನಿಸಿದ ವ್ಯಕ್ತಿಯನ್ನು ತಿಳಿಸಿಕೊಡುತ್ತದೆ. ಎರಡನೆಯ ಸಾರಿ ಉಪಯೋಗಿಸಿರುವ 'ಸಃ' ಎಂಬುದು ವಿಧೇಯಾಂಶವನ್ನು ತಿಳಿಸುತ್ತದೆ. ಆದ್ದರಿಂದ ಹೀಗೆ ಉದ್ದೇಶ್ಯವಿಧೇಯಗಳನ್ನು ತಿಳಿಸುವ ಯತ್ತತ್ಪದಗಳನ್ನು ಕ್ರಮವಾಗಿ ಉಪಯೋಗಿಸಿರುವುದರಿಂದ ಇಲ್ಲಿ ವಿಧೇಯಾವಿಮರ್ಶದೋಷವು ಸಂಭವಿಸಿಲ್ಲ. ಯಚ್ಛಬ್ದದಿಂದ ಕೊಂಚ ದೂರದಲ್ಲಿರುವ ಇದಂ, ಅದಸ್, ಏತದ್, ತದ್ ಎಂಬ ಪದಗಳು ಆಕಾಂಕ್ಷೆಯನ್ನು ಪೂರ್ತಿಮಾಡುತ್ತವೆಯೇ ಹೊರತು ಪ್ರಸಿದ್ಧವಾದ ವ್ಯಕ್ತಿಯನ್ನು ತಿಳಿಸಿಕೊಡುವುದಿಲ್ಲ. "ಯಾವನು ಈಗ ಬಂದನೋ ಅವನು ನಿನ್ನ ಕಣ್ಣು

ಗಳನ್ನು ಸಂತೋಷಪಡಿಸುತ್ತಾನೆ'' ಇಲ್ಲಿ ಯತ್ಪದಕ್ಕೂ. ಅಸೌ ಎಂಬುದಕ್ಕೂ ಮಧ್ಯ ದಲ್ಲಿ ಅಧುನಾ ಎಂಬ ಪದವು ಸೇರಿಕೊಂಡಿದೆ. ಆದರೂ ಯತ್ಪದದಿಂದ ತೋರುವ ಆಕಾಂಕ್ಷೆಯನ್ನು ಅಸೌ ಎಂಬುದು ತತ್ಪದಂತೆಯೇ ಪೂರ್ತಿಗೊಳಿಸುತ್ತದೆ. ವಿಧೇಯಾಂಶವನ್ನು ತಿಳಿಸುವ 'ಅಸೌ' ಎಂಬುದೂ ಸಹ ಹತ್ತಿರದಲ್ಲಿಯೇ ಇರುವುದರಿಂದ ಇಲ್ಲಿಯೂ ವಿಧೇಯಾವಿಮರ್ಶದೋಷವು ಸಂಭವಿಸುವುದಿಲ್ಲ. 'ಯತ್ತದೋರ್ನಿತ್ಯಃ ಸಂಬಂಧಃ' ಎಂಬುದಕ್ಕೆ ವ್ಯಭಿಚಾರವುಂಟೆಂಬುದನ್ನು ಈಗ ತಿಳಿಸುತ್ತಾನೆ. ಯತ್ ತತ್ ಇವೆರಡನ್ನೂ ಒಂದೆಡೆಯಲ್ಲಿ ಪ್ರಯೋಗಿಸದೆ ಯಾವುದಾದರೊಂದನ್ನು ತಾತ್ಪರ್ಯ ದಿಂದಲೇ ತಿಳಿಯಬೇಕಾದರೆ ಅಲ್ಲಿ ಒಂದನ್ನು ತಿಳಿಸಿದ್ದರೂ ಅಲ್ಲಿ ತೋರಬೇಕಾಗಿರುವ ಆಕಾಂಕ್ಷೆಯು ಪೂರ್ತಿಯಾಗಿರುವುದರಿಂದ ವಿಧೇಯಾವಿಮರ್ಶದೋಷವು ಸಂಭವಿಸುವು ದಿಲ್ಲ. ಯತ್ಪದವನ್ನು ಮುಂದಿನ ವಾಕ್ಯದಲ್ಲಿ ತಿಳಿಸಿದ್ದರಿಂದ ಅದರ ಬಲದಮೇಲೆ ಹಿಂದಿನ ವಾಕ್ಯದಲ್ಲಿ ತತ್ಪದವನ್ನು ತಾತ್ಪರ್ಯದಿಂದ ಗ್ರಹಿಸಿದರೂ ದೋಷವೇನೂ ಸಂಭವಿಸುವು ದಿಲ್ಲ. "ಯಾವುದು ಪಾಪವೆಂಬುದನ್ನು ಆತ್ಮನೇ ತಿಳಿದಿದ್ದಾನೆ. ಇದಕ್ಕಾಗಿ ಬೇರೆ ಎಲ್ಲಿಯೂ ಕೇಳಬೇಕಾಗಿಲ್ಲ." ಆತ್ಮಾ ತಜಾನಾತಿ (ತತ್) 'ಯತ್ ಪಾಪಂ ವರ್ತತೇ.' ಇಲ್ಲಿ ಹಿಂದಿನ ವಾಕ್ಯದಲ್ಲಿ ತತ್ ಎಂಬುದನ್ನು ತಾತ್ಪರ್ಯದಿಂದ ಗ್ರಹಿಸಬೇಕು. ಮುಂದಿನ ವಾಕ್ಯದಲ್ಲಿರುವ ಯತ್ಪದದ ಆಕಾಂಕ್ಷೆಯು ಇದರಿಂದ ಪೂರ್ಣವಾಗುತ್ತದೆ. ಹೀಗೆಯೇ "ಹಾಲನ್ನು ಸುರಿಸಲು ಸಮರ್ಥವೆನಿಸಿ ಮೇರುಪರ್ವತವು ಸುರಿಸುತ್ತಿರು ವಾಗ ಬೆಟ್ಟಗಳೆಲ್ಲವೂ ಯಾವ ಹಿಮಾಲಯವನ್ನು ಕರುವೆಂದು ಭಾವಿಸಿ ಪೃಥು ಎಂಬ ರಾಜನ ಇಚ್ಛೆಯಂತೆ ಭೂಮಿಯಲ್ಲಿ ಪ್ರಕಾಶಿಸುತ್ತಿರುವ ರತ್ನಗಳನ್ನೂ ವನೌಷಧಿ ಲತೆಗಳನ್ನೂ ಪಡೆದವೋ" ಇಲ್ಲಿ ಯಚ್ಛಬ್ದವು ಮುಂದಿನ ವಾಕ್ಯದಲ್ಲಿ ಬಂದಿದೆ. 'ಅಸ್ತ್ಯುತ್ತ ರಸ್ಯಾಂ ದಿಶಿ ದೇವತಾತ್ಮಾ' ಎಂಬ ಹಿಂದಿನ ವಾಕ್ಯದಲ್ಲಿ 'ಸಃ ಅಸ್ತಿ' ಎಂದು ತತ್ಪದವು ತಾತ್ಪರ್ಯದಿಂದ ತೋರುತ್ತದೆ. ಹೀಗೆ ತತ್ಪದವು ಅರ್ಥದಿಂದ ತೋರುವಂತೆ ಯತ್ಪದವೂ ಕೆಲವುವೇಳೆ ಅರ್ಥದಿಂದ ತೋರಿದರೂ ಬಾಧಕವಿಲ್ಲ. ತಚ್ಛಬ್ದವು ಪ್ರಕರಣವಶದಿಂದ ತೋರುವ ಸ್ವಾನುಭವಸಿದ್ಧವಾದ ವಸ್ತುವನ್ನು ತಿಳಿಸುವುದಾದರೆ ಯತ್ಪದವನ್ನು ತಾತ್ಪ ರ್ಯದಿಂದ ಅಧ್ಯಾಹಾರ ಮಾಡಿಕೊಳ್ಳಬಹುದು. ತತ್ಪದವು ಪ್ರಕೃತಾರ್ಥವನ್ನು ತಿಳಿಸು ವುದಾದರೆ ಯತ್ಪದವನ್ನು ಆಕಾಂಕ್ಷಿಸುವುದಿಲ್ಲವೆಂಬುದನ್ನು ಮೊದಲು ಉದಾಹರಿಸು ತ್ತಾನೆ. ರಘುವಂಶದ ಹನ್ನೆರಡನೆಯ ಸರ್ಗದ ಈ ಪದ್ಯದಲ್ಲಿ ಈ ಅಂಶವು ತಿಳಿದು ಬರುತ್ತದೆ." "ಆ ವೀರನಾದ ರಾಮನು ವಾಲಿಯನ್ನು ಕೊಂದು ಸುಗ್ರೀವನಿಗೆ ಬಹುಕಾಲ ದಿಂದಲೂ ಅಪೇಕ್ಷಿತವೆನಿಸಿದ್ದ ವಾಲಿಯ ಸಿಂಹಾಸನದಲ್ಲಿ ಹನ್ ಧಾತುವಿನ ಸ್ಥಾನದಲ್ಲಿ ವಧ್ ಎಂಬ ಆದೇಶವನ್ನಿರಿಸುವಂತೆ ಸುಗ್ರೀವನನ್ನು ನೆಲೆಗೊಳಿಸಿದನು'' ಇಲ್ಲಿ ಸಃ ಎಂಬುದು ಪ್ರಸಿದ್ಧನಾದ ರಾಮನನ್ನು ತಿಳಿಸುವುದರಿಂದ ಯತ್ಪದವನ್ನು ಅಪೇಕ್ಷಿಸುವು ದಿಲ್ಲ. ತತ್ಪದವು ಪ್ರಸಿದ್ಧವಾದ ಅರ್ಥವನ್ನು ತಿಳಿಸುವುದಾದರೆ ಅದು ಯತ್ಪದವನ್ನು ಬಯಸುವುದಿಲ್ಲವೆಂಬುದನ್ನು ಈಗ ಉದಾಹರಿಸುತ್ತಾನೆ. ಅಪ್ರಸಿದ್ಧನಾದ ಚುಂಬ

ಶೇಖರನು ನಿಮಗೆ ಸಾಯುಜ್ಯಮುಕ್ತಿಯನ್ನು ಅನುಗ್ರಹಿಸಲಿ" ಇಲ್ಲಿ ಸಃ ಎಂಬುದು ಪ್ರಸಿದ್ಧವಾದ ಅರ್ಥವನ್ನು ತಿಳಿಸುವುದರಿಂದ ಯತ್ಪದವನ್ನು ಅಪೇಕ್ಷಿಸುವುದಿಲ್ಲ. ಹಾಗೆ ಅದು ಸ್ವಾನುಭೂತವಾದ ಅಂಶವನ್ನು ತಿಳಿಸುವುದಾದರೆ ಯತ್ಪದವನ್ನು ಬಯಸುವುದಿಲ್ಲವೆಂಬುದಕ್ಕೆ ಉದಾಹರಣವನ್ನು ತಿಳಿಸುತ್ತಾನೆ. "ಚಂದ್ರನಂತೆ ಸುಂದರವಾದ ಮುಖವಿರುವ ಆಕೆಯನ್ನು ಹೃದಯದಲ್ಲಿ ಚಿಂತಿಸುವೆನು" ಇಲ್ಲಿ 'ತಾಂ' ಎಂಬುದು ಹಿಂದೆ ತಾನೇ ಅನುಭವಿಸಿದ್ದ (ನೋಡಿದ್ದ) ಮುಖವನ್ನು ತಿಳಿಸುವ ಪ್ರಯುಕ್ತ ಇಲ್ಲಿ ಯತ್ಪದವು ಬೇಕಾಗಿಲ್ಲ.

ಯತ್ಪದದ ಹತ್ತಿರವೇ ಇರುವ ಇದಮ್ ಮೊದಲಾದ ಶಬ್ದಗಳಿಗೆ ಬೇರೆ ಲಿಂಗ ವಿಭಕ್ತಿಗಳಿದ್ದರೂ ಅಲ್ಲಿ ಅವೂ ಸಹ ಯತ್ಪದದ ಬಯಕೆಯನ್ನು ಪೂರೈಸಬಲ್ಲವು. ಯತ್ಪದದ ಹತ್ತಿರವೇ ಇರುವ ಇದಂ ಶಬ್ದವು ಯತ್ಪದದ ಆಕಾಂಕ್ಷೆಯನ್ನು ಪೂರೈಸುಬಲ್ಲದೆಂಬುದಕ್ಕೆ ಉದಾಹರಣವನ್ನು ಈಗ ಕೊಡುತ್ತಾನೆ. "ಯಾವ ಕಾಮಿನಿಯ ಪ್ರಪಂಚಕ್ಕೇ ಅಲಂಕಾರವೆನಿಸಿರುವಳೋ ಅಂತವಳು ಪ್ರಕಾಶಿಸುತ್ತಾಳೆ." "ಇಲ್ಲಿ ಯಾ ಇದಂ ಎಂದು ಯತ್ಪದವನ್ನು ಸ್ತ್ರೀಲಿಂಗದಲ್ಲೂ ಅದರ ಹತ್ತಿರವೇ ಇದಂಶಬ್ದವನ್ನು ನಪುಂಸಕ ಲಿಂಗದಲ್ಲೂ ಉಪಯೋಗಿಸಿದ್ದರೂ ಸಹ ಯತ್ಪದದ ಆಕಾಂಕ್ಷೆಯನ್ನು ಇದಂ ಪದವು ಪೂರೈಸುತ್ತದೆ. ಯತ್ಪದದ ಹತ್ತಿರವೇ ಇರುವ ತತ್ಪದವು ಬೇರೆ ವಿಭಕ್ತಿಯಲ್ಲಿದ್ದರೂ ಯತ್ಪದದ ಆಕಾಂಕ್ಷೆಯನ್ನು ಪೂರೈಸಬಲ್ಲದೆಂಬುದನ್ನು ಉದಾಹರಿಸುತ್ತಾನೆ." ಆ ಚಂದ್ರನು ಶೋಭಿಸುತ್ತಾನೆ. ಅವನೇ ಪ್ರವಾಸಿಗಳ ಹೆಂಗಸರನ್ನು ಸಂತಾಪಗೊಳಿಸುತ್ತಿದ್ದಾನೆ." ಇಲ್ಲಿ ಯಃ ಎಂಬುದು ಪ್ರಥಮಾವಿಭಕ್ತಿಯಲ್ಲಿದ್ದು ತೇನ ಎಂಬುದು ತೃತೀಯಾವಿಭಕ್ತಿಯಲ್ಲಿದೆ. ಆದರೂ 'ತೇನ' ಎಂಬುದು 'ಯಃ' ಎಂಬುದರ ಆಕಾಂಕ್ಷೆಯನ್ನು ಪೂರ್ತಿಗೊಳಿಸುತ್ತದೆ. ಕೆಲವುಕಡೆ ಯಚ್ಛಬ್ದವನ್ನಾಗಲೀ ತದಾದಿಶಬ್ದಗಳನ್ನಾಗಲೀ ಪ್ರಯೋಗಿಸದೇ ಇದ್ದರೆ ಅರ್ಥಸಾಮರ್ಥ್ಯದಿಂದ ಅವನ್ನು ತಿಳಿಯಬೇಕು. "ಎಲೈ ಭೂದೇವಿಯೇ, ನನ್ನ ಭಾರವನ್ನು ಕಡಮೆ ಮಾಡುವವನು ಯಾವನೂ ಇಲ್ಲವೆಂದು ದುಃಖಪಡಬೇಡ. ನಂದನ ಮನೆಯಲ್ಲಿ ಹೆಚ್ಚು ಪರಾಕ್ರಮಶಾಲಿಯಾದ ಯಾವನೋ ಒಬ್ಬ ಹುಡುಗನು ಇದ್ದಾನೆ. ಅವನು ನಿನ್ನ ಭಾರವನ್ನು ಇಳಿಸುತ್ತಾನೆ." ಕಂಸನ ಭಾರದಿಂದ ನೊಂದಿದ್ದ ಭೂದೇವಿಗೆ ಬ್ರಹ್ಮನು ಹೇಳುವ ಮಾತಿದು. ಇಲ್ಲಿ 'ನಂದನ ಮನೆಯಲ್ಲಿ ಯಾವ ಹುಡುಗನಿದ್ದಾನೆಯೋ ಅವನು ನಿನ್ನ ಭಾರವನ್ನು ತೊಲಗಿಸುವನು' ಎಂಬ ಅರ್ಥವು ಹೇಳುವವನ ತಾತ್ಪರ್ಯಕ್ಕೆ ಅನುಗುಣವಾಗಿ ತೋರುತ್ತದೆ. "ಯಾವಯಾವುದು ನನಗೆ ವಿರಹದುಃಖವಿದೆಯೋ ಅದನ್ನು ಯಾವನು ತಾನೆ ಅಪಹರಿಸಬಲ್ಲನು ?" ಇಲ್ಲಿ ಒಂದು ತತ್ಪದದಿಂದ ಒಂದೇ ಯತ್ಪದದ ಆಕಾಂಕ್ಷೆಯು ಪೂರ್ತಿಯಾಗುತ್ತದೆ ಎಂದು ಹೇಳುವುದು ಸರಿಯಲ್ಲ; ಯಾಕೆಂದರೆ ಯದ್ಯತ್ ಎಂಬುದರಿಂದ 'ಯಾವ ಯಾವ ರೂಪದಿಂದ ಇರುವ ಎಲ್ಲಾ ಬಗೆಯ ದುಃಖವೆಂಬುದು ಯಾವುದುಂಟೋ ಅದೇ' ಇಲ್ಲಿ ವಿವಕ್ಷಿತವಾಗಿದೆ. ಅಂತಹದೆಲ್ಲವೂ ತತ್ಪದ

ದಿಂದ ಇಲ್ಲಿ ಸೂಚಿತವಾಗುವ ಪ್ರಯುಕ್ತ ಯತ್ಪದಗಳೆರಡಿದ್ದು ತತ್ಪದವು ಒಂದೇ ಇರು ವುದು ದೋಷವೆನಿಸುವುದಿಲ್ಲ. ಹೀಗೆ ಯತ್ಪದದ ಅರ್ಥವನ್ನು ತತ್ಪದವು ಪೂರ್ತಿಮಾಡು ವುದರಲ್ಲಿ ತಪ್ಪೇನಿಲ್ಲ. ಹೀಗೆಯೇ ವಾಕ್ಯದಲ್ಲಿರುವ ಇತರ ದೋಷಗಳಿಗೂ ಉದಾ ಹಾರಣಗಳನ್ನು ತಿಳಿಯುವುದು.

ಪದಾಂಶದಲ್ಲಿ ಶ್ರುತಿಕಟು ಎಂಬ ದೋಷವಿರುವುದನ್ನು ಉದಾಹರಿಸುತ್ತಾನೆ. "ಸಿದ್ಧಿಯನ್ನು ಪಡೆಯಲಿಕ್ಕಾಗಿ ಹೊರಡು. ದೇವಕಾರ್ಯವನ್ನು ಸಾಧಿಸು". ಇಲ್ಲಿ ಸಿದ್ಧ್ಯೈ ಎಂಬ ಪದದಲ್ಲಿ 'ದ್ಧ್ಯೈ' ಎಂಬ ಅಂಶವು ಪರುಷವರ್ಣವಾದ್ದರಿಂದ ಕೇಳ ಲಿಕ್ಕೆ ಕಠಿಣವಾಗಿದೆ. 'ಪರ್ವತವು ಗೈರಿಕೆ ಮೊದಲಾದ ಧಾತುಗಳನ್ನು ಧರಿಸಿದೆ' ಇಲ್ಲಿ ಮತ್ತಾ ಎಂಬ ಶಬ್ದವನ್ನು ಉನ್ಮತ್ತ ಎಂಬ ಅರ್ಥದಲ್ಲಿ ಅಮರವು ಪ್ರಯೋಗಿಸಿದೆ. ಈ ಅರ್ಥವು ಲೋಕದಲ್ಲಿ ಪ್ರಸಿದ್ಧವೂ ಆಗಿದೆ. ಇದನ್ನು ಬಿಟ್ಟು 'ಧಾತುಗಳುಳ್ಳದ್ದು' ಎಂಬ ಅರ್ಥದಲ್ಲಿ ಮತ್ತಾಶಬ್ದವನ್ನು ಪ್ರಯೋಗಿಸಿದ್ದರಿಂದ ಇಲ್ಲಿ ನಿಹತಾರ್ಥವೆಂಬ ದೋಷವು ಸಂಭವಿಸಿದೆ. "ಯಾವನು ತಾರಕಾಸುರನನ್ನು ಜಯಿಸಬಲ್ಲನೋ ಆ ಮಹಾ ಸೇನನನ್ನು ವರ್ಣಿಸುವುದೇನಿದೆ?" ಇಲ್ಲಿ ವಿಜೇಯಃ ಎಂಬುದನ್ನು ವಿಜೇತುಂ ಯೋಗ್ಯಃ ಎಂಬ ಅರ್ಥದಲ್ಲಿ ಕೃತ್ಯಪ್ರತ್ಯಯದೊಡನೆ ಪ್ರಯೋಗಿಸಲಾಗಿದೆ. ವಿಜಿತಃ ಎಂದು ಕ್ತ ಪ್ರತ್ಯಯಾಂತಪದಕ್ಕೆ ಬದಲಾಗಿ ತವ್ಯಪ್ರತ್ಯಯಾಂತಪದವನ್ನು ಉಪಯೋಗಿಸಿದ್ದ ರಿಂದ ಇದು ಅವಾಚಕವೆನಿಸಿದೆ. "ಹಸ್ತವು ಚಿಗುರಿನಂತೆ ಮೃದುವಾಗಿದೆ" ಇಲ್ಲಿ ಪೇಲವಶಬ್ದದಲ್ಲಿ ಮೊದಲನೆಯ ಎರಡು (ಪೇಲ) ಎಂಬ ಅಕ್ಷರಗಳು ಅಂಡಕೋಶ ಎಂಬ ಅರ್ಥವನ್ನು ತಿಳಿಸುವುದರಿಂದ ಲಜ್ಜೆಯನ್ನು ಹುಟ್ಟಿಸುತ್ತದೆ. ಆದ್ದರಿಂದ ಇಲ್ಲಿ ಅಶ್ಲೀಲವೆಂಬ ದೋಷವು ಪದಾಂಶದಲ್ಲಿದೆ. 'ವಾಗ್ಬಾಣಕ್ಕೆ ಗುರಿಯಾದ ಶೂರರು ಯುದ್ಧ ದಲ್ಲಿ ಸಾಯುವರು' ಇಲ್ಲಿ ವಚಃಶಬ್ದವು ಗೀಃ ಎಂಬ ಶಬ್ದವನ್ನು ತಿಳಿಸುವ ಪ್ರಯುಕ್ತ ವಚೋಬಾಣವೆಂದರೆ ಗೀರ್ವಾಣ—ದೇವತೆ ಎಂಬ ಅರ್ಥವು ತೋರುವುದು. ಈ ಅರ್ಥ ದಲ್ಲಿ ಇದು ಪಂಕಜಪದದಂತೆ ಯೋಗರೂಢವೆನಿಸಿದೆ. ಇಲ್ಲಿ ರೂಢಿ ಪ್ರಯೋಜನ ಗಳಲ್ಲದೆಯಿದ್ದರೂ ಕವಿಯು ವಚನಶಬ್ದವನ್ನು ಮಾತು ಎಂಬ ಲಕ್ಷ್ಯಾರ್ಥದಲ್ಲಿ ಪ್ರಯೋಗಿಸಿರುವನು, ಆದ್ದರಿಂದ ಇಲ್ಲಿ ನೇಯಾರ್ಥವೆಂಬ ದೋಷವು ಸಂಭವಿಸುತ್ತದೆ. ಅಲ್ಲಿಯೇ ಬಾಣಪದದ ಸ್ಥಾನದಲ್ಲಿ ಶರಪದವನ್ನು ಬಳಸಿಕೊಂಡು 'ಗೋಃಶರತ್ವ ಮುಪಗತಾ' ಎಂದು ಪ್ರಯೋಗಿಸಿದರೂ ಸಹ ಆಗಲೂ ಪದಾಂಶದಲ್ಲಿ ನೇಯಾರ್ಥ ವೆಂಬ ದೋಷವಿದ್ದೇ ಇರುತ್ತದೆ. ಅದಕ್ಕೆ ಇಲ್ಲಿ ಗೀರ್ವಾಣಶಬ್ದದಲ್ಲಿ ಗೀಃ ಪದವಾಗಲೀ ವಾಣಪದವಾಗಲೀ ಬದಲಾವಣೆಯಾಗುವಂತಿಲ್ಲ. ಅದೇ ಅರ್ಥವನ್ನು ತಿಳಿಸುವ ಬೇರೆ ಪದಗಳನ್ನು ಹಾಕಿದರೂ ಸಹ ದೇವತೆ ಎಂಬ ಅರ್ಥವನ್ನು ಬೋಧಿಸದೇ ಹೋಗುತ್ತದೆ. ಅದು ಪಂಕಜಪದದಂತೆ ಯೋಗರೂಢವೆನಿಸಿದ್ದರಿಂದ ಅಲ್ಲಿ ಪದಗಳನ್ನು ಬದಲಾಯಿಸಲು ಸಾಧ್ಯವಾಗುವುದಿಲ್ಲ. ಇದೇ ಸಂದರ್ಭದಲ್ಲಿ ಬೇರೆ ಪದಗಳಲ್ಲಿಯೂ ಬದಲಾವಣೆಮಾಡಲಿಕ್ಕೆ ಸಾಧ್ಯವಿಲ್ಲವೆಂಬುದನ್ನು ಉದಾಹರಿಸುತ್ತಾನೆ. ಜಲಧಿ

ಎಂಬಲ್ಲಿ ಆ ಪದದ ಅಂಶವೆನಿಸಿದ 'ಧಿ' ಎಂಬ ಉತ್ತರಪದವನ್ನೂ ಬಡಬಾನಲ ಎಂಬಲ್ಲಿ ಬಡಬ ಎಂಬ ಮೊದಲನೆಯ ಪದವನ್ನೂ ಬದಲಾಯಿಸಲಿಕ್ಕೆ ಸಾಧ್ಯವೇ ಆಗುವುದಿಲ್ಲ. ಅವೇ ಪದಗಳೇ ಇಲ್ಲಿ ಇರಬೇಕು. ಹೀಗೆ ವಚೋಬಾಣವೆಂಬಲ್ಲಿ ವಚಸ್ ಶಬ್ದದ ಪರ್ಯಾಯವೆನಿಸಿದ ಗೀಃ ಪದವನ್ನು ಹಾಕುವುದಾಗಲೀ, ಬಾಣಪದದ ಸ್ಥಾನದಡ ಶರಪದವನ್ನು ಹಾಕುವುದಾಗಲೀ ಹೊಂದುವುದಿಲ್ಲ. ಹೀಗೆಯೇ ಪದಾಂಶದಲ್ಲಿ ಸಂಭವಿಸುವ ಇತರ ದೋಷಗಳನ್ನು ತಿಳಿಯುವುದು.

ನಿರರ್ಥಕತ್ವ ಮೊದಲಾದ ಮೂರು ದೋಷಗಳು ಪದದಲ್ಲಿ ಮಾತ್ರವೇ ಸಂಭವಿಸುತ್ತವೆ ಎಂಬುದನ್ನು ಉದಾಹರಿಸುತ್ತಾನೆ. "ಎಲೈ ಕೋಪಿಷ್ಠಳೇ, ಕೋಪವನ್ನು ಬಿಡು" ಇಲ್ಲಿ ಹಿ ಶಬ್ದವು ಪಾದಪೂರಣಕ್ಕಾಗಿಯೇ ಉಪಯೋಗಿಸಿರುವುದರಿಂದ ನಿರರ್ಥಕವೆನಿಸಿದೆ. "ಕೃಶಾಂಗಿಯು ಉದ್ಯಾನವನಕ್ಕೆ ಹೋಗುತ್ತಾಳೆ" ಇಲ್ಲಿ ಹನ್ ಧಾತುವನ್ನು ಗಮನವೆಂಬ ಅರ್ಥದಲ್ಲಿ ಪ್ರಯೋಗಿಸಿದ್ದರೂ ಅದಕ್ಕೆ ಆ ಅರ್ಥದಲ್ಲಿ ಸಾಮರ್ಥ್ಯವಿಲ್ಲ. "ಅರ್ಜುನನು ಕಿರಾತವೇಷದ ಮಹಾದೇವನ ಭಂಗಾರದ ಶಿಲೆಗೆ ಸದೃಶವಾದ ವಕ್ಷಸ್ಥಳವನ್ನು ತಾಡಿಸಿದನು." ಇಲ್ಲಿ ಆಙಪೂರ್ವಕವಾದ ಹನ್ ಧಾತುವನ್ನು ಆತ್ಮನೇಪದದಲ್ಲಿ ಪ್ರಯೋಗಿಸಲಾಗಿದೆ. ತನ್ನ ದೇಹವೇ ಅಲ್ಲಿ ಕರ್ಮವೆನಿಸಿದ್ದರೆ ಆಗ ಆ ಎಂಬ ಉಪಸರ್ಗದೊಡನೆ ಹನ್‌ಧಾತುವನ್ನು ಆತ್ಮನೇಪದದಲ್ಲಿ ಉಪಯೋಗಿಸಬಹುದು. ಆದರೆ ಇಲ್ಲಿ ಹಾಗೆ ಪ್ರಯೋಗಿಸಿಲ್ಲ. ಬೇರೆಯವರ (ಅಂದರೆ ಶಿವನ) ವಕ್ಷಸ್ಥಳವನ್ನು ಅರ್ಜುನನು ಹೊಡೆಯುತ್ತಿರುವುದರಿಂದ ಪರಾಂಗವೇ ಇಲ್ಲಿ ಹನ್ ಧಾತುವಿನ ಕರ್ಮವೆನಿಸಿರುವ ಪ್ರಯುಕ್ತ ಇಲ್ಲಿ ಆತ್ಮನೇಪದವನ್ನು ಪ್ರಯೋಗಿಸಿದ್ದು ವ್ಯಾಕರಣಶಾಸ್ತ್ರದ ನಿಯಮವನ್ನು ಉಲ್ಲಂಘಿಸಿದಂತಾಯಿತು. ಹೀಗೆ ವೈಯಾಕರಣಲಕ್ಷಣವಿಲ್ಲದ್ದರಿಂದ ಇದು ಚ್ಯುತಸಂಸ್ಕಾರವೆನಿಸಿದೆ. (ಸಂಸ್ಕಾರಹೀನವಾದ್ದು) 'ಆಜಘ್ನೇ' ಎಂಬಲ್ಲಿ ಪದದ ದೋಷವೇನೂ ಇಲ್ಲ. ಆ ಎಂಬ ಉಪಸರ್ಗದ ಸಂಬಂಧದಿಂದ ಅಲ್ಲಿ ದೋಷವು ಸಂಭವಿಸಿರುವ ಪ್ರಯುಕ್ತ ಅದು ವಾಕ್ಯದೋಷವೇ ಆಗಲಿ ಎಂದು ಆಕ್ಷೇಪಿಸಿದರೆ ಅದು ಹೊಂದುವುದಿಲ್ಲ. ಗುಣದೋಷಅಲಂಕಾರಗಳು ಶಬ್ದದಲ್ಲೂ ಅರ್ಥದಲ್ಲೂ ಇರುವುದಾಗಿ ವ್ಯವಸ್ಥೆಯಾಗಿರುವುದರಿಂದ ಎಲ್ಲಿ ಶಬ್ದವಿರುತ್ತದೆಯೋ ಅಲ್ಲಿಯೇ ದೋಷಗುಣಾಲಂಕಾರಗಳು ಇರುತ್ತವೆ ಎಂಬ ಅನ್ವಯವೂ, ಎಲ್ಲಿ ಶಬ್ದವಿರುವುದಿಲ್ಲವೋ ಅಲ್ಲಿ ಗುಣಾಲಂಕಾರಗಳಿರುವುದಿಲ್ಲವೆಂಬ ವ್ಯತಿರೇಕವೂ ಹೊಂದಿಕೆಯಾಗುವ ಪ್ರಯುಕ್ತ 'ಆಜಘ್ನೇ' ಎಂಬಲ್ಲಿ ಆ ಪದವಿದ್ದರೆ ಆ ದೋಷವು ಇರುವುದರಿಂದಲೂ, ಆ ಪದವಿಲ್ಲದಿದ್ದರೆ ಆ ದೋಷವು ಇಲ್ಲದೇ ಇರುವುದರಿಂದಲೂ ಇದು ಪದದೋಷವೇ ಹೊರತು ವಾಕ್ಯದೋಷವಾಗುವುದಿಲ್ಲವೆಂದು ತಿಳಿಯಬೇಕು. ಬೇರೆ ಪದವನ್ನೂ ಅಲ್ಲಿ ಪ್ರಯೋಗಿಸಿದರೂ ಅದಕ್ಕೂ ಅದೇ ಅವಸ್ಥೆಯೇ ಸಂಭವಿಸುವ ಪ್ರಯುಕ್ತ ಅದು ಪದದೋಷವೇ ಆಗುತ್ತದೆ. ಧಾತುಮತ್ತಾಂ ಗಿರಿರ್ಧತ್ತೇ ಎಂಬಲ್ಲಿಯಾದರೋ ಮತ್ತಾಶಬ್ದವಿದ್ದರೆ ನಿಹತಾರ್ಥವೆಂಬ ದೋಷವು ಸಂಭವಿಸುತ್ತದೆ.

ಅದು ಇಲ್ಲದೇ ಇದ್ದರೆ ದೋಷವೂ ಇರುವುದಿಲ್ಲ. ಆದ್ದರಿಂದ ಅಲ್ಲಿ ಪದದ ಒಂದು ಅಂಶದಲ್ಲಿ ಮಾತ್ರವೇ ದೋಷವಿದ್ದು ಪದಕ್ಕೆ ಪೂರ್ತಿಯಾಗಿ ಅನ್ವಯಿಸುವುದಿಲ್ಲ. ಹೀಗೆ ಅನ್ವಯವ್ಯತಿರೇಕಗಳಿಗನುಗುಣವಾಗಿ ದೋಷವು ವಾಕ್ಯದಲ್ಲಯೂ, ಪದ ದಲ್ಲಿಯೂ, ಪದಾಂಶದಲ್ಲಿಯೂ ಇರುವುದಕ್ಕೆ ಅಡ್ಡಿಯಿಲ್ಲ. ಆದರೆ ಪದದಲ್ಲಿರುವ ದೋಷವನ್ನು ವಾಕ್ಯದಲ್ಲಿ ಇರುವುದಾಗಿ ಭಾವಿಸಬೇಕಾಗಿಲ್ಲ. ಹೀಗೆಯೇ ಪದ್ಮಃ ಎಂದು ಪುಲ್ಲಿಂಗದಲ್ಲಿ ಪದ್ಮಪದವನ್ನು ಪ್ರಯೋಗಿಸಿದ್ದು ಪದಗತವಾದ ದೋಷವೆಂದೇ ತಿಳಿಯಬೇಕು. ಹೀಗೆಯೇ ಪ್ರಾಕೃತವ್ಯಾಕರಣದ ಲಕ್ಷಣಗಳು ತಪ್ಪಿದ ಕಡೆಗಳಲ್ಲಿ ಸಂಭವಿಸುವ ಚ್ಯುತಸಂಸ್ಕಾರ ಮೊದಲಾದ ದೋಷಗಳು ಆಯಾ ಪದಗಳಿಗೆ ಅನ್ವಯಿ ಸುವುದಾಗಿ ತಿಳಿಯಬೇಕು. ಇಲ್ಲಿ ತಿಳಿಸಿರುವ ದೋಷಗಳಲ್ಲಿ ಕೆಲವಕ್ಕೆ ಬೇರೆ ಬೇರೆ ಲಕ್ಷಣಗಳಿರುವುದರಿಂದ ಅವುಗಳ ವೈಶಿಷ್ಟ್ಯವನ್ನು ತಿಳಿಸುತ್ತಾನೆ. ಶಬ್ದಗಳನ್ನು ಪೂರ್ತಿಯಾಗಿ ಎಲ್ಲಿಯೂ ಪ್ರಯೋಗಿಸಲಿಕ್ಕೇ ಆಗದೇ ಇರುವಾಗ ಹನ್ ಧಾತುವನ್ನು ಕುಂಜಂ ಹಂತಿ ಎಂದು ಗಮನಾರ್ಥದಲ್ಲಿ ಪ್ರಯೋಗಿಸಿದ್ದು ಅಸಮರ್ಥವೆನಿಸುತ್ತದೆ. ಅದೇ ಹನ್‌ಧಾತುವನ್ನು ಪದ್ಭ್ಯಾಂ ಹನ್ಯತೇ ಗಮ್ಯತೇ ಇತಿ ಪದ್ಧತಿಃ ಎಂದು ಕರ್ಮಣಿ ಪ್ರಯೋಗದಲ್ಲಿ ಗತ್ಯರ್ಥದಲ್ಲಿ ಪ್ರಯೋಗಿಸಿದರೆ ಆಗ ಪಾಠವು ಸಾಧುವೆನಿಸುತ್ತದೆ. ಹಾಗೆಯೇ 'ಅಕಾಲಸಂಧ್ಯಾಮಿವ ಧಾತುಮತ್ತಾಮ್' ಎಂದು ವಿರಳವಾಗಿ ಪ್ರಯೋ ಗಿಸಿದರೂ ನಿಹತಾರ್ಥವೆಂಬ ದೋಷವು ಸಂಭವಿಸುತ್ತದೆ. ಹೀಗೆ ಅನೇಕ ಅರ್ಥಗ ಳನ್ನು ಕೊಡುವ ಶಬ್ದವನ್ನು ಪ್ರಯೋಗಿಸಿದ ಕಡೆಗಳಲ್ಲಿ ನಿಹತಾರ್ಥವೆಂಬ ದೋಷ ವಿದ್ದೇ ಇರುತ್ತದೆ. ಅದೇ ಅನೇಕಾರ್ಥಕ ಪದಗಳನ್ನು ಎಲ್ಲಾ ಕಡೆಗಳಲ್ಲೂ ಪ್ರಯೋಗಿ ಸದೆ ಕೆಲವು ಕಡೆ ಮಾತ್ರವೇ ಪ್ರಯೋಗಿಸಿದರೆ ಅಲ್ಲಿ ಅಪ್ರತೀತವೆಂಬ ದೋಷವು ಸಂಭವಿ ಸುತ್ತದೆ. ಅಪ್ರಯುಕ್ತತ್ವ, ಅಸಮರ್ಥತ್ವ ಇವೆರಡಕ್ಕೆ ಭೇದವನ್ನು ತೋರಿಸುತ್ತಾನೆ. ಅನೇಕ ಅರ್ಥಗಳನ್ನು ತಿಳಿಸುವ ಕಡೆ 'ಭಾತಿ ಪದ್ಮಃಸರೋವರೇ' ಎಂಬಲ್ಲಿ ಪದ್ಮಪದವು ಕಮಲವೆಂಬ ಒಂದೇ ಅರ್ಥವನ್ನು ತಿಳಿಸುವುದರಿಂದ ಅಲ್ಲಿ ಅದನ್ನು ಪ್ರಯೋಗಿಸಿದ್ದು ಅಪ್ರಯುಕ್ತವೆಂಬ ದೋಷವೆನಿಸುತ್ತದೆ. 'ಕುಂಜಂ ಹಂತಿ' ಎಂಬಲ್ಲಿ ಹನ್ ಧಾತುವಿಗೆ ಹಿಂಸೆ ಗತಿ ಎಂಬ ಎರಡು ಅರ್ಥಗಳು ತೋರುವುದರಿಂದ ಗತ್ಯರ್ಥದಲ್ಲಿ ಹನ್ ಧಾತು ವಿಗೆ ಸಾಮರ್ಥ್ಯವಿಲ್ಲದ ಪ್ರಯುಕ್ತ ಹಾಗೆ ಪ್ರಯೋಗಿಸಿದ್ದು ಅಸಮರ್ಥವೆನಿಸುತ್ತದೆ. ಹಾಗೆ ಸಾಮರ್ಥ್ಯವಿಲ್ಲದಿದ್ದರೂ ಹನ್ ಧಾತುವನ್ನು ಗಮನಾರ್ಥದಲ್ಲಿ ಪಾಠ ಮಾಡ ಲಾಗಿದೆ. 'ದಿನವು ನನಗೆ ರಾತ್ರಿಯಾಗುತ್ತದೆ' ಎಂಬಲ್ಲಿ ದಿನಪದಕ್ಕೆ ಪ್ರಕಾಶಮಯ ಎಂಬ ಅರ್ಥದಲ್ಲಿ ಹಾಗೆ ಪಾಠವಿಲ್ಲದಪ್ರಯುಕ್ತ ದಿನಪದದಿಂದ ಪ್ರಕಾಶಮಯ ಎಂಬ ಅರ್ಥವನ್ನು ತಿಳಿಸುವುದು ಅವಾಚಕವೆನಿಸುತ್ತದೆ. ಹೀಗೆ ಇವೆರಡಕ್ಕೂ ಭೇದವಿದೆ.

ಏವಂ ಪದದೋಷಸಜಾತೀಯಾ ಉಕ್ತಾಃ, ಸಂಪ್ರತಿ ತದ್ವಿಜಾತೀಯಾ ಉಚ್ಯಂತೇ:—ವರ್ಣಾನಾಂ ಪ್ರತಿಕೂಲತ್ವಂ ಲುಪ್ತಾಹತವಿಸರ್ಗತೇ ।

ಅಧಿಕನ್ಯೂನಕಥಿತಪದತಾ ಹತವೃತ್ತತಾ ॥

ಪತತ್ಪ್ರಕರ್ಷತಾ ಸಂಧೌ ವಿಶ್ಲೇಷಾಶ್ಲೀಲಕಷ್ಟತಾಃ ।
ಅರ್ಥಾಂತರೈಕಪದತಾ ಸಮಾಪ್ತಪುನರಾತ್ತತಾ ॥
ಅಭವನ್ಮತಸಂಬಂಧಾಕ್ರಮಾಮತಪರಾರ್ಥತಾಃ ।
ವಾಚ್ಯಸ್ಯಾನಭಿಧಾನಂ ಚ ಭಗ್ನಪ್ರಕ್ರಮತಾ ತಥಾ ॥
ತ್ಯಾಗಃ ಪ್ರಸಿದ್ಧೇರಸ್ಥಾನೇ ನ್ಯಾಸಃ ಪದಸಮಾಸಯೋಃ ।
ಸಂಕೀರ್ಣತಾ ಗರ್ಭಿತತಾ ದೋಷಾಃ ಸ್ಯುರ್ವಾಕ್ಯಮಾತ್ರಗಾಃ ॥

ವರ್ಣಾನಾಂ ರಸಾನುಗುಣವಿಪರೀತತ್ವಂ ಪ್ರತಿಕೂಲತ್ವಮ್. ಯಥಾ ಮಮ—

ಉದ್ವರ್ತಯತಿ ಉಲ್ಲೋಟಯತಿ ಶಯನೇ ಕಸ್ಮಿನ್ನಪಿ ಮೋಟ್ಟಾಯತಿ
ನೋ ಪರಿಘಟ್ಟಯತಿ ಹೃದಯೇನ ಸ್ಫೋಟಯತಿ ಲಜ್ಜಯಾ ಖಟ್ಟ್ಯತಿ ಧೃತೇಸ್ಸಾ

ಅತ್ರ ಟಕಾರಾಃ ಶೃಂಗಾರರಸಪರಿಪಂಥಿನಃ ಕೇವಲಂ ಶಕ್ತಿಪ್ರದರ್ಶನಾಯ ನಿಬದ್ಧಾಃ. ಏಷಾಂ ಚೈಕದ್ವಿತ್ರಿಚತುಃಪ್ರಯೋಗೇನ ತಾದೃಗ್ರಸಭಂಗ ಇತಿ ನ ದೋಷಃ

'ಗತಾ ನಿಶಾ ಇಮಾ ಬಾಲೇ' ಅತ್ರ ಲುಪ್ತವಿಸರ್ಗಾಃ.

ಆಹತಾ ಓತ್ವಂ ಪ್ರಾಪ್ತಾ ವಿಸರ್ಗಾ ಯತ್ರ ಯಥಾ–'ಧೀರೋ ವರೋ ನರೋಯಾತಿ'

'ಪಲ್ಲವಾಕೃತಿರಕ್ತೋಷ್ಠೀ 'ಅತ್ರ ಆಕೃತಿಪದಮಧಿಕಮ್.

ಏವಂ 'ಸದಾಶಿವಂ ನೌಮಿ ಪಿನಾಕಪಾಣಿಮ್' ಇತಿ ವಿಶೇಷಣಮಧಿಕಮ್.

'ಕುರ್ಯಾಂ ಹರಸ್ಯಾಪಿ ಪಿನಾಕಪಾಣೇಃ 'ಇತ್ಯತ್ರ ಪಿನಾಕಪಾಣಿಪದಂ ವಿಶೇಷ ಪ್ರತಿಪತ್ತ್ಯರ್ಥಮುಪಾತ್ತಮಿತಿ ಯುಕ್ತಮೇವ.

ಯಥಾ ವಾ–'ವಾಚಮುವಾಚ ಕೌತ್ಸಃ' ಅತ್ರ ವಾಚಮಿತ್ಯಧಿಕಮ್, ಉವಾಚೇತ್ಯನೇನೈವ ಗತಾರ್ಥತ್ವಾತ್.

ಕ್ವಚಿತ್ತು ವಿಶೇಷಣದಾನಾರ್ಥಂ ತತ್ಪ್ರಯೋಗೋ ಯುಜ್ಯತೇ. ಯಥಾ 'ಉವಾಚ ಮಧುರಾಂ ವಾಚಮ್' ಇತಿ.

ಕೇಚಿತ್ತ್ವಾಹುಃ 'ಯತ್ರ ವಿಶೇಷಣಸ್ಯಾಪಿ ಕ್ರಿಯಾವಿಶೇಷಣತ್ವಂ ಸಂಭವತಿ.

ತತ್ರಾಪಿ ತತ್ಪ್ರಯೋಗೋ ನ ಘಟತೇ 'ಯಥಾ' ಉವಾಚ "ಮಧುರಂ ಧೀಮಾನ್" ಇತಿ. "ಯದಿ ಮಯ್ಯರ್ಪಿತಾ ದೃಷ್ಟಿಃ ಕಿಂ ಮಮೇಂದ್ರ ತಯಾ ತದಾ" ಅತ್ರ ಪ್ರಥಮೇ ತ್ವಯೇತಿ ಪದಂ ನ್ಯೂನಮ್. 'ರತಿಲೀಲಾಶ್ರಮಂಭಿಂತೇ ಸಲೀಲಮನಿಲೋ ವಹನ್' ಅತ್ರ ಲೀಲಾಶಬ್ದಃ ಪುನರುಕ್ತಃ.

ಏವಂ 'ಜಕ್ಷುರ್ವಿಸಂಧೃತವಿಕಾಶಿವಿಸಪ್ರಸೂನಾಃ' ಅತ್ರ ವಿಸಶಬ್ದಸ್ಯ 'ಧೃತಪರಿಸ್ಫುಟತತ್ಪ್ರಸೂನಾಃ' ಇತಿ ಸರ್ವನಾಮ್ನೈವ ಪರಾಮರ್ಶೋ ಯುಕ್ತಃ.

ಹತವೃತ್ತಂ ಲಕ್ಷಣಾನುಸರಣೇಽಪ್ಯಶ್ರವ್ಯಮ್, ರಸಾನನುಗುಣಮ್, ಅಪ್ರಾಪ್ತಗುರುಭಾವಾಂತಲಘು ಚ. ಕ್ರಮೇಣ ಯಥಾ—

ಹಂತ ಸತತಮೇತಸ್ಯಾ ಹೃದಯಂ ಭಿಂತೇ ಮನೋಭವಃ ಕುಪಿತಃ
ಅಯಿ ಮಯಿ ಮಾನಿನಿ ! ಮಾ ಕುರು ಮಾನಮ್

ಇದಂ ವೃತ್ತಂ ಹಾಸ್ಯರಸಸ್ಯೈವ ಅನುಕೂಲಮ್.

ವಿಕಸಿತಸಹಕಾರಭಾರಹಾರಿಪರಿಮಲ ಏಷ ಸಮಾಗತೋ ವಸಂತಃ

ಯತ್ಪಾದಾಂತೇ ಲಘೋರಪಿ ಗುರುಭಾವ ಉಕ್ತಃ ತತ್ಸರ್ವತ್ರ ದ್ವಿತೀಯ ಚತುರ್ಥಪಾದವಿಷಯಮ್. ಪ್ರಥಮತೃತೀಯಪಾದವಿಷಯಂ ತು ವಸಂತತಿಲಕಾದೇರೇವ. ಅತ್ರ 'ಪ್ರಮುದಿತಸೌರಭ ಆಗತೋ ವಸಂತಃ' ಇತಿ ಪಾಠೋ ಯುಕ್ತಃ. ಯಥಾ ವಾ—

ಅನ್ಯಾಸ್ತಾ ಗುಣರತ್ನರೋಹಣಭುವೋ ಧನ್ಯಾ ಮೃದನ್ಯೈವ ಸಾ
ಸಂಭಾರಾಃ ಖಲು ತೇಽನ್ಯ ಏವ ವಿಧಿನಾ ಯೈರೇಷ ಸೃಷ್ಟೋ ಯುವಾ ।
ಶ್ರೀಮತ್ಕಾಂತಿಜುಷಾಂ ದ್ವಿಷಾಂ ಕರತಲಾತ್ ಸ್ತ್ರೀಣಾಂ ನಿತಂಬಸ್ಥಲಾತ್
ದೃಷ್ಟೇ ಯತ್ರ ಪತಂತಿ ಮೂಢಮನಸಾಮಸ್ತ್ರಾಣಿ ವಸ್ತ್ರಾಣಿ ಚ ॥

ಅತ್ರ 'ವಸ್ತ್ರಾಣಿ ಚ' ಇತಿ ಬಂಧಸ್ಯ ಶ್ಲಥತ್ವಶ್ರುತಿಃ. ವಸ್ತ್ರಾಣ್ಯಪಿ ಇತಿ ಪಾಠೇ ತು ದಾರ್ಢ್ಯಮಿತಿ ನ ದೋಷಃ. 'ಇದಮಪ್ರಾಪ್ತಗುರುಭಾವಾಂತಲಘು' ಇತಿ ಕಾವ್ಯಪ್ರಕಾಶಕಾರಃ. ವಸ್ತುತಸ್ತು 'ಲಕ್ಷಣಾನುಸರಣೇಽಪ್ಯಶ್ರವ್ಯಮ್' ಇತ್ಯನ್ಯೇ.

ಪ್ರೋಜ್ಜ್ವಲಜ್ಜ್ವಾಲಾವಿಕಟೋರುಸಟಾಚ್ಛಟಃ ।
ಶ್ವಾಸಕ್ಷಿಪ್ತಕುಲಕ್ಷ್ಮಾಭೃತ್ ಪಾತು ವೋ ನರಕೇಸರೀ ॥

ಅತ್ರ ಕ್ರಮೇಣ ಅನುಪ್ರಾಸಪ್ರಕರ್ಷಃ ಪತಿತಃ.

'ದಲಿತೇ ಉತ್ಪಲೇ ಏತೇ ಅಕ್ಷಿಣೀ ಅಮಲಾಂಗಿ! ತೇ' ಏವಂವಿಧಸಂಧಿವಿಶ್ಲೇಷಸ್ಯ ಅಸಕೃತ್ ಪ್ರಯೋಗ ಏವ ದೋಷಃ. ಅನುಶಾಸನಮುಲ್ಲಂಘ್ಯ ವೃತ್ತಭಂಗಭಯಮಾತ್ರೇಣ ಸಂಧಿವಿಶ್ಲೇಷಸ್ಯ ತು ಸಕೃದಪಿ. ಯಥಾ–'ವಾಸವಾಶಾಮುಖೇ ಭಾತಿ ಇಂದುಶ್ಚಂದನಬಿಂದುವತ್' 'ಚಲಂಡಾಮರಚೇಷ್ಟಿತಃ' ಇತಿ. ಅತ್ರ ಸಂಧೌ ಜುಗುಪ್ಸಾವ್ಯಂಜಕಮಶ್ಲೀಲತ್ವಮ್. 'ಉರ್ವ್ಯಸಾವತ್ರ ತರ್ವಾಲೀ ಮರ್ವಂತೇ ಚಾರ್ವವಸ್ಥಿತಿಃ' ಅತ್ರ ಸಂಧೌ ಕಷ್ಟತ್ವಮ್.

ಇಂದುರ್ವಿಭಾತಿ ಕರ್ಪೂರಗೌರೈರ್ಧವಲಯನ್ ಕರೈಃ !
ಜಗನ್ಮಾ ಕುರು ತನ್ವಂಗಿ! ಮಾನಂ ಪಾದಾನತೇ ಪ್ರಿಯೇ ॥

ಅತ್ರ ಜಗದಿತಿ ಪ್ರಥಮಾರ್ಧೇ ಪಠಿತುಮುಚಿತಮ್.

ನಾಶಯಂತೋ ಘನಧ್ವಾಂತಂ ತಾಪಯಂತೋ ವಿಯೋಗಿನಃ ।
ಪತಂತಿ ಶಶಿನಃ ಪಾದಾಃ ಭಾಸಯಂತಃ ಕ್ಷಮಾತಲಮ್ ॥

ಅತ್ರ ಚತುರ್ಥಪಾದೋ ವಾಕ್ಯಸಮಾಪ್ತಾವಪಿ ಪುನರಾತ್ತಃ. ಅಭವನ್ಮತಸಂಬಂಧೋ

ಯಥಾ — ಯಾ ಜಯಶ್ರೀರ್ಮನೋಜಸ್ಯ ಯಯಾ ಜಗದಲಂಕೃತಮ್ ।
ಯಾಮೇಣಾಕ್ಷೀಂ ವಿನಾ ಪ್ರಾಣಾ ವಿಫಲಾ ಮೇ ಕುತೋಽದ್ಯ ಸಾ ॥

ಅತ್ರ ಯಚ್ಛಬ್ದನಿರ್ದಿಷ್ಟಾನಾಂ ವಾಕ್ಯಾನಾಂ ಪರಸ್ಪರನಿರಪೇಕ್ಷತ್ವಾತ್ ತದೇಕಾಂತಃಪಾತಿನಾ ಏಣಾಕ್ಷೀಶಬ್ದೇನ ಅನ್ವೇಷಾಂ ಸಂಬಂಧಃ ಕವೇರಭಿಮತೋ ನೋಪಪದ್ಯತ ಏವ.

ಯಾಂ ವಿನಾವಿಮಾ ವೃಥಾ ಪ್ರಾಣಾ ಏಣಾಕ್ಷೀ ಸಾ ಕುತೋಽದ್ಯ ಮೇ ।

ಇತಿ ತಚ್ಛಬ್ದನಿರ್ದಿಷ್ಟವಾಕ್ಯಾಂತಃಪಾತಿತ್ವೇ ತು ಸರ್ವೈರಪಿ ಯಚ್ಛಬ್ದನಿರ್ದಿಷ್ಟವಾಕ್ಯೈಃ ಸಂಬಂಧೋ ಘಟತೇ. ಯಥಾ ವಾ—

ಈಕ್ಷಸೇ ಯತ್ಕಟಾಕ್ಷೇಣ ತದಾ ಧನ್ವೀ ಮನೋಭವಃ ।

ಅತ್ರ ಯದಿತ್ಯಸ್ಯ ತದೇತ್ಯನೇನ ಸಂಬಂಧೋ ನ ಘಟತೇ. ಈಕ್ಷಸೇ ಚೇತ್ ಇತಿ ತು ಯುಕ್ತಃ ಪಾಠಃ.

ಪದದೋಷಗಳಿಗೆ ಸದೃಶಗಳೆನಿಸಿದ ವಾಕ್ಯದೋಷಗಳನ್ನು ತಿಳಿಸಿಯಾಯಿತು. ಈಗ ಪದದಲ್ಲಿಲ್ಲದೆ ವಾಕ್ಯದಲ್ಲಿಯೇ ಇರುವ ದೋಷಗಳನ್ನು ತಿಳಿಸುತ್ತಾನೆ. ಅಕ್ಷರಗಳು ವಿರುದ್ಧವಾಗಿರುವುದು, ವಿಸರ್ಗವು ಲೋಪವಾಗಿರುವುದು ಮತ್ತು ವಿಕಾರವನ್ನು ಹೊಂದಿರುವುದು, ಹೆಚ್ಚಾಗಿಯೋ ಅಥವಾ ಕಡಮೆಯೋ ಪದಗಳನ್ನು ತಿಳಿಸಿರುವುದು ಹಾಗೆಯೇ ಹೇಳಿದ್ದನ್ನೇ ಮತ್ತೆ ಹೇಳುವುದು. ಛಂದಸ್ಸು ಕೆಟ್ಟಿರುವುದು, ಉತ್ಕರ್ಷವು ಹದಗೆಟ್ಟಿರುವುದು ಸಂಧಿಯಲ್ಲಿ ಪದಗಳು ಸೇರದೇ ಇರುವಿಕೆ, ಅಶ್ಲೀಲತೆ ಮತ್ತು ಕಷ್ಟಸ್ಥಿತಿ, ಪದ್ಯದ ಮತ್ತೊಂದು ಅರ್ಧದಲ್ಲಿ ಹಿಂದಿನ ಅರ್ಧದ ಒಂದು ಪದವಿರುವುದು, ಒಂದು ಸಾರಿ ಕೊನೆಯಾದ್ದನ್ನು ಮತ್ತೆ ಆರಂಭಿಸುವುದು, ಪದಗಳಿಗೆ ಪರಸ್ಪರವಾಗಿ ಸಂಬಂಧವು ಹೊಂದದೇ ಇರುವುದು, ಕ್ರಮವಿಲ್ಲದೇ ಇರುವುದು, ಒಂದು ಕಡೆಯಲ್ಲಿ ತೋರುವ ಎರಡನೆಯ ಅರ್ಥವು ಇಷ್ಟವಾಗದೇ ಇರುವುದು, ಹೇಳಬೇಕಾದ ಅರ್ಥವನ್ನು ಹೇಳದೇ ಇರುವುದು, ಆರಂಭಿಸಿದ ಕ್ರಮವನ್ನು ತೆಗೆಯುವುದು, ರೂಢಿಯನ್ನು ತೊರೆಯುವುದು, ಅನಾವಶ್ಯಕವಾದ ಕಡೆಗಳಲ್ಲಿ ಪದವನ್ನೂ ಸಮಾಸವನ್ನೂ ಜೋಡಿಸುವುದು, ಸಂಶಯವನ್ನು ಹುಟ್ಟಿಸುವುದು, ಬೇರೊಂದು ಅರ್ಥವನ್ನು ತಿಳಿಸುವುದು ಇವೆಲ್ಲವೂ ವಾಕ್ಯದಲ್ಲಿ ಮಾತ್ರವೇ ಇರುವ ದೋಷಗಳು.

ರಸಸ್ಫೂರ್ತಿಗೆ ಅನುಕೂಲವಲ್ಲದ ಪದಗಳನ್ನು ಪ್ರಯೋಗಿಸುವುದು ಪ್ರತಿಕೂಲತೆ ಎನಿಸುವುದು. ಒಬ್ಬಳ ವಿರಹಾವಸ್ಥೆಯನ್ನು ವರ್ಣಿಸುವ ಈ ಪದ್ಯದಲ್ಲಿ ಇದನ್ನು ಕಾಣಬಹುದು. "ಆ ಯುವತಿಯು ಹಾಸಿಗೆಯಲ್ಲಿದ್ದು ಒಂದು ಕ್ಷಣಕಾಲ ಹೊರಳಾಡುತ್ತಾಳೆ, ಒಂದು ಕ್ಷಣಕಾಲ ಪ್ರೇಮವನ್ನು ಸೂಚಿಸುತ್ತಾಳೆ, ಒಂದು ಕ್ಷಣಕಾಲ ಶರೀರವನ್ನು ಅಳ್ಳಾಡಿಸುವುದೇ ಇಲ್ಲ, ಒಂದು ಕ್ಷಣಕಾಲ ಸಾಯಲು ಇಚ್ಛಿಸುತ್ತಾಳೆ, ಒಂದು ಕ್ಷಣಕಾಲ ಲಜ್ಜೆಯಿಂದ ಧೈರ್ಯವನ್ನವಲಂಬಿಸಿ ತನ್ನ ಅವಸ್ಥೆಯನ್ನು ಮುಚ್ಚಿಕೊಳ್ಳುತ್ತಾಳೆ." ಇಲ್ಲಿ ಟಕಾರಗಳನ್ನು ಕವಿಯು ತನ್ನ ಶಕ್ತಿಯನ್ನು ತೋರಿಸಲಿಕ್ಕಾಗಿ ಪ್ರಯೋಗಿಸಿದ್ದರೂ ಅವು ಶೃಂಗಾರರಸಪ್ರಕಾಶಕ್ಕೆ ವಿರುದ್ಧವೆನಿಸಿವೆ. ಇದನ್ನು ಒಂದು ಎರಡು ಮೂರು ನಾಲ್ಕುವೇಳೆ ಪ್ರಯೋಗಿಸಿದ್ದರೆ ಅಷ್ಟು ರಸಭಂಗವಾಗುವುದಿಲ್ಲವಾದ

ಪ್ರಯುಕ್ತ ಇದು ದೋಷವಾಗುವುದಿಲ್ಲ. ಆದರೆ ಅನೇಕವೇಳೆ ಉಪಯೋಗಿಸಿದರೆ ಮಾತ್ರ ರಸಕ್ಕೆ ಭಂಗವುಂಟಾಗುವ ಪ್ರಯುಕ್ತ ದೋಷವೆನಿಸುತ್ತದೆ. "ಎಲೈ ಬಾಲಿಕೆಯೇ, ಈ ರಾತ್ರಿಗಳು ಕಳೆದವು" ಇಲ್ಲಿ ಅನೇಕಸಾರಿ ವಿಸರ್ಗಗಳು ಲೋಪವಾಗಿರುವುದರಿಂದ ಇದು ದೋಷವೆನಿಸಿದೆ. ಒಂದು ಎರಡು ಕಡೆಗಳಲ್ಲಿ ವಿಸರ್ಗವು ಲೋಪವಾಗಿದ್ದರೆ ಅದು ದೋಷವೆನಿಸುತ್ತಿರಲಿಲ್ಲ. ವಿಸರ್ಗವು ಓತ್ವವಾಗಿ ವ್ಯತ್ಯಾಸವನ್ನು ಹೊಂದಿರುವುದನ್ನು ಉದಾಹರಿಸುತ್ತಾನೆ. "ಧೀರನೂ ಶ್ರೇಷ್ಠನೂ ಆದ ಗಂಡಸು ಹೋಗುತ್ತಿದ್ದಾನೆ." ಇಲ್ಲಿ ವಿಸರ್ಗಕ್ಕೆ ಓತ್ವವು ಮೂರುವೇಳೆ ಬಂದಿದ್ದರಿಂದ ಇದು ದೋಷವೆನಿಸಿಲ್ಲ. 'ಚಿಗುರಿನ ಆಕಾರವುಳ್ಳ ಕೆಂಪು ತುಟಿಗಳುಳ್ಳವಳು' ಇಲ್ಲಿ ಆಕೃತಿ ಎಂಬ ಪದವನ್ನು ಹೆಚ್ಚಾಗಿ ಉಪಯೋಗಿಸಿದೆ. ಹೀಗೆಯೇ 'ಪಿನಾಕವೆಂಬ ಧನುಸ್ಸನ್ನು ಕೈಯಲ್ಲಿ ಹಿಡಿದಿರುವ ಸದಾಶಿವನನ್ನು ನಮಸ್ಕರಿಸುತ್ತಾನೆ' ಇಲ್ಲಿ ಪಿನಾಕಪಾಣಿ ಎಂಬ ವಿಶೇಷಣವನ್ನು ಅನಾವಶ್ಯಕವಾಗಿ ಪ್ರಯೋಗಿಸಿದ್ದು ದೋಷವೆನಿಸಿದೆ. 'ಕುರ್ಯಾಂ ಹರಸ್ಯಾಪಿ ಪಿನಾಕಪಾಣೇಃ' ಎಂಬಲ್ಲಿ ಶಿವನಲ್ಲಿ ಒಂದು ವೈಶಿಷ್ಟ್ಯವನ್ನು ತೋರಿಸಲಿಕ್ಕಾಗಿ ಆ ವಿಶೇಷಣವನ್ನು ಕೊಟ್ಟದ್ದು ಯುಕ್ತವೆನಿಸಿದೆ. ಆದರೆ ಒಬ್ಬ ಭಕ್ತನು ನಮಸ್ಕರಿಸುವಾಗ ಇವನಿಗೆ ಇಂತಹ ವಿಶೇಷಣವು ಯುಕ್ತವೆನಿಸುವುದಿಲ್ಲ. ಕೌತ್ಸನು (ವಾಚಂ ಉವಾಚ) ಮಾತನ್ನು ತಿಳಿಸಿದನು ಎಂಬಲ್ಲಿ ತಿಳಿಸಿದನು ಎಂಬುವದರಿಂದಲೇ ನಿರ್ದಿಷ್ಟವಾದ ಅರ್ಥವು ತೋರುವಾಗ ವಾಚಂ ಎಂಬುದು ಅನಾವಶ್ಯಕವೆನಿಸಿದೆ. ಕೆಲವುಕಡೆ ವಿಶೇಷಣ ಒಂದನ್ನು ಕೊಡಲಿಕ್ಕಾಗಿ ಆ ಪದವನ್ನು ಪ್ರಯೋಗಿಸುವುದು ಯುಕ್ತವೆನಿಸುತ್ತದೆ. ಉವಾಚ ಮಧುರಾಂ ವಾಚಂ (ಇಂಪಾದ ಮಾತನ್ನು ತಿಳಿಸಿದವನು) ಎಂಬಲ್ಲಿ ಯಾವ ತಪ್ಪೂ ಕಾಣುವುದಿಲ್ಲ. ಎಲ್ಲಿ ವಿಶೇಷಣವನ್ನು ಕ್ರಿಯಾವಿಶೇಷಣವಾಗಿ ಉಪಯೋಗಿಡೆಯೋ ಅಲ್ಲಿಯೂ ಅದನ್ನು ಪ್ರಯೋಗಿಸುವುದು ಹೊಂದುವುದಿಲ್ಲ. 'ಉವಾಚ ಮಧುರಾಂ ವಾಚಂ' ಎಂಬುದಕ್ಕೆ ಬದಲಾಗಿ 'ಉವಾಚ ಮಧುರಂ ಧೀಮಾನ್' ಎಂದು ಕ್ರಿಯಾವಿಶೇಷಣವನ್ನು ಪ್ರಯೋಗಿಸಿದರೂ ಅಧಿಕಪದತ್ವವೆಂಬ ದೋಷವಿದ್ದೇ ಇರುತ್ತದೆ ಎಂದು ಕೆಲವರು ಹೇಳುತ್ತಾರೆ. "ನನ್ನ ಕಡೆ ದೃಷ್ಟಿಯನ್ನು ಇಟ್ಟರೆ ನನಗೆ ಇಂದ್ರಪದವಿಯಿಂದ ಆಗುವ ಲಾಭವೇನು?" ಇಲ್ಲಿ ತ್ವಯಾ ಎಂಬ ಪದವು ಇಲ್ಲದ್ದು ದೋಷವೆನಿಸಿದೆ. 'ಲೀಲೆಯಿಂದ ಬೀಸುವ ಗಾಳಿ ಸುರತಕ್ರೀಡೆಯಿಂದುಂಟಾದ ಆಯಾಸವನ್ನು ತೊಲಗಿಸುತ್ತದೆ' ಇಲ್ಲಿ 'ರತಿಲೀಲಾ' ಎಂಬಲ್ಲಿ ಲೀಲಾಶಬ್ದವು ಅನಾವಶ್ಯಕವಾಗಿ ಬಂದಿದೆ. ಹೀಗೆಯೇ 'ಅರಳಿದ ತಾವರೆಯ ಹೂವುಗಳನ್ನು ಹಿಡಿದಿರುವ ಸೈನ್ಯಗಳು ಆ ತಾವರೆದಂಟನ್ನೇ ತಿಂದವು' ಇಲ್ಲಿ ಬಿಸಶಬ್ದವನ್ನು ಎರಡುಸಾರಿ ಹೇಳಿದ್ದರಿಂದ ಒಮ್ಮೆ ಹೇಳಿದ್ದನ್ನು ಮತ್ತೆ ಹೇಳಿದ್ದು ದೋಷವೆನಿಸಿದೆ. ಇಲ್ಲಿ ಬಿಸಶಬ್ದವನ್ನು 'ತತ್ಪ್ರಸೂನಾಃ' ಎಂದು ಸರ್ವನಾಮದಿಂದ ತಿಳಿಸುವುದೇ ಯುಕ್ತವಾಗಿ ಕಾಣುತ್ತದೆ.

ಛಂದಸ್ಸಿಗೆ ಸಂಬಂಧಿಸಿದ ದೋಷವನ್ನು ಈಗ ತಿಳಿಸುತ್ತಾನೆ. ಕೇಳುವವರಿಗೆ ವೈರಾಗ್ಯವನ್ನು ಹುಟ್ಟಿಸುತ್ತ ರಸಪ್ರಕರ್ಷಕ್ಕೆ ಹಾನಿಯನ್ನು ಕೊಡುವುದರಿಂದ ಹತ

ವೃತ್ತವು ದೋಷವೆನಿಸಿದೆ. ಆಯಾಯ ಛಂದಸ್ಸಿನ ಲಕ್ಷಣವನ್ನು ಅನುಸರಿಸುವುದರಲ್ಲೂ ಕಿವಿಗೆ ಕಠೋರವಾಗುವಂತೆ ಪದಗಳನ್ನು ಸೇರಿಸುವುದು, ರಸಕ್ಕೆ ವಿರುದ್ಧವಾಗಿರುವುದು, ಗುರುವಲ್ಲದ ವರ್ಣವು ಪಾದದ ಕೊನೆಯಲ್ಲಿ ಲಘುವರ್ಣವಾಗಿಯೇ ಇರುವುದು ಹೀಗೆ ಇದರಲ್ಲಿ ಮೂರು ಬಗೆಗಳಿವೆ. "ಅಯ್ಯೋ, ಮನ್ಮಥನು ಕೋಪಗೊಂಡು ಈಕೆಯ ಹೃದಯವನ್ನು ಯಾವಾಗಲೂ ಹಿಂಸಿಸುತ್ತಿದ್ದಾನೆ." ಆರ್ಯಾವೃತ್ತದಲ್ಲಿ ಪ್ರಥಮ ತೃತೀಯಪಾದಗಳಲ್ಲಿ ಹನ್ನೆರಡು ಮಾತ್ರೆಗಳು, ದ್ವಿತೀಯಪಾದದಲ್ಲಿ ಹದಿನೆಂಟು ಮಾತ್ರೆಗಳು, ನಾಲ್ಕನೆಯ ಪಾದದಲ್ಲಿ ಹದಿನೈದು ಮಾತ್ರೆಗಳು ಇರುತ್ತವೆ. ಈ ಬಗೆಯ ಲಕ್ಷಣವನ್ನು ಅನುಸರಿಸಿದ್ದರೂ ಸಹ ಪ್ರಥಮಪಾದದಲ್ಲಿ ಅನುಷ್ಟುಪ್ ವೃತ್ತದಂತೆ ತೋರುತ್ತದೆ. ಎರಡನೆಯ ಪಾದದಲ್ಲಿ ಆರ್ಯಾವೃತ್ತದ ಒಂದು ಬಗೆಯಂತೆ ತೋರುತ್ತದೆ. ಹೀಗೆ ಶ್ಲೋಕವು ವಿರೂಪವಾಗಿರುವುದರಿಂದ ಕೇಳಲಿಕ್ಕೆ ಹಿತವಾಗಿಲ್ಲ. "ಎಲೈ ಕೋಪಿಷ್ಠಳೇ, ನನ್ನಲ್ಲಿ ಕೋಪವನ್ನು ಮಾಡಬೇಡ" ಈ ವೃತ್ತವು ಹಾಸ್ಯರಸಕ್ಕೆ ಅನುಕೂಲವೇ ಹೊರತು ಇಲ್ಲಿರುವ ಶೃಂಗಾರರಸಕ್ಕೆ ವಿಹಿತವಾಗಿಲ್ಲ. "ವಿಕಸಿತವಾದ ಮಾವಿನ ಹೂವಿನ ಸಮೂಹದ ಮನೋಹರವಾದ ಸುಗಂಧವುಳ್ಳ ವಸಂತಕಾಲವು ಬಂದಿತು'' ಪಾದದ ಕೊನೆಯಲ್ಲಿ ಲಘ್ವಕ್ಷರವು ಗುರುವಾಗುತ್ತದೆ ಎಂಬ ನಿಯಮವು ಎರಡು ನಾಲ್ಕನೇಯ ಪಾದಗಳಿಗೆ ಮಾತ್ರವೇ ಅನ್ವಯಿಸುವುದೇ ಹೊರತು ಒಂದು ಮೂರನೆಯ ಪಾದಗಳಿಗೆ ಅನ್ವಯಿಸುವುದಿಲ್ಲ. ಇಲ್ಲಿ ಮೊದಲನೆಯ ಪಾದದ ಕೊನೆಯ 'ಹಾರಿ' ಎಂಬಲ್ಲಿ ರಿ ಎಂಬುದು ಲಘುವೇ ಆಗಿ ಉಳಿದಿದೆ. ವಸಂತತಿಲಕ ಮೊದಲಾದ ವೃತ್ತಗಳಲ್ಲಿ ಮಾತ್ರವೇ ಒಂದು ಮೂರನೆಯ ಪಾದಗಳಲ್ಲೂ ಲಘ್ವಕ್ಷರವು ಗುರುವಾಗಬಲ್ಲದು. ಇಲ್ಲಿ ಒಂದು ಎರಡು ಪಾದಗಳು ಸೇರಿ ಒಂದೇ ಪಾದವಾಗಿರುವುದರಿಂದ ಆ ನಿಯಮವು ಅನ್ವಯಿಸುವುದಿಲ್ಲ. ಇಲ್ಲಿ 'ಪ್ರಮುದಿತಸೌರಭ ಆಗತೋ ವಸಂತಃ' ಎಂದು ಹೇಳುವುದು ಯುಕ್ತವೆನಿಸುತ್ತದೆ. ಬೇರೊಂದು ಉದಾಹರಣವಲ್ಲಿ ಬೇರೊಂದು ರೀತಿಯಿಂದ ವೃತ್ತವು ಕೆಟ್ಟಿರುವುದನ್ನು ತೋರಿಸುತ್ತಾನೆ. "ಈ ವೀರನ ಶೌರ್ಯಸೌಂದರ್ಯ ಮೊದಲಾದ ಆ ಗುಣಗಳೆಂಬ ರತ್ನಗಳಿಗೆ ಆಶ್ರಯಸ್ಥಾನಗಳೇ ಬೇರೆ. ಇವನ ದೇಹಕ್ಕೆ ಆಶ್ರಯವೆನಿಸಿದ ಆ ಪುಣ್ಯಕರವಾದ ಪೃಥಿವಿಯೇ ಬೇರೆ ; ನೀರು ಮೊದಲಾದ ಆ ಉಪಕರಣಗಳೇ ಬೇರೆ. ಆ ಬಗೆಯ ಕರಣಗಳಿಂದಲೇ ವಿಧಿಯು ಈ ಯುವಕನನ್ನು ನಿರ್ಮಿಸಿರುವನು. ಯಾವ ಈ ಯುವಕನನ್ನು ನೋಡಿದರೆ ಭಯದಿಂದ ಕರ್ತವ್ಯ ಅಕರ್ತವ್ಯಗಳನ್ನು ಅರಿಯದೆ ಇವನ ಸ್ವಾಭಾವಿಕವಾದ ಸೌಂದರ್ಯವನ್ನು ಮನಸ್ಸಿನಲ್ಲಿ ಅನುಭವಿಸಿದ ಶತ್ರುಗಳ ಕೈಗಳಿಂದ ಬಾಣಗಳು ಕೆಳಗೆ ಉದುರುತ್ತವೆಯೋ. ಶ್ತ್ರೀಯರ ನಿತಂಬಸ್ಥಳದಿಂದ ಬಟ್ಟೆಗಳು ಕೆಳಗೆಬೀಳುತ್ತವೆಯೋ. ಈ ವೀರನು ಅಷ್ಟು ಬಲಶಾಲಿಯೂ ಮನೋಹರನೂ ಆಗಿರುವನು" ಇಲ್ಲಿ ವಸ್ತ್ರಾಣಿ ಚ ಎಂದು ಕೊನೆಯಲ್ಲಿ ಲಘುವರ್ಣವು ಬಂದಿದೆ. ಅದರ ಮುಂದೆ ಸಂಯುಕ್ತಾಕ್ಷರ ವಿಲ್ಲದ್ದರಿಂದ ಬಂಧವು ಅಷ್ಟು ಬಿಗಿಯಾಗಿಲ್ಲದೆ ಶಿಥಿಲವೆನಿಸಿದೆ. ಕೊನೆಯಲ್ಲಿ ಬರುವ ಲಘುವರ್ಣವು ಗುರುವರ್ಣವಾಗದೇ ಇರುವುದಕ್ಕೆ ಇದು ಉದಾಹರಣ

ವಾಗುವುದೆಂದು ಕಾವ್ಯಪ್ರಕಾಶಕಾರನು ಹೇಳಿದ್ದಾನೆ. ಛಂದಸ್ಸಿನ ಲಕ್ಷಣವನ್ನು ಅನುಸರಿಸಿದ್ದರೂ, ಅಕ್ಷರಗಳು ಕೇಳಲಿಕ್ಕಾಗದಂತೆ ಬಂದಿರುವುದಕ್ಕೆ ಇದು ಉದಾಹರಣವಾಗುವುದೆಂದು ಬೇರೆಯವರು ಹೇಳಿದ್ದಾರೆ.

ಈಗ ಪತತ್ಪ್ರಕರ್ಷತೆ ಎಂಬ ದೋಷವನ್ನು ತಿಳಿಸುತ್ತಾನೆ. "ಉರಿಯುವ ಬೆಂಕಿಯ ಜ್ವಾಲೆಯಂತೆ ಭೀಕರವೂ ಮಹತ್ತರವೂ ಆದ ಜಡೆಯುದ್ದು ನಿಟ್ಟುಸಿರಿನಿಂದಲೇ ಕುಲಪರ್ವತಗಳನ್ನು ಅಳ್ಳಾಡಿಸಿದ ನರಸಿಂಹನು ನಿಮ್ಮನ್ನು ರಕ್ಷಿಸಲಿ." ಇಲ್ಲಿ ಮೊದಲನೆಯ ಪಾದದಲ್ಲಿ ಒಂದೇ ಬಗೆಯ 'ಜ್ವ' ಎಂಬ ಸಂಯುಕ್ತಾಕ್ಷರಗಳಿಂದ ಕೂಡಿದ ಅನುಪ್ರಾಸವು ಮನೋಹರವಾಗಿದೆ. ಎರಡನೆಯ ಪಾದದಲ್ಲಿ ಹಾಗೆ ಸಂಯುಕ್ತಾಕ್ಷರಗಳಿಲ್ಲದೆ ಬಂಧವು ಹಿಂದಿನದಕ್ಕಿಂತಲೂ ಕೊಂಚ ಕನಿಷ್ಠವೆನಿಸಿತು. ಮೂರನೆಯ ಪಾದದಲ್ಲಿ ಸಂಯುಕ್ತಾಕ್ಷರಗಳು ಎರಡೇ ಇರುವುದರಿಂದ ಎರಡನೆಯದಕ್ಕಿಂತಲೂ ಬಂಧವು ಶಿಥಿಲವಾಯಿತು. ನಾಲ್ಕನೆಯ ಪಾದದಲ್ಲಿ ಕೇವಲ ಎರಡೇ ರೇಫಗಳಿದ್ದು ಮೂರನೆಯ ಪದಕ್ಕಿಂತಲೂ ಬಂಧವು ಮತ್ತಷ್ಟು ನಿಕೃಷ್ಟವೆನಿಸಿತು. ಇಲ್ಲಿ ಕ್ರಮವಾಗಿ ಅನುಪ್ರಾಸಾಲಂಕಾರದ ಉತ್ಕೃಷ್ಟತೆಯು ಶಿಥಿಲವಾಗುತ್ತ ಬಂದಿರುವುದರಿಂದ ಇದು ಪತತ್ಪ್ರಕರ್ಷತೆ ಎನಿಸಿದೆ. "ಎಲೈ ನಿರ್ಮಲಾಂಗಿಯೇ, ನಿನ್ನ ಈ ಕಣ್ಣುಗಳು ವಿಕಸಿತವಾದ ನೀಲೋತ್ಪಲಗಳೆನಿಸಿವೆ. ಇಲ್ಲಿ ಅನೇಕಕಡೆ ಸಂಧಿಯನ್ನೇ ಮಾಡದೇ ಇರುವುದರಿಂದ ಇಂದ್ರು ದೋಷವೆನಿಸಿದೆ. ನಿಯಮವನ್ನು ಉಲ್ಲಂಘಿಸಿದರೆ ವೃತ್ತವು ಕೆಡುವುದೆಂಬ ಭಯದಿಂದಲೇ ಸಂಧಿಯನ್ನು ಒಮ್ಮೆ ಮಾಡದೆ ಬಟ್ಟರೂ ದೋಷವಾಗುವುದಿಲ್ಲ. ಒಂದು ಪದಕ್ಕೆ ಮತ್ತೊಂದು ಪದದೊಡನೆ ಸಂಧಿಯಾಗಿದಿದ್ದರೂ ವ್ಯಾಕರಣದೋಷವು ಅಂಟುವುದಿಲ್ಲ. 'ಪೂರ್ವದಿಕ್ಕಿನ ಮೇಲ್ಭಾಗದಲ್ಲಿ ಚಂದ್ರನು ಚಂದನದ ಬಿಂದುವಿನಂತೆ ಶೋಭಿಸುತ್ತಾನೆ.' ಇಲ್ಲಿ ಭಾತಿ ಇಂದುಃ ಎಂಬಲ್ಲಿ ಸಂಧಿಯನ್ನು ಮಾಡಬೇಕಾಗಿದ್ದರೂ ಮಾಡಿಲ್ಲ. ಆದ್ದರಿಂದ ಇಲ್ಲಿ ಚ್ಯುತಸಂಸ್ಕಾರವೆಂಬ ದೋಷವು ಬರುವುದಿಲ್ಲವೇ ಅಂದರೆ ಬೇರೆ ಬೇರೆ ಪದಗಳನ್ನು ಕೂಡಿಸುವಾಗ ಸಂಧಿಯು ವಿಕಲ್ಪವೆನಿಸಿದ್ಧರಿಂದ ಇಲ್ಲಿ ಸಂಧಿಯನ್ನು ಮಾಢದೇ ಇರುವುದರಲ್ಲಿ ದೋಷವೇನೂ ಇಲ್ಲವೆಂದು ತಿಳಿಯಬೇಕು. ಸಂಧಿಯಿಂದಲೇ ಉಂಟಾಗುವ ಅಶ್ಲೀಲದೋಷವನ್ನು ಈಗ ತಿಳಿಸುತ್ತಾನೆ. "ಚಲಿಸುತ್ತಲೇ ಉದ್ಧತವಾಗಿ ವ್ಯವಹರಿಸುವವನು" ಎಂದು ತಿಳಿಸುವಾಗ ಚಲನ್ + ಡಾಮರಚೇಷ್ಟಿತ ಇವೆರಡನ್ನು ಕೂಡಿಸಿದ್ದರಿಂದ ಆಗಿರುವ ಲಂಡಾ ಎಂಬ ಶಬ್ದವು ಜುಗುಪ್ಸೆಯನ್ನು ವ್ಯಕ್ತಪಡಿಸುವುದರಿಂದ ಇದು ಅಶ್ಲೀಲವೆನಿಸಿದೆ. "ಇಲ್ಲಿಯೇ ಮರುಭೂಮಿಯ ಕೊನೆಯಲ್ಲಿ ದೊಡ್ಡದಾದ ಮರಗಳ ಸಾಲು ಸುಂದರವಾಗಿನೆಲಸಿದೆ" ಎಂಬಲ್ಲಿ ಉರ್ವೀ + ಅಸೌ ಇವೆರಡನ್ನು ಕೂಡಿಸಿದ್ದು ಕೇಳಲಿಕ್ಕೆ ಕಠಿಣವೆನಿಸಿದೆ." ಚಂದ್ರನು ಕರ್ಪೂರದಂತೆ ಬೆಳ್ಳಗಿರುವ ಕಿರಣಗಳಿಂದ ಜಗತ್ತನ್ನು ಬೆಳ್ಳಗೆ ಮಾಡುತ್ತಲೇ ಪ್ರಕಾಶಿಸುತ್ತಾನೆ. ಎಲೈ ಪ್ರಿಯಳಾದ ಕೃಶಾಂಗಿಯೇ, ನಿನ್ನ ಪಾದಗಳಲ್ಲಿ ಶರಣಾಗಿರುವ ನನ್ನ ಮೇಲೆ ಕೋಪಮಾಡಬೇಡ' ಇಲ್ಲಿ ಜಗತ್ ಎಂಬುದು ಪ್ರಥಮಾರ್ಧದ ಅರ್ಥಕ್ಕೆ ಸಂಬಂದಪಟ್ಟದ್ದರಿಂದ ಅದನ್ನು ಅಲ್ಲಿಯೇ ಪ್ರಯೋಗಿಸ

ಬೇಕಾಗಿತ್ತು. ಇಲ್ಲಿ ಪ್ರಥಮಾರ್ಧಕ್ಕೆ ಸಂಬಂಧಿಸಿದ ಪದವನ್ನು ದ್ವಿತೀಯಾರ್ಧದಲ್ಲಿ ತಿಳಿಸಿರುವ ಪ್ರಯುಕ್ತ ಇದು ದೋಷವೆನಿಸಿದೆ. "ಚಂದ್ರನ ಕಿರಣಗಳು ಗಾಢಾಂಧಕಾರ ವನ್ನು ನಾಶ ಗೊಳಿಸುತ್ತ, ವಿರಹಿಗಳನ್ನು ಸಂತಾಪಗೊಳಿಸುತ್ತ, ಭೂತಲವನ್ನು ಪ್ರಕಾಶ ಗೊಳಿಸುತ್ತ ಕೆಳಗೆ ಬೀಳುತ್ತಲಿವೆ." ಇಲ್ಲಿ ವಾಕ್ಯವು ಮುಗಿದಿದ್ದರೂ ಸಹ ನಾಲ್ಕನೆಯ ಪಾದದಲ್ಲಿ ಭಾಸಯಂತಃ ಎಂಬ ಪದವನ್ನು ವಿಶೇಷವಾಗಿ ಮತ್ತೆ ತಿಳಿಸಿದ್ದರಿಂದ ಇದು ಸಮಾಪ್ತಪುನರಾತ್ತ ಎಂಬ ದೋಷವೆನಿಸಿದೆ. ಹೇಳುವವನು ತನ್ನ ಅಭಿಪ್ರಾಯಕ್ಕೆ ಸಂಬಂಧಿಸಿವಂತೆ ಹೇಳುವುದು ಹೇಗೆ ದೋಷವಾಗುವುದೆಂಬುವನ್ನು ಈಗ ತಿಳಿಸುತ್ತಾನೆ. "ಯಾವಳು ಮನ್ಮಥನ ಜಯಲಕ್ಷ್ಮಿಯೋ, ಯಾವಳಿಂದ ಜಗತ್ತು ಅಲಂಕೃತವಾಗಿದೆ ಯೋ, ಜಿಂಕೆಯಂತೆ ಕಣ್ಣುಗಳಿರುವ ಯಾವಳು ಇಲ್ಲದಿದ್ದರೆ ನನ್ನ ಈ ಪ್ರಾಣವೇ ವ್ಯರ್ಥ ವಾಗುವುದೋ ಅವಳು ಈಗ ಎಲ್ಲಿರುವಳು.?" ಇಲ್ಲಿ ಯಚ್ಛಬ್ದದಿಂದ ತಿಳಿಸಿರುವ ವಾಕ್ಯ ಗಳಲ್ಲಿ ಪರಸ್ಪರವಾಗಿ ಹೊಂದಿಕೆಯಿಲ್ಲದ್ದರಿಂದ ಏಣಾಕ್ಷೀಂ ಎಂಬ ದ್ವಿತೀಯಾವಿಭಕ್ತಿಯ ಪದವು ಬೇರೆ ವಾಕ್ಯಗಳಲ್ಲಿ ಸಂಬಂಧಿಸುವುದಿಲ್ಲ. ಹಾಗೆ ಸಂಬಂಧಿಸಿಸುವುದು ಕವಿಗೆ ಇಷ್ಟವಾಗಿ ಕಾಣುವುದಿಲ್ಲ. ಒಂದು ವಾಕ್ಯದಲ್ಲಿ 'ಯಾ' ಎಂದೂ, ಮತ್ತೊಂದರಲ್ಲಿ 'ಯಯಾ' ಎಂದೂ ಯತ್ಪವನ್ನು ಉಪಯೋಗಿಸಿರುವುದರಿಂದ 'ಏಣಾಕ್ಷೀಂ' ಎಂಬುದು ಯಾಂ ಎಂಬುವರೊಡನೆ ಸಂಬಂಧಿಸಿದಂತೆ ಬೇರೆ ಪದಗಳೊಡನೆ ಸಂಬಂಧಿಸುವುದಿಲ್ಲ. ಹಾಗೆ ಸಂಬಂಧಿಸುವಂತೆ ಉಪಯೋಗಿಸುವುದು ಕವಿಗೆ ಇಷ್ಟವಾಗಿ ಕಾಣದ ಪ್ರಯುಕ್ತ ಇದು ಅಭವನ್ಮತಸಂಬಂಧವೆಂಬ ದೋಷವೆನಿಸಿದೆ. 'ಯಾವಳಿಲ್ಲದಿದ್ದರೆ ಈ ಪ್ರಾಣಗಳೇ ವ್ಯರ್ಥವಾಗುತ್ತವೆಯೋ ಆ ಏಣಾಕ್ಷಿಯು ನನಗೆ ಈಗ ಎಲ್ಲಿ ಸಿಕ್ಕಿಯಾಳು?' ಹೀಗೆ ತತ್ಪದವನ್ನು ತಿಳಿಸಿರುವ ವಾಕ್ಯದಲ್ಲಿ 'ಏಣಾಕ್ಷೀ' ಎಂಬುದನ್ನು ಪ್ರಯೋಗಿಸಿದರೆ ಆಗ ಅದು ಹಿಂದಿನ ಮೂರು ವಾಕ್ಯಗಳಲ್ಲೂ ಅನ್ವಯಿಸುವುದರಿಂದ ದೋಷವು ಪರಿಹಾರವಾ ದೀತು. ಹಾಗೆಯೇ ಇಲ್ಲಿ ಬೇರೊಂದು ಉದಾಹರಣವನ್ನು ಕೊಡುತ್ತಾನೆ. "ಯಾವಾಗ ನೀನು ಓರೆ ನೋಟದಿಂದ ಜನರನ್ನು ನೋಡುವೆಯೋ ಆಗ ಮನ್ಮಥನು ಧನುಸ್ಸನ್ನು ಹಿಡಿಯುತ್ತಾನೆ." ಇಲ್ಲಿ ಯತ್ ಎಂಬುದನ್ನು ಯದಾ ಎಂಬ ಅರ್ಥದಲ್ಲಿ ತದಾ ಎಂಬುದ ರೊಡನೆ ಸಂಬಂಧಿಸಿದ್ದು ಹೊಂದುವುದಿಲ್ಲ. ''ಈಕ್ಷಸೇ ಚೇತ್'' 'ನೋಡುವುದಾದರೆ' ಎಂದು ಪ್ರಯೋಗಿಸಿದರೆ ಆಗ ದೋಷವಿರುವುದಿಲ್ಲ.

ಯಥಾ ವಾ—ಜ್ಯೋತ್ಸ್ನಾಚಯಃ ಪಯಃಪೂರಸ್ತಾರಕಾಃ ಕೈರವಾಣಿ ಚ ।
ರಾಜತಿ ವ್ಯೋಮಕಾಸರರಾಜಹಂಸಃ ಸುಧಾಕರಃ ॥

ಅತ್ರ ವ್ಯೋಮಕಾಸಾರಶಬ್ದಸ್ಯ ಸಮಾಸೇ ಗುಣೀಭಾವಾತ್ ತದರ್ಥಸ್ಯ ನ ಸರ್ವೈಃ ಪ್ರಯೋಗಃ.ವಿಧೇಯಾವಿಮರ್ಶೇ ಯದೇವ ಅವಿಮೃಷ್ಟಂ ತದೇವ ದುಷ್ಟಮ್. ಇಹ ತು ಪ್ರಧಾನಸ್ಯ ಕಾಸಾರಪದಾರ್ಥಸ್ಯ ಪ್ರಾಧಾನ್ಯೇನ ಅಪ್ರತೀತೇಃ ಸರ್ವೋಽಪಿ ಪಯಃಪುರಾದಿಶಬ್ದಾರ್ಥಸ್ತದಂಗತಯಾ ನ ಪ್ರತೀಯತ ಇತಿ ಸರ್ವವಾಕ್ಯಾರ್ಥ ವಿರೋಧಾವಭಾಸ ಇತ್ಯುಭಯೋರ್ಭೇದಃ.

ಅನೇನ ಛಿಂದತಾ ಮಾತುಃ ಕಂಠಂ ಪರಶುನಾ ತವ ।
ಬದ್ಧಸ್ಪರ್ಧಃ ಕೃಪಾಣೋಽಯಂ ಲಜ್ಜತೇ ಮಮ ಭಾರ್ಗವ ॥

ಅತ್ರ "ಭಾರ್ಗವನಿಂದಾಯಾಂ ಪ್ರಯುಕ್ತಸ್ಯ ಮಾತೃಕಂಠಚ್ಛೇದನಕರ್ತೃತ್ವಸ್ಯ ಪರಶುನಾ ಸಂಬಂಧೋ ನ ಯುಕ್ತಃ" ಇತಿ ಪ್ರಾಚ್ಯಾಃ. 'ಪರಶುನಿಂದಾಮುಖೇನ ಭಾರ್ಗವನಿಂದಾಧಿಕ್ಯಮೇವ ವೈದಗ್ಧ್ಯಂ ದ್ಯೋತಯತಿ' ಇತ್ಯಾಧುನಿಕಾಃ. ಅಕ್ರಮತಾ ಯಥಾ—ಸಮಯ ಏವ ಕರೋತಿ ಬಲಾಬಲಂ ಪ್ರಣಿಗದಂತ ಇತೀವ ಶರೀರಿಣಾಮ್ ।

ಶರದಿ ಹಂಸರವಾಃ ಪರುಷೀಕೃತಸ್ವರಮಯೂರಮಯೂ ರಮಣೀಯತಾಮ್ ।

ಅತ್ರ ಪರಾಮೃಶ್ಯಮಾನವಾಕ್ಯಾನಂತರಮೇವ ಇತಿಶಬ್ದಪ್ರಯೋಗೋ ಯುಜ್ಯತೇ ನ ತು ಪ್ರಣಿಗದಂತ ಇತ್ಯನಂತರಮ್. ಏವಮ್—

ದ್ವಯಂ ಗತಂ ಸಂಪ್ರತಿ ಶೋಚನೀಯತಾಂ ಸಮಾಗಮಪ್ರಾರ್ಥನಯಾ ಪಿನಾಕಿನಃ ।
ಕಲಾ ಚ ಸಾ ಕಾಂತಿಮತೀ ಕಲಾವತಸ್ತ್ವಮಸ್ಯ ಲೋಕಸ್ಯ ಚ ನೇತ್ರಕೌಮುದೀ ॥

ಅತ್ರ ತ್ವಮಿತ್ಯನಂತರಮೇವ ಚಕಾರೋ ಯುಕ್ತಃ.

ಅಮತಪರಾರ್ಥತಾ ಯಥಾ—'ರಾಮಮನ್ಮಥಶರೇಣ ತಾಡಿತಾ' ಇತ್ಯಾದಿ.

ಅತ್ರ ಶೃಂಗಾರರಸಸ್ಯ ವ್ಯಂಜಕೋ ದ್ವಿತೀಯೋಽರ್ಥಃ ಪ್ರಕೃತರಸವಿರೋಧಿತ್ವಾದನಿಷ್ಟಃ. ವಾಚ್ಯಸ್ಯ ಅನಭಿಧಾನಂ ಯಥಾ—

ವ್ಯತಿಕ್ರಮಲವಂ ಕಂ ಮೇ ವೀಕ್ಷ್ಯ ವಾಮಾಕ್ಷಿ! ಕುಪ್ಯಸಿ?

ಅತ್ರ ವ್ಯತಿಕ್ರಮಲವಮಪಿ ಇತ್ಯಪಿರವಶ್ಯಂ ವಕ್ತವ್ಯೋ ನೋಕ್ತಃ. ನ್ಯೂನಪದತ್ವೇ ವಾಚಕಪದಸ್ಯೈವ ನ್ಯೂನತಾ ವಿವಕ್ಷಿತಾ; ಅಪೇಸ್ತು ನ ತಥಾತ್ವಮಿತ್ಯನಯೋರ್ಭೇದಃ. ಏಮಮನ್ಯತ್ರಾಪಿ. ಯಥಾ ವಾ—

ಚರಣಾನತಕಾಂತಾಯಾಸ್ತನ್ವಿ ಕೋಪಸ್ತಥಾಪಿ ತೇ ।

ಅತ್ರ 'ಚರಣಾನತಕಾಂತಾಸಿ' ಇತಿ ವಾಚ್ಯಮ್.

ಭಗ್ನಪ್ರಕ್ರಮತಾ ಯಥಾ—"ಏವಮುಕ್ತೋ ಮಂತ್ರಿಮುಖ್ಯೈ ರಾವಣಃ ಪ್ರತ್ಯಭಾಷತ"

ಅತ್ರ ವಚ್‌ಧಾತುನಾ ಪ್ರಕ್ರಾಂತಂ ಪ್ರತಿವಚನಮಪಿ ತೇನೈವ ವಕ್ತುಂ ಉಚಿತಮ್. ತೇನ ರಾವಣಃ ಪ್ರತ್ಯವೋಚತ ಇತಿ ಪಾಠೋ ಯುಕ್ತಃ. ಏವಂ ಚ ಸತಿ, ನ ಕಥಿತಪದತ್ವದೋಷಃ ತಸ್ಯೋದ್ದೇಶ್ಯಪ್ರತಿನಿರ್ದೇಶ್ಯವ್ಯತಿರಿಕ್ತವಿಷಯಕತ್ವಾತ್, ಇಹ ಹಿ ವಚನಪ್ರತಿವಚನಯೋರುದ್ದೇಶ್ಯಪ್ರತಿನಿರ್ದೇಶತ್ವಮ್.

"ಉದೇತಿ ಸವಿತಾ ತಾಮ್ರಸ್ತಾಮ್ರ ಏವಾಸ್ತಮೇತಿ ಚ"

ಇತ್ಯತ್ರ ಯದಿ ಪದಾಂತರೇಣ ಸ ಏವಾರ್ಥಃ ಪ್ರತಿಪಾದ್ಯತೇ ತದಾ ಅನ್ಯೋಽರ್ಥಃ ಇವ ಪ್ರತಿಭಾಸಮಾನಃ ಪ್ರತೀತಿಂ ಸ್ಥಗಯತಿ,

ಯಥಾ ವಾ— ತೇ ಹಿಮಾಲಯಮಾಮಂತ್ರ್ಯ ಪುನಃ ಪ್ರೇಕ್ಷ್ಯ ಚ ಶೂಲಿನಮ್ ।
ಸಿದ್ಧಂ ಚಾಸ್ಮೈ ನಿವೇದ್ಯಾರ್ಥಂ ತದ್ವಿಸೃಷ್ಟಾಃ ಖಮುದ್ಯಯುಃ ॥

ಅತ್ರ 'ಅಸ್ಮೈ' ಇತಿ ಇದಮಾ ಪ್ರಕಾಂತಸ್ಯ ತೇನೈವ ತತ್ಸಮಾನಾಭ್ಯಾಂ

ಏತದದಃಶಬ್ದಾಭ್ಯಾಂ ವಾ ಪರಾಮರ್ಶೋ ಯುಕ್ತಃ. ನ ತಚ್ಛಬ್ದೇನ. ಯಥಾ ವಾ—

ಉದನ್ವಚ್ಛನ್ನಾ ಭೂಃ ನ ಚ ಪತಿರಪಾಂ ಯೋಜನಶತಮ್ ।

ಅತ್ರ 'ಮಿತಾ ಭೂಃ ಪತ್ಯಾಽಪಾಂ ನ ಚ ಪತಿರಪಾಮ್' ಇತಿ ಯುಕ್ತಃ ಪಾಠಃ. ಏವಮ್-ಯಶೋಽಧಿಗಂತುಂ ಸುಖಲಿಪ್ಸಯಾ ವಾ ಮನುಷ್ಯಸಂಖ್ಯಾಮತಿವರ್ತಿತುಂ ವಾ

ನಿರುತ್ಸುಕಾನಾಮಭಿಯೋಗಭಾಜಾಂ ಸಮುತ್ಸುಕೇವಾಂಕಮುಪೈತಿ ಸಿದ್ಧಿಃ ॥

ಅತ್ರ 'ಸುಖಮೀಹಿತುಮ್' ಇತ್ಯುಚಿತಮ್' ಅತ್ರಾದ್ಯಯೋಃ ಪ್ರಕೃತಿ ವಿಷಯಃ ಪ್ರಕ್ರಮಭೇದಃ, ತೃತೀಯೇ ಪರ್ಯಾಯವಿಷಯಃ, ಚತುರ್ಥೇ ಪ್ರತ್ಯಯ ವಿಷಯಃ. ಏವಮನ್ಯತ್ರಾಪಿ. ಪ್ರಸಿದ್ಧಿತ್ಯಾಗೋ ಯಥಾ-

'ಘೋರೋ ವಾರಿಮುಚಾಂ ರವಃ' ಅತ್ರ ಮೇಘಾನಾಂ ಗರ್ಜಿತಮೇವ ಪ್ರಸಿದ್ಧಮ್. ಯದಾಹುಃ—ಮಂಜೀರಾದಿಷು ರಣಿತಪ್ರಾಯಂ ಪಕ್ಷಿಷು ತು ಕೂಜಿತಪ್ರಭೃತಿ ॥

ಸ್ತನಿತಮಣಿತಾದಿ ಸುರತೇ ಮೇಘಾದಿಷು ಗರ್ಜಿತಪ್ರಮುಖಮ್ ॥

ಇತ್ಯಾದಿ. ಅಸ್ಥಾನಸ್ಥಪದತಾ ಯಥಾ—

ತೀರ್ಥೇ ತದೀಯೇ ಗಜಸೇತುಬಂಧಾತ್ ಪ್ರತೀಪಗಾಮುತ್ತರತೋಽಸ್ಯ ಗಂಗಾಮ್।
ಅಯತ್ನಬಾಲವ್ಯಜನೀಬಭೂವುರ್ಹಂಸಾ ನಭೋಲಂಘನಲೋಲಪಕ್ಷಾಃ ॥

ಅತ್ರ ತದೀಯಪದಾತ್ ಪೂರ್ವಂ ಗಂಗಾಮಿತ್ಯಸ್ಯ ಪಾಠೋ ಯುಕ್ತಃ. ಏವಂ 'ಹಿತಾನ್ನ ಯಃ ಸಂಶೃಣುತೇ ಸ ಕಿಂಪ್ರಭುಃ' ಅತ್ರ 'ಸಂಶೃಣುತೇ' ಇತ್ಯತಃ ಪೂರ್ವಂ ನಞಃ ಸ್ಥಿತಿರುಚಿತಾ. ಅತ್ರ ಚ ಪದಮಾತ್ರಸ್ಯ ಅಸ್ಥಾನೇ ನಿವೇಶೇಽಪಿ ಸರ್ವಮೇವ ವಾಕ್ಯಂ ವಿವಕ್ಷಿತಾರ್ಥಪ್ರತ್ಯಾಯನೇ ಮಂಥರಮಿತಿ ವಾಕ್ಯದೋಷತಾ. ಏವಮನ್ಯತ್ರಾಪಿ.

ಇಹ ಕೇಽಪ್ಯಾಹುಃ–'ಪದಶಬ್ದೇನ ವಾಚಕ ಏವ ಪ್ರಯೋಗೋ ನಿಗದ್ಯತೇ, ನ ಚ ನಞೋ ವಾಚಕತಾ, ನಿರ್ವಿವಾದಾತ್ ಸ್ವಾತಂತ್ರ್ಯೇಣ ಅರ್ಥಬೋಧನ ವಿರಹಾತ್ ಇತಿ ಯಥಾ 'ದ್ವಯಂ ಗತಮ್' ಇತ್ಯಾದೌ ತ್ವಮಿತ್ಯನಂತರಂ ಚಕಾ ರಾನುಪಾದಾನಾತ್ ಅಕ್ರಮತಾ ತಥಾತ್ರಾಪಿ'' ಇತಿ.

ಅಭವನ್ಮತಸಂಬಂಧವೆಂಬ ದೋಷವನ್ನು ಮತ್ತೆ ಉದಾಹರಿಸುತ್ತಾನೆ. "ಕಿರಣ ಗಳ ಸಮೂಹವೇ ನೀರಿನ ರಾಶಿಯಾಯಿತು. ನಕ್ಷತ್ರಗಳೇ ಮೊಗ್ಗುಗಳಾದವು. ಹಾಗೆಯೇ ಚಂದ್ರನೇ ಆಕಾಶವೆಂಬ ಸರೋವರದಲ್ಲಿ ರಾಜಹಂಸವಾಗಿ ಶೋಭಿಸು ತ್ತಿದ್ದಾನೆ" ಇಲ್ಲಿ ವ್ಯೋಮಕಾಸಾರವೆಂಬ ಶಬ್ದವು ಸಮಾಸದಲ್ಲಿ ರಾಜಹಂಸಪದದೊಡನೆ ಸೇರಿಕೊಂಡಿರುವುದರಿಂದ ಅದು ಬೇರೆ ಪದಗಳೊಡನೆ ಸಂಬಂಧಿಸುವುದಾಗಿ ಕಾಣುವು ದಿಲ್ಲ. ಆಕಾಶವೆಂಬ ಸರೋವರದಲ್ಲಿ ಕಿರಣವೆಂಬ ನೀರಿನ ರಾಶಿಯೂ, ನಕ್ಷತ್ರವೆಂಬ ಮೊಗ್ಗೂ, ಚಂದ್ರನೆಂಬ ರಾಜಹಂಸವೂ ಇದ್ದವು ಎಂದು ಹೇಳುವುದೇ ಕವಿಗೆ ಇಷ್ಟ ವಾಗಿದ್ದರೆ ಅದು ಇಲ್ಲಿ ತಿಳಿದುಬರುವುದಿಲ್ಲ. 'ವ್ಯೋಮಕಾಸರ' ಪದವು ರಾಜಹಂಸಕ್ಕೆ ಮಾತ್ರವೇ ವಿಶೇಷಣವಾಗಿರುವುದರಿಂದ ಬೇರೆ ಪದಗಳೊಡನೆ ಅನ್ವಯಿಸಲು ಅದಕ್ಕೆ

ಯೋಗ್ಯತೆ ಇಲ್ಲವಾದ ಪ್ರಯುಕ್ತ ಇದು ಅಭವನ್ಮತಸಂಬಂಧವೆನಿಸಿದೆ. ರಾಜತಿ ಪ್ರ್ಯೇಮ್ಣಿ ಕಾಸರೇ ಎಂದು ಹೇಳಿದರೆ ಆಗ ಎಲ್ಲಕ್ಕೂ ಸಂಬಂಧವುಂಟಾಗುವುದರಿಂದ ದೋಷವು ಬರುವುದಿಲ್ಲ. ವಿಧೇಯಾವಿಮರ್ಶದಲ್ಲಿ ಯಾವ ಅಂಶವನ್ನು ಪ್ರಧಾನವಾಗಿ ನಿರ್ದೇಶಿಸುವುದಿಲ್ಲವೋ ಅದಷ್ಟರಲ್ಲಿಯೇ ದೋಷವಿರುತ್ತದೆ. ಇಲ್ಲಿಯಾದರೋ ಪ್ರಧಾನ ವೆನಿಸಿದ ಕಾಸಾರಪದಾರ್ಥವು ಪ್ರಧಾನವಾಗಿ ತೋರದೇ ಇರುವುದರಿಂದ ಪಯಃಪೂರ ಮೊದಲಾದ ಇತರ ಪದಾರ್ಥಗಳೆಲ್ಲವೂ ಅದಕ್ಕೆ ಅಂಗವಾಗಿ ತೋರುವುದಿಲ್ಲ. ಆದ ಪ್ರಯುಕ್ತ ಇಲ್ಲಿ ಎಲ್ಲಾ ವಾಕ್ಯಗಳ ಅರ್ಥಕ್ಕೂ ಕಾಸಾರಪದಾರ್ಥವು ಸಂಬಂಧಿಸದೇ ಹೋಗುವುದು. ಅಲ್ಲಿಯಾದರೋ ದೋಷವು ಎಲ್ಲಿ ಪ್ರಾಧಾನ್ಯವಿಲ್ಲವೋ ಅಲ್ಲಿಗೆ ಮಾತ್ರವೇ ಸಂಬಂಧಿಸುತ್ತದೆ. ಇಷ್ಟೇ ಇವೆರಡಕ್ಕೂ ಇರುವ ಭೇದ. ಪ್ರಾಚೀನರ ಮತ ದಂತೆ ಇದೇ ದೋಷವನ್ನು ಉದಾಹರಿಸುತ್ತಾನೆ. "ಎಲೈ ಪರಶುರಾಮನೇ, ತಾಯಿಯ ತಲೆಯನ್ನು ಕತ್ತರಿಸಿದ ಈ ಪರಶುವಿನೊಡನೆ ವೈರವನ್ನು ಬೆಳಸಿದ ಈ ನನ್ನ ಕತ್ತಿಯು ನಾಚಿಕೆ ಪಡುತ್ತಲಿದೆ. ಮಹಾಪಾಪವನ್ನು ಮಾಡಿದ ಕೊಡಲಿಯೊಡನೆ ಸಂಬಂಧವನ್ನು ಬೆಳಸಿದರೆ ನನ್ನ ಕತ್ತಿಗೂ ಪಾಪದ ಸಂಪರ್ಕವುಂಟಾದೀತು" ಇಲ್ಲಿ ಪರಶುರಾಮನನ್ನು ನಿಂದಿಸಲಿಕ್ಕಾಗಿ ತಾಯಿಯ ತಲೆಯನ್ನು ಕತ್ತರಿಸಿದ್ದೆಂದು ಕೊಡಲಿಗೆ ಆ ಬಗೆಯ ಸಂಬಂಧವನ್ನು ತಿಳಿಸಿದ್ದು ಯುಕ್ತವಲ್ಲವೆಂದು ಪ್ರಾಚೀನರು ಹೇಳುತ್ತಾರೆ. ಕೊಡಲಿಯನ್ನು ನಿಂದಿಸುವುದರಲ್ಲಿಯೇ ಕವಿಯ ತಾತ್ಪರ್ಯವೆಂದು ನವೀನರು ಹೇಳುತ್ತಾರೆ. ಹೀಗೆಯೇ ಕೊಡಲಿಯಲ್ಲೂ ಸಹ ತಾಯಿಯ ತಲೆಯನ್ನು ಕತ್ತರಿಸಿದ್ದರ ಸಂಬಂಧವಿದ್ದೇ ಇರುವ ಪ್ರಯುಕ್ತ ಇಲ್ಲಿ ಅಭವನ್ಮತ ಸಂಬಂಧವೆಂಬ ದೋಷವು ಕಾಣು ವುದಿಲ್ಲವೆಂಬುದು ಆಧುನಿಕರ ಅಭಿಪ್ರಾಯ.

ಈಗ ಅಕ್ರಮತೆ ಎಂಬ ವಾಕ್ಯದೋಷವನ್ನು ಉದಾಹರಿಸುತ್ತಾನೆ." ಕಾಲವೇ ಶರೀರಗಳಿಗೆ ಪ್ರಾಬಲ್ಯದೌರ್ಬಲ್ಯಗಳನ್ನು ಉಂಟುಮಾಡುತ್ತದೆ. ಹೀಗೆ ಹೇಳುತ್ತಲೋ ಏನೋ ಶರತ್ಕಾಲದಲ್ಲಿ ಹಂಸಧ್ವನಿಗಳು ನವಿಲುಗಳ ಕಂಠಧ್ವನಿಯನ್ನು ಕಠಿಣಗೊಳಿ ಸುತ್ತ ಸೌಂದರ್ಯವನ್ನು ಪಡೆದವು." ಇಲ್ಲಿ ತಿಳಿಸಬೇಕಾಗಿರುವ ಅಂಶವನ್ನು ತಿಳಿಸುವ ವಾಕ್ಯದ ಅನಂತರವೇ ಇತಿ ಶಬ್ದವನ್ನು ಪ್ರಯೋಗಿಸಬೇಕಾಗಿತ್ತು. 'ಸಮಯ ಏವ ಕರೋತಿ ಬಲಾಬಲಂ· ಇತಿ ವದಂತ ಇವಾತ್ರ ಶರೀರಿಣಾಂ' ಎಂದು ಮೊದಲನೆಯ ವಾಕ್ಯದ ಹತ್ತಿರವೇ ಇವ ಶಬ್ದವು ಬರುವುದು ಯುಕ್ತವೆನಿಸುತ್ತದೆ. ಆದರೆ ಶ್ಲೋಕದಲ್ಲಿ ಆ ವಾಕ್ಯಕ್ಕೂ ಇತಿಶಬ್ದಕ್ಕೂ ಮಧ್ಯದಲ್ಲಿ ಪ್ರಣಿಗದಂತಃ ಎಂಬುದರ ಅನಂತರ ಇತಿ ಶಬ್ದವು ಬಂದದ್ದು ಅಕ್ರಮವೆನಿಸಿದೆ. ಹೀಗೆಯೇ ಬೇರೊಂದು ಉದಾಹರಣವನ್ನು ಇಲ್ಲಿ ತೋರಿಸುತ್ತಾನೆ. "ಶಿವನ ಸಮಾಗಮವನ್ನು ಪ್ರಾರ್ಥಿಸುತ್ತ ಲೋಕದಲ್ಲಿ ಎರಡು ಪದಾರ್ಥಗಳು ಶೋಚನೀಯಸ್ಥಿತಿಯನ್ನು ಪಡೆದವು. ಹದಿನಾರು ಕಲೆಗಳಿಂದ ಶೋಭಿಸಬೇಕಾದ ಚಂದ್ರನ ಪ್ರಕಾಶಮಯವಾದ ಕಲೆಯು ಒಂದು, ಈ ಲೋಕದ ಜನರೆಲ್ಲರ ಕಣ್ಣುಗಳಿಗೆ ಬೆಳದಿಂಗಳೆನಿಸಿರುವ ನೀನೊಬ್ಬಳು. ಹೀಗೆ ಶಿವನನ್ನು ಆಶ್ರ

ಯಿಸಿ ಚಂದ್ರ ಮತ್ತು ನೀನು (ಪಾರ್ವತಿ) ಇವರಿಬ್ಬರು ತಮ್ಮ ಕಾಂತಿಯನ್ನು ಕಳೆದು ಕೊಂಡರು" ಇಲ್ಲಿ ತ್ವಂ ಎಂಬುದರ ಮುಂದೆಯೇ 'ಚ' ಎಂಬುದು ಬರಬೇಕಾಗಿತ್ತು. ಆದರೆ 'ತ್ವಮಸ್ಯಲೋಕಸ್ಯ ಚ' ಎಂದು ಲೋಕಪದದ ಮುಂದೆ ಬಂದದ್ದು ಅಕ್ರಮ ವೆನಿಸಿದೆ.

ಪ್ರಕೃತರಸಕ್ಕೆ ವಿರುದ್ಧವಾದ ರಸವನ್ನು ತಿಳಿಸುವ ಪದಪ್ರಯೋಗಕ್ಕೆ ಉದಾಹರಣವನ್ನು ಕೊಡುತ್ತಾನೆ. 'ರಾಮನೆಂಬ ಮನ್ಮಥನ ಬಾಣದ ಏಟಿಗೆ ಸಿಲುಕಿದೆನು' ಎಂಬಲ್ಲಿ ತೋರುವ ಶೃಂಗಾರರಸವು ಪ್ರಕೃತಸಂದರ್ಭಕ್ಕೆ ಅನುಗುಣ ವೆನಿಸಿದ ಬೀಭತ್ಸರಸಕ್ಕೆ ವಿರೋಧಿಯಾದ್ದರಿಂದ ಅನಿಷ್ಟವೆನಿಸಿದೆ. ಅವಶ್ಯವಾಗಿ ಹೇಳಬೇಕಾದ ಪದವನ್ನು ಹೇಳದೇ ಇರುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ಎಲೈ ಸುಂದರಿ, ನನ್ನಲ್ಲಿ ಯಾವ ಬಗೆಯ ಕೊಂಚ ವ್ಯತ್ಯಾಸವನ್ನಾದರೂ ಕಂಡು ಹೀಗೆ ಕೋಪಿಸುಕೊಳ್ಳುವೆಯೊ?" ಇಲ್ಲಿ ವ್ಯತಿಕ್ರಮಲವಂ ಆದ ಮೇಲೆ ಅಪಿ ಎಂಬುದನ್ನು ಅವಶ್ಯವಾಗಿ ಹೇಳಬೇಕಾಗಿತ್ತು. ಅದು ಇದ್ದರೆ ಇಲ್ಲಿ ಸ್ವಾರಸ್ಯವಿರುತ್ತಿತ್ತು. ಆದನ್ನು ಇಲ್ಲಿ ಹೇಳದೇ ಇರುವುದೇ ದೋಷವೆನಿಸಿದೆ. 'ಯಾಚ್ಞಾ ಮೋಘಾ ವರಮಧಿಗುಣೇ ನಾಧಮೇ ಲಬ್ಧಕಾಮಾ' ಎಂಬಲ್ಲಿ ಮೋಘಾ, ಲಬ್ಧಕಾಮಾಪಿ ಎಂದು ಎರಡು ಕಡೆ ಗಳಲ್ಲೂ ಅಪಿ ಶಬ್ದವನ್ನು ಪ್ರಯೋಗಿಸಬೇಕಾಗಿತ್ತು. ಹಾಗೆ ಹೇಳದೆ ಇದ್ದುದು ದೋಷವೆನಿಸಿದೆ. ನ್ಯೂನಪದವೆಂಬ ದೋಷದಲ್ಲಿ ಅವಶ್ಯಕವಾಗಿ ಹೇಳಬೇಕಾಗಿದ್ದ ಪದವನ್ನು ಹೇಳದೇ ಬಿಡಲಾಗುವುದು. ಇಲ್ಲಿಯಾದರೋ ಹೇಳದೇ ಬಿಟ್ಟಿರುವ ಅಪಿ ಎಂಬುದು ವಾಚಕಪದವೆನಿಸದೆ ಕೇವಲ ದ್ಯೋತಕವೆನಿಸಿರುತ್ತದೆ. ಇಷ್ಟೇ ಇವೆರ ಡಕ್ಕೂ ಇರುವ ಭೇದ. ಹೀಗೆಯೇ 'ನವಜಲಧರಃ ಸನ್ನದ್ಧೋಽಯಂ ನ ದೃಪ್ತ ನಿಶಾಚರಃ' ಎಂಬಲ್ಲಿ ತು ಎಂಬುದನ್ನು 'ನ' ಎಂಬುದರ ಮುಂದೆ ಉಪಯೋಗಿಸಬೇಕಾ ಗಿತ್ತು. ಅದನ್ನು ಅಲ್ಲಿ ಹೇಳದಿರುವುದೇ ದೋಷವೆನಿಸಿದೆ. "ಎಲೈ ಕೃಶಾಂಗಿ, ಪತಿಯು ನಿನ್ನ ಕಾಲಿಗೆ ಬಿದ್ದಿದ್ದರೂ ನಿನಗೆ ಕೋಪವೇ ?" ಇಲ್ಲಿ 'ಚರಣಾನತಕಾಂತಾಸಿ' ಎಂದು ಹೇಳಬೇಕಾಗಿತ್ತು. ಹೀಗೆ ಹೇಳದೇ ಇದ್ದರೆ 'ತಥಾಪಿ' ಎಂಬುದಕ್ಕೆ ಅನ್ವಯವೇ ಹೊಂದುವುದಿಲ್ಲ.

ಕ್ರಮಭಂಗವೆಂಬ ದೋಷವನ್ನು ಉದಾಹರಿಸುತ್ತಾನೆ. "ಮಂತ್ರಿಶ್ರೇಷ್ಠರು ತಿಳಿಸಿದಮೇಲೆ ರಾವಣನು ಅವರಿಗೆ ಹೀಗೆ ತಿಳಿಸಿದನು" ಇಲ್ಲಿ ವಚ್‌ಧಾತುವಿನಿಂದ ಉಕ್ತಃ ಎಂದು ಆರಂಭವಾಗಿರುವುದರಿಂದ ಪ್ರತಿವಚನವನ್ನು ಆ ಧಾತುವಿನಿಂದಲೇ ತಿಳಿಸುವುದು ಯುಕ್ತವೆನಿಸುತ್ತದೆ. ಆದ್ದರಿಂದ 'ರಾವಣಃ ಪ್ರತ್ಯವೋಚತ' ಎಂದು ಹೇಳುವುದು ಹೊಂದುತ್ತದೆ. ಹೀಗೆ ಹೇಳಿದರೆ ಕಥಿತಪದತ್ವವೆಂಬ ದೋಷವು ಬರುವುದೆಂದು ಆಶಂಕಿಸುವುದು ಸರಿಯಲ್ಲ. ವಚ್ ಎಂಬ ಧಾತುವನ್ನು ಎರಡು ವೇಳೆ ಪ್ರಯೋಗಿಸಿದ್ದರಿಂದ ಹೇಳಿದ ಪದವನ್ನೇ ಮತ್ತೆ ಹೇಳಿದಂತಾಗುವುದಿಲ್ಲವೆ ? ಅಂದರೆ ಕಥಿತಪದತ್ವವೆಂಬ ದೋಷವು ಇಲ್ಲಿಗೆ ಅನ್ವಯಿಸುವುದಿಲ್ಲ. ಮೊದಲು ಪ್ರಯೋಗಿ

ಸಿದ್ದನ್ನೇ ಮತ್ತೆ ಪ್ರಯೋಗಿಸಬೇಕು ಎಂಬ ನಿಯಮವು ಎಲ್ಲಿ ಅನ್ವಯಿಸುವುದಿಲ್ಲವೋ ಅಲ್ಲಿಯೇ ಕಥಿತಪದವೆಂಬ ದೋಷವು ಸಂಬಂಧಪಡುತ್ತದೆ. ಯಾವ ಶಬ್ದದಿಂದ ಯಾವ ಅರ್ಥವು ಮೊದಲು ಬೇಗನೆ ತೋರುವುದೋ ಆ ಶಬ್ದದಿಂದಲೇ ಅಂತಹ ಅರ್ಥವು ಮತ್ತೆ ತೋರುವುದಾದರೆ ಮಾತ್ರವೇ ಆ ಎರಡು ಅರ್ಥಗಳಿಗೆ ಏಕರೂಪತೆ ಇರುತ್ತದೆ. ಇದನ್ನು ತಿಳಿಸುವುದೇ ಉದ್ದೇಶ್ಯಪ್ರತಿನಿರ್ದೇಶ್ಯ ಕ್ರಮವೆನಿಸುತ್ತದೆ. ಅಲ್ಲಿ ಕಥಿತಪದತ್ವವೆಂಬ ದೋಷವು ಬರುವಂತಿಲ್ಲ. ಇಲ್ಲಿ ಯಾದರೋ ವಚನಪ್ರತಿವಚನಗಳೆರಡಕ್ಕೂ ಏಕರೂಪತೆ ಇರಬೇಕಾದ ಪ್ರಯುಕ್ತ ಉಕ್ತಃ ಎಂಬ ಉದ್ದೇಶ್ಯಕ್ಕೆ ಅನುಗುಣವಾಗಿಯೇ ಪ್ರತ್ಯವೋಚತ ಎಂದು ಪ್ರತಿಯಾಗಿ ನಿರ್ದೇಶಿಸುವುದರಿಂದ ಇದು ಕಥಿತಪದವೆನಿಸುವುದಿಲ್ಲ. ತಾನು ಹೇಳಿದ್ದನ್ನು ಸಮರ್ಥಿಸಲು ಬೇರೊಂದು ಉದಾಹರಣವನ್ನು ತಿಳಿಸುತ್ತಾನೆ. 'ಸೂರ್ಯನು ತಾಮ್ರವರ್ಣದಲ್ಲಿ ಉದಯಿಸಿ ಆ ತಾಮ್ರವರ್ಣದಲ್ಲಿಯೇ ಅಸ್ತನಾಗುತ್ತಾನೆ.' ಇಲ್ಲಿ ತಾಮ್ರಃ ಎಂಬುದನ್ನು ಎರಡು ಸಾರಿ ಹೇಳಿದರೂ ಇದು ದೋಷವೆನಿಸುವುದಿಲ್ಲ. ಅದನ್ನು ತೆಗೆದು ಬೇರೆ ಪದವನ್ನು ಹಾಕಿದರೆ ಆ ಅರ್ಥವೇ ತೋರಿದರೂ ಅದು ಬೇರೊಂದು ಅರ್ಥವೋ ಏನೋ ಎಂಬಂತೆ ತೋರುತ್ತ ಎರಡು ಅರ್ಥಗಳಿಗೂ ಏಕರೂಪತೆಯನ್ನು ತೊರೆಸುತ್ತದೆ. ಎಲ್ಲಿ ಒಂದು ಶಬ್ದವಿದ್ದು ಒಂದು ಅರ್ಥವನ್ನು ತಿಳಿಸಬಲ್ಲದೋ ಅಲ್ಲಿ ಬೇರೆ ಪದವನ್ನು ಹಾಕಿದರೆ ಆ ಅರ್ಥವು ತೋರುವುದಿಲ್ಲ. ಆದ್ದರಿಂದ ಅಂತಹ ಕಡೆಗಳಲ್ಲಿ ಒಂದೇ ಬಗೆಯ ಪದವನ್ನು ಪ್ರಯೋಗಿಸಿದ್ದು ದೋಷವೆನಿಸುವುದಿಲ್ಲ. ಇದಕ್ಕೆ ಬೇರೊಂದು ಉದಾಹರಣವನ್ನು ತಿಳಿಸುತ್ತಾನೆ: 'ಅವರು ಹಿಮವಂತನೊಡನೆ ಆಲೋಚಿಸಿ ಮತ್ತೆ ಶಿವನನ್ನು ಕಂಡು ಸಿದ್ಧವಾದ ಅರ್ಥವನ್ನು ಅವನಿಗೆ ತಿಳಿಸಿ ಅವನಿಂದ ಬೀಳ್ಕೊಂಡು ಆಕಾಶಕ್ಕೆ ಏರಿದರು' ಇಲ್ಲಿ ಅಸ್ಮೈ ನಿವೇದ್ಯ ಎಂದು ಇದಂ ಶಬ್ದದಿಂದ ಆರಂಭಿಸಿದ್ದನ್ನು ಅದರಿಂದಲೋ ಅಥವಾ ಅದಕ್ಕೆ ಸಮಾನವೆನಿಸಿದ ಏತದ್, ಅದಸ್ ಇವುಗಳಿಂದಲೋ. ಕೊನೆಗಾಣಿಸುವುದು ಯುಕ್ತವೇ ಹೊರತು ತಚ್ಛಬ್ದದಿಂದ ಕೊನೆಗಾಣಿಸುವುದು ಸರಿಯಲ್ಲ. ಹಾಗೆಯೇ ಬೇರೊಂದು ಉದಾಹರಣವನ್ನು ತಿಳಿಸುತ್ತಾನೆ. "ಪೃಥಿವಿಯು ಸಮುದ್ರದಿಂದ ಪ್ರತ್ಯೇಕಗೊಂಡಿದೆ. ಆ ಸಮುದ್ರವೂ ನೂರು ಯೋಜನಗಳ ದೂರ ವ್ಯಾಪಿಸಿದೆ" ಇಲ್ಲಿ ಉದನ್ವತ್ ಎಂಬುದರಿಂದ ಆರಂಭಿಸಿ ಮತ್ತೆ ಅಪಾಂ ಪತಿಃ ಎಂದು ಕೊನೆಗಾಣಿಸಿದ್ದರಿಂದ ಪ್ರಕ್ರಮಭಂಗದೋಷವು ಬಂದಿದೆ. 'ಇಲ್ಲಿ, ಮಿತಾ ಭೂಃ ಪತ್ಯಾಽಪಾಂ ಚ ಪ್ರತಿರಪಾಂ' ಎಂದು ಹೇಳಿದರೆ ಪ್ರಕ್ರಮಭಂಗದೋಷವು ಬರುವುದಿಲ್ಲ. ಇಲ್ಲಿ ವಾಕ್ಯವು ಅಪಾಂ ಪತಿಃ ಎಂಬುದರಿಂದಲೇ ಆರಂಭವಾಗಿ ಅದರಿಂದಲೇ ಕೊನೆಯಾಗುತ್ತದೆ. ಇಲ್ಲಿ ಪ್ರಕೃತಿಭೇದದಿಂದ ಪ್ರಕ್ರಮಭಂಗವು ತೋರುತ್ತದೆ. ಪ್ರತ್ಯಯಬೇಧದಿಂದ ತೋರುವ ಪ್ರಕ್ರಮಭಂಗವನ್ನು ತಿಳಿಸುತ್ತಾನೆ. ಕಿರಾತಾರ್ಜುನೀಯದಲ್ಲಿ ಅರ್ಜುನನಿಗೆ ದ್ರೌಪದಿ ಹೇಳುವ ನೀತಿದು. 'ಕೀರ್ತಿಯನ್ನು ಹೊಂದಲಿಕ್ಕೋ, ಸುಖವನ್ನು ಪಡೆಯುವ ಇಚ್ಛೆ

ಯಿಂದಲೋ, ಅಥವಾ ಮನುಷ್ಯರ ಮಧ್ಯದಲ್ಲಿ ಗಣನೆಯನ್ನು ಅತಿಕ್ರಮಿಸಲಿಕ್ಕಾಗಿಯೋ ಅಭಿನಿವೇಶವುಳ್ಳ ನಿರುತ್ಸಾಹಿಗಳಿಗೂ ಸಹ ಸಿದ್ಧಿಯು ಉತ್ಸಾಹವುಳ್ಳ ಕಾಂತೆಯಂತೆ ಸಮೀಪಕ್ಕೆ ಬರುತ್ತದೆ.' ಇಲ್ಲಿ 'ಯಶೋಽಧಿಗಂತುಂ' ಎಂದು ತುಮುನ್‌ಪ್ರತ್ಯಯ ದಿಂದ ಆರಂಭಿಸಿ ಮತ್ತೆ ಸುಖಲಿಪ್ಸಯಾ ಎಂದು ಸನ್‌ಪ್ರತ್ಯಯಾಂತವಾದ ಪದವನ್ನು ಪ್ರಯೋಗಿಸಿದ್ದರಿಂದ ಪ್ರಕ್ರಮಭಂಗವುಂಟಾಯಿತು. 'ಸುಖಮೀಹಿತುಂ' ಎಂದು ಬದ ಲಾಯಿಸಿದರೆ ಹೊಂದಿಕೆಯಾಗುತ್ತದೆ. ಇಲ್ಲಿ 'ಏವಮುಕ್ತೋ ಮಂತ್ರಿಮುಖ್ಯೈಃ' 'ತೇ ಹಿಮಾಲಯಮಾಮಂತ್ರ್ಯ' ಎಂಬಲ್ಲೂ ಪ್ರಕೃತಿಯಲ್ಲಿ ಕ್ರಮಭೇಧವಿದೆ. 'ಉದ ನ್ವಚ್ಛಿನ್ನಾ ಭೂಃ' ಎಂಬಲ್ಲಿ ಒಂದೇ ಅರ್ಥವನ್ನು ಕೊಡುವ ಎರಡು ಬೇರೆ ಬೇರೆ ಶಬ್ದ ಗಳನ್ನು ಉಪಯೋಗಿಸಿದ್ದರಿಂದ ಕ್ರಮಭೇಧವಿದೆ. 'ಯಶೋಽಧಿಗಂತುಂ' ಎಂಬ ಶ್ಲೋಕದಲ್ಲಿ ಪ್ರತ್ಯಯದಲ್ಲಿ ಕ್ರಮಭೇದವಿದೆ, ಹಾಗೆಯೇ ಬೇರೆ ಕಡೆಗಳಲ್ಲೂ ತಿಳಿಯ ಬೇಕು. ಲೋಕಪ್ರಸಿದ್ಧಿಯನ್ನು ತೊರೆಯುವುದಕ್ಕೆ ಉದಾಹರಣವನ್ನು ತಿಳಿಸುತ್ತಾನೆ. 'ಮೇಘಗಳ ಧ್ವನಿಯು ಗಂಭೀರವಾಮಸು' ಇಲ್ಲಿ ಮೇಘಗಳ ಗರ್ಜನೆಯನ್ನು ತಿಳಿಸು ವುದು ಪ್ರಸಿದ್ಧಿಯೇ ಹೊರತು ಶಬ್ದವನ್ನು ತಿಳಿಸುವುದರಲ್ಲಿ ರೂಢಿಯಿಲ್ಲ. 'ಕಡಗ ಮೊದಲಾದವುಗಳ ಶಬ್ದವನ್ನು ರಣಿತಕ್ವಣಿತ ಎಂದೂ, ಪಕ್ಷಿಗಳ ಶಬ್ದವನ್ನು ಕೂಜಿತ ವೆಂದೂ, ಸುರತದಲ್ಲಿ ಹುಟ್ಟುವ ಶಬ್ದವನ್ನು ಸ್ತನಿತ, ಮಣಿತ ಎಂದೂ, ಮೇಘಗಳ ಶಬ್ದ ವನ್ನು ಗರ್ಜಿತವೆಂದೂ ತಿಳಿಸುವುದೇ ಪ್ರಸಿದ್ಧಿ ಎನಿಸಿದೆ ಎಂದು ಅಭಿಜ್ಞರು ಹೇಳು ತ್ತಾರೆ. ಆದ್ದರಿಂದ ಮೇಘದ ಬಗ್ಗೆ ರವಃ ಎಂದು ಹೇಳಿದ್ದು ತಪ್ಪು.

ಅನರ್ಹವಾದ ಸ್ಥಾನದಲ್ಲಿ ಒಂದು ಪದವನ್ನು ಉಪಯೋಗಿಸುವುದು ದೋಷವೆನಿ ಸುತ್ತದೆ. " ಆ ಗಂಗೆಗೆ ಸಂಬಂಧಿಸಿದ ತೀರ್ಥದಲ್ಲಿ ಆನೆಗಳ ಸಮೂಹದಿಂದ ಒಂದು ಸೇತುವೆಯನ್ನು ರಚಿಸಿ, ಬೇರೆ ದಾರಿಯಲ್ಲಿ ಹರಿಯತೊಡಗಿದ ಗಂಗೆಯನ್ನು ದಾಟಿ ಹೋಗುವ ಕುಶನು ಮುಂದೆ ಆಕಾಶವನ್ನು ಅತಿಕ್ರಮಿಸಿ ಹೋಗುತ್ತಿರುವಾಗ ಚಂಚಲ ವಾದ ರೆಕ್ಕೆಗಳಿರುವ ಹಂಸಗಳು ಅನಾಯಾಸವಾಗಿ ಚಾಮರಗಳಾಗಿ ಪರಿಣಮಿಸಿದವು" ಇಲ್ಲಿ ತದೀಯೇ ಎಂಬುದಕ್ಕೆ ಮೊದಲು ಗಂಗಾ ಎಂಬ ಪದವನ್ನು ಹೇಳುವುದು ಯುಕ್ತ ವೆನಿಸುತ್ತದೆ. ತಚ್ಛಬ್ದವು ಗಂಗಾನದಿಗೆ ಅನ್ವಯಿಸುವುದರಿಂದ ತತ್ಪದಕ್ಕೆ ಮೊದಲು ಗಂಗಾಪದವು ಬಂದಿದ್ದರೆ ಚೆನ್ನಾಗಿರುತ್ತಿತ್ತು. ಹೀಗೆಯೇ "ಆಪ್ತರೆನಿಸಿದವರ ಮಾತನ್ನು ಯಾವನು ಕೇಳುವುದಿಲ್ಲವೋ ಅವನು ಯೋಗ್ಯನಾದ ರಾಜನೆನಿಸುವುದಿಲ್ಲ' ಇಲ್ಲಿ ಸಂಶೃಣತೇ ಎಂಬುದಕ್ಕೆ ಮೊದಲು ನಕಾರವಿರಬೇಕಾಗಿತ್ತು. ಹಾಗೆ ಉಪಯೋಗಿಸದೆ 'ಹಿತಾನ್' ಎಂಬುದರೊಡನೆ 'ನ' ಎಂಬುದನ್ನು ಸೇರಿಸಿದ್ದು ಅನರ್ಹವೆನಿಸಿದೆ. ಇಲ್ಲಿ ಒಂದು ಪದವನ್ನು ಮಾತ್ರವೇ ಅಯೋಗ್ಯವಾದ ಕಡೆ ಸೇರಿಸಿದ್ದರೂ ವಾಕ್ಯವೆಲ್ಲವೂ ವಿವಕ್ಷಿತವಾದ ಅರ್ಥವನ್ನು ತಿಳಿಸಲು ಅಸಮರ್ಥವೆನಿಸುವುದರಿಂದ ಇದು ವಾಕ್ಯದೋಷ ವೆನಿಸಿದೆ. ಹೀಗೆಯೇ ಎಲ್ಲಾ ಕಡೆಗಳಲ್ಲೂ ತಿಳಿಯುವುದು. ಇಲ್ಲಿ ಕೆಲವರು "ಪದವೆಂದರೆ ಘಟಪಟಗಳಂತೆ ಪ್ರಯೋಗಾರ್ಹವಾದ ಪದಗಳನ್ನೇ ಗ್ರಹಿಸಬೇಕು. ನಕಾರವು ಹಾಗೆ

ಯಾವುದೊಂದು ವಸ್ತುವನ್ನು ಸ್ವತಂತ್ರವಾಗಿಯೂ ನಿರ್ವಿವಾದವಾಗಿಯೂ ತಿಳಿಸುವ ಪದವಲ್ಲ. 'ದ್ವಯಂ ಗತಂ' ಎಂಬ ಪದ್ಯದಲ್ಲಿ ತ್ವಂ ಎಂಬುದರ ಮುಂದೆ ಚಕಾರವನ್ನು ಹೇಳದೇ ಇರುವುದರಿಂದ ಅಕ್ರಮದೋಷವಿರುವಂತೆ 'ಹಿತಾನ್ನ ಯಃ' ಎಂಬಲ್ಲಿಯೂ ಅಕ್ರಮದೋಷವೇ ಹೊರತು ಅಸ್ಥಾನಸ್ಥಪದವೆಂಬ ದೋಷವು ಸಂಭವಿಸುವಂತಿಲ್ಲ" ಎಂದು ಹೇಳುತ್ತಾರೆ.

ಅಸ್ಥಾನಸ್ಥಸಮಾಸತಾ ಯಥಾ—

ಅದ್ಯಾಪಿ ಸ್ತನಶೈಲದುರ್ಗವಿಷಮೇ ಸೀಮಂತಿನೀನಾಂ ಹೃದಿ
ಸ್ಥಾತುಂ ವಾಂಛತಿ ಮಾನ ಏವ ಧಿಗಿತಿ ಕ್ರೋಧಾದಿವಾಲೋಹಿತಃ।
ಪ್ರೋದ್ಯದ್ದೂರತರಪ್ರಸಾರಿತಕರಃ ಕರ್ಷತ್ಯಸೌ ತತ್‌ಕ್ಷಣಾತ್
ಫುಲ್ಲತ್ಕೈರವಕೋಷನಿಸ್ಸರದಲಿಶ್ರೇಣೀಕೃಪಾಣಂ ಶಶೀ॥

ಅತ್ರ ಕೋಪಿನ ಉಕ್ತೌ ಸಮಾಸೋ ನ ಕೃತಃ; ಕವೇರುಕ್ತೌ ಕೃತಃ.

ವಾಕ್ಯಾಂತರಪದಾನಾಂ ವಾಕ್ಯಾಂತರೇಽನುಪ್ರವೇಶಃ ಸಂಕೀರ್ಣತ್ವಮ್. ಯಥಾ-"ಮುಂಚ ಚಂದ್ರಂ ಕುರಂಗಾಕ್ಷಿ! ಪಶ್ಯ ಮಾನಂ ನಭೋಽಂಗನೇ" ಅತ್ರ ನಭೋಂಗನೇ ಚಂದ್ರಂ ಪಶ್ಯ ಮಾನಂ ಮುಂಚೇತಿ ಯುಕ್ತಮ್. ಕ್ಲಿಷ್ಟತ್ವಮೇಕವಾಕ್ಯವಿಷಯಮಿತ್ಯಸ್ಮಾದ್ಭಿನ್ನಮ್.

ವಾಕ್ಯಾಂತರೇ ವಾಕ್ಯಾಂತರಾನುಪ್ರವೇಶೋ ಗರ್ಭಿತತಾ. ಯಥಾ—

ರಮಣೀ ಚರಣಪ್ರಾಂತೇ ಪ್ರಣತಿಪ್ರವಣೋಽಧುನಾ।
ವದಾಮಿ ಸಖಿ! ತೇ ತತ್ತ್ವಂ ಕದಾಚಿನ್ನೋಚಿತಾಃ ಕ್ರುಧಃ॥

ಅರ್ಥದೋಷಾನಾಹ—ಅಪುಷ್ಟದುಷ್ಕ್ರಮಗ್ರಾಮ್ಯವ್ಯಾಹತಾಶ್ಲೀಲಕಷ್ಟತಾಃ।
ಅನವೀಕೃತನಿರ್ಹೇತುಪ್ರಕಾಶಿತವಿರುದ್ಧತಾ॥
ಸಂದಿಗ್ಧಪುನರುಕ್ತತ್ವೇ ಖ್ಯಾತಿವಿದ್ಯಾವಿರುದ್ಧತೇ।
ಸಾಕಾಂಕ್ಷತಾ ಸಹಚರಭಿನ್ನತಾಽಸ್ಥಾನಯುಕ್ತತಾ॥
ಅವಿಶೇಷೇ ವಿಶೇಷಶ್ಚಾನಿಯಮೇ ನಿಯಮಸ್ತಥಾ।
ತಯೋರ್ವಿಪರ್ಯಯೋ ವಿಧ್ಯನುವಾದಾಯುಕ್ತತೇ ತಥಾ॥
ನಿರ್ಮುಕ್ತಪುನರುಕ್ತತ್ವಮರ್ಥದೋಷಾಃ ಪ್ರಕೀರ್ತಿತಾ.

ತದ್ವಿಪರ್ಯಯೋ ವಿಶೇಷೇಽವಿಶೇಷೋ, ನಿಯಮೇಽನಿಯಮಃ. ಅತ್ರ ಅಪುಷ್ಟತ್ವಂ ಮುಖ್ಯಾನುಪಕಾರಿತ್ವಮ್. ಯಥಾ—

'ವಿಲೋಕ್ಯ ವಿತತೇ ವ್ಯೋಮ್ನಿ ವಿಧುಂ ಮುಂಚ ರುಷಂ ಪ್ರಿಯೇ' ಅತ್ರ ವಿತತಶಬ್ದೋ ಮಾನತ್ಯಾಗಂ ಪ್ರತಿ ನ ಕಿಂಚಿದುಪಕುರುತೇ. ಅಧಿಕಪದತ್ವೇ ಪದಾರ್ಥಾನ್ವಯಪ್ರತೀತೇಃ ಸಮಕಾಲಮೇವ ಬಾಧಪ್ರತಿಭಾಸಃ, ಇಹ ತು ಪಶ್ಚಾದಿತಿ ವಿಶೇಷಃ.

ದುಷ್ಕ್ರಮತಾ ಯಥಾ-'ದೇಹಿ ಮೇ ವಾಜಿನಂ ರಾಜನ್ ಗಜೇಂದ್ರಂ ವಾ

ಮದಾಲಸಮ್' ಅತ್ರ ಗಜೇಂದ್ರಸ್ಯ ಪ್ರಥಮಂ ಯಾಚನಮನುಚಿತಮ್. 'ಸ್ವಪಿಹಿ ತ್ವಂ ಸಮೀಪೇ ಮೇ ಸ್ವಪಿಮ್ಯೇವಾಧುನಾ ಪ್ರಿಯ' ಅತ್ರ ಅರ್ಥೋ ಗ್ರಾಮ್ಯಃ.

ಕಸ್ಯಚಿತ್ ಪ್ರಾಗುತ್ಕರ್ಷಮಪಕರ್ಷಂ ವಾ ಅಭಿಧಾಯ ಪಶ್ಚಾತ್ ತದನ್ಯ ಪ್ರತಿಪಾದನಂ ವ್ಯಾಹತತ್ವಮ್- ಯಥಾ—

ಹರಂತಿ ಹೃದಯಂ ಯೂನಾಂ ನ ನವೇಂದುಕಲಾದಯಃ ।
ವೀಕ್ಷ್ಯತೇ ಯೈರಿಯಂ ತನ್ವೀ ಲೋಕಲೋಚನಚಂದ್ರಿಕಾ ॥

ಅತ್ರ ಯೇಷಾಮಿಂದುಕಲಾ ನಾನಂದಹೇತುಸ್ತೇಷಾಮೇವಾನಂದಾಯ ತನ್ವ್ಯಾಶ್ಚಂದ್ರಿಕಾತ್ವಾರೂಪಃ.

ಹಂತುಮೇವ ಪ್ರವೃತ್ತಸ್ಯ ಸ್ತಬ್ಧಸ್ಯ ವಿವರೈಷಿಣಃ ।
ಯಥಾಶು ಜಾಯತೇ ಪಾತೋ ತಥಾನ ಪುನರುನ್ನತಿಃ॥

ಅತ್ರ ಅರ್ಥೋಽಶ್ಲೀಲಃ—

ವರ್ಷತ್ಯೇತದಹರ್ಪತಿರ್ನ ತು ಘನೋ ಧಾಮಸ್ಥಮುಚ್ಚಂ ಪಯಃ
ಸತ್ಯಂ ಸಾ ಸವಿತುಸ್ಸುತಾ ಸುರಸರಿತ್ಪೂರೋ ಯಯಾ ಪ್ಲಾವಿತಃ ।
ವ್ಯಾಸಸ್ಯೋಕ್ತಿಷು ವಿಶ್ವಸಿತ್ಯಪಿ ನ ಕಃ ಶ್ರದ್ಧಾ ನ ಕಸ್ಯ ಶ್ರುತೌ
ನ ಪ್ರತ್ಯೇತಿ ತಥಾಪಿ ಮುಗ್ಧಹರಿಣೀ ಭಾಸ್ವನ್ಮರೀಚಿಷ್ವಪಃ ॥

ಅತ್ರ ಯಸ್ಮಾತ್ಸೂರ್ಯಾತ್ ವೃಷ್ಟೇರ್ಯಮುನಾಯಾಶ್ಚ ಪ್ರಭವಸ್ತಸ್ಮಾತ್ತರ್ಜಲಮಪಿ ಸೂರ್ಯಪ್ರಭವಮ್. ತತಶ್ಚ ಸೂರ್ಯಮರೀಚೀನಾಂ ಜಲಪ್ರತ್ಯಯಹೇತುತ್ವಮುಚಿತಮ್. ತಥಾಪಿ ಮೃಗೀ ಭ್ರಾಂತತ್ವಾತ್ತತ್ರ ಜಲಪ್ರತ್ಯಯಂ ನ ಕರೋತಿ. ಅಯಮಪ್ರಸ್ತುತೋಽಸ್ಯಾರ್ಥೋ ದುರ್ಬೋಧಃ ದೂರೇ ಚಾಸ್ಮಾತ್ ಪ್ರಸ್ತುತಾರ್ಥಬೋಧ ಇತಿ ಕಷ್ಟಾರ್ಥತ್ವಮ್.

ಸದಾ ಚರತಿ ಖೇ ಭಾನುಃ ಸದಾ ವಹತಿ ಮಾರುತಃ ।
ಸದಾ ಧತ್ತೇ ಭುವಂ ಶೇಷಃ ಸದಾ ಧೀರೋಽವಿಕತ್ಥನಃ ॥

ಅತ್ರ ಸದೇತ್ಯನವೀಕೃತತ್ವಮ್. ಅತ್ರಾಸ್ಯ ಪಾದಸ್ಯ ಪರ್ಯಾಯಾಂತರೇಣೋಪಾದಾನೇಽಪಿ ಯದಿ ನಾನ್ಯದ್ವಿಚ್ಛಿತ್ತ್ಯಂತರಂ, ತದಾ ಅಸ್ಯ ದೋಷಸ್ಯ ಸದ್ಭಾವ ಇತಿ ಕಥಿತಪದಾತ್ಪಾರ್ಥ್ಯೇದಃ ನವೀಕೃತತ್ವಂ. ಯಥಾ—

ಭಾನುಃ ಸಕೃದ್ಯುಕ್ತತುರಂಗ ಏವ ರಾತ್ರಿಂದಿವಂ ಗಂಧವಹಃ ಪ್ರಯಾತಿ ।
ಬಿಭರ್ತಿ ಶೇಷಃ ಸತತಂ ಧರಿತ್ರೀಂ ಷಷ್ಠಾಂಶವೃತ್ತೇರಪಿ ಧರ್ಮ ಏಷಃ ॥

ಗೃಹೀತಂ ಯೇನಾಸೀಃ ಪರಭವಭಯಾನ್ನೋಚಿತಮಪಿ
ಪ್ರಭಾವಾದ್ಯಸ್ಯಾಭೂನ್ನ ಖಲು ತವ ಕಶ್ಚಿನ್ನ ವಿಷಯಃ ।
ಪರಿತ್ಯಕ್ತಂ ತೇನ ತ್ವಮಪಿ ಸುತಶೋಕಾನ್ನ ತು ಭಯಾತ್
ವಿಮೋಕ್ಷ್ಯೇ ಶಸ್ತ್ರ ! ತ್ವಾಮಹಮಪಿ ಯತೇ ಸ್ವಸ್ತಿ ಭವತೇ ॥

ಅತ್ರ ದ್ವಿತೀಯಪದಸ್ಯ ಮೋಚನೇ ಹೇತುರ್ನೋಕ್ತ ಇತಿ ನಿರ್ಹೇತುತ್ವಮ್.

ಕುಮಾರಸ್ತೇ ನರಾಧೀಶ ! ಶ್ರಿಯಂ ಸಮಧಿಗಚ್ಛತು ।

ಅತ್ರ ತ್ವಂ ಮ್ರಿಯಸ್ವೇತಿ ವಿರುದ್ಧಾರ್ಥಪ್ರಕಾಶನಾತ್ ಪ್ರಕಾಶಿತವಿರುದ್ಧತ್ವಮ್.

ಅಚಲಾ ಅಬಲಾ ವಾ ಸ್ಯುಃ ಸೇವ್ಯಾ ಬ್ರೂತ ಮನೀಷಿಣಃ ।

ಅತ್ರ ಪ್ರಕರಣಭಾವಾತ್ ಶಾಂತಶೃಂಗಾರಿಣೋಃ ಕೋ ವಕ್ತೇತಿ ನಿಶ್ಚಯಾಭಾವಾತ್ ಸಂದಿಗ್ಧತ್ವಮ್.

ಸಹಸಾ ವಿದಧೀತ ನ ಕ್ರಿಯಾಮಮವಿವೇಕಃ ಪರಮಾಪದಾಂ ಪದಮ್ ।
ವೃಣತೇ ಹಿ ವಿಮೃಶ್ಯಕಾರಿಣಂ ಗುಣಲುಬ್ಧಾಃ ಸ್ವಯಮೇವ ಸಂಪದಃ ॥

ಅತ್ರ ದ್ವಿತೀಯಾರ್ಥೇ ವ್ಯತಿರೇಕೇಣ ದ್ವಿತೀಯಪಾದಸ್ಯೈವ ಅರ್ಥ ಇತಿ ಪುನರುಕ್ತತಾ. ಪ್ರಸಿದ್ಧಿವಿರುದ್ಧತಾ ಯಥಾ—

ತತಶ್ಚಚಾರ ಸಮರೇ ಶಿತಶೂಲಧರೋ ಹರಿಃ ।

ಅತ್ರ ಹರೇಃ ಶೂಲಂ ಲೋಕೇಽಪ್ರಸಿದ್ಧಮ್. ಯಥಾ—

ಪಾದಾಘಾತಾದಶೋಕಸ್ತೇ ಸಂಜಾಂತಾಂಕುರಕಂಟಕಃ ।

ಅತ್ರ ಪಾದಾಘಾತಾದಶೋಕೇಷು ಪುಷ್ಪಮೇವ ಜಾಯತೇ ಇತಿ ಪ್ರಸಿದ್ಧಮ್, ನ ತ್ವಂಕುರ ಇತಿ ಕವಿಸಮಯಖ್ಯಾತಿವಿರುದ್ಧತಾ. 'ಅಧರೇ ಕರಜಕ್ಷತಂ ಮೃಗಾಕ್ಷ್ಯಾಃ' ಅತ್ರ ಶೃಂಗಾರಶಾಸ್ತ್ರವಿರುದ್ಧತ್ವಾದ್ವಿದ್ಯಾವಿರುದ್ಧತಾ. ಏವಮನ್ಯಶಾಸ್ತ್ರವಿರುದ್ಧತ್ವಮಪಿ.

ಐಶಸ್ಯ ಧನುಷೋ ಭಂಗಂ ಕ್ಷತ್ರಸ್ಯ ಚ ಸಮುನ್ನತಿಮ್ ।
ಸ್ತ್ರೀರತ್ನಂ ಚ ಕಥಂ ನಾಮ ಮೃಗ್ಯತೇ ಭಾರ್ಗವೋಽಧುನಾ ॥

ಅತ್ರಸ್ತ್ರೀರತ್ನಮುಪೇಕ್ಷಿತುಮಿತ್ಯಾಕಾಂಕ್ಷತಿ.

ಅನರ್ಹವಾದ ಕಡೆಗಳಲ್ಲಿ ಸಮಾಸವನ್ನು ಪ್ರಯೋಗಿಸುವುದಕ್ಕೆ ಉದಾಹರಣವನ್ನು ತಿಳಿಸುತ್ತಾನೆ. "ಯಾವುದೋ ಕಾರಣದಿಂದ ಬಂದಿರುವ ಈ ಅಭಿಮಾನವು ಸ್ತನಗಳೆಂಬ ಅಗಾಧವಾದ ದುರ್ಗದಲ್ಲಿ ಪ್ರವೇಶಿಸಲಿಕ್ಕೂ ಆಗದಿರುವಂತಹ ರಮಣಿಯರ ಹೃದಯದಲ್ಲಿ ಈಗ ನಾನು ಉದಯಿಸಿರುವಾಗಲೂ ಸಹ ನೆಲೆಸಲು ಇಚ್ಛಿಸುತ್ತದೆ. ಆದ್ದರಿಂದಲೇ ನನಗೆ ಧಿಕ್ಕಾರವಿರಲಿ, ಎಂದು ಕ್ರೋಧದಿಂದಲೇ ಏನೋ ಕೆಂಪಾಗಿರುವ ಈ ಚಂದ್ರನು ಉದಯಿಸುತ್ತಲೇ ದೂರದೇಶಕ್ಕೆ ಕೈಗಳೆಂಬ ಕಿರಣಗಳನ್ನು ನೀಡಿ ಆ ಕ್ಷಣದಲ್ಲಿಯೇ ವಿಕಸಿತವಾದ ಕನ್ನೈದಿಲೆಗಳ ಸಂಪುಟಗಳಿಂದ ಹೊರಗೆ ಬರುತ್ತಿರುವ ದುಂಬಿಗಳ ಸಾಲೆಂಬ ಕತ್ತಿಯನ್ನು ಸೆಳೆದುಕೊಂಡು ಆ ಅಭಿಮಾನವನ್ನು ನಾಶಪಡಿಸಲಿಕ್ಕಾಗಿ ಹೋಗುತ್ತಿದ್ದಾನೆಯೋ" ಇಲ್ಲಿ ಮಾನದ ಬಗ್ಗೆ ಕೋಪಗೊಂಡ ಚಂದ್ರನು 'ಅದ್ಯಾಪಿ' ಎಂಬುದಂದ 'ಧಿಕ್' ಎನ್ನುವವರೆಗೂ ಹೇಳುವ ಮಾತಿನಲ್ಲಿ ಸಮಾಸವನ್ನು ತಿಳಿಸಿಯೇ ಇಲ್ಲ. 'ಫುಲ್ಲತ್ಕೈರವ—ಕೃಪಾಣಂ' ಎಂದು ಕವಿಯು ಹೇಳುವ ಮಾತಿನಲ್ಲಿ ಸಮಾಸವು ಬಂದಿದೆ. ಕೋಪಗೊಂಡವನ ಮಾತಿನಲ್ಲಿ ದೀರ್ಘಸಮಾಸವಿರಬೇಕಾಗಿತ್ತು. ಅಲ್ಲಿಯೇ ಇಲ್ಲದೆ, ಕವಿಯ ಮಾತಿನಲ್ಲಿ ಅಂತಹ ಸಮಾಸವು ಬಂದಿದೆ. ದೀರ್ಘಸಮಾಸವು ಓಜೋ ಗುಣವನ್ನು ಪ್ರಕಾಶಿಸುತ್ತದೆ. ಓಜೋಗುಣವನ್ನು ರೌದ್ರರಸದಲ್ಲಿಯೇ ಪ್ರಯೋಗಿಸ

ಬೇಕು. ರೌದ್ರರಸವು ಕೋಪಗೊಂಡ ಚಂದ್ರನ ವಾತಿನಲ್ಲಿ ತೋರಬೇಕಾಗಿತ್ತು. ಅಲ್ಲಿ ಅದು ತೋರದೇ ಇರುವುದರಿಂದ ಇದು ಅಸ್ಥಾನಸ್ಥಸಮಾಸವೆಂಬ ದೋಷವೆನಿಸಿದೆ.

ಒಂದು ವಾಕ್ಯದಲ್ಲಿರುವ ಪದವನ್ನು ಬೇರೊಂದು ವಾಕ್ಯದಲ್ಲಿ ಸೇರಿಸುವುದೇ ಸಂಕೀರ್ಣವೆನಿಸುವುದು. "ಎಲೈ ಚಂಚಲಾಕ್ಷಿಯೇ, ಆಕಾಶವೆಂಬ ಅಂಗಳದಲ್ಲಿ ಚಂದ್ರನನ್ನು ನೋಡು; ಕೋಪವನ್ನು ಬಿಡು" ಇಲ್ಲಿ ಹೀಗೆ ಹೇಳುವುದಕ್ಕೆ ಬದಲು ಮುಂಚ ಚಂದ್ರಂ-ಪಶ್ಯ ಮಾನಂ ಎಂದು ಮೊದಲನೆಯ ವಾಕ್ಯದಲ್ಲಿ ಉಪಯೋಗಿಸಬೇಕಾದ ಪದವನ್ನು ಎರಡನೆಯ ವಾಕ್ಯದಲ್ಲೂ, ಎರಡನೆಯದರಲ್ಲಿ ಉಪಯೋಗಿಸಬೇಕಾದ ಪದವನ್ನು ಮೊದಲನೆಯದರಲ್ಲೂ ಉಪಯೋಗಿಸಿದ್ದರಿಂದ ಇದು ಸಂಕೀರ್ಣವೆಂಬ ದೋಷವೆನಿಸಿದೆ.

ಇಲ್ಲಿ ದೋಷವು ಎರಡು ವಾಕ್ಯಗಳಿಗೂ ಸಂಬಂಧಿಸಿರುತ್ತದೆ. ಒಂದರಲ್ಲಿ ಇರಬೇಕಾದ ಪದವು ಮತ್ತೊಂದರಲ್ಲಿ ಇರುವುದರಿಂದ ಎರಡು ಕಡೆಗಳಲ್ಲೂ ದೋಷವು ಅನ್ವಯಿಸುತ್ತದೆ. ಕ್ಲಿಷ್ಟತ್ವವೆಂಬ ದೋಷವಾದರೂ ಒಂದೇ ವಾಕ್ಯದಲ್ಲಿಯೇ ಇದ್ದು ರಸಪ್ರಕರ್ಷಕ್ಕೆ ಕ್ಲೇಶವನ್ನುಂಟುಮಾಡುತ್ತದೆ. ಇದೇ ಇವೆರಡಕ್ಕೂ ಇರುವ ಭೇದ.

ಬೇರೊಂದು ವಾಕ್ಯದಲ್ಲಿ ಮತ್ತೊಂದು ವಾಕ್ಯವು ಪ್ರವೇಶಿಸುವುದೇ ಗರ್ಭಿತವೆಂಬ ದೋಷವೆನಿಸುವುದು. "ಪತಿಯು ನಿನ್ನ ಪಾದದ ಸಮೀಪದಲ್ಲಿ ನಮಸ್ಕಾರಮಾಡಲು ಉದ್ಯುಕ್ತನಾಗಿರಲು ಇನ್ನು ಮೇಲಾದರೂ ನಿನಗೆ ಎಂದಿಗೂ ಕೋಪವು ಯುಕ್ತವೆನಿಸುವುದಿಲ್ಲ. ಎಲೈ ಸಖಿಯೇ! ನಿನ್ನ ಎದುರಿಗೆ ಇದು ಸತ್ಯವೆಂದು ಹೇಳುತ್ತೇನೆ" ಇಲ್ಲಿ 'ವದಾಮಿ ಸಖಿ! ತೇ ತತ್ತ್ವಮ್' ಎಂಬ ವಾಕ್ಯವು 'ರಮಣೇ ಚರಣಪ್ರಾಂತೇ ಪ್ರಣತಿಪ್ರವಣೇ ಅಧುನಾ ಕದಾಚಿತ್ ಕ್ರುಧೋ ನೋಚಿತಾಃ' ಎಂಬ ವಾಕ್ಯದ ಮಧ್ಯದಲ್ಲಿ ಪ್ರವೇಶಿಸಿದ್ದರಿಂದ ಇದು ಗರ್ಭಿತವೆನಿಸಿದೆ.

ಈವರೆವಿಗೆ ವಾಕ್ಯದೋಷಗಳನ್ನು ತಿಳಿಸಿ ಈಗ ಅರ್ಥದಲ್ಲಿ ಕಂಡು ಬರುವ ದೋಷಗಳನ್ನು ತಿಳಿಸುತ್ತಾನೆ. ಅಪುಷ್ಟತ್ವ, ದುಷ್ಕ್ರಮತ್ವ, ಗ್ರಾಮ್ಯತ್ವ, ವ್ಯಾಹತತ್ವ, ಅಶ್ಲೀಲತೆ, ಕಷ್ಟಸ್ಥಿತಿ, ಅನವೀಕೃತತ್ವ, ನಿರ್ಹೇತುತ್ವ, ವಿರೋಧಪ್ರಕಾಶಕತ್ವ, ಸಂದಿಗ್ಧತೆ, ಪುನರುಕ್ತತೆ, ಖ್ಯಾತಿವಿರೋಧ, ವಿದ್ಯಾವಿರೋಧ, ಸಾಕಾಂಕ್ಷತ್ವ, ಸಹಚರಭಿನ್ನತೆ, ಅಸ್ಥಾನಯುಕ್ತತೆ. ವಿಶೇಷವಿಲ್ಲದ ಕಡೆ ವಿಶೇಷವನ್ನು ತಿಳಿಸುವುದು, ನಿಯಮವಿಲ್ಲದ ಕಡೆ ನಿಯಮವನ್ನು ತಿಳಿಸುವುದು. ಅವಕ್ಕೆ ವಿಪರೀತವಾದ್ದನ್ನು ತಿಳಿಸುವುದು. (ವಿಶೇಷವನ್ನು ತಿಳಿಸುವಕಡೆ ವಿಶೇಷವಿಲ್ಲದಂತೆ ಮಾಡುವುದು, ನಿಯಮವಿರುವ ಕಡೆ ನಿಯಮವಿಲ್ಲದಂತೆ ಮಾಡುವುದು) ಅನರ್ಹವಾದ ಕಡೆಗಳಲ್ಲಿ ವಿಧಿಯನ್ನೂ ಅನುವಾದವನ್ನೂ ತಿಳಿಸುವುದು, ನಿರ್ಮುಕ್ತಪುನರುಕ್ತತೆ ಇವು ಇಪ್ಪತ್ತಮೂರು ಅರ್ಥದೋಷಗಳೆನಿಸಿವೆ.

ಈಗ ಅಪುಷ್ಟತ್ವವೆಂಬ ಅರ್ಥದೋಷವನ್ನು ವಿವರಿಸುತ್ತಾನೆ. ಮುಖ್ಯಾರ್ಥಕ್ಕೆ ಉಪಯೋಗವಾಗದಿರುವುದೇ ಅಪುಷ್ಟತ್ವವೆನಿಸುವುದು. "ಎಲೈ ಪ್ರಿಯೆಯೇ, ವಿಸ್ತಾರ

ವಾದ ಆಕಾಶದಲ್ಲಿ ಚಂದ್ರನನ್ನು ನೋಡಿ ಕೋಪವನ್ನು ಬಿಡು" ಇಲ್ಲಿ ವಿತತಶಬ್ದದ ಅರ್ಥವು ಪ್ರೇಯಸಿಯ ಮಾನತ್ಯಾಗಕ್ಕೆ ಕೊಂಚವೂ ಸಹಕಾರಿಯಾಗಿಲ್ಲ. ಆದ್ದರಿಂದ ಈ ಪದವು ಇಲ್ಲಿ ಅನಾವಶ್ಯಕವೆನಿಸಿದೆ. ಅಧಿಕಪದತ್ವವೆಂಬ ದೋಷದಲ್ಲಿ ಪದಾರ್ಥಗಳಿಗೆ ಪರಸ್ಪರವಾಗಿ ಅನ್ವಯವಾಗುವ ಕಾಲದಲ್ಲಿಯೇ ಬಾಧವು ತೋರುತ್ತದೆ. ಇಲ್ಲಿ ಯಾದರೋ ಪದಾರ್ಥಗಳಿಗೆ ಅನ್ವಯವಾದ ಮೇಲೆ ಬಾಧವು ತೋರುತ್ತದೆ. ಇದೇ ಇವೆರಡಕ್ಕೂ ಇರುವ ಭೇದ. ಈ ಬಗ್ಗೆ ಸಹೃದಯರ ಪ್ರತೀತಿಯೇ ಪ್ರಮಾಣವೆನಿಸಿದೆ. ದುಷ್ಕ್ರಮತ್ವವೆಂಬ ದೋಷವನ್ನು ಈಗ ತಿಳಿಸುತ್ತಾನೆ. ಕ್ರಮದಲ್ಲಿ ವೈಪರೀತ್ಯವಿರು ವುದರಿಂದ ಉಂಟಾಗುವ ದೋಷವೇ ಇದು. ಇದರಿಂದ ಸಹೃದಯರಿಗೆ ರಸಪ್ರತೀ ತಿಗೆ ತಡವಾಗುವ ಪ್ರಯುಕ್ತ ಇದು ದೋಷವೆನಿಸಿದೆ. 'ಎಲೈ ರಾಜನೆ, ನನಗೆ ಕುದುರೆ ಯನ್ನಾಗಲಿ, ಮದಿಸಿದ ಆನೆಯನ್ನಾಗಲೀ ಕೊಡು" ಇಲ್ಲಿ ಹೆಚ್ಚು ಬೆಲೆಯಿರುವುದರಿಂದ ಆನೆಯನ್ನು ಕೊಡೆಂದು ಮೊದಲು ಕೇಳುವುದು ಯುಕ್ತವೆನಿಸುತ್ತದೆ. ಹೆಚ್ಚು ಬೆಲೆಯ ವಸ್ತುವನ್ನು ಮೊದಲು ಕೇಳಿ ಅದು ಸಿಕ್ಕದಿದ್ದರೆ ಕಡಮೆಬೆಲೆಯ ವಸ್ತುವನ್ನು ಆಮೇಲೆ ಕೇಳುವುದು ಲೋಕದಲ್ಲಿ ರೂಢಿ ಇದೆ. "ಪ್ರಿಯನೇ, ನೀನು ನನ್ನ ಸಮೀಪದಲ್ಲಿಯೇ ಮಲಗು. ನಾನೂ ಸಹ ಈಗ ಇಲ್ಲಿಯೇ ಮಲಗಿದ್ದೇನೆ" ಇಲ್ಲಿ ಹೇಳಿರುವ ಅರ್ಥವು ಗ್ರಾಮ್ಯವೆನಿಸಿದೆ. ಅಸಂಸ್ಕೃತರಾದ ಜನರು ಆಡುವ ಮಾತಿನಂತೆ ಇರುವುದರಿಂದ ಸ್ವಪಿಹಿ ಸ್ವಪಿಮಿ ಎಂಬ ಪದಗಳ ಅರ್ಥವು ಗ್ರಾಮ್ಯವೆಂಬುದು ಸ್ಪಷ್ಟವಾಗಿದೆ.

ಮೊದಲು ಒಬ್ಬನ ಉತ್ಕರ್ಷವನ್ನಾಗಲೀ ಅಪಕರ್ಷವನ್ನಾಗಲೀ ತಿಳಿಸಿ ಆಮೇಲೆ ಅದಕ್ಕಿಂತ ಬೇರೆಯಾದ್ದನ್ನು ತಿಳಿಸುವುದು ವ್ಯಾಹತವೆನಿಸುವುದು. "ಲೋಕದ ಜನರ ಕಣ್ಣುಗಳಿಗೆ ಚಂದ್ರಿಕೆ ಎನಿಸಿದ ಈ ಕೃಶಾಂಗಿಯನ್ನು ಯಾವ ಯುವಕರು ನೋಡು ವರೋ ಅಂತಹ ಯುವಕರ ಹೃದಯವನ್ನು ಹೊಸದಾಗಿ ಉದಯಿಸಿದ ಚಂದ್ರನ ಕಲೆ ಮೊದಲಾದುವು ಅಪಹರಿಸುವುದಿಲ್ಲ' ಇಲ್ಲಿ ಯಾರಿಗೆ ಚಂದ್ರನ ಕಲೆಯು ಆನಂದವನ್ನು ಕೊಡುವುದಿಲ್ಲವೋ ಅವರಿಗೆ ಆನಂದವನ್ನುಂಟುಮಾಡಲಿಕ್ಕಾಗಿ ಪ್ರೇಯಸಿಯಲ್ಲಿ ಚಂದ್ರಿಕೆ ಎಂಬುದನ್ನು ಆರೋಪಿಸಲಾಗಿದೆ. ಚಂದ್ರಕಲೆಯು ಹೃದಯವನ್ನು ಅಪಹರಿಸು ವುದಿಲ್ಲ ಎಂದು ಹೇಳಿದ್ದರಿಂದ ಚಂದ್ರಕಲೆಯ ಅಪಕರ್ಷವನ್ನು ಮೊದಲು ತಿಳಿಸಿ ಆಮೇಲೆ ಆ ಚಂದ್ರನ ಕಿರಣವೆನಿಸಿದ ಚಂದ್ರಿಕೆಯನ್ನು ನಾಯಿಕೆಯಲ್ಲಿ ಆರೋಪಿಸಿದ್ದ ರಿಂದ ನಾಯಿಕೆಯ ಉತ್ಕರ್ಷದ ಮೂಲಕ ಚಂದ್ರಕಲೆಗೆ ಉತ್ಕರ್ಷವನ್ನು ತಿಳಿಸಲಾಗಿದೆ. ಆದ್ದರಿಂದ ಇಲ್ಲಿ ವ್ಯಾಹತವೆಂಬ ದೋಷವಿದೆ. "ನಾಶಮಾಡಲಿಕ್ಕಾಗಿಯೇ ಪ್ರವರ್ತಿ ಸುತ್ತ ಯಾವಾಗಲೂ ರಂಧ್ರವನ್ನೇ ಹುಡುಕುತ್ತ ನಿಶ್ಚಲವಾಗಿರುವ ಜನರಿಗೆ ಶತ್ರುವಿನ ಆಕ್ರಮಣದಿಂದ ಪರಾಜಯವು ಹೇಗೆ ಬೇಗನೆ ಸಂಭವಿಸಬಲ್ಲದೋ ಹಾಗೆಯೇ ಬೇಗನೆ ವಿಜಯವು ಸಂಭವಿಸುವುದಿಲ್ಲ" ಇಲ್ಲಿ ತೋರುವ ಎರಡನೆಯ ಅರ್ಥವು ಅಶ್ಲೀಲವೆನಿಸಿದೆ. "ಸ್ತ್ರೀಯೋನಿಯಲ್ಲಿಯೇ ಬಡಿದಾಡಲಿಕ್ಕೆ ಆರಂಭಿಸುತ್ತ ಅದರ ರಂಧ್ರವನ್ನು ಮತ್ತೆ ಮತ್ತೆ ಪ್ರವೇಶಲಿಚ್ಛಿಸಿದ ದಂಡಾಕಾರದ ಪುರುಷಾಂಗವು ವೀರ್ಯನಾಶದಿಂದ ಹೇಗೆ

ಕೆಳಗೆ ಬೀಳುವುದೋ ಹಾಗೆ ಮತ್ತೆ ಅದು ಎದ್ದು ನಿಲ್ಲಲಾರದು" ಈ ಬಗೆಯ ಅರ್ಥವು ಇಲ್ಲಿ ತೋರುವುದರಿಂದ ದುಷ್ಟವೆನಿಸಿದೆ. 'ನಾಯಕನೇ ಬೇರೊಬ್ಬನಾಯಿಕೆಗೆ ಐಶ್ವರ್ಯ ವನ್ನು ಕೊಡುತ್ತಾನೆ. ಆ ಹಣದಿಂದ ಆಕೆಯ ವೇಷಭೂಷಣಗಳು ಹೆಚ್ಚುತ್ತವೆ' ಎಂದು ನಾಯಕನು ತಾನೇ ಹೇಳುತ್ತಾನೆ. ಹಾಗೆಯೇ ಲೋಕವೂ ಹೇಳುತ್ತಲಿದೆ. ಆದರೂ ಬೇರೊಬ್ಬ ನಾಯಿಕೆಯು ಇದೊಂದನ್ನೂ ಒಪ್ಪುವುದಿಲ್ಲ, ಆಕೆಗೆ ಆ ನಾಯ ಕನು ಹೇಳುವ ಈಮಾತಿನಲ್ಲಿ ಕಷ್ಟತೆ ಎಂಬ ಅರ್ಥದೋಷವು ಅಂಟಿಕೊಂಡಿರುವುದನ್ನು ಇಲ್ಲಿ ತಿಳಿಸುತ್ತಾನೆ. "ಸೂರ್ಯನು ತನ್ನ ಕಿರಣಗಳಲ್ಲಿರುವ ನಿರ್ಮಲವಾದ ಈ ನೀರನ್ನು ಸುರಿಸುತ್ತಾನೆ. ಆದರೆ ದೊಡ್ಡದಾದ ಮೇಘವು ಸುರಿಸುವುದಿಲ್ಲ. ಆದಿತ್ಯನಿಂದ ವೃಷ್ಟಿ ಯುಂಟಾಗುತ್ತದೆ ಎಂದು ಶ್ರುತಿಯು ಹೇಳುತ್ತಿದೆ. ಆ ಯಮುನೆಯು ಸೂರ್ಯನ ಮಗಳೆಂಬುದೂ ಸತ್ಯವೇ. ಸೂರ್ಯನಿಂದ ಮಳೆಯು ಸುರಿದು ಆ ನೀರೇ ಯಮುನಾನದಿ ಯಾಗಿ ಪರಿಣಮಿಸಿದೆ. ಯಾವ ಯಮುನೆಯಿಂದ ಗಂಗೆಯ ಪ್ರವಾಹವು ಹೆಚ್ಚಿತೋ, ಸೂರ್ಯನು ಎಂಟು ತಿಂಗಳಕಾಲ ಆ ನೀರನ್ನು ತೆಗೆದುಕೊಂಡು ಮಳೆಯನ್ನು ಸುರಿಸು ವನೋ ಅದರಿಂದ ಜಗತ್ತು ಬೆಳೆಯುತ್ತಿದೆ" ಎಂದು ವ್ಯಾಸನು ಹೇಳಿರುವ ಮಾತಿನಲ್ಲಿ ಯಾರಿಗೆ ವಿಶ್ವಾಸವಿಲ್ಲ ? ಯಾರಿಗೆ ತಾನೆ ಶ್ರುತಿಯಲ್ಲಿ ವಿಶ್ವಾಸವಿಲ್ಲ ? ಆದರೂ ಬುದ್ಧಿ ಯಿಲ್ಲದ ಜಿಂಕೆಯು ಪ್ರಕಾಶಮಾನವಾದ ಸೂರ್ಯನ ಕಿರಣಗಳಲ್ಲಿ ನೀರಿದೆ ಎಂಬುದನ್ನು ನಂಬುವುದಿಲ್ಲ." ಸೂರ್ಯನಿಂದ ವೃಷ್ಟಿ ಮತ್ತು ಯಮುನಾನದಿ ಇವೆರಡು ಹುಟ್ಟುವು ವೆಂದು ತಿಳಿಸಿದ್ದರಿಂದ ಅವುಗಳಲ್ಲಿರುವ ನೀರೂ ಸಹ ಸೂರ್ಯನಿಂದಲೇ ಹುಟ್ಟಿದಂತಾ ಯಿತು. ಆದ್ದರಿಂದ ಸೂರ್ಯನ ಕಿರಣಗಳಲ್ಲಿ ನೀರಿದೆ ಎಂದು ನಂಬುವುದೇ ಯುಕ್ತ ವಾದುದು. ಆದರೆ ಹೆಣ್ಣು ಜಿಂಕೆಯು ಭ್ರಾಂತಿಗೊಂಡು ಕಿರಣದಲ್ಲಿ ನೀರಿದೆ ಎಂಬುದನ್ನು ನಂಬುವುದಿಲ್ಲ. ಆದರೆ ಅರ್ಥವೇ ಅಪ್ರಕೃತವಾದುದು ಇಲ್ಲಿ ನೇರವಾಗಿ ತಿಳಿದುಬರುವ ಈ ಪ್ರಕೃತಾರ್ಥ. ಇದು ಎಲ್ಲರಿಗೂ ತಿಳಿದಿದ್ದರೂ ಮುಗ್ಧನಾಯಿಕೆಯು ಇದನ್ನು ನಂಬು ವುದಿಲ್ಲವೆಂದು ಆಕೆಗೆ ನಾಯಕನು ಹೇಳುವುದೇ ಪ್ರಕೃತಾರ್ಥ. ಇದು ಇಲ್ಲಿ ವಾಕ್ಯದಿಂದ ಸ್ಪಷ್ಟವಾಗಿ ತೋರುವುದೇ ಇಲ್ಲ. ಆದ್ದರಿಂದ ಇದು ಅರ್ಥಕ್ಲೇಶಕ್ಕೆ ಉದಾಹರಣವೆನಿಸಿದೆ.

"ಆಕಾಶದಲ್ಲಿ ಸೂರ್ಯನು ಯಾವಾಗಲೂ ಸಂಚರಿಸುತ್ತಾನೆ. ಗಾಳಿಯು ಯಾವಾಗಲೂ ಬೀಸುತ್ತಿದೆ. ಆದಿಶೇಷನು ಭೂಮಿಯನ್ನು ಯಾವಾಗಲೂ ಹಿಡಿದಿ ದ್ದಾನೆ. ಧೀರನು ಯಾವಾಗಲೂ ತನ್ನನ್ನು ಹೊಗಳಿಕೊಳ್ಳುವುದಿಲ್ಲ" ಇಲ್ಲಿ ಸದಾ ಎಂಬ ಒಂದೇ ಶಬ್ದದಿಂದಲೇ ಮತ್ತೆ ಮತ್ತೆ 'ಸತತ' ಎಂಬ ಅರ್ಥವನ್ನು ತಿಳಿಸಿರುವು ದರಿಂದ ಇಲ್ಲಿ ಅನವೀಕೃತತ್ವವೆಂಬ ದೋಷವಿದೆ. ಪದವು ಹೊಸದೆನಿಸದೆ ಒಂದೇ ಬಗೆ ಯಾದರೆ ಈ ದೋಷವು ಸಂಭವಿಸುತ್ತದೆ. ಈ ಪದವನ್ನು ಬೇರೆ ರೀತಿಯಲ್ಲಿ ತಿಳಿಸಿ ದರೂ ಸಹ ಬೇರೆ ಯಾವ ಚಮತ್ಕಾರವು ತೋರದೇ ಹೋದರೆ ಆಗಲೇ ಇದು ದೋಷ ವೆನಿಸುತ್ತದೆ. ಕಥಿತಪದತ್ವವೆಂಬ ದೋಷದಲ್ಲಿ ಈ ರೀತಿ ಇರುವುದಿಲ್ಲ. ಒಂದೇ ಅರ್ಥ ವನ್ನು ಕೊಡುವ ಒಂದೇ ರೀತಿಯ ಶಬ್ದವಿದ್ದರೆ ಮಾತ್ರವೇ ಆ ದೋಷವು ಸಂಭವಿಸು

ತ್ತದೆ. ಇವರಿಂದ ಸದಾ ಚರತಿ ಎಂಬಲ್ಲಿ ಸದಾ ಪದವನ್ನು ಮತ್ತೆ ಮತ್ತೆ ಹೇಳಿದ್ದರೂ ಸಹ ಕಥಿತಪದವು ಸಂಭವಿಸಲಾರದು. ಇವೆರಡು ದೋಷಗಳಿಗೂ ಇರುವ ಭೇದವೇ ಇದು. ಎಲ್ಲಿ ಬೇರೆ ಶಬ್ದವನ್ನು ಪ್ರಯೋಗಿಸಿದ್ದರಿಂದ ಹೊಸದಾಗುವ ಪ್ರಯುಕ್ತ ಒಂದು ಬಗೆಯ ಚಮತ್ಕಾರವಿರುವುದೋ ಅಲ್ಲಿ ಈ ದೋಷವಿರುವುದಿಲ್ಲವೆಂಬ ಆಶಯ ದಿಂದ ನವೀಕೃತತತ್ವವೆಂಬ ದೋಷವನ್ನು ತಿಳಿಸುತ್ತಾನೆ. "ಸೂರ್ಯನು ಜಗತ್ತನ್ನು ಸುತ್ತಲಿಕ್ಕಾಗಿ ಒಂದೇಸಾರಿ ರಥದಲ್ಲಿ ಕುದುರೆಗಳನ್ನು ಕಟ್ಟುತ್ತಾನೆ. ಅವನಿಗೆ ಎಂದಿಗೂ ವಿಶ್ರಾಂತಿ ಎಂಬುದೇ ಇರುವುದಿಲ್ಲ. ವಾಯುವೂ ಸಹ ಹಗಲು ರಾತ್ರಿ ಎಲ್ಲಾ ಕಾಲ ದಲ್ಲೂ ಬೀಸುತ್ತಿದೆ. ಶೇಶನು ಯಾವಾಗಲೂ ಭೂಮಿಯನ್ನು ಧರಿಸಿದ್ದಾನೆ. ಪ್ರಜೆ ಗಳಿಂದ ಆರನೆಯ ಒಂದು ಭಾಗವನ್ನು ತೆಗೆದುಕೊಂಡು ಜೀವಿಸುವುದು ರಾಜನಿಗೆ ಯಾವಾಗಲೂ ಜಗತ್ಪಾಲನವೆಂಬ ಧರ್ಮವೆನಿಸಿದೆ." ಇಲ್ಲಿ ಪದಗಳನ್ನು ಬದಲಾಯಿ ಸಿದ್ದರಿಂದ ಅನವೀಕೃತತತ್ವವೆಂಬ ದೋಷವಿಲ್ಲ.

ನಿರ್ಹೇತು ವೆಂಬ ದೋಷವನ್ನು ತಿಳಿಸುತ್ತಾನೆ. ಒಂದು ಕಾರ್ಯಸಾಧನೆಗೆ ಅಪೇಕ್ಷಿತವಾದ ಹೇತುವಿಲ್ಲದಿರುವುದೇ ನಿರ್ಹೇತುಕವೆನಿಸುವುದು. ಹೇತುವಿನ ಆವಶ್ಯ ಕತೆ ಇದ್ದರೂ ಸಹ ಅದನ್ನು ಹೇಳದೇ ಇರುವುದರಿಂದ ಆದಕ್ಕಾಗಿ ಆಲೋಚನೆಮಾಡು ವವನಿಗೆ ರಸಾನುಭವದಲ್ಲಿ ವಿಳಂಬವಾಗುವುದರಿಂದ ಇದು ದೋಷವೆನಿಸಿದೆ. ಇದು ಅನಿತ್ಯದೋಷವೆನಿಸಿದೆ. ವಿಷಯವು ಪ್ರಸಿದ್ಧವಾಗಿದ್ದರೆ ಅದಕ್ಕೆ ಹೇತುವನ್ನು ಹೇಳ ಬೇಕಾಗದೇ ಇರುವ ಪ್ರಯುಕ್ತ ನಿರ್ಹೇತುಕವೆಂಬುದು ದೋಷವೇ ಆಗುವುದಿಲ್ಲ. ವೇಣೀಸಂಹಾರದಲ್ಲಿ ಆಶ್ವತ್ಥಾಮನು ತನ್ನ ಶಸ್ತ್ರವನ್ನು ಉದ್ದೇಶಿಸಿ ಹೇಳುವ ಪದ್ಯದಲ್ಲಿ ಈ ದೋಷವನ್ನು ಕಾಣಬಹುದು. "ಎಲೈ ಶಸ್ತವೇ, ನನ್ನ ತಂದೆಯಾದ ದ್ರೋಣನು ಬೇರೆಯವರಿಂದ ಆದ ಅವಮಾನದ ಭಯದಿಂದ ಬ್ರಾಹ್ಮಣಧರ್ಮಕ್ಕೆ ವಿರುದ್ಧವಾಗಿ ನಿನ್ನನ್ನು ಕೈಯಲ್ಲಿ ಹಿಡಿದದ್ದಾಯಿತು. ಹಾಗೆಯೇ ಅವನ ಪ್ರಭಾವದಿಂದ ದೇವ ಮನುಷ್ಯರಲ್ಲಿ ಯಾವನೊಬ್ಬನೂ ನಿನಗೆ ಗುರಿಯಾಗಲಿಲ್ಲ. ಅವನು ಮಗನು ಸತ್ತನೆಂಬ ಸುಳ್ಳುವರ್ತಮಾನವನ್ನು ಕೇಳಿ ಮಗನ ಮೇಲಿನ ಪ್ರೇಮದಿಂದ ನಿನ್ನನ್ನು ತೊರೆದದ್ದೂ ಆಯಿತು; ಆದರೆ ಯಾರಿಗೂ ಹೆದರಿ ಅವನು ನಿನ್ನನ್ನು ತೊರೆಯಲಿಲ್ಲ. ಅಂತಹ ನಿನ್ನನ್ನು ನಾನೂ ಸಹ ಇಂದು ತೊರೆಯುವೆನು. ನನ್ನಿಂದ ಮುಂದೆ ಹೊರಡಲಿರುವ ನಿನಗೆ ಮಂಗಳವಾಗಲಿ" ಇಲ್ಲಿ ಅಶ್ವತ್ಥಾಮನು ಶಸ್ತ್ರವನ್ನು ತೊರೆಯಲಿಕ್ಕೆ ಕಾರಣವನ್ನು ಹೇಳದೆ ಇರುವುದರಿಂದ ಇದು ನಿರ್ಹೇತುಕವಾಕ್ಯವೆನಿಸಿದೆ.

ಪ್ರಕಾಶಿತವಿರುದ್ಧವೆಂಬ ದೋಷವನ್ನು ಉದಾಹರಿಸುತ್ತಾನೆ. "ಎಲೈ ಮಹಾ ರಾಜನೇ, ನಿನ್ನ ಮಗನು ರಾಜ್ಯಲಕ್ಷ್ಮಿಯನ್ನು ಹೊಂದಲಿ" ಇಲ್ಲಿ ತಂದೆಯು ಜೀವಿಸಿರು ವಾಗ ಮಗನಿಗೆ ರಾಜ್ಯಪ್ರಾಪ್ತಿಯಾಗುವ ಸಂಭವವಿಲ್ಲದ್ದರಿಂದ " ನೀನು ಸಾಯಬೇಕು ಅನಂತರ ನಿನ್ನ ಮಗನಿಗೆ ರಾಜಲಕ್ಷ್ಮಿಯು ಬರಬೇಕು" ಎಂಬ ಅನಿಷ್ಟವಾದ ಅರ್ಥವು ಪ್ರಕಾಶವಾಗುತ್ತದೆ. ಹೀಗೆ ಅನಿಷ್ಟವಾದ ಅರ್ಥವನ್ನು ಪ್ರಕಾಶಪಡಿಸುವುದೇ ಪ್ರಕಾಶಿತ

ವಿರುದ್ಧವೆನಿಸುವುದು. ಅನಿಷ್ಟವಾದ ಅರ್ಥವನ್ನು ಪ್ರಕಾಶಪಡಿಸುವುದರಿಂದ ಕೇಳುವವನಿಗೆ ಉದ್ವೇಗವುಂಟಾಗುತ್ತದೆ. ಆಗ ಚಮತ್ಕಾರವನ್ನು ಹುಟ್ಟಿಸುವ ರಸದ ಪ್ರಕರ್ಷವು ಕೆಡುವ ಪ್ರಯುಕ್ತ ಇದು ದೋಷವೆನಿಸಿದೆ. ವಿರುದ್ಧ ಮತಿಕಾರಿತ್ವವೆಂಬ ದೋಷದಲ್ಲೂ ಹೀಗೆಯೇ ಅನಿಷ್ಟಾರ್ಥವು ತೋರುವುದರಿಂದ ಇವೆರಡಕ್ಕೂ ಭೇದವೇನೆಂದರೆ ಅದು ಶಬ್ದಕ್ಕೆ ಸಂಬಂಧಿಸಿದ ದೋಷವೆನಿಸುತ್ತದೆ ಎಂಬುದೇ ಇವೆರಡಕ್ಕೂ ಇರುವ ಭೇದವೆಂದು ತಿಳಿಯಬೇಕು. ಇಲ್ಲಿ ಕುಮಾರ ಎಂಬ ಶಬ್ದವನ್ನು ಬದಲಾಯಿಸಿದರೂ ಸಹ ಇಂತಹ ಅರ್ಥವು ತೋರಿದರೆಯೇ ಇದು ದೋಷನಿನಿಸುತ್ತದೆ ಯಾದ್ದರಿಂದ ಇದು ಅರ್ಥಕ್ಕೆ ಸಂಬಂಧಿಸಿದ ದೋಷವೆನಿಸುವುದು.

"ಎಲೈ ಜ್ಞಾನಿಗಳೇ, ನಾನು ಈಶ್ವರೋಪಾಸನೆಗೆ ಪರ್ವತಗಳನ್ನಾಗಲೀ, ಸುರತ ಸಂಭೋಗಕ್ಕೆ ಸ್ತ್ರೀಯನ್ನಾಗಲೀ ಆಶ್ರಯಿಸಬೇಕೆಂದು ನೀವು ಉಪದೇಶಿಸಿರುವಿರಿ" ಇಲ್ಲಿ ಈ ಮಾತನ್ನು ಹೇಳುವವನು ಅಚಲಾ ಅಬಲಾವಾ ಎಂದು ಎರಡು ಕಡೆಗಳಲ್ಲೂ ವಾಶಬ್ದವನ್ನು ಹೇಳಿರುವುದರಿಂದಲೂ, ಪ್ರಕರಣವು ತಿಳಿಯದಿರುವುದರಿಂದಲೂ ಅವನು ಶಾಂತನೇ ಶೃಂಗಾರಿಯೇ ಎಂಬ ಬಗ್ಗೆ ನಿಶ್ಚಯವು ತಿಳಿಯದೇ ಇರುವ ಪ್ರಯುಕ್ತ ಇದು ಸಂದಿಗ್ಧವೆಂಬ ದೋಷವೆನಿಸಿದೆ. ಸಂದೇಹಕ್ಕೆ ವಿಷಯವಾದ ಅರ್ಥವನ್ನು ತಿಳಿಸುವುದರಿಂದ ನಿಶ್ಚಯವು ತಿಳಿಯದೇ ಇರುವ ಪ್ರಯುಕ್ತ ರಸಪ್ರತೀತಿಗಳಿಗೆ ವಿಳಂಬವುಂಟಾಗುವುದು. ಇದೂ ಅನಿತ್ಯದೋಷವೇ ಆಗಿದೆ; ಸಂದಿಗ್ಧವಾದ ವಿಷಯವು ವ್ಯಾಜಸ್ತುತಿಯಲ್ಲಿ ಕೊನೆಗೊಂಡರೆ ಅಲ್ಲಿ ಇದು ದೋಷವಾಗುವುದಿಲ್ಲ. ಒಬ್ಬನು ತಿಳಿದ ಅರ್ಥವನ್ನು ಮತ್ತೆ ತಿಳಿಸುವುದೇ ಪುನರುಕ್ತವೆನಿಸುವುದು. ಎರಡನೆಯಸಾರಿ ಈ ಅರ್ಥವನ್ನು ಏಕೆ ತಿಳಿಸಿದನೆಂಬುದಕ್ಕೆ ಕಾರಣವನ್ನು ಹುಡುಕುವ ವಿಳಂಬದಿಂದ ರಸಪ್ರತೀತಿಯೂ ವಿಳಂಬವಾಗುವಪ್ರಯುಕ್ತ ಇದು ದೋಷವೆನಿಸುವುದು. ಒಂದೇರೀತಿಯ ಒಂದು ಶಬ್ದವನ್ನು ಎರಡುವೇಳೆ ಪ್ರಯೋಗಿಸಿದರೆ ಕಥಿತಪದವೆನಿಸುವುದು. ಬೇರೆ ರೀತಿಯ ಶಬ್ದಗಳಿಂದ ಒಂದೇ ಅರ್ಥವನ್ನು ಎರಡುವೇಳೆತಿಳಿಸುವುದೇ ಪುನರುಕ್ತ ಎನಿಸುವುದು. ಬೇರೆ ಪ್ರಮಾಣದಿಂದ ತಿಳಿದುಬರುವ ಅರ್ಥವನ್ನು ಶಬ್ದದಿಂದ ಮತ್ತೆ ತಿಳಿಸುವುದೇ ಅಪುಷ್ಟತೆಎನಿಸುವುದು. ಶಬ್ದದಿಂದಲೇ ತಿಳಿದುಬರುವ ಅರ್ಥವನ್ನು ಶಬ್ದದಿಂದಲೇ ಮತ್ತೆ ತಿಳಿಸುವುದೇ ಪುನರುಕ್ತ ಎನಿಸುವುದು. ಅಪುಷ್ಟತೆಯಲ್ಲಿ ಆಕಾಶದ ವಿಸ್ತಾರವೆಂಬುದನ್ನು ಪ್ರತ್ಯಕ್ಷದಿಂದಲೂ ತಿಳಿಯಬಹುದು. ಪುನರುಕ್ತಿಯಲ್ಲಿ ಹಾಗೆ ಇರದೇ ಶಬ್ದದಿಂದಲೇ ಅರ್ಥವು ಮೊದಲು ತಿಳಿದುಬಂದಿದ್ದು ಅದನ್ನು ಮತ್ತೆ ಶಬ್ದದಿಂದಲೇ ತಿಳಿಸಬೇಕು. "ವಿಚಾರಮಾಡದೆ ಯಾವ ಕಾರ್ಯವನ್ನೂ ಮಾಡಬಾರದು; ಯಾಕೆಂದರೆ ವಿವೇಚನೆ ಇಲ್ಲದೆ ಕಾರ್ಯವನ್ನು ಮಾಡುವುದೇ ಮಹಾವಿಪತ್ತುಗಳ ಮೂಲವೆನಿಸಿದೆ. ಗುಣದಲ್ಲಿ ರಮಿಸುವ ಸಂಪತ್ತು ವಿವೇಚನೆಯಿಂದ ಕೆಲಸವನ್ನು ಮಾಡುವವನಲ್ಲಿಗೆ ತಾನಾಗಿಯೇ ಹುಡುಕಿಕೊಂಡು ಹೋಗುತ್ತದೆ." ಇಲ್ಲಿ ದ್ವಿತೀಯಾರ್ಥದಲ್ಲಿ ವಿಪರೀತವಾದ ರೀತಿಯಲ್ಲಿ ಎರಡನೆಯ ಪಾದದ ಅರ್ಥವನ್ನೇ ತಿಳಿಸಲಾಗಿದೆ. 'ಭೋಗ

ವಿಲ್ಲದವನು ಸುಖವಾಗಿರುವನು' ಎಂದು ಹೇಳಿದರೆ ರೋಗಿಗೆ ದುಃಖವಿದೆ' ಎಂಬ ಅರ್ಥವು ಸಹಜವಾಗಿ ತೋರುವುದು. ಹಾಗೆ 'ಅವಿವೇಕವು ಸಂಪತ್ತಿನ ಮೂಲ' ವೆಂಬುದು ತಾನಾಗಿಯೇ ತಿಳಿಯುತ್ತದೆ. ಹೀಗೆ ಹೇಳಿದ್ದನ್ನೇ ಮತ್ತೆ ಹೇಳಿದ್ದರಿಂದ ಇದು ದೋಷವೆನಿಸುತ್ತದೆ.

ಖ್ಯಾತಿವಿರುದ್ಧತೆ ಎಂಬ ದೋಷವನ್ನು ಉದಾಹರಿಸುತ್ತಾನೆ. ಸಮಾಜದಲ್ಲೂ ಕವಿಸಂಪ್ರದಾಯದಲ್ಲೂ ಪ್ರಸಿದ್ಧವಲ್ಲದ್ದನ್ನೂ ಬೇರೆ ರೀತಿಯಲ್ಲಿ ಎಣಿಸುವುದೇ ಖ್ಯಾತಿವಿರುದ್ಧವೆನಿಸುವುದು. "ತೀಕ್ಷ್ಣವಾದ ಶೂಲಾಯುಧವನ್ನು ಹಿಡಿದಿರುವ ಹರಿಯು ಯುದ್ಧದಲ್ಲಿ ಸಂಚರಿಸಿದನು" ಇಲ್ಲಿ ಹರಿಗೆ ತ್ರಿಶೂಲವಿದೆ ಎಂಬುದು ಲೋಕದಲ್ಲಿ ಎಲ್ಲಿಯೂ ಪ್ರಸಿದ್ಧವಿಲ್ಲ. "ಎಲೈ ಪ್ರೇಯಸಿ, ನಿನ್ನ ಪಾದದ ಹೊಡೆತದಿಂದ ಅಶೋಕವೃಕ್ಷದಲ್ಲಿ ಮೊಳಕೆಯನ್ನು ಹುಟ್ಟಿಸುವ ಮುಳ್ಳುಗಳು ಕಾಣಿಸಿಕೊಂಡವು" ಇಲ್ಲಿ ಪಾದಾಘಾತದಿಂದ ಅಶೋಕವೃಕ್ಷದಲ್ಲಿ ಪುಷ್ಪವೇ ಹುಟ್ಟುವುದೇ ಹೊರತು ಅಂಕುರ ಹುಟ್ಟುವುದಿಲ್ಲವೆಂದಬುದು ಲೋಕಪ್ರಸಿದ್ಧವಾಗಿದೆ. ಅದಕ್ಕೆ ವಿರುದ್ಧವಾಗಿ ವರ್ಣಿಸಿದ್ದು ಕವಿಸಮಯಕ್ಕೂ ವಿರುದ್ಧವೆನಿಸಿದೆ. ವ್ಯಾಕರಣವನ್ನು ಬಿಟ್ಟು ಉಳಿದ ಶಾಸ್ತ್ರಗಳ ನಿಯಮಕ್ಕೆ ವಿರುದ್ಧವಾಗಿರುವುದು ವಿದ್ಯಾವಿರುದ್ಧವೆನಿಸುತ್ತದೆ. ವ್ಯಾಕರಣಶಾಸ್ತ್ರದ ನಿಯಮಕ್ಕೆ ವಿರುದ್ಧವಾಗಿರುವುದು ಚ್ಯುತಸಂಸ್ಕಾರವೆನಿಸುವುದರಿಂದ ಅದನ್ನು ಬಿಟ್ಟು ಉಳಿದ ಶಾಸ್ತ್ರಗಳನ್ನು ಇಲ್ಲಿ ಗ್ರಹಿಸಬೇಕು. ಹಾಸ್ಯರಸದಲ್ಲಿ ಹೀಗೆ ನಿಯಮವನ್ನು ಉಲ್ಲಂಘಿಸುವುದರಲ್ಲಿ ಗುಣವಿರುವುದರಿಂದ ಇದು ಅನಿತ್ಯದೋಷವೆನಿಸುವುದು. "ಜಿಂಕೆಯಂತೆ ಕಣ್ಣುಗಳಿರುವ ಆ ಸುಂದರಿಗೆ ತುಟಿಯಲ್ಲಿ ಉಗುರಿನಿಂದ ಜಿಗುಟಿದ ಗುರುತಿದೆ." ಇಲ್ಲಿ ತುಟಿಯಲ್ಲಿ ಉಗುರಿನಿಂದ ಜಿಗುಟುವುದು ಶೃಂಗಾರಶಾಸ್ತ್ರಕ್ಕೆ ವಿರುದ್ಧವೆನಿಸಿದೆ. ತುಟಿಯನ್ನು ಹಲ್ಲಿನಿಂದ ಕಚ್ಚಬೇಕೇ ಹೊರತು ಉಗುರಿನಿಂದ ಕಚ್ಚುವುದು ಯುಕ್ತವಲ್ಲ. ಹೀಗೆಯೇ ಬೇರೆ ಶಾಸ್ತ್ರಗಳಿಗೆ ವಿರುದ್ಧವಾದುದೂ ದೋಷವೆನಿಸುವುದು. "ಈ ಬ್ರಾಹ್ಮಣನು ಪ್ರಾತಸ್ಸಂಧ್ಯೆಯನ್ನು ಮಧ್ಯಾಹ್ನಕಾಲದಲ್ಲಿ ಮಾಡುವನು". ಬ್ರಾಹ್ಮೀ ಮುಹೂರ್ತದಲ್ಲಿ ಮಾಡಬೇಕಾಗಿರುವ ಪ್ರಾತಃಕಾಲದ ಸಂಧ್ಯಾವಂದನೆಯನ್ನು ಮಧ್ಯಾಹ್ನದಲ್ಲಿ ಮಾಡಿದ್ದಾಗಿ ಹೇಳಿದ್ದರಿಂದ ಇದು ಸ್ಮೃತಿಶಾಸ್ತ್ರಕ್ಕೆ ವಿರುದ್ಧವೆನಿಸಿದೆ.

ಈಗ ಸಾಕಾಂಕ್ಷತೆಯೆಂಬ ದೋಷವನ್ನು ಉದಾಹರಿಸುತ್ತಾನೆ. ಅಯುಕ್ತವಾದ ಅರ್ಥವನ್ನು ಯುಕ್ತಿಯುಕ್ತವೆಂದು ತಿಳಿಸಲಿಕ್ಕಾಗಿ ಅನುಕ್ತವಾದ ಅರ್ಥವನ್ನು ಅಪೇಕ್ಷಿಸುವುದೇ ಸಾಂಕಾಂಕ್ಷತ್ವವೆನಿಸುವುದು. ನಿರ್ಹೇತುತ್ವವೆಂಬ ದೋಷದಲ್ಲಿ ಹೇತುವಿನ ಆಕಾಂಕ್ಷೆ ಇರುತ್ತದೆ. ಹೇತುವಿಲ್ಲದೆ ಇದ್ದರೆ ಅರ್ಥವು ಅಯುಕ್ತವೆನಿಸುವುದೆಂಬ ಅಂಶವು ತೋರುವುದಿಲ್ಲ. ಇಲ್ಲಿಯಾದರೂ ಆಕಾಂಕ್ಷಿತವಾದ ಅನುಕಾರ್ಥವಿಲ್ಲದೆ ಇದ್ದರೆ ಅಲ್ಲಿ ತಿಳಿಸಿರುವ ಅರ್ಥವು ಅಯುಕ್ತವೆನಿಸುತ್ತದೆ. ಇದೇ ಇವೆರಡಕ್ಕೂ ಇರುವ ಭೇದ. ಆದ್ದರಿಂದಲೇ ಇದಕ್ಕೂ ನ್ಯೂನಪದಕ್ಕೂ ಭೇಧವಿದೆ ಎಂದು ತಿಳಿಯಬೇಕು. ಆಕಾಂಕ್ಷಿತವಾದ ಅರ್ಥವನ್ನು ಹೇಳದೆ ಇರುವುದರಿಂದ ವಿವಕ್ಷಿತವಾದ ಅರ್ಥವೇ ತಿಳಿಯದೇ ಇರುವ

ಪ್ರಯುಕ್ತ ರಸಪ್ರತೀತಿಯು ಆಗದಿರುವುದರಿಂದ ಇದು ದೋಷವೆನಿಸಿದೆ. "ಪರಶುರಾಮನು ಈಗ ಶಿವನ ಧನುಸ್ಸಿನ ಭಂಗವನ್ನೂ, ಕ್ಷತ್ರಿಯವಂಶದ ಔನ್ನತ್ಯವನ್ನೂ ಸೀತೆ ಎಂಬ ಸ್ತ್ರೀರತ್ನವನ್ನೂ ಉಪೇಕ್ಷಿಸಲು ಹೇಗೆತಾನೆ ಸಹಿಸಿಯಾನು ?" ಇಲ್ಲಿ ತನ್ನ ಗುರುವೆನಿಸಿದ ಶಿವನ ಧನುರ್ಭಂಗವೂ ಕ್ಷತ್ರಿಯಜಾತಿಯ ಉತ್ಕರ್ಷವೂ ಪರಶುರಾಮನಿಗೆ ಅನಿಷ್ಟವೆನಿಸಿದ್ದರಿಂದ ಅವೆರಡೂ ಅವನಿಗೆ ಅಸಹ್ಯವೆಂಬುದು ಸಂಭವಿಸುತ್ತದೆ. ಆದರೆ ಸ್ತ್ರೀರತ್ನವು ಅವನಿಗೆ ಹೇಗೆ ಅನಿಷ್ಟವೆನಿಸೀತು ? ಅದನ್ನು ಇಲ್ಲಿ ತಿಳಿಸಿದ್ದು ಅಯುಕ್ತವೆನಿಸಿದೆ. ಅದನ್ನು ತಿಳಿಸಿದ್ದರಿಂದ ಅದನ್ನು ಉಪಪಾದಿಸಲಿಕ್ಕಾಗಿ ಅನುಕ್ತವಾದ ಬೇರೊಂದು ಅರ್ಥವು ಇಲ್ಲಿ ಅವಶ್ಯವಾಗಿ ಬೇಕಾಗಿದೆ. ಆದ್ದರಿಂದ ಇದು ಸಾಕಾಂಕ್ಷ ದೋಷವೆನಿಸಿದೆ.

ಸಜ್ಜನೋ ದುರ್ಗತೌ ಮಗ್ನಃ ಕಾಮಿನೀ ಗಲಿತಸ್ತನೀ ।
ಖಲಃ ಪೂಜ್ಯಃ ಸಮಜ್ಯಾಯಾಂ ತಾಪಾಯ ಮಮ ಚೇತಸಃ ॥

ಅತ್ರ ಸಜ್ಜನಃ ಕಾಮಿನೀ ಚ ಶೋಭನೌ ತತ್ಸಹಚರಃ ಖಲೋಽಶೋಭನ ಇತಿ ಸಹಚರಭಿನ್ನತ್ವಮ್.

ಆಜ್ಞಾ ಶಕ್ರಶಿಖಾಮಣಿಪ್ರಣಯಿನೀ ಶಾಸ್ತ್ರಾಣಿ ಚಕ್ಷುರ್ನವಂ
ಭಕ್ತಿರ್ಭೂತಪತೌ ಪಿನಾಕಿನಿ ಪದಂ ಲಂಕೇತಿ ದಿವ್ಯಾ ಪುರೀ
ಉತ್ಪತ್ತಿರ್ದ್ರುಹಿಣಾನ್ವಯೇ ಚ ತದಹೋ ನೇದೃಗ್ವರೋ ಲಭ್ಯತೇ
ಸ್ಯಾಚ್ಚೇದೇಷ ನ ರಾವಣಃ ಕ್ವ ನು ಪುನಃ ಸರ್ವತ್ರ ಸರ್ವೇ ಗುಣಾಃ ॥

ಅತ್ರ ಚ 'ರಾವಣ' ಇತ್ಯೇತಾವತ್ಯೈವ ಸಮಾಪ್ಯಮ್.

ಹೀರಕಾಣಾಂ ನಿಧೇರಸ್ಯ ಸಿಂಧೋಃ ಕಿಂ ವರ್ಣಯಾಮಹೇ ।

ಅತ್ರ ರತ್ನಾನಾಂ ನಿಧೇರಿತ್ಯವಿಶೇಷ ಏವ ವಾಚ್ಯಃ.

ಆವರ್ತ ಏವ ನಾಭಿಸ್ತೇ ನೇತ್ರೇ ನೀಲಸರೋರುಹೇ ।
ತರಂಗಾ ವಲಯಸ್ತೇನ ತ್ವಂ ಲಾವಣ್ಯಾಂಬುವಾಪಿಕಾ ॥

ಅತ್ರ ಆವರ್ತ ಏವೇತಿ ನಿಯಮೋ ನ ವಾಚ್ಯಃ.

ಯಾಂತಿ ನೀಲನಿಚೋಲಿನ್ಯೋ ರಜನೀಷ್ವಭಿಸಾರಿಕಾಃ ।

ಅತ್ರ ತಮಿಸ್ರಾಸ್ವಿತಿ ರಜನೀವಿಶೇಷೋ ವಾಚ್ಯಃ.

ಆಪಾತಸುರಸೇ ಭೋಗೇ ನಿಮಗ್ನಾಃ ಕಿಂ ನ ಕುರ್ವತೇ ॥

ಅತ್ರ ಆಪಾತ ಏವೇತಿ ನಿಯಮೋ ವಾಚ್ಯಃ. ನನು ವಾಚ್ಯಸ್ಯಾನಭಿಧಾನೇ 'ವ್ಯತಿಕ್ರಮಲವಮ್' ಇತ್ಯಾದಾವಪೇರಭಾವಃ, ಇಹ ಚ ಏವಕಾರಸ್ಯೇತಿ ಕೋಽನಯೋರ್ಭೇದಃ ? ಅತ್ರಾಹ "ನಿಯಮಸ್ಯಾವಚನಮೇವ ಪೃಥಗ್ಭೂತಂ ನಿಯಮಪರಿವೃತ್ತೇರ್ವಿಷಯಃ ಇತಿ, ತನ್ನ. ತಥಾ ಸತ್ಯಪಿ ದ್ವಯೋಃ ಶಬ್ದಾರ್ಥದೋಷತಾಯಾಂ ನಿಯಾಮಕಾಭಾವಾತ್. ತತ್ ಕಾ ಗತಿರಿತಿ ಚೇತ್ 'ವ್ಯತಿಕ್ರಮಲವಮ್' ಇತ್ಯಾತೌ ಶಬ್ದೋಚ್ಚಾರಣಾನಂತರಮೇವ ದೋಷಪ್ರತಿಭಾಸಃ ಇಹ ತು ಅರ್ಥಪ್ರತ್ಯಾಯನಾನಂತರಮಿತಿ ಭೇದಃ.

ಏವಂ ಚ ಶಬ್ದಪರಿವೃತ್ತಿಸಹತ್ವಾಸಹತ್ವಾಭ್ಯಾಂ ಪೂರ್ವೈರಾದೃತೋಽಪಿ ಶಬ್ದಾರ್ಥದೋಷವಿಭಾಗ ಏವಂ ಪರ್ಯವಸ್ಯತಿ, ಯೋ ದೋಷಃ ಶಬ್ದಪರಿವೃತ್ತ್ಯಸಹಃ ಸ ಶಬ್ದದೋಷಃ ಏವ. ಯಶ್ಚ ಪದಾರ್ಥಾನ್ವಯಪ್ರತೀತಿಪೂರ್ವಬೋಧ್ಯಃ ಸೋಽಪಿ ಶಬ್ದದೋಷಃ. ಯಸ್ತ್ವರ್ಥಪ್ರತೀತ್ಯನಂತರಬೋಧ್ಯಃ ಸೋಽರ್ಥಾಶ್ರಯ ಇತಿ.

ಏವಂ ಚ ಅನಿಯಮಪರಿವೃತ್ತಿತ್ವಾದೇರಪ್ಯಧಿಕಪದತ್ವಾದೇರ್ಭೇದೋ ಬೋದ್ಧವ್ಯಃ ಅಮತಪರಾರ್ಥತ್ವೇ ತು "ರಾಮಮನ್ಮಥಶರೇಣ" ಇತ್ಯಾದೌ ನಿಯಮೇನ ವಾಕ್ಯವ್ಯಾಪಿತ್ವಾಭಿಪ್ರಾಯಾದ್ವಾಕ್ಯದೋಷತಾ. ಅಶ್ಲೀಲತ್ವಾದೌ ತು ನ ನಿಯಮೇನ ವಾಕ್ಯವ್ಯಾಪಿತ್ವಮ್.

ಆನಂದಿತಸ್ವಪಕ್ಷೋಽಸೌ ಪರಪಕ್ಷಾನ್ ಹನಿಷ್ಯತಿ ।

ಅತ್ರ ಪರಪಕ್ಷಂ ಹತ್ವಾ ಸ್ವಪಕ್ಷಮಾನಂದಯಿಷ್ಯತೀತಿ ವಿಧೇಯಮ್.

ಚಂಡೀಶ ! ಚೂಡಾಭರಣ ! ಚಂದ್ರ ! ಲೋಕತಮೋಽಪಹ ।
ವಿರಹಿಪ್ರಾಣಹರಣ ! ಕದರ್ಥಯ ನ ಮಾಂ ವೃಥಾ ॥

ಅತ್ರ ವಿರಹಿಣ ಉಕ್ತೌ ತೃತೀಯಪಾದಸ್ಯಾರ್ಥೋ ನಾನುವಾದ್ಯಃ.

ಲಗ್ನಂ ರಾಗಾವೃತಾಂಗ್ಯಾ ಸುದೃಢಮಿಹ ಯಯೈವಾಸಿಯಷ್ಟ್ಯಾರಿಕಂಠೇ
ಮಾತಂಗಾನಾಮಪೀಹೋಪರಿ ಪರಪುರುಷೈರ್ಯಾ ಚ ದೃಷ್ಟಾ ಪತಂತೀ ।
ತತ್ಸಕ್ತೋಽಯಂ ನ ಕಿಂಚಿದ್ಗಣಯತಿ ವಿದಿತಂ ತೇಽಸ್ತು ತೇನಾಸ್ಮಿ ದತ್ತಾ
ಭೃತ್ಯೇಭ್ಯಃ ಶ್ರೀನಿಯೋಗಾದ್ಗದಿತುಮಿತಿ ಗತೇವಾಂಬುಧಿಂ ಯಸ್ಯ ಕೀರ್ತಿಃ ॥

ಅತ್ರ ವಿದಿತಂ ತೇಽಸ್ತ್ವಿತ್ಯನೇನ ಸಮಾಪಿತಮಪಿ ವಚನಂ ತೇನೇತ್ಯಾದಿನಾ ಪುನರುಪಾತ್ತಮ್. ಅಥ ರಸದೋಷಾನಾಹ—

ರಸಸ್ಯೋಕ್ತಿಃ ಸ್ವಶಬ್ದೇನ ಸ್ಥಾಯಿಸಂಚಾರಿಣೋರಪಿ ।
ಪರಿಪಂಥಿರಸಾಂಗಸ್ಯ ವಿಭಾವಾದೇಃ ಪರಿಗ್ರಹಃ ॥
ಆಕ್ಷೇಪಃ ಕಲ್ಪಿತಃ ಕೃಚ್ಛ್ರಾದನುಭಾವವಿಭಾವಯೋಃ ।
ಅಕಾಂಡೇ ಪ್ರಥನಚ್ಛೇದೌ ತಥಾ ದೀಪ್ತಿಃ ಪುನಃ ಪುನಃ ॥
ಅಂಗಿನೋಽನನುಸಂಧಾನಂ ಅನಂಗಸ್ಯ ಚ ಕೀರ್ತನಮ್ ।
ಅತಿವಿಸ್ತೃತಿರಂಗಸ್ಯ ಪ್ರಕೃತೀನಾಂ ವಿಪರ್ಯಯಃ ॥
ಅರ್ಥಾನೌಚಿತ್ಯಮನ್ಯಚ್ಚ ದೋಷಾ ರಸಗತಾ ಮತಾಃ ।

ರಸಸ್ಯ ಸ್ವಶಬ್ದೋ ರಸಶಬ್ದಃ ಶೃಂಗಾರಾದಿಶಬ್ದಶ್ಚ ಕ್ರಮೇಣ ಯಥಾ.

ತಾಮುದ್ವೀಕ್ಷ್ಯ ಕುರಂಗಾಕ್ಷೀಂ ರಸೋ ನಃ ಕೋಽಪ್ಯಜಾಯತ ।
ಚಂದ್ರಚಂಚಾಲಮಾಲೋಕ್ಯ ಶೃಂಗಾರೇ ಮಗ್ನಮಂತರಮ್ ॥

ಸ್ಥಾಯಿಭಾವಸ್ಯ ಸ್ವಶಬ್ದವಾಚ್ಯತ್ವಂ ಯಥಾ—

ಅಜಾಯತ ರತಿಸ್ತಸ್ಯಾಸ್ತ್ವಯಿ ಲೋಚನಗೋಚರೇ ।

ವ್ಯಭಿಚಾರಿಣಃ ಸ್ವಶಬ್ದವಾಚ್ಯತ್ವಂ ಯಥಾ—

ಜಾತಾ ಲಜ್ಜಾವತೀ ಮುಗ್ಧಾ ಪ್ರಿಯಸ್ಯ ಪರಿಚುಂಬನೇ ।

ಅತ್ರ ಪ್ರಥಮೇ ಪಾದೇ 'ಆಸೀನ್ಮುಕುಲಿತಾಕ್ಷೀ ಸಾ' ಇತಿ ಲಜ್ಜಾಯಾ ಅನುಭಾವಮುಖೇನ ಕಥನೇ ಯುಕ್ತಃ ಪಾಠಃ.

ಮಾನಂ ಮಾ ಕುರು ತನ್ವಂಗಿ ! ಜ್ಞಾತ್ವಾ ಯೌವನಮಸ್ಥಿರಮ್ ।

ಅತ್ರ ಯೌವನಾಸ್ಥೈರ್ಯನಿವೇದನಂ ಶೃಂಗಾರರಸಸ್ಯ ಪರಿಪಂಥಿನಃ ಶಾಂತರಸಸ್ಯಾಂಗಂ ಶಾಂತಸ್ಯೈವ ಚ ವಿಭಾವ ಇತಿ ಶೃಂಗಾರೇ ತತ್ಪರಿಗ್ರಹೋ ನ ಯುಕ್ತಃ.

ಧವಳಯತಿ ಶಿಶಿರರೋಚಿಷಿ ಭುವನತಲಂ ಲೋಕಲೋಚನಾನಂದೇ ।
ಈಷತಿಕ್ಷಿಪ್ತಕಟಾಕ್ಷಾ ಸ್ಮೇರಮುಖೀ ಸಾ ನಿರೀಕ್ಷ್ಯತಾಂ ತನ್ವೀ ॥

ಅತ್ರ ರಸಸ್ಯೋದ್ದೀಪನಾಲಂಬನವಿಭಾವೌ ಅನುಭಾವಪರ್ಯವಸಾಯಿನೌ ಸ್ಥಿತಾವಿತಿ ಕಷ್ಟಕಲ್ಪನಾ.

ಸಹಚರಭಿನ್ನತೆ ಎಂಬ ದೋಷವನ್ನು ಉದಾಹರಿಸುತ್ತಾನೆ. ಉತ್ಕೃಷ್ಟ ಮತ್ತು ಅಪಕೃಷ್ಟವಾದ ವಸ್ತುಗಳನ್ನು ಒಂದೇ ರೀತಿಯಲ್ಲಿ ಒಂದು ಕಡೆ ತಿಳಿಸುವುದೇ ಸಹಚರಭಿನ್ನತೆ ಎನಿಸುವುದು. "ಸತ್ಪುರುಷನು ದುಃಖದಲ್ಲಿ ಸಿಕ್ಕುವುದು, ಕಾಮಿನಿಯು ಸ್ತನಗಳನ್ನು ಕಳೆದುಕೊಳ್ಳುವುದು, ನೀಚನು ಸಭೆಯಲ್ಲಿ ಪೂಜ್ಯನೆನಿಸುವುದು, ಇವೆಲ್ಲವೂ ನನ್ನ ಮನಸ್ಸಿಗೆ ತಾಪವನ್ನು ಕೊಡುತ್ತವೆ." ಇಲ್ಲಿ ಸಜ್ಜನಕಾಮಿನಿ ಇವರಿಬ್ಬರೂ ಉತ್ಕೃಷ್ಟವ್ಯಕ್ತಿಗಳು. ಅವರ ಜೊತೆಯಲ್ಲಿ ಅಪಕೃಷ್ಟನೆನಿಸಿದ ನೀಚನನ್ನು ಸೇರಿಸಿ ಹೇಳಿದ್ದು ಸಹಚರಭಿನ್ನವೆನಿಸಿದೆ.

ಅಸ್ಥಾನಯುಕ್ತತೆ ಎಂಬ ದೋಷವನ್ನು ಉದಾಹರಿಸುತ್ತಾನೆ. ಎಲ್ಲಿ ವಾಕ್ಯಾರ್ಥವು ಕೊನೆಗಾಣಬೇಕೋ ಅಲ್ಲಿ ಕೊನೆಗಾಣದೆ ಅಯೋಗ್ಯವಾದೆಡೆಯಲ್ಲಿ ಅದು ಕೊನೆಗಾಣುವುದೇ ಅಸ್ಥಾನಯುಕ್ತತೆ ಎನಿಸುವುದು. ಎಲ್ಲಿ ವಾಕ್ಯಾರ್ಥವು ಕೊನೆಯಾಗಬೇಕೋ ಅಲ್ಲಿ ಹೆಚ್ಚು ಹೇಳಿರುವುದು, ಎಲ್ಲಿ ಹೆಚ್ಚು ಹೇಳಬೇಕಾಗಿದೆಯೋ ಅಲ್ಲಿ ವಾಕ್ಯಾರ್ಥವು ಕೊನೆಯಾಗಿರುವುದು ಹೀಗೆ ಇದು ಎರಡುಬಗೆಯಾಗಿದೆ. ಮೊದಲನೆಯದರಲ್ಲಿ ಆವಶ್ಯಕವಾದ್ದಕ್ಕಿಂತಲೂ ಹೆಚ್ಚುಹೇಳಿರುವುವಕ್ಕೆ ಕಾರಣವನ್ನು ಚಿಂತಿಸುವುದರಿಂದ ರಸಪ್ರತೀತಿಯು ವಿಳಂಬದಿಂದಾಗುವುದು. ಎರಡನೆಯದರಲ್ಲಿ ಹೆಚ್ಚು ಹೇಳಬೇಕಾಗಿದ್ದರೂ ಹೇಳದೇಇರುವುದರಿಂದ ರಸಪ್ರತೀತಿಯೇ ಅಪೂರ್ಣವಾಗಬೇಕಾದೀತು. ಸಮಾಪ್ತಪುನರಾತ್ತವೆಂಬ ದೋಷದಲ್ಲಿ ವಿಶೇಷಣವನ್ನು ಮತ್ತೆ ತಿಳಿಸಲಾಗುವುದು, ಆದರೆ ವಿಶೇಷ್ಯವನ್ನು ಮತ್ತೆ ತಿಳಿಸಿರುವುದಿಲ್ಲ. ಅಧಿಕಪದವೆಂಬ ದೋಷದಲ್ಲಾದರೋ ಅಲ್ಲಿ ಹೇಳಿರುವ ವಿಷಯವನ್ನು ತಿಳಿಯುವಾಗಲೇ ಇಂತಹ ಪದವು ಅಧಿಕವೆಂಬ ಜ್ಞಾನವುಂಟಾಗುತ್ತದೆ. ಇಲ್ಲಿಯಾದರೋ ಇಂತಹದು ಅಧಿಕವೆಂಬುದು ಅಲ್ಲಿ ಹೇಳಿರುವ ವಿಷಯವನ್ನು ತಿಳಿದಮೇಲೆ ತೋರುತ್ತದೆ. ಈ ಮೂರು ಕಡೆಗಳಲ್ಲಿ ತೋರುವ ಆಧಿಕ್ಯದಲ್ಲೂ ಇಷ್ಟುಸೂಕ್ಷ್ಮಭೇದವಿದೆ. ನ್ಯೂನಪದವೆಂಬ ದೋಷದಲ್ಲಿ ಅನುಕ್ತವಾದ ಪದವು ತನ್ನ ಸಿದ್ಧಿಗಾಗಿ ಅನುಕ್ತವಾದ ಅರ್ಥವನ್ನು ಅಪೇಕ್ಷಿಸುತ್ತದೆ.

ಇಲ್ಲಿಷೂಪನೋ ಅನುಕ್ತವಾದ ಪದವು ತನ್ನ ಸಿದ್ಧಿಗಾಗಿ ಯಾವ ಅರ್ಥವನ್ನೂ ಅಪೇಕ್ಷಿಸುವುದಿಲ್ಲ. ಇದೇ ಇವೆರಡಕ್ಕೂ ಇರುವ ಭೇದ. ಇದರ ಮೊದಲನೆಯ ಬಗೆಯನ್ನು ಬಾಲರಾಮಾಯಣದಲ್ಲಿ ಶತಾನಂದನ ಮಾತಿನಲ್ಲಿ ಕಾಣಬಹುದು. "ಆಜ್ಞೆಯನ್ನು ಇಂದ್ರನೂ ಸಹ ಶಿರಸಾವಹಿಸಿ ನಡೆಸುತ್ತಿದ್ದನು. ಶಾಸ್ತ್ರಜ್ಞಾನವೇ ಹೊಸ ದೃಷ್ಟಿ ಎನಿಸಿತ್ತು. ಪರಮೇಶ್ವರನಲ್ಲಿ ಅವಿಚ್ಛಿನ್ನವಾದ ಭಕ್ತಿಯಿತ್ತು. ಲಂಕೆ ಎಂಬ ದಿವ್ಯವಾದ ಪಟ್ಟಣವೇ ವಾಸಸ್ಥಾನವಾಗಿತ್ತು. ಬ್ರಹ್ಮನ ವಂಶದಲ್ಲಿ ಉತ್ಪತ್ತಿಯೂ ಆಗಿತ್ತು. ಆದ್ದರಿಂದ ಇಂತಹ ಗುಣಶಾಲಿಯಾದವರನ್ನೇ ದೊರೆಯಲಾರನು. ಆದರೆ ಇವನು ದುರಾಚಾರದಿಂದ ರಾವಣನೆನಿಸದಿದ್ದರೆ ಇವನಿಗೇ ಸೀತೆಯನ್ನು ಕೊಡಬಹುದಾಗಿತ್ತು. ಎಲ್ಲರಲ್ಲೂ ಎಲ್ಲಗುಣಗಳೂ ಎಲ್ಲಿ ನೆಲಸಿರಬಲ್ಲವು ?" ಇಲ್ಲಿ 'ನ ರಾವಣಃ' ಎಂಬಲ್ಲಿಯೇ ವಾಕ್ಯಾರ್ಥವು ಮುಗಿದಿದ್ದರೆ ಚೆನ್ನಾಗಿತ್ತು; ಆದರೆ ಅಲ್ಲಿಂದ ಮುಂದೆ 'ಕ್ವ ನು ಪುನಃ' ಎಂದು ಮುಂತಾಗಿ ಹೇಳಿದ್ದು ಅನಾವಶ್ಯಕವೆನಿಸಿದ್ದರಿಂದ ಇದು ಅಸ್ಥಾನಯುಕ್ತವೆನಿಸಿದೆ. ವಿಶೇಷವಿಲ್ಲದ ಕಡೆ ವಿಶೇಷವಿರುವುದನ್ನು ಉದಾಹರಿಸುತ್ತಾನೆ. "ಹೀರಕವೆಂಬ ರತ್ನಗಳ ನಿಧಿ ಎನಿಸಿದ ಈ ಸಮುದ್ರದ ಬಗ್ಗೆ ಏನೆಂದು ವರ್ಣಿಸೋಣ." ಇಲ್ಲಿ ರತ್ನಗಳ ನಿಧಿ ಎಂದು ಸಾಮಾನ್ಯವಾಗಿ ಹೇಳಬೇಕಾಗಿತ್ತೇ ಹೊರತು ಹೀರಕವೆಂಬ ರತ್ನವಿಶೇಷಗಳ ನಿಧಿ ಎಂಬುವನ್ನು ಹೇಳಬೇಕಾಗಿರಲಿಲ್ಲ. ಹಾಗೆಯೇ ನಿಯಮವಿಲ್ಲದಕಡೆ ನಿಯಮವಿರುವುದನ್ನು ಉದಾಹರಿಸುತ್ತಾನೆ. "ಎಲೈ ಪ್ರೇಯಸಿ, ನಿನ್ನ ನಾಭಿಯು ನೀರಿನ ಸುಳಿಯೇ ಆಗಿದೆ. ಕಣ್ಣುಗಳು ನೀಲೋತ್ಪಲಗಳೆನಿಸಿವೆ; ತ್ರಿವಳಿಗಳು ತರಂಗಗಳೆನಿಸಿವೆ. ಆದ್ದರಿಂದಲೇ ನೀನು ಲಾವಣ್ಯವೆಂಬ ನೀರಿನ ಬಾವಿ ಎನಿಸಿರುವೆ" ಇಲ್ಲಿ 'ಆವರ್ತ ಏವ' ಎಂದು ನಿಯಮವನ್ನು ತಿಳಿಸುವ ಏವ ಶಬ್ದವನ್ನು ಹೇಳಿದ್ದು ಯುಕ್ತವಲ್ಲ. ಅದಕ್ಕೆ ಯಾವ ಪ್ರಯೋಜನವೂ ಇಲ್ಲದ್ದರಿಂದ ಅದು ವ್ಯರ್ಥವೆನಿಸಿತು. ವಿಶೇಷವನ್ನು ತಿಳಿಸಬೇಕಾದಾಗ ಅವನ್ನು ತಿಳಿಸದೆ ಸಾಮಾನ್ಯವನ್ನು ತಿಳಿಸುವುದು ಯುಕ್ತವಲ್ಲವೆಂಬುದನ್ನು ಉದಾಹರಿಸುತ್ತಾನೆ. 'ಕತ್ತಲೆಯಲ್ಲಿ ಯಾರೂ ಕಾಣದಿರಲೆಂದು ಕಪ್ಪು ಬಟ್ಟೆಯನ್ನು ಹೊದ್ದಿರುವ ಅಭಿಸಾರಿಕೆಯರು ರಾತ್ರಿಗಳಲ್ಲಿಯೇ ಹೊರಗೆ ಹೊರಡುವರು" ಇಲ್ಲಿ ಅಭಿಸಾರಿಕೆಯು ಸಾಮಾನ್ಯರಾತ್ರಿಗಳಲ್ಲಿ ಹೊರಡದೆ ಗಾಢಾಂಧಕಾರದಲ್ಲಿಯೇ ಹೊರಡುವುದರಿಂದ ರಾತ್ರಿಯ ವಿಶೇಷವೆನಿಸಿದ ತಾಮಸೀರಾತ್ರಿಯನ್ನು ತಿಳಿಸುವುದೇ ಯುಕ್ತವೆನಿಸುತ್ತದೆ. ತಮಿಸ್ರಾ ಎಂಬ ವಿಶೇಷಕ್ಕೆ ಬದಲಾಗಿ ರಜನೀಷು ಎಂದು ಸಾಮಾನ್ಯವನ್ನು ತಿಳಿಸಿದ್ದು ಇಲ್ಲಿ ದೋಷವೆನಿಸಿದೆ.

ನಿಯಮವನ್ನು ತಿಳಿಸಬೇಕಾಗಿರುವಲ್ಲಿ ಅದನ್ನು ತಿಳಿಸದೆ ಇರುವುದನ್ನು ಉದಾಹರಿಸುತ್ತಾನೆ. ಇಲ್ಲಿ ಅರ್ಥವು ವಿವಕ್ಷಿತವೆಂದು ತೋರದೆ ಇರುವುದರಿಂದ ರಸವು ಚಮತ್ಕಾರಯಾಗದೇ ಇರುವ ಪ್ರಯುಕ್ತ ಇದು ದೋಷವೆನಿಸಿದೆ. "ಮೊದಮೊದಲು ಮಾತ್ರವೇ ಸುಖಕರವಾದ ವಿಷಯಭೋಗದಲ್ಲಿ ನಿರತರಾದವರು ಏನನ್ನು ತಾನೇ ಮಾಡುವುದಿಲ್ಲ ?' ಇಲ್ಲಿ 'ಆಪಾತ ಏವ' ಎಂದು ನಿಯಮವನ್ನು ಏವಕಾರದಿಂದ

ವಿಧಿಸಬೇಕಾಗಿತ್ತು. ಅದರ ಆವಶ್ಯಕತೆ ಇದ್ದರೂ ಇಲ್ಲಿ ತಿಳಿಸದೇ ಇರುವುದು ದೋಷ ವೆನಿಸಿದೆ. ತಿಳಿಸಬೇಕಾದ ವಾಚಾರ್ಥವನ್ನು ತಿಳಿಸದೇ ಇರುವುದು ಒಂದು ದೋಷ ವೆನಿಸಿದೆ. ಅಲ್ಲಿ 'ವ್ಯತಿಕ್ರಮಲವಂ ಕಂ ಮೇ ವೀಕ್ಷ್ಯ ವಾಮಾಕ್ಷಿ ಕುಪ್ಯಸಿ' ಎಂಬಲ್ಲಿ ಅಪಶಬ್ದವಿಲ್ಲದಂತೆಯೇ ಇಲ್ಲಿಯೂ ಏವಕಾರವಿಲ್ಲದ್ದರಿಂದ ಇವೆರಡು ದೋಷಗಳೂ ಒಂದೇ ಬಗೆ ಎನಿಸಿವೆ. ಇವಕ್ಕೆ ಭೇಧವೇನೆಂದರೆ ಅದನ್ನು ತಿಳಿಸುತ್ತಾನೆ. ಎಲ್ಲಿ ನಿಯಮವಿರಬೇಕಾಗಿತ್ತೋ ಅಲ್ಲಿ ಅದನ್ನು ಬೇರೆಯಾಗಿ ತಿಳಿಸದೇ ಇರುವುದೇ ಇವೆರ ಡಕ್ಕೂ ಭೇಧವೆನಿಸಿದೆ ಎಂದು ಹೇಳುವುದಾದರೆ ಇದು ನಿಯಮವನ್ನು ಬದಲಾಯಿಸುವ ಕಡೆಗೆ ಮಾತ್ರವೇ ಅನ್ವಯಿಸುತ್ತದೆ; ಆದರೆ ಬೇರೆ ಕಡೆಗೆ ಅನ್ವಯಿಸುವುದಿಲ್ಲವೆಂದು ಹೇಳಬೇಕಾಗುತ್ತದೆ. ನಿಯಮವನ್ನು ತಿಳಿಸುವ ಶಬ್ದವನ್ನು ಬಾಯಿಂದ ತಿಳಿಸದೇ ಇರುವುದೇ ನಿಯಮೇಽನಿಯಮವೆಂಬ ದೋಷವೆನಿಸುತ್ತದೆ. ಇದಕ್ಕಿಂತ ಬೇರೆ ಅರ್ಥ ವನ್ನು ತಿಳಿಸುವ ಶಬ್ದವನ್ನು ಪ್ರಯೋಗಿಸದಿರುವಕಡೆ ವಾಚ್ಯಾನಭಿಧಾನವೆಂಬ ದೋಷ ವಿರುತ್ತದೆ. ಇದೇ ಇಂರಡಕ್ಕೂ ಇರುವ ಭೇದವೆಂದು ಹೇಳುವುದಾದರೆ ಅದು ಹೊಂದುವು ದಿಲ್ಲ.; ಅವೆರಡರಲ್ಲಿ ಒಂದನ್ನು ಶಬ್ದದೋಷವೆಂದೂ, ಮತ್ತೊಂದನ್ನು ಅರ್ಥದೋಷ ವೆಂದೂ ಭಾವಿಸೋಣವೆಂದರೆ ಹಾಗೆ ಭಾವಿಸಲಿಕ್ಕೆ ಯಾವ ಪ್ರಮಾಣವೂ ಂಡುಬಂ ಬರುವುದಿಲ್ಲ. ಹಾಗಾದರೆ ಅವೆರಡನ್ನೂ ಬೇರಬೇರೆಯಾಗಿ ಏಕೆ ಹೇಳಬೇದರೆಕಕೆ 'ವ್ಯತಿಕ್ರಮಲವಮ್' ಎಂಬಲ್ಲಿ ಶಬ್ದವನ್ನು ಉಚ್ಚರಿಸಿದ ಅನಂತರವೇ ದೋಷವು ತೋರುತ್ತದೆ. ಇಲ್ಲಿಯಾದರೋ ಅರ್ಥವು ತಿಳಿದಮೇಲೆ ಇದು ದೋಷವೆಂಬುದು ತಿಳಿದುಬರುತ್ತದೆ. ಇದೇ ವಾಚ್ಯಾನಭಿಧಾನವೆಂಬ ದೋಷಕ್ಕೂ ನಿಯಮೇಽನಿಯಮ ವೆಂಬ ದೋಷಕ್ಕೂ ಇರುವ ಭೇದವೆಂಬುದು ಸ್ಪಷ್ಟವಾಗುತ್ತದೆ.

ಹೀಗೆ ಶಬ್ದಾರ್ಥಗಳ ಜ್ಞಾನವಾದಮೇಲೆಯೇ ಈ ಶಬ್ದಾರ್ಥಗಳಲ್ಲಿರುವ ದೋಷ ಗಳ ವಿಭಾಗ ಎಂತಹದೆಂದು ಸಿದ್ಧಾಂತಮಾಡುವುದಾದರೆ ಪ್ರಾಚೀನರು ಅಂಗೀಕರಿಸಿದ ವಿಭಾಗವನ್ನೇ ಒಪ್ಪಿದಂತಾಗುತ್ತದೆ. ಅವರಾದರೋ ಶಬ್ದವನ್ನು ಬದಲಾಯಿಸಲು ಸಾಧ್ಯ ವಿರುವಕಡೆ ಅರ್ಥದೋಷವೂ ಉಂಟೆಂದು ವಿಭಾಗಮಾಡುತ್ತಾರೆ. ಯಾವ ದೋಷವು ಶಬ್ದದ ಬದಲಾವಣೆಯನ್ನು ಸಹಿಸಲಾರದೋ ಅದು ಶಬ್ದದ ದೋಷವೇ ಆಗುತ್ತದೆ. ಪದಾರ್ಥಗಳಿಗೆ ಪರಸ್ಪರಸಂಬಂಧವನ್ನು ತಿಳಿಯುವುದಕ್ಕಿಂತ ಮುಂಚೆ ಯಾವುದು ದೋಷವೆಂದು ತಿಳಿದುಬರುವುದೋ ಅದೂ ಶಬ್ದದೋಷವೇ ಆಗುತ್ತದೆ. ಪದಗಳ ಅರ್ಥಗಳು ತಿಳಿದಮೇಲೆ ಕಂಡುಬರುವ ದೋಷಗಳೇ ಅರ್ಥಕ್ಕೆ ಸಂಬಂಧಿಸಿದವೆಂಬುದು ಯುಕ್ತವೆನಿಸುತ್ತದೆ. ಹೀಗೆಯೇ ನಿಯಮವೇ ಬೇಕಿಲ್ಲದಕಡೆ ನಿಯಮವನ್ನು ತಿಳಿಸು ವುದೆಂಬಲ್ಲಿ ಅರ್ಥವು ತೋರಿದಮೇಲೆಯೇ ದೋಷವು ಕಂಡುಬರುವುದು. ಇದರಂತೆ ಅನಿಯಮಪ್ರವೃತ್ತಿಗೂ ಅಧಿಕಪದತ್ವ ದೋಷಕ್ಕೂ ಭೇದವುಂಟೆಂದು ತಿಳಿಯಬೇಕು. ಅಪುತಪರಾರ್ಥವೆಂಬು ದೋಷವು 'ರಾಮಮನ್ಮಥಶರೇಣ' ಎಂಬಲ್ಲಿ ವಾಕ್ಯದೋಷ ವೆನಿಸಿದೆ. ಅಶ್ಲೀಲ ಮೊದಲಾದವು ನಿಯತವಾಗಿ ವಾಕ್ಯವನ್ನು ವ್ಯಾಪಿಸದೆ ಬಂದು ಪದಕ್ಕೆ ಅಂಟಿಕೊಂಡಿರುತ್ತವೆ ಎಂದು ತಿಳಿಯಬೇಕು.

ಈಗ ವಿಧ್ಯೆಯುಕ್ತತೆ ಎಂಬ ದೋಷವನ್ನು ಉದಾಹರಿಸುತ್ತಾನೆ. ಅಯೋಗ್ಯವಾದ ಅಂಶವನ್ನು ವಿಧಿಸುವುದು ವಿಧ್ಯೆಯುಕ್ತತೆ ಎನಿಸುವುದು, ಕೊನೆಗಾಣದೇ ಇರುವ ಕ್ರಿಯೆಯಲ್ಲಿಯೂ ಸಹ ಕೊನೆಗಾಣುವ ಕ್ರಿಯೆಯನ್ನು ಆರೋಪಿಸುವುದರಿಂದ ರಸ ಪ್ರತೀತಿಗೆ ಪ್ರತಿ ಬಂಧವುಂಟಾಗುವ ಪ್ರಯುಕ್ತ ಇದು ದೋಷವೆನಿಸುತ್ತದೆ. 'ತನ್ನ ಕಡೆಯವರನ್ನು ಆನಂದಪಡಿಸುತ್ತಲೇ ಈತನು ಬೇರೆಯವರನ್ನು ಕೊಲ್ಲುವನು' ಇಲ್ಲಿ ಬೇರೆಯವರನ್ನು ಕೊಂದು ತನ್ನ ಕಡೆಯವರನ್ನು ಸಂತೋಷಗೊಳಿಸುವುದು ವಿಧೇಯವೆನಿಸಬೇಕಾಗಿತ್ತು. ಹಾಗಿದ್ದರೆ ಇಲ್ಲಿ ದೋಷವಿರುತ್ತಿರಲಿಲ್ಲ; ಆದರೆ ಅದಕ್ಕೆ ಬದಲಾಗಿ ಅಯುಕ್ತವಾದದ್ದು ಇಲ್ಲಿ ವಿಧೇಯವೆನಿಸಿದ್ದು ದೋಷವೆನಿಸಿದೆ. "ದುರ್ಗಾಪತಿ ಎನಿಸಿದ ಶಿವನ ಶಿಖೆಗೆ ಅಲಂಕಾರವೆನಿಸಿ ವಿರಹಿಗಳ ಪ್ರಾಣವನ್ನು ಅಪಹರಿಸುತ್ತಲೂ, ಲೋಕದ ಕತ್ತಲೆಯನ್ನು ಅಪಹರಿಸುತ್ತಲೂ ಇರುವ ಚಂದ್ರನೇ, ವಿರಹಿಯಾದ ನನ್ನನ್ನು ವ್ಯರ್ಥವಾಗಿ ಕಾಡಿಸಬೇಡ" ಇಲ್ಲಿ ವಿರಹಿಯೊಬ್ಬನು ಹೇಳುವ ಮಾತಿನಲ್ಲಿ ಮೂರನೆಯ ಪಾದದ ಅರ್ಥವನ್ನು ಕರ್ತೃವೆನಿಸಿದ ಚಂದ್ರನಿಗೆ ಅನ್ವಯಿಸುವಂತೆ ಅನುವಾದ ಮಾಡಿದ್ದು ಅನುವಾದಾಯುಕ್ತತೆ ಎಂಬ ದೋಷವೆನಿಸಿದೆ.

ನಿರ್ಮುಕ್ತಪುನರುಕ್ತತೆ ಎಂಬ ಅರ್ಥದೋಷವನ್ನು ಈಗ ಉದಾಹರಿಸುತ್ತಾನೆ. (ವಾಕ್ಯಾರ್ಥವು) ಪರಿಸಮಾಪ್ತವಾಗಿದ್ದರೂ ಬೇರೊಂದು ಕಾರಣದಿಂದ ಅದನ್ನು ಮತ್ತೆ ತಿಳಿಸುವುದೇ ನಿರ್ಮುಕ್ತಪುನರುಕ್ತವೆನಿಸುವುದು. ಬೇರೊಂದು ವಿಶೇಷಣವಷ್ಟರಿಂದಲೇ ವಾಕ್ಯಾರ್ಥವನ್ನು ಮತ್ತೆ ತಿಳಿಸುವುದು ಸಮಾಪ್ತಪುನರಾತ್ತವೆನಿಸಿದರೆ, ವಿಶೇಷ್ಯವೆನಿಸಿದ ಬೇರೊಂದು ಕಾರಣದಿಂದ ಅದನ್ನು ಮತ್ತೆ ತಿಳಿಸುವುದು ನಿರ್ಮುಕ್ತಪುನರುಕ್ತತೆ ಎನಿಸುವುದು. ರಾಜನನ್ನು ಪ್ರಶಂಸಿಸುವ ಈ ಪದ್ಯದಲ್ಲಿ ಈ ದೋಷವನ್ನು ಕಾಣಬಹುದು. "ಶತ್ರುವಿನ ರಕ್ತದಿಂದಲೂ ಅನುರಾಗದಿಂದಲೂ ಎಲ್ಲಾ ಭಾಗಗಳಲ್ಲೂ ವ್ಯಾಪಿಸಿಕೊಂಡಿರುವ ಯಾವ ಕೃಶವಾದ ಕತ್ತಿಯೂ ಅದರಂತೆ ಕೃಶಳಾದ ಸ್ವೈರಿಣಿಸ್ತ್ರೀಯೂ ಇಲ್ಲಿಯೇ ಶತ್ರುಗಳ ಕಂಠದಲ್ಲಿ ಶಿರಶ್ಛೇದಕ್ಕಾಗಿಯೂ ಆಲಿಂಗನಕ್ಕಾಗಿಯೂ ಅಂಟಿಕೊಂಡಿತ್ತೋ, ಯಾವ ಖಡ್ಗವು ಆನೆಗಳ ಮತ್ತು ಆನೆಯ ಲಕ್ಷಣವಿರುವ ಪುರುಷರ ಮೇಲೆ ಅವರ ವಧಕ್ಕಾಗಿ ಬಿದ್ದು ಶತ್ರುವಿನ ಕಡೆಯವರಿಗೂ ಪತಿಯಲ್ಲಿದ್ದ ಬೇರೆ ಜನರಿಗೂ ಕಾಣಿಸಿಕೊಂಡಿತ್ತೋ ಅಂತಹ ಖಡ್ಗದಲ್ಲೂ ಆ ಸ್ವೈರಿಣಿಯಲ್ಲೂ ಆಸಕ್ತನಾದ ನನ್ನ ಪತಿ ಎನಿಸಿದ ಈ ರಾಜನು ನನ್ನ ಸುಖವನ್ನು ಕೊಂಚವೂ ಗಮನಿಸುತ್ತಿಲ್ಲ. ಆದರೆ ಅವನು ನನ್ನನ್ನು ಅವನ ಸೇವಕರಿಗೆ ಒಪ್ಪಿಸಿರುವನೆಂಬುದು ನನ್ನ ತಂದೆಯಾದ ನಿನಗೆ ತಿಳಿದಿರಲಿ. ಅನಂತರ ನಿನ್ನ ಮಗಳ ದುಃಖವಿಮೋಚನೆಗೆ ಮಾಡಬೇಕಾದ್ದನ್ನು ನೀನು ಮಾಡುವೆ. ಹೀಗೆಂದು ಸಮುದ್ರದಲ್ಲಿ ಹುಟ್ಟಿದ ಲಕ್ಷ್ಮಿಯಲ್ಲಿ ತಿಳಿಸಲಿಕ್ಕೋ ಏನೋ ಎಂಬಂತೆ ನಿನ್ನ ಕೀರ್ತಿಯು ಸಮುದ್ರವನ್ನು ಹೊಕ್ಕಿತು" ಇಲ್ಲಿ 'ವಿದಿತಂ ತೇಽಸ್ತು' ಎಂಬುದರಿಂದ ವಾಕ್ಯಾರ್ಥವು ಕೊನೆಗೊಂಡರೂ 'ತೇನಾಸ್ಮಿ ದತ್ತಾ' ಎಂಬುದರಿಂದ ಅದನ್ನೇ ಮತ್ತೆ ತಿಳಿಸಿದ್ದು ದೋಷವೆನಿಸಿದೆ.

ಇನ್ನು ಮುಂದೆ ರಸದೋಷಗಳನ್ನು ತಿಳಿಸುತ್ತಾನೆ. ರಸಶಬ್ದದಿಂದಾಗಲೀ ಶೃಂಗಾರಾದಿಶಬ್ದಗಳಿಂದಾಗಲೀ ರಸವನ್ನು ತಿಳಿಸುವುದು, ಹಾಗೆಯೇ ಸ್ಥಾಯಿಭಾವ ಸಂಚಾರಿಭಾವಗಳನ್ನು ಆಯಾಶಬ್ದಗಳಿಂದ ತಿಳಿಸುವುದು, ವಿರುದ್ಧವಾದ ರಸಕ್ಕೆ ಅಂಗ ವೆನಿಸಿದ ವಿಭಾವ ಮೊದಲಾದವನ್ನು ಶಬ್ದದಿಂದ ತಿಳಿಸುವುದು, ಕಷ್ಟದಿಂದ ಅನುಭಾವ ವಿಭಾವಗಳನ್ನು ಕಲ್ಪಿಸಿಕೊಳ್ಳುವುದು, ಅವಕಾಶವಿಲ್ಲದಕಡೆ ರಸವು ವಿಸ್ತಾರಗೊಳ್ಳು ವುದು, ಹಾಗೆಯೇ ಅದಕ್ಕೆ ಭಂಗವುಂಟಾಗುವುದು, ಅದನ್ನು ಮತ್ತೆ ಮತ್ತೆ ಪ್ರಕಾಶಗೊಳಿ ಸುವುದು, ಪ್ರಧಾನವಾದ ರಸವನ್ನು ಪ್ರಕಾಶಪಡಿಸದಿರುವುದು ಮತ್ತು ಅಪ್ರಧಾನವಾದ ರಸವನ್ನು ಮಾತಿನಿಂದ ಸ್ಪಷ್ಟಪಡಿಸುವುದು, ಅಂಗವೆನಿಸಿದ ರಸವನ್ನು ವಿಸ್ತಾರಗೊಳಿಸು ವುದು, ನಾಯಕ ಮೊದಲಾದವರನ್ನೂ ಅವರ ಸ್ವಭಾವಗಳನ್ನೂ ಬೇರೆ ರೀತಿಯಲ್ಲಿ ಬದಲಾಯಿಸುವುದು, ಇವಿಷ್ಟಲ್ಲದೆ ಬೇರೆ ಬಗೆಯ ಅನೌಚಿತ್ಯ ಇವಿಷ್ಟು ರಸಕ್ಕೆ ಸಂಬಂಧಿ ಸಿದ ದೋಷಗಳೆನಿಸಿವೆ.

ರಸಶಬ್ದದಿಂದಾಗಲೀ ಶೃಂಗಾರಾದಿಶಬ್ದಗಳಿಂದಲೂ ರಸವನ್ನು ತಿಳಿಸುವುದಕ್ಕೆ ಉದಾಹರಣಗಳನ್ನು ತಿಳಿಸುತ್ತಾನೆ. "ಜಿಂಕೆಯಂತೆ ಕಣ್ಣುಗಳಿರುವ ಆಕೆಯನ್ನು ನೋಡಿ ನಮಗೆ ಯಾವುದೋ ಒಂದು ಬಗೆಯ ರಸವು ಹುಟ್ಟಿತು, ಚಂದ್ರಮಂಡಲ ವನ್ನು ನೋಡಿ ಶೃಂಗಾರದಲ್ಲಿ ಮನಸ್ಸು ಅಂಟಿತು' ಇಲ್ಲಿ ರಸವನ್ನು ರಸಶಬ್ದದಿಂದಲೂ ಶೃಂಗಾರಪದದಿಂದಲೂ ತಿಳಿಸಿದ್ದು ದೋಷವೆನಿಸಿದೆ. ಸ್ಥಾಯಿಭಾವವನ್ನು ಸ್ವಶಬ್ದ ದಿಂದ ತಿಳಿಸುವುದಕ್ಕೆ ಉದಾಹರಣವಿದು. 'ನೀನು ಕಣ್ಣಿಗೆ ಬೀಳಲು ಆಕೆಗೆ ರತಿಯುಂಟಾ ಯಿತು.' ಇಲ್ಲಿ ರತಿ ಎಂಬ ಸ್ಥಾಯಿಭಾವವನ್ನು ಆ ಪದದಿಂದಲೇ ತಿಳಿಸಲಾಗಿದೆ. ಹಾಗೆಯೇ ವ್ಯಭಿಚಾರಿಭಾವವನ್ನು ಆ ಶಬ್ದದಿಂದಲೇ ತಿಳಿಸುವುದೂ ದೋಷದೇ ಆಗುವುದು, "ಮುಗ್ಧೆಯು ಪ್ರಿಯನನ್ನು ಚುಂಬಿಸುತ್ತಲೇ ಲಜ್ಜೆಗೊಂಡಳು" ಇಲ್ಲಿ ಲಜ್ಜಾ ಪದವನ್ನು ಶಬ್ದದಿಂದ ತಿಳಿಸಿದ್ದು ದೋಷವೆನಿಸಿದೆ ಇಲ್ಲಿ 'ಆಕೆಯು ಕಣ್ಣುಗಳನ್ನು ಮುಚ್ಚಿಕೊಂಡಳು.' ಎಂದು ಲಜ್ಜೆಯನ್ನು ಅನುಭಾವದ ಮೂಲಕ ತಿಳಿಸಿದ್ದರೆ ಹೊಂದಿಕೆ ಯಾಗುತ್ತದೆ. 'ಎಲೈ ಕೃಶಾಂಗಿಯೇ, ಯೌವನವು ಸ್ಥಿರವಲ್ಲವೆಂದು ತಿಳಿದು ಪ್ರಣಯ ಕೋಪವನ್ನು ಮಾಡಬೇಡ' ಇಲ್ಲಿ ಯೌವನವು ಸ್ಥಿರವಲ್ಲವೆಂದು ತಿಳಿಸುವುದು ಶೃಂಗಾರ ರಸಕ್ಕೆ ಶತ್ರುವೆನಿಸಿದ ಶಾಂತರಸಕ್ಕೆ ಪೋಷಕವೆನಿಸಿ ಆ ಶಾಂತರಸಕ್ಕೇ ವಿಭಾವವೆನಿಸಿದೆ. ಆದ್ದರಿಂದ ಅದನ್ನು ಇಲ್ಲಿ ಶೃಂಗಾರರಸಕ್ಕೆ ಪೋಷಕವಾಗಿ ಕೊಟ್ಟದ್ದು ಯುಕ್ತವೆನಿಸಿಲ್ಲ, ಶೃಂಗಾರರಸವನ್ನು ಪ್ರಕಾಶಪಡಿಸುವ ಪ್ರಕರಣದಲ್ಲಿ ಅದಕ್ಕೆ ವಿರುದ್ಧವಾದ ಶಾಂತರಸದ ವಿಭಾವವನ್ನು ತಿಳಿಸಿದ್ದರಿಂದ ಇದು ಒಂದು ಬಗೆಯ ರಸದೋಷವೆನಿಸಿದೆ. ವಿಭಾವ ಅನುಭಾವಗಳನ್ನು ಬಹಳ ಕ್ಲೇಶದಿಂದ ಕಲ್ಪಿಸುವುದಕ್ಕೆ ಉದಾಹರಣವನ್ನು ಕೊಡು ತ್ತಾನೆ. "ಲೋಕದ ಜನರ ಕಣ್ಣುಗಳನ್ನು ಆನಂದಪಡಿಸುವ ಶೀತಕಿರಣನೆನಿಸಿದ ಚಂದ್ರನು ಭೂಮಿಯನ್ನು ಬೆಳ್ಳಗೆ ಮಾಡುತ್ತಿರಲು ಕೊಂಚವೇ ಓರೆನೋಟವನ್ನು ಬೀರಿದ ನಗುಮುಖದ ಆ ಕೃಶಾಂಗಿಯನ್ನು ನೋಡಬೇಕು." ಇಲ್ಲಿ ಉದ್ದೀಪನ ಮುಂದ

ಹಾಸಗಳೇ ಉದ್ದೀಪನವಿಭಾವ. ನಾಯಕೆಯೇ ಆಲಂಬನವಿಭಾವ, ಅವೇಯೇ ಇಲ್ಲಿ ನಾಯಕನಾಯಕಿಯರ ನಿರೀಕ್ಷಣವೆಂಬ ಅನುಭವವಾಗಿ ಪರಿಣಾಮವಾಗುತ್ತವೆಯಾದ್ದರಿಂದ ಇಲ್ಲಿ ಅವನು ಕಷ್ಟದಿಂದ ಕಲ್ಪಿಸಬೇಕಾಗಿದೆ.

ಪರಿಹರತಿ ರತಿಂ ಮತಿಂ ಲುನೀತೇ ಸ್ಖಲತಿತರಾಂ ಪರಿವರ್ತತೇ ಚ ಭೂಯಃ।
ಇತಿ ಬತ ವಿಷಮಾ ದಶಾಽಸ್ಯ ದೇಹಂ ಪರಿಭವತಿ ಪ್ರಸಭಂ ಕಿಮತ್ರ ಕುರ್ಮಃ॥

ಅತ್ರ ರತಿಪರಿಹಾರಾದೀನಾಂ ಕರುಣದಾವಪಿ ಸಂಭವಾತ್ ಕಾಮಿನೀರೂಪೋ ವಿಭಾವಃ ಕೃಚ್ಛ್ರಾದಾಕ್ಷೆಪ್ಯಃ—

ಅಕಾಂಡೇ ಪ್ರಥನಂ ಯಥಾ–ವೇಣೀಸಂಹಾರೇ ದ್ವಿತೀಯಾಂಕೇ ಪ್ರವರ್ತಮಾನಾನೇಕವೀರಸಂಕ್ಷಯೇ ಕಾಲೇ ದುರ್ಯೋಧನಸ್ಯ ಭಾನುಮತ್ಯಾ ಸಹ ಶೃಂಗಾರ ಪ್ರಥನಮ್. ಛೇದೊ ಯಥಾ–ವೀರಚರಿತೇ ರಾಘವಭಾರ್ಗವಯೋರ್ದ್ವಾರಾಧಿರೂಢೇ ಸಂಗ್ರಾಮೇ 'ಕಂಕಣಮೋಚನಾಯ ಗಚ್ಛಾಮಿ' ಇತಿ ರಾಘವಸ್ಯೋಕ್ತಿಃ. ಪುನಃ ಪುನರ್ದೀಪ್ತಿರ್ಯಥಾ–ಕುಮಾರಸಂಭವೇ ರತಿವಿಲಾಪೇ. ಅಂಗಿನೋಽನನುಸಂಧಾನಂ ಯಥಾ–ರತ್ನಾವಳ್ಯಾಂ ಚತುರ್ಥೇಽಂಕೇ ಬಾಭ್ರವ್ಯಾಗಮನೇ ಸಾಗರಿಕಾಯಾ ವಿಸ್ಮೃತಿಃ. ಅನಂಗಸ್ಯ ಕೀರ್ತನಂ ಯಥಾ–ಕರ್ಪೂರಮಂಜರ್ಯಾಂ ರಾಜನಾಯಿಕಯೋಃ ಕೃತಂ ವಸಂತಸ್ಯ ವರ್ಣನಮನಾದೃತ್ಯ ವಂದಿವರ್ಣಿತಸ್ಯ ಪ್ರಶಂಸನಮ್. ಅಂಗಸ್ಯಾತಿವಿಸ್ತೃತಿರ್ಯಥಾ ಕಿರಾತೇ ಸುರಾಂಗನಾವಿಲಾಸಾದಿಃ. ಪ್ರಕೃತಯೋ ದಿವ್ಯಾ ಅದಿವ್ಯಾ ದಿವ್ಯಾದಿವ್ಯಾಶ್ಚೇತಿ. ತೇಷಾಂ ಧೀರೋದಾತ್ತಾದಿತಾ. ತೇಷಾಮಪ್ಯುತ್ತಮಾಧಮಮಧ್ಯಮತ್ವಮ್. ತೇಷು ಚ ಯೋ ಯಥಾಭೂತಃ ತಸ್ಯಾಯಥಾವರ್ಣನೇ ಪ್ರಕೃತಿವಿಪರ್ಯಯೋ ದೋಷಃ. ಯಥಾ ಧೀರೋದಾತ್ತಸ್ಯ ರಾಮಸ್ಯ ಧೀರೋದ್ಧತವತ್ ಛದ್ಮನಾ ವಾಲಿವಧಃ. ಯಥಾ ವಾ ಕುಮಾರಸಂಭವೇ ಉತ್ತಮದೇವತಯೋಃ ಪಾರ್ವತೀ ಪರಮೇಶ್ವರಯೋಃ ಸಂಭೋಗಶೃಂಗಾರವರ್ಣನಮ್. 'ಇದಂ ಪಿತ್ರೋಸ್ಸಂಭೋಗ ವರ್ಣನಮಿವ ಅತ್ಯಂತಮನುಚಿತಮ್' ಇತ್ಯಾಹುಃ.

ಅನ್ಯದನೌಚಿತ್ಯಂ ದೇಶಕಾಲಾದೀನಾಂ ಅನ್ಯಥಾ ಯದ್ವರ್ಣನಮ್. ತಥಾ ಸತಿ ಕಾವ್ಯಸ್ಯ ಅಸತ್ಯತಾಪ್ರತಿಭಾಸೇನ ವಿನೇಯಾನಾಂ ಉನ್ಮುಖೀಕಾರಾಸಂಭವಃ. ಏಭ್ಯಃ ಪೃಥಗಲಂಕಾರದೋಷಾಣಾಂ ನೈವ ಸಂಭವಃ. ಏಭ್ಯಃ ಉಕ್ತದೋಷೇಭ್ಯಃ.ತಥಾಹಿ ಉಪಮಾಯಾಂ ಅಸಾದೃಶ್ಯಾಸಂಭವಯೋಃ, ಉಪಮಾನಸ್ಯ ಜಾತಿಪ್ರಮಾಣಗತನ್ಯೂನತ್ವಾಧಿಕತಯೋಃ, ಅರ್ಥಾಂತರನ್ಯಾಸೇ ಉತ್ಪ್ರೇಕ್ಷಿತಾರ್ಥಸಮರ್ಥನೇ ಚ ಅನುಚಿತಾರ್ಥತ್ವಮ್. ಕ್ರಮೇಣ 'ಯಥಾ ಗ್ರಥ್ನಾಮಿ ಕಾವ್ಯಶಶಿನಂ ವಿತತಾರ್ಥರಶ್ಮಿಮ್' "ಪ್ರಜ್ವಲಜ್ಜಲಧಾರಾವನ್ನಿಪತಂತಿ ಶರಾಸ್ತವ" "ಚಂಡಾಲ ಇವ ರಾಜಾಸೌ ಸಂಗ್ರಾಮೇಽಧಿಕಸಾಹಸಃ" "ಕರ್ಪೂರಖಂಡ ಇವ ರಾಜತಿ ಚಂದ್ರಬಿಂಬಮ್" "ಹರವನ್ನಿಲಕಂಠೋಽಯಂ ವಿರಾಜತಿ ಶಿಖಾವಲಃ" "ಸ್ತನಾವದ್ರಿಸಮಾನೌ ತೇ."

ದಿವಾಕರಾದ್ರಕ್ಷತಿ ಯೋ ಗುಹಾಸು ಲೀನಂ ದಿವಾ ಭೀತಾಮಿವಾಂಧಕಾರಮ್ ।
ಕ್ಷುದ್ರೇಽಪಿ ನೂನಂ ಶರಣಂ ಪ್ರಪನ್ನೇ ಮಮತ್ವಮುಚ್ಚೈಃಶಿರಸಾಮತೀವ ॥

ಏವಮಾದಿಷು ಉತ್ಪ್ರೇಕ್ಷಿತಾರ್ಥಸ್ಯ ಅಸಂಭೂತತಯೈವ ಪ್ರತಿಭಾಸನಂ ಸ್ವರೂಪ ಮಿತ್ಯುಚಿತಮೇವ ತತ್ಸಮರ್ಥನಮ್. ಯಮಕಸ್ಯ ಪಾದತ್ರಯಗತಸ್ಯಾಪ್ರಯುಕ್ತತ್ವಂ ದೋಷಃ- ಯಥಾ—

ಸಹಸಾಲಿಜನೈಃ ಸ್ನಿಗ್ಧೈಃ ಸಹ ಸಾ ಕುಂಜಮಂದಿರಮ್ ।
ಉದಿತೇ ರಜನೀನಾಥೇ ಸಹಸಾ ಯಾತಿ ಸುಂದರೀ ॥

ಯಥಾ—ಏಷ ಮೂರ್ತೋ ಯಥಾ ಧರ್ಮಃ ಕ್ಷಿತಿಪೋ ರಕ್ಷತಿ ಕ್ಷಿತಿಮ್ ।

ಏವಮನುಪ್ರಾಸೇ ವೃತ್ತಿವಿರುದ್ಧಸ್ಯ ಪ್ರತಿಕೂಲವರ್ಣತ್ವಮ್. ಯಥಾ—

'ಉದ್ವರ್ತಯತಿ' ಇತ್ಯಾದೌ. ಉಪಮಾಯಾಂ ಚ ಸಾಧಾರಣಧರ್ಮಸ್ಯ

ಅಧಿಕನ್ಯೂನತ್ವಯೋಃ ಅಧಿಕಪದತ್ವಂ ನ್ಯೂನಪದತ್ವಂ ಚ ಕ್ರಮೇಣ

ಉದಾಹರಣಮ್—ನಯನಜ್ಯೋತಿಷಾ ಭಾತಿ ಶಂಭುರ್ಭೂತಿಸಿತದ್ಯುತಿಃ।
ವಿದ್ಯುತೇವ ಶರನ್ಮೇಘೋ ನೀಲವಾರಿದಖಂಡಧೃತ್ ॥

ಅತ್ರ ಭಗವತೋ ನೀಲಕಂಠತ್ವಸ್ಯ ಅಪ್ರತಿಪಾದನಾತ್ ಚತುರ್ಥಪದೋಽಧಿಕಃ

ಕಮಲಾಲಿಂಗಿತಸ್ತಾರಹಾರಹಾರೀ ಮುರಂ ದ್ವಿಷನ್ ।
ವಿದ್ಯುದ್ವಿಭೂಷಿತೋ ನೀಲಜೀಮೂತ ಇವ ರಾಜತೇ ॥

ಅತ್ರೋಽಪಮಾನಸ್ಯ ಸಬಲಾಕತ್ವಂ ವಾಚ್ಯಮ್. ಅಸ್ಯಾಮೇವೋಪಮಾನೋಪಮೇಯಯೋರ್ಲಿಂಗವಚನಭೇದಸ್ಯ ಕಾಲಪುರುಷವಿದ್ಯಾದಿಭೇದಸ್ಯ ಚ ಭಗ್ನಪ್ರಕ್ರಮತ್ವಮ್. ಕ್ರಮೇಣೋದಾಹರಣಮ್ " ಸುಧೇವ ವಿಮಲಶ್ಚಂದ್ರಃ" 'ಜ್ಯೋತ್ಸ್ನಾ ಇವ ಸಿತಾ ಕೀರ್ತಿಃ' 'ಕಾಪ್ಯಭಿಖ್ಯಾ ತಯೋರಾಸೀತ್ ವ್ರಜತೋಃ ಶುದ್ಧವೇಷಯೋಃ' 'ಹಿಮನಿರ್ಮುಕ್ತಯೋರ್ಯೋಗೇ ಚಿತ್ರಾಚಂದ್ರಮಸೋರಿವ' ಅತ್ರ ತಥಾಭೂತಚಿತ್ರಾಚಂದ್ರಮಸೋಃ ಶೋಭಾ ನ ಖಲ್ವಾಸೀತ್ ಅಪಿ ತು ಸರ್ವದಾಪಿ ಭವತಿ.

'ಲತೇವ ರಾಜಸೇ ತನ್ವಿ !' ಅತ್ರ ಲತಾ ರಾಜತೇ ತ್ವಂ ತು ರಾಜಸೇ. 'ಚಿರಂ ಜೀವತು ತೇ ಸೂನುರ್ಮಾರ್ಕಂಡೇಯಮುನಿರ್ಯಥಾ' ಅತ್ರ ಮಾರ್ಕಂಡೇಯಮುನಿರ್ಜೀವತ್ಯೇವ, ನ ಖಲ್ವೇತದಸ್ಯ 'ಜೀವತು' ಇತ್ಯನೇನ ವಿಧೇಯಮ್.

ಸುಲಭವಾಗಿ ದೊರೆಯದೇ ಇರುವ ನಾಯಿಕೆಯಲ್ಲಿ ಅನುರಾಗವಿಟ್ಟಿರುವ ಸ್ನೇಹಿತನ ಅವಸ್ಥೆಯನ್ನು ಮತ್ತೊಬ್ಬ ಸ್ನೇಹಿತನು ವರ್ಣಿಸುತ್ತಾನೆ. "ಈ ಸ್ನೇಹಿತನು ಬೇರೆ ವಸ್ತುಗಳ ಬಗ್ಗೆ ಅನುರಾಗವನ್ನು ತೊರೆದಿದ್ದಾನೆ, ಧೈರ್ಯದಿಂದ ಸಂಪಾದಿಸಬೇಕಾದ ಬುದ್ಧಿಯನ್ನೂ ಸಹ ತೊರೆದಿದ್ದಾನೆ, ಆಡಿವ ಮಾತನ್ನು ಪದೇ ಪದೇ ಬದಲಾಯಿಸುತ್ತಾನೆ, ಮತ್ತೆ ಮತ್ತೆ ಹಾಸಿಗೆಯಲ್ಲಿ ಹೊರಳಾಡುತ್ತಾನೆ. ಹೀಗೆ ಇವನ ಅವಸ್ಥೆಯು ಅಸಹ್ಯವೆನಿಸಿದೆ. ಶರೀರವು ಬಲಾತ್ಕಾರದಿಂದ ಕ್ಲೇಶಕ್ಕೆ ಸಿಕ್ಕಿಕೊಂಡಿದೆ. ಈ ಬಗ್ಗೆ ಏನು ಮಾಡೋಣ ?" ಇಲ್ಲಿ ಹೇಳಿರುವ ರತಿಪರಿಹಾರ ಮೊದಲಾದ ಅನುಭವಗಳು ಕರುಣರಸ

ದಲ್ಲೂ ಸಂಭವಿಸುವುದರಿಂದ ಕಾಮಿನಿಯನ್ನು ಉದ್ದೇಶಿಸಿ ಇವೆಲ್ಲವೂ ಅವನಿಗೆ ಉಂಟಾಗುತ್ತಿರುವ ಪ್ರಯುಕ್ತ ಕಾಮಿನಿಯೇ ಇಲ್ಲಿ ಆಲಂಬನವಿಭಾವವೆಂಬುದನ್ನು ಬಹು ಕ್ಲೇಶದಿಂದ ಹೊಂದಿಸಿಕೊಳ್ಳಬೇಕಾಗಿದೆ. ಅನವರಸದಲ್ಲಿ ರಸವನ್ನು ಪ್ರಕಾಶಗೊಳಿಸುವುದಕ್ಕೆ ಉದಾಹರಣವು ಹೀಗಿದೆ. ವೇಣೀಸಂಹಾರದಲ್ಲಿ ದ್ವಿತೀಯಾಂಕದಲ್ಲಿ ಅನೇಕ ಭೀಕರಕೊಲೆಯಾಗುತ್ತಿರುವ ವಿಷಮಕಾಲದಲ್ಲಿ ದುರ್ಯೋಧನನು ಭಾನುಮತಿಯೊಡನೆ ಶೃಂಗಾರದ ಅನುಭವದಲ್ಲಿ ತೊಡಗುವುದಾಗಿ ವರ್ಣಿಸಿದ್ದು ಇಂತಹ ಅನವಸರದ ರಸಪ್ರಕಾಶವೆನಿಸಿದೆ. ಹೀಗೆಯೇ ಅನವಸರದಲ್ಲಿ ರಸಚ್ಛೇದವೂ ದೋಷವೇ ಆಗುತ್ತದೆ. ಮಹಾವೀರಚರಿತದಲ್ಲಿ ರಾಘವ ಭಾರ್ಗವ ಇವರಿಬ್ಬರಿಗೂ ಊರಿನ ಬಾಗಿಲಿನಲ್ಲಿಯೇ ಯುದ್ಧವು ಆರಂಭವಾಗುವಾಗ 'ನಾನು ಕಂಕಣವನ್ನು ತೊರೆಯಲಿದ್ದೇನೆ' ಎಂದು ರಾಘವನು ಹೇಳುವ ಮಾತಿನಿಂದ ಕಾರಣವಿಲ್ಲದೆ ಬೇಗನೆ ರಸವು ಕೊನೆಗೊಂಡಿತೆಂದು ತಿಳಿದುಬರುವ ಪ್ರಯುಕ್ತ ಇದು ದೋಷವೆನಿಸಿದೆ. ರಸವು ಮತ್ತೆ ಮತ್ತೆ ಪ್ರಕಾಶಗೊಳ್ಳುವುದನ್ನು ಕುಮಾರಸಂಭವದಲ್ಲಿ ರತಿವಿಲಾಸದಲ್ಲಿ ಕಾಣಬಹುದು. ಪ್ರಧಾನವಸ್ತುವನ್ನು ಪ್ರಕಾಶಪಡಿಸದಿರುವುದಕ್ಕೆ ರತ್ನಾವಳಿಯ ನಾಲ್ಕನೆಯ ಅಂಕದಲ್ಲಿ ಉದಾಹರಣವಿದೆ. ಬಾಂಧವ್ಯನೆಂಬ ಕಂಚುಕಿಯು ಬಂದಮೇಲೆ ಸಾಗರಿಕೆಯನ್ನು ಮರೆತದ್ದರಿಂದ ಪ್ರಧಾನವ್ಯಕ್ತಿಯನ್ನೇ ತೊರೆದಂತಾಯಿತು. ಹಾಗೆಯೇ ಅಮುಖ್ಯವಾದ ವಸ್ತುವನ್ನು ತಿಳಿಸುವುದೂ ಸಹ ದೋಷವೇ ಆಗುವುದು. ಅದಕ್ಕೆ ಉದಾಹರಣವು ಹೀಗಿದೆ. ಕರ್ಪೂರಮಂಜರಿಯಲ್ಲಿ ರಾಜನಿಗೂ ನಾಯಿಕೆಗೂ ನಡೆಯುವ ವಸಂತನ ವರ್ಣನವನ್ನು ತೊರೆದು ವಂದಿಯು ತಿಳಿಸುವ ವಸಂತವರ್ಣನವನ್ನೇ ಪ್ರಶಂಸಿಸಿದ್ದು ಈ ಬಗೆಯ ದೋಷವೆನಿಸಿದೆ. ಅಪ್ರಧಾನವೆನಿಸಿದ ರಸವನ್ನು ಬಹಳ ವಿಸ್ತಾರಗೊಳಿಸುವುದಕ್ಕೆ ಕಿರಾತಾರ್ಜುನೀಯದಲ್ಲಿ ಸುರಾಂಗನೆಯರ ವಿಲಾಸವೇ ಉದಾಹರಣವೆನಿಸಿದೆ. ನಾಯಕನೇ ಮೊದಲಾದವರು ದಿವ್ಯ, ಅದಿವ್ಯ, ದಿವ್ಯಾದಿವ್ಯವೆಂದು ಮೂರು ಬಗೆಯವರಿರುವರು. ಕೆಲವರು ದೇವ ದಾನವ ಗಂಧರ್ವಯಕ್ಷರಾಕ್ಷಸರು, ಕೆಲವರು ಮನುಷ್ಯರು, ಕೆಲವರು ರಾಮನಂತೆ ದಿವ್ಯರಾದರೂ ಮರ್ತ್ಯರಂತೆ ಬಾಳುವವರು. ಅವರಲ್ಲೂ ಧೀರೋದಾತ್ತ, ಧೀರೋದ್ಧತ, ಧೀರಪ್ರಶಾಂತ, ಧೀರಲಲಿತ ಎಂಬ ಭೇದವೂ, ಉತ್ತಮ ಮಧ್ಯಮ ಅಧಮ ಎಂಬ ಭೇದವೂ ಇವೆ. ಅವರಲ್ಲಿ ಯಾವನು ಹೇಗೆ ಇರುವನೋ ಅವನನ್ನು ಹಾಗೆಯೇ ವರ್ಣಿಸದಿರುವುದು ಪ್ರಕೃತಿವಿಪರ್ಯಯವೆಂಬ ದೋಷವೆನಿಸುವುದು. ಧೀರೋದಾತ್ತನಾದ ರಾಮನನ್ನು ಧೀರೋದ್ಧತನೆಂದು ವರ್ಣಿಸಿ ಅವನು ಮೋಸದಿಂದ ವಾಲಿಯನ್ನು ಕೊಂದನೆಂದು ತಿಳಿಸುವುದು ಪ್ರಕೃತಿವಿಪರ್ಯಯವೆನಿಸುವುದು. ಕುಮಾರಸಂಭವದಲ್ಲಿ ಉತ್ತಮದೇವತೆಯರೆನಿಸಿದ ಪಾರ್ವತೀಪರಮೇಶ್ವರರ ಸಂಭೋಗಶೃಂಗಾರವನ್ನು ವರ್ಣಿಸಿದ್ದು ಪ್ರಕೃತಿವಿಪರ್ಯಯವೆನಿಸಿದೆ. ತಂದೆತಾಯಿಗಳ ಸಂಭೋಗವನ್ನು ವರ್ಣಿಸಿದಂತೆ ಇದು ಅತ್ಯಂತ ಅನುಚಿತವೆಂದು ಅನುಭವಿಗಳು ಹೇಳುತ್ತಾರೆ. ರಸಸ್ಫೂರ್ತಿಗೆ ಅನುಕೂಲವಲ್ಲದ ಕಾಲದಲ್ಲೂ ಮತ್ತು ಸ್ಥಳದಲ್ಲೂ ಅದರ

ವರ್ಣನವು ಬಂದರೆ ಅದೂ ಒಂದು ಬಗೆಯ ಅನೌಚಿತ್ಯವೆನಿಸುವುದು. ಅಂತಹ ಕಡೆಗಳಲ್ಲೂ ರಸವು ತೋರುವುದಾದರೆ ಕಾವ್ಯವು ಅಸತ್ಯವೆಂದು ತಿಳಿದುಬರುವ ಪ್ರಯುಕ್ತ ಅದು ಯುವಯುವತಿಯರ ಗಮನವನ್ನು ತನ್ನ ಕಡೆಗೆ ಸೆಳೆಯಲಾರದು.

"ಹೀನೋಪಮ, ಅಧಿಕೋಪಮ," ಅಸದೃಶೋಪಮ ಎಂದು ಮುಂತಾಗಿ ಭೋಜರಾಜನೇ ಮೊದಲಾದವರು ಕೆಲವು ಅಲಂಕಾರದೋಷಗಳನ್ನು ಹೇಳಿರುವುದರಿಂದ ಇದೂ ಒಂದು ಆರನೇ ಬಗೆಯ ದೋಷವಿರುವಾಗ ಹಿಂದೆ ದೋಷಗಳು ಐದೇ ಬಗೆ ಎಂದು ತಿಳಿಸಿದ್ದು ಹೇಗೆ ಹೊಂದುತ್ತದೆ ಎಂದು ಕೇಳಿದರೆ ಅದಕ್ಕೆ ಸಮಾಧಾನವನ್ನು ಇಲ್ಲಿ ತಿಳಿಸುತ್ತಾನೆ. ಇಲ್ಲಿ ಹೇಳಿರುವ ದೋಷಗಳನ್ನು ಬಿಟ್ಟು ಬೇರೆ ಅಲಂಕಾರ ದೋಷಗಳೇ ಸಂಭವಿಸುವಂತಿಲ್ಲ. ಹೇಗೆಂದರೆ ಉಪಮಾಲಂಕಾರದಲ್ಲಿ ಸಾಧಾರಣ ಧರ್ಮವಿಲ್ಲದ್ದರಿಂದ ಸಾದೃಶ್ಯವಿಲ್ಲವೆಂಬಲ್ಲೂ, ಉಪಮಾನವೇ ಅಪ್ರಸಿದ್ಧವಾದ್ದರಿಂದ ಅಸಂಭವವೆಂಬಲ್ಲೂ, ಅಲ್ಲಿಯೇ ಉಪಮೇಯಕ್ಕಿಂತ ಉಪಮಾನವು ಜಾತಿಯಲ್ಲೂ ಪ್ರಮಾಣದಲ್ಲೂ ನ್ಯೂನವೋ ಅಧಿಕವೋ ಆಗಿರುವಾಗಲೂ ಹಾಗೆಯೇ ಅರ್ಥಾಂತರ ನ್ಯಾಸದಲ್ಲಿ ಉತ್ಪ್ರೇಕ್ಷಿಸಬೇಕಾದ ಅಂಶವನ್ನು ಸಮರ್ಥಿಸುವಾಗಲೂ ಅನುಚಿತವಾದ ಅರ್ಥವನ್ನು ತಿಳಿಸುವುದೇ ದೋಷವೆನಿಸುತ್ತದೆ. ಆದ್ದರಿಂದ ಇವೆಲ್ಲವನ್ನೂ ಬೇರೆ ದೋಷಗಳೆಂದು ಅಂಗೀಕರಿಸುವುದರಲ್ಲಿ ಅರ್ಥವಿಲ್ಲ.

ಭೋಜರಾಜನೇ ಮೊದಲಾದವರು ಹೇಳಿರುವ ಅಲಂಕಾರದೋಷಗಳನ್ನು ತಾನು ಹೇಳಿರುವ ಐದು ಬಗೆಯ ದೋಷಗಳಲ್ಲಿಯೇ ಸೇರಿಸಿ ಅವನ್ನು ಕ್ರಮವಾಗಿ ಉದಾಹರಿಸುತ್ತಾನೆ. "ಕಿರಣಗಳಂತೆ ವಿಸ್ತಾರವಾದ ಅರ್ಥವುಳ್ಳ ಚಂದ್ರನಂತಿರುವ ಕಾವ್ಯವನ್ನು ರಚಿಸುವೆನು" ಇಲ್ಲಿ ಅರ್ಥರಶ್ಮಿಗಳಿಗೂ ಕಾವ್ಯಶಶಿಗಳಿಗೂ ಸಾಧಾರಣಧರ್ಮವನ್ನು ತಿಳಿಸಿಲ್ಲವಾದ್ದರಿಂದ ಸಾದೃಶ್ಯವೆ ತೋರದೇ ಇರುವ ಪ್ರಯುಕ್ತ ಇಲ್ಲಿ ಅನುಚಿತಾರ್ಥತ್ವವು ದೋಷವೆನಿಸಿದೆ. ಹೀಗೆ ಬೇರೆಯವರು ಹೇಳಿರುವ ಅಲಂಕಾರ ದೋಷಗಳೆಲ್ಲವೂ ಅನುಚಿತಾರ್ಥವೆಂಬ ದೋಷದಲ್ಲಿಯೇ ಸೇರುತ್ತವೆಯಾದ್ದರಿಂದ ಅವನ್ನು ಪ್ರತ್ಯೇಕವಾಗಿ ತಿಳಿಸಬೇಕಾಗಿಲ್ಲ. 'ನಿನ್ನ ಬಾಣಗಳು ಉರಿಯುವ ನೀರಿನ ಧಾರೆಯಂತೆ ಬೀಳುತ್ತಿವೆ. "ಉರಿಯುವ ಕಟ್ಟಿಗೆಯಂತೆ ನೀರಿನಲ್ಲಿ ಉರಿಯುವಿಕೆಯೆಂಬುದೇ ಸಂಭವಿಸದಿರುವುದರಿಂದ ಇಲ್ಲಿ ಉಪಮಾನವಿಲ್ಲದ ಪ್ರಯುಕ್ತ ಉಪಮಾಲಂಕಾರದಲ್ಲಿ ಅನೌಚಿತ್ಯವಿದೆ. 'ಚಂಡಾಲನಂತೆ ಈ ರಾಜನು ಯುದ್ಧದಲ್ಲಿ ಹೆಚ್ಚು ಸಾಹಸಿಯಾಗಿರುವನು" ಇಲ್ಲಿ ಉಪಮೇಯವೆನಿಸಿದ ಕ್ಷತ್ರಿಯಜಾತಿಯ ರಾಜನಿಗಿಂತಲೂ ಉಪಮಾನವೆನಿಸಿದ ಚಂಡಾಲನಜಾತಿಯು ನ್ಯೂನವೆನಿಸಿದೆ. ಇದರಿಂದ ರಾಜನೂ ನೀಚನೆನಿಸುವ ಪ್ರಯುಕ್ತ ಉಪಮೇಯವು ಅನುಚಿತವೆನಿಸಿದೆ. "ಕರ್ಪೂರದ ಚೂರಿನಂತೆ ಚಂದ್ರಮಂಡಲವು ಶೋಭಿಸುತ್ತದೆ.' ಇಲ್ಲಿ ಉಪಮೇಯವೆನಿಸಿದ ಚಂದ್ರಮಂಡಲಕ್ಕಿಂತಲೂ ಉಪಮಾನವೆನಿಸಿದ ಕರ್ಪೂರಖಂಡವು ಪ್ರಮಾಣದಲ್ಲಿ ನ್ಯೂನವೆನಿಸಿದ್ದರಿಂದ ಚಂದ್ರಮಂಡಲವು ಅದರಂತೆಯೇ ನ್ಯೂನವೆನಿಸುವ ಪ್ರಯುಕ್ತ ಹೀಗೆ ಉಪಮೆಯನ್ನು

ತಿಳಿಸಿದ್ದು ಅನುಚಿತವೆನಿಸಿದೆ. 'ಶಿವನಂತೆ ಕಪ್ಪುಕುತ್ತಿಗೆ ಇರುವ ಈ ನವಿಲು ಶೋಭಿಸುತ್ತಿದೆ.' ಇಲ್ಲಿ ಉಪಮೇಯವೆನಿಸಿದ ಪಕ್ಷಿಜಾತಿಯ ನವಿಲುಗಿಂತಲೂ ಉಪಮಾನವೆನಿಸಿದ ಶಿವನು ಜಾತಿಯಲ್ಲಿ ಅಧಿಕವೆನಿಸಿದ್ದರಿಂದ ಸಾದೃಶ್ಯವು ಇಲ್ಲಿ ಹೊಂದದೇ ಇರುವುದರಿಂದ ಇದು ಅನುಚಿತವೆನಿಸಿದೆ. "ನಿನ್ನ ಸ್ತನಗಳು ಬೆಟ್ಟಕ್ಕೆ ಸದೃಶವೆನಿಸಿವೆ. ಇಲ್ಲಿ ಉಪಮೇಯವೆನಿಸಿದ ಸ್ತನಗಳಿಗಿಂತಲೂ ಉಪಮಾನವೆನಿಸಿದ ಪರ್ವತವು ಪರಿಮಾಣದಲ್ಲಿ ಅಧಿಕವೆನಿಸಿದ್ದರಿಂದ ಈ ಬಗೆಯ ಸಾದೃಶ್ಯವು ಹೊಂದಿಕೆಯಾಗುವುದಿಲ್ಲ. "ಹಗಲಿಗೆ ಹೆದರಿಯೋ ಏನೋ ಎಂಬಂತೆ ಗವಿಗಳಲ್ಲಿ ಅಡಗಿರುವ ಕತ್ತಲೆಯನ್ನು ಹಿಮವಂತನು ಸೂರ್ಯನಿಂದ ರಕ್ಷಿಸಿದನು. ನೀಚನಾದರೂ ಶರಣಾಗತನಾದರೆ ಅವನ ಬಗ್ಗೆ ದೊಡ್ಡವರಿಗೆ ಹೆಚ್ಚು ಆತ್ಮೀಯತೆ ಇರುತ್ತದೆ." ಇಲ್ಲಿ ಕತ್ತಲೆಯು ಹಗಲಿಗೆ ಹೆದರಿತೆಂದು ಹೇಳಿದ್ದರಿಂದ ಅದರಲ್ಲಿ ಈ ಬಗೆಯ ಹೆದರಿಕೆಯನ್ನು ಉತ್ಪ್ರೇಕ್ಷಿಸಿದ್ದು ಅಸಂಭವ. ಅಚೇತನವಾದ ಅಂಧಕಾರದಲ್ಲಿ ಚೇತನಧರ್ಮವೆನಿಸಿದ ಭಯವು ಸಂಭವಿಸುವುದೂ ಇಲ್ಲ. ಅದು ಹಗಲಿನಲ್ಲಿ ಗವಿಯಲ್ಲಿ ಅಡಗುವುದು ಸಹಜ. ಇಂತಹ ಪರಿಸ್ಥಿತಿಯಿಲ್ಲಿ ಅದನ್ನು ಅರ್ಥಾಂತರನ್ಯಾಸದಿಂದ ಸತ್ಯವೆಂದು ಪ್ರತಿಪಾದಿಸಿದ್ದು ಅನುಚಿತವೇ ಆಗಿದೆ. ಹೀಗೆ ಅಲಂಕಾರದೋಷಗಳೆಲ್ಲವೂ ಅನೌಚಿತ್ಯದಲ್ಲಿಯೇ ಸೇರುತ್ತವೆಯಾದ್ದರಿಂದ ಅವನ್ನು ಪ್ರತ್ಯೇಕವಾಗಿ ತಿಳಿಸಬೇಕಾಗಿಲ್ಲ. ಮೂರು ಪಾದಗಳಲ್ಲಿ ಮಾತ್ರವೇ ಯಮಕವನ್ನು ಸೇರಿಸುವುದು ಅಪ್ರಯುಕ್ತವೆಂಬ ದೋಷವೆನಿಸುವುದು, "ಆ ಸುಂದರಿಯು ಚಂದ್ರೋದಯವಾದಮೇಲೆ ಪ್ರೀತಿಪಾತ್ರರಾದ ಸಖಿಯರೊಡನೆ ಹಾಸ್ಯವಾಡುತ್ತ ಬೇಗನೆ ಲತಾಗೃಹಕ್ಕೆ ಹೋಗುತ್ತಾಳೆ." ಇಲ್ಲಿ ಮೂರನೆಯ ಪಾದದಲ್ಲಿ ಯಮಕವಿಲ್ಲದ್ದರಿಂದ ಉಳಿದ ಮೂರು ಪಾದಗಳಲ್ಲಿ ಮಾತ್ರವೇ ಯಮಕವಿರುವುದು ಶಾಸ್ತ್ರಸಮ್ಮತವಾದರೂ ಕವಿಗಳಿಗೆ ಅನಾದರಣೀಯವೆನಿಸಿದೆ.

ಸಂಭಾವನೆಯನ್ನು ತಿಳಿಸಲಿಕ್ಕಾಗಿ ಉತ್ಪ್ರೇಕ್ಷೆಯಲ್ಲಿ ಯಥಾಶಬ್ದವನ್ನು ಉಪಯೋಗಿಸುವುದು ಅವಾಚಕವೆನಿಸುವುದು. ಯಥಾಶಬ್ದವು ಸಾದೃಶ್ಯವನ್ನೇ ಬೋಧಿಸುವುದರಿಂದ ಇವ ಶಬ್ದದಂತೆ ಸಂಭಾವನೆಯನ್ನು ತಿಳಿಸದೇ ಇರುವ ಪ್ರಯುಕ್ತ ಅವಾಚಕವೆನಿಸುವುದು. 'ಶರೀರಧಾರಿಯಾದ ಧರ್ಮದಂತೆ ರಾಜನು ಭೂಮಿಯನ್ನು ರಕ್ಷಿಸುತ್ತಾನೆ' ಇಲ್ಲಿ ಮೂರ್ತೋ ಧರ್ಮ ಇವ ಎಂಬ ಅರ್ಥದಲ್ಲಿ ಯಥಾ ಶಬ್ದವನ್ನು ಪ್ರಯೋಗಿಸಿರುವುದರಿಂದ ಇದು ಉತ್ಪ್ರೇಕ್ಷೆಯನ್ನು ತಿಳಿಸದ ಪ್ರಯುಕ್ತ ಅವಾಚಕವೆನಿಸಿದೆ. ಹೀಗೆಯೇ ಅನುಪ್ರಾಸದಲ್ಲಿ ರಸಕ್ಕೆ ವಿರುದ್ಧವಾದ ವರ್ಣಗಳನ್ನು ಪ್ರಯೋಗಿಸುವುದೂ ದೋಷವೇ ಆಗುತ್ತದೆ. "ಉದ್ವರ್ತಯತಿ" ಎಂಬಲ್ಲಿ ಶೃಂಗಾರರಸಕ್ಕೆ ವಿರುದ್ಧವಾಗಿ ಟಕಾರಗಳನ್ನು ಪ್ರಯೋಗಿಸಿದ್ದು ದೋಷವೆನಿಸಿದೆ. ಉಪಮಾಲಂಕಾರದಲ್ಲಿ ಸಾಧಾರಣಧರ್ಮವು ಅಧಿಕವೋ ನ್ಯೂನವೋ ಆಗಿರುವುದಕ್ಕೆ ಉದಾಹರಣಗಳನ್ನು ಕೊಡುತ್ತಾನೆ. "ಕಪ್ಪುಮೇಘದ ಕೊಂಚಭಾಗವನ್ನು ಮಾತ್ರ ಧರಿಸಿರುವ ಶತತ್ಕಾಲದ ಮೇಘವು ವಿಮಾನದಿಂದ ಶೋಭಿಸುವಂತೆ ಭಸ್ಮದಿಂದ ಬೆಳ್ಳಗಿರುವ ಶಂಭುವು ಮೂರನೆಯ

ಕಣ್ಣಿನ ಕಾಂತಿಯಿಂದ ಶೋಭಿಸುತ್ತಾನೆ." ಇಲ್ಲಿ ಶಿವನಲ್ಲಿರುವ ನೀಲಕಂಠತ್ವವನ್ನು ತಿಳಿಸದೇ ಇರುವ ಪ್ರಯುಕ್ತ ಮೇಘದಲ್ಲಿ ಅದನ್ನು ತಿಳಿಸಿದ್ದು ವ್ಯರ್ಥವಾಯಿತು. ಅದಕ್ಕಾಗಿ ನಾಲ್ಕನೆಯ ಪಾದವನ್ನು ತಿಳಿಸಿದ್ದು ಅಧಿಕವೆನಿಸಿದೆ. "ಲಕ್ಷ್ಮಿಯನ್ನು ಆಲಿಂಗಿಸಿಕೊಂಡು ಮುಕ್ತಾಮಾಲೆಯಿಂದ ಮನೋಹರನಾದ ಮುರಾರಿಯು ಮಿಂಚಿನಿಂದ ಅಲಂಕೃತವಾದ ನೀಲಮೇಘದಂತೆ ಶೋಭಿಸುತ್ತಾನೆ" ಇಲ್ಲಿ ಉಪಮೇಯವೆನಿಸಿದ ಕೃಷ್ಣನು ಮುಕ್ತಾಮಾಲೆಯಿಂದೊಡಗೂಡಿರುವಂತೆ ಉಪಮಾನವೆನಿಸಿದ ನೀಲ ಜೀಮೂತವು ಬಕಪಕ್ಷಿಗಳ ಶ್ರೇಣಿಯೊಡಗೂಡಿರುವುದಾಗಿ ಹೇಳಬೇಕಾಗಿತ್ತು. ಈ ಉಪಮಾಲಂಕಾರದಲ್ಲಿ ಉಪಮಾನೋಪಮೇಯಗಳಿಗೆ ವಚನಭೇದವಿದ್ದರೂ ವರ್ತಮಾನವೇ ಮೊದಲಾದ ಕಾಲದಲ್ಲೂ, ಪ್ರಥಮಪುರುಷ ಮೊದಲಾದವುಗಳಲ್ಲೂ, ವಿಧಿಯನ್ನು ಬೋಧಿಸುವ ವಿಭಕ್ತಿಗಳಲ್ಲೂ ಭೇದವಿದ್ದರೆ ಅದು ಭಗ್ನಪ್ರಕ್ರಮವೆಂಬ ದೋಷದಲ್ಲಿ ಸೇರುವುದು. "ಚಂದ್ರನು ಸುಧೆಯಂತೆ ನಿರ್ಮಲನು" ಇಲ್ಲಿ ಉಪಮಾನಪದವು ಸ್ತ್ರೀಲಿಂಗದಲ್ಲೂ' ಉಪಮೇಯಪದವು ಪುಲ್ಲಿಂಗದಲ್ಲೂ ಇದ್ದು ಪ್ರಕ್ರಮಭಂಗವಿರುವ ಪ್ರಯುಕ್ತ ಅಲ್ಲಿ ಸಾಧಾರಣಧರ್ಮವನ್ನು ತಿಳಿಸುವ ವಿಮಲಪದದಲ್ಲಿ ಲಿಂಗವ್ಯತ್ಯಾಸವಿರಬೇಕಾದ್ದರಿಂದ ಇದು ಭಗ್ನಪ್ರಕ್ರಮವೆನಿಸಿದೆ. "ಕೀರ್ತಿಯು ಚಂದ್ರಿಕೆಗಳಂತೆ ಬೆಳ್ಳಗಿದೆ." ಇಲ್ಲಿ ಉಪಮಾನವೆನಿಸಿದ ಜ್ಯೋತ್ಸ್ನೆ ಎಂಬುದನ್ನು ಬಹುವಚನದಲ್ಲಿ ಆರಂಭಿಸಿ ಕೀರ್ತಿ ಎಂಬ ಉಪಮೇಯವನ್ನು ಏಕವಚನದಲ್ಲಿ ಹೇಳಿದ್ದರಿಂದ ಸಿತಾ ಎಂಬ ಸಾಧಾರಣಧರ್ಮವನ್ನು ತಿಳಿಸುವ ಪದವು ಬೇರೆ ರೀತಿಯಲ್ಲಿರುವುದರಿಂದ ಇದು ಭಗ್ನಪ್ರಕ್ರಮವೆನಿಸಿದೆ. ಉಪಮಾನೋಪಮೇಯಗಳಿಗೆ ಕಾಲಭೇದದಿಂದ ಭಗ್ನಪ್ರಕ್ರಮದೋಷವನ್ನು ಉದಾಹರಿಸುತ್ತಾನೆ. "ವಸಿಷ್ಠನ ಆಶ್ರಮಕ್ಕೆ ನಿರ್ಮಲವಾದ ವೇಷದಿಂದ ಸುದಕ್ಷಿಣೆ ದಿಲೀಪರು ಒಟ್ಟಿಗೆ ಹೋಗುತ್ತಿರಲು ಅವರ ಯೋಗದಲ್ಲಿ ಹಿಮದಿಂದ ಬಿಡುಗಡೆಯಾದ ಚಿತ್ತಾನಕ್ಷತ್ರ ಮತ್ತು ಚಂದ್ರ ಇವರಿಬ್ಬರಿಗೆ ಇರುವಂತೆ ಯಾವುದೋ ಒಂದು ಬಗೆಯ ಕಾಂತಿಯುಂಟಾಯಿತು" ಇಲ್ಲಿ ಹಿಮದಿಂದ ಬಿಡುಗಡೆಯಾದ ಚಿತ್ತಾನಕ್ಷತ್ರಕ್ಕೂ ಚಂದ್ರನಿಗೂ ಹೇಮಂತಕಾಲ ಕಳೆದಮೇಲೆ ಯಾವಾಗಲೂ ಅಂದರೆ ವರ್ಷಕಾಲದಲ್ಲೂ ಕಾಂತಿ ಇರುವ ಪ್ರಯುಕ್ತ ಇಲ್ಲಿ ಆಸೀತ್ ಎಂಬ ಭೂತಕಾಲದ ಕ್ರಿಯಾಪದವನ್ನು ತಿಳಿಸಿದ್ದರಿಂದ ಇದ ಭಗ್ನಪ್ರಕ್ರಮವೆನಿಸಿದೆ. "ಎಲೈ ಕೃಶಾಂಗಿ, ನೀನು ಲತೆಯಂತೆ ಶೋಭಿಸುವೆ" ಇಲ್ಲಿ 'ಲತೆಯು ಶೋಭಿಸುತ್ತದೆ; ಹಾಗೆಯೇ ನೀನು ಶೋಭಿಸುತ್ತಿರುವೆ' ಎಂದು ಉಪಮಾನವೆನಿಸಿದ ಲತೆಗೆ ಪ್ರಥಮಪುರುಷದ ಕ್ರಿಯಾಪದವನ್ನೂ ನೀನು ಎಂಬ ಉಪಮೇಯಪದಕ್ಕೆ ಮಧ್ಯಮಪುರುಷದ ಕ್ರಿಯಾಪದವನ್ನೂ ಉಪಯೋಗಿಸಬೇಕಾಗಿತ್ತು, ಹಾಗೆ ಉಪಯೋಗಿಸದೇ ಇರುವುದರಿಂದ ಇಲ್ಲಿ ಭಗ್ನಪ್ರಕ್ರಮದೋಷವಿದೆ. "ನಿನ್ನ ಮಗನು ಮಾರ್ಕಂಡೇಯಮುನಿಯಂತೆ ಬಹುಕಾಲ ಬದುಕಲಿ" ಇಲ್ಲಿ ಮಾರ್ಕಂಡೇಯಮುನಿಯು ಹೇಗೆ ಚಿರಂಜೀವಿಯಾಗಿರುವನೋ ಹಾಗೆ ನಿನ್ನ ಮಗನು ಚಿರಂಜೀವಿಯಾಗಲಿ" ಎಂದು ಹೇಳಬೇಕಾಗಿತ್ತು. ಮಾರ್ಕಂಡೇಯಮುನಿಗೆ ಚಿರಜೀವನ

ವನ್ನು ಜೀವತು ಎಂಬುದರಿಂದ ವಿಧಿಸಬೇಕಾಗಿಲ್ಲ. ಅವನು ಸ್ವತಃ ಚಿರಂಜೀವಿಯಾದ್ದರಿಂದ ಅವನಲ್ಲಿ ಅದರ ವಿಧಿಯು ಸಂಭವಿಸುವುದಿಲ್ಲ. ಇಲ್ಲದ್ದನ್ನು ದೊರಕಿಸುವುದೇ ವಿಧಿ ಎನಿಸುವುದು. ಹೀಗೆ ವಿಧಿಯಲ್ಲಿ ಭೇದವಿರುವುದರಿಂದ ಇದು ಭಗ್ನಪ್ರಕ್ರಮವೆನಿಸಿದೆ.

ಇಹ ತು ಯತ್ರ ಲಿಂಗವಚನಭೇದೇಽಪಿ ನ ಸಾಧಾರಣಧರ್ಮಸ್ಯ ಅನ್ಯಥಾಭಾವಸ್ತತ್ರ ನ ದೋಷಃ. ಕ್ರಮೇಣೋದಾಹರಣಮ್. 'ಮುಖಂ ಚಂದ್ರಂ ಇವಾಭಾತಿ.

ತದ್ವೇಶೋಽಸದೃಶೋಽನ್ಯಾಭಿಃ ಸ್ತ್ರೀಭಿರ್ಮಧುರತಾಭೃತಃ ।
ದಧತೇ ಸ್ಮ ಪರಾಂ ಶೋಭಾಂ ತದೀಯಾ ವಿಭ್ರಮಾ ಇವ ॥

ಪೂರ್ವೋದಾಹರಣೇಷು ಉಪಮಾನೋಪಮೇಯಯೋರೇಕಸ್ಯೈವ ಸಾಧಾರಣಧರ್ಮೇಣಾನ್ವಯಸಿದ್ಧೇಃ ಪ್ರಕ್ರಾಂತಸ್ಯಾರ್ಥಸ್ಯ ಸ್ಫುಟೋಽನಿರ್ವಾಹಃ.

ಏವಮನುಪ್ರಾಸೇ ವೈಫಲ್ಯಸ್ಯಾಪುಷ್ಟಾರ್ಥತ್ವಮ್. ಯಥಾ—

ಅನಣುರಣನ್ಮಣಿಮೇಖಲಮವಿರಲಶಿಂಜಾನಮಂಜುಮಂಜೀರಮ್ ।
ಪರಿಸರಣಮರುಣಚರಣೇ ! ರಣರಣಕಮಕಾರಣಂ ಕುರುತೇ ॥

ಏವಂ ಸಮಾಸೋಕ್ತೌ ಸಾಧಾರಣವಿಶೇಷಣವಶಾತ್ ಪರಾರ್ಥಸ್ಯ ಪ್ರತೀತಾವಪಿ ಪುನಸ್ತಸ್ಯ ಶಬ್ದೇನೋಪಾದನಸ್ಯ ಅಪ್ರಸ್ತುತಪ್ರಶಂಸಾಯಾಂ ವ್ಯಂಜನಯೈವ ಪ್ರಸ್ತುತಾರ್ಥಾವಗತೇಃ ಶಬ್ದೇನ ತದಭಿಧಾನಸ್ಯ ಚ ಪುನರುಕ್ತತ್ವಮ್.

ಕ್ರಮೇಣೋದಾಹರಣಮ್.

ಅನುರಾಗವಂತಮಪಿ ಲೋಚನಯೋರ್ದಧತಂ ವಪುಃ ಸುಖಮತಾಪಕರಮ್ ।
ನಿರಕಾಸಯದ್ರವಿಮಪೇತವಸುಂ ವಿಯದಾಲಯಾದಪರದಿಗ್ಗಣಿಕಾ ॥

ಅತ್ರ ಅಪರದಿಗಿತ್ಯೇತಾವತೈವ ತಸ್ಯಾ ಗಣಿಕಾತ್ವಂ ಪ್ರತೀಯತೇ.

ಆಹೂತೇಷು ವಿಹಂಗಮೇಷು ಮಶಕೋ ನಾಯಾನ್ ಪುರೋ ವಾರ್ಯತೇ
ಮಧ್ಯೇ ವಾ ಧುರಿ ವಾ ವಸನ್ ತೃಣಮಣಿರ್ಧತ್ತೇ ಮಣೀನಾಂ ಧುರಮ್ ॥
ಖದ್ಯೋತೋಽಪಿ ನ ಕಂಪತೇ ಪ್ರಚಲಿತುಂ ಮಧ್ಯೇಽಪಿ ತೇಜಸ್ವಿನಾಂ
ಧಿಕ್ಸಾಮಾನ್ಯಮಚೇತಸಂ ಪ್ರಭುಮಿವಾನಾಮೃಷ್ಟತತ್ತ್ವಾಂತರಮ್ ॥

ಅತ್ರ ಅಚೇತಸಃ ಪ್ರಭೋರಭಿಧಾನಮನುಚಿತಮ್.

ಏವಮನುಪ್ರಾಸೇ ಪ್ರಸಿದ್ಧ್ಯಭಾವಸ್ಯ ಖ್ಯಾತವಿರುದ್ಧತ್ವಮ್. ಯಥಾ—

ಚಕ್ರಾಧಿಷ್ಠಿತತಾಂ ಚಕ್ರೀ ಗೋತ್ರಂ ಗೋತ್ರಭಿದುಚ್ಛ್ರಿತಮ್ ।
ವೃಷಂ ವೃಷಭಕೇತುಶ್ಚ ಪ್ರಾಯಚ್ಛನ್ಯಸ್ಯ ಭೂಭುಜಃ ॥

ಉಕ್ತದೋಷಾಣಾಂ ಚ ಕ್ವಚಿದದೋಷತ್ವಂ ಕ್ವಚಿದ್ಗುಣತ್ವಮಿತ್ಯಾಹ—

ವಕ್ತರಿ ಕ್ರೋಧಸಂಯುಕ್ತೇ ತಥಾ ವಾಚ್ಯೇ ಸಮುದ್ಧತೇ ।
ರೌದ್ರಾದೌ ತು ರಸೇಽತ್ಯಂತಂ ದುಃಶ್ರವತ್ವಂ ಗುಣೋ ಭವೇತ್ ॥

ಏಷು ಚ ಆಸ್ವಾದಸ್ವರೂಪವಿಶೇಷಾತ್ಮಕತಯಾ ಮುಖ್ಯಗುಣಸ್ಯ ಉತ್ಕರ್ಷೋಪಕಾರಿತ್ವಾತ್ ಗುಣ ಇತಿ ವ್ಯಪದೇಶೋ ಭಾಕ್ತಃ. ಕ್ರಮೇಣ ಯಥಾ—

ತದ್ವಿಚ್ಛೇದಕೃಶಸ್ಯ ಕಂಠಲುಲಿತಪ್ರಾಣಸ್ಯ ಮೇ ನಿರ್ದಯಂ
ಕ್ರೂರಃ ಪಂಚಶರಃ ಶರೈರತಿಶಿತೈರ್ಭಿಂದನ್ ಮನೋ ನಿರ್ಭರಮ್ ।
ಶಂಭೋರ್ಭೂತಕೃಪಾವಿಧೇಯಮನಸಃ ಪ್ರೋದ್ದಾಮನೇತ್ರಾನಲ
ಜ್ವಾಲಾಜಾಲಕರಾಲಿತಃ ಪುನರಸಾವಾಸ್ತಾಂ ಸಮಸ್ತಾತ್ಮನಾ ॥

ಅತ್ರ ಶೃಂಗಾರೇ ಕುಪಿತೋ ವಕ್ತಾ.

ಮೂರ್ಧವ್ಯಾಧೂಯಮಾನಧ್ವನದಮರಧುನೀಲೋಲಕಲ್ಲೋಲಜಾಲೋ
ದ್ಧೂತಾಂಭಃಕ್ಷೋದದಂಭಾತ್ ಪ್ರಸಭಮಭಿನಭಃ ಕ್ಷಿಪ್ರನಕ್ಷತ್ರಲಕ್ಷಮ್ ॥
ಊರ್ಧ್ವನ್ಯಸ್ತಾಂಘ್ರಿದಂಡಭ್ರಮಿಭವರಸೋದ್ಯನ್ನಭಸ್ವತ್ಪ್ರವೇಗ
ಭ್ರಾಂತಬ್ರಹ್ಮಾಂಡಖಂಡಂ ಪ್ರವಿತರತು ಶಿವಂ ಶಾಂಭವಂ ತಾಂಡವಂ ವಃ ॥

ಅತ್ರೋದ್ಧತತಾಂಡವಂ ವಾಚ್ಯಮ್. ರೌದ್ರಾದಿರಸೇ ತು ಏತದ್ದ್ವಿತ ಯಾಪೇಕ್ಷಯಾಪಿ ದುಃಶ್ರವತ್ವಮತ್ಯಂತಂ ಗುಣಃ. ಯಥಾ—

'ಉತ್ಕೃತ್ಯೋತ್ಕೃತ್ಯ ಕೃತ್ತಿಮ್' ಅತ್ರ ಬೀಭತ್ಸೋ ರಸಃ
ಸುರತಾರಂಭಗೋಷ್ಠ್ಯಾದಾ ಅಶ್ಲೀಲತ್ವಂ ತಥಾ ಪುನಃ ।

ತಥಾ ಪುನರಿತಿ ಗುಣ ಏವ—ಯಥಾ.

ಕರಿಹಸ್ತೇನ ಸಂಬಾಧೇ ಪ್ರವಿಶ್ಯಾಂತರ್ವಿಲೋಡಿತೇ ।
ಉಪಸರ್ಪನ್ ಧ್ವಜಃ ಪುಂಸಃ ಸಾಧನಾಂತರ್ವಿರಾಜತೇ ।

ಅತ್ರ ಹಿ ಸುರತಾರಂಭಗೋಷ್ಠ್ಯಾಂ 'ದ್ವ್ಯರ್ಥೈಃ ಪದೈಃ ಪಿಶುನಯೇಚ್ಚ ರಹಸ್ಯ ವಸ್ತು' ಇತಿ ಕಾಮಶಾಸ್ತ್ರಸ್ಥಿತಿಃ. ಆದಿಶಬ್ದಾತ್ ಶಮಕಥಾಪ್ರಭೃತಿಷು ಬೋದ್ಧವ್ಯಮ್

ಉಪಮಾದೋಷಗಳನ್ನು ತಿಳಿಸುವ ಪ್ರಕರಣದಲ್ಲಿ ಉಪಮನೋಪಮೇಯಗಳ ಲಿಂಗವಚನಗಳಲ್ಲಿ ಭೇದವಿದ್ದರೂ ಸಹ ಸಾಧಾರಣಧರ್ಮವನ್ನು ತಿಳಿಸುವ ಪದವು ಏಕಕಾಲದಲ್ಲಿ ಉಪಮಾನೋಪಮೇಯಗಳೆರಡರಲ್ಲೂ ಅನ್ವಯಿಸುವುದಾದರೆ ಆಗ ಲಿಂಗ ವಚನಭೇದವು ದೋಷವಾಗುವುದಿಲ್ಲ. ಇದನ್ನು ಈಗ ಉದಾಹರಿಸುತ್ತಾನೆ. "ಮುಖವು ಚಂದ್ರನಂತೆ ಶೋಭಿಸುತ್ತದೆ" ಇಲ್ಲಿ ಮುಖಚಂದ್ರಗಳಿಗೆ ಲಿಂಗಭೇದದಿಂದ ಪ್ರಕ್ರಮ ಭಂಗವಿದ್ದರೂ ಸಹ ಆಭಾತಿ ಎಂಬುದು ಎರಡಕ್ಕೂ ಏಕಕಾಲದಲ್ಲಿ ಅನ್ವಯಿಸುತ್ತದೆ. ಹೀಗೆ ಪ್ರಕಾಶನಕ್ರಿಯೆಯ ಮೂಲಕ ಸ್ವರೂಪದಲ್ಲಿ ವೈಷಮ್ಯವಿಲ್ಲದ್ದರಿಂದ ಇಲ್ಲಿ ಭಗ್ನಪ್ರಕ್ರಮದೋಷವಿಲ್ಲ. ಹಾಗೆಯೇ ವಚನಭೇದವಿದ್ದರ ಭಗ್ನಪ್ರಕ್ರಮದೋಷ ವಿರುವುದಿಲ್ಲವೆಂಬುವನ್ನು ತಿಳಿಸುತ್ತಾನೆ. "ಬೇರೆ ಸ್ತ್ರೀಯರಿಗೆ ಹೋಲಿಕೆಯಿಲ್ಲದ ಆಕೆಯ ಉಡುವು ಮಾಧುರ್ಯವನ್ನು ಹೊಂದಿದ್ದು ಆಕೆಯ ವಿಲಾಸಗಳಂತೆಯೇ ಹೆಚ್ಚಿನ ಶೋಭೆಯನ್ನು ಹೊಂದಿದೆ." ಇಲ್ಲಿ ತದ್ವೇಷಃ ಎಂಬುದರೊಡನೆ ಅನ್ವಯಿಸಲು ಅಸದೃಶಃ ಎಂಬುದನ್ನು ಟಕ್‌ಪ್ರತ್ಯಯಾಂತವಾಗಿಯೂ ಮಧುರತಾಭೃತಃ ಎಂಬಲ್ಲಿ ಭೃಧಾತುವಿಗೆ ಕ್ತಪ್ರತ್ಯಯವನ್ನು ಹಚ್ಚಿದ್ದರಿಂದ ಅಕಾರಾಂತವಾಗಿಯೂ ಭಾವಿಸಿ ಅವನ್ನು

ಏಕವಚನವೆಂದು ತಿಳಿಯಬೇಕು. ದಧತೇ ಎಂಬಲ್ಲಿ ಧಾಧಾತುವಿಗೆ ಲಟ್‌ನಲ್ಲಿ ಪ್ರಥಮ ಪುರುಷದ ಏಕವಚನವೆಂದು ಗ್ರಹಿಸಬೇಕು. ಹೀಗೆಯೇ ವಿಭ್ರಮಾಃ ಎಂಬಲ್ಲಿ ಅನ್ವಯಿಸಲು ಅಸದೃಶಃ, ಮಧುರತಾಭೃತಃ ಎಂಬಲ್ಲಿ ಕ್ವಿಪ್‌ಪ್ರತ್ಯಯವನ್ನು ಹಚ್ಚಿ ವ್ಯಂಜನಾಂತವಾದ್ದರಿಂದ ಬಹುವಚನಗಳೆಂದೂ' ದಧತೇ ಎಂಬಲ್ಲಿ ಧಾಧಾತುವನ್ನು ಲಟ್ ಲಕಾರದ ಪ್ರಥಮಪುರುಷ ಬಹುವಚನವೆಂದೂ ಗ್ರಹಿಸಬೇಕು. ಹೀಗೆ ಉಪಮಾನೋಪಮೇಯಗಳಲ್ಲಿ ವಚನಭೇದದಿಂದ ಪ್ರಕ್ರಮಭಂಗವಿದ್ದರೆ ಅಸದೃಶ ಮೊದಲಾದ ಶಬ್ದಗಳಲ್ಲಿ ಸ್ವರೂಪವೈಷಮ್ಯವಿಲ್ಲದ್ದರಿಂದ ದೋಷವು ತೊಲಗುತ್ತದೆ. ಹಿಂದೆ ಕೊಟ್ಟಿರುವ 'ಸುಧೇವ ವಿಮಲಶ್ಚಂದ್ರಃ' ಇತ್ಯಾದಿ ಉದಾಹರಣಗಳಲ್ಲ ಸಾಧಾರಣಧರ್ಮದೊಡನೆ ಅನ್ವಯವುಂಟಾಗಲು ಸುಧಾ ಮೊದಲಾದ ಪದಗಳ ಅರ್ಥವು ಸ್ಪಷ್ಟವಾಗಿ ಪ್ರಕಾಶವಾಗುವುದಿಲ್ಲ, ವಿಮಲಶಬ್ದವು ಪುಲ್ಲಿಂಗದಲ್ಲಿದ್ದು ಚಂದ್ರನಿಗೆ ವಿಶೇಷಣವೆನಿಸಿದ್ದರಿಂದ ಅವರೊಡನೆಯೇ ಅಲ್ಲಿ ಅನ್ವಯವು ಬರುತ್ತದೆ. ಹೀಗೆ ಸುಧಾಶಬ್ದದ ಅರ್ಥಕ್ಕೆ ವಿಮಲ ಪದಾರ್ಥದೊಡನೆ ಅನ್ವಯವಾಗದ ಪ್ರಯುಕ್ತ ಸುಧಾ ವಿಮಲೇವ ಎಂದು ಬೇರೊಂದು ಪದವನ್ನು ಅಪೇಕ್ಷಿಸುತ್ತದೆ. ಆದ್ದರಿಂದಲೇ ಕೆಲವರು ಉಪಮೇಯದಲ್ಲಿ ಕಾಣಬರುವ ದೋಷವನ್ನು ಅಭವನ್ಮತಸಂಬಂಧವೆಂಬ ದೋಷದಲ್ಲಿ ಸೇರಿಸುತ್ತಾರೆ.

ಹೀಗೆಯೇ ಅನುಪ್ರಾಸದಲ್ಲಿ ಶಬ್ದಗಳನ್ನು ವ್ಯರ್ಥವಾಗಿ ಜೋಡಿಸಿದ್ದು ಅಪುಷ್ಟಾರ್ಥವೆಂಬ ದೋಷದಲ್ಲಿ ಸೇರುತ್ತದೆ. ತಿರುಗಾಡುತ್ತಿರುವ ಒಬ್ಬ ಸ್ತ್ರೀಯನ್ನು ನೋಡಿ ಒಬ್ಬ ಕಾಮುಕನು ಹೇಳುವ ಈ ಮಾತಿನಲ್ಲಿ ಅದನ್ನು ಕಾಣಬಹುದು. "ಅಲಕ್ತಕವನ್ನು ಹಚ್ಚಿರುವುದರಿಂದ ಪಾದಗಳನ್ನು ಕೆಂಪಗೆ ಮಾಡಿಕೊಂಡಿರುವವಳೇ, ರತ್ನಗಳಿಂದ ಕೆತ್ತಿರುವ ಡಾಬು ದೀರ್ಘವಾಗಿ ಶಬ್ದಮಾಡುತ್ತಿರುವುದರಿಂದಲೂ, ಹಾಗೆಯೇ ಕಾಲುಕಡಗಗಳು ಯಾವಾಗಲೂ ಅವ್ಯಕ್ತಮಧುರವಾಗಿ ಅಳ್ಳಾಡುತ್ತಿರುವುದರಿಂದಲೂ ನಿನ್ನ ಸಂಚಾರವು ನಿರರ್ಥಕವಾಗಿ ನನಗೆ ಉದ್ವೇಗವನ್ನು ಹುಟ್ಟಿಸುತ್ತಲಿದೆ. ಪರಪುರುಷನಲ್ಲಿ ನಿನಗೆ ಆಶೆಯೇ ಇಲ್ಲದ್ದರಿಂದ ನನ್ನ ಆಶೆಯನ್ನು ಪೂರೈಸಲಾಗದ ಪ್ರಯುಕ್ತ ಈ ಶಬ್ದವೆಲ್ಲವೂ ನಿರರ್ಥಕವೆನಿಸಿದೆ." ಮಣಿಮೇಖಲಗಳ ಮೃದುವಾದ ಶಬ್ದವೇ ಮದನೋದ್ವೇಗವನ್ನು ಹುಟ್ಟಿಸಬಲ್ಲದು ; ಆದರೆ ದೀರ್ಘವಾದ ಶಬ್ದದಿಂದ ಹಾಗೆ ಉದ್ವೇಗವುಂಟಾಗುವುದಿಲ್ಲ. ಆದ್ದರಿಂದ ಇಲ್ಲಿ ಅನಣು ಎಂಬ ಪದವನ್ನು ಕೇವಲ ಅನುಪ್ರಾಸಕ್ಕಾಗಿಯೇ ಜೋಡಿಸಿದೆ. ಇಲ್ಲಿ ಕಣಕಣ ಎಂಬ ಶಬ್ದಕ್ಕೆ ಅದರಿಂದ ಯಾವ ಉಪಕಾರವೂ ಆಗುತ್ತಿಲ್ಲ. ಹೀಗೆ ಮುಖ್ಯಾರ್ಥಕ್ಕೆ ಇದರಿಂದ ಯಾವ ಪ್ರಯೋಜನವೂ ಇಲ್ಲದ ಪ್ರಯುಕ್ತ ಇದು ಅಪುಷ್ಟಾರ್ಥವೆನಿಸಿದೆ.

ಹೀಗೆಯೇ ಸಮಾಸೋಕ್ತಿಯಲ್ಲಿ ವಿಶೇಷಣಗಳು ಪ್ರಕೃತಾರ್ಥಕ್ಕೂ ಅಪ್ರಕೃತಾರ್ಥಕ್ಕೂ ಸಾಧಾರಣವೆನಿಸಿರುವುದರಿಂದ ಅಪ್ರಕೃತಾರ್ಥವು ತೋರಿದರೂ ಸಹ ಅದನ್ನು ಶಬ್ದದಿಂದ ತಿಳಿಸಿದ್ದು ಪುನರುಕ್ತವೆನಿಸುತ್ತದೆ. ಹಾಗೆಯೇ ಅಪ್ರಸ್ತುತಪ್ರಶಂಸೆಯಲ್ಲಿ ವ್ಯಂಜನಾವೃತ್ತಿಯಿಂದಲೇ ಪ್ರಕೃತಾರ್ಥವು ತಿಳಿದುಬರುವುದರಿಂದ ಅದನ್ನು ಶಬ್ದದಿಂದ

ತಿಳಿಸುವುದೂ ಸಹ ಪುನರುಕ್ತವೆನಿಸುತ್ತದೆ. ಇವೆರಡಕ್ಕೂ ಕ್ರಮವಾಗಿ ಉದಾಹರಣ ಗಳನ್ನು ತಿಳಿಸುತ್ತಾನೆ. "ಪಶ್ಚಿಮದಿಕ್ಕೆಂಬ ವೇಶ್ಯೆಯು ಅಸ್ತಕಾಲದಲ್ಲಿ ಕೆಂಪಗಿರುವ ವನಾದರೂ (ತನ್ನ ಬಗ್ಗೆ ಪ್ರೇಮವುಳ್ಳವನಾದರೂ) ಕಣ್ಣುಗಳಿಗೆ ಹಿತವಾಗುವಂತೆಯೂ ತೇಜಸ್ಸಿಲ್ಲದ್ದರಿಂದ (ಶಾಂತಪ್ರಕೃತಿಯಿರುವುದರಿಂದ) ಸಂತಾಪವನ್ನು ಕೊಡುತ್ತಲೂ ಇರುವ ಶರೀರವನ್ನು ಧರಿಸಿದ್ದು, ಅಸ್ತೋನ್ಮುಖನಾದ್ದರಿಂದ ಕಿರಣಗಳಿಲ್ಲದಿರುವ (ತನಗೆ ಎಲ್ಲವನ್ನೂ ಕೊಟ್ಟದ್ದರಿಂದಲೇ ದರಿದ್ರನಾಗಿರುವ) ಸೂರ್ಯನನ್ನು (ವಿಟನನ್ನು) ಆಕಾಶಗೃಹದಿಂದ ಬೇರೊಂದು ದ್ವೀಪಕ್ಕೆ ತೊಲಗಿಸಿದಳು" ''ಇಲ್ಲಿ 'ಅನುರಾಗವಂತ ಮಪಿ' ಮೊದಲಾದ ವಿಶೇಷಣಗಳು ಸೂರ್ಯನಿಗೂ ವಿಟನಿಗೂ ಸಾಧಾರಣವೆನಿಸಿರುವು ದರಿಂದ 'ಅಪರದಿಕ್' ಎಂಬ ಪದವಷ್ಟರಿಂದಲೇ ವೇಶ್ಯೆ ಎಂಬ ಅರ್ಥವು ವ್ಯಂಗ್ಯವಾಗಿ ತೋರುತ್ತಿತ್ತು. ಅದನ್ನು ಇಲ್ಲಿ ಶಬ್ದದಿಂದಲೇ ತಿಳಿಸಿದ್ದು ಪುನರುಕ್ತವೆನಿಸಿದೆ. ಹೀಗೆ ಸಮಾಸೋಕ್ತಿಯಲ್ಲಿ ಕಂಡುಬರುವ ದೋಷವನ್ನು ತಿಳಿಸುತ್ತಾನೆ. ಭಲ್ಲಟಶತಕದ ಈ ಪದ್ಯದಲ್ಲಿ ಇದನ್ನು ಕಾಣಬಹುದು. "ಪಕ್ಷಿಗಳನ್ನು ಕರೆಯಲಾಗಿ ತನ್ನನ್ನು ಪಕ್ಷಿ ಎಂದು ಭಾವಿಸಿದ ಸ್ತ್ರೀಳ್ಳೆಯು ಮೊದಲೇ ಬಂದರೂ ಅದನ್ನು ಯಾರೂ ತಡೆಯುದಿಲ್ಲ. ಸಾಮಾನ್ಯಮಣಿಯೊಂದು ಮರಕತ ಮೊದಲಾದ ರತ್ನಗಳಮಧ್ಯದಲ್ಲೋ ತುದಿಯಲ್ಲೋ ನೆಲಸಿದ್ದು ಮಣಿಗಳ ಗೌರವವನ್ನೇ ಹೊರುತ್ತದೆ. ಹಾಗೆಯೇ ತೇಜಸ್ವಿಗಳಾದ ಚಂದ್ರ ನಕ್ಷತ್ರ ಮೊದಲಾದವುಗಳ ಮಧ್ಯದಲ್ಲಿ ಮಿಂಚಿನ ಹುಳುವೂ ಸಹ ಸಂಚರಿಸಲು ನಡುಗುವುದಿಲ್ಲ. ಆದ್ದರಿಂದ ಯಥಾರ್ಥವಾದ ಭೇದವನ್ನೇ ತಿಳಿಯದಿರುವ ನೀಚ ನಾದ ರಾಜನಿಗೂ ಸ್ವಪರಭೇದವನ್ನು ತಿಳಿಯುವಷ್ಟು ಬುದ್ಧಿಯೇ ಇಲ್ಲದಿರುವ ಆ ನೊಣ ಮೊದಲಾದವುಗಳಿಗೂ ಧಿಕ್ಕಾರವಿರಲಿ.'' ಇಲ್ಲಿ ಅಪ್ರಕೃತವೂ ಪ್ರಕೃತವಸ್ತು ವಿಗೆ ಸಮಾನವೂ ಆದ ನೊಣ ಮೊದಲಾದವುಗಳನ್ನು ತಿಳಿಸಿದ್ದರಿಂದಲೇ ವ್ಯಂಜನಾ ವೃತ್ತಿಯಿಂದ ಕ್ಷುದ್ರವೆನಿಸಿದ ರಾಜನು ತಿಳಿಯಬರುವುದರಿಂದ ಅಂತಹ ರಾಜನನ್ನು ಇಲ್ಲಿ ಅಚೇತಸಃ ಪ್ರಭೋಃ ಎಂದು ಶಬ್ದದಿಂದ ತಿಳಿಸಿದ್ದು ಅನುಚಿತವೆನಿಸಿದೆ. ಹೀಗೆಯೇ ಅನುಪ್ರಾಸದಲ್ಲಿ ಅದಕ್ಕಾಗಿಯೇ ಶಬ್ದಗಳನ್ನು ಜೋಡಿಸಿರುವ ಪ್ರಯುಕ್ತ ಇಷ್ಟವಾದ ರೀತಿಯಲ್ಲಿ ಪದಾರ್ಥಗಳನ್ನು ಅನ್ವಯಿಸಲು ಪ್ರಸಿದ್ಧಿಯೇ ಇಲ್ಲದ್ದರಿಂದ ಅದು ಖ್ಯಾತಿ ವಿರುದ್ಧವೆನಿಸುತ್ತದೆ. "ಯಾವ ರಾಜನಿಗೆ ವಿಷ್ಣುವು ಸಾರ್ವಭೌಮಸ್ಥಾನವನ್ನೂ, ಇಂದ್ರನು ಉನ್ನತವಂಶವನ್ನೂ, ಶಿವನು ಧರ್ಮವನ್ನೂ ಕೊಟ್ಟನೋ'' ಇಲ್ಲಿ ಚಕ್ರ ಮೊದಲಾದ ಪದಗಳನ್ನು ಕೇವಲ ಅನುಪ್ರಾಸವನ್ನೂ ಹೊಂದಿಸಲಿಕ್ಕಾಗಿಯೇ ಸೇರಿಸಿದೆ. ವಿಷ್ಣು ಚಕ್ರವರ್ತಿಸ್ಥಾನವನ್ನೂ, ಇಂದ್ರನು ಉಚ್ಚಕುಲವನ್ನೂ, ಶಿವನು ಧರ್ಮವನ್ನೂ ಕೊಡುವನೆಂಬುದು ಲೋಕದಲ್ಲಾಗಲೀ ಶಾಸ್ತ್ರದಲ್ಲಾಗಲೀ ಪ್ರಸಿದ್ಧವೆನಿಸಿಲ್ಲ. ಆದ್ದ ರಿಂದ ಇದು ಖ್ಯಾತವಿರುದ್ಧವೆನಿಸಿದೆ.

ಹಿಂದೆ ಹೇಳಿದ ದೋಷಗಳಲ್ಲಿ ಕೆಲವು ಅನಿತ್ಯವೆನಿಸಿದ್ದರಿಂದ ದೋಷಗಳೇ ಆಗುವುದಿಲ್ಲ. ಮತ್ತು ಕೆಲವು ರಸಕ್ಕೆ ಉತ್ಕರ್ಷವನ್ನುಂಟುಮಾಡುತ್ತ ಗುಣಗಳೆನಿಸು

ತ್ತವೆ ಎಂಬುದನ್ನು ಈಗ ತಿಳಿಸುತ್ತಾನೆ. ಮಾತನ್ನು ಆಡುವವನು ಕ್ರೋಧದಿಂದ ಕೂಡಿದ್ದರೂ, ಹಾಗೆಯೇ ಅವನಾಡುವ ಮಾತು ಬಹಳ ಭಯಂಕರವಾಗಿದ್ದರೂ ಆಗ ರೌದ್ರ ಮೊದಲಾದ ರಸಗಳಲ್ಲಿ ದುಃಶ್ರವತ್ವವೆಂಬ ದೋಷವು ಗುಣವೇ ಆಗುತ್ತದೆ. ಹೀಗೆ ದೋಷವೆನಿಸಿದ ದುಃಶ್ರವತ್ವ ಮೊದಲಾದವು ಆಸ್ವಾದವೆನಿಸಿದ ರಸಕ್ಕೆ ಪೋಷಕ ವಾಗುವುದರಿಂದ ಮಾಧುರ್ಯ ಮೊದಲಾದ ಗುಣಗಳನ್ನು ಹುಟ್ಟಿಸುವ ಪ್ರಯುಕ್ತ ರಸಕ್ಕೆ ಅನುಕೂಲವೆನಿಸುತ್ತವೆ. ಆದ್ದರಿಂದ ಅವನ್ನು ಗುಣವೆಂದು ಗೌಣವಾಗಿ ಭಾವಿ ಸಲಾಗುವುದು. ವಕ್ತೃವು ಕೋಪಗೊಂಡಿರುವಾಗ ದುಃಶ್ರವತ್ವವು ಗುಣವೆನಿಸುವುದನ್ನು ಉದಾಹರಿಸುತ್ತಾನೆ. "ಆ ಪ್ರಿಯೆಯ ವಿಚ್ಛೇದದಿಂದ ಕೃಶನಾಗಿ, ಪ್ರಾಣವನ್ನೇ ತೊರೆ ಯುವುದರಲ್ಲಿರುವ ನನ್ನ ಈ ಮನಸ್ಸನ್ನು ತೀಕ್ಷ್ಣವಾದ ಬಾಣಗಳಿಂದ ನಿರ್ದಯ ನಾಗಿಯೂ ಅತ್ಯಂತವಾಗಿಯೂ ಭೇದಿಸುತ್ತಿರುವ ಕ್ರೂರನಾದ ಈ ಮನ್ಮಥನು ಎಲ್ಲಾ ಬಗೆಯಿಂದಲೂ ಪ್ರಾಣಿಗಳಿಗೆ ದಮೆಕರಿಸುವಂತಹ ಶಂಭುವಿನ ಉರಿಯುವ ಮೂರನೆಯ ಕಣ್ಣಿನ ಜ್ವಾಲೆಗಳ ಸಮೂಹಕ್ಕೆ ಸಿಲುಕಿ ಭಯಗೊಳ್ಳಲಿ" ಇಲ್ಲಿ ಮನ್ಮಥನ ಬಗ್ಗೆ ಹುಟ್ಟಿರುವ ಕ್ರೋಧವು ವಾಸ್ತವಿಕವೆನಿಸದೆ ಮನಸ್ಸಿನಲ್ಲಿ ಕ್ಷೋಭೆಯನ್ನಷ್ಟೇ ಉಂಟು ಮಾಡಿರುವುದರಿಂದ ಅದು ಸ್ಥಾಯಿಭಾವವೆನಿಸಿಲ್ಲದ ಪ್ರಯುಕ್ತ ಇಲ್ಲಿ ರೌದ್ರರಸವಿಲ್ಲ. ಆದರೆ ರತಿಯೇ ಇಲ್ಲಿ ಸ್ಥಾಯಿ ಎನಿಸಿದ್ದರಿಂದ ಶೃಂಗಾರರಸವೇ ತೋರುತ್ತದೆ. ಇದನ್ನು ಹೇಳುವವನು ಕೋಪಗೊಂಡಿರುವುದರಿಂದ ಇಲ್ಲಿ ಅವಶ್ಯವಾಗಿ ಓಜೋಗುಣವೂ, ಅದಕ್ಕೆ ಬೇಕಾದ ವಿಕಟವರ್ಣಗಳೂ ಇರಲೇಬೇಕಾದ್ದರಿಂದ ಇಲ್ಲಿ ಬಂದಿರುವ ವಿಕಟವರ್ಣಗಳ ಸಂಬಂಧವಾದ ದುಃಶ್ರವತ್ವವು ಗುಣವೇ ಆಗಿದೆ. ಹೇಳುವ ಮಾತು ಬಹಳ ಭಯಂ ಕರವಾಗಿದ್ದರೆ ದುಃಶ್ರವತ್ವವು ಗುಣವೆನಿಸುವುದಕ್ಕೆ ಉದಾಹರಣವನ್ನು ತಿಳಿಸುತ್ತಾನೆ. "ಶರೀರವನ್ನು ಅಳ್ಳಾಡಿಸುವುದರಿಂದ ನಡುಗುತ್ತಿರುವ ಗಂಗೆಯ ಮಹಾತರಂಗಗಳ ಸಮೂಹದಿಂದ ಮೇಲಕ್ಕೆ ಎದ್ದ ನೀರಿನ ತುಂತುರುಗಳ ಛಲದಿಂದ ಆಕಾಶದಲ್ಲಿ ಹಠ ತ್ತಾಗಿ ನಕ್ಷತ್ರಗಳ ಸಮೂಹವನ್ನು ಎರಚುತ್ತಲೂ, ಮೇಲಕ್ಕೆ ಎತ್ತಿರುವ ಪಾದವನ್ನು ತಿರುಗಿಸುವುದರಿಂದ ಹುಟ್ಟುವ ವೇಗದಿಂದ ಹೊರಡುವ ಗಾಳಿಯ ಪ್ರವೇಶದಿಂದ ಬ್ರಹ್ಮಾಂಡಗಳೇ ಅಳ್ಳಾಡುತ್ತಲೂ ಇರುವಂತೆ ನಡೆಯುತ್ತಿರುವ ಶಿವನ ತಾಂಡವ ಲೀಲೆಯು ನಿಮಗೆ ಕ್ಷೇಮವನ್ನುಂಟುಮಾಡಲಿ' ಇಲ್ಲಿ ಉದ್ಧತವಾದ ತಾಂಡವವು ಬಹಳ ಭಯಂಕರವಾಗಿತ್ತೆಂದು ತಿಳಿಸುವುದೇ ಮುಖ್ಯವಿಷಯ. ವಿಕಟವಾದ ವರ್ಣಗಳನ್ನು ಇಲ್ಲಿ ಪ್ರಯೋಗಿಸಿದ್ದು ಅನಿವಾರ್ಯವೆನಿಸಿವೆ. ಶಿವನ ಬಗ್ಗೆ ವಕ್ತೃವಿಗೆ ಇರುವ ರತಿ ಯನ್ನು ಸಹೃದಯನು ಆಸ್ವಾದಿಸಲು ಈ ದುಃಶ್ರವತ್ವವು ಗುಣವೆನಿಸಿವೆ. ವಿಷಯವು ಉದ್ಧತವಾಗಿರುವುದಕ್ಕಿಂತಲೂ, ಹೇಳುವವನು ಕೋಪಗೊಂಡಿರುವುದಕ್ಕಿಂತಲೂ ರೌದ್ರ ರಸದಲ್ಲಿ ದುಃಶ್ರವತ್ವವು ಅತ್ಯಂತ ಅನುಕೂಲವೆನಿಸಿರುವ ಪ್ರಯುಕ್ತ ಗುಣವೇ ಆಗು ತ್ತದೆ. 'ಉತ್ಕೃತ್ಯೋತ್ಕೃತ್ಯಕೃತ್ತಿಮ್' ಎಂಬ ಶ್ಲೋಕದಲ್ಲಿ ದುಃಶ್ರವತ್ವವು ಅದ್ಭುತ ರಸಕ್ಕೆ ಅನುಕೂಲವೆನಿಸಿರುವ ಪ್ರಯುಕ್ತ ಗುಣವೇ ಆಗುತ್ತದೆ.

ಸುರತದ ಆರಂಭದಲ್ಲಿ ನಡೆಯುವ ಮಾತಿನಲ್ಲಿ ಅಶ್ಲೀಲವೆಂಬ ದೋಷವಿದ್ದರೂ ಗುಣವೇ ಆಗುತ್ತದೆ. ನೀಚರಾದ ಜನರು ಆಡುವ ಮಾತು ಗ್ರಾಮ್ಯವೆನಿಸಿದ್ದರೂ ಅಲ್ಲಲ್ಲಿ ರಸಪ್ರಕರ್ಷಕ್ಕೆ ಅವಕಾಶವಿರುವಂತೆ ಸುರತವನ್ನಾರಂಭಿಸುವ ಮುನ್ನ ದಂಪತಿಗಳು ಆಡುವ ಮಾತಿನಲ್ಲಿ ದೋಷವಿದ್ದರೂ ಗುಣವೆನಿಸುತ್ತದೆ. 'ಆನೆಗಳು ತಮ್ಮ ಸೊಂಡಿಲುಗಳನ್ನು ನೀಡಿಕೊಂಡು ಸೈನ್ಯಗಳನ್ನು ಪ್ರವೇಶಿಸಿ ಗಾಬರಿಗೊಳಿಸಿರಲು ವೀರಪುರುಷನ ಧ್ವಜವು ಆ ಶತ್ರುಸೈನ್ಯದೊಳಗೆ ಪ್ರವೇಶಿಸಿ ಶೋಭಿಸುತ್ತದೆ.' ಇದು ಇಲ್ಲಿ ತೋರುವ ಮೊದಲನೆಯ ಅರ್ಥವು. ಆದರೆ ಎರಡನೆಯ ಅರ್ಥವು ಸ್ತ್ರೀಯೋನಿಯಲ್ಲಿ ಪುರುಷನ ಲಿಂಗವು ಪ್ರವೇಶಿಸುವುದನ್ನು ತಿಳಿಸುವುದರಿಂದ ಅಶ್ಲೀಲವೆನಿಸಿದೆ. ಸುರತವನ್ನು ಆರಂಭಿಸುವ ಮುನ್ನ ಮಾತನಾಡುವಾಗ ರಹಸ್ಯವಿಚಾರವನ್ನು ಎರಡು ಅರ್ಥದ ಪದಗಳಿಂದಲೇ ತಿಳಿಸಬೇಕು ಎಂದು ಕಾಮಶಾಸ್ತ್ರವು ತಿಳಿಸುತ್ತದೆ. ಇಂತಹ ಪದಗಳು ಅಶ್ಲೀಲವಾದ ಅರ್ಥವನ್ನು ಬೋಧಿಸಿದರೂ ಅದು ಆಗ ಆವಶ್ಯಕವೆನಿಸಿದ್ದರಿಂದ ಗುಣವೇ ಆಗುತ್ತದೆ. ಸುರತಾರಂಭಗೋಷ್ಠಿಯಂತೆಯೇ ಶಾಂತಿಗೆ ಸಂಬಂಧಿಸಿದ ಮಾತನ್ನಾಡುವಾಗಲೂ ಅಶ್ಲೀಲವು ದೋಷವೆನಿಸುವುದಿಲ್ಲ.

ಖ್ಯಾತಾಮದೋಷೌ ಶ್ಲೇಷಾದೌ ನಿಹತಾರ್ಥಾಪ್ರಯುಕ್ತತೇ ।
ಯಥಾ–ಪರ್ವತಭೇದಿಪವಿತ್ರಂ ಜೈತ್ರಂ ನರಕಸ್ಯ ಬಹುಮತಂ ಗಹನಮ್ ।
ಹರಿಮಿವ ಹರಿಮಿವ ಹರಿಮಿವ ಸುರಸರಿದಂಭಃ ಪತನ್ನಮತ ॥

ಅತ್ರ ಇಂದ್ರಪಕ್ಷೇ ಪವಿತ್ರಶಬ್ದೋ ನಿಹತಾರ್ಥಃ ಸಿಂಹಪಕ್ಷೇ ಮತಂಗಶಬ್ದೋ ಮಾತಂಗಾರ್ಥೇಽಪ್ರಯುಕ್ತಃ.

ಗುಣಃ ಸ್ಯಾದಪ್ರತೀತತ್ವಂ ಜ್ಞತ್ವಂ ಚೇದ್ವಕ್ತೃವಾಚ್ಯಯೋಃ ।
ಯಥಾ—ತ್ವಾಮಾಮನಂತಿ ಪ್ರಕೃತಿಂ ಪುರುಷಾರ್ಥಪ್ರವರ್ತಿನೀಮ್ ।
ತದ್ದರ್ಶಿನಮುದಾಸೀನಂ ತ್ವಾಮೇವ ಪುರುಷಂ ವಿದುಃ ॥
ಸ್ವಯಂ ವಾಪಿ ಪರಾಮರ್ಶೇ ಕಥಿತಂ ಚ ಪದಂ ಪುನಃ ।
ಅಪ್ರತೀತತ್ವಂ ಗುಣ ಇತ್ಯನುಷಜ್ಜತೇ–ಯಥಾ—
ಯುಕ್ತಃ ಕಲಾಭಿಸ್ತಮಸಾಂ ವಿವೃದ್ಧ್ಯೈ ಕ್ಷೀಣಂ ಚ ತಾಭಿಃ ಕ್ಷತಯೇ ಯ ಏಷಾಮ್ ।
ಶುದ್ಧಂ ನಿರಾಲಂಬಪದಾವಲಂಬ ತಮಾತ್ಮಚಂದ್ರಂ ಪರಿಶೀಲಯಾಮಿ ॥
ವಿಹಿತಸ್ಯಾನುವಾದ್ಯತ್ವೇ ವಿಷಾದೇ ವಿಸ್ಮಯೇ ಕ್ರುಧಿ ।
ದೈನ್ಯೇಽಥ ಲಾಟಾನುಪ್ರಾಸೇಽನುಕಂಪಾಯಾಂ ಪ್ರಸಾದನೇ ॥
ಅರ್ಥಾಂತರಸಂಕ್ರಮಿತವಾಚ್ಯೇ ಹರ್ಷೇಽವಧಾರಣೇ ।

ಗುಣ ಇತ್ಯೇವ. ಯಥಾ– ಉದೇತಿ ಸವಿತಾ ತಾಮ್ರಃ ಇತ್ಯಾದಿ. ಅತ್ರ ವಿಹಿತಾನುವಾದಃ. "ಹಂತ ! ಹಂತ ! ಗತಃ ಕಾಂತೋ ವಸಂತೇ ಸಖಿ ! ನಾಗತಃ" ಅತ್ರ ವಿಷಾದಃ "ಸುನಯನೇ ! ನಯನೇ ವಿಧೇಹಿ'' ಇತ್ಯತ್ರ ಲಾಟಾನುಪ್ರಾಸಃ. 'ನಯನೇ

ತಸ್ಯೈವ ನಯನೇ ಚ' ಇತ್ಯಾದೌ ಅರ್ಥಾಂತರಸಂಕ್ರಮಿತವಾಚ್ಯಧ್ವನಿಃ. ಏವ ಮನ್ಯತ್ರ. ಸಂದಿಗ್ಧತ್ವಂ ತಥಾ ವ್ಯಾಜಸ್ತುತಿಪರ್ಯವಸಾಯಿ ಚೇತ್. ।

ಗುಣ ಇತ್ಯೇವ ಯಥಾ–ಪೃಥುಕಾರ್ತಸ್ವರಪಾತ್ರಂ ಭೂಷಿತನಿಃಶೇಷಪರಿಜನಂ ದೇವ ।
ವಿಲಸತ್ಕರೇಣು ಗಹನಂ ಸಂಪ್ರತಿ ಸಮಮಾವಯೋಃ ಸದನಮ್ ॥

ವೈಯಾಕರಣಮುಖ್ಯೇ ತು ಪ್ರತಿಪಾದ್ಯೇಽಥ ವಕ್ತರಿ ।
ಕಷ್ಟತ್ವಂ ದುಃಶ್ರವತ್ವಂ ವಾ ಗ್ರಾಮ್ಯತ್ವಮಧಮೋಕ್ತಿಷು ॥

ಗುಣ ಇತ್ಯೇವ. ಯಥಾ—ದೀಧೀವೇವೀಙ್ಸಮಃ ಕಶ್ಚಿದ್ಗುಣವೃದ್ಧ್ಯೋರಭಾಜನಮ್ ।
ಕ್ವಿಪ್ಪ್ರತ್ಯಯನಿಭಃ ಕಶ್ಚಿದ್ಯತ್ರ ಸನ್ನಿಹಿತೇ ನ ತೇ ॥

ಅತ್ರ ಅರ್ಥ ಕಷ್ಟಃ–ವೈಯಾಕರಣಶ್ಚ ವಕ್ತಾ. ಏವಮಸ್ಯ ಪ್ರತಿಪಾದ್ಯತ್ವೇಽಪಿ.

'ಅತ್ರಾತಾರ್ಪ್ಸೀಮುಪಾಧ್ಯಾಯ ತ್ವಾಮಹಂ ನ ಕದಾಚನ ।

ಅತ್ರ ದುಃಶ್ರವತ್ವಮ್. ವೈಯಾಕರಣೋ ವಾಚ್ಯಃ. ಏವಮಸ್ಯ ವಕ್ತೃತ್ವೇಽಪಿ.

ಏಷ ಶಶಿಧರಬಿಂಬೋ ದೃಶ್ಯತೇ ಹೈಯಂಗವೀನಪಿಂಡ ಇವ ।
ಏತೇ ಅಸ್ರಸಮೂಹಾಃ ಪತಂತಿ ಆಶಾಸು ದುಗ್ಧಧಾರಾ ಇವ ॥

ಇಯಂ ವಿದೂಷಕೋಕ್ತಿಃ ಗ್ರಾಮ್ಯಾಪಿ ಗುಣ ಏವ.

ನಿರ್ಹೇತುತಾ ತು ಖ್ಯಾತೇಽರ್ಥೇ ದೋಷತಾಂ ನೈವ ಗಚ್ಛತಿ ।

ಯಥಾ "ಸಂಪ್ರತಿ ಸಂಧ್ಯಾಸಮಯಶ್ಚಕ್ರದ್ವಂದ್ವಾನಿ ವಿಘಟಯತಿ ॥

ಕವೀನಾಂ ಸಮಯೇ ಖ್ಯಾತೇ ಗುಣಃ ಖ್ಯಾತವಿರುದ್ಧತಾ ।

ಕವಿಸಮಯಖ್ಯಾತಾನಿ ಚ—

ಮಾಲಿನ್ಯಂ ವ್ಯೋಮ್ನಿ ಪಾಪೇ ಯಶಸಿ ಧವಲತಾ ವರ್ಣ್ಯತೇ ಹಾಸಕೀರ್ತ್ಯೋಃ
ರಕ್ತೌ ಚ ಕ್ರೋಧರಾಗೌ ಸರಿದುದಧಿಗತಂ ಪಂಕಜೇಂದೀವರಾದಿ ।
ತೋಯಾಧಾರೇಽಖಿಲೇಽಪಿ ಪ್ರಸರತಿ ಚ ಮರಾಲಾದಿಕಃ ಪಕ್ಷಿಸಂಘೋ
ಜ್ಯೋತ್ಸ್ನಾ ಪೇಯಾ ಚಕೋರೈರ್ಜಲಧರಸಮಯೇ ಮಾನಸಂ ಯಾಂತಿ ಹಂಸಾಃ ॥

ಪಾದಾಘಾತಾದಶೋಕಂ ವಿಕಸತಿ ಬಕುಲಂ ಯೋಷಿತಾಮಾಸ್ಯಮದ್ಯೈಃ
ಯೂನಾಮಂಗೇಷು ಹಾರಾಃ, ಸ್ಫುಟತಿ ಚ ಹೃದಯಂ ವಿಪ್ರಯೋಗಸ್ಯ ತಾಪೈಃ ।
ಮೌರ್ವೀ ರೋಲಂಬಮಾಲಾ ಧನುರಥ ವಿಶಿಖಾಃ ಕೌಸುಮಾಃ ಪುಷ್ಪಕೇತೋಃ
ಭಿನ್ನಂ ಸ್ಯಾದಸ್ಯ ಬಾಣೈರ್ಯುವಜನಹೃದಯಂ ಸ್ತ್ರೀಕಟಾಕ್ಷೇಣ ತದ್ವತ್ ॥

ಅಹ್ನ್ಯಂಭೋಜಂ ನಿಶಾಯಾಂ ವಿಕಸತಿ ಕುಮುದಂ ಚಂದ್ರಿಕಾ ಶುಕ್ಲಪಕ್ಷೇ
ಮೇಘಧ್ವಾನೇಷು ನೃತ್ಯಂ ಭವತಿ ಚ ಶಿಖಿನಾಂ ನಾಪ್ಯಶೋಕೇ ಫಲಂ ಸ್ಯಾತ್ ।
ನ ಸ್ಯಾಜ್ಜಾತೀ ವಸಂತೇ ನ ಚ ಕುಸುಮಫಲೇ ಗಂಧಸಾರದ್ರುಮಾಣಾಂ
ಇತ್ಯಾದ್ಯುನ್ನೇಯಮನ್ಯತ್ ಕವಿಸಮಯಗತಂ ಸತ್ಕವೀನಾಂ ಪ್ರಬಂಧೇ ॥

ಏವಮುದಾಹರಣಾನ್ಯಾಕರೇಷು ಸ್ಪಷ್ಟಾನಿ.

ಧನುರ್ಜ್ಯಾದಿಷು ಶಬ್ದೇಷು ಶಬ್ದಾಸ್ತು ಧನುರಾದಯಃ ।
ಆರೂಢತ್ವಾದಿಬೋಧಾಯ ಪ್ರಯೋಕ್ತವ್ಯಾಃ ಸ್ಥಿತಾ ಅಪಿ ॥
ಯಥಾ–"ಪೂರಿತೇ ರೋದಸೀಧ್ವಾನೈರ್ಧನುರ್ಜ್ಯಾಸ್ಫಾಲನೋದ್ಭವೈಃ"

ಅತ್ರ ಜ್ಯಾಶಬ್ದೇನಾಪಿ ಗತಾರ್ಥತ್ವೇ ಧನುಶ್ಶಬ್ದೇನ ಜ್ಯಾಯಾಃ ಧನುಷ್ಯಾತತೀಕರಣಂ ಬೋಧ್ಯತೇ. ಆದಿಶಬ್ದಾತ್ 'ಭಾತಿ ಕರ್ಣಾವತಂಸಸ್ತೇ' ಅತ್ರ ಕರ್ಣಸ್ಥಿತತ್ವಬೋಧನಾಯ ಕರ್ಣಶಬ್ದಃ. ಏವಂ ಶ್ರವಣಕುಂಡಲಶಿರಃಶೇಖರಪ್ರಭೃತಿಃ. ಏವಂ ನಿರುಪಪದೋ ಮಾಲಾಶಬ್ದಃ ಪುಷ್ಪಸ್ರಜಮೇವ ಅಭಿಧತ್ತೇ. ಇತಿ ಸ್ಥಿತಾವಪಿ 'ಪುಷ್ಪಪೃದ್ಧಶಿಲ ಏವಂ 'ಮುಕ್ತಾಹಾರಃ' ಇತ್ಯತ್ರ ಮುಕ್ತಾಶಬ್ದೇನ ಅನ್ಯರತ್ನಾಮಿಶ್ರಿತತ್ವಮ್. ಧನುರ್ಜ್ಯಾದಯಃ ಸತ್ಯಾಕ್ಯವ್ಯಸ್ಥಿತಾ ಏವ ನಿಬದ್ಧವ್ಯಾಃ, ತ್ವೇ, ನ ತ್ವಸ್ಥಿತಾ ಜಘನಕಾಂಚೀಕರಕಂಕಣಾದಯಃ.

ಶ್ಲೇಷ ಸಮಾಸೋಕ್ತ್ಯಲಂಕಾರಗಳಲ್ಲೂ ಧ್ವನಿಗಳಲ್ಲೂ ನಿಹತಾರ್ಥ ಅಪ್ರಯುಕ್ತತೆ ಎಂಬ ದೋಷಗಳಿದ್ದರೂ ಗುಣಗಳೆನಿಸುತ್ತವೆ. ಈಗ ಶ್ಲೇಷದಲ್ಲಿ ಅವು ದೋಷವೆನಿಸುವುದಿಲ್ಲವೆಂದನ್ನು ಉದಾಹರಿಸುತ್ತಾನೆ. "ಕ್ರೌಂಚಪರ್ವತವನ್ನು ಪರಶುರಾಮನ ಅವತಾರದಲ್ಲಿ ಭೇದಿಸಿದ್ದರಿಂದ ಪವಿತ್ರನೆನಿಸಿ, ನರಕಾಸುರನನ್ನು ಜಯಸಿ, ಎಲ್ಲರಿಗೂ ಪೂಜ್ಯನೆನಿಸಿ, ಯಾರಿಗೂ ಸುಲಭವಾಗಿ ತಿಳಿಯದೇ ಇರುವ ವಿಷ್ಣುವಿನಂತೆಯೂ, ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದ ಕತ್ತಿಯನ್ನು ಹಿಡಿದು ಲೋಕವನ್ನು ಜಯಿಸುತ್ತ ದಯಾರ್ಹರಾದ ಜನರಿಗೆ ಕರುಣಿಸುತ್ತ ನೇರಿಯುವರಿಗೆ ಸುಲಭವಾಗಿ ವಶನಾಗದಿರುವ ಇಂದ್ರನಂತೆಯೂ, ಹಾಗೆಯೇ ಕರಪ್ರಕಾರದಿಂದ ಪರ್ವತವನ್ನು ಭೇದಿಸುವಷ್ಟು ಬಲಶಾಲಿಯೂ ಪವಿತ್ರಸ್ವಭಾವದಿಂದಕೂಡಿದುದೂ ಸರ್ವಪ್ರಾಣಿಗಳನ್ನು ಜಯಿಸುತ್ತಲೂ ಅನೇಕ ಆನೆಗಳನ್ನು ಕೊಲ್ಲುತ್ತಲೂ ಇರುವ ಸಿಂಹದಂತೆಯೂ ಹಿಮಾಲಯವನ್ನು ಭೇದಿಸಿ ಹೊರಟು ಜಗತ್ತೆಲ್ಲವನ್ನು ಪಾವನಗೊಳಿಸುತ್ತ, ನರಕದಿಂದ ಭಕ್ತರನ್ನು ಕಾಪಾಡುತ್ತ ಧಾರ್ಮಿಕ ಜನರಿಗೆ ಆದರಣೀಯವೆನಿಸಿ ಬಹಳ ವೇಗದಿಂದ ಭೂಮಿಗೆ ಬೀಳುತ್ತಿರುವ ಗಂಗಾನದಿಯ ನೀರನ್ನು ನಮಸ್ಕರಿಸಿರಿ" ಇಲ್ಲಿ ಪವಿತ್ರಶಬ್ದವು ಪಾವನವೆಂಬ ಅರ್ಥದಲ್ಲಿ ಪ್ರಸಿದ್ಧವೆನಿಸಿದ್ದು ಇಂದ್ರನಿಗೆ ಅನ್ವಯಿಸುವಂತೆ ವಜ್ರಧಾರಿ ಎಂಬ ಅರ್ಥವನ್ನು ಲಕ್ಷಣೆಯಿಂದ ತಿಳಿಸುವುದರಿಂದ ನಿಹತಾರ್ಥವೆನಿಸಿದೆ. ಮತಂಗಶಬ್ದವನ್ನು ಮತಂಗಜ (ಆನೆ) ಎಂಬ ಅರ್ಥದಲ್ಲಿ ಕವಿಗಳು ಪ್ರಯೋಗಿಸಿಲ್ಲ. ಹೀಗೆ ನಿಹತಾರ್ಥತೆ, ಅಪ್ರಯುಕ್ತತೆ ಇವೆರಡು ದೋಷಗಳೂ ಶ್ಲೇಷದಲ್ಲಿ ಬಂದಿರುವುದರಿಂದ ದೋಷವೆನಿಸಿಲ್ಲ.

ಹೇಳುವವನು ಮತ್ತು ಕೇಳುವವನು ಇಬ್ಬರೂ ಬುದ್ಧಿವಂತರೆನಿಸಿದರೆ ಹೇಳಿದ ಮಾತು ಅರ್ಥವಾಗದಂತಿದ್ದರೂ ಗುಣವೇ ಆಗುವುದು. ಕುಮಾರಸಂಭವದಲ್ಲಿ ದೇವತೆಗಳು ಬ್ರಹ್ಮನನ್ನು ಸ್ತುತಿಸುವಾಗ ಹೇಳುವ ಮಾತಿನಲ್ಲಿ ಇದು ತಿಳಿದು ಬರುತ್ತದೆ. "'ಪುರುಷಾರ್ಥಗಳನ್ನು ಜನರಿಗೆ ದೊರಕಿಸುವ ಪ್ರಕೃತಿ ಎಂದೂ, ಎಲ್ಲರಲ್ಲೂ ಉದಾಸೀನನಾಗಿದ್ದು ಅವನ್ನು ತೋರಿಸಿಕೊಡುವ ಪುರುಷನೆಂದೂ ಅನುಭವಿಗಳು ನಿನ್ನನ್ನು ಭಾವಿಸುವರು." ಇಲ್ಲಿ ಸ್ತುತಿಸುವ ದೇವತೆಗಳು, ಆ ಸ್ತುತಿಯನ್ನು ಕೇಳುವ ಬ್ರಹ್ಮ ಇಬ್ಬರೂ

ಬುದ್ಧಿವಂತರಾದ್ದರಿಂದ ಇಲ್ಲಿ ಹೇಳುವ ಮಾತು ಎಲ್ಲರಿಗೂ ಸುಲಭವಾಗಿ ತಿಳಿಯದಂತಿದ್ದರೂ ಗುಣವೆನಿಸಿದೆ.

ಹೇಳುವವನು ಒಂದು ಮಾತನ್ನು ತನಗಾಗಿಯೇ ಹೇಳಿಕೊಂಡರೆ ಆ ಮಾತ ಅಪ್ರತೀತವಾಗಿದ್ದರೂ ಗುಣವೇ ಆಗುತ್ತದೆ. ''ಯಾವನು ತಮೋಗುಣದಿಂದ ಉಂಟಾದ ಅಜ್ಞಾನಗಳ ವಿಶೇಷಪ್ರಕಾಶಕ್ಕಾಗಿ ಪೃಥಿವಿ ಮೊದಲಾದ ತನ್ನ ಅಂಶಗಳೊಡಗೂಡಿ ವಿರಾಟ್ ಸ್ವರೂಪದಿಂದ ಪರಿಣಮಿಸುವನೋ, ಯಾವನು ಈ ತಪಸ್ಸಿನ ನಾಶಕ್ಕಾಗಿ ಅನೇ ಕಲೆಗಳನ್ನು ತೊರೆದು ನಿಷ್ಕಲಬ್ರಹ್ಮವೆನಿಸುವನೋ, ಯಾವನು ಕತ್ತಲೆಯ ವ್ಯಾಪ್ತಿಗಾಗಿ ಎಲ್ಲಾ ಕಲೆಗಳನ್ನೂ ತೊರೆದು ಕ್ಷೀಣನಾಗುವನೋ ಮತ್ತೆ ಅವುಗಳ ನಾಶಕ್ಕಾಗಿ ಅದೇ ಕಲೆಗಳಿಂದ ಕೂಡಿಕೊಳ್ಳುವನೋ ಅಂತಹ ಪರಮಾತ್ಮನೆಂಬ ಚಂದ್ರನ ನಿರಾಶ್ರಯವಾದೆಡೆಯಲ್ಲೂ ಆಕಾಶದಲ್ಲೂ ನೆಲಸಿ ಶೋಭಿಸುತ್ತಿರುವನು. ಅವನನ್ನು ನಾನು ಯಾವಾಗಲೂ ಚಿಂತಿಸುತ್ತೇನೆ." ''ಯಾವನಲ್ಲಿ ಭೂಮಿ ಸ್ವರ್ಗ, ಅಂತರಿಕ್ಷ ಇವೆಲ್ಲವೂ ಸೇರಿವೆಯೋ' 'ಯಾವನು ಜೀವರೂಪದಿಂದ ದೇಹವೊಳಗೆ ಪ್ರವೇಶಿಸಿ ನಾಮರೂಪಗಳನ್ನು ವಿಭಜನ ಮಾಡುವನೋ"–"ಆತ್ಮನು ಅಜರನು ಸ್ವಸ್ಥನು" ಎಂದು ಮುಂತಾಗಿ ಭಾಷ್ಯದ ಮಾತುಗಳನ್ನು ಇಲ್ಲಿ ಹೇಳಿರುವುದರಿಂದ ಇವು ಬೇರೆಯವರಿಗೆ ತಿಳಿಯದೇ ಇದ್ದರೂ ಹೇಳುವವನು ಬುದ್ಧಿವಂತನೆನಿಸಿ ತನಗೇ ಇವನ್ನು ಹೇಳಿಕೊಂಡಿರುವುದರಿಂದ ಇವು ಗುಣವೆನಿಸಿವೆ.

ವಿಹಿತವಾದ್ದನ್ನು ಅನುವಾದಮಾಡಿರುವ ಕಡೆಯಲ್ಲೂ, ವಿಷಾದ, ವಿಸ್ಮಯ, ಕ್ರೋಧ, ದೈನ್ಯಗಳನ್ನೂ ತಿಳಿಸುವಾಗಲೂ, ಲಾಟಾನುಪ್ರಾಸದಲ್ಲೂ, ಅನುಕಂಪೆಯಲ್ಲೂ, ಒಬ್ಬನನ್ನು ಅನುಗ್ರಹಿಸುವಾಗಲೂ, ಅರ್ಥಾಂತರಸಂಕ್ರಮಿತವಾಚ್ಯದಲ್ಲೂ, ಹರ್ಷಕಾಲದಲ್ಲೂ, ಅವಧಾರಣಮಾಡುವಾಗಲೂ ಕಥಿತಪದವು ದೋಷವೆನಿಸುವುದಿಲ್ಲ; ಆದರೆ ಗುಣವೇ ಆಗುತ್ತದೆ. 'ಉದೇತಿ ಸವಿತಾ ತಾಮ್ರ ಏವಾಸ್ತಮೇತಿ' ಎಂಬಲ್ಲಿ ಉದ್ದೇಶ್ಯವೆನಿಸಿದ ತಾಮ್ರಪದವನ್ನು ಮತ್ತೆ ತಿಳಿಸಿದ್ದರೂ ದೋಷವೆನಿಸಿಲ್ಲ. "ಸಖಿಯೇ ಪತಿಯು ವಸಂತಕಾಲದಲ್ಲೂ ಪ್ರವಾಸದಿಂದ ಬರಲಿಲ್ಲ. ಎಂತಹ ಕ್ಲೇಶವುಂಟಾಯಿತು" ಇಲ್ಲಿ ಹಂತ ಹಂತ ಎಂಬ ಪದಗಳನ್ನು ಮತ್ತೆ ಮತ್ತೆ ತಿಳಿಸಿದ್ದರೂ ವಿಷಾದಾಧಿಕ್ಯವನ್ನು ಸೂಚಿಸುವುದರಿಂದ ಇದು ದೋಷವೆನಿಸುವುದಿಲ್ಲ. "ಎಲೈ ಸುಮುಖಿಯೇ, ಬಯಲೇ ಇಲ್ಲದೆಡೆಯಲ್ಲಿ ಈ ಚಂದ್ರನು ಹೇಗೆ ಬಂದನು! ಇದು ಬಹಳ ಆಶ್ಚರ್ಯ'' ಇಲ್ಲಿ ಚಿತ್ರಂ ಚಿತ್ರಂ ಎಂಬ ಪದಗಳನ್ನು ಎರಡು ವೇಳೆ ಹೇಳಿದ್ದು ವಿಸ್ಮಯಾಧಿಕ್ಯವನ್ನು ಸೂಚಿಸುವುದರಿಂದ ದೋಷವೆನಿಸಿಲ್ಲ. ''ಶುಭ್ರವಾದ ಕಣ್ಣುಗಳಿರುವ ನಾಯಿಕೆಯೇ, ನಿನ್ನ ಕಣ್ಣುಗಳನ್ನು ಮುಚ್ಚು'' ಎಂಬಲ್ಲಿ ನಯನೇ ನಯನೇ ಎಂದು ಎರಡು ಪದಗಳಿರುವುದು ದೋಷವೆನಿಸಿಲ್ಲ. ಆಕೆಯ ಕಣ್ಣುಗಳೇ ಕಣ್ಣುಗಳು'' ಇಲ್ಲಿ ನಯನಪದವನ್ನು ಎರಡು ವೇಳೆ ಹೇಳಿದ್ದು ಕಥಿತಪದವೆನಿಸಿದರೂ ಅರ್ಥಾಂತರಸಂಕ್ರಮಿತವಾಚ್ಯಧ್ವನಿಯಲ್ಲಿ

ಹೀಗೆ ಸೇರಿರುವುದರಿಂದ ಚಮತ್ಕಾರಾತಿಶಯವನ್ನು ಹುಟ್ಟಿಸುವ ಪ್ರಯುಕ್ತ ಇದು ದೋಷವೆನಿಸಿಲ್ಲ. ಹೀಗೆಯೇ ಬೇರೆಕಡೆಯಲ್ಲೂ ಉದಾಹರಣಗಳನ್ನು ತಿಳಿಯುವುದು.

ಸಂದಿಗ್ಧತೆಯು ವ್ಯಾಜಸ್ತುತಿಯಲ್ಲಿ ಕೊನೆಯಾದರೆ ಗುಣವೆನಿಸುವುದು. "ಎಲೈ ರಾಜನೇ, ಈಗ ನಿನಗೂ ನನಗೂ ಮನೆಯು ಸಮಾನವೆನಿಸಿದೆ. ನಿನಗೆ ವಿಶಾಲವಾದ ಸ್ವರ್ಣಪಾತ್ರೆಗಳಿವೆ. ನಿನ್ನ ಪರಿಜನರೆಲ್ಲರೂ ರತ್ನಾದಿಗಳಿಂದ ಅಲಂಕೃತರಾಗಿರುವರು. ಸಂಚರಿಸುವ ಹೆಣ್ಣಾನೆಗಳ ಮೇಲೆಯೇ ನೀನು ತಿರುಗುವೆ. ನನ್ನ ಮನೆಯೂ ಸಹ ಮಕ್ಕಳ ಆರ್ತಧ್ವನಿಯಿಂದ ಕೂಡಿದೆ. ನನ್ನ ಕಡೆಯವರೆಲ್ಲರೂ ನೆಲದಮೇಲೆ ಕುಳಿತುಕೊಂಡಿರುವರು. ಬಿಲಗಳಲ್ಲಿ ವಾಸಮಾಡುವ ಇಲಿಗಳು ತೋಡಿದ ಧೂಳಿನಿಂದ ನನ್ನ ಮನೆಯು ಮಲಿನವೆನಿಸಿದೆ." ಇಲ್ಲಿ ಮನೆಯಲ್ಲಿ ಇರುವುದು ಚಿನ್ನದ ಪಾತ್ರೆಗಳೋ ಮಕ್ಕಳ ಆರ್ತನಾದವೋ ಎಂದು ಮುಂತಾದ ಸಂದೇಹವು ಬರುವುದರಿಂದ ಇಲ್ಲಿ ಸಂದಿಗ್ಧತೆ ಎಂಬ ದೋಷವು ಇದೆ. ಆದರೂ ಇದು ರಾಜನ ಸ್ತುತಿಯಲ್ಲಿ ಕೊನೆಗಾಣುವುದರಿಂದಲೂ ಇಲ್ಲಿ ಹೇಳಿರುವ ಅಂಶಗಳು ರಾಜನಿಗೂ ಹೇಳುವವನಿಗೂ ಸಮಾನವೆನಿಸಿರುವುದರಿಂದಲೂ ಸಂದಿಗ್ಧತೆಯು ಗುಣವೇ ಆಗುತ್ತದೆ. ಹೇಳುವವನು ವೈಯಾಕರಣನಾಗಿದ್ದರೆ ಅವನ ಮಾತಿನಲ್ಲಿ ಕಷ್ಟತೆಯಾಗಲೀ ದುಃಶ್ರವತ್ವವಾಗಲೀ ಇದ್ದರೂ ಗುಣವೆನಿಸುತ್ತದೆ. ವೈಯಾಕರಣನೇ ಮೊದಲಾದವರು ಹೇಳಲಿ ಅಥವಾ ಕೇಳಲಿ. ಅಂತಹ ಮಾತಿನಲ್ಲಿ ಕಷ್ಟವಾದ ಅನ್ವಯವಿದ್ದರೂ ಗುಣವೇ ಆಗುತ್ತದೆ. ಅದರಲ್ಲಿ ಕೇಳಲು ಅಸಹ್ಯವಾದ ಪರುಷವರ್ಣಗಳಿದ್ದರೂ ಸಹ್ಯವೆನಿಸುತ್ತವೆ. "ನಿನ್ನ ಸನ್ನಿಧಿಯಲ್ಲಿ ಕೆಲವರು ದೀಧೀ, ವೇವೀ(ಧಾತುಗಳಿಗೆ ಸಮಾನವಾಗಿ ಅನ್ವಯಿಸುವ ಗುಣವೃದ್ಧಿಗಳಿಗೆ ವಿಷಯರಾಗುವುದಿಲ್ಲ; ಬೇರೆ ಕೆಲವರು ಕ್ವಿಪ್ ಪ್ರತ್ಯಯಕ್ಕೆ ಸಮನೆನಿಸಿ ತಮ್ಮನ್ನೇ ಕಾಣದಂತೆ ಮಾಡಿಕೊಳ್ಳುವರು." ಇಲ್ಲಿ ವೈಯ್ಯಾಕರಣನೇ ಈ ಮಾತನ್ನು ಹೇಳುವವನಾದ್ದರಿಂದ ಆ ಮಾತಿನ ಅರ್ಥವು ಅವನಿಗೆ ತಿಳಿಯುವುದಾದರೂ ಬೇರೆಯವರಿಗೆ ಕಷ್ಟವೆನಿಸಿದೆ. ಆದರೂ ಅದು ಗುಣವೆನಿಸಿದೆ. ವೈಯ್ಯಾಕರಣನೇ ಕೇಳುವವನಾದರೆ ದುಃಶ್ರವತ್ವವು ಗುಣವೆನಿಸುವುದನ್ನು ಉದಾಹರಿಸುತ್ತಾನೆ. "ಗುರುವೇ, ನಿನಗೆ ನಾನು ದಕ್ಷಿಣೆಯನ್ನು ಕೊಡುವ ಮೂಲಕ ಎಂದಿಗೂ ತೃಪ್ತಿಪಡಿಸಲಿಲ್ಲ." ಇಲ್ಲಿ ಅತಾರ್ಪ್ಸಮ್ ಎಂಬುದು ಕೇಳಲಿಕ್ಕೆ ಅಸಹ್ಯವೆನಿಸುವಷ್ಟು ಒರಟಾಗಿದೆ. ಆದರೂ ವೈಯ್ಯಾಕರಣನನ್ನು ಕುರಿತು ಹೇಳಿರುವುದರಿಂದ ಇದು ಅಸಹ್ಯವಾಗಿ ತೋರುವುದಿಲ್ಲ. ಹೀಗೆ ಅವನೇ ವಕ್ತೃವಾಗಿದ್ದರೂ ಈ ದೋಷವು ದೋಷವಾಗಿ ಕಾಣುವುದಿಲ್ಲ. ನೀಚರು ಆಡುವ ಮಾತಿನಲ್ಲಿ ಗ್ರಾಮ್ಯತೆ ಇದ್ದರೂ ದೋಷವೆನಿಸುವುದಿಲ್ಲ. "ಈ ಚಂದ್ರಮಂಡಲವು ಬೆಣ್ಣೆಯ ಮುದ್ದೆಯಂತೆ ಕಾಣುತ್ತದೆ. ಚಂದ್ರನ ಕಿರಣಗಳು ದಿಕ್ಕುಗಳಲ್ಲಿ ಹಾಲಿನ ಧಾರೆಗಳಂತೆ ಬೀಳುತ್ತಿವೆ." ಇಲ್ಲಿ ದುಗ್ಧಧಾರಾಶಬ್ದವು ಗ್ರಾಮ್ಯವೆಂಬ ದೋಷವೆನಿಸುವುದಿಲ್ಲ. ತಿಳಿಸಬೇಕಾದ ಅರ್ಥವು ಲೋಕದಲ್ಲಿ ಪ್ರಸಿದ್ಧವೆನಿಸಿದ್ದರೆ ಆ ಬಗ್ಗೆ ಹೇತುವನ್ನು ತಿಳಿಸದೇ ಇದ್ದರೂ ಅದು ದೋಷವೆನಿಸುವುದಿಲ್ಲ. "ಈಗ ಸಂಧ್ಯಾಕಾಲವು ಚಕ್ರವಾಕಪಕ್ಷಿಗಳೆರಡಕ್ಕೂ

ವಿಯೋಗವನ್ನುಂಟುಮಾಡುತ್ತದೆ.'' ಇಲ್ಲಿ ಸಂಧ್ಯಾ ಸಮಯವು ಚಕ್ರವಾಕ ಪಕ್ಷಿಗಳಿಗೆ ವಿಯೋಗವನ್ನುಂಟುಮಾಡುತ್ತದೆ ಎಂಬುದು ಲೋಕಪ್ರಸಿದ್ಧವೆನಿಸಿದ್ದರಿಂದ ಹೇತುವಿನ ಆಕಾಂಕ್ಷೆಯಿಲ್ಲದ್ದರಿಂದ ನಿರ್ಹೇತುತ್ವವೆಂಬುದು ದೋಷವೆನಿಸುವುಲ್ಲ.

ಕವಿಯ ಸಮಯವೆಂಬುದು ಪ್ರಸಿದ್ಧವೆನಿಸಿರುವಾಗ ಖ್ಯಾತಿವಿರೋಧವೆಂಬ ದೋಷವು ಗುಣವೇ ಆಗುತ್ತದೆ. ಕವಿಯ ಸಮಯವೆಂದು ಪ್ರಸಿದ್ಧವಾದ ಕೆಲವು ಅಂಶಗಳನ್ನು ಈಗ ತಿಳಿಸುತ್ತಾನೆ. ನಿರಾಕಾರವೆನಿಸಿದ್ದರಿಂದ ಸಾಮಾನ್ಯವಾಗಿಯೇ ಆಕಾಶವು ರೂಪವಿಲ್ಲವೆನಿಸಿದ್ದರೂ ಅದರಲ್ಲಿ ಕಪ್ಪುಬಣ್ಣವಿದೆ ಎಂದು ಕವಿಗಳು ವರ್ಣಿಸುತ್ತಾರೆ. ಹೀಗೆ ವರ್ಣಿಸುವುದು ಕವಿಸಮಯವೆನಿಸಿದೆ. ಹಾಗೆಯೇ ಪಾಪದಲ್ಲೂ ಮಾಲಿನ್ಯವನ್ನು ವರ್ಣಿಸುತ್ತಾರೆ. ಯಶಸ್ಸು ಮಂದಹಾಸ ಕೀರ್ತಿ ಇವನ್ನು ಬೆಳ್ಳಗಿದೆ ಎಂದು ವರ್ಣಿಸುವುದು ಕವಿಸಮಯವೆನಿಸಿದೆ. ಸಿಟ್ಟು ಮತ್ತು ಅನುರಾಗಗಳನ್ನು ಕೆಂಪಗಿದೆ ಎಂದೂ, ಕಮಲ ಕನ್ನೈದಿಲೆ ಇವು ನದೀಸಮುದ್ರಗಳಲ್ಲಿರುವಂತೆಯೂ ಸಮಸ್ತ ಸಾಗರಗಳಲ್ಲೂ ಹಂಸವೇ ಮೊದಲಾದ ಪಕ್ಷಿಗಳ ಸಮೂಹವು ಸಂಚರಿಸುವುದೆಂದೂ, ಚಕೋರಪಕ್ಷಿಗಳು ಚಂದ್ರಿಕೆಯನ್ನು ಕುಡಿಯುವುವೆಂದೂ, ಮೇಘೋದಯಕಾಲದಲ್ಲಿ ಹಂಸಪಕ್ಷಿಗಳು ಮಾನಸಸರೋವರವನ್ನು ಪ್ರವೇಶಿಸುವುವೆಂದೂ ವರ್ಣಿಸುವುದು ಕವಿಯ ಸಮಯವೆಂದು ಪ್ರಸಿದ್ಧವಾಗಿದೆ. ಸ್ತ್ರೀಯರ ಪಾದಗಳ ಹೊಡೆತದಿಂದ ಅಶೋಕವೂ, ಅವರ ಬಾಯಿಯ ಉಗುಳಿನಿಂದ ಬಕುಲವೃಕ್ಷವೂ ಚಿಗುರುವುವೆಂದು ವರ್ಣಿಸುವುದು ಪದ್ಧತಿ ಎನಿಸಿದೆ. ಯುವಕರ ಅವಯವಗಳಲ್ಲಿ ಮುಕ್ತಾಹಾರಗಳಿವೆ ಎಂದೂ, ವಿಯೋಗದ ತಾಪದಿಂದ ಅವರ ಹೃದಯವು ಒಡೆಯುವುದೆಂದೂ, ಮನ್ಮಥನ ಧನುಸ್ಸಿಗೆ ಕಟ್ಟಿದ ಶಿಂಜಿನಿಯನ್ನು ಭ್ರಮರ ಪಂಕ್ತಿ ಎಂದೂ, ಅವನ ಧನುಸ್ಸನ್ನೂ ಬಾಣಗಳನ್ನೂ ಪುಷ್ಪಮಯವೆಂದೂ, ಯುವಕರ ಹೃದಯವು ಆ ಬಾಣಗಳಿಂದಲೂ ಸ್ತ್ರೀಯರ ಓರೆನೋಟಗಳಿಂದಲೂ ಒಡೆಯುವುದೆಂದೂ, ಹಗಲಿನಲ್ಲಿ ಕಮಲವೂ ರಾತ್ರಿಯಲ್ಲಿ ಕನ್ನೈದಿಲೆಯೂ, ಅರಳಿರುತ್ತವೆ ಎಂದೂ, ಶುಕ್ಲಪಕ್ಷದಲ್ಲಿ ಚಂದ್ರಿಕೆಯು ಶೋಭಿಸುವುದೆಂದೂ, ಮೇಘಗಳ ಧ್ವನಿ ಇರುವಾಗಲೇ ನವಿಲುಗಳು ಕುಣಿಯುತ್ತವೆ ಎಂದೂ, ಅಶೋಕವೃಕ್ಷದಲ್ಲಿ ಫಲವಿರುವುದಿಲ್ಲವೆಂದೂ, ವಸಂತಕಾಲದಲ್ಲಿ ಜಾತೀಪುಷ್ಪವಿರುವುದಿಲ್ಲವೆಂದೂ ಶ್ರೀಗಂಧದ ಮರಗಳಲ್ಲಿ ಪುಷ್ಪಫಲಗಳು ಇರುವುದಿಲ್ಲವೆಂದೂ ವರ್ಣಿಸುವುದು ಕವಿಸಮಯವೆನಿಸಿದೆ. ಇಂತಹವೇ ಮೊದಲಾದವು ಕವಿಸಮಯವೆಂದು ಸತ್ಕವಿಗಳ ಪ್ರಬಂಧದಲ್ಲಿ ಊಹಿಸಿಕೊಳ್ಳುವುದು. ಇವಕ್ಕೆ ಉದಾಹರಣವನ್ನು ಗ್ರಂಥಗಳಲ್ಲಿ ತಿಳಿಯುವುದು.

ಕೆಲವುಕಡೆ ಪುನರುಕ್ತತೆ ಎಂಬ ದೋಷವು ಗುಣವೆನಿಸುತ್ತದೆ. ಧನುರ್ಜ್ಯಾ ಎಂಬ ಶಬ್ದದಲ್ಲಿ ಧನುಸ್ ಎಂಬ ಪದವು ಅನಾವಶ್ಯಕವೆನಿಸಿದೆ. ಜ್ಯಾಶಬ್ದದಿಂದಲೇ ಧನುಸ್ಸಿಗೆ ಕಟ್ಟುವ ಹಗ್ಗ ಎಂಬ ಅರ್ಥವು ತಿಳಿದುಬರುವುದರಿಂದ ಧನುಸ್ ಎಂಬ ಪದವು ಪುನರುಕ್ತವೆನಿಸಿದೆ. ಆದರೆ ಧನುಸ್ಸನ್ನು ಹಗ್ಗದಿಂದ ಎಳೆದು ಬಗ್ಗಿಸಲಾಯಿತು ಎಂಬ ಅರ್ಥವನ್ನು ತಿಳಿಸಲಿಕ್ಕಾಗಿ ಜ್ಯಾಪದದೊಡನೆ ಧನುಸ್ ಎಂಬ ಪದವನ್ನು ಉಪ

ಯೋಗಿಸುವುದರಿಂದ ಅದು ಪುನರುಕ್ತವೆನಿಸುವುದಿಲ್ಲ. "ಧನುಸ್ಸನ್ನು ಶಿಂಜಿನಿಯಿಂದ ಎಳೆದು ಕಟ್ಟುವಾಗ ಹುಟ್ಟಿದ ಶಬ್ದದಿಂದ ಭೂಮಿ ಆಕಾಶಗಳು ವ್ಯಾಪಿಸಿದವು" ಇಲ್ಲಿ ಜ್ಯಾ ಶಬ್ದದಿಂದಲೇ ಧನುಸ್ಸಿನ ಹಗ್ಗವೆಂಬುದು ತಿಳಿದುಬಂದರೂ ಧನುಸ್ಸಿಗೆ ಹಗ್ಗವನ್ನು ಕಟ್ಟಿ ವಿಸ್ತರಿಸಲಾಗಿದೆ ಎಂಬ ಅರ್ಥವನ್ನು ಧನುಃಶಬ್ದವು ತಿಳಿಸುತ್ತದೆ. ಹಾಗೆಯೇ 'ಕಿವಿಯ ಆಭರಣವು ಶೋಭಿಸುತ್ತದೆ' ಎಂಬಲ್ಲಿ ಕರ್ಣಪದವು ಬೇಕಿಲ್ಲದಿದ್ದರೂ ಆಭರಣವು ಅಲ್ಲಿವೆ ಎಂಬುದನ್ನು ತಿಳಿಸಲು ಆ ಪದವನ್ನು ಉಪಯೋಗಿಸಲಾಗುವುದು. ಹೀಗೆಯೇ ಕುಂಡಲ, ಶೇಖರ ಎಂಬ ಪದಗಳು ಕಿವಿಯ ಕುಂಡಲ ಮತ್ತು ಶಿರಸ್ಸಿನ ಆಭರಣ ಎಂಬ ಅರ್ಥವನ್ನು ತಿಳಿಸಿದರೂ ಆಯಾ ಸ್ಥಳದಲ್ಲಿಯೇ ಇರುವ ಆಭರಣಗಳೆಂಬುದನ್ನು ತಿಳಿಸಲು ಆ ಪದಗಳನ್ನು ಅಲ್ಲಿ ಸೇರಿಸಲಾಗಿದೆ. ಹೀಗೆಯೇ ಮಾಲಾ ಶಬ್ದವು ಜೊತೆಯಲ್ಲಿ ಪುಷ್ಪವೆಂಬ ಉಪಪದವಿಲ್ಲದಿದ್ದರೂ ಹೂವಿನ ಸರವೆಂಬ ಅರ್ಥವನ್ನು ತಿಳಿಸುತ್ತದೆ ಎಂಬಲ್ಲಿ ಪುಷ್ಪಶಬ್ದವನ್ನು ಉತ್ಕೃಷ್ಟವಾದ ಪುಷ್ಪಗಳು ವಿಶೇಷವಾಗಿ ಸೇರಿವೆ ಎಂಬುದನ್ನು ತಿಳಿಸಲಿಕ್ಕಾಗಿ ಉಪಯೋಗಿಸಲಾಗುವುದು. ಹೀಗೆಯೇ ಹಾರ ಪದವು ಮುತ್ತಿನ ಹಾರವನ್ನು ತಿಳಿಸಿದರೂ ಮುಕ್ತಾಹಾರಪದವು ಬೇರೆ ರತ್ನಗಳಿಂದ ಮಿಶ್ರವಾಗದೆ ಶುದ್ಧವಾದುದೆಂಬ ಅರ್ಥವನ್ನು ತಿಳಿಸುತ್ತದೆ.

ಧನುರ್ಜ್ಯಾ ಮೊದಲಾದ ಶಬ್ದಗಳು ಸತ್ಕಾವ್ಯದಲ್ಲಿದ್ದರೆ ಮಾತ್ರವೇ ದೋಷವೆನಿಸುವುದಿಲ್ಲ. ಅಂತವನ್ನು ಬೇರೆಕಡೆಗಳಲ್ಲಿ ಪ್ರಯೋಗಿಸಬಹುದು. ಹಾಗೆ ಸತ್ಕಾವ್ಯಗಳಲ್ಲಿ ಪ್ರಯೋಗಿಸದೇ ಇರುವ ಜಘನಕಾಂಚೀ, ಶರಕಂಕಣ ಮೊದಲಾದ ಪದಗಳನ್ನು ಹೊಸ ಕವಿಗಳು ತಮ್ಮ ಕಾವ್ಯಗಳಲ್ಲಿ ಪ್ರಯೋಗಿಸಿದರೆ ಅಲ್ಲಿ ಜಘನ ಕರ ಪದಗಳು ಪುನರುಕ್ತವೆನಿಸುತ್ತವೆ.

ಉಕ್ತಾವಾನಂದಮಗ್ನಾದೇಃ ಸ್ಯಾನ್ನ್ಯೂನಪದತಾ ಗುಣಃ ।

ಯಥಾ— ಗಾಢಾಲಿಂಗನವಾಮನೀಕೃತಕುಚಪ್ರೋದ್ಭಿನ್ನರೋಮೋದ್ಗಮಾ
ಸಾಂದ್ರಸ್ನೇಹರಸಾತಿರೇಕವಿಗಲಚ್ಛ್ರೀಮನ್ನಿತಂಬಾಂಬರಾ ।
ಮಾ ಮಾ ಮಾನದ! ಮಾತಿ ಮಾಮಲಮಿತಿ ಕ್ಷಾಮಾಕ್ಷರೋಲ್ಲಾಪಿನೀ
ಸುಪ್ತಾ ಕಿಂ ನು ಮೃತಾ ನು ಕಿಂ ಮನಸಿ ಮೇ ಲೀನಾ ವಿಲೀನಾ ನು ಕಿಮ್ ॥

ಅತ್ರ ಪೀಡಯೇತಿ ನ್ಯೂನಮ್.

ಕ್ವಚಿನ್ನ ದೋಷೋ ನ ಗುಣಃ ಗುಣಃ ಕ್ವಾಪ್ಯಧಿಕಂ ಪದಮ್ ।

ನ್ಯೂನಪದತ್ವಮಿತ್ಯೇವ. ಯಥಾ—

ತಿಷ್ಠೇತ್ಕೋಪವಶಾತ್ ಪ್ರಭಾವಪಿಹಿತಾ ದೀರ್ಘಂ ನ ಸಾ ಕುಪ್ಯತಿ
ಸ್ವರ್ಗಾಯೋತ್ಪತಿತಾ ಭವೇತ್? ಮಯಿ ಪುನರ್ಭಾವಾರ್ದ್ರಮಸ್ಯಾ ಮನಃ ।
ತಾಂ ಹರ್ತುಂ ವಿಬುಧದ್ವಿಷೋಽಪಿ ನ ಚ ಮೇ ಶಕ್ತಾಃ ಪುರೋವರ್ತಿನೀಂ
ಸಾ ಚಾತ್ಯಂತಮಗೋಚರಂ ನಯನಯೋರ್ಯಾತೇತಿ ಕೋಽಯಂ ವಿಧಿಃ ॥

ಅತ್ರ 'ಪ್ರಭಾವಪಿಹಿಕಾ' ಇತಿ 'ಭವೇತ್' ಇತಿ ಚ ಇತ್ಯನಂತರಂ 'ನೈತದ್ಯತಃ' ಇತಿ ಪದಾನಿ ನ್ಯೂನಾನಿ. ಏಷಾಂ ಪದಾನಾಂ ನ್ಯೂನತಾಯಾಮಪಿ ಏತದ್ವಾಕ್ಯವ್ಯಂಗ್ಯಸ್ಯ ವಿತರ್ಕಾಖ್ಯವ್ಯಭಿಚಾರಿಭಾವಸ್ಯ ಉತ್ಕರ್ಷಕರಣಾನ್ನ ಗುಣಃ. 'ದೀರ್ಘಂ ನ ಸಾ' ಇತ್ಯಾದಿವಾಕ್ಯಜನ್ಯಯಾ ಚ ಪ್ರತಿಪತ್ತ್ಯಾ ತಿಷ್ಠೇದಿತ್ಯಾದಿವಾಕ್ಯಪ್ರತಿಪತ್ತೇರ್ಬಾಧಃ ಸ್ಫುಟಮೇವಾವಭಾಸತೇ ಇತಿ ನ ದೋಷಃ. ಅಧಿಕಪದಸ್ಯ ಗುಣತ್ವೇ.

ಯಥಾ—ಆಚರತಿ ದುರ್ಜನೋ ಯತ್ಸಹಸಾ ಮನಸೋಽಪ್ಯಗೋಚರಾನರ್ಥಾನ್ ।
ತತ್ರ ನ ಜಾನೇ ಜಾನೇ ಸ್ಪೃಶತಿ ಮನಃ ಕಿಂ ತು ನೈವ ನಿಷ್ಠುರತಾಮ್ ॥

ಅತ್ರ 'ನ ನ ಜಾನೇ' ಇತ್ಯನೇನ ಅಯೋಗವ್ಯವಚ್ಛೇದಾದ್ವಿಚ್ಛಿತ್ತಿವಿಶೇಷಃ. ದ್ವಿತೀಯೇ 'ಜಾನೇ' ಇತ್ಯನೇನ 'ಅಹಮೇವ ಜಾನೇ' ಇತ್ಯನ್ಯಯೋಗವ್ಯವಚ್ಛೇದಾತ್ ವಿಚ್ಛಿತ್ತಿವಿಶೇಷಃ. ಸಮಾಪ್ತಪುನರಾತ್ತತ್ವಂ ನ ದೋಷೋ ನ ಗುಣಃ ಕ್ವಚಿತ್ ।

ಯಥಾ-'ಅನ್ಯಾಸ್ತಾ ಗುಣರತ್ನ' ಇತ್ಯಾದೌ. ಅತ್ರ ಪ್ರಥಮಾರ್ಧೇನ ವಾಕ್ಯಸಮಾಪ್ತಾವಪಿ ದ್ವಿತೀಯಾರ್ಧವಾಕ್ಯಂ ಪುನರುಪಾತ್ತಮ್. ಏವಂ ಚ ವಿಶೇಷಣಮಾತ್ರಸ್ಯ ಪುನರುಪಾದಾನೇ ಸಮಾಪ್ತಪುನರಾತ್ತತ್ವಂ ನ ವಾಕಾಂತರಸ್ಯೇತಿ ವಿಜ್ಞೇಯಮ್. ಗರ್ಭಿತತ್ವಂ ಗುಣಃ ಕ್ವಾಪಿ ಪತತ್ಪ್ರಕರ್ಷತಾ ಪತಾ ।

ಯಥಾ—ದಿಙ್ಮಾತಂಗಘಟಾವಿಭಕ್ತಚತುರಾಘಾಟಾ ಮಹೀ ಸಾಧ್ಯತೇ
ಸಿದ್ಧಾ ಸಾಪಿ ವದಂತ ಏವ ಹಿ ವಯಂ ರೋಮಾಂಚಿತಾಃ ಪಶ್ಯತ ।
ವಿಪ್ರಾಯ ಪ್ರತಿಪಾದ್ಯತೇ ಕಿಮಪರಂ ರಾಮಾಯ ತಸ್ಮೈ ನಮೋ
ಯಸ್ಮಾತ್ಪ್ರಾದುರಭೂತ್ ಕಥಾದ್ಭುತಮಿದಂ ಯತ್ರೈವ ಚಾಸ್ತಂ ಗತಮ್॥

ಅತ್ರ ವದಂತ ಏವ ಇತ್ಯಾದಿ ವಾಕ್ಯಂ ವಾಕ್ಯಾಂತರಪ್ರವೇಶಾತ್ ಚಮತ್ಕಾರಾತಿಶಯಂ ಪುಷ್ಣಾತಿ. ಪತತ್ಪ್ರಕರ್ಷತಾ ಕ್ವಚಿದ್ಗುಣೋ ಯಥಾ-ಚಂಚದ್ಭುಜ'ಇತ್ಯಾದೌ ಅತ್ರ ಚತುರ್ಥಪಾದೇ ಸುಕುಮಾರಾರ್ಥತಯಾ ಶಬ್ದಾಡಂಬರತ್ಯಾಗೋ ಗುಣಃ.

ಕ್ವಚಿದುಕ್ತೌ ಸ್ವಶಬ್ದೇನ ನ ದೋಷೋ ವ್ಯಭಿಚಾರಿಣಃ ।
ಅನುಭಾವವಿಭಾವಾಭ್ಯಾಂ ರಚನಾ ಯತ್ರ ನೋಚಿತಾ ॥

ಯತ್ರ ಅನುಭಾವವಿಭಾವಮುಖೇನ ಪ್ರತಿಪಾದನೇ ವಿಶದಪ್ರತೀತಿರ್ನಾಸ್ತಿ ಯತ್ರ ಚ ವಿಭಾವಾನುಭಾವಕೃತಪುಷ್ಟಿರಾಹಿತ್ಯಮೇವಾನುಗುಣಮ್ ತತ್ರ ವ್ಯಭಿಚಾರಿಣಃ ಸ್ವಶಬ್ದೇನೋಕ್ತಾ ನ ದೋಷಃ ಯಥಾ—

ಔತ್ಸುಕ್ಯೇನ ಕೃತತ್ವರಾ ಸಹಭುವಾ ವ್ಯಾವರ್ತಮಾನಾ ಹ್ರಿಯಾ
ತೈಸ್ತೈರ್ಬಂಧುವಧೂಜನಸ್ಯ ವಚನೈರ್ನೀತಾಭಿಮುಖ್ಯಂ ಪುನಃ ।
ದೃಷ್ಟ್ವಾಗ್ರೇ ವರಮಾತ್ತಸಾಧ್ವಸರಸಾ ಗೌರೀ ನವೇ ಸಂಗಮೇ
ಸಂರೋಹತ್ಪುಲಕಾ ಹರೇಣ ಹಸತಾ ಶ್ಲಿಷ್ಟಾ ಶಿವಾಯಾಸ್ತು ವಃ ॥

ಅತ್ರೌತ್ಸುಕ್ಯಸ್ಯ ತ್ವರಾರೂಪಾನುಭಾವಮುಖೇನ ಪ್ರತಿಪಾದನೇ ಸಂಗಮೇ ನ ಝಟಿತಿ ಪ್ರತೀತಿಃ ತ್ವರಾಯಾ ಭಯಾದಿನಾಪಿ ಸಂಭವಾತ್. ಹ್ರಿಯೋಽನುಭಾವಸ್ಯ

ಚ ವ್ಯಾವರ್ತನಸ್ಯ ಕೋಪಾದಿನಾಪಿ ಸಂಭವಾತ್. ಸಾಧ್ವಸಹಾಸಯೋಸ್ತು ವಿಭಾವಾದಿ ಪರಿಪೋಷಸ್ಯ ಪ್ರಕೃತರಸಪ್ರತಿಕೂಲಸ್ತಾ ಯತ್ವಾದಿತ್ಯೇಷಾಂ ಸ್ವಶಬ್ದಾಭಿಧಾನಮೇವ ನ್ಯಾಯ್ಯಮ್.

ಸಂಚಾರ್ಯಾದೇರ್ವಿರುದ್ಧಸ್ಯ ಬಾಧ್ಯತ್ವೇನ ವಚೋ ಗುಣಃ ।

ಯಥಾ ಕ್ವಾಕಾರ್ಯಂ ಶಶಲಕ್ಷ್ಮಣಃ ಕ್ವ ಚ ಕುಲಮ್ ಇತ್ಯಾದಿ. ಅತ್ರ ಪ್ರಶಮಾಂಗಾನಾಂ ವಿತರ್ಕಮತಿಶಂಕಾಧೃತೀನಾಂ ಅಭಿಲಾಷಾಂಗೌತ್ಸುಕ್ಯಸ್ಮೃತಿದೈನ್ಯ ಚಿಂತಾಭಿಸ್ತಿರಸ್ಕಾರಃ ಪರ್ಯಂತೇ ಚಿಂತಾಪ್ರಧಾನಮಾಸ್ವಾದಪ್ರಕರ್ಷಮಾವಿರ್ಭಾವಯತಿ.

ವಿರೋಧಿನೋಽಪಿ ಸ್ಮರಣೇ ಸಾಮ್ಯೇನ ವಚನೇಽಪಿ ವಾ ।
ಭವೇದ್ವಿರೋಧೋ ನಾನ್ಯೋನ್ಯಮಂಗಿನ್ಯಂಗತ್ವಮಾಪ್ತಯೋಃ ।

ಕ್ರಮೇಣ ಯಥಾ 'ಅಯಂ ಸ ರಶನೋತ್ಕರ್ಷೀ, ಇತ್ಯಾದಿ. ಅತ್ರಾಲಂಬನವಿಚ್ಛೇದೇ ರತೇಃ ರಸಾತ್ಮತಯಾ ಸ್ಮರ್ಯಮಾಣಾನಾಂ ತದಂಗಾನಾಂ ಶೋಕೋದ್ದೀಪಕತಯಾ ಕರುಣಾನುಕೂಲತಾ.

ಸರಾಗಯಾ ಸ್ರುತಘನಘರ್ಮತೋಯಯಾ
ಕರಾಹತಿಧ್ವನಿತಪೃಥೂರುಪೀಠಯಾ ।
ಮುಹುರ್ಮುಹುರ್ದಶನವಿಲಂಘಿತೋಷ್ಠಯಾ
ರುಷಾ ನೃಪಾಃ ಪ್ರಿಯತಮಯೇವ ಭೇಜಿರೇ ॥

ಅತ್ರ ಸಂಭೋಗಶೃಂಗಾರೋ ವರ್ಣನೀಯಸ್ಯ ವೀರವ್ಯಭಿಚಾರಿಣಃ ಕ್ರೋಧಸ್ಯ ಅನುಭಾವಸಾಮ್ಯೇನ ವಿವಕ್ಷಿತಃ.

ಆನಂದದಲ್ಲಾಗಲೀ ದುಃಖದಲ್ಲಾಗಲೀ ಪೂರ್ತಿಯಾಗಿ ಮುಳುಗಿದವನು ಆಡುವ ಮಾತಿನಲ್ಲಿ ನ್ಯೂನಪದತ್ವವೆಂಬ ದೋಷವಿದ್ದರೂ ಅದು ಗುಣವೆನಿಸುವುದು. ಅಮರುಶತಕದ ಈ ಪದ್ಯದಲ್ಲಿ ಇದನ್ನು ಕಾಣಬಹುದು. "ಗಾಢಾಲಿಂಗನದಿಂದ ಸ್ತನಗಳು ಸಣ್ಣಗಾಗಿದ್ದುದರಿಂದ ಮೈಯೆಲ್ಲಾ ರೋಮಾಂಚವು ಕಾಣಿಸಿಕೊಂಡಿರಲು ನನ್ನ ಬಗ್ಗೆ ಹೆಚ್ಚಿನ ಸ್ನೇಹರಸದಿಂದ ಕಟಿಪಶ್ಚಾದ್ಭಾಗದಲ್ಲಿರುವ ಸುಂದರವಾದ ಬಟ್ಟೆಯು ಕೆಳಕ್ಕೆ ಬೀಳುತ್ತಿರಲು, 'ಎಲೈ ಅಪದ್ರಕ್ಷಕನೇ, ನನ್ನನ್ನು ಪೀಡಿಸಬೇಡ. ಹೆಚ್ಚು ಹಿಂಸಿಸಬೇಡ, ಈ ಆಲಿಂಗನವನ್ನು ನಿಲ್ಲಿಸು' ಹೀಗೆ ಮಿತವಾಗಿ ಪದಗಳನ್ನು ಉಚ್ಚರಿಸುತ್ತಿರುವಳೆ? ಆಕೆಯು ನನ್ನ ಮನಸ್ಸಿನಲ್ಲಿ ಬೆರೆತಿರುವಳೆ? ಅಥವಾ ಬೇರೆಯಾಗಿರುವಳೆ?" ಇಲ್ಲಿ ಸಾಯುತ್ತಿರುವವಳು ಪ್ರಿಯನನ್ನು ನೋಡಿ ಗೋಳಾಡುವಾಗ ಅವನು ಆಕೆಯನ್ನು ಮುಟ್ಟುತ್ತಿರುವುದನ್ನು ಕಂಡು 'ಮಾ, ಮಾ, ಮಾಽತಿ, ಮಾಮಲಂ' ಹೀಗೆ ಹೇಳುವವಳು. ಇಲ್ಲಿ ಅತಿವ್ಯಸನದಿಂದ ಅವಳು 'ಪೀಡಯ' ಎಂಬ ಪದವನ್ನು ಪ್ರಯೋಗಿಸುವುದಿಲ್ಲ. ಇದು ಇಲ್ಲಿ ನ್ಯೂನತೆ ಎನಿಸಿದೆ. ಆದರೂ ಇದು ಇಲ್ಲಿ ದೋಷವೆನಿಸುವುದಿಲ್ಲ. ಈ ನ್ಯೂನಪದತ್ವವು ಕೆಲವುಕಡೆ ದೋಷವೂ ಆಗದೆ ಇರುವುದು. ವಿಕ್ರಮೋರ್ವಶೀಯದಲ್ಲಿ ಊರ್ವಶಿಯು ಕಣ್ಮರೆಯಾದಾಗ ಪುರೂರವನು ಹೀಗೆ ಗೋಳಾಡುವನು. ಆಕೆಯು

ನನ್ನಮೇಲೆ ಕೋಪಿಸಿಕೊಂಡು ತನ್ನ ವೈಯಕ್ತಿಕಪ್ರಭಾವದಿಂದ ಗೋಪ್ಯವಾಗಿ ಇಲ್ಲಿಯೇ ಎಲ್ಲಾದರೂ ಇರುವಳೆ? ಆದರೆ ಅವಳು ನನ್ನ ಮೇಲೆ ಬಹುಕಾಲ ಕೋಪಿಸಿಕೊಳ್ಳುವುದಿಲ್ಲ. ಅಥವಾ ಸ್ವರ್ಗಕ್ಕೆ ಹೋಗಿರಬಹುದೆ? ಆದರೆ ಅವಳ ಮನಸ್ಸು ನನ್ನಲ್ಲಿ ದೃಢವಾಗಿ ಅಂಟಿಕೊಂಡಿದೆ. ನನ್ನ ಎದುರಿಗೆ ಆಕೆ ಇರುವಾಗ ಅವಳನ್ನು ಅಪಹರಿಸಲು ರಾಕ್ಷಸರೂ ಸಹ ಶಕ್ತರಲ್ಲ. ಅಂತವಳು ನನ್ನ ದೃಷ್ಟಿಗೆ ಪೂರ್ತಿಯಾಗಿ ಅಗೋಚರಳಾದಳು. ಇದು ಎಂತಹ ವಿಧಿವಿಲಾಸ!" ಹೀಗೆ ಪುರೂರವನು ಉರ್ವಶಿಯ ಬಗ್ಗೆ ಗೋಳಿಡುವನು. ಇಲ್ಲಿ 'ಪ್ರಭಾವಪಿಹಿತಾ' 'ಭವೇತ್' ಎಂಬ ಎರಡು ಪದಗಳ ಅನಂತರ 'ನೈತದ್ಯತಃ' ಎಂಬ ಮೂರು ಪದಗಳ ನ್ಯೂನತೆ ಇದೆ. 'ಅವಳು ತನ್ನ ಪ್ರಭಾವದಿಂದ ಇಲ್ಲಿಯೇ ಅವಿತು ಕೊಂಡಿರಲಾರಳು; ಯಾಕೆಂದರೆ ಅವಳು ಹೆಚ್ಚು ಕಾಲ ಕೋಪಿಸುವವಳಲ್ಲ. ಹೀಗೆ ಈ ಪದಗಳನ್ನು ಇಲ್ಲಿ ಸೇರಿಸುವುದರಿಂದ ಅರ್ಥವು ಸ್ವರಸವಾಗುತ್ತದೆ. ಹಾಗೆಯೇ 'ಅವಳು ಸ್ವರ್ಗಕ್ಕೆ ಹೋಗಿರಲಾರಳು ಯಾಕೆಂದರೆ ಅವಳ ಮನಸ್ಸು ನನ್ನಲ್ಲಿ ಅಂಟಿತ್ತು' ಹೀಗೆ ಹೇಳಿದರೆ ಅರ್ಥವು ಪೂರ್ಣವಾಗುತ್ತದೆ. ಈ ಪದಗಳ ನ್ಯೂನತೆ ಇದ್ದರೂ ಸಹ ಈ ವಾಕ್ಯದಲ್ಲಿ ವ್ಯಂಗ್ಯವಾಗಿ ತೋರುವ ವಿತರ್ಕವೆಂಬ ವ್ಯಭಿಚಾರಿಭಾವಕ್ಕೆ ಬೇರೆ ಯಾವ ಪದದಿಂದಲೂ ಸಾಕಷ್ಟು ಪುಷ್ಟಿಯು ದೊರೆಯದೇ ಇರುವುದರಿಂದ ಇದು ಗುಣವೆನಿಸುವುದಿಲ್ಲ. ದೀರ್ಘಂ ನ ಸಾಕುಪ್ಯತಿ! (ಬಹುಕಾಲ ಆಕೆಯು ಕೋಪಗೊಳ್ಳುವುದಿಲ್ಲ.) ಎಂಬ ವಾಕ್ಯದಿಂದ ಉಂಟಾಗುವ ಜ್ಞಾನದಿಂದ ತಿಷ್ಠೇತ್ ಎಂಬ ವಾಕ್ಯದಿಂದ ಉಂಟಾಗುವ ಜ್ಞಾನಕ್ಕೆ ಬಾಧವುಂಟಾಗುವುದು. ಆಕೆಯ ಕೋಪವು ಬಹುಕಾಲ ಇರುವುದಿಲ್ಲವೆಂದಮೇಲೆ ಆಕೆ ಹೇಗೆ ಅಲ್ಲಿಯೇ ಅವಿತುಕೊಂಡಿದ್ದಾಳು? ಇದರಿಂದ ಮುಂದಿನ ವಾಕ್ಯದ ಜ್ಞಾನವು ಹಿಂದಿನ ವಾಕ್ಯದ ಜ್ಞಾನವನ್ನು ಬಾಧಿಸುತ್ತದೆ. ಆದ್ದರಿಂದ ಇಲ್ಲಿ ಕಾಣುವ ನ್ಯೂನ್ಯತೆಯು ದೋಷವೂ ಆಗುವುದಿಲ್ಲ. ಕೆಲವು ಕಡೆಗಳಲ್ಲಿ ಅಧಿಕಪದತ್ವವು ಗುಣವೂ ಆಗುವುದಿಲ್ಲ. "ದುಷ್ಟನು ಬೇಗನೆ ಮನಸ್ಸಿನಲ್ಲೂ ಭಾವಿಸಲಾಗದಿರುವ ಕಾರ್ಯಗಳನ್ನು ಆಚರಿಸುತ್ತಾನೆ. ಅದನ್ನು ನಾನು ತಿಳಿದಿಲ್ಲವೆಂಬುದಿಲ್ಲ; ಆದರೆ ತಿಳಿಯೇ ಇರುವೆನು. ಹಾಗೆ ತಿಳಿದಮೇಲೆ ಅದನ್ನು ಏಕೆ ತಡೆಯಬಾರದು? ಎಂದರೆ ನನ್ನ ಮನಸ್ಸು ಅದನ ಮನಸ್ಸಿನಂತೆ ಕಾಠಿನ್ಯವನ್ನು ಹೊಂದುವುದಿಲ್ಲ." ಹೀಗೆ ಅವಧಾರಣವನ್ನು ತಿಳಿಸುವಕಡೆ ನ ನ ಜಾನೇ ಜಾನೇ ಎಂದು ಪದಗಳನ್ನು ಅಧಿಕವಾಗಿ ಉಪಯೋಗಿಸಿದ್ದರಿಂದ ದೋಷವು ಗುಣವೆನಿಸುವುದು. ತನಗೆ ದುರ್ಜನನ ಕಾರ್ಯವು ತಿಳಿದಿಲ್ಲವೆಂದು ನನ್ನಲ್ಲಿ ಅವನ ಕಾರ್ಯದ ಸಂಬಂಧವನ್ನು ನಿರಾಕರಿಸಿದ್ದರಿಂದ ಒಂದು ಬಗೆಯ ಚಮತ್ಕಾರವುಂಟಾಗಿದೆ. ಇದು ಅಯೋಗವ್ಯವಚ್ಛೇದವೆನಿಸಿದೆ. ಬೇರೊಬ್ಬನಿಗೆ ದುರ್ಜನರ ಕಾರ್ಯವು ತಿಳಿದಿಲ್ಲವೆಂದು ನಿರಾಕರಿಸುವುದು ಅನ್ಯಯೋಗವ್ಯವಚ್ಛೇದವೆನಿಸುವುದು. ಇದರಲ್ಲೂ ಒಂದು ಬಗೆಯ ಚಮತ್ಕಾರವಿದೆ. 'ನ ಜಾನೇ ಇತಿ ನ'–ನಾನು ತಿಳಿದಿಲ್ಲವೆಂಬುದಿಲ್ಲ ಅಂದರೆ ಯಾರೂ ತಿಳಿದಿಲ್ಲ; ನಾನೊಬ್ಬನೇ ತಿಳಿದಿರುವೆನು, ಹೀಗೆ ಹೇಳಬಹುದಾದ್ದರಿಂದ ಅನ್ಯರಿಗೆ ದುರ್ಜನರ ಕಾರ್ಯದ ತಿಳಿವನ್ನು ನಿರಾಕರಿಸುವ ಮೂಲಕ

ಒಂದು ಬಗೆಯ ಸ್ವಾರಸ್ಯವನ್ನು ಮನಗಾಣಬಹುದು. ಹೀಗೆ ಎರಡು ಬಗೆಗಳಲ್ಲೂ ಅಧಿಕಪದತ್ವವು ಗುಣವೆನಿಸುತ್ತದೆ.

ಸಮಾಪ್ತಪುನರಾತ್ತತ್ವವು ಕೆಲವು ವೇಳೆ ದೋಷವೂ ಆಗದೆ ಗುಣವೂ ಆಗದೆ ಇರುತ್ತದೆ. ಅನ್ಯಾಸ್ತಾ ಗುಣರತ್ನರೋಹಣಭುವಃ ಎಂಬ ಶ್ಲೋಕದಲ್ಲಿ ಅನ್ವಯವು ಕೊನೆಯಾಗಿದ್ದರೂ ಮತ್ತೆ ಅದನ್ನು ದ್ವಿತೀಯಾರ್ಧದಲ್ಲಿ ತಿಳಿಸಲಾಗಿದೆ. ಇದರಿಂದ ರಸಕ್ಕೆ ಹಾನಿ ಉಂಟಾಗದಿರುವುದರಿಂದ ಇದು ದೋಷವೆನಿಸುವುದಿಲ್ಲ. ಇದರಲ್ಲಿ ಹೆಚ್ಚಿನ ಚಮತ್ಕಾರವಿಲ್ಲದ್ದರಿಂದ ಇದು ಗುಣವೂ ಆಗುವುದಿಲ್ಲ. ಆ ಶ್ಲೋಕದಲ್ಲಿ ವಿಶೇಷಣವನ್ನು ಮತ್ತೆ ತಿಳಿಸಿದ್ದರಿಂದ ಸಮಾಪ್ತಪುನರಾತ್ತವೆಂಬ ದೋಷವು ಅಷ್ಟರಲ್ಲಿಯೇ ಇರುವುದು. ಬೇರೆ ವಾಕ್ಯವನ್ನು ಮತ್ತೆ ತಿಳಿಸಿದರೆ ಸಮಾಪ್ತಪುನರಾತ್ತವೆಂಬ ದೋಷವಿರುವುದಿಲ್ಲ.

ಗರ್ಭಿತತ್ವವೆಂಬುದು ಕೆಲವು ವೇಳೆ ಗುಣವೆನಿಸುವುದು. ಎಲ್ಲಿ ಚಮತ್ಕಾರವಿರುವುದೋ ಅಲ್ಲಿ ಅದು ಗುಣವೆನಿಸುವುದು. "ದಿಗ್ದಂತಿಗಳ ಸಮೂಹದಿಂದ ವ್ಯವಸ್ಥಿತವಾದ ನಾಲ್ಕು ಎಲ್ಲೆಗಳಿರುವ ಈ ಭೂಮಿಯನ್ನು ವಶಪಡಿಸಿಕೊಳ್ಳಲಾಗಿದೆ. ರಾಜರೆಲ್ಲರನ್ನು ಜಯಿಸಿದ್ದರಿಂದ ಆ ಭೂಮಿಯ ಮೇಲೆ ಅಧಿಕಾರವನ್ನು ಪಡೆದದ್ದೂ ಆಯಿತು. ಹೀಗೆ ಹೇಳುತ್ತಲೇ ನಾವು ಆಶ್ಚರ್ಯದಿಂದ ರೋಮಾಂಚಗೊಂಡೆವೆಂಬುದನ್ನು ನೀವೇ ನೋಡಿರಿ. ಬ್ರಾಹ್ಮಣನಾದ ಕಶ್ಯಪನಿಗೆ ಇದನ್ನು ಕೊಡಲಾಗಿದೆ. ಬೇರೆ ಏನು ಹೇಳೋಣ? ಈ ಬಗೆಯ ವೃತ್ತಾಂತವು ಆಶ್ಚರ್ಯವೆನಿಸಿ ಯಾತರಿಂದ ಬಂದಿತೋ, ಎಲ್ಲಿ ಇದು ಕೊನೆಗೊಂಡಿತೋ, ಯಾವನಿಗಿಂತ ಬೇರೆ ದಾತೃವೇ ಹಿಂದೆಯೂ ಇರಲಿಲ್ಲವೋ, ಮುಂದೆಯೂ ಇರಲಾರನೋ ಅಂತಹ ಭಾರ್ಗವರಾಮನಿಗೆ ನಮಸ್ಕರಿಸುತ್ತೇವೆ" ಇಲ್ಲಿ 'ವದಂತ ಏವ' ಎಂಬುದು ಬೇರೊಂದು ವಾಕ್ಯದಲ್ಲಿ ಪ್ರವೇಶಿಸಿದ್ದರಿಂದ ಚಮತ್ಕಾರವನ್ನು ಹೆಚ್ಚಿಸಿದೆ. ಹೀಗೆ ಒಂದು ವಾಕ್ಯದೊಳಗೆ ಮತ್ತೊಂದು ವಾಕ್ಯವು ಸೇರಿಕೊಂಡಿದ್ದರೂ ಗುಣವೆನಿಸಿದೆ. ಹಾಗೆಯೇ ಪತತ್ಪ್ರಕರ್ಷವು ಕೆಲವು ಕಡೆ ಗುಣವೆನಿಸುತ್ತದೆ. 'ಚಂಚದ್ಭುಜ" ಎಂಬ ಶ್ಲೋಕದ ಅರ್ಥದಲ್ಲಿ ಸೌಕುಮಾರ್ಯವು ತೋರುವುದರಿಂದ ನಾಲ್ಕನೆಯ ಪಾದದಲ್ಲಿ ಶಬ್ದಾಡಂಬರವನ್ನು ತೊರೆದದ್ದು ಗುಣವೆನಿಸಿದೆ.

"ಕೆಲವು ಕಡೆ ವ್ಯಭಿಚಾರಿಭಾವವನ್ನು ಆಯಾ ಶಬ್ದದಿಂದಲೇ ತಿಳಿಸಿದ್ದರೂ ಅದು ದೋಷವೆನಿಸುವುದಿಲ್ಲ. ಎಲ್ಲಿ ಅನುಭಾವ ವಿಭಾವ ಎಂಬ ಶಬ್ದಗಳಿರುವುದರಿಂದ ರಚನೆಯು ಉಚಿತವೆನಿಸಿಲ್ಲವೋ ಅಂತಹ ಕಡೆ ವ್ಯಭಿಚಾರಿಭಾವವನ್ನು ಶಬ್ದದಿಂದಲೇ ಪ್ರಯೋಗಿಸಿದ್ದು ದೋಷವೆನಿಸುವುದಿಲ್ಲ." ಎಲ್ಲಿ ಅನುಭಾವವಿಭಾವಗಳ ಮೂಲಕ ರಸವನ್ನು ಪ್ರತಿಪಾದಿಸುವಾಗ ಅದರ ಪ್ರತೀತಿಯು ವಿಶದವಾಗಿ ಆಗುವುದಿಲ್ಲವೋ, ಎಲ್ಲಿ ವಿಭಾವ ಅನುಭಾವಗಳಿಂದ ಸಾಕಷ್ಟು ಪುಷ್ಟಿಯು ದೊರೆಯದೇ ಇರುವುದೋ ಅಲ್ಲಿ ವ್ಯಭಿಚಾರಿಭಾವವನ್ನು ಆ ಶಬ್ದದಿಂದ ತಿಳಿಸಿದ್ದು ದೋಷವೆನಿಸುವುದಿಲ್ಲ. "ಉತ್ಸಾಹದಿಂದ ಆತುರಪಡುತ್ತಲ್ಲೂ, ಆದರೆ ತನ್ನಲ್ಲಿ ಸಹಜವಾಗಿದ್ದ ಲಜ್ಜೆಯಿಂದ ಹಿಂತಿರುಗುತ್ತಲೂ ಬಂಧುಗಳ ಆಯಾಯ ಮಾತುಗಳಿಂದ ನಾಯಕನ ಮುಂದೆ ಹೋಗಬೇಕೆಂಬ ಇಚ್ಛೆಯನ್ನು

ಹೊಂದಿ ಎದುರಿಗೆ ಪತಿಯನ್ನು ನೋಡಿ ಮನಸ್ಸಿನಲ್ಲಿ ಅಂಜಿಕೆಯನ್ನು ಹೊಂದಿ ಹೊಸ ದಾಗಿ ಪತಿಯೊಡನೆ ಸೇರುವಾಗ ಮೈಯಲ್ಲೆಲ್ಲಾ ರೋಮಾಂಚಗೊಂಡ ಗೌರಿಯನ್ನು ಶಿವನು ನಗುತ್ತ ಆಲಿಂಗಿಸಿದನು. ಅಂತಹ ಗೌರಿಯು ನಿಮಗೆ ಮಂಗಳವನ್ನುಂಟುಮಾಡಲಿ" ಇಲ್ಲಿ ಔತ್ಸುಕ್ಯವನ್ನು ತ್ವರೆ ಎಂಬ ಅನುಭಾವದ ಮೂಲಕ ಪ್ರತಿಪಾದಿಸಲಾಗಿದೆ. ಆದರೆ ಅದು ನವದಂಪತಿಗಳ ಸಮಾಗಮಕಾಲದಲ್ಲಿ ಬೇಗನೆ ತೋರುವುದಿಲ್ಲ. ತ್ವರೆಯು ಭಯದಿಂದಲೂ ಸಂಭವಿಸುತ್ತದೆ. ಲಜ್ಜೆಯಿಂದಲೇ ಅವಳು ಪತಿಯ ಬಳಿಗೆ ಹೋಗಲು ಹಿಂತೆಗೆಯುವಳಾದ್ದರಿಂದ ಲಜ್ಜೆಯ ಕಾರ್ಯವೆನಿಸಿದ ವ್ಯಾವರ್ತನವು ಕೋಪದಿಂದಲೂ ಸಂಭವಿಸಬಲ್ಲದು. ಭಯ-ಹಾಸ ಇವೆರಡಕ್ಕೂ ವಿಭಾವಗಳಿಂದ ಸಾಕಷ್ಟು ಪರಿಪುಷ್ಟಿಯಾಗದೇ ಇರುವುದರಿಂದ ಇವು ಪ್ರಕೃತರಸಕ್ಕೆ ವಿರುದ್ಧವೆನಿಸಿದೆ. ಇಂತಹ ಸಂದರ್ಭದಲ್ಲಿ ಈ ವ್ಯಭಿಚಾರಿಭಾವಗಳನ್ನು ಆಯಾ ಶಬ್ದಗಳಿಂದ ತಿಳಿಸಿದ್ದು ನ್ಯಾಯವೇ ಆಗಿದೆ. ಹಾಗೆಯೇ ಸಂಚಾರಿಭಾವ ವಿಭಾವ ಅನುಭಾವ ಇವು ವಿರುದ್ಧವಾದ ರಸಕ್ಕೆ ಪೋಷಕವಾಗಿದ್ದರೆ ಅವನ್ನು ಬಾಧಿತವಾಗುವ ರೀತಿಯಲ್ಲಿ ತಿಳಿಸುವುದು ಗುಣವೇ ಆಗುತ್ತದೆ. "ಕ್ವಾಕಾರ್ಯಂ ಶಶಲಕ್ಷ್ಮಣಃ" ಎಂಬ ಪದ್ಯದಲ್ಲಿ ಶಾಂತರಸಕ್ಕೆ ಅಂಗವೆನಿಸಿದ ವಿತರ್ಕ, ಮತಿ, ಶಂಕೆ, ಧೃತಿ ಇವನ್ನು ಶೃಂಗಾರರಸಕ್ಕೆ ಅಂಗವೆನಿಸಿದ ಔತ್ಸುಕ್ಯ, ಸ್ಮೃತಿ, ದೈನ್ಯ, ಚಿಂತೆ ಇವು ತಿರಸ್ಕರಿಸುತ್ತವೆ. ಕೊನೆಯಲ್ಲಿ ಚಿಂತೆಯೇ ಪ್ರಧಾನವೆನಿಸಿದ ರಸದ ಉತ್ಕರ್ಷವು ಪ್ರಕಾಶವಾಗುತ್ತದೆ.

ರಸಗಳಿಗೆ ವಿರೋಧವುಂಟೆಂಬುದನ್ನು ಒಪ್ಪಿದಾಗಲೇ ವಿರೋಧಿರಸಗಳನ್ನು ಒಂದೆಡೆಗೆ ಸೇರಿಸುವುದು ದೋಷವೆಂಬುದನ್ನು ಒಪ್ಪಲಾಯಿತು. ಈಗ ಈ ಬಗೆಯ ವಿರೋಧವೂ ತೊಲಗುವುದೆಂಬುದನ್ನು ತಿಳಿಸುತ್ತಾನೆ. ವಿರೋಧವುಳ್ಳ ರಸಕ್ಕೂ ಸಹ ಸ್ಮರಣವುಂಟಾದರೂ ಅಥವಾ ಅಂತಹ ರಸಕ್ಕೆ ಸಾದೃಶ್ಯವನ್ನು ತಿಳಿಸಿದರೂ ಅಥವಾ ಅವಕ್ಕೆ ಅಂಗಾಂಗಿಭಾವವಿದ್ದರೂ ಆಗ ಪ್ರಧಾನವೆನಿಸಿದ ರಸದಲ್ಲೂ, ಭಾವದಲ್ಲೂ, ಅಂಗವೆನಿಸಿದ ವಿರುದ್ಧವಾದ ರಸಭಾವಗಳಿಗೆ ಪರಸ್ಪರವಾಗಿ ಸೇರಲಿಕ್ಕೆ ದೋಷವಿರುವುದಿಲ್ಲ. 'ಅಯಂ ರಸನೋತ್ಕರ್ಷೀ' ಎಂಬ ಶ್ಲೋಕದಲ್ಲಿ ನಾಯಕನೆನಿಸಿದ ಭೂರಿಶ್ರವನೇ ಮರಣವನ್ನು ಹೊಂದಿರುವುದರಿಂದ ನಾಯಿಕೆಗೆ ಅವನಲ್ಲಿದ್ದ ರತಿಯು ಶೃಂಗಾರರಸವಾಗಿ ಪರಿಣಮಿಸದೇ ಇರುವ ಪ್ರಯುಕ್ತ ಆ ಶೃಂಗಾರರಸದ ಅಂಗವೆನಿಸಿದ ರಸನೋತ್ಕರ್ಷಣ ಮೊದಲಾದವನ್ನು ನಾಯಿಕೆಯು ಸ್ಮರಿಸಿಕೊಳ್ಳುವ ಪ್ರಯುಕ್ತ ಅವು ಶೋಕವನ್ನು ಪ್ರಕಾಶಗೊಳಿಸುತ್ತಲೇ ಕರುಣರಸಕ್ಕೆ ಅನುಕೂಲವೆನಿಸಿವೆ. ಶೃಂಗಾರಕ್ಕೂ, ಕರುಣಕ್ಕೂ ವಿರೋಧವಿದ್ದರೂ ಸಹ ಶೃಂಗಾರದ ಅಂಗಗಳು ಕರುಣರಸಕ್ಕೆ ಪೋಷಕವೆನಿಸಿದ್ದರಿಂದ ಎರಡು ರಸಗಳಿಗೂ ಇಲ್ಲಿ ಪರಸ್ಪರವಿರೋಧವು ತೊಲಗಿದೆ.

ವಿರುದ್ಧರಸಗಳಿಗೆ ಸಾಮ್ಯವಿದ್ದರೂ ಅಂಗಾಂಗಿಭಾವದಿಂದ ವಿರೋಧವು ತೊಲಗುವುದೆಂಬುದನ್ನು ಉದಾಹರಿಸುತ್ತಾನೆ. ಕೆಂಪುಬಣ್ಣವಿದ್ದು (ಅನುರಾಗವಿದ್ದು) ಸತ್ಪ್ರೋದ್ರೇಕದಿಂದ ಉತ್ಪ್ರೇಕ್ಷಕದ ಹನಿಗಳು ವಿಶೇಷವಾಗಿ ಕೆಳಗೆ ಸುರಿಯುತ್ತಿರಲು

ಕೈಗಳ ಹೊಡೆತದಿಂದ ದೊಡ್ಡದಾದ ತೊಡೆಗಳಲ್ಲಿ ಶಬ್ದವಾಗುತ್ತಿರಲು (ವೀರರಿಗೆ ಕ್ರೋಧವುಂಟಾದಾಗ ಕಾಮೋದ್ರೇಕಕ್ಕಾಗಿ ಕಾಮಿನಿಯ ತೊಡೆಗಳನ್ನು ತಮ್ಮ ತೊಡೆಗಳೊಡನೆ ಉಜ್ಜುವುದು ಸ್ವಭಾವ) ಬಾರಿ ಬಾರಿಗೂ ಹಲ್ಲುಗಳಿಂದ ತುಟಿಯನ್ನು ಕಚ್ಚುತ್ತಿರಲು ಪ್ರಿಯಸಿಯರೊಡಗೂಡುವಂತೆ ಶಿಶುಪಾಲನ ಕಡೆಯ ರಾಜರು ಸಿಟ್ಟಿನಿಂದ ಕೂಡಿದ್ದರು." ಇಲ್ಲಿ ವರ್ಣಿತವಾಗಿರುವ ವೀರರಸದ ವ್ಯಭಿಚಾರಿಭಾವವೆನಿಸಿದ ಕ್ರೋಧವನ್ನು ಅನುಭಾವದೊಡನೆ ಸದೃಶವೆಂದು ತಿಳಿಸುವ ಇಚ್ಛೆಯಿಂದ ಕವಿಯು ವೀರ ಶೃಂಗಾರಗಳೆರಡನ್ನು ಒಂದೆಡೆಗೆ ಸೇರಿಸಿದ್ದರಲ್ಲಿ ದೋಷವಿಲ್ಲವೆಂಬುದು ಇಲ್ಲಿ ತಿಳಿದು ಬರುತ್ತದೆ. ಇಲ್ಲಿ ಉತ್ಸಾಹವು ಸ್ಥಾಯಿ ಎನಿಸಿದ್ದರಿಂದ ವೀರರಸವೇ ಇದೆ. ಕ್ರೋಧವಾದರೋ ಅದಕ್ಕೆ ಸಂಚಾರಿಭಾವವೆನಿಸಿದೆ ಎಂಬುದನ್ನು ಸೂಚಿಸಿದ್ದರಿಂದ ಕ್ರೋಧವು ಇಲ್ಲಿ ಸ್ಥಾಯಿ ಎನಿಸದೇ ಇರುವ ಪ್ರಯುಕ್ತ ರುಷಾ ಎಂಬುದರಿಂದ ಅದನ್ನು ವಾಚ್ಯವಾಗಿ ತಿಳಿಸಿದ್ದರೂ ಸಹ ಹೀಗೆ ಸ್ವಶಬ್ದದಿಂದ ತಿಳಿಸಿದ್ದು ದೋಷವೆನಿಸುವುದಿಲ್ಲವೆಂಬುದು ಸೂಚಿತವಾಯಿತು.

> ಏಕಂ ಧ್ಯಾನನಿಮೀಲನಾನ್ಮುಕುಲಿತಪ್ರಾಯಂ ದ್ವಿತೀಯಂ ಪುನಃ
> ಪಾರ್ವತ್ಯಾ ವದನಾಂಬುಜಸ್ತನಭರೇ ಸಂಭೋಗಭಾವಾಲಸಮ್ ।
> ಅನ್ಯದ್ದೂರವಿಕೃಷ್ಟಚಾಪಮದನಕ್ರೋಧಾನಲೋದ್ದೀಪಿತಂ
> ಶಂಭೋರ್ಭಿನ್ನರಸಂ ಸಮಾಧಿಸಮಯೇ ನೇತ್ರತ್ರಯಂ ಪಾತು ವಃ ॥

ಅತ್ರ ಶಾಂತಶೃಂಗಾರರೌದ್ರರಸಪರಿಪುಷ್ಟಾ ಭಗವದ್ವಿಷಯಾ ರತಿಃ. ಯಥಾ ವಾ.

> ಕ್ಷಿಪ್ತೋ ಹಸ್ತಾವಲಗ್ನಃ ಪ್ರಸಭಮಭಿಹತೋಽಪ್ಯಾದದಾನೋಽಂಶುಕಾಂತಂ
> ಗೃಹ್ಣನ್ ಕೇಶೇಷ್ವಪಾಸ್ತಶ್ಚರಣನಿಪತಿತೋ ನೇಕ್ಷಿತಃ ಸಂಭ್ರಮೇಣ ।
> ಆಲಿಂಗನ್ ಯೋಽವಧೂತಸ್ತ್ರಿಪುರಯುವತಿಭಿಃ ಸಾಶ್ರುನೇತ್ರೋತ್ಪಲಾಭಿಃ
> ಕಾಮೀವಾರ್ದ್ರಾಪರಾಧಃ ಸ ದಹತು ದುರಿತಂ ಶಾಂಭವೋ ವಃ ಶರಾಗ್ನಿಃ

ಅತ್ರ ಕವಿಗತಾ ಭಗವದ್ವಿಷಯಾ ರತಿಃ ಪ್ರಧಾನಮ್. ತಸ್ಯಾಃ ಪರಿಪೋಷಕತಯಾ ಭಗವತಸ್ತ್ರಿಪುರಧ್ವಂಸಂ ಪ್ರತಿ ಉತ್ಸಾಹಸ್ಯಾಪರಿಪುಷ್ಟತಯಾ ರಸಪದವೀಂ ಅಪ್ರಾಪ್ತತಯಾ ಭಾವಮಾತ್ರಸ್ಯ ಕರುಣೋಽಂಗಮ್. ತಸ್ಯ ಚ 'ಕಾಮೀವ' ಇತಿ ಸಾಮ್ಯಬಲಾದಾಯಾತಃ ಶೃಂಗಾರಃ. ಏವಂ ಚ ಅವಿಶ್ರಾಂತಿಧಾಮತಯಾ ಕರುಣಸ್ಯಾಂಗತ್ವೈವೇತಿ ದ್ವಯೋರಪಿ ಕರುಣಶೃಂಗಾರಯೋಃ ಭಗವದುತ್ಸಾಹಸಪರಿಪುಷ್ಟತದ್ವಿಷಯರತಿ ಭಾವಾಸ್ವಾದಪ್ರಕರ್ಷಕತಯಾ ಯೌಗಪದ್ಯಸದ್ಭಾವಾದಂಗತ್ವೇನ ನ ವಿರೋಧಃ.

ನನು ಸಮುಹಾಲಂಬನಾತ್ಮಕಪೂರ್ಣಘನಾನಂದಸ್ವರೂಪಸ್ಯ ರಸಸ್ಯ ತಾದೃಶೇನ ಇತರರಸೇನ ಕಥಂ ವಿರೋಧಃ ಸಂಭಾವನೀಯಃ ? ಏಕವಾಕ್ಯೇ ನಿವೇಶಪ್ರಾದುರ್ಭಾವ ಯೌಗಪದ್ಯವಿರಹೇಣ ಪರಸ್ಪರೋಪಮರ್ದಕತ್ವಾನುಪಪತ್ತೇಃ. ನಾಪ್ಯಂಗಾಂಗಿಭಾವಃ, ದ್ವಯೋರಪಿ ಪೂರ್ಣತಯಾ ಸ್ವಾತಂತ್ರ್ಯೇಣ ವಿಶ್ರಾಂತೇಃ. ಸತ್ಯಮುಕ್ತಮ್. ಅತ ಏವಾತ್ರ ಪ್ರಧಾನೇತರೇಷು ರಸೇಷು ಸ್ವಾತಂತ್ರ್ಯ ವಿಶ್ರಾಂತ್ಯಭಾವಾತ್ ಪೂರ್ಣರಸ

ಭಾವಮಾತ್ರಸ್ಯ ವಿಲಕ್ಷಣತಯಾ ಸಂಚಾರಿರಸನಾಮ್ನಾ ವ್ಯಪದೇಶಃ ಪ್ರಾಚ್ಯಾನಾಮ್. ಅಸ್ಮತ್ಪಿತಾಮಹಾನುಜಕವಿಪಂಡಿತಮುಖ್ಯಶ್ರೀಚಂಡೀದಾಸಪಾದಾನಾಂ ತು ಖಂಡರಸನಾಮ್ನಾ. ಯದಾಹುಃ—

ಅಂಗಂ ಬಾಧ್ಯೋಽಥ ಸಂಸರ್ಗೀ ಯದ್ಯಂಗೀ ಸ್ಯಾದ್ರಸಾಂತರೇ ।
ನಾಸ್ವಾದ್ಯತೇ ಸಮಗ್ರಂ ತತ್ ತತಃ ಖಂಡರಸಃ ಸ್ಮೃತಃ ॥ ಇತಿ.

ನನು 'ಆದ್ಯಃ ಕರುಣಬೀಭತ್ಸರೌದ್ರವೀರಭಯಾನಕೈಃ' ಇತ್ಯುಕ್ತನಯೇನ ವಿರೋಧಿನೋಃ ವೀರಶೃಂಗಾರಯೋಃ ಕಥಮೇಕತ್ರ—

ಕಪೋಲೇ ಜಾನಕ್ಯಾಃ ಕರಿಕಲಭದಂತದ್ಯುತಿಮುಷಿ
ಸ್ಮರಸ್ಮೇರಸ್ಫಾರೋಡ್ಡಮರಪುಲಕಂ ವಕ್ತ್ರಕಮಲಮ್ ।
ಮುಹುಃ ಪಶ್ಯನ್ ಶೃಣ್ವನ್ ರಜನಿಚರಸೇನಾಕಲಕಲಂ
ಜಟಾಜೂಟಗ್ರಂಥಿಂ ದ್ರಢಯತಿ ರಘೂಣಾಂ ಪರಿವೃಢಃ ॥

ಇತ್ಯಾದೌ ಸಮಾವೇಶಃ? ಅತ್ರೋಚ್ಯತೇ ಇಹ ಖಲು ರಸಾನಾಂ ವಿರೋಧಿತಾಯಾ ಅವಿರೋಧಿತಾಯಾಶ್ಚ ತ್ರಿಧಾ ವ್ಯವಸ್ಥಾ. ಕಯೋಶ್ಚಿದಾಲಂಬನೈಕ್ಯೇನ, ಕಯೋಶ್ಚಿದಾಶ್ರಯೈಕ್ಯೇನ, ಕಯೋಶ್ಚಿನ್ನೈರಂತರ್ಯೇಣ. ಇತಿ ತತ್ರ ವೀರಶೃಂಗಾರಯೋರಾಲಂಬನೈಕ್ಯೇನ ವಿರೋಧಃ, ತಥಾ ಹಾಸ್ಯರೌದ್ರಬೀಭತ್ಸೈಃ ಸಂಭೋಗಸ್ಯ, ವೀರಕರುಣರೌದ್ರಾದಿಭಿರ್ವಿಪ್ರಲಂಭಸ್ಯ. ಆಲಂಬನೈಕ್ಯೇನ ಆಶ್ರಯೈಕ್ಯೇನ ಚ ವೀರಭಯಾನಕಯೋಃ.

ನೈರಂತರ್ಯವಿಭಾವೈಕ್ಯಾಭ್ಯಾಂ ಶಾಂತಶೃಂಗಾರಯೋಃ ತ್ರಿಧಾಽಪಿ ಅವಿರೋಧಃ ವೀರಸ್ಯಾದ್ಭುತರೌದ್ರಾಭ್ಯಾಂ, ಶೃಗಾರಸ್ಯಾದ್ಭುತೇನ, ಭಯಾನಕಸ್ಯ ಬೀಭತ್ಸೇನೇತಿ.

ತೇನಾತ್ರ ವೀರಶೃಂಗಾರಯೋರ್ಭಿನ್ನಾಲಂಬನತ್ವಾನ್ನ ವಿರೋಧಃ. ಏವಂ ಚ ವೀರಸ್ಯ ನಾಯಕನಿಷ್ಠತ್ವೇನ ಭಯಾನಕಸ್ಯ ಪ್ರತಿನಾಯಕನಿಷ್ಠತ್ವೇನ ನಿಬಂಧೇ ಭಿನ್ನಾಶ್ರಯತ್ವೇ ನ ವಿರೋಧಃ. ಯಶ್ಚ ನಾಗಾನಂದೇ ಪ್ರಶಮಾಶ್ರಯಸ್ಯಾಪಿ ಜೀಮೂತವಾಹನಸ್ಯ ಮಲಯವತ್ಯನುರಾಗೋ ದರ್ಶಿತಃ, ತತ್ರ "ಅಹೋ ಗೀತಮ್, ಅಹೋ ವಾದಿತ್ರಮ್" ಇತ್ಯದ್ಭುತಸ್ಯಾಂತರಾ ನಿವೇಶನಾತ್ ನೈರಂತರ್ಯಾಭಾವಾತ್ ನ ಶಾಂತಶೃಂಗಾರಯೋರ್ವಿರೋಧಃ. ಏವಮನ್ಯದಪಿ ವಿಜ್ಞೇಯಮ್. 'ಪಾಂಡು ಕ್ಷಾಮಂ ವದನಂ' ಇತ್ಯಾದೌ ಚ ಪಾಂಡುತಾದೀನಾಂ ಅಂಗಭಾವಃ ಕರುಣವಿಪ್ರಲಂಭೇಽಪೀತಿ ನ ವಿರೋಧಃ.

ಅನುಕಾರೇ ಚ ಸರ್ವೇಷಾಂ ದೋಷಾಣಾಂ ನೈವ ದುಷ್ಟತಾ ।

ಸರ್ವೇಷಾಂ ದುಃಶ್ರವತ್ವಪ್ರಭೃತೀನಾಮ್. ಯಥಾ—

ಏಷ ದುಶ್ಚ್ಯವನಂ ನೌಮೀತ್ಯಾದಿ ಜಲ್ಪತಿ ಕಶ್ಚನ ।

ಅತ್ರ ದುಶ್ಚ್ಯವನಶಬ್ದೋಽಪ್ರಯುಕ್ತಃ.

ಅನ್ಯೇಷಾಮಪಿ ದೋಷಾಣಾಂ ಇತ್ಯೌಚಿತ್ಯಾನ್ಮನೀಷಿಭಿಃ ।
ಅದೋಷತಾ ಚ ಗುಣತಾ ಜ್ಞೇಯಾ ಚಾನುಭಯಾತ್ಮತಾ ॥

ಅನುಭಯಾತ್ಮತಾ ಅದೋಷಗುಣಾತ್ಮತಾ ॥

"ಶಿವನ ಮೂರು ಕಣ್ಣುಗಳು ಯೋಗಕಾಲದಲ್ಲಿ ಬೇರೆ ಬೇರೆ ಬಗೆಯ ರಸಗಳನ್ನು ಪ್ರಕಾಶಪಡಿಸುತ್ತಾ ನಿಮ್ಮನ್ನು ರಕ್ಷಿಸಲಿ. ಇಂದ್ರಿಯಗಳಿಗೆ ಕೆಲಸವಿಲ್ಲದ್ದರಿಂದ ಒಂದು ಕಣ್ಣು ಯಾವಾಗಲೂ ಮುಚ್ಚಿಕೊಂಡು, ಎರಡನೆಯದು ಪಾರ್ವತಿಯ ಮುಖಕಮಲ ದೊಡಗೂಡಿದ ಸ್ತನಗಳೆರಡರಲ್ಲಿಯೇ ಅಂಟಿಕೊಂಡು ಚುಂಬನಾಭಿಲಾಷದಿಂದ ನಿಶ್ಚಲ ವಾಗಿತ್ತು. ಮೂರನೆಯದು ಧನುರ್ಧಾರಿಯಾದ ಮನ್ಮಥನಬಗ್ಗೆ ಕ್ರೋಧಾಗ್ನಿಯಿಂದ ಪ್ರಜ್ವಲಿಸುತ್ತಲೂ ಇತ್ತು. ಅದ್ದರಿಂದಲೇ ಅವು ಯೋಗಕಾಲದಲ್ಲಿ ಬೇರೆ ಬೇರೆ ರಸಗಳನ್ನು ಸೂಚಿಸುತ್ತಿದ್ದವು. ಅವುಗಳಿಂದ ಪುಷ್ಟಿ ಹೊಂದಿದ ಭಗವದ್ವಿಷಯಕವಾದ ರತಿಯು ತೋರುತ್ತದೆ. ಇಲ್ಲಿ ಮೊಲನೆಯ ಪಾದದಲ್ಲಿ ಶಾಂತವೂ, ಎರಡನೆಯದರಲ್ಲಿ ಶೃಂಗಾರವೂ, ಮೂರನೆಯ ಪಾದದಲ್ಲಿ ರೌದ್ರರಸವೂ ತೋರುತ್ತವೆ. ಇವು ಮೂರು ಸಹ ಇಲ್ಲಿ ಪ್ರಧಾನ ವಾಗಿ ತೋರುವ ಭಗವದ್ವಿಷಯಕವಾದ ರತಿಗೆ ಅಂಗವೆನಿಸಿವೆ. ಇಲ್ಲಿ ಪ್ರಧಾನವಾದ ರತಿಭಾವಕ್ಕೂ ಅಂಗವೆನಿಸಿದ ಈ ಮೂರು ರಸಗಳಿಗೂ ಪರಸ್ಪರ ವಿರೋಧವು ತೋರಿ ದರೂ ಒಂದಕ್ಕೊಂದರೊಡನೆ ಸಂಬಂಧವಿಲ್ಲದ್ದರಿಂದ ಯಾವ ದೋಷಕ್ಕೂ ಅವಕಾಶವಿಲ್ಲ. ಹೀಗೆ ಇಲ್ಲಿ ಅಂಗಿ ಎನಿಸಿದ ಭಾವಕ್ಕೂ ಅಂಗವೆನಿಸಿದ ರಸಗಳಿಗೂ ಪರಸ್ಪರ ವಿರೋಧ ವಿಲ್ಲ ಎಂಬುದನ್ನು ತಿಳಿಸಲಾಗಿದೆ. ಹಾಗೆಯೇ ಪರಂಪರೆಯಿಂದ ಅಂಗವೆನಿಸಿದ ರಸಗಳೆರ ಡಕ್ಕೆ ವಿರೋಧವಿಲ್ಲವೆಂಬುದನ್ನು ಈಗ ಉದಾಹರಿಸುತ್ತಾನೆ. ಅಮರುಶತಕದ ಈ ಪದ್ಯ ದಲ್ಲಿ ಇವನ್ನು ಕಾಣಬಹುದು. "ಶೋಕದಿಂದಲೂ ಅಸೂಯೆಯಿಂದಲೂ ಕಣ್ಣೀರಿನಿಂದ ಕೂಡಿರುವ ನೇತ್ರೋತ್ಪಲಗಳಿರುವ ತ್ರಿಪುರಾಸುರನ ಪತ್ನಿಯರಿಗೆ ಯಾವ ಶಂಭುವಿನ ಬಾಣವೆಂಬ ಅಗ್ನಿಯು ಆಗತಾನೆ ಅಪರಾಧವನ್ನೆಸಗಿದ ಕಾಮುನಂತೆ ಸುಡಲಿಕ್ಕಾಗಿಯೂ ಕೋಪವನ್ನು ತೊಲಗಿಸಲಿಕ್ಕಾಗಿಯೂ ಕೈಯಲ್ಲಿ ಅಂಟಿಕೊಂಡಿದ್ದು, ಅವರಿಂದ ಬಲ ತ್ಕಾರದಿಂದ ನಿರಾಕೃತವಾದರೂ ಸಹ ಬಟ್ಟೆಯ ತುದಿಯನ್ನು ತೆಗೆದುಕೊಂಡು ಸುಡಲಿ ಕ್ಕಾಗಿಯೂ ಚುಂಬನಕ್ಕಾಗಿಯೂ ಕೇಶಗಳಲ್ಲಿ ಅಂಟಿಕೊಂಡಿದ್ದೇ ಮುಂದೆ ಹೊರಟಿತು. ಕಾಲುಗಳಲ್ಲಿ ಬಿದ್ದಿದ್ದರೂ ಸಂಭ್ರಮದಿಂದಲೂ ಗೌರವದಿಂದಲೂ ಅವರು ಅದನ್ನು ಕಾಣ ಲಿಲ್ಲ. ಎಲ್ಲಾ ಅವಯವಗಳನ್ನು ವ್ಯಾಪಿಸಿದ್ದರೂ ಸಹ ದೂರದವರೆಗೆ ಹೋಗುವಂತೆ ಅದನ್ನು ಅವರು ತೊರೆದರು. ಇಂತಹ ಶಂಭುವಿನ ಶರಾಗ್ನಿಯು ನಿಮ್ಮ ಪಾಪವನ್ನು ನಾಶಮಾಡಲಿ" ಇಲ್ಲಿ ಕವಿಯಲ್ಲಿ ಇರುವ ಭಗವದ್ವಿಷಯಕವಾದ ರತಿಯೇ ಪ್ರಧಾನವೆನಿ ಸಿದೆ. ಭಗವಂತನಿಗೆ ತ್ರಿಪುರಧ್ವಂಸದಲ್ಲಿ ಇರುವ ಉತ್ಸಾಹವು ಈ ರತಿಗೆ ಪೋಷಕವೆನಿ ಸಿದೆ. ಈ ಉತ್ಸಾಹಕ್ಕೆ ಇಲ್ಲಿ ಸಾಕಷ್ಟು ಪುಷ್ಟಿಯು ದೊರೆಯದೇ ಇರುವುದರಿಂದ ಇದು ರಸವೆನಿಸಲು ಅರ್ಹವಾಗಿಲ್ಲ. ಆದ್ದರಿಂದ ಇದು ಭಾವವಾಗಿಯೇ ಉಳಿಯುತ್ತದೆ. ಈ ಭಾವಕ್ಕೆ ಕರುಣರಸವು ಅಂಗವೆನಿಸಿದೆ. ಅದಕ್ಕೆ 'ಕಾಮಿನ' ಎಂಬಲ್ಲಿ ಹೇಳಿರುವ

ಸಾದೃಶ್ಯದ ಬಲದಿಂದ ಶೃಂಗಾರರಸವು ಅಂಗವೆನಿಸಿದೆ. ಶೃಂಗಾರರಸವು ತೋರಿದರೂ ಅದು ಕರುಣವನ್ನು ಆಶ್ರಯಿಸಿರುವುದರಿಂದ ಆಕಾಂಕ್ಷೆಯು ತೊಲಗದೇ ಇರುವ ಪ್ರಯುಕ್ತ ಈ ಕರುಣಶೃಂಗಾರಗಳೆರಡೂ ಸಹ ಭಗವಂತನ ಉತ್ಸಾಹದಿಂದ ಪುಷ್ಟಿಯನ್ನು ಹೊಂದಿ ಕವಿಗೆ ಭಗವಂತನ ಬಗ್ಗೆ ಇರುವ ರತಿಗೆ ಉತ್ಕರ್ಷವನ್ನುಂಟು ಮಾಡುವುದರಿಂದ ಇವೆರಡೂ ಏಕಕಾಲದಲ್ಲಿಯೇ ತೋರುವುದರಲ್ಲಿ ಯಾವ ವಿರೋಧವೂ ಕಾಣುವುದಿಲ್ಲ. ಇವಕ್ಕೆ ಪರಸ್ಪರಪರಿಪೋಷಕ್ಕೆ ಯಾವ ಪ್ರತಿಬಂಧಕವೂ ತೋರುವುದಿಲ್ಲ.

ರಸಗಳಿಗೆ ಪರಸ್ಪರವಾಗಿ ಅಂಗಾಂಗಿಭಾವವೇ ಹೊಂದದೇ ಇರುವುದರಿಂದ ವಿರೋಧವು ಹೇಗೆ ತೊಲಗುವುದೆಂಬುದನ್ನು ತಿಳಿಸುತ್ತಾನೆ. ರಸವು ವಿಭಾವ ಅನುಭಾವ ವ್ಯಭಿಚಾರಿಭಾವಗಳೆಲ್ಲವೂ ಒಟ್ಟಿಗೆ ಸೇರಿದ್ದರಿಂದ ಉಂಟಾಗುವ ಜ್ಞಾನಸ್ವರೂಪವೂ ಪೂರ್ಣವೂ ಆದ ಘನಾನಂದವೆನಿಸಿದ ಪ್ರಯುಕ್ತ ಅಂತಹ ರಸಕ್ಕೆ ಮತ್ತೊಂದು ರಸದೊಡನೆ ಹೇಗೆ ವಿರೋಧ ಉಂಟಾದೀತು ? ಇವುಗಳಲ್ಲಿ ಒಂದರಿಂದ ಒಂದಕ್ಕೆ ಪ್ರತಿಬಂಧಕವೇ ಹೊಂದುವುದಿಲ್ಲ ? ಇಂತಹ ಜ್ಞಾನವು ಒಂದೇ ವಾಕ್ಯದಲ್ಲಿ ಒಟ್ಟಿಗೆ ಇರಲಿಕ್ಕೂ ಸೇರಲಿಕ್ಕೂ ಸಾಧ್ಯವಿಲ್ಲದ್ದರಿಂದ ಅವು ಪರಸ್ಪರವಾಗಿ ವಿರೋಧಿಸುತ್ತವೆ ಎಂಬುದೇ ಹೊಂದುವುದಿಲ್ಲ. ಎರಡು ರಸಗಳು ಒಂದೆಡೆಗೆ ಸೇರಿದ್ದರೂ ಅಖಂಡವೆನಿಸಿದ್ದರಿಂದ ಒಂದೊಂದೂ ಸ್ವತಂತ್ರವಾಗಿ ಇರುವಂತವಾದ್ದರಿಂದ ಅವಕ್ಕೆ ಅಂಗಾಂಗಿಭಾವವೂ ಕೂಡುವುದಿಲ್ಲ. ಆದ್ದರಿಂದ ಅವಕ್ಕೆ ಪರಸ್ಪರವಿರೋಧವು ಹೇಗೆ ಸಂಭವಿಸುತ್ತದೆ ? ಎಂದು ಆಕ್ಷೇಪಿಸಿ ಸಮಾಧಾನವನ್ನು ತಿಳಿಸುತ್ತಾನೆ. ಹೀಗೆ ಅನುಪಪತ್ತಿ ಇರುವುದರಿಂದಲೇ ಅನೇಕರಸಗಳು ಒಂದೆಡೆಗೆ ಸೇರಿದಕಡೆ ಅವುಗಳಲ್ಲಿ ಒಂದು ರಸವು ಪ್ರಧಾನವೆನಿಸಿದ್ದು, ಒಂದೊಂದು ರಸವೂ ಪ್ರಧಾನವೆನಿಸಲಿಕ್ಕಾಗದ್ದರಿಂದ ಒಂದು ಅಖಂಡವೆನಿಸಿದ ರಸವನ್ನು ಬಿಟ್ಟು ಉಳಿದ ರಸಗಳನ್ನು ಅವಕ್ಕಿಂತಲೂ ವಿಲಕ್ಷಣವೆಂದು ಭಾವಿಸುವುದರಿಂದ ಅವುಗಳ ಆನಂದಸ್ವರೂಪಕ್ಕೆ ಯಾವ ತಡೆಯೂ ಉಂಟಾಗುವುದಿಲ್ಲವೆಂದು ಪ್ರಾಚೀನರು ಅಭಿಪ್ರಾಯಪಟ್ಟಿರುವರು. ಅಂತಹ ರಸಗಳನ್ನು ಸಂಚಾರಿರಸಗಳೆಂದು ಅವರು ಕರೆದಿರುವರು. ಚಂಡೀದಾಸನು ಅಂತಹ ರಸಗಳನ್ನು ಖಂಡರಸವೆಂದು ಕರೆದಿರುವನು. “ಒಂದು ಪ್ರಧಾನವಾದ ರಸವು ಬೇರೊಂದು ರಸದಲ್ಲಿ ಅಂಗವೆನಿಸಿರಬಹುದು. ವಿರೋಧಿಯಾದ ರಸವು ಕೇವಲ ಸ್ಮೃತಿಗೆ ವಿಷಯವಾಗಿರಬಹುದು. ವಿರೋಧವಿಲ್ಲದೆಯೂ, ಉಪಕಾರವೂ ಇಲ್ಲದೆಯೂ ರಸಗಳು ಕೂಡಿರಬಹುದು. ಆಗ ಅದನ್ನು ಪೂರ್ಣವಾಗಿ ಅನುಭವಿಸಲಿಕ್ಕಾಗದೇ ಇದ್ದಲ್ಲಿ ಅದನ್ನು ಖಂಡರಸವೆಂದು ಕರೆಯಲಾಗುವುದು. ಒಂದು ರಸಕ್ಕೆ ಮತ್ತೊಂದು ಅಂಗವಾಗಿರಬಹುದು. ಒಂದು ಮತ್ತೊಂದಕ್ಕೆ ಬಾಧಕವಾಗಿರಬಹುದು. ಒಂದು ಮತ್ತೊಂದರ ಸಂಸರ್ಗದಲ್ಲಿರಬಹುದು. ಇಂತವು ಪ್ರಾಚೀನರ ಮತದಲ್ಲಿ ಸಂಚಾರಿರಸಗಳೆನಿಸಿ ಚಂಡೀದಾಸನ ಮತದಲ್ಲಿ ಸಂಚಾರಿರಸಗಳೆನಿಸುತ್ತವೆ.

ಕರುಣ ಬೀಭತ್ಸ ರೌದ್ರ ವೀರ ಭಯಾನಕ ರಸಗಳೊಡನೆ ಶೃಂಗಾರರಸಕ್ಕೆ ವಿರೋಧವಿದೆ ಎಂದು ಹಿಂದೆ ಹೇಳಿರುವ ಪ್ರಕಾರ ಹೀಗೆ ಪರಸ್ಪರವಿರುದ್ಧವಾದ ವೀರ ಶೃಂಗಾರ ರಸಗಳು ಹೇಗೆ ಒಂದೇ ಕಡೆಗೆ ಸೇರಬಲ್ಲವು ? ಈ ಮುಂದಿನ ಪದ್ಯದಲ್ಲಿ ಅವೆರಡೂ ಸೇರಿವೆ. ಕವಿಯು ಅವನ್ನು ಹೇಗೆ ಸೇರಿಸಿದನು ? ಆ ಪದ್ಯದ ಆಶಯ ಹೀಗಿದೆ. "ರಘುವಂಶದ ರಾಜರಲ್ಲಿ ಶ್ರೇಷ್ಠವೆನಿಸಿದ ರಾಮನು ಆನೆಯ ಮರಿಯ ಕೋರೆಯ ಹಲ್ಲಿನಂತೆ ಅತ್ಯಂತನಿರ್ಮಲವೆನಿಸಿದ ಕೆನ್ನೆಯಲ್ಲಿ ಕಾಮಾವೇಶದಿಂದ ವಿಕಸಿತವಾಗಿ ರೋಮಾಂಚಗೊಂಡಿರುವ ಸೀತೆಯ ಮುಖಮುಲವನ್ನು ಮತ್ತೆ ಮತ್ತೆ ನೋಡುತ್ತಲೂ, ಈ ಕಡೆ ಖರದೂಷಣ ಮೊದಲಾದ ರಾಕ್ಷಸರ ಸೈನ್ಯದ ಕೋಲಾಹಲವನ್ನು ಕೇಳುತ್ತಲೂ ಯುದ್ಧಕ್ಕೆ ಹೊರಡಲು ಜಡೆಯನ್ನು ಗಟ್ಟಿಯಾಗಿ ಕಟ್ಟುತ್ತಾನೆ." ಇಲ್ಲಿ ಶೃಂಗಾರ ರಸಕ್ಕೆ ಸೀತೆಯೇ ಆಲಂಬನವಿಭಾವ. ಆಕೆಯ ಶುಭ್ರವಾದ ಕಪೋಲವೇ ಉದ್ದೀಪನ ವಿಭಾವ. ಮುಖಕಮಲವನ್ನು ನೋಡುವುದೇ ಅನುಭಾವ. ರತಿಯೇ ಸ್ಥಾಯಿಭಾವ. ಹಾಗೆಯೇ ವೀರರಸಕ್ಕೆ ರಾಕ್ಷಸರ ಸೈನ್ಯವೇ ಆಲಂಬನವಿಭಾವ. ಅದರ ಕೋಲಾಹಲವೇ ಉದ್ದೀಪನವಿಭಾವ. ಉತ್ಸಾಹವೇ ಸ್ಥಾಯಿಭಾವ. ಹೀಗೆ ಇಲ್ಲಿ ಎರಡು ವಿರುದ್ಧ ರಸಗಳು ಒಟ್ಟಿಗೆ ಸೇರಿವೆ. ಹೀಗೆ ಸೇರಿರುವುದಕ್ಕೆ ಸಮಾಧಾನವನ್ನು ಹೇಳುತ್ತಾನೆ. ರಸಗಳಿಗೆ ಪರಸ್ಪರ ವಿರೋಧವಿದೆ ಎಂದಾಗಲೀ ಇಲ್ಲವೆಂದಾಗಲೀ ಹೇಳಲಿಕ್ಕೆ ಮೂರು ಬಗೆಯ ವ್ಯವಸ್ಥೆಯಿದೆ. ಕೆಲವಕ್ಕೆ ಆಲಂಬನವಿಭಾವವು ಒಂದೇ ಆಗಿರಬಹುದು. ಕೆಲವಕ್ಕೆ ಆಶ್ರಯನಾದ ನಾಯಕನು ಒಬ್ಬನೇ ಆಗಿರಬಹುದು. ಕೆಲವು ರಸಗಳಿಗೆ ನಿಕಟಸಂಬಂಧವಿರಬಹುದು. ಈ ಮೂರು ಬಗೆಗಳಿಂದಲೂ ಕೆಲವು ವಿರುದ್ಧ ರಸಗಳು ಒಂದೆಡೆಗೆ ಸೇರುತ್ತವೆ. ವೀರಶೃಂಗಾರಗಳೆರಡಕ್ಕೆ ಆಲಂಬನವಿಭಾವವು ಒಂದೇ ಆಗಿರಬಹುದು. ಒಂದೇ ಆಲಂಬನದಲ್ಲಿ ಉತ್ಸಾಹ ರತಿ ಇವೆರಡೂ ಒಟ್ಟಿಗೆ ಸೇರುವುದು ಅಸಂಭವವಾದ್ದರಿಂದ ಅವು ಒಂದೆಡೆಗೆ ಸೇರಿದರೆ ವೀರಶೃಂಗಾರಗಳಿಗೆ ವಿರೋಧವಿರುತ್ತದೆ. ಹಾಗೆಯೇ ಹಾಸ್ಯರೌದ್ರ ಬೀಭತ್ಸಗಳೊಡನೆ ಸಂಭೋಗಶೃಂಗಾರಕ್ಕೆ ಆಲಂಬನೈಕ್ಯದಿಂದ ವಿರೋಧವಿರುತ್ತದೆ. ವೀರಕರುಣರೌದ್ರರಸಗಳೊಡನೆ ವಿಪ್ರಲಂಭಕ್ಕೆ ವಿರೋಧವಿರುತ್ತದೆ. ಒಂದೇ ಆಲಂಬನವಿದ್ದರೂ, ಒಬ್ಬ ನಾಯಕನೇ ಆಶ್ರಯವಾಗಿದ್ದರೂ ವೀರಭಯಾನಕಗಳು ಒಂದೇ ಕಡೆಗೆ ಸೇರುವುದು ಪರಸ್ಪರವಿರೋಧವೆನಿಸುತ್ತದೆ. ಒಂದೇ ಆಲಂಬನದಲ್ಲಿ ಅನುರಾಗಕಾಲದಲ್ಲಿ ಉತ್ಸಾಹ, ಶೋಕ, ಕ್ರೋಧ ಭಯ ಜುಗುಪ್ಸೆಗಳು ಹುಟ್ಟುವುದು ಅಸಂಭವವಾದ್ದರಿಂದ ಒಂದುವೇಳೆ ಹಾಗೆ ತೋರಿದರೆ ಅದು ವಿರೋಧವೆನಿಸುವುದು. ನೈರಂತರ್ಯದಿಂದಲೂ ವಿಭಾವಗಳ ಐಕ್ಯದಿಂದಲೂ ಶಾಂತಶೃಂಗಾರಗಳಿಗೆ ವಿರೋಧವು ಸಂಭವಿಸುತ್ತದೆ. ಒಂದೇ ಕಾಲದಲ್ಲಿ ಒಬ್ಬನಮೇಲೆ ಮತ್ತೊಬ್ಬನಿಗೆ ಉತ್ಸಾಹಭಯಗಳೆರಡೂ ಹುಟ್ಟುವುದು ಅಸಂಭವವಾದ್ದರಿಂದ ಹಾಗೆ ಹುಟ್ಟಿದರೆ ವಿರೋಧವಿರುತ್ತದೆ. ಇದರಂತೆಯೇ ಶಮರತಿಗಳು ಒಂದೇ ಆಲಂಬನದಲ್ಲಿ ತೋರುವುದು ಅಸಂಭವ, ಹಾಗೆಯೇ ಆನಂತರ್ಯ ಕ್ಷಣದಲ್ಲೂ ಶಾಂತಶೃಂಗಾರಗಳಿಗೆ

ವಿರೋಧವಿರುತ್ತದೆ. ಹೀಗೆ ರಸಗಳ ವಿರೋಧವು ಮೂರು ಬಗೆಯಾಗಿರುವಂತೆ ಅವಿರೋಧವೂ ಮೂರು ಬಗೆಯಾಗಿದೆ. ಒಬ್ಬನಲ್ಲಿ ಮತ್ತೊಬ್ಬನಿಗೆ ಉತ್ಸಾಹವಿಸ್ಮಯ ಕ್ರೋಧಗಳು ಒಂದೇಕಾಲದಲ್ಲಿ ಸಂಭವಿಸಬಹುದಾದ್ದರಿಂದ ವೀರರಸವು ಅದ್ಭುತರೌದ್ರ ರಸಗಳೊಡನೆ ಸೇರಬಹುದು. ಶೃಂಗಾರವು ಅದ್ಭುತರಸದೊಡನೆ ಸೇರಬಹುದು. ಒಬ್ಬ ನಾಯಿಕೆಯಲ್ಲಿಯೇ ಒಬ್ಬ ನಾಯಕನಿಗೆ ರತಿ ವಿಸ್ಮಯಗಳೆರಡೂ ಹುಟ್ಟಬಹುದು. ಹಾಗೆಯೇ ಭಯಾನಕರಸವು ಬೀಭತ್ಸರಸದೊಡನೆ ಸೇರಬಹುದು. ಒಬ್ಬನಿಗೆ ಒಂದು ಪಿಶಾಚವನ್ನು ನೋಡಿ ಏಕಕಾಲದಲ್ಲಿ ಭಯಜಿಗುಪ್ಸೆಗಳೆರಡೂ ಹುಟ್ಟಬಹುದು. ಹೀಗೆ ಆಲಂಬನೈಕ್ಯ, ಆಶ್ರಯೈಕ್ಯ, ನೈರಂತರ್ಯ ಇವುಗಳಿಂದ ರಸಗಳಿಗೆ ವಿರೋಧವೂ ಸಂಭವಿಸಬಹುದು; ವಿರೋಧವಿಲ್ಲದಂತೆಯೂ ಅವು ಸೇರಬಹುದು. ಅವು ವಿರುದ್ಧ ವಾಗಿಯೂ ಒಂದೆಡೆಗೆ ಸೇರಬಹುದು. ವಿರೋಧವಿಲ್ಲದಂತೆಯೂ ಸೇರಬಹುದು. ಇದರಿಂದ ಹಿಂದೆ ಹೇಳಿದ ಶ್ಲೋಕದಲ್ಲಿ ವೀರಶೃಂಗಾರಗಳೆರಡಕ್ಕೆ ಬೇರೆ ಆಲಂಬನಗಳಿರು ವುದರಿಂದ ವಿರೋಧವು ತೋರುವುದಿಲ್ಲ. ವೀರರಸದಲ್ಲಿ ಉತ್ಸಾಹಕ್ಕೆ ರಾಕ್ಷಸಸೈನ್ಯವೇ ಆಲಂಬನವೆನಿಸಿದೆ. ಶೃಂಗಾರಕ್ಕಾದರೋ ರತಿಗೆ ಸೀತೆಯೇ ಆಲಂಬನವಿಭಾವವೆನಿಸಿರು ವಳು. ಹೀಗೆ ಬೇರೆ ಬೇರೆ ಆಲಂಬನಗಳೆರಡರಲ್ಲಿ ಕ್ರಮವಾಗಿ ಉತ್ಸಾಹರತಿಗಳು ಹುಟ್ಟುವುದರಲ್ಲಿ ಯಾವ ಬಾಧವೂ ಇಲ್ಲ. ಹೀಗೆಯೇ ಆಶ್ರಯೈಕ್ಯದಿಂದ ವೀರಭಯಾ ನಕಗಳಿಗೆ ವಿರೋಧವುಂಟೆಂದು ಹಿಂದೆ ಹೇಳಿತ್ತು. ಆಶ್ರಯಭೇದವಿದ್ದರೆ ಅವಕ್ಕೆ ವಿರೋಧವಿಲ್ಲವೆಂಬುದನ್ನು ಈಗ ತಿಳಿಸುತ್ತಾನೆ. ವೀರರಸವನ್ನು ಹುಟ್ಟಿಸುವ ಉತ್ಸಾ ಹವೂ, ಭಯಾನಕರಸವನ್ನು ಹುಟ್ಟಿಸುವ ಭಯವೂ ಬೇರೆ ಬೇರೆ ಆಶ್ರಯವಲ್ಲಿದ್ದರೆ ವಿರೋಧವಿರುವುದಿಲ್ಲ. ವೀರರಸವು ನಾಯಕನಲ್ಲಿದ್ದು ಭಯಾನಕವು ಪ್ರತಿನಾಯಕ ನಲ್ಲೂ ಇರುವುದಾಗಿ ಏರ್ಪಡಿಸಿರುವುದರಿಂದ ಇವಕ್ಕೆ ವಿರೋಧವಿರುವುದಿಲ್ಲ. ಶಾಂತ ಶೃಂಗಾರಗಳಿಗೆ ವಿರೋಧವಿರಲು ನಾಗಾನಂದದಲ್ಲಿ ಜೀಮೂತವಾಹನನಿಗೆ ಅವೆರಡೂ ಒಟ್ಟಿಗೆ ತೋರುವುದು ಹೇಗೆ ಹೊಂದುತ್ತದೆ ? ಅವನಲ್ಲಿ ಶಾಂತರಸವನ್ನು ಹುಟ್ಟಿಸುವ ಶಮವಿದ್ದರೂ ಸಹ ಮಲಯವತಿಯ ಬಗ್ಗೆ ಅನುರಾಗವಿರುವುದಾಗಿಯೂ ಕಂಡುಬಂದಿದೆ. ಇವೆರಡರ ಜೊತೆಗೆ "ಎಂತಹ ಗೀತ, ಎಂತಹ ಆಟ" ಎಂದು ಅವನು ಹೇಳಿರುವುದರಿಂದ ತೋರುವ ಅದ್ಭುತರಸವೂ ಮಧ್ಯದಲ್ಲಿಯೇ ಸೇರುತ್ತದೆ. ಹೀಗೆ ವ್ಯವಧಾನವಿಲ್ಲವಂತೆ ಸೇರುವುದರಿಂದ ಅದಕ್ಕೆ ಶಾಂತಶೃಂಗಾರಗಳೊಡನೆ ವಿರೋಧವಿಲ್ಲ. ಹೀಗೆಯೇ ಶೃಂಗಾರರಸವು; ನಾಯಕನಲ್ಲೂ ವೀರರಸವು ಪ್ರತಿನಾಯಕನಲ್ಲೂ ಇರುವುದಾದರೆ ವಿರೋಧವು ತೋರುವುದಿಲ್ಲ. 'ಪಾಂಡುಕ್ಷಾಮಂ' ಎಂಬ ಶ್ಲೋಕದಲ್ಲಿ ಕರುಣರಸದ ಅನುಭವಗಳೇ ಶೃಂಗಾರದಲ್ಲೂ ಅನುಭವಗಳೆನಿಸಿದ್ದರಿಂದ ಅಂತಹ ಸಾಧಾರಣವಾದ ಅನುಭಾವಗಳನ್ನು ಸೇರಿಸಿದರೆ ವಿರೋಧವು ತೋರುವುದಿಲ್ಲ. ಒಂದೊಂದಕ್ಕೂ ಬೇರೆ ಎನಿಸಿರುವ ಅನುಭಾವಗಳನ್ನು ಸೇರಿಸಿದರೆ ಮಾತ್ರವೇ ವಿರೋಧವಿರುತ್ತದೆ. ಮುಖವು ಬೆಳ್ಳಗಾಗುವುದೇ ಮೊದಲಾದ ಅನುಭಾವಗಳು ಕರುಣರಸದಂತೆ ಕರುಣವಿಪ್ರಲಂಭ ದಲ್ಲೂ ಇರುವುದರಿಂದ ವಿರೋಧವು ಸಂಭವಿಸುವುದಿಲ್ಲ.

ಒಬ್ಬನು ಹೇಳಿದ್ದನ್ನು ಮತ್ತೊಬ್ಬನು ಅನುಕರಣಮಾಡುವಾಗ ದುಃಶ್ರವತ್ವ ಮೊದಲಾದ ದೋಷಗಳು ಸಂಭವಿಸಿದರೂ ಅವು ದೋಷವೆನಿಸುವುದಿಲ್ಲ. 'ದುಶ್ಚ್ಯವನನನ್ನು ಸ್ತುತಿಸುವನೆಂದು ಒಬ್ಬನು ಹೇಳಿಕೊಳ್ಳುತ್ತಾನೆ' ಇಲ್ಲಿ ದುಶ್ಚ್ಯವನಶಬ್ದವು ಇಂದ್ರ ಎಂಬ ಅರ್ಥವಲ್ಲಿ ಕೋಶದಲ್ಲಿ ಪ್ರಸಿದ್ಧವಾಗಿದ್ದರೂ ಕವಿಗಳು ಆದರಿಸಿಸದೇ ಇರುವುದರಿಂದ ಇಂತಹ ಶಬ್ದವನ್ನು ಆ ಅರ್ಥದಲ್ಲಿ ಪ್ರಯೋಗಿಸುವುದು ಅಪ್ರಯುಕ್ತವೆನಿಸುವುದು. ಆದರೂ ಇಲ್ಲಿ ಇದು ಅನುಕರಣವೆನಿಸಿರುವುದರಿಂದ ದೋಷವೆನಿಸಿಲ್ಲ. ವಿದ್ವಾಂಸರು ತಿಳಿಸಿರುವ ಬೇರೆ ದೋಷಗಳೂ ಸಹ ಕೆಲವು ವೇಳೆ ದೋಷವೆನಿಸದೆಯೂ, ಕೆಲವು ವೇಳೆ ಗುಣವೆನಿಸಿಯೂ, ಕೆಲವು ವೇಳೆ ಗುಣದೋಷಗಳೆರಡೂ ಆಗದೆಯೂ ಇರಬಹುದು. ಹೀಗೆ ಎಲ್ಲಾ ಕಡೆಗಳಲ್ಲೂ ಯುಕ್ತಿ ಔಚಿತ್ಯಗಳನ್ನು ಗಮನಿಸಿ ಗುಣದೋಷಗಳನ್ನು ನಿರ್ಧರಿಸಬೇಕು.

## ಎಂಟನೆಯ ಪರಿಚ್ಛೇದ

ಗುಣಾನಾಹ—ರಸಸ್ಯಾಂಗಿತ್ವಮಾಪ್ತಸ್ಯ ಧರ್ಮಾಃ ಶೌರ್ಯಾದಯೋ ಯಥಾ ।
ಗುಣಾಃ ಮಾಧುರ್ಯಮೋಜೋಽಥ ಪ್ರಸಾದ ಇತಿ ತೇ ತ್ರಿಧಾ ॥

ಯಥಾ ಖಲು ಅಂಗಿತ್ವಮಾಪ್ತಸ್ಯ ಆತ್ಮನ ಉತ್ಕರ್ಷಹೇತುತ್ವಾತ್ ಶೌರ್ಯಾದಯೋ ಗುಣಶಬ್ದವಾಚ್ಯಾಃ ತಥಾ ಕಾವ್ಯೇ ಅಂಗಿತ್ವಮಾಪ್ತಸ್ಯ ರಸಸ್ಯ ಧರ್ಮಾಃ ಸ್ವರೂಪವಿಶೇಷಾಃ ಮಾಧುರ್ಯಾದಯೋಽಪಿ ಸ್ವಸಮರ್ಪಕಪದಸಂದರ್ಭಸ್ಯ ಕಾವ್ಯವ್ಯಪದೇಶಸ್ಯ ಔಪಯಿಕಾನುಗುಣ್ಯಭಾಜ ಇತ್ಯರ್ಥಃ. ಯಥಾ ಚೈಷಾಂ ರಸಮಾತ್ರಸ್ಯ ಧರ್ಮತ್ವಂ ತಥಾ ದರ್ಶಿತಮೇವ.

ತೇ ಗುಣಾಸ್ತತ್ರ–ಚಿತ್ತದ್ರವೀಭಾವಮಯೋ ಹ್ಲಾದೋ ಮಾಧುರ್ಯಮುಚ್ಯತೇ ।

ಯತ್ತು ಕೇನಚಿದುಕ್ತಮ್–'ಮಾಧುರ್ಯಂ ದ್ರುತಿಕಾರಣಂ' ಇತಿ ತನ್ನ, ದ್ರವೀಭಾವಸ್ಯ ಆಸ್ವಾದಸ್ವರೂಪಾಹ್ಲಾದಾಭಿನ್ನತ್ವೇನ ತತ್ಕಾರ್ಯತ್ವಾಭಾವಾತ್. ದ್ರವೀಭಾವಸ್ಯ ಸ್ವಾಭಾವಿಕಾನಾವಿಷ್ಟತ್ವಾತ್ಮಕಕಾಠಿನ್ಯಮನ್ಯುಕ್ರೋಧಾದಿಕೃತದೀಪ್ತತ್ವವಿಸ್ಮಯಹಾಸಾದ್ಯುಪಹಿತವಿಕ್ಷೇಪಪರಿತ್ಯಾಗೇನ ರತ್ಯಾದ್ಯಾಕಾರಾನುವಿದ್ಧಾನಂದೋದ್ಬೋಧೇನ ಸಹೃದಯಚಿತ್ತಾರ್ದ್ರಪ್ರಾಯತ್ವಮ್.

ತತ್ರ–ಸಂಭೋಗೇ ಕರುಣೇ ವಿಪ್ರಲಂಭೇ ಶಾಂತೇಽಧಿಕಂ ಕ್ರಮಾತ್ ॥

ಸಂಭೋಗಾದಿಶಬ್ದಾ ಉಪಲಕ್ಷಣಾನಿ. ತೇನ ಸಂಭೋಗಾಭಾಸಾದಿಷ್ವಪಿ ಏತಸ್ಯ ಸ್ಥಿತಿರ್ಜ್ಞೇಯಾ.

ಮೂರ್ಧ್ನಿ ವರ್ಗಾಂತ್ಯವರ್ಣೇನ ಯುಕ್ತಾಷ್ಟಠಡಢಾನ್ ವಿನಾ ।
ರಣೌ ಲಘೂ ಚ ತದ್ವ್ಯಕ್ತೌ ವರ್ಣಾಃ ಕಾರಣತಾಂ ಗತಾಃ ॥



ಅವೃತ್ತಿರಲ್ಪವೃತ್ತಿರ್ವಾ ಮಧುರಾ ರಚನಾ ತಥಾ ।

ಯಥಾ—ಅನಂಗಮಂಗಳಭುವಸ್ತದಪಾಂಗಸ್ಯ ಭಂಗಯಃ ।
ಜನಯಂತಿ ಮುಹುರ್ಯೂನಾಂ ಅಂತಃ ಸಂತಾಪಸಂತತಿಮ್ ?॥

ಯಥಾ ವಾ ಮಮ—ಲತಾಕುಂಜಂ ಗುಂಜನ್ಮದವದಲಿಪುಂಜಂ ಚಪಲಯನ್
ಸಮಾಲಿಂಗನ್ನಂಗಂ ದ್ರುತತರಮನಂಗಂ ಪ್ರಬಲಯನ್ ।
ಮರುನ್ಮಂದಂ ಮಂದಂ ದಲಿತಮರವಿಂದಂ ತರಲಯನ್
ರಜೋವೃಂದಂ ವಿಂದನ್ ಕಿರತಿ ಮಕರಂದಂ ದಿಶಿ ದಿಶಿ ॥

ಓಜಶ್ಚಿತ್ತಸ್ಯ ವಿಸ್ತಾರರೂಪಂ ದೀಪ್ತತ್ವಮುಚ್ಯತೇ ।
ವೀರಬೀಭತ್ಸರೌದ್ರೇಷು ಕ್ರಮೇಣಾಧಿಕ್ಯಮಸ್ಯ ತು ॥

ಅಸ್ಯ ಓಜಸಃ. ಅತ್ರಾಪಿ ವೀರಾದಿಶಬ್ದಾ ಉಪಲಕ್ಷಣಾನಿ. ತೇನ ವೀರಾಭಾಸಾದಾವಪಿ ಅಸ್ಯ ಅವಸ್ಥಿತಿಃ.

ವರ್ಗಸ್ಯಾದ್ಯತೃತೀಯಾಭ್ಯಾಂ ಯುಕ್ತೌ ವರ್ಣೌ ತದಂತಿಮೌ ।
ಉಪರ್ಯಧೋ ದ್ವಯೋರ್ವಾ ಸರೇಫಾಃ ಟಠಡಢೈಃ ಸಹ ॥
ಶಕಾರಶ್ಚ ಷಕಾರಶ್ಚ ತಸ್ಯ ವ್ಯಂಜಕತಾಂ ಗತಾಃ ।
ತಥಾ ಸಮಾಸಬಹುಲಾ ಘಟನೌದ್ಧತ್ಯಶಾಲಿನೀ ॥

ಯಥಾ ಚಂಚದ್ಭುಜ ಇತ್ಯಾದಿ.

ಚಿತ್ತಂ ವ್ಯಾಪ್ನೋತಿ ಯಃ ಕ್ಷಿಪ್ರಂ ಶುಷ್ಕೇಂಧನಮಿವಾನಲಃ ।
ಸ ಪ್ರಸಾದಃ ಸಮಸ್ತೇಷು ರಸೇಷು ರಚನಾಸು ಚ ॥

ವ್ಯಾಪ್ನೋತಿ ಆವಿಷ್ಟಂ ಕರೋತಿ.

ಶಬ್ದಾಸ್ತದ್ವ್ಯಂಜಕಾ ಅರ್ಥಬೋಧಕಾಃ ಶ್ರುತಿಮಾತ್ರತಃ ।

ಯಥಾ—ಸೂಚೀಮುಖೇನ ಸಕೃದೇವ ಕೃತವ್ರಣಸ್ತ್ವಂ
ಮುಕ್ತಾಕಲಾಪ ! ಲುಠಸಿ ಸ್ತನಯೋಃ ಪ್ರಿಯಾಯಾಃ ।
ಬಾಣೈಃ ಸ್ಮರಸ್ಯ ಶತಶೋ ವಿನಿಕೃತ್ತಮರ್ಮಾ
ಸ್ವಪ್ನೇಽಪಿ ತಾಂ ಕಥಮಹಂ ನ ವಿಲೋಕಯಾಮಿ ॥

ಏಷಾಂ ಶಬ್ದಗುಣತ್ವಂ ಚ ಗುಣವೃತ್ತ್ಯೋಚ್ಯತೇ ಬುಧೈಃ ।

ಶರೀರಸ್ಯ ಶೌರ್ಯಾದಿಗುಣಯೋಗ ಇವೇತಿ ಶೇಷಃ.

ಶ್ಲೇಷಃ ಸಮಾಧಿರೌದಾರ್ಯಂ ಪ್ರಸಾದ ಇತಿ ಯೇ ಪುನಃ ।
ಗುಣಾಶ್ಚಿರಂತನೈರುಕ್ತಾ ಓಜಸ್ಯಂತರ್ಭವಂತಿ ತೇ ॥

ಓಜಸಿ ಭಕ್ತ್ಯಾ ಓಜಶ್ಶಬ್ದವಾಚ್ಯೇ ಶಬ್ದಾರ್ಥಧರ್ಮವಿಶೇಷೇ.

ತತ್ರ ಶ್ಲೇಷೋ ಬಹೂನಾಮಪಿ ಪದಾನಾಮೇಕಪದವದ್ಭಾಸನಾತ್ಮಾ. ಯಥಾ.

ಉನ್ಮಜ್ಜಜ್ಜಲಕುಂಜರೇಂದ್ರರಭಸಾಸ್ಫಾಲಾನುಬಂಧೋದ್ಧತಃ
ಸರ್ವಾಃ ಪರ್ವತಕಂದರೋದರಭುವಃ ಕುರ್ವನ್ ಪ್ರತಿಧ್ವಾನಿನೀಃ ।
ಉಚ್ಚೈರುಚ್ಚರತಿ ಧ್ವನಿಃ ಶ್ರುತಿಪಥೋನ್ಮಾಥೀ ಯಥಾಯಂ ತಥಾ

ಪ್ರಾಯಃ ಪ್ರೇಂಖದಸಂಖ್ಯಶಂಖಧವಳಾ ವೇಲೇಯಮುದ್ಗಚ್ಛತಿ ||

ಅಯಂ ಬಂದವೈಕಟ್ಯಾತ್ಮಕತ್ವಾದೋಜ ಏವ.

'ಉತ್ಕರ್ಷಹೇತವಃ ಪ್ರೋಕ್ತಾಃ ಗುಣಾಲಂಕಾರರೀತಯಃ' ಎಂದು ಹಿಂದೆ ತಿಳಿಸಿದ ಕ್ರಮದಲ್ಲಿ ಗುಣಗಳ ಸ್ವರೂಪವನ್ನು ಈಗ ವಿವರಿಸುತ್ತಾನೆ. ಆತ್ಮನಲ್ಲಿ ಶೌರ್ಯ ಮೊದಲಾದ ಗುಣಗಳಿರುವಂತೆ ಕಾವ್ಯದಲ್ಲಿ ಪ್ರಧಾನವೆನಿಸಿದ ರಸಕ್ಕೆ ಗುಣಗಳು ಸಂಬಂಧಿಸಿವೆ. ದೇಹದಲ್ಲಿ ಪ್ರಧಾನವೆನಿಸಿದ ಆತ್ಮನಿಗೆ ಉತ್ಕರ್ಷವನ್ನು ಹೆಚ್ಚಿಸುವುದರಿಂದ ಶೌರ್ಯ ಮೊದಲಾದವು ಗುಣವೆನಿಸುವಂತೆ ಕಾವ್ಯದಲ್ಲಿ ಅಂಗಿ ಎನಿಸಿದ ರಸದ ಸ್ವರೂಪವಿಶೇಷಗಳೆನಿಸಿದ ಮಾಧುರ್ಯ ಮೊದಲಾದವೂ ಸಹ ರಸವನ್ನು ಪ್ರಕಾಶಗೊಳಿಸುವ ಪದಸಮೂಹಕ್ಕೆ ಕಾವ್ಯವೆನಿಸಲು ಅರ್ಹವಾಗುವಂತೆ ಮಾಡುತ್ತವೆ. ವಾಮನ ಮೊದಲಾದ ಆಲಂಕಾರಿಕರು ಗುಣಗಳನ್ನು ಶಬ್ದಧರ್ಮವೆಂದು ಹೇಳಿದ್ದಾರೆ. ಆದರೆ ಇವು ರಸವಸ್ತುರ ಧರ್ಮವೆನಿಸಿವೆ ಎಂದು ಹಿಂದೆ ತಿಳಿಸಿಯಾಗಿದೆ ಎಂದು ತನ್ನ ಅಭಿಪ್ರಾಯವನ್ನು ಇಲ್ಲಿ ಸೂಚಿಸಲಾಗಿದೆ. ಮಾಧುರ್ಯ, ಓಜಸ್ಸು, ಪ್ರಸಾದ ಎಂದು ಗುಣಗಳು ಮೂರು ಬಗೆಯಾಗಿವೆ.

ಚಿತ್ತವನ್ನು ಕರಗಿಸುವ ಆನಂದವಿಶೇಷವೇ ಮಾಧುರ್ಯವೆನಿಸುತ್ತದೆ. ಚಿತ್ತವನ್ನು ಕರಗಿಸಲು ಕಾರಣವಾದದ್ದೇ ಮಾಧುರ್ಯವೆಂದು ಕಾವ್ಯಪ್ರಕಾಶಕಾರನು ಹೇಳುತ್ತಾನೆ. ಅದು ಹೊಂದುವುದಿಲ್ಲ. ಕಾವ್ಯವನ್ನು ಅಸ್ವಾದಿಸುವುದರಿಂದ ದೊರಕುವ ಆಹ್ಲಾದಕ್ಕಿಂತಲೂ ದ್ರವೀಭಾವವು ಬೇರೆಯಲ್ಲವಾದ್ದರಿಂದ ಅದು ಕಾರ್ಯವೆನಿಸಲಾರದು. ದ್ರವೀಭಾವವೆಂದರೆ ಸಹೃದಯನ ಚಿತ್ತವನ್ನು ಕರಗಿಸುವುದಲ್ಲದೆ ಬೇರೆಯಲ್ಲ. ಒಂದು ಕಾವ್ಯವನ್ನು ನೋಡಿದಾಗಲೂ ಕೇಳಿದಾಗಲೂ ಅವನ ಮನಸ್ಸು ಸಹಜವಾಗಿ ಮಾನಸಿಕಕ್ಲೇಶದಿಂದ ಬಿಡುಗಡೆಯಾಗುತ್ತದೆ. ಅಂತಹಕಾಲದಲ್ಲಿ ಅವನು ಕಾಠಿನ್ಯ, ಕೋಪ, ಕ್ರೋಧಗಳಿಂದ ಉಂಟಾಗುವ ಪ್ರಕಾಶ, ವಿಸ್ಮಯ ಹಾಸ ಇವುಗಳ ಪರಿಣಾಮವಾಗಿ ಒದಗುವ ವಿಷಯಾಂತರಾಸಕ್ತಿಯನ್ನು ತೊರೆಯುವನು. ಆಗಲೇ ಅವನಿಗೆ ರತಿ ಮೊದಲಾದ ಭಾವಗಳಿಂದೊಡಗೂಡಿದ ಆನಂದವು ಅನುಭವಗೋಚರವಾಗುವುದು. ಇದರಿಂದ ಅವನ ಚಿತ್ತವು ಕರಗುವುದು ಸ್ವಾಭಾವಿಕ. ಹೀಗೆ ಕರಗಿಸಲು ಕಾರಣವಾದದ್ದು ರಸವೇ ಆದ್ದರಿಂದ ಮಾಧುರ್ಯವು ರಸಧರ್ಮವೆಂಬುದು ಸಿದ್ಧವಾಯಿತು. ಆ ಮಾಧುರ್ಯವೂ ಸಹ ಸಂಭೋಗಶೃಂಗಾರದಲ್ಲಿ ಇದ್ದು, ಅಲ್ಲಿಂದ ಮುಂದೆ ಕರುಣದಲ್ಲಿ ಇನ್ನೂ ಹೆಚ್ಚಾಗಿದ್ದು, ವಿಪ್ರಲಂಬದಲ್ಲಿ ಇನ್ನೂ ಹೆಚ್ಚು ಇದ್ದು, ಶಾಂತರಸದಲ್ಲಿ ಇನ್ನೂ ಹೆಚ್ಚಾಗಿರುತ್ತದೆ. ಸಂಭೋಗ ಮೊದಲಾದ ಕಡೆಗಳಲ್ಲಿ ಅದು ಇರುವಂತೆಯೇ ಸಂಭೋಗಾಭಾಸ ಮೊದಲಾದ ಕಡೆಗಳಲ್ಲೂ ಇರುವುದೆಂದು ತಿಳಿಯಬೇಕು.

ಮೇಲ್ಭಾಗದಲ್ಲಿ ವರ್ಗೀಯಪಂಚಮಾಕ್ಷರಗಳೊಡಗೂಡಿದ ಸಂಯುಕ್ತಾಕ್ಷರಗಳು ಟ, ಠ, ಡ, ಢಗಳನ್ನು ಬಿಟ್ಟು ಉಳಿದ ವ್ಯಂಜನವರ್ಣಗಳು, ಹಾಗೆಯೇ ಬೇರೆ ವರ್ಣ

ಪೊಡಗೂಡಿದ ವರ್ಣಗಳು ಮತ್ತು ರೇಫಣಕಾರಗಳು ಮಾಧುರ್ಯವನ್ನು ಪ್ರಕಾಶಪಡಿಸಲು ಸಮರ್ಥವೆನಿಸಿವೆ. ಸಮಾಸಗಳಿಲ್ಲದೆಯೋ, ಮಿತವಾದ ಸಮಾಸಗಳಿಂದ ಕೂಡಿಯೋ ಮಧುರವೆನಿಸಿರುವ ರಚನೆಯು ಮಾಧುರ್ಯವನ್ನು ಪ್ರಕಾಶಪಡಿಸುತ್ತದೆ. ವರ್ಗದ ಕೊನೆಯ ಅಕ್ಷರಗಳೊಡಗೂಡಿದ ಸಂಯುಕ್ತವರ್ಣಗಳು ಮಾಧುರ್ಯವನ್ನು ಪ್ರಕಾಶಪಡಿಸುತ್ತವೆ ಎಂಬುದನ್ನು ಈಗ ಉದಾಹರಿಸುತ್ತಾನೆ. "ಮನ್ಮಥನ ವಾಸಸ್ಥಾನವೆನಿಸಿದ ಆ ನಾಯಿಕೆಯ ಓರೆನೋಟಗಳು ಯುವಕರ ಅಂತಃಕರಣದಲ್ಲಿ ಕಾಮಸಂತಾಪವನ್ನು ಬಾರಿ ಬಾರಿಗೂ ಉಂಟುಮಾಡುತ್ತವೆ" ಇಲ್ಲಿ ಪ್ರಥಮಾರ್ಧದಲ್ಲಿ ಅನಂಗ, ಮಂಗಳ, ಅಪಾಂಗಭಂಗ ಹೀಗೆ ಙಕಾರದೊಡಗೂಡಿದ ಗಕಾರಗಳೂ, ದ್ವಿತೀಯಾರ್ಧದಲ್ಲಿ ಜನಯಂತಿ, ಅಂತಃ. ಸಂತಾಪ, ಸಂತತಿ ಹೀಗೆ ನಕಾರದೊಡಗೂಡಿದ ತಕಾರಗಳು ಮಾಧುರ್ಯಗುಣವನ್ನು ಪ್ರಕಾಶಪಡಿಸುತ್ತವೆ.

ಒಂದೇ ಕಡೆಯಲ್ಲಿ ಸಮಾಸಗಳು ಇಲ್ಲದೆಯೂ ಅಥವಾ ಮಿತವಾಗಿ ಇದ್ದರೆಯೂ ವರ್ಣಗಳು ಮಾಧುರ್ಯವನ್ನು ಪ್ರಕಾಶಪಡಿಸಲಿಕ್ಕೆ ಉದಾಹರಣವನ್ನು ಕೊಡುತ್ತಾನೆ. "ಶಬ್ದಮಾಡುತ್ತಿರುವ ಮದಿಸಿದ ದುಂಬಿಗಳ ಸಮೂಹವುಳ್ಳ ಲತಾಗೃಹವನ್ನು ಅಳ್ಲಾಡಿಸುತ್ತಲೂ, ವಿಹರಿಸುತ್ತಿರುವ ಕಾಮಿಜನರ ಅವಯವಗಳನ್ನು ಮುಟ್ಟುತ್ತಲೂ, ಕಾಮಪೀಡೆಯನ್ನು ಬೇಗನೆ ಹೆಚ್ಚಿಸುತ್ತಲೂ, ವಿಕಸಿತವಾದ ಕಮಲವನ್ನು ಮೆಲ್ಲಗೆ ಅಳ್ಲಾಡಿಸುತ್ತಲೂ, ಹಾಗೆಯೇ ಪುಷ್ಪಗಳ ಪರಾಗವನ್ನು ಗ್ರಹಿಸುತ್ತಲೂ ವಾಯುವು ಎಲ್ಲಾ ದಿಕ್ಕುಗಳಲ್ಲಿಯೂ ಪುಷ್ಪರಸವನ್ನು ಎರಚುತ್ತಿದೆ." ಇಲ್ಲಿ ಪ್ರಥಮಪಾದದಲ್ಲಿ ಕುಂಜ, ಗುಂಜ, ಪುಂಜ ಎಂದು ಞಕಾರಜಕಾರಗಳೂ, ದ್ವಿತೀಯಪಾದದಲ್ಲಿ ಙಕಾರಗಕಾರಗಳೂ, ತೃತೀಯಪಾದದಲ್ಲೂ, ಹಾಗೂ ಚತುರ್ಥಪಾದದಲ್ಲೂ ವೃಂದ, ವಿಂದ, ರಂದ ಎಂದು ನಕಾರ ದಕಾರಗಳೂ ಮಾಧುರ್ಯಗುಣವನ್ನು ಪ್ರಕಾಶಿಸುತ್ತವೆ. ಪ್ರಥಮಚತುರ್ಥಪಾದಗಳಲ್ಲಿ ಸಮಾಸಗಳು ಮಿತವಾಗಿವೆ. ದ್ವಿತೀಯಚತುರ್ಥಪಾದಗಳಲ್ಲಿ ಸಮಾಸಗಳೇ ಇಲ್ಲ. ಇಂತಹ ರಚನೆಯೂ ಮಾಧುರ್ಯಕ್ಕೆ ಅನುಕೂಲವೆನಿಸಿದೆ.

ಹೀಗೆ ಮಾಧುರ್ಯಗುಣವನ್ನು ತಿಳಿಸಿ ಈಗ ಓಜೋಗುಣವು ಪ್ರಕಾಶವಾಗುವ ರೀತಿಯನ್ನು ತಿಳಿಸುತ್ತಾನೆ. ಚಿತ್ತವು ವಿಸ್ತಾರವಾಗುವುದರಿಂದ ಪ್ರಕಾಶಗೊಳ್ಳುವುದು. ಈ ಬಗೆಯ ಪ್ರಕಾಶವೇ ಓಜೋಗುಣವೆನಿಸುವುದು. ಇದು ವೀರ, ಬೀಭತ್ಸ, ರೌದ್ರ ರಸಗಳಲ್ಲಿ ಕ್ರಮವಾಗಿ ಹೆಚ್ಚುತ್ತದೆ. ವೀರರಸದಲ್ಲಿ ಇದ್ದು, ಅಲ್ಲಿಂದ ಬೀಭತ್ಸದಲ್ಲಿ ಇನ್ನೂ ಹೆಚ್ಚಾಗಿದ್ದು, ರೌದ್ರರಸದಲ್ಲಿ ಇದು ವಿಶೇಷವಾಗಿರುತ್ತದೆ. ಈ ಮೂರುರಸಗಳಂತೆಯೇ ಅವುಗಳ ಆಭಾಸಗಳಲ್ಲೂ ಸಹ ಅದು ಇರುತ್ತದೆ ಎಂದು ತಿಳಿಯಬೇಕು. ಓಜೋಗುಣವನ್ನು ತಿಳಿಸುತ್ತಾನೆ. ವರ್ಗದ ಒಂದು ಮೂರನೆಯ ಅಕ್ಷರಗಳೊಡಗೂಡಿ ಸಂಯುಕ್ತವರ್ಣಗಳು ಅಂದರೆ ಎರಡು ನಾಲ್ಕನೆಯ ಅಕ್ಷರಗಳು ಓಜಸ್ಸನ್ನು ಪ್ರಕಾಶಗೊಳಿಸುತ್ತವೆ. ಒಂದೇವರ್ಗದ ಅಥವಾ ಬೇರೆ ವರ್ಗದ ಮೊದಲನೆಯ ವರ್ಣದೊಡಗೂಡಿದ ನಾಲ್ಕನೆಯ ವರ್ಣವೂ ಮೂರನೆಯ ವರ್ಣದೊಡಗೂಡಿದ

ನಾಲ್ಕನೆಯ ವರ್ಣವೂ ಓಜಸ್ಸನ್ನು ಪ್ರಕಾಶಪಡಿಸುತ್ತವೆ ಎಂದು ತಿಳಿಯಬೇಕು. ದ್ರಾಕ್ ಖನತಿ, ದ್ರಾಗ್‌ಘರ್ಷತಿ, ದ್ರಾಕ್‌ಫಲತಿ, ದ್ರಾಗ್‌ಧಾವತಿ ಹೀಗೆ ವರ್ಣಗಳು ಸೇರಿರಬೇಕು. ಮೇಲ್ಗಡೆಯೂ, ಕೊನೆಯಲ್ಲೂ ಅಥವಾ ಎರಡು ಕಡೆಯಲ್ಲೂ ರೇಫದೊಡಗೂಡಿದ ವರ್ಣಗಳು ಅಂದರೆ ಸರ್ಪ, ದೀಪ್ರ, ಆದ್ರ್ರ ಹೀಗೆ ಇದ್ದಲ್ಲಿ ಓಜಸ್ಸನ್ನು ಹೊರಪಡಿಸುತ್ತವೆ. ಹಾಗೆಯೇ ಟಠಡಢಗಳೊಡಗೂಡಿದ ಸಂಯುಕ್ತಾಕ್ಷರಗಳು, ಶಕಾರಷಕಾರಗಳೂ ಓಜಸ್ಸನ್ನು ಪ್ರಕಾಶಪಡಿಸುತ್ತವೆ. ಕುಟ್ಟಕ, ವಿಸಂಷ್ಠುಲ, ಗಡ್ಡಲಿಕಾ. ಶಂಢ, ವಿಕಟ, ಕಮಠ, ಡಂಬರ, ಮೂಢ, ಕರ್ಷತಿ, ಶೀರ್ಘಮೇಘ ಇಂತವೇ ಅವಕ್ಕೆ ಉದಾಹರಣವೆನಿಸಿವೆ. ಹಾಗೆಯೇ ಶೈಲಿಯು ಹೆಚ್ಚು ಸಮಾಸಗಳಿಂದ ಕೂಡಿದ್ದು ಉದ್ಧತವಾಗಿರಬೇಕು. 'ಕರಿಕರನಿಕರಾಣಾಂ ಭೇದ ಭೇದೌ ವಿಧಾಯ' ಇಲ್ಲಿ ಸಮಾಸಗಳು ಹೆಚ್ಚಾಗಿರುವ ಶೈಲಿಯನ್ನು ಕಾಣಬಹುದು. ಚಂಚದ್ಭುಜ ಎಂಬ ಶ್ಲೋಕದಲ್ಲಿ ಓಜೋಗುಣವನ್ನು ಪ್ರಕಾಶಿಸುವ ಪದರಚನೆಯನ್ನು ನೋಡಬಹುದು.

ಮಾಧುರ್ಯ, ಓಜಸ್ಸು ಇವನ್ನು ಪ್ರಕಾಶಪಡಿಸಿ ಪ್ರಸಾದಗುಣದ ಪ್ರಕಾಶವನ್ನು ಈಗ ತಿಳಿಸುತ್ತಾನೆ. ಒಣಕಟ್ಟಿಗೆಯಲ್ಲಿ ಬೆಂಕಿಯು ಬೇಗನೆ ಹೊರಬೀಳುವಂತೆ ಯಾವುದು ಚಿತ್ತವನ್ನು ಬೇಗನೆ ವ್ಯಾಪಿಸಬಲ್ಲದೋ ಅದು ಪ್ರಸಾದವೆನಿಸುತ್ತದೆ. ಇದು ಎಲ್ಲಾ ರಸಗಳಲ್ಲೂ ಎಲ್ಲಾ ರಚನೆಗಳಲ್ಲೂ ನೆಲಸಿರುತ್ತದೆ. ಕೇಳಿದೊಡನೆಯೇ ಅರ್ಥವನ್ನು ತಿಳಿಸುವಂತಹ ಶಬ್ದಗಳೆಲ್ಲವೂ ಪ್ರಸಾದಗುಣವನ್ನು ಪ್ರಕಾಶಪಡಿಸಬಲ್ಲವು. ಇದನ್ನು ಈಗ ಉದಾಹರಿಸುತ್ತಾನೆ. "ಹಾರದೊಳಗೆ ಸೇರುವ ಮುತ್ತಿನ ಸರವೇ! ಸೂಜಿಯ ತುದಿಯಿಂದ ಒಂದು ಸಾರಿ ಚುಚ್ಚಿಸಿಕೊಂಡು ಪ್ರಿಯೆಯ ಸ್ತನಗಳಲ್ಲಿ ಹೊರಳಾಡುತ್ತಿರುವೆ. ನಾನಾದರೋ ಮನ್ಮಥನ ಬಾಣಗಳಿಂದ ನೂರಾರು ಸಾರಿ ಚುಚ್ಚಿಸಿಕೊಂಡಿದ್ದರೂ ಸ್ವಪ್ನದಲ್ಲಾದರೂ ಆ ಪ್ರಿಯೆಯನ್ನು ಹೇಗಾದರೂ ಒಮ್ಮೆಯಾದರೂ ನೋಡಲಿಲ್ಲ. ಚುಚ್ಚಿಸಿಕೊಳ್ಳುವುದೇ ಪ್ರಿಯೆಯ ಸಮಾಗಮಕ್ಕೆ ಕಾರಣವೆನಿಸಿದ್ದರೆ ಬಾಣದಿಂದ ಅನೇಕ ಸಾರಿ ಚುಚ್ಚಿಸಿಕೊಂಡಿರುವವನು ನಿನ್ನಂತೆ ಪ್ರಿಯೆಯೊಡನೆ ಸೇರಬೇಕಾಗಿತ್ತು. ವಿಧಿಯ ವಿಲಾಸ ಎಷ್ಟು ವಿಷಮವಾಗಿದೆ" ಇಲ್ಲಿ ಶಬ್ದಗಳನ್ನು ಕೇಳಿದೊಡನೆಯೇ ಅರ್ಥವು ಮನಸ್ಸಿಗೆ ಹೊಳೆಯುತ್ತದೆ. ಹೀಗೆ ಬೇಗನೆ ಚಿತ್ತವನ್ನು ವ್ಯಾಪಿಸುವುದರಿಂದ ಇದು ಪ್ರಸಾದಗುಣವೆನಿಸಿದೆ.

ಇವೆಲ್ಲವೂ ಪ್ರಧಾನವಾಗಿ ರಸಧರ್ಮಗಳೆನಿಸಿದ್ದರೂ ಗೌಣವಾಗಿ ಶಬ್ದಕ್ಕೂ ಸಂಬಂಧಿಸಿವೆ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿರುವರು. ಆತ್ಮನಲ್ಲಿರುವ ಶೌರ್ಯ ಔದಾರ್ಯ ಧೈರ್ಯ ಮೊದಲಾದ ಗುಣಗಳು ಶರೀರಕ್ಕೂ ಸಂಬಂಧಿಸುವಂತೆ ರಸಕ್ಕೆ ಸಂಬಂಧಿಸಿದ ಗುಣಗಳು ರಸಪ್ರಕಾಶಕವಾದ ಶಬ್ದಗಳಿಗೂ ಅನ್ವಯಿಸುತ್ತವೆ ಎಂದು ತಿಳಿಯಬೇಕು.

ಶ್ಲೇಷ, ಸಮಾಧಿ, ಔದಾರ್ಯ, ಪ್ರಸಾದವೆಂದು ಗುಣಗಳನ್ನು ಪ್ರಾಚೀನರು ವಿಭಾಗಿಸಿ ತಿಳಿಸಿದ್ದಾರೆ. ಇದೆಲ್ಲವೂ ಓಜಸ್ಸಿನಲ್ಲಿಯೇ ಸೇರುತ್ತವೆಂಬುದಾದ್ದರಿಂದ ಇಲ್ಲಿ

ಇವನ್ನು ಪ್ರತ್ಯೇಕವಾಗಿ ತಿಳಿಸಿಲ್ಲ. ಇಲ್ಲಿ ಓಜಸ್ಸೆಂದರೆ ಪ್ರಧಾನವಾಗಿ ಗುಣವೆನಿಸಿದರೂ ಗೌಣವಾಗಿ ಓಜಶ್ಶಬ್ದದಿಂದ ಶಬ್ದಾರ್ಥಗಳಲ್ಲಿರುವ ಒಂದು ಬಗೆಯ ಧರ್ಮವಿಶೇಷ ವೆಂದು ತಿಳಿಯುವುದು.

ಅನೇಕ ಪದಗಳಿದ್ದರೂ ಅವು ಒಂದೇ ಪದವಾಗಿ ತೋರುವುದೇ ಶ್ಲೇಷವೆನಿಸು ಸುತ್ತದೆ. ಸಮುದ್ರವು ತುಂಬುವುದನ್ನು ವರ್ಣಿಸುವ ಈ ಪದ್ಯದಲ್ಲಿ ಇದನ್ನು ಕಾಣ ಬಹುದು. "ನೀರಿನ ಮಧ್ಯದಿಂದ ಮೇಲಕ್ಕೆ ಎದ್ದ ಆನೆಗಳು ವೇಗದಿಂದ ಮೈಯನ್ನು ಕೊಡವಿದ ಪ್ರಯುಕ್ತ ಮೇಲಕ್ಕೆ ಹೊರಟು ಪರ್ವತದ ಗವಿಗಳಲ್ಲಿರುವ ಪ್ರದೇಶಗಳೆಲ್ಲ ದರಲ್ಲೂ ಪ್ರತಿಧ್ವನಿಯನ್ನು ಹುಟ್ಟಿಸುತ್ತಲೂ, ಕಿವಿಗಳ ಮಾರ್ಗವನ್ನು ಸೀಳುತ್ತಲೂ ಇರುವ ವಿಶಾಲವಾದ ಈ ಧ್ವನಿಯು ಹೇಗೆ ಹೊರಟಿದೆಯೋ ಹಾಗೆಯೇ ಹೊರಳಾಡು ತ್ತಿರುವ ಅಸಂಖ್ಯಾತವಾದ ಶಂಖಗಳಿಂದ ಬೆಳ್ಳಗಾಗಿರುವ ನೀರೂ ಸಹ ಸಮುದ್ರದ ದಡವನ್ನು ಮೀರಿ ಮುಂದಕ್ಕೆ ಹೊರಟಿರುವುದು." ಇಲ್ಲಿ 'ಉನ್ಮಜ್ಜಜ್ಜಲ' 'ಪ್ರೇಂಖದ ಸಂಖ್ಯ' ಹೀಗೆ ಅನೇಕಪದಗಳು ಸಂಧಿಯನ್ನು ಗಮನಿಸದೆಯೇ ಒಟ್ಟಿಗೆ ಸೇರಿಕೊಂಡು ಒಂದೇ ಪದವಂತೆ ತೋರುತ್ತಿರುವುದರಿಂದ ಇಲ್ಲಿ ವಾಮನನ ಮತದಂತೆ ಶ್ಲೇಷವೆಂಬ ಶಬ್ದಗುಣವಿದೆ. ಆದರೆ ಇಲ್ಲಿ ಅನೇಕ ಬಗೆಯ ಸಂಯುಕ್ತವರ್ಣಗಳು ಕೂಡಿಕೊಂಡಿ ರುವುದರಿಂದ ಈ ಬಗೆಯ ರಚನೆಯು ಓಜಸ್ಸಿನಲ್ಲಿಯೇ ಸೇರುತ್ತದೆ. ಇದರಿಂದ ಸ್ವಮತ ದಲ್ಲಿ ಓಜಸ್ಸೆಂದರೆ ವಿಕಟಶಬ್ದಗಳ ರಚನೆ ಎಂಬುದನ್ನು ಸೂಚಿಸಲಾಗಿದೆ.

ಸಮಾಧಿಃ-ಆರೋಹಾವರೋಹಕ್ರಮಃ. ಆರೋಹಃ ಉತ್ಕರ್ಷಃ, ಅವರೋಹಃ ಅಪಕರ್ಷಃ. ತಯೋಃ ಕ್ರಮೋ ವೈರಸ್ಯಾನಾವಹೋ ವಿನ್ಯಾಸಃ. ಯಥಾ ·ಚಂಚುದ್ಭುಜ ಇತ್ಯಾದಿ. ಅತ್ರ ಪಾದತ್ರಯೇ ಕ್ರಮೇಣ ಬಂಧಸ್ಯ ಗಾಢತಾ, ಚತುರ್ಥಪಾದೇ ತು ಅಪಕರ್ಷಃ. ತಸ್ಯಾಪಿ ಚ ತೀವ್ರಪ್ರಯತ್ನೋಚ್ಚಾರ್ಯತಯಾ ಓಜಸ್ವಿತಾ.

ಉದಾರತಾ ವಿಕಟತ್ವಲಕ್ಷಣಾ ವಿಕಟತ್ವಂ ಚ ಪದಾನಾಂ ನೃತ್ಯತ್ಪ್ರಾಯತ್ವಮ್.

ಯಥಾ— ಸುಚರಣವಿನಿವಿಷ್ಟೈರ್ನೂಪುರೈರ್ನರ್ತಕೀನಾಂ ।
ಝಣಿತಿ ರಣಿತಮಾಸೀತ್ತತ್ರ ಚಿತ್ರಂ ಕಲಂ ಚ ॥

ಅತ್ರ ಚ ತನ್ಮತಾನುಸಾರೇಣ ರಸಾನುಸಂಧಾನಮಂತರೇಣೈವ ಶಬ್ದ ಪ್ರೌಢೋಕ್ತಿಮಾತ್ರೇಣ ಓಜಃ'

ಪ್ರಸಾದ ಓಜೋಮಿಶ್ರಿತಶೈಥಿಲ್ಯಾತ್ಮಾ—ಯಥಾ.

ಯೋ ಯಃ ಶಸ್ತ್ರಂ ಬಿಭರ್ತಿ ಸ್ವಭುಜಗುರುಮದಾತ್ ಪಾಂಡವೀನಾಂ ಚಮೂನಾಂ
ಯೋ ಯಃ ಪಾಂಚಾಲಗೋತ್ರೇ ಶಿಶುರಧಿಕವಯಾ ಗರ್ಭಶಯ್ಯಾಂ ಗತೋ ವಾ ।
ಯೋ ಯಸ್ತತ್ಕರ್ಮಸಾಕ್ಷೀ ಚರತಿ ಮಯಿ ರಣೇ ಯಶ್ಚ ಯಶ್ಚ ಪ್ರತೀಪಃ
ಕ್ರೋಧಾಂಧಸ್ತಸ್ಯ ತಸ್ಯ ಸ್ವಯಮಿಹ ಜಗತಾಮಂತಕಸ್ಯಾಂತಕೋಽಹಮ್ ॥

ಮಾಧುರ್ಯವ್ಯಂಜಕತ್ವಂ ಯದಸಮಾಸಸ್ಯ ದರ್ಶಿತಮ್ ।
ಪೃಥಕ್ಪದತ್ವಂ ಮಾಧುರ್ಯಂ ತೇನೈವಾಂಗೀಕೃತಂ ಪುನಃ ॥

ಯಥಾ 'ಶ್ವಾಸಾನ್ ಮುಂಚತಿ' ಇತ್ಯಾದಿ.

ಅರ್ಥವ್ಯಕ್ತೇಃ ಪ್ರಸಾದಾಖ್ಯಾಗುಣೇನೈವ ಪರಿಗ್ರಹಃ ।
ಅರ್ಥವ್ಯಕ್ತಿಃ ಪದಾನಾಂ ಹಿ ಝಟಿತ್ಯರ್ಥಸಮರ್ಪಣಮ್ ॥

ಸ್ಪಷ್ಟ ಮುದಾಹರಣಮ್. ಗ್ರಾಮ್ಯದುಃಶ್ರವತಾತ್ಯಾಗಾತ್ ಕಾಂತಿಶ್ಚ ಸುಕುಮಾರತಾ।

ಅಂಗೀಕೃತೇತಿ ಸಂಬಂಧಃ. ಕಾಂತಿರೌಜ್ಜ್ವಲಮ್. ತಚ್ಚ ಹಾಲಿಕಾದಿಪದವಿನ್ಯಾಸವೈಪರೀತ್ಯೇನ ಅಲೌಕಿಕಶೋಭಾಶಾಲಿತ್ವಮ್.

ಸುಕುಮಾರತಾ ಅಪಾರುಷ್ಯಮ್. ಅನಯೋರುದಾಹರಣೇ ಸ್ಪಷ್ಟೇ.

ಕ್ವಚಿದ್ದೋಷಸ್ತು ಸಮತಾ ಮಾರ್ಗಾಭೇದಸ್ವರೂಪಿಣೀ ।
ಅನ್ಯಥೋಕ್ತಗುಣೇಷ್ವಸ್ಯಾ ಅಂತಃಪಾತೋ ಯಥಾಯಥಮ್ ॥

ಮಸೃಣೇನ ವಿಕಟೇನ ವಾ ಮಾರ್ಗೇಣೋಪಕ್ರಾಂತಸ್ಯ ಸಂದರ್ಭಸ್ಯ ತೇನೈವ ಪರಿನಿಷ್ಠಾನಂ ಮಾರ್ಗಾಭೇದಃ. ಸ ಚಕ್ವಚಿದ್ದೋಷಃ.

ತಥಾ ಹಿ—ಅವ್ಯೂಢಾಂಗಮರೂಢಪಾಣಿಜಠರಾಭೋಗಂ ಚ ಬಿಭ್ರದ್ವಪುಃ
ಪಾರೀಂದ್ರಃ ಶಿಶುರೇಷ ಪಾಣಿಪುಟಕೇ ಸಮ್ಮಾತು ಕಿಂ ತಾವತಾ ।
ಉದ್ಯದ್ದುರ್ಧರಗಂಧಸಿಂಧುರಶತಪ್ರೋದ್ದಾಮದಾನಾರ್ಣವ
ಸ್ರೋತಃಶೋಷಣದೋಷಣಾತ್ಪುನರಿತಃ ಕಲ್ಪಾಗ್ನಿರಲ್ಪಾಯತೇ ॥

ಅತ್ರ ಉದ್ಧತೇಽರ್ಥೇ ವಾಚ್ಯೇ ಸುಕುಮಾರಬಂಧತ್ಯಾಗೋ ಗುಣ ಏವ. ಅನೇವಂವಿಧೆಸ್ಥಲೇ ಮಾಧುರ್ಯಾದಾವೇವಾಂತಃಪಾತಃ. 'ಯಥಾ ಲತಾಕುಂಜಂ ಗುಂಜತ್'

ಓಜಃ ಪ್ರಸಾದೋ ಮಾಧುರ್ಯಂ ಸೌಕುಮಾರ್ಯಮುದಾರತಾ ।
ತದಭಾವಸ್ಯ ದೋಷತ್ವಾತ್ ಸ್ವೀಕೃತಾ ಅರ್ಥಗಾ ಗುಣಾಃ ।

ಓಜಃ ಸಾಭಿಪ್ರಾಯಸ್ವರೂಪವಮ್. ಪ್ರಸಾದಃ ಅರ್ಥವೈಮತ್ಯಮ್. ಮಾಧುರ್ಯಂ ಉಕ್ತಿವೈಚಿತ್ರ್ಯಮ್. ಸೌಕುಮಾರ್ಯಂ ಅಪಾರುಷ್ಯಮ್. ಉದಾರತಾ ಅಗ್ರಾಮ್ಯತ್ವಮ್. ಏಷಾಂ ಪಂಚಾನಾಮಪ್ಯರ್ಥಗುಣಾನಾಂ ಯಥಾಕ್ರಮಂ ಅಪುಷ್ಟಾರ್ಥಾಧಿಕಪದಾನವೀಕೃತಾಮಂಗಳರೂಪಾಶ್ಲೀಲಗ್ರಾಮ್ಯಾಣಾಂ ನಿರಾಕರಣೇನೈವ ಅಂಗೀಕಾರಃ. ಸ್ಪಷ್ಟಾನ್ಯುದಾಹರಣಾನಿ.

ಅರ್ಥವ್ಯಕ್ತಿಃ ಸ್ವಭಾವೋಕ್ತ್ಯಲಂಕಾರೇಣ ತಥಾ ಪುನಃ ।
ರಸಧ್ವನಿಗುಣೀಭೂತವ್ಯಂಗ್ಯಾಭ್ಯಾಂ ಕಾಂತಿನಾಮಕಃ ॥

ಅಂಗೀಕೃತ ಇತಿ ಸಂಬಂಧಃ. ಅರ್ಥವ್ಯಕ್ತಿಃ ವಸ್ತುಸ್ವಭಾವಸ್ಫುಟತ್ವಮ್. ಕಾಂತಿಃ ದೀಪ್ತರಸತ್ವಮ್. ಸ್ಪಷ್ಟೇ ಉದಾಹರಣೇ.

ಶ್ಲೇಷೋ ವಿಚಿತ್ರತಾಮಾತ್ರಮದೋಷಃ ಸಮತಾ ಪರಮ್ ।

ಶ್ಲೇಷಃ ಕ್ರಮಕೌಟಿಲ್ಯಾನುಲ್ಬಣತ್ವೋಪಪತ್ತಿಯೋಗರೂಪಘಟನಾತ್ಮಾ. ತತ್ರ ಕ್ರಮಃ ಕ್ರಿಯಾಸಂತತಿಃ. ವಿದಗ್ಧಚೇಷ್ಟಿತಂ ಕೌಟಿಲ್ಯಮ್. ಅಪ್ರಸಿದ್ಧವರ್ಣನಾವಿರಹೋಽನುಲ್ಬಣತ್ವಮ್. ಉಪಪಾದಕಯುಕ್ತಿವಿನ್ಯಾಸಃ ಉಪಪತ್ತಿಃ ಏಷಾಂ

ಯೋಗಃ ಸಂಪ್ರೇಳನಂ ಸ ಏವ ರೂಪಂ ಯಸ್ಯಾ ಘಟನಾಯಾಸ್ತದ್ರೂಪಃ ಶ್ಲೇಷೋ ವೈಚಿತ್ರ್ಯಮಾತ್ರಮ್.ಅನನ್ಯಸಾಧಾರಣರಸೋಪಕಾರಿತ್ವಾತಿಶಯವಿರಹಾದಿತಿ ಭಾವಃ ಯಥಾ 'ದೃಷ್ಟ್ವೈಕಾಸನಸಂಸ್ಥಿತೇ ಪ್ರಿಯತಮೆ.' ಇತ್ಯಾದಿ.

ಅತ್ರ ದರ್ಶನಾದಯಃ ಕ್ರಿಯಾಃ. ಉಭಯಸಮರ್ಥನರೂಪಂ ಕೌಟಿಲ್ಯಮ್. ಲೋಕಸಂವ್ಯವಹಾರರೂಪಂ ಅನುಲ್ಬಣತ್ವಮ್.'ಏಕಾಸನಸಂಸ್ಥಿತೇ' 'ಪಶ್ಚಾದುಪೇತ್ಯ' 'ನಯನೇ ಪಿಧಾಯ' 'ಈಷದ್ವಕ್ರಿತಕಂಧರ' ಇತಿ ಚೋಪಪಾದಕಾನಿ, ಏಷಾಂ ಯೋಗಃ. ಅನೇನ ಚ ವಾಚ್ಯೋಪಪತ್ತಿಗ್ರಹಣವ್ಯಗ್ರತಯಾ ರಸಾಸ್ವಾದೋ ವ್ಯವಹಿತಪ್ರಾಯ ಇತ್ಯಸ್ಯ ಅಗುಣತಾ. ಸಮತಾ ಚ ಪ್ರಕ್ರಾಂತಪ್ರಕೃತಿಪ್ರತ್ಯಯವಿಪರ್ಯಾಸೇನ ಅರ್ಥಸ್ಯ ವಿಸಂವಾದಿತಾವಿಚ್ಛೇದಃ; ಸ ಚ ಪ್ರಕ್ರಮಭಂಗರೂಪದೋಷವಿರಹ ಏವ. ಸ್ಪಷ್ಟಮುದಾಹರಣಮ್.

ನ ಗುಣತ್ವಂ ಸಮಾಧೇಶ್ಚ ತೇನ ನಾರ್ಥಗುಣಃ ಪೃಥಕ್. ಸಮಾಧಿಶ್ಚ ಅಯೋನ್ಯನ್ಯಚ್ಛಾಯಾಯೋನಿರೂಪದ್ವಿವಿಧಾರ್ಥದೃಷ್ಟಿರೂಪಃ. ತತ್ರಾಯೋನಿರರ್ಥೋ ಯಥಾ—

ಸದ್ಯೋ ಮುಂಡಿತಮತ್ತಹೂಣಚಿಬುಕಪ್ರಸ್ಪರ್ಧಿ ನಾರಂಗಕಮ್।

ಅನ್ಯಚ್ಛಾಯಾಯೋನಿರ್ಯಥಾ—

ನಿಜನಯನಪ್ರತಿಬಿಂಬೈರಂಬುನಿ ಬಹುಶಃ ಪ್ರತಾರಿತಾ ಕಾಪಿ।
ನೀಲೋತ್ಪಲೇಽಪಿ ವಿಮೃಶತಿ ಕರಮರ್ಪಯಿತುಂ ಕುಸುಮಲಾವೀ॥

ಅತ್ರ ನೀಲೋತ್ಪಲನಯನಯೋರತಿಪ್ರಸಿದ್ಧಂ ಸಾದೃಶ್ಯಂ ವಿಚ್ಛಿತ್ತಿವಿಶೇಷೇಣ ನಿಬದ್ಧಮ್. ಅಸ್ಯ ಚ ಅಸಾಧಾರಣಶೋಭಾನಾಧಾಯಕತ್ವಾನ್ನ ಗುಣತ್ವಮ್, ಕಿಂತು ಕಾವ್ಯಶರೀರಮಾತ್ರನಿರ್ವರ್ತಕತ್ವಮ್.

ಕ್ವಚಿತ್ 'ಚಂದ್ರಂ' ಇತ್ಯೇಕಸ್ಮಿನ್ ಪದಾರ್ಥೇ ವಕ್ತವ್ಯೇ 'ಅತ್ರೇರ್ನಯನಸಮುತ್ಥಂ ಜ್ಯೋತಿಃ' ಇತಿ ವಾಕ್ಯವಚನಮ್. ಕ್ವಚಿತ್ 'ನಿಧಾಘಶೀತಲಹಿಮಕಾಲೋಷ್ಣಸುಕುಮಾರಶರೀರಾವಯವಾ ಯೋಷಿತ್' ಇತಿ ವಾಕ್ಯಾರ್ಥೇ ವಕ್ತವ್ಯೇ 'ವರವರ್ಣಿನೀ' ಇತಿ ಪದಾಭಿಧಾನಮ್. ಕ್ವಚಿದೇಕಸ್ಯ ವಾಕ್ಯಾರ್ಥಸ್ಯ ಕಿಂಚಿದ್ವಿಶೇಷನಿವೇಶಾತ್ ಅನೇಕೈರ್ವಾಕ್ಯೈರಭಿಧಾನಮಿತ್ಯೇವಂರೂಪೋ ವ್ಯಾಸಃ, ಕ್ವಚಿದ್ಬಹುವಾಕ್ಯಪ್ರತಿಪಾದ್ಯಸ್ಯ ಏಕವಾಕ್ಯೇನಾಭಿಧಾನಮಿತ್ಯೇವಂರೂಪಃ ಸಮಾಸಶ್ಚ. ಇತ್ಯೇವಮಾದೀನಾಂ ಅನ್ಯೈರುಕ್ತಾನಾಂ ಗುಣತ್ವಮುಚಿತಮ್ ಅಪಿ ತು ವೈಚಿತ್ರ್ಯಮಾತ್ರಾವಹತ್ವಮ್.

ತೇನ ಉಕ್ತಪ್ರಕಾರೇಣ. ಅರ್ಥಗುಣಾಃ ಓಜಃಪ್ರಭೃತಯಃ ಪ್ರೋಕ್ತಾಃ.

ವಾಮನನ ಮತದಲ್ಲಿ ಸಮಾಧಿಯನ್ನು ಉದಾಹರಿಸುತ್ತಾನೆ. ಅವನ ಅಭಿಪ್ರಾಯದಲ್ಲಿ ರಚನೆಯಲ್ಲಿ ಏರಿಳಿತಗಳ ಕ್ರಮವೇ ಸಮಾಧಿ ಎನಿಸಿದೆ. ಆರೋಹವೆಂದರೆ ರಚನೆಯ ಗಾಂಭೀರ್ಯ. ಅವರೋಹವೆಂದರೆ ರಚನೆಯ ಶೈಥಿಲ್ಯ. ಇವುಗಳನ್ನು ಕ್ರಮಬದ್ಧವಾಗಿ ಪ್ರಯೋಗಿಸುವುದೇ ಸಮಾಧಿ ಎನಿಸುವುದು. ಮೊದಲು ರಚನೆಯು ಗಂಭೀರ

ವಾಗಿದ್ದು ಆಮೇಲೆ ಶಿಥಿಲವಾಗುವುದು. ಇದರಿಂದ ಸ್ವಾರಸ್ಯಕ್ಕೆ ಯಾವ ಭಂಗವೂ ಬರುವುದಿಲ್ಲ. ಈ ಬಗೆಯ ಆರೋಹಾವರೋಹಕ್ರಮವೇ ಸಮಾಧಿ ಎನಿಸುವುದು. ಚಂಚದ್ಭುಜ ಎಂಬ ಪದ್ಯದಲ್ಲಿ ಮೊದಲಿನ ಮೂರು ಪಾದಗಳಲ್ಲಿ ಕ್ರಮವಾಗಿ ಬಂಧವು ಗಡಸಾಗಿದ್ದು ನಾಲ್ಕನೆಯ ಪಾದದಲ್ಲಿ ಬಂಧವು ಸಡಿಲಗೊಂಡಿದೆ. ಅವರಲ್ಲಿ ಉತ್ತಂಸಯಿಷ್ಯತಿ ಎಂಬ ಪದವನ್ನು ಹೆಚ್ಚು ಪ್ರಯತ್ನದಿಂದ ಉಚ್ಚರಿಸಬೇಕಾದ್ದರಿಂದ ಅದನ್ನು ಓಜೋಗುಣದಲ್ಲಿ ಸೇರಿಸಬಹುದು. ಪದಗಳು ಒರಟಾಗಿರುವುದೇ ಉದಾರತೆ ಎನಿಸುವುದು ಪದಗಳು ನರ್ತನವಾಡುವಂತೆ ಸೇರಿಕೊಂಡಿರುವುದೇ ವಿಕಟತನ ಎನಿಸುತ್ತದೆ. "ನರ್ತಕಿಯರು ಸುಂದರವಾದ ಪಾದಗಳಲ್ಲಿ ಹಾಕಿಕೊಂಡಿರುವ ಕಡಗಗಳಿಂದ ಅವ್ಯಕ್ತ ಮಧುರವೂ ವಿಚಿತ್ರವೂ ಆದ ಶಬ್ದವು ಬೇಗನೆ ಉಂಟಾಯಿತು.'' ಇಲ್ಲಿ ವಾಮನನ ಮತದಂತೆ ರಸಾನುಸಂಧಾನವಿಲ್ಲದೆಯೇ ಕೇವಲ ರಚನೆಯ ಗಾಂಭೀರ್ಯದಿಂದಲೇ ಓಜೋಗುಣವುಂಟೆಂದು ನಾವೂ ಸಹ ಒಪ್ಪಿರುತ್ತೇವೆ.

ವಾಮನನ ಅಭಿಪ್ರಾಯದಲ್ಲಿ ಪ್ರಸಾದಗುಣವನ್ನು ತಿಳಿಸಿ ಉದಾಹರಿಸುತ್ತಾನೆ. ಓಜೋಗುಣದಿಂದ ಕೂಡಿದ ಶೈಥಿಲ್ಯವೇ ಇದರ ಸ್ವರೂಪವೆನಿಸಿದೆ. 'ಯೋ ಯಃ ಶಸ್ತ್ರಂ' ಎಂಬ ಪದ್ಯದಲ್ಲಿ ಎಲ್ಲಾ ಪಾದಗಳಲ್ಲೂ ಪ್ರಸಾದಗುಣವಿರುವುದನ್ನು ಕಾಣಬಹುದು. ಈ ಪದ್ಯದ ಅರ್ಥವನ್ನು ಹಿಂದೆಯೇ ಬರೆದಿದೆ. ಇಲ್ಲಿ 'ಮದಾತ್' ಎಂಬುವವರೆಗೆ ಶೈಲಿ ಬಿಗಿಯಾಗಿದೆ. 'ಪಾಂಡವೀನಾಂ ಚಮೂನಾಂ' ಎಂಬಲ್ಲಿ ಶೈಲಿ ಶಿಥಿಲವಾಗಿದೆ. ಆದ್ದರಿಂದ ಇಲ್ಲಿ ವಾಮನಮತದ ರೀತಿಯಲ್ಲಿ ಪ್ರಸಾದಗುಣವಿದೆ. ಆದರೆ ಶೈಲಿ ಗಾಢವಾಗಿರುವಕಡೆ ಇದು ಓಜಸ್ಸಿನಲ್ಲೂ, ಶಿಥಿಲವಾಗಿರುವ ಕಡೆ ಪ್ರಸಾದದಲ್ಲೂ ಸೇರುತ್ತದೆ ಎಂಬುದು ತನ್ನ ಅಭಿಪ್ರಾಯವೆಂದು ತಿಳಿಸಿದ್ದಾನೆ.

ವಾಮನನಿಗೆ ಸಮ್ಮತವಾದ ಪೃಥಕ್ಪದವೆಂಬ ಗುಣವನ್ನು ಸಮಾಸವಿಲ್ಲದಕಡೆ ಇರುವ ಮಾಧುರ್ಯವೆಂಬ ಗುಣದಲ್ಲಿ ಸೇರಿಸಬೇಕೆಂಬುದನ್ನು ಈಗ ತಿಳಿಸುತ್ತಾನೆ. ಸಮಾಸವಿಲ್ಲದೆ ಪದಗಳನ್ನು ಪ್ರಯೋಗಿಸಿದರೆ ಅಂತಹ ಬಂಧವು ಮಾಧುರ್ಯವನ್ನು ಪ್ರಕಾಶಪಡಿಸುತ್ತದೆ ಎಂದು ಹಿಂದೆ ನಾವೇ ಹೇಳಿದ್ದೇವೆ. ಅದೇ ಪೃಥಕ್ಪದವೆನಿಸುವುದು. ಹೀಗೆ ಸಮಾಸಗಳಿಲ್ಲದಂತೆ ಪದಗಳನ್ನು ಪ್ರಯೋಗಿಸುವುದೇ ಶಬ್ದಮಾಧುರ್ಯವೆಂದು ವಾಮನನು ಹೇಳಿದ್ದಾನೆ. ಇದರಲ್ಲಿಯೇ ವಾಮನನು ಹೇಳಿರುವ ಶಬ್ದಮಾಧುರ್ಯವೂ ಸೇರುತ್ತದೆ. 'ಶ್ವಾಸಾನ್ ಮುಂಚತಿ' ಎಂಬಲ್ಲಿ ಇದನ್ನು ಕಾಣಬಹುದು. ಇಲ್ಲಿ 'ತ್ವನ್ಮಾರ್ಗಮ್' 'ಭುಜಾವಲ್ಲರೀಂ' ಎಂದು ಸ್ವಲ್ಪ ಸಮಾಸವಿದ್ದರೂ ಸಹ ಸಮಾಸವಿಲ್ಲವೆಂದೇ ಭಾವಿಸಿ ಲಕ್ಷಣವನ್ನು ಅನ್ವಯಿಸಬೇಕು.

ವಾಮನನಿಗೆ ಸಮ್ಮತವಾದ ಅರ್ಥವ್ಯಕ್ತಿ ಎಂಬ ಗುಣವನ್ನು ತನಗೆ ಸಮ್ಮತವಾದ ಪ್ರಸಾದಗುಣದಲ್ಲಿ ಸೇರಿಸಬಹುದೆಂದು ಈಗ ತಿಳಿಸುತ್ತಾನೆ. ಪ್ರಸಾದವೆಂಬ ಗುಣದಲ್ಲಿಯೇ ಅರ್ಥವ್ಯಕ್ತಿ ಎಂಬ ಗುಣವನ್ನು ಸೇರಿಸಬೇಕೆಂಬುದು ಸ್ವಮತ. ಯಾಕೆಂದರೆ ಪದಗಳು ಬೇಗನೆ ಅರ್ಥವನ್ನು ತಿಳಿಸುವುದೇ ವಾಮನನಮತದಲ್ಲಿ ಅರ್ಥವ್ಯಕ್ತಿ ಎನಿಸು

ತ್ತದೆ. ಅರ್ಥವು ನಮಗೆ ಬೇಗನೆ ತಿಳಿಯಬರುವುದೇ ಅರ್ಥವ್ಯಕ್ತಿ ಎಂದು ಅವನು ಹೇಳಿದ್ದಾನೆ. 'ಸೂಚೀಮುಖೇನ ಸಕೃದೇವ' ಎಂಬ ಪದ್ಯದಲ್ಲಿ ಇವನ್ನು ಕಾಣಬಹುದು.

ಗ್ರಾಮ್ಯ ದುಃಶ್ರವ ಎಂಬ ದೋಷಗಳನ್ನು ತೊರೆದರೆ ಕಾಂತಿ, ಸುಕುಮಾರತಾ ಎಂಬವು ಪ್ರಕಾಶವಾಗುತ್ತವೆ ಎಂದು ನಾವು ಅಂಗೀಕರಿಸಿದ್ದೇವೆ. ಕಾಂತಿ ಎಂದರೆ ಪ್ರಕಾಶ; ಪದಗಳಲ್ಲಿ ತೋರುವ ಹೆಚ್ಚಿನ ಶೋಭೆ. ಹಳ್ಳಿಯಜನರು ಪ್ರಯೋಗಿಸುವ ಗ್ರಾಮ್ಯಶಬ್ದಗಳನ್ನೂ, ಕರ್ಣಕಠೋರವಾದ ಪದಗಳನ್ನೂ ತೊರೆದು ಶ್ರಾವ್ಯವಾದ ಪದಗಳನ್ನು ಪ್ರಯೋಗಿಸುವುದರಿಂದ ಈ ಬಗೆಯ ಪ್ರಕಾಶವುಂಟಾಗುತ್ತದೆ. ಸುಕುಮಾರತೆ ಎಂದರೆ ಪದಗಳ ಪ್ರಯೋಗದಲ್ಲಿ ಕಾಠಿನ್ಯವಿಲ್ಲದಿರುವುದು. ಹೀಗೆ ಗ್ರಾಮ್ಯತ್ವವನ್ನು ತೊರೆದರೆ ಕಾಂತಿಯೂ ದುಃಶ್ರವತ್ವವನ್ನು ತೊರೆದರೆ ಸುಕುಮಾರತೆಯೂ ಲಭಿಸುತ್ತವೆ.

ಪ್ರಾಚೀನರು ಹೇಳಿದ ಸಮತೆ ಎಂಬ ಗುಣವು ತನ್ನ ಮತದಲ್ಲಿ ಹೇಗೆ ಆಗುವುದೆಂಬುದನ್ನು ತಿಳಿಸುತ್ತಾನೆ. ಉಪಕ್ರಮ ಉಪಸಂಹಾರಗಳಲ್ಲಿ ಒಂದೇ ಬಗೆಯ ರಚನೆ ಇದ್ದರೆ ಅದು ಸಮತೆ ಎನಿಸುವುದು. ಸುಕುಮಾರವಾದ ಅರ್ಥವಿರುವಕಡೆ ವಿಕಟವಾದ ಶೈಲಿ ಇದ್ದು ಉತ್ಕಟವಾದ ಅರ್ಥವಿರುವ ಕಡೆ ಸುಕುಮಾರವಾದ ಶೈಲಿ ಇರುವುದಾದರೆ ಅಲ್ಲಿ ಹೀಗೆ ಪ್ರತಿಕೂಲವರ್ಣಗಳಿರುವುದು ದೋಷವೇ ಆಗುತ್ತದೆ. ಅಂತಹ ವೈಷಮ್ಯವಿಲ್ಲದ ಕಡೆಗಳಲ್ಲಿ ಈ ಸಮತೆಯನ್ನು ಓಜಸ್ಸು ಮೊದಲಾದವುಗಳಲ್ಲಿ ಸೇರಿಸುವುದು ಯುಕ್ತವೆನಿಸುತ್ತದೆ. ಕೋಮಲವೋ ಕಠಿನವೋ ಆದ ಮಾರ್ಗದಿಂದ ಆರಂಭಿಸಿದ ವಾಕ್ಯವನ್ನು ಅದೇ ಮಾರ್ಗದಿಂದ ಕೊನೆಗಾಣಿಸುವುದೇ ಮಾರ್ಗೈಕ್ಯವೆನಿಸುವುದು. ಇದನ್ನು ಸಮತೆ ಎಂದು ಪ್ರಾಚೀನರು ಭಾವಿಸಿರುವರು. ಇದು ಕೆಲವು ಕಡೆ ದೋಷವೆನಿಸುವುದು. ಒಂದೇ ಪದ್ಯದಲ್ಲಿ ಸಮತೆ ದೋಷವೂ ಗುಣವೂ ಎನಿಸುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ಕೈ ಕಾಲು ಮೊದಲಾದ ಅವಯವಗಳು ಸಾಕಷ್ಟು ಪುಷ್ಟಿಯನ್ನು ಹೊಂದದೆಯೂ, ಕೈ ಹೊಟ್ಟೆ ಇವುಗಳ ವಿಸ್ತಾರವು ಇನ್ನೂ ಕಾಣಿಸದೆಯೂ ಇರುವ ದೇಹವನ್ನು ಧರಿಸಿರುವ ಈ ಸಿಂಹದ ಮರಿಯು ಮನುಷ್ಯನ ಕೈಯೊಳಗೆ ಅಡಗಲು ಯೋಗ್ಯವೆನಿಸಿದೆ. ಹೀಗೆ ಅಡಗಿದ್ದರಿಂದ ಅದಕ್ಕೆ ಆಗುವ ನ್ಯೂನತೆ ಎಂತಹದು! ನೂರಾರು ಮದಗಜಗಳ ಕಪೋಲಗಳಿಂದ ಸುರಿಯುವ ಮದೋದಕದ ಪ್ರವಾಹವನ್ನು ಒಣಗಿಸುವಷ್ಟು ಸಿಟ್ಟಿರುವ ಈ ಮರಿಸಿಂಹದ ಮುಂದೆ ಪ್ರಳಯಕಾಲದ ಬೆಂಕಿಯೂ ಸಹ ಅತ್ಯಲ್ಪವೆನಿಸಿದೆ. ಈ ಸಿಂಹವು ಆಕಾರದಲ್ಲಿ ಚಿಕ್ಕದಾಗಿದ್ದರೂ ಬಲದಲ್ಲಿ ದೊಡ್ಡದೆನಿಸಿದೆ" ಇಲ್ಲಿ ಪ್ರಥಮಾರ್ಧದಲ್ಲಿ ಸಿಂಹದ ಮರಿಯನ್ನು ವರ್ಣಿಸಬೇಕಾದ್ದರಿಂದ ಅರ್ಥವು ಸುಕುಮಾರವೆನಿಸಿದೆ. ಆದರೆ ಕವಿಯು ಸಮತೆಯನ್ನು ಪ್ರಯೋಗಿಸಲಿಕ್ಕಾಗಿ ಎಲ್ಲಾ ಕಡೆಗಳಲ್ಲೂ ಉತ್ಕಟವಾದ ರಚನೆಯನ್ನು ಏರ್ಪಡಿಸಿರುವುದರಿಂದ ಪ್ರಥಮಾರ್ಧದಲ್ಲಿ ಪ್ರತಿಕೂಲವಾದ ವರ್ಣಗಳು ಬಂದದ್ದು ದೋಷವೆನಿಸಿದೆ. ದ್ವಿತೀಯಾರ್ಧದಲ್ಲಾದರೋ ಪ್ರಚಂಡವಾದ ಕೋಪವನ್ನು ವರ್ಣಿಸಬೇಕಾದ್ದರಿಂದ ಉತ್ಕಟವಾದ ಅರ್ಥವೇ ಇರುವ ಪ್ರಯುಕ್ತ ಉತ್ಕಟವಾದ ರಚನೆಯೇ ಹಿಂದು ಸಮತೆಯು ಗುಣವೆನಿಸಿದೆ.

ಸುಕುಮಾರವಾದ ಶೈಲಿಯನ್ನು ಇಲ್ಲಿ ತೋರೆದದ್ದು ಗುಣವೆನಿಸಿದೆ. ಹೀಗೆ ತೊರೆಯದೆ ಸುಕುಮಾರವಾದ ರಚನೆಯೇ ಅಥವಾ ಉತ್ಕಟವಾದ ರಚನೆಯೇ ಇರುವ ಕಡೆಗಳಲ್ಲಿ ಇದನ್ನು ಕ್ರಮವಾಗಿ ಮಾಧುರ್ಯದಲ್ಲೂ ಓಜಸ್ಸಿನಲ್ಲೂ ಸೇರಿಸಬೇಕು. 'ಲತಾಕುಂಜಂ ಗುಂಜನ್' ಇಲ್ಲಿ ಅರ್ಥವೂ ಸುಕುಮಾರವಾಗಿರುವುದರಿಂದ ಮೊದಲಿಂದ ಕೊನೆಯ ವರೆಗೂ ಸುಕುಮಾರವಾದ ರಚನೆ ಇರುವುದರಿಂದ ಇಲ್ಲಿ ತೋರುವ ಸಮತೆ ಎಂಬುದು ಮಾಧುರ್ಯದಲ್ಲಿಯೇ ಸೇರುವುದೆಂಬುದು ತನಗೆ ಸಮ್ಮತವೆನಿಸಿದೆ.

ಈಗ ಭೋಜದೇವನು ಹೇಳಿರುವ ಹತ್ತು ಬಗೆಯ ಅರ್ಥ ಗುಣಗಳು ತನ್ನ ಮತದಲ್ಲಿ ಹೇಗೆ ಆಗುತ್ತದೆ ಎಂಬುದನ್ನು ತಿಳಿಸುತ್ತಾನೆ. ಓಜಸ್ಸು, ಪ್ರಸಾದ, ಮಾಧುರ್ಯ, ಸೌಕುಮಾರ್ಯ ಉದಾರತೆ ಇವು ಐದು ಅರ್ಥಗುಣಗಳು ಎಲ್ಲಿ ಇಲ್ಲವೋ ಆಸ್ಥಿತಿಯೇ ದೋಷವೆನಿಸುವುದಾಗಿ ನಾವು ಒಪ್ಪಿದ್ದೇವೆ. ಹೀಗೆ ಅವು ಇಲ್ಲ ದಿರುವ ಸ್ಥಿತಿಯೇ ದೋಷವೆನಿಸಿದ್ದರಿಂದ ಅವು ಇರುವುದನ್ನು ಗುಣವೆಂದು ಗ್ರಹಿಸ ಬೇಕೆಂದು ಹೇಳಿದಂತಾಯಿತು. ಇಲ್ಲಿ ಓಜಸ್ಸೆಂದರೆ ಅರ್ಥಗರ್ಭಿತವಾದ ಪದಗಳ ರಚನೆ ಅರ್ಥವು ವಿಶದವಾಗಿ ಪ್ರಕಟವಶಗುವುದೇ ಪ್ರಸಾದ. ಮಾತಿನಲ್ಲಿ ಅಡಗಿರುವ ಸೌಂದ ರ್ಯವೇ ಮಾಧುರ್ಯವೆನಿಸುವುದು. ಕಾಠಿನ್ಯವಿಲ್ಲದಿರುವುದೇ ಸೌಕುಮಾರ್ಯ ವೆನಿಸುವುದು. ಗ್ರಾಮ್ಯವಾದ ಶಬ್ದಗಳನ್ನು ಪ್ರಯೋಗಿಸದಿರುವುದೇ ಉದಾರತೆ ಎನಿ ಸುವುದು. ಇದಕ್ಕೆ ಉದಾಹರಣಗಳನ್ನು ಸರಸ್ವತೀಕಂಠಾಭರಣದಲ್ಲಿ ನೋಡಬಹುದು. ಇವಿಷ್ಟು ಅರ್ಥಗುಣಗಳಿಗೆ ಸಹ ಕ್ರಮವಾಗಿ ಅಪುಷ್ಟಾರ್ಥ, ಅಧಿಕಪದ, ಅನವೀಕೃತ, ಅಮಂಗಳವೆಂಬ ಅಶ್ಲೀಲ, ಗ್ರಾಮ್ಯ ಇವಿಷ್ಟು ದೋಷಗಳನ್ನು ಬಿಡುವುದರಿಂದ ಸಂಭವಿ ಸುತ್ತವೆ. ಈ ಐದು ದೋಷಗಳಿಲ್ಲದಿರುವುದೇ ಕ್ರಮವಾಗಿ ಓಜಸ್ಸು, ಪ್ರಸಾದ, ಮಾಧುರ್ಯ, ಸೌಕುಮಾರ್ಯ, ಉದಾರತೆ ಎಂಬ ಗುಣಗಳೆನಿಸುತ್ತದೆ.

ಸ್ವಭಾವೋಕ್ತ್ಯಲಂಕಾರವನ್ನು ಅಂಗೀಕರಿಸುವುದರಿಂದ ಅರ್ಥವ್ಯಕ್ತಿ ಎಂಬ ಗುಣವು ಅದರಲ್ಲಿಯೇ ಇರುವುದಾಗಿ ಒಪ್ಪಿಕೊಂಡಂತಾಯಿತು. ಹೀಗೆಯೇ ರಸಧ್ವನಿ ಯನ್ನೂ ಗುಣೀಭೂತವ್ಯಂಗ್ಯವನ್ನು ಒಪ್ಪಿದ್ದರಿಂದ ಕಾಂತಿ ಎಂಬ ಅರ್ಥಗುಣವನ್ನು ಒಪ್ಪಿಕೊಂಡಂತಾಯಿತು. ಅರ್ಥ ವ್ಯಕ್ತಿ ಎಂದರೆ ವಸ್ತುವಿನ ಸ್ವಭಾವವನ್ನು ಸ್ಫುಟ ವಾಗಿ ತಿಳಿಸುವುದಿಲ್ಲದೆ ಬೇರೆಯಲ್ಲ. ರಸವು ಸ್ಪಷ್ಟವಾಗಿತೋರುವಂತೆ ಮಾಡುವುದೇ ಕಾಂತಿ ಎನಿಸುವುದು. 'ಗ್ರೀವಾಭಂಗಾಭಿರಾಮಂ' ಎಂಬ ಶ್ಲೋಕದಲ್ಲಿ ಸ್ವಭಾ ವೋಕ್ತ್ಯಲಂಕಾರವಿರುವುದರಿಂದಲೇ ಅರ್ಥವ್ಯಕ್ತಿ ಎಂಬ ಗುಣವುಸಂಭವಿಸುತ್ತವೆ.

ಈಗ ಶ್ಲೇಷಸಮತೆ ಎಂಬ ಗುಣಗಳು ಗುಣಗಳೇ ಅಲ್ಲವೆಂಬುದನ್ನು ತಿಳಿಸು ತ್ತಾನೆ. ಪ್ರಾಚೀನರು ಒಪ್ಪಿರುವ ಶ್ಲೇಷವೆಂಬುದು ಶಬ್ದವೈಚಿತ್ರ್ಯವಷ್ಟೇ ಹೊರತು ವಾಸ್ತವವಾಗಿ ಗುಣವಲ್ಲ. ಹಾಗೆಯೇ ಸಮತೆ ಎಂಬುದು ದೋಷವಿಲ್ಲದಸ್ಥಿತಿಯೇ ಹೊರತು ಗುಣವಲ್ಲ. ಕಾರ್ಯಗಳು ಒಂದೇ ಸಮನಾಗಿ ನಡೆಯುವ ಕ್ರಮವು ನಿಪುಣರ್ಗ

ನಡೆಸುವ ಚಾತುರ್ಯ, ವರ್ಣಗಳನ್ನು ಅತಿಕ್ರಮವಾಗಿ ಪ್ರಯೋಗಿಸದಿರುವುದು, ಒಂದು ಅರ್ಥವನ್ನು ಪ್ರತಿಪಾದಿಸಲು ಯುಕ್ತಿಯನ್ನು ತಿಳಿಸುವುದು ಇವುಗಳ ಸಮ್ಮೇಳನವೇ ಒಂದು ಬಗೆಯ ಘಟನೆ ಎನಿಸುವುದು. ಇದನ್ನೇ ಪ್ರಾಚೀನರು ಶ್ಲೇಷವೆಂದು ಕರೆದಿರುವರು. ರಸಕ್ಕೆ ಅನುಕೂಲವಾಗಿರುವ ಸ್ಥಿತಿಯೇ ಬೇರೆ ಯಾವ ಬಗೆಯ ಅರ್ಥಕ್ಕೂ ಸಮಾನವೆನಿಸದಿರುವ ವಿಶೇಷವೆನಿಸಿದೆ. ಇಂತಹದೊಂದು ಅತಿಶಯಕ್ಕೆ ಶ್ಲೇಷದಲ್ಲಿ ಅವಕಾಶವಿರುವುದಿಲ್ಲ. 'ದೃಷ್ಟ್ವೈಕಾಸನಸಂಸ್ಥಿತೇ ಪ್ರಿಯತಮೇ' ಎಂಬ ಶ್ಲೋಕದಲ್ಲಿ ದರ್ಶನ ಮೊದಲಾದವೇ ಕ್ರಿಯೆಗಳು. ಹಿರಿಯರನ್ನು ಸಂತೋಷಪಡಿಸುವುದು ಕಿರಿಯರನ್ನು ವಂಚಿಸುವುದು ಇವೆರಡನ್ನು ಒಟ್ಟಿಗೆ ನಡೆಸುವುದೇ ಚಾತುರ್ಯ. ನಾಯಿಕೆಯ ಸ್ವಾಭಾವಿಕವಾದ ವರ್ತನೆಯೇ ಅನುಲ್ಬಣತ್ವ. ಏಕಾಸನಸಂಸ್ಥಿತೇ, ಪಶ್ಚಾದುಪೇತ್ಯ, ನಯನೇ ಪಿಧಾಯ, ಈಷದ್ವಕ್ರಿತಕಂಧರ ಈ ಮಾತುಗಳೇ ಉಪಪಾದಕ ಯುಕ್ತಿಗಳು. ಇವೆಲ್ಲವೂ ಸೇರಿರುವುದರಿಂದ ಇಲ್ಲಿ ಶ್ಲೇಷವಿದೆ. ಇಲ್ಲಿ ಹೇಳಬೇಕಾಗಿರುವ ನಯನ ಪಿಧಾನವೆಂಬುದು ಯುಕ್ತವೇ ಅಲ್ಲವೇ ಎಂಬುದನ್ನು ತಿಳಿಯುವುದರಲ್ಲಿಯೇ ಶ್ರೋತೃವಿಗೆ ಆಸಕ್ತಿಯುಂಟಾಗುವುದರಿಂದ ರಸಾಸ್ವಾದಕ್ಕೆ ಕೊಂಚ ವ್ಯವಧಾನವುಂಟಾಗುವುದು. ಆದ್ದರಿಂದ ಶ್ಲೇಷವು ಶಬ್ದವೈಚಿತ್ರ್ಯವಲ್ಲದೇ ಹೊರತು ಗುಣವೆನಿಸಲಾರದು. ಪ್ರಾಚೀನರ ಮತದಲ್ಲಿ ಸಮತೆ ಎಂಬ ಗುಣವನ್ನು ವಿವರಿಸಿ ಅದು ದೋಷವಿಲ್ಲದ ಸ್ಥಿತಿಯಲ್ಲದೆ ಬೇರೆಯಲ್ಲವೆಂಬುದನ್ನು ತಿಳಿಸುತ್ತಾನೆ. ಮೊದಲು ತಿಳಿಸಿದ ಪ್ರಕೃತಿ ಪ್ರತ್ಯಯಗಳಿಗೆ ಮುಂದೆ ವೈಷಮ್ಯವಿಲ್ಲದ್ದರಿಂದ ಹೇಳಬೇಕಾದ ವಿಷಯದ ಬಗ್ಗೆ ಸಂಶಯವಿಲ್ಲದಿರುವ ಸ್ಥಿತಿಯೇ ಸಮತೆ ಎನಿಸುವುದು. ಅದಾದಗೋ ಪ್ರಕ್ರಮಭಂಗವೆಂಬ ದೋಷವಿಲ್ಲದಂತೆ ಶಬ್ದಗಳನ್ನು ಪ್ರಯೋಗಿಸುವುದೇ ಆಗಿದೆ. ಯಾವ ಪ್ರಕೃತಿ ಪ್ರತ್ಯಯಗಳಿಂದ ವಿಷಯವು ಆರಂಭವಾಗಿದೆಯೋ ಅವುಗಳಿಂದಲೇ ಅದನ್ನು ಕೊನೆಗಾಣಿಸುವುದೇ ಸಮತೆ ಎನಿಸುವುದು. ಇದಕ್ಕೆ ಉದಾಹರಣವನ್ನು ಊಹಿಸಿಕೊಳ್ಳುವುದು.

ಪ್ರಾಚೀನರಿಗೆ ಸಮ್ಮತವೆನಿಸಿದ ಸಮಾಧಿ ಎಂಬ ಅರ್ಥಗುಣವು ನಮ್ಮ ಮತದಲ್ಲಿ ಗುಣವೇ ಆಗುವುದಿಲ್ಲ. ಹೊಸ ಅರ್ಥವನ್ನು ಭಾವಿಸುವುದೇ ಸಮಾಧಿ ಎನಿಸುವುದು. ಇದು ಎರಡು ಬಗೆಯಾಗಿದೆ. ಪ್ರಸಿದ್ಧಿ ಎಂಬ ಕಾರಣವಿಲ್ಲದಿರುವ ಅರ್ಥವೇ ಅಯೋನಿ ಎನಿಸುವುದು. ಬೇರೆ ಕಾವ್ಯಗಳಲ್ಲಿರುವ ಸ್ವರೂಪವರ್ಣನಪ್ರಸಿದ್ಧಿಯೇ ಕಾರಣವೆನಿಸಿರುವ ಅರ್ಥವೇ ಅನ್ಯಚ್ಛಾಯಾಯೋನಿ ಎನಿಸುವುದು. "ಆಗ ತಾನೆ ತಲೆಯನ್ನು ಬೋಳಿಸಿಕೊಂಡು ಮದಿಸಿರುವ ತುರುಕನ ಗಡ್ಡಕ್ಕೆ ಸಮಾನವೆನಿಸಿದ ಪಕ್ವವಾದ ಕಿತ್ತಳೆ ಹಣ್ಣು" ಎಂಬಲ್ಲಿ ಮದಿಸಿದ ತುರುಕನ ಗಡ್ಡಕ್ಕೂ ಪಕ್ವವಾದ ಕಿತ್ತಳೆಹಣ್ಣಿಗೂ ಸಾದೃಶ್ಯವನ್ನು ತಿಳಿಸಿದೆ. ಇದು ಬೇರೆ ಯಾವ ಕಾವ್ಯದಲ್ಲೂ ಪ್ರಸಿದ್ಧವೆನಿಸಿಲ್ಲ. ಆದ್ದರಿಂದ ಇಲ್ಲಿ ತೋರುವ ಸಾದೃಶ್ಯವೆಂಬ ಅರ್ಥವು ಅಯೋನಿ ಎನಿಸಿದೆ. ಹೀಗೆ ಅಯೋನ್ಯರ್ಥವನ್ನು ತಿಳಿಸಿ ಅನ್ಯಚ್ಛಾಯಾಯೋನಿ ಎನಿಸಿದ ಅರ್ಥವನ್ನು ಉದಾಹರಿಸುತ್ತಾನೆ. "ಹೂವನ್ನು ಕೊಯ್ಯುತ್ತಿರುವ ಒಬ್ಬ ಸ್ತ್ರೀಯು ನೀರಿನಲ್ಲಿ ಕಾಣುತ್ತಿರುವ ತನ್ನ ಕಣ್ಣ

ಗಳ ನೆರಳನ್ನು ಕಂಡು ಅನೇಕವೇಳೆ ಭ್ರಾಂತಿಗೊಂಡು ನಿಜವಾಗಿರುವ ಕನ್ನೈದಿಲೆಗಳನ್ನು ಕೀಳಲು ತನ್ನ ಕೈಯನ್ನು ನೀಡಲಿಕ್ಕೂ ಹಿಂಜರಿಯುತ್ತಾಳೆ" ಇಲ್ಲಿ ನೀಲೋತ್ಪಲಕ್ಕೂ ಕಣ್ಣಿಗೂ ಸಾದೃಶ್ಯ ವುಂಟೆಂಬುದು ಬಹಳ ಪ್ರಸಿದ್ಧವಾದ ಅಂಶ. ಅದನ್ನು ನೂರಾರು ವೇಳೆ ಎಲ್ಲಾ ಕಾವ್ಯಗಳಲ್ಲೂ ತಿಳಿಸಿಯಾಗಿದೆ. ಆದರೂ ಇಲ್ಲಿ ಮತ್ತೆ ನೈಪುಣ್ಯದಿಂದ ತಿಳಿಸಿದ್ದರಿಂದ ಅದು ಹೊಸದಾಗಿಯೇ ಕಾಣಿಸುತ್ತದೆ. ಹೀಗೆ ಈ ಬಗೆಯ ಅರ್ಥವು ಅನ್ಯಚ್ಛಾಯಾಯೋನಿ ಎನಿಸಿದೆ. ಇಂತಹ ಅರ್ಥಗಳನ್ನು ತಿಳಿಸುವುದೇ ಸಮಾಧಿ ಎನಿಸಿದೆ. ಇದರಿಂದ ಹೆಚ್ಚಿನ ಶೋಭೆಯುಂಟಾಗದೇ ಇರುವ ಪ್ರಯುಕ್ತ ಇದು ಗುಣವೆನಿಸಿಲ್ಲ; ಆದರೂ ಕಾವ್ಯದ ಶರೀರವೆನಿಸಲಿಕ್ಕೆ ಮಾತ್ರವೇ ಇದು ಅರ್ಹವೆನಿಸಿದೆ. ಕೆಲವು ಕಡೆಗಳಲ್ಲಿ 'ಚಂದ್ರ' ಎಂಬ ಒಂದು ಪದಾರ್ಥವನ್ನು ತಿಳಿಸಬೇಕಾದಾಗ 'ಅತ್ರಿಮಹರ್ಷಿಯ ಕಣ್ಣಿನಿಂದ ಹುಟ್ಟಿದ ಪ್ರಕಾಶ' ವೆಂದು ಹೇಳುವುದು ಹೀಗೆಯೇ ದೋಷವೆನಿಸುವುದು. "ಬೇಸಿಗೆ ಕಾಲದಲ್ಲಿ ಶೀತವೂ, ಛಳಿಗಾಲದಲ್ಲಿ ಉಷ್ಣವೂ ಆಗಿದ್ದು ಸುಕುಮಾರವೆನಿಸಿದ ಅವಯವಗಳಿರುವ ಸ್ತ್ರೀ" ಎಂದು ಹೇಳಬೇಕಾಗಿರುವಾಗ 'ವರವರ್ಣಿನೀ' ಎಂಬ ಒಂದೇ ಪದವನ್ನು ಉಪಯೋಗಿಸುವುದು ಹೀಗೆಯೇ ದೋಷವೆನಿಸುವುದು. ಹೀಗೆ ಕೆಲವು ಕಡೆಗಳಲ್ಲಿ ಯಾವುದೋ ಒಂದು ವಿಶೇಷವನ್ನು ತಿಳಿಸಲಿಕ್ಕಾಗಿ ಒಂದೇ ವಾಕ್ಯಾರ್ಥವನ್ನು ಅನೇಕ ವಾಕ್ಯಗಳಿಂದ ವಿವರಿಸುವುದು ವ್ಯಾಸವೆನಿಸುವುದು. ಹಾಗೆಯೇ ಅನೇಕ ವಾಕ್ಯಗಳಿಂದ ತಿಳಿಸಬೇಕಾದ ಅರ್ಥವನ್ನು ಒಂದೇ ವಾಕ್ಯದಿಂದ ತಿಳಿಸುವುದು ಸಮಾಸವೆನಿಸುವುದು. ಬೇರೆಯವರು ಹೇಳಿರುವ ಇತರ ಗುಣಗಳು ನಿಜವಾಗಿಯೂ ಗುಣವೆನಿಸದೆ ಕೇವಲ ಶಬ್ದವೈಚಿತ್ರ್ಯವೆನಿಸುತ್ತವೆ ಎಂದು ತಿಳಿಯಬೇಕು. ಪರಿಸ್ಥಿತಿಯೇ ಹೀಗೆ ಇರುವುದರಿಂದ ಓಜಸ್ಸು ಮೊದಲಾದ ಅರ್ಥಗುಣಗಳನ್ನು ಇಲ್ಲಿ ಬೇರೆಯಾಗಿ ತಿಳಿಸಿಲ್ಲ. ಇವುಗಳಲ್ಲಿ ಕೆಲವು ಗುಣಗಳೆನಿಸದೆಯೋ ಕೆಲವು ದೋಷಾಭಾವವೆನಿಸಿಯೋ ಇದ್ದು ಮತ್ತೆ ಕೆಲವು ಹಿಂದೆ ಹೇಳಿದ ಮೂರು ಗುಣಗಳಲ್ಲಿಯೇ ಸೇರುವ ಪ್ರಯುಕ್ತ ಇವನ್ನು ಬೇರೆ ತಿಳಿಸಿಲ್ಲ.

## ಒಂಭತ್ತನೆಯ ಪರಿಚ್ಛೇದ

ಅಥೋದ್ದೇಶಕ್ರಮಪ್ರಾಪ್ತಮಪ್ಯಲಂಕಾರನಿರೂಪಣಂ ಬಹುವಕ್ತವ್ಯತ್ವೇನ ಉಲ್ಲಂಘ್ಯ ರೀತಿಮಾಹ—

ಪದಸಂಘಟನಾ ರೀತಿರಂಗಸಂಸ್ಥಾವಿಶೇಷವತ್ ।
ಉಪಕರ್ತ್ರೀ ರಸಾದೀನಾಂ ಸಾ ಪುನಃ ಸ್ಯಾಚ್ಚತುರ್ವಿಧಾ ॥

ರಸಾದೀನಾಂ ಅರ್ಥಾತ್ ಶಬ್ದಾರ್ಥಶರೀರಸ್ಯ ಕಾವ್ಯಸ್ಯ ಆತ್ಮಭೂತಾನಾಮ್.

ವೈದರ್ಭೀ ಚಾಥ ಗೌಡೀ ಚ ಪಾಂಚಾಲೀ ಲಾಟಿಕಾ ತಥಾ।

ಸಾ ರೀತಿಃ. ಅತ್ರ—ಮಾಧುರ್ಯವ್ಯಂಜಕೈರ್ವರ್ಣೈ ರಚನಾ ಲಲಿತಾತ್ಮಿಕಾ।
ಅವೃತ್ತಿರಲ್ಪವೃತ್ತಿರ್ವಾ ವೈದರ್ಭೀ ರೀತಿರಿಷ್ಯತೇ ॥

ಯಥಾ 'ಅನಂಗಮಂಗಳಭುವಃ' ಇತ್ಯಾದಿ. ರುದ್ರಟಸ್ತ್ವಾಹ—

ಅಸಮಸ್ತೈಕಸಮಸ್ತಾ ಯುಕ್ತಾ ದಶಭಿರ್ಗುಣೈಶ್ಚ ವೈದರ್ಭೀ ||
ವರ್ಗದ್ವಿತೀಯಬಹುಲಾ ಸ್ವಲ್ಪಪ್ರಾಣಾಕ್ಷರಾ ಚ ಸುವಿಧೇಯಾ ||

ಅತ್ರ ದಶಗುಣಾಸ್ತನ್ಮತೋಕ್ತಾಃ ಶ್ಲೇಷಾದಯಃ.

ಓಜಃಪ್ರಕಾಶಕೈರ್ವರ್ಣೈರ್ಬಂಧ ಆಡಂಬರಃ ಪುನಃ |
ಸಮಾಸಬಹುಲಾ ಗೌಡೀ ವರ್ಣೈಃ ಶೇಷೈಃ ಪುನರ್ದ್ವಯೋಃ ||
ಸಮಸ್ತಪಂಚಷಪದೋ ಬಂಧಃ ಪಾಂಚಾಲಿಕಾ ಮತಾ |

ಯಥಾ 'ಚಂಚದ್ಭುಜ' ಇತ್ಯಾದಿ. ಪುರುಷೋತ್ತಮಸ್ತ್ವಾಹ—

ಬಹುತರಸಮಾಸಯುಕ್ತಾ ಸುಮಹಾಪ್ರಾಣಾಕ್ಷರಾ ಚ ಗೌಡೀಯಾ |
ರೀತಿರನುಪ್ರಾಸಮಹಿಮಪರತಂತ್ರಾ ಸ್ತೋಕವಾಕ್ಯಾ ಚ ||

ದ್ವಯೋರ್ವೈದರ್ಭೀಗೌಡ್ಯೋಃ. ಯಥಾ—

ಮಧುರಯಾ ಮಧುಬೋಧಿತಮಾಧವೀಮಧುಸಮೃದ್ಧಿಸಮೇಧಿತಮೇಧಯಾ |
ಮಧುಕರಾಂಗನಯಾ ಮುಹುರುನ್ಮದಧ್ವನಿಭೃತಾ ನಿಭೃತಾಕ್ಷರಮುಜ್ಜಗೇ ||

ಭೋಜಸ್ತ್ವಾಹ—ಸಮಸ್ತಪಂಚಷಪದಾಮೋಜಃಕಾಂತಿಸಮನ್ವಿತಾಮ್ |
ಮಧುರಾಂ ಸುಕುಮಾರಾಂ ಚ ಪಾಂಚಾಲೀಂ ಕವಯೋ ವಿದುಃ ||
ಲಾಟೀ ತು ರೀತಿರ್ವೈದರ್ಭೀಪಾಂಚಾಲ್ಯೋರಂತರಾ ಸ್ಥಿತಾ |

ಯಥಾ—ಅಯಮುದಯತಿ ಮುದ್ರಾಭಂಜನಃ ಪದ್ಮಿನೀನಾಂ
ಉದಯಗಿರಿವನಾಲೀಬಾಲಮಂದಾರಪುಷ್ಪಮ್ |
ವಿರಹವಿಧುರಕೋಕದ್ವಂದ್ವಬಂಧುರ್ವಿಭಿಂದನ್
ಕುಪಿತಕಪಿಕಪೋಲಕ್ರೋಡತಾಮ್ರಸ್ತಮಾಂಸಿ ||

ಕಶ್ಚಿದಾಹ—ಮೃದುಪದಸಮಾಸಸುಭಗಾ ಯುಕ್ತೈರ್ವರ್ಣೈರ್ನ ಚಾತಿಭೂಯಿಷ್ಠಾ |
ಉಚಿತವಿಶೇಷಣಪೂರಿತವಸ್ತುನ್ಯಾಸಾ ಭವೇಲ್ಲಾಟೀ ||

ಅನ್ಯೇ ತ್ವಾಹುಃ—ಗೌಡೀ ಡಂಬರಬಂಧಾ ಸ್ಯಾದ್ವೈದರ್ಭೀ ಲಲಿತಕ್ರಮಾ |
ಪಾಂಚಾಲೀ ಮಿಶ್ರಭಾವೇನ ಲಾಟೀ ತು ಮೃದುಭಿಃ ಪದೈಃ ||
ಕ್ವಚಿತ್ತು ವಕ್ತ್ರಾದ್ಯೌಚಿತ್ಯಾದನ್ಯಥಾ ರಚನಾದಯಃ |

ವಕ್ತ್ರಾದೀತ್ಯಾದಿಶಬ್ದಾದ್ವಾಚ್ಯಪ್ರಬಂಧೌ. ರಚನಾದೀತ್ಯಾದಿಶಬ್ದಾತ್ ವೃತ್ತಿವರ್ಣೌ. ತತ್ರ ವಕ್ತ್ರೌಚಿತ್ಯಾದ್ಯಥಾ—

ಮಂಥಾಯಸ್ತಾರ್ಣವಾಂಭಃಪ್ಲುತಕುಹರಚಲನ್ಮಂದರಧ್ವಾನಧೀರಃ
ಕೋಣಾಘಾತೇಷು ಗರ್ಜತ್ಪ್ರಲಯಘಟಾನ್ಯೋನ್ಯಸಂಘಟ್ಟಚಂಡಃ |
ಕೃಷ್ಣಾಕ್ರೋಧಾಗ್ರದೂತಃ ಕುರುಕುಲನಿಧನೋತ್ಪಾತನಿರ್ಘಾತವಾತಃ
ಕೇನಾಸ್ಮತ್ಸಿಂಹನಾದಪ್ರತಿರಸಿತಸಖೋ ದುಂದುಭಿಸ್ತಾಡಿತೋಽಯಮ್ ||

ಅತ್ರ ವಾಚ್ಯಸ್ಯ ಕ್ರೋಧಾದ್ಯನಭಿವ್ಯಂಜಕತ್ವೇಽಪಿ ಭೀಮಸೇನವಕ್ತೃತ್ವೇನ ಉದ್ಧತಾ ರಚನಾದಯಃ. ವಾಚ್ಯೌಚಿತ್ಯಾದ್ಯಥೋದಾಹೃತೇ "ಮೂರ್ಧವ್ಯಾಧೂಯಮಾನ" ಇತ್ಯಾದೌ. ಪ್ರಬಂಧೌಚಿತ್ಯಾದ್ಯಥಾ ನಾಟಕಾದೌ ರೌದ್ರೇಽಪಿ ಅಭಿನಯಪ್ರತಿಕೂಲತ್ವೇನ ನ ದೀರ್ಘಸಮಾಸಾದಯಃ. ಏವಮಾಖ್ಯಾಯಿಕಾಯಾಂ ಶೃಂಗಾರೇಽಪಿ ನ ಮಸೃಣವರ್ಣಾದಯಃ. ಕಥಾಯಾಂ ರೌದ್ರೇಽಪಿ ನಾತ್ಯಂತಮುದ್ಧತಾಃ. ಏವಮನ್ಯದಪಿ ಜ್ಞೇಯಮ್.

ಹಿಂದೆ ತಿಳಿಸಿದ ಉದ್ದೇಶಕ್ರಮದಲ್ಲಿ ಅಲಂಕಾರಗಳನ್ನು ತಿಳಿಸಬೇಕಾಗಿದ್ದರೂ ಅವುಗಳ ಬಗ್ಗೆ ಹೆಚ್ಚು ಹೇಳಬೇಕಾಗಿರುವುದರಿಂದ ಅದನ್ನು ಬಿಟ್ಟು ರೀತಿಯ ಸ್ವರೂಪವನ್ನು ಈಗ ತಿಳಿಸುತ್ತಾನೆ. ಶರೀರದಲ್ಲಿ ಆಯಾಸ್ಥಾನದಲ್ಲಿ ವ್ಯವಸ್ಥಿತವಾಗಿ ಕೈ ಕಾಲು ಮೊದಲಾದ ಅವಯವಗಳು ಸೇರಿರುವಂತೆ ಶಬ್ದಾರ್ಥಗಳೇ ಶರೀರವೆನಿಸಿರುವ ಕಾವ್ಯದಲ್ಲಿ ಪದಗಳನ್ನು ಆಯಾ ಸ್ಥಾನದಲ್ಲಿ ಸಜ್ಜಾಗಿ ಜೋಡಿಸುವುದೇ ರೀತಿ ಎನಿಸುವುದು. ಈ ಬಗೆಯ ಜೋಡಣೆಯು ಕಾವ್ಯದ ಆತ್ಮವೆನಿಸಿದ ರಸಭಾವಗಳಿಗೆ ಅನುಕೂಲವಾಗಿರುವುದು. ಈ ಶೈಲಿಯು ವೈದರ್ಭೀ, ಗೌಡೀ, ಪಾಂಚಾಲೀ, ಲಾಟಿಕಾ ಎಂದು ನಾಲ್ಕು ಬಗೆಯಾಗಿದೆ. ಅವುಗಳಲ್ಲಿ ವೈದರ್ಭೀರೀತಿಯ ಸ್ವರೂಪವನ್ನು ಈಗ ತಿಳಿಸುತ್ತಾನೆ. ಮಾಧುರ್ಯವೆಂಬ ಗುಣವನ್ನು ಪ್ರಕಾಶಪಡಿಸುವ ವರ್ಣಗಳಿಂದ ಶಬ್ದಾರ್ಥಗಳೆರಡರಲ್ಲೂ ಕೋಮಲವೆನಿಸಿದ ರೀತಿಯು ಸಮಾಸಗಳಿಲ್ಲದೆಯೋ ಅಥವಾ ಎರಡು ಮೂರು ಸಮಾಸಗಳೊಡನೆಯೋ ಕೂಡಿ ವೈದರ್ಭಿ ಎನಿಸುವುದು. ಅನಂಗಮಂಗಳಭುವಃ ಎಂಬ ಪದ್ಯದ ಶೈಲಿಯು ವೈದರ್ಭಿ ಎನಿಸಿದೆ. ಈ ವಿಚಾರದಲ್ಲಿ ರುದ್ರಟನು "ಸಮಾಸಗಳಿಲ್ಲದೆ ಎರಡು ಪದಗಳು ಸೇರಿದ ಒಂದು ಸಮಾಸವಷ್ಟೇ ಇದ್ದು ಹತ್ತು ಗುಣಗಳಿಂದಲೂ ಕೂಡಿದ್ದು ವರ್ಗದ ಎರಡನೇ ಅಕ್ಷರಗಳೇ ಹೆಚ್ಚಾಗಿದ್ದು ಸ್ವಲ್ಪ ಪ್ರಯಾಸದಿಂದ ಉಚ್ಚರಿಸಬಹುದಾದ ಅಕ್ಷರಗಳೇ ಇದ್ದು, ಸುಗಮವಾಗಿ ರಚಿಸಬಹುದಾದ ಶೈಲಿಯೇ ವೈದರ್ಭಿ ಎನಿಸುವುದು" ಎಂದು ಹೇಳಿದ್ದಾನೆ. ತನಗೂ ಕಾವ್ಯಪ್ರಕಾಶಕಾರನಿಗೂ ಸಮ್ಮತವಾದ ಮೂರು ಗುಣಗಳಲ್ಲಿ ಸೇರಬಹುದಾದ ಶ್ಲೇಷ ಮೊದಲಾದವೇ ಅವನು ಹೇಳಿದ ಹತ್ತು ಗುಣಗಳು.

ವೈದರ್ಭಿಯನ್ನು ವಿವರಿಸಿ ಗೌಡೀರೀತಿಯನ್ನು ತಿಳಿಸುತ್ತಾನೆ. ಓಜೋಗುಣವನು ಪ್ರಕಾಶಪಡಿಸುವ ವರ್ಣಗಳಿಂದ ಉತ್ಕಟವಾದ ರಚನೆಯೇ ಗೌಡೀ ಎನಿಸುವುದು. ಅದರಲ್ಲಿ ಹೆಚ್ಚು ಸಮಾಸಗಳನ್ನು ಪ್ರಯೋಗಿಸಲಾಗುವುದು. ಚಂಚದ್ಭುಜ ಎಂಬ ಪದ್ಯದಲ್ಲಿ ಈ ಬಗೆಯ ರಚನೆಯನ್ನು ಕಾಣಬಹುದು. ಈ ವಿಚಾರದಲ್ಲಿ ಪುರುಷೋತ್ತಮನು 'ಗೌಡೀರೀತಿಯು ಹೆಚ್ಚು ಸಮಾಸಗಳಿಂದಲೂ ಮಹಾಪ್ರಾಣಾಕ್ಷರಗಳಿಂದಲೂ ಕೂಡಿರುವುದು; ಹಾಗೆಯೇ ಹೆಚ್ಚು ಅನುಪ್ರಾಸಗಳಿಂದಲೂ ಅಲ್ಪವಾಕ್ಯಗಳಿಂದಲೂ ಕೂಡಿರುವುದು" ಎಂದು ಹೇಳಿದ್ದಾನೆ.

ವೈದರ್ಭೀ ಗೌಡೀ ಇವೆರಡನ್ನು ವಿವರಿಸಿ ಈಗ ಪಾಂಚಾಲೀಶೈಲಿಯನ್ನು ವಿವರಿಸುತ್ತಾನೆ. ಇವೆರಡು ಶೈಲಿಗಳಲ್ಲಿ ಉಪಯೋಗಿಸುವ ಅಕ್ಷರಗಳನ್ನು ಬಿಟ್ಟು ಉಳಿದ ವರ್ಣಗಳಿಂದಲೂ ಐದು ಆರು ಪದಗಳ ಸಮಾಸಗಳಿಂದಲೂ ಆಗುವ ರಚನೆಯೇ ಪಾಂಚಾಲಿ ಎನಿಸಿದೆ. "ವಸಂತಕಾಲದಲ್ಲಿ ಅರಳುವ ಮಾಧವೀಲತೆಯ ಮಧುಸಮೃದ್ಧಿಯಿಂದ ಪ್ರತಿಭೆಯನ್ನು ಬೆಳೆಸಿಕೊಂಡು ಮದಿಸಿದ ಧ್ವನಿಯನ್ನು ಉಚ್ಚರಿಸುತ್ತ ಮನೋಹರವಾಗಿರುವ ದುಂಬಿಯು ನಿರಂತರವೂ ಅಸ್ಪಷ್ಟವಾದ ರೀತಿಯಲ್ಲಿ ಗಟ್ಟಿಯಾಗಿ ಗಾನಮಾಡುತ್ತಿತ್ತು" ಇಲ್ಲಿರುವ ವರ್ಣಗಳು ಮಾಧುರ್ಯವನ್ನಾಗಲೀ ಓಜಸ್ಸನ್ನಾಗಲೀ ಪ್ರಕಟಿಸುತ್ತಿಲ್ಲ. ಸಮಾಸವಾದರೋ ಪ್ರಥಮಾರ್ಧದಲ್ಲಿ ಸಾಮಾನ್ಯರೀತಿಯಲ್ಲಿಯೇ ಇದೆ. ಆದ್ದರಿಂದ ಇದು ಪಾಂಚಾಲೀರೀತಿ ಎನಿಸಿದೆ. ಭೋಜದೇವನು ಈ ಬಗ್ಗೆ 'ಐದು ಆರುಪದಗಳಿಂದ ಆಗಿರುವ ಸಮಾಸಗಳಿಂದ ಕೂಡಿ ಓಜಸ್ಸು ಕಾಂತಿ ಇವುಗಳಿಂದ ಶೋಭಿಸುತ್ತಿರುವ ಮಧುರವೂ ಸುಕುಮಾರವೂ ಆದ ಶೈಲಿಯೇ ಪಾಂಚಾಲಿ ಎನಿಸಿದೆ" ಎಂದು ಹೇಳಿದ್ದಾನೆ.

ವೈದರ್ಭೀಪಾಂಚಾಲಿಗಳ ಮಧ್ಯದಲ್ಲಿ ಸೇರಬಹುದಾದ ಶೈಲಿಯೇ ಲಾಟಿ ಎನಿಸುವುದು. ವೈದರ್ಭೀರೀತಿಗೆ ಅನ್ವಯಿಸುವ ಕೆಲವು ವರ್ಣಗಳೂ ಪಾಂಚಾಲೀರೀತಿಗೆ ಅನ್ವಯಿಸುವ ಕೆಲವು ವರ್ಣಗಳೂ ಈ ಶೈಲಿಯಲ್ಲಿ ಸೇರಿರುತ್ತವೆ. "ಕಮಲಗಳ ಸಂಕೋಚಸ್ಥಿತಿಯನ್ನು ತೊಲಗಿಸಿ ಉದಯಪರ್ವತದಲ್ಲಿರುವ ವನಶ್ರೇಣಿಗೆ ಹೊಸದಾಗಿ ಅರಳಿದ ಮಂದಾರದ ಹೂವಿನಂತೆ ಕೆಂಪಗಿದ್ದು ರಾತ್ರಿವೇಳೆ ವಿರಹದಿಂದ ಗೋಳಾಡುತ್ತಿದ್ದ ಚಕ್ರವಾಕಪಕ್ಷಿಗಳೆರಡಕ್ಕೆ ಮತ್ತೆ ಸಮ್ಮೇಳನವನ್ನುಂಟು ಮಾಡಿದ್ದರಿಂದ ಮಿತ್ರನೆನಿಸಿ, ಕೋಪಗೊಂಡ ಕಪಿಯ ಕಪೋಲಸ್ಥಲದ ಮಧ್ಯಭಾಗದಂತೆ ಕೆಂಪಗಿರುವ ಈ ಸೂರ್ಯನು ಕತ್ತಲೆಯನ್ನು ತೊಲಗಿಸುತ್ತಲೇ ಉದಯಿಸುತ್ತಾನೆ." ಇಲ್ಲಿ ಬಂದಿರುವ ವರ್ಣಗಳು ಮಾಧುರ್ಯವನ್ನು ಪ್ರಕಟಿಸುತ್ತಲಿರುವುದರಿಂದ ವೈದರ್ಭೀಶೈಲಿಗೂ ಉಳಿದ ವರ್ಣಗಳು ಪಾಂಚಾಲೀಶೈಲಿಗೂ ಅನುಕೂಲವಾಗಿವೆ. ಆದ್ದರಿಂದ ಇದು ಗೌಡೀಶೈಲಿ ಎನಿಸಿದೆ. ಈ ಬಗ್ಗೆ ಒಬ್ಬನು "ಮೃದುವಾದ ಪದಗಳಿರುವ ಸಮಾಸದಿಂದ ಲಾಟೀಶೈಲಿಯು ಮನೋಹರವಾಗಿರುತ್ತದೆ. ಹೆಚ್ಚು ಸಂಯುಕ್ತಾಕ್ಷರಗಳೂ ಇರುವುದಿಲ್ಲ. ಉಪಯುಕ್ತವಾದ ವಿಶೇಷಣಗಳಿಂದ ನಿರ್ದಿಷ್ಟವಾದ ಅರ್ಥವನ್ನು ತಿಳಿಸಲಾಗುವುದು. ಇಂತಹ ಶೈಲಿಯು ಲಾಟೀ ಎನಿಸುವುದು" ಎಂದು ಹೇಳಿದ್ದಾನೆ. ಈ ಬಗ್ಗೆ ಇತರರು "ಉತ್ಕಟವಾದ ರಚನೆಯುಳ್ಳ ರೀತಿಯೇ ಗೌಡೀ ಎನಿಸುವುದು. ಲಲಿತವಾದ ರಚನೆಯುಳ್ಳದ್ದೇ ವೈದರ್ಭಿ ಎನಿಸುವುದು. ಇವೆರಡನ್ನೂ ಸೇರಿಸಿದ ಶೈಲಿಯೇ ಪಾಂಚಾಲಿ ಎನಿಸುವುದು. ಹಾಗೆಯೇ ಮೃದುವಾದ ಪದಗಳಿಂದ ಕೂಡಿದ್ದು ಲಾಟಿ ಎನಿಸುವುದು" ಎಂದು ಹೇಳುತ್ತಾರೆ. ಕೆಲವು ವೇಳೆ ವಕ್ತೃ, ವಾಚ್ಯ, ಪ್ರಬಂಧ ಮೊದಲಾದವುಗಳ ಸ್ವಭಾವಕ್ಕೆ ಅನುಗುಣವಾಗಿ ಯೋಗ್ಯವಾದ ರೀತಿಗಿಂತ ಬೇರೆ ರೀತಿಯಲ್ಲೂ ರಚನೆಯಾಗಲಿರುವುದು. ಹೇಳುವವನ ಯೋಗ್ಯತೆಗೆ ಅನುಗುಣವಾಗಿ ಶೈಲಿಯಲ್ಲಿ ಬದಲಾವಣೆಯಾಗುವುದನ್ನು

ಈಗ ವಿವರಿಸುತ್ತಾನೆ. ಹೇಳುವ ವಿಷಯದಲ್ಲಿರುವ ಮಹತ್ತ್ವಕ್ಕಿಂತಲೂ ಹೇಳುವವನಲ್ಲಿರುವ ಮಹತ್ತ್ವಕ್ಕೆ ಶೈಲಿಯು ಸಂಬಂಧಿಸಿರುತ್ತದೆ ಎಂಬುದನ್ನು ಈಗ ಉದಾಹರಿಸುತ್ತಾನೆ. "ಕಡೆಯುವಾಗ ಅಳ್ಳಾಡಿದ ಸಮುದ್ರದ ನೀರಿನಿಂದ ತುಂಬಿಕೊಂಡ ರಂಧ್ರಗಳಿರುವ ಮಂದರಪರ್ವತದ ಶಬ್ದದಂತೆ ಗಂಭೀರವೂ, ಭೀಕರವೂ ಆಗಿ ಶಬ್ದಮಾಡುತ್ತಿರುವ ಪ್ರಳಯಕಾಲದ ಮೇಘಸಮೂಹದ ಪರಸ್ಪರ ಸಂಘರ್ಷಣದಿಂದ ಹೊರಟ ಶಬ್ದದಂತೆ ಭಯಂಕರವೂ, ದ್ರೌಪದಿಯ ಕ್ರೋಧವನ್ನು ನೋಡಲು ಪ್ರಕಟಿಸಲು ಸಮರ್ಥವೂ ಕುರುವಂಶದ ವಿನಾಶವನ್ನು ಸೂಚಿಸುವ ಬಿರುಗಾಳಿಯೂ, ಭಯಂಕರವಾದ ಶಬ್ದಗಳನ್ನು ಬೀರಿಸಿ, ನಮ್ಮ ಸಿಂಹನಾದಕ್ಕೆ ಸದೃಶವೂ ಆಗಿರುವ ಈ ದುಂದುಭಿಯನ್ನು ಯಾರು ಬಾರಿಸಿರುವರು" ಇಲ್ಲಿ ವಾಚ್ಯಾರ್ಥವು ಕ್ರೋಧ ಉತ್ಸಾಹ ಜುಗುಪ್ಸೆಗಳನ್ನು ಪ್ರಕಟಿಸದೇ ಇದ್ದರೂ ಭೀಮಸೇನನೇ ವಕ್ತೃವೆನಿಸಿದ್ದರಿಂದ ಅವನು ಹೇಳುವ ರೀತಿ ಉದ್ಧತವೆನಿಸಿದೆ. ಹೇಳಬೇಕಾದ ಅರ್ಥದಲ್ಲಿ ವೈಶಿಷ್ಟ್ಯವಿದ್ದರೂ, ಶೈಲಿಯಲ್ಲಿ ಬದಲಾವಣೆಯಾಗುತ್ತದೆ. 'ಮೂರ್ಧವ್ಯಾಧೂಯಮಾನ' ಎಂಬ ಪದ್ಯದಲ್ಲಿ ಕೋಮಲಸ್ವಭಾವದ ಸೂತ್ರಧಾರನೇ ವಕ್ತೃವೆನಿಸಿದ್ದರೂ ಅಲ್ಲಿ ತಿಳಿಸಿರುವ ತಾಂಡವನೃತ್ಯದ ವಿಷಯವು ಉದ್ಧತವಾದ್ದರಿಂದ ಶೈಲಿ ಉದ್ಧತವಾಗಿದೆ. ಪ್ರಬಂಧದ ಯೋಗ್ಯತೆಗನುಗುಣವಾಗಿ ಶೈಲಿಯಲ್ಲಿ ಬದಲಾವಣೆಯಾಗಬಹುದು. ನಾಟಕದ ಆದಿಯಲ್ಲಿ ರೌದ್ರರಸವಿದ್ದರೂ ಅಭಿನಯಕ್ಕೆ ತೊಂದರೆಯಾಗುವುದರಿಂದ ದೀರ್ಘಸಮಾಸಗಳು ಬರುವುದಿಲ್ಲ. ಹೀಗೆಯೇ ಆಖ್ಯಾಯಿಕೆಯಲ್ಲಿ ಶೃಂಗಾರರಸವನ್ನು ಪ್ರಕಾಶಿಸುವಾಗಲೂ ಕೋಮಲವಾದ ವರ್ಣಗಳು ಬರುವುದಿಲ್ಲ. ಕಥೆಯಲ್ಲಿ ರೌದ್ರರಸವನ್ನು ಪ್ರಕಾಶಿಸುವಾಗಲೂ ಹೆಚ್ಚು ಉದ್ಧತವಾದ ವರ್ಣಗಳು ಬರುವುದಿಲ್ಲ. ಹೀಗೆಯೇ ಉಳಿದವುಗಳಲ್ಲೂ ತಿಳಿಯಬೇಕು.

## ಹತ್ತನೆಯ ಪರಿಚ್ಛೇದ

ಅಥ ಅವಸರಪ್ರಾಪ್ತಾನ್ ಅಲಂಕಾರಾನಾಹ—

ಶಬ್ದಾರ್ಥಯೋರಸ್ಥಿರಾ ಯೇ ಧರ್ಮಾಃ ಶೋಭಾತಿಶಾಯಿನಃ ।
ರಸಾದೀನುಪಕುರ್ವಂತೋಽಲಂಕಾರಾಸ್ತೇಽಂಗದಾದಿವತ್ ॥

ಅಂಗದಾದಯಃ ಶರೀರಶೋಭಾತಿಶಾಯಿನಃ ಶರೀರಿಣಮುಪಕುರ್ವಂತಿ ತಥಾಽನುಪ್ರಾಸೋಪಮಾದಯಃ ಶಬ್ದಾರ್ಥಶೋಭಾತಿಶಾಯಿನೋ ರಸಾದೇರುಪಕಾರಕಾ ಯೇ ತೇಽಲಂಕಾರಾಃ.

ಅಸ್ಥಿರಾ ಇತಿ ನೈಷಾಂ ಗುಣವದಾವಶ್ಯಕೀ ಸ್ಥಿತಿಃ ।

ಶಬ್ದಾರ್ಥಯೋಃ ಪ್ರಥಮಂ ಶಬ್ದಸ್ಯ ಬುದ್ಧಿವಿಷಯತ್ವಾತ್ ಶಬ್ದಾಲಂಕಾರೇಷು ವಕ್ತವ್ಯೇಷು ಚಿರಂತನೈಃ ಶಬ್ದಾಲಂಕಾರಸ್ಯಾಪಿ ಪುನರುಕ್ತವದಾಭಾಸಸ್ಯ ಚಿರಂತನೈಃ ಶಬ್ದಾಲಂಕಾರಮಧ್ಯೇ ಲಕ್ಷಿತತ್ವಾತ್ ಪ್ರಥಮಂ ತಮೇವಾಹ—

ಆಪಾತತೋ ಯದರ್ಥಸ್ಯ ಪೌನರುಕ್ತ್ಯಾವಭಾಸನಮ್ ॥
ಪುನರುಕ್ತವದಾಭಾಸಃ ಸ ಭಿನ್ನಾಕಾರಶಬ್ದಗಃ ॥

ಉದಾಹರಣಮ್—ಭುಜಂಗಕುಂಡಲೀವ್ಯಕ್ತಶಶಿಶುಭ್ರಾಂಶುಶೀತಗುಃ ।
ಜಗಂತ್ಯಪಿ ಸದಾಪಾಯಾದವ್ಯಾಚ್ಚೇತೋಹರಃ ಶಿವಃ ॥

ಅತ್ರ ಭುಜಂಗಕುಂಡಲಾದಿಶಬ್ದಾನಾಂ ಆಪಾತಮಾತ್ರೇಣ ಸರ್ಪಾದ್ಯರ್ಥತಯಾ ಪೌನರುಕ್ತ್ಯಪ್ರತಿಭಾಸನಮ್. ಪರ್ಯವಸಾನೇ ತು ಭುಜಂಗರೂಪಂ ಕುಂಡಲಂ ವಿದ್ಯತೇ ಯಸ್ಯೇತ್ಯಾದ್ಯನ್ಯಾರ್ಥತ್ವಮ್.

ಪಾಯಾದವ್ಯಾದಿತ್ಯತ್ರ ಕ್ರಿಯಾಗತೋಽಯಮಲಂಕಾರಃ. 'ಪಾಯಾತ್' ಇತ್ಯಸ್ಯ 'ಅಪಾಯಾತ್'' ಇತ್ಯತ್ರ ಪರ್ಯವಸಾನಾತ್.

ಭುಜಂಗಕುಂಡಲೀತಿಶಬ್ದಯೋಃ ಪ್ರಥಮಸ್ಯೈವ ಪರಿವೃತ್ತಿಸಹತ್ವಮ್. ಶಶಿಶುಭ್ರಾಂಶು ಇತಿ ದ್ವಯೋರಪಿ. ಭಾತಿ ಸದಾನತ್ಯಾಗಃ' ಇತಿ ನ ದ್ವಯೋರಪಿ ಶಬ್ದಪರಿವೃತ್ತಿಸಹತ್ವಾಸಹತ್ವಾಭ್ಯಾಂ ಅಸ್ಯೋಭಯಾಲಂಕಾರತ್ವಮ್.

ಅನುಪ್ರಾಸಃ ಶಬ್ದಸಾಮ್ಯಂ ವೈಷಮ್ಯೇಽಪಿ ಸ್ವರಸ್ಯ ಯತ್ ।

ಸ್ವರಮಾತ್ರ ಸಾದೃಶ್ಯಂ ತು ವೈಚಿತ್ರ್ಯಾಭಾವಾನ್ನ ಗಣಿತಮ್.
ರಸಾದ್ಯನುಗತತ್ವೇನ ಪ್ರಕರ್ಷೇಣ ನ್ಯಾಸೋಽನುಪ್ರಾಸಃ.

ಛೇಕೋ ವ್ಯಂಜನಸಂಘಸ್ಯ ಸಕೃತ್ಸಾಮ್ಯಮನೇಕಧಾ ।

ಛೇಕಂ ಛೇಕಾನುಪ್ರಾಸಃ. ಅನೇಕಧೇತಿ ಸ್ವರೂಪತಃ ಕ್ರಮತಶ್ಚ. 'ರಸಃ ಸರಃ' ಇತ್ಯಾದೇಃ ಕ್ರಮಭೇದೇನ ಸಾದೃಶ್ಯಂ ನಾಸ್ಯಾಲಂಕಾರಸ್ಯ ವಿಷಯಃ.

ಉದಾಹರಣಂ ಮಮ ತಾತಪಾದಾನಾಮ್.

ಆದಾಯ ಬಕುಲಗಂಧಾನಂಧೀಕುರ್ವನ್ ಪದೇಪದೇ ಭ್ರಮರಾನ್ ।
ಅಯಮೇತಿ ಮಂದಮಂದಂ ಕಾವೇರೀವಾರಿಪಾವನಃ ಪವನಃ ॥

ಅತ್ರ 'ಗಂಧಾನಂಧೀ' ಇತಿ ಸಂಯುಕ್ತಯೋಃ, 'ಕಾವೇರೀವಾರಿ' ಇತ್ಯಸಂಯುಕ್ತಯೋಃ, 'ಪಾವನಃ ಪವನಃ' ಇತಿ ಬಹೂನಾಂ ವ್ಯಂಜನಾನಾಂ ಸಕೃದಾವೃತ್ತಿಃ.

ಛೇಕೋ ವಿದಗ್ಧಃ, ತತ್ಪ್ರಯೋಜ್ಯತ್ವಾದೇಷ ಛೇಕಾನುಪ್ರಾಸಃ.

ಅನೇಕಸ್ಯೈಕಧಾ ಸಾಮ್ಯಮಸಕೃದ್ವಾಪ್ಯನೇಕಧಾ ।
ಏಕಸ್ಯ ಸಕೃದಪ್ಯೇಷ ವೃತ್ತ್ಯನುಪ್ರಾಸ ಉಚ್ಯತೇ ॥

ಏಕಧಾ ಸ್ವರೂಪತ ಏವ, ನ ತು ಕ್ರಮತೋಽಪಿ. ಅನೇಕಧಾ ಸ್ವರೂಪತಃ ಕ್ರಮತಶ್ಚ. ಸಕೃದಪೀತ್ಯಪಿಶಬ್ದಾದಸಕೃದಪಿ ಉದಾಹರಣಮ್.

ಉನ್ಮೀಲನ್ಮಧುಗಂಧಲುಬ್ಧಮಧುಪವ್ಯಾಧೂತಚೂತಾಂಕುರ
ಕ್ರೀಡತ್ಕೋಕಿಲಕಾಕಲೀಕಲಕಲೈರುದ್ಗೀರ್ಣಕರ್ಣಜ್ವರಾಃ ।
ನೀಯಂತೇ ಪಥಿಕೈಃ ಕಥಮಪಿ ಧ್ಯಾನಾವಧಾನಕ್ಷಣ
ಪ್ರಾಪ್ತಪ್ರಾಣಸಮಾಸಮಾಗಮರಸೋಲ್ಲಾಸೈರಮೀ ವಾಸರಾಃ ॥

ಅತ್ರ 'ರಸೋಲ್ಲಾಸೈರಪಿಹಾ' ಇತಿ ರಸಯೋರೇಕದೈವ ಸಾಮ್ಯಮ್, ನ ತು ತೇನೈವ ಕ್ರಮೇಣಾಪಿ. ದ್ವಿತೀಯೇ ಪಾದೇ ಕಲಯೋರಸಕೃತ್ ತೇನೈವ ಕ್ರಮೇಣ ಚ. ಪ್ರಥಮೇ ಏಕಸ್ಯ ಮಕಾರಸ್ಯ ಸಕೃತ್, ಧಕಾರಸ್ಯ ಚ ಅಸಕೃತ್.

ರಸವಿಷಯವ್ಯಾಪಾರವತೀ ವರ್ಣರಚನಾ ವೃತ್ತಿಃ ತದನುಗತತ್ವೇನ ಪ್ರಕರ್ಷೇಣ ನ್ಯಸನಾತ್ ವೃತ್ತ್ಯನುಪ್ರಾಸಃ.

ಈಗ ಸಂದರ್ಭೋಚಿತವೆನಿಸಿದ ಅಲಂಕಾರಗಳ ಸ್ವರೂಪವನ್ನು ತಿಳಿಸುತ್ತಾನೆ. ಶಬ್ದಾರ್ಥಗಳಲ್ಲಿ ಯಾವಾಗಲೂ ನೆಲಸದೇ ಇದ್ದು ಆವಶ್ಯಕತೆ ಬಿದ್ದಾಗ ಸೇರಿಕೊಂಡು ಅವಕ್ಕೆ ಶೋಭೆಯನ್ನುಂಟುಮಾಡುತ್ತ ರಸಭಾವಗಳಿಗೆ ಅನುಕೂಲವಾಗಿರುವ ಧರ್ಮಗಳೇ ಅಲಂಕಾರಗಳೆನಿಸಿವೆ. ಕಟಕ ಕುಂಡಲ ಮೊದಲಾದವು ಶರೀರಕ್ಕೆ ಶೋಭೆಯನ್ನುಂಟುಮಾಡುತ್ತಲೇ ಆತ್ಮನಿಗೆ ಸಂತೋಷಪಡಿಸಲು ಅನುಕೂಲವಾಗಿರುತ್ತವೆ. ಹಾಗೆಯೇ ಅನುಪ್ರಾಸ ಉಪಮೆ ಮೊದಲಾದವು ಶಬ್ದಾರ್ಥಗಳಿಗೆ ಶೋಭೆಯನ್ನುಂಟುಮಾಡುತ್ತಲೇ ರಸಾದಿಗಳಿಗೆ ಪೋಷಕವಾಗುತ್ತವೆ. ಆದ್ದರಿಂದಲೇ ಇವು ಅಲಂಕಾರಗಳೆನಿಸಿವೆ. ಅಸ್ಥಿರಾ ಎಂದು ಹೇಳಿದ್ದರಿಂದ ಇವು ಗುಣದಂತೆ ಶಬ್ದಾರ್ಥಗಳಲ್ಲಿ ಅವಶ್ಯವಾಗಿ ಇರಲೇಬೇಕೆಂಬ ನಿಯಮವಿಲ್ಲ. ಇವು ಇಲ್ಲದಿದ್ದರೂ ಶಬ್ದಾರ್ಥಗಳು ಕಾವ್ಯವೆನಿಸಬಹುದು. ಶಬ್ದಾರ್ಥಗಳಲ್ಲಿ ಶಬ್ದವೇ ಮೊದಲು ಬುದ್ಧಿಗೆ ಗೋಚರವಾಗುವುದರಿಂದ ಶಬ್ದಾಲಂಕಾರಗಳನ್ನೇ ತಿಳಿಸಬೇಕಾಗಿರುವಾಗ ಪುನರುಕ್ತವದಾಭಾಸವೆಂಬುದು ಶಬ್ದ ಮತ್ತು ಅರ್ಥ ಇವೆರಡಕ್ಕೂ ಸಂಬಂಧಿಸಿದ್ದರೂ ಅದನ್ನು ಶಬ್ದಾಲಂಕಾರದ ಮಧ್ಯದಲ್ಲಿಯೇ ಪ್ರಾಚೀನರು ನಿರೂಪಿಸಿರುವುದರಿಂದ ಮೊದಲು ಅದಕ್ಕೆ ಲಕ್ಷಣವನ್ನು ತಿಳಿಸುತ್ತಾನೆ. ಶಬ್ದವನ್ನು ಕೇಳಿದೊಡನೆ ಯಾವ ಅರ್ಥವು ಬೇರೆ ರೀತಿಯ ಶಬ್ದದಲ್ಲಿದ್ದರೂ ಸಹ ಪುನರುಕ್ತವಾದಂತೆ ತೋರುವುದೋ ಅದು ಪುನರುಕ್ತವದಾಭಾಸವೆನಿಸುತ್ತದೆ. ಶಬ್ದದಲ್ಲಿ ಅಭಂಗ ಮತ್ತು ಭಂಗವೆರಡೂ ಸಂಭವಿಸುವುದರಿಂದ ಈ ಅಲಂಕಾರದಲ್ಲೂ ಎರಡು ಬಗೆಗಳಿವೆ. ಅವುಗಳಲ್ಲಿ ಶಬ್ದವು ಭಂಗವಾಗಿರುವುದರುವುದಕ್ಕೆ ಉದಾಹರಣವನ್ನು ಈಗ ತಿಳಿಸುತ್ತಾನೆ. "ಕಿವಿಯಲ್ಲಿ ಸರ್ಪವನ್ನೇ ಆಭರಣವನ್ನಾಗಿ ಇಟ್ಟುಕೊಂಡು ತಲೆಯಲ್ಲಿ ಕರ್ಪೂರದಂತೆ ಶುದ್ಧವಾದ ಕಿರಣಗಳಿರುವ ಚಂದ್ರನನ್ನು ಧರಿಸಿ, ಭಕ್ತರ ಮನಸ್ಸನ್ನು ಸೆಳೆಯುವ ಶಿವನು ಜಗತ್ತುಗಳನ್ನು ಅಪಾಯದಿಂದ ಪಾರುಗಾಣಿಸಲಿ" ಇಲ್ಲಿ ಭುಜಂಗ ಕುಂಡಲೀ ಮೊದಲಾದವು ಪುನರುಕ್ತವಾದಂತೆ ಕಾಣುತ್ತವೆ; ಆದರೆ ಕೊನೆಗೆ ಅವು ತಮ್ಮದೇ ಆದ ಬೇರೊಂದು ಅರ್ಥವನ್ನು ತಿಳಿಸುತ್ತವೆ. ಸರ್ಪವೇ ಕರ್ಣಾಭಾರಣವೆನಿಸಿರುವ ಶಿವನಿಗೆ ಆ ಪದಗಳು ಅನ್ವಯಿಸಿ ಆ ಅರ್ಥವನ್ನು ಬೋಧಿಸುತ್ತವೆ. 'ಪಾಯಾದವ್ಯಾತ್' ಎಂಬಲ್ಲಿ ಪುನರುಕ್ತವದಾಭಾಸವೆಂಬ ಅಲಂಕಾರವು ಕ್ರಿಯಾಪದದ ಅರ್ಥದಿಂದ ತಿಳಿದುಬರುತ್ತದೆ. ಪಾಯಾತ್ ಎಂಬುದಕ್ಕೆ ಹಿಂದಿನ ಅಕಾರವು ಸದಾ ಎಂಬ ಶಬ್ದದೊಡನೆ ಸಂಧಿಯಲ್ಲಿ ಸೇರಿಕೊಂಡಿರುವುದರಿಂದ ಸದಾಽಪಾಯಾತ್ ಎಂಬಲ್ಲಿ ಅಕಾರಕ್ಕೆ ಅವಗ್ರಹವೆಂಬ ಚಿಹ್ನೆಯನ್ನು ಹಾಕಿರುವ ಪ್ರಯುಕ್ತ

ಪಾಯೊತ್ ಎಂಬ ಶಬ್ದವು ಅಪಾಯಾತ್ ಎಂಬುದರಲ್ಲಿ ಕೊನೆಯಾಗುತ್ತದೆ. ಇದರಿಂದ ಈ ಶಬ್ದವು ಬೇರೆ ಅರ್ಥವನ್ನು ಕೊಡುವುದಾಗಿ ತಿಳಿದುಬರುತ್ತದೆ. ಹಾಗಾದರೆ ಇದು ಶಬ್ದಾರ್ಥಗಳೆರಡರ ಅಲಂಕಾರವೆಂಬುದು ಹೇಗೆ ಹೊಂದುತ್ತದೆ? ಭುಜಂಗ ಕುಂಡಲೀ ಎಂಬ ಶಬ್ದಗಳಲ್ಲಿ ಮೊದಲನೆಯದು ಬದಲಾವಣೆಯಾಗಬಲ್ಲುದು. ಸರ್ಪವೆಂಬ ಅರ್ಥವನ್ನು ಕೊಡುವ ಬೇರೆ ಶಬ್ದವನ್ನು ಪ್ರಯೋಗಿಸಿದರೂ ಪುನರುಕ್ತವದಾಭಾಸವಿದ್ದೇ ಇರುತ್ತದೆ. ಹರಃ ಶಿವಃ ಎಂಬಲ್ಲಿ ಎರಡನೆಯ ಶಿವಶಬ್ದವನ್ನು ಬದಲಾಯಿಸಬಹುದೇ ಹೊರತು ಮೊದಲನೆಯ ಹರಶಬ್ದವನ್ನು ಬದಲಾಯಿಸಲಾಗುವುದಿಲ್ಲ. ಆದ್ದರಿಂದ ಶಿವ ಎಂಬ ಅಂಶದಲ್ಲಿ ಅರ್ಥದಿಂದಲೂ ಹರ ಎಂಬ ಅಂಶದಲ್ಲಿ ಶಬ್ದದಿಂದಲೂ ಪುನರುಕ್ತವದಾಭಾಸವುಂಟೆಂದು ತಿಳಿಯಬೇಕು. ಶಶಿಶುಭ್ರಾಂಶು ಎಂಬಲ್ಲಿ ಎರಡನೂ ಬದಲಾಯಿಸಬಹುದು. ಭಾತಿ ಸದಾನತ್ಯಾಗಃ 'ಎಂದಿಗೂ ಬಗ್ಗದೆ ಪರ್ವತವು ಶೋಭಿಸುತ್ತದೆ' ಎಂಬಲ್ಲಿ ದಾನತ್ಯಾಗಗಳ ಅರ್ಥವು ಪುನರುಕ್ತನೆನಿಸಿದರೂ ಹೇಳುವವನ ಇಚ್ಛೆಯಂತೆ ಕೊನೆಗೆ ಬೇರೆ ಅರ್ಥವನ್ನು ಅದು ತಿಳಿಸುವುದರಿಂದ ಇದು ಪುನರುಕ್ತವದಾಭಾಸವೆನಿಸುತ್ತದೆ. ಇಲ್ಲಿ ಕಾಣುವ ಈ ಎರಡು ಶಬ್ದಗಳೂ ಹಾಗೆಯೇ ಇರಬೇಕೇ ಹೊರತು ಅವುಗಳಲ್ಲಿ ಯಾವುದನ್ನೂ ಬದಲಾಯಿಸುವಂತಿಲ್ಲ. ಹೀಗೆ ಇದರಲ್ಲಿ ಕೆಲವು ವೇಳೆ ಶಬ್ದಗಳನ್ನು ಬದಲಾಯಿಸಬಹುದಾದ್ದರಿಂದ ಈ ಅಲಂಕಾರವು ಅರ್ಥಕ್ಕೆ ಸಂಬಂಧಿಸಿದಂತೆ ಶಬ್ದಕ್ಕೂ ಅನ್ವಯಿಸುತ್ತದೆ.

ಶಬ್ದಾಲಂಕಾರಗಳಲ್ಲಿ ಅತಿಪ್ರಸಿದ್ಧವೆನಿಸಿದ್ದರಿಂದ ಅನುಪ್ರಾಸವನ್ನೇ ಮೊದಲೇ ತಿಳಿಸುತ್ತಾನೆ. ಸ್ವರದಲ್ಲಿ ಸಾಮ್ಯವೈಷಮ್ಯಗಳಿದ್ದರೂ ವ್ಯಂಜನವರ್ಣಗಳಲ್ಲಿ ಮಾತ್ರ ಸಾಮ್ಯವಿದ್ದರೆ ಆ ಸಾಮ್ಯವು ಅನುಪ್ರಾಸವೆನಿಸುತ್ತದೆ. ತಾಲವ್ಯವೇ ಮೊದಲಾದ ವ್ಯಂಜನವರ್ಣಗಳನ್ನು ಮತ್ತೆ ಉಚ್ಚರಿಸುವುದೇ ಅನುಪ್ರಾಸವೆನಿಸುವುದು. ಸ್ವರದಲ್ಲಿ ಸಾದೃಶ್ಯವಿರುವುದಕ್ಕೆ ಯಾವ ಬಗೆಯ ಚಮತ್ಕಾರವೂ ಇಲ್ಲದ್ದರಿಂದ ಅದನ್ನು ಇಲ್ಲಿ ಗಮನಿಸಿಲ್ಲ. ರಸಪ್ರಕಾಶಕ್ಕೆ ಅನುಕೂಲವಾಗಿ ಪದಗಳನ್ನು ಪ್ರಯೋಗಿಸುವುದೇ ಅನುಪ್ರಾಸವೆನಿಸಿದೆ. ಆದ್ದರಿಂದ ವ್ಯಂಜನಗಳಲ್ಲಿ ಸಾಮ್ಯವು ಇಲ್ಲಿ ಆವಶ್ಯಕವೇ ಹೊರತು ಸ್ವರಗಳ ಸಾಮ್ಯವು ಆವಶ್ಯಕವೆನಿಸಿಲ್ಲ. ವ್ಯಂಜನಗಳ ಸಮೂಹದಲ್ಲಿ ಒಂದೇಬಾರಿಗೆ ಅನೇಕ ಬಗೆಗಳಿಂದ ಸಾದೃಶ್ಯವು ತೋರುವುದೇ ಛೇಕಾನುಪ್ರಾಸವೆನಿಸುವುದು. ಒಂದು ಕ್ರಮದಿಂದ ಸೇರಿರುವ ಅನೇಕ ವ್ಯಂಜನವರ್ಣಗಳಿಗೆ ಒಂದೇ ಬಗೆಯ ಆಕಾರವಿದ್ದು ಒಂದು ಸಾರಿ ಮಾತ್ರವೇ ತೋರುವ ಸಾದೃಶ್ಯವು ಛೇಕಾನುಪ್ರಾಸವೆನಿಸುತ್ತದೆ. ಭೀಮಸೇನ ಶಬ್ದದಲ್ಲಿ ಭೀಮ ಎಂಬುದನ್ನು ಮಾತ್ರವೇ ಪ್ರಯೋಗಿಸುವಂತೆ ಛೇಕಾನುಪ್ರಾಸವೆಂಬುದಕ್ಕೆ ಛೇಕ ಎಂಬುದನ್ನು ಮಾತ್ರವೇ ಕಾರಿಕೆಯಲ್ಲಿ ಪ್ರಯೋಗಿಸಲಾಗಿದೆ. ಅನೇಕಧಾ ಎಂಬುದು ಸ್ವರೂಪದಿಂದ ವರ್ಣಗಳಿಗೆ ಒಂದೇ ಬಗೆಯ ಆಕೃತಿ ಇದ್ದು ಕ್ರಮದಲ್ಲಿ ಬದಲಾವಣೆಯಾಗಿರಬೇಕೆಂಬುದನ್ನು ತಿಳಿಸುತ್ತದೆ. ರಸಃ ಸರಃ ಎಂಬಲ್ಲಿ ಸಕಾರ ರಕಾರಗಳಿಗೆ ಕ್ರಮಭೇದವಿದ್ದರೂ ಒಂದೇ ಬಗೆಯ ಆಕಾರವಿಲ್ಲದ್ದರಿಂದ ಇದು

ಛೇಕಾನುಪ್ರಾಸಕ್ಕೆ ಉದಾಹರಣವಾಗುವಂತಿಲ್ಲ. ಆದ ಪ್ರಯುಕ್ತ ಕ್ರಮಭೇದದಿಂದ ತೋರುವ ವ್ಯಂಜನಸಾಮ್ಯವು ಈ ಅಲಂಕಾರಕ್ಕೆ ವಿಷಯವಾಗುವುದಿಲ್ಲ. "ಬಕುಲ ಪುಷ್ಪಗಳ ಸುಗಂಧವನ್ನು ಹೊತ್ತು, ಹೆಜ್ಜೆಹೆಜ್ಜೆಗೂ ದುಂಬಿಗಳನ್ನು ಮದಿಸುವಂತೆ ಮಾಡುತ್ತ ಕಾವೇರೀನದಿಯ ನೀರಿನಿಂದ ಶುದ್ಧವಾದ ಈ ಗಾಳಿಯು ಮೆಲ್ಲಮೆಲ್ಲಗೆ ಬೀಸುತ್ತಿದೆ" ಇಲ್ಲಿ 'ಗಂಧಾನಂಧೀ' ಎಂಬಲ್ಲಿ ಸಂಯುಕ್ತವ್ಯಂಜನಗಳಿಗೂ 'ಕಾವೇರೀ ವಾರಿ" ಎಂಬಲ್ಲಿ ಅಸಂಯುಕ್ತವ್ಯಂಜನಗಳಿಗೂ 'ಪಾವನಃ ಪವನಃ' ಎಂಬಲ್ಲಿ ಅನೇಕ ವ್ಯಂಜನಗಳಿಗೂ ಒಮ್ಮೆ ಆವೃತ್ತಿ ಇರುವುದರಿಂದ ಇದು ಛೇಕಾನುಪ್ರಾಸವೆನಿಸಿದೆ. ವ್ಯಂಜನಗಳನ್ನು ಒಂದುವೇಳೆ ಮಾತ್ರ ಮತ್ತೊಮ್ಮೆ ಇಲ್ಲಿ ಪ್ರಯೋಗಿಸಲಾಗಿದೆ. ಛೇಕ ಎಂದರೆ ನಿಪುಣರಾದ ಜನರೆಂದು ಅರ್ಥ. ಅಂತವರು ಅನೇಕ ವರ್ಣಗಳನ್ನು ಮತ್ತೊಮ್ಮೆ ಪ್ರಯೋಗಿಸುವುದರಿಂದ ಈ ಬಗೆಯ ಪ್ರಯೋಗವು ಛೇಕಾನುಪ್ರಾಸವೆನಿಸಿದೆ.

ಈಗ ವೃತ್ತ್ಯನುಪ್ರಾಸವನ್ನು ವಿವರಿಸುತ್ತಾನೆ. ಅನೇಕ ವ್ಯಂಜನವರ್ಣಗಳಿಗೆ ಒಂದೇ ಸಾರಿ ಸ್ವರೂಪದಿಂದಲೇ ಸಾಮ್ಯವಿದ್ದರೂ ಅಥವಾ ಬಾರಿಬಾರಿಗೂ ಅನೇಕ ಬಗೆಗಳಲ್ಲಿ ಸಾಮ್ಯವಿದ್ದರೂ ಅದು ವೃತ್ತ್ಯನುಪ್ರಾಸವೆನಿಸುವುದು. ಒಂದೇ ವ್ಯಂಜನವರ್ಣ ವನ್ನು ಮತ್ತೊಂದುವೇಳೆ ಪ್ರಯೋಗಿಸಿದರೂ ಅದು ವೃತ್ತ್ಯನುಪ್ರಾಸವೇ ಆಗುತ್ತದೆ. ಅನೇಕವರ್ಣಗಳನ್ನು ಒಂದುಸಾರಿ ಸ್ವರೂಪದಿಂದ ಉಚ್ಚರಿಸಬೇಕೇ ಹೊರತು ಕ್ರಮ ದಲ್ಲಿ ಉಚ್ಚರಿಸಬಾರದು. ಅನೇಕ ಸಾರಿ ವರ್ಣಗಳನ್ನು ಪ್ರಯೋಗಿಸುವ ಕಡೆ ಸ್ವರೂಪ ದಿಂದಲೂ ಕ್ರಮದಿಂದಲೂ ಪ್ರಯೋಗಿಸಬಹುದು. ಸಕೃದಪಿ ಎಂಬಲ್ಲಿ ಅಪಿ ಶಬ್ದದಿಂದ ಒಂದು ವ್ಯಂಜನವರ್ಣವನ್ನು ಒಂದು ಸಾರಿಯಂತೆ ಅನೇಕ ಸಾರಿಯೂ ಪ್ರಯೋಗಿಸ ಬಹುದೆಂದು ತಿಳಿದುಬರುತ್ತದೆ. "ಪರದೇಶಗಳಲ್ಲಿ ಸಂಚರಿಸುವ ಪ್ರಣಯಿಗಳು ತಮ್ಮ ಪ್ರಾಣಕ್ಕೆ ಸಮಾನವೆನಿಸಿದ ಪ್ರೇಯಸಿಯರನ್ನು ಮನಸ್ಸಿನಲ್ಲಿ ನೆನಸಿಕೊಂಡಕಾಲದಲ್ಲಿ ಆನಂದವನ್ನು ಅನುಭವಿಸುತ್ತಲೂ, ಎಲ್ಲೆಡೆಯಲ್ಲೂ ವ್ಯಾಪಿಸಿದ ಕುಸುಮರಸದ ಸುಗಂಧದಲ್ಲಿ ಆಸಕ್ತವಾಗಿದ್ದ ದುಂಬಿಗಳಿಂದ ಅಳ್ಳಾಡುತ್ತಿರುವ ಮಾವಿನ ಚಿಗುರು ಗಳಲ್ಲಿ ವಿಹರಿಸುತ್ತಿರುವ ಕೋಗಿಲೆಗಳ ಕೋಲಾಹಲಗಳನ್ನು ಕೇಳಿ ಕಿವಿಗಳಲ್ಲಿ ಸಂತಾಪ ಪಡುತ್ತಲೂ ಬಹಳ ಕಷ್ಟದಿಂದ ದಿನಸಗಳನ್ನು ಕಳೆಯುತ್ತಿರುವರು." ಇಲ್ಲಿ 'ರಸೋ ಲ್ಲಾಸೈರಮೀ' ಎಂಬಲ್ಲಿ ರಕಾರಸಕಾರಗಳಿಗೆ ಸ್ವರೂಪದಿಂದಲೇ ಒಂದೇ ಸಾರಿ ಆವೃತ್ತಿ ರೂಪವಾದ ಸಾಮ್ಯವಿದೆ. ರಸೋ ಎಂಬಲ್ಲಿ ರೇಫವು ಮೊದಲು ಬಂದಿದ್ದು 'ಸ್ವರಃ' ಎಂಬಲ್ಲಿ ಎರಡನೆಯ ಅಕ್ಷರವೆನಿಸಿದೆ. ಆದ್ದರಿಂದಲೇ ಇಲ್ಲಿ ವೃತ್ತ್ಯನುಪ್ರಾಸದ ಮೊದಲ ನೆಯ ಲಕ್ಷಣವು ಅನ್ವಯಿಸುತ್ತದೆ. ಎರಡನೆಯ ಪಾದದಲ್ಲಿ ವಾಸರಾಃ ಎಂಬಲ್ಲಿ ಸರಾ ಎಂಬ ಅಂಶವನ್ನು ತೆಗೆದುಕೊಂಡು 'ರಸೋ' ಎಂಬುದರೊಡನೆ ಒಂದೇ ಸಾರಿ ಅನೇಕ ವೇಳೆ ಸಾಮ್ಯವಿರುವುದರಿಂದ ಇಲ್ಲಿ ಎರಡನೆಯ ಲಕ್ಷಣವು ಅನ್ವಯಿಸುತ್ತದೆ. ಹಾಗೆಯೇ ಕಕಾರಲಕಾರಗಳಿಗೂ ಅದೇ ಕ್ರಮದಿಂದಲೂ ಸ್ವರೂಪದಿಂದಲೂ ಅನೇಕವೇಳೆ ಸಾಮ್ಯ ವಿದೆ. ಆದ್ದರಿಂದ ಇಲ್ಲಿ ಮೂರನೆಯ ಲಕ್ಷಣವು ಅನ್ವಯಿಸುತ್ತದೆ. ಪ್ರಥಮಪಾದ

ದಲ್ಲಿ ಒಂದು ಮಕಾರವನ್ನು ಒಂದು ಸಾರಿ ಆವರ್ತಿಸಿರುವುದರಿಂದ ನಾಲ್ಕನೆಯ ಲಕ್ಷಣವು ಅನ್ವಯಿಸುತ್ತದೆ. ಹಾಗೆಯೇ ಥಕಾರವನ್ನು ಅನೇಕಸಾರಿ ಆವರ್ತಿಸಿರುವುದರಿಂದ ಐದನೆಯ ಲಕ್ಷಣವು ಅನ್ವಯಿಸುತ್ತದೆ. ಉದ್ಗೀರ್ಣ ಕರ್ಣ ಎಂಬಲ್ಲಿ ಮಾತ್ರ ಛೇಕಾನುಪ್ರಾಸವೇ ಇದೆ. ಸಮಾ ಸಮಾ ಎಂಬಲ್ಲಿಯಾದರೋ ಯಮಕಾಲಂಕಾರವೇ ಇರುವುದೆಂದು ತಿಳಿಯಬೇಕು. ರಸಪುಷ್ಟಿಗೆ ಬೇಕಾದ ವೈದರ್ಭೀ, ಗೌಡೀ, ಪಾಂಚಾಲೀ ಲಾಟೀ ಎಂಬ ರೀತಿಗಳಲ್ಲಿ ವರ್ಣಗಳನ್ನು ಜೋಡಿಸುವುದೇ ವೃತ್ತಿ ಎನಿಸುವುದು. ಅದಕ್ಕೆ ಅನುಗುಣವಾಗಿ ವ್ಯಂಜನವರ್ಣವನ್ನು ಜೋಡಿಸಿರುವುದರಿಂದ ಈ ಅಲಂಕಾರಕೆ ವೃತ್ತ್ಯನುಪ್ರಾಸವೆಂಬ ಹೆಸರು ಯುಕ್ತವೆನಿಸಿದೆ.

ಉಚ್ಚಾರ್ಯತ್ವಾದ್ಯದೇಕತ್ರ ಸ್ಥಾನೇ ತಾಲುರದಾದಿಕೇ ।
ಸಾದೃಶ್ಯಂ ವ್ಯಂಜನಸ್ಯೈವ ಶ್ರುತ್ಯನುಪ್ರಾಸ ಉಚ್ಯತೇ ॥

ಉದಾಹರಣಮ್—ದೃಶಾ ದಗ್ಧಂ ಮನಸಿಜಂ ಜೀವಯಂತಿ ದೃಶೈವ ಯಾಃ ।
ವಿರೂಪಾಕ್ಷಸ್ಯ ಜಯಿನೀಸ್ತಾಃ ಸ್ತುಮೋ ವಾಮಲೋಚನಾಃ ॥

ಅತ್ರ 'ಜೀವಯಂತಿ' ಇತಿ, 'ಯಾಃ' ಇತಿ, 'ಜಯಿನೀಃ' ಇತಿ ಜಕಾರಯಕಾರಯೋರೇಕತ್ರ ಸ್ಥಾನೇ ತಾಲೌ ಉಚ್ಚಾರ್ಯತ್ವಾತ್ ಸಾದೃಶ್ಯಮ್. ಏವಂ ದಂತ್ಯಕಂಠ್ಯಾನಾಮಪ್ಯುದಾಹಾರ್ಯಮ್.

ಏಷ ಚ ಸಹೃದಯಾನಾಮತೀವ ಶ್ರುತಿಸುಖಾವಹತ್ವಾತ್ ಶ್ರುತ್ಯನುಪ್ರಾಸಃ.

ವ್ಯಂಜನಂ ಚೇದ್ಯಥಾವಸ್ಥಂ ಸಹಾದ್ಯೇನ ಸ್ವರೇಣ ತು ।
ಆವರ್ತ್ಯತೇಽಂತ್ಯಯೋಜ್ಯತ್ವಾದಂತ್ಯಾನುಪ್ರಾಸ ಏವ ತತ್ ॥

'ಯಥಾವಸ್ಥಮ್' ಇತಿ ಯಥಾಸಂಭವಮನುಸ್ವಾರವಿಸರ್ಗಸ್ವರಸಂಯುಕ್ತಾಕ್ಷರವಿಶಿಷ್ಟಮ್. ಏಷ ಚ ಪ್ರಾಯೇಣ ಪಾದಸ್ಯ ಪದಸ್ಯ ಚ ಅಂತೇ ಪ್ರಯೋಜ್ಯಃ. ಪಾದಾಂತಗೋ ಯಥಾ ಮಮ—

ಕೇಶಃ ಕಾಶಸ್ತವಕವಿಕಾಸಃ ಕಾಯಃ ಪ್ರಕಟಿತಕರಭವಿಲಾಸಃ ।
ಚಕ್ಷುರ್ದಗ್ಧವರಾಟಕಕಲ್ಪಂ ತ್ಯಜತಿ ನ ಚೇತಃ ಕಾಮಮನಲ್ಪಮ್ ॥

ಪದಾಂತಗೋ ಯಥಾ–'ಮಂದಂ ಹಸಂತಃ ಪುಲಕಂ ವಹಂತಃ' ಇತ್ಯಾದಿ.

ಶಬ್ದಾರ್ಥಯೋಃ ಪೌನರುಕ್ತ್ಯಂ ಭೇದೇ ತಾತ್ಪರ್ಯಮಾತ್ರತಃ ।
ಲಾಟಾನುಪ್ರಾಸ ಇತ್ಯುಕ್ತೋಽನುಪ್ರಾಸಃ ಪಂಚಧಾ ಮತಃ ॥

ಉದಾಹರಣಮ್—ಸ್ಮೇರರಾಜೀವನಯನೇ ! ನಯನೇ ಕಿಂ ನಿಮೀಲಿತೇ ।
ಪಶ್ಯ ನಿರ್ಜಿತಕಂದರ್ಪಂ ಕಂದರ್ಪವಶಗಂ ಪ್ರಿಯಮ್ ॥

ಅತ್ರ ವಿಭಕ್ತ್ಯರ್ಥಸ್ಯ ಅಪೌನರುಕ್ತ್ಯೇಽಪಿ ಮುಖ್ಯತರಸ್ಯ ಪ್ರಾತಿಪದಿಕಾಂಶದ್ಯೋತ್ಯಧರ್ಮಿರೂಪಸ್ಯ ಅಭಿನ್ನಾರ್ಥತ್ವಾತ್ ಲಾಟಾನುಪ್ರಾಸತ್ವಮೇವ. "ನಯನೇ ತಸ್ಯೈವ ನಯನೇ ಚ" ಅತ್ರ ದ್ವಿತೀಯನಯನಶಬ್ದೋ ಭಾಗ್ಯವತ್ತ್ವಾದಿಗುಣವಿಶಿಷ್ಟತ್ವರೂಪತಾತ್ಪರ್ಯಮಾತ್ರೇಣ ಭಿನ್ನಾರ್ಥಃ. ಯಥಾ ವಾ—

ಯಸ್ಯ ನ ಸವಿಧೇ ದಯಿತಾ ದವದಹನಸ್ತುಹಿನದೀಧಿತಿಸ್ತಸ್ಯ ।
ಯಸ್ಯ ಚ ಸವಿಧೇ ದಯಿತಾ ದವದಹನಸ್ತುಹಿನದೀಧಿತಿಸ್ತಸ್ಯ ॥

ಅತ್ರ ಅನೇಕಪದಾನಾಂ ಪೌನರುಕ್ತ್ಯಮ್.

ಏಷ ಚ ಪ್ರಾಯೇಣ ಲಾಟಜನಪ್ರಿಯತ್ವಾಲ್ಲಾಟಾನುಪ್ರಾಸಃ.

ಸತ್ಯರ್ಥೇ ಪೃಥಗರ್ಥಾಯಾಃ ಸ್ವರವ್ಯಂಜನಸಂಹತೇಃ ।
ಕ್ರಮೇಣ ತೇನೈವಾವೃತ್ತಿರ್ಯಮಕಂ ವಿನಿಗದ್ಯತೇ ॥

ಅತ್ರ ದ್ವಯೋರಪಿ ಪದಯೋಃ ಕ್ವಚಿತ್ಸಾರ್ಥಕತ್ವಂ ಕ್ವಚಿನ್ನಿರರ್ಥಕತ್ವಮ್, ಕ್ವಚಿದೇಕಸ್ಯ ಸಾರ್ಥಕತ್ವಮಪರಸ್ಯ ನಿರರ್ಥಕತ್ವಮ್. ಅತ ಉಕ್ತಂ ಸತ್ಯರ್ಥೇ ಇತಿ. ತೇನೈವ ಕ್ರಮೇಣೇತಿ 'ದಮೋ ಮೋದಃ' ಇತ್ಯಾದೇರ್ವಿವಿಕ್ತವಿಷಯತ್ವಂ ಸೂಚಿತಮ್. ಏತಚ್ಚ ಪದಪಾದಾರ್ಧಶ್ಲೋಕವೃತ್ತಿತ್ವೇನ ಪದಾದ್ಯಾವೃತ್ತೇಶ್ಚ ಅನೇಕವಿಧತಯಾ ಪ್ರಭೂತತಮಭೇದಮ್. ದಿಙ್ಮಾತ್ರಮುದಾಹ್ರಿಯತೇ—

ನವಪಲಾಶಪಲಾಶವನಂ ಪುರಃ ಸ್ಫುಟಪರಾಗಪರಾಗತಪಂಕಜಮ್ ।
ಮೃದುಲತಾಂತಲತಾಂತಮಲೋಕಯತ್ಸ ಸುರಭಿಂ ಸುರಭಿಂ ಸುಮನೋಭರೈಃ ॥

ಅತ್ರ ಪದಾವೃತ್ತಿಃ ಪಲಾಶಪಲಾಶ ಇತಿ. 'ಸುರಭಿಂ ಸುರಭಿಮ್' ಇತ್ಯತ್ರ ಚ ದ್ವಯೋಃ ಸಾರ್ಥಕತ್ವಮ್. ಲತಾಂತಲತಾಂತ ಇತ್ಯತ್ರ ಪ್ರಥಮಸ್ಯ ನಿರರ್ಥಕತ್ವಮ್. 'ಪರಾಗಪರಾಗ' ಇತ್ಯತ್ರ ದ್ವಿತೀಯಸ್ಯ. ಏವಮನ್ಯದಪ್ಯುದಾಹಾರ್ಯಮ್. 'ಯಮಕಾದೌ ಭವೇದೈಕ್ಯಂ ಡಲೋರ್ಬವೋರ್ಲರೋಸ್ತಥಾ' ಇತ್ಯುಕ್ತನಯಾತ್ 'ಭುಜಲತಾಂ ಜಡತಾಮಬಲಾಜನಃ' ಇತ್ಯತ್ರ ನ ಯಮಕತ್ವಹಾನಿಃ.

ಅನ್ಯಸ್ಯಾನ್ಯಾರ್ಥಕಂ ವಾಕ್ಯಮನ್ಯದಾ ಯೋಜಯೇದ್ಯದಿ ।
ಅನ್ಯಃ ಶ್ಲೇಷೇಣ ಕಾಕ್ವಾ ವಾ ಸಾ ವಕ್ರೋಕ್ತಿಸ್ತತೋ ದ್ವಿಧಾ ॥

ದ್ವಿಧೇತಿ ಶ್ಲೇಷವಕ್ರೋಕ್ತಿಃ ಕಾಕುವಕ್ರೋಕ್ತಿಶ್ಚ. ಕ್ರಮೇಣೋದಾಹರಣಮ್.

ಕೇ ಯೂಯಮ್ ? ಸ್ಥಲ ಏವ ಸಂಪ್ರತಿ ವಯಂ, ಪ್ರಶ್ನೋ ವಿಶೇಷಾಶ್ರಯಃ
ಕಿಂ ಬ್ರೂತೇ ವಿಹಗಃ ? ಸ ವಾ ಫಣಿಪತಿರ್ಯತ್ರಾಸ್ತಿ ಸುಪ್ತೋ ಹರಿಃ
ವಾಮಾ ಯೂಯಂ, ಅಹೋ ವಿಡಂಬರಸಿಕಃ ಕೀದೃಕ್ಸ್ಮರೋ ವರ್ತತೇ ?
ಯೇನಾಸ್ಮಾಸು ವಿವೇಕಶೂನ್ಯಮನಸಃ ಪುಂಸ್ವೇವ ಯೋಷಿದ್ಭ್ರಮಃ ॥

ಅತ್ರ ವಿಶೇಷಪದಸ್ಯ 'ವಿಃ ಪಕ್ಷೀ, ಶೇಷೋ ನಾಗಃ' ಇತ್ಯರ್ಥದ್ವಯಯೋಗಾತ್ ಸಭಂಗಶ್ಲೇಷಃ. ಅನ್ಯತ್ರ ತ್ವಭಂಗಃ.

ಕಾಲೇ ಕೋಕಿಲವಾಚಾಲೇ ಸಹಕಾರಮನೋಹರೇ ।
ಕೃತಾಗಸಃ ಪರಿತ್ಯಾಗಾತ್ ತಸ್ಯಾಶ್ಚೇತೋ ನ ದೂಯತೇಃ ॥

ಅತ್ರ ಕಯಾಚಿತ್ಸಖ್ಯಾ ನಿಷೇಧಾರ್ಥೇ ನಿಯುಕ್ತೋ ನಞ್, ಅನ್ಯಥಾ ಕಾಕ್ವಾ ದೂಯತ ಏವೇತಿ ವಿಧ್ಯರ್ಥೇ ಘಟಿತಃ.

ಶಬ್ದೈರೇಕವಿಧೈರೇವ ಭಾಷಾಸು ವಿವಿಧಾಸ್ವಪಿ।
ವಾಕ್ಯಂ ಯತ್ರ ಭವೇತ್ಸೋಽಯಂ ಭಾಷಾಸಮ ಇತೀಷ್ಯತೇ ॥
ಯಥಾ ಮಮ—ಮಂಜುಲಮಣಿಮಂಜೀರೇ ಕಲಗಂಭೀರೇ ವಿಹಾರಸರಸೀತೀರೇ।
ವಿರಸಾಸಿ ಕೇಲಿಕೀರೇ ಕಿಮಾಲಿ! ಧೀರೇ ಚ ಗಂಧಸಾರಸಮೀರೇ ॥

ಏಷ ಶ್ಲೋಕಃ ಸಂಸ್ಕೃತಪ್ರಾಕೃತ ಶೌರಸೇನೀಪ್ರಾಚ್ಯಾವಂತೀನಾಗರಾಪಭ್ರಂಶೇಷು ಏಕವಿಧ ಏವ. 'ಸರಸಂ ಕವೇಃ ಕಾವ್ಯಮ್' ಇತ್ಯಾದೌ ತು 'ಸರಸಮ್' ಇತ್ಯತ್ರ ಸಂಸ್ಕೃತಪ್ರಾಕೃತಯೋಃ ಸಾಮ್ಯೇಽಪಿ ವಾಕ್ಯಗತತ್ವಾಭಾವೇ ವೈಚಿತ್ರ್ಯಾಭಾವಾನ್ನಾಯಮಲಂಕಾರಃ.

ವ್ಯಂಜನವರ್ಣವನ್ನು ದವಡೆ, ಹಲ್ಲು ಮೊದಲಾದ ಸ್ಥಾನಗಳಲ್ಲಿ ಯಾವುದಾದರೊಂದು ಕಡೆ ಉಚ್ಚರಿಸುವುದರಿಂದ ಅದಕ್ಕೆ ಪುನರಾವೃತ್ತಿರೂಪವಾದ ಸಾದೃಶ್ಯವುಂಟಾಗುವ ಪ್ರಯುಕ್ತ ಅದು ಶ್ರುತ್ಯನುಪ್ರಾಸವೆನಿಸುತ್ತದೆ. 'ದೃಶಾ ದಗ್ಧಂ ಮನಸಿಜಂ' ಎಂಬ ಪದ್ಯದಲ್ಲಿ ಜೀವಯಂತಿ, ಯಾಃ, ಜಯಸೀಃ ಎಂದು ಜಕಾರಯಕಾರಗಳನ್ನು ಒಂದೇ ತಾಲುಸ್ಥಾನದಲ್ಲಿ ಉಚ್ಚರಿಸಬೇಕಾಗಿರುವುದರಿಂದ ಅವಕ್ಕೆ ಸಾದೃಶ್ಯವಿದೆ. ಹೀಗೆಯೇ ದಂತ್ಯಕಂಠ್ಯ ವರ್ಣಗಳಿಗೂ ಸಾದೃಶ್ಯವಿದ್ದರೂ ವೃತ್ತ್ಯನುಪ್ರಾಸವಾಗುತ್ತದೆ. ಇದು ಸಹೃದಯರಿಗೆ ಕೇಳಲಿಕ್ಕೆ ಕಿವಿಗಳಿಗೆ ಹೆಚ್ಚು ಹಿತವಾಗಿರುವುದರಿಂದ ಇದು ಶ್ರುತ್ಯನುಪ್ರಾಸವೆನಿಸುತ್ತದೆ.

ಈಗ ಅಂತ್ಯಾನುಪ್ರಾಸವನ್ನು ವಿವರಿಸುತ್ತಾನೆ. ತನ್ನ ಹಿಂದಿನ ಅವಸ್ಥೆಯಲ್ಲಿಯೇ ಇರುವ ಒಂದು ವ್ಯಂಜನವರ್ಣವನ್ನು ಮೊದಲೇ ಉಚ್ಚರಿಸಿದ್ದ ಸ್ವರದೊಡನೆ ಮತ್ತೆ ಉಚ್ಚರಿಸುವುದಾದರೆ ಅದು ಅಂತ್ಯಾನುಪ್ರಾಸವೆನಿಸುವುದು. ಇದನ್ನು ಪಾದದ ಕೊನೆಯಲ್ಲಿಯೇ ಪ್ರಯೋಗಿಸಬೇಕು. ಯಥಾವಸ್ಥಂ ಎಂಬುದರಿಂದ ಅನುಸ್ವಾರ, ವಿಸರ್ಗ, ಸ್ವರ, ಸಂಯುಕ್ತಾಕ್ಷರಗಳೊಡನೆ ಸೇರಿದ ವ್ಯಂಜನವನ್ನೇ ಆಯಾ ಪರಿಸ್ಥಿತಿಗನುಗುಣವಾಗಿ ಪರಿಗ್ರಹಿಸಬೇಕು. ಇದನ್ನು ಸಾಮಾನ್ಯವಾಗಿ ಪದದ ಕೊನೆಯಲ್ಲಿಯೇ ಪ್ರಯೋಗಿಸಬೇಕೆಂದು ತಿಳಿಯಬೇಕು. ಪಾದದ ಕೊನೆಯಲ್ಲಿ ಬರುವ ಅನುಪ್ರಾಸವನ್ನು ಉದಾಹರಿಸುತ್ತಾನೆ. ಮುದುಕನಾಗಿದ್ದರೂ ಅತ್ಯಂತ ವಿಷಯಾಸಕ್ತನಾಗಿರುವವನೊಬ್ಬನನ್ನು ಮತ್ತೊಬ್ಬನು ನಿಂದಿಸುವ ಈ ಪದ್ಯದಲ್ಲಿ ಈ ಬಗೆಯ ಅನುಪ್ರಾಸವನ್ನು ಕಾಣಬಹುದು. "ಕೂದಲು ಕಾಶಪುಷ್ಪದ ಗೊಂಚಲಿನಂತೆ ಪ್ರಕಾಶಿಸುತ್ತಿದೆ. (ಬೆಳ್ಳಗಾಗಿದೆ) ದೇಹವು ಒಂಟೆಯುಮರಿಯ ವಿಲಾಸದಂತೆ ಕುಗ್ಗಿ ಹೋಗಿದೆ. ಕಣ್ಣು ಸುಟ್ಟ ಕೂದಲಿನಂತೆ ಇದೆ. ಆದರೂ ಮನಸ್ಸು ಹೆಚ್ಚಿನ ಕಾಮವಿಕಾರವನ್ನು ತೊರೆದಿಲ್ಲ" ಇಲ್ಲಿ ಪ್ರಥಮ ಪಾದದ ಕೊನೆಯಲ್ಲಿ ಆಸಃ ಎಂಬುದು ಕಾಸಃ ಲಾಸಃ ಎಂದು ಎರಡು ಕಡೆಗಳಲ್ಲಿ ಬಂದಿದೆ. ಮೂರನೆಯ ಪಾದದ ಕೊನೆಯಲ್ಲಿ ಅಲ್ಪಂ ಎಂಬುದು 'ಕಲ್ಪಮ್ ನಲ್ಪಮ್' ಎಂದು ಎರಡು ಕಡೆಗಳಲ್ಲಿ ಬಂದಿದೆ. ಸಕಾರವೂ, 'ಲ್ಪ' ಎಂಬುದೂ ಹಿಂದಿನ ಸ್ವರ

ದೊಡನೆ ಸೇರಿ ಎರಡುವೇಳೆ ಬಂದಿರುವುದರಿಂದ ಇದು ಶ್ರುತ್ಯನುಪ್ರಾಸವೆನಿಸಿದೆ. ಪದದ ಕೊನೆಯಲ್ಲಿ ಬರುವ ಅನುಪ್ರಾಸವನ್ನು ಮಂದಂಹಂಸತಃ ಪುಲಕಂ ವಹಂತಃ ಎಂಬಲ್ಲಿ ಹಸಂತಃ ವಹಂತಃ ಎಂದು ಎರಡು ಪದಗಳ ಕೊನೆಯಲ್ಲಿ ಅಂತಃ ಎಂಬುದು ಬಂದಿರುವುದರಿಂದ ಇದು ಶ್ರುತ್ಯನುಪ್ರಾಸವೆನಿಸಿದೆ.

ಲಾಟಾನುಪ್ರಾಸವನ್ನು ಈಗ ತಿಳಿಸುತ್ತಾನೆ. ತಾತ್ಪರ್ಯವಷ್ಟರಿಂದಲೇ ಶಬ್ದಾರ್ಥಗಳಿಗೆ ವಕ್ತೃವಿನ ಇಚ್ಛೆಯಂತೆ ಭೇದವಿದ್ದರೂ ಅವೆರಡನ್ನು ಮತ್ತೆ ಪ್ರಯೋಗಿಸುವುದೇ ಲಾಟಾನುಪ್ರಾಸವೆನಿಸುತ್ತದೆ. "ವಿಕಸಿತವಾದ ಕಮಲದಂತೆ ನೇತ್ರವುಳ್ಳವಳೇ! ನೇತ್ರಗಳನ್ನು ಏಕೆ ಮುಚ್ಚಿಕೊಂಡಿರುವೆ. ರೂಪದಿಂದ ಮನ್ಮಥನನ್ನು ಜಯಿಸಿದ್ದು ಕಾಮಬಾಧೆಯಿಂದ ನರಳುತ್ತಿರುವ ಪ್ರಿಯನನ್ನು ನೋಡು" ಇಲ್ಲಿ 'ನಯನೇ ನಯನೇ' ಎಂಬ ಶಬ್ದಾರ್ಥಗಳನ್ನು ಎರಡುವೇಳೆ ಉಚ್ಚರಿಸಿದೆ. ಮೊದಲನೆಯ ಉದಾಹರಣದಲ್ಲಿ ನಯನೇ ಎಂಬುದು ಸಂಬೋಧನಕ್ಕೆ ವಿಷಯವೆನಿಸಿದೆ, ಮತ್ತೊಂದು ನಯನಶಬ್ದವು ಕರ್ಮವೆನಿಸಿದೆ. ಎರಡನೆಯ ಉದಾಹರಣವಲ್ಲಿ ಕಂದರ್ಪಂ ಎಂಬುದು ಪಶ್ಯ ಎಂಬ ಕ್ರಿಯೆಗೆ ಕರ್ಮವೆನಿಸಿದೆ. ಮತ್ತೊಂದು ಕಂದರ್ಪಪದವು ಕ್ರಿಯೆಗೆ ಬೇರೆ ರೀತಿಯಲ್ಲಿ ಸಂಬಂಧಿಸಿದೆ. ಹೀಗೆ ಭೇದವಿದ್ದರೂ ನಯನ ಕಂದರ್ಪ ಎಂಬ ಶಬ್ದಾರ್ಥಗಳಿಗೆ ಪುನರುಕ್ತಿ ಬಂದಿರುವುದರಿಂದ ಇದು ಲಾಟಾನುಪ್ರಾಸವೆನಿಸಿದೆ. ಆದರೆ ನಯನೇ ನಯನೇ ಎಂದು ಪುನರುಕ್ತಿಯಿದ್ದರೂ ಅವೆರಡು ಪದಗಳ ವಿಭಕ್ತ್ಯರ್ಥಗಳಲ್ಲಿ ಭೇದವಿರುವ ಪ್ರಯುಕ್ತ ಪುನರುಕ್ತಿಯು ಹೊಂದದೆ ಇರುವುದರಿಂದ ಇಲ್ಲಿ ಹೇಗೆ ಲಕ್ಷಣವನ್ನು ಅನ್ವಯಿಸಬಹುದೆಂದು ಕೇಳಿದರೆ ಅದಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ಇಲ್ಲಿ ವಿಭಕ್ತ್ಯರ್ಥಗಳಲ್ಲಿ ಭೇದವಿರುವುದು ಸಹಜ. ಆ ಮೂಲಕ ಶಬ್ದಾರ್ಥಗಳಿಗೆ ಪುನರುಕ್ತಿ ಇಲ್ಲದಿದ್ದರೂ ಅದಕ್ಕಿಂತಲೂ ಮುಖ್ಯವೆನಿಸಿದ ಪ್ರಾತಿಕಾಪದಿರ್ಥದಲ್ಲಿ ತೋರುವ ನೇತ್ರವೆಂಬ ಅರ್ಥದಲ್ಲಿ ಅವೆರಡಕ್ಕೂ ಅಭೇದವಿರುವ ಪ್ರಯುಕ್ತ ಇಲ್ಲಿ ಲಾಟಾನುಪ್ರಾಸವನ್ನು ಹೇಳುವುದರಲ್ಲಿ ಔಚಿತ್ಯವಿದೆ. 'ನಯನೇ ತಸ್ಯೈವ ನಯನೇ ಚ' ಎಂಬಲ್ಲಿ ಎರಡನೆಯ ನಯನ ಶಬ್ದವು ಸೌಭಾಗ್ಯವೆಂಬ ಗುಣವುಳ್ಳದ್ದೆಂಬ ಅರ್ಥವನ್ನು ತಿಳಿಸುವುದರಿಂದ ಅದಕ್ಕೆ ಹಿಂದಿನ ನಯನ ಶಬ್ದಕ್ಕಿಂತ ಬೇರೆಯಾದ ಅರ್ಥವನ್ನೇ ಹೇಳಬೇಕಾಗಿದೆ. ಆದ್ದರಿಂದ ಅರ್ಥಾಂತರಸಂಕ್ರಮಿತವಾಚ್ಯಧ್ವನಿ ಇರುವ ಇಂತಹ ಕಡೆಗಳಲ್ಲಿ ಲಾಟಾನುಪ್ರಾಸವನ್ನು ಹೇಳಬೇಕಾಗಿಲ್ಲ. ಅಲ್ಲಿ ಮೊದಲನೆಯ ನಯನಶಬ್ದಕ್ಕೆ ಕಣ್ಣು ಎಂದು ಅರ್ಥ. ಎರಡನೆಯ ನಯನಶಬ್ದಕ್ಕೆ ಭಾಗ್ಯವುಳ್ಳ ಕಣ್ಣು: ಎಂದು ಅರ್ಥ. ಹೀಗೆ ಪ್ರಾತಿಪಾದಿಕಾರ್ಥಗಳಲ್ಲಿಯೇ ಭೇದವಿರುವುದರಿಂದ ಪೌನರುಕ್ತ್ಯವೇ ಇಲ್ಲದ ಪ್ರಯುಕ್ತ ಅಲ್ಲಿ ಲಾಟಾನುಪ್ರಾಸವಿಲ್ಲ; ಆದರೆ ಅರ್ಥಾಂತರಸಂಕ್ರಮಿತವಾಚ್ಯಧ್ವನಿಯನ್ನಷ್ಟನ್ನೇ ಅಲ್ಲಿ ಹೇಳಬೇಕು.

ಅನೇಕಪದಗಳ ಆವೃತ್ತಿಗೆ ಕಾವ್ಯಪ್ರಕಾಶಕಾರನು ಹೇಳಿರುವ ಉದಾಹರಣವನ್ನೇ ಇಲ್ಲಿ ಕೊಡುತ್ತಾನೆ. ಅದರಲ್ಲಿ ಯಾವ ವಿಶೇಷವೂ ಇಲ್ಲದ್ದರಿಂದ ಅದು ತನಗೆ ಸಮ್ಮತ

ವೆಂಬುವನ್ನು ಸೂಚಿಸುತ್ತಾನೆ. "ಯಾವನ ಬಳಿಯಲ್ಲಿ ಪ್ರೇಯಸಿ ಇಲ್ಲವೋ ಅವನಿಗೆ ಚಂದ್ರನೇ ಕಾಡುಗಿಚ್ಚೆನಿಸುವನು. (ಚಂದನಿಂದಲೂ ಅವನಿಗೆ ಹಿಂಸೆಯುಂಟಾಗುವುದು) ಯಾವನ ಬಳಿಯಲ್ಲಿ ಪ್ರೇಯಸಿ ಇರುವಳೋ ಅವನಿಗೆ ಕಾಡುಗಿಚ್ಚೂ ಸಹ ಚಂದ್ರನಂತೆ ತಣ್ಣಗಾಗುವುದು" ಇಲ್ಲ ಸವಿಧೇ ಮೊದಲಾವ ಅನೇಕ ಪದಗಳಿಗೂ ಅವುಗಳ ಅರ್ಥಗಳಿಗೂ ಪುನರುಕ್ತಿ ಇರುವುದರಿಂದ ಹತ್ತಿರದಲ್ಲಿ ಹೆಂಡತಿ ಇರುವಿಕೆ ಮತ್ತು ಇಲ್ಲದಿರುವಿಕೆ ಈ ಬಗೆಯ ಸಂಬಂಧವಷ್ಟರಲ್ಲಿಯೇ ಭೇದವಿರುವುದರಿಂದಲೂ ಇಲ್ಲಿ ಹೇಳಿರುವ ಪ್ರಕಾರ ಉದ್ದೇಶ್ಯವಿಧೇಯಭಾವಗಳಲ್ಲಿ ವೈಪರೀತ್ಯದಿಂದ ಭೇದವಿರುವುದರಿಂದಲೂ ಇಲ್ಲಿ ಲಾಟಾನುಪ್ರಾಸವಿದೆ. ಇದು ಸಾಮಾನ್ಯವಾಗಿ ಲಾಟದೇಶದ ಜನರಿಗೆ ಪ್ರಿಯವಾದ್ದರಿಂದ ಲಾಟಾನುಪ್ರಾಸವೆನಿಸಿರಬೇಕು. ಹೀಗೆ ಅನುಪ್ರಾಸವು ಛೇಕಾನುಪ್ರಾಸ, ವೃತ್ತ್ಯನುಪ್ರಾಸ, ಶ್ರುತ್ಯನುಪ್ರಾಸ, ಅಂತ್ಯಾನುಪ್ರಾಸ, ಲಾಟಾನುಪ್ರಾಸ ಎಂದು ಐದು ಬಗೆಯಾಗಿದೆ.

ಹೀಗೆ ಅನುಪ್ರಾಸವನ್ನು ವಿವರಿಸಿ ಲೋಕಪ್ರಸಿದ್ಧವಾದ ಯಮಕಾಲಂಕಾರವನ್ನು ಈಗ ತಿಳಿಸುತ್ತಾನೆ. ಬೇರೆ ಬೇರೆ ಅರ್ಥವುಳ್ಳ ಸ್ವರವ್ಯಂಜನಗಳ ಸಮೂಹರೂಪವಾದ ಪದಗಳನ್ನು ಅದೇ ಕ್ರಮದಲ್ಲಿ ಮತ್ತೆ ಪ್ರಯೋಗಿಸುವುದೇ ಯಮಕವೆನಿಸುವುದು. ಅವಕ್ಕೆ ಒಂದೇ ಅರ್ಥವಿದ್ದರೂ ಬೇರೆ ಬೇರೆ ಅರ್ಥವೂ ಇರಬೇಕು. ಒಂದೊಂದು ಪದವು ಸಾರ್ಥಕವೆನಿಸಿದ್ದರೂ ಅವಕ್ಕೆ ಬೇರೆ ಬೇರೆ ಅರ್ಥಗಳೂ ಇರಬೇಕು. ವ್ಯಂಜನಗಳನ್ನು ಮತ್ತೆ ಉಚ್ಚರಿಸುವುದು ಅನುಪ್ರಾಸವೆನಿಸಿದರೆ ಸ್ವರವ್ಯಂಜನಗಳಿಂದ ಕೂಡಿದ ಅರ್ಥವತ್ತಾದ ಪದವನ್ನು ಮತ್ತೆ ಉಚ್ಚರಿಸುವುದು ಯಮಕವೆನಿಸುತ್ತದೆ. ಎರಡು ಪದಗಳೂ ಕೆಲವು ಕಡೆ ಸಾರ್ಥಕವೆನಿಸಿ ಕೆಲವು ಕಡೆ ನಿರರ್ಥಕವೆನಿಸಿರುತ್ತವೆ. ಕೆಲವು ಕಡೆಗಳಲ್ಲಿ ಒಂದು ಸಾರ್ಥಕವೆನಿಸಿ ಮತ್ತೊಂದು ನಿರರ್ಥಕವಾಗಿರಬಹುದು. ಹೀಗೆ ಆಗಬಾರದೆಂದು ಕಾರಿಕೆಯಲ್ಲಿ ಸತ್ಯರ್ಥೇ ಎಂಬುದನ್ನು ಉದ್ದೇಶಪೂರ್ವಕವಾಗಿ ಸೇರಿಸಿದೆ. ತೇನೈವ ಕ್ರಮೇಣ ಎಂದು ಹೇಳಿದ್ದರಿಂದ 'ದಮೋ ಮೋದಃ' ಎಂಬಲ್ಲಿ ಒಂದೇ ಕ್ರಮವಿಲ್ಲದ್ದರಿಂದ ಸ್ವರವ್ಯಂಜನಗಳ ಸಮೂಹಕ್ಕೆ ಪುನರಾವೃತ್ತಿ ಇದ್ದರೂ ಅಲ್ಲಿ ಯಮಕವಿಲ್ಲ. ಇದು ಪದದಲ್ಲೂ ಪಾದದ ಅರ್ಥದಲ್ಲೂ ಶ್ಲೋಕದ ಅರ್ಥದಲ್ಲೂ ಶ್ಲೋಕದಲ್ಲೂ ಇರಬಹುದಾದ್ದರಿಂದ ಅನೇಕ ಬಗೆಯಾಗಿದೆ. ಅವುಗಳಲ್ಲಿ ಒಂದನ್ನು ಸೂಚನೆಗಾಗಿ ಉದಾಹರಿಸಲಾಗಿದೆ. ಶಿಶುಪಾಲವಧದಲ್ಲಿ ವಸಂತವರ್ಣನದ ಈ ಪದ್ಯದಲ್ಲಿ ಯಮಕಾಲಂಕಾರವನ್ನು ಕಾಣಬಹುದು. "ಆ ಹರಿಯು ಹೊಸದಾದ ಎಲೆಗಳಿರುವ ಕಿಂಶುಕವೃಕ್ಷಗಳಿಂದಲೂ ಮೃದುವಾಗಿಯೂ ಬಿಸಿಲಿನ ಧಗೆಯಿಂದ ಬಾಡಿಯೂ ಇರುವ ಲತೆಯ ತುದಿಗಳಿಂದಲೂ ಪುಷ್ಪಗಳ ಶ್ರೇಣಿಯ ಸೌರಭ್ಯದಿಂದಲೂ ಕೂಡಿರುವ ವಸಂತ ಕಾಲವು ತನ್ನ ಎದುರಿಗೆ ಆಗಮಿಸಿದ್ದನ್ನು ಗಮನಿಸಿದನು." ಇಲ್ಲಿ ಪಲಾಶಪಲಾಶ ಎಂಬಲ್ಲಿ ಪದಾವೃತ್ತಿ ಇದೆ. 'ಸುರಭಿಂ ಸುರಭಿಂ' ಎಂಬಲ್ಲಿ ಎರಡು ಪದಗಳೂ ಸಾರ್ಥಕವೆನಿಸಿವೆ. 'ಲತಾಂತ ಲತಾಂತ ಎಂಬಲ್ಲಿ ಮೊದಲನೆಯ ಪದವು ನಿರರ್ಥಕವೆನಿಸು

ವುದು. 'ಪರಾಗ ಪರಾಗ' ಎಂಬಲ್ಲಿ ಎರಡನೆಯ ಪದವು ನಿರರ್ಥಕವೆನಿಸಿದೆ. ಹೀಗೆಯೇ ಬೇರೆಯದನ್ನು ತಿಳಿಯುವುದು. ಯಮಕದಲ್ಲಿ ಕೆಲವುಕಡೆ 'ಡಲ' ಗಳಿಗೂ 'ಬವ' ಗಳಿಗೂ 'ಲ ರ' ಗಳಿಗೂ ಸ್ವರೂಪದಲ್ಲಿ ಭೇದವಿದ್ದರೂ ಐಕ್ಯವುಂಟೆಂದು ಭಾವಿಸಬೇಕು. ಈ ನ್ಯಾಯದಿಂದ "ಭುಜಲತಾಂ ಜಡತಾಮಬಲಾಜನಃ" ಎಂಬಲ್ಲಿ ಜಲತಾಂ ಜಡತಾಂ ಎಂದು ಲಕಾರಡಕಾರಗಳಿಗೆ ಬೇಧವಿರುವುದರಿಂದ ಅಲ್ಲಿ ಯಮಕವಿಲ್ಲವೆಂದು ಹೇಳಲಾಗುವುದಿಲ್ಲ.

ಹೀಗೆ ಯಮಕವನ್ನು ವಿವರಿಸಿ ವಕ್ರೋಕ್ತಿಯನ್ನು ಈಗ ವಿವರಿಸುತ್ತಾನೆ. ಮೊದಲು ಹೇಳುವವನು ತನಗೆ ಇಷ್ಟವಾದ ಅರ್ಥವನ್ನಿಟ್ಟು ಒಂದು ವಾಕ್ಯವನ್ನು ಪ್ರಯೋಗಿಸುವನು. ಕೇಳುವವನು ಶ್ಲೇಷದಿಂದಲೋ ವಿಕೃತಸ್ವರದಿಂದಲೋ ಅದನ್ನು ಬೇರೆ ರೀತಿಯಲ್ಲಿ ಅನ್ವಯಿಸಿಕೊಳ್ಳುವನು. ಇಂತಹ ಮಾತು ವಕ್ರೋಕ್ತಿ ಎನಿಸುತ್ತದೆ. ಆದ್ದರಿಂದ ಇದು ಶ್ಲೇಷವಕ್ರೋಕ್ತಿ ಕಾಕುವಕ್ರೋಕ್ತಿ ಎಂದು ಎರಡು ಬಗೆಯಾಗಿದೆ. ಕ್ರಮವಾಗಿ ಇವಕ್ಕೆ ಉದಾಹರಣಗಳನ್ನು ಕೊಡುತ್ತಾನೆ. "ಪರಸ್ಥಳದಿಂದ ಬಂದವನು ಒಂದು ಕಡೆ ನೆಲಸಿರುವವರೊಡನೆ ವ್ಯವಹರಿಸುವಾಗ ಹೀಗೆ ಉಕ್ತಿಪ್ರತ್ಯುಕ್ತಿಗಳು ಜರಗುತ್ತವೆ. ಆಗಂತುಕರನ್ನು ನೋಡಿ ನೀವು ಯಾರು ? ಎಂದು ಪ್ರಶ್ನೆ ಹೊರಡುತ್ತದೆ. ಇಲ್ಲಿ ಕೇ ಎಂಬುದನ್ನು ಪ್ರಶ್ನಾರ್ಥದಲ್ಲಿ ಪೃಚ್ಛಕನು ಪ್ರಯೋಗಿಸುತ್ತಾನೆ. ಆಗಂತುಕನು ಅದನ್ನು ಜಲ ಎಂಬ ಅರ್ಥದಲ್ಲಿ ತಿಳಿದುಕೊಳ್ಳುವನು. 'ನಾವು ಈಗ ನೀರಿನಲ್ಲಿ ನಿಂತಿಲ್ಲ, ನೆಲದ ಮೇಲೆಯೇ ನಿಂತಿರುವೆವು" ಎಂದು ಉತ್ತರವು ಬರುತ್ತದೆ. ಅದಕ್ಕೆ ವಿರಕ್ತನಾದ ಪೃಚ್ಛಕನು 'ಕೇ ಯೂಯಮ್' ಎಂಬಲ್ಲಿ ಕಿಂ ಶಬ್ದವು ನನ್ನ ಪ್ರಶ್ನೆಯನ್ನು ತಿಳಿಸುತ್ತದೆ. "ನಿಮ್ಮ ಜಾತಿ ಅಥವಾ ದೇಶ ಇವುಗಳ ಬಗ್ಗೆ ವಿಶೇಷವನ್ನು ತಿಳಿಸಬೇಕು' ಎಂದು ಕೇಳುವನು. ಆಗಂತಕರು ವಿಶೇಷಾಶ್ರಯ ಎಂಬ ಪದಕ್ಕೂ ಸಹ ಬೇರೆ ಬಗೆಯಲ್ಲಿ ಅರ್ಥವನ್ನು ಕಲ್ಪಿಸುವರು. 'ವಿ ಅಂದರೆ ಪಕ್ಷಿ. ಶೇಷ ಅಂದರೆ ಅನಂತನೆಂಬ ಸರ್ಪ' ಎಂದು ಸಭಂಗಶ್ಲೇಷದಿಂದ ಬೇರೆ ಅರ್ಥವನ್ನು ಭಾವಿಸಿ ಕಿಂ ಬ್ರೂತೇ ? (ಏನು ಹೇಳಿದಿರಿ) ಎಂದು ಕೇಳುವರು. 'ನಿಮ್ಮ ಪ್ರಶ್ನೆಯು ಪಕ್ಷಿಗೂ, ವಿಷ್ಣುವಿಗೆ ಮಲಗಲು ಆಶ್ರಯನಾಗಿರುವ ಸರ್ಪರಾಜನಿಗೂ ಸಂಬಂಧಿಸಿದೆಯೋ ?' ಎಂದು ಕೇಳುವರು. ಅದಕ್ಕೆ ಪೃಚ್ಛಕನು "ನೀವು ನನ್ನ ಪ್ರಶ್ನೆಗೆ ಸಹಜವಾದ ಉತ್ತರವನ್ನು ಕೊಡುತ್ತಿಲ್ಲ" ವೆಂದು ತಿಳಿಸುವನು. ಇಲ್ಲಿ ಅವನು ಪ್ರಯೋಗಿಸುವ ವಾಮಾ ಪದವನ್ನು ಸ್ತ್ರೀ ಎಂಬ ಅರ್ಥದಲ್ಲಿ ಅನ್ವಯಿಸಿ ಆಗಂತಕರು ಹೀಗೆ ಪ್ರತ್ಯುತ್ತರವನ್ನು ತಿಳಿಸುತ್ತಾರೆ. "ನೀವು ಸ್ತ್ರೀಯರೊಡನೆ ಸರಸವಾಡುವುದರಲ್ಲಿ ಆಸಕ್ತವಾಗಿರುವಿರಿ. ನಿಮ್ಮ ಕಾಮೋದ್ರೇಕವು ಯಾವ ಸ್ಥಿತಿಯಲ್ಲಿದೆ ? ಈ ಕಾಮಬಾಧೆಗೆ ಸಿಲುಕಿ ನೀವು ವಿವೇಕವನ್ನು ಕಳೆದುಕೊಂಡು ಪುರುಷರಾದ ನಮ್ಮಲ್ಲಿ ಸ್ತ್ರೀಯರೆಂಬ ಭ್ರಾಂತಿಯನ್ನು ತಾಳಿರುವಿರಿ." ಹೀಗೆ ಪ್ರಶ್ನೋತ್ತರಗಳು ಇಲ್ಲಿ ನಡೆದಿವೆ. ಇಲ್ಲಿ ವಿಶೇಷ ಪದಕ್ಕೆ ವಿ ಎಂದರೆ ಪಕ್ಷಿ, ಶೇಷ ಎಂದರೆ ನಾಗ. ಹೀಗೆ ಇವೆರಡು ಅರ್ಥಗಳಿಗೆ ಸಂಬಂಧವಿರುವುದರಿಂದ ಇಲ್ಲಿ ಸಭಂಗಶ್ಲೇಷ

ವಿದೆ. ಇದಿಷ್ಟನ್ನು ಬಿಟ್ಟು ಉಳಿದ ಕಡೆಗಳಲ್ಲೆಲ್ಲಾ ಅಭಂಗಶ್ಲೇಷವೇ ಇದೆ. ಪದವನ್ನು ಎರಡು ಭಾಗವಾಗಿ ವಿಭಾಗಿಸದೆಯೇ ಅಲ್ಲಿ ಬೇರೆ ಅರ್ಥವನ್ನು ಕಲ್ಪಿಸಲಾಗಿದೆ.

ಈಗ ಕಾಕುವಕ್ರೋಕ್ತಿಯನ್ನು ಉದಾಹರಿಸುತ್ತಾನೆ. ಸಖಿಗೆ ಬೇರೊಬ್ಬ ಸಖಿಯು ಹೇಳುವ ಮಾತಿದು. "ಕೋಗಿಲೆಗಳಿಂದ ಶಬ್ದಗೈಯುತ್ತಿರುವ ಮಾವಿನಮರಗಳ ವಿಕಾಸದಿಂದ ಮನೋಹರವಾಗಿರುವ ವಸಂತಸಮಯದಲ್ಲಿ ಅಪರಾಧವನ್ನೆಸಗಿದ ಪತಿಯನ್ನು ತೊರೆದದ್ದರಿಂದ ಆ ಸಖಿಯ ಚಿತ್ತವು ಸಂತಾಪಗೊಳ್ಳುವುದಿಲ್ಲವೆ ?" ಇಲ್ಲಿ ಒಬ್ಬ ಸಖಿಯು 'ಸಂತಾಪಗೊಳ್ಳುವುದಿಲ್ಲ'ವೆಂದು ನಿಷೇಧಾರ್ಥದಲ್ಲಿ ನಕಾರವನ್ನು ಪ್ರಯೋಗಿಸುತ್ತಾಳೆ. ಈ ಮಾತನ್ನು ಕೇಳಿದವಳು ಸ್ವರವಿಕಾರದಿಂದ ಅದನ್ನು ಬೇರೆ ರೀತಿಯಲ್ಲಿ ಗ್ರಹಿಸುವಳು. "ಚಿತ್ತವು ಸಂತಾಪಗೊಳ್ಳುವುದಿಲ್ಲವೆ ? ಅಂದರೆ ಸಂತಾಪಗೊಳ್ಳಲೇಬೇಕು." ಎಂದು ವಿಧ್ಯರ್ಥವನ್ನು ಆಕೆಯು ಗ್ರಹಿಸುವಳು. ನಿಷೇಧವು ವಿಧ್ಯರ್ಥದಲ್ಲಿ ಪರಿಣಮಿಸುವುದು.

ಈಗ ಭಾಷಾಸಮವೆಂಬ ಅಲಂಕಾರವನ್ನು ತಿಳಿಸುತ್ತಾನೆ. ಒಂದೇ ಬಗೆಯ ಶಬ್ದಗಳಿಂದ ಒಂದು ವಾಕ್ಯವನ್ನು ಸಂಸ್ಕೃತ ಪ್ರಾಕೃತ ಮೊದಲಾದ ಅನೇಕ ಭಾಷೆಗಳಲ್ಲಿಯೂ ಪ್ರಯೋಗಿಸುವುದೇ ಭಾಷಾಸಮವೆನಿಸುವುದು. ಕೋಪಾವೇಶದಿಂದ ಎಲ್ಲಾ ವ್ಯಾಪಾರಗಳನ್ನು ತೊರೆದಿರುವ ಸಖಿಗೆ ಬೇರೊಬ್ಬ ಸಖಿಯು ಹೇಳುವ ಈ ಮಾತಿನಲ್ಲಿ ಇದು ತಿಳಿದು ಬರುವುದು. "ಎಲೈ ಸಖಿಯೇ, ಅವ್ಯಕ್ತಮಧುರವೂ, ಗಂಭೀರವೂ ಆಗಿ ಶಬ್ದಮಾಡುತ್ತಿರುವ ಸುಂದರವೂ ರತ್ನಖಚಿತವೂ ಆದ ಕಾಲುಕಡಗದಲ್ಲೂ, ವಿನೋದಕ್ಕಾಗಿ ಇರುವ ಸರೋವರದ ದಡದಲ್ಲೂ, ವಿನೋದಸಾಧನವೆನಿಸಿದ ಗಿಳಿಯಲ್ಲೂ ಶ್ರೀಗಂಧದ ಮರದ ಕಡೆಯಿಂದ ಮೆಲ್ಲಗೆ ಸುಳಿಯುತ್ತಿರುವ ಗಾಳಿಯಲ್ಲೂ ಏಕೆ ನೀನು ರಮಿಸುತ್ತಿಲ್ಲ ?" ಇಲ್ಲಿ ಒಂದೇ ಬಗೆಯ ಶಬ್ದಗಳಿರುವುದರಿಂದ ಸಂಸ್ಕೃತ ಮೊದಲಾದ ಅನೇಕ ಭಾಷೆಗಳಲ್ಲಿ ವಾಕ್ಯವನ್ನು ರಚಿಸಬಹುದಾದ್ದರಿಂದ ಇದು ಭಾಷಾಸಮವೆಂಬ ಅಲಂಕಾರವೆನಿಸಿದೆ. ಈ ಶ್ಲೋಕವು ಸಂಸ್ಕೃತ, ಪ್ರಾಕೃತ, ಶೌರಸೇನಿ, ಪ್ರಾಚೀ, ಅವಂತಿ, ನಾಗರ, ಅಪಭ್ರಂಶ ಮೊದಲಾದ ಭಾಷೆಗಳಲ್ಲಿ ಒಂದೇ ಬಗೆಯಾಗಿರುತ್ತದೆ. 'ಕವಿಯ ಕಾವ್ಯವು ಸರಸವಾಗಿರುವುದು' ಎಂಬಲ್ಲಿಯಾದರೋ ಸರಸಮ್ ಎಂಬ ಅಂಶದಲ್ಲಿ ಮಾತ್ರ ಸಂಸ್ಕೃತ ಪ್ರಾಕೃತಗಳೆರಡಕ್ಕೂ ಸಾಮ್ಯವಿದ್ದರೂ ಸಹ ಅನೇಕ ಪದಗಳು ಸೇರಿದ ವಾಕ್ಯದಲ್ಲಿ ಅದು ಸೇರಿಲ್ಲದ ಪ್ರಯುಕ್ತ ಸ್ವಾರಸ್ಯವಿಲ್ಲದ್ದರಿಂದ ಇಲ್ಲಿ ಭಾಷಾಸಮವೆಂಬ ಅಲಂಕಾರವು ಸಂಭವಿಸುವುದಿಲ್ಲ.

ಶ್ಲಿಷ್ಟೈಃ ಪದೈರನೇಕಾರ್ಥಾಭಿಧಾನೇ ಶ್ಲೇಷ ಇಷ್ಯತೇ ।
ವರ್ಣಪ್ರತ್ಯಯಲಿಂಗಾನಾಂ ಪ್ರಕೃತ್ಯೋಃ ಪದಯೋರಪಿ ॥
ಶ್ಲೇಷಾದ್ವಿಭಕ್ತಿವಚನಭಾಷಾಣಾಮಷ್ಟಧಾ ಚ ಸಃ ।
ಪ್ರತಿಕೂಲತಾಮುಪಗತೇ ಹಿ ವಿಧೌ ವಿಫಲತ್ವಮೇತಿ ಬಹುಸಾಧನತಾ ।
ಅವಲಂಬನಾಯ ದಿನಭರ್ತುರಭೂತ್ ನ ಪತಿಷ್ಯತಃ ಕರಸಹಸ್ರಮಪಿ ॥

ಅತ್ರ ವಿಧಾವಿತಿ ವಿಧುರ್ವಿಧಿಶಬ್ದಯೋರುಕಾರೇಕಾರಯೋರ್ವರ್ಣಯೋಃ ಔಕಾರ ರೂಪತ್ವಾತ್ ಶ್ಲೇಷಃ.

ಕಿರಣಾ ಹರಿಣಾಂಕಸ್ಯ ದಕ್ಷಿಣಶ್ಚ ಸಮೀರಣಃ ।
ಕಾಂತೋತ್ಸಂಗಜುಷಾಂ ನೂನಂ ಸರ್ವ ಏವ ಸುಧಾಕರಃ ॥

ಅತ್ರ 'ಸುಧಾಕರಃ' ಇತಿ ಕ್ವಿಪ್‌ಕಪ್ರತ್ಯಯೋಃ. ಕಿಂಚ ಅತ್ರ ಬಹುವಚನೈಕ ವಚನಯೋಃ ಐಕರೂಪ್ಯಾತ್ ವಚನಶ್ಲೇಶೋಽಪಿ.

ವಿಕಸನ್ನೇತ್ರನೀಲಾಬ್ಜೇ ತಥಾ ತನ್ವ್ಯಾಃ ಸ್ತನದ್ವಯೀ ।
ತವ ದತ್ತಾಂ ಸದಾಮೋದಂ ಲಸತ್ತರಲಹಾರಿಣೀ ॥

ಅತ್ರ ನಪುಂಸಕಸ್ತ್ರೀಲಿಂಗಯೋಃ ಶ್ಲೇಷೋ ವಚನಶ್ಲೇಷೋಽಪಿ.

ಅಯಂ ಸರ್ವಾಣಿ ಶಾಸ್ತ್ರಾಣಿ ಹೃದಿ ಜ್ಞೇಷು ಚ ವಕ್ಷ್ಯತಿ ।
ಸಾಮರ್ಥ್ಯಕೃದಮಿತ್ರಾಣಾಂ ಮಿತ್ರಾಣಾಂ ಚ ನೃಪಾತ್ಮಜಃ ॥

ಅತ್ರ ವಕ್ಷ್ಯತಿ' ಇತಿ ವಹಿವಚ್ಯೋಃ 'ಸಾಮರ್ಥ್ಯಕೃತ್' ಇತಿ ಕೃಂತತಿ ಕರೋತ್ಯೋಃ ಪ್ರಕೃತ್ಯೋಃ. 'ಪೃಥುಕಾರ್ತಸ್ವರಪಾತ್ರಮ್' ಇತ್ಯಾದಿ. ಅತ್ರ ಪದ ಭಂಗೇ ವಿಭಕ್ತಿಸಮಾಸಯೋರಪಿ ವೈಲಕ್ಷಣ್ಯಾತ್ ಪದಶ್ಲೇಷಃ ನ ತು ಪ್ರಕೃತಿಶ್ಲೇಷಃ. ಏವಂ ಚ—ನೀತಾನಾಮಾಕುಲೀಭಾವಂ ಲುಬ್ಧೈರ್ಭೂರಿಶಿಲೀಮುಖೈಃ ।
ಸದೃಶೇ ವನವೃದ್ಧಾನಾಂ ಕಮಲಾನಾಂ ತದೀಕ್ಷಣೇ ॥

ಅತ್ರ ಲುಬ್ಧಶಿಲೀಮುಖಾದಿಶಬ್ದಾನಾಂ ಶ್ಲಿಷ್ಟತ್ವೇಽಪಿ ವಿಭಕ್ತೇರಭೇದಾತ್ ಪ್ರಕೃತಿಶ್ಲೇಷಃ. ಅನ್ಯಥಾ ಸರ್ವತ್ರ ಪದಶ್ಲೇಷಪ್ರಸಂಗಃ.

ಸರ್ವಸ್ವಂ ಹರ ಸರ್ವಸ್ಯ ತ್ವಂ ಭವಚ್ಛೇದತತ್ಪರಃ ।
ನಯೋಪಕಾರಸಾಮ್ಮುಖ್ಯಮಾಯಾಸಿ ತನುವರ್ತನಮ್ ॥

ಅತ್ರ ಹರ ಇತಿ ಪಕ್ಷೇ ಶಿವಸಂಬೋಧನಮಿತಿ ಸುಪ್. ಪಕ್ಷೇ ಚ ಹೃಧಾತೋಃ ತಙತಿ ವಿಭಕ್ತೇಃ. ಏವಂ ಭವ ಇತ್ಯಾದೌ.

ಅಸ್ಯ ಚ ಭೇದಸ್ಯ ಪ್ರತ್ಯಯಶ್ಲೇಷೇಣಾಪಿ ಗತಾರ್ಥತ್ವೇ ಪ್ರತ್ಯಯಾಂತರಾ ಸಾಧ್ಯಸುಬಂತತಿಙಂತಗತತ್ವೇನ ವಿಚ್ಛಿತ್ತಿವಿಶೇಷಾಶ್ರಯಣಾತ್ ಪೃಥಗುಕ್ತಿಃ.

ಮಹದೇ ಸುರಸಂಧಮ್ಮೇ ತಮವ ಸಮಾಸಂಗಮಾಗಮಾಹರಣೇ ।
ಹರ ಬಹುಸರಣಂ ತಂ ಚಿತ್ತಮೋಹಮವಸರ ಉಮೇ ಸಹಸಾ ॥

ಅತ್ರ ಸಂಸ್ಕೃತಮಹಾರಾಷ್ಟ್ರಯೋಃ.

ಪುನಸ್ತ್ರಿಧಾ ಸಭಂಗೋಽಥಾಭಂಗಸ್ತದುಭಯಾತ್ಮಕಃ ।

ಏತದ್ಭೇದತ್ರಯಂ ಚ ಉಕ್ತಭೇದಾಷ್ಟಕೇ ಯಥಾಸಂಭವಂ ಜ್ಞೇಯಮ್.

ಯಥಾ ವಾ—ಯೇನ ಧ್ವಸ್ತಮನೋಭವೇನ ಬಲಿಜಿತ್ಕಾಯಃ ಪುರಾಽಸ್ತ್ರೀಕೃತಃ ಯಶ್ಚೋದ್ವೃತ್ತಭುಜಂಗಹಾರವಲಯೋ ಗಂಗಾಂ ಚ ಯೋಽಧಾರಯತ್ ।

ಯಸ್ಯಾಹುಃ ಶಶಿಮಚ್ಛಿರೋಹರ ಇತಿ ಸ್ತುತ್ಯಂ ಚ ನಾಮಾಮರಾಃ
ಪಾಯಾತ್ಸ ಸ್ವಯಮಂಧಕಕ್ಷಯಕರಸ್ತ್ವಾಂ ಸರ್ವದೋ ಮಾಧವಃ ||

ಅತ್ರ 'ಯೇನ ಧ್ವಸ್ತ' ಇತ್ಯಾದೌ ಸಭಂಗಶ್ಲೇಷಃ, ಅಂಧಕ ಇತ್ಯಾದೌ ಅಭಂಗಃ. ಅನಯೋಶ್ಚೈಕತ್ರ ಸಂಭವಾತ್ ಸಭಂಗಾಭಂಗಾತ್ಮಕೋ ಗ್ರಂಥಗೌರವಭಯಾತ್ ಪೃಥಕ್ ನೋದಾಹೃತಃ.

ಇಹ ಕೇಚಿದಾಹುಃ–"ಸಭಂಗಶ್ಲೇಷ ಏವ ಶಬ್ದಶ್ಲೇಷವಿಷಯಃ ಯತ್ರ ಸ್ವರಭೇದಾದ್ಭಿನ್ನಪ್ರಯತ್ನೋಚ್ಚಾರ್ಯತ್ವೇನ ಭಿನ್ನಯೋಃ ಶಬ್ದಯೋಃ ಜತುಕಾಷ್ಠನ್ಯಾಯೇನ ಶ್ಲೇಷಃ.ಅಭಂಗಸ್ತು ಅರ್ಥಶ್ಲೇಷ ಏವ ಯತ್ರ ಸ್ವರಾಭೇದಾದಭಿನ್ನಪ್ರಯತ್ನೋಚ್ಚಾರ್ಯತಯಾ ಶಬ್ದಾಭೇದಾದರ್ಥಯೋಃ ಏಕವೃಂತಗತಫಲದ್ವಯನ್ಯಾಯೇನ ಶ್ಲೇಷಃ. ಯೋ ಹಿ ಯದಾಶ್ರಿತಃ ಸಃ ತದ್ಗತನಲಂಕಾರ ಏವ. ಅಲಂಕಾರ್ಯಾಲಂಕಾರಣಭಾವಸ್ಯ ಲೋಕವದಾಶ್ರಯಾಶ್ರಯಿಭಾವೇನೋಪಪತ್ತೇಃ" ಇತಿ,

ತದನ್ಯೇ ನ ಮನ್ಯಂತೇ. ತಥಾಹಿ—ಅತ್ರ ಧ್ವನಿಗುಣೀಭೂತವ್ಯಂಗ್ಯದೋಷ ಗುಣಾಲಂಕಾರಾಣಾಂ ಶಬ್ದಾರ್ಥಗತತ್ವೇನ ವ್ಯವಸ್ಥಿತೇರನ್ವಯವ್ಯತಿರೇಕಾನುವಿಧಾಯಿತ್ವೇನ ನಿಯಮ ಇತಿ. ನ ಚ 'ಅಂಧಕಕ್ಷಯ' ಇತ್ಯಾದೌ ಶಬ್ದಾಭೇದಃ, 'ಅರ್ಥಭೇದೇನ ಶಬ್ದಭೇದಃ' ಇತಿ ದರ್ಶನಾತ್.

ಕಿಂ ಚ, ಅತ್ರ ಶಬ್ದಸ್ಯೈವ ಮುಖ್ಯತಯಾ ವೈಚಿತ್ರ್ಯಬೋಧೋಪಾಯತ್ವೇನ ಕವಿಪ್ರತಿಭಯೋಟ್ಟಂಕನಾತ್ ಶಬ್ದಾಲಂಕಾರತ್ವಮೇವ. ವಿಸದೃಶಶಬ್ದದ್ವಯಸ್ಯ ಬಂಧೇ ಚೈವಂವಿಧಸ್ಯ ವೈಚಿತ್ರ್ಯಸ್ಯ ಅಭಾವಾತ್. ವೈಚಿತ್ರ್ಯಸ್ಯೈವ ಚ ಅಲಂಕಾರತ್ವಾತ್. ಅರ್ಥಮುಖಪ್ರೇಕ್ಷಿತಯಾ ಚ ಅರ್ಥಾಲಂಕಾರತ್ವೇ ಅನುಪ್ರಾಸಾದೀನಾಮಪಿ ರಸಾದಿಪರತ್ವೇನ ಅರ್ಥಮುಖಪ್ರೇಕ್ಷಿತಯಾ ಅರ್ಥಾಲಂಕಾರತ್ವಪ್ರಸಂಗಃ. ಶಬ್ದಸ್ಯ ಅಭಿನ್ನಪ್ರಯತ್ನೋಚ್ಚಾರ್ಯತ್ವೇನ ಅರ್ಥಾಲಂಕಾರತ್ವೇ "ಪ್ರತಿಕೂಲತಾಮುಪಗತೇ ಹಿ ವಿಧೌ" ಇತ್ಯಾದೌ ಶಬ್ದಭೇದೇಽಪಿ ಅರ್ಥಾಲಂಕಾರತ್ವಂ ತವಾಪಿ ಪ್ರಸಜ್ಯತೀತಿ ಉಭಯತ್ರಾಪಿ ಶಬ್ದಾಲಂಕಾರತ್ವಮೇವ. ಯತ್ರ ತು ಶಬ್ದಪರಿವರ್ತನೇಽಪಿ ನ ಶ್ಲೇಷತ್ವಖಂಡನಾ, ತತ್ರ—

ಸ್ತೋಕೇನೋನ್ನತಿಮಾಯಾತಿ ಸ್ತೋಕೇನಾಯಾತ್ಯಧೋಗತಿಮ್ |
ಅಹೋ ಸುಸದೃಶೀ ವೃತ್ತಿಸ್ತುಲಾಕೋಟೇಃ ಖಲಸ್ಯ ಚ ||

ಇತ್ಯಾದೌ ಅರ್ಥಶ್ಲೇಷಃ.

ಏಕಕಾಲದಲ್ಲಿ ಅನೇಕ ಅರ್ಥಗಳನ್ನು ತಿಳಿಸುವ ಪದಗಳಿಂದ ಅಭಿಧಾವೃತ್ತಿಯ ಮೂಲಕ ಒಟ್ಟಿಗೆ ಅನೇಕ ಅರ್ಥಗಳನ್ನು ತಿಳಿಸುವುದೇ ಶ್ಲೇಷವೆನಿಸುವುದು. ವರ್ಣಗಳು, ಪ್ರತ್ಯಯಗಳು, ಸ್ತ್ರೀ ಪುನ್ನಪುಂಸಕಲಿಂಗಗಳು ಧಾತು ಪ್ರಾತಿಪದಿಕ ಮೊದಲಾದ ಪ್ರಕೃತಿಗಳು, ಸುಪ್ತಿಙಂತಪದಗಳು, ವಿಭಕ್ತಿಗಳು, ಏಕದ್ವಿಬಹುವಚನಗಳು, ಭಾಷೆಗಳು ಇವು ಒಂದೆಡೆಗೆ ಸೇರಿ ಅನೇಕ ಅರ್ಥಗಳನ್ನು ತಿಳಿಸುವುದರಿಂದ ಶ್ಲೇಷವು ಎಂಟು ಬಗೆಯಾ

೧೧ಪೆ. ಹೀಗೆ ವರ್ಣಶ್ಲೇಷ, ಪ್ರತ್ಯಯಶ್ಲೇಷ, ಲಿಂಗಶ್ಲೇಷ, ಪ್ರಕೃತಿಶ್ಲೇಷ, ಪದಶ್ಲೇಷ, ವಿಭಕ್ತಿಶ್ಲೇಷ, ವಚನಶ್ಲೇಷ, ಭಾಷಾಶ್ಲೇಷ ಎಂದು ಇಲ್ಲಿ ಶ್ಲೇಷವನ್ನು ವಿಭಾಗಿಸಲಾಗಿದೆ. ಇವನ್ನು ಮುಂದೆ ಕ್ರಮವಾಗಿ ಉದಾಹರಿಸುತ್ತಾನೆ. "ಚಂದ್ರನು ವಿರೋಧಿಯಾಗಲು (ವಿರುದ್ಧವಾದ ದಿಕ್ಕಿಗೆ ಹೋಗಲು) ಅನೇಕ ಬಗೆಯ ಸಾಧನಗಳಿರುವುದೂ ಸಹ ನಿಜವಾಗಿಯೂ ವ್ಯರ್ಥವೇ ಆಗುತ್ತದೆ. ಮುಳುಗುವುದರಲ್ಲಿರುವ ಸೂರ್ಯನ ಸಾವಿರ ಕಿರಣಗಳನ್ನು (ಹಸ್ತಗಳನ್ನು) ತಡೆಯಲಿಕ್ಕೆ ಆಕಾಶದಲ್ಲಿ ಉಪಾಯವೇ ದೊರಕಲಿಲ್ಲ." ಇಲ್ಲಿ ವಿಧೌ ಎಂಬಲ್ಲಿ ವಿಧು ವಿಧಿ ಎಂಬ ಎರಡು ಶಬ್ದಗಳಿಗೂ ಸಪ್ತಮ್ಯೇಕವಚನದಲ್ಲಿ ಉಕಾರ ಇಕಾರಗಳೆರಡರ ಸ್ಥಾನದಲ್ಲಿ ಔಕಾರವು ವಿಧಿಸಿರುವುದರಿಂದ ವಿಧೌ ಎಂಬಲ್ಲಿ ವಿಧು ವಿಧಿ ಎಂಬ ಎರಡು ಅರ್ಥಗಳೂ ಸೇರಿವೆ. ಹೀಗೆ ಒಂದೇ ಶಬ್ದವು ಆ ಎರಡು ಅರ್ಥಗಳನ್ನು ತಿಳಿಸುತ್ತದೆ. ಅಂತಹ ವರ್ಣವನ್ನು ಪ್ರಯೋಗಿಸುವುದರಲ್ಲಿಯೇ ವೈಚಿತ್ರ್ಯವಿರುವ ಪ್ರಯುಕ್ತ ಇದು ವರ್ಣಶ್ಲೇಷವೆನಿಸಿದೆ.

ಈಗ ಪ್ರತ್ಯಯಶ್ಲೇಷವನ್ನು ಉದಾಹರಿಸುತ್ತಾನೆ. "ಚಂದ್ರನ ಕಿರಣಗಳೂ ದಕ್ಷಿಣದಿಕ್ಕಿನಿಂದ ಬರುವ ಗಾಳಿ ಇವೆಲ್ಲವೂ ಪ್ರೇಯಸಿಯ ಜೊತೆಯಲ್ಲಿ ಇರುವ ಯುವಕರಿಗೆ ಅಮೃತವನ್ನು ಸುರಿಸುತ್ತವೆ." ಇಲ್ಲಿ ಕ್ವಿಪ್ ಪ್ರತ್ಯಯ ಮತ್ತು ಕಪ್ರತ್ಯಯ ಇವೆರಡರಿಂದಲೂ ಸುಧಾಕಿರಃ ಎಂಬುದು ಒಂದೇ ಬಗೆಯ ರೂಪವೆನಿಸುತ್ತದೆ. ಸುಧಾಕಿರ, ಎಂಬುದು ಸುಧಾಂ ಕಿರಂತಿ ಎಂದು ಕ್ವಿಪ್‌ಪ್ರತ್ಯಯದಿಂದ ಪ್ರಥಮಾಬಹುವಚನದ ರೂಪವಾಗುತ್ತದೆ. ಇದನ್ನು ಕಿರಣಪದದೊಡನೆ ಅನ್ವಯಿಸಬಹುದು. ಸಮೀರಣಃ ಎಂಬುದರೊಡನೆ ಅನ್ವಯಿಸಲು ಕೃಧಾತುವಿಗೆ ಕಪ್ರತ್ಯಯವನ್ನು ಹಚ್ಚಿದರೆ ಸುಧಾಕಿರಃ ಎಂದು ಪ್ರಥಮಾವಿಭಕ್ತಿಯಲ್ಲಿ ಏಕವಚನದ ರೂಪವಾಗುತ್ತದೆ. ಹೀಗೆ ಇಲ್ಲಿ ಪ್ರತ್ಯಯಶ್ಲೇಷವಿದೆ. ಇದಿಷ್ಟೇ ಅಲ್ಲದೆ ಇಲ್ಲಿ ಬಹುವಚನ ಏಕವಚನಗಳೆರಡರಲ್ಲೂ ರೂಪವು ಒಂದೇ ಬಗೆಯಾಗಿರುವುದರಿಂದ ವಚನಶ್ಲೇಷವೂ ಇದೆ.

ಈಗ ಲಿಂಗಶ್ಲೇಷವನ್ನು ಉದಾಹರಿಸುತ್ತಾನೆ. "ನೀಲೋತ್ಪಲಗಳಂತೆ ಪ್ರಕಾಶಿಸುತ್ತಿರುವ ಕೃಶಾಂಗಿಯ ಚಂಚಲವೂ ಸುಂದರವೂ ಆದ ಕಣ್ಣುಗಳೂ, ಪ್ರಕಾಶಮಾನವಾಗಿ ಅಲುಗಾಡುತ್ತಿರುವ ಕತ್ತಿನ ಸರವುಳ್ಳ ಸ್ತನಗಳೂ ನಿಮಗೆ ಯಾವಾಗಲೂ ಆನಂದವನ್ನು ಕೊಡುತ್ತಿರಲಿ" ಇಲ್ಲಿ ಲಸತ್ತರಂಗಹಾರಿಣೀ ಎಂಬುದು ಲಸಂತೀ ತರಲೇ ಎಂದು ಎರಡೆರಡು ಪದಗಳಿಗೆ ಕ್ರಮವಾಗಿ ಕರ್ಮಧಾರಯವನ್ನು ಮಾಡಿ ಆಮೇಲೆ ನಪುಂಸಕ ಲಿಂಗದಲ್ಲಿ ಪಥಮಾವಿಭಕ್ತಿಯ ದ್ವಿವಚನದಲ್ಲಿ ರೂಪವಾಗಿದೆ. ಹೀಗೆ ಅದು ವಿಲಸನ್ನೇತ್ರ. ನೀಲಾಬ್ಜೇ ಎಂಬುದಕ್ಕೆ ವಿಶೇಷಣವಾಗಿದೆ. ಹಾಗೆಯೇ ಅದು ಸ್ತನದ್ವಯೀ ಎಂಬುದಕ್ಕೆ ವಿಶೇಷಣವಾಗಿರುವುದರಿಂದ ಲಸನ್ + ತರಲಃ + ಹಾರಃ ಅಸ್ಯಾಃ ಅಸ್ತಿ ಎಂದು ಸಮಾಸದಲ್ಲಿ ಸ್ತ್ರೀಲಿಂಗದ ಪ್ರಥಮಾವಿಭಕ್ತಿಯ ಏಕವಚನದಲ್ಲಿ ರೂಪವಾಗಿದೆ. ಹೀಗೆ ನಪುಂಸಕ ಸ್ತ್ರೀಲಿಂಗಗಳೆರಡೂ ಇಲ್ಲಿ ಶ್ಲೇಷದಿಂದ ತೋರುವ ಪ್ರಯುಕ್ತ ಇದು ಲಿಂಗಶ್ಲೇಷವೆನಿಸಿದೆ. ಹಾಗೆಯೇ ನೇತ್ರನೀಲಾಬ್ಜೇ ಎಂಬುದಕ್ಕೆ ವಿಶೇಷಣವಾಗಿ ದತ್ತಾಂ ಎಂದು ಧಾತುವಿಗೆ

ಲೋಟ್‌ಲಕಾರದ ಪರಸ್ಮೈಪದದ್ವಿವಚನವೂ, 'ಸ್ತನಸ್ವಯೀ' ಎಂಬುವಕ್ಕೆ ಅನ್ವಯಿಸು ವಂತೆ ಲೋಟ್‌ಲಕಾರದ ಆತ್ಮನೇಪದ ಏಕವಚನವೂ ಶ್ಲೇಷದಿಂದ ತೋರುತ್ತವೆ. ಆದ್ದರಿಂದ ಇಲ್ಲಿ ವಚನಶ್ಲೇಷವೂ ಇದೆ.

ಈಗ ಪ್ರಕೃತಿಶ್ಲೇಷವನ್ನು ಉದಾಹರಿಸುತ್ತಾನೆ. "ಈ ರಾಜಕುಮಾರನು ತನ್ನ ಹೃದಯದಲ್ಲೂ (ಪಂಡಿತರ ಸಮಾಜದಲ್ಲೂ) ಎಲ್ಲಾ ಶಾಸ್ತ್ರಗಳನ್ನೂ ಧರಿಸಿರುವನು (ವಿವರಿಸಿ ತಿಳಿಸುವನು) ಶತ್ರುಗಳಿಗೂ ಮಿತ್ರರಿಗೂ ಸಾಮರ್ಥ್ಯವನ್ನು ನಾಶ ಪಡಿಸುವನು ಮತ್ತು ಹೆಚ್ಚಿಸುವನು." ಇಲ್ಲಿ ವಕ್ಷ್ಯತಿ ಎಂಬುದು ವಚ್ ವಹ್ ಎರಡು ಧಾತುಗಳಿಗೂ ರೂಪವಾಗುತ್ತದೆ. 'ಹೃದಿ' ಎಂಬುದರೊಡನೆ ಅನ್ವಯವಾಗಲು ವಹ್ ಧಾತುವಿಗೆ ಲೃಟ್ ಲಕಾರದ ರೂಪವು ಬೇಕಾಗಿದೆ. ಙ್ಞೇಷು ಎಂಬಲ್ಲಿ ಅನ್ವಯವಾಗಲು ವಚ್ ಧಾತುವಿನ ಲೃಟ್ ಲಕಾರದ ರೂಪವು ಬೇಕಾಗಿದೆ. ಅಮಿತ್ರಾಣಾಂ ಎಂಬಲ್ಲಿ ಅನ್ವಯ ವಾಗಲು ಸಾಮರ್ಥ್ಯಂ ಕೃಂತತಿ 'ನಾಶಪಡಿಸುತ್ತಾನೆ' ಎಂದು ಕೃತ್ ಧಾತುವಿನ ಕ್ವಿಬಂತ ರೂಪವನ್ನು ಇಟ್ಟುಕೊಳ್ಳಬೇಕು. ಮಿತ್ರಾಣಾಂ ಎಂಬಲ್ಲಿ ಅನ್ವಯಿಸಲು ಸಾಮರ್ಥ್ಯಂ ಕರೋತಿ ಎಂಬ ಅರ್ಥದಲ್ಲಿ ಕೃಧಾತುವಿನ ಕ್ವಿಬಂತರೂಪವನ್ನು ಇಟ್ಟು ಕೊಳ್ಳಬೇಕು. ಆದ್ದರಿಂದ ಇಲ್ಲಿ ಪದಕ್ಕಿಂತಲೂ ವಚ್ ವಹ್ ಎಂಬ ಪ್ರಕೃತಿಗಳಿಗೂ ಕೃ ಮತ್ತು ಕೃತ್ ಎಂಬ ಪ್ರಕೃತಿಗಳಿಗೂ ಶ್ಲೇಷವುಂಟೆಂದು ಭಾವಿಸುವುದರಲ್ಲಿ ಹೆಚ್ಚು ವೈಚಿತ್ರ್ಯವಿದೆ. ಹೀಗೆ ಇದು ಪ್ರಕೃತಿಶ್ಲೇಷವೆನಿಸಿದೆ. ಪೃಥುಕಾರ್ತಸ್ವರಪಾತ್ರಂ ಎಂಬಲ್ಲಿ ಪೃಥು ಮೊದಲಾದ ಪದಗಳಿಗೆ ಶ್ಲೇಷವನ್ನು ಹೇಳುವುದರಲ್ಲಿಯೇ ಹೆಚ್ಚು ವೈಚಿತ್ರ್ಯ ವಿರುವ ಪ್ರಯುಕ್ತ ಅದನ್ನು ಪದಶ್ಲೇಷವೆಂದು ಕರೆಯಲಾಗಿದೆ. ಅಲ್ಲಿ ಪೃಥುಕ ಮೊದ ಲಾದ ಶಬ್ದಗಳು ಪ್ರಾತಿಪದಿಕವೇ ಆಗಿರುವುದರಿಂದ ಅದೂ ಸಹ ಪ್ರಕೃತಿಶ್ಲೇಷವೇ ಏಕೆ ಆಗಬಾರದೆಂಬುವಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ಪೃಥುಕಾರ್ತಸ್ವರ ಎಂಬಲ್ಲಿ ಪೃಥು ಪೃಥುಕ ಎಂದು ಪದಗಳನ್ನು ವಿಭಾಗಮಾಡಿದರೆ ರಾಜನ ಪಕ್ಷದಲ್ಲಿ ಪೃಥೂನಿ ಕಾರ್ತಸ್ವರಪಾತ್ರಾಣಿ ಯಸ್ಮಿನ್ ಎಂದೂ, ದರಿದ್ರನ ಪಕ್ಷದಲ್ಲಿ ಪೃಥುಕಾನಾಂ ಆರ್ತಸ್ವರಸ್ಯ ಪಾತ್ರಂ ಎಂದೂ ಸಮಾಸವಾಗುವ ಪ್ರಯುಕ್ತ ಪದಗಳಷ್ಟೇ ಅಲ್ಲದೆ ವಿಭಕ್ತಿ ಸಮಾಸಗಳಲ್ಲೂ ವೈಲಕ್ಷಣ್ಯವಿರುವುದರಿಂದ ಅದು ಪದಶ್ಲೇಷವೇ ಹೊರತು ಪ್ರಕೃತಿ ಶ್ಲೇಷವಾಗಲಾರದು. ಹೀಗೆ ಪದಗಳಿಗೂ ವಿಭಕ್ತಿಗಳಿಗೂ ಸಮಾಸಗಳಿಗೂ ಲಕ್ಷಣ ವಿರುವಕಡೆಯೇ ಪದಶ್ಲೇಷವನ್ನು ಅಂಗೀಕರಿಸಿದ್ದರಿಂದ 'ನೀತಾನಾಂ ಆಕುಲೀಭಾವಂ' ಎಂಬ ಪದ್ಯದಲ್ಲೂ ಪದಶ್ಲೇಷವನ್ನು ಹೇಳದೆ ಪ್ರಕೃತಿಶ್ಲೇಷವನ್ನೇ ಹೇಳಲಾಗಿದೆ. ಇಲ್ಲಿ ಲುಬ್ಧ ಶಿಲೀಮುಖ ಮೊದಲಾದ ಶಬ್ದಗಳಲ್ಲಿ ಶ್ಲೇಷವಿದ್ದರೂ ಅವು ಒಂದೇ ವಿಭಕ್ತಿಯಲ್ಲಿರುವುದರಿಂದ ಪ್ರಕೃತಿಶ್ಲೇಷವೇ ಹೊಂದಿಕೆಯಾಗುತ್ತದೆ. ಹೀಗೆ ಹೇಳದೇ ಹೋದರೆ ಎಲ್ಲಾ ಕಡೆಗಳಲ್ಲೂ ಪದಶ್ಲೇಷವನ್ನೇ ಹೇಳಬೇಕಾದೀತು.

ಈಗ ವಿಭಕ್ತಿಶ್ಲೇಷವನ್ನು ಉದಾಹರಿಸುತ್ತಾನೆ. "ಮಹೇಶ್ವರನಿಗೆ ಅವನ ಭಕ್ತನೂ, ಕಳ್ಳನಿಗೆ ಅವನ ತಾಯಿಯೂ ಹೇಳುವ ಮಾತಿದು. "ಎಲೈ ಹರನೇ, ನೀನು

ಲೋಕದ ಜನರೆಲ್ಲರಿಗೂ ಪ್ರಾಣಸ್ವರೂಪನು. ಭಕ್ತರೆಲ್ಲರ ಭವರೋಗವನ್ನು ನೀನು ಪರಿಹರಿಸುವೆ. ಹಾಗೆಯೇ ನೀನು ನೀತಿಯ ಸದುಪದೇಶದಿಂದಲೂ ಅನುಗ್ರಹ ದಿಂದಲೂ ಭಕ್ತರನ್ನು ಉದ್ಧರಿಸಲು ಸಿದ್ಧನಾಗಿರುವೆ. ಇದಕ್ಕಾಗಿಯೇ ಮೂರ್ತರೂಪ ದಿಂದ ದೇಹದಲ್ಲಿ ನೆಲಸಿರುವೆ" 'ಎಲೈ ಮಗನೇ ನೀನು ಜನರಲ್ಲಿ ಹಣವೆಲ್ಲವನ್ನು ಅಪ ಹರಿಸು. ಆಗ ನಿನಗೆ ಯಾರಾದರೂ ಪ್ರತಿಬಂಧಕರಾದರೆ ಅವರನ್ನು ಕಡ್ಡಿಯಂತೆ ಕತ್ತ ರಿಸುವುದರಲ್ಲಿ ಆಸಕ್ತನಾಗಿರು. ಹಾಗೆಯೇ ಆಯಾಸಪಡುತ್ತ ಸಂಧಿಯ ಮೂಲಕ ಬೇರೆಯವರ ಮನೆಯನ್ನು ಪ್ರವೇಶಿಸಿ ಅವರ ಹಣವನ್ನು ಅಪಹರಿಸಲು ಅನುಕೂಲವಾಗು ವಂತೆ ದೇಹವನ್ನು ಪಳಗಿಸಿಕೋ. ಬೇರೆಯವರ ಹಣವನ್ನು ಅಪಹರಿಸಲು ಗೋಡೆಯಲ್ಲಿ ರಂಧ್ರವನ್ನು ಕೊರೆದು ಅವರ ಮನೆಯಲ್ಲಿ ನಿನ್ನ ಶರೀರವು ಪ್ರವೇಶಿಸುವಂತೆ ಮಾಡು." ಇಲ್ಲಿ ಮೊದಲನೆಯ ಅರ್ಥದ ಪ್ರಕಾರ ಹರ ಎಂಬುದು ಶಿವನನ್ನು ಸಂಬೋಧಿಸುವ ಪದ ವಾದ್ದರಿಂದ ಸುಬಂತವೆನಿಸಿದೆ. ಎರಡನೆಯ ಅರ್ಥದ ಪ್ರಕಾರ ಅದು ಹೃಧಾತುವಿಗೆ ಲೋಟ್ ಪರಸ್ಮೈಪದದಲ್ಲಿ ತಿಙಪ್ರತ್ಯಯವನ್ನು ಹಚ್ಚಿ ಆಗಿರುವ ಕ್ರಿಯಾಪದವೆನಿ ಸಿದೆ. ಹೀಗೆಯೇ ಭವ ಎಂಬುದು ಶಿವನ ಪಕ್ಷದಲ್ಲಿ ಸಂಸಾರ ಎಂಬ ಅರ್ಥವನ್ನು ಕೊಡುವ ಸುಬಂತ ಪದವೆನಿಸಿದೆ; ಇನ್ನೊಂದು ಪಕ್ಷದಲ್ಲಿ ಭೂಧಾತುವಿನ ಲೋಟ್ ಲಕಾರದ ತಿಙಂತ ರೂಪವೆನಿಸಿದೆ. "ಈ ವಿಭಕ್ತಿಶ್ಲೇಷವನ್ನು ಪ್ರತ್ಯಯಶ್ಲೇಷದಲ್ಲಿಯೇ ಸೇರಿಸಬಹುದಾ ದ್ದರಿಂದ ಸುಪ್ತಿಙಪ್ರತ್ಯಯಗಳಲ್ಲಿ ತೋರುವ ಶ್ಲೇಷವನ್ನು ವಿಭಕ್ತಿಶ್ಲೇಷವೆಂದು ಪ್ರತ್ಯೇಕವಾಗಿ ಏಕೆ ಅಂಗೀಕರಿಸಬೇಕು ?" ಎಂದು ಆಕ್ಷೇಪವು ಬಂದರೆ ಅದಕ್ಕೆ ಸಮಾಧಾನವನ್ನು ಈಗ ತಿಳಿಸುತ್ತಾನೆ; ಇದನ್ನು ಪ್ರತ್ಯಯಶ್ಲೇಷದಲ್ಲಿಯೇ ಸೇರಿಸ ಬಹುದಾದರೂ ಬೇರೆ ಪ್ರತ್ಯಯಗಳಿಗೆ ಅನ್ವಯಿಸದಂತೆ ಸುಬಂತತಿಙಂತಪ್ರತ್ಯಯಗಳಿಗೆ ಮಾತ್ರವೇ ಇದು ಅನ್ವಯಿಸುವ ಪ್ರಯುಕ್ತ ಅಷ್ಟರಲ್ಲಿಯೇ ವೈಚಿತ್ರ್ಯವಿರುವುದರಿಂದ ಅದನ್ನು ಆಶ್ರಯಿಸಿ ಇಲ್ಲಿ ಇದನ್ನು ಪ್ರತ್ಯೇಕವಾಗಿ ತಿಳಿಸಿದ್ದು ಯುಕ್ತವೆನಿಸಿದೆ. ಹೀಗೆ ಸುಪ್ತಿಙಪ್ರತ್ಯಯಗಳಿಗೆ ಮಾತ್ರವೇ ವಿಭಕ್ತಿಶ್ಲೇಷವು ಅನ್ವಯಿಸುವುದರಲ್ಲಿ ಔಚಿತ್ಯ ವಿರುವುದರಿಂದ ಇದನ್ನು ಪ್ರತ್ಯಯಶ್ಲೇಷದಲ್ಲಿ ಸೇರಿಸಬೇಕಾಗಿಲ್ಲ.

ಈಗ ಶ್ಲೇಷವನ್ನು ಉದಾಹರಿಸುತ್ತಾನೆ. ಪಾರ್ವತಿಗೆ ಭಕ್ತರಿಬ್ಬರು ಹೇಳುವ ಈ ಮಾತಿನಲ್ಲಿ ಇದು ತಿಳಿದುಬರುತ್ತದೆ. "ಸಂತೋಷವನ್ನು ಉಂಟುಮಾಡುವ ಎಲೈ ಪಾರ್ವತಿಯೇ, ದೇವತೆಗಳಿಗೂ ಕರ್ತವ್ಯವೆಂಬ ಪ್ರತಿಜ್ಞೆಯನ್ನು ಹುಟ್ಟಿಸುತ್ತ, ಶಾಸ್ತ್ರೀ ಯಜ್ಞಾನವನ್ನು ಸಂಪಾದಿಸಲು ನನಗೆ ಮೊದಲು ಹುಟ್ಟಿದ ಆಸಕ್ತಿಯನ್ನು ಬಹುಕಾಲ ದವರೆಗೂ ರಕ್ಷಿಸು. ಆ ಕಾಲದಲ್ಲಿ ಬೇಗನೆ ವ್ಯಾಪಿಸುವಂತಹ ನನ್ನ ಮನಸ್ಸಿನ ವ್ಯಾಮೋಹವನ್ನು ಬೇಗನೆ ತೊಲಗಿಸು." ಇದು ಮಹಾರಾಷ್ಟ್ರಪದ್ಯದ ಅಭಿಪ್ರಾಯ ವೆನಿಸಿದೆ.

ಮಮ ದೇಹೇ ರಸಂ ಧರ್ಮೇ ತಮೋವಶಾಮಾಶಾಂ ಗಮಾಗಮಾತ್ ಹರ ನಃ।

ಹರವಧು ಶರಣಂ ...

ಇದು ಸಂಸ್ಕೃತಭಾಷೆಯಲ್ಲಿ ಮಹಾರಾಷ್ಟ್ರೀಭಾಷೆಯ ಅನುವಾದವೆನಿಸಿದೆ. "ಎಲೈ ಶಿವನ ಶರೀರವೆನಿಸಿದ ಭವಾನಿಯೇ, ಧರ್ಮದಲ್ಲಿ ನನಗೆ ಅನುರಾಗವನ್ನು ಹುಟ್ಟಿಸು. ಕಂಡು ಅಡಗುವ ಈ ಜಗತ್ತಿನಲ್ಲಿ ನನಗೆ ತಮೋಗುಣದಿಂದ ಉಂಟಾಗಿರುವ ವಿಷಯ ಸುಖಾಭಿಲಾಷವನ್ನು ತೊಲಗಿಸು. ನೀನು ನನ್ನ ರಕ್ಷಕಳಾಗಿದ್ದು ನನ್ನಲ್ಲಿ ಬಹುಕಾಲ ದಿಂದ ಹುಟ್ಟಿರುವ ಚಿತ್ತಮೋಹವನ್ನು ಬೇಗನೆ ಪರಿಹರಿಸು." ಹೀಗೆ ಸಂಸ್ಕೃತದಲ್ಲೂ ಮಹಾರಾಷ್ಟ್ರೀಭಾಷೆಯಲ್ಲೂ ಹೊಂದಿಕೆ ಇರುವುದರಿಂದ ಈ ರೀತಿಯಲ್ಲಿ ತಿಳಿಸುವುದು ಭಾಷಾ ಶ್ಲೇಷವೆನಿಸಿದೆ. ಶ್ಲೇಷವು ಸಭಂಗ, ಅಭಂಗ, ಉಭಯಾತ್ಮಕವೆಂದು ಮತ್ತೆ ಮೂರುಬಗೆಯಾಗುತ್ತದೆ. ಈ ಮೂರು ಭೇದಗಳನ್ನು ಹಿಂದೆ ಹೇಳಿದ ಎಂಟು ಬಗೆಗಳ ಲ್ಲಿಯೇ ಆಯಾ ಪ್ರಕರಣಗಳಲ್ಲಿ ತಿಳಿಯುವುದು. ಇದರಿಂದ ವರ್ಣಶ್ಲೇಷ ಮೊದಲಾದವು ಐದು, ಪದಶ್ಲೇಷಗಳು ಮೂರು ಹೀಗೆ ಒಟ್ಟು ಹದಿನಾಲ್ಕು ಬಗೆಯ ಶ್ಲೇಷಗಳುಂಟೆಂದು ತಿಳಿಯುವುದು. ಪೃಥುಕಾರ್ತಸ್ವರಪಾತ್ರಂ, ಎಂಬಲ್ಲೂ 'ಮಹದೇ' ಎಂಬಲ್ಲೂ ಕೇವಲ ಸಭಂಗಶ್ಲೇಷವೂ, ಪ್ರತಿಕೂಲತಾಂ ಎಂಬಲ್ಲಿ ಕೇವಲ ಅಭಂಗಶ್ಲೇಷವೂ, 'ಸರ್ವಸ್ವಂ ಹರ ಸರ್ವಸ್ಯ' ಎಂಬಲ್ಲಿ ಸಭಂಗಾಭಂಗೋಭಯಶ್ಲೇಷವೂ ಇವೆ. ಒಂದೆ ಡೆಯೇ ಈ ಮೂರು ಬಗೆಗಳನ್ನು ತಿಳಿಸುತ್ತಾನೆ. ಹರಿಹರರಿಬ್ಬರಿಗೂ ಅನ್ವಯಿಸುವ ಪದ್ಯ ವಿದು. ಯೇನ ಅಭವೇನ ಅನಃ ಧ್ವಸ್ತಂ–ಜನ್ಮವಿಲ್ಲದ ಯಾವಮಾಧವನಿಂದ (ಶಕಟ) ಬಂಡಿಯರೂಪದ ರಾಕ್ಷಸನ ಕೊಲೆಯಾಯಿತೋ, (ಹಿಂದೆ ದೇವಾಸುರರಿಗೆ ಅಮೃತವನ್ನು ಬಡಿಸುವುದಕ್ಕಾಗಿ)ಬಲಿಯನ್ನು ಜಯಿಸಲು ಉಪಯೋಗಿಸಿದ ಯಾವನ ವಾಮನರೂಪವು ಮೋಹಿನೀರೂಪದಿಂದ ಪರಿಣತವಾಯಿತೋ, ಯಾವನು ಉದ್ಧತನಾದ ಭುಜಂಗ ವೇಷದ ಅಘಾಸುರನನ್ನು ಕೊಂದನೋ, ಶತ್ರುಸೈನ್ಯವನ್ನು ಆಕ್ರಮಿಸಲು ಯಾವನು ಮುಂದೆ ನುಗ್ಗಿದನೋ, ಯಾವನು ಗೋವರ್ಧನಪರ್ವತವನ್ನೂ ಭೂಮಿಯನ್ನೂ ಕೃಷ್ಣರೂಪದಿಂದಲೂ ಕೂರ್ಮರೂಪದಿಂದಲೂ ಉದ್ಧರಿಸಿದನೋ, ಚಂದ್ರನಿಗೆ ಹಿಂಸಿ ಸುವ ರಾಹುವಿನ ಶಿರಸ್ಸನ್ನು ಅಪಹರಿಸಿದವನೆಂದು ಯಾವನ ಪ್ರಶಂಸಾರ್ಹವಾದ ಹೆಸರನ್ನು ದೇವತೆಗಳು ಕೊಂಡಾಡುತ್ತಿರುವರೋ, ಯದುವಂಶದ ಜನರನ್ನು ಪ್ರಭಾಸ ಯುದ್ಧದಲ್ಲಿ ಅನಾಯಾಸವಾಗಿ ನಾಶಮಾಡಿ, ಎಲ್ಲರಿಗೂ ಇಷ್ಟಾರ್ಥಗಳನ್ನು ಸಲ್ಲಿಸುವ ಆ ಮಾಧವನು ನಿಮ್ಮನ್ನು ಕಾಪಾಡಲಿ.'' ಶಿವನಿಗೆ ಅನ್ವಯಿಸುವಂತೆ ಇದರ ಅರ್ಥವು ಹೀಗೆ ಇರುತ್ತದೆ. "ಯಾವನು ಮನ್ಮಥನನ್ನು ಸುಟ್ಟನೋ, ಹಿಂದೆ ತ್ರಿಪುರಸಂಹಾರ ಕಾಲದಲ್ಲಿ ನಾರಾಯಣನ ಶರೀರವನ್ನು ಬಾಣವನ್ನಾಗಿ ಯಾವನು ಮಾಡಿಕೊಂಡಿದ್ದನೋ ಯಾವನು ಸರ್ಪವನ್ನು ಕೊರಳಿಗೆ ಹಾರವನ್ನಾಗಿಯೂ ಕೈಗೆ ಬಳೆಯನ್ನಾಗಿಯೂ ಹಾಕಿ ಕೊಂಡಿರುವನೋ, ಯಾವನು ಶಿರಸ್ಸಿನಲ್ಲಿ ಗಂಗೆಯನ್ನು ಧರಿಸಿರುವನೋ, ಶಿರಸ್ಸಿನಲ್ಲಿ ಚಂದ್ರನಿರುವನೆಂದು ಯಾವನ ಸ್ತುತ್ಯರ್ಹವಾದ ಹೆಸರನ್ನು ದೇವತೆಗಳು ಕೊಂಡಾಡು ತ್ತಿರುವರೋ, ಅಂಧಕಾಸುರನನ್ನು ಲೋಕಹಿತಾರ್ಥವಾಗಿ ನಾಶಮಾಡಿದ ಆ ಪಾರ್ವತೀ ಪತಿಯು ಅವ್ಯಾಜವಾತ್ಸಲ್ಯದಿಂದ ನಿಮ್ಮನ್ನು ರಕ್ಷಿಸಲಿ" ಇಲ್ಲಿ 'ಯೇನ ಧ್ವಸ್ತ'

ಎಂಬಲ್ಲಿ ಸಭಂಗಶ್ಲೇಷವಿದೆ. ಅಂಧಕ ಎಂಬಲ್ಲಿ ಅಭಂಗಶ್ಲೇಷವಿದೆ. ಇವೆರಡೂ ಇಲ್ಲಿ ಒಂದೇ ಕಡೆಯಲ್ಲಿ ಸೇರಿರುವುದರಿಂದ ಉಭಯಾತ್ಮಕವಾದ ಶ್ಲೇಷವನ್ನು ಬೇರೆ ತಿಳಿಸಬೇಕಾಗಿಲ್ಲ.

ಅಲಂಕಾರಶಾಸ್ತ್ರದಲ್ಲಿ ವಾಮನ ಮೊದಲಾದವರು "ಸಭಂಗಶ್ಲೇಷವೇ ಶಬ್ದಶೇಷಕ್ಕೆ ಅನ್ವಯಿಸುವಂತಹದು. ಇಲ್ಲಿ ಉದಾತ್ತ ಮೊದಲಾದ ಸ್ವರಗಳ ಭೇದದಿಂದ ಬೇರೆ ಬೇರೆ ಪ್ರಯತ್ನದಿಂದ ವರ್ಣಗಳನ್ನು ಉಚ್ಚರಿಸಬೇಕಾಗುವ ಪ್ರಯುಕ್ತ ಶಬ್ದಗಳೂ ಬೇರೆ ಬೇರೆಯಾಗುತ್ತವೆ. ಅರಗಿನೊಡನೆ ಕೂಡಿದ ಕಟ್ಟಿಗೆಯು ಅವರೊಡನೆಯೇ ಉರಿಯುವಂತೆ ಬೇರೆ ಸ್ವರಗಳಿರುವ ಶಬ್ದಗಳನ್ನು ಬೇರೆ ಬೇರೆ ಪ್ರಯತ್ನಗಳಿಂದಲೇ ಉಚ್ಚರಿಸಬೇಕಾದ್ದು ಆವಶ್ಯಕವೆನಿಸುತ್ತದೆ. ಆದ್ದರಿಂದ ಸಭಂಗಶ್ಲೇಷವನ್ನು ಶಬ್ದಶ್ಲೇಷವೆಂದೇ ಭಾವಿಸಬೇಕು. ಶಬ್ದವನ್ನು ಒಡೆಯದೆಯೇ ಎಲ್ಲಿ ಶ್ಲೇಷವಿರುವುದೋ ಅದು ಅರ್ಥಶ್ಲೇಷವೆನಿಸುತ್ತದೆ. ಸ್ವರದಲ್ಲಿ ಭೇದವಿಲ್ಲದ್ದರಿಂದ ಒಂದೇ ಬಗೆಯ ಪ್ರಯತ್ನದಿಂದ ಯಾವ ಶಬ್ದಗಳನ್ನು ಉಚ್ಚರಿಸಲಾಗುವುದೋ ಅಂತಹ ಶಬ್ದಗಳೊಡನೆ ಎರಡು ಬಗೆಯ ಅರ್ಥಗಳು ಬೇರೆಯಾಗದಂತೆ ಹೊಂದಿಕೊಂಡಿರುವುದರಿಂದ ಅಭಂಗಶ್ಲೇಷವು ಅರ್ಥಶ್ಲೇಷವೆನಿಸಿದೆ. ಮರದ ಒಂದೇ ಕವಲಿನಲ್ಲಿ ಎರಡು ಫಲಗಳು ಸೇರಿಕೊಂಡಿರುವಂತೆ ಒಂದು ಶಬ್ದದಲ್ಲಿ ಎರಡು ಫಲಗಳು ಸೇರಿರುತ್ತವೆಯಾದ್ದರಿಂದ ಅಭಂಗಶ್ಲೇಷವು ಎರಡು ಬಗೆಯ ಅರ್ಥಗಳನ್ನು ತಿಳಿಸುತ್ತಲೇ ಅರ್ಥಶ್ಲೇಷವೆನಿಸುವುದು. ಯಾವುದು ಯಾವುದನ್ನು ಆಶ್ರಯಿಸಿರುವುದೋ ಅದೇ ಅದಕ್ಕೆ ಅಲಂಕಾರವೆನಿಸುವುದು. ಲೋಕದಲ್ಲಿ ಅಲಂಕಾರಕ್ಕೆ ಅರ್ಹವಾದ ಸ್ಥಾನವನ್ನು ಅಲಂಕಾರಗಳಿಂದ ಅಲಂಕರಿಸುವುದು ಸಹಜ. ಅಲಂಕಾರಕ್ಕೆ ಆಶ್ರಯವಾದದ್ದು ಕೈ ಕಿವಿ ಮೂಗು ಕೊರಳು ಮೊದಲಾದ ಸ್ಥಾನಗಳೆಂಬುದು ಪ್ರಸಿದ್ಧವಾಗಿದೆ. ಕಿವಿಯನ್ನು ಅಲಂಕರಿಸುವ ಕುಂಡಲವು ಕರ್ಣಾಲಂಕಾರವೆನಿಸಿವೆ. ಕೈಗೆ ಅಲಂಕಾರವಾದ ಕಡಗವು ಹಸ್ತಾಲಂಕಾರವೆನಿಸಿದೆ. ಹಾಗೆ ಶಬ್ದವನ್ನಷ್ಟೇ ಆಶ್ರಯಿಸಿದ ಸಭಂಗಶ್ಲೇಷವು ಶಬ್ದಾಲಂಕಾರವೆನಿಸಿದೆ. ಅರ್ಥವನ್ನಷ್ಟೇ ಆಶ್ರಯಿಸಿದ ಅಭಂಗಶ್ಲೇಷವು ಅರ್ಥಾಲಂಕಾರವೆನಿಸುತ್ತದೆ" ಹೀಗೆ ಹೇಳುತ್ತಾರೆ.

ಇದನ್ನು ಮಮ್ಮಟಭಟ್ಟನೇ ಮೊದಲಾದವರು ಒಪ್ಪುವುದಿಲ್ಲ. "ಅಲಂಕಾರಶಾಸ್ತ್ರದಲ್ಲಿ ಧ್ವನಿ, ಗುಣೀಭೂತವ್ಯಂಗ್ಯ, ದೋಷ, ಗುಣ, ಅಲಂಕಾರ ಇವೆಲ್ಲವೂ ಶಬ್ದ ಮತ್ತು ಅರ್ಥ ಇವೆರಡಕ್ಕೂ ಸೇರಿರುವುದಾಗಿ ವ್ಯವಸ್ಥೆಯಾಗಿದೆ. ಧ್ವನಿ ಮೊದಲಾದವು ಶಬ್ದದಲ್ಲೂ ಅರ್ಥದಲ್ಲೂ ಶಬ್ದಾರ್ಥಗಳೆರಡರಲ್ಲೂ ಇರುವ ಬಗ್ಗೆ ಅನ್ವಯ ವ್ಯತಿರೇಕ ನಿಯಮವು ಸ್ಪಷ್ಟವಾಗಿ ಕಂಡುಬಂದಿದೆ. ಎಲ್ಲಿ ಶಬ್ದವಿರುವುದೋ ಅಲ್ಲಿ ಧ್ವನಿ, ಗುಣೀಭೂತವ್ಯಂಗ್ಯ ಮೊದಲಾದವು ಇರುತ್ತವೆ. ಎಲ್ಲಿ ಶಬ್ದವಿಲ್ಲವೋ ಅಲ್ಲಿ ಅವೂ ಇರುವುದಿಲ್ಲವೆಂಬುದೇ ಅನ್ವಯನಿಯಮ. ಎಲ್ಲಿ ಶಬ್ದವಿಲ್ಲವೋ ಅಲ್ಲಿ ಧ್ವನಿ ಮೊದಲಾದವು ಇರುವುದಿಲ್ಲವೆಂಬುದೇ ವ್ಯತಿರೇಕನಿಯಮ. ಹೀಗೆಯೇ ಅರ್ಥದ ಬಗ್ಗೆ ಮತ್ತು ಶಬ್ದ ಅರ್ಥಗಳೆರಡರ ಬಗ್ಗೆ ಇದೇ [illegible] ನಿಯಮವೇ ಅನ್ವಯಿಸುತ್ತದೆ. ಎಲ್ಲಿ ಆಯಾ ಶಬ್ದವಿದ್ದರೆ ಧ್ವನಿ

ಮೊದಲಾದವು ಇರುತ್ತವೆಯೋ ಅದಿಲ್ಲದಿದ್ದರೆ ಅವು ಇರುವುದಿಲ್ಲವೋ ಅಲ್ಲಿ ಧ್ವನಿ ಮೊದಲಾದವು ಶಾಬ್ದವೆನಿಸುತ್ತವೆ. ಇಲ್ಲವಾದರೆ ಅವು ಆರ್ಥವೆನಿಸುತ್ತವೆ. ಹೀಗೆಯೇ ಶಬ್ದಭಂಗ ಮತ್ತು ಅಭಂಗ ಇವೆರಡೂ ಇರುವ ಸ್ಥಳದಲ್ಲಿಯೂ ಸಹ ಆಯಾ ಶಬ್ದವಿದ್ದರೆ ಮಾತ್ರವೇ ಶ್ಲೇಷವಿದ್ದು ಆ ಶಬ್ದವಿಲ್ಲದಿದ್ದರೆ ಶ್ಲೇಷವೇ ಇಲ್ಲದಿರುವ ಪ್ರಯುಕ್ತ ಭಂಗ ಅಭಂಗ ಎರಡೂ ಇರುವ ಈ ಉಭಯಸ್ಥಲದಲ್ಲಿಯೂ ಶಬ್ದಶ್ಲೇಷವನ್ನೇ ಹೇಳಬೇಕು. ಅಂಧಕಕ್ಷಯಕರಃ ಎಂಬಲ್ಲಿ ಶಬ್ದವು ಒಂದೇ ಬಗೆಯದಾಗಿಲ್ಲ. ಹರಿಪಕ್ಷದಲ್ಲಿ ಅದು ಯಾದವರನ್ನೂ, ಹರಪಕ್ಷದಲ್ಲಿ ಒಬ್ಬ ರಾಕ್ಷಸನನ್ನೂ ತಿಳಿಸುತ್ತದೆ. ಹೀಗೆ ಅರ್ಥದಲ್ಲಿ ವ್ಯತ್ಯಾಸವಿರುವ ಪ್ರಯುಕ್ತ ಶಬ್ದದಲ್ಲೂ ಭೇದವಿರುವುದು ಸಹಜ. ಹೀಗೆ ಉಭಯ ಶ್ಲೇಷವಿರುವ ಕಡೆ ಶಬ್ದಕ್ಕೆ ಪ್ರಾಧಾನ್ಯವಿರುವುದರಿಂದ ಅದು ಶಬ್ದಶ್ಲೇಷವೇ ಹೊರತು ಬೇರೆಯಲ್ಲ." ಹೀಗೆ ಹೇಳುತ್ತಾರೆ.

ಇದೂ ಅಲ್ಲದೆ ಅಲ್ಲಿ ಶಬ್ದಕ್ಕೇ ಪ್ರಾಮುಖ್ಯತೆ ಇರುವುದರಿಂದಲೂ, ಅಂತಹ ಶಬ್ದದಲ್ಲಿಯೇ ವೈಚಿತ್ರ್ಯವಿರುವುದರಿಂದಲೂ, ಅದಿಲ್ಲದಿದ್ದರೆ ವೈಚಿತ್ರ್ಯವೇ ಇಲ್ಲದ್ದರಿಂದಲೂ ಕವಿಯು ತನ್ನ ಅಸಾಧಾರಣವಾದ ಪ್ರತಿಭಾಶಕ್ತಿಯಿಂದ ಸಂದರ್ಭಕ್ಕೆ ಅನುಗುಣವಾಗಿ ಶಬ್ದವನ್ನು ಪ್ರಯೋಗಿಸಿರುವ ಪ್ರಯುಕ್ತ ಈ ಬಗೆಯ ಶ್ಲೇಷವು ಶಬ್ದಾಲಂಕಾರವೇ ಆಗುತ್ತದೆ. ಅರ್ಥವೂ ಸಹ ವಾಚ್ಯವಾದ್ದರಿಂದ ಮುಖ್ಯವೆನಿಸಿ ಕವಿಯ ಪ್ರತಿಭೆಯಿಂದಲೇ ಹೊರಹೊಮ್ಮುವುದರಿಂದ ಅದನ್ನಾಶ್ರಯಿಸಿದ ಶ್ಲೇಷವು ಅರ್ಥಾಲಂಕಾರವೇ ಆಗಲಿ, ಎಂದು ಆಕ್ಷೇಪಿಸಿದರೆ ಅವಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. 'ಯಾದವಕ್ಷಯಕರಃ' 'ಅಂಧಕಕ್ಷಯಕರಃ' ಹೀಗೆ ಪರಸ್ಪರವಾಗಿ ಬೇರೆ ಎನಿಸಿದ ಶಬ್ದಗಳನ್ನು ಜೋಡಿಸಿದರೆ ವೈಚಿತ್ರ್ಯವಿರುವುದಿಲ್ಲ. ಅಲಂಕಾರಶಾಸ್ತ್ರದಲ್ಲಿ ವೈಚಿತ್ರ್ಯವೇ ಅವಶ್ಯವಾಗಿ ಗಮನಿಸಬೇಕಾದ ಅಂಶ. ಅದನ್ನೇ ಅಲಂಕಾರವೆಂಬು ಇಲ್ಲಿ ಕರೆಯಲಾಗಿದೆ. ಹೀಗೆ ಎರಡು ಅರ್ಥಗಳೂ ತೋರುವಂತೆ ಅಂಧಕ ಎಂಬ ಪದವೇ ಇರಬೇಕು. ಇಲ್ಲಿ ಅರ್ಥವೇ ಮುಖ್ಯವೆಂದು ಅಂಗೀಕರಿಸಿದರೂ ಸಹ ವೈಚಿತ್ರ್ಯವಿಲ್ಲದ್ದರಿಂದ ಇದು ಅರ್ಥಾಲಂಕಾರವೆನಿಸಲಾರದು. ಸಭಂಗಸ್ಥಲದಲ್ಲಿ ಅರ್ಥವನ್ನು ಗಮನಿಸದೆ ಶಬ್ದಗಳನ್ನು ಜೋಡಿಸಿರುವುದರಿಂದ ಅದು ಶಬ್ದಾಲಂಕಾರವೇ ಆಗಲಿ: ಅಭಂಗಸ್ಥಲದಲ್ಲಿ ಅರ್ಥವನ್ನು ಗಮನಿಸುವ ಪ್ರಯುಕ್ತ ಅದು ಏಕೆ ಅರ್ಥಾಲಂಕಾರವಾಗಬಾರದು? ಎಂಬುದಾಗಿ ಮತ್ತೆ ಆಕ್ಷೇಪಿಸಿ ಸಮಾಧಾನಮಾಡುತ್ತಾನೆ. ಅಂತಹ ಕಡೆಗಳಲ್ಲಿ ಅರ್ಥಕ್ಕೆ ಕೊಂಚ ಸಂಬಂಧವಿರುವುದರಿಂದಲೇ ಅದನ್ನು ಅರ್ಥಾಲಂಕಾರವೆಂದು ಹೇಳುವುದಾದರೆ ಅನುಪ್ರಾಸ ಮೊದಲಾದವೂ ಸಹ ರಸಕ್ಕೆ ಪೋಷಕವಾಗಿರುವುದರಿಂದ ಅಲ್ಲಿಯೂ ಅರ್ಥಕ್ಕೆ ಕೊಂಚ ಸಂಬಂಧವಿರುವ ಪ್ರಯುಕ್ತ ಅವನ್ನೂ ಅರ್ಥಾಲಂಕಾರಗಳೆಂದೇ ಕರೆಯಬೇಕಾದೀತು. ಆದ್ದರಿಂದ ಅಭಂಗಸ್ಥಲದಲ್ಲೂ ಅರ್ಥಾಲಂಕಾರವನ್ನು ಹೇಳಲಿಕ್ಕೆ ಬರುವುದಿಲ್ಲ. ಸ್ವರಕ್ಕೆ ಅನುಗುಣವಾಗಿ ಶಬ್ದವನ್ನು ಉಚ್ಚರಿಸಬೇಕಾದ್ದರಿಂದ ಶಬ್ದಶ್ಲೇಷವನ್ನು ಅರ್ಥಾಲಂಕಾರವೆಂದೇ ಒಪ್ಪುವುದಾದರೆ 'ಪ್ರತಿಕೂಲತಾಮುಪಗತೇ ಹಿ ವಿಧೌ'

ಎಂಬಲ್ಲಿ ವಿಧೌ ಎಂಬುವ ಕಡೆ ಸಮಾಸವಿಲ್ಲದ್ದರಿಂದ ಸ್ವರದಲ್ಲಿ ಭೇದವೂ ಇಲ್ಲದ ಪ್ರಯುಕ್ತ ಈ ಶಬ್ದದಲ್ಲಿ ಶ್ಲೇಷವಿರುವುದರಿಂದ ನಿಮ್ಮ ಮತದಲ್ಲೂ ಶಬ್ದಶ್ಲೇಷವನ್ನು ಅರ್ಥಾಲಂಕಾರವೆಂದೇ ಭಾವಿಸಬೇಕಾದೀತು. ಆದ್ದರಿಂದ 'ಯೇನ ಧ್ವಸ್ತ' ಎಂಬ ಸಭಂಗಸ್ಥಲವಲ್ಲೂ ಶಬ್ದಾಲಂಕಾರವನ್ನೇ ಹೇಳುವುದು ಉಚಿತ. ಹಾಗಾದರೆ ಅರ್ಥ ಶ್ಲೇಷವನ್ನು ಎಲ್ಲಿ ಹೇಳಬೇಕೆಂಬುದನ್ನು ತಿಳಿಸುತ್ತಾನೆ. ಎಲ್ಲಿ ಶಬ್ದವನ್ನು ಬದಲಾಯಿಸಿದರೂ ಸಹ ಶ್ಲೇಷವಿದ್ದೇ ಇರುವುದೋ ಅಲ್ಲಿ ಅರ್ಥಶ್ಲೇಷವನ್ನು ಹೇಳಬಹುದು. "ತಕ್ಕಡಿಯ ಒಟ್ಟಲಿನಲ್ಲಿ ಕೊಂಚ ಭಾರವನ್ನು ಹಾಕಿದರೂ ಅಥವಾ ತೆಗೆದರೂ ಅದರಲ್ಲಿ ಏರಿಳಿತಗಳು ಕಂಡುಬರುತ್ತವೆ. ಹಾಗೆಯೇ ನೀಚನಿಗೆ ಕೊಂಚ ಹಣವನ್ನು ಕೊಟ್ಟರೂ ಅವನು ಮರೆಯುವನು. ಅಥವಾ ಆ ಹಣವು ನಾಶವಾದರೆ ಅವನು ದೈನ್ಯದಿಂದ ನರಳುವನು. ಹೀಗೆ ನೀಚನವರ್ತನವು ತ್ರಾಸಿನ ಸ್ಥಿತಿಗೆ ಸಮವೆನಿಸಿದೆ." ಇಲ್ಲಿ 'ಅಲ್ಪೇನ ಉದ್ಗತಿಂ, ಅಧೋಗತಿಂ' ಈ ಬಗೆಯ ಶಬ್ದಗಳನ್ನು ಬದಲಾಯಿಸಿದರೂ ಸಹ ವಿಧಿರೂಪವಾದ ಅರ್ಥವೇ ತೋರುತ್ತದೆ. ಈ ಬಗೆಯ ಅರ್ಥವಿದ್ದರೆಯೇ ಶ್ಲೇಷವಿದ್ದು, ಆ ಅರ್ಥವು ಶ್ಲೇಷವೆನಿಸುತ್ತದೆ. ಸಹಜವಾಗಿ ಅನೇಕ ಅರ್ಥಗಳಿರುವ ಶಬ್ದಗಳಿಂದ ಅನೇಕ ಅರ್ಥಗಳನ್ನು ತಿಳಿಸುವ ಕಡೆ ಶಬ್ದಶ್ಲೇಷವಿರುತ್ತದೆ. ಆದರೆ ಸಹಜವಾಗಿ ಒಂದೇ ಅರ್ಥವಿರುವ ಶಬ್ದಗಳಿಂದ ಅನೇಕ ಅರ್ಥಗಳನ್ನು ತಿಳಿಸುವ ಕಡೆಗಳಲ್ಲಿ ಮಾತ್ರ ಅರ್ಥಶ್ಲೇಷವನ್ನೇ ಹೇಳಬೇಕು. ಅನೇಕ ಅರ್ಥಗಳಿರುವ ಪದಗಳಿಂದ ಅನೇಕ ಅರ್ಥಗಳನ್ನು ತಿಳಿಸುವುದೇ ಶಬ್ದಶ್ಲೇಷ. ಒಂದೇ ಅರ್ಥವನ್ನು ತಿಳಿಸುವ ಅನೇಕಾರ್ಥಗಳನ್ನು ತಿಳಿಸುವುದೇ ಅರ್ಥಶ್ಲೇಷ. ಈ ಬಗೆಯ ಅಭಿಪ್ರಾಯದಲ್ಲಿ ಯಾರಿಗೂ ಭೇದಭಾವನೆಯೇ ಇಲ್ಲ. ಇದರಿಂದ ಸಭಂಗಸ್ಥಲದಲ್ಲಿ ಶಬ್ದಶ್ಲೇಷವುಂಟೆಂದು ಒಪ್ಪಲೇಬೇಕು. ಅಭಂಗಸ್ಥಲದಲ್ಲಾದರೋ ಅನೇಕ ಅರ್ಥಗಳಿರುವ ಪದಗಳಿಂದ ಅನೇಕ ಅರ್ಥಗಳನ್ನು ತಿಳಿಸುವಾಗ ಶಬ್ದಶ್ಲೇಷವೂ, ಒಂದೇ ಅರ್ಥವಿರುವ ಪದದಿಂದಲೇ ಅನೇಕ ಅರ್ಥಗಳನ್ನು ತಿಳಿಸುವಾಗ ಅಭಂಗಶ್ಲೇಷವೂ ಉಂಟೆಂದು ವ್ಯವಸ್ಥೆಯನ್ನ ಒಪ್ಪುವುದೇ ಯುಕ್ತವೆನಿಸಿದೆ.

"ಅಸ್ಯ ಚ ಅಲಂಕಾರಾಂತರವಿವಿಕ್ತವಿಷಯತಾಯಾಃ ಅಸಂಭವಾತ್ ವಿದ್ಯಮಾನೇಷ್ವಲಂಕಾರೇಷು ಅಪವಾದತ್ವೇನ ತದ್ಬಾಧಕತಯಾ ತತ್ರ ಪ್ರತಿಭೋತ್ಪತ್ತಿ ಹೇತುತ್ವಮ್" ಇತಿ ಕೇಚಿತ್. ಇತ್ಥಮತ್ರ ವಿಚಾರ್ಯತೇ. ಸಮಾಸೋಕ್ತ್ಯಪ್ರಸ್ತುತಪ್ರಶಂಸಾದೌ ದ್ವಿತೀಯಾರ್ಥಸ್ಯ ಅನಭಿಧೇಯತಯಾ ನಾಸ್ಯ ಗಂಧೋಽಪಿ. ವಿದ್ವನ್ಮಾನಸಹಂಸ' ಇತ್ಯಾದೌ ಶ್ಲೇಶಗರ್ಭೇ ರೂಪಕೇಽಪಿ ಮಾನಸಶಬ್ದಸ್ಯ ಚಿತ್ತಸರೋರೂಪೋಭಯಾರ್ಥತ್ವೇಽಪಿ ರೂಪಕೇಣ ಶ್ಲೇಷೋ ಬಾಧ್ಯತೇ, ಸರೋರೂಪಸ್ಯೈವಾರ್ಥಸ್ಯ ವಿಶ್ರಾಮಧಾಮತಯಾ ಪ್ರಾಧಾನ್ಯಾತ್. ಶ್ಲೇಷೇ ಹಿ ಅರ್ಥದ್ವಯಸ್ಯಾಪಿ ಸಮಕಕ್ಷತ್ವಮ್. 'ಸನ್ನಿಹಿತಬಾಲಾಂಧಕಾರಭಾಸ್ವನ್ಮೂರ್ತಿಶ್ಚ' ಇತ್ಯಾದೌ ವಿರೋಧಾಭಾಸೇಽಪಿ ವಿರುದ್ಧಾರ್ಥಸ್ಯ ಪ್ರತಿಭೋತ್ಪನ್ನಸ್ಯ ಪ್ರರೋಹಾಭಾವಾನ್ನ ಶ್ಲೇಷಃ.

ಏವಂ ಪುನರುಕ್ತವದಾಭಾಸೇಽಪಿ. ತೇನ 'ಯೇನ ಧ್ವಸ್ತ' ಇತ್ಯಾದೌ ಪ್ರಾಕರಣಿಕಯೋಃ 'ನೀತಾನಾಮ್' ಇತ್ಯಾದೌ ಅಪ್ರಾಕರಣಿಕಯೋಃ ಏಕಧರ್ಮಾಭಿಸಂಬಂಧಾತ್.

ಸ್ವೇಚ್ಛೋಪಜಾತವಿಷಯೋಽಪಿ ನ ಯಾತಿ ವಕ್ತುಂ
ದೇಹೀತಿ ಮಾರ್ಗಣಶತೈಶ್ಚ ದದಾತಿ ದುಃಖಮ್ ।
ಮೋಹಾತ್ಸಮುತ್ಕ್ಷಿಪತಿ ಜೀವನಮಪ್ಯ ಕಾಂಡೇ
ಕಷ್ಟಂ ಪ್ರಸೂನವಿಶಿಖಃ ಪ್ರಭುರಲ್ಪಬುದ್ಧಿಃ ॥

ಇತ್ಯಾದೌ ಚ ಪ್ರಾಕರಣಿಕಯೋರೇಕಧರ್ಮಾಭಿಸಂಬಂಧಾತ್ ದೀಪಕೇ. 'ಸಕಲಕಲಂ ಪುರಮೇತತ್ ಜಾತಂ ಸಂಪ್ರತಿ ಸುಧಾಂಶುಬಿಂಬಮಿವ' ಇತ್ಯಾದೌ ಚ ಉಪಮಾಯಾಂ ವಿದ್ಯಮಾನಾಯಾಮಪಿ ಶ್ಲೇಷಸ್ಯೈತದ್ವಿಷಯಪರಿಹಾರೇಣಾಸಂಭವಾತ್. ಏಷಾಂ ಚ ಶ್ಲೇಷವಿಷಯಪರಿಹಾರೇಣಾಪಿ ಸ್ಥಿತೇಃ. ಏತದ್ವಿಷಯೇ ಶ್ಲೇಷಸ್ಯ ಪ್ರಾಧಾನ್ಯೇನ ಚಮತ್ಕಾರಿತ್ವಪ್ರತೀತೇಶ್ಚ ಶ್ಲೇಷೇಣೈವ ವ್ಯಪದೇಶೋ ಭವಿತುಂ ಯುಕ್ತಃ. ಅನ್ಯಥಾ ತದ್ವ್ಯಪದೇಶಸ್ಯ ಸರ್ವಥಾ ಅಭಾವಪ್ರಸಂಗಾಚ್ಚ' ಇತಿ.

ಅತ್ರೋಚ್ಯತೇ— ನ ತಾವತ್ಪರಮಾರ್ಥತಃ ಶ್ಲೇಷಸ್ಯಾಲಂಕಾರಾಂತರಾವಿವಿಕ್ತವಿಷಯತಾ, 'ಯೇನ ಧ್ವಸ್ತ' ಇತ್ಯಾದಿನಾ ವಿವಿಕ್ತವಿಷಯತ್ವಾತ್. ನ ಚಾತ್ರ ತುಲ್ಯಯೋಗಿತಾ ತಸ್ಯಾಶ್ಚ ದ್ವಯೋರಪ್ಯರ್ಥಯೋಃ ವಾಚ್ಯತ್ವನಿಯಮಾಭಾವಾತ್. ಅತ್ರ ಹಿ ಮಾಧವೋಮಾಧವಯೋಃ ಏಕಸ್ಯ ವಾಚ್ಯತ್ವನಿಯಮೇಽಪರಸ್ಯ ವ್ಯಂಗ್ಯತ್ವಂ ಸ್ಯಾತ್. ಕಿಂಚ ತುಲ್ಯಯೋಗಿತಾಯಾಮಪ್ಯೇಕಸ್ಯೈವ ಧರ್ಮಸ್ಯ ಅನೇಕಧರ್ಮಿಸಂಬದ್ಧತಯಾ ಪ್ರತೀತಿಃ. ಇಹ ತ್ವನೇಕೇಷಾಂ ಧರ್ಮಾಣಾಂ ಪ್ರಥಕ್‌ಪೃಥಕ್ ಧರ್ಮಸಂಬದ್ಧತಯಾ 'ಸಕಲಕಲಂ' ಇತ್ಯಾದೌ ನೋಪಮಾಪ್ರತಿಭೋತ್ಪತ್ತಿಹೇತುಃ ಶ್ಲೇಷಃ ಪೂರ್ಣೋಪಮಾಯಾಃ ನಿರ್ವಿಷಯತ್ವಾಪತ್ತೇಃ. 'ಕಮಲಮಿವ ಮುಖಂ ಮನೋಜ್ಞಮೇತತ್' ಇತ್ಯಾದ್ಯಸ್ತಿ ಪೂರ್ಣೋಪಮಾಯಾ ವಿಷಯ ಇತಿ ಚೇನ್ನ; ಯದಿ 'ಸಕಲಕಲಮ್' ಇತ್ಯಾದೌ ಶಬ್ದಶ್ಲೇಷತಯಾ ನೋಪಮಾ, ತತ್ಕಿಮಪರಾದ್ಧಂ 'ಮನೋಜ್ಞಮ್' ಇತ್ಯಾದೌ ಅರ್ಥಶ್ಲೇಷೇಣ ?

ಸ್ಫುಟಮರ್ಥಾಲಂಕಾರಾವೇತಾ ಉಪಮಾಸಮುಚ್ಚಯೌ ಕಿಂತು ।
ಆಶ್ರಿತ್ಯ ಶಬ್ದಮಾತ್ರಂ ಸಾಮಾನ್ಯಮಿಹಾಪಿ ಸಂಭವತಃ ॥

ಇತಿ ರುದ್ರಟೋಕ್ತದಿಶಾ ಗುಣಕ್ರಿಯಾಸಾಮ್ಯವಚ್ಛಬ್ದಸಾಮ್ಯಸ್ಯಾಪಿ ಉಪಮಾಪ್ರಯೋಜಕತ್ವಾತ್.

ನನು ಗುಣಕ್ರಿಯಾಸಾಮ್ಯಸ್ಯೈವ ಉಪಮಾಪ್ರಯೋಜಕತಾ ಯುಕ್ತಾ ತತ್ರ ಸಾಧರ್ಮ್ಯಸ್ಯ ವಾಸ್ತವತ್ವಾತ್. ಶಬ್ದಸಾಮ್ಯಸ್ಯ ತು ನ ತಥಾ, ತತ್ರ ಸಾಧರ್ಮ್ಯಸ್ಯ ಅವಾಸ್ತವತ್ವಾತ್. ತತಶ್ಚ ಪೂರ್ಣೋಪಮಾಯಾಃ ಅನ್ಯಥಾನುಪಪತ್ತೇಃ ಗುಣಕ್ರಿಯಾಸಾಮ್ಯಸ್ಯೈವ ಅರ್ಥಶ್ಲೇಷವಿಷಯತಾಪತ್ತಾವೇ ಪೂರ್ಣೋಪಮಾ

ವಿಷಯತಾ ಯುಕ್ತಾ, ನ ತು 'ಸಕಲಕಲಂ' ಇತ್ಯಾದೌ ಶಬ್ದಸಾಮ್ಯಸ್ಯೈವೇತಿ ಚೇನ್ನ; 'ಸಾಧರ್ಮ್ಯಮುಪಮಾ' ಇತ್ಯೇವ ಅವಿಶಿಷ್ಟಸ್ಯ ಉಪಮಾಲಕ್ಷಣಸ್ಯ ಶಬ್ದಸಾಮ್ಯಾತ್ ವ್ಯಾವೃತ್ತೇರಭಾವಾತ್. ಯದಿ ಚ ಶಬ್ದಸಾಮ್ಯೇ ಸಾಧರ್ಮ್ಯಮವಾಸ್ತವತ್ವಾತ್ ನೋಪಮಾಪ್ರಯೋಜಕಮ್, ತದಾ ಕಥಂ 'ವಿದ್ವನ್ಮಾನಸಹಂಸ' ಇತ್ಯಾದೌ ಆಧಾರಭೂತೇ ಚಿತ್ತಾದೌ ಸರೋವರಾದ್ಯಾರೂಪಃ ರಾಜಾದೇರ್ಹಂಸಾದ್ಯಾರೋಪಪ್ರಯೋಜಕಃ? ಕಿಂಚ ಯದಿ ವಾಸ್ತವಸಾಮ್ಯ ಏವೋಪಮಾಂಗೀಕಾರ್ಯಾ, ತದಾ ಕಥಂ ತ್ವಯಾಪಿ 'ಸಕಲಕಲಮ್' ಇತ್ಯಾದೌ ಬಾಧ್ಯಭೂತಾ ಉಪಮಾ ಅಂಗೀಕ್ರಿಯತೇ? ಕಿಂ ಚಾತ್ರ ಶ್ಲೇಷಸ್ಯೈವ ಸಾಮ್ಯನಿರ್ವಾಹಕತಾ, ನ ತು ಸಾಮ್ಯಸ್ಯ ಶ್ಲೇಷನಿರ್ವಾಹಕತಾ, ಶ್ಲೇಷಬಂಧತಃ ಪ್ರಥಮಂ ಸಾಮ್ಯಸ್ಯಾಸಂಭವಾತ್ ಇತ್ಯುಪಮಯೈವಾಂಗಿತ್ವೇನ ವ್ಯಪದೇಶೋ ಜ್ಯಾಯಾನ್, ಪ್ರಧಾನೇನ ಹಿ ವ್ಯಪದೇಶಾ ಭವಂತಿ, ಇತಿ ನ್ಯಾಯಾತ್.

ನನು ಶಬ್ದಾಲಂಕಾರವಿಷಯೇ ಅಂಗಾಂಗಿಭಾವಸಂಕರೋ ನಾಂಗೀಕ್ರಿಯತೇ, ತತ್ಕಥಮತ್ರ ಶ್ಲೇಷೋಪಮಯೋರಂಗಾಂಗಿಭಾವಃ ಸಂಕರ ಇತಿ ಚೇನ್ನ; ಅರ್ಥಾನುಸಂಧಾನವಿರಹಿಣ್ಯನುಪ್ರಾಸಾದಾವೇವ ತಥಾಽನಂಗೀಕಾರಾತ್. ಏವಂ ದೀಪಕಾದಾವಪಿ ಜ್ಞೇಯಮ್.

ಸತ್ಪಕ್ಷಾ ಮಧುರಗಿರಃ ಪ್ರಸಾಧಿತಾಶಾ ಮದೋದ್ಧತಾರಂಭಾಃ ।
ನಿಪತಂತಿ ಧಾರ್ತರಾಷ್ಟ್ರಾಃ ಕಾಲವಶಾನ್ಮೇದಿನೀಪೃಷ್ಠೇ ॥

ಅತ್ರ ಶರದ್ವರ್ಣನಯಾ ಪ್ರಕರಣೇನ ಧಾರ್ತರಾಷ್ಟ್ರಾದಿಶಬ್ದಾನಾಂ ಹಂಸಾದ್ಯರ್ಥಾಭಿಧಾನೇ ನಿಯಮಾತ್ ದುರ್ಯೋಧನಾದಿರೂಪೋಽರ್ಥಃ ಶಬ್ದಶಕ್ತಿಮೂಲೋ ವಸ್ತುಧ್ವನಿಃ. ಇಹ ಚ ಪ್ರಕೃತಪ್ರಬಂಧಾಭಿಧೇಯಸ್ಯಾರ್ಥಸ್ಯ ಸೂಚ್ಯತಯೈವ ವಿವಕ್ಷಿತತ್ವಾತ್ ಉಪಮಾನೋಪಮೇಯಭಾವೋ ನ ವಿವಕ್ಷಿತಃ ಇತಿ ನೋಪಮಾಧ್ವನಿರ್ವಾ ಶ್ಲೇಷ ಇತಿ ಸರ್ವಮವದಾತಮ್.

ಪದ್ಮಾದ್ಯಾಕಾರಹೇತುತ್ವೇ ವರ್ಣಾನಾಂ ಚಿತ್ರಮುಚ್ಯತೇ ।

ಆದಿಶಬ್ದಾತ್ ಖಡ್ಗಮುರಜಚಕ್ರಗೋಮೂತ್ರಿಕಾದಯಃ. ಅಸ್ಯ ಚ ತಥಾವಿಧಲಿಪಿಸನ್ನಿವೇಶವಿಶೇಷವಶೇನ ಚಮತ್ಕಾರವಿಧಾಯಿನಾಮಪಿ ವರ್ಣಾನಾಂ ತಥಾವಿಧಶ್ರೋತ್ರಾಕಾಶಸಮವಾಯವಿಶೇಷವಶೇನ ಚಮತ್ಕಾರವಿಧಾಯಿಭಿರ್ವರ್ಣೈರಭೇದೇನೋಪಚಾರಾತ್ ಶಬ್ದಾಲಂಕಾರತ್ವಮ್. ತತ್ರ ಪದ್ಮಬಂಧೋ ಯಥಾ ಮಮ—

ಮಾರಮಾ ಸುಷಮಾ ಚಾರುರುಚಾ ಮಾರವಧೂತ್ತಮಾ ।
ಮಾತ್ತಧೂರ್ತತಮಾವಾಸಾ ಸಾ ವಾಮಾ ಮೇಽಸ್ತು ಮಾ ರಮಾ ॥

ಏಷೋಽಷ್ಟದಳಪದ್ಮಬಂಧೋ ದಿಗ್ದಲೇಷು ನಿರ್ಗಮಪ್ರವೇಶಾಭ್ಯಾಂ ಶ್ಲಿಷ್ಟವರ್ಣಃ ಕಿಂತು ವಿದಿಗ್ದಲೇಷ್ವನ್ಯಥಾ, ಕರ್ಣಿಕಾಕ್ಷರಂ ತು ಶ್ಲಿಷ್ಟಮೇವ. ಏವಂ ಖಡ್ಗಬಂಧಾದಿಕಮಪ್ಯೂಹ್ಯಮ್. ಕಾವ್ಯಾಂತರ್ಗಡುಭೂತತಯಾ ತು ನೇಹ ಪ್ರಪಂಚ್ಯತೇ.

ರಸಸ್ಯ ಪರಿಪಂಥಿತ್ವಾನ್ನಾಲಂಕಾರಃ ಪ್ರಹೇಳಿಕಾ ।
ಉಕ್ತಿವೈಚಿತ್ರ್ಯಮಾತ್ರಂ ಸಾ ಚ್ಯುತದತ್ತಾಕ್ಷರಾದಿಕಾ ॥

ಚ್ಯುತಾಕ್ಷರಾ ದತ್ತಾಕ್ಷರಾ ಚ್ಯುತದತ್ತಾಕ್ಷರಾ ಚ. ಉದಾಹರಣಮ್.

ಕೂಜಂತಿ ಕೋಕಿಲಾಃ ಸಾಲೇ ಯೌವನೇ ಫುಲ್ಲಮಂಬುಜಮ್ ।
ಕಿಂ ಕರೋತು ಕುರಂಗಾಕ್ಷೀ ವದನೇನ ನಿಪೀಡಿತಾ.

ಅತ್ರ ' ರಸಾಲೇ ' ಇತಿ ವಕ್ತವ್ಯೇ 'ಸಾಲೇ' ಇತಿ 'ರಃ' ಚ್ಯುತಃ. ' ವನೇ ' ಇತ್ಯತ್ರ ಯೌವನೇ ಇತಿ 'ಯೌ' ದತ್ತಃ. 'ವದನೇನ' ಇತ್ಯತ್ರ ' ಮದನೇನ ' ಇತಿ 'ಮಃ' ಚ್ಯುತಃ ' ವಃ ' ದತ್ತಃ,

ಆದಿಶಬ್ದಾತ್ ಕ್ರಿಯಾಕಾರಕಗುಪ್ತ್ಯಾದಯಃ. ತತ್ರ ಕ್ರಿಯಾಗುಪ್ತಿರ್ಯಥಾ

ಪಾಂಡವಾನಾಂ ಸಭಾಮಧ್ಯೇ ದುರ್ಯೋಧನ ಉಪಾಗತಃ ।
ತಸ್ಮೈ ಗಾಂ ಚ ಹಿರಣ್ಯಂ ಚ ಸರ್ವಾಣ್ಯಾಭರಣಾನಿ ಚ ॥

ಅತ್ರ ' ದುರ್ಯೋಧನಃ ' ಇತ್ಯತ್ರ ' ಅದುರ್ಯೋಽಧನಃ ' ಇತಿ 'ಅದುಃ ' ಇತಿ ಕ್ರಿಯಾಗುಪ್ತಿಃ. ಏವಮನ್ಯತ್ರಾಪಿ.

ಬೇರೆ ಅಲಂಕಾರವಿಲ್ಲದೆಡೆಯಲ್ಲಿಯೇ ಶ್ಲೇಷವಿರುತ್ತದೆ ಎಂಬುವನ್ನು ಪ್ರತಿಪಾದಿಸಲಿಕ್ಕಾಗಿ ಪರಮತಗಳನ್ನು ಖಂಡಿಸುತ್ತಾನೆ. ಈ ಬಗ್ಗೆ ಕೆಲವರು "ಈ ಶ್ಲೇಷವು ಮತ್ತೊಂದು ಅಲಂಕಾರವೆನಿಸಿ ಪ್ರತ್ಯೇಕವಾಗಿ ಅನ್ವಯಿಸಲಿಕ್ಕಾಗದ ಪ್ರಯುಕ್ತ ಒಂದೆಡೆಯಲ್ಲಿರುವ ಬೇರೆ ಅಲಂಕಾರಗಳಲ್ಲಿಯೇ ಅಪವಾದರೂಪದಿಂದ ಅವಕ್ಕೆ ಬಾಧಕವಾಗಿದ್ದುಕೊಂಡು ಅವುಗಳನ್ನು ಪ್ರಕಾಶಿಸಲು ಕಾರಣವೆನಿಸುವುದು" ಎಂದು ಹೇಳುತ್ತಾರೆ" ಎಲ್ಲಿ ಬೇರೆ ಅಲಂಕಾರಗಳಿರುತ್ತವೆಯೋ ಅಲ್ಲಿಯೇ ಶ್ಲೇಷವಿರುತ್ತದೆ. ಬೇರೆ ಅಲಂಕಾರಗಳ ಉದಾಹರಣಗಳನ್ನು ತೊರೆದು ಶ್ಲೇಷಕ್ಕೆ ಸ್ವತಂತ್ರವಾಗಿ ತನ್ನದೇ ಆದ ಉದಾಹರಣವೇ ಇರಲಾರದು. ಎಲ್ಲಿಯಾದರೂ ಒಂದೊಂದು ಬಗೆಯ ಅಲಂಕಾರವಿದ್ದೇ ಇರುವ ಪ್ರಯುಕ್ತ ಬೇರೆ ಯಾವ ಅಲಂಕಾರವೂ ಇಲ್ಲದಂತಹ ಪರಿಸ್ಥಿತಿಯೇ ಸಂಭವಿಸದ್ದರಿಂದ ಶ್ಲೇಷವು ಸ್ವತಂತ್ರವಾಗಿ ಎಲ್ಲಿಯೂ ಸಂಭವಿಸುವಂತಿಲ್ಲ. ಬೇರೆಕಡೆ ಇದ್ದರೂ ಇದು ವಿಶೇಷರೂಪದಿಂದ ಬಾಧಕವಾಗಿಯೇ ಇರುತ್ತದೆ. ಅಲ್ಲಿ ಬೇರೆ ಅಲಂಕಾರಗಳು ಸಾಮಾನ್ಯವೆನಿಸಿರುತ್ತವೆ. ಅದ್ದರಿಂದಲೇ ಒಂದು ಕಡೆ ಇರುವ ಬೇರೆ ಅಲಂಕಾರಗಳನ್ನು ಬಾಧಿಸಿ ಶ್ಲೇಷವೇ ಮೊದಲು ತೋರುತ್ತದೆ. ಶ್ಲೇಷವು ತೋರಿದಮೇಲೆಯೇ ಬೇರೆ ಅಲಂಕಾರಗಳು ತೋರುತ್ತವೆ" ಹೀಗೆ ಇವರು ಅಭಿಪ್ರಾಯಪಡುವರು.

ಶ್ಲೇಷಾಲಂಕಾರದ ಬಗ್ಗೆ ವಿಮರ್ಶಕರು ಹೀಗೆ ಬೇರೆಬೇರೆಯಾಗಿ ಅಭಿಪ್ರಾಯಪಟ್ಟಿರುವುದರಿಂದ ಈ ವಿಷಯವನ್ನು ವಿಮರ್ಶೆ ಮಾಡಿ ಪರಮತಗಳನ್ನು ಖಂಡಿಸಿ ಸ್ವಂತ ಅಭಿಪ್ರಾಯವನ್ನು ಮುಂದೆ ತಿಳಿಸಲಾಗುವುದು. ಸಮಾಸೋಕ್ತಿ ಅಪ್ರಸ್ತುತಪ್ರಶಂಸೆ ಮೊದಲಾದ ಕಡೆಗಳಲ್ಲಿ ತೋರುವ ಎರಡನೆಯ ಅರ್ಥವು ವಾಚ್ಯವೆನಿಸದೆ ಇರುವ ಪ್ರಯುಕ್ತ ಅಭಿಧಾವೃತ್ತಿಯನ್ನು ಬಿಟ್ಟು ವ್ಯಂಜನಾವೃತ್ತಿಯಿಂದಲೇ ಸಹೃದಯರಿಗೆ

ಗೋಚರವಾಗುತ್ತದೆ. ಅಲ್ಲಿ ಶ್ಲೇಷವು ಸುಳಿಯುವಂತೆಯೇ ಇಲ್ಲ. ವ್ಯಂಜನಾವೃತ್ತಿಯಿಂದ ತಿಳಿಯಬರುವ ಸಮಾಸೋಕ್ತಿ ಮೊದಲಾದ ಕಡೆಗಳಲ್ಲಿ ಶ್ಲೇಷವು ಸಂಭವಿಸುವುದಿಲ್ಲ. ಆದರೆ ಶ್ಲಿಷ್ಟಪರಂಪರಿತರೂಪಕದಲ್ಲಿ ಎರಡು ಬಗೆಯ ಅರ್ಥವೂ ವಾಚ್ಯವೇ ಆದ್ದರಿಂದ ಅಲ್ಲಿ ಶ್ಲೇಷವು ಪ್ರವರ್ತಿಸಲಿ ಎಂದರೆ ಅದು ಹೊಂದುವುದಿಲ್ಲವೆಂಬುದನ್ನು ತಿಳಿಸುತ್ತಾನೆ. 'ವಿದ್ವನ್ಮಾನಸಹಂಸ' ಎಂಬಲ್ಲಿ ಶ್ಲೇಷದಿಂದ ಕೂಡಿರುವ ರೂಪಕದಲ್ಲಿಯೂ ಮಾನಸಶಬ್ದಕ್ಕೆ ಚಿತ್ತ, ಸರೋವರ ಎಂದು ಎರಡು ಅರ್ಥಗಳು ತೋರಿದರೂ ರೂಪಕವು ಶ್ಲೇಷವನ್ನು ಬಾಧಿಸುತ್ತದೆ. ಅಲ್ಲಿ ಸರೋವರವೆಂಬ ಅರ್ಥದಲ್ಲಿಯೇ ಮಾನಸಪದವು ವಿಶ್ರಾಂತಿಯನ್ನು ಹೊಂದುವುದರಿಂದ ಆ ಅರ್ಥವೇ ಅಲ್ಲಿ ಪ್ರಾಧಾನವೆನಿಸಿದೆ. ಶ್ಲೇಷದಲ್ಲಾದರೋ ಎರಡು ಅರ್ಥಗಳೂ ಸಮವೆನಿಸಿರುತ್ತವೆಯೇ ಹೊರತು ಒಂದು ಒಂದು ಪ್ರಧಾನ ಮತ್ತೊಂದು ಅಪ್ರಧಾನವೆನಿಸುವ ಸಂಭವವಿಲ್ಲ. ರೂಪಕದಲ್ಲಿ ಎರಡು ಅರ್ಥಗಳೂ ವಾಚ್ಯವೇ ಆಗಿದ್ದರೂ ಒಂದು ಪ್ರಧಾನವಾಗಿದ್ದು ಮತ್ತೊಂದು ಅಪ್ರಧಾನವೆನಿಸಿರುತ್ತದೆ. ಅಲ್ಲಿ ಮಾನಸಪದಕ್ಕೆ ಚಿತ್ತವೆಂಬ ಅರ್ಥವು ಶ್ಲೇಷದಿಂದ ತೋರಿದರೂ ದುರ್ಬಲವೆನಿಸಿದ್ದರಿಂದ ಎರಡು ಅರ್ಥಗಳಿಗೆ ಸಮಾನತೆ ಇಲ್ಲದ ಪ್ರಯುಕ್ತ ಶ್ಲೇಷವು ಸ್ವತಂತ್ರವಾಗಿ ಪ್ರವೇಶಿಸುವಂತಿಲ್ಲ. ಆದಕಾರಣ ಶ್ಲಿಷ್ಟರೂಪಕದಲ್ಲಿಯೂ ಶ್ಲೇಷವು ಸ್ವತಂತ್ರವಾಗಿ ಪ್ರವರ್ತಿಸಲಾರದು. ಹಾಗಾದರೆ ಶ್ಲಿಷ್ಟವಿರೋಧಾಭಾಸಾಲಂಕಾರದಲ್ಲಿ ಎರಡು ಅರ್ಥಗಳಿಗೆ ಸಮಪ್ರಧಾನವಿರುವುದರಿಂದ ಅಲ್ಲಿ ಶ್ಲೇಷವನ್ನು ಒಪ್ಪೋಣವೆಂದರೆ ಅದೂ ಹೊಂದುವುದಿಲ್ಲವೆಂದು ಈಗ ತಿಳಿಸುತ್ತಾನೆ. "ಹೊಸದಾಗಿ ಕವಿದಿರುವ ಕತ್ತಲೆ ಇದ್ದರೂ ಸೂರ್ಯನ ಪ್ರಕಾಶವಿದೆ" ಎಂಬಲ್ಲಿ ವಿರೋಧವಿದ್ದು "ಕೂದಲು ಕತ್ತಲೆಯಂತೆ ಕಪ್ಪುಬಣ್ಣವಿದ್ದರೂ ಆಕೆಯ ಶರೀರದಲ್ಲಿ ಲಾವಣ್ಯಪ್ರಕಾಶವಿದೆ" ಎಂದು ಹೇಳುವುದರಿಂದ ವಿರೋಧವು ತೊಲಗುತ್ತದೆ. ಸೂರ್ಯನ ಬಳಿಯಲ್ಲಿ ಕತ್ತಲೆಯಿತ್ತೆಂಬ ಅರ್ಥವು ವಿರುದ್ಧವೆನಿಸಿದೆ. ಈ ಅರ್ಥವು ಶಬ್ದಶಕ್ತಿಯಿಂದ ತೋರಿದೊಡನೆಯೇ ತೊಲಗುವ ಪ್ರಯುಕ್ತ ಅಲ್ಲಿ ಶ್ಲೇಷವು ನಿಲ್ಲುವಂತಿಲ್ಲ. ವಿರುದ್ಧಾರ್ಥವೇ ಅಸಂಭವವೆನಿಸಿದ್ದು ಮುಂದುವರಿಯದ ಪ್ರಯುಕ್ತ ಎರಡು ಬಗೆಯ ಅರ್ಥಗಳನ್ನು ಅಲ್ಲಿ ಹೇಳಲಿಕ್ಕೆ ಆಗದೆ ಸಮಾಧಾನರೂಪವಾದ ಅರ್ಥದ ಕಡೆಯೇ ನಮ್ಮ ಮನಸ್ಸು ಪ್ರವರ್ತಿಸುತ್ತದೆ. ಈ ಪರಿಸ್ಥಿತಿಯಲ್ಲಿ ಶ್ಲೇಷಕ್ಕೆ ಅಲ್ಲಿ ಸ್ವಾತಂತ್ರ್ಯವೆಲ್ಲಿಂದ ಬರಬೇಕು ? ಹೀಗಾದರೆ ಪುನರುಕ್ತವದಾಭಾಸವೆಂಬ ಅಲಂಕಾರದಲ್ಲಿ ಇಂತಹ ಸನ್ನಿವೇಶವಿಲ್ಲದ್ದರಿಂದ ಅಲ್ಲಿ ಶ್ಲೇಷವು ಸಂಭವಿಸಲಿ ಎಂದರೆ ಅದೂ ಹೊಂದುವುದಿಲ್ಲವೆಂದು ತಿಳಿಸುತ್ತಾನೆ. ಭುಜಂಗಕುಂಡಲೀ ಎಂಬಲ್ಲಿ ಸರ್ಪವೆಂಬ ಅರ್ಥವು ತೋರಿದೊಡನೆಯೇ ಪುನರುಕ್ತವೆನಿಸಿದ್ದರಿಂದ ಮುಂದಕ್ಕೆ ಬೆಳೆಯುವಂತಿಲ್ಲದ ಪ್ರಯುಕ್ತ ಅಲ್ಲಿಯೂ ವಿರೋಧಾಭಾಸದಂತೆಯೇ ಶ್ಲೇಷವು ಪ್ರವರ್ತಿಸುವಂತಿಲ್ಲ. ಸರ್ಪವೆಂಬ ಅರ್ಥವು ತೋರಿದ್ದು ಕೊನೆಯತನಕ ಇದ್ದರೆ ಆಗ ಶ್ಲೇಷವೂ ಅಲ್ಲಿ ಸೇರಿಕೊಂಡು ಸ್ವತಂತ್ರವಾಗಿ ಇರುವುದೆಂದು ಹೇಳಬಹುದಾಗಿತ್ತು. ಅಂತಹ ಪರಿಸ್ಥಿತಿಯಿಲ್ಲವಾದ್ದರಿಂದ ಅಲ್ಲಿಯೂ ಸಮಾಸೋಕ್ತಿ ಅಪ್ರಸ್ತುತಪ್ರಶಂಸೆ ರೂಪಕ ವಿರೋಧಾಭಾಸಗಳಂತೆಯೇ ಶ್ಲೇಷವನ್ನು ಹೇಳಲಿಕ್ಕಾಗುವುದಿಲ್ಲ.

ಹಾಗಾದರೆ ಶ್ಲೇಷವು ಎಲ್ಲಿ ಬೇರೆ ಅಲಂಕಾರಗಳನ್ನು ಬಾಧಿಸಿ ಸ್ವತಂತ್ರವಾಗಿ ನಿಲ್ಲಬಲ್ಲದೆಂಬುದನ್ನು ತಿಳಿಸುತ್ತಾನೆ. ಹಿಂದೆ ಹೇಳಿದ ರೀತಿಯಲ್ಲಿ ಶ್ಲೇಷವು ಸಂಭವಿಸದ ಪ್ರಯುಕ್ತ 'ಯೇನ ಧ್ವಸ್ತ' ಎಂಬ ಶ್ಲೋಕದಲ್ಲಿ ಶ್ಲೇಷದಲ್ಲಿ ತೋರುವ ಹರಿ, ಹರ ಎಂಬ ಎರಡು ಅರ್ಥಗಳು ಪ್ರಕೃತವೆನಿಸಿದ್ದು ಒಂದೇ ಕ್ರಿಯೆಯಲ್ಲಿ ಅನ್ವಯಿಸುತ್ತವೆ. 'ಸೀತಾನಾಂ' ಎಂಬಲ್ಲಿ ನಯನವೇ ಪ್ರಕೃತವೆನಿಸಿದ್ದರಿಂದ ಪದ್ಮ ಹರಣ ಎಂಬ ಎರಡು ಅರ್ಥಗಳೂ ಅಪ್ರಕೃತವೆನಿಸಿದ್ದು ಅವಕ್ಕೆ ಸಾದೃಶ್ಯವೆಂಬ ಒಂದೇ ಧರ್ಮದಲ್ಲಿ ಸಂಬಂಧವಿರುವ ಪ್ರಯುಕ್ತ ಅಲ್ಲಿ ತೋರುವ ತುಲ್ಯಯೋಗಿತೆಯಲ್ಲಿ ಶ್ಲೇಷವನ್ನು ಒಪ್ಪಬಹುದೆಂದು ತಿಳಿಸುತ್ತಾನೆ. ಹಾಗೆಯೇ ಪ್ರಕೃತ ಮತ್ತು ಅಪ್ರಕೃತವೆನಿಸಿದ ಎರಡು ಅರ್ಥಗಳಿಗು ಒಂದೇ ಧರ್ಮದಲ್ಲಿ ಅನ್ವಯವಿರುವ ದೀಪಕಾಲಂಕಾರದಲ್ಲಿಯೂ ಶ್ಲೇಷವನ್ನು ಸೇರಿಸಬಹುದೆಂಬುದನ್ನು ಉದಾಹರಿಸುತ್ತಾನೆ. ಅಪರಾಧಿ ಎಂದು ಭ್ರಾಂತಿಯಿಂದ ಶಿಕ್ಷಿತರಾಗಿರುವ ಪ್ರಜೆಗಳು ರಾಜನ ಬಗ್ಗೆ ಹೇಳುವ ಮಾತಿದು. "ನಮ್ಮ ಇಚ್ಛೆಯಂತೆ ಹೇಳಬೇಕಾದ್ದನ್ನು ಹೇಳಲಿಕ್ಕೆ ಈ ರಾಜನು ಯಾರಿಗೂ ಅವಕಾಶವನ್ನೇ ಕೊಡುತ್ತಿಲ್ಲ. (ಕಾಮನ ತನ್ನ ಇಚ್ಛೆಯಂತೆ ಪ್ರವರ್ತಿಸುವುದರಿಂದ ಇಂತವನೇ ತನ್ನ ಬಾಣಕ್ಕೆ ಗುರಿಯಾಗಬೇಕೆಂದು ಹೇಳುವುದಿಲ್ಲ. ರಾಜನಿಗೆ ಸಲ್ಲಬೇಕಾದ ಕಾಣಿಕೆಯನ್ನು ಕೊಡು ಎಂದು ಅವನ ಸೇವಕರು ಅನೇಕವೇಳೆ ಕೇಳುತ್ತ ಪ್ರಜೆಗಳಿಗೆ ದುಃಖವನ್ನುಂಟುಮಾಡುತ್ತಾರೆ (ಪ್ರೇಮಿಗಳಿಗೆ ದೇಹವಿದೆ ಎಂಬ ಕಾರಣದಿಂದಲೇ ನೂರಾರು ಬಾಣಗಳನ್ನು ಪ್ರಯೋಗಿಸಿ ಮನ್ಮಥನು ಅವರಿಗೆ ದುಃಖವನ್ನು ಕೊಡುವನು. ತನ್ನಂತೆ ಅವರಿಗೂ ದೇಹವಿಲ್ಲದಿದ್ದರೆ ಬಾಣಗಳನ್ನು ಪ್ರಯೋಗಿಸಲಿಕ್ಕೂ ದುಃಖವನ್ನು ಕೊಡಲಿಕ್ಕೂ ಅವಕಾಶವಿರುತ್ತಿರಲಿಲ್ಲ.) ಮೋಹದಿಂದ ಹಠತ್ತಾಗಿ ಪ್ರಜೆಗಳ ಜೀವನವನ್ನು ಈ ರಾಜನು ನಾಶಪಡಿಸುತ್ತಿರುವನು. (ಕಾಮನು ವ್ಯಾಮೋಹವನ್ನು ಹುಟ್ಟಿಸಿ ಆ ಕಾಲದಲ್ಲಿ ಪ್ರೇಮಿಗಳ ಬಾಳನ್ನು ಹಾಳು ಮಾಡುವನು) ಹೀಗೆ ಪುಷ್ಪಬಾಣನೆನಿಸಿದ ಕಾಮ ಮತ್ತು ಅಲ್ಪಬುದ್ಧಿ ಎನಿಸಿದ ರಾಜ ಇವರಿಬ್ಬರೂ ಜನರಿಗೆ ಅನೇಕ ಬಗೆಯ ಕಷ್ಟಗಳನ್ನು ಕೊಡುತ್ತಿರುವರು" ಇಲ್ಲಿ ರಾಜನ ವಿಷಯವೇ ಪ್ರಕೃತವೆನಿಸಿದ್ದು ಮನ್ಮಥನ ವಿಷಯವು ಅಪ್ರಕೃತವೆನಿಸಿದ್ದು ಇವೆರಡು ಅರ್ಥಗಳಿಗೂ ಕಷ್ಟಕರವೆಂಬ ಒಂದೇ ಧರ್ಮದಲ್ಲಿ ಅನ್ವಯವಿರುವುದರಿಂದ ಇಲ್ಲಿ ದೀಪಕಾಲಂಕಾರವಿದೆ. ಹಾಗೆಯೇ "ಕೋಲಾಹಲದಿಂದ ಕೂಡಿರುವ ಈ ನಗರವು ಈಗ ಎಲ್ಲಾ ಕಲೆಗಳಿಂದ ಕೂಡಿರುವ ಚಂದ್ರ ಮಂಡಲದಂತೆ ಕಾಣುತ್ತಿದೆ" ಇಲ್ಲಿ ಉಪಮಾಲಂಕಾರವು ತೋರುತ್ತದೆ. ಈವರೆವಿಗೂ ತಿಳಿಸಿರುವ ಅಲಂಕಾರಗಳೆಲ್ಲದರಲ್ಲೂ ಶ್ಲೇಷವಿದ್ದರೂ ವಿಶೇಷವೆನಿಸಿದ್ದರಿಂದ ಇವುಗಳ ಉದಾಹರಣಗಳನ್ನು ಬಿಟ್ಟು ಬೇರೆ ಕಡೆಗಳಲ್ಲಿ ಅದು ಸಂಭವಿಸುವಂತಿಲ್ಲ. ಈ ಅಲಂಕಾರಗಳಾದರೋ ಶ್ಲೇಷವಿಲ್ಲದ ಕಡೆಯೂ ಸ್ವತಂತ್ರವಾಗಿ ಇರಬಲ್ಲವು. ಶ್ಲೇಷವು ಇವನ್ನು ಬಿಟ್ಟು ಬೇರೆ ಪ್ರವರ್ತಿಸುವಂತಿಲ್ಲ. ಆದ್ದರಿಂದ ಇವೆಲ್ಲವೂ ಸಾಮಾನ್ಯವೆನಿಸಿದ್ದು ಶ್ಲೇಷವು ವಿಶೇಷರೂಪದಿಂದ ಬಾಧಕವೆನಿಸಿತು. ತುಲ್ಯಯೋಗಿತೆ ಮೊದಲಾದ ಕಡೆಗಳಲ್ಲಿ ಶ್ಲೇಷವು ಪ್ರಧಾನವೆನಿಸಿದ್ದು

ಅದರಲ್ಲಿ ಚಮತ್ಕಾರವು ತೋರುವ ಪ್ರಯುಕ್ತ, ಇದು ಶ್ಲೇಷಾಲಂಕಾರವೆಂದು ವ್ಯವಹರಿಸಲಿಕ್ಕೆ ಸಾಧ್ಯವಾಗುತ್ತದೆ. ಅಂತಹ ಕಡೆಗಳಲ್ಲಿ ಶ್ಲೇಷವಿರುವುದರಿಂದ ಅದನ್ನು ಶ್ಲೇಷವೆಂದು ಕರೆಯದೇ ಬಿಟ್ಟರೆ ಶ್ಲೇಷವೆಂಬ ವ್ಯವಹಾರವೇ ಇಲ್ಲದಂತಾದೀತು. ಅಂದರೆ ಶ್ಲೇಷವೇ ವ್ಯರ್ಥವೆನಿಸಬೇಕಾದೀತು.

ಈವರಿವಿಗೂ ಶ್ಲೇಷದ ಬಗ್ಗೆ ಬೇರೆ ವಿಮರ್ಶಕರ ಅಭಿಪ್ರಾಯಗಳನ್ನು ತಿಳಿಸಿ ಈಗ ತನ್ನ ಸಿದ್ಧಾಂತವನ್ನು ತಿಳಿಸುತ್ತಾನೆ. ಹಿಂದೆ ಹೇಳಿದ ಮತದಲ್ಲಿ ದೋಷವನ್ನು ತಿಳಿಸಿ ತನ್ನ ಅಭಿಪ್ರಾಯವನ್ನು ಪ್ರಕಟಿಸುತ್ತಾನೆ. ಬೇರೆ ಅಲಂಕಾರಗಳಿಗೆ ಯಾವುದು ಉದಾಹರಣವೆನಿಸುವುದೋ ಅದೇ ಶ್ಲೇಷಾಲಂಕಾರಕ್ಕೂ ಉದಾಹರಣವಾಗುತ್ತದೆ ಎಂಬುದನ್ನು ವಾಸ್ತವವಾಗಿ ಒಪ್ಪಲಿಕ್ಕಾಗುವುದಿಲ್ಲ. ಶ್ಲೇಷಕ್ಕೆ ಇತರ ಅಲಂಕಾರಗಳಿಗಿಂತಲೂ ಬೇರೊಂದು ಉದಾಹರಣವಿಲ್ಲವೆಂಬುದನ್ನು ಒಪ್ಪಲಿಕ್ಕಾಗುವುದಿಲ್ಲ; ಯಾಕೆಂದರೆ 'ಯೇನ ಧ್ವಸ್ತ' ಎಂಬಲ್ಲಿ ಅದಕ್ಕೆ ಒಂದು ಸ್ಥಾನವಿದ್ದೇ ಇದೆ. ಅಲ್ಲಿ ಬೇರೆ ಅಲಂಕಾರಗಳಿಲ್ಲ; ಶ್ಲೇಷವೇ ಇರುವುದರಿಂದ ಇದಕ್ಕೆ 'ಇತರ ಅಲಂಕಾರಗಳಿಗಿಂತಲೂ ಬೇರೊಂದು ವಿಷಯವೇ ಇದ್ದ ಹಾಗಾಯಿತು. ಆದರೆ 'ಯೇನ ಧ್ವಸ್ತ' ಎಂಬಲ್ಲಿ ಎರಡು ಪ್ರಕೃತವಾದ ಅರ್ಥಗಳೆನಿಸಿದ ಮಾಧವ ಉಮಾಧವ ಇಬ್ಬರಿಗೂ ಕರ್ತೃತ್ವ ಸಂಬಂಧದಿಂದ ಜಗದ್ರಕ್ಷಣವೆಂಬ ಒಂದೇ ಕ್ರಿಯೆಯಲ್ಲಿ ಅನ್ವಯವಿರುವುದರಿಂದ ಅಲ್ಲಿಯೂ ತುಲ್ಯಯೋಗಿತೆಯನ್ನೇ ಹೇಳೋಣವೆಂದರೆ ಅದು ಸರಿಯಾಗುವುದಿಲ್ಲ. ಯಾಕೆಂದರೆ ತುಲ್ಯಯೋಗಿತೆಯಲ್ಲಿ ತೋರುವ ಎರಡು ಅರ್ಥಗಳೂ ಅಭಿಧಾವೃತ್ತಿಯಿಂದಲೇ ತೋರಿ ವಾಚ್ಯಗಳೆನಿಸಬೇಕೆಂಬ ನಿಯಮವಿಲ್ಲ. ಇಲ್ಲಿ ಮಾಧವ ಉಮಾಧವ ಈ ಎರಡು ಅರ್ಥಗಳಲ್ಲಿ ಒಂದು ಅಭಿಧಾವೃತ್ತಿಯಿಂದ ತಿಳಿದು ಬರುವುದೆಂಬ ನಿಯಮವನ್ನು ಒಪ್ಪಿದರೆ ಮತ್ತೊಂದು ಅರ್ಥವು ವ್ಯಂಜನಾವೃತ್ತಿಯಿಂದ ತಿಳಿದುಬರುವುದೆಂದು ಒಪ್ಪಲೇಬೇಕು. ಆದ್ದರಿಂದ ಅಲ್ಲಿ ಶ್ಲೇಷವೇ ಪ್ರವರ್ತಿಸುವಂತಿಲ್ಲ. ಅಲ್ಲಿಯಾದರೋ ಎರಡು ಅರ್ಥಗಳೂ ವಾಚ್ಯವೇ ಆಗಬೇಕೆಂಬ ನಿಯಮವಿದೆ. ತುಲ್ಯಯೋಗಿತೆಯಲ್ಲೂ ಸಹ ಒಂದೇ ಧರ್ಮವು ಅನೇಕ ಧರ್ಮಿಗಳಿಗೆ ಸಂಬಂಧಪಟ್ಟದ್ದೆಂದು ತೋರುತ್ತದೆ. ಆದರೆ 'ಯೇನ ಧ್ವಸ್ತ' ಎಂಬಲ್ಲಿಯಾದರೋ ಅನೇಕ ಧರ್ಮಿಗಳಿಗೆ ಬೇರೆ ಬೇರೆ ಧರ್ಮಗಳ ಸಂಬಂಧವಿರುವುದಾಗಿ ತಿಳಿದು ಬಂದಿದೆ. ಯೋಗದಲ್ಲಿ ಕುಳಿತಿರುವ ಶಿವನು ಮನ್ಮಥನನ್ನು ಧ್ವಂಸಮಾಡಿದ್ದನೆಂದೂ, ಬಾಲಕನಾಗಿದ್ದಾಗಲೇ ಕೃಷ್ಣನು ಬಂಡಿಯ ರೂಪದಲ್ಲಿದ್ದ ಶಕಟನೆಂಬ ರಾಕ್ಷಸನನ್ನು ಕೊಂದನೆಂದೂ ಇಬ್ಬರಲ್ಲೂ ಧರ್ಮಭೇದವಿದೆ. ಶಿವನು ತ್ರಿಪುರಸಂಹಾರಕಾಲದಲ್ಲಿ ನಾರಾಯಣನನ್ನು ಬಾಣವನ್ನಾಗಿ ಏರ್ಪಡಿಸಿಕೊಂಡನೆಂದೂ, ವಿಷ್ಣುವು ದೇವಾಸುರರಿಗೆ ಅಮೃತವನ್ನು ಹಂಚುವಾಗ ಮೋಹಿನಿ ಎಂಬ ಸ್ತ್ರೀರೂಪವನ್ನು ಧರಿಸಿದನೆಂದೂ ಹರಿಹರರಿಗೆ ಬೇರೆ ಬೇರೆ ಧರ್ಮಗಳ ಸಂಬಂಧವಿದೆ. ತುಲ್ಯಯೋಗಿತೆಯಲ್ಲಿ ಧರ್ಮಿಗಳಿಗೆ ಒಂದೇ ಧರ್ಮದಲ್ಲಿ ಅನ್ವಯವಿರಬೇಕೆಂಬ ನಿಯಮವಿದೆ. ಆದ್ದರಿಂದ 'ಯೇನ ಧ್ವಸ್ತ' ಎಂಬ ಶ್ಲೋಕದಲ್ಲಿ ತುಲ್ಯಯೋಗಿತೆಯು ಸುಳಿಯುವಂತಿಲ್ಲ; ಆದರೆ ಶ್ಲೇಷವೇ ಇರಬೇಕು.

ಇದರಿಂದ 'ಸ್ವೇಚ್ಛೋಪಜಾತವಿಷಯೇಪಿ' ಎಂಬಲ್ಲಿಯೂ ಅನೇಕ ಧರ್ಮಗಳಿಗೆ ಬೇರೆ ಬೇರೆ ಧರ್ಮಗಳ ಸಂಬಂಧವು ತೋರುವುದರಿಂದ ಅಲ್ಲಿಯೂ ದೀಪಕವನ್ನು ಹೇಳ ಲಿಕ್ಕಾಗುವುದಿಲ್ಲ; ಆದರೆ ಶ್ಲೇಷವನ್ನೇ ಹೇಳಬೇಕೆಂದು ಸೂಚಿಸಿದಂತಾಯಿತು.

ಶ್ಲೇಷವು ಪೂರ್ಣೋಪಮೆಯನ್ನು ಬಾಧಿಸುತ್ತದೆ ಎಂಬುದನ್ನು ಈಗ ನಿರಾಕರಿಸು ತ್ತಾನೆ. ಸಕಲಕಲಮ್ ಎಂಬಲ್ಲಿ ಶ್ಲೇಷವು ಉಪಮಾಲಂಕಾರವನ್ನು ಪ್ರಕಾಶಪಡಿಸು ತ್ತದೆಯಾದ್ದರಿಂದ ಅಲ್ಲಿ ಉಪಮೆಯಿಲ್ಲ ಆದರೆ ಶ್ಲೇಷವೇ ಇರುತ್ತದೆ ಎಂದು ಹೇಳಲಕ್ಕೆ ಬರುವುದಿಲ್ಲ. ಯಾಕೆಂದರೆ ಶ್ಲೇಷವಿಲ್ಲದಿದ್ದರೆ ಪೂರ್ಣೋಪಮೆಯೇ ಅಲ್ಲಿ ತೋರುವು ದಿಲ್ಲ. ಶ್ಲೇಷವು ಪೂರ್ಣೋಪಮೆಯನ್ನು ಬಾಧಿಸುವುದಾದರೆ ಪೂರ್ಣೋಪಮೆಯನ್ನು ಅಲ್ಲಿ ಒಪ್ಪಿದ್ದೇ ವ್ಯರ್ಥವಾದೀತು. ಅದಕ್ಕೆ ಉದಾಹರಣವೇ ಇಲ್ಲದಂತಾಗುವುದು. 'ಕಮಲದಂತೆ ಮುಖವು ಮನೋಹರವಾಗಿದೆ' ಎಂಬುದು ಪೂರ್ಣೋಪಮೆಗೆ ಉದಾಹರಣ ವಿದ್ದೇ ಇದೆ ಎಂದು ಹೇಳುವುದಾದರೆ ಅದು ಹೊಂದುವುದಿಲ್ಲ. ಯಾಕೆಂದರೆ 'ಸಕಲ ಕಲಂ' ಎಂಬಲ್ಲಿ ಶಬ್ದಶ್ಲೇಷವಿರುವುದರಿಂದ ಉಪಮಾಲಂಕಾರವಿಲ್ಲವೆಂದು ಹೇಳುವು ದಾದರೆ 'ಕಮಲಮಿವ ಮುಖಂ ಮನೋಜ್ಞಮೇತತ್' ಎಂಬಲ್ಲಿಯೂ ಸಹ ಅರ್ಥ ಶ್ಲೇಷವು ಪೂರ್ಣೋಪಮೆಯನ್ನು ಬಾಧಿಸುವುದರಿಂದ ಉಪಮೆಗೆ ಉದಾಹರಣವೇ ಇಲ್ಲದಂತಾಗುವುದು. ಕಮಲಂ ಎಂಬಲ್ಲಿ ಶಬ್ದಶ್ಲೇಷವು ಸಂಭವಿಸದೇ ಇರುವುದರಿಂದ ಅರ್ಥಶ್ಲೇಷವನ್ನೇ ಒಪ್ಪಬೇಕು. ಆದ್ದರಿಂದ 'ಕಮಲಮಿವ' ಎಂಬಂತೆ 'ಸಕಲಕಲಂ' ಎಂಬಲ್ಲಿಯೂ ಸಹ ಪೂರ್ಣೋಪಮೆಯನ್ನು ಒಪ್ಪಲೇ ಬೇಕು. ಈ ಬಗ್ಗೆ ಉದ್ಭಟನು ಒಪ್ಪಿರುವುದನ್ನು ತಿಳಿಸುತ್ತಾನೆ. "'ಕಮಲಮಿವ' 'ಸಕಲಕಲಂ' ಎಂದು ಎರಡು ಕಡೆ ಗಳಲ್ಲಿ ತೋರುವ ಉಪಮೆಗಳನ್ನು ಅರ್ಥಾಲಂಕಾರಗಳೆಂದು ಎಲ್ಲರೂ ಒಪ್ಪಿರುವರು. ಆದರೆ ಶ್ಲೇಷವಿರುವ ಕಡೆ ಉಪಮಾನ ಉಪಮೇಯಗಳೆರಡಕ್ಕೂ ಅನ್ವಯಿಸುವ ಸಾಮಾನ್ಯಧರ್ಮವು ಶಬ್ದವಷ್ಟೇ ಇದ್ದರೂ ಆಗಬಹುದು." ಹೀಗೆ ಅವನು ಹೇಳಿರು ವುದರಿಂದ ಗುಣಕ್ರಿಯಾರೂಪವಾದ ಧರ್ಮಸಾಮ್ಯದಂತೆ ಶಬ್ದಸಾಮ್ಯದಿಂದಲೂ ಉಪ ಮಾಲಂಕಾರವು ಸಂಭವಿಸುವುದರಲ್ಲಿ ತಪ್ಪೇನೂ ಇಲ್ಲ. ಹೀಗೆ 'ಸಕಲಕಲಂ' ಎಂಬಲ್ಲಿ ಶ್ಲಿಷ್ಟ ಶಬ್ದದ ಸಾಮ್ಯದಿಂದಲೂ ಉಪಮಾಲಂಕಾರವು ಸಂಭವಿಸುತ್ತದೆ. ಆದ್ದರಿಂದ ಶ್ಲೇಷವು ಉಪಮೆಯನ್ನು ಬಾಧಿಸಲಾರದು.

ಈಗ ಪ್ರತಿಸ್ಪರ್ಧಿಯು ಮತ್ತೆ ಆಕ್ಷೇಪಿಸಬಹುದು. "ಗುಣಕ್ರಿಯಾರೂಪವಾದ ಧರ್ಮಸಾಮ್ಯದಿಂದಲೇ ಉಪಮಾಲಂಕಾರವು ತೋರುವುದೆಂದು ಹೇಳುವುದೇ ಯುಕ್ತ ವೆನಿಸುತ್ತವೆ. ಅಲ್ಲಿಯೇ ಸಾಧರ್ಮ್ಯವು ವಾಸ್ತವವಾಗಿ ಇರಬಲ್ಲದು. ಶಬ್ದಸಾಮ್ಯವು ವಾಸ್ತವವಾಗಿ ಸಾಧರ್ಮ್ಯವೇ ಆಗಲಾರದು. ಸಕಲಕಲಂ ಎಂಬಲ್ಲಿ ತಾತ್ಪರ್ಯಕ್ಕೆ ವಿಷಯವೆನಿಸದಂತೆ ಚಂದ್ರಮಂಡಲದ ಸಾದೃಶ್ಯವು ಯಾವುದೋ ನಗರದಲ್ಲಿ ಕಾಣದೇ ಇರುವುದರಿಂದ ಶಬ್ದಸಾಮ್ಯವು ಸತ್ಯವಾದುದಲ್ಲವಾದ್ದರಿಂದ ಉಪಮೆಯೇ ತೋರಲಾರದು. ಆದ್ದರಿಂದ 'ಸಕಲಕಲಂ' ಎಂಬಲ್ಲಿ ತೋರುವ ಶಬ್ದಸಾಮ್ಯವನ್ನು ಬಿಟ್ಟು ಗುಣಕ್ರಿಯಾ

ರೂಪವಾದ ಸಾಮ್ಯವಷ್ಟೇ ಪೂರ್ಣೋಪಮೆಗೆ ವಿಷಯವೆನಿಸುವುದು. ಅಂತಹಕಡೆಗಳಲ್ಲಿ ಅರ್ಥಶ್ಲೇಷವನ್ನು ತೋರಿಸುವುದಾದರೆ ಪೂರ್ಣೋಪಮೆಗೆ ಬೇರೆದಾರಿಯೇ ಇರದಂತಾಗುತ್ತದೆ.'' ಹೀಗೆ ಆಕ್ಷೇಪವು ಬಂದರೆ ಸಮಾಧಾನವನ್ನು ತಿಳಿಸುತ್ತಾನೆ. 'ಸಾಧರ್ಮ್ಯಮುಪಮಾ' ಎಂಬ ಉಪಮಾಲಕ್ಷಣದ ಸಾಧರ್ಮ್ಯದ ಬಗ್ಗೆ ವಾಸ್ತವ ಅವಾಸ್ತವ ಎಂಬ ವಿಶೇಷವನ್ನು ತಿಳಿಸದೇ ಸಾಮಾನ್ಯವಾಗಿಯೇ ಹೇಳಿರುವುದರಿಂದ ಶಬ್ದಸಾಮ್ಯವನ್ನು ಬಿಟ್ಟು ಬೇರೆಕಡೆಗಳಲ್ಲಿಯೇ ಉಪಮೆಯನ್ನು ಹೇಳಬೇಕೆಂಬ ನಿಯಮವನ್ನು ಯಾರೂ ಮಾಡಿಲ್ಲ. ಶಬ್ದಸಾಮ್ಯವಿರುವಕಡೆ ತೋರುವ ಸಾಧರ್ಮ್ಯವು ವಾಸ್ತವವಲ್ಲದ್ದರಿಂದ ಉಪಮೆಗೆ ಪ್ರವೇಶವಾಗಲಾರದೆಂದು ಹೇಳುವುದಾದರೆ ವಿದ್ವನ್ಮಾನಸಹಂಸ ಎಂಬ ಕಡೆ ಆಧಾರವೆನಿಸಿದ ಚಿತ್ತದಲ್ಲಿ ಸರೋವರವನ್ನು ಆರೋಪಿಸುವುದು ರಾಜನಲ್ಲಿ ಹಂಸವನ್ನು ಆರೋಪಿಸಲಿಕ್ಕೆ ಹೇಗೆ ಪ್ರಯೋಜಕವಾದೀತು? ಚಿತ್ತದಲ್ಲಿ ಸರೋವರವನ್ನು ಆರೋಪಿಸುವುದೂ ಸಹ ವಾಸ್ತವವಲ್ಲ. ಇದರ ಮೂಲಕ ರಾಜನನ್ನು ಹಂಸವೆಂದು ಆರೋಪಿಸಲಿಕ್ಕೂ ಸಾಧ್ಯವಾಗದೆ ಹೋಗುತ್ತದೆ. ವಾಸ್ತವವಾಗಿ ಸಾಮ್ಯವಿರುವಕಡೆಯೇ ಉಪಮೆಯನ್ನು ಅಂಗೀಕರಿಸುವುದಾದರೆ ಆಗ ಸಕಲಕಲಂ ಎಂಬಲ್ಲಿ ಉಪಮೆಯು ಶಬ್ದಶ್ಲೇಷದಿಂದ ಬಾಧಿತವಾಗುವುದರಿಂದ ಅಲ್ಲಿ ಉಪಮೆಯನ್ನು ಹೇಗೆ ಒಪ್ಪಲಿಕ್ಕಾದೀತು? ಇದೂಅಲ್ಲದೇ ಇಲ್ಲಿ ಶ್ಲೇಷವೆ ಸಾಮ್ಯವನ್ನು ದೊರಕಿಸುತ್ತದೆ ಆದರೆ ಸಾಮ್ಯವು ಶ್ಲೇಷವನ್ನು ದೊರಕಿಸುವುದಿಲ್ಲ. ಶ್ಲೇಷದಿಂದ ಸಾಮ್ಯವು ತೋರುವುದೇ ಹೊರತು ಸಾಮ್ಯದಿಂದ ಶ್ಲೇಷವು ತೋರುವುದಿಲ್ಲ ಶ್ಲೇಷವನ್ನು ಪ್ರಯೋಗಿಸಿದ್ದರಿಂದಲೇ ಸಾಮ್ಯವು ತೋರುತ್ತದೆ. ಶ್ಲೇಷಪ್ರಯೋಗಕ್ಕಿಂತ ಮೊದಲು ಸಾಮ್ಯವೇ ಸಂಭವಿಸುವುದಿಲ್ಲ. ಆದ್ದರಿಂದ ಇಲ್ಲಿ ಉಪಮೆಯೇ ಪ್ರಧಾನವೆನಿಸಿದ ಪ್ರಯುಕ್ತ ಇದನ್ನು ಪೂರ್ಣೋಪಮಾಲಂಕಾರವೆಂದೇ ಕರೆಯಲಾಗಿದೆ. ಪ್ರಧಾನವಾದ ಅಂಶವನ್ನಿಟ್ಟುಕೊಂಡೇ ಒಂದು ಸಂಜ್ಞೆ ಹೊರಡುವುದು ಲೋಕದಲ್ಲಿ ರೂಢಿಯಾಗಿದೆ. ಆದ್ದರಿಂದ 'ಸಕಲಕಲಂ' ಎಂಬಲ್ಲಿ ವಾಮನಮತದಲ್ಲಿ ಶ್ಲೇಷೋಪಮಾಲಂಕಾರವೆಂದು ಕರೆಯಲಾಗಿದೆ. ಕಾವ್ಯಪ್ರಕಾಶ, ಸಾಹಿತ್ಯದರ್ಪಣಗಳ ಅಭಿಪ್ರಾಯದಂತೆ ಇದನ್ನು ಪೂರ್ಣೋಪಮಾಲಂಕಾರವೆಂದೇ ಕರೆಯಲಾಗಿದೆ.

ಉಪಮೆಯೇ ಪ್ರಧಾನವೆನಿಸಿದೆ ಎಂಬ ಮಾತಿನಮೇಲೆ ಮತ್ತೆ ಆಶಂಕಿಸುತ್ತಾನೆ. ಶಬ್ದಾಲಂಕಾರದ ವಿಷಯದಲ್ಲಿ ಅಂಗಾಂಗಿಭಾವಸಂಕರವನ್ನು ಒಪ್ಪಿಕೊಂಡಿಲ್ಲ. ಆದರೆ ಇಲ್ಲಿ ಶ್ಲೇಷ ಮತ್ತು ಉಪಮೆಗಳಿಗೆ ಅಂಗಾಂಗಿಭಾವ ಸಂಕರವನ್ನು ಹೇಗೆ ಒಪ್ಪಬಹುದು ಎಂದು ಆಕ್ಷೇಪಿಸಿದರೆ ಅದನ್ನು ಸಮಾಧಾನಮಾಡುತ್ತಾನೆ. ಅರ್ಥಾನುಸಂಧಾನಕ್ಕೆ ಅವಕಾಶವಿಲ್ಲದೆ ಅನುಪ್ರಾಸ ಯಮಕ ಆಭಾಸಮ ಇವುಗಳಲ್ಲಿ ಮಾತ್ರ ಅಂಗಾಂಗಿಭಾವಸಂಕರವನ್ನು ಒಪ್ಪಿಕೊಂಡಿಲ್ಲ. ನೀನು ಹೇಳಿದ ಯುಕ್ತಿಯು ಅಲ್ಲಿಗೆ ಅನ್ವಯಿಸುವುದೇ ಹೊರತು ಶ್ಲೇಷ ಮತ್ತು ಉಪಮೆಗಳಿಗೆ ಅನ್ವಯಿಸುವುದಿಲ್ಲ. ಇಲ್ಲಿ ಅರ್ಥಾನುಸಂಧಾನವನ್ನು ಅವಲಂಬಿಸಿಕೊಂಡೇ ನಿರ್ವಹಿಸಬೇಕಾಗಿರುವುದರಿಂದ ಅಂಗಾಂಗಿಭಾವ

ಸಂಕರವಿರಲೇಬೇಕು. ಹೀಗೆಯೇ ದೀಪಕತುಲ್ಯಯೋಗಿತೆ ಮೊದಲಾದಕಡೆಗಳಲ್ಲೂ ಶ್ಲೇಷವಿರಲಿಕ್ಕೆ ಅಡ್ಡಿ ಇಲ್ಲವೆಂಮೂ ಅದಕ್ಕೆ ಆ ಅಲಂಕಾರಗಳೊಡನೆ ಅಂಗಾಂಗಿಭಾವ ಉಂಟೆಂದೂ ತಿಳಿಯಬೇಕು. 'ಸಕಲಕಲಮ್' ಎಂಬಲ್ಲಿ ಶಬ್ದ ಶ್ಲೇಷ ವಿದ್ದರೂ ಪ್ರಾಧಾನ್ಯ ದಿಂದ ಪೂರ್ಣೋಪಮೆ ಎಂದು ಕರೆಯುವಂತೆ 'ಸ್ವೇಚ್ಛೋಪಜಾತವಿಷಯೋಽಪಿ' ಎಂಬಲ್ಲಿ ಶಬ್ದಶ್ಲೇಷವಿದ್ದರೂ ಸಹ ಪ್ರಾಧಾನ್ಯದಿಂದ ದೀಪಕವೆಂದು ಕರೆಯಲಿಕ್ಕೂ 'ಸ್ತೋಕೇನೋನ್ನತಿಮಾಯಾತಿ' ಎಂಬಲ್ಲಿ ಅರ್ಥಶ್ಲೇಷವಿದ್ದರೂ ಪ್ರಾಧಾನ್ಯದಿಂದ ತುಲ್ಯಯೋಗಿತೆ ಎಂದು ಕರೆಯಲಿಕ್ಕೂ ಅಡ್ಡಿ ಇಲ್ಲ.

ಈ ಬಗ್ಗೆ ಬೇರೆ ಮತಗಳೆರಡನ್ನು ನಿರಾಕರಿಸಲು ಉದಾಹರಿಸುತ್ತಾನೆ. ವೇಣೀ ಸಂಹಾರ ನಾಟಕದ ಪ್ರಸ್ತಾವನೆಯಲ್ಲಿ ನಟನ ಮಾತಿದು. "ಸುಂದರವಾದ ರೆಕ್ಕೆಗಳಿದ್ದು ಇಂಪಾಗಿ ಮಾತನಾಡುತ್ತ ಎಲ್ಲಾ ದಿಕ್ಕುಗಳನ್ನೂ ಅಲಂಕರಿಸಿ ಆನಂದದಿಂದ ವಿಶೇಷವಾಗಿ ವಿಹರಿಸುತ್ತಲಿರುವ ಹಂಸಪಕ್ಷಿಗಳು ಶರತ್ಕಾಲದ ಪ್ರಭಾವದಿಂದ ಮಾನಸಸರೋವರ ದಿಂದ ಬಂದು ನೆಲದಮೇಲೆ ಸಂಚರಿಸುತ್ತಿವೆ." ಮಹಾವೀರರೆಂದು ಪ್ರಸಿದ್ಧರಾದ ಭೀಷ್ಮ ದ್ರೋಣ ಮೊದಲಾದ ಸಹಾಯಕರಿದ್ದು ಪ್ರಿಯವಾಗಿ ಮಾತನಾಡುತ್ತ ಎಲ್ಲಾ ದಿಕ್ಕುಗಳನ್ನೂ ವಶಪಡಿಸಿಕೊಂಡು ಅಹಂಕಾರದಿಂದ ಯುದ್ಧವ್ಯವಹಾರಗಳಲ್ಲಿ ತೊಡ ಗಿರುವ ದುರ್ಯೋಧನ ಮೊದಲಾದವರು ಯಮನಿಗೆ ಅಧೀನರೆನಿಸಿ ನೆಲದಮೇಲೆ ಹೊರ ಳಾಡುತ್ತಿರುವರು" ಇಲ್ಲಿ ಧೃತರಾಷ್ಟ್ರನ ಮಕ್ಕಳೆನಿಸಿದ ದುರ್ಯೋಧನ ಮೊದಲಾದವರು ಕಪ್ಪು ಬಣ್ಣದ ಧಾರ್ತರಾಷ್ಟ್ರವೆಂಬ ಹಂಸ ಪಕ್ಷಿಗಳಂತೆ ಕೆಳಗೆ ಬೀಳುತ್ತಿದ್ದಾರೆ ಎಂದು ಉಪಮೆ ವ್ಯಂಗ್ಯವಾಗಿ ತೋರುತ್ತಿದೆ ಎಂದು ಕೆಲವರು ಹೇಳುತ್ತಾರೆ.ಬೇರೆಯವರಾದರೋ ದ್ವಿತೀಯಾರ್ಥವೂ ವಾಚ್ಯವೇ ಆದ್ದರಿಂದ ನೀತಾನಾಂ ಆಕುಲೀಭಾವಂ ಎಂಬಲ್ಲಿರುವಂತೆ ಇಲ್ಲಿ ಶ್ಲೇಷವನ್ನೇ ಹೇಳುತ್ತಾರೆ. ಒಟ್ಟನಲ್ಲಿ ಇದು ಶರತ್ಕಾಲದ ವರ್ಣನೆಯ ಪ್ರಸ್ತಾವ ವಾದ್ದರಿಂದ ಧಾರ್ತರಾಷ್ಟ್ರ ಮೊದಲಾದ ಶಬ್ದಗಳು ಹಂಸ ಮೊದಲಾದ ಅರ್ಥವನ್ನು ತಿಳಿಸಬೇಕೆಂಬ ನಿಯಮವಿರುವುದರಿಂದ ದುರ್ಯೋಧನ ಮೊದಲಾದ ಅರ್ಥವು ವ್ಯಂಗ್ಯ ವಾಗಿಯೇ ತೋರುತ್ತದೆಯಾದ ಪ್ರಯುಕ್ತ ಇದು ಶಬ್ದಶಕ್ತಿಮೂಲಧ್ವನಿಯ ಉದಾ ಹರಣವೆನಿಸಿದೆ. ಸತ್ಪಕ್ಷಾಃ ಎಂಬ ಪದ್ಯದಲ್ಲಿ ದುರ್ಯೋಧನ ಮೊದಲಾದವರ ಪತನ ವೆಂಬ ಅರ್ಥವು ವೇಣೀಸಂಹಾರದಲ್ಲಿ ವಾಚ್ಯವೆನಿಸಿದ್ದರೂ ಅದನ್ನು ಸ್ಪಷ್ಟವಾಗಿ ತಿಳಿ ಸದೆ ವ್ಯಂಗ್ಯವಾಗಿ ಸೂಚಿಸಬೇಕೆಂಬುದೇ ಕವಿಗೆ ವಿವಕ್ಷಿತವಾದ್ದರಿಂದ ಉಪಮಾನೋ ಪಮೇಯಭಾವವನ್ನು ತಿಳಿಸುವುದು ಇಲ್ಲಿ ಕವಿಯ ಉದ್ದೇಶವಲ್ಲ. ಆದ್ದರಿಂದ ಇಲ್ಲಿ ಉಪಮಾಧ್ವನಿಯಾಗಲೀ, ಶ್ಲೇಷವಾಗಲೀ ಇರದೆ ಶಬ್ದಶಕ್ತಿಮೂಲಧ್ವನಿಯೇ ಉಂಟೆಂದು ತಿಳಿಯಬೇಕು. ಎಲ್ಲೆಡೆಯಲ್ಲೂ ಆವಶ್ಯಕವೆನಿಸಿದ ಉಪಮೇಯವನ್ನು ವರ್ಣಿಸುವ ಕವಿಯು ಅದನ್ನು ದೃಢಪಡಿಸಲಿಕ್ಕಾಗಿ ಆವಶ್ಯಕವೆನಿಸಿದ್ದರಿಂದಲೇ ಉಪ ಮಾನವನ್ನು ಕೊಡುತ್ತಾನೆ. ಇಲ್ಲಿಯಾದರೋ ಹೆಚ್ಚು ಚಮತ್ಕಾರವನ್ನುಂಟುಮಾಡಲಿ ಕ್ಕಾಗಿ ದುರ್ಯೋಧನ ಮೊದಲಾದವರ ಪತನವೆಂಬ ಎರಡನೆಯ ಅರ್ಥವು ಆವಶ್ಯಕವೆನಿ

ಸಿದ್ದರಿಂದ ಅದನ್ನು ಉಪಮಾನವೆಂದು ಭಾವಿಸವೆ ಪ್ರಧಾನವಾಗಿಯೇ ಸೂಚಿಸಲಾಗಿದೆ. ಆದ್ದರಿಂದ ಇಲ್ಲಿ ತೋರುವ ಎರಡು ಅರ್ಥಗಳಿಗೂ ಉಪಮಾನೋಪಮೇಯಭಾವವು ಕವಿಗೆ ಇಷ್ಟವೆನಿಸಿಲ್ಲ. ಇದು ಶರದ್ವರ್ಣನೆಯ ಪ್ರಕರಣವಾದ್ದರಿಂದ ಮೊದಲನೆಯ ಅರ್ಥವೇ ವಾಚ್ಯವೆನಿಸಿ ಎರಡನೆಯ ಅರ್ಥವು ಕೇವಲ ವ್ಯಂಗ್ಯವೆನಿಸಿದ್ದು ವಾಚ್ಯವಾಗದೇ ಇರುವ ಪ್ರಯುಕ್ತ ಎರಡು ವಾಚ್ಯಾರ್ಥಗಳಿಗೆ ಮಾತ್ರವೇ ಅನ್ವಯಿಸುವ ಶ್ಲೇಷವೂ ಇಲ್ಲಿ ಕವಿಗೆ ಇಷ್ಟವೆನಿಸಿಲ್ಲ. ಆದ್ದರಿಂದ ಈ ಪದ್ಯವು ಶಬ್ದಶಕ್ತಿಮೂಲಧ್ವನಿಗೆ ವಿಷಯವಾಗುತ್ತದೆ. ಈ ಬಗೆಯ ವಿವೇಚನೆಯಿಂದ ಎಲ್ಲಾ ವಿಷಯವೂ ಪರಿಷ್ಕಾರವಾದಂತಾಯಿತು.

ಈಗ ಚಿತ್ರವೆಂಬ ಅಲಂಕಾರಕ್ಕೆ ಲಕ್ಷಣವನ್ನು ತಿಳಿಸುತ್ತಾನೆ. ಅಕಾರವೇ ಮೊದಲಾದ ವರ್ಣಗಳನ್ನು ಪತ್ರದಲ್ಲಿ ಬರೆದಾಗ ಪದ್ಮ ಮೊದಲಾದ ಆಕಾರಗಳಾಗಿ ಅವು ಪರಿಣಮಿಸಿದರೆ ಅದು ಚಿತ್ರವೆಂಬ ಅಲಂಕಾರವೆನಿಸುವುದು. ಇಲ್ಲಿ ಆದಿಪದದಿಂದ ಖಡ್ಗ, ಮುರಜ, ಚಕ್ರ, ಗೋಮೂತ್ರಿಕ ಮೊದಲಾದ ಬಂಧಗಳನ್ನು ಗ್ರಹಿಸಬೇಕು. ಹೀಗೆ ಪತ್ರದಲ್ಲಿ ಪದ್ಮ ಮೊದಲಾದ ಆಕಾರಗಳನ್ನು ದೊರಕಿಸುವ ವರ್ಣವಿನ್ಯಾಸವೇ ಚಿತ್ರಾಲಂಕಾರವೆನಿಸಿದರೆ ಅದು ಶಬ್ದವೆನಿಸದೆ ಇರುವುದರಿಂದ ಅದನ್ನು ಹೇಗೆ ಶಬ್ದಾಲಂಕಾರದ ಪ್ರಕರಣದಲ್ಲಿ ಹೇಗೆ ಸೇರಿಸಬಹುದು, ಎಂದು ಆಕ್ಷೇಪವು ಬಂದರೆ ಅದಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ವರ್ಣಗಳಿಂದ ಪದ್ಮ ಮೊದಲಾದ ಆಕಾರ ವಿಶೇಷಗಳನ್ನು ಕಾಗದದ ಮೇಲೆ ಬರೆದದ್ದರಿಂದಲೇ ಚಮತ್ಕಾರವುಂಟಾಗುವ ಪ್ರಯುಕ್ತ ಆ ವರ್ಣಗಳಿಗೂ, ಅಂತಹ ವರ್ಣಗಳು ಶಬ್ದರೂಪವಾಗಿಯೇ ಇರುವುದರಿಂದ ಆಕಾರಗಳಿಗೂ ಅಭೇದವನ್ನು ಕಲ್ಪಿಸಿ ಆ ಆಕಾರಗಳನ್ನು ಶಬ್ದಾಲಂಕಾರಗಳೆಂದೇ ವ್ಯವಹರಿಸಲಾಗಿದೆ. ಆ ವರ್ಣಗಳೇ ಕವಿಯ ಮೂಲಕ ಕೇಳಿ ಬಂದು ಸಹೃದಯರಿಗೆ ಚಮತ್ಕಾರವನ್ನು ಹುಟ್ಟಿಸುತ್ತವೆಯಾಗಿ ಅವನ್ನು ಶಬ್ದಾಲಂಕಾರಗಳೆಂದು ಕರೆಯಲಾಗಿದೆ; ಹೀಗೆ ಚಿತ್ರವೆನಿಸಿದ್ದರೂ ವರ್ಣಗಳು ಉಚ್ಚಾರಣಕಾಲದಲ್ಲಿ ಶಬ್ದರೂಪವಾಗಿಯೇ ಪ್ರಕಟವಾಗುವುದರಿಂದ ಕಾಗದದ ಮೇಲೆ ಬರೆದಿರುವ ವರ್ಣಗಳಿಗೂ ಪದ್ಮಾದಿಬಂಧಗಳಿಗೂ ಪರಸ್ಪರವಾಗಿ ಅಭೇದವುಂಟೆಂಬುದನ್ನು ಅಂಗೀಕರಿಸಿ ಚಿತ್ರಾಲಂಕಾರವನ್ನು ಶಬ್ದಾಲಂಕಾರವೆಂದು ವ್ಯವಸ್ಥೆಮಾಡಲಾಗಿದೆ. ಈ ಚಿತ್ರಾಲಂಕಾರಗಳ ಮಧ್ಯದಲ್ಲಿ ಪದ್ಮಬಂಧವೆಂಬ ವರ್ಣವಿನ್ಯಾಸವನ್ನು ಈಗ ಉದಾಹರಿಸುತ್ತಾನೆ. ಭಕ್ತನು ಲಕ್ಷ್ಮೀದೇವಿಯನ್ನು ಅನುವರ್ತಿಸುವ ಕ್ರಮವನ್ನು ಇಲ್ಲಿ ತಿಳಿಸುತ್ತಾನೆ." ಮನ್ಮಥನ ತಾಯಿಯೂ, ಸುಂದರಿಯೂ ಮನೋಹರವಾದ ರತಿಗಿಂತಲೂ ಉತ್ಕೃಷ್ಟಳೂ ಆಗಿ ಆ ಲಕ್ಷ್ಮೀದೇವಿಯು ನನಗೆ ಯಾವಾಗಲೂ ವಿರುದ್ಧವೆನಿಸದೆ ಅನುಕೂಲವಾಗಿರಲಿ " ಇದು ಎಂಟು ದಳಗಳಿಂದ ಆಗಿರುವ ಪದ್ಮವೆಂಬ ವರ್ಣವಿನ್ಯಾಸವೆನಿಸಿದೆ. ಇದನ್ನು ಬರೆಯುವ ಕ್ರಮ ಹೀಗಿದೆ. ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ದಿಕ್ಕುಗಳ ಪದಗಳಲ್ಲಿ ಹೊರಗೆ ಒಳಗೆ ಪ್ರವೇಶಿಸಲಿಕ್ಕೆ ಅನುಕೂಲವಾಗುವಂತೆ

ಶ್ಲಿಷ್ಟವರ್ಣವನ್ನು ಎರಡುವೇಳೆ ಪ್ರಯೋಗಿಸಬೇಕು. ಹಾಗೆಯೇ ಆಗ್ನೇಯ, ನೈಋತ್ಯ, ವಾಯುವ್ಯ, ಈಶಾನ್ಯಗಳೆಂಬ ನಾಲ್ಕು ದಿಕ್ಕುಗಳ ವರ್ಣಗಳಲ್ಲಿ ಕೆಲವು ಕಡೆ ಪ್ರವೇಶಿಸಿ ಕೆಲವು ಕಡೆ ಹೊರಗೆ ಬರುವಂತೆ ಅಶ್ಲಿಷ್ಟವರ್ಣಗಳನ್ನು ಪ್ರಯೋಗಿಸಬೇಕು. ಹಾಗೆಯೇ ಮಧ್ಯದ ಅಕ್ಷರವೂ ಅನೇಕಸಾರಿ ಹೇಳಬೇಕಾದ್ದರಿಂದ ಶ್ಲಿಷ್ಟವೇ ಆಗಿರಬೇಕು. ಹೀಗೆಯೇ ಖಡ್ಗಬಂಧ ಮೊದಲಾದವನ್ನು ಪ್ರಯೋಗಿಸಬಹುದು. ಕಾವ್ಯದೊಳಗೆ ಗಂಟಿನಂತೆ ಕಠಿಣವೆನಿಸಿ ನೀರಸವಾದ ಪ್ರಯುಕ್ತ ಇಲ್ಲಿ ಅವನ್ನು ವಿಸ್ತರಿಸಿಲ್ಲ. ಮಹಾಕವಿಗಳ ಪ್ರಬಂಧಗಳಲ್ಲಿ ಇವು ವಿಶೇಷವಾಗಿ ಬಂದಿದ್ದು ಭೋಜರಾಜನೇ ಮೊದಲಾದ ವಿಮರ್ಶಕರು ವಿಸ್ತಾರವಾಗಿ ತಿಳಿಸಿರುವುದರಿಂದ ಇವನ್ನು ಅಲ್ಲಿ ತಿಳಿಯಬಹುದು.

ಈಗ ಪ್ರಹೇಳಿಕೆಯ ಸ್ವರೂಪವನ್ನು ತಿಳಿಸುತ್ತಾನೆ. ಯಾವುದೋ ಒಂದು ಅಭಿಪ್ರಾಯವನ್ನು ಮುಚ್ಚಲಿಕ್ಕಾಗಿ ಹೇಳುವ ಮಾತೇ ಪ್ರಹೇಳಿಕೆ ಎನಿಸುವುದೆಂದು ಪ್ರಾಚೀನರು ಅಭಿಪ್ರಾಯಪಟ್ಟಿರುವರು. ಆದರೆ ಇದು ರಸಕ್ಕೆ ವಿರೋಧಿಯಾದ್ದರಿಂದ ಅಲಂಕಾರವೆನಿಸಲಾರದು. ರಸಾಸ್ವಾದಕ್ಕೆ ವಿಳಂಬವನ್ನುಂಟುಮಾಡುವುದರಿಂದ ಇದು ಅಲಂಕಾರವಾಗಲಾರದು. ಇದು ಕೇವಲ ವಾಗ್ವೈಚಿತ್ರ್ಯವೆನಿಸಿದ್ದರಿಂದ ಇದರಲ್ಲಿ ಚ್ಯುತಾಕ್ಷರ, ದತ್ತಾಕ್ಷರ, ಚ್ಯುತದತ್ತಾಕ್ಷರ ಎಂದು ಮೂರು ಬಗೆಗಳಿವೆ. ಒಂದೇ ಉದಾಹರಣದಲ್ಲಿ ಈ ಮೂರುಬಗೆಗಳನ್ನು ತಿಳಿಸುತ್ತಾನೆ. ಸಖಿಗೆ ಮತ್ತೊಬ್ಬ ಸಖಿಯು ಹೇಳುವ ಮಾತಿದು. "ಕೋಗಿಲೆಗಳು ರಸಾಲವೃಕ್ಷದಲ್ಲಿ ಅವ್ಯಕ್ತವಾಗಿ ಶಬ್ದಮಾಡುತ್ತಿವೆ. ಯೌವನದಲ್ಲಿ (ನೀರಿನಲ್ಲಿ) ಕಮಲವು ವಿಕಸಿತವಾಗಿ ಅರಳಿದೆ. ಕಾಮುಬಾಧೆಯಿಂದ ಹಿಂಸೆಗೆ ಗುರಿಯಾಗಿರುವ ಪ್ರೇಯಸಿಯು ಪತಿವಿರಹದಿಂದ ಈಗ ಏನು ಮಾಡಬೇಕು ಹೇಳು" ಇಲ್ಲಿ 'ರಸಾಲೇ' ಎಂದು ಹೇಳಬೇಕಾಗಿರುವಾಗ 'ಸಾಲೆ' ಎಂದು ಹೇಳಿದ್ದರಿಂದ 'ರ' ಎಂಬುದನ್ನು ಬಿಡಲಾಗಿದೆ. ಇದು ಚ್ಯುತಾಕ್ಷರವೆನಿಸಿದೆ. ಯೌವನ ಎಂಬ ಅರ್ಥದಲ್ಲಿ 'ವನೇ' ಎಂದು ಹೇಳಿದ್ದರಿಂದ 'ಯೌ' ಎಂಬುದು ಬಿಟ್ಟುಹೋಗಿದೆ. ಇಲ್ಲಿ 'ಯೌ' ಎಂಬುದನ್ನು ಸೇರಿಸಬೇಕು. ಇದು ದತ್ತಾಕ್ಷರವೆನಿಸಿದೆ. ವದನೇನ ಎಂಬಲ್ಲಿ ಮದನೇನ ಎಂಬ ಅರ್ಥವು ತೋರಬೇಕಾದ್ದರಿಂದ 'ಮ' ಎಂಬುದನ್ನು ಬಿಟ್ಟು 'ವ' ಎಂಬುದನ್ನು ಕೊಡಲಾಗಿದೆ. ಇದು ಚ್ಯುತದತ್ತಾಕ್ಷರವೆನಿಸಿದೆ. ಮೂಲದಲ್ಲಿ ಆದಿಪದವು ಕ್ರಿಯಾಗುಪ್ತಿ ಕಾರಕಗುಪ್ತಿ ಮೊದಲಾದವನ್ನು ತಿಳಿಸುತ್ತದೆ. ಕ್ರಿಯಾಪದವನ್ನು ತಿಳಿಸದೇ ಇರುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. ರಾಜಸೂಯಯಜ್ಞವು ಮುಗಿಯುವಾಗ ಮಾಡಿದ ದಾನವನ್ನು ಇಲ್ಲಿ ತಿಳಿಸುತ್ತಾನೆ. "ಪಾಂಡವರ ಸಭೆಯ ನಡುವೆ ಯಾವ ದರಿದ್ರನು ಬಂದನೋ ಅವನಿಗೆ ಗೋಹಿರಣ್ಯಗಳನ್ನೂ, ಎಲ್ಲಾ ಒಡವೆಗಳನ್ನು ದಾನವಾಗಿ ಕೊಡಲಿಕ್ಕಾಗಿ ನೇಮಿತರಾಗಿದ್ದ ಕರ್ಣಾದಿಗಳು ಕೊಟ್ಟರು" ಇಲ್ಲಿ ದುರ್ಯೋಧನಃ ಎಂಬಲ್ಲಿ ಅದುಃ ಯೋಽಧನಃ ಎಂಬುದು ಅರ್ಥವಾಗುತ್ತದೆ. ಅಲ್ಲಿ ಅದುಃ ಎಂಬ ಕ್ರಿಯೆಯು ಗೋಪ್ಯವಾಗಿದ್ದು ದುರ್ಯೋಧನ ಎಂಬ ಪದವು ಧೃತರಾಷ್ಟ್ರನ ಮಗನೆಂಬ ಅರ್ಥವನ್ನೇ ಸಹಜವಾಗಿ ತಿಳಿಸುವುದರಿಂದ ಕ್ರಿಯೆ ಇಲ್ಲಿ ಗೋಪ್ಯ

ವೆನಿಸಿದೆ. ಇಲ್ಲಿಯೇ ಉಪಾಗತಃ ಎಂಬುದಕ್ಕೆ ಅನ್ವಯಿಸಲು ಅಧನಃ ಎಂಬ ಕರ್ತೃ ಕಾರಕವು ಗೋಪ್ಯವೆನಿಸಿದೆ. ಹೀಗೆಯೇ ಬೇರೆ ಕಡೆಗಳಲ್ಲೂ ತಿಳಿಯುವುದು.

ಅಥ ಅವಸರಪ್ರಾಪ್ತೇಷು ಅರ್ಥಾಲಂಕಾರೇಷು ಪ್ರಾಧಾನ್ಯಾತ್ ಸಾದೃಶ್ಯ ಮೂಲೇಷು ಲಕ್ಷಿತವ್ಯೇಷು ತೇಷಾಮಪ್ಯುಪಜೀವ್ಯತ್ವೇನ ಪ್ರಥಮಂ ಉಪಮಾಲಂಕಾರ ಮಾಹ—

ಸಾಮ್ಯಂ ವಾಚ್ಯಮವೈಧರ್ಮ್ಯಂ ವಾಕ್ಯೈಕ್ಯ ಉಪಮಾ ದ್ವಯೋಃ ।

ರೂಪಕಾದಿಷು ಸಾಮ್ಯಸ್ಯ ವ್ಯಂಗ್ಯತ್ವಮ್. ವ್ಯತಿರೇಕೇ ಚ ವೈಧರ್ಮ್ಯಸ್ಯಾ ಪ್ಯುಕ್ತಿಃ. ಉಪಮೇಯೋಪಮಾಯಾಂ ವಾಕ್ಯದ್ವಯಮ್. ಅನನ್ವಯೇ ಚ ಏಕಸ್ಯೈವ ಸಾಮ್ಯೋಕ್ತಿಃ. ಇತ್ಯಸ್ಯಾ ಭೇದಃ.

ಸಾ ಪೂರ್ಣಾ ಯದಿ ಸಾಮಾನ್ಯಧರ್ಮ ಔಪಮ್ಯವಾಚಿ ಚ।
ಉಪಮೇಯಂ ಚೋಪಮಾನಂ ಭವೇದ್ವಾಚ್ಯಮಿಯಂ ಪುನಃ ॥
ಶ್ರೌತೀ ಯಥೈವವಾಶಬ್ದಾ ಇವಾರ್ಥೋ ವಾ ವತಿರ್ಯದಿ
ಆರ್ಥೀ ತುಲ್ಯಸಮಾನಾದ್ಯಾಸ್ತುಲ್ಯಾರ್ಥೋ ಯತ್ರ ವಾ ವತಿಃ ॥

ಯಥೇವವಾದಯಃ ಶಬ್ದಾಃ ಉಪಮಾನಾಂತರಪ್ರಯುಕ್ತತುಲ್ಯಾದಿಪದಸಾಧಾ ರಣಾ ಅಪಿ ಶ್ರುತಿಮಾತ್ರೇಣೋಪಮಾನೋಪಮೇಯಗತಸಾದೃಶ್ಯಲಕ್ಷಣಸಂಬಂಧಂ ಬೋಧಯಂತೀತಿ ತತ್ಸದ್ಭಾವೇ ಶ್ರೌತೀ ಉಪಮಾ. ಏವಂ 'ತತ್ರ ತಸ್ಯೇವ' ಇತ್ಯನೇನ ಇವಾರ್ಥೇ ವಿಹಿತಸ್ಯ ವತೇರುಪಾದಾನೇ.

ತುಲ್ಯಾದಯಸ್ತು 'ಕಮಲೇನ ತುಲ್ಯಂ ಮುಖಂ' ಇತ್ಯಾದಾವುಪಮೇಯ ಏವ, 'ಕಮಲಂ ಮುಖಂ ಚ ತುಲ್ಯಮ್' ಇತ್ಯಾದೌ ಉಪಮೇಯ ಏವ 'ಕಮಲಂ ಮುಖಂ ಚ ತುಲ್ಯಂ' ಇತ್ಯಾದೌ ಉಭಯತ್ರಾಪಿ ವಿಶ್ರಾಮ್ಯಂತೀತಿ, ಅರ್ಥಾನು ಸಂಧಾನಾದೇವ ಸಾಮ್ಯಂ ಪ್ರತಿಪಾದಯಂತೀತಿ ತತ್ಸದ್ಭಾವೇ ಆರ್ಥೀ. ಏವಂ ತೇನ ತುಲ್ಯಂ ಇತ್ಯಾದಿನಾ ತುಲ್ಯಾರ್ಥೇ ವಿಹಿತಸ್ಯ ವತೇರುಪಾದಾನೇ.

ದ್ವೇ ತದ್ಧಿತೇ ಸಮಾಸೇಽಥ ವಾಕ್ಯೇ ಪೂರ್ಣಾ ಷಡೇವ ತತ್ ।
ದ್ವೇ ಶ್ರೌತೀ ಆರ್ಥೀ ಚ ಉದಾಹರಣಮ್.

ಸೌರಭಮಂಭೋರುಹವನ್ಮುಖಸ್ಯ ಕುಂಭಾವಿವ ಸ್ತನೀ ಪೀನೀ ।
ಹೃದಯಂ ಮದಯತಿ ತವ ಶರದಿಂದುರ್ಯಥಾ ಬಾಲೇ ॥

ಅತ್ರ ಕ್ರಮೇಣ ತ್ರಿವಿಧಾ ಶ್ರೌತೀ.

ಮಧುರಃ ಸುಧಾವದಧರಃ ಪಲ್ಲವತುಲ್ಯೋಽತಿಪೇಲವಃ ಪಾಣಿಃ ।
ಚಕಿತಮೃಗಲೋಚನಾಭ್ಯಾಂ ಸದೃಶೀ ಚ ಚಪಲೇ ಲೋಚನೇ ತಸ್ಯಾಃ ॥

ಅತ್ರ ಕ್ರಮೇಣ ತ್ರಿವಿಧಾ ಆರ್ಥೀ—

ಲುಪ್ತಾ ಸಾಮಾನ್ಯಧರ್ಮಾದೇರೇಕಸ್ಯ ಯದಿ ವಾ ದ್ವಯೋಃ ।

ತ್ರಯಾಣಾಂ ವಾಽನುಪಾದಾನೇ ಶ್ರೌತ್ಯಾರ್ಥೀ ಸಾಪಿ ಪೂರ್ವವತ್ ||

ಸಾ ಲುಪ್ತಾ. ತದ್ಭೇದಾನಾಹ—

ಪೂರ್ಣಾವದ್ಧರ್ಮಲೋಪೇ ಸಾ ವಿನಾ ಶ್ರೌತೀಂ ತು ತದ್ಧಿತೇ ।

ಸಾ ಲುಪ್ತೋಪಮಾ ಧರ್ಮಸ್ಯ ಸಾಧಾರಣಗುಣಕ್ರಿಯಾರೂಪಸ್ಯ ಲೋಪೇ ಪೂರ್ಣಾವದಿತಿ ಪೂರ್ವೋಕ್ತರೀತ್ಯಾ ಷಟ್ಪ್ರಕಾರಾ ಕಿಂತ್ವತ್ರ ತದ್ಧಿತೇ ಶ್ರೌತ್ಯಾ ಅಸಂಭವಾತ್ ಪಂಚಪ್ರಕಾರಾ. ಉದಾಹರಣಮ್.

ಸುಖಮಿಂದುರ್ಯಥಾ ಪಾಣಿಃ ಪಲ್ಲವೇನ ಸಮಃ ಪ್ರಿಯೇ ।
ವಾಚಃ ಸುಧಾ ಇವೌಷ್ಠಸ್ತೇ ಬಿಂಬತುಲ್ಯೋ ಮನೋಽಶ್ಮವತ್ ||
ಆಧಾರಕರ್ಮವಿಹಿತೇ ದ್ವಿವಿಧೇ ಚ ಕ್ಯಚಿ ಕ್ಯಙ ।
ಕರ್ಮಕರ್ತ್ರೋರ್ಣಮುಲಿ ಚ ಸ್ಯಾದೇವಂ ಪಂಚಧಾ ಪುನಃ ||

ಧರ್ಮಲೋಪೇ ಲುಪ್ತೇತ್ಯನುಷಜ್ಜತೇ. ಕ್ಯಚ್‌ಕ್ಯಙಣಮುಲಃ ಕಲಾಪಮತೇ ಯಿನ್ನಾಯಿಣಮಃ. ಕ್ರಮೇಣೋದಾಹರಣಮ್.

ಅಂತಃಪುರೀಯಸಿ ರಣೇಷು ಸುತೀಯಸಿ ತ್ವಂ ಪೌರಂ ಜನಂ ತವ ಸದಾ ರಮಣೀಯತೇ ಶ್ರೀ।
ದೃಷ್ಟಃ ಪ್ರಿಯಾಭಿರಮೃತದ್ಯುತಿದರ್ಶಮಿಂದ್ರಸಂಚಾರಮತ್ರ ಭುವಿ ಸಂಚರಸಿ ಕ್ಷಿತೀಶ||

ಅತ್ರ 'ಅಂತಃಪುರೀಯಸಿ' ಇತ್ಯತ್ರ ಸುಖವಿಹಾರಾಸ್ಪದತ್ವಸ್ಯ, 'ಸುತೀಯಸಿ ಇತ್ಯತ್ರ ಸ್ನೇಹನಿರ್ಭರತ್ವಸ್ಯ ಚ ಸಾಧಾರಣಧರ್ಮಸ್ಯ ಲೋಪಃ. ಏವಮನ್ಯತ್ರ.ಇಹ ಚ ಯಥಾದಿತುಲ್ಯಾದಿವಿರಹಾತ್ ಶ್ರೌತ್ಯಾದಿವಿಶೇಷಚಿಂತಾ ನಾಸ್ತಿ. ಇದಂ ಚ ಕೇಚಿದೌಪಮ್ಯಪ್ರತಿಪಾದಕಸ್ಯ ಇವಾದೇರ್ಲೋಪೇ ಉದಾಹರಂತಿ, ತದಯುಕ್ತಮ್. ಕ್ಯಙಾದೇರಪಿ ತದರ್ಥವಿಹಿತತ್ವೇನ ಔಪಮ್ಯಪ್ರತಿಪಾದಕತ್ವಾತ್. ನನು ಕ್ಯಙಾದಿಷು ಸಮ್ಯಗೌಪಮ್ಯಪ್ರತೀತಿರ್ನಾಸ್ತಿ ಪ್ರತ್ಯಯತ್ವೇನ ಅಸ್ವತಂತ್ರತ್ವಾತ್, ಇವಾದಿಪ್ರಯೋಗಾಭಾವಾಚ್ಚ ಇತಿ ನ ವಾಚ್ಯಮ್, ಕಲ್ಪಬಾದಾವಪಿ ತಥಾ ಪ್ರಸಂಗಾತ್. ನ ಚ ಕಲ್ಪಬಾದೀನಾಮಿವಾದಿತುಲ್ಯತಯಾ ಔಪಮ್ಯಸ್ಯ ವಾಚಕತ್ವಂ, ಕ್ಯಙಾದೀನಾಂ ತು ದ್ಯೋತಕತ್ವಮ್. ಇವಾದೀನಾಮಪಿ ವಾಚಕತ್ವೇ ನಿಯಮಾಭಾವಾತ್. ವಾಚಕತ್ವೇ ವಾ 'ಸಮುದಿತಂ ಪದಂ ವಾಚಕಮ್' 'ಪ್ರಕೃತಿಪ್ರತ್ಯಯೌ ಸ್ವಸ್ವಾರ್ಥಬೋಧಕೌ ಇತಿ ಚ ಮತದ್ವಯೇಽಪಿ ವತ್ಯಾದಿ-ಕ್ಯಙಾದ್ಯೋಃ ಸಾಮ್ಯಮೇವೇತಿ. ಯಚ್ಚ ಕೇಚಿದಾಹುಃ-"ವತ್ಯಾದಯ ಇವಾದ್ಯರ್ಥೇಽನುಶಿಷ್ಯಂತೇ ಕ್ಯಙಾದಯಸ್ತ್ವಾಚಾರಾರ್ಥೇ" ಇತಿ, ತದಪಿ ನ. ನ ಖಲು ಕ್ಯಙಾದಮಃ ಆಚಾರಮಾತ್ರಾರ್ಥಾಃ ಅಪಿ ತು ಸಾದೃಶ್ಯಾಚಾರಾರ್ಥಾ ಇತಿ. ತದೇವಂ ಧರ್ಮಲೋಪೇ ದಶಪ್ರಕಾರಾ ಲುಪ್ತಾ.

ಶಬ್ದಾಲಂಕಾರಗಳನ್ನು ನಿರೂಪಿಸಿ ಯಾದಮೇಲೆ ಅರ್ಥಾಲಂಕಾರಗಳ ನಿರೂಪಣಾವು ಆವಶ್ಯಕವೆನಿಸಿದ್ದರಿಂದ ಅವುಗಳಲ್ಲಿ ಪ್ರಧಾನವೆನಿಸಿದ ಪ್ರಯುಕ್ತ ಸಾದೃಶ್ಯಮೂಲ

ವಾದ ಅರ್ಥಾಲಂಕಾರಗಳನ್ನು ನಿರೂಪಿಸುವಾಗ ಅವುಗಳಿಗೆ ಆಶ್ರಯವೆನಿಸಿದ್ದರಿಂದ ಮೊದಲು ಉಪಮಾಲಂಕಾರವನ್ನು ನಿರೂಪಿಸುತ್ತಾನೆ. ಒಂದೇ ವಾಕ್ಯದಲ್ಲಿ ಉಪಮಾನ ಉಪಮೇಯವೆನಿಸಿದ ಎರಡು ವಸ್ತುಗಳಿಗೆ ಪರಸ್ಪರ ಸಾಧರ್ಮ್ಯವನ್ನು ಇವ ಮೊದಲಾದ ಶಬ್ದಗಳಿಂದಲೂ, ಕ್ಯಜ ಮೊದಲಾದ ಪ್ರತ್ಯಯಗಳಿಂದಲೂ, ಉಪಮಿತಾದಿಸಮಾಸ ಗಳಿಂದಲೂ ಎಲ್ಲಿ ಸ್ಪಷ್ಟವಾಗಿ ಪ್ರತಿಪಾದಿಸಲಾಗಿದೆಯೋ ಅಲ್ಲಿ ತೋರುವ ಸಾದೃಶ್ಯವೇ ಉಪಮಾಲಂಕಾರವೆನಿಸುತ್ತದೆ. ರೂಪಕ ಮೊದಲಾದ ಅಲಂಕಾರಗಳಲ್ಲಿ ಸಾದೃಶ್ಯವು ಉಪಮಾನೋಪಮೇಯಗಳಿಗೆ ವ್ಯಂಗ್ಯವಾಗಿ ತೋರುವುದು. ವ್ಯತಿರೇಕಾಲಂಕಾರದಲ್ಲಿ ಸಾಧರ್ಮ್ಯವಿದ್ದರೂ ವೈಧರ್ಮ್ಯವನ್ನು ತಿಳಿಸಲಾಗುವುದು.ಉಪಮೇಯೋಪಮಾಲಂಕಾರ ದಲ್ಲಿ ಎರಡು ಸ್ವತಂತ್ರವಾದ ವಾಕ್ಯಗಳಿರುತ್ತವೆ. ಕಮಲೇವ ಮತಿಃ ಮತಿರಿವ ಕಮಲಾ ಇಲ್ಲಿ ಎರಡು ವಾಕ್ಯಗಳಿರುವುದನ್ನು ಕಾಣಬಹುದು. ಅನನ್ವಯವಲ್ಲಿ ಉಪಮೇಯ ಒಂದನ್ನು ಮಾತ್ರವೇ ತಿಳಿಸಲಾಗಿದೆ. ಈ ಬಗೆಯ ಅಲಂಕಾರಗಳೆಲ್ಲದರಿಂದಲೂ ಉಪ ಮಾಲಂಕಾರವು ಬೇರೆ ಎಂಬುದನ್ನು ತಿಳಿಸಲಿಕ್ಕಾಗಿ ಲಕ್ಷಣದಲ್ಲಿ ಪದಗಳನ್ನು ಅನ್ವರ್ಥ ವಾಗುವಂತೆ ತಿಳಿಸಿದೆ.

ಉಪಮೇಯ, ಉಪಮಾನ, ಸಾಧಾರಣಧರ್ಮ, ಸಾದೃಶ್ಯವನ್ನು ತಿಳಿಸುವ ಇವನ್ನು ಸ್ಪಷ್ಟವಾಗಿ ಶಬ್ದದಿಂದ ತಿಳಿಸಿದ್ದರೆ ಉಪಮಾಲಂಕಾರವು ಪೂರ್ಣೋಪಮೆ ಎನಿಸುತ್ತದೆ. ಉಪಮಾನ ಮತ್ತು ಉಪಮೇಯವೆನಿಸಿದ ಪದಾರ್ಥಗಳೆರಡಕ್ಕೂ ಸಾದೃಶ್ಯವನ್ನು ಒದಗಿಸುವ ಸಾಧಾರಣಧರ್ಮವು ಮನೋಹರತ್ವ ದೊದಲಾದ ಗುಣವೋ ಅಥವಾ ಪ್ರಕಾಶಿಸುತ್ತಿದೆ ಎಂಬ ಕ್ರಿಯೆಯ ರೂಪದಲ್ಲೋ ಇರುವುದು. ಕಮಲಮಿವ ಮುಖಂ ಮನೋಜ್ಞಂ ಎಂಬಲ್ಲಿ ಮನೋಜ್ಞಂ ಎಂಬಲ್ಲಿ ತಿಳಿಸಿರುವ ಗುಣವೂ, ಮುಖಂ ಚಂದ್ರ ಇವ ಆಭಾತಿ ಎಂಬಲ್ಲಿ ಆಭಾತಿ ಎಂಬ ಕ್ರಿಯೆಯೂ ಸಾಧಾರಣಧರ್ಮವೆನಿಸಿವೆ. 'ಸಕಲಕಲಂ ಪುರಮೇತಜ್ಜಾತು ಸಂಪ್ರತಿ ಸುಧಾಂಶುಬಿಂಬಮಿವ' ಎಂಬಲ್ಲಿ ಸಕಲಕಲಂ ಎಂದು ಒಂದೇ ಬಗೆಯ ಶಬ್ದದಿಂದ ತಿಳಿದುಬರುವ ಸ್ವರೂಪವಿಶೇಷವೇ ಸಾಮಾನ್ಯ ಧರ್ಮವೆನಿಸಿದೆ. ಇವ ಯಥಾ ಮೊದಲಾದ ಶಬ್ದಗಳು ಸಾದೃಶ್ಯವಾಚಕಗಳೆನಿಸಿವೆ. ಮುಖ ಮೊದಲಾದವು ಉಪಮೇಯವೆನಿಸಿವೆ. ಚಂದ್ರ ಮೊದಲಾದವು ಉಪಮಾನ ವೆನಿಸಿವೆ.

ಯಥಾ, ಇವ ಎಂಬ ಪದಗಳನ್ನು ಪ್ರಯೋಗಿಸಿರುವ ಕಡೆ ಪೂರ್ಣೋಪಮೆಯು ಶಬ್ದಸಾಮ್ಯದಿಂದಲೂ ಸಾದೃಶ್ಯವು ತೋರುತ್ತದೆ. ಇವ ಎಂಬ ಅರ್ಥವನ್ನು ತಿಳಿಸುವ ಬೇರೆ ಪದವಾಗಲೀ ವತಿಪ್ರತ್ಯಯವಾಗಲೀ ಇದ್ದರೂ ಪೂರ್ಣೋಪಮೆಯು ಶ್ರೌತಿ ಎನಿಸುತ್ತದೆ. ಎಲ್ಲಿ ತುಲ್ಯ, ಸಮಾನ, ಸದೃಶ ಮೊದಲಾದ ಶಬ್ದಗಳಾಗಲೀ ತುಲ್ಯ ಎಂಬ ಅರ್ಥವನ್ನು ಕೊಡುವ ವತಿಪ್ರತ್ಯಯವಾಗಲೀ ಇರುವುದೋ ಅಲ್ಲಿ ಪೂರ್ಣೋಪ ಮೆಯು ಆರ್ಥಿ ಎನಿಸುತ್ತದೆ. ಇಲ್ಲಿ ಅರ್ಥಾನುಸಂಧಾನದಿಂದಲೇ ಸಾದೃಶ್ಯವು ತಿಳಿದು ಬರುತ್ತದೆ. ಯಥಾ ಇವ ಮೊದಲಾದ ಶಬ್ದಗಳು, ಉಪಮಾನವನ್ನು ತಿಳಿಸುವ ಪದದ

ಮುಂದೆ ಬಂದಿರುವ ತುಲ್ಯ ಮೊದಲಾದ ಪದಗಳಿಗೆ ಸಮಾನಗಳೆನಿಸಿದ್ದು. ಕೇಳಿದ ಮಾತ್ರ ದಿಂದಲೇ ಉಪಮಾನೋಪಮೇಯಗಳಿಗೆ ಸಾಮ್ಯರೂಪವಾದ ಸಂಬಂಧವನ್ನು ಶಬ್ದ ಶಕ್ತಿಯ ಮಹಿಮೆಯಿಂದ ತಿಳಿಸುತ್ತವೆ. ಆದ್ದರಿಂದ ಅವು ಇರುವಾಗ ಉಪಮೆಯು ಶ್ರೌತಿ ಎನಿಸುವುದು. ಹೀಗೆಯೇ 'ತತ್ರ ತಸ್ಯೇವ' ಎಂಬ ಅರ್ಥದಲ್ಲಿ ವಿಹಿತವಾದ ವತಿ ಪ್ರತ್ಯಯವನ್ನು ಶಬ್ದದಿಂದ ತಿಳಿಸಿದಾಗಲೂ ಪೂರ್ಣೋಪಮೆಯು ಶ್ರೌತಿ ಎನಿಸುವುದು. ತುಲ್ಯ ಮೊದಲಾದ ಪದಗಳಾದರೋ 'ಕಮಲೇನ ತುಲ್ಯಂ ಮುಖಂ' ಎಂಬಲ್ಲಿ ಉಪಮೇಯದಲ್ಲಿಯೂ, 'ಕಮಲಂ ಮುಖಸ್ಯ ತುಲ್ಯಂ' ಎಂಬಲ್ಲಿ ಉಪಮಾನ ದಲ್ಲೂ, 'ಕಮಲಂ ಮುಖಂ ಚ ತುಲ್ಯಂ' ಎಂಬಲ್ಲಿ ಎರಡು ಕಡೆಗಳಲ್ಲೂ ನೆಲಸಿದ್ದು ಅರ್ಥಾನುಸಂಧಾನದಿಂದಲೇ ಸಾಮ್ಯವನ್ನು ತಿಳಿಸುತ್ತವೆ. ಆದ್ದರಿಂದ ಅವು ಇರುವಾಗ ಉಪಮೆ ಆರ್ಥಿ ಎನಿಸುತ್ತದೆ. ಹೀಗೆಯೇ 'ತೇನ ತುಲ್ಯಂ ಕ್ರಿಯಾ ಚೇದ್ವತಿಃ' ಎಂಬ ಸೂತ್ರದಿಂದ ತುಲ್ಯ ಎಂಬ ಅರ್ಥದಲ್ಲಿ ಹೇಳಿರುವ ವತಿಪ್ರತ್ಯಯವನ್ನು ಸೇರಿಸಿದಾಗಲೂ ಉಪಮೆಯು ಆರ್ಥಿ ಎನಿಸುವುದು.

ಹೀಗೆ ಶ್ರೌತೀ ಆರ್ಥೀ ಎಂದು ಎರಡು ಬಗೆಯಾದ ಪೂರ್ಣೋಪಮೆಯು ತದ್ಧಿತಪ್ರತ್ಯಯದಲ್ಲೂ ಸಮಾಸದಲ್ಲೂ ವಾಕ್ಯದಲ್ಲೂ ಸಂಭವಿಸಿ ಮತ್ತೆ ಮೂರು ಬಗೆ ಯಾಗುವುದು. ಇದನ್ನು ಈಗ ಉದಾಹರಿಸುತ್ತಾನೆ. "ಎಲೈ ಬಾಲೆ, ನಿನ್ನ ಮುಖದ ಸುಗಂಧವು ಕಮಲದಂತೆ ಇದೆ. ಸ್ತನಗಳು ಕುಂಭಗಳಂತೆ ದಪ್ಪಗಿವೆ. ಶರತ್ಕಾ ಲದ ಚಂದ್ರನು ಹೃದಯವನ್ನು ಆದಂದಗೊಳಿಸುವಂತೆ ನಿನ್ನ ಮುಖವು ಹೃದಯವನ್ನು ಆನಂದಪಡಿಸುತ್ತದೆ." ಇಲ್ಲಿ ಮೊದಲನೆಯ ವಾಕ್ಯದಲ್ಲಿ ಸೌರಭವೇ ಸಾಮಾನ್ಯಧರ್ಮ. ಕಮಲವೇ ಉಪಮಾನ. ಮುಖವೇ ಉಪಮೇಯ. ವತಿಪ್ರತ್ಯಯವು ಔಪಮ್ಯವನ್ನು ತಿಳಿಸುವ ಪದ. ಆದ್ದರಿಂದ ಇದು ಪೂರ್ಣೋಪಮೆ ಎನಿಸಿದೆ. 'ತತ್ರ ತಸ್ಯೈವ' ಎಂಬು ದರಿಂದ ಇವ ಎಂಬ ಅರ್ಥದಲ್ಲಿ ವತಿಪ್ರತ್ಯಯವನ್ನು ವಿಧಿಸಿರುವ ಪ್ರಯುಕ್ತ ಇದು ತದ್ಧಿತಗಾ ಶ್ರೌತಿ ಎನಿಸಿದೆ. ಎರಡನೆಯ ವಾಕ್ಯದಲ್ಲಿ 'ಕುಂಭಾವಿವ' ಎಂದು 'ಇವೇನ ಸಮಾಸೋ ವಿಭಕ್ತ್ಯಲೋಪಶ್ಚ' ಎಂಬ ವಾರ್ತಿಕೆಯಿಂದ ಸಮಾಸಮಾಡಿರುವ ಪ್ರಯುಕ್ತ ಇದು ಸಮಾಸಗಾ ಶ್ರೌತೀ ಉಪಮೆ ಎನಿಸಿದೆ. ದ್ವಿತೀಯಾರ್ಥವು ವಾಕ್ಯವೇ ಆದ್ದ ರಿಂದಲೂ, ಯಥಾ ಶಬ್ದವು ಶ್ರೌತವೆನಿಸಿದ್ದರಿಂದಲೂ ಅದು ವಾಕ್ಯಗತಾ ಶ್ರೌತೀ ಎನಿ ಸಿದೆ. ಹೀಗೆ ಇಲ್ಲಿ ಕ್ರಮವಾಗಿ ಮೂರು ಬಗೆಯ ಶ್ರೌತೀ ಪೂರ್ಣೋಪಮೆಯನ್ನು ಕಾಣಬಹುದು.

ಈಗ ಅವೇ ಮೂರು ಬಗೆಯ ಆರ್ಥೀ ಪೂರ್ಣೋಪಮೆಯನ್ನು ಉದಾಹರಿಸು ತ್ತಾನೆ. "ಆ ತರುಣಿಯ ಅಧರವು ಅಮೃತದಂತೆ ಮಧುರವಾಗಿದೆ. ಹಸ್ತವು ಚಿಗುರಿ ನಂತೆ ಬಹಳ ಕೋಮಲವಾಗಿದೆ. ಹಾಗೆಯೇ ಕಣ್ಣುಗಳು ನಡುಗುತ್ತಿರುವ ಜಿಂಕೆಯ ಕಣ್ಣುಗಳಿಗೆ ಸದೃಶಗಳಾಗಿ ಚಂಚಲವೆನಿಸಿವೆ." ಇಲ್ಲಿ ಮೊದಲನೆಯ ವಾಕ್ಯದಲ್ಲಿ 'ಅಧರವು ಅಮೃತದಂತೆ ಮಧುರವಾಗಿರುವುದರಿಂದ ಅದನ್ನು ಪಾನಮಾಡಲಾಗಿದೆ' ಎಂಬ

ಈ ಅರ್ಥವೇ ವಿವಕ್ಷಿತವಾದ್ದರಿಂದಲೂ ತುಲ್ಯ ಎಂಬ ಅರ್ಥದಲ್ಲಿ ವತಿಪ್ರತ್ಯಯವು ಬಂದಿರುವುದರಿಂದಲೂ ಇದು ತದ್ಧಿತಗಾ ಆರ್ಥೀ ಪೂರ್ಣೋಪಮೆ ಎನಿಸಿದೆ. ಎರಡನೆಯ ವಾಕ್ಯದಲ್ಲಿ 'ಪಲ್ಲವೇನ ತುಲ್ಯಃ' ಎಂದು ಸಮಾಸವಾಗುವುದರಿಂದ ಸಮಾಸದಲ್ಲಿ ಆರ್ಥೀ ಉಪಮೆ ಬಂದಿದೆ. ದ್ವಿತೀಯಾರ್ಥವು ವಾಕ್ಯವೆನಿಸಿದ್ದು ಲೋಚನಾಭ್ಯಾಂ ಎಂಬುದಕ್ಕೆ ಸದೃಶೀ ಪದದೊಡನೆ ಸಮಾಸವಾಗದೇ ಇರುವ ಪ್ರಯುಕ್ತ ಇದು ವಾಕ್ಯಗಾ ಆರ್ಥೀ ಪೂರ್ಣೋಪಮೆ ಎನಿಸಿದೆ. ಇಲ್ಲಿಯೂ ಹಿಂದಿನದರಂತೆಯೇ ಪೂರ್ವವಾಕ್ಯಗಳಲ್ಲಿ ವಾಕ್ಯ ಗತಾ ಆರ್ಥೀ ಉಪಮೆಗೆ ಅವಕಾಶವಿಲ್ಲವೆಂದು ತಿಳಿಯುವುದು. ಹೀಗೆ ಪೂರ್ಣೋಪ ಮೆಯು ಆರು ಬಗೆ ಎನಿಸಿದೆ.

ಇನ್ನು ಲುಪ್ತೋಪಮೆಯನ್ನು ತಿಳಿಸುತ್ತಾನೆ. ಸಾಮಾನ್ಯಧರ್ಮ, ಉಪ ಮಾನ, ಉಪಮೇಯ, ವಾಚಕ ಇವುಗಳಲ್ಲಿ ಒಂದು, ಎರಡು ಅಥವಾ ಮೂರನ್ನು ತಿಳಿ ಸದೆ ಇದ್ದರೆ ಆ ಬಗೆಯ ಉಪಮೆಯು ಲುಪ್ತೆ ಎನಿಸುವುದು. ಇದೂ ಸಹ ಪೂರ್ಣೋ ಪಮೆಯಂತೆ ಶ್ರೌತಿ ಆರ್ಥೀ ಎಂದು ಎರಡು ಬಗೆಯಾಗುತ್ತದೆ. ಶ್ರೌತೀ ಲುಪ್ತೋಪ ಮೆಯು ಪೂರ್ಣೋಪಮೆಯಂತೆ ತದ್ಧಿತದಲ್ಲೂ ಸಮಾಸದಲ್ಲೂ ವಾಕ್ಯದಲ್ಲೂ ಮೂರು ಬಗೆಯಾಗಿ ಹಾಗೆಯೇ ಆರ್ಥಿಯ ಮೂರು ಬಗೆಗಳೊಡನೆ ಆರು ಬಗೆಯಾಗಬಹುದಾ ದರೂ ತದ್ಧಿತದಲ್ಲಿ ಶ್ರೌತೀಲುಪ್ತೋಪಮೆಯು ಸಂಭವಿಸದೇ ಇರುವುದರಿಂದ ಐದು ಬಗೆ ಯಾಗುತ್ತದೆ. ಸಮಾಸದಲ್ಲೂ ವಾಕ್ಯದಲ್ಲು ಇರುವ ಶ್ರೌತಿಯ ಎರಡು ಬಗೆಗಳು, ತದ್ಧಿತದಲ್ಲೂ ಸಮಾಸದಲ್ಲೂ ವಾಕ್ಯದಲ್ಲೂ ಇರುವ ಆರ್ಥೀ ಲುಪ್ತೋಪಮೆಯ ಮೂರು ಬಗೆಗಳು ಸೇರಿ ಅದು ಐದು ಬಗೆ ಆಗುತ್ತದೆ. ಹೀಗೆ ಲುಪ್ತೋಪಮಾಭೇದಗಳಲ್ಲಿ ಸಾಮಾನ್ಯಧರ್ಮಲೋಪದ ಮೊದಲನೆಯ ಬಗೆಯನ್ನು ಮೊದಲು ತಿಳಿಸಿದ್ದಾನೆ. ಈಗ ಅದನ್ನು ಉದಾಹರಿಸುತ್ತಾನೆ. "ಎಲೈ ಪ್ರಿಯಳೇ, ನಿನ್ನ ಮುಖವು ಚಂದ್ರನಂತೆ ಇದೆ" ಇಲ್ಲಿ ಯಥಾ ಶಬ್ದವನ್ನು ಹೇಳಿದ್ದು 'ಆನಂದಯತಿ' ಎಂಬ ಕ್ರಿಯಾರೂಪ ವಾದ ಸಾಧಾರಣಧರ್ಮವನ್ನು ತಿಳಿಸದೇ ಇರುವುದರಿಂದ ಇದು ವಾಕ್ಯದಲ್ಲಿರುವ ಶ್ರೌತೀ ಲುಪ್ತೋಪಮೆ ಎನಿಸಿದೆ. ಇಲ್ಲಿ ಕೋಮಲಗುಣವೆಂಬ ಸಾಮಾನ್ಯಧರ್ಮ ವನ್ನು ತಿಳಿಸದೇ ಇರುವುದರಿಂದಲೂ, ಇವ ಶಬ್ದದೊಡನೆ ಸಮಾಸವಾಗಿರುವುದರಿಂದಲೂ ವಾಕ್ಯದಲ್ಲಿ ಆರ್ಥೀ ಲುಪ್ತೋಪಮೆ ಇದೆ. 'ವಾಕ್ಕು ಸುಧೆಯಂತೆ ಇದೆ' ಇಲ್ಲಿ ಇವ ಶಬ್ದವನ್ನು ತಿಳಿಸಿ ಮಧುರಾ ಎಂದು ಸಾಮಾನ್ಯಧರ್ಮವನ್ನು ತಿಳಿಸದೇ ಇರುವುದ ರಿಂದಲೂ ಇವ ಶಬ್ದದೊಡನೆ ಸಮಾಸವಾಗಿ ವಿಭಕ್ತಿ ಲೋಪವಾಗದೆ ಇರುವುದರಿಂದಲೂ ಇದು ಸಮಾಸದಲ್ಲಿ ಶ್ರೌತೀ ಲುಪ್ತೋಪಮೆ ಎನಿಸಿದೆ. ಇಲ್ಲಿ ತುಲ್ಯ ಎಂಬ ಶಬ್ದವನ್ನು ತಿಳಿಸಿದ್ದರೂ ಕೆಂಪುಬಣ್ಣವನ್ನು ತಿಳಿಸುವ ಸಾಮಾನ್ಯಧರ್ಮವನ್ನು ಹೇಳದೇ ಇರುವು ದರಿಂದಲೂ ಬಿಂಬ ಶಬ್ದದೊಡನೆ ತುಲ್ಯಶಬ್ದಕ್ಕೆ ಸಮಾಸವಾಗಿರುವುದರಿಂದಲೂ ಇದು ಸಮಾಸದಲ್ಲಿ ಆರ್ಥೀ ಲುಪ್ತೋಪಮೆ ಎನಿಸಿದೆ. ಮನಸ್ಸು ಕಲ್ಲಿನಂತೆ ಇದೆ ಎಂಬಲ್ಲಿ ತೃತೀಯಾಂತವಾದ ಅಶ್ಮಶಬ್ದದ ಮೇಲೆ ತುಲ್ಯ ಎಂಬ ಅರ್ಥದಲ್ಲಿ ವತಿಪ್ರತ್ಯಯ

ವನ್ನು ವಿಧಿಸಿ ಕಠಿನ ಎಂಬ ಸಾಮಾನ್ಯಧರ್ಮವನ್ನು ತಿಳಿಸದೆ ಇರುವುದರಿಂದ ಇದು ತದ್ಧಿತಗಾ ಆರ್ಥೀ ಲುಪ್ತೋಪಮೆಎನಿಸಿದೆ. ಹೀಗೆ ಇಲ್ಲಿ ಐದು ಬಗೆಯ ಲುಪ್ತೋಪಮೆಗಳನ್ನು ಕಾಣಬಹುದು.

ಮತ್ತೆ ಲುಪ್ತೋಪಮೆಯನ್ನೇ ಬೇರೊಂದು ರೀತಿಯಿಂದ ವಿಭಾಗಿಸುತ್ತಾನೆ. ಅಧಿಕರಣ ಮತ್ತು ಕರ್ಮ ಎಂಬ ಅರ್ಥಗಳನ್ನು ತಿಳಿಸುವ ಪದಗಳ ಮೇಲೆ ಕ್ಯಚ್ ಪ್ರತ್ಯಯವನ್ನು ಹಚ್ಚುವುದರಿಂದ ಅಲ್ಲಿ ಎರಡು ಬಗೆಯ ಲುಪ್ತೋಪಮೆಗಳಾಗುತ್ತವೆ. ಹಾಗೆಯೇ ಕ್ಯಙ ಪ್ರತ್ಯಯದಲ್ಲಿ ಒಂದು ಬಗೆಯಾಗುತ್ತದೆ. ಅದರಂತೆಯೇ ಕರ್ಮ ಕರ್ತೃಗಳಿಗೆ ಣಮುಲ್ ಪ್ರತ್ಯಯವನ್ನು ಹಚ್ಚಿದ್ದರಿಂದ ಒಂದೊಂದರಲ್ಲೂ ಒಂದೊಂದು ಬಗೆಯಾಗುವುದರಿಂದ ಇವು ಎರಡು ಬಗೆಗಳೊಡನೆ ಹಿಂದಿನ ಮೂರು ಸೇರಿ ಸಾಮಾನ್ಯ ಧರ್ಮಲೋಪದಲ್ಲಿ ಲುಪ್ತೋಪಮೆಯು ಮತ್ತೆ ಐದು ಬಗೆಯಾಗುತ್ತದೆ. ಕಲಾಪನೆಂಬ ವೈಯಾಕರಣನ ಪ್ರಕಾರ ಕ್ಯಚ್, ಕ್ಯಙ, ಣಮುಲ್, ಯಿನ್, ನಾಯಿಣಮ್ ಎಂಬ ಆದೇಶಗಳು ಬರುತ್ತವೆ. ಐದು ಬಗೆಯ ಲುಪ್ತೋಪಮೆಯನ್ನು ಒಂದೇ ಪದ್ಯದಲ್ಲಿ ಉದಾಹರಿಸುತ್ತಾನೆ. "ಎಲೈ ಮಹಾರಾಜನೇ, ನೀನು ಯುದ್ಧಗಳಲ್ಲಿ ಅಂತಃಪುರಗಳಲ್ಲಿಯಂತೆ ಸುಖವಾಗಿ ವಿಹರಿಸುತ್ತಿರುವೆ." ಇಲ್ಲಿ ಅಂತಃಪುರ ಎಂಬ ಅಧಿಕರಣದ ಮುಂದೆ ಪಾಣಿನಿಯ ಮತದಲ್ಲಿ 'ಅಧಿಕರಣಾಚ್ಚ' ಎಂಬ ಸೂತ್ರವಾರ್ತಿಕೆಯಿಂದ ಕ್ಯಚ್ ಪ್ರತ್ಯಯವು ಬರುತ್ತದೆ. ಕಲಾಪನ ಪ್ರಕಾರವೂ 'ಆಧಾರಾದ ಪಿಸ್ಯಾತ್' ಎಂಬುದರಿಂದ ಯಿನ್‌ಪ್ರತ್ಯಯವು ಬರುತ್ತದೆ. "ನೀನು ಊರಿನ ಜನರನ್ನು ಮಕ್ಕಳಂತೆ ಕಾಣುತ್ತಿರುವೆ" ಇಲ್ಲಿಯೂ ಸುತಂ ಎಂಬ ಕರ್ಮಪದದ ಮೇಲೆ ಕ್ರಮವಾಗಿ ಕ್ಯಚ್, ಯಿನ್ ಪ್ರತ್ಯಯಗಳು ಬಂದಿವೆ. "ಲಕ್ಷ್ಮಿಯು ಯಾವಾಗಲೂ ನಿನಗೆ ರಮಣಿಯಂತೆ ಸುಖಭೋಗವನ್ನು ಸಂಪಾದಿಸಿ ಕೊಡುವಳು" ಇಲ್ಲಿ ರಮಣೀ ಎಂಬ ಕರ್ತೃಪದದ ಮೇಲೆ ಪಾಣಿನಿಮತದಲ್ಲಿ 'ಕರ್ತುಃಕ್ಯಙ ಸಲೋಪಶ್ಚ' ಎಂದು ಕ್ಯಚ್ ಪ್ರತ್ಯಯವೂ, ಕಲಾಪಮತದಲ್ಲಿ ನಾಯಿಣ್ ಪ್ರತ್ಯಯವೂ ಬಂದಿವೆ. "ಪ್ರೇಯಸಿಯರಿಗೆ ಚಂದ್ರನಂತೆ ನೀನು ಕಾಣುತ್ತಿರುವೆ" ಇಲ್ಲಿ ಅಮೃತದ್ಯುತಿ ಶಬ್ದದಲ್ಲಿ ದೃಶ್‌ಧಾತುವಿಗೆ ಪಾಣಿನಿಯ ಮತದಲ್ಲಿ 'ಉಪಮಾನೇ ಕರ್ಮಣಿ ಚ' ಎಂಬುದರಿಂದ ಣಮುಲ್‌ಪ್ರತ್ಯಯವು ಬಂದಿದೆ. ಕಲಾಪಮತದಲ್ಲಿ 'ಕರ್ಮಣಿ ಚೋಪಮಾನೇ' ಎಂಬುದರಿಂದ ಣಮ್ ಪ್ರತ್ಯಯವು ಬಂದಿದೆ. ಹಾಗೆಯೇ "ನೀನು ಈ ಭೂಮಿಯಲ್ಲಿ ಐಶ್ವರ್ಯಾತಿಶಯದಿಂದ ಇಂದ್ರನಂತೆ ಅಪ್ರತಿಹತನಾಗಿ ಸಂಚರಿಸುತ್ತಿರುವೆ" ಎಂಬಲ್ಲಿ ಇಂದ್ರ ಎಂಬ ಪದದಲ್ಲಿ ಸಂ ಎಂಬ ಉಪಸರ್ಗದೊಡಗೂಡಿದ ಚರ್ ಧಾತುವಿಗೆ ಣಮುಲ್ ಣಮ್‌ಪ್ರತ್ಯಯಗಳು ಬಂದು ಇಂದ್ರಸಂಚಾರಂ ಎಂದು ರೂಪವಾಗಿದೆ. ಅಂತಃಪುರೀಯಸಿ ಎಂಬಲ್ಲಿ 'ಅನಾಯಾಸವಾಗಿ ಸಂಚರಿಸಲು ಆಶ್ರಯವೆನಿಸಿದೆ' ಎಂಬ ಸಾಧಾರಣಧರ್ಮವು ಲೋಪವಾಗಿದೆ. ಸುತೀಯಸಿ ಎಂಬಲ್ಲಿ "ಪ್ರಜೆಗಳಲ್ಲೂ ಮಕ್ಕಳಲ್ಲೂ ನಿನಗೆ ವಿಶೇಷವಾತ್ಸಲ್ಯವಿದೆ" ಎಂಬ ಸಾಧಾರಣಧರ್ಮವು ಲೋಪವಾಗಿದೆ. ಹೀಗೆಯೇ "ರಮಣೀಯತೇ ಶ್ರೀಃ" ಎಂಬಲ್ಲಿ ಸುಖಭೋಗಗಳನ್ನು ದೊರಕಿಸು

ವಿಕೆ ಎಂಬ ಧರ್ಮವು ಲೋಪವಾಗಿದೆ. ಅಮೃತದ್ಯುತಿದರ್ಶನಮ್ ಎಂಬಲ್ಲಿ ನಯನಗಳಿಗೆ ಆನಂದವನ್ನುಂಟುಮಾಡುವಿಕೆಯೂ 'ಇಂದ್ರಸಂಚಾರಂ' ಎಂಬಲ್ಲಿ ಅಪ್ರತಿಹತವಾಗಿ ಸಂಚರಿಸುವಿಕೆ ಎಂಬುದೂ ಲೋಪವಾಗಿವೆ. ಆದ್ದರಿಂದ ಇಲ್ಲಿ ಹೇಳಿರುವವೆಲ್ಲವೂ ಸಾಧಾರಣಧರ್ಮಲೋಪದ ಉದಾಹರಣವೆನಿಸಿವೆ. ಕ್ಯಚ್ ಮೊದಲಾದ ಪ್ರತ್ಯಯಗಳಿಗೆ ಸಂಬಂಧಿಸಿದ ಲುಪ್ತೋಪಮೆಯಲ್ಲಿ ಸಾದೃಶ್ಯವನ್ನು ಬೋಧಿಸುವ ಯಥಾ ಇವ ಮೊದಲಾದ ಶಬ್ದಗಳಿಲ್ಲದ್ದರಿಂದ ಶ್ರೌತೀ ಭೇದವು ಸಂಭವಿಸುವಂತಿಲ್ಲ. ಹೀಗೆಯೇ ಅರ್ಥಾನುಸಂಧಾನದಿಂದ ಸಾದೃಶ್ಯವನ್ನು ಪ್ರತಿಪಾದಿಸುವ ತುಲ್ಯ ಮೊದಲಾದ ಶಬ್ದಗಳಿಲ್ಲದ್ದರಿಂದ ಆರ್ಥೀ ಎಂಬ ಭೇದವೂ ಸಂಭವಿಸುವಂತಿಲ್ಲ. ಶ್ರೌತಿಯಲ್ಲದ್ದನ್ನು ಆರ್ಥೀ ಎಂದು ಅಂಗೀಕರಿಸಿದರೆ ಮಾತ್ರ ಇದು ಆರ್ಥೀ ಎನಿಸುವುದು.

ಔಪಮ್ಯವನ್ನು ತಿಳಿಸುವ ಇವ ಮೊದಲಾದ ವಾಚಕಗಳ ಲೋಪಕ್ಕೆ ಹಿಂದೆ ತಿಳಿಸಿದ ಉದಾಹರಣಗಳನ್ನು ಕಾವ್ಯಪ್ರಕಾಶಕಾರನು ಕೊಟ್ಟಿರುವನು. ಅದು ಯುಕ್ತವೆನಿಸುವುದಿಲ್ಲ. ಯಾಕೆಂದರೆ ಕ್ಯಙ, ಕ್ಯಚ್, ಣಮುಲ್ ಪ್ರತ್ಯಯಗಳನ್ನು ಇವಾರ್ಥದಲ್ಲಿ ಅಂದರೆ ವತಿಪ್ರತ್ಯಯದ ಅರ್ಥದಲ್ಲಿಯೇ ವಿಧಿಸಿರುವುದರಿಂದ ಅವು ಔಪಮ್ಯವನ್ನು ಪ್ರತಿಪಾದಿಸುತ್ತವೆ. ಕ್ಯಙ ಮೊದಲಾದ ಈ ಪ್ರತ್ಯಯಗಳು ಔಪಮ್ಯವನ್ನು ಚೆನ್ನಾಗಿ ತಿಳಿಸುವುದಿಲ್ಲ. ಅವು ಪ್ರತ್ಯಯಗಳೆನಿಸಿದ್ದರಿಂದ ಅವಕ್ಕೆ ಔಪಮ್ಯವನ್ನು ತಿಳಿಸಲು ಸ್ವಾತಂತ್ರ್ಯವಿಲ್ಲ. ಸ್ವಾರ್ಥವನ್ನು ತಿಳಿಸಲಿಕ್ಕೂ ಅವಕ್ಕೆ ಪ್ರಕೃತಿಯ ಸಹಾಯವು ಆವಶ್ಯಕವೆನಿಸಿದೆ. ಇವ ಮೊದಲಾದ ಪದಗಳನ್ನು ಅವುಗಳೊಡನೆ ಪ್ರಯೋಗಿಸುವುದೂ ಇಲ್ಲ. ಹೀಗೆಂದು ಹೇಳುವುದಾದರೆ ಅದೂ ಸಹ ಹೊಂದುವುದಿಲ್ಲ; ಯಾಕೆಂದರೆ ಇದನ್ನು ಒಪ್ಪುವುದಾದರೆ ಕಲ್ಪಪ್ ಮೊದಲಾದ ಪ್ರತ್ಯಯಗಳಲ್ಲೂ ಹಾಗೆಯೇ ಹೇಳಬೇಕಾಗುತ್ತದೆ. ಕಲ್ಪಪ್ ಮೊದಲಾದ ಪ್ರತ್ಯಯಗಳು ಇವ ಮೊದಲಾದ ಪದಗಳಿಗೆ ಸಮಾನವೆನಿಸಿದ್ದರಿಂದ ಔಪಮ್ಯವನ್ನು ಬೋಧಿಸುತ್ತದೆ. ಕ್ಯಙ ಮೊದಲಾದವು ಔಪಮ್ಯವನ್ನು ವ್ಯಂಗ್ಯವಾಗಿ ಸೂಚಿಸುತ್ತವೆ ಎಂದು ವಾದಿಸುವುದೂ ಸರಿಯಲ್ಲ; ಯಾಕೆಂದರೆ ಇವ ಮೊದಲಾದ ಪದಗಳೂ ಸಹ ಔಪಮ್ಯವನ್ನು ಬೋಧಿಸುತ್ತವೆ ಎಂಬಲ್ಲಿ ನಿಯಮವಿಲ್ಲ. ಕಲ್ಪಪ್ ಮೊದಲಾದ ಪ್ರತ್ಯಯಗಳು ಔಪಮ್ಯವನ್ನು ಬೋಧಿಸುತ್ತವೆ ಎಂಬುದನ್ನು ಒಪ್ಪಿಕೊಂಡರೂ, "ಪ್ರಕೃತಿ ಪ್ರತ್ಯಯಗಳ ಸಮುದಾಯವೆನಿಸಿದ ಪದವೇ ವಾಚಕವೆನಿಸುತ್ತದೆ. ಪ್ರಕೃತಿ ಒಂದೇ ಆಗಲೀ ಪ್ರತ್ಯಯ ಒಂದೇ ಆಗಲೀ ವಾಚಕವಾಗಲಾರದು. "ಪ್ರಕೃತಿ ಪ್ರತ್ಯಯಗಳು ಕ್ರಮವಾಗಿ ತಮ್ಮ ತಮ್ಮ ಅರ್ಥಗಳನ್ನು ತಿಳಿಸುತ್ತವೆ" ಎಂಬ ಎರಡು ಮತಗಳ ಪ್ರಕಾರ ವತ್ ಮೊದಲಾದ ಪ್ರತ್ಯಯಗಳೂ ಕ್ಯಙ ಮೊದಲಾದ ಪ್ರತ್ಯಯಗಳೂ ಸಾದೃಶ್ಯಕ್ಕೆ ಸಂಬಂಧಿಸಿದ ಪ್ರತ್ಯಯಗಳೇ ಆದ್ದರಿಂದ ಅವಕ್ಕೆ ಯಾವ ಭೇದವೂ ಕಾಣುವುದಿಲ್ಲ. "ವತಿ ಮೊದಲಾದ ಪ್ರತ್ಯಯಗಳನ್ನು ಪಾಣಿನಿಯು ಇವ ಎಂಬುದರ ಅರ್ಥದಲ್ಲಿಯೂ ಪ್ರಯೋಗಿಸಿರುವನು" ಎಂದು ಕೆಲವರು ಹೇಳುತ್ತಾರೆ. ಇದೂ ಸಹ ಯುಕ್ತವಲ್ಲ; ಯಾಕೆಂದರೆ ಕ್ಯಙ ಮೊದಲಾದವು ಆಚಾರವನ್ನಷ್ಟನ್ನೇ ಬೋಧಿ-

ಸುವುದಿಲ್ಲ ಆದರೆ ಸದೃಶವಾದ ಆಚಾರವನ್ನು ಬೋಧಿಸುತ್ತವೆ ಆದ್ದರಿಂದ ರಮಣೀವ ಆಚರತಿ, ಸುತಮಿವ ಆಚರತಿ ಎಂಬ ಅರ್ಥದಲ್ಲಿ ರಮಣೀಯತೇ, ಸುತೀಯತಿ ಎಂಬ ಕಡೆಗಳಲ್ಲಿ ರಾಜನಲ್ಲಿ ಶ್ರೀಯೊಡನೆ ರಮಣೀಸದೃಶಾಚರಣವೂ, ಪೌರರಲ್ಲಿ ರಾಜನಿಗೆ ಪುತ್ರತುಲ್ಯಾಚರಣವೂ ತೋರುವುದರಿಂದ ಕ್ಯಚ ಮೊದಲಾದವುಗಳಿಗೆ ಸಾದೃಶ್ಯಾಚರಣವೇ ಅರ್ಥವೆನಿಸಿದೆ ; ಆದರೆ ಕೇವಲ ಆಚಾರವಷ್ಟೇ ಅರ್ಥವೆನಿಸಿಲ್ಲ. ಆದ್ದರಿಂದ ಅಂತಃಪುರೀಯಸಿ ರಣೇಷು ಎಂಬುದನ್ನು ಕಾವ್ಯಪ್ರಕಾಶಕಾರನು ವಾಚಕಲೋಪಗಳಿಗೆ ಉದಾಹರಣವಾಗಿ ಕೊಟ್ಟದ್ದು ಅಯುಕ್ತವೇ ಆಯಿತು. ಹೀಗೆ ಧರ್ಮಲೋಪದಲ್ಲಿ ಒಟ್ಟು ಹತ್ತು ಬಗೆಗಳಾಗುತ್ತವೆ.

ಉಪಮಾನಾನುಪಾದಾನೇ ದ್ವಿಧಾ ವಾಕ್ಯಸಮಾಸಯೋಃ ।

"ತಸ್ಯಾ ಮುಖೇನ ಸದೃಶಂ ರಮ್ಯಂ ನಾಸ್ತೇ ನ ವಾ ನಯನತುಲ್ಯಮ್" ಅತ್ರ, ಮುಖನಯನಪ್ರತಿನಿಧಿವಸ್ತ್ವಂತರಯೋರ್ಗಮ್ಯಮಾನತ್ವಾತ್ ಉಪಮಾನಲೋಪಃ. ಅತ್ರೈವ ಚ 'ಮುಖೇನ ಸದೃಶಮ್' ಇತ್ಯತ್ರ ದೃಗಿವ ಇತಿ ಪಾಠೇ ಶ್ರೀತ್ಯಪಿ ಸಂಭವತೀತಿ ಅನಯೋರ್ಭೇದಯೋಃ ಪ್ರತ್ಯೇಕಂ ಶ್ರೌತ್ಯಾರ್ಥೀತ್ವಭೇದೇನ ಚತುರ್ವಿಧತ್ವಸಂಭವೇಽಪಿ ಪ್ರಾಚೀನಾನಾಂ ರೀತ್ಯಾ ದ್ವಿಪ್ರಕಾರತ್ವಮೇವೋಕ್ತಮ್.

ಔಪಮ್ಯವಾಚಿನೋ ಲೋಪೇ ಸಮಾಸೇ ಕ್ವಿಪಿ ಚ ದ್ವಿಧಾ ॥

ವದನಂ ಮೃಗಶಾಬಾಕ್ಷ್ಯಾಃ ಸುಧಾಕರಮನೋಹರಮ್ ।
ಗರ್ದಭತಿ ಶ್ರುತಿಪರುಷಂ ವ್ಯಕ್ತಂ ನಿನದನ್ ಮಹಾತ್ಮನಾಂ ಪುರತಃ ॥

ಅತ್ರ ಗರ್ದಭತಿ ಇತ್ಯತ್ರ ಔಪಮ್ಯವಾಚಿನಃ ಕ್ವಿಪೋ ಲೋಪಃ. ನ ಚೇಹ ಉಪಮೇಯಸ್ಯಾಪಿ ಲೋಪಃ, ನಿನದನ್ ಇತ್ಯನೇನೈವ ನಿರ್ದೇಶಾತ್.

ದ್ವಿಧಿಂ ಸಮಾಸೇ ವಾಕ್ಯೇ ಚ ಲೋಪೇ ಧರ್ಮೋಪಮಾನಯೋಃ ।

'ತಸ್ಯಾ ಮುಖೇನ' ಇತ್ಯಾದೌ 'ರಮ್ಯಮ್' ಇತಿ ಸ್ಥಾನೇ 'ಲೋಕೇ' ಇತಿ ಪಾಠೇ ಅನಯೋರುದಾಹರಣಮ್.

ಕ್ವಿಪ್ ಸಮಾಸಗತಾ ದ್ವೇಧಾ ಧರ್ಮವಾದಿವಿಲೋಪನೇ ।

'ವಿಧವತಿ ಮುಖಾಬ್ಜಮಸ್ಯಾಃ' ಅತ್ರ ವಿಧವತಿ ಇತಿ ಮನೋಹರತ್ವಕ್ವಿಪ್ ಪ್ರತ್ಯಯಯೋರ್ಲೋಪಃ. ಮುಖಾಬ್ಜಮ್ ಇತಿ ಚ ಸಮಾಸಗಾ. ಕೇಚಿತ್ತ್ವತ್ರಾಪಿ ಪ್ರತ್ಯಯಲೋಪಮಾಹುಃ.

ಉಪಮೇಯಸ್ಯ ಲೋಪೇ ತು ಸ್ಯಾದೇಕಾ ಪ್ರತ್ಯಯೇ ಕ್ಯಚಿ ।

ಯಥಾ—ಅರಾತಿವಿಕ್ರಮಾಲೋಕವಿಕಾರಸ್ವರವಿಲೋಚನಃ ।
ಕೃಪಾಣೋದಾಗ್ರದೋರ್ದಂಡಃ ಸ ಸಹಸ್ರಾಯುಧೀಯತಿ ॥

ಅತ್ರ ಸಹಸ್ರಾಯುಧಮಿವಾತ್ಮಾನಮಾಚರತೀತಿ ವಾಕ್ಯೇ ಉಪಮೇಯಸ್ಯ ಆತ್ಮನೋ ಲೋಪಃ. ನ ಚೇಹ ಔಪಮ್ಯವಾಚಕಲೋಪಃ, ಉಕ್ತಾದೇವ ನ್ಯಾಯಾತ್.

ಅತ್ರ ಕೇಚಿದಾಹುಃ—"ಸಹಸ್ರಾಯುಧೇನ ಸಹ ವರ್ತತ ಇತಿ ಸಹಸ್ರಾಯುಧಃ

ಸ ಇವಾಚರತೀತಿ ವಾಕ್ಯಾತ್ ಸಹಸ್ರಾಯುಧೀಯತಿ ಇತಿ ಪದಸಿದ್ಧೌ ವಿಶೇಷ್ಯಸ್ಯ ಶಬ್ದಾನುಪಾತ್ತತ್ವಾದಿಹೋಪಮೇಯಲೋಪಃ" ಇತಿ. ತನ್ನ ವಿಚಾರಸಹಂ ಕರ್ತರಿ ಕ್ಯಚೋಽನುಶಾಸನವಿರುದ್ಧತ್ವಾತ್.

ಧರ್ಮೋಪಮೇಯಲೋಪೇಽನ್ಯಾ ತ್ರಿಲೋಪೇ ಚ ಸಮಾಸಗಾ ||

ಯಥಾ–"ಯಶಸಿ ಪ್ರಸರತಿ ಭವತಃ ಕ್ಷೀರೋದೀಯಂತಿ ಸಾಗರಾಃ ಸರ್ವೇ" ಅತ್ರ ಕ್ಷೀರೋದಮಿವ ಆತ್ಮಾನಮಾಚರಂತೀತಿ ಉಪಮೇಯ ಆತ್ಮಾ, ಸಾಧಾರಣ ಧರ್ಮಃ ಶುಕ್ಲತಾ ಚ ಲುಪ್ತೌ.

'ರಾಜತೇ ಮೃಗಲೋಚನಾ' ಅತ್ರ ಮೃಗಸ್ಯ ಲೋಚನೇ ಇವ ಚಂಚಲೇ ಲೋಚನೇ ಯಸ್ಯಾ ಇತಿ ಸಮಾಸೇ ಉಪಮಾಪ್ರತಿಪಾದಕಸಾಧಾರಣಧರ್ಮೋಪಮಾನಾನಾಂ ಲೋಪಃ.

ತೇನೋಪಮಾಯಾ ಭೇದಾಃ ಸಪ್ತವಿಂಶತಿಸಂಖ್ಯಕಾಃ ।

ಪೂರ್ಣಾ ಷಡ್ವಿಧಾ, ಲುಪ್ತಾ ಚೈಕವಿಂಶತಿವಿಧೇತಿ ಮಿಳಿತ್ವಾ ಸಪ್ತವಿಂಶತಿ ಪ್ರಕಾರೋಪಮಾ. ಏಷು ಚೋಪಮಾಭೇದೇಷು ಮಧ್ಯೇ ಅಲುಪ್ತಸಾಧಾರಣ ಧರ್ಮೇಷು ಭೇದೇಷು ವಿಶೇಷಃ ಪ್ರತಿಪಾದ್ಯತೇ.

ಏಕರೂಪಃ ಕ್ವಚಿತ್ ಕ್ವಾಪಿ ಭಿನ್ನಃ ಸಾಧಾರಣೋ ಗುಣಃ ।
ಭಿನ್ನೇ ಬಿಂಬಾನುಬಿಂಬತ್ವಂ ಶಬ್ದಮಾತ್ರೇಣ ವಾ ಭಿದಾ ||

ತತ್ರ ಏಕರೂಪೇ ಯಥೋದಾಹೃತಮ್ 'ಮಧುರಃ ಸುಧಾವದಧರಃ' ಇತ್ಯಾದಿ. ಬಿಂಬಪ್ರತಿಬಿಂಬತ್ವೇ ಯಥಾ—

ಭಲ್ಲಾಪವರ್ಜಿತೈಸ್ತೇಷಾಂ ಶಿರೋಭಿಃ ಶ್ಮಶ್ರುಲೈರ್ಮಹೀಮ್ ।
ತಸ್ತಾರ ಸರಘಾವ್ಯಾಪ್ತೈಃ ಸಕ್ಷೌದ್ರಪಟಲೈರಿವ ||

ಅತ್ರ 'ಶ್ಮಶ್ರುಲೈಃ' ಇತ್ಯಸ್ಯ 'ಸರಘಾವ್ಯಾಪ್ತೈಃ' ಇತಿ ದೃಷ್ಟಾಂತವತ್ ಪ್ರತಿಬಿಂಬನಮ್. ಶಬ್ದಮಾತ್ರೇಣ ಭಿನ್ನತ್ವೇ ಯಥಾ—

ಸ್ಮೇರಂ ವಿಧಾಯ ನಯನಂ ವಿಕಸಿತಮಿವ ನೀಲಮುತ್ಪಲಂ ಮಯಿ ಸಾ ।
ಕಥಯಾಮಾಸ ಕೃಶಾಂಗೀ ಮನೋಗತಂ ನಿಖಿಲಮಾಕೂತಮ್ ||

ಅತ್ರ ಏಕೇ ಏವ ಸ್ಮೇರತ್ವವಿಕಸಿತತ್ವೇ ಪ್ರತಿವಸ್ತೂಪಮಾವತ್ ಶಬ್ದಭೇದೇನ ನಿರ್ದಿಷ್ಟೇ.

ಏಕದೇಶವಿವರ್ತಿನ್ಯುಪಮಾ ವಾಚ್ಯತ್ವಗಮ್ಯತೇ ।
ಭವೇತಾಂ ಯತ್ರ ಸಾಮ್ಯಸ್ಯ ಕಥಿತಾ ರಸನೋಪಮಾ||
ಯಥೋರ್ಧ್ವಮುಪಮೇಯಸ್ಯ ಯದಿ ಸ್ಯಾದುಪಮೇಯತಾ ।

ಯಥಾ—ಚಂದ್ರಾಯತೇ ಶುಕ್ಲರುಚಾಪಿ ಹಂಸೋ ಹಂಸಾಯತೇ ಚಾರುಗತೇನ ।
ಕಾಂತಾಯತೇ ಸ್ಪರ್ಶಸುಖೇನ ವಾರಿ ವಾರೀಯತೇ ಸ್ವಚ್ಛತಯಾ ವಿಹಾಯಃ||

ಧರ್ಮಲೋಪವೆಂಬ ಲುಪ್ತೋಪಮೆಯ ಬಗ್ಗೆ ತಿಳಿಸಿ ಈಗ ಉಪಮಾನಲೋಪವೆಂಬ ಬೇರೊಂದು ಲುಪ್ತೋಪಮೆಯನ್ನು ತಿಳಿಸುತ್ತಾನೆ. ಉಪಮಾನವನ್ನು ತಿಳಿಸದೇ ಇರುವಾಗ ಈ ಬಗೆಯ ಲುಪ್ತೋಪಮೆಯು ವಾಕ್ಯದಲ್ಲೂ ಸಮಾಸದಲ್ಲೂ ಸಂಭವಿಸುತ್ತದೆ. ಉಪಮಾನವನ್ನು ತಿಳಿಸದೇ ಇದ್ದಾಗ ಅದರ ಮುಂದೆ ಇವ ಮೊದಲಾದ ಪದಗಳೂ ಸಹ ಇರುವುದಿಲ್ಲ. ಉಪಮಾನವೇ ಇಲ್ಲದಾಗ 'ಇವ ಮುಖಂ' ಎಂದಷ್ಟನ್ನೇ ಯಾರೂ ಪ್ರಯೋಗಿಸುವುದಿಲ್ಲ. ಇದರಂತೆಯೇ ಆರ್ಥೀಭೇದಗಳಲ್ಲಿಯೂ ತದ್ಧಿತಪ್ರತ್ಯಯವನ್ನು ಹಚ್ಚುವುದರಿಂದ ಆಗುವ ಭೇದವೂ ಸಂಭವಿಸದೇ ಇರುವ ಪ್ರಯುಕ್ತ ವಾಕ್ಯ ಮತ್ತು ಸಮಾಸಗಳಲ್ಲಿ ಮಾತ್ರವೇ ಲುಪ್ತೋಪಮೆಯು ಸಂಭವಿಸುತ್ತದೆ. "ಆಕೆಯ ಮುಖಕ್ಕೆ ಸದೃಶವಾದ ರಮಣೀಯವಸ್ತುವಿಲ್ಲ; ಹಾಗೆಯೇ ಅವಳ ಕಣ್ಣಿಗೂ ಸದೃಶವಾದದ್ದೂ ಇಲ್ಲ.'' ಇಲ್ಲಿ 'ನಾಸ್ತೇ' ಎಂದು ಕೊನೆಯಾಗಿರುವ ವಾಕ್ಯದಲ್ಲಿ ಉಪಮಾನವನ್ನು ತಿಳಿಸದೇ ಇರುವುದರಿಂದ ಲುಪ್ತೋಪಮೆಯು ವಾಕ್ಯದಲ್ಲಿ ಬಂದಿದೆ. ನಯನತುಲ್ಯಂ ಎಂಬ ಸಮಾಸದಲ್ಲಿ ಉಪಮಾನವನ್ನು ತಿಳಿಸದೇ ಇರುವುದರಿಂದ ಅಲ್ಲಿ ಲುಪ್ತೋಪಮೆ ಸಮಾಸದಲ್ಲಿ ಬಂದಿದೆ. ಇಲ್ಲಿ ಮುಖಕ್ಕೂ ನಯನಕ್ಕೂ ಉಪಮಾನವೆಂದು ಪ್ರಸಿದ್ಧವಾದ ಚಂದ್ರ ಉತ್ಪಲಗಳು ಇದ್ದು ವ್ಯಂಜನೆಯಿಂದ ತೋರಬೇಕಾಗಿದೆ. ಅವನ್ನು ಇಲ್ಲಿ ಶಬ್ದದಿಂದ ತಿಳಿಸದೇ ಇರುವ ಪ್ರಯುಕ್ತ ಇದು ಉಪಮಾನಲೋಪವೆನಿಸಿದೆ. ಇಲ್ಲಿಯೇ 'ಮುಖೇನ ಸದೃಶಂ' ಎಂಬಲ್ಲಿ 'ಮುಖಂ ಯಥೇದಂ' ಎಂದೂ, 'ನಯನತುಲ್ಯಮ್'' ಎಂಬಲ್ಲಿ ದೃಗಿವ ಎಂದೂ ಹೇಳಿದರೆ ಉಪಮಾನಲೋಪವು ಶ್ರೌತಿ ಎನಿಸುತ್ತದೆ. ಹೀಗೆ ಶ್ರೌತೀ ಆರ್ಥೀ ಎಂದು ಇದು ವಾಕ್ಯದಲ್ಲೂ ಸಮಾಸದಲ್ಲೂ ಇದ್ದು ನಾಲ್ಕು ಬಗೆಯಾಗುವುದೆಂದು ತಿಳಿಸಲಾಗಿದೆ.

ಔಪಮ್ಯವನ್ನು ತಿಳಿಸುವ ಇವ ತುಲ್ಯ ಮೊದಲಾದ ಪದಗಳು ಲೋಪವಾದ ಸಮಾಸದಲ್ಲೂ ಕ್ವಿಪ್ ಪ್ರತ್ಯಯದಲ್ಲೂ ವಾಚಕಲೋಪವು ಎರಡು ಬಗೆಯಾಗುತ್ತದೆ. "ಜಿಂಕೆಯ ಮರಿಯ ಕಣ್ಣುಗಳಂತೆ ಕಣ್ಣಿರುವ ಪ್ರೇಯಸಿಯ ಮುಖವು ಚಂದ್ರನಂತೆ ಮನೋಹರವಾಗಿದೆ." ಇಲ್ಲಿ ಸುಧಾಕರ ಇವ ಮನೋಹರಂ ಎಂಬ ವಾಕ್ಯದಲ್ಲಿ 'ಉಪಮಾನಾನಿ ಸಾಮಾನ್ಯವಚನೈಃ' ಎಂಬುದರಿಂದ ಕರ್ಮಧಾರಯಸಮಾಸದಿಂದ ಸಾದೃಶ್ಯವಾಚಕಪದವು ಲೋಪವಾಗಿ ಈ ಲುಪ್ತೋಪಮೆಯು ಸಮಾಸಕ್ಕೆ ಸಂಬಂಧಿಸಿದ್ದಾಗಿದೆ. "ಮಹಾತ್ಮರ ಮುಂದೆ ಸ್ಪಷ್ಟವಾಗಿ ಕರ್ಣಕಠೋರವಾಗಿ ಶಬ್ದ ಮಾಡುತ್ತ ಕತ್ತೆಯಂತೆ ಕಿರಚುತ್ತಾನೆ'' ಇಲ್ಲಿ ಗರ್ದಭತಿ ಎಂಬಲ್ಲಿ ಕ್ವಿಪ್ ಪ್ರತ್ಯಯವು ಬಂದು ಲೋಪವಾಗಿದೆ. ನಿನದನ್ ಎಂಬಲ್ಲಿ ಸಾಮಾನ್ಯಧರ್ಮವನ್ನು ಶಬ್ದದಿಂದ ತಿಳಿಸಿರುವ ಪ್ರಯುಕ್ತ ಅದು ಲೋಪವಾಗಿಲ್ಲವೆಂದು ತಿಳಿಯಬೇಕು. ಆದ್ದರಿಂದಲೇ 'ಗರ್ದಭಇವ' ಎಂಬಲ್ಲಿರುವ ಇವ ಎಂಬುದಕ್ಕೆ ಕ್ವಿಪ್ ಪ್ರತ್ಯಯವು ಬಂದು ಲೋಪವಾಗಿರುವುದರಿಂದ ಇದು ವಾಚಕ ಲೋಪದ ಉದಾಹರಣವೆನಿಸಿದೆ. ನಿನದನ್

ಎಂಬಲ್ಲಿ ಶಬ್ದವಮಾಡುವ ಪುರುಷನೆಂದು ಉಪಮೇಯವನ್ನು ಶಬ್ದದಿಂದ ತಿಳಿಸಿರುವುದ ರಿಂದ ಇದು ಉಪಮೇಯಲೋಪಕ್ಕೆ ಉದಾಹರಣವಾಗಲಾರದು.

ಸಾಧಾರಣಧರ್ಮ ಮತ್ತು ಉಪಮಾನ ಇವೆರಡನ್ನು ತಿಳಿಸದೇ ಇರುವಾಗ ಲುಪ್ತೋಪಮೆಯು ಸಮಾಸದಲ್ಲೂ ವಾಕ್ಯದಲ್ಲೂ ಸಂಭವಿಸುವುದರಿಂದ ಅದು ಎರಡು ಬಗೆಯಾಗುತ್ತದೆ. 'ತಸ್ಯಾ ಮುಖೇನ' ಎಂಬಲ್ಲಿ ರಮ್ಯಂ ಎಂಬುದರ ಸ್ಥಾನದಲ್ಲಿ 'ಲೋಕೇ' ಎಂದು ಹೇಳಿದರೆ 'ರಮ್ಯಂ' ಎಂಬ ಸಾಮಾನ್ಯಧರ್ಮವನ್ನೂ, ಉಪಮಾನ ವನ್ನೂ ಹೇಳದೇ ಇರುದ ಪ್ರಯುಕ್ತ ಇಲ್ಲಿಯ ಲುಪ್ತೋಪಮೆಯು ವಾಕ್ಯಕ್ಕೆ ಸಂಬಂಧಿಸು ತ್ತದೆ. 'ನ ವಾ ನಯನತುಲ್ಯಂ' ಎಂಬಲ್ಲಿ ರಮ್ಯಂ ಎಂದು ಸೇರಿಸಿಕೊಳ್ಳಬೇಕಾದ ಸಾಧಾರಣಧರ್ಮವನ್ನು ತಿಳಿಸದೆ ಇರುವುದರಿಂದಲೂ, ಉಪಮಾನವನ್ನು ಹೇಳದೆ ಇರುವುದರಿಂದಲೂ, ತುಲ್ಯಶಬ್ದದೊಡನೆ ನಯನಪದಕ್ಕೆ ಸಮಾಸವಾಗಿರುವುದರಿಂದಲೂ ಇದು ಸಮಾಸಗತವಾದ ಲುಪ್ತೋಪಮೆ ಎನಿಸಿದೆ.

ಸಾಧಾರಣಧರ್ಮ ಮತ್ತು ಇವಾದಿವಾಚಕ ಇವು ಎರಡೂ ಲೋಪವಾಗಿರುವ ಕಡೆ ಕ್ವಿಪ್ ಪ್ರತ್ಯಯಕ್ಕೆ ಸಂಬಂಧಿಸಿಯೂ ಸಮಾಸದಲ್ಲೂ ಲುಪ್ತೋಪಮೆಯು ಎರಡು ಬಗೆ ಎನಿಸುತ್ತದೆ. 'ವಿಧವತಿ ಮುಖಾಬ್ಜಮಸ್ಯಾಃ' ಎಂಬಲ್ಲಿ ಮನೋಹರತ್ವವೆಂಬ ಧರ್ಮವೂ ಸಾದೃಶ್ಯವಾಚಕವಾದ ಕ್ವಿಪ್‌ಪ್ರತ್ಯಯಲೋಪವೂ ಇವೆ. ಮುಖಾಬ್ಜಂ ಎಂಬಲ್ಲಿ ಮುಖಂ ಅಬ್ಜಮಿವ ಎಂದು ಕರ್ಮಧಾರಯಸಮಾಸದಲ್ಲಿ ಮನೋಹರತ್ವವೆಂಬ ಸಾಧಾರಣಧರ್ಮವೂ ಇವಪದವೂ ಲೋಪವಾಗಿರುವುದರಿಂದ ಇದು ಸಮಾಸಗತ ವಾದ ಲುಪ್ತೋಪಮೆ ಎನಿಸಿದೆ. ಕೆಲವರು ಇಲ್ಲಿಯೂ ಸಹ ವಿಧವತಿ ಎಂಬಂತೆ ಕ್ವಿಪ್ ಪ್ರತ್ಯಯಲೋಪದಿಂದ ಪ್ರತ್ಯಯಲೋಪವುಂಟೆಂದೂ ಸಾದೃಶ್ಯವಾಚಕಲೋಪವಿಲ್ಲ ವೆಂದೂ ಹೇಳುತ್ತಾರೆ. ಪ್ರತ್ಯಯವನ್ನು ಶಬ್ದದಿಂದ ತಿಳಿಸುವುದಾಗಲೀ ಬಿಡುವು ದಾಗಲೀ ಉಪಮೆಗೆ ಅಪ್ರಯೋಜಕವೆನಿಸಿದ್ದರಿಂದ ಸಾದೃಶ್ಯವನ್ನು ಆ ಮೂಲಕ ತಿಳಿಸಿ ದಂತಾಗುವುದಿಲ್ಲ. ಆದ ಪ್ರಯುಕ್ತ ಇಲ್ಲಿ ಪ್ರತ್ಯಯಲೋಪಕ್ಕಿಂತ ವಾಚಕಲೋಪ ವನ್ನು ಹೇಳುವುದರಲ್ಲಿಯೇ ಸ್ವಾರಸ್ಯವಿದೆ.

ಉಪಮಾನಲೋಪ, ಧರ್ಮಲೋಪ ಮತ್ತು ವಾಚಕಲೋಪಗಳನ್ನು ತಿಳಿಸಿ ಈಗ ಉಪಮೇಯಲೋಪವನ್ನು ತಿಳಿಸುತ್ತಾನೆ. ಇದರಲ್ಲಿ ಕ್ಯಚ್ ಪ್ರತ್ಯಯವು ಲೋಪವಾಗುವುದರಿಂದ ಒಂದೇ ಬಗೆಯಾಗುತ್ತದೆ. "ಶತ್ರುವಿನ ಪರಾಕ್ರಮವನ್ನು ಕಂಡದ್ದರಿಂದ ಉತ್ಸಾಹದಿಂದ ಕಣ್ಣುಗಳನ್ನು ಅಗಲಮಾಡಿಕೊಂಡು ಒಂದು ಕತ್ತಿಯನ್ನು ಕೈಯಲ್ಲಿ ಹಿಡಿದು ಬಲಶಾಲಿಯಾಗಿರುವ ಈ ರಾಜನು ಸಾವಿರ ಆಯುಧಗಳನ್ನು ಹಿಡಿದಿ ರುವವನಂತ ತಾನು ಕಾಣುತ್ತಾನೆ." ಇಲ್ಲಿ ಸಹಸ್ರಾಯುಧನಂತೆ ಆಚರಿಸುತ್ತಾನೆ ಎಂದು ವಾಕ್ಯದಲ್ಲಿ ತಾನು ಎಂಬ ಉಪಮೇಯವು ಲೋಪವಾಗಿದೆ. ಇಲ್ಲಿ ಔಪಮ್ಯವನ್ನು ತಿಳಿಸುವ ಇವಪದವು ಲೋಪವಾಗಿದೆ ಎಂದು ಹೇಳಬಾರದು. ಇದರಲ್ಲಿ ಸ್ವಾರಸ್ಯವಿಲ್ಲ.

ಇಲ್ಲಿ ಕೆಲವರು 'ಸಹಸ್ರ ಆಯುಧಗಳೊಡಗೂಡಿದವನಂತೆ ಆಚರಿಸುತ್ತಾನೆ' ಎಂಬ

ವಾಕ್ಯದಿಂದ ಸಹಸ್ರಾಯುಧೀಯತಿ ಎಂಬ ಪದವು ಸಿದ್ಧಿಸಲು ವಿಶೇಷ್ಯವನ್ನು ಶಬ್ದದಿಂದ ತಿಳಿಸದೆ ಇರುವ ಪ್ರಯುಕ್ತ ಇಲ್ಲಿ ಉಪಮೇಯಲೋಪ ಉಂಟೆಂದು ಹೇಳುತ್ತಾರೆ. ಕರ್ತೃಪದದ ಮೇಲೆ ಕ್ಯಚ್‌ಪ್ರತ್ಯಯವನ್ನು ವಿಧಿಸುವುದು ವಿರುದ್ಧವಾದ್ದರಿಂದ ಉಪಮಾನಾದಾಚಾರೇ' ಎಂಬ ಸೂತ್ರದ ಪ್ರಕಾರ ಕರ್ಮವೆನಿಸಿದ ನಾಮಪದದ ಮೇಲೆ ಕ್ಯಚ್‌ಪ್ರತ್ಯಯವನ್ನು ಹಚ್ಚಿರುವುದಾಗಿಯೇ ಹೇಳಬೇಕು. ಆದ್ದರಿಂದ ಸಹಸ್ರಾಯುಧ ಪದದಮೇಲೆ ಕ್ಯಚ್ ಪ್ರತ್ಯಯವನ್ನು ಹಚ್ಚುವ ಸಂಭವವಿಲ್ಲ. ಆದ್ದರಿಂದ ಸಹಸ್ರಾಯುಧ ಎಂಬುದು ಉಪಮಾನವೆನಿಸಿದ್ದರೂ ಅದು ಇಲ್ಲಿ ಕರ್ಮವೆನಿಸಿದೆಯೇ ಹೊರತು ಕರ್ತೃವೆನಿಸಿಲ್ಲ. ಸಹಸ್ರಾಯುಧನಂತೆ ತನ್ನನ್ನು ಭಾವಿಸಿ ಆಚರಿಸುತ್ತಾನೆ ಎಂದು ಹೇಳಬೇಕಾದ ಪ್ರಯುಕ್ತ ಇಲ್ಲಿ ಉಪಮೇಯವೆನಿಸಿದ ತನ್ನನ್ನು ಎಂಬುದರ ಲೋಪವು ಕರ್ಮಪದದ ಮೇಲೆ ಹಚ್ಚಿದ ಕ್ಯಚ್ ಪ್ರತ್ಯಯದ ಲೋಪದಿಂದ ಸಂಭವಿಸಿದೆ ಎಂದು ತಿಳಿಯಬೇಕು.

ಸಾಧಾರಣಧರ್ಮ ಮತ್ತು ಉಪಮೇಯ ಇವೆರಡನ್ನು ಒಟ್ಟಿಗೆ ತಿಳಿಸದೇ ಇದ್ದರೆ ಅದೂ ಒಂದು ಬಗೆಯ ಲುಪ್ತೋಪಮೆ ಎನಿಸುವುದು. "ನಿನ್ನ ಯಶಸ್ಸು ವ್ಯಾಪಿಸಲು ಸಾಗರಗಳೆಲ್ಲವೂ ತಮ್ಮನ್ನು ಕ್ಷೀರಸಮುದ್ರಗಳೆಂದು ಭಾವಿಸುತ್ತವೆ." ಇಲ್ಲಿ ಕ್ಷೀರೋದದಂತೆ ತಮ್ಮನ್ನು ಭಾವಿಸುತ್ತವೆ ಎಂದು ಹೇಳಿದ್ದರಿಂದ ತನ್ನನ್ನು ಎಂಬ ಉಪಮೇಯವನ್ನೂ, ಸಮುದ್ರಗಳಲ್ಲಿ ಕ್ಷೀರಸಮುದ್ರದಂತೆ ಬಿಳಿಯಬಣ್ಣವೆಂಬ ಸಾಧಾರಣಧರ್ಮವನ್ನು ಶಬ್ದದಿಂದ ತಿಳಿಸದೆ ಇರುವುದರಿಂದ ಈ ಲುಪ್ತೋಪಮೆಯಲ್ಲಿ ಸಾಧಾರಣಧರ್ಮ ಮತ್ತು ಉಪಮೇಯ ಇವೆರಡರ ಲೋಪವೂ ಇದೆ. ಉಪಮಾನ, ವಾಚಕ, ಸಾಧಾರಣಧರ್ಮ ಈ ಮೂರನ್ನು ತಿಳಿಸದೇ ಇರುವಾಗ ಸಮಾಸದಲ್ಲಿ ಒಂದೇ ಬಗೆಯ ಲುಪ್ತೋಪಮೆ ಸಂಭವಿಸುತ್ತದೆ. ಇದು ಸಮಾಸವಲ್ಲದೆ ಬೇರೆಕಡೆಗಳಲ್ಲಿ ಸಂಭವಿಸುವಂತೆಯೂ ಇಲ್ಲ. ರಾಜತೇ ಮೃಗಲೋಚನಾ ಎಂಬಲ್ಲಿ ಮೃಗಸ್ಯ ಲೋಚನೇ ಇವ ಚಂಚಲೇ ಲೋಚನೇ ಯಸ್ಯಾಃ (ಮೃಗದ ಕಣ್ಣುಗಳಂತೆ ಕಣ್ಣುಳ್ಳವಳು) ಎಂದು ಸಮಾಸದಲ್ಲಿ ವಾಚಕ ಸಾಧಾರಣಧರ್ಮ ಉಪಮಾನ ಮೂರರ ಲೋಪವನ್ನು ಕಾಣಬಹುದು. ಇಲ್ಲಿ ಇವ ಎಂಬ ವಾಚಕವಿಲ್ಲ. ಚಾಂಚಲ್ಯವೆಂಬ ಸಾಧಾರಣ ಧರ್ಮವೂ ಇಲ್ಲ. ಮೊದಲನೆಯ ಲೋಚನಪದವೇ. ಉಪಮಾನ. ಇವು ಮೂರು ಲೋಪಗಳು ಮೃಗಲೋಚನಾ" ಎಂಬ ಸಮಾಸದಲ್ಲಿ ಸೇರಿಕೊಂಡಿವೆ. ಹೀಗೆ ಪೂರ್ಣೋಪಮೆಯಲ್ಲಿ ಆರು ಬಗೆಗಳು, ಲುಪ್ತೋಪಮೆಯಲ್ಲಿ ಇಪ್ಪತ್ತೊಂದು ಬಗೆಗಳು ಇವೆಲ್ಲವೂ ಸೇರಿ ಇಪ್ಪತ್ತೇಳು ಬಗೆಗಳು ಉಪಮಾಲಂಕಾರದಲ್ಲಿ ಸಂಭವಿಸುತ್ತವೆ. ಪೂರ್ಣೋಪಮೆಯು ಶ್ರೌತಿಯಲ್ಲೂ ಮತ್ತು ಆರ್ಥಿಯಲ್ಲೂ ತದ್ಧಿತ ಸಮಾಸ ಮತ್ತು ವಾಕ್ಯಗಳ ಮೂಲಕ ಒಂದೊಂದರಲ್ಲೂ ಮೂರು ಮೂರು ಬಗೆಗಳಾಗುತ್ತದೆ. ಹಾಗೆಯೇ ಲುಪ್ತೋಪಮೇಯಲ್ಲಿ ಇಪ್ಪತ್ತೊಂದು ಬಗೆಗಳಾಗುತ್ತವೆ. ಸಾಮಾನ್ಯಧರ್ಮದ ಲೋಪದಲ್ಲಿ ಶ್ರೌತಿ ಎರಡು, ಆರ್ಥಿ ಮೂರು; ಪ್ರತ್ಯಯ ಲೋಪದಲ್ಲಿ ಕ್ಯಚ್‌ನಲ್ಲಿ ಎರಡು, ಕ್ಯಙನಲ್ಲಿ ಒಂದು, ಣಮುಲ್‌ನಲ್ಲಿ ಎರಡು ಹೀಗೆ ಐದು ಆಗುತ್ತವೆ. ಉಪಮಾನಲೋಪದಲ್ಲಿ ಎರಡು ಬಗೆಗಳು ; ಇವಾದಿವಾಚಕಲೋಪದಲ್ಲಿ

ವಾಕ್ಯದಲ್ಲೂ ಸಮಾಸದಲ್ಲೂ ಎರಡು ಬಗೆಗಳು ; ಸಾಮಾನ್ಯಧರ್ಮ ಉಪಮಾನ ಇವೆ ರಡೂ ಲೋಪವಾಗಿರುವಾಗ ವಾಕ್ಯದಲ್ಲೂ ಸಮಾಸದಲ್ಲೂ ಎರಡು ಬಗೆಗಳು ಆಗುತ್ತವೆ. ಸಾಮಾನ್ಯಧರ್ಮ ಮತ್ತು ಇವಾದಿಪದ ಇವುಗಳು ಲೋಪವಾದಾಗ ಕ್ವಿಪ್ ಪ್ರತ್ಯಯ ದಿಂದಲೂ ಸಮಾಸದಲ್ಲೂ ಎರಡು ಬಗೆಗಳಾಗುತ್ತವೆ. ಉಪಮೇಯ ಲೋಪದಲ್ಲಿ ಕ್ಯಚ್ ಪ್ರತ್ಯಯಕ್ಕೆ ಸಂಬಂಧಿಸಿದಂತೆ ಒಂದು ರೂಪವಾಗುತ್ತದೆ. ಸಾಮಾನ್ಯಧರ್ಮ ಉಪ ಮೇಯ ಇವೆರಡರ ಲೋಪದಲ್ಲಿ ಒಂದು ಬಗೆಯಾಗುತ್ತವೆ (ಕ್ಷೀರೋಧೀಯಂತಿಸೌಗರಾಃ) ಉಪಮೇನ, ಇವಾದಿಪದ, ಸಾಮಾನ್ಯಧರ್ಮ ಇವು ಮೂರರ ಲೋಪದಲ್ಲಿ ಸಮಾಸದಲ್ಲಿ ಒಂದೇ ಬಗೆಯಾಗುತ್ತದೆ (ಮೃಗಲೋಚನಾ ಎಂಬುದೇ ಉದಾಹರಣ)

ಇವಿಷ್ಟು ಉಪಮಾ ಭೇದಗಳಲ್ಲಿ ಕೆಲವುಕಡೆ ಸಾಧಾರಣಧರ್ಮವು ಲೋಪವಾಗಿರು ವುದು. ಕೆಲವುಕಡೆ ಸಾಧಾರಣಧರ್ಮವು ಲೋಪವಾವದಿರುವುದು. ಹೀಗೆ ಉಪಮೆಯು ಎರಡು ಬಗೆ ಎನಿಸುವುದೆಂಬ ವಿಶೇಷ ಭೇಧವನ್ನು ಈಗ ತಿಳಿಸುತ್ತಾನೆ. ಸಾಮಾನ್ಯ ಧರ್ಮವು ಕೆಲವುಕಡೆ ಉಪಮಾನ ಉಪಮೇಯಗಳೆರಡಕ್ಕೂ ಅನ್ವಯಿಸುವಂತೆ ಒಂದೇ ಬಗೆಯಾಗಿರುತ್ತದೆ. ಕೆಲವುಕಡೆ ಬೇರೆಬೇರೆ ಯಾಗಿರುತ್ತದೆ. ಬೇರೆಯಾದರೆ ಅದು ಉಪಮಾನ ಉಪಮೇಯಗಳೆರಡಕ್ಕೂ ಅನ್ವಯಿಸದೇ ಇರುವುದರಿಂದ ಅದು ಹೇಗೆ ಸಾಧಾರಣಧರ್ಮವೆನಿಸುತು ? ಎಂದು ಕೇಳಿದರೆ ಅದಕ್ಕೆ ಸಮಾಧಾನವನ್ನು ತಿಳಿಸು ತ್ತಾನೆ. ಮುಖವೆಂಬ ಬಿಂಬಕ್ಕೂ ದರ್ಪಣದಲ್ಲಿ ಕಾಣುವ ಪ್ರತಿ ಬಿಂಬಕ್ಕೂ ಬಿಂಬ ಪ್ರತಿಬಿಂಬಭಾವದಿಂದ ಭೇದವಿದ್ದರೂ ಆವೆರಡರಲ್ಲೂ ಸಾದೃಶ್ಯವಿರುವುದರಿಂದ ಅಭೇ ದವೂ ಇರುತ್ತದೆ. ಹೀಗೆ ಸಾಧಾರಣಧರ್ಮಗಳು ಬೇರೆಬೇರೆಯಾಗಿದ್ದರೂಅ ಭೇದ ವನ್ನು ಕಲ್ಪಿಸುವುದಕ್ಕೆ ಬಿಂಬ ಪ್ರತಿಬಿಂಬ ಭಾವವೆಂದು ಕರೆಯಲಾಗಿದೆ. ಅಥವಾ ಉಪಮಾನದಲ್ಲೂ ಉಪಮೇಯದಲ್ಲೂ ಇರುವ ಧರ್ಮಗಳಿಗೆ ಕೇವಲ ಶಬ್ದದಿಂದ ಭೇದ ವಿದ್ದರೂ ವಾಸ್ತವವಾಗಿ ಭೇದವಿಲ್ಲದೇ ಇರಬಹುದು. ಹೀಗೆ ವಾಸ್ತವವಾಗಿ ಭೇದವಿದ್ದರೂ ಸಾದೃಶ್ಯದಿಂದ ಅಭೇದವನ್ನು ಕಲ್ಪಿಸುವುದರಿಂದಲೂ, ಶಬ್ದಮಾತ್ರದಿಂದ ಭೇದವಿದ್ದರೂ ವಾಸ್ತವವಾಗಿ ಅಭೇದವಿರುವುದರಿಂದಲೂ ಸಾಮಾನ್ಯಧರ್ಮವುಂಟೆಂದು ಭಾವಿಸಬೇಕು. ಸಾಧಾರಣಧರ್ಮವು ಎರಡರಲ್ಲೂ ಒಂದೇ ಬಗೆಯಾಗಿರುವುದಕ್ಕೆ 'ಮಧುರಃ ಸುಧಾವದ ಧರಃ' ಎಂಬಲ್ಲಿ ಮಾಧುರ್ಯವೆಂಬುದು ಸುಧೆಯಲ್ಲಿ ಉಂಟೆಂಬುದು ಅದು ಸುಸ್ವಾದ್ಯ ವಾದ್ದರಿಂದ ಎಲ್ಲರಿಗೂ ಪ್ರಿಯವೆನಿಸಿದೆ. ಅಧರವದ ಮಾಧುರ್ಯವು ಚುಂಬನಸುಖ ವನ್ನು ದೊರಕಿಸುವುದರಿಂದ ಕಾಮಿಗಳಿಗೆ ಮಾತ್ರವೇ ಪ್ರಿಯವಾಗಿರುವುದು. ಆದ್ದರಿಂದ ವಾಸ್ತವವಾಗಿ ಆಸ್ವಾದವೆಂಬ ಅಂಶದಲ್ಲಿ ಎರಡಕ್ಕೂ ಭೇದವಿದ್ದರೂ ಪ್ರಿಯತ್ವವೆಂಬ ಬಗೆ ಏನೋ ಒಂದೇ ಆಗಿದೆ. ಬಿಂಬಪ್ರತಿಬಿಂಬಭಾವದಿಂದ ಸಾಧಾರಣಧರ್ಮವು- ಸಂಭವಿಸುವುದನ್ನು ಉದಾಹರಿಸುತ್ತಾನೆ. "ಆ ರಘುವು ಭಲ್ಲಾಯುಧದ ಪ್ರಯೋಗ ದಿಂದ ವಿಚ್ಛಿನ್ನವಾಗಿ ಕೆಳಕ್ಕೆ ಉರುಳಿದ ಮೀಸೆಗಳಿಂದ ಕೂಡಿದ ಯವನರ ಶಿರಸ್ಸುಗಳಿಂದ ಭೂಮಿಯನ್ನುನೊಣಗಳಿಂದ ತುಂಬಿದ ದುಂಬಿಗಳಂತೆ ತುಂಬಿಸಿದನು" ಇಲ್ಲಿ ಶ್ಮಶ್ರುಲೈಃ

ಎಂಬುವಕ್ಕೂ ಸರಘಾವ್ಯಾಪ್ತೈಃ ಎಂಬುದಕ್ಕೂ ಬಿಂಬಪ್ರತಿಬಿಂಬಭಾವವಿದೆ. ತಲೆಗಳು ಮೀಸೆಗಳಿಂದ ಕೂಡಿರುವಂತೆ ದುಂಬಿಗಳು ನೊಣಗಳೊಡನೆ ಕೂಡಿವೆ. ಶಿರಸ್ಸುಗಳು ಕಪ್ಪಗಿದ್ದು ಮೀಸೆಗಳು ಬೆಳ್ಳಗಿರುತ್ತವೆ. ಹಾಗೆಯೇ ದುಂಬಿಗಳು ಕಪ್ಪಗಿದ್ದು ನೊಣಗಳು ಬೆಳ್ಳಗಿರುತ್ತವೆ. ಹೀಗೆ ನೊಣಗಳಿಗೂ ಮೀಸೆಗಳಿಗೂ ಬಿಂಬಪ್ರತಿಬಿಂಬಭಾವದ ಮೂಲಕ ಸಾಧಾರಣಧರ್ಮವನ್ನು ಇಲ್ಲಿ ಕಲ್ಪಿಸಲಾಗಿದೆ. ಶಬ್ದಮಾತ್ರದಿಂದ ಭೇದವಿದ್ದರೂ ವಾಸ್ತವವಾಗಿ ಅಭೇದವಿರುವುದನ್ನು ಉದಾಹರಿಸುತ್ತಾನೆ. ಸಖಿಯ ಸಮೀಪದಲ್ಲಿ ಒಬ್ಬನ ಪ್ರೇಯಸಿ ಹೇಳುವ ಮಾತಿದು. "ಆ ಕೃಶಾಂಗಿಯು ವಿಕಸಿತವಾದ ನೀಲೋತ್ಪಲದಂತೆ ತನ್ನ ನೇತ್ರವನ್ನು ನನ್ನ ಕಡೆಗೆ ಅರಳಿಸಿಕೊಂಡು ತನ್ನ ಮನೋಗತವಾದ ಅಭಿಪ್ರಾಯವೆಲ್ಲವನ್ನು ತಿಳಿಸಿದಳು." ಇಲ್ಲಿ ಸ್ಮೇರ ಮತ್ತು ವಿಕಸಿತ ಎಂಬವು ವಾಸ್ತವವಾಗಿ ಒಂದೇ ಬಗೆಯೇ ಆಗಿವೆ. ಪ್ರತಿವಸ್ತೂಪಮಾಲಂಕಾರದಲ್ಲಿ ಬೇರೆ ಬೇರೆ ಪದಗಳಿಂದ ಒಂದೇ ಸಾಧಾರಣಧರ್ಮವನ್ನು ತಿಳಿಸುವಂತೆ ಇಲ್ಲಿಯೂ ಬೇರೆ ಬೇರೆ ಪದಗಳಿಂದ ತಿಳಿಸಲಾಗಿದೆ.

ಎಲ್ಲಿ ಸಾಮ್ಯವು ಅಭಿದಾಶಕ್ತಿಯಿಂದಲೂ ವ್ಯಂಜನಾವೃತ್ತಿಯಿಂದಲೂ ತಿಳಿದುಬರುವುದೋ ಅಲ್ಲಿ ಏಕದೇಶವಿವರ್ತಿನೀ ಉಪಮೆ ಇರುತ್ತದೆ. ಒಂದು ಅಂಶದಲ್ಲಿ ಸಾಮ್ಯವು ವಾಚ್ಯವಾಗಿದ್ದು ವಿಶೇಷರೀತಿಯಲ್ಲಿ ನೆಲಸಿರುವುದರಿಂದ ಇದಕ್ಕೆ ಏಕದೇಶವಿವರ್ತಿನೀ ಎಂಬ ಹೆಸರು ಹೊಂದುತ್ತದೆ. "ಸಮುದ್ರದ ಕಾಂತಿಯು ನೇತ್ರಗಳಂತಿರುವ ಕನ್ನೈದಿಲೆಗಳಿಂದಲೂ, ಮುಖಗಳಂತಿರುವ ಕಮಲಗಳಿಂದಲೂ, ಸ್ತನಗಳಂತಿರುವ ಚಕ್ರವಾಕಪಕ್ಷಿಗಳಿಂದಲೂ ಪ್ರತಿಯೊಂದು ಕಡೆಯಲ್ಲೂ ಶೋಭಿಸುತ್ತಿತ್ತು" (ಇಲ್ಲಿ ವಿಭಾಂತಿ ಎಂದು ವಾಕ್ಯವು ಸಮಾಪ್ತಿಯಾಗಿದ್ದರೂ ನಾಲ್ಕನೆಯ ಪಾದದಲ್ಲಿ ಮತ್ತೆ ತಿಳಿಸಿದ್ದರಿಂದ ಸಮಾಪ್ತಪುನರಾತ್ತವೆಂಬ ದೋಷವಿದೆ.) ಇಲ್ಲಿ ಉತ್ಪಲ ಮೊದಲಾದವುಗಳಿಗೂ ನೇತ್ರ ಮೊದಲಾದವುಗಳಿಗೂ ಸಾದೃಶ್ಯವು ವಾಚ್ಯವಾಗಿದೆ. ಸರೋವರದ ಕಾಂತಿಗೂ ಅಂಗನೆಗೂ ಸಾದೃಶ್ಯವು ಇಲ್ಲಿ ವ್ಯಂಗ್ಯವಾಗಿ ತೋರುತ್ತದೆ.

ಉಪಮೇಯವೇ ಮುಂದೆ ಮುಂದೆ ಉಪಮಾನವಾಗಿ ಪರಿಣಮಿಸುವುದಾದರೆ ಅಂತಹ ಉಪಮೆಯು ರಶನೋಪಮೆ ಎನಿಸುತ್ತದೆ. "ಹಂಸವು ಶಾಂತಮೂರ್ತಿಯಷ್ಟೇ ಅಲ್ಲದೆ ಶುಭ್ರವಾದ ಪ್ರಭೆಯಿಂದ ಚಂದ್ರನಂತೆ ಆಚರಿಸುತ್ತಿದೆ. ರಮಣಿಯು ಮನೋಹರವಾದ ಗಮನದಿಂದ ಹಂಸದಂತೆ ಆಚರಿಸುತ್ತಾಳೆ. ನೀರು ಸುಖಸ್ಪರ್ಶದಿಂದ ಕಾಂತೆಯಂತೆ ಆಚರಿಸುತ್ತದೆ. ಆಕಾಶವು ನೈರ್ಮಲ್ಯದಿಂದ ನೀರಿನಂತೆ ಆಚರಿಸುತ್ತಲಿದೆ" ಇಲ್ಲಿ ಚಂದ್ರನಿಗೆ ಉಪಮೇಯವೆನಿಸಿದ ಹಂಸವು ಕಾಂತೆಗೆ ಉಪಮಾನವೆನಿಸಿದೆ. ಕಾಂತೆಯು ನೀರಿಗೆ ಉಪಮಾನವೆನಿಸಿದ್ದು ಅದೇ ನೀರು ಮತ್ತೆ ಆಕಾಶಕ್ಕೆ ಉಪಮಾನವೆನಿಸಿದೆ. ಹೀಗೆ ಡಾಬಿನಲ್ಲಿ ಗೆಜ್ಜೆಗಳು ಒಂದಕ್ಕೊಂದು ಹಿಂದೆ ಮುಂದೆ ಕೂಡಿಕೊಂಡಿರುವಂತೆ ಒಂದೊಂದು ವಸ್ತುವು ಉಪಮಾನವಾಗಿಯೂ ಉಪಮೇಯವಾಗಿಯೂ ಸೇರಿಕಲೆತಿರುವುದರಿಂದ ಇದು ರಶನೋಪಮೆ ಎನಿಸಿದೆ.

ಮಾಲೋಪಮಾ ಯದೇಕಸ್ಯೋಪಮಾನಂ ಬಹು ದೃಶ್ಯತೇ ।

ಯಥಾ—ವಾರಿಜೇನೇವ ಸರಸೀ ಶಶಿನೇವ ನಿಶೀಥಿನೀ ।
ಯೌವನೇನೇವ ವನಿತಾ ನಯೇನ ಶ್ರೀರ್ಮನೋಹರಾ ॥

ಕ್ವಚಿದುಪಮಾನೋಪಮೇಯಯೋರ್ದ್ವಯೋರಪಿ ಪ್ರಕೃತತ್ವಂ ದೃಶ್ಯತೇ.

ಹಂಸಶ್ಚಂದ್ರ ಇವಾಭಾತಿ ಜಲಂ ವ್ಯೋಮತಲಂ ಯಥಾ ॥
ವಿಮಲಾಃ ಕುಮುದಾನೀವ ತಾರಕಾಃ ಶರದಾಗಮೇ ॥

ಅಸ್ಯ ರಾಜ್ಞೋ ಗೃಹೇ ಭಾಂತಿ ಭೂಪಾನಾಂ ತಾ ವಿಭೂತಯಃ ।
ಪುರಂದರಸ್ಯ ಭುವನೇ ಕಲ್ಪವೃಕ್ಷಭವಾ ಇವ ॥

ಅತ್ರೋಪಮೇಯಭೂತವಿಭೂತಿಭಿಃ 'ಕಲ್ಪವೃಕ್ಷಭವಾ ಇವ' ಇತ್ಯುಪಮಾನಭೂತಾ ವಿಭೂತಯ ಆಕ್ಷಿಪ್ಯಂತ ಇತ್ಯಾಕ್ಷೇಪೋಪಮಾ. ಅತ್ರೈವ 'ಗೃಹೇ' ಇತ್ಯಸ್ಯ 'ಭುವನೇ' ಇತ್ಯನೇನ ಪ್ರತಿನಿರ್ದೇಶಾತ್ ಪ್ರತಿನಿರ್ದೇಶ್ಯೋಪಮಾ ಇತ್ಯಾದಯಶ್ಚ ನ ಲಕ್ಷಿತಾಃ, ಏವಂವಿಧವೈಚಿತ್ರ್ಯಸ್ಯ ಸಹಸ್ರಧಾ ಸಂದರ್ಶನಾತ್.

ಉಪಮಾನೋಪಮೇಯತ್ವಮೇಕಸ್ಯೈವ ತ್ವನನ್ವಯಃ ॥

ಅರ್ಥಾದೇಕವಾಕ್ಯೇ— ಯಥಾ—

ರಾಜೀವಮಿವ ರಾಜೀವಂ ಜಲಂ ಜಲಮಿವಾಜನಿ ।
ಚಂದ್ರಶ್ಚಂದ್ರ ಇವಾತಂದ್ರಃ ಶರತ್ಸಮುದಯೇಽದ್ಯ ಮೇ ॥

ಅತ್ರ ರಾಜೀವಾದೀನಾಂ ಅನನ್ಯಸದೃಶತ್ವಪ್ರತಿಪಾದನಾರ್ಥಮುಪಮಾನೋಪಮೇಯಭಾವೋ ವೈವಕ್ಷಿಕಃ. 'ರಾಜೀವಮಿವ ಪಾಥೋಜಮ್' ಇತಿ ಚಾಸ್ಯ ಲಾಟಾನುಪ್ರಾಸಾದ್ವಿವಿಕ್ತೋ ವಿಷಯಃ. ಕಿಂತ್ವತ್ರೋಚಿತತ್ವಾತ್ ಏಕಶಬ್ದಪ್ರಯೋಗ ಏವ ಶ್ರೇಯಾನ್. ತದುಕ್ತಮ್—

ಅನನ್ವಯೇ ಚ ಶಬ್ದೈಕ್ಯಮೌಚಿತ್ಯಾದಾನುಷಂಗಿಕಮ್ ।
ಅಸ್ಮಿಂಸ್ತು ಲಾಟಾನುಪ್ರಾಸೇ ಸಾಕ್ಷಾದೇವ ಪ್ರಯೋಜಕಮ್ ॥

ಪರ್ಯಾಯೇಣ ದ್ವಯೋರೇತದುಪಮೇಯೋಪಮಾ ಮತಾ ।

ಏತದುಪ ಮಾನೋಪಮೇಯತ್ವಮ್. ಅರ್ಥಾದ್ವಾಕ್ಯದ್ವಯೇ-ಯಥಾ—

ಕಮಲೇವ ಮತಿರ್ಮತಿರಿವ ಕಮಲಾ ತನುರಿವ ವಿಭಾ ವಿಭೇವ ತನುಃ ।
ಧರಣೀವ ಧೃತಿರ್ಧೃತಿರಿವ ಧರಣೀ ಸತತಂ ವಿಭಾತಿ ಬತ ಯಸ್ಯ ॥

ಅತ್ರಾಸ್ಯ ರಾಜ್ಞಃ ಶ್ರೀಬುದ್ಧ್ಯಾದಿಸದೃಶಂ ನಾನ್ಯದಸ್ತೀತ್ಯಭಿಪ್ರಾಯಃ.

ಸದೃಶಾನುಭವಾದ್ವಸ್ತುಸ್ಮೃತಿಃ ಸ್ಮರಣಮುಚ್ಯತೇ ॥

ಯಥಾ—ಅರವಿಂದಮಿದಂ ವೀಕ್ಷ್ಯ ಖೇಲತ್ಖಂಜನಮಂಜಲಮ್ ।
ಸ್ಮರಾಮಿ ವದನಂ ತಸ್ಯಾಶ್ಚಾರುಚಂಚಲಲೋಚನಮ್ ॥

'ಮಯಿ ಸಕಪಟಮ್' ಇತ್ಯಾದೌ ಚ ಸ್ಮೃತೇಃ ಸಾದೃಶ್ಯಾನುಭವಂ ವಿನಾ ಉತ್ಥಾಪಿತತ್ವಾತ್ ನಾಯಮಲಂಕಾರಃ. ರಾಘವಾನಂದಾಸ್ತು ವೈಸಾದೃಶ್ಯಾತ್

ಸ್ಮೃತಿಮಪಿ ಸ್ಮರಣಾಲಂಕಾರಮಿಚ್ಛಂತಿ; ತತ್ರೋದಾಹರಣಂ ತೇಷಾಮೇವ. ಯಥಾ.

ಶಿರೀಷಮೃದ್ವೀ ಗಿರಿಷು ಪ್ರಪೇದೇ ಯದಾ ದುಃಖಶತಾನಿ ಸೀತಾ ।
ತದಾ ತದಾಽಸ್ಯಾಃ ಸದನೇಷು ಸೌಖ್ಯಲಕ್ಷಾಣಿ ದಧ್ಯೌ ಗಲದಶ್ರು ರಾಮಃ॥

ರೂಪಕಂ ರೂಪಿತಾರೋಪಃ ವಿಷಯೇ ನಿರಪಹ್ನವೇ ।

ರೂಪಿತ ಇತಿ ಪರಿಣಾಮಾದ್ವ್ಯವಚ್ಛೇದಃ. ಏತಚ್ಚ ತತ್ಪ್ರಸ್ತಾವೇ ವಿವೇಚಯಿಷ್ಯಾಮಃ. 'ನಿರಪಹ್ನವೇ' ಇತ್ಯಪಹ್ನುತಿವ್ಯವಚ್ಛೇದಾರ್ಥಮ್.

ತತ್ಪರಂಪರಿತಂ ಸಾಂಗಂ ನಿರಂಗಮಿತಿ ಚ ತ್ರಿಧಾ ॥

ತದ್ರೂಪಕಂ. ತತ್ರ—ಯತ್ರ ಕಸ್ಯಚಿದಾರೋಪಃ ಪರಾರೋಪಣಕಾರಣಮ್ ।
ತತ್ಪರಂಪರಿತಂ ಶ್ಲಿಷ್ಟಾಶ್ಲಿಷ್ಟಶಬ್ದನಿಬಂಧನಮ್ ॥
ಪ್ರತ್ಯೇಕಂ ಕೇವಲಂ ಮಾಲಾರೂಪಂ ಚೇತಿ ಚತುರ್ವಿಧಮ್ ॥

ತತ್ರ ಶ್ಲಿಷ್ಟಶಬ್ದನಿಬಂಧನಂ ಕೇವಲಪರಂಪರಿತಂ ಯಥಾ—

ಆಹವೇ ಜಗದುದ್ದಂಡ! ರಾಜಮಂಡಲರಾಹವೇ ।
ಶ್ರೀನೃಸಿಂಹಮಹೀಪಾಲ! ಸ್ವಸ್ತ್ಯಸ್ತು ತವ ಬಾಹವೇ ॥

ಅತ್ರ ರಾಜಮಂಡಲಂ ನೃಪಸಮೂಹ ಏವ ಚಂದ್ರಬಿಂಬಮಿತ್ಯಾರೋಪೋ ರಾಜಬಾಹೋಃ ರಾಹುತ್ವಾರೋಪೇ ನಿಮಿತ್ತಮ್.

ಮಾಲಾರೂಪಂ ಯಥಾ—ಪದ್ಮೋದಯದಿನಾಧೀಶಃ ಸದಾಗತಿಸಮೀರಣಃ।
ಭೂಭೃದಾವಲಿದಂಭೋಲಿರೇಕ ಏವ ಭವಾನ್ ಭುವಿ ॥

ಅತ್ರ ಪದ್ಮಾಯಾ ಉದಯಃ ಏವ ಪದ್ಮಾನಾಮುದಯಃ; ಸತಾಮಾಗತಿರೇವ ಸದಾಗಮನಮ್, ಭೂಭೃತೋ ರಾಜಾನ ಏವ ಪರ್ವತಾ ಇತ್ಯಾದ್ಯಾರೋಪೋ ರಾಜ್ಞಃ ಸೂರ್ಯತ್ವಾದ್ಯಾರೋಪೇ ನಿಮಿತ್ತಮ್.

ಅಶ್ಲಿಷ್ಟಶಬ್ದನಿಬಂಧನಂ ಕೇವಲಂ ಯಥಾ—

ಪಾಂತು ವೋ ಜಲದಶ್ಯಾಮಾಃ ಶಾರ್ಙ್ಗಜ್ಯಾಘಾತಕರ್ಕಶಾಃ।
ತ್ರೈಲೋಕ್ಯಮಂಡಪಸ್ತಂಭಾಶ್ಚತ್ವಾರೋ ಹರಿಬಾಹವಃ ॥

ಅತ್ರ ತ್ರೈಲೋಕ್ಯಸ್ಯ ಮಂಡಪತ್ವಾರೋಪೋ ಹರಿಬಾಹೂನಾಂ ಸ್ತಂಭತ್ವಾರೋಪೇ ನಿಮಿತ್ತಮ್. ಮಾಲಾರೂಪಂ ಯಥಾ—

ಮನೋಜರಾಜಸ್ಯ ಸಿತಾತಪತ್ರಂ ಶ್ರೀಖಂಡಚಿತ್ರಂ ಹರಿದಂಗನಾಯಾಃ ।
ವಿರಾಜತೇ ವ್ಯೋಮಸರಃಸರೋಜಂ ಕರ್ಪೂರಪೂರಪ್ರಭಮಿಂದುಬಿಂಬಮ್ ॥

ಅತ್ರ ಮನೋಜಾದೇಃ ರಾಜತ್ವಾದ್ಯಾರೋಪಃ ಚಂದ್ರಬಿಂಬಸ್ಯ ಸಿತಾತಪತ್ರತ್ವಾದ್ಯಾರೋಪೇ ನಿಮಿತ್ತಮ್. ತತ್ರ ಚ "ರಾಜಭುಜಾದೀನಾ ರಾಹುತ್ವಾದ್ಯಾರೋಪೇ ನಿಮಿತ್ತಮ್" ಇತಿ ಕೇಚಿತ್.

ಅಂಗಿನೋ ಯದಿ ಸಾಂಗಸ್ಯ ರೂಪಣಂ ಸಾಂಗಮೇವ ತತ್ ।
ಸಮಸ್ತವಸ್ತುವಿಷಯಮೇಕದೇಶವಿವರ್ತಿ ಚ ॥

ತತ್ರ—ಆರೋಪ್ಯಾಣಾಮಶೇಷಾಣಾಂ ಶಾಬ್ದತ್ವೇ ಪ್ರಥಮಂ ಮತಮ್ ।
ಪ್ರಥಮಂ ಸಮಸ್ತವಸ್ತುವಿಷಯಮ್. ಯಥಾ—

ರಾವಣಾವಗ್ರಹಕ್ಲಾಂತಮಿತಿ ವಾಗಮೃತೇನ ಸಃ ।
ಅಭಿವೃಷ್ಯ ಮರುಚ್ಛಸ್ಯಂ ಕೃಷ್ಣಮೇಘಸ್ತಿರೋದಧೇ ॥

ಅತ್ರ ಕೃಷ್ಣಸ್ಯ ಮೇಘತ್ವಾರೋಪೇ ವಾಗಾದೀನಾಮಮೃತತ್ವಾದಿಕಮಾರೋಪಿತಮ್.

ಯತ್ರ ಕಸ್ಯಚಿದಾರ್ಥತ್ವಮೇಕದೇಶವಿವರ್ತಿ ತತ್ ।

ಕಸ್ಯಚಿದಾರೋಪ್ಯಮಾಣಸ್ಯ. ಯಥಾ—

ಲಾವಣ್ಯಮಧುಭಿಃ ಪೂರ್ಣಮಾಸ್ಯಮಸ್ಯಾ ವಿಕಸ್ವರಮ್ ।
ಲೋಕಲೋಚನರೋಲಂಬಕದಂಬೈಃ ಕೈರ್ನ ಪೀಯತೇ ॥

ಅತ್ರ ಲಾವಣ್ಯಾದೌ ಮಧುತ್ವಾದ್ಯಾರೋಪಃ ಶಾಬ್ದಃ, ಮುಖೇ ಪದ್ಮತ್ವರೂಪ ಆರ್ಥಃ. ನ ಚೇಯಮೇಕದೇಶವಿವರ್ತಿನ್ಯುಪಮಾ ವಿಕಸ್ವರತ್ವಧರ್ಮಸ್ಯ ಆರೋಪ್ಯಮಾಣೇ ಪದ್ಮೇ ಮುಖ್ಯತಯಾ ವರ್ತನಾತ್, ಮುಖೇ ಚೋಪಚರಿತತ್ವಾತ್.

ನಿರಂಗಂ ಕೇವಲಸ್ಯೈವ ರೂಪಣಂ ತದಪಿ ತ್ರಿಧಾ ।

ತತ್ರ ಮಾಲಾರೂಪಂ ನಿರಂಗಂ ಯಥಾ—

ನಿರ್ಮಾಣಕೌಶಲಂ ಧಾತುಶ್ಚಂದ್ರಿಕಾ ಲೋಕಚಕ್ಷುಷಾಮ್ ।
ಕ್ರೀಡಾಗೃಹಮನಂಗಸ್ಯ ಸೇಯಮಿಂದೀವರೇಕ್ಷಣಾ ॥

ಕೇವಲಂ ಯಥಾ—ದಾಸೇ ಕೃತಾಗಸಿ ಭವತ್ಯುಚಿತಃ ಪ್ರಭೂಣಾಂ
ಪಾದಪ್ರಹಾರ ಇತಿ ಸುಂದರಿ ! ನಾತ್ರ ದೂಯೇ ।
ಉದ್ಯತ್ಕಠೋರಪುಲಕಾಂಕುರಕಂಟಕಾಗ್ರೈಃ
ಯದ್ಭಿದ್ಯತೇ ಮೃದುಪದಂ ನನು ಸಾ ವ್ಯಥಾ ಮೇ ॥

ಚಿರಂತನೈರುಕ್ತಾ ಇತಿ ಶೇಷಃ. ಕ್ವಚಿತ್ಪರಂಪರಿತಮಪ್ಯೇಕದೇಶವಿವರ್ತಿ. ಯಥಾ—

ಖಡ್ಗಃ ಕ್ಷ್ಮಾಸೌವಿದಲ್ಲಃ ಸಮಿತಿ ವಿಜಯತೇ ಮಾಲವಾಖಂಡಲಸ್ಯ ।

ಅತ್ರಾರ್ಥಃ ಕ್ಷ್ಮಾಯಾಂ ಮಹಿಷೀತ್ವಾರೋಪಃ ಖಡ್ಗೇ ಸೌವಿದಲ್ಲತ್ವಾರೋಪೇ ನಿಮಿತ್ತಮ್. ಅಸ್ಯ ಪೂರ್ವವನ್ಮಾಲರೂಪತ್ವೇಽಪಿ ಉದಾಹರಣಂ ಮೃಗ್ಯಮ್.

ಒಂದು ಉಪಮೇಯಕ್ಕೆ ಅನೇಕ ಉಪಮಾನಗಳನ್ನು ಕೊಡುವುದೇ ಮಾಲೋಪಮೆ ಎನಿಸುವುದು. "ಕಮಲದಿಂದ ಸರೋವರವಂತೆಯೂ ಚಂದ್ರನಿಂದ ರಾತ್ರಿಯಂತೆಯೂ, ಯೌವನದಿಂದ ಸ್ತ್ರೀಯಂತೆಯೂ ನೀತಿಪ್ರಯೋಗದಿಂದ ಸಂಪತ್ತು ಮನೋಹರವಾಗುತ್ತದೆ" ಇಲ್ಲಿ ಉಪಮೇಯವೆನಿಸಿದ ಸಂಪತ್ತಿಗೆ ಸರೋವರ, ರಾತ್ರಿ, ವನಿತೆ ಹೀಗೆ ಅನೇಕ ಉಪಮಾನಗಳನ್ನು ಕೊಟ್ಟಿರುವುದರಿಂದ ಇದು ಮಾಲೋಪಮೆ ಎನಿಸಿದೆ. ಕೆಲವು ಕಡೆ ಉಪಮಾನ ಉಪಮೇಯಗಳೆರಡೂ ಪ್ರಕೃತಸಂದರ್ಭಕ್ಕೆ ಹೊಂದುವಂತಿರುವುದನ್ನು ಉದಾಹರಿಸುತ್ತಾನೆ. "ಶರತ್ಕಾಲವು ಪ್ರವರ್ತಿಸಲು ಹಂಸವು

ಚಂದ್ರನಂತೆ ಶೋಭಿಸುತ್ತದೆ; ಆಕಾಶದಂತೆ ನೀರು ನಿರ್ಮಲವಾಗುತ್ತದೆ; ನಕ್ಷತ್ರಗಳು ಕನ್ನೈದಿಲೆಗಳಂತೆ ನಿರ್ಮಲವಾಗುತ್ತವೆ" ಇಲ್ಲಿ ಶರತ್ಕಾಲವನ್ನು ವರ್ಣಿಸುವ ಸಂದರ್ಭ ವಾದ್ದರಿಂದ ಉಪಮೇಯವೂ ಉಪಮಾನವೂ ಅದ ಹಂಸ ಚಂದ್ರ ಮೊದಲಾದವು ಪ್ರಕೃತವರ್ಣನೆಗೆ ಯೋಗ್ಯವೆನಿಸಿವೆ.

ಬೇರೆ ಮತದಂತೆ ಉಪಮಾಲಂಕಾರದ ಇತರ ಬಗೆಗಳನ್ನು ತಿಳಿಸುತ್ತಾನೆ. "ಈ ರಾಜನ ಮನೆಯಲ್ಲಿ ರಾಜರ ಆ ವಿಭೂತಿಗಳು ಇಂದ್ರನ ಮನೆಯಲ್ಲಿ ಕಲ್ಪವೃಕ್ಷ ದಿಂದ ದೊರೆತಿರುವ ವಿಭೂತಿಗಳಂತೆ ಇವೆ" ಇಲ್ಲಿ ಉಪಮೇಯವೆನಿಸಿದ ವಿಭೂತಿ ಗಳು 'ಕಲ್ಪವೃಕ್ಷಭವಾ ಇವ' ಎಂಬಲ್ಲಿ ಉಪಮಾನವೆನಿಸಿದ ವಿಭೂತಿಗಳನ್ನು ತಿಳಿಸಿ ಕೊಡುತ್ತವೆ. ಆದ್ದರಿಂದ ಇಂತಹ ಕಡೆ ಇರುವ ಉಪಮೆ ಆಕ್ಷೇಪೋಪಮೆ ಎನಿಸು ವುದು. ಇಲ್ಲಿಯೇ 'ಗೃಹೇ' ಎಂಬುದನ್ನು 'ಭವನೇ' ಎಂಬುದರಿಂದ ತಿಳಿಸಿರುವ ಪ್ರಯುಕ್ತ ಇದು ಪ್ರತಿನಿರ್ದೇಶ್ಯೋಪಮೆ ಎನಿಸಿದೆ. ಈ ಬಗೆಯ ಉಪಮಾಭೇದ ಗಳನ್ನು ಇಲ್ಲಿ ತಿಳಿಸಿಲ್ಲ. ಇಂತಹ ವೈಚಿತ್ರ್ಯವು ಅನೇಕ ಕಡೆಗಳಲ್ಲಿ ಕಂಡು ಬರುವ ಪ್ರಯುಕ್ತ ಇವೆಲ್ಲವನ್ನು ಉಪಮಾಭೇದಗಳೆಂದು ಭಾವಿಸುವುದರಲ್ಲಿ ಅರ್ಥವಿಲ್ಲ.

ಈಗ ಅನನ್ವಯವೆಂಬ ಅಲಂಕಾರವನ್ನು ವಿವರಿಸುತ್ತಾನೆ. ಒಂದೇ ವಸ್ತುವನ್ನು ಉಪಮಾನವೆಂದೂ ಉಪಮಾನವೆಂದೂ ಕಲ್ಪಿಸುವುದೇ ಅನನ್ವಯಲಂಕಾರವೆನಿಸುವುದು ರಶನೋಪಮೆಯಲ್ಲೂ ಉಪಮೇಯೋಪಮೆಯಲ್ಲೂ ಅನೇಕ ವಾಕ್ಯಗಳಿರುವ ಪ್ರಯುಕ್ತ ಅನನ್ವಯವು ಒಂದೇ ವಾಕ್ಯದಲ್ಲಿ ಸಂಭವಿಸುತ್ತದೆ ಎಂದು ತಿಳಿಯಬೇಕು. "ಶರತ್ಕಾಲವು ಪೂರ್ಣವಾಗಿ ಆವಿರ್ಭವಿಸಲು ಕಮಲವು ಕಮಲದಂತೆ ನಿರ್ಮಲವಾಯಿತು. ನೀರು ನೀರಿ ನಂತೆ ಸ್ವಚ್ಛವಾಯಿತು. ಚಂದ್ರನು ಚಂದ್ರನಂತೆ ನಿರ್ಮಲನಾದನು" ಇಲ್ಲಿ ರಾಜ ಕಮಲ ಮೊದಲಾದವು ಯಾವುದಕ್ಕೂ ಸದೃಶವಲ್ಲವೆಂಬುದನ್ನು ತಿಳಿಸಲು ಉಪಮಾನೋಪ ಮೇಯಭಾವವನ್ನು ಕವಿಯು ಕಲ್ಪಿಸಿರುವನೇ ಹೊರತು ಇದು ವಾಸ್ತವವಾದುದಲ್ಲ. ಅನನ್ವಯವಿರುವ ಕಡೆಯೇ ಲಾಟಾನುಪ್ರಾಸವು ಸಂಭವಿಸುವುದರಿಂದ ಎರಡಕ್ಕೂ ಸಾಂಕರ್ಯವಾಗುವುದಿಲ್ಲವೇ ಎಂದರೆ ಅದಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ಇಲ್ಲಿ 'ರಾಜೀವಮಿವ ಪಾಥೋಜಂ' ಎಂದು ಹೇಳಿದರೆ ಶಬ್ದದಲ್ಲಿ ಪುನರುಕ್ತಿ ಇಲ್ಲದ್ದರಿಂದ ಲಾಟಾನುಪ್ರಾಸಕ್ಕೆ ಪ್ರಸಕ್ತಿ ಇರುವುದಿಲ್ಲ. ಆದರೆ ಎರಡು ಕಡೆಗಳಲ್ಲೂ ಕಮಲವೆಂಬ ಒಂದೇ ಅರ್ಥವು ಉಪಮಾನವೂ ಉಪಮೇಯವೂ ಆಗುವ ಪ್ರಯುಕ್ತ ಅನನ್ವಯವಿದ್ದೇ ಇರುವುದು. ಇದರಿಂದ ಎರಡಕ್ಕೂ ಬೇರೆ ಬೇರೆ ವಿಷಯಗಳೇ ಇರುವ ಪ್ರಯುಕ್ತ ಸಾಂಕರ್ಯಕ್ಕೆ ಅವಕಾಶವಿಲ್ಲ. ಹಾಗಾದರೆ ಅನನ್ವಯಸ್ಥಲದಲ್ಲಿ 'ರಾಜೀವಮಿವ ಪಾಥೋಜಂ' ಎಂಬಂತೆಯೇ ಬೇರೆ ಬೇರೆ ಪದಗಳನ್ನು ಏಕೆ ಪ್ರಯೋಗಿಸಬಾರದು? ಎಂದರೆ ಇಲ್ಲಿ ಒಂದೇ ಬಗೆಯ ಶಬ್ದವನ್ನು ಪ್ರಯೋಗಿಸುವುದರಲ್ಲಿಯೇ ಔಚಿತ್ಯವಿರುವ ಪ್ರಯುಕ್ತ ಹಿಂದಿನಿಂದಲೂ ಹಾಗೆಯೇ ಪ್ರಯೋಗಿಸಲಾಗಿದೆ. ಆ ಬಗ್ಗೆ ಅಭಿಜ್ಞರು "ಅನನ್ವಯಾಲಂಕಾರವಲ್ಲಿ ಔಚಿತ್ಯವನ್ನು ಅನುಸರಿಸಿ ಒಂದೇ ಬಗೆಯ ಶಬ್ದಗಳನ್ನು

ಪ್ರಯೋಗಿಸಲಾಗಿದೆಯೇ ಹೊರತು ಹಾಗೆ ಪ್ರಯೋಗಿಸಲೇಬೇಕೆಂಬ ನಿಬಂಧನೆ ಇಲ್ಲ; ಲಾಟಾನುಪ್ರಾಸದಲ್ಲಾದರೋ ಒಂದೇ ಬಗೆಯ ಶಬ್ದಗಳನ್ನು ನೇರವಾಗಿ ಪ್ರಯೋಗಿಸಲೇಬೇಕೆಂಬ ನಿರ್ಬಂಧವಿದೆ. ಹಾಗೆ ಪ್ರಯೋಗಿಸದೇ ಇದ್ದರೆ ಲಾಟಾನುಪ್ರಾಸವೇ ಸಂಭವಿಸುವುದಿಲ್ಲವೆಂದು ಹೇಳುತ್ತಾರೆ.

ಈಗ ಉಪಮೇಯೋಪಮೆಯನ್ನು ತಿಳಿಸುತ್ತಾನೆ.ಎರಡು ಪದಾರ್ಥಗಳೊಳಗೆ ವ್ಯತ್ಯಾಸಮಾಡಿ ಉಪಮಾನೋಪಮೇಯಭಾವವನ್ನು ತಿಳಿಸುವುದೇ ಉಪಮೇಯೋಪಲಾಕಾರವೆನಿಸುವುದು. ಹಿಂದಿನ ವಾಕ್ಯದಲ್ಲಿ ಯಾವುದು ಉಪಮಾನವೋ ಅದು ಮುಂದಿನ ವಾಕ್ಯದಲ್ಲಿ ಉಪಮೇಯವಾಗಬೇಕು. ಹಾಗೆಯೇ ಹಿಂದಿನ ವಾಕ್ಯದಲ್ಲಿ ಉಪಮೇಯವಾದದ್ದು ಮುಂದಿನ ವಾಕ್ಯದಲ್ಲಿ ಉಪಮಾನವಾಗಬೇಕು. ಈ ಬಗೆಯ ಪರಿವರ್ತನವು ವಿಚಿತ್ರವೆನಿಸಿದ್ದರಿಂದ ಅಲಂಕಾರವಾಗುವುದು. "ರಾಜನಲ್ಲಿ ಯಾವಾಗಲೂ ರಾಜಲಕ್ಷ್ಮಿಯಂತೆ ಬುದ್ಧಿಯೂ, ಬುದ್ಧಿಯಂತೆ ರಾಜಲಕ್ಷ್ಮಿಯೂ ಇದ್ದವು. (ರಾಜಲಕ್ಷ್ಮಿಯು ಅಸಾಧಾರಣವೆನಿಸಿದ್ದಂತೆ ಬುದ್ಧಿಯೂ ಅಸಾಧಾರಣವೆನಿಸಿತ್ತು) ಅವನ ಶರೀರದಂತೆ ಕಾಂತಿಯೂ ಕಾಂತಿಯಂತೆ ಶರೀರವೂ ಶೋಭಿಸುತ್ತಿವೆ. ಸ್ವಾಧೀನವಾಗಿದ್ದ ಭೂಮಿಯಂತೆ ಅವನ ಧೈರ್ಯವೂ, ಧೈರ್ಯದಂತೆ ಭೂಮಿಯೂ ಶೋಭಿಸುತ್ತಿವೆ." ಇಲ್ಲಿ ಹಿಂದಿನ ವಾಕ್ಯದಲ್ಲಿ ಕಮಲೆ ಉಪಮಾನವೂ ಮತಿ ಉಪಮೇಯವೂ ಆಗಿವೆ. ಮುಂದಿನ ವಾಕ್ಯದಲ್ಲಿ ಕಮಲೆ ಉಪಮೇಯವೂ ಮತಿ ಉಪಮಾನವೂ ಆಗಿ ಬದಲಾವಣೆಹೊಂದಿವೆ. ಆದ್ದರಿಂದ ಇದು ಉಪಮೇಯೋಪಮೆ ಎನಿಸಿದೆ. ಈ ರಾಜನ ರಾಜ್ಯಲಕ್ಷ್ಮಿ ಬುದ್ಧಿ ಸಾಮರ್ಥ್ಯ ಇವುಗಳಿಗೆ ಸದೃಶವಾದ್ದು ಎಲ್ಲಿಯೂ ಇಲ್ಲವೆಂಬುದೆ ಇವರ ಅಭಿಪ್ರಾಯವೆನಿಸಿದೆ.

ವಾಚ್ಯಾರ್ಥಕ್ಕೆ ಸಂಬಂಧಿಸಿದ ಅಲಂಕಾರಗಳನ್ನು ತಿಳಿಸಿ ವ್ಯಂಗ್ಯಾರ್ಥಕ್ಕೆ ಸಂಬಂಧಿಸಿದ ಅಲಂಕಾರಗಳನ್ನು ತಿಳಿಸಲಿಕ್ಕಾಗಿ ಸ್ಮರಣಾಲಂಕಾರದಲ್ಲಿ ತೋರುವ ವ್ಯಂಗ್ಯಾರ್ಥವು ಇತರ ಅಲಂಕಾರಗಳಿಗಿಂತಲೂ ಸ್ಪಷ್ಟವಾಗಿ ತೋರುವುದರಿಂದ ಪ್ರಧಾನವೆನಿಸಿದ ಪ್ರಯುಕ್ತ ಅದನ್ನು ಮೊದಲು ನಿರೂಪಿಸುತ್ತಾನೆ. ಸದೃಶವಾದ ವಸ್ತು ಒಂದನ್ನು ನೋಡುವುದರಿಂದ ಹಿಂದೆ ಅನುಭವಿಸಿದ್ದ ಅಂತಹ ಮತ್ತೊಂದು ವಸ್ತುವಿನ ಸ್ಮೃತಿಯುಂಟಾಗುವುದು ಸಹಜ. ಈ ಬಗೆಯ ಸ್ಮರಣದಲ್ಲಿ ವೈಚಿತ್ರ್ಯವಿರುವುದರಿಂದ ಅದು ಸ್ಮರಣಾಲಂಕಾರವೆನಿಸುತ್ತದೆ. "ಮೇಲೆ ಸಂಚರಿಸುವ ಪಕ್ಷಿಯಂತೆ ಮನೋಹರವಾದ ಈ ಕಮಲವನ್ನು ನೋಡಿ ಸುಂದರವೂ ಚಂಚಲವೂ ಆದ ಕಣ್ಣುಗಳಿರುವ ಆಕೆಯ ಮುಖವನ್ನು ನಾನು ಸ್ಮರಿಸುತ್ತೇನೆ" ಇಲ್ಲಿ ತಿರುಗಾಡುವ ಪಕ್ಷಿಯು ಚಂಚಲವಾದ ಕಣ್ಣಿಗೆ ಸಮಾನವೆನಿಸಿದೆ. ಹಾಗೆಯೇ ಕಮಲವು ಸಹಜವಾಗಿ ಮುಖಕ್ಕೆ ಸದೃಶವಾಗಿದೆ. ಹೀಗೆ ಎಲ್ಲಾವಿಧದಲ್ಲೂ ಮುಖಕ್ಕೆ ಸದೃಶವಾದ ಕಮಲವನ್ನು ಕಂಡದ್ದರಿಂದ ಅಂತಹ ಕಣ್ಣುಗಳಿರುವ ಮುಖದ ಸ್ಮರಣವಾಗುವುದರಿಂದ ಇದು ಸ್ಮರಣಾಲಂಕಾರವೆನಿಸಿದೆ. 'ಮಯಿ ಸಕಪಟಂ' ಎಂಬ ಪದ್ಯದಲ್ಲಿ ಸ್ಮರಣವು ಸದೃಶವಸ್ತುವಿನ ಅನುಭವವಿಲ್ಲದೆಯೇ

ಹುಟ್ಟುವುದರಿಂದ ಅದು ಅಲಂಕಾರವೆನಿಸುವುದಿಲ್ಲ. ಸಂಸ್ಕಾರದ ಪ್ರೇರಣೆಯಂತೆ ಸದೃಶವಸ್ತು ಒಂದರ ಅರಿವಿನಿಂದ ತೋರುವ ಸ್ಮೃತಿಯೇ ಅಲಂಕಾರವಾಗಬಲ್ಲದು. ಆದರೆ ಚಿಂತೆ ಮೊದಲಾದವುಗಳಿಂದ ಹುಟ್ಟುವ ಸ್ಮೃತಿಯು ಅಲಂಕಾರವೆನಿಸಲಾರದು. ಅದಕ್ಕಾಗಿಯೇ ಮೂಲದಲ್ಲಿ 'ಸದೃಶಾನುಭವಾತ್' ಎಂದು ಸ್ಮೃತಿಗೆ ಕಾರಣವನ್ನು ತಿಳಿಸಲಾಗಿದೆ. ರಾಘವಾನಂದರಾದರೋ ಸದೃಶವಲ್ಲದ ವಸ್ತುವನ್ನು ಅನುಭವಿಸಿದಾಗ ಹುಟ್ಟುವ ಸ್ಮೃತಿಯನ್ನೂ ಸಹ ಸ್ಮರಣಾಲಂಕಾರವೆಂದು ಕರೆದಿದ್ದಾರೆ. ಅವರದೇ ಉದಾಹರಣವೂ ಇದೆ. "ಮಲ್ಲಿಗೆ ಹೂವಿನಂತೆ ಮೃದುವಾದ ಸೀತೆಯು ಬೆಟ್ಟಗಳಲ್ಲಿ ಸಂಚರಿಸುತ್ತ ಯಾವ್ಯಾವಾಗ ನೂರಾರು ದುಃಖಗಳನ್ನು ಅನುಭವಿಸಿದಳೋ ಆಗಾಗಲೆಲ್ಲ ರಾಮನು ಅರಮನೆಯಲ್ಲಿ ಅವಳು ಹಿಂದೆ ಅನುಭವಿಸುತ್ತಿದ್ದ ಸುಖಸಂಪತ್ತುಗಳನ್ನು ಕಣ್ಣೀರಿಡುತ್ತಲೇ ಸ್ಮರಿಸಿಕೊಂಡನು" ಇಲ್ಲಿ ಹಿಂದಿನ ಸುಖಗಳಿಗೆ ಸದೃಶವಲ್ಲದ ಅರಣ್ಯವಾಸದ ದುಃಖಗಳ ದರ್ಶನದಿಂದ ಅವಕ್ಕೆ ಸಂಬಂಧಿಸದೇ ಇರುವ ಸುಖಗಳ ಸ್ಮರಣವುಂಟಾಗುವುದರಿಂದ ಇದು ಸದೃಶಾಲಂಕಾರವೆನಿಸಿದೆ.

ವ್ಯಂಗ್ಯಾರ್ಥಕ್ಕೆ ಸದೃಶವೆನಿಸಿದ ಅಲಂಕಾರಗಳಲ್ಲಿ. ರೂಪಕಾಲಂಕಾರವು ಪ್ರಧಾನವೂ ಪ್ರಸಿದ್ಧವೂ ಆದ್ದರಿಂದ ಈಗ ಅದರ ಲಕ್ಷಣವನ್ನು ತಿಳಿಸುತ್ತಾನೆ. ಶಬ್ದದಿಂದಾಗಲೀ ಅರ್ಥದಿಂದಾಗಲೀ ನಿಷೇಧಿಸಲಿಕ್ಕಾಗದಿರುವ ಉಪಮೇಯದಲ್ಲಿ ಉಪಮಾನದ ಅಭೇದವನ್ನು ಸಾದೃಶ್ಯದ ಆಧಾರದಮೇಲೆ ಆರೋಪಿಸುವುದೇ ರೂಪಕವೆನಿಸುವುದು. ಉಪಮೇಯದಲ್ಲಿ ಉಪಮಾನದ ಅಭೇದವನ್ನು ಆರೋಪಿಸುವುದೇ ರೂಪಕವೆಂದು ಇದರಿಂದ ತಿಳಿಯುತ್ತದೆ. ಉಪಮಾನದ ಅಭೇದವನ್ನು ಆರೋಪಿಸುವುದಷ್ಟೇ ರೂಪಕವೇ ಹೊರತು ಅದು ಪ್ರಕೃತಕಾಯಕ್ಕೆ ಉಪಯೋಗವಾಗಬೇಕೆಂಬ ನಿಯಮವಿಲ್ಲ. ಆದ್ದರಿಂದ ಇದು ಪರಿಣಾಮಕ್ಕಿಂತ ಬೇರೆ ಎಂಬುದು ತಿಳಿದುಬರುವುದು. ಇಲ್ಲಿ ಉಪಮೇಯದಲ್ಲಿ ಉಪಮಾನವಷ್ಟರ ಅಭೇದವನ್ನು ಆರೋಪಿಸಿದರೆ ಪರಿಣಾಮದಲ್ಲಿ ಉಪಮೇಯದಲ್ಲಿ ಆರೋಪಿಸಬೇಕಾದ ಉಪಮಾನಾಭೇಧವು ಪ್ರಕೃತಕಾರ್ಯಕ್ಕೆ ಉಪಯೋಗವಾಗಬೇಕೆಂಬ ನಿಯಮವಿದೆ. ಶಬ್ದದಿಂದಲೂ ಅರ್ಥದಿಂದಲೂ ನಿಷಿದ್ಧವಾದ ಉಪಮೇಯದಲ್ಲಿ ಉಪಮಾನದ ಅಭೇದವನ್ನಾರೋಪಿಸುವುದೇ ಅಪಹ್ನುತಿ ಎನಿಸಿದರೆ ಹಾಗೆ ನಿಷಿದ್ಧವಲ್ಲದ ಉಪಮೇಯದಲ್ಲಿ ಉಪಮಾನವನ್ನಾರೋಪಿಸುವುದೇ ರೂಪಕವೆಂದು ಇವೆರಡಕ್ಕೂ ಇರುವ ಭೇದವನ್ನು ನಿರಪಹ್ನವೇ ಎಂಬುದು ತಿಳಿಸುತ್ತದೆ. ಇದು ಪರಂಪರಿತ, ಸಾಂಗ, ನಿರಂಗ ಎಂದು ಮೂರು ಬಗೆಯಾಗಿದೆ. ಕಾರ್ಯಕಾರಣಭಾವಶ್ರೇಣಿಯುಳ್ಳದ್ದು, ಅಭೇದವನ್ನು ತಿಳಿಸುವ ಎಲ್ಲ ಅಂಗಗಳೊಡಗೂಡಿದ್ದು, ಯಾವುದಾದರೊಂದು ಅಂಗದಿಂದ ಕೂಡಿದ್ದು ಹೀಗೆ ರೂಪಕವು ಮೂರು ಬಗೆಯಾಗಿದೆ, ಒಂದರಲ್ಲಿ ಒಂದನ್ನು ಆರೋಪಿಸಿದ್ದು ಮತ್ತೊಂದರ ಆರೋಪಕ್ಕೆ ಕಾರಣವೆನಿಸಿದರೆ ಆ ಬಗೆಯ ರೂಪಣವು ಪರಂಪರಿತವೆನಿಸುವುದು. ಇದರಲ್ಲಿ ಕೆಲವು ಕಡೆ ಶ್ಲಿಷ್ಟಶಬ್ದಗಳ ಪ್ರಯೋಗವಿರುತ್ತದೆ. ಕೆಲವು ಕಡೆ ಸಾಧಾರಣಶಬ್ದಗಳ ಪ್ರಯೋಗವೂ ಇರುತ್ತದೆ. ಹೀಗೆ

ಪರಂಪರಿತರೂಪಕವು ಎರಡು ಬಗೆಯಾಗುತ್ತವೆ. ಇವುಗಳಲ್ಲಿ ಒಂದೊಂದೂ ಕೇವಲ (ಒಂದೇಬಗೆಯಾದದ್ದು) ಮಾಲೆ (ಅನೇಕಬಗೆಯಾದದ್ದು) ಹೀಗೆ ಎರಡು ಬಗೆಯಾಗುವುದರಿಂದ ಇದು ಒಟ್ಟು ನಾಲ್ಕು ಬಗೆಯಾಗುತ್ತದೆ. ಅವುಗಳಲ್ಲಿ ಶ್ಲಿಷ್ಟಶಬ್ದಪ್ರಯೋಗ ಕೇವಲ ಪರಂಪರಿತರೂಪಕವನ್ನು ಉದಾಹರಿಸುತ್ತಾನೆ. "ಜಗತ್ತಿನಲ್ಲೆಲ್ಲಾ ಉತ್ಕೃಷ್ಟವೆನಿಸಿದ ಸೈನ್ಯವುಳ್ಳ ನೃಸಿಂಹಮಹಾರಾಜನೇ, ಯುದ್ಧದಲ್ಲಿ ಶತ್ರುರಾಜರ ಸಮೂಹವೆಂಬ ಚಂದ್ರಮಂಡಲವನ್ನು ನಾಶಪಡಿಸುವುದರಿಂದ ರಾಹುವೆನಿಸಿದ ಭುಜಕ್ಕೆ ಕ್ಷೇಮವುಂಟಾಗಲಿ" ಇಲ್ಲಿ ರಾಜರ ಸಮೂಹದಲ್ಲಿ ಚಂದ್ರಮಂಡಲವನ್ನು ಆರೋಪಿಸದೆ ಇದ್ದರೆ ರಾಜನ ತೋಳಿನಲ್ಲಿ ರಾಹುವೆಂಬುದನ್ನು ಆರೋಪಿಸಲು ಸಾದೃಶ್ಯವಿಲ್ಲದ್ದರಿಂದ ಸಾಧ್ಯವಾಗುವುದಿಲ್ಲ. ಆದ್ದರಿಂದ ಹಿಂದಿನ ಆರೋಪವು ಮುಂದಿನ ಆರೋಪಕ್ಕೆ ನಿಮಿತ್ತವೆನಿಸಿದೆ. ರಾಜಮಂಡಲ ಎಂಬಲ್ಲಿ ಶ್ಲಿಷ್ಟಶಬ್ದಪ್ರಯೋಗವಿದೆ. ಆದರೂ ಇಲ್ಲಿ ತೋರುವ ಕಾರ್ಯಕಾರಣಭಾವವು ಮಾತ್ರ ಒಂದೇ ಬಗೆ ಎನಿಸುವುದರಿಂದ ಇದು ಕೇವಲ ಪರಂಪರಿತವೆನಿಸಿದೆ.

ಮಾಲೆ ಎನಿಸಿದ ಪರಂಪರಿತರೂಪಕವನ್ನು ಉದಾಹರಿಸುತ್ತಾನೆ. "ಎಲೈರಾಜನೇ, ಭೂಮಿಯಲ್ಲಿ ನೀನೊಬ್ಬನೇ ಸಂಪತ್ತಿನ ಉದಯಕ್ಕೂ, ಕಮಲಗಳ ವಿಕಾಸಕ್ಕೂ ಸೂರ್ಯನೆನಿಸಿರುವೆ. (ಒಬ್ಬ ಸೂರ್ಯನೇ ಕಮಲಗಳನ್ನು ಅರಳಿಸುವಂತೆ ನೀನೊಬ್ಬನೇ ಭೂಮಿಯಲ್ಲಿ ಅಸಾಧಾರಣಸಂಪತ್ಸಮೃದ್ಧಿಯನ್ನು ನೀಡುವೆ. ಸತ್ಪುರುಷರ ಆಗಮನವೆಂಬ ನಿರಂತರಗತಿಯಲ್ಲಿ ವಾಯುವೆನಿಸಿರುವೆ. (ಗಾಳಿ ಯಾವಾಗಲೂ ಸಂಚರಿಸುವಂತೆ ನೀನು ದಾನಮಾನಗಳಿಂದ ಸಾಧುಗಳನ್ನು ಯಾವಾಗಲೂ ಗೌರವಿಸುತ್ತಿರುವೆ.) ಹಾಗೆಯೇ ಶತ್ರುರಾಜರೆಂಬ ಪರ್ವತಗಳ ಸಮೂಹಕ್ಕೆ ವಜ್ರಾಯುಧವೆನಿಸಿರುವೆ. (ಇಂದ್ರನು ಬೆಟ್ಟಗಳನ್ನು ನಾಶಗೊಳಿಸಿದಂತೆ ನೀನು ಶತ್ರುಗಳನ್ನು ನಾಶಪಡಿಸಿರುವೆ.)" ಇಲ್ಲಿ ಲಕ್ಷ್ಮಿಯ ಉದಯವೇ ಕಮಲಗಳ ಉದಯ. ಸತ್ಪುರುಷರು ಅರಮನೆಗೆ ಬರುವುದೇ ರಾಜನ ಸದಾಗಮ, ಶತ್ರುರಾಜರೆಂಬ ಪರ್ವತಗಳು; ಈ ಬಗೆಯ ಆರೋಪವು ರಾಜನನ್ನು ಸೂರ್ಯನೆಂದು ಆರೋಪಿಸಲು ನಿಮಿತ್ತವೆನಿಸಿದೆ.

ಅಶ್ಲಿಷ್ಟಶಬ್ದಗಳನ್ನು ಸೇರಿಸಿದ ಕಡೆ ಕೇವಲಪರಂಪರಿತರೂಪಕವಿರುವುದಕ್ಕೆ ಉದಾಹರಣ ಹೀಗಿದೆ. "ಮೇಘದಂತೆ ಕಪ್ಪುಬಣ್ಣದ್ದಿದ್ದು, ಧನುಸ್ಸಿನ ಹಗ್ಗದ ಹೊಡೆತದಿಂದ ಕಠಿಣವೆನಿಸಿದ್ದು, ಮೂರುಲೋಕಗಳೆಂಬ ಮಂಟಪದ ಸ್ತಂಭವೆನಿಸಿದ ಹರಿಯ ನಾಲ್ಕು ಭುಜಗಳು ನಿಮ್ಮನ್ನು ಕಾಪಾಡಲಿ" ಇಲ್ಲಿ ತ್ರೈಲೋಕ್ಯದಲ್ಲಿ ಮಂಟಪವೆಂದು ಆರೋಪಿಸಿದ್ದು ಹರಿಯ ಭುಜಗಳಲ್ಲಿ ಸ್ತಂಭವೆಂಬುದನ್ನು ಆರೋಪಿಸಲು ನಿಮಿತ್ತವೆನಿಸಿದೆ. ಇಲ್ಲಿ ಯಾವ ಒಂದು ಶಬ್ದವೂ ಶ್ಲಿಷ್ಟವಾಗಿಲ್ಲ. ಹಾಗೆಯೇ ಕಾರ್ಯಕಾರಣಭಾವವೂ ಒಮ್ಮುಖವಾಗಿದೆ. ಆದ್ದರಿಂದ ಇದು ಕೇವಲ ಪರಂಪರಿತವೆನಿಸಿದೆ. ಇದೆಯೇ ಮಾಲೆ ಎನಿಸಿದರೆ ಅದನ್ನು ಉದಾಹರಿಸುತ್ತಾನೆ. "ಮನ್ಮಥನೆಂಬ ರಾಜನ ಶ್ವೇತಛತ್ರವೆನಿಸಿ, ದಿಕ್ಕೆಂಬ ಸ್ತ್ರೀಗೆ ಶ್ರೀಗಂಧದ ತಿಲಕವೆನಿಸಿ, ಹಾಗೆಯೇ ಆಕಾಶವೆಂಬ

ರೋವರಕ್ಕೆ ಕಮಲವೆನಿಸಿ, ಕರ್ಪೂರದ ಕಂಭಕ್ಕೆ ಸವೃಶವೆನಿಸಿದ ಚಂದ್ರಮಂಡಲವು ಶೋಭಿಸುತ್ತಿದೆ" ಇಲ್ಲಿ ಮನ್ಮಥನಲ್ಲಿ ರಾಜನೆಂದೂ, ದಿಕ್ಕಿನಲ್ಲಿ ಅಂಗನೆ ಎಂದೂ, ಆಕಾಶದಲ್ಲಿ ಸರೋವರವೆಂದೂ ಆರೋಪಿಸಿದ್ದು ಚಂದ್ರಮಂಡಲದಲ್ಲಿ ಶ್ವೇತಚ್ಛತ್ರವೆಂದು ಮುಂತಾಗಿ ಆರೋಪಿಸಲಿಕ್ಕೆ ನಿಮಿತ್ತವೆನಿಸಿದೆ. ಅವರಲ್ಲೂ ಹಿಂದೆ ರಾಜಭುಜಗಳಲ್ಲಿ ರಾಹುವೆಂದು ಆರೋಪಿಸಿದ್ದು ರಾಜಮಂಡಲವನ್ನು ಆರೋಪಿಸಲು ನಿಮಿತ್ತವೆನಿಸಿದೆ ಎಂದು ಕೆಲವರು ಹೇಳುತ್ತಾರೆ.

ಅಪೇಕ್ಷಿತವಾದ ಅಂಗಗೊಳಗೂಡಿದ ಪ್ರಧಾನವಾದ ಉಪಮಾನದ ಅಭೇದವನ್ನು ಅಂತಹ ಅಂಗದಲ್ಲಿಯೇ ಆರೋಪಿಸುವುದಾದರೆ ಅಂಗದಲ್ಲಿಯೇ ಆರೋಪಿಸುವುದಾದರೆ ಅದು ಸಾಂಗರೂಪಕವೆನಿಸುವುದು. ಸಾವಯವವೆನಿಸಿದ ಉಪಮೇಯದಲ್ಲಿ ಸಾವಯುವವೆನಿಸಿದ ಉಪಮಾನದ ಅಭೇದವನ್ನು ಆರೋಪಿಸುವುದೇ ಸಾಂಗರೂಪಕವೆನಿಸುವುದು. ಇದು ಸಮಸ್ತವಸ್ತುವಿಷಯ, ಏಕದೇಶವಿವರ್ತಿ ಎಂದು ಎರಡು ಬಗೆಯಾಗುತ್ತದೆ. ಅಂಗಾಂಗಿಸಮುದಾಯರೂಪಕದಲ್ಲಿ ಸಮಸ್ತವಸ್ತುಗಳೂ ರೂಪಕದಲ್ಲಿ ವಿಷಯವೆನಿಸಿದ್ದರಿಂದ ಇದು ಸಮಸ್ತವಸ್ತುವಿಷಯವೆನಿಸಿದೆ. ಒಂದು ಅಂಶದಲ್ಲಿ ರೂಪಕವು ವಿಶೇಷವಾಗಿ ನೆಲಸಿರುವುದರಿಂದ ಇದು ಏಕದೇಶವಿವರ್ತಿ ಎನಿಸಿದೆ. ಆರೋಪಕ್ಕೆ ವಿಷಯವೆನಿಸಿದ ಉಪಮೇಯಗಳನ್ನು ಮತ್ತು ಉಪಮಾನಗಳನ್ನು ಶಬ್ದದಿಂದಲೇ ತಿಳಿಸಿದ್ದರೆ ಅದು ಸಮಸ್ತವಸ್ತುವಿಷಯವೆನಿಸುವುದು. "ಶ್ರೀಕೃಷ್ಣನೆಂಬ ಮೇಘವು ದೇವತೆಗಳೆಂಬ ಸಸ್ಯಗಳನ್ನು ರಾವಣನೆಂಬ ವೃಷ್ಟಿಪ್ರತಿಬಂಧದಿಂದ ಬಳಲಿದ್ದವೆಂದು ಅವಕ್ಕೆ ವಾಕ್ಕೆಂಬ ಅಮೃತವನ್ನು ಸುರಿಸಿ ಕಣ್ಮರೆಯಾಯಿತು." ಇಲ್ಲಿ ಕೃಷ್ಣನಲ್ಲಿ ಮೇಘವೆಂದು ಆರೋಪಿಸಲಾಗಿದೆ. ಕೃಷ್ಣನಲ್ಲಿ ಮೇಘವೆಂಬುದನ್ನು ಆರೋಪಿಸುವುದೇ ಇಲ್ಲಿ ಪ್ರಧಾನವಾಗಿದ್ದು ಅದಕ್ಕೆ ಅಂಗವೆನಿಸಿದ ರೂಪಕಗಳೆಲ್ಲವನ್ನೂ ಇಲ್ಲಿ ಶಬ್ದದಿಂದ ಸ್ಪಷ್ಟವಾಗಿ ತಿಳಿಸಲಾಗಿದೆ.

ಎಲ್ಲಿ ಆರೋಪಿಸಬೇಕಾಗಿರುವ ಕೆಲವು ಅಂಶಗಳನ್ನು ಶಬ್ದದಿಂದ ತಿಳಿಸದೆ ಅರ್ಥದಿಂದ ಸೂಚಿಸಲಾಗುವುದೋ ಅದು ಏಕದೇಶವಿವರ್ತಿಸಾಂಗರೂಪಕವೆನಿಸುತ್ತದೆ. ಜನರ ಕಣ್ಣುಗಳೆಂಬ ದುಂಬಿಗಳ ಯಾವ ಸಮೂಹಗಳು ಸೌಂದರ್ಯವೆಂಬ ಮಕರಂದದಿಂದ ತುಂಬಿ ಪ್ರಕಾಶಿಸುತ್ತಿರುವ ಈ ಕಾಮಿನಿಯ ಮುಖವನ್ನು ಪಾನಮಾಡುವುದಿಲ್ಲ? ಅಂದರೆ ಎಲ್ಲರೂ ಕುಡಿಯುವರೆಂದು ಅರ್ಥ." ಇಲ್ಲಿ ಸೌಂದರ್ಯದಲ್ಲಿ ಮಕರಂದವನ್ನು ಶಬ್ದದಿಂದಲೇ ಆರೋಪಿಸಲಾಗಿದೆ. ಆದರೆ ಮುಖದಲ್ಲಿ ಪದ್ಮವನ್ನಾರೋಪಿಸಿರುವುದು ಅರ್ಥದಿಂದಲೇ ತೋರಬೇಕಾಗಿದೆ. ವಿಕಸ್ವರವೆಂಬ ಪದದ ತಾತ್ಪರ್ಯದಿಂದ ಈ ಅಂಶವು ಸ್ಪಷ್ಟವಾಗುವುದು. ಇಲ್ಲಿ ಲಾವಣ್ಯಾನಿ ಮಧೂನೀವ, ಲೋಕಲೋಚನಾನಿ ರೋಲಂಬಾ ಇವ ಎಂದು ಉಪಮಿತಸಮಾಸವನ್ನು ಮಾಡಿದರೆ ಸಾದೃಶ್ಯವು ವಾಚ್ಯವೇ ಆಗುವುದರಿಂದ ಮುಖದಲ್ಲಿ ಕಮಲದ ಸಾಮ್ಯವು ಆಗ ವ್ಯಂಗ್ಯವಾಗಿ ತೋರುವ ಪ್ರಯುಕ್ತ ಇದು ಏಕದೇಶವಿವರ್ತಿ ಉಪಮೆಯೇ ಆಗಲಿ ಅಂದರೆ ಅದು ಹೊಂದುವು

ದಿಲ್ಲವೆಂದು ತಿಳಿಸುತ್ತಾನೆ. ಇಲ್ಲಿ ಆರೋಪಿಸಬೇಕಾಗಿರುವ ಪದ್ಮದಲ್ಲಿ (ವಿಕಸ್ವರ) ಪ್ರಕಾಶಮಾನವೆಂಬ ಧರ್ಮವು ಮುಖ್ಯವಾಗಿಯೇ ಇರುವ ಪ್ರಯುಕ್ತ ಮುಖದಲ್ಲಿ ಅದನ್ನು ಔಪಚಾರಿಕವಾಗಿ ಪ್ರಯೋಗಿಸಲಾಗಿದೆ. ಆದ್ದರಿಂದ ಈ ಪದವು ರೂಪಕಕ್ಕೆ ಸಾಧಕವೇ ಹೊರತು ಉಪಮೆಗೆ ಸಾಧಕವಾಗಿಲ್ಲ. ಸಾಮ್ಯವು ಅಂಶದಿಂದ ವಾಚ್ಯವಾಗಿದ್ದು ಅಂಶದಿಂದ ವ್ಯಂಗ್ಯವಾಗಿದ್ದರೆ ಅದು ಏಕದೇಶವಿವರ್ತಿನಿಉಪಮೆ ಎನಿಸುವುದು. ಸಾಮ್ಯವು ಸರ್ವಥಾ ವ್ಯಂಗ್ಯವೇ ಆಗಿದ್ದರೆ ಅದು ಏಕದೇಶವಿವರ್ತಿರೂಪಕವೆನಿಸುತ್ತದೆ. ಈಗ ನಿರಂಗರೂಪಕವನ್ನು ತಿಳಿಸುತ್ತಾನೆ. ಯಾವ ಅಂಗಗಳೂ ಇಲ್ಲದೆ ಇರುವ ಉಪಮಾನದ ಅಭೇದವನ್ನು ಅಂತಹ ಉಪಮೇಯದಲ್ಲಿ ಆರೋಪಿಸುವುದೇ ನಿರಂಗರೂಪಕವೆನಿಸುವುದು. ಇದೂ ಸಹ ಮಾಲೆ, ಕೇವಲ ಎಂದು ಎರಡು ಬಗೆಯಾಗುತ್ತದೆ. ಮಾಲೆ ಎನಿಸಿದ ನಿರಂಗರೂಪಕವನ್ನು ಉದಾಹರಿಸುತ್ತಾನೆ. "ಆ ಈ ಪ್ರೇಯಸಿಯು ಬ್ರಹ್ಮಸೃಷ್ಟಿಯ ನೈಪುಣ್ಯವೆನಿಸಿದ್ದು. ಲೋಕದ ಜನರೆಲ್ಲರ ಕಣ್ಣುಗಳಿಗೆ ಚಂದ್ರಿಕೆ ಎನಿಸಿರುವಳು. (ಅದರಂತೆ ಆನಂದವನ್ನುಂಟುಮಾಡುವಳು) ಹಾಗೆಯೇ ಮನ್ಮಥನ ವಿಹಾರಕೇಂದ್ರವೆನಿಸಿರುವಳು. (ಆಕೆಯ ದರ್ಶನವಷ್ಟರಿಂದಲೇ ಯುವಕರಿಗೆ ಕಾಮೋದ್ರೇಕವುಂಟಾಗುವುದು.)" ಇಲ್ಲಿ ಪ್ರೇಯಸಿಯ ನೋಟವೆಂಬ ಉಪಮೇಯದಲ್ಲಿ ನಿರ್ಮಾಣ ಕೌಶಲ ಮೊದಲಾದ ಮೂರು ಉಪಮಾನಗಳ ಅಭೇದವನ್ನು ಆರೋಪಿಸಲಾಗಿದೆ. ಇಲ್ಲಿ ಉಪಮೇಯ ಮತ್ತು ಉಪಮಾನಗಳೆಲ್ಲವೂ ನಿರವಯವವೂ ಮಾಲಾರೂಪವೂ ಆಗಿವೆ. ಇದು ಮಾಲೆ ಎನಿಸದೆ ಕೇವಲವೆನಿಸಿದ್ದರೆ ಅದರ ಉದಾಹರಣವು ಹೀಗಿದೆ. "ಪ್ರೇಯಸಿಯು ಕೋಪಿಸಿಕೊಂಡಾಗ ಅವಳ ಪಾದದಲ್ಲಿ ಬಿದ್ದು ಅವಳ ಪಾದದಿಂದಲೇ ತುಳಿಸಿಕೊಂಡಿರುವ ನಾಯಕನು ಮತ್ತೆ ಅವಳನ್ನು ಹೀಗೆ ಸಮಾಧಾನ ಮಾಡುತ್ತಾನೆ. "ಎಲೈ ಸುಂದರಿ, ತಪ್ಪುಮಾಡಿರುವ ದಾಸನಲ್ಲಿ ಯಜಮಾನನು ಕಾಲಿನಿಂದ ಒದೆಯುವುದು ನ್ಯಾಯವೆನಿಸುತ್ತದೆ. ಆದ್ದರಿಂದ ನಿನ್ನ ಪಾದಪ್ರಹಾರಕ್ಕೆ ನನಗೆ ವ್ಯಥೆಯಾಗಲಿಲ್ಲ. ಆದರೆ ನಿನ್ನ ಪಾದಸ್ಪರ್ಶದಿಂದಲೇ ಹುಟ್ಟಿ ದೃಢವಾಗಿರುವ ರೋಮಾಂಚಗಳೆಂಬ ಮುಳ್ಳುಗಳ ತುದಿಗಳಿಂದ ನಿನ್ನ ಕೋಮಲವಾದ ಪಾದಗಳಿಗೆ ನೋವಾಗುವುದೆಂಬುದೊಂದೇ ನನಗೆ ಹೆಚ್ಚಿನ ವ್ಯಥೆ ಎನಿಸಿದೆ." ಇಲ್ಲಿ ರೋಮಾಂಚವೆಂಬ ಉಪಮೇಯದಲ್ಲಿ ಮುಳ್ಳೆಂಬ ಉಪಮಾನದಿಂದ ಅಭೇದವನ್ನು ಆರೋಪಿಸುವುದರಿಂದ ಇದು ನಿರಂಗರೂಪಕವೆನಿಸಿದೆ. ಇಲ್ಲಿ ಉಪಮೇಯ ಮತ್ತು ಉಪಮಾನ ಇವೆರಡು ವಸ್ತುಗಳಿಗೂ ಬೇರೆ ಯಾವ ಅವಯವಗಳೂ ಇಲ್ಲದ್ದರಿಂದ ಇದು ಕೇವಲ ನಿರಂಗರೂಪಕವೆನಿಸಿದೆ. ಹೀಗೆ ರೂಪಕದಲ್ಲಿ ಎಂಟು ಬಗೆಗಳಾಗುತ್ತವೆ ಎಂದು ಪ್ರಾಚೀನರು ಹೇಳಿದ್ದಾರೆ. ಕೆಲವು ಕಡೆಗಳಲ್ಲಿ ಪರಂಪರಿತರೂಪಕವೂಸಹ ಏಕದೇಶವಿವರ್ತಿಯಾಗಬಹುದು. ಅದನ್ನು ಉದಾಹರಿಸುತ್ತಾನೆ. "ಮಾಲವದೇಶದ ರಾಜನ ಹೆಂಡತಿ ಎನಿಸಿದ ಭೂದೇವಿಗೆ ಕಂಚುಕಿ ಎನಿಸಿದ ಖಡ್ಗವು ಸಮುತ್ಕೃಷ್ಟವೆನಿಸಿದೆ." ಇಲ್ಲಿ ಭೂದೇವಿಯಲ್ಲಿ ಹೆಂಡತಿ ಎಂಬ ಆರೋಪವು ಖಡ್ಗದಲ್ಲಿ ಕಂಚುಕಿ ಎಂಬ ಆರೋಪಕ್ಕೆ ನಿಮಿತ್ತವೆನಿಸಿದೆ. ಭೂಮಿ

ಯಲ್ಲಿ ಪಟ್ಟದ ರಾಣಿ ಎಂಬುದನ್ನು ಆರೋಪಿಸದೇ ಇದ್ದರೆ ಖಡ್ಗದಲ್ಲಿ ಕಂಚುಕಿ ಎಂಬುದನ್ನು ಆರೋಪಿಸಲಿಕ್ಕಾಗುವುದಿಲ್ಲ. ಆರೋಪಿಸಲಿಕ್ಕೆ ಸಾದೃಶ್ಯವೇ ತೋರುವುದಿಲ್ಲ. ಹೀಗೆಯೇ ಹಿಂದಿನಂತೆ ಮಾಲೆ ಎನಿಸಿದ ರೂಪಕಕ್ಕೂ ಉದಾಹರಣವನ್ನು ಊಹಿಸಿಕೊಳ್ಳುವುದು.

ದೃಶ್ಯಂತೇ ಕ್ವಚಿದಾರೋಪ್ಯಾಃ ಶ್ಲಿಷ್ಟಾಃ ಸಾಂಗೇಽಪಿ ರೂಪಕೇ ।

ತತ್ರೈಕ ದೇಶವಿವರ್ತಿ ಶ್ಲಿಷ್ಟಂ ಯಥಾ ಮಮ—

ಕರಮುದಯಮಹೀಧರಸ್ತನಾಗ್ರೇ ಗಲಿತತಮಃಪಟಲಾಂಶುಕೇ ನಿವೇಶ್ಯ ।
ವಿಕಸಿತಕುಮುದೇಕ್ಷಣಂ ವಿಚುಂಬತ್ಯಯಮಮರೇಶದಿಶೋ ಮುಖಂ ಸುಧಾಂಶುಃ ॥

ಸಮಸ್ತವಸ್ತುವಿಷಯಂ ಯಥಾ ಅತ್ರೈವ-'ವಿಚುಂಬತಿ' ಇತ್ಯಾದೌ "ಚುಚುಂಬೆ ಹರಿದಬಲಾಮುಖಮಿಂದುನಾಯಕೇನ" ಇತಿ ಪಾಠೇ. ನ ಚಾತ್ರ ಶ್ಲಿಷ್ಟ ಪರಂಪರಿತಮ್. ತತ್ರ ಹಿ 'ಭೂಭೃದಾವಲೀದಂಭೋಲಿಃ' ಇತ್ಯಾದೌ ರಾಜಾದೌ ಪರ್ವತತ್ವಾದಿರೂಪಣಂ ವಿನಾ ವರ್ಣನೀಯಸ್ಯ ರಾಜಾದೇರ್ದಂಭೋಳಿತಾದಿರೂಪಣಂ ಸರ್ವಥೈವ ಸಾದೃಶ್ಯಾಸಂಭವಾತ್ ಅಸಂಗತಮ್. ತರ್ಹಿ ಕಥಂ 'ಪದ್ಮೋದಯದಿನಾಧೀಶಃ' ಇತ್ಯಾದೌ ಪರಂಪರಿತಮ್, ರಾಜಾದೇಃ ಸೂರ್ಯಾದಿನಾ ಸಾದೃಶ್ಯಸ್ಯ ತೇಜಸ್ವಿತಾದಿಹೇತುಕಸ್ಯ ಸಂಭವಾದಿತಿ ನ ಚ ವಾಚ್ಯಮ್; ತಥಾಹಿ ರಾಜಾದೇಸ್ತೇಜಸ್ವಿತಾದಿಹೇತುಕಂ ಸುವ್ಯಕ್ತಂ ಸಾದೃಶ್ಯಂ ನ ತು ಪ್ರಕೃತೇ ವಿವಕ್ಷಿತಮ್, ಪದ್ಮೋದಯಾದೇರೇವ ದ್ವಯೋಃ ಸಾಧಾರಣಧರ್ಮತಯಾ ವಿವಕ್ಷಿತತ್ವಾತ್ ಇಹ ತು ಮಹೀಧರಾದೇಃ ಸ್ತನಾದಿನಾ ಸಾದೃಶ್ಯಂ ಪೀನೋತ್ತುಂಗತ್ವಾದಿನಾ ಸುವ್ಯಕ್ತಮೇವೇತಿ ನ ಶ್ಲಿಷ್ಟಂಪರಂಪರಿತಮ್.

ಕ್ವಚಿತ್ಸಮಾಸಾಭಾವೇಽಪಿ ರೂಪಕಂ ದೃಶ್ಯತೇ. ಯಥಾ—

ಮುಖಂ ತವ ಕುರಂಗಾಕ್ಷಿ! ಸರೋಜಮಿತಿ ನಾನ್ಯಥಾ !

ಕ್ವಚಿತ್ ವೈಯಧಿಕರಣ್ಯೇಽಪಿ. ಯಥಾ—

ವಿದಧೇ ಮಧುಪಶ್ರೇಣೀಮಿಹ ಭ್ರೂಲತಯಾ ವಿಧಿಃ ।

ಕ್ವಚಿತ್ ವೈಧರ್ಮ್ಯೇಽಪಿ. ಯಥಾ—

ಸೌಜನ್ಯಾಂಬುಮರುಸ್ಥಲೀ ಸುಚರಿತಾಲೇಖ್ಯದ್ಯುಭಿತ್ತಿರ್ಗುಣ
ಜ್ಯೋತ್ಸ್ನಾಕೃಷ್ಣಚತುರ್ದಶೀ ಸರಳತಾಯೋಗಶ್ವಪುಚ್ಛಚ್ಛಟಾ ।
ಯೈರೇಷಾಪಿ ದುರಾಶಯಾ ಕಲಿಯುಗೇ ರಾಜಾವಲೀ ಸೇವಿತಾ
ತೇಷಾಂ ಶೂಲಿನಿ ಭಕ್ತಿಮಾತ್ರಸುಲಭೇ ಸೇವಾ ಕಿಯತ್ ಕೌಶಲಮ್ ।

ಇದಂ ಮಮ. ಅತ್ರ ಚ ಕೇಷಾಂಚಿದ್ರೂಪಕಾಣಾಂ ಶಬ್ದಶ್ಲೇಷಮೂಲತ್ವೇಽಪಿ ರೂಪಕವಿಶೇಷತ್ವಾದರ್ಥಾಲಂಕಾರಮಧ್ಯೇ ಗಣನಮ್.

ಏವಂ ವಕ್ಷ್ಯಮಾಣಾಲಂಕಾರೇಷು ಬೋದ್ಧವ್ಯಮ್:

ಅಧಿಕಾರೂಢವೈಶಿಷ್ಟ್ಯಂ ರೂಪಕಂ ಯತ್ತದೇವ ತತ್ ।

ತದೇವ ಅಧಿಕಾರೂಢವೈಶಿಷ್ಟ್ಯಸಂಜ್ಞಕರೂಪಕಮ್. ಯಥಾ ಮಮ—

ಇದಂ ವಕ್ತ್ರಂ ಸಾಕ್ಷಾದ್ವಿರಹಿತಕಳಂಕಃ ಶಶಧರಃ
ಸುಧಾಧಾರಾಧಾರಶ್ಚಿರಪರಿಣತಂ ಬಿಂಬಮಧರಃ ।
ಇಮೇ ನೇತ್ರೇ ರಾತ್ರಿಂದಿವಮಧಿಕಶೋಭೇ ಕುವಲಯೇ
ತನುರ್ಲಾವಣ್ಯಾನಾಂ ಜಲಧಿರವಗಾಹೇ ಸುಖತರಃ ॥

ಅತ್ರ ಕಳಂಕರಾಹಿತ್ಯಾದಿನಾ ಅಧಿಕಂ ವೈಶಿಷ್ಟ್ಯಮ್.

ವಿಷಯಾತ್ಮತಯಾರೋಪ್ಯೇ ಪ್ರಕೃತಾರ್ಥೋಪಯೋಗಿನಿ ।
ಪರಿಣಾಮೋ ಭವೇತ್ತುಲ್ಯಾತುಲ್ಯಾಧಿಕರಣೋ ದ್ವಿಧಾ ।

ಆರೋಪ್ಯಮಾಣಸ್ಯ ಆರೋಪವಿಷಯಾತ್ಮತಯಾ ಪರಿಣಮನಾತ್ ಪರಿಣಾಮಃ

ಯಥಾ—ಸ್ಮಿತೇನೋಪಾಯನಂ ದೂರಾದಾಗತಸ್ಯ ಕೃತಂ ಮಮ ।
ಸ್ತನೋಪಪೀಡಮಾಶ್ಲೇಷಃ ಕೃತೋ ದ್ಯೂತೇ ಪಣಸ್ತಯಾ ॥

ಅನ್ಯತ್ರೋಪಾಯನಪಣೌ ವಸನಾಭರಣಾದಿಭಾವೇನ ಉಪಯುಜ್ಯೇತೇ, ಅತ್ರ ತು ನಾಯಕಸಂಭಾವನದ್ಯೂತಯೋಃ ಸ್ಮಿತಾಶ್ಲೇಷರೂಪತಯಾ. ಪ್ರಥಮಾರ್ಧೇ ವೈಯಧಿಕರಣ್ಯೇನ ಪ್ರಯೋಗಃ, ದ್ವಿತೀಯೇ ಸಾಮಾನಾಧಿಕರಣ್ಯೇನ.

ರೂಪಕೇ 'ಮುಖಚಂದ್ರಂ ಪಶ್ಯಾಮಿ' ಇತ್ಯಾದೌ ಆರೋಪ್ಯಮಾಣ ಚಂದ್ರಾದೇಃ ಉಪರಂಜಕತಾಮಾತ್ರಮ್, ನ ತು ಪ್ರಕೃತೇ ದರ್ಶನಾದೌ ಉಪಯೋಗಃ. ಇಹ ತು ಉಪಾಯನಾದೇರ್ವಿಷಯೇಣ ತಾದಾತ್ಮ್ಯಮ್. ಪ್ರಕೃತೇ ಚ ನಾಯಕಸಂಭಾವನಾದೌ ಉಪಯೋಗಃ. ಅತ ಏವ ರೂಪಕೇ ಆರೋಪ್ಯಸ್ಯ ಅವಚ್ಛೇದಕತ್ವಮಾತ್ರೇಣ ಅನ್ವಯಃ, ಅತ್ರ ತು ತಾದಾತ್ಮ್ಯೇನ.

'ದಾಸೇ ಕೃತಾಗಸಿ' ಇತ್ಯಾದೌ ರೂಪಕಮೇವ ನ ತು ಪರಿಣಾಮಃ ; ಆರೋಪ್ಯಮಾಣಕಂಟಕಸ್ಯ ಪಾದಭೇದನಕಾರ್ಯಸ್ಯ ಅಪ್ರಸ್ತುತತ್ವಾತ್. ನ ಖಲು ತತ್ ಕಸ್ಯಚಿದಪಿ ಪ್ರಸ್ತುತಕಾರ್ಯಸ್ಯ ಘಟನಾರ್ಥಮನುಸಂಧೀಯತೇ.

ಅಯಮಪಿ ರೂಪಕವದಧಿಕಾರೂಢವೈಶಿಷ್ಟ್ಯೇ ದೃಶ್ಯತೇ. ಯಥಾ—

ವನೇಚರಾಣಾಂ ವನಿತಾ ಸಖಾನಾಂ ದರೀಗೃಹೋತ್ಸಂಗನಿಷಕ್ತಭಾಸಃ ।
ಭವಂತಿ ಯತ್ರೌಷಧಯೋ ರಜನ್ಯಾಮತೈಲಪೂರಾಃ ಸುರತಪ್ರದೀಪಾಃ ॥

ಅತ್ರ ಪ್ರದೀಪಾನಾಂ ಓಷಧ್ಯಾತ್ಮತಯಾ ಪ್ರಕೃತೇ ಸುರತೋಪಯೋಗಿನ್ಯಂಧಕಾರನಾಶೇ ಉಪಯೋಗಃ. ಅತೈಲಪೂರತ್ವೇನ ಅಧಿಕಾರೂಢವೈಶಿಷ್ಟ್ಯಮ್.

ಪರಂಪರಿತರೂಪಕವು ಏಕದೇಶವಿವರ್ತಿ ಎನಿಸಿದ ಸಾಂಗರೂಪಕವೂ ಆಗ ಬಹುದೆಂಬುದನ್ನು ತೋರಿಸಿ ಈಗ ಸಾಂಗರೂಪಕವೂ ಸಹ ಶ್ಲಿಷ್ಟಪ್ರಯೋಗವನ್ನೊಳಗೊಂಡು ಪರಂಪರಿತರೂಪಕವೂ ಆಗಬಹುದೆಂಬುದನ್ನು ತಿಳಿಸುತ್ತಾನೆ. ಪರಂಪರಿತ ರೂಪಕವಷ್ಟೇ ಅಲ್ಲದೆ ಸಾಂಗರೂಪಕದಲ್ಲೂ ಕೆಲವು ಕಡೆ ಆರೋಪಿಸಬೇಕಾಗಿರುವ

ಉಪಮಾನವನ್ನು ತಿಳಿಸುವ ಪದಗಳು ಶ್ಲೇಷದಿಂದ ಅನೇಕಾರ್ಥಗಳನ್ನು ತಿಳಿಸುವುದಾಗಿ ಕಂಡುಬರುತ್ತವೆ. ಅದರಲ್ಲಿ ಏಕದೇಶವಿವರ್ತಿಶ್ಲಿಷ್ಟರೂಪಕಕ್ಕೆ ಉದಾಹರಣ ಹೀಗಿದೆ. "ಈ ಚಂದ್ರನು ಪೂರ್ವದಿಕ್ಕಿನ ಕತ್ತಲೆ ಎಂಬ ಬಟ್ಟೆಯು ಕೆಳಕ್ಕೆ ಉದರಲು ಉದಯ ಪರ್ವತವೆಂಬ ಎತ್ತರವಾದ ಸ್ತನದ ತುದಿಯಲ್ಲಿ ಕಿರಣವೆಂಬ ಹಸ್ತವನ್ನು ಇಟ್ಟು ತನ್ನ ಉದಯದಿಂದ ಅರಳಿದ ಕನ್ನೈದಿಲೆ ಎಂಬ ಕಣ್ಣಿರುವ ಮುಂಭಾಗವೆಂಬ ಮುಖವನ್ನು ತನ್ನ ಮುಖದಿಂದ ಚುಂಬಿಸುತ್ತಾನೆ" ಇಲ್ಲಿ ನಾಯಕನೆನಿಸಿದ ಚಂದ್ರನೇ ಅಂಗಿ ಎನಿಸಿರುವನು. ಕತ್ತಲೆ ಎಂಬ ಬಟ್ಟೆ ಉದುರಿವಿಕೆ ಮೊದಲಾದವು ಅಂಗವೆನಿಸಿರುವುದರಿಂದ ಈ ಬಗೆಯ ರೂಪಣವು ಸಾಂಗವೆನಿಸಿದೆ. ಹಾಗೆಯೇ ತಮಃಪಟದಲ್ಲಿ ಅಂಶುಕವೆಂದು ಆರೋಪಿಸಿರುವುದನ್ನು ಶಬ್ದದಿಂದಲೇ ತಿಳಿಸಿದೆ. ಪೂರ್ವದಿಕ್ಕಿನಲ್ಲಿ ನಾಯಿಕೆ ಎಂದೂ, ಚಂದ್ರನಲ್ಲಿ ನಾಯಕನೆಂದೂ ಆರೋಪಿಸಿದ್ದು ಅರ್ಥದಿಂದ ತೋರುತ್ತದೆ. ಆದ್ದರಿಂದ ಇದು ಏಕದೇಶಿವಿವರ್ತಿ ಎನಿಸಿದೆ. ಕರ ಮುಖ ಶಬ್ದಗಳು ಶ್ಲಿಷ್ಟವೆನಿಸಿವೆ. ಇದೇ ಶ್ಲೋಕದಲ್ಲಿ ವಿಚುಂಬತಿ ಎಂಬುದರ ಬದಲು 'ಚುಚುಂಬೇ ಹರಿವಬಲಾಮುಖವಿಂದು ನಾಯಕೇನ' ಎಂದು ಹೇಳಿದರೆ ಆರೋಪಗಳೆಲ್ಲವೂ ಶಾಬ್ದವೇ ಆಗುವುದರಿಂದ ಅದು ಶ್ಲಿಷ್ಟಶಬ್ದಗಳ ಮೂಲಕ ಸಮಸ್ತವಸ್ತುವಿಷಯವೆನಿಸಿದ ಸಾಂಗರೂಪಕವಾಗುತ್ತದೆ. ಇಲ್ಲಿ ಒಂದು ಆಶಂಕೆಮಾಡಿ ತೊಲಗಿಸುತ್ತಾನೆ. 'ಕರಮುದಯ' ಎಂಬ ಪದ್ಯದಲ್ಲಿ ಕಿರಣದಲ್ಲಿ ಹಸ್ತವೆಂದು ಆರೋಪಿಸಿದ್ದು ಪರ್ವತದಲ್ಲಿ ಸ್ತನವನ್ನು ಆರೋಪಿಸಲು ಕಾರಣವೆನಿಸಿದ್ದರಿಂದ ಇದು ಶ್ಲಿಷ್ಟಪರಂಪರಿತವೇ ಆಗಲಿ ಎಂದರೆ ಅದು ಸರಿಯಾಗುವುದಿಲ್ಲ; ಯಾಕೆಂದರೆ ಶ್ಲಿಷ್ಟಪರಂಪರಿತದಲ್ಲಿ 'ಭೂಭೃದಾವಲೀದಂಭೋಲಿಃ' ಎಂಬ ಕಡೆ ರಾಜನಲ್ಲಿ ಪರ್ವತವೆಂಬುವನ್ನು ಆರೋಪಿಸದೆಯೇ ಪ್ರಕೃತ ರಾಜನಲ್ಲಿ ವಜ್ರಾಯುಧವೆಂದು ಆರೋಪಿಸಲಿಕ್ಕೆ ಸಾದೃಶ್ಯವಿಲ್ಲದ್ದರಿಂದ ಸಾಧ್ಯವೇ ಆಗುವುದಿಲ್ಲ. ಆದ್ದರಿಂದ ಕರಮುದಯ' ಎಂಬಕಡೆ ಶ್ಲಿಷ್ಟಪರಂಪರಿತರೂಪಕವನ್ನು ಹೇಳಲಿಕ್ಕಾಗುವುದಿಲ್ಲ. "ಹಾಗಾದರೆ 'ಪದ್ಮೋದಯದಿನಾಧೀಶಃ' ಎಂಬಲ್ಲಿ ಪರಂಪರಿತರೂಪಕವು ಹೇಗೆ ಸಂಭವಿಸೀತು? ರಾಜನಿಗೆ ಸೂರ್ಯನೊಡನೆ ಸಾದೃಶ್ಯವು ತೇಜಸ್ವಿತೆ ಎಂಬ ಕಾರಣದಿಂದ ಸಂಭವಿಸುವ ಪ್ರಯುಕ್ತ ಇಲ್ಲಿ ಶ್ಲಿಷ್ಟಪರಂಪರಿತವನ್ನು ಹೇಗೆ ಹೇಳಲಿಕ್ಕಾದೀತು?" ಎಂದು ಕೇಳುವುದಾದರೆ ಅದೂ ಹೊಂದುವುದಿಲ್ಲ; ಯಾಕೆಂದರೆ ರಾಜನಲ್ಲಿ ಪ್ರಕಾಶವಿರುವುದರಿಂದ ಸೂರ್ಯನೊಡನೆ ಸ್ಪಷ್ಟವಾಗಿ ಸಾದೃಶ್ಯವು ತೋರುವುದಾದರೂ ಪ್ರಕೃತ ಸಂದರ್ಭದಲ್ಲಿ ವಿವಕ್ಷಿತವೆನಿಸಿಲ್ಲ. ಆದರೆ ಪದ್ಮೋದಯವೆಂಬುದೇ ರಾಜ ಸೂರ್ಯರಿಬ್ಬರಿಗೂ ಸಾಧಾರಣಧರ್ಮವೆಂದು ವಿವಕ್ಷಿತವಾಗಿದೆ. ಸೂರ್ಯನು ಪ್ರಕಾಶವನ್ನುಂಟುಮಾಡುವುದರಿಂದ ಪದ್ಮಗಳ ಅಭ್ಯುದಯವನ್ನು ಹೇಗೆ ಸಾಧಿಸುವನೋ ಹಾಗೆ ಶತ್ರುಗಳನ್ನು ಜಯಿಸಿ ರಾಜನು ಹಣವನ್ನು ಸಂಪಾದಿಸಿ ರಾಜಲಕ್ಷ್ಮಿಯ ಅಭ್ಯುದಯವನ್ನು ಸಾಧಿಸುತ್ತಾನೆ. ಇದೆಯೇ ಇಲ್ಲಿ ಕವಿಗೆ ತಿಳಿಸಬೇಕೆಂದು ಇಷ್ಟವಾದ ಅರ್ಥ. ಆದ್ದರಿಂದಲೇ ಪದ್ಮೋದಯವೆಂಬುದು ರಾಜ ಸೂರ್ಯ ಇಬ್ಬರಿಗೂ ಸಾಧಾರಣಧರ್ಮವೆನಿಸಿದೆ.

ಹೀಗೆಯೇ ಇಂದ್ರನ ವಜ್ರವು ಹೇಗೆ ಪರ್ವತಗಳನ್ನು ಭೇದಿಸಿತೋ ಹಾಗೆ ರಾಜನೂ ಸಹ ಶತ್ರುಗಳನ್ನು ನಾಶಮಾಡಿರುವನು. ಇಷ್ಟೇಯೇ ಕವಿಗೆ ಇಲ್ಲಿ ವಿವಕ್ಷಿತವಾದ ಅರ್ಥ. ಆದ್ದರಿಂದ ಭೂಭೃದ್ವಿದಳನವೇ ಇಲ್ಲಿ ಸಾಧಾರಣಧರ್ಮವೆನಿಸಿದೆ. ಹೀಗೆ ಹಿಂದಿನ ಆರೋಪಗಳಿಲ್ಲದೆಯೇ ಮುಂದಿನ ಆರೋಪಗಳು ಸಂಭವಿಸುವುದಿಲ್ಲವೆಂದು ಎರಡು ಆರೋಪಗಳಿಗೂ ಪರಸ್ಪರವಾಗಿ ಕಾರ್ಯಕಾರಣಭಾವವಿರುವ ಪ್ರಯುಕ್ತ ಭೂಭೃದಾವಲೀ ದಂಭೋಲಿ ಮತ್ತು ಪದ್ಮೋದಯದಿನಾಧೀಶಃ ಎಂದು ಎರಡು ಕಡೆಗಳಲ್ಲೂ ಶ್ಲಿಷ್ಟ ಪರಂಪರಿತವನ್ನು ಹೇಳುವುದು ಸಮಂಜಸವಲ್ಲ. ಕರಮುದಯ ಎಂಬ ಪದ್ಯದಲ್ಲಾದರೋ ಪರ್ವತದಲ್ಲಿ ಸ್ತನಗಳ ಸಾದೃಶ್ಯವು ದಪ್ಪನಾಗಿಯೂ ಎತ್ತರವಾಗಿಯೂ ಇರುವುದರಿಂದ ಸ್ಪಷ್ಟವಾಗಿಯೇ ಇರುವುದರಿಂದ ಶ್ಲಿಷ್ಟಪರಂಪರಿತರೂಪಕವಾಗುವುದಿಲ್ಲ. ಇದರಿಂದ ಎಲ್ಲಿ ಆರೋಪವನ್ನು ಮಾಡಲಿಕ್ಕೆ ಸಾದೃಶ್ಯವು ಆವಶ್ಯಕವೋ ಅಲ್ಲಿಯೇ ಸಾಂಗರೂಪಕವು ಸಂಭವಿಸುವುದೆಂದೂ,ಎಲ್ಲಿ ಸಾದೃಶ್ಯವಿಲ್ಲದಿದ್ದರೂ ಆರೋಪವನ್ನು ಮಾಡಬಹುದೋ ಅಲ್ಲಿ ಪರಂಪರಿತರೂಪಕವು ಸಂಭವಿಸುವುವೆಂದೂ ಸೂಚಿತವಾಯಿತು.

ಸಮಾಸವಿಲ್ಲದ ಕಡೆಯಲ್ಲೂ ಕೆಲವುಕಡೆ ರೂಪಕವಿರುವುದೆಂಬುದನ್ನು ಉದಾಹರಿಸುತ್ತಾನೆ. 'ಎಲೈ ಪ್ರೇಯಸಿ' ನಿನ್ನ ಮುಖವು ಕಮಲವಲ್ಲದೆ ಬೇರೆಯಲ್ಲ'' ಇಲ್ಲಿ ಮುಖ ಸರೋಜಂ ಎಂದು ಸಮಾಸವನ್ನು ಮಾಡದಿದ್ದರೂ ರೂಪಕವಿದೆ. ಕೆಲವು ಕಡೆ ಉಪಮಾನೋಪಮೇಯಗಳನ್ನು ತಿಳಿಸುವ ಪದಗಳು ಬೇರೆ ಬೇರೆ ವಿಭಕ್ತಿಗಳಲ್ಲಿದ್ದರೂ ರೂಪಕವಿರುವುದೆಂಬುದನ್ನು ಉದಾಹರಿಸುತ್ತಾನೆ" "ಬ್ರಹ್ಮನು ಈ ಮುಖಕಮಲದಲ್ಲಿ ಹುಬ್ಬುಗಳೆಂಬ ಲತೆಯ ರೂಪದಿಂದ ಭ್ರಮರಸಂಕ್ತಿಯನ್ನು ನಿರ್ಮಿಸಿದನು. ಇಲ್ಲಿಯೂ ಸಹ ಭ್ರೂಲತೆ ಮತ್ತು ಭ್ರಮರಪಂಕ್ತಿ ಇವೆರಡೂ ಬೇರೆ ಬೇರೆ ವಿಭಕ್ತಿಗಳಲ್ಲಿವೆ. ಭ್ರೂಲತೆಯಲ್ಲಿ ಭ್ರಮರಪಂಕ್ತಿ ಎಂದು ಆರೋಪಿಸಿರುವುದರಿಂದ ಇದು ನಿರಂಗವೂ ಕೇವಲವೂ ಆದ ರೂಪಕವೆನಿಸಿದೆ. ಕೆಲವು ಕಡೆಗಳಲ್ಲಿ ಉಪಮಾನೋಪಮೇಯಗಳಿಗೆ ವಿರುದ್ಧ ಧರ್ಮವಿದ್ದರೂ ರೂಪಕವು ಸಂಭವಿಸಬಹುದು. "ಸುಜನತೆ ಎಂಬ ನೀರಿನಲ್ಲಿ ಮರುಭೂಮಿ ಎನಿಸಿ,(ಮರುಭೂಮಿಯಲ್ಲಿ ನೀರಿಲ್ಲದಿರುವಂತೆ ರಾಜರಲ್ಲಿ ಸೌಜನ್ಯವಿಲ್ಲ) ಸಚ್ಚರಿತವೆಂಬ ಚಿತ್ರದಲ್ಲಿ ಬಯಲೆನಿಸಿ, (ಆಕಾಶದಲ್ಲಿ ಚಿತ್ರವನ್ನು ಗುರ್ತಿಸಲಿಕ್ಕೆ ಸಾಧ್ಯವಾಗದಂತೆ ರಾಜರಲ್ಲೂ ಸಚ್ಚಾರಿತ್ರ್ಯವನ್ನು ಉದಾಹರಿಸಲು ಸಾಧ್ಯವಿಲ್ಲ.) ದಯೆ ದಾಕ್ಷಿಣ್ಯ ಮೊದಲಾದ ಗುಣವೆಂಬ ಚಂದ್ರಿಕೆಯಲ್ಲಿ ಕೃಷ್ಣಪಕ್ಷದ ಚತುರ್ದಶಿ ಎನಿಸಿ, (ಕೃಷ್ಣಪಕ್ಷದ ಚತುರ್ದಶಿಯಲ್ಲಿ ಹುಟ್ಟಿದೊಡನೆಯೇ ಚಂದ್ರಿಕೆಯು ಕೊನೆಗೊಂಡು ಯಾರಿಗೂ ಕಾಣಿಸದಿರುವಂತೆ ದಯಾದಿಗುಣಗಳು ರಾಜರಲ್ಲಿ ತೋರಿದೊಡನೆಯೇ ಕಣ್ಮರೆಯಾಗುತ್ತವೆ. ಅವರಲ್ಲಿ ಗುಣವು ಕೆಲವು ವೇಳೆ ಕಾಣಿಸಿಕೊಳ್ಳುವುದೇ ಹೊರತು ಸ್ವಲ್ಪಕಾಲವೂ ಇರುತ್ತಿರಲಿಲ್ಲವೆಂದು ತಿಳಿಸಲಿಕ್ಕಾಗಿ ಅಮಾವಾಸ್ಯೆ ಎಂದು ಹೇಳದೆ ಚತುರ್ದಶಿ ಎಂದು ತಿಳಿಸಿದೆ) ಸರಳವ್ಯವಹಾರದಲ್ಲಿ ನಾಯಿಯ ಬಾಲದಂತೆಯೂ ಇರುವ (ಅದರಂತೆ ರಾಜರಲ್ಲಿ ಸ್ವಲ್ಪವೂ ಋಜುಸ್ವಭಾವವಿರಲಿಲ್ಲ) ಕಲಿಯುಗದ ಈ ರಾಜರ ಗುಂಪನ್ನು ದುರಾಶೆ

ಯಿಂದ ಯಾರು ಸೇವಿಸುವರೋ ಅಂತವರಿಗೆ ಭಕ್ತಿಯಷ್ಟರಿಂದಲೇ ಸುಲಭವಾಗಿ ದೊರೆಯುವಂತಹ ಮಹಾದೇವನ ಆರಾಧನವು ಯಾವ ಬಗೆಯ ಅಭಿರುಚಿಯನ್ನು ಹುಟ್ಟಿಸೀತು ? " ಇಲ್ಲಿ ಮರುಭೂಮಿಯಲ್ಲಿ ಸರಳತೆಯೂ ಸಂಭವಿಸದೇ ಇರುವುದರಿಂದ ಇವೆಲ್ಲವೂ ವಿರುದ್ಧವೆನಿಸಿವೆ. ಆದ್ದರಿಂದ ಮೊದಲನೆಯ ಮೂರು ವಿಶೇಷಣಗಳಲ್ಲಿ ಶ್ಲೇಷವಿಲ್ಲದೆ ಸರಳವಾದ ಶಬ್ದಗಳನ್ನು ಪ್ರಯೋಗಿಸಿದ್ದರಿಂದ ಅಲ್ಲಿ ಮಾಲೆ ಎನಿಸಿದ ಪರಂಪರಿತರೂಪಕವಿದೆ. ನಾಲ್ಕನೆಯ ವಿಶೇಷಣದಲ್ಲಿ ರೂಪಕವು ನಿರಂಗವೂ ಕೇವಲವೂ ಎನಿಸಿದೆ. 'ರಾಜಮಂಡಲರಾಹವೇ' ಎಂಬಲ್ಲಿರುವ ಶ್ಲಿಷ್ಟಪರಂಪರಿತರೂಪಕದಲ್ಲೂ 'ಕರ ಮುದಯಮಹೀಧರ' ಎಂಬಲ್ಲಿ ಶ್ಲಿಷ್ಟಶಬ್ದಪ್ರಯೋಗವಿರುವ ಸಾಂಗರೂಪಕದಲ್ಲೂ ಶಬ್ದಶ್ಲೇಷವಿರುವುದರಿಂದ ಇದನ್ನು ಶಬ್ದಾಲಂಕಾರದಲ್ಲಿಯೇ ಸೇರಿಸಬಹುದೆಂದು ಆಕ್ಷೇಪಿಸಿ ಸಮಾಧಾನಮಾಡುತ್ತಾನೆ. ಇಲ್ಲಿ ಶಬ್ದಶ್ಲೇಷವಿದ್ದರೂ ಇವೆಲ್ಲವೂ ರೂಪಕದ ಬೇರೆ ಬಗೆಗಳೆನಿಸಿದ್ದರಿಂದ ಇವನ್ನು ಅರ್ಥಾಲಂಕಾರದಲ್ಲಿಯೇ ಸೇರಿಸುವುದು ಯುಕ್ತವೆನಿಸಿದೆ. ಹೀಗೆಯೇ ಮುಂದೆ ತಿಳಿಸುವ ಶ್ಲೇಷಮೂಲವಾದ ಅಪಹ್ನುತಿ ವ್ಯತಿರೇಕ ಮೊದಲಾದ ಅಲಂಕಾರಗಳಲ್ಲಿಯೂ ತಿಳಿಯುವುದು. ಯಾವ ರೂಪಕವು ಹೆಚ್ಚು ಚಮತ್ಕಾರವುಳ್ಳದ್ದೋ ಅದು ಅಧಿಕಾರೂಢವೈಶಿಷ್ಟ್ಯವೆನಿಸುವುದು. ಉಪಮಾನದಲ್ಲೂ ಉಪಮೇಯದಲ್ಲೂ ಇರುವ ಯಾವುದಾದರೊಂದು ಧರ್ಮವನ್ನು ತೊರೆಸಿಯೋ ಅಥವಾ ಅಲ್ಲಿ ಇಲ್ಲದೇ ಇರುವ ಯಾವುದಾದರೊಂದು ಧರ್ಮವನ್ನು ಆರೋಪಿಸಿಯೋ ಈ ಬಗೆಯ ರೂಪಣವು ಪ್ರವರ್ತಿಸುವುದರಿಂದ ಇದರಲ್ಲಿ ಹೆಚ್ಚಿನ ವೈಶಿಷ್ಟ್ಯವು ಸಂಭವಿಸುತ್ತದೆ ಎಂದು ತಿಳಿಯಬೇಕು. "ಇಲ್ಲಿ ಕಾಣುತ್ತಿರುವ ನಾಯಿಕೆಯ ಮುಖವು ಕಳಂಕವಿಲ್ಲದಿರುವ ಚಂದ್ರನಾಗಿಯೇ ಎದುರಿಗೆ ಗೋಚರವಾಗುತ್ತಿದೆ. ಅಮೃತಪ್ರವಾಹಕ್ಕೆ ಆಶ್ರಯವೆನಿಸಿದ ತುಟಿಯು ಬಹಳ ಹಿಂದೆಯೇ ಪರಿಪಕ್ವವಾಗಿದ್ದ ತೊಂಡೆಯ ಹಣ್ಣೇ ಆಗಿದೆ. ಇಲ್ಲಿ ಕಾಣುತ್ತಿರುವ ಕಣ್ಣುಗಳು ಹಗಲು ರಾತ್ರಿಗಳಲ್ಲಿ ಹೆಚ್ಚು ಕಾಂತಿಯನ್ನು ಕೊಡುವ ಕನ್ನೈದಿಲೆಗಳೇ ಆಗಿವೆ. ಹಾಗೆಯೇ ದೇಹವು ಪ್ರವೇಶಿಸಲು ಅನುಕೂಲವೆನಿಸಿದ ಸೌಂದರ್ಯಸಾಗರವೇ ಆಗಿದೆ." ಇಲ್ಲಿ ಉಪಮಾನವೆನಿಸಿದ ಚಂದ್ರನಲ್ಲಿ ಇರುವಂತಹ ಕಳಂಕವನ್ನು ತೊರೆಸಿ ಮುಖದಲ್ಲಿ ಅದನ್ನು ಆರೋಪಿಸಲಾಗಿದೆ. ಉಪಮೇಯವೆನಿಸಿದ ತುಟಿಯಲ್ಲಿ ಅಮೃತಪ್ರವಾಹಕ್ಕೆ ಆಧಾರವೆನಿಸಿದೆ ಎಂಬ ಅಂಶವನ್ನು ಅದರಲ್ಲಿ ಆರೋಪಿಸಿ ಹಾಗೆಯೇ ತೊಂಡೆಯ ಹಣ್ಣಿನಲ್ಲಿ ಬಹುಕಾಲದಿಂದಲೂ ಪಕ್ವವಾಗಿತ್ತೆಂಬ ಅಂಶವನ್ನು ಆರೋಪಿಸಿ ತುಟಿಯನ್ನು ತೊಂಡೆಯ ಹಣ್ಣೆಂದು ರೂಪಿಸಲಾಗಿದೆ. ಹಾಗೆಯೇ ರಾತ್ರಿಯ ವೇಳೆಯೇ ಹೆಚ್ಚು ಶೋಭಿಸುವ ಕನ್ನೈದಿಲೆಯಲ್ಲಿ (ಉಪಮಾನ) ಹಗಲು ರಾತ್ರಿ ಎರಡು ವೇಳೆಯೂ ಪ್ರಕಾಶಿಸುವಿಕೆ ಎಂಬ ಧರ್ಮವು ಇಲ್ಲದಿದ್ದರೂ ಅದನ್ನು ಆರೋಪಿಸಿ ನೇತ್ರವನ್ನು ಕನ್ನೈದಿಲೆ ಎಂದು ರೂಪಿಸಿದೆ. ಹೀಗೆಯೇ ಉಪಮಾನವೆನಿಸಿದ ಸಮುದ್ರದಲ್ಲಿ ಲಾವಣ್ಯದ ಸಂಬಂಧವಿಲ್ಲದಿದ್ದರೂ ಆರೋಪಿಸಿ ಶರೀರವನ್ನು ಸಮುದ್ರವೆಂದು ರೂಪಿಸಿದೆ. ಹೀಗೆಯೇ ಉಪಮಾನವೆನಿಸಿದ

ಸಮುದ್ರವೆಂದು ರೂಪಿಸಿದೆ. ಹೀಗೆ ಕಳಂಕರಾಹಿತ್ಯ ಮೊದಲಾದವುಗಳಿಂದ ಹೆಚ್ಚಿನ ವೈಶಿಷ್ಟ್ಯವನ್ನು ತಿಳಿಸಿರುವ ಪ್ರಯುಕ್ತ ಈ ರೂಪಕಕ್ಕೆ ಈ ಹೆಸರು ಅನ್ವರ್ಥವೆನಿಸಿದೆ.

ರೂಪಕವನ್ನು ನಿರೂಪಿಸಿದ ಮೇಲೆ ಅದಕ್ಕೆ ಸದೃಶವೆನಿಸಿದ್ದರಿಂದ ಪರಿಣಾಮಾಲಂಕಾರವನ್ನು ನಿರೂಪಿಸುತ್ತಾನೆ. ಆರೋಪಿಸಬೇಕಾಗಿರುವ ಉಪಮಾನವಸ್ತುವು ಆರೋಪಕ್ಕೆ ವಿಷಯವೆನಿಸಿದ ಉಪಮೇಯಕ್ಕಿಂತ ಬೇರೆಯಲ್ಲವೆಂಬ ಕಾರಣದಿಂದ ಪ್ರಕೃತಕಾರ್ಯಕ್ಕೆ ಉಪಯೋಗವಾಗುವಂತೆ ಪರಿಣಮಿಸುವುದೇ ಪರಿಣಾಮಾಲಂಕಾರವೆನಿಸುವುದು. ಆರೋಪಿಸಬೇಕಾಗಿರುವ ಉಪಮಾನವು ಆರೋಪಕ್ಕೆ ವಿಷಯುವೆನಿಸಿದ ಉಪಮೇಯವಾಗಿ ಪರಿಣಮಿಸುವುದರಿಂದ ಇದು ಪರಿಣಾಮವೆನಿಸುವುದು. ಸಖಿಯ ಮುಂದೆ ಪ್ರೇಯಸಿಯ ವ್ಯವಹಾರವನ್ನು ವರ್ಣಿಸಿರುವ ಈ ಪದ್ಯದಲ್ಲಿ ಈ ಬಗೆಯ ಪರಿಣಾಮನ್ನು ಕಾಣಬಹುದು."ದೂರದಿಂದ ಬಂದ ನನಗೆ ಮಂದಹಾಸದಿಂದ ಉಪಹಾರವನ್ನು ನೀಡಿಯಾಯಿತು. ಹಾಗೆಯೇ ಸ್ತನಗಳನ್ನು ಹಿಸುಕುತ್ತ ಆಲಿಂಗನವೇ ನನಗೆ ಕೊಡುವ ಪಣವಾಯಿತು. "ದೂರದಿಂದ ಬಂದವನಿಗೆ ತಿನ್ನಲಕ್ಕೆ ಏನನ್ನಾದರೂ ತಿಂಡಿಯನ್ನು ಕೊಡಬೇಕು, ಆಟವಾಡಲಿಕ್ಕೆ ಪಣ ಒಂದನ್ನು ಕೊಡಬೇಕು." ಎಂಬುದು ಲೋಕದ ವಾಡಿಕೆ. ಹೀಗೆ ದೂರದಿಂದ ನಾನು ಬರಲು ಪ್ರೇಯಸಿಯು ನನ್ನನ್ನು ನೋಡಿ ಕೊಂಚ ಹಾಸ್ಯ ಮಾಡಿದ್ದೇ ನನಗೆ ಉಪಹಾರವಾಯಿತು. ಸ್ತನಗಳನ್ನು ಹಿಸುಕುವ ಮೂಲಕ ಆಲಿಂಗನವೇ ನನಗೆ ಪಣವನ್ನು ಕೊಟ್ಟಂತಾಯಿತು." ಇದರಿಂದ ಇಲ್ಲಿ ಉಪಮೇಯವೆನಿಸಿದ ಮಂದಹಾಸದಲ್ಲಿ ಉಪಮಾನವೆನಿಸಿದ ಉಪಹಾರದಲ್ಲಿ ಭೇದವನ್ನು ಆರೋಪಿಸಿದ್ದು ನಾಯಕನ ಪ್ರಾರ್ಥನೆಗೆ ಸಾಧನವೆನಿಸಲು ಅನುಕೂಲವೆನಿಸಿದೆ. ಹಾಗೆಯೇ ಉಪಮೇಯವೆನಿಸಿದ ಆಲಿಂಗನದಲ್ಲಿ ಉಪಮಾನವೆನಿಸಿದ ಪಣದ ಅಭೇದವನ್ನು ಆರೋಪಿಸಿದ್ದು ದ್ಯೂತಕ್ರೀಡೆಗೆ ಸಾಧನವೆನಿಸಲು ಅನುಕೂಲವಾಗಿದೆ. ಆದ್ದರಿಂದ ಇದು ಪರಿಣಾಮವೆನಿಸಿದೆ. ಬೇರೆ ಕಡೆಗಳಲ್ಲಿ ಒಬ್ಬನು ಮತ್ತೊಬ್ಬನಿಗೆ ಬಟ್ಟೆ ಒಡೆದು ಮೊದಲಾದವನ್ನು ಕೊಡುವುದೇ ಉಪಾಹಾರ ಮತ್ತು ಪಣ ಎನಿಸಿಕೊಳ್ಳುತ್ತವೆ. ಬಟ್ಟೆಯನ್ನು ಕೊಡುವುದು ಲೋಕದಸಂಭಾವನೆಗೆ ಸಾಧನವೆನಿಸಿದೆ. ಪಣವನ್ನು ಕೊಡುವುದು ದ್ಯೂತಕ್ರೀಡೆಗೆಸಾಧನ ವೆನಿಸಿದೆ. ಇಲ್ಲಿಯಾದರೋ ನಾಯಕನ ಪ್ರಾರ್ಥನೆ, ಮತ್ತು ಪಾಶಕ್ರಿಡೆಗಳಿಗೆ ಸ್ಮಿತ ಮತ್ತು ಆಲಿಂಗನಗಳಾಗಿ ಪರಿಣಮಿಸಿವೆ. ಉಪಾಯನ ಮತ್ತು ಪಣಗಳು ಕ್ರಮವಾಗಿ ಸ್ಮಿತ ಮತ್ತು ಆಶ್ಲೇಷಗಳಾಗಿ ಪರಿಣಮಿಸಿ ನಾಯಕನ ಸಂಭಾವನೆಗೂ ದ್ಯೂತಕ್ಕೂ ಸಾಧನಗಳೆನಿಸಿವೆ.

ರೂಪಕದಲ್ಲಿ 'ಮುಖಚಂದ್ರನನ್ನು ನೋಡುತ್ತಾನೆ' ಎಂಬಲ್ಲಿ ಆರೋಪಿಸಬೇಕಾಗಿರುವ ಚಂದ್ರ ಮೊದಲಾದವು ಮುಖದಲ್ಲಿ ಕೇವಲ ಸೌಂದರ್ಯವನ್ನು ಪ್ರತಿಪಾದಿಸಲಿಕ್ಕಾಗಿ ಮಾತ್ರವೇ ಇರುತ್ತವೆ. ಆದರೆ ಆ ಬಗೆಯ ಆರೋಪವು ದರ್ಶನಕ್ಕೆ ಅನುಕೂಲವಾಗಿರುವುದಿಲ್ಲ. ಮುಖದಲ್ಲಿ ಚಂದ್ರನ ಅಭೇದವನ್ನು ಆರೋಪಿಸದೇ ಇದ್ದರೂ ಅದನ್ನು ನೋಡಲಿಕ್ಕೆ ಸಾಧ್ಯವಿದೆ. ಮುಖವನ್ನು ನೋಡಲು ಆರೋಪವೇ ಬೇಕೆಂಬ

ನಿಯಮವಿಲ್ಲ. ಪರಿಣಾಮದಲ್ಲಾದರೋ ಉಪಮಾನವನ್ನು ಉಪಮೇಯದೊಡನೆ ಅಭಿನ್ನವೆಂದು ಪರಿಗಣಿಸಿದ್ದು ಪ್ರಕೃತಕಾರ್ಯದಲ್ಲಿ ಅದರ ಸದುಪಯೋಗವೂ ಇರುತ್ತದೆ. ಉಪಮೇಯವೆನಿಸಿದ ಸ್ಮಿತದೊಡನೆ ಉಪಾಹಾರದ ಅಭೇದವನ್ನು ತಿಳಿಸಿ ನಾಯಕನನ್ನು ಗೌರವಿಸಲಿಕ್ಕೆ ಅದನ್ನು ಸಾಧನವೆಂದು ಉಪಯೋಗಿಸಲಾಗಿದೆ. ಆದ್ದರಿಂದಲೇ ರೂಪಕದಲ್ಲಿ ಆರೋಪಿಸಬೇಕಾಗಿರುವ ಚಂದ್ರ ವೊದಲಾದ ಉಪಮಾನಪದಾರ್ಥಕ್ಕೆ ವಿಶೇಷಾಂಶವಷ್ಟರಿಂದ ಉಪಮೇಯವೆನಿಸಿದ ಮುಖದಲ್ಲಿ ಅಭೇದಸಂಬಂಧದಿಂದ ಅನ್ವಯವಿದೆ. ಪರಿಣಾಮದಲ್ಲಾದರೋ ಉಪಮಾನವು ಪ್ರಕೃತಕಾರ್ಯಕ್ಕೆ ಉಪಯೋಗವಾಗುವ ಮೂಲಕ ಉಪಮೇಯದಲ್ಲಿ ಅಭೇದಸಂಬಂಧದಿಂದ ಅನ್ವಯಿಸುತ್ತದೆ. 'ಮುಖಚಂದ್ರಂ ಪಶ್ಯಾಮಿ' ಎಂಬ ರೂಪಕದಲ್ಲಿ ಉಪಮೇಯವೆನಿಸಿದ ಮುಖದಲ್ಲಿ ಸಾದೃಶ್ಯವಿರುವುದರಿಂದ ಆರೋಪಿಸಬೇಕಾಗಿರುವ ಚಂದ್ರನೆಂಬ ಪದಾರ್ಥವು ವಾಸ್ತವವಾಗಿ ಬೇರೆಯೇ ಆಗಿದ್ದರೂ ಅದರ ಅಭೇದವನ್ನು ಆರೋಪಿಸಿದೆ. 'ಮುಖವು ತುಚ್ಛವೆನಿಸಿಲ್ಲ; ಆದರೆ ಸುಂದರವಾಗಿದೆ. ಎಂಬ ವಿಶೇಷವನ್ನು ತಿಳಿಸುವುದೇ ಇಲ್ಲಿಯ ಉದ್ದೇಶ. ಪರಿಣಾಮದಲ್ಲಾದರೋ ಸ್ಮಿತವೇ ಉಪಾಹಾರವಾಗಿ ಪರಿಣಮಿಸಿದ್ದರಿಂದ ನಾಯಕನನ್ನು ಸನ್ಮಾನಿಸಲು ಅನುಕೂಲವಾಗುವ ಪ್ರಯುಕ್ತ ಉಪಮಾನೋಪಮೇಯಗಳು ವಾಸ್ತವವಾಗಿ ಅಭಿನ್ನವಾಗಿಯೇ ತೋರುತ್ತವೆ. ಇದೇ ಇವೆರಡಕ್ಕೂ ಇರುವ ವಿಶೇಷ. ಹಾಗಾದರೆ 'ದಾಸೇ ಕೃತಾಗಸಿ' ಎಂಬಲ್ಲಿ ರೋಮಾಂಚದಲ್ಲಿ ಮುಳ್ಳನ್ನು ಆರೋಪಿಸಿದ್ದು ನಾಯಿಕೆಯು ಕಾಲಿನಿಂದ ಒದೆಯುವಾಗ ಅವಳ ಕಾಲಿಗೆ ಚುಚ್ಚಲು ಸಾಧನವೆನಿಸಿದ್ದರಿಂದ ಅಲ್ಲಿಯೂ ಪರಿಣಾಮವನ್ನೇ ಹೇಳಬಹುದೆಂದು ಆಕ್ಷೇಪಿಸಿದರೆ ಅದು ರೂಪಕವೇ ಹೊರತು ಪರಿಣಾಮವಾಗಲಾರದೆಂದು ತಿಳಿಸುತ್ತಾನೆ. ಅಲ್ಲಿ ಆರೋಪಿಸಬೇಕಾಗಿರುವ ಮುಳ್ಳು ಪಾದಗಳ ಚುಚ್ಚುವಿಕೆಗೆ ಸಾಧಕವಾಗಿದೆ ಎಂಬ ಅಂಶವು ಸಂಬಂಧಪಟ್ಟಿಲ್ಲ. ಪಾದಗಳನ್ನು ಚುಚ್ಚಲಿಕ್ಕಾಗಿ ರೋಮಾಂಚವು ಮುಳ್ಳೆನಿಸಿತೆಂಬ ಪರಿಣಾಮವು ಇಲ್ಲಿ ವಿವಕ್ಷಿತವಲ್ಲ. ಯಾವುದಾದರೊಂದು ಕಾರ್ಯವನ್ನು ಹೊಂದಿಸಲಿಕ್ಕಾಗಿ ಕಾಲಿಗೆ ಚುಚ್ಚಿತೆಂಬ ಕಾರ್ಯವನ್ನು ಇಲ್ಲಿ ಸೇರಿಸಿಲ್ಲ. ಆದ್ದರಿಂದ ಇದು ಪರಿಣಾಮವೆನಿಸದೆ ರೂಪಕವೇ ಆಗುತ್ತದೆ. ಇದೂ ಸಹ ರೂಪಕದಂತೆ ಹೆಚ್ಚು ವೈಶಿಷ್ಟ್ಯವನ್ನು ಸೇರಿಸುವ ಕಡೆಯೂ ಇರುವುದಾಗಿ ಕಂಡುಬರುತ್ತದೆ. ಕುಮಾರಸಂಭವದಲ್ಲಿ ಹಿಮಾಲಯವನ್ನು ವರ್ಣಿಸಿರುವ ಈ ಪದ್ಯದಲ್ಲಿ ಇದನ್ನು ಕಾಣಬಹುದು. "ಹಿಮಾಲಯದಲ್ಲಿ ರಾತ್ರಿಯವೇಳೆ ಗವಿಗಳೆಂಬ ಮನೆಗಳ ಒಳಭಾಗದಲ್ಲಿ ಅಂಟಿಕೊಂಡು ಪ್ರಕಾಶಿಸುತ್ತಿದ್ದ ಲತೆಗಳು ಸ್ತ್ರೀಯರೊಡನೆ ಸಂಚರಿಸುತ್ತಿದ್ದ ಕಿರಾತರಿಗೆ ಎಣ್ಣೆ ಇಲ್ಲದೆ ಉರಿಯುವ ಸುರತಕಾಲದ ದೀಪಗಳಾದವು" ಇಲ್ಲಿ ಔಷಧಿಲತೆಗಳಲ್ಲಿ ಅಭೇದವನ್ನು ಆರೋಪಿಸಲ್ಪಬೇಕಾಗಿರುವ ದೀಪಗಳು ಆ ಲತೆಗಳಾಗಿ ಪರಿಣಮಿಸಿದ್ದರಿಂದ ಪ್ರಕೃತ ಸುರತಕಾರ್ಯಕ್ಕೆ ಕತ್ತಲೆಯನ್ನು ತೊಲಗಿಸುವ ಮೂಲಕ ಉಪಮಾನವಾಗಿವೆ. ಎಣ್ಣೆಯಿಲ್ಲದೆಯೇ ಈ ಲತಾದೀಪಗಳು ಉರಿಯುತ್ತಿರುವುದರಿಂದ ಇಲ್ಲಿ ಹೆಚ್ಚು ಚಮತ್ಕಾರವಿರು

ವುದೇ ಒಂದು ವಿಶೇಷವೆನಿಸಿದೆ. ದೀಪದಲ್ಲಿ ಎಣ್ಣೆ ಇರಲೇಬೇಕಾದರೂ ಅದನ್ನು ತಪ್ಪಿಸಿ ಅಂತಹ ದೀಪವೆಂದು ಲತೆಯಲ್ಲಿ ಆರೋಪಿಸಲಾಗಿದೆ.

ಸಂದೇಹಃ ಪ್ರಕೃತೇಽನ್ಯಸ್ಯ ಸಂಶಯಃ ಪ್ರತಿಭೋತ್ಥಿತಃ ।
ಶುದ್ಧೋ ನಿಶ್ಚಯಗರ್ಭೋಽಸೌ ನಿಶ್ಚಯಾಂತ ಇತಿ ತ್ರಿಧಾ ॥

ಯತ್ರ ಸಂಶಯ ಏವ ಪರ್ಯವಸಾನಂ ಸ ಶುದ್ಧಃ. ಯಥಾ—

ಕಿಂ ತಾರುಣ್ಯತರೋರಿಯಂ ರಸಭರೋದ್ಭಿನ್ನಾ ನವಾ ವಲ್ಲರೀ ?
ವೇಲಾಪ್ರೋಚ್ಛಲಿತಸ್ಯ ಕಿಂ ಲಹರಿಕಾ ಲಾವಣ್ಯವಾರಾಂ ನಿಧೇಃ ? ।
ಉದ್ಗಾಢೋತ್ಕಲಿಕಾವತಾಂ ಸ್ವಸಮಯೋಪನ್ಯಾಸವಿಶ್ರಂಭಿಣಃ
ಕಿಂ ಸಾಕ್ಷಾದುಪದೇಶಯಷ್ಟಿರಥವಾ ದೇವಸ್ಯ ಶೃಂಗಾರಿಣಃ ? ॥

ಯತ್ರಾದಾವಂತೇ ಚ ಸಂಶಯ ಏವ ಮಧ್ಯೇ ಚ ನಿಶ್ಚಯಃ ಸಃ ನಿಶ್ಚಯ ಮಧ್ಯಃ. ಯಥಾ—

ಅಯಂ ಮಾರ್ತಂಡಃ ಕಿಮ್ ? ಸ ಖಲು ತುರಗೈಃ ಸಪ್ತಭಿರಿತಃ,
ಕೃಶಾನುಃ ಕಿಮ್ ? ಸರ್ವಾಃ ಪ್ರಸರತಿ ದಿಶೋ ನೈಷ ನಿಯತಮ್ ।
ಕೃತಾಂತಃ ಕಿಂ ಸಾಕ್ಷಾತ್ ? ಮಹಿಷವಹನೋಽಸಾವಿತಿ ಚಿರಂ
ಸಮಾಲೋಕ್ಯಾಜೌ ತ್ವಾಂ ವಿದಧತಿ ವಿಕಲ್ಪಾನ್ ಪ್ರತಿಭಟಾಃ ॥

ಅತ್ರ ಮಧ್ಯೇ ಮಾರ್ತಂಡಾದ್ಯಭಾವನಿಶ್ಚಯಃ, ರಾಜನಿಶ್ಚಯೇ ದ್ವಿತೀಯ ಸಂಶಯೋತ್ಥಾನಾಸಂಭವಾತ್.

ಯತ್ರಾದೌ ಸಂಶಯಃ ಅಂತೇ ಚ ನಿಶ್ಚಯಃ ಸ ನಿಶ್ಚಯಾಂತಃ. ಯಥಾ.

ಕಿಂ ತಾವತ್ ಸರಸಿ ಸರೋಜಮೇತದಾರಾತ್
ಆಹೋಸ್ವಿದನ್ಮುಖಮವಭಾಸತೇ ತರುಣ್ಯಾಃ ।
ಸಂಶಯ್ಯ ಕ್ಷಣಮಿತಿ ನಿಶ್ಚಿಕಾಯ ಕಶ್ಚಿತ್
ಬಿಬ್ಬೋಕೈರ್ಬಕಸಹವಾಸಿನಾಂ ಪರೋಕ್ಷೈಃ ॥

ಅಪ್ರತಿಭೋತ್ಥಾಪಿತೇ ತು 'ಸ್ಥಾಣುರ್ವಾ ಪುರುಷೋ ವಾ' ಇತ್ಯಾದಿಸಂಶಯೇ ನಾಯಮಲಂಕಾರಃ.

ಮಧ್ಯಂ ತವ ಸರೋಜಾಕ್ಷಿ ಪಯೋಧರಭರಾರ್ದಿತಮ್ ।
ಅಸ್ತಿ ನಾಸ್ತೀತಿ ಸಂದೇಹಃ ಕಸ್ಯ ಚಿತ್ತೇ ನ ಭಾಸತೇ ॥

ಅತ್ರ ಅತಿಶಯೋಕ್ತಿರೇವ, ಉಪಮೇಯೇ ಉಪಮಾನಸಂಶಯಸ್ಯೈವ ಏತದಲಂಕಾರವಿಷಯತ್ವಾತ್.

ಸಾಮ್ಯಾದತಸ್ಮಿಂಸ್ತದ್ಬುದ್ಧಿರ್ಭ್ರಾಂತಿಮಾನ್ ಪ್ರತಿಭೋತ್ಥಿತಾ ।
ಯಥಾ—ಮುಗ್ಧಾ ದುಗ್ಧಧಿಯಾ ಗವಾಂ ವಿದಧತೇ ಕುಂಭಾನಧೋ ವಲ್ಲಭಾಃ
ಕರ್ಣೇ ಕೈರವಶಂಕಯಾ ಕುವಲಯಂ ಕುರ್ವಂತಿ ಕಾಂತಾ ಅಪಿ ।
ಕರ್ಕಂಧೂಫಲಮುಚ್ಚಿನೋತಿ ಶವರೀ ಮುಕ್ತಾಫಲಾಕಾಂಕ್ಷಯಾ

ಸಾಂದ್ರಾ ಚಂದ್ರಮಸೋ ನ ಕಸ್ಯ ಕುರುತೇ ಚಿತ್ತಭ್ರಮಂ ಚಂದ್ರಿಕಾ ||

ಅಸ್ವರಸೋತ್ಥಾಪಿತಾ ಭ್ರಾಂತಿರ್ನಾಯಮಲಂಕಾರಃ. ಯಥಾ—

ಶುಕ್ತಿಕಾಯಾಂ ರಜತಂ ಇತಿ. ನ ಚ ಅಸಾದೃಶ್ಯಮೂಲಾ. ಯಥಾ—

ಸಂಗಮವಿರಹವಿಕಲ್ಪೇ ವರಮಿಹ ವಿರಹೋ ನ ಸಂಗಮಸ್ತಸ್ಯಾಃ |
ಸಂಗೇ ಸೈವ ತಥೈಕಾ ತ್ರಿಭುವನಮಪಿ ತನ್ಮಯಂ ವಿರಹೇ ||

ಕ್ವಚಿದ್ಭೇದಾದ್ಗ್ರಹೀತೄಣಾಂ ವಿಷಯಾಣಾಂ ತಥಾ ಕ್ವಚಿತ್ |
ಏಕಸ್ಯಾನೇಕಧೋಲ್ಲೇಖೋ ಯಃ ಸ ಉಲ್ಲೇಖ ಇಷ್ಯತೇ ||

ಪ್ರಿಯ ಇತಿ ಗೋಪವಧೂಭಿಃ ಶಿಶುರಿತಿ ವೃದ್ಧೈರಧೀಶ ಇತಿ ದೇವೈಃ |
ನಾರಾಯಣ ಇತಿ ಭಕ್ತೈಃ ಬ್ರಹ್ಮೇತ್ಯಗ್ರಾಹಿ ಯೋಗಿಭಿರ್ದೇವಃ ||

ಅತ್ರೈಕಸ್ಯಾಪಿ ಭಗವತಸ್ತದ್ಗುಣಯೋಗಾದನೇಕಧೋಲ್ಲೇಖೇ ಗೋಪವಧೂಪ್ರಭೃತೀನಾಂ ರುಚ್ಯಾದಯೋ ಯಥಾಯೋಗಂ ಪ್ರಯೋಜಕಾಃ.

ಯದಾಹುಃ—ಯಥಾರುಚಿ ಯಥಾರ್ಥಿತ್ವಂ ಯಥಾವ್ಯುತ್ಪತ್ತಿ ಭಿದ್ಯತೇ |
ಆಭಾಸೋಽಪ್ಯರ್ಥ ಏಕಸ್ಮಿನ್ ಅನುಸಂಧಾನಸಾಧಿತಃ ||

ಅತ್ರ ಭಗವತಃ ಪ್ರಿಯತ್ವಾದೀನಾಂ ವಾಸ್ತವತ್ವಾತ್ ಗ್ರಹೀತೃಭೇದಾಚ್ಚ ನ ಮಾಲಾರೂಪಕಮ್, ನ ಚ ಭ್ರಾಂತಿಮಾನ್. ನ ಚಾಯಮಭೇದೇ ಭೇದ ಇತ್ಯೇವಂ ರೂಪಾ ಅತಿಶಯೋಕ್ತಿಃ. ತತ್ರ ಹಿ 'ಅನ್ಯದೇವಾಂಗಲಾವಣ್ಯಮ್' ಇತ್ಯಾದೌ ಲಾವಣ್ಯಾದೇರ್ವಿಷಯಸ್ಯ ಪೃಥಕ್ತ್ವೇನಾಧ್ಯವಸಾನಮ್; ನ ಚೇಹ ಭಗವತಿ ಗೋಪವಧೂಪ್ರಭೃತಿಭಿಃ ಪ್ರಿಯತ್ವಾದ್ಯಧ್ಯವಸೀಯತೇ, ಪ್ರಿಯತ್ವಾದೇರ್ಭಗವತಿ ತತ್ಕಾಲೇ ತಾತ್ತ್ವಿಕತ್ವಾತ್.

ಕೇಚಿದಾಹುಃ—"ಅಯಮಲಂಕಾರೋ ನಿಯಮೇನ ಅಲಂಕಾರಾಂತರವಿಚ್ಛಿತ್ತಿಮೂಲಃ, ಉಕ್ತೋದಾಹರಣೇ ಚ ಶಿಶುತ್ವಾದೀನಾಂ ನಿಯಮಾಭಿಪ್ರಾಯಾತ್ ಪ್ರಿಯತ್ವಾದೇರ್ಭಿನ್ನತ್ವಾಧ್ಯವಸಾಯ ಇತ್ಯತಿಶಯೋಕ್ತಿರಸ್ತಿ. ತತ್ಸದ್ಭಾವೇಽಪಿ ಚ ಗ್ರಹೀತೃಭೇದೇನ ನಾನಾತ್ವಪ್ರತೀತಿರೂಪೋ ವಿಚ್ಛಿತ್ತಿವಿಶೇಷ ಉಲ್ಲೇಖಾಖ್ಯಭಿನ್ನಾಲಂಕಾರಪ್ರಯೋಜಕಃ. ಶ್ರೀಕಂಠಜನಪದವರ್ಣನೇ 'ವಜ್ರಪಂಜರಮಿತಿ ಶರಣಾಗತೈಃ ಅಂಬರವಿವರಮಿತಿ ವಾತಿಕೈಃ' ಇತ್ಯಾದಿಷ್ವ ಅತಿಶಯೋಕ್ತೇರ್ವಿವಿಕ್ತೋ ವಿಷಯಃ. ಇಹ ಚ ರೂಪಕಾಲಂಕಾರಯೋಗಃ." ವಸ್ತುತಸ್ತು 'ಅಂಬರವಿವರಮ್' ಇತ್ಯಾದೌ ಭ್ರಾಂತಿಮಂತಮೇವೇಚ್ಛಂತಿ, ನ ರೂಪಕಮ್. ಭೇದಪ್ರತೀತಿಪುರಸ್ಸರಸ್ಯೈವಾರೋಪಸ್ಯ ಗೌಣೀಮೂಲರೂಪಕಾದಿಪ್ರಯೋಜಕತ್ವಾತ್. ಯದಾಹುಃ ಶಾರೀರಕಮೀಮಾಂಸಾಭಾಷ್ಯವ್ಯಾಖ್ಯಾನೇ ಶ್ರೀಮದ್ವಾಚಸ್ಪತಿಮಿಶ್ರಾಃ 'ಅಪಿ ಚ ಪರಶಬ್ದಃ ಪರತ್ರ ಲಕ್ಷ್ಯಮಾಣಗುಣಯೋಗೇನ ವರ್ತತ' ಇತಿ. ಯತ್ರ ಪ್ರಯೋಕ್ತೃಸಂಪ್ರತಿಪತ್ರೋಃ ಸಂಪ್ರತಿಪತ್ತಿಃ ಸ ಗೌಣಃ, ನ ಚ ಭೇದಪ್ರತ್ಯಯಪುರಸ್ಸರಃ ಇತಿ. ಇಹ ತು ವಾತಿಕಾನಾಂ ಶ್ರೀಕಂಠಜನಪದವರ್ಣನೇ ಭ್ರಾಂತಿಕೃತ ಏವ ಅಂಬರವಿವರತ್ವಾದ್ಯಾರೋಪಃ

ಇತಿ. ಅತ್ರೈವ "ಚ 'ತಪೋವನಮಿತಿ ಮುನಿಭಿಃ, ಕಾಮಾಯತನಮಿತಿ ವೇಶ್ಯಾಭಿಃ" ಇತ್ಯಾದೌ ಚ ಪರಿಣಾಮಾಲಂಕಾರಯೋಗಃ.

'ಗಾಂಭೀರ್ಯೇಣ ಸಮುದ್ರೋऽಸಿ ಗೌರವೇಣಾಸಿ ಪರ್ವತಃ' ಇತ್ಯಾದೌ ಚ ತನೇಕಧೋಲ್ಲೇಖೇ ಗಾಂಭೀರ್ಯಾದಿವಿಷಯಭೇದಃ ಪ್ರಯೋಜಕಃ. ಅತ್ರ ಚ ರೂಪಕ ಯೋಗಃ 'ಗುರುರ್ವಚಸಿ, ಪೃಥುರುರಸಿ, ಅರ್ಜುನೋ ಯಶಸಿ' ಇತ್ಯಾದಿ ಚ ಅನ್ಯ ರೂಪಕಾದ್ವಿವಿಕ್ತೋ ವಿಷಯ ಇತಿ. ಅತ್ರ ಹಿ ಶ್ಲೇಷಮೂಲಾತಿಶಯೋಕ್ತಿಯೋಗಃ.

ಈಗ ಸಂಶಯಾಲಂಕಾರದ ಲಕ್ಷಣವನ್ನು ತಿಳಿಸುತ್ತಾನೆ. ಪ್ರಕೃತಸಂದರ್ಭಕ್ಕೆ ಅನುಗುಣವಾದ ಉಪಮೇಯದಲ್ಲಿ ಉಪಮಾನದ ಸಾದೃಶ್ಯಭೇದಗಳ ಬಗ್ಗೆ ಕವಿಯ ಪ್ರೌಢೋಕ್ತಿಯಷ್ಟರಿಂದಲೇ ಸಂಶಯವು ಸಂಭವಿಸಬಹುದಾದರೆ ಅದರಲ್ಲಿ ಒಂದು ಬಗೆಯ ವೈಚಿತ್ರ್ಯವಿರುವುದರಿಂದ ಅದು ಸಂಶಯಾಲಂಕಾರವೆನಿಸುವುದು. ಇದು ಶುದ್ಧ, ನಿಶ್ಚಯ ಗರ್ಭ, ನಿಶ್ಚಯಾಂತವೆಂದು ಮೂರು ಬಗೆ ಎನಿಸುತ್ತದೆ. ಸಂಶಯದಿಂದ ಆರಂಭವಾಗಿ ಸಂಶಯದಲ್ಲಿ ಕೊನೆಗಾಣುವುದೇ ಶುದ್ಧಸಂಶಯವೆನಿಸುವುದು. ಅದನ್ನು ಉದಾಹರಿಸುತ್ತಾನೆ. ಒಬ್ಬ ತರುಣಿಯನ್ನು ನೋಡಿ ಒಬ್ಬನು ಹೀಗೆ ಹೇಳುತ್ತಾನೆ." ಎದುರಿಗೆ ಕಾಣುತ್ತಿರುವ ಈಕೆಯು ಯೌವನವೆಂಬ ವೃಕ್ಷದ ರಸವಿಶೇಷದಿಂದ ಹೊರಟ ಹೊಸದೊಂದು ಲತೆಯೋ ? (ಯೌವನದ ಕೊನೆಯ ಹಂತವನ್ನು ಮುಟ್ಟಿರುವವಳು) ತೀರದಲ್ಲಿ ತುಂಬಿ ಹೊರಗೆ ಹೊರಟ ಸೌಂದರ್ಯಸಮುದ್ರದ ಅಲೆಯೋ ? (ಈಕೆ ಹೆಚ್ಚು ಸೌಂದರ್ಯಶಾಲಿನಿ ಎಂದು ಅರ್ಥ) ವಿಶೇಷವಾದ ಉತ್ಕಂಠೆಯುಳ್ಳವರಲ್ಲಿ ತನ್ನ ವ್ಯವಹಾರವನ್ನು ಆರಂಭಿಸಲು ಇಚ್ಛೆಯುಳ್ಳ ಕಾಮದೇವನ ನೇರವಾದ ಶಿಕ್ಷಾದಂಡವೋ? (ಪಾಠಶಾಲೆಯಲ್ಲಿ ಶಿಕ್ಷಕನು ಕೋಲನ್ನು ತೋರಿಸಿ ವಿದ್ಯಾರ್ಥಿಗಳನ್ನು ಪಾಠಗಳಲ್ಲಿ ತೊಡಗಿಸುವಂತೆ ಕಾಮದೇವನೂ ಸಹ ಕಾಮುಕರಿಗೆ ಈಕೆಯನ್ನು ತೋರಿಸಿ ತನ್ನ ಪ್ರಯೋಗವನ್ನು ಸಾಧಿಸುವನು.)" ಇಲ್ಲಿ ಉಪಮೇಯವೆನಿಸಿದ ಸುಂದರಿಯಲ್ಲಿ ಉಪಮಾನವೆನಿಸಿದ ಲತೆ, ತರಂಗ, ಶಿಕ್ಷಾದಂಡ ಇವುಗಳ ಅಭೇದದ ಬಗ್ಗೆ ಕೊನೆಯತನಕ ಸಂಶಯವೇ ಉಳಿಯುವುದರಿಂದ ಇದು ಶುದ್ಧಸಂದೇಹವೆನಿಸಿದೆ. ಎಲ್ಲಿ ಮೊದಲು ಕೊನೆಗಳಲ್ಲಿ ಸಂಶಯವಿದ್ದು ಮಧ್ಯದಲ್ಲಿ ಮಾತ್ರ ನಿಶ್ಚಯವಿರುವುದೋ ಅದು ನಿಶ್ಚಯ ಮಧ್ಯವೆನಿಸುವುದು. ಒಬ್ಬ ರಾಜನ ಪ್ರಶಂಸೆಯಲ್ಲಿ ಇದನ್ನು ಕಾಣಬಹುದು. "ಇಲ್ಲಿ ಕಾಣುವ ವಸ್ತು ಸೂರ್ಯನೇ ಎಂದು ಸಂಶಯವಿದೆ. ಅವನಾದರೋ ಏಳು ಕುದುರೆಗಳ ಮೇಲೆ ಸಂಚರಿಸುತ್ತಾನೆ. ಇವನಾದರೂ ಒಂದೇ ಕುದುರೆಯ ಮೇಲೆ ತಿರುಗುವನು. ಆದ್ದರಿಂದ ಇವನು ಸೂರ್ಯನಲ್ಲವೆಂಬ ನಿಶ್ಚಯವಿದೆ. ಹಾಗಾದರೆ ಇವನು ಅಗ್ನಿಯೇ ? ಅಗ್ನಿಯು ನಿಶ್ಚಯವಾಗಿ ಎಲ್ಲಾ ದಿಕ್ಕುಗಳಿಗೂ ವ್ಯಾಪಿಸುವುದಿಲ್ಲ. ಇವನಾದರೋ ಎಲ್ಲಾ ದಿಕ್ಕುಗಳಿಗೂ ವ್ಯಾಪಿಸುವನು. ಆದ್ದರಿಂದ ಇವನು ಅಗ್ನಿಯಲ್ಲವೆಂಬ ನಿಶ್ಚಯವಿದೆ. ಹಾಗಾದರೆ ಇವನು ಸಾಕ್ಷಾತ್ ಯಮನೋ ? ಅವನಿಗೆ ಎಮ್ಮೆಯೇ ವಾಹನವೆನಿಸಿದೆ. ಇವನಾದರೋ ಅಶ್ವವಾಹನನೆನಿಸಿರುವುದರಿಂದ ಯಮನೂ ಅಲ್ಲ.

ಹಾಗಾದರೆ ಇವನು ಯಾರು ? ಎಲೈ ರಾಜನೇ, ಯುದ್ಧದಲ್ಲಿ ನಿನ್ನನ್ನು ನೋಡಿ ಶತ್ರು ರಾಜರು ಈ ರೀತಿಯಲ್ಲಿ ಅನೇಕ ಸಂಶಯಗಳನ್ನು ಕಲ್ಪಿಸಿಕೊಳ್ಳುವರು'' ಇಲ್ಲಿ ಉಪಮೇಯವೆನಿಸಿದ ರಾಜನಲ್ಲಿ ಉಪಮಾನವೆನಿಸಿದ ಸೂರ್ಯ, ಅಗ್ನಿ ಯಮ ಇವರ ಅಭೇದದ ಬಗ್ಗೆ ಸಂಶಯವು ಆದಿಯಲ್ಲೂ ಕೊನೆಯಲ್ಲೂ ಇದ್ದು ಮಧ್ಯದಲ್ಲಿ ನಿಶ್ಚಯವನ್ನು ತಿಳಿಸಿರುವುದರಿಂದ ಇಲ್ಲಿ ತೋರುವ ಸಂಶಯವು ನಿಶ್ಚಯಗರ್ಭವೆನಿಸಿದೆ.

ಇಲ್ಲಿ ಮಧ್ಯದಲ್ಲಿ ಸೂರ್ಯನಲ್ಲವೆಂಬ ನಿಶ್ಚಯವಿದೆ. ಇವನು ರಾಜನೆಂಬ ಬಗ್ಗೆ ಎರಡನೆಯ ಸಾರಿ ನಿಶ್ಚಯವಿರುವುದಾದರೆ ಮತ್ತೆ ಸಂಶಯವು ಹುಟ್ಟುವ ಸಂಭವವೇ ಇರುವುದಿಲ್ಲ. ಮೂರನೆಯ ಸಾರಿ ನಿಶ್ಚಯವಿದ್ದರೆ ಶತ್ರುಗಳಿಗೆ ಹೀಗೆ ವಿಕಲ್ಪಗಳು ಹುಟ್ಟುತ್ತವೆ ಎಂದು ಹೇಳಿದ್ದೇ ಅಯುಕ್ತವೆನಿಸುತ್ತಿತ್ತು. ಆದ್ದರಿಂದ ಕೊನೆಯಲ್ಲೂ ಸಹ ಸಂಶಯವೇ ಇತ್ತೆಂದು ತಿಳಿಯಬೇಕು. ಎಲ್ಲಿ ಮೊದಲು ಸಂಶಯವಿದ್ದು ಕೊನೆಯಲ್ಲಿ ನಿಶ್ಚಯವಾಗುವುದೋ ಅಲ್ಲಿ ತೋರುವ ಸಂಶಯವು ನಿಶ್ಚಯಾಂತವೆನಿಸುವುದು. "ಸರೋವರದಲ್ಲಿ ದೂರದಲ್ಲಿ ಕಾಣುತ್ತಿರುವುದು ಕಮಲವೇ? ಅಥವಾ ಒಬ್ಬ ಯುವತಿಯ ಮುಖವು ಹಾಗೆ ಪ್ರಕಾಶಿಸುತ್ತಿರುವುದೆ? ಹೀಗೆ ಒಂದು ಕ್ಷಣಕಾಲದವರೆವಿಗೆ ಸಂಶಯಪಟ್ಟು ಒಬ್ಬನು ಬಕಪಕ್ಷಿಗಳೊಡನೆ ಇರುವುದರಿಂದ ವಿಲಾಸವನ್ನರಿಯದ ಪದ್ಮಗಳಿಗೆ ಸಂಬಂಧಿಸದ ಭಾವವಿಶೇಷಗಳು ಅಲ್ಲಿ ಇರುವ ಪ್ರಯುಕ್ತ ಇದು ತರುಣಿಯ ಮುಖವೆಂದು ನಿಶ್ಚಯಿಸಿದನು" ಇಲ್ಲಿ ಉಪಮೇಯವೆನಿಸಿದ ತರುಣಿಯ ಮುಖದಲ್ಲಿ ಉಪಮಾನವೆನಿಸಿದ ಪದ್ಮವೆಂಬ ಸಂಶಯವು ಮೊದಲು ತೋರಿ ಕೊನೆಗೆ ಅದು ಮುಖವೆಂದು ನಿಶ್ಚಯವು ಬರುವುದರಿಂದ ಇದು ನಿಶ್ಚಯಾಂತಸಂಶಯವೆನಿಸಿದೆ. ಕವಿಪ್ರೌಢೋಕ್ತಿಯಿಂದ ಸಂಶಯವು ತೋರದೆ ವಸ್ತುಸ್ವಭಾವದಿಂದ ತೋರುವುದಾದರೆ ಅಲ್ಲಿ ಅಲಂಕಾರವೇ ಇರುವುದಿಲ್ಲ. 'ಸ್ಥಾಣುರ್ವಾ ಪುರುಷೋ ವಾ' ಎಂಬಲ್ಲಿ ಯಾವ ವೈಚಿತ್ರ್ಯವೂ ಇಲ್ಲದ್ದರಿಂದ ಅಲಂಕಾರದ ಸಾಮಾನ್ಯಲಕ್ಷಣವೇ ಹೊಂದದೇ ಇರುವ ಪ್ರಯುಕ್ತ ಅಲ್ಲಿ ಸಂದೇಹಾಲಂಕಾರವೂ ಸಂಭವಿಸುವುದಿಲ್ಲ. "ಎಲೈ ಪ್ರೇಯಸಿ! ಸ್ತನಗಳ ಭಾರದಿಂದ ಹಿಂಸೆಗೆ ಸಿಕ್ಕಿರುವ ನಿನ್ನ ಮಧ್ಯಪ್ರದೇಶವು ಇದೆಯೋ ಇಲ್ಲವೋ ಎಂಬ ಸಂದೇಹವು ಯಾವನ ಮನಸ್ಸಿನಲ್ಲಿ ತಾನೆ ಹೊಳೆಯುವುದಿಲ್ಲ ? ಅಂದರೆ ಎಲ್ಲರಿಗೂ ಹೊಳೆಯುತ್ತದೆ ಎಂದು ಅರ್ಥವಾಯಿತು." ಇಲ್ಲಿ ಚಿತ್ತದಲ್ಲಿ ಅಂತಹ ಸಂದೇಹಕ್ಕೆ ಸಂಬಂಧವಿಲ್ಲದಿದ್ದರೂ ಸಂಬಂಧವನ್ನು ತಿಳಿಸಿರುವುದೇ ಅತಿಶಯೋಕ್ತಿಎಂದೇ ಹೇಳಬೇಕು.ಉಪಮೇಯದಲ್ಲಿ ಉಪಮಾನದ ಸಂಶಯವಿದ್ದರೆ ಮಾತ್ರವೇ ಮಧ್ಯಪ್ರದೇಶವು ಇದೆಯೋ ಇಲ್ಲವೋ ಎಂಬ ಸಂಶಯವು ಕಂಡುಬಂದರೂ ಉಪಮೇಯದಲ್ಲಿ ಉಪಮಾನದ ಸಂಶಯವಿಲ್ಲದ್ದರಿಂದ ಇದು ಸಂಶಯಾಲಂಕಾರದ ಉದಾಹರಣವಾಗದೆ ಅತಿಶಯೋಕ್ತಿಗೆ ಉದಾಹರಣವಾಗುವುದು.

ಬೇರೊಂದು ವಸ್ತುವಿನ ಸಾದೃಶ್ಯದಿಂದ ಅದಲ್ಲದಿರುವ ವಸ್ತುವಿನಲ್ಲಿ ಅದೆಂದು ಭ್ರಾಂತಿಯು ಕವಿಪ್ರತಿಭೆಯಿಂದ ಎಲ್ಲಿ ತೋರುವುದೋ ಅಲ್ಲಿ ಭ್ರಾಂತಿಮದಲಂಕಾರ

ವಿರುವುದು. ಒಂದರಲ್ಲಿ ಮತ್ತೊಂದನ್ನು ಆರೋಪಿಸುವುದು ರೂಪಕವೆನಿಸುವುದು. ಒಂದ ರಲ್ಲಿ ಮತ್ತೊಂದೆಂದು ನಿಶ್ಚಯಸುವುದು ಅತಿಶಯೋಕ್ತಿ ಎನಿಸುವುದು. ಒಂದು ವಸ್ತುವಿನಲ್ಲಿ ಮತ್ತೊಂದು ಭ್ರಾಂತಿಯುಂಟಾಗುವುದೇ ಭ್ರಾಂತಿಮದಲಂಕಾರವೆನಿಸುವುದು. ಆರೋಪ, ಅಧ್ಯವಸಾನ, ಭ್ರಮೆ ಇವುಗಳಿಗೆ ಭೇದವು ಸಹಜವೇ ಆಗಿದೆ. "ಸರಳಸ್ವಭಾವದ ಗೊಲ್ಲರು ತಮ್ಮ ಸುತ್ತಲೂ ವ್ಯಾಪಿಸಿರುವ ಚಂದ್ರಿಕೆಯಲ್ಲಿ ಹಾಲೆಂಬ ಭ್ರಾಂತಿಯಿಂದ ಗೋವುಗಳ ಸ್ತನಪ್ರದೇಶದಲ್ಲಿ ಹಾಲಿನ ಪಾತ್ರೆಗಳನ್ನು ಇಡುವರು. ಸ್ತ್ರೀಯರೂ ಸಹ ಚಂದ್ರಿಕೆಯಲ್ಲಿ ಶ್ವೇತೋತ್ಪಲವೆಂಬ ಭ್ರಾಂತಿಯಿಂದ ಕಿವಿಗಳಲ್ಲಿ ನೀಲೋತ್ಪಲವನ್ನು ಧರಿಸುತ್ತಾರೆ. ಹಾಗೆಯೇ ಕಿರಾತಸ್ತ್ರೀಯು ಮುತ್ತು ದೊರೆಯುವುದೆಂಬ ಆಕಾಂಕ್ಷೆ ಯಿಂದ ಬದರೀಫಲವನ್ನು ಸಂಗ್ರಹಿಸುತ್ತಾಳೆ. ಆದ್ದರಿಂದಲೇ ನಿಬಿಡವಾಗಿ ವ್ಯಾಪಿಸಿರುವ ಚಂದ್ರನ ಬೆಳಕು ಯಾರಿಗೆ ತಾನೇ ಮನಸ್ಸಿನಲ್ಲಿ ಹಾಲಿನ ಭ್ರಾಂತಿಯನ್ನು ಹುಟ್ಟಿಸುವು ದಿಲ್ಲ?" ಹೀಗೆ ಚಂದ್ರಿಕೆಯಲ್ಲಿ ಹಾಲೆಂದೂ, ನೀಲೋತ್ಪಲದಲ್ಲಿ ಶ್ವೇತೋತ್ಪಲವೆಂದೂ, ಬದರೀಫಲದಲ್ಲಿ ಮುತ್ತೆಂದೂ ಜ್ಞಾನವುಂಟಾಗುವುದರಿಂದ ಇದು ಭ್ರಾಂತಿಮದಲಂ ಕಾರವೆನಿಸಿದೆ.

ಭ್ರಾಂತಿಯು ಕವಿಯ ಪ್ರತಿಭೆಯಿಂದಲೇ ತೋರಬೇಕೆಂದು ಹೇಳಿದ್ದರಿಂದ ವಸ್ತುವಿನ ಸ್ವಭಾವದಿಂದ ಹುಟ್ಟಿರುವುದಾದರೆ ಅಲ್ಲಿ ಭ್ರಾಂತಿಮದಲಂಕಾರವಿರುವುದಿಲ್ಲ. ಕಪ್ಪೆಚಿಪ್ಪಿನಲ್ಲಿ ಬೆಳ್ಳಿ ಎಂಬ ಜ್ಞಾನವು ಪ್ರಕಾಶರೂಪವಾದ ಸಾಮ್ಯವಿರುವ ಪ್ರಯುಕ್ತ ಹುಟ್ಟಿದರೂ ಅಲ್ಲಿ ವೈಚಿತ್ಯವಿಲ್ಲದ್ದರಿಂದ ಅದು ಅಲಂಕಾರವೆನಿಸುವುದಿಲ್ಲ. ಸಾದೃಶ್ಯದ ಮೂಲಕ ಭ್ರಾಂತಿಯು ತೋರದೇ ಇದ್ದರೂ ಅದು ಅಲಂಕಾರವೆನಿಸುವುದಿಲ್ಲ. ಸಖಿಯ ಎದುರಿಗೆ ವಿರಹಿಯೊಬ್ಬನ ಅನುತಾಪದ ಮಾತಿನಲ್ಲಿ ಇದು ತಿಳಿದುಬರುತ್ತದೆ. "ಆ ಪ್ರೇಯಸಿಯ ಸಮಾಗಮ ವಿರಹಗಳಲ್ಲಿ ಯಾವುದು ಉತ್ತಮವೆಂಬುದನ್ನು ವಿವೇಚನ ಮಾಡಬೇಕಾದರೆ ವಿರಹವೇ ಉತ್ತಮ, ಸಮಾಗಮವಲ್ಲವೆಂದೇ ನಿಶ್ಚಯಿಸಬೇಕು. ಸಮಾಗಮದಲ್ಲಾದರೋ ಎದುರಿಗೆ ಕಾಣುವ ಆ ಪ್ರೇಯಸಿಯೊಬ್ಬಳೇ ಇರುವಳು. ವಿರಹದಲ್ಲಾದರೋ ಮೂರುಲೋಕಗಳೂ ಪ್ರಿಯೆಯೊಡಗೂಡಿದಂತೆಯೇ ಕಾಣಬರು ವುವು. ಹೀಗೆ ಎಲ್ಲೆಲ್ಲಿಯೂ ಅವಳೇ ಕಾಣಬರುವ ಪ್ರಯುಕ್ತ ವಿರಹವೇ ಉತ್ತಮ ವೆನಿಸುತ್ತದೆ" ಇಲ್ಲಿ ವಿರಹಾವಸ್ಥೆಯಲ್ಲಿ ಅವಳ ಕಡೆಯೇ ಮನಸ್ಸು ಅಂಟಿರುವುದರಿಂದ ಮೂರುಲೋಕಗಳಲ್ಲಿ ಪ್ರತಿಯೊಂದು ವಸ್ತುವಿನಲ್ಲೂ ಪ್ರೇಯಸಿಯ ಭ್ರಾಂತಿಯೇ ಇದ್ದರೂ ಸಹ ಆ ಬಗೆಯ ಭ್ರಾಂತಿಯು ಸಾದೃಶ್ಯವನ್ನವಲಂಬಿಸದೇ ಇರುವುದರಿಂದ ಅಲಂಕಾರವೆನಿಸುವುದಿಲ್ಲ.

ಭ್ರಾಂತಿಮದಲಂಕಾರವನ್ನು ತಿಳಿಸಿಯಾದಮೇಲೆ ಅದರ ನೆರಳನ್ನು ಹಿಂಬಾಲಿ ಸುವ ಉಲ್ಲೇಖಾಲಂಕಾರವನ್ನು ವಿವರಿಸುತ್ತಾನೆ. ಕೆಲವು ಕಡೆಗಳಲ್ಲಿ ತಿಳಿಯುವವರು ಬೇರೆ ಬೇರೆಯಾಗಿರುವುದರಿಂದಲೂ, ಕೆಲವುಕಡೆ ವ್ಯಾವರ್ತಕಧರ್ಮಗಳ ಭೇದ ದಿಂದಲೂ ಒಂದೇ ಪದಾರ್ಥವನ್ನು ಅನೇಕ ರೀತಿಗಳಲ್ಲಿ ತಿಳಿಸುವುದೇ ಉಲ್ಲೇಖಾ

ಲಂಕಾರವೆನಿಸುವುದು. ಗ್ರಹೀತೃಭೇದದಿಂದ ತೋರುವ ಉಲ್ಲೇಖವನ್ನು ಉದಾಹರಿಸುತ್ತಾನೆ. "ಗೊಲ್ಲರ ಸ್ತ್ರೀಯರು ಕೃಷ್ಣನನ್ನು ಪ್ರಿಯನೆಂದೂ, ನಂದ ಮೊದಲಾದ ವೃದ್ಧರು ಶಿಶುವೆಂದೂ, ಇಂದ್ರ ಮೊದಲಾದ ದೇವತೆಗಳು ಅಧಿಪತಿ ಎಂದೂ, ನಾರದ ಮೊದಲಾದ ಭಕ್ತರು ನಾರಾಯಣನೆಂದೂ, ಕಪಿಲ ಮೊದಲಾದ ಯೋಗಿಗಳು ಪರಮಾತ್ಮನೆಂದೂ ತಿಳಿದರು" ಇಲ್ಲಿ ಒಬ್ಬ ಕೃಷ್ಣನೇ ಅನೇಕ ಬಗೆಯಾಗಿ ಕಾಣುವುದಕ್ಕೆ ಪ್ರಯೋಜಕವಾದ ಅಂಶವು ಯಾವುದೆಂಬುದನ್ನು ತಿಳಿಸುತ್ತಾನೆ. ತದ್ಗುಣಯೋಗವೇ ಇಲ್ಲಿ ಪ್ರಯೋಜಕಾಂಶ. ಅವನು ಒಂದೊಂದು ಬಗೆಯಾಗಿ ಕಾಣಲು ಅನುಕೂಲವಾದ ಗುಣಗಳು ಇವೆ. ಗೊಲ್ಲರ ಹೆಂಗಸರಿಗೆ ಅವನಲ್ಲಿ ಪ್ರೀತಿ ಇರುವುದರಿಂದ ಅವನು ಪ್ರಿಯನೆನಿಸಿರುವನು. ಹಾಗೆಯೇ ವೃದ್ಧರಿಗೆ ಕೇಳಿದ್ದನ್ನು ಕೊಡುವುದರಿಂದ ಶಿಶುವೆನಿಸಿರುವನು. ದೇವತೆಗಳನ್ನು ರಕ್ಷಣೆಮಾಡುವ ಪ್ರಯುಕ್ತ ಪ್ರಭು ಎನಿಸಿರುವನು. ಭಕ್ತರಿಗೆ ಸಂತೋಷದಾಯಕನಾದ್ದರಿಂದ ನಾರಾಯಣನೆನಿಸಿರುವನು. ಯೋಗಿಗಳಿಗೆ ಸಾಮರಸ್ಯಕ್ಕೆ ಅನುಕೂಲನಾದ್ದರಿಂದ ಪರಮಾತ್ಮನೆನಿಸಿರುವನು. ಹೀಗೆ ಅಭಿರುಚಿ, ಇಷ್ಟಾರ್ಥಪ್ರದಾನ, ರಕ್ಷಣ, ಸಂತೋಷಪಡಿಸುವಿಕೆ, ಸಾಮರಸ್ಯ ಇವು ಇರುವ ಪ್ರಯುಕ್ತ ಒಬ್ಬನನ್ನು ಅನೇಕ ಬಗೆಯಾಗಿ ಉಲ್ಲೇಖಿಸಲು ಸಾಧ್ಯವಾಗುತ್ತದೆ. "ಒಬ್ಬ ಪುರುಷನಲ್ಲಿಯೇ ಅವನ ಪತ್ನಿಗೆ ಪ್ರೇಮವು ಹುಟ್ಟುವುದರಿಂದ ಪ್ರಿಯನೆಂಬ ಭಾವನೆ ಬರುತ್ತದೆ. ಪ್ರಭುವಿಗೆ ಸೇವೆಯನ್ನು ಮಾಡುವುದರಿಂದ ಅವನಲ್ಲಿ ದಾಸನೆಂಬ ಭಾವನೆ ಬರುತ್ತದೆ. ಹಾಗೆಯೇ ಗೊಲ್ಲಸ್ತ್ರೀಯರಿಗೂ ಮತ್ತು ವೃದ್ಧರಿಗೂ ಪ್ರೀತಿಗನುಗುಣವಾಗಿ ಪ್ರಿಯ, ಶಿಶು ಎಂದೂ, ದೇವತೆಗಳಿಗೂ, ಭಕ್ತರಿಗೂ, ಪ್ರಯೋಜನಕ್ಕೆ ಅನುಗುಣವಾಗಿ ಪ್ರಭು, ನಾರಾಯಣನೆಂದೂ, ಯೋಗಿಗಳಿಗೆ ನಿತ್ಯಾನುಸಂಧಾನದಿಂದ ಸಾಧ್ಯವಾಗುವ ಪ್ರಯುಕ್ತ ಪರಮಾತ್ಮನೆಂದೂ ಈ ಬಗೆಯ ಬೇರೆ ಬೇರೆಬಗೆಯ ಜ್ಞಾನವು ಹುಟ್ಟುತ್ತದೆ." ಹೀಗೆ ಅನುಭವಿಗಳು ಹೇಳಿದ್ದಾರೆ. "ಮುಖಪದ್ಮಂ ಎಂಬಲ್ಲಿ ಪದ್ಮವನ್ನಾರೋಪಿಸುವಂತೆ ನಿರ್ವಿಕಾರನಾದ ಕೃಷ್ಣನಲ್ಲಿ ಪ್ರಿಯನೆಂದೂ ಪ್ರಭುವೆಂದೂ ಬೇರೆ ಬೇರೆ ರೀತಿಗಳಲ್ಲಿ ಆರೋಪಿಸುವುದರಿಂದ ಇದು ಮಾಲಾರೂಪಕವಾಗಲಿ. ಕ್ರಿಯೆಯಾಗಲೀ, ಗುಣವಾಗಲೀ ಇಲ್ಲದಿರುವ ಕೃಷ್ಣನು ಗೊಲ್ಲರ ಹೆಂಗಸರಿಗೆ ಪ್ರೀತಿಯನ್ನು ಹುಟ್ಟಿಸಿದನೆಂದೂ, ಜಗತ್ತಿಗೇ ಹಿರಿಯನಾದವನು ನಂದ ಮೊದಲಾದವರಿಗೆ ಶಿಶುವೆಂದೂ, ನಂದ ಮೊದಲಾದವರಿಗೆ ಅಧೀನನಾದವನು ದೇವತೆಗಳಿಗೂ ಅಧೀಶನೆಂದೂ, ವಸುದೇವನ ಮಗನು ಭಕ್ತರಿಗೆ ನಾರಾಯಣನೆಂದೂ, ಮಾನವನೆನಿಸಿದವನು ಯೋಗಿಗಳಿಗೆ ಪರಮಾತ್ಮನೆಂದೂ ಭ್ರಮೆ ಉಂಟಾಗುವುದರಿಂದ ಇದು ಭ್ರಾಂತಿಮದಲಂಕಾರವೇ ಆಗಲಿ. ಇಲ್ಲಿ ಏಕೆ ಉಲ್ಲೇಖವನ್ನು ಹೇಳಬೇಕು" ಎಂದು ಆಕ್ಷೇಪಿಸಿ ಸಮಾಧಾನಮಾಡುತ್ತಾನೆ. ಇಲ್ಲಿ ಗೋಪಿಯರಿಗೆ ಕೃಷ್ಣನು ಪ್ರಿಯನೆನಿಸಿದ್ದು ಯಥಾರ್ಥವೇ ಆದ್ದರಿಂದಲೂ, ಹೀಗೆಯೇ ಎಲ್ಲರಿಗೂ ಬೇರೆ ಬೇರೆಯಾಗಿ ತಿಳಿದುಬರುವುದರಿಂದಲೂ, ತಿಳಿಯುವವರೂ ಸಹ ಬೇರೆಬೇರೆಯಾಗಿರುವುದರಿಂದಲೂ ಇಲ್ಲಿ ಮಾಲಾರೂಪಕವಾಗಲೀ, ಭ್ರಾಂತಿಮದಲಂಕಾರವಾಗಲೀ

ಹೊಂದುವುದಿಲ್ಲ. ಹಾಗಾದರೆ ಒಂದೇ ಬಗೆ ಎನಿಸಿರುವ ಕೃಷ್ಣನಲ್ಲಿ ಪ್ರಿಯ, ಶಿಶು, ಪತಿ ಎಂದು ಭೇದವನ್ನು ನಿಶ್ಚಯಿಸಿರುವುದರಿಂದ ಅತಿಶಯೋಕ್ತಿಯನ್ನೇ ಹೇಳೋಣವೆಂದರೆ ಅವನ್ನು ಹೇಳಲಿಕ್ಕೂ ಬರುವಂತಿಲ್ಲ. ಅಭೇದದಲ್ಲಿ ಭೇದವನ್ನು ನಿಶ್ಚಯಿಸುವುದೆಂದರೆ ಇವನ ಲಾವಣ್ಯವು ಎಲ್ಲರದಕ್ಕಿಂತಲೂ ಬೇರೆಯಾದುದು ಎಂದು ಮುಂತಾಗಿ ನಿಶ್ಚಯಿಸುವುದೇ ಆಗಿದೆ. ಆಗಲೇ ಅತಿಶಯೋಕ್ತಿಗೆ ಅವಕಾಶವಾಗುತ್ತದೆ. ಇಲ್ಲಿಯಾದರೋ ಅಂತಹ ನಿಶ್ಚಯಕ್ಕೆ ಅವಕಾಶವಿಲ್ಲ. ಗೊಲ್ಲಸ್ತ್ರೀಯರೇ ಮೊದಲಾದವರು ಕೃಷ್ಣನನ್ನು ಪ್ರಿಯ ಎಂದು ಮುಂತಾಗಿ ನಿಶ್ಚಯಿಸಬೇಕಾಗಿಲ್ಲ. ಅವರಿಗೆ ಆ ಕಾಲದಲ್ಲಿ ಅವನು ಪ್ರಿಯನೆಂಬುದು ಅವನಲ್ಲಿ ತಾತ್ತ್ವಿಕವೇ ಆಗಿತ್ತು. ಅವನು ಯಥಾರ್ಥವಾಗಿ ಪ್ರಿಯನೂ, ಶಿಶುವೂ, ಪ್ರಭುವೂ ಆಗಿದ್ದರಿಂದ ಹಾಗೆ ನಿಶ್ಚಯಿಸಬೇಕಾಗಿಯೇ ಇರಲಿಲ್ಲ. ಆದ್ದರಿಂದ ಇಲ್ಲಿ ಅತಿಶಯೋಕ್ತಿಗೆ ಏನೂ ಕೆಲಸವಿಲ್ಲ.

ಕೆಲವರು "ಈ ಉಲ್ಲೇಖಾಲಂಕಾರಕ್ಕೆ ಬೇರೊಂದು ಅಲಂಕಾರದಿಂದ ತೋರುವ ವೈಚಿತ್ರ್ಯವೇ ಮೂಲವೆನಿಸಿದೆ. ಬೇರೊಂದು ಅಲಂಕಾರದಿಂದ ತೋರುವ ಚಮತ್ಕಾರದಿಂದಲೇ ಈ ಅಲಂಕಾರಕ್ಕೆ ಅವಕಾಶವಾಗುತ್ತದೆ. ಆದರೆ ಇದು ಸ್ವತಃ ಸಂಭವಿಸುವುದಿಲ್ಲ. ಕೃಷ್ಣನು ಗೊಲ್ಲಸ್ತ್ರೀಯರ ಎದುರಿಗೆ ಪ್ರಿಯನೇ; ನಂದ ಮೊದಲಾದ ವೃದ್ಧರ ಎದುರಿಗೆ ಬಾಲಕನೇ; ಹೀಗೆ ನಿಯಮಾನುಸಾರವಾಗಿ ಇಲ್ಲಿ ಹೇಳಿರುವುದರಿಂದ ಪ್ರಿಯನೆನಿಸಿದ್ದಕ್ಕೂ ಶಿಶುವೆನಿಸಿದ್ದಕ್ಕೂ ಭೇದವನ್ನು ನಿಶ್ಚಯಿಸಲೇಬೇಕಾದ್ದರಿಂದ ಇಲ್ಲಿ ಅತಿಶಯೋಕ್ತಿ ಇದೆ. ಅದು ಇದ್ದರೂ ಸಹ ಗ್ರಹಿಸುವವರು ಬೇರೆ ಬೇರೆಯಾದ್ದರಿಂದ ಅವನು ಅವರವರ ದರುಶನಕ್ಕೆ ತಕ್ಕಹಾಗೆ ಬೇರೆ ಬೇರೆ ರೀತಿಯಲ್ಲಿ ಕಂಡುಬಂದದ್ದರಲ್ಲಿಯೂ ಒಂದು ಬಗೆಯ ವೈಚಿತ್ರ್ಯವಿರುವುದರಿಂದ ಉಲ್ಲೇಖವೆಂಬ ಬೇರೊಂದು ಅಲಂಕಾವಿರಲಿಕ್ಕೂ ಅವಕಾಶವಿದೆ. ಶ್ರೀಕಂಠವೆಂಬ ದೇಶವನ್ನು ವರ್ಣಿಸುವಾಗ' 'ಶರಣಾಗತರು ಅದನ್ನು ವಜ್ರಪಂಜರವೆಂದೂ, ವಾತರೋಗಿಗಳು ಆಕಾಶವೆಂಬ ಬಯಲೆಂದೂ ತಿಳಿವರು' ಎಂದು ಈ ಬಗೆಯ ಉದಾಹರಣಗಳು ಅತಿಶಯೋಕ್ತಿಗಿಂತ ಬೇರೆಯೇ ಆಗಿವೆ. ಇಲ್ಲಿ ದೇಶದಲ್ಲಿ ವಜ್ರಪಂಜರವೆಂದೂ, ಬಯಲೆಂದೂ ಆರೋಪಿಸಿರುವ ಪ್ರಯುಕ್ತ ರೂಪಕಾಲಂಕಾರವೂ ಸೇರಿಕೊಂಡಿದೆ. ಆದ್ದರಿಂದ ವಜ್ರಪಂಜರಂ ಎಂಬಲ್ಲಿ ರೂಪಾಲಂಕಾರದಿಂದ ತೋರುವ ವೈಚಿತ್ರ್ಯವನ್ನು ಅವಲಂಬಿಸಿಕೊಂಡೇ ಉಲ್ಲೇಖಾಲಂಕಾರವೂ ಇರುತ್ತದೆ" ಎಂದು ಹೇಳುತ್ತಾರೆ.

ವಾಸ್ತವವಾಗಿ 'ಅಂಬರವಿವರಂ' ಎಂಬಲ್ಲಿ ಭ್ರಾಂತಿಮದಲಂಕಾರವಿದೆಯೇ ಹೊರತು ರೂಪಕಾಲಂಕಾರವಿಲ್ಲ. ಎರಡು ವಸ್ತುಗಳಿಗೆ ಭೇದವಿರುವಾಗಲೇ ಅದನ್ನು ಅವಲಂಬಿಸಿಕೊಂಡೇ-ಆರೋಪಿಸುವುದು ಸಾರೋಪಗೌಣೀಲಕ್ಷಣೆಯನ್ನು ಅವಲಂಬಿಸಿದ ರೂಪಕಕ್ಕೆ ಪ್ರಯೋಜಕವಾಗುವುದು. ಇಲ್ಲಿಯಾದರೋ ಶ್ರೀಕಂಠದೇಶಕ್ಕೂ ವಜ್ರಪಂಜರಕ್ಕೂ ಪರಸ್ಪರವಾಗಿ ಭೇದವು ತೋರುತ್ತಿಲ್ಲ. ಇದೂ ಅಲ್ಲದೆ, ಇಲ್ಲಿ ಸಾರೋಪಗೌಣೀಲಕ್ಷಣೆಯೂ ಪ್ರವರ್ತಿಸುವಂತಿಲ್ಲ. ಆದ್ದರಿಂದ ಇಲ್ಲಿ ರೂಪಕಕ್ಕೆ ಅವಕಾಶವಿಲ್ಲ;

ಆದರೆ 'ಮುಗ್ಧಾ ದುಗ್ಧಧಿಯಾ' ಎಂಬಲ್ಲಿರುವಂತೆ ಶ್ರೀಕಂಠದೇಶದಲ್ಲಿ ಬಯಲೆಂಬ ಭ್ರಾಂತಿಯು ತೋರುವುದರಿಂದ ಇದು ಭ್ರಾಂತಿಮದಲಂಕಾರವೇ ಆಗುತ್ತದೆ. ರೂಪಕಾಲಂಕಾರಕ್ಕೆ ಮೂಲವೆನಿಸಿದ ಸಾರೋಪಗೌಣೀಲಕ್ಷಣೆಯು ಭೇದಜ್ಞಾನವನ್ನೇ ಅವಲಂಬಿಸಿರುವುದಕ್ಕೆ ಪ್ರಮಾಣವನ್ನು ತಿಳಿಸುತ್ತಾನೆ. ಬ್ರಹ್ಮಮೀಮಾಂಸೆಗೆ ಭಾಷ್ಯ ವೆನಿಸಿದ ಭಾಮತಿಯಲ್ಲಿ ವಾಚಸ್ಪತಿಮಿತ್ರರು "ಅನ್ಯ ಎಂಬುದನ್ನು ತಿಳಿಸುವ ಪರಶಬ್ದವು ಬೇರೊಬ್ಬನಲ್ಲಿ ಸಾಮಾನ್ಯಧರ್ಮವೆನಿಸಿದ ಗುಣದ ಯೋಗದಿಂದ ಸಂಬಂಧಿಸುತ್ತದೆ. ಯಾವ ಶಬ್ದವನ್ನು ಪ್ರಯೋಗಿಸಿದಾಗ ಕೇಳುವವನಿಗೂ ಹೇಳುವವನಿಗೂ ಸಾಮಾನ್ಯ ಧರ್ಮವು ಸಾಮಾನ್ಯವಾಗಿ ತಿಳಿದುಬರುವುದೋ ಆ ಮೂಲಕವೇ ಗೌಣಪ್ರಯೋಗವು ಆರಂಭವಾಗುವುದು. ಗೌಣವ್ಯವಹಾರವು ಭೇದಜ್ಞಾನದ ಮೇಲೆಯೇ ನಿಂತಿದೆ. ಗೌರ್ವಾಹೀಕಃ ಎಂಬಲ್ಲಿ ಗೋವು ವಾಹೀಕ ಇವರಿಬ್ಬರಿಗೂ ಮೊದಲು ಭೇದವು ತೋರು ತ್ತದೆ. ಆಮೇಲೆ ಗೋಶಬ್ದವು ಜಾಡ್ಯ ಮಾಂದ್ಯ ಮೊದಲಾದ ಸಾಮಾನ್ಯಧರ್ಮದ ಸಂಬಂಧದಿಂದ ವಾಹೀಕ ಎಂಬ ಅರ್ಥದಲ್ಲಿ ಪ್ರವರ್ತಿಸುತ್ತದೆ. ಆಗಲೇ ಹೇಳುವವನಿಗೂ ಕೇಳುವವನಿಗೂ ಸಾಮಾನ್ಯಧರ್ಮದ ಜ್ಞಾನವುಂಟಾಗಿ ಅದು ಗೋವು ವಾಹೀಕ ಇಬ್ಬರಿಗೂ ಸಮಾನವೆನಿಸುವುದು" ಹೀಗೆ ಅವರು ಹೇಳಿರುವರು. ಇಲ್ಲಿಯಾದರೋ ವಾತರೋಗಿಗಳಿಗೆ ಯಥೇಚ್ಛವಾಗಿ ಸಂಚರಿಸಲು ಅನುಕೂಲವಾದ್ದರಿಂದ ಶ್ರೀಕಂಠ ದೇಶದಲ್ಲಿ ಬಯಲೆಂಬ ಆರೋಪವು ಭ್ರಾಂತಿಯಿಂದಲೇ ತೋರುತ್ತದೆ. ಹೀಗೆ ವಿವಾದಾ ಸ್ಪದವಾದ 'ಅಂಬರವಿವರಂ' ಎಂಬ ಉದಾಹರಣದಲ್ಲಿ ಭ್ರಾಂತಿಮದಲಂಕಾರವೇ ಇರುವುದೆಂದು ತಿಳಿಯಬೇಕು. ಕೆಲವುಕಡೆ ಇವಕ್ಕೆ ವಿರುದ್ಧವಾಗಿರುವುದನ್ನು ಈಗ ಉದಾಹರಿಸುತ್ತಾನೆ. "ತಪೋವನವೆಂದು ಋಷಿಗಳೂ, ಕಾಮದೇವನ ಪೂಜಾಗೃಹ ವೆಂದು ವೇಶ್ಯೆಯರೂ ತಿಳಿದರು" ಇಲ್ಲಿ ದೇಶದಲ್ಲಿ ತಪೋವನ ಮತ್ತು ಕಾಮದೇವನ ನಿಲಯವೆಂದು ಆರೋಪಿಸಿದ್ದು ಋಷಿಗಳಿಗೆ ತಪಶ್ಚರ್ಯೆಗೂ, ವೇಶ್ಯೆಯರಿಗೆ ಕಾಮ ಭೋಗಕ್ಕೂ ಅನುಕೂಲವಾಗಿರುವ ಪ್ರಯುಕ್ತ ಇಲ್ಲಿ ಪರಿಣಾಮಾಲಂಕಾರವು ಸೇರಿ ಕೊಂಡಿದೆ. ಅದರ ವೈಚಿತ್ರ್ಯದ ಮೂಲಕ ಉಲ್ಲೇಖಾಲಂಕಾರವು ಇಲ್ಲಿ ಕಂಡು ಬರುತ್ತದೆ.

ವಿಷಯಭೇದದಿಂದ ತೋರುವ ಉಲ್ಲೇಖಾಲಂಕಾರವನ್ನು ಈಗ ಉದಾಹರಿಸು ತ್ತಾನೆ. "ಗಾಂಭೀರ್ಯದಲ್ಲಿ ನೀನು ಸಮುದ್ರನೆನಿಸಿರುವೆ. ಗೌರವದಿಂದ ಪರ್ವತನೆನಿ ಸಿರುವೆ" ಇಲ್ಲಿ ಒಬ್ಬ ರಾಜನನ್ನೇ ಸಮುದ್ರವೆಂದೂ, ಪರ್ವತವೆಂದೂ ಉಲ್ಲೇಖಿಸಲು ಗಾಂಭೀರ್ಯಗೌರವಗಳೆಂಬ ಬೇರೆ ಬೇರೆ ವಿಷಯಗಳೇ ಸಾಧಕವಾಗಿವೆ. ಇಲ್ಲಿಯಾ ದರೋ 'ಅಸಿ' ಎಂಬಲ್ಲಿ ತೋರುವ ಲಕ್ಷಣೆಯು ಸಾರೋಪವೂ, ಗಾಂಭೀರ್ಯ ಮೊದ ಲಾದ ಸಾದೃಶ್ಯದ ಸಂಬಂಧದಿಂದ ಗೌಣಿಯೂ ಎನಿಸಿವೆ. ಆದ್ದರಿಂದ ಇಲ್ಲಿ ರೂಪಕಾಲಂ ಕಾರದ ಯೋಗದಿಂದ ಉಲ್ಲೇಖವು ತೋರುತ್ತದೆ. 'ಇವನು ಮಾತಿನಲ್ಲಿ ಬೃಹಸ್ಪತಿಯೂ, ಗುರುವೂ, ವಕ್ಷಃಸ್ಥಳದಲ್ಲಿ ಪೃಥುವೂ (ವಿಶಾಲನೂ), ಯಶಸ್ಸಿನಲ್ಲಿ ಅರ್ಜುನನೂ

(ಬಿಳುಪೂ) ಆಗಿರುವನು.' ಇದು ರೂಪಾಲಂಕಾರದ ಸಂಪರ್ಕವಿಲ್ಲದೆ ಉಲ್ಲೇಖಕ್ಕೆ ಉದಾಹರಣವೆನಿಸಿದೆ. ಆದರೆ ಇಲ್ಲಿ ಗುರು ಮೊದಲಾದ ಕಡೆ ದೊಡ್ಡವನು ಬೃಹಸ್ಪತಿ ಹೀಗೆ ಬೇರೆ ಬೇರೆ ಅರ್ಥಗಳು ಶ್ಲೇಷದಿಂದ ತೋರುತ್ತವೆ. ಇವಕ್ಕೆ ಅಭೇದಾಧ್ಯವಸಾನ ವಿರುವ ಪ್ರಯುಕ್ತ ಇಲ್ಲಿ ಅತಿಶಯೋಕ್ತಿಯ ಸಂಪರ್ಕವಿದ್ದೇಇದೆ. ಹೀಗೆ ವಿಷಯ ಭೇದದಿಂದ ಉಲ್ಲೇಖಾಲಂಕಾರವು ತೋರುವ ಕಡೆಯಲ್ಲೂ ಬೇರೆ ಅಲಂಕಾರದ ಸಂಪರ್ಕವಿರಲೇ ಬೇಕು.

ಪ್ರಕೃತಂ ಪ್ರತಿಷಿಧ್ಯಾನ್ಯಸ್ಥಾಪನಂ ಸ್ಯಾದಪಹ್ನುತಿಃ ।

ಇಯಂ ದ್ವಿಧಾ ಕ್ವಚಿದಪಹ್ನವಪೂರ್ವಕ ಆರೋಪಃ, ಕ್ವಚಿದಾರೂಪಪೂರ್ವಕೋಽಪಹ್ನವ ಇತಿ. ಕ್ರಮೇಣೋದಾಹರಣಮ್.

ನೇದಂ ನಭೋಮಂಡಲಮಂಬುರಾಶಿ ನೈತಾಶ್ಚ ತಾರಾ ನವಫೇನಭಂಗಾಃ ॥
ನಾಯಂ ಶಶೀ ಕುಂಡಲಿತಃ ಫಣೀಂದ್ರೋ ನಾಸೌ ಕಳಂಕಃ ಶಯಿತೋ ಮುರಾರಿಃ॥

ಏತದ್ವಿಭಾತಿ ಚರಮಾಚಲಚೂಡಚುಂಬಿ
ಹಿಂಡೀರಪಿಂಡರುಚಿಶೀತಮರೀಚಿಬಿಂಬಮ್ ।
ಪ್ರಜ್ವಾಲಿತಸ್ಯ ರಜನೀಂ ಮದನಾಲಸಸ್ಯ
ಧೂಮಂ ದಧತ್ ಪ್ರಕಟಲಾಂಛನಕೈತವೇನ ॥

ಏನಮ್—"ವಿರಾಜತಿ ವ್ಯೋಮವಪುಃ ಪಯಾಧಿಸ್ತಾರಾಮಾಯಾಸ್ತತ್ರ ಚ ಫೇನಭಂಗಾಃ" ಇತ್ಯಾದ್ಯಾಕಾರೇಣ ಚ ಪ್ರಕೃತನಿಷೇಧಃ ಬೋಧ್ಯಃ.

ಗೋಪನೀಯಂ ಕಮಪ್ಯರ್ಥಂ ದ್ಯೋತಯಿತ್ವಾ ಕಥಂಚನ ।
ಯದಿ ಶ್ಲೇಷೇಣಾನ್ಯಥಾ ವಾಽನ್ಯಥಯೇತ್ ಸಾಪ್ಯಪಹ್ನುತಿಃ ॥

ಶ್ಲೇಷೇಣ ಯಥಾ—ಕಾಲೇ ವಾರಿಧರಾಣಾಮಪತಿತಯಾ ನೈವ ಶಕ್ಯತೇ ಸ್ಥಾತುಮ್।
ಉತ್ಕಂಠಿತಾಪಿ ತರಳೇ ನಹಿ ನಹಿ ಸಖಿ ! ಪಿಚ್ಛಿಲಃ ಪಂಥಾಃ ॥

ಅಥ ಅಪತಿತಯಾ ಇತ್ಯತ್ರ 'ಪತಿಂ ವಿನಾ' ಇತ್ಯುಕ್ತ್ವಾ ಪಶ್ಚಾತ್ ಪತನಾಭಾವೇನ ಇತ್ಯನ್ಯಥಾ ಕೃತಮ್. ಅಶ್ಲೇಷೇಣ ಯಥಾ.

ಇಹ ಪುರೋಽನಿಲಕಂಪಿತವಿಗ್ರಹಾ ಮಿಲತಿ ಕಾ ನ ವನಸ್ಪತಿನಾ ಲತಾ ।
ಸ್ಮರಸಿ ಕಿಂ ಸಖಿ ! ಕಾಂತರತೋತ್ಸವಂ ನಹಿ ಘನಾಗಮರೀತಿರುದಾಹೃತಾ ॥

ವಕ್ರೋಕ್ತೌ ಪರೋಕ್ತೇರನ್ಯಥಾಕಾರಃ ಇಹ ತು ಸ್ವೋಕ್ತೇರೇವೇತಿ ಭೇದಃ. ಗೋಪನಕೃತಾ ಗೋಪನೀಯಸ್ಯಾಪಿ ಪ್ರಥಮಮಭಿಹಿತತ್ವಾಚ್ಚ ವ್ಯಾಜೋಕ್ತೇಃ.

ಅನ್ಯನ್ನಿಷಿಧ್ಯ ಪ್ರಕೃತಸ್ಥಾಪನಂ ನಿಶ್ಚಯಃ ಪುನಃ !

ನಿಶ್ಚಯಾಖ್ಯೋಽಯಮಲಂಕಾರಃ ಅನ್ಯದಿತ್ಯಾರೋಪ್ಯಮಾಣಮ್. ಯಥಾ ಮಮ—ವದನಮಿದಂ ನ ಸರೋಜಂ ನಯನೇ ನೇಂದೀವರೇ ಏತೇ ।
ಇಹ ಸವಿಧೇ ಮುಗ್ಧದೃಶೋ ಭ್ರಮರಃ ! ಮುಧಾ ಕಿಂ ಪರಿಭ್ರಮಸಿ ॥

ಯಥಾ ವಾ—ಹೃದಿ ಬಿಸಲತಾಹಾರೋ ನಾಯಂ ಭುಜಂಗಮನಾಯಕಃ
ಕುವಲಯದಲಶ್ರೇಣೀ ಕಂಠೇ ನ ಸಾ ಗರಲದ್ಯುತಿಃ।
ಮಲಯಜರಜೋ ನೇದಂ ಭಸ್ಮ ಪ್ರಿಯಾರಹಿತೇ ಮಯಿ
ಪ್ರಹರ ನ ಹರಭ್ರಾಂತ್ಯಾಽನಂಗ ಕ್ರುಧಾ ಕಿಮು ಧಾವಸಿ ? ॥

ನ ಹ್ಯಯಂ ನಿಶ್ಚಯಾಂತಃ ಸಂದೇಹಃ, ತತ್ರ ಸಂಶಯನಿಶ್ಚಯಯೋರೇಕಾಶ್ರಯತ್ವೇನ ಅವಸ್ಥಾನಾತ್. ಅತ್ರ ತು ಭ್ರಮರಾದೇಃ ಸಂಶಯೋ ನಾಯಕಾದೇರ್ನಿಶ್ಚಯಃ. ಕಿಂಚ ನ ಭ್ರಮರಾದೇರಪಿ ಸಂಶಯಃ, ಏಕಕೋಟ್ಯಧಿಕೇ ಜ್ಞಾನೇ ತಥಾ ಸವಿಲಾಪಾಗಮನಾಸ್ತಂಭವಾತ್. ತರ್ಹಿ ಭ್ರಾಂತಿಮಾನಸ್ತು. ಅಸ್ತು ನಾಮ ಭ್ರಮರಾದೇರ್ಭ್ರಾಂತಿಃ, ನ ಚೇಹ ತಸ್ಯಾಃ ಚಮತ್ಕಾರವಿಧಾಯಿತ್ವಮ್, ಅಪಿ ತು ತಥಾವಿಧ ನಾಯಕಾದ್ಯುಕ್ತೇರೇವೇತಿ ಸಹೃದಯಸಂವೇದ್ಯಮ್.' ಕಿಂಚ ಅವಿವಕ್ಷಿತೇಽಪಿ ಭ್ರಮರಾದೇಃ ಪತನಾದೌ ಭ್ರಾಂತೌ ವಾ ನಾಯಿಕಾಚಾಟ್ವಾದಿರೂಪೇಣೈವ ಸಂಭವತಿ ತಥಾ ವಿಧೋಕ್ತಿಃ. ನ ಚ ರೂಪಕಧ್ವನಿರಿಯಂ ಮುಖಸ್ಯ ಕಮಲತ್ವೇನ ಅನಿರ್ಧಾರಣಾತ್. ನ ಚ ಅಪಹ್ನುತಿಃ, ಪ್ರಸ್ತುತಸ್ಯ ಅನಿಷೇಧಾತ್ ಇತಿ ಪೃಥಗೇವಾಯಮಲಂಕಾರಶ್ಚಿರಂತನೋಕ್ತಾಲಂಕಾರೇಭ್ಯಃ.

ಶುಕ್ತಿಕಾಯಾಂ ರಜತಧಿಯಾ ಪತತಿ ಪುರುಷೇ 'ಶುಕ್ತಿಕೇಯಂ, ನ ರಜತಂ' ಇತಿ ಕಸ್ಯಚಿದುಕ್ತಿರ್ನಾಯಮಲಂಕಾರಃ ವೈಚಿತ್ರ್ಯಾಭಾವಾತ್.

ಉಪಮಾನೋಪಮೇಯಗಳಿಗೆ ಸಂಬಂಧಿಸಿದ ಅಲಂಕಾರಗಳನ್ನು ನಿರೂಪಿಸುವ ಪ್ರಕರಣದಲ್ಲಿ ಅಪಹ್ನುತ್ಯಲಂಕಾರವು ಅದೇ ಬಗೆಯದಾದ್ದರಿಂದ ಇಲ್ಲಿ ಅದನ್ನು ನಿರೂಪಿಸುತ್ತಾನೆ. ಪ್ರಕೃತ ಸಂದರ್ಭದಲ್ಲಿ ವರ್ಣಿಸಬೇಕಾಗಿರುವ ಉಪಮೇಯವನ್ನು ಶಬ್ದದಿಂದಾಗಲೀ ಅರ್ಥದಿಂದಾಗಲೀ ನಿಷೇಧಿಸಿ ಅದಕ್ಕಿಂತ ಬೇರೆ ಎನಿಸಿದ ಉಪಮಾನವನ್ನು ಅಲ್ಲಿ ಸ್ಥಾಪಿಸುವುದೇ ಅಪಹ್ನುತಿ ಎನಿಸುವುದು. ಕೆಲವು ಕಡೆ ಉಪಮೇಯವನ್ನು ಮೊದಲು ನಿಷೇಧಿಸಿ ಅದರಲ್ಲಿ ಉಪಮಾನವನ್ನು ಆರೋಪಿಸಲಾಗುವುದು. ಕೆಲವು ಕಡೆ ಉಪಮಾನವನ್ನಾರೋಪಿಸಿ ಉಪಮೇಯವನ್ನು ನಿಷೇಧಿಸಲಾಗುವುದು. ಹೀಗೆ ಇದು ಎರಡು ಬಗೆಯಾಗಿದೆ. ಮೊದಲು ನಿಷೇಧಿಸಿ ಆಮೇಲೆ ಆರೋಪಿಸುವುದನ್ನು ಉದಾಹರಿಸುತ್ತಾನೆ. "ಮುಂದೆ ಕಾಣುತ್ತಿರುವುದು ಆಕಾಶಮಂಡಲವಲ್ಲ; ಆದರೆ ಸಮುದ್ರ. (ವೈಶಾಲ್ಯ ಮತ್ತು ನೈರ್ಮಲ್ಯಗಳಿಂದ ಹೀಗೆ ಕಾಣುತ್ತದೆ) ಇಲ್ಲಿ ಕಾಣುವಂತಹವು ನಕ್ಷತ್ರಗಳಲ್ಲ, ಆದರೆ ಹೊಸದಾಗಿ ಬಂದ ಅಲೆಗಳು. ಇಲ್ಲಿ ಕಾಣುತ್ತಿರುವವನು ಚಂದ್ರನಲ್ಲ; ಆದರೆ ಗುಂಡಾಗಿ ಸುತ್ತಿಕೊಂಡಿರುವ ಅನಂತನೆಂಬ ಸರ್ಪ. ಅದರ ಮಧ್ಯದಲ್ಲಿ ಕಾಣುತ್ತಿರುವವನು ಕಪ್ಪು ಬಣ್ಣದ ಜಿಂಕೆಯ ಚಿಹ್ನವಲ್ಲ; ಆದರೆ ಅಲ್ಲಿ ಮಲಗಿರುವ ಕೃಷ್ಣನು." ಇಲ್ಲಿ ಆಕಾಶಮಂಡಲ ಮೊದಲಾದ ಉಪಮೇಯಗಳನ್ನು ನಿಷೇಧಿಸಿ ಅವುಗಳಲ್ಲಿ ಸಮುದ್ರ ಮೊದಲಾದ ಉಪಮಾನಗಳನ್ನು ಸ್ಥಾಪಿಸಿದ್ದರಿಂದ ಇದು ಮಾಲೆ

ಎನಿಸಿದ ಅಪಹ್ನುತಿ ಎನಿಸಿದೆ. ಸಕಾರವನ್ನು ನಾಲ್ಕುವೇಳೆ ಉಪಯೋಗಿಸಿದ್ದರಿಂದ ಶಬ್ದದಿಂದಲೇ ಪ್ರಕೃತಾಂಶವನ್ನು ನಿಷೇಧಿಸಲಾಗಿದೆ.

ಮೊದಲು ಉಪಮೇಯದಲ್ಲಿ ಉಪಮಾನವನ್ನು ಆರೋಪಿಸಿ ಆಮೇಲೆ ಉಪಮೇಯವನ್ನು ನಿಷೇಧಿಸುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ಪಶ್ಚಿಮದಿಕ್ಕೆಂಬ ಬೆಟ್ಟದ ತುದಿಯಲ್ಲಿದ್ದು, ನೊರೆಗಳ ಸಮೂಹದಂತೆ ಪ್ರಕಾಶವುಳ್ಳ ಈ ಚಂದ್ರಮಂಡಲವು ಸ್ಪಷ್ಟವಾಗಿ ಕಾಣುವ ಜಿಂಕೆಯ ಗುರುತಿನ ನೆಪದಿಂದ ರಾತ್ರಿಯೆಲ್ಲಾ ವ್ಯಾಪಿಸಿ ಉರಿಯುತ್ತಿದ್ದ ಕಾಮಾಗ್ನಿಯ ಹೊಗೆಯಿಂದ ತುಂಬಿರುವುದಾಗಿ ಪ್ರಕಾಶಿಸುತ್ತಿದೆ." ಇಲ್ಲಿ ಕಳಂಕವೆಂಬ ಉಪಮೇಯದಲ್ಲಿ ಹೊಗೆ ಎಂಬ ಉಪಮಾನವನ್ನು ಆರೋಪಿಸಿ ಆಮೇಲೆ ಅದನ್ನು ನಿಷೇಧಿಸಲಾಗಿದೆ. ಇಲ್ಲಿ ಒಂದೇ ಬಗೆಯ ಆರೋಪವಿರುವುದರಿಂದ ಇದು ಕೇವಲವೆನಿಸಿದೆ. ಇಲ್ಲಿ ಕೈತವೇನ ಎಂಬ ಪದವನ್ನು ತಿಳಿಸಿ ನಿಷೇಧಾರ್ಥವನ್ನು ಹೇಳದೇ ಇರುವುದರಿಂದ ತಾತ್ಪರ್ಯದ ಮೂಲಕ ಉಪಮೇಯವನ್ನು ನಿಷೇಧಿಸಲಾಗಿದೆ. ಬೇರೆ ರೀತಿಯಿಂದಲೂ ತಾತ್ಪರ್ಯದ ಮೂಲಕ ಉಪಮೇಯದ ನಿಷೇಧವನ್ನು ಉದಾಹರಿಸುತ್ತಾನೆ. "ಆಕಾಶವೇ ಶರೀರವಾಗಿರುವ ಈ ಸಮುದ್ರವು ಪ್ರಕಾಶಿಸುತ್ತಿದೆ. ಅದರಲ್ಲಿ ನಕ್ಷತ್ರಾಕಾರದ ನೊರೆಗಳ ಚೂರುಗಳು ನೆಲಸಿವೆ." ಹೀಗೆ ವಪುಃ ಶಬ್ದವನ್ನೂ, ಮಯಟ್ ಪ್ರತ್ಯಯವನ್ನೂ ಪ್ರಯೋಗಿಸಿ ಉಪಮೇಯವೆನಿಸಿದ ಆಕಾಶ, ನಕ್ಷತ್ರಗಳನ್ನು ನಿಷೇಧಿಸಿ ಉಪಮಾನಗಳೆನಿಸಿದ ಸಮುದ್ರ ಮತ್ತು ನೊರೆಗಳ ಚೂರುಗಳನ್ನು ನೆಲೆಗೊಳಿಸಿರುವುದರಿಂದ ಇದು ಅಪಹ್ನುತಿಯೇ ಹೊರತು ರೂಪಕವಲ್ಲ.

ಉಪಮೇಯನಿಷೇಧ, ಉಪಮಾನಸ್ಥಾಪನ ಇವೆರಡೂ ಇಲ್ಲದೆ ಇರುವಾಗ ತೋರುವ ಅಪಹ್ನುತಿಯ ಬಗೆಯನ್ನು ತಿಳಿಸುತ್ತಾನೆ. ಮುಚ್ಚಬೇಕಾದ ಒಂದು ಅಂಶವನ್ನು ಹೇಗಾದರೂ ಮುಚ್ಚಿ ಶ್ಲೇಷದಿಂದಾಗಲೀ ಬೇರೆರೀತಿಯಿಂದಾಗಲೀ ಅದನ್ನು ಬೇರೆಯಾಗಿ ತಿಳಿಸುವುದೂ ಸಹ ಅಪಹ್ನುತಿಯೇ ಆಗುವುದು. ಒಬ್ಬನು ಲಜ್ಜೆಯಿಂದ ಮುಚ್ಚಬೇಕಾದ ಅಂಶವನ್ನು ವ್ಯಂಜನೆಯಿಂದ ಸೂಚಿಸಿ ಶ್ಲೇಷದಿಂದಲೋ ಅಥವಾ ಶ್ಲೇಷವಿಲ್ಲದಂತೆಯೋ ಬೇರೆ ವಿಧವಾಗಿ ಪ್ರಕಾಶಿಸುವುದೇ ಈ ಬಗೆಯ ಅಪಹ್ನುತಿ. ಶ್ಲೇಷದಿಂದ ಬೇರೆ ರೀತಿಯಲ್ಲಿ ಪ್ರಕಟಿಸುವುದನ್ನು ಉದಾಹರಿಸುತ್ತಾನೆ. ವರ್ಷಾಕಾಲದಲ್ಲಿ ಸಖಿಯೊಡನೆ ದಾರಿಯಲ್ಲಿ ಹೋಗುತ್ತಿರುವ ವಿರಹಿಣಿಯು ಹೇಳುವ ಮಾತಿನಲ್ಲಿ ಇದು ಕಾಣಬರುವುದು. "ಮೇಘೋದಯ ಕಾಲದಲ್ಲಿ ಪತಿ ಇಲ್ಲದಿರುವ ಕಾರಣದಿಂದ ನನಗೆ ನಿಲ್ಲಲು ಶಕ್ಯವಿಲ್ಲ. ಭೀಕರವಾದ ಕಾಮವೇದನೆಯನ್ನು ಸಹಿಸಲಾರೆ. (ಈ ದಾರಿಯಲ್ಲಿ ಹೋಗುವಾಗ ಮುಗ್ಗರಿಸವೆ ಮುಂದೆ ಸರಿಯಲು ನನಗೆ ಸಾಧ್ಯವಿಲ್ಲ)" ಇದನ್ನು ಕೇಳಿ ಸಖಿ ಹೇಳುತ್ತಾಳೆ "ಎಲೈ ಚಪಲ ಸ್ವಭಾವದವಳೇ, ನೀನು ಏಕೆ ಪತಿಗಾಗಿ ಆಶೆ ಪಡುತ್ತಿರುವೆ." ಇದನ್ನು ಕೇಳಿ ವಿರಹಿಣಿಯು ಮತ್ತೆ ಹೇಳಿದಳು. "ಸಖಿ, ಪತಿಗಾಗಿ ನಾನು ಇಷ್ಟು ಥಾತುವರೆಯುತ್ತಿಲ್ಲ. ಹಾಗಾದರೆ ಹೀಗೆ ಏಕೆ ಹೇಳುವೆ ಎಂದು ಕೇಳುವೆಯಾ ? ನಾವು ಹೋಗಬೇಕಾಗಿರುವ ಈ ದಾರಿಯು ನೀರಿನಿಂದ ಒದ್ದೆಯಾಗಿದೆ. ಆದ್ದರಿಂದಲೇ ನಾವು

ಇಲ್ಲಿ ಮುಗ್ಗರಿಸುವುದು ಸುಲಭವಾದ್ದರಿಂದ ಕೆಳಕ್ಕೆ ಬೀಳದಂತೆ ಹೋಗಲಿಕ್ಕಾಗುವುದಿಲ್ಲ ವೆಂದು ನಾನು ಹೇಳಿದೆನು" ಇಲ್ಲಿ ಅಪತಿತಯಾ ಎಂಬಲ್ಲಿ 'ಪತಿಂ ವಿನಾ' ಎಂದು ಹೇಳಿ ಅನಂತರ ಪತನಾಭಾವೇನ (ಮುಗ್ಗರಿಸದಂತೆ) ಎಂಬುದೇ ನನ್ನ ಆಶಯವೆಂದು ಅರ್ಥ ವನ್ನು ಬೇರೆ ರೀತಿಯಲ್ಲಿ ಬದಲಾಯಿಸಲಾಗಿದೆ.

ಶ್ಲೇಷವಿಲ್ಲದ ಕಡೆ ಇರುವ ಅಪಹ್ನುತಿಯನ್ನು ಉದಾಹರಿಸುತ್ತಾನೆ. ವರ್ಷಾ ಕಾಲದಲ್ಲಿ ಸಖಿಯೊಡನೆ ವಿರಹಿಣಿಯ ವ್ಯವಹಾರವು ಹೀಗಿದೆ. "ಈ ವರ್ಷಾಕಾಲದಲ್ಲಿ ಗಾಳಿಯು ದೇಹವನ್ನು ಅಲ್ಲಾಡಿಸುತ್ತಿರುವುದರಿಂದ ಯಾವ ಲತೆಯು ತಾನೆ ವೃಕ್ಷದೊಡನೆ ಸೇರಿಕೊಳ್ಳುವುದಿಲ್ಲ? ಅಂದರೆ ಎಲ್ಲಾ ಲತೆಗಳೂ ಕೂಡಿಕೊಳ್ಳಲೇ ಬೇಕು ಎಂದು ಅರ್ಥ. ಕಾಮವಿಕಾರದಿಂದ ನಡುಗುತ್ತಿರುವ ಯಾವ ಕಾಮಿನಿಯು ತಾನೆ ಕಾಂತನೊಡನೆ ಸೇರು ವುದಿಲ್ಲ? '' ಇದನ್ನು ಕೇಳಿ ಸಖಿಯು ಕೇಳುವಳು. "ಎಲೈ ಸಖಿಯೇ, ಲತಾವೃಕ್ಷಗಳ ಮಿಲನವನ್ನು ನೋಡಿ ಪತಿಯ ಸುರತೋತ್ಸವವನ್ನು ಸ್ಮರಿಸುತ್ತಿರುವೆಯಾ ?" ಇದನ್ನು ಕೇಳಿ ವಿರಹಿಣಿಯು 'ಅದನ್ನು ನಾನು ಸ್ಮರಿಸಲಿಲ್ಲ; ಆದರೆ ವರ್ಷಾಕಾಲದ ಅವಸ್ಥೆ ಯನ್ನು ತಿಳಿಸಿದೆನು' ಎಂದು ಹೇಳಿದಳು."

ಇಲ್ಲಿ ಪ್ರಥಮಾರ್ಧದಲ್ಲಿ ಆಕೆಯು ತಾನಾಗಿಯೇ ಸ್ಪಷ್ಟವಾಗಿ ಸುರತೋತ್ಸವ ಸ್ಮರಣವನ್ನು ತಿಳಿಸಿರುವುದರಿಂದ ಶ್ಲೇಷಪ್ರಯೋಗವಿಲ್ಲ ಮತ್ತೆ ಆಕೆಯು ತಾನಾಗಿಯೇ ಅದನ್ನು ಬೇರೆ ರೀತಿಯಲ್ಲಿ ತಿಳಿಸಿರುವುದರಿಂದ ಇದು ಅಪಹ್ನುತಿ ಎನಿಸಿದೆ. ಇಲ್ಲಿ ಮೊದ ಲನೆಯ ಉದಾಹರಣದಲ್ಲಿ ಬೇರೆ ಅರ್ಥವನ್ನು ತಿಳಿಸುವ ವಾಕ್ಯವನ್ನು ಶ್ಲೇಷದಿಂದ ಬೇರೆ ರೀತಿಯಲ್ಲಿ ಪ್ರಯೋಗಿಸಿದುವುದರಿಂದ ಅದು ವಕ್ರೋಕ್ತಿ ಎನಿಸಿ ಅದರೊಡನೆ ಅಪಹ್ನು ತಿಯು ಸೇರಿಕೊಂಡಿರುವುದರಿಂದ ಸೌಂದರ್ಯವುಂಟಾಗುವುದೆಂದು ಆಕ್ಷೇಪಿಸಿ ಸಮಾ ಧಾನಮಾಡುತ್ತಾನೆ. ವಕ್ರೋಕ್ತಿಯಲ್ಲಿ ಬೇರೊಬ್ಬರು ಹೇಳುವ ಮಾತನ್ನು ಬೇರೆ ರೀತಿಯಲ್ಲಿ ಪ್ರಯೋಗಿಸಲಾಗುವುದು. ಇಲ್ಲಿಯಾದರೋ ಹೇಳುವವನು ತನ್ನ ಮಾತನ್ನೇ ಬೇರೆ ರೀತಿಯಲ್ಲಿ ಬದಲಾಯಿಸುವನು. ಇವೆರಡು ಅಲಂಕಾರಗಳಿಗೂ ಇರುವ ಭೇದ ವಿಷ್ಟೇ. ಒಂದು ಮಾತನ್ನು ಹೇಳುವವನು ಮುಚ್ಚಬೇಕಾದ ಅರ್ಥವನ್ನು ತನ್ನ ಮಾತಿ ನಲ್ಲಿ ಸ್ಪಷ್ಟವಾಗಿ ತಿಳಿಸುವುದರಿಂದ ಇದು ವ್ಯಾಜೋಕ್ತಿಗಿಂತ ಬೇರೆ ಎನಿಸಿದೆ. ವ್ಯಾಜೋ ಕ್ತಿಯಲ್ಲಿ ಮಾತಿನ ಅರ್ಥವನ್ನು ಮುಚ್ಚುವವನು ಗೋಪ್ಯವಾದ ಅಂಶವನ್ನು ಮೊದಲು ತಿಳಿಸುವುದಿಲ್ಲ. ಇಲ್ಲಿಯಾದರೋ ಗೋಪ್ಯಾಂಶವನ್ನು ತಿಳಿಸಲಾಗುವುದು. ಹೀಗೆ ಇವೆರ ಡಕ್ಕೂ ಭೇದವಿರುವುದರಿಂದ ಇವಕ್ಕೆ ಸಾಂಕರ್ಯ ಉಂಟಾಗುವ ಸಂಭವವಿಲ್ಲ.

ಪ್ರಕೃತವಾದ ಅಂಶವನ್ನು ನಿಷೇಧಿಸಿ ಮತ್ತೊಂದನ್ನು ಸ್ಥಾಪಿಸುವುದು ಅಪಹ್ನುತಿ ಎನಿಸಿದಂತೆ ಮತ್ತೊಂದನ್ನು ನಿಷೇಧಿಸಿ ಪ್ರಕೃತಾಂಶವನ್ನು ಸ್ಥಾಪಿಸುವುದರಲ್ಲಿ ಯಾವು ದಾದರೂ ಚಮತ್ಕಾರ ಉಂಟೇ, ಇಲ್ಲವೇ ? ಎಂದು ಪರಿಶೀಲಿಸಿ ಅಲ್ಲಿಯೂ ನಿಶ್ಚಯ ವೆಂಬ ಬೇರೊಂದು ಅಲಂಕಾರ ಉಂಟೆಂದು ತಿಳಿಸುತ್ತಾನೆ. ಅಪಹ್ನುತಿಗಿಂತ ಬೇರೆ

ಯಾವುದು ಈ ಅಲಂಕಾರ. ಆರೋಪಿಸಬೇಕಾಗಿರುವುದಕ್ಕಿಂತ ಬೇರೆ ಎನಿಸಿದ ಉಪ ಮಾನವನ್ನು ನಿಷೇಧಿಸಿ ಅಲ್ಲಿ ಉಪಮೇಯವನ್ನು ನೆಲೆಗೊಳಿಸುವುದೇ ನಿಶ್ಚಯವೆಂಬ ಅಲಂಕಾರವೆನಿಸುವುದು. ಪ್ರಕೃತ ವಿಷಯವನ್ನೇ ನಿಶ್ಚಯಿಸುವುದರಿಂದ ಇದಕ್ಕೆ ಈ ಹೆಸರು ಅನ್ವರ್ಥವೆನಿಸಿದೆ. ಇವರಲ್ಲಿ ಪ್ರಕೃತಾಂಶವನ್ನು ಸ್ಥಾಪಿಸುತ್ತಲೇ ಬೇರೊಂದನ್ನು ನಿಷೇಧಿಸುವುದರಿಂದಲೂ, ಬೇರೊಂದನ್ನು ನಿಷೇಧಿಸುತ್ತಲೇ ಪ್ರಕೃತಾಂಶವನ್ನು ಸಾಧಿಸುವುದರಿಂದಲೂ ಇದು ಎರಡು ಬಗೆಯಾಗುತ್ತದೆ. ಪ್ರಕೃತಾಂಶವನ್ನು ಸ್ಥಾಪಿಸುತ್ತಲೇ ಬೇರೊಂದನ್ನು ನಿಷೇಧಿಸಲಿಕ್ಕೆ ಉದಾಹರಣವನ್ನು ಕೊಡುತ್ತಾನೆ. ಸುಂದರಿಯ ಮುಖದ ಸಮೀಪದಲ್ಲಿ ಸುತ್ತುತ್ತಿರುವ ಒಂದು ದುಂಬಿಯನ್ನು ನೋಡಿ ರಸಿಕನೊಬ್ಬನು ಹೇಳುವ ಮಾತಿನಲ್ಲಿ ಇದು ಕಂಡುಬರುವುದು. "ಎಲೈ ದುಂಬಿಯೇ, ಇಲ್ಲಿ ಕಾಣುವ ವಸ್ತು ಮುಖವೆನಿಸಿದೆ. ಆದರೆ ನಿನಗೆ ಕುಡಿಯಲು ಯೋಗ್ಯವಾದ ಮಧುವಿರುವ ಕಮಲವಲ್ಲ. ಹಾಗೆಯೇ ಇಲ್ಲಿ ಕಾಣುವವು ಕಣ್ಣುಗಳು; ಆದರೆ ಕನ್ನೈದಿಲೆಯಲ್ಲ. ಈ ನಾಯಿಕೆಯ ಸಮೀಪದಲ್ಲಿ ಏಕೆ ವ್ಯರ್ಥವಾಗಿ ಸುತ್ತುತ್ತಿರುವೆ? ಇವು ಕಮಲ ಹಾಗೂ ಕನ್ನೈದಿಲೆಗಳಲ್ಲದ್ದರಿಂದ ನಿನಗೆ ಕುಡಿಯಲು ಯೋಗ್ಯವಾದ ಮಧು ಇಲ್ಲಿ ದೊರೆಯುವಂತಿಲ್ಲ." ಇಲ್ಲಿ ಉಪಮೇಯವೆನಿಸಿದ ಮುಖ, ನೇತ್ರ ಇವುಗಳಿಗಿಂತಲೂ ಹಿಂದಿನಿಂದಲೂ ಇದ್ದ ಕಮಲ ಕನ್ನೈದಿಲೆ ಇವುಗಳನ್ನು ನಿಷೇಧಿಸಿರುವುದರಿಂದ ಇದು ನಿಶ್ಚಯವೆಂಬ ಅಲಂಕಾರವೆನಿಸಿದೆ. ನೂತನವಾಗಿ ಈ ಅಲಂಕಾರವನ್ನು ಕಲ್ಪಿಸಿ ಇದಕ್ಕೆ ತಾನೇ ಉದಾಹರಣವನ್ನು ರಚಿಸಿರುವುದಷ್ಟೇ ಅಲ್ಲದೆ ಪ್ರಸಿದ್ಧವಾದ ಉದಾಹರಣವೂ ಉಂಟೆಂದು ತಿಳಿಸುತ್ತಾನೆ. ಕಾಮಾರ್ತನಾದ ವಿಯೋಗಿಯೊಬ್ಬನು ದುಃಖದಿಂದ ಹೇಳುವ ಈ ಮಾತಿನಲ್ಲಿ ಇದನ್ನು ಕಾಣಬಹುದು. "ಎಲೈ ಮನ್ಮಥನೇ, ಈ ನನ್ನ ಹೃದಯದಲ್ಲಿರುವುದು ತಾವರೆ ದಂಟಿನ ಹಾರವೇ ಹೊರತು ತಾವರೆದಂಟಿಗೆ ಸದೃಶವಾದ ಸರ್ಪವಲ್ಲ. ಕುತ್ತಿಗೆಯಲ್ಲಿರುವುದು ಕನ್ನೈದಿಲೆಯ ದಳಗಳ ಸಾಲೇ ಹೊರತು ವಿಷದ ಕಪ್ಪುಬಣ್ಣವಲ್ಲ. ಹಾಗೆಯೇ ದೇಹದಲ್ಲಿ ಕಾಣುವ ಗೆರೆಯು ಶ್ರೀಗಂಧದ ಧೂಳೇ ಹೊರತು ಭಸ್ಮವಲ್ಲ. ಆದ್ದರಿಂದಲೇ ಪ್ರಿಯೆಯಿಂದ ವಿಯೋಗವನ್ನು ಹೊಂದಿರುವ ನನ್ನಲ್ಲಿ ಹರನೆಂಬ ಬುದ್ಧಿಯಿಂದ ನಿನ್ನ ಬಾಣಗಳನ್ನು ಪ್ರಯೋಗಿಸಬೇಡ. ನಾನು ಹರನಲ್ಲದ್ದರಿಂದ ನನ್ನ ಬಳಿಗೆ ಏಕೆ ಕೋಪದಿಂದ ಓಡಿ ಬರುತ್ತಿರುವೆ?" ಇಲ್ಲಿಯೂ ಸಹ ತಾವರೆ ಬಳ್ಳಿಯೇ ಮೊದಲಾದ ಉಪಮೇಯಗಳನ್ನು ಸ್ಥಾಪಿಸುತ್ತಲೇ ಸರ್ಪ ಮೊದಲಾದ ಉಪಮಾನಗಳನ್ನು ನಿಷೇಧಿಸಿರುವುದರಿಂದ ನಿಶ್ಚಯವೆಂಬ ಅಲಂಕಾರವಿದೆ.

ಇದನ್ನು ನಿಶ್ಚಯದಲ್ಲಿ ಕೊನೆಗಾಣುವ ಸಂದೇಹವೆಂದು ಹೇಳಲಿಕ್ಕಾಗುವುದಿಲ್ಲ. ಅಲ್ಲಿ ಸಂಶಯ ನಿಶ್ಚಯ ಇವೆರಡೂ ಒಂದೇ ವಸ್ತುವನ್ನು ಆಶ್ರಯಿಸಿಕೊಂಡಿರುತ್ತವೆ. ಇಲ್ಲಿಯಾದರೋ ಮುಖದಲ್ಲಿ ಭ್ರಮರಕ್ಕೆ ಕಮಲವೆಂಬ ಸಂಶಯವುಂಟಾಗಿದೆ? ನಾಯಕನಿಗೆ ಮುಖವೆಂಬ ನಿಶ್ಚಯವೇ ಇದೆ. ಹೀಗೆ ಸಂಶಯ ನಿಶ್ಚಯಗಳು ಬೇರೆ ಬೇರೆ ಅಧಿಕರಣಗಳಲ್ಲಿ ಇರುವುದರಿಂದ ಇದು ನಿಶ್ಚಯಾಂತವಾದ ಸಂದೇಹವಾಗಲಾರದು.

ನಿಶ್ಚಯಾಂತಸಂದೇಹಾಲಂಕಾರದಲ್ಲಿ ಸಂಶಯನಿಶ್ಚಯಗಳು ಒಂದೇ ಅಧಿಕರಣದಲ್ಲಿ ಇರಬೇಕೆಂಬುದಕ್ಕೆ ಪ್ರಮಾಣವಿಲ್ಲದ್ದರಿಂದ ವದನಮಿದಂ ಎಂಬ ಶ್ಲೋಕದಲ್ಲಿ ನಿಶ್ಚಯಾಂತಸಂದೇಹವೇ ಇರಲಿಕ್ಕೆ ಅಡ್ಡಿ ಇಲ್ಲ. ಇದೂ ಅಲ್ಲದೆ ಇದು ಮುಖವೆಂಬ ಬಗ್ಗೆ ಭ್ರಮರ ಮೊದಲಾದವುಗಳಿಗೂ ಸಹ ಸಂಶಯವುಂಟಾಗುವುದಿಲ್ಲ. ಇಲ್ಲಿ ಮುಖ ಮತ್ತು ಕಮಲ ಇವೆರಡಕ್ಕೂ ಸಂಬಂಧಿಸಿದ ಸಂಶಯವು ಹುಟ್ಟುವುದಾದರೆ ಭ್ರಮರವು ಮುಖ ಮತ್ತು ನೇತ್ರಗಳ ಸಮೀಪಕ್ಕೆ ಹೋಗುವ ಸಂಭವವೇ ಇರುವುದಿಲ್ಲ. ಇದು ಮುಖವೋ ಕಮಲವೋ ಎಂದು ಸಂಶಯಪಡುವ ಭ್ರಮರವು ಅವರ ಬಳಿಗೆ ಹೋಗುವುದೇ ಇಲ್ಲ. ಬಾಯಾರಿದವನು ಯಾವನೂ ಇದು ನೀರೋ ಬಿಸಿಲ್ಗುದುರೆಯೋ ಎಂದು ಸಂದೇಹಪಡುತ್ತ ಅದರ ಬಳಿಗೆ ಹೋಗುವುದಿಲ್ಲ. ತನಗೆ ಬೇಕಾದ್ದು ಸಿಕ್ಕುವ ನಿಶ್ಚಯವಿಲ್ಲದ್ದರಿಂದ ಅಲ್ಲಿಗೆ ಹೋಗುವ ಪ್ರಯಾಸವನ್ನೇ ಯಾವನೂ ವಹಿಸುವುದಿಲ್ಲ. ಆದರೆ ಇದು ಕಮಲವೇ ಇರಬೇಕೆಂಬ ಭ್ರಾಂತಿಯಿಂದಲೇ ಭ್ರಮರವು ಅವರ ಬಳಿಗೆ ಹೋಗುವ ಸಂಭವವಿರುತ್ತದೆ. ಇದು ಕಮಲವೇ ಎಂಬ ಭ್ರಾಂತಿ ಉಂಟಾಗುವ ಪಕ್ಷದಲ್ಲಿ ಇದು ಭ್ರಾಂತಿಮದಲಂಕಾರವೇ ಆಗಲಿ ಎಂದು ಆಕ್ಷೇಪಿಸಿ ಸಮಾಧಾನಮಾಡುತ್ತಾನೆ. ಭ್ರಮರಕ್ಕೆ ಭ್ರಾಂತಿಯುಂಟಾಗಬಹುದು; ಆದರೆ ಅದರಿಂದ ಇಲ್ಲಿ ಚಮತ್ಕಾರ ಉಂಟಾಗುವುದಿಲ್ಲ. ಆದರೆ ' ಇದು ಮುಖ ' ಎಂದು ಮುಂತಾಗಿ ನಾಯಕನು ಹೇಳುವ ಮಾತಿನಲ್ಲಿಯೇ ಇಲ್ಲಿ ಚಮತ್ಕಾರವು ಅಡಗಿದೆ. ದುಂಬಿಗಳು ಕಮಲವೆಂಬ ಸಂಶಯದಿಂದ ನಾಯಿಕೆಯ ಮುಖದ ಮೇಲೆ ಬೀಳುತ್ತವೆ ಎಂಬುದನ್ನಾಗಲಿ ಅವಕ್ಕೆ ಅದರಲ್ಲಿ ಕಮಲವೆಂಬ ಭ್ರಾಂತಿಯುಂಟಾಗುವುದೆಂದಾಗಲೀ ಎಲ್ಲಿಯೂ ಕೇಳಿಲ್ಲ; ನೋಡಿಲ್ಲ. ಹಾಗಾದರೆ ಭ್ರಮರಗಳು ಮುಖದಲ್ಲಿ ಬೀಳುವುದನ್ನಾಗಲೀ ಅವುಗಳ ಭ್ರಾಂತಿಯನ್ನಾಗಲೀ ತಿಳಿಸುವುದು ನಾಯಕನಿಗೆ ಇಷ್ಟವಲ್ಲ. ಯಾಕೆಂದರೆ ಅದರಲ್ಲಿ ಚಮತ್ಕಾರವೇ ಇಲ್ಲ. ಹೀಗಿರುವಾಗ ಚಮತ್ಕಾರಮೂಲವಾದ ನಿಶ್ಚಯವೆಂಬ ಅಲಂಕಾರಕ್ಕೆ ಇನ್ನು ಅವಕಾಶವಿನ್ನೆಲ್ಲಿದ್ದೀತು ? ಎಂದು ಹೇಳುವುದಾದರೆ ಅವಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ನಾಯಿಕೆಯ ಮುಖವು ಕಮಲಕ್ಕೆ ಸದೃಶವೆಂಬುದನ್ನು ಸೂಚಿಸುವುದರಿಂದ ಹೆಚ್ಚು ಸಂತೋಷವುಂಟಾಗುವ ಪ್ರಯುಕ್ತ ವದನಮಿದಂ ಎಂಬ ಮಾತು ಹೊರಟಿದೆ. ತನಗೆ ಉಂಟಾಗಿರುವ ಕಾಮಪೀಡೆಯನ್ನು ಸೂಚಿಸುವ ಪ್ರಯುಕ್ತ 'ಹೃದಿ ಬಿಸಲತಾಹಾರಃ' ಎಂಬ ಮಾತು ಹೊರಟಿದೆ. ಈ ಬಗೆಯ ಪ್ರಿಯಭಾಷಣದಲ್ಲಿ ಚಮತ್ಕಾರವು ಅಡಗಿರುವ ಪ್ರಯುಕ್ತ ಇಲ್ಲಿ ನಿಶ್ಚಯಾಲಂಕಾರವೂ ಇದ್ದೇ ಇರುವುದು.

ಮುಖದಲ್ಲಿ ಕಮಲವೆಂದು ವ್ಯಂಗ್ಯವಾಗಿ ಆರೋಪಿಸುವುದರಿಂದ ಇದು ರೂಪಕಧ್ವನಿಯೇ ಆಗಲೆಂದರೆ ಅದೂ ಸರಿಯಾಗುವುದಿಲ್ಲ. ಯಾಕೆಂದರೆ ಇಲ್ಲಿ ಮುಖವೇ ಕಮಲವೆಂಬ ನಿಶ್ಚಯವಿಲ್ಲ. ಹಾಗೆಯೇ ಕಣ್ಣುಗಳು ಕನ್ನೈದಿಲೆಗಳೆಂಬ ಬಗ್ಗೆ ನಿಶ್ಚಯವಿಲ್ಲ. ಮುಖಕಮಲಂ ಎಂಬಲ್ಲಿ ಶ್ರೋತೃಗಳು ಮುಖವನ್ನು ಕಮಲವೆಂದು ನಿರ್ಧರಿಸುವಂತೆ ಇಲ್ಲಿ ಅಂತಹ ನಿರ್ಧಾರವೇ ಕಾಣಬರುವುದಿಲ್ಲ. ಅದೂ ಅಲ್ಲದೆ ಇದು ಕಮಲ

ವಲ್ಲವೆಂದು ಹೇಳಿದ್ದರಿಂದ ಇದು ಕಮಲಕ್ಕಿಂತ ಬೇರೆ ಎಂದೇ ನಿಶ್ಚಯಿಸಲಾಗುವುದು. ಆದ್ದರಿಂದ ಇಲ್ಲಿ ರೂಪಕದ ಗಂಧವೇ ಇಲ್ಲ.

ಇದು ಕಮಲವಲ್ಲವೆಂಬ ನಿಷೇಧದಿಂದ ಮುಖವೆಂಬುದೇ ನೆಲೆಯಾಗುವ ಪ್ರಯುಕ್ತ ಇದು ಅಪಹ್ನುತಿಯೇ ಆಗಲಿ ಎಂದು ಹೇಳುವುದಾದರೆ ಅದೂ ಸರಿಯಾಗುವುದಿಲ್ಲ. ಇದು ಅಪಹ್ನುತಿಯಾಗುವುದಾದರೆ ಇಲ್ಲಿ ಪ್ರಕೃತಸಂದರ್ಭಕ್ಕೆ ಸಂಬಂಧಿಸಿದ ಉಪಮೇಯವನ್ನು ನಿಷೇಧಿಸಿರಬೇಕು. ಇಲ್ಲಿ ಹಾಗೆ ಪ್ರಕೃತವಸ್ತುವಿನ ನಿಷೇಧವಿಲ್ಲದ್ದರಿಂದ ಇದು ಅಪಹ್ನುತಿಯಾಗಲಾರದು. ಆದ್ದರಿಂದ ಇಲ್ಲಿ ರೂಪಕ, ಭ್ರಾಂತಿಮಾನ್, ಅಪಹ್ನುತಿ ಮೊದಲಾದವುಗಳಿಗಿಂತಲೂ ಬೇರೆಯಾಗಿ ನಿಶ್ಚಯವೆಂಬ ಅಲಂಕಾರವನ್ನೇ ಹೇಳುವುದು ಸೂಕ್ತವೆನಿಸುವುದು. ಕಪ್ಪೆಯಚಿಪ್ಪನ್ನು ನೋಡಿ ಅದನ್ನು ಬೆಳ್ಳಿ ಎಂದು ಭ್ರಮಿಸಿ ಆದನ್ನು ತೆಗೆದುಕೊಳ್ಳಲು ಪ್ರವರ್ತಿಸುವವನಿಗೆ 'ಇದು ಕಪ್ಪೆಯ ಚಿಪ್ಪೇ ಹೊರತು ಬೆಳ್ಳಿಯಲ್ಲ' ವೆಂದು ಯಾವನಾದರೊಬ್ಬನು ಹೇಳುವುದಾದರೆ ಅಂತಹ ಮಾತಿನಲ್ಲಿ ವೈಚಿತ್ರ್ಯವಿಲ್ಲದ್ದರಿಂದ ಅದು ಅಲಂಕಾರವೆನಿಸಲಾರದು.

ಭವೇತ್ ಸಂಭಾವನೋತ್ಪ್ರೇಕ್ಷಾ ಪ್ರಕೃತಸ್ಯ ಪರಾತ್ಮನಾ ।
ವಾಚ್ಯಾ ಪ್ರತೀಯಮಾನಾ ಸಾ ಪ್ರಥಮಂ ದ್ವಿವಿಧಾ ಮತಾ ॥
ವಾಚ್ಯೇವಾದಿಪ್ರಯೋಗೇ ಸ್ಯಾದಪ್ರಯೋಗೇ ಪರಾ ಪುನಃ ।
ಜಾತಿರ್ಗುಣಃ ಕ್ರಿಯಾ ದ್ರವ್ಯಂ ಯದುತ್ಪ್ರೇಕ್ಷ್ಯಂ ದ್ವಯೋರಪಿ ॥
ತದಷ್ಟಧಾಪಿ ಪ್ರತ್ಯೇಕಂ ಭಾವಾಭಾವಾಭಿಮಾನತಃ ।
ಗುಣಕ್ರಿಯಾಸ್ವರೂಪತ್ವಾನ್ನಿಮಿತ್ತಸ್ಯ ಪುನಶ್ಚ ತಾಃ ॥
ದ್ವಾತ್ರಿಂಶದ್ವಿಧತಾಂ ಯಾಂತಿ ತತ್ರ ವಾಚ್ಯಾಭಿಧಾಃ ಪುನಃ ।
ವಿನಾ ದ್ರವ್ಯಂ ತ್ರಿಧಾ ಸರ್ವಾಃ ಸ್ವರೂಪಫಲಹೇತುಗಾಃ ॥

ತತ್ರ ವಾಚ್ಯೋತ್ಪ್ರೇಕ್ಷಾಯಾಂ ಉದಾಹರಣಂ ದಿಙ್ಮಾತ್ರಮ್. ಯಥಾ—

ಊರುಃ ಕುರಂಗಕದೃಶಶ್ಚಂಚಲಚೇಲಾಂಚಲೋ ಭಾತಿ ।
ಸಪತಾಕಃ ಕನಕಮಯೋ ವಿಜಯಸ್ತಂಭಃ ಸ್ಮರಸ್ಯೇವ ॥

ಅತ್ರ ವಿಜಯಸ್ತಂಭಸ್ಯ ಬಹುವಾಚಕತ್ವಾತ್ ಜಾತ್ಯುತ್ಪ್ರೇಕ್ಷಾ.

ಜ್ಞಾನೇ ಮೌನಂ ಕ್ಷಮಾ ಶಕ್ತೌ ತ್ಯಾಗೇ ಶ್ಲಾಘಾವಿಪರ್ಯಯಃ ।
ಗುಣಾ ಗುಣಾನುಬಂಧಿತ್ವಾತ್ತಸ್ಯ ಸಪ್ರಸವಾ ಇವ ॥

ಅತ್ರ ಸಪ್ರಸತ್ವಂ ಗುಣಃ.

ಗಂಗಾಂಭಸಿ ಸುರತ್ರಾಣ ! ತವ ನಿರ್ಯಾಣನಿಸ್ವನಃ ।
ಸ್ನಾತೀವಾರಿವಧೂವರ್ಗಗರ್ಭಪಾತನಪಾತಕೀ ॥

ಅತ್ರ ಸ್ನಾತೀವೇತಿ ಕ್ರಿಯಾ. "ಮುಖಮೇಣೀದೃಶೋ ಭಾತಿ ಪೂರ್ಣಚಂದ್ರ ಇವಾಪರಃ" ಅತ್ರ ಚಂದ್ರ ಇತ್ಯೇಕವ್ಯಕ್ತಿವಾಚಿತ್ವಾತ್ ದ್ರವ್ಯಶಬ್ದಃ.

ಏತೇ ಭಾವಾಭಿಮಾನೇ. ಅಭಾವಾಭಿಮಾನೇ ಯಥಾ—

ಕಪೋಲಫಲಕಾವಸ್ಯಾಃ ಕಷ್ಟಂ ಭೂತ್ವಾ ತಥಾವಿಧೌ ।
ಅಪಶ್ಯಂತಾವಿವಾನ್ಯೋನ್ಯಮೀದೃಶಾಂ ಕ್ಷಾಮತಾಂ ಗತೌ ॥

ಅತ್ರ ಅಪಶ್ಯಂತಾವಿತಿ ಕ್ರಿಯಾಯಾ ಅಭಾವಃ. ಏವಮನ್ಯತ್.

ನಿಮಿತ್ತಸ್ಯ ಗುಣಕ್ರಿಯಾರೂಪತ್ವೇ ಯಥಾ–'ಗಂಗಾಂಭಸಿ' ಇತ್ಯಾದೌ 'ಸ್ನಾತೀವ' ಇತ್ಯುತ್ಪ್ರೇಕ್ಷಾನಿಮಿತ್ತಂ ಪಾತಕಿತ್ವಂ ಗುಣಃ. 'ಅಪಶ್ಯಂತಾವಿವ' ಇತ್ಯಾದೌ ಕ್ಷಾಮತಾಗಮನರೂಪಂ ನಿಮಿತ್ತಂ ಕ್ರಿಯಾ. ಏವಮನ್ಯತ್.

ಪ್ರತೀಯಮಾನೋತ್ಪ್ರೇಕ್ಷಾ ಯಥಾ—

ತನ್ವಂಗ್ಯಾಃ ಸ್ತನಯುಗ್ಮೇನ ಸುಖಂ ನ ಪ್ರಕಟೀಕೃತಮ್ ।
ಹಾರಾಯ ಗುಣಿನೇ ಸ್ಥಾನಂ ನ ದತ್ತಮಿತಿ ಲಜ್ಜಯಾ ॥

ಅತ್ರ ಲಜ್ಜಯೇವೇತಿ ಇವಾದ್ಯಭಾವಾತ್ ಪ್ರತೀಯಮಾನೋತ್ಪ್ರೇಕ್ಷಾ. ಏವಮನ್ಯತ್. ನನು ಧ್ವನಿನಿರೂಪಣಪ್ರಸ್ತಾವೇ ಅಲಂಕಾರಾಣಾಂ ಸರ್ವೇಷಾಮಪಿ ವ್ಯಂಗ್ಯತ್ವಂ ಭವತೀತ್ಯುಕ್ತಮ್. ಸಂಪ್ರತಿ ಪುನರ್ವಿಶಿಷ್ಯ ಕಥಮುತ್ಪ್ರೇಕ್ಷಾಯಾಃ ಪ್ರತೀಯಮಾನತ್ವಮ್. ಉಚ್ಯತೇ–ವ್ಯಂಗ್ಯೋತ್ಪ್ರೇಕ್ಷಾಯಾಮ್.

ಮಹಿಲಾಸಹಸ್ರಭರಿತೇ ತವ ಹೃದಯೇ ಸುಭಗ ! ಸಾ ಅಮಾಂತೀ ॥
ಅನುದಿನಮನನ್ಯಕರ್ಮಾ ಅಂಗಂ ತನುಕಮಪಿ ತನಯತಿ ॥

ಇತ್ಯಾದೌ ಉತ್ಪ್ರೇಕ್ಷಣಂ ವಿನಾಪಿ ವಾಕ್ಯವಿಶ್ರಾಂತಿಃ, ಇಹ ತು ಸ್ತನಯೋರ್ಲಜ್ಜಾಯಾ ಅಸಂಭವಾತ್ ಲಜ್ಜಯೇವೇತ್ಯುತ್ಪ್ರೇಕ್ಷಯೈವೇತಿ ವ್ಯಂಗ್ಯಪ್ರತೀಯಮಾನೋತ್ಪ್ರೇಕ್ಷಯೋರ್ಭೇದಃ.

ತತ್ರ ವಾಚ್ಯೋತ್ಪ್ರೇಕ್ಷಾಯಾಃ ಷೋಡಶಸು ಭೇದೇಷು ವಿಶೇಷಮಾಹ ತತ್ರೇತಿ. ತತ್ರ ಉಕ್ತೇಷು ವಾಚ್ಯಪ್ರತೀಯಮಾನೋತ್ಪ್ರೇಕ್ಷಯೋರ್ಭೇದೇಷು ಮಧ್ಯೇ ಯೇ ವಾಚ್ಯೋತ್ಪ್ರೇಕ್ಷಾಯಾಃ ಷೋಡಶಭೇದಾಃ ತೇಷು ಚ ಜಾತ್ಯಾದೀನಾಂ ತ್ರಯಾಣಾಂ ಯೇ ದ್ವಾದಶಭೇದತಯಾ ಷಟ್ತ್ರಿಂಶದ್ಭೇದಾಃ, ದ್ರವ್ಯಸ್ಯ ಸ್ವರೂಪೋತ್ಪ್ರೇಕ್ಷಣಮೇವ ಸಂಭವತೀತಿ ಚತ್ವಾರ ಇತಿ ಮಿಳಿತ್ವಾ ಚತ್ವಾರಿಂಶದ್ಭೇದಾಃ.

ಪ್ರಕೃತ ವಿಷಯವನ್ನು ಸ್ಥಾಪಿಸುವುದೇ ನಿಶ್ಚಯವೆನಿಸಿದ್ದರಿಂದ ಹಾಗೆ ನಿಶ್ಚಯಿಸುವಾಗ ಜಿಜ್ಞಾಸೆಯುಂಟಾಗುವ ಪ್ರಯುಕ್ತ ಹೇಗಾದರೂ ಒಂದೇ ಬಗೆಯಲ್ಲಿ ಅದನ್ನು ನಿಶ್ಚಯಿಸುವುದೇ ಉತ್ತಮವೆಂದು ಭಾವಿಸಿ ಅದನ್ನು ಉತ್ಪ್ರೇಕ್ಷಾಲಂಕಾರವೆಂದು ತಿಳಿಸುತ್ತಾನೆ. ಒಂದು ವಸ್ತುವಿನ ಬಗ್ಗೆ ತೋರುವ ಎರಡು ಅಂಶಗಳಲ್ಲಿ ಒಂದರ ಬಗ್ಗೆ ಹೇಗಾದರೂ ದೃಢವಾದ ಜ್ಞಾನವುಂಟಾಗುವುದೇ ಸಂಭಾವನೆ ಎನಿಸುವುದು. ಪ್ರಕೃತ ಸಂದರ್ಭದಲ್ಲಿ ವರ್ಣಿಸಬೇಕಾದ ಉಪಮೇಯವನ್ನು ಅದಕ್ಕಿಂತ ಬೇರೆ ಎನಿಸಿದ ಉಪಮಾನವೆಂದು ಮನಸ್ಸಿನಲ್ಲಿ ಭಾವಿಸುವುದೇ ಉತ್ಪ್ರೇಕ್ಷೆ ಎನಿಸುವುದು. ಯಾವುದಾದರೊಂದು ಪದಾರ್ಥವನ್ನು ಊಹಿಸುವವನ ದೃಷ್ಟಿಯು ಸಾಮಾನ್ಯವಾಗಿ ಮೇಲ್ಮಟ್ಟದಲ್ಲಿ ಪ್ರಸರಿಸುವುದೇ ಉತ್ಪ್ರೇಕ್ಷೆ ಎಂದು ಅನ್ವರ್ಥವೆನಿಸಿದೆ. ಇದರಿಂದ ಉಪಮೇಯವನ್ನು ಉಪ

ಮಾನವೆಂದು ಊಹಿಸುವುದೇ ಉತ್ಪ್ರೇಕ್ಷೆ ಎಂದು ಹೇಳಿದಂತಾಯಿತು. ಉಪಮಾಲಂಕಾರ ದಲ್ಲಿ ಉಪಮಾನಪದಾರ್ಥವು ವಾಸ್ತವವೆನಿಸಿದ ಪ್ರಯುಕ್ತ ಸಂಭಾವನೆಗೆ ಅವಕಾಶ ವಿಲ್ಲ. ಇಲ್ಲಿಯಾದರೋ ಉಪಮಾನವಸ್ತುವು ವಾಸ್ತವಿಕವಾಗಿ ಇಲ್ಲದ ಪ್ರಯುಕ ಸಂಭಾವನೆಗೆ ಅವಕಾಶವಿದೆ. ಆದ್ದರಿಂದಲೇ ಇದನ್ನು ಅಭೂತೋಪಮೆ ಎಂದು ಕೆಲ ವರು ಕರೆದಿದ್ದಾರೆ. ರೂಪಕದಲ್ಲಿ ಆರೋಪವೂ, ಭ್ರಾಂತಿಮದಲಂಕಾರದಲ್ಲಿ ಭ್ರಮವೂ, ಅತಿಶಯೋಕ್ತಿಯಲ್ಲಿ ಅಧ್ಯವಸಾಯವೂ ನಿಶ್ಚಯವೆನಿಸಿರುತ್ತವೆ. ಇಲ್ಲಿಯಾದರೋ ಸಂಭಾವನೆಯು ಸಂಶಯವೆನಿಸಿರುತ್ತದೆ. ರೂಪಕವು ಸಾರೋಪಲಕ್ಷಣೆಯನ್ನೂ, ಅತಿಶ ಯೋಕ್ತಿಯು ಸಾಧ್ಯವಸಾನಲಕ್ಷಣೆಯನ್ನು ಅವಲಂಬಿಸಿವೆ. ಇದಾದರೋ ಯಾವ ಲಕ್ಷಣ ವನ್ನೂ ಅವಲಂಬಿಸಿಲ್ಲ. ಸಂದೇಹವಾದರೋ ಕೇವಲವೆನಿಸಿದ್ದರೆ ಇದು ಸಂಭಾವನೆ ಎಂಬ ಸಂಶಯವೆನಿಸಿರುವುದು. ಆದ್ದರಿಂದ ಇದು ರೂಪಕ ಮೊದಲಾದವುಗಳಿಗಿಂತ ಬೇರೆ ಎನಿಸಿದೆ.

ಇದು ವಾಚ್ಯ, ವ್ಯಂಗ್ಯ ಎಂದು ಎರಡು ಬಗೆಯಾಗಿದೆ. ಇವ ಮೊದಲಾದ ಪದಗಳನ್ನು ಪ್ರಯೋಗಿಸಿದ್ದರೆ ಇದು ವಾಚ್ಯವೂ, ಅವನ್ನು ಪ್ರಯೋಗಿಸದೇ ಇದ್ದರೆ ವ್ಯಂಗ್ಯವೂ ಆಗುವುದು. ಇವೆರಡೂ ಬಗೆಗಳಲ್ಲೂ, ಜಾತಿವಿಶಿಷ್ಟವಾದ ಯಾವುದಾದ ರೊಂದು ವ್ಯಕ್ತಿಯನ್ನೋ, ಗುಣವನ್ನೋ, ಕ್ರಿಯೆಯನ್ನೋ, ಒಂದು ವಸ್ತುವನ್ನೋ ಉತ್ಪ್ರೇಕ್ಷಿಸಬಹುದು. ಇದರಿಂದ ಇದು ಎಂಟು ಬಗೆ ಎನಿಸಿದ್ದು ಇವು ಎಂಟರಲ್ಲಿ ಒಂದೊಂದೂ ಭಾವರೂಪವೂ ಅಭಾವರೂಪವೂ ಆದ್ದರಿಂದ ಇದು ಒಟ್ಟು ಹದಿನಾರ ಬಗೆಯಾಗುತ್ತದೆ. ಉತ್ಪ್ರೇಕ್ಷೆಯ ಕಾರಣವು ಗುಣವೋ ಕ್ರಿಯೆಯೋ ಆಗುವುದರಿಂದ ಇವುಗಳಲ್ಲಿ ಒಂದೊಂದು ಬಗೆಯೂ ಮತ್ತೆ ಎರಡೆರಡು ಬಗೆಯಾಗುವುದರಿಂದ ಒಟು ಮೂವತ್ತೆರಡು ಬಗೆಗಳಾಗುತ್ತವೆ. ದ್ರವ್ಯೋತ್ಪ್ರೇಕ್ಷೆಯನ್ನು ಬಿಟ್ಟು ಉಳಿದ ವಾಚ್ಯೋ ತ್ಪ್ರೇಕ್ಷೆಗಳು ಸ್ವರೂಪೋತ್ಪ್ರೇಕ್ಷೆ, ಫಲೋತ್ಪ್ರೇಕ್ಷೆ, ಹೇತೂತ್ಪ್ರೇಕ್ಷೆ ಎಂದು ಮೂರು ಬಗೆ ಯಾಗುತ್ತವೆ. ಅವುಗಳಲ್ಲಿ ವಾಚ್ಯೋತ್ಪ್ರೇಕ್ಷೆಯ ಉದಾಹರಣವನ್ನು ತಿಳಿಸುತ್ತಾನೆ. "ಅಳ್ಳಾಡುತ್ತಿರುವ ಬಟ್ಟೆಯ ತುದಿಯುಳ್ಳ ಪ್ರೇಯಸಿಯ ತೊಡೆಯು ಬಟ್ಟೆಯೊಡ ಗೂಡಿದ ಮನ್ಮಥನ ವಿಜಯಸ್ತಂಭವೋ ಏನೋ ಎಂಬಂತೆ ಶೋಭಿಸುತ್ತಿದೆ." ಇಲ್ಲಿ ವಿಜಯಸ್ತಂಭ ಶಬ್ದವು ಎಲ್ಲಾ ಬಗೆಯ ವಿಜಯಸ್ತಂಭಗಳಿಗೂ ಅನ್ವಯಿಸುವುದರಿಂದ ಇದು ಜಾತಿವಿಷಯಕವಾದ ಉತ್ಪ್ರೇಕ್ಷೆ ಎನಿಸಿದೆ. ಇಲ್ಲಿ ಊರುವೇ ಉಪಮೇಯ. ವಿಜಯಸ್ತಂಭವೇ ಉಪಮಾನ. ಆದರೆ ಇದು ಯಥಾರ್ಥವಾಗಿ ಇರುವಂತಹದಲ್ಲವಾದ ರಿಂದ ವಾಸ್ತವವೆನಿಸಿಲ್ಲ. ಇವ ಶಬ್ದವನ್ನು ಇಲ್ಲಿ ಪ್ರಯೋಗಿಸಿರುವುದರಿಂದ ಇಲ್ಲಿ ಉತ್ಪ್ರೇ ಕ್ಷೆಯು ವಾಚ್ಯವೆನ್ನಿಸಿದೆ. ವಿಜಯಸ್ತಂಭವೆಂಬ ಭಾವಪಧಾರ್ಥವನ್ನು ಉತ್ಪ್ರೇಪಿಸಿರ ವುದರಿಂದ ಇದು ಭಾವರೂಪವೆನಿಸಿದೆ. ನಾಯಿಕೆಯ ತೊಡೆಯಲ್ಲಿದ್ದ ಮಾರ್ದವಗುಣವೇ ಇಲ್ಲಿ ಉತ್ಪ್ರೇಕ್ಷೆಗೆ ನಿಮಿತ್ತವೆನಿಸಿದೆ. "ದಿಲೀಪನಿಗೆ ಎಲ್ಲಾ ವಿಷಯಗಳನ್ನು ಬೋಧಿಸುವ ಶಕ್ತಿ ಇದ್ದರೂ ಅನಾವಶ್ಯಕವಾದ ವಿಷಯದಲ್ಲಿ ಮೌನವಿರುತ್ತಿತ್ತು. ಅವನು ಎಲ್ಲ

ಶಲ್ಲೂ ವಾಚಾಳನಂತೆ ಹೆಚ್ಚು ಮಾತನ್ನಾಡುತ್ತಿರಲಿಲ್ಲ. ಶಕ್ತಿ ಇದ್ದರೂ ಸಹ ಸಹನೆ ಇತ್ತು; ಹಾಗೆಯೇ ದಾನಮಾಡುವಾಗಲೂ ಆತ್ಮಪ್ರಶಂಸೆಯನ್ನು ತೋರೆಯುತ್ತಿದ್ದನು. ಹೀಗೆ ಅವನ ಗುಣಗಳು ಲೋಕಪ್ರಿಯತ್ವವೇ ಮೊದಲಾದ ಬೇರೆ ಗುಣಗಳಿಗೆ ಪ್ರಯೋಜಕವಾದ್ದರಿಂದ ಅವನಲ್ಲಿ ಸಹೋದರರಂತೆ ನೆಲಸಿದ್ದುವು" ಹೀಗೆ ರಘುವಂಶದಲ್ಲಿ ದಿಲೀಪನ ಗುಣಗಳನ್ನು ಪ್ರಶಂಸಿಸುವಾಗ ಬಂಧುತ್ವವೆಂಬ ಗುಣವನ್ನು ಉತ್ಪ್ರೇಕ್ಷಿಸಲಾಗಿದೆ. ಕೃಷ್ಣನ ಪ್ರತಾಪವನ್ನು ಪ್ರಶಂಸಿಸುವಾಗ ಹೀಗೆ ಬಂದಿದೆ. "ಎಲೈ ದೇವರಕ್ಷಕನೇ, ಶತ್ರುಸ್ತ್ರೀಸಮೂಹಕ್ಕೆ ಭಯವನ್ನು ಹುಟ್ಟಿಸಿ ಗರ್ಭವನ್ನು ನಾಶಮಾಡುವುದರಿಂದ ಪಾಪಿ ಎನಿಸಿದ ನಿನ್ನ ದುಂದುಭಿಧ್ವನಿಯು ಗಂಗೆಯ ನೀರಿನಲ್ಲಿ ಸ್ನಾನಮಾಡುತ್ತಿದೆಯೋ ಏನೋ" ಇಲ್ಲಿ ಶತ್ರುವಿನ ನಗರವನ್ನು ಆಕ್ರಮಿಸುವಾಗ ಹುಟ್ಟುವ ಧ್ವನಿಯು ಗಂಗೆಯವರೆಗೂ ವ್ಯಾಪಿಸಿತ್ತೆಂದು ಹೇಳಿರುವುದರಿಂದ ಸ್ನಾನಕ್ರಿಯೆಯನ್ನು ಇಲ್ಲಿ ಉತ್ಪ್ರೇಕ್ಷಿಸಲಾಗಿದೆ. "ಜಿಂಕೆಯಂತೆ ಕಣ್ಣುಗಳಿರುವ ಈ ನಾಯಿಕೆಯ ಮುಖವು ಬೇರೊಬ್ಬ ಪೂರ್ಣಚಂದ್ರನೋ ಎಂಬಂತಿದೆ" ಇಲ್ಲಿ ಚಂದ್ರನೆಂಬ ಒಬ್ಬ ವ್ಯಕ್ತಿಯನ್ನು ತಿಳಿಸಿದ್ದರಿಂದ ಒಂದು ದ್ರವ್ಯವನ್ನು ಉತ್ಪ್ರೇಕ್ಷಿಸಲಾಗಿದೆ. ಭಾವವಸ್ತುವನ್ನು ಉತ್ಪ್ರೇಕ್ಷಿಸಲು ಇವೆಲ್ಲವೂ ಉದಾಹರಣವೆನಿಸುತ್ತವೆ. ಜಾತಿ ಗುಣ ಕ್ರಿಯಾ ದ್ರವ್ಯಗಳ ಅಭಾವವನ್ನು ಉತ್ಪ್ರೇಕ್ಷಿಸುವಾಗ ಉದಾಹರಣವನ್ನು ತಿಳಿಸುತ್ತಾನೆ. ಪತಿಯ ಸಮೀಪದಲ್ಲಿ ವಿರಹಿಣಿಯಾದ ಪ್ರೇಯಸಿಯ ಅವಸ್ಥೆಯನ್ನು ಒಬ್ಬನು ವರ್ಣಿಸುವ ಈ ಪದ್ಯದಲ್ಲಿ ಉದಾಹರಣವನ್ನು ತಿಳಿಸಲಾಗಿದೆ. "ಇಲ್ಲಿ ಕಾಣುತ್ತಿರುವ ಪ್ರೇಯಸಿಯ ಕಪೋಲಗಳೆರಡೂ ಅಷ್ಟು ಸುದರವಾಗಿದ್ದರೂ ಸಹ ಉದ್ಭವಾದ ಮೂಗಿನಿಂದ ತಡೆಯುಂಟಾದ ಪ್ರಯುಕ್ತ ಪರಸ್ಪರವಾಗಿ ನೋಡಿಕೊಳ್ಳುತ್ತ.ಇಷ್ಟೊಂದು ಕ್ಷೀಣಸ್ಥಿತಿಗೆ ಬಂದವೋ ಏನೋ ! ಒಬ್ಬ ನೆಂಟನನ್ನು ಕಾಣದಿದ್ದರೆ ಮತ್ತೊಬ್ಬ ನೆಂಟನು ಕ್ಷೀಣಸ್ಥಿತಿಗೆ ಬರುವುದು ಸಹಜ" ಇಲ್ಲಿ ಅಪಶ್ಯಂತೌ ಎಂದು ಹೇಳಿದ್ದರಿಂದ ಕಪೋಲಗಳಿಗೆ ನೋಡುವ ಕ್ರಿಯೆ ತಪ್ಪಿತ್ತೆಂಬುದನ್ನು ಉತ್ಪ್ರೇಕ್ಷಿಸಲಾಗಿದೆ. ಹೀಗೆಯೇ ಉಳಿದವನ್ನು ತಿಳಿಯುವುದು. ಉತ್ಪ್ರೇಕ್ಷೆಯ ನಿಮಿತ್ತವು ಗುಣವೋ ಅಥವಾ ಕ್ರಿಯೆಯೋ ಆದರೆ ಗಂಗಾಂಭಸಿ ಎಂಬಲ್ಲಿ 'ಸ್ನಾತೀವಂ ಎಂದು ಹೇಳಿರುವ ಸ್ನಾನಕ್ರಿಯೆಯ ಉತ್ಪ್ರೇಕ್ಷೆಗೆ ನಿಮಿತ್ತವೆನಿಸಿದ್ದುದು ಪಾತಕಿ ಎಂಬ ಗುಣವೆಂದು ತಿಳಿಯುವುದು. 'ಅಪಶ್ಯಂತಾವಿವ' ಎಂಬಲ್ಲಿ ಕ್ಷೀಣಸ್ಥಿತಿಗೆ ಬರುವುವಕ್ಕೆ ನಿಮಿತ್ತವೆನಿಸಿದ್ದುದು. ಕ್ರಿಯೆ ಎಂದು ತಿಳಿಯುವುದು. ಹೀಗೆಯೇ ಉಳಿದವನ್ನು ಊಹಿಸುವುದು.

ಈವರಿವಿಗೆ ವಾಚ್ಯೋತ್ಪ್ರೇಕ್ಷೆಯನ್ನು ತಿಳಿಸಿ ಈಗ ವ್ಯಂಗ್ಯೋತ್ಪ್ರೇಕ್ಷೆಯನ್ನು ವಿವರಿಸುತ್ತಾನೆ. "ಕೃಶಾಂಗಿಯ ಸ್ತನಗಳೆರಡು ದಾರದಿಂದ ಪೋಣಿಸಿದ ಹಾರಕ್ಕೆ (ವಿದ್ಯೆ ಗೌರವ ಮೊದಲಾದ ಗುಣಗಳನ್ನು ಸಂಪಾದಿಸಿರುವವನಿಗೆ) ಯಥೋಚಿತವಾದ ಸ್ಥಾನವನ್ನು ಕೊಡಲಿಲ್ಲವೆಂಬ ಕಾರಣಕ್ಕಾಗಿ ನಾಚಿಕೆಯಿಂದಲೋ ಏನೋ ಅಗ್ರಭಾಗವನ್ನು ಪ್ರಕಾಶಿಸಲಿಲ್ಲ." ಇಲ್ಲಿ ಲಜ್ಜೆಯಿಂದಲೋ ಏನೋ ಎಂಬ ಅರ್ಥವನ್ನು ತಿಳಿಸಲು

ಇವ ಎಂಬ ಪದವನ್ನು ಉಪಯೋಗಿಸದೆಯೇ ಇರುವುದರಿಂದ ಇದು ವ್ಯಂಗ್ಯೋತ್ಪ್ರೇಕ್ಷೆ ಎನಿಸಿದೆ. ಹೀಗೆಯೇ ಉಳಿದದ್ದನ್ನು ತಿಳಿಯುವುದು. ಧ್ವನಿಯನ್ನು ನಿರೂಪಿಸುವ ಸಂದರ್ಭದಲ್ಲಿ ಅಲಂಕಾರಗಳೆಲ್ಲವೂ ವ್ಯಂಗ್ಯವಾಗಿಯೇ ತೋರುತ್ತವೆ ಎಂದು ಹೇಳಿಯಾಗಿದೆ. ಈಗ ಮತ್ತೆ ಇದೊಂದನ್ನು ಮಾತ್ರ ವ್ಯಂಗ್ಯವೆಂದು ವಿಶೇಷವಾಗಿ ಏಕೆ ಹೇಳಬೇಕು? ಎಂದು ಆಕ್ಷೇಪವು ಬಂದರೆ ಅದಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ಅನೇಕ ಸ್ತ್ರೀಯರನ್ನು ಪ್ರೀತಿಸುತ್ತ ಪರದೇಶದಲ್ಲಿ ಇದ್ದು ತನ್ನ ನಾಯಿಕೆಯ ವೃತ್ತಾಂತವನ್ನು ತಿಳಿಯಬಯಸುವ ನಾಯಕನಿಗೆ ನಾಯಿಕೆಯ ದೂತಿಯ ಹೇಳುವ ಮಾತಿದು. "ಎಲೈ ಸ್ತ್ರೀವಲ್ಲಭನೇ, ಸಾವಿರಾರು ರಮಣಿಯರಿಂದ ತುಂಬಿರುವ ನಿನ್ನ ಹೃದಯದಲ್ಲಿ ಅಡಗಲು ಅವಕಾಶವನ್ನು ಪಡೆಯಲಿಕ್ಕೆ ಆಗದೆಯೋ ಏನೋ ಎಂಬಂತೆ ಆ ನಾಯಿಕೆಯು ಯಾವಾಗಲೂ ಬೇರೆ ಯಾವ ಕೆಲಸವೂ ಇಲ್ಲದವಳಾಗಿ ಸಹಜವಾಗಿ ಕೃಶವಾಗಿರುವ ದೇಹವನ್ನು ಮತ್ತಷ್ಟು ಕೃಶಪಡಿಸುತ್ತಿರುವಳೋ ಏನೋ!" ಇಲ್ಲಿ ಅಮಾಂತೀವ ಎಂಬಲ್ಲಿ ಅಭಾವರೂಪವಾದ ಕ್ರಿಯೆಯು ವ್ಯಂಗ್ಯವಾಗಿ ತೋರುವುದೆಂದು ತಿಳಿದುಬರುತ್ತದೆ. ಈ ಪದ್ಯದಲ್ಲಿ ಅಮಾಂತೀವ ಎಂಬಲ್ಲಿ ಸಂಭಾವನೆಯಿಲ್ಲದಿದ್ದರೂ ವಾಕ್ಯವು ಸಮಾಪ್ತಿಯಾಗುತ್ತದೆ. ಈ ಬಗ್ಗೆ ಯಾವ ಅನುಪಪತ್ತಿಯೂ ಕಾಣಬರುವುದಿಲ್ಲ; ಆದರೆ 'ತನ್ವಂಗ್ಯಾಃ ಸ್ತನಯುಗ್ಮೇನ' ಎಂಬಲ್ಲಿಯಾದರೋ ಸ್ತನಗಳು ಅಚೇತನವಾದ್ದರಿಂದ ಅವಕ್ಕೆ ಲಜ್ಜೆ ಎಂಬುದು ಸಂಭವಿಸದೇ ಇರುವ ಪ್ರಯುಕ್ತ ಉತ್ಪ್ರೇಕ್ಷೆಯನ್ನು ತಿಳಿಸುವ ಇವಶಬ್ದವನ್ನು ಅಧ್ಯಾಹಾರಮಾಡಿಕೊಳ್ಳುವುದರಿಂದಲೇ ವಾಕ್ಯವು ವಿಶ್ರಾಂತವಾಗಬೇಕಾಗಿದೆ. ಎಲ್ಲಿ ಉತ್ಪ್ರೇಕ್ಷೆಯಿಲ್ಲದಿದ್ದರೆ ಅನ್ವಯವೇ ಹೊಂದುವುದಿಲ್ಲವೋ ಅಲ್ಲಿ ಪ್ರತೀಯಮಾನೋತ್ಪ್ರೇಕ್ಷೆಯುಂಟೆಂದು ತಿಳಿಯಬೇಕು. ಎಲ್ಲಿ ಅನ್ವಯವು ಹೊಂದಿಕೆಯಾಗುವುದೋ ಅಲ್ಲಿಯೇ ಸಂಭಾವನಾಧ್ವನಿಯುಂಟೆಂದು ತಿಳಿಯಬೇಕು. ಹೀಗೆ ಇವೆರಡಕ್ಕೂ ಭೇದವನ್ನು ಅಂಗೀಕರಿಸಲಾಗಿದೆ. ವಾಚ್ಯೋತ್ಪ್ರೇಕ್ಷೆಯಲ್ಲಿ ದ್ರವ್ಯೋತ್ಪ್ರೇಕ್ಷೆಯನ್ನು ಬಿಟ್ಟರೆ ಉಳಿದ ಹನ್ನೆರಡು ಬಗೆಗಳಲ್ಲಿ ಸ್ವರೂಪ, ಫಲ, ಹೇತು ಇವಕ್ಕೆ ಸಂಬಂಧಿಸಿದ್ದರಿಂದ ಮೂವತ್ತೆರಡು ಬಗೆಗಳಾಗುತ್ತವೆ. ದ್ರವ್ಯೋತ್ಪ್ರೇಕ್ಷೆಯಲ್ಲಿ ಸ್ವರೂಪೋತ್ಪ್ರೇಕ್ಷೆಯು ಮಾತ್ರವೇ ಸಂಭವಿಸುವ ಪ್ರಯುಕ್ತ ಇವೆಲ್ಲವೂ ಸೇರಿ ಒಟ್ಟು ನಲವತ್ತು ಬಗೆಗಳಾಗುತ್ತವೆ. 'ಸ್ಮರಸ್ಯ ವಿಜಯಸ್ತಂಭಃ' ಎಂಬುದು ಸ್ವರೂಪೋತ್ಪ್ರೇಕ್ಷೆ ಎನಿಸಿದೆ. 'ಸಪ್ರಸವಾ ಇವ' 'ಸ್ನಾತೀವ' 'ಪೂರ್ಣಚಂದ್ರ ಇವಾಪರಃ' ಎಂಬಲ್ಲಿ ಜಾತಿ, ಗುಣ, ವಸ್ತುಸ್ವರೂಪ ಇವನ್ನು ಉತ್ಪ್ರೇಕ್ಷಿಸಲಾಗಿದೆ.

ಈಗ ಫಲೋತ್ಪ್ರೇಕ್ಷೆಯನ್ನು ಉದಾಹರಿಸುತ್ತಾನೆ. 'ರಾಮನಿಂದ ಹೊರಟ ಬಾಣವು ರಾವಣನ ಹೃದಯವನ್ನು ಭೇದಿಸಿ ಪಾತಾಳದಲ್ಲಿ ವಾಸಿಸುವ ಸರ್ಪಗಳಿಗೆ ರಾವಣನ ವಧವೆಂಬ ಪ್ರಿಯಸಮಾಚಾರವನ್ನು ತಿಳಿಸಲಿಕ್ಕೋ ಏನೋ ಎಂಬಂತೆ ಭೂಮಿಯನ್ನು ಪ್ರವೇಶಿಸಿತು" ಇದಕ್ಕೆ ರಾವಣನ ವಧೆಯನ್ನು ತಿಳಿಸುವುದೇ ಫಲವೆಂದು ಕ್ರಿಯೆಯನ್ನು ಇಲ್ಲಿ ಉತ್ಪ್ರೇಕ್ಷಿಸಲಾಗಿದೆ. ಈಗ ಹೇತೂತ್ಪ್ರೇಕ್ಷೆಯನ್ನು ಉದಾಹರಿ

ಸುತ್ತಾನೆ. "ಯಾವ ಸ್ಥಳದಲ್ಲಿ ನಿನ್ನನ್ನು ಹುಡುಕುತ್ತಿದ್ದ ನಾನು ಭೂಮಿಯಲ್ಲಿ ನಿನ್ನ ಪಾದಕಮಲದಿಂದಲೇ ಬದ್ದಿದ್ದ ಒಂದು ಕಾಲುಕಡಗವು ಆ ಪಾದದಿಂದಲೇ ಬಿದ್ದು ಹೋಗಿದ್ದ ಪ್ರಯುಕ್ತ ಉಂಟಾದ ದುಃಖದಿಂದಲೋ ಏನೋ ಎಂಬಂತೆ ನಿಶ್ಶಬ್ದವಾಗಿರುವುದಾಗಿ ಆ ಸ್ಥಳವನ್ನು ನಾನು ಕಂಡೆನು" ಇಲ್ಲಿ ಕಡಗಕ್ಕೆ ಕಾಲಿನ ವಿಯೋಗ ಉಂಟಾಗಲು ಅದಕ್ಕೆ ಆ ಬಗ್ಗೆ ಹುಟ್ಟಿದ್ದ ದುಃಖವೆಂಬ ಗುಣವನ್ನು ಹೇತುವೆಂದು ಉತ್ಪ್ರೇಕ್ಷಿಸಲಾಗಿದೆ. ಹೀಗೆಯೇ ಬೇರೆಯದನ್ನು ತಿಳಿಯುವುದು.

ಉಕ್ತ್ಯನುಕ್ತ್ಯೋರ್ನಿಮಿತ್ತಸ್ಯ ದ್ವಿಧಾ ತತ್ರ ಸ್ವರೂಪಗಾಃ ।

ತೇಷು ಚತ್ವಾರಿಂಶತ್ಸಂಖ್ಯಾಕೇಷು ಭೇದೇಷು ಮಧ್ಯೇ ಯೇ ಸ್ವರೂಪಗಾಃ ಷೋಡಶಭೇದಾಃ ತೇ ಉತ್ಪ್ರೇಕ್ಷಾನಿಮಿತ್ತಸ್ಯ ಉಪಾದಾನಾನುಪಾದಾನಾಭ್ಯಾಂ ದ್ವಾತ್ರಿಂಶದ್ಭೇದಾಃ ಇತಿ ಮಿಳಿತ್ವಾ ಷಟ್ಪಂಚಾಶದ್ಭೇದಾಃ ವಾಚ್ಯೋತ್ಪ್ರೇಕ್ಷಾಯಾಃ.

ತತ್ರ ನಿಮಿತ್ತಸ್ಯೋಪಾದಾನಂ ಯಥಾ ಪೂರ್ವೋದಾಹೃತೇ 'ಸ್ನಾತೀವ' ಇತ್ಯುತ್ಪ್ರೇಕ್ಷಾಯಾಂ ನಿಮಿತ್ತಂ ಪಾತಕಿತ್ವಮುಪಾತ್ತಮ್. ಅನುಪಾದಾನೇ ಯಥಾ 'ಚಂದ್ರ ಇವ ಅಪರಃ' ಇತ್ಯತ್ರ ತಥಾವಿಧಸೌಂದರ್ಯಾದ್ಯತಿಶಯೋ ನೋಪಾತ್ತಃ. ಹೇತುಫಲಯೋಸ್ತು ನಿಯಮೇನ ನಿಮಿತ್ತಸ್ಯ ಉಪಾದಾನಮೇವ. ತಥಾಹಿ 'ವಿಶ್ಲೇಷದುಃಖಾದಿವ' ಇತ್ಯತ್ರ ಯನ್ನಿಮಿತ್ತಂ ಬದ್ಧಮೌನತ್ವಂ, 'ಅಖ್ಯಾತುಮಿವ'. ಇತ್ಯತ್ರ ಚ ಭೂಪ್ರವೇಶಸ್ತನಯೋರನುಪಾದಾನೇ ಅಸಂಗತಮೇವ ವಾಕ್ಯಂ ಸ್ಯಾತ್. ಪ್ರತೀಯಮಾನಾಯಾಃ ಷೋಡಶಸು ಭೇದೇಷು ವಿಶೇಷಮಾಹ.

ಪ್ರತೀಯಮಾನಾಭೇದಾಶ್ಚ ಪ್ರತ್ಯೇಕಂ ಫಲಹೇತುಗಾಃ ।

ಯಥೋದಾಹೃತೇ ' ತನ್ವಂಗ್ಯಾಃ ಸ್ತನಯುಗ್ಮೇನ ' ಇತ್ಯತ್ರ 'ಲಜ್ಜಯೇವ' ಇತಿ ಹೇತುರುತ್ಪ್ರೇಕ್ಷಿತಃ ಅಸ್ಯಾಮಪಿ ನಿಮಿತ್ತಸ್ಯ ಅನುಪಾದಾನಂ ನ ಸಂಭವತಿ, ಇವಾದ್ಯನುಪಾದನೇ ನಿಮಿತ್ತಸ್ಯ ಚ ಅಕೀರ್ತನೇ ಉತ್ಪ್ರೇಕ್ಷಣಸ್ಯ ಪ್ರಮಾತುರ್ನಿಶ್ಚೇತುಮಶಕ್ಯತ್ವಾತ್. ಸ್ವರೂಪೋತ್ಪ್ರೇಕ್ಷಾಪ್ಯತ್ರ ನ ಭವತಿ, ಧರ್ಮ್ಯಂತರತಾದಾತ್ಮ್ಯನಿಬಂಧನಾಯಾಂ ಅಸ್ಯಾಮಿವ ಆದ್ಯಪ್ರಯೋಗೇ ವಿಶೇಷಣಯೋಗೇ ಸತ್ಯತಿಶಯೋಕ್ತೇರನಭ್ಯುಪಗಮಾತ್. ಯಥಾ "ಅಯಂ ರಾಜಾ ಅಪರಃ ಪಾಕಶಾಸನಃ" ಇತಿ. ತದೇವಂ ದ್ವಾತ್ರಿಂಶತ್ಪ್ರಕಾರಾ ಪ್ರತೀಯಮಾನೋತ್ಪ್ರೇಕ್ಷಾ.

ಉಕ್ತ್ಯನುಕ್ತ್ಯೋಃ ಪ್ರಸ್ತುತಸ್ಯ ಪ್ರತ್ಯೇಕಂ ತಾ ಅಪಿ ದ್ವಿಧಾ ।

ತಾಃ ಉತ್ಪ್ರೇಕ್ಷಾಃ. ಉಕ್ತೌ ಯಥಾ ' ಊರುಃ ಕುರಂಗಕದೃಶಃ ' ಇತಿ. ಅನುಕ್ತೌ ಯಥಾ ಮಮ ಪ್ರಭಾವತ್ಯಾಂ ' ಪ್ರದ್ಯುಮ್ನಃ– ಇಹ ಹಿ ಸಂಪ್ರತಿ ದಿಗಂತಮಾಚ್ಛಾದಯತಾ ತಿಮಿರಪಟಲೇನ—

ಘಟಿತಮಿವಾಂಜನಪುಂಜೈಃ ಪೂರಿತಮಿವ ಮೃಗಮದಕ್ಷೋದೈಃ ।
ತತಮಿವ ತಮಾಲತರುಭಿರ್ವೃತಮಿವ ನೀಲಾಂಶುಕೈರ್ಭುವನಮ್ ॥

ಅತ್ರ ಅಂಜನೇನ ಘಟಿತತ್ವಾದೇರುತ್ಪ್ರೇಕ್ಷಣೀಯಸ್ಯ ವಿಷಯವ್ಯಾಪ್ತತ್ವಂ ನೋಪಾತ್ತಮ್

ಯಥಾ ವಾ-ಲಿಂಪತೀವ ತಮೋಽಂಗಾನಿ ವರ್ಷತೀವಾಂಜನಂ ನಭಃ ।

ಅತ್ರ ತಮಸೋ ಲೇಪನಸ್ಯ ವ್ಯಾಪನರೂಪೋ ವಿಷಯೋ ನೋಪಾತ್ತಃ. ಅಂಜನವ ರ್ಷಣಸ್ಯ ತಮಸ್ಸಂಪಾತಃ. ಅನಯೋರುತ್ಪ್ರೇಕ್ಷಾನಿಮಿತ್ತಂ ಚ ತಮಸೋಽತಿ ಬಹುತ್ವಂ ಧಾರಾರೂಪೇಣ ಅಧಃ ಸಂಯೋಗಶ್ಚ ಯಥಾಸಂಖ್ಯಮ್.

ಕೇಚಿತ್ತು 'ಅಲೇಪನಕರ್ತೃಭೂತಮಪಿ ತಮೋಽಲೇಪನಕರ್ತೃತ್ವೇನ ಉತ್ಪ್ರೇಕ್ಷಿತಂ ವ್ಯಾಪನಂ ಚ ನಿಮಿತ್ತಮ್. ಏವಂ ನಭೋಽಪಿ ವರ್ಷಣಕ್ರಿಯಾಕರ್ತೃತ್ವೇನ" ಇತ್ಯಾಹುಃ. ಅಲಂಕಾರಾಂತರೋತ್ಥಾ ಸಾ ವೈಚಿತ್ರ್ಯಮಧಿಕಂ ವಹೇತ್ ।

ತತ್ರ ಸಾಪಹ್ನವೋತ್ಪ್ರೇಕ್ಷಾ-ಯಥಾ ಮಮ.

ಅಶ್ರುಚ್ಛಲೇನ ಸುದೃಶೋ ಹುತಪಾವಕಧೂಮಕಲುಷಾಕ್ಷ್ಯಾಃ ।
ಅಪ್ರಾಪ್ಯ ಮಾನಮಂಗೇ ವಿಗಲತಿ ಲಾವಣ್ಯವಾರಿಪೂರ ಇವ ॥

ಶ್ಲೇಷಹೇತುಗಾ ಯಥಾ—

ಮುಕ್ತೋತ್ಕರಃ ಸಂಕಟಶುಕ್ತಿಮಧ್ಯಾತ್ ವಿನಿರ್ಗತಃ ಸಾರಸಲೋಚನಾಯಾಃ ।
ಜಾನೀಮಹೇಽಸ್ಯಾಃ ಕಮನೀಯಕಂಬುಗ್ರೀವಾಧಿವಾಸಾತ್ ಗುಣವತ್ತ್ವಮಾಪ ॥

ಅತ್ರ ಗುಣವತ್ತ್ವೇ ಶ್ಲೇಷಃ, ಕಂಬುಗ್ರೀವಾಧಿವಾಸಾದಿವೇತಿ ಹೇತೂತ್ಪ್ರೇಕ್ಷಾಯಾಃ ಹೇತುಃ. ಅತ್ರ ಜಾನೀಮಹೇ ' ಇತ್ಯುತ್ಪ್ರೇಕ್ಷಾವಾಚಕಮ್. ಏವಮ್—

ಮನ್ಯೇ ಶಂಕೇ ಧ್ರುವಂ ಪ್ರಾಯೋ ನೂನಮಿತ್ಯೇವಮಾದಯಃ ।

ಕ್ವಚಿದುಪಮೋಪಕ್ರಮೋತ್ಪ್ರೇಕ್ಷಾ-ಯಥಾ—

ಪಾರೇಜಲಂ ನೀರನಿಧೇರಪಶ್ಯನ್ಮುರಾರಿರಾನೀಲಪಲಾಶರಾಶೀಃ ।
ವನಾವಲೀರುತ್ಕಲಿಕಾಸಹಸ್ರಪ್ರತಿಕ್ಷಣೋತ್ಕೂಲಿತಶೈವಲಾಭಾಃ ॥

ಇತ್ಯತ್ರ ಆಭಾಶಬ್ದಸ್ಯ ಉಪಮಾವಾಚಕತ್ವಾತ್ ಉಪಕ್ರಮೇ ಉಪಮಾ, ಪರ್ಯವಸಾನೇ ತು ಜಲಧಿತೀರೇ ಶೈವಾಲಸ್ಥಿತೇಃ ಸಂಭಾವನಾನುಪಪತ್ತೇಃ ಸಂಭಾವನೋತ್ಥಾನಮಿತ್ಯುತ್ಪ್ರೇಕ್ಷಾ. ಏವಂ ವಿರಹವರ್ಣನೇ 'ಕೇಯೂರಾಯಿತಮಂಗದೈಃ' ಇತ್ಯತ್ರ 'ವಿಕಾಸಿನೀಲೋತ್ಪಲತಿ ಸ್ಮ ಕರ್ಣೇ ಮೃಗಾಯತಾಕ್ಷ್ಯಾಃ ಕುಟಿಲಃ ಕಟಾಕ್ಷಃ" ಇತ್ಯಾದೌ ಚ ಜ್ಞೇಯಮ್.

ಭ್ರಾಂತಿಮದಲಂಕಾರೇ 'ಮುಗ್ಧಾ ದುಗ್ಧಧಿಯಾ' ಇತ್ಯಾದೌ ಭ್ರಾಂತಾನಾಂ ವಲ್ಲವಾದೀನಾಂ ವಿಷಯಸ್ಯ ಚಂದ್ರಿಕಾದೇರ್ಜ್ಞಾನಮೇವ ನಾಸ್ತಿ, ತದುಪನಿಬಂಧಸ್ಯ ಕವಿನೈವ ಕೃತತ್ವಾತ್. ಇಹ ತು ಸಂಭಾವನಾಕರ್ತುರ್ವಿಷಯಸ್ಯಾಪಿ ಜ್ಞಾನಮಿತಿ ದ್ವಯೋರ್ಭೇದಃ. ಸಂದೇಹೇ ತು ಸಮಕಕ್ಷತಯಾ ಕೋಟಿದ್ವಯಸ್ಯ ಪ್ರತೀತಿಃ, ಇಹ ಉತ್ಕಟಾ ಸಂಭಾವ್ಯಭೂತೈಕಾ ಕೋಟಿಃ. ಅತಿಶಯೋಕ್ತೌ ವಿಷಯಿಣಃ ಪ್ರತೀತಸ್ಯ ಪರ್ಯವಸಾನೇ ಅಸತ್ಯತಾ ಪ್ರತೀಯತೇ, ತು ಇಹ ಪ್ರತೀತಿಕಾಲ ಏವೇತಿ ಭೇದಃ.

ರಂಜಿತಾ ನು ವಿವಿಧಾಸ್ತರುಶೈಲಾ ನಿರ್ಮಿತಂ ತು ಗಗನಂ ಸ್ಥಗಿತಂ ನು ।
ಪೂರಿತಾ ನು ವಿಷಯೇಷು ಧರಿತ್ರೀ ಸಂಹೃತಾ ನು ಕಕುಭಸ್ತಿಮಿರೇಣ ॥

ಇತ್ಯತ್ರ ಯತ್ತರ್ವಾದೌ ತಿಮಿರಾಕ್ರಾಂತತಾ ರಂಜನಾದಿರೂಪೇಣ ಸಂದಿಹ್ಯತೆ ಇತಿ ಸಂದೇಹಾಲಂಕಾರ ಇತಿ ಕೇಚಿದಾಹುಃ; ತನ್ನ, ಏಕವಿಷಯೇ ಸಮಾನಬಲತಯಾ ಅನೇಕಕೋಟಿಸ್ಫುರಣಸ್ಯೈವ ಸಂದೇಹತ್ವಾತ್. ಇಹ ತು ತರ್ವಾದಿವ್ಯಾಪ್ತೇಃ ಪ್ರತಿ ಸಂಬಂಧಿಭೇದೋ ವ್ಯಾಪನಾದೇರ್ನಿಗರಣೇನ ರಂಜನಾದೇಃ ಸ್ಫುರಣಂ ಚ. ಅನ್ಯೇ ತು 'ಅನೇಕತ್ವನಿರ್ಧಾರಣರೂಪವಿಚ್ಛಿತ್ತ್ಯಾಶ್ರಯತ್ವೇನೈಕಕೋಟ್ಯಧಿಕೋಽಪಿ ಭಿನ್ನೋಽಯಂ ಸಂದೇಹಪ್ರಕಾರಃ' ಇತಿ ವದಂತಿ ಸ್ಮ. ತದಪ್ಯಯುಕ್ತಮ್. ನಿರ್ಣೀತಸ್ವರೂಪಸ್ಯ ಅನ್ಯ ತಾದಾತ್ಮ್ಯಪ್ರತೀತಿರ್ಹಿ ಸಂಭಾವನಾ, ತಸ್ಯಾಶ್ಚಾತ್ರ ಸ್ಫುಟತಯಾ ಸದ್ಭಾವಾತ್ ನುಶಬ್ದೇನ ಚ ಇವಶಬ್ದವತ್ ತಸ್ಯಾಃ ದ್ಯೋತನಾತ್ ಉತ್ಪ್ರೇಕ್ಷೈವೇಯಂ ಭವಿತುಂ ಯುಕ್ತಾ, ಅಲಮದೃಷ್ಟಸಂದೇಹಪ್ರಕಾರಕಲ್ಪನಯಾ.

> ಯದೇತಚ್ಚಂದ್ರಾಂತರ್ಜಲದಲವಲೀಲಾಂ ವಿತನುತೇ
> ತದಾಚಷ್ಟೇ ಲೋಕಃ ಶಶಕ ಇತಿ ನೋ ಮಾಂ ಪ್ರತಿ ತಥಾ ।
> ಅಹಂ ತ್ವಿಂದುಂ ಮನ್ಯೇ ತ್ವದರಿವಿರಹಾಕ್ರಾಂತತರುಣೀ
> ಕಟಾಕ್ಷೋಲ್ಕಾಪಾತವ್ರಣಕಿಣಕಳಂಕಾಂಕಿತತನುಮ್ ॥

ಇತ್ಯತ್ರ 'ಮನ್ಯೇ' ಶಬ್ದಪ್ರಯೋಗೇಽಪಿ ಉಕ್ತರೂಪಾಯಾ ಸಂಭವನಾಯಾ ಅಪ್ರತೀತೇರ್ವಿತರ್ಕಮಾತ್ರಮ್, ನಾಸಾಪಪಹ್ನವೋತ್ಪ್ರೇಕ್ಷಾ.

ಸ್ವರೂಪೋತ್ಪ್ರೇಕ್ಷೆಯು ಉಕ್ತವಿಷಯಾ ಅನುಕ್ತವಿಷಯಾ ಎಂದು ಮತ್ತೆ ಎರಡ. ಬಗೆಯಾಗುತ್ತದೆ. ಉತ್ಪ್ರೇಕ್ಷೆಗೆ ನಿಮಿತ್ತವೆನಿಸಿದ್ದುದು ಕೆಲವು ವೇಳೆ ಶಬ್ದದಿಂದ ಉಕ ವಾಗಿಯೂ, ಕೆಲವು ವೇಳೆ ಅನುಕ್ತವಾಗಿಯೂ ಇರುವುದರಿಂದ ಹೀಗೆ ಭೇದಗಳಾಗುತ್ತವೆ. ಅಲ್ಲಿಗೆ ಸ್ವರೂಪೋತ್ಪ್ರೇಕ್ಷೆಯ ಹದಿನಾರು ಬಗೆಗಳು ಮತ್ತೆ ಮೂವತ್ತೆರಡು ಬಗೆಗಳಾಗಿ ವಾಚ್ಯೋತ್ಪ್ರೇಕ್ಷೆಯಲ್ಲಿ ಒಟ್ಟು ಐವತ್ತಾರು ಬಗೆಗಳಾಗುತ್ತವೆ. ಇವುಗಳಲ್ಲಿ ನಿಮಿತ ವನ್ನು ತಿಳಿಸಿರುವ ಉತ್ಪ್ರೇಕ್ಷೆಯ ಬಗೆಗೆ 'ಸ್ನಾತೀವ' ಎಂಬ ಪದ್ಯವೇ ಉದಾಹರಣ ವೆನಿಸಿದೆ. ಅವರಲ್ಲಿ ಪಾತಕಿತ್ವವೆಂಬ ನಿಮಿತ್ತವನ್ನು ಶಬ್ದದಿಂದ ತಿಳಿಸಲಾಗಿದೆ. ನಿಮಿತ್ತ ವನ್ನು ತಿಳಿಸದೇ ಇರುವುದಕ್ಕೆ 'ಚಂದ್ರ ಇವಾಪರಃ' ಎಂಬುದೇ ಉದಾಹರಣವೆನಿಸಿದೆ. ಅಲ್ಲಿ 'ಹೆಚ್ಚಿನ ಸೌಂದರ್ಯಾತಿಶಯ' ಎಂಬ ನಿಮಿತ್ತವನ್ನು ಶಬ್ದದಿಂದ ತಿಳಿಸಿಲ್ಲ ಹೇತು ಮತ್ತು ಫಲಗಳು ನಿಮಿತ್ತವಾಗುವುದಾದರೆ ಅವನ್ನು ನಿಯತವಾಗಿ ಶಬ್ದದಿಂದ ತಿಳಿಸಲೇಬೇಕು. 'ವಿಶ್ಲೇಷದುಃಖಾದಿವ' ಎಂಬಲ್ಲಿ ಬದ್ಧಮೌನವೆಂಬ ಹೇತುವನ್ನು, 'ಆಖ್ಯಾತುಮಿವ' ಎಂಬಲ್ಲಿ ಭೂಪ್ರವೇಶ ಎಂಬ ಫಲವನ್ನೂ ಶಬ್ದದಿಂದ ತಿಳಿಸಲಾಗಿದೆ. ಅವನ್ನು ಹಾಗೆ ತಿಳಿಸದಿದ್ದರೆ ವಾಕ್ಯವು ಅಸಂಗತವೇ ಆದೀತು.

ವ್ಯಂಗ್ಯೋತ್ಪ್ರೇಕ್ಷೆಯ ಹದಿನಾರು ಬಗೆಗಳಲ್ಲಿರುವ ವಿಶೇಷವನ್ನು ತಿಳಿಸುತ್ತಾನೆ. ಈ ಹದಿನಾರು ಬಗೆಗಳು ಫಲಕ್ಕೂ ಹೇತುವಿಗೂ ಸಂಬಂಧಿಸುವ ಪ್ರಯುಕ್ತ ಒಟ್ಟು ಮುವತ್ತೆರಡು ಬಗೆಗಳಾಗುತ್ತವೆ. 'ತನ್ವಂಗ್ಯಾಃ ಸ್ತನಯುಗ್ಮೇನ' ಎಂಬಲ್ಲಿ 'ಲಜ್ಜ ಯೇವ' ಎಂಬ ಹೇತುವನ್ನು ಉತ್ಪ್ರೇಕ್ಷಿಸಲಾಗಿದೆ. ಇದರಲ್ಲೂ ನಿಮಿತ್ತವನ್ನು ಶಬ್ದ

ದಿಂದ ತಿಳಿಸಲಿಕ್ಕಾಗುವುದಿಲ್ಲ. ಇವ ಮೊದಲಾದ ಪದಗಳನ್ನು ತಿಳಿಸದೆ, ನಿಮಿತ್ತವನ್ನು ಹೇಳದೆ ಉತ್ಪ್ರೇಕ್ಷಿಸುವುದನ್ನು ಯಾವ ಶ್ರೋತೃವಿಗೂ ನಿಶ್ಚಯಿಸಲಿಕ್ಕೆ ಸಾಧ್ಯವಾಗುವುದಿಲ್ಲ. ಸ್ವರೂಪೋತ್ಪ್ರೇಕ್ಷೆಯೂ ಸಹ ಇಲ್ಲಿ ಸಂಭವಿಸುವುದಿಲ್ಲ. ಉಪಮಾನವೆನಿಸಿದ ಬೇರೊಂದು ಧರ್ಮಿಯೊಡನೆ ಅಭೇದವೇ ಪ್ರಯೋಜಕವಾಗಿರುವ ಈ ವ್ಯಂಗ್ಯೋತ್ಪ್ರೇಕ್ಷೆಯಲ್ಲಿ ಇವ ಮೊದಲಾದ ಪದಗಳನ್ನು ಪ್ರಯೋಗಿಸದಿದ್ದರೂ ಅಸಂಭವವನ್ನು ತಿಳಿಸುವ ವಿಶೇಷಣಗಳನ್ನು ಪ್ರಯೋಗಿಸಿದ್ದರೂ ಅಲ್ಲಿ ಅತಿಶಯೋಕ್ತ್ಯಲಂಕಾರವನ್ನು ಒಪ್ಪಲೇ ಬೇಕಾಗುತ್ತದೆ. 'ಈ ರಾಜನು ಬೇರೊಬ್ಬ ಇಂದ್ರನೇ' ಎಂಬಲ್ಲಿ 'ರಾಜ' ಎಂಬುದು ಉಪಮೇಯವೂ 'ಪಾಕಶಾಸನಃ' ಎಂಬುದು ಉಪಮಾನವೂ ಆಗಿವೆ. ಎರಡನೆಯ ಇಂದ್ರನು ಇಲ್ಲದ್ದರಿಂದ ಅಪರಃ ಎಂಬುದು ಅಸಂಭಾವನೆಯನ್ನು ಸೂಚಿಸುವ ವಿಶೇಷಣವೆನಿಸಿದೆ. ಇಲ್ಲಿ ಸಂಭಾವನೆಯನ್ನು ಸೂಚಿಸುವ ಇವ ಮೊದಲಾದ ಪದಗಳು ಇಲ್ಲದ್ದರಿಂದ ಅಸಂಭವವನ್ನು ತಿಳಿಸುವ ವಿಶೇಷಣದ ಮೂಲಕ ಅಧ್ಯವಸಾಯವೇ ತೋರುವುದರಿಂದ ಇದು ಅತಿಶಯೋಕ್ತಿಯೇ ಆಗುವುದು. ಅಸಂಭವವನ್ನು ತಿಳಿಸುವ ವಿಶೇಷಣವಿಲ್ಲದಿದ್ದರೆ ರೂಪಕಾಲಂಕಾರವನ್ನೇ ಹೇಳಬೇಕಾಗುವುದು. 'ರಾಜಾ ಪಾಕಶಾಸನಃ' ಎಂಬುದೇ ಆಗ ಉದಾಹರಣವೆನಿಸುವುದು. ಹೀಗೆ ವ್ಯಂಗ್ಯೋತ್ಪ್ರೇಕ್ಷೆಯಲ್ಲಿ ಮುವತ್ತೆಡರು ಬಗೆಗಳಾಗುತ್ತವೆ.

ಪ್ರಕೃತವೆನಿಸಿದ ಉಪಮೇಯವನ್ನು ತಿಳಿಸಿಯೋ ಅಥವಾ ತಿಳಿಸದೆಯೋ ಇರುವುದರಿಂದ ಈ ಉತ್ಪ್ರೇಕ್ಷೆಗಳು ಮತ್ತೆ ಎರಡು ಬಗೆಗಳಾಗುತ್ತವೆ. 'ಊರುಃ ಕುರಂಗಕದೃಶಃ' ಎಂಬುದು ಉಪಮೇಯವನ್ನು ತಿಳಿಸಿರುವುದಕ್ಕೆ ಉದಾಹರಣವಾಗುತ್ತದೆ. ತಿಳಿಸದೇ ಇರುವುದಕ್ಕೆ ಪ್ರಭಾವತಿಯಲ್ಲಿ ಉದಾಹರಣವಿದೆ. ಪ್ರದ್ಯುಮ್ನನು "ಈಗ ಇಲ್ಲಿ ದಿಕ್ಕುಗಳೆಲ್ಲವನ್ನೂ ಕತ್ತಲೆಯು ವ್ಯಾಪಿಸಿದ್ದರಿಂದ ಭೂಮಂಡಲವು ಕಾಡಿಗೆಯ ಸಮೂಹದಿಂದ ತುಂಬಿಕೊಂಡಿದೆಯೋ ಏನೋ ಎಂಬಂತಿದೆ; ಕಸ್ತೂರಿಯ ರೇಣುಗಳಿಂದ ತುಂಬಿದೆಯೋ ಏನೋ; ಹೊಗೆಯ ಮದಗಳಿಂದ ತುಂಬಿದೆಯೋ ಏನೋ. ನೀಲವರ್ಣದ ಬಟ್ಟೆಗಳಿಂದ ಆವರಿಸಲ್ಪಟ್ಟದೆಯೋ ಏನೋ ಎಂಬಂತಿದೆ." ಇಲ್ಲಿ ಅಂಜನದಿಂದ ತುಂಬಿಕೊಂಡಿದೆ ಎಂಬುದೇ ಮೊದಲಾದ ಉಪಮಾನವನ್ನು ಉತ್ಪ್ರೇಕ್ಷಿಸುವಾಗ ಅವು ಉಪಮೇಯವೆನಿಸಿದ ಕತ್ತಲೆಗೆ ಸಂಬಂಧಿಸಿರುವುದನ್ನು ಶಬ್ದದಿಂದ ತಿಳಿಸಿಲ್ಲ. ಕತ್ತಲೆಯು ಭೂಮಂಡಲವನ್ನು ವ್ಯಾಪಿಸಿದೆ ಎಂಬ ಉಪಮೇಯವನ್ನು ಇಲ್ಲಿ ಹೇಳಿಲ್ಲ. ಇದಕ್ಕೆ ಉದಾಹರಣವನ್ನು ತಿಳಿಸುತ್ತಾನೆ. "ಕತ್ತಲೆಯು ಅವಯವಗಳನ್ನು ಲೇಪಿಸುತ್ತಿದೆಯೋ ಏನೋ; ಆಕಾಶವು ಕಾಡಿಗೆಯನ್ನು ಸುರಿಸುತ್ತಿದೆಯೋ ಏನೋ ಎಂಬಂತಿದೆ" ಇಲ್ಲಿ ಕತ್ತಲೆಯ ಲೇಪನವೆಂಬ ಉಪಮಾನಕ್ಕೆ 'ಎಲ್ಲೆಡೆಯಲ್ಲೂ ವ್ಯಾಪಿಸುವಿಕೆ' ಎಂಬ ಉಪಮೇಯವನ್ನು ಶಬ್ದದಿಂದ ತಿಳಿಸಿಲ್ಲ. ಹಾಗೆಯೇ ಅಂಜನವನ್ನು ಸುರಿಸುವಿಕೆ ಎಂಬ ಉಪಮಾನಕ್ಕೆ 'ಕತ್ತಲೆ ಸುಳಿಯುತ್ತಿದೆ' ಎಂಬ ಪ್ರಕೃತೋಪಮೇಯವನ್ನು ಶಬ್ದದಿಂದ ತಿಳಿಸಿಲ್ಲ. ಇವೆರಡು ಸಂಭಾವನೆಗಳಲ್ಲೂ 'ಕತ್ತಲೆ ವಿಶೇಷವಾಗಿ ಹರಡಿದೆ' ಎಂಬುದೂ

'ಧಾರೆಯ ರೂಪದಿಂದ ಕೆಳಗೆ ಇಳಿದು ಎಲ್ಲೆಡೆಯಲ್ಲೂ ಸೇರಿಕೊಂಡಿದೆ' ಎಂಬುದೂ ನಿಮಿತ್ತಗಳೆನಿಸುತ್ತವೆ. ಕೆಲವರು 'ತಮಸ್ಸು ಅವಯವಗಳಿಗೆ ಲೇಪಿಸುತ್ತದೆ' ಎಂಬುದು ಸಂಭವಿಸದೇ ಇರುವುದಾದರೂ ಲೇಪಿಸುವುದಾಗಿ ಇಲ್ಲಿ ಉತ್ಪ್ರೇಕ್ಷಿಸಲಾಗಿದೆ. ತಮಸ್ಸು ಎಲ್ಲಾ ಅವಯವಗಳಿಗೂ ಸಂಬಂಧಿಸಿರುವುದೇ ಇಲ್ಲಿ ನಿಮಿತ್ತವೆನಿಸಿದೆ. ಹಾಗೆಯೇ ವರ್ಷತೀವಾಂಜನಂ ನಭಃ ಎಂಬಲ್ಲಿ ಕಾಡಿಗೆಯನ್ನು ಸುರಿಸುತ್ತದೆ ಎಂಬುದು ಅಸಂಭವವಾದರೂ ಸುರಿಸುವುದಾಗಿ ಉತ್ಪ್ರೇಕ್ಷಿಸಲಾಗಿದೆ. ವರ್ಷಣಕ್ರಿಯೆಗೆ ಅದನ್ನು ಕರ್ತೃವೆಂದು ಉತ್ಪ್ರೇಕ್ಷಿಸಲಾಗಿದೆ ಎಂದು ಹೇಳುತ್ತಾರೆ. ಲಿಂಪತೀವ, ವರ್ಷತೀವ ಎಂಬಲ್ಲಿ ಲೇಪನಕ್ರಿಯೆ ಮತ್ತು ವರ್ಷಣಕ್ರಿಯೆ ಇವು ಧಾತುವಿನಿಂದಲೇ ತಿಳಿದುಬರುತ್ತವೆ. ಅವುಗಳ ಕರ್ತೃವನ್ನು ತಿಙಪ್ರತ್ಯಯವು ತಿಳಿಸುತ್ತದೆ. ಇಲ್ಲಿ ಕರ್ತೃವೇ ಪ್ರಯೋಜಕನಾದ್ದರಿಂದ ಪ್ರಧಾನವೆನಿಸಿರುವನು. ಆದ್ದರಿಂದ ಕ್ರಿಯೆ ಮತ್ತು ಕರ್ತೃ ಇವೆರಡನ್ನು ಉತ್ಪ್ರೇಕ್ಷಿಸಬೇಕಾದರೆ ಪೂರ್ವಮೀಮಾಂಸೆಯ ನ್ಯಾಯದಿಂದ ಎರಡು ಕಡೆಗಳಲ್ಲಿ ಪ್ರಧಾನವೆನಿಸಿದ ಕರ್ತೃವನ್ನು ಉತ್ಪ್ರೇಕ್ಷಿಸುವುದೇ ಯುಕ್ತವೆನಿಸುವುದು" ಇದೇ ಇವರ ಆಶಯ.

ಈ ಸಂಭಾವನೆಯು ಬೇರೊಂದು ಅಲಂಕಾರದಿಂದ ಉದ್ಭವಿಸುವುದಾದರೆ ಅದರಲ್ಲಿ ಹೆಚ್ಚು ವೈಚಿತ್ರ್ಯವುಂಟಾಗುವುದು. ಅವುಗಳಲ್ಲಿ ಅಪಹ್ನುತ್ಯಲಂಕಾರಕ್ಕೆ ಮೂಲವೆನಿಸಿದ ಉತ್ಪ್ರೇಕ್ಷೆಯನ್ನು ಇಲ್ಲಿ ಉದಾಹರಿಸುತ್ತಾನೆ. ಯಜ್ಞದಲ್ಲಿ ಪತ್ನಿಯೊಡನೆ ಸೇರಿಕೊಂಡಿರುವವನು ಪತ್ನಿಯ ಕಣ್ಣೀರನ್ನು ನೋಡಿ ಹೇಳುವ ಮಾತಿನಲ್ಲಿ ಇದು ತಿಳಿದುಬರುವುದು. "ತುಪ್ಪದ ಆಹುತಿಯನ್ನು ಕೊಟ್ಟಿರುವುದರಿಂದ ಈ ಬೆಂಕಿಯಿಂದ ಹೊರಡುತ್ತಿರುವ ಹೊಗೆಯಿಂದ ಕಣ್ಣುಗಳು ಮಲಿನವಾಗಿರಲು ಈ ಪ್ರೇಯಸಿಗೆ ಕಣ್ಣೀರಿನ ನೆಪದಿಂದ ಲಾವಣ್ಯವೆಂಬ ನೀರಿನ ಪ್ರವಾಹವು ಅವಯವಗಳಲ್ಲಿ ನೆಲೆಸದೆಯೇ ಕೆಳಗೆ ಬೀಳುತ್ತದೆ" ಇಲ್ಲಿ ಪ್ರಕೃತವೆನಿಸಿದ ಲಾವಣ್ಯವೆಂಬ ಪ್ರವಾಹವನ್ನು ನೆಲೆಗೊಳಿಸಿದ್ದರಿಂದ ಅಪಹ್ನುತಿಯನ್ನು ಅವಲಂಬಿಸಿ ಕ್ರಿಯೋತ್ಪ್ರೇಕ್ಷೆಯು ತೋರುತ್ತ ಹೆಚ್ಚು ಚಮತ್ಕಾರಿ ಎನಿಸಿದೆ. ಶ್ಲೇಷಮೂಲವಾದ ಉತ್ಪ್ರೇಕ್ಷೆಯನ್ನು ಉದಾಹರಿಸುತ್ತಾನೆ. "ಪೂರ್ಣವಾಗಿ ತುಂಬಿಕೊಂಡಿದ್ದ ಕಪ್ಪೆಚಿಪ್ಪಿನ ಮಧ್ಯದಿಂದ ಹೊರಗೆ ಬಂದ ಮುತ್ತುಗಳ ರಾಶಿಯು ಕಮಲನೇತ್ರೆ ಎನಿಸಿದ ಪ್ರೇಯಸಿಯ ಮನೋಹರವಾದ ಶಂಖಕ್ಕೆ ಸದೃಶವಾದ ಕುತ್ತಿಗೆಯಲ್ಲಿ ಸೇರಿಕೊಂಡಿದ್ದರಿಂದ ಒಳ್ಳೆಯ ದಾರದಲ್ಲಿ ಸೇರಿಕೊಂಡಂತಾಯಿತೆಂದು ಊಹಿಸುತ್ತೇನೆ." ಇಲ್ಲಿ ಗುಣವತ್ತ್ವವೆಂಬ ಶಬ್ದದಲ್ಲಿ ಶ್ಲೇಷವಿದೆ. 'ಒಳ್ಳೆಯ ದಾರದಲ್ಲಿ ಸೇರಿರುವಿಕೆ' 'ಉತ್ಕೃಷ್ಟತೆಯಿಂದ ಕೂಡಿರುವಿಕೆ' ಎಂಬ ಎರಡು ಅರ್ಥಗಳು ಇಲ್ಲಿ ತೋರುತ್ತವೆ. 'ಶಂಖದಂತೆ ಮನೋಹರವಾದ ಕೊರಳಲ್ಲಿ ಸೇರಿಕೊಂಡಿದ್ದರಿಂದಲೇ ಏನೋ' ಎಂದು ಹೇಳಿದ್ದರಿಂದ ಇದು ಹೇತೂತ್ಪ್ರೇಕ್ಷೆ ಎನಿಸಿ ಇಲ್ಲಿ ಹೇತುವನ್ನು ಊಹಿಸಲಾಗಿದೆ. ಇಲ್ಲಿ 'ಜಾನೀಮಹೆ' ಎಂಬುದೇ ಸಂಭಾವನೆಯನ್ನು ತಿಳಿಸುವ ಪದವೆನಿಸಿದೆ. ಹೀಗೆಯೇ ಮನ್ಯೇ, ಶಂಕೇ, ಧ್ರುವಂ, ಪ್ರಾಯಃ, ನೂನಂ ಇವೇ ಮೊದಲಾದವು ಸಂಭಾವನೆಯನ್ನು ತಿಳಿಸುವ ಪದಗಳು. ಕೆಲವು ಕಡೆ

ಉತ್ಪ್ರೇಕ್ಷೆಯು ಉಪಮೆಯಿಂದ ಆರಂಭಿಸುವುದನ್ನು ಉದಾಹರಿಸುತ್ತಾನೆ. "ಹರಿಯು ಸಾಗರದ ನೀರಿನ ತೀರದಲ್ಲಿ ಹೆಚ್ಚು ನೀಲವರ್ಣದ ಎಲೆಗಳ ರಾಶಿ ಇರುವ, ಸಾವಿರಾರು ತರಂಗಗಳಿಂದ ಪ್ರತಿಯೊಂದು ಕ್ಷಣಕಾಲದಲ್ಲೂ ದಡಕ್ಕೆ ಒಯ್ಯಲ್ಪಡುತ್ತಿರುವ ಪಾಚಿಗಳ ಕಾಂತಿಯಂತೆ ಪ್ರಕಾಶಿಸುತ್ತಿರುವ ವನಲತೆಗಳ ಸಮೂಹಗಳನ್ನು ಕಂಡನು'' ಇಲ್ಲಿ ಆಭಾಶಬ್ದವು ಉಪಮಾಲಂಕಾರವನ್ನು ತಿಳಿಸುವುದರಿಂದ ಆರಂಭದಲ್ಲಿ ಉಪಮೆ ಇದೆ. ಕೊನೆಯಲ್ಲಿ 'ಸಮುದ್ರದ ತೀರದಲ್ಲಿ ಪಾಚಿ ಇದ್ದುದನ್ನು ಊಹಿಸುವುದು ಯುಕ್ತವಲ್ಲವೆನಿಸಿದ್ದರೂ ತೋರುತ್ತದೆಯಾದ್ದರಿಂದ ಸಂಭಾವನೆಯನ್ನು ಹೇಳಬೇಕು. ಹೀಗೆಯೇ ವಿರಹವರ್ಣನದಲ್ಲಿ 'ಕೈಕಡಗಗಳು ತೋಳಿನ ಒಡವೆಗಳಾದವು' ಎಂಬಲ್ಲಿ ಆಯಪ್ರತ್ಯಯವು ಉಪಮೆಯನ್ನು ತಿಳಿಸುವುದರಿಂದ ಆರಂಭದಲ್ಲಿ ಉಪಮಾಲಂಕಾರವೂ, ಕೊನೆಯಲ್ಲಿ ಕೈಕಡಗಗಳು ಭುಜದ ಮಧ್ಯದಲ್ಲಿ ಇದ್ದುವೆಂಬುದು ಅಸಂಭವವಾದರೂ ಅದನ್ನು ಊಹಿಸಿರುವುದರಿಂದ ಅಲ್ಲಿ ಉತ್ಪ್ರೇಕ್ಷೆಯೂ ಇವೆ. "ಮೃಗದಂತೆ ವಿಶಾಲವಾದ ಕಣ್ಣುಗಳಿರುವ ನಾಯಿಕೆಯ ವಕ್ರವಾದ ಓರೆನೋಟವು ಕಿವಿಯಲ್ಲಿ ವಿಕಸಿತವಾದ ಕನ್ನೈದಿಲೆಯಂತೆ ಆಚರಿಸಿತು'' ಇಲ್ಲಿಯೂ ಕ್ವಿಪ್‌ಪ್ರತ್ಯಯವೂ, ಆಯಿಪ್ರತ್ಯಯದ ಲೋಪವೂ ಉಪಮೆಯನ್ನು ತಿಳಿಸುವ ಪ್ರಯುಕ್ತ ಆರಂಭದಲ್ಲಿ ಉಪಮೆಯೂ, ಕೊನೆಯಲ್ಲಿ ಓರೆನೋಟವು ಕಿವಿಯಲ್ಲಿ ಸೇರಿತ್ತೆಂಬುದು ಅಸಂಭವವೆನಿಸಿದರೂ ಹಾಗೆ ಸಂಭಾವನೆ ಮಾಡಿರುವ ಪ್ರಯುಕ್ತ ಸಂಭಾವನೆ ಇದೆ. ಭ್ರಾಂತಿಮದಲಂಕಾರದಲ್ಲಿ 'ಮುಗ್ಧಾ ದುಗ್ಧಧಿಯಾ' ಎಂಬಲ್ಲಿ ಭ್ರಾಂತಿಗೊಂಡ ಗೊಲ್ಲರಿಗೆ ಉಪಮೇಯವೆನಿಸಿದ್ದ ಚಂದ್ರಿಕೆ ಮೊದಲಾದವುಗಳ ಜ್ಞಾನವೇ ಇಲ್ಲ. ಕಪ್ಪೆಯ ಚಿಪ್ಪನ್ನು ಬೆಳ್ಳಿ ಎಂದು ಭ್ರಮಿಸುವವನಿಗೆ ಕಪ್ಪೆಯ ಚಿಪ್ಪೆಂಬ ಜ್ಞಾನವುಂಟಾಗುವಂತೆ ಅವರಿಗೆ ಚಂದ್ರಿಕೆ ಎಂಬ ಜ್ಞಾನ ಉಂಟಾಯಿತೆಂದ ಕವಿಯೇ ಕಲ್ಪಿಸಿರುವನು. ಸಂಭಾವನೆಯಲ್ಲಾದರೋ ಊಹೆಮಾಡುವ ಕರ್ತನಿಗೆ ಉಪಮಾನದಂತೆ ಉಪಮೇಯದ ಜ್ಞಾನವೂ ಇರಲೇಬೇಕು. ಭ್ರಾಂತಿಮದಲಂಕಾರಕ್ಕೂ ಸಂಭಾವನೆಗೂ ಇರುವ ಭೇದವೆಂದರೆ ಇದೆಯೆ. ಸಂಭಾವನೆಯು ಸಂಶಯವೆನಿಸುವುದಾದರೆ ಅದನ್ನು ಸಂದೇಹಾಲಂಕಾರದಲ್ಲಿಯೇ ಸೇರಿಸಬಹುದೆ? ಎಂದರೆ ಅದೂ ಸರಿಯಲ್ಲ; ಯಾಕೆಂದರೆ ಅಲ್ಲಿ ಎರಡು ವಿಷಯಗಳನ್ನು ಸಮಾನಭಾವದಿಂದಲೇ ತಿಳಿಸಲಾಗುವುದು. ಸಂಭಾವನೆಯಲ್ಲಾದರೋ ಸಂಭವಿಸಬಹುದೆಂದು ನಿಶ್ಚಿತವಾದ ಒಂದೆ ವಿಷಯವನ್ನು ಮಾತ್ರವೇ ತಿಳಿಸಲಾಗುವುದು. ಹೀಗೆ ಇವೆರಡಕ್ಕೂ ಭೇದವಿದೆ. ಆದ್ದರಿಂದ 'ಊರುಃತುರಂಗಕದ್ರೃಶಃ' ಎಂಬಲ್ಲಿ ಸ್ಮರವಿಜಯಸ್ತಂಭವೆಂಬ ಒಂದೇ ವಿಷಯವನ್ನು ವಿಶೇಷವಾಗಿ ತಿಳಿಸಿದ್ದರಿಂದ ಅದು ಸಂಭಾವನೆಯೇ ಆಗುತ್ತದೆ. ಅಧ್ಯವಸಾನವೂ ಸಂಭಾವನೆಯೇ ಆದ್ದರಿಂದ 'ಊರುಃ ತುರಂಗಕದ್ರೃಶಃ' ಎಂಬಲ್ಲಿ ಅತಿಶಯೋಕ್ತಿಯೇ ಆಗಲಿ ಎಂದರೆ ಅದೂ ಸರಿಯಲ್ಲವೆಂದು ತಿಳಿಸುತ್ತಾನೆ. ಅತಿಶಯೋಕ್ತಿಯಲ್ಲಿ ತೋರುವ ಉಪಮೇಯವು ಅಸತ್ಯವೆಂಬುದು ಕೊನೆಯಲ್ಲಿ ತಿಳಿದುಬರುವುದು. ಸಂಭಾವನೆಯಲ್ಲಾದರೋ ಉಪಮೇಯವು ಅಸತ್ಯವೆಂಬ ಅಂಶವು ಮೊದಲು ತಿಳಿಸುವಾಗಲೇ

ತೋರುವುದು. ವಾಚ್ಯೋತ್ಪ್ರೇಕ್ಷೆಯಲ್ಲಿ ಉಪಮೇಯವನ್ನು ಅಸತ್ಯವೆಂದು ನೇರವಾಗಿ ತಿಳಿಸುವ ಇವ ಮೊದಲಾದ ಶಬ್ದಗಳು ಇರುವುದರಿಂದಲೂ, ವ್ಯಂಗ್ಯೋತ್ಪ್ರೇಕ್ಷೆಯಲ್ಲಾದರೋ ಅನ್ವಯವೇ ಹೊಂದದೇ ಇರುವುದರಿಂದಲೂ ಉಪಮೇಯವು ಅಸತ್ಯವೆಂಬ ಅಂಶವು ಮೊದಲೇ ಸ್ಪಷ್ಟಪಡುವುದು. ಹೀಗೆ ಇವೆರಡು ಅಲಂಕಾರಗಳಿಗೂ ಭೇದವಿರುವ ಪ್ರಯುಕ್ತ 'ಊರುಃ ಕುರಂಗಕದೃಶಃ' ಎಂಬಲ್ಲಿ ಶಾಬ್ದಬೋಧವಾಗುವ ಕಾಲದಲ್ಲಿಯೇ 'ಸ್ಮರವಿಜಯಸ್ತಂಭ'ವು ಅಸತ್ಯವೆಂದು ತಿಳಿದುಬರುವುದರಿಂದ ಅಲ್ಲಿ ಸಂಭಾವನೆ ಇದೆಯೇ ಹೊರತು ಅತಿಶಯೋಕ್ತಿಗೆ ಅವಕಾಶವಿಲ್ಲ.

ಅಲಂಕಾರಸರ್ವಸ್ವಕಾರನ ಮತವನ್ನು ನಿರಾಕರಿಸಲು ಉದಾಹರಿಸುತ್ತಾನೆ- "ಅಂಧಕಾರವು ಅನೇಕ ಬಗೆಯ ವೃಕ್ಷಗಳನ್ನು ಲೇಪಿಸಿದೆಯೋ ಏನೋ? ಆಕಾಶವು ನೆಲದವರೆಗೂ ಬಗ್ಗಿದೆಯೋ ಏನೋ? ಅಥವಾ ಮುಚ್ಚಿಕೊಂಡಿದೆಯೋ ಏನೋ? ಭೂಮಂಡಲವು ಹಳ್ಳ ದಿಣ್ಣೆಗಳಿರುವ ಜಾಗದಲ್ಲಿ ತುಂಬಿಕೊಂಡು ಸಮವಾಗಿದೆಯೋ ಏನೋ? ದಿಕ್ಕುಗಳು ಸಂಕೋಚಗೊಂಡಿವೆಯೋ ಏನೋ" ಎಂಬಲ್ಲಿ ಮರಗಳಲ್ಲಿ ಕತ್ತಲೆಯು ವ್ಯಾಪಿಸಿರುವುದನ್ನು ರಂಜನ ಮೊದಲಾದ ಬಗೆಗಳಲ್ಲಿ ಸಂದೇಹಪಡಲಾಗಿದೆ. ಆದ್ದರಿಂದ ಇದು ಸಂದೇಹಾಲಂಕಾರವೆನಿಸಿದೆ" ಎಂದು ಕೆಲವರು ಹೇಳುತ್ತಾರೆ. ಅದು ಇಲ್ಲಿ ಹೊಂದುವುದಿಲ್ಲ. ಒಂದೇ ವಿಷಯದಲ್ಲಿ ಸಮನವಾದ ಬಲವಿರುವ ಪ್ರಯುಕ್ತ ಅನೇಕ ವಿಷಯಗಳು ಸಂಭವಿಸುತ್ತವೆ ಎಂಬ ಜ್ಞಾನವೇ ಸಂದೇಹವೆನಿಸುತ್ತದೆ. ಇಲ್ಲಿ ಯಾದರೋ ಕತ್ತಲೆಯು ಮರಗಳಲ್ಲಿ ವ್ಯಾಪಿಸಿರುವುದಕ್ಕೆ ಮರ, ಬೆಟ್ಟ ಮೊದಲಾದ ಸಂಬಂಧಪದಾರ್ಥಗಳಲ್ಲಿ ರಂಜನ ಮೊದಲಾದ ಒಂದೊಂದು ರೂಪದಿಂದಲೂ ಭೇದವಿದೆ. ಹೀಗೆ ಜ್ಞಾನವು ಅನೇಕ ಪದಾರ್ಥಗಳಲ್ಲಿ ಇದ್ದರೂ ಒಂದೇ ಬಗೆಯಾಗಿಲ್ಲದ ಪ್ರಯುಕ್ತ ಇದು ಸಂದೇಹವೇ ಆಗುವುದಿಲ್ಲ. ಬೇರೆಯವರಾದರೋ "ರಂಜನ, ನಾಮನ, ಸ್ಥಗನ ಹೀಗೆ ಅನೇಕ ಬಗೆಯಾಗಿ ನಿರ್ಧರಿಸುವುದೇ ಇಲ್ಲಿ ಜ್ಞಾನವೆನಿಸಿದ್ದರಿಂದ ಅದರಲ್ಲಿಯೇ ಚಮತ್ಕಾರವು ಅಡಗಿದೆ. ಇಂತಹ ಚಮತ್ಕಾರಕ್ಕೆ ಆಶ್ರಯವೆನಿಸಿದ್ದರಿಂದ ಎಲ್ಲಾ ವೃಕ್ಷಗಳಿಗೂ ಸಮಬಲವಿದೆ. ಒಂದೊಂದು ಪಕ್ಷವೇ ಪ್ರಬಲವಾಗಿದ್ದರೂ ಇದು ಒಂದು ಬಗೆಯ ಸಂದೇಹಾಲಂಕಾರವೇ ಆಗುವುದು" ಎಂದು ಕೆಲವರು ಹೇಳುತ್ತಾರೆ. ಅದೂ ಸಹ ಯುಕ್ತವಲ್ಲ. ಯಾವ ರೀತಿಯಿಂದಾದರೂ ತಿರಸ್ಕೃತವಾಗಿದ್ದು ಪ್ರಧಾನವಲ್ಲದ ಉಪಮೇಯಕ್ಕೆ ಉಪಮಾನದೊಡನೆ ಅಭೇದವು ತೋರುವುದೇ ಸಂಭಾವನೆ ಎನಿಸಿದೆ. ಆ ಬಗೆಯ ಸಂಭಾವನೆಯು ಇಲ್ಲಿ ಸ್ಪಷ್ಟವಾಗಿ ಇರುವುದರಿಂದಲೂ, ನು ಶಬ್ದವು ಇವ ಶಬ್ದದಂತೆ ಸಂಭಾವನೆಯನ್ನು ತಿಳಿಸುವುದರಿಂದಲೂ ಇದು ಸಂಭಾವನೆಯೇ ಆಗಬೇಕು ಆದ್ದರಿಂದ ಎಲ್ಲಿಯೂ ಹೇಳದಿರುವ ಬೇರೊಂದು ಸಂದೇಹದ ಬಗೆಯನ್ನು ಕಲ್ಪಿಸುವುದರಲ್ಲಿ ಯಾವ ಸ್ವಾರಸ್ಯವೂ ಇಲ್ಲ.

ಸರಸ್ವತೀಕಂಠಾಭರಣದ ಮತವನ್ನು ದೂಷಿಸಲು ವಿವರಣವನ್ನು ಕೊಡುತ್ತಾನೆ. "ಚಂದ್ರನ ಮಧ್ಯದಲ್ಲಿ ಕಾಣುತ್ತಿರುವ ಈ ಕೊಳೆಯಾದ ವಸ್ತು ಸಣ್ಣದೊಂದು ಮೇಘ

ವೆಂಬ ವಿಲಾಸವನ್ನು ಹುಟ್ಟಿಸುತ್ತಲಿದೆ. ಲೋಕದ ಜನರು ಅದನ್ನು ಮೊಲವೆಂದು ಹೇಳುತ್ತಾರೆ. ಹಾಗೆ ಹೇಳುವುದು ನನಗೆ ಇಷ್ಟವಿಲ್ಲ. ನಾನಾದರೋ ಚಂದ್ರಮಂಡಲ ದಲ್ಲಿ ನಿನ್ನ ಶತ್ರುಗಳ ವಿರಹವೇದನೆಯಲ್ಲಿ ನರಳುತ್ತಿರುವ ತರುಣಿಯ ಓರೆನೋಟ ಗಳೆಂಬ ಕಿಡಿಗಳು ಬೀಳುತ್ತಿರುವುದರಿಂದ ಹುಟ್ಟಿದ ಗಾಯವೇ ಅಲ್ಲಿ ಗುರುತಾಗಿದೆ ಎಂದು ಮನಸ್ಸಿನಲ್ಲಿ ಭಾವಿಸುತ್ತೇನೆ" ಎಂದು ಒಬ್ಬನು ರಾಜನನ್ನು ಸ್ತುತಿಸುವಾಗ ಹೇಳು ತ್ತಾನೆ. ಇಲ್ಲಿ ಮನ್ಯೇ ಎಂಬ ಶಬ್ದವನ್ನು ಪ್ರಯೋಗಿಸಿದರೂ ಸಹ ಸಂಭಾವನೆಯು ತೋರದೇ ಇರುವ ಪ್ರಯುಕ್ತ ಇದು ವಿತರ್ಕವೆನಿಸುವುದೇ ಹೊರತು ಅಪಹ್ನವದಿಂದ ಕೂಡಿದ ಸಂಭಾವನೆ ಎನಿಸುವುದಿಲ್ಲ. ಇಲ್ಲಿ ವಿತರ್ಕವೆಂಬ ವ್ಯಭಿಚಾರಿಭಾವವಿರುವುದೇ ಹೊರತು ಸಂಭಾವನೆಯೇ ತೋರುವುದಿಲ್ಲ. ಇಲ್ಲಿ ಮೊಲವೆಂಬುದನ್ನು ನಿಷೇಧಿಸಿ ಗಾಯವೆಂಬ ಕಳಂಕವನ್ನು ನೆಲೆಗೊಳಿಸಿದರೂ ಅಪಹ್ನುತಿಯು ಸಂಭಸುವುದಿಲ್ಲ. ಸಂಭಾವನೆಯೇ ಇಲ್ಲದ್ದರಿಂದ ಸಂಭಾವನೆಯು ಇಲ್ಲ. ಆದರೆ ವಿತರ್ಕವೆಂಬ ವ್ಯಭಿಚಾರಿ ಭಾವವು ರಾಜನ ಬಗ್ಗೆ ತೋರುವ ರತಿಗೆ ಅಂಗವೆನಿಸಿದ್ದರಿಂದ ಇಲ್ಲಿ ರಸವದಲಂ ಕಾರವೇ ತೋರುವುದು.

ಸಿದ್ಧತ್ವೇಽಧ್ಯವಸಾಯಸ್ಯಾತಿಶಯೋಕ್ತಿರ್ನಿಗದ್ಯತೇ ।

ವಿಷಯನಿಗರಣೇನ ಅಭೇದಪ್ರತಿಪತ್ತಿರ್ವಿಷಯಿಣೋಽಧ್ಯವಸಾಯಃ. ಅಸ್ಯ ಚೋತ್ಪ್ರೇಕ್ಷಾಯಾಂ ವಿಷಯಿಣೋಽನಿಶ್ಚಿತತ್ವೇನ ನಿರ್ದೇಶಾತ್ಸಾಧ್ಯತ್ವಮ್; ಇಹ ತು ನಿಶ್ಚಿತತ್ವೇನೈವ ಪ್ರತೀತಿರಿತಿ ಸಿದ್ಧತ್ವಮ್. ವಿಷಯನಿಗರಣಂ ಉತ್ಪ್ರೇಕ್ಷಾಯಾಂ ವಿಷಯಸ್ಯ ಅಧಃಕರಣಮಾತ್ರೇಣ, ಇಹಾಪಿ 'ಮುಖಂ ದ್ವಿತೀಯಶ್ಚಂದ್ರಃ ಇತ್ಯಾದೌ. ಯದಾಹುಃ—ವಿಷಯಸ್ಯಾನುಪಾದಾನೇಽಪ್ಯುಪಾದಾನೇಽಪಿ ಸೂರಯಃ ।

ಅಧಃಕರಣಮಾತ್ರೇಣ ನಿಗೀರ್ಣತ್ವಂ ಪ್ರಚಕ್ಷತೇ ॥

ಭೇದೇಽಪ್ಯಭೇದಃ ಸಂಬಂಧೇಽಸಂಬಂಧಸ್ತದ್ವಿಪರ್ಯಯೌ ।

ಪೌರ್ವಾಪರ್ಯಾತ್ಯಯಃ ಕಾರ್ಯಹೇತ್ವೋಃ ಸಾ ಪಂಚಧಾ ತತಃ ॥

ತದ್ವಿಪರ್ಯಯೌ ಅಭೇದೇ ಭೇದಃ, ಅಸಂಬಂಧೇ ಸಂಬಂಧಃ. ಸಾ ಅತಿಶ ಯೋಕ್ತಿಃ. ಅತ್ರ ಭೇದೇ ಅಭೇದೋ ಯಥಾ ಮಮ—

ಕಥಮುಪರಿ ಕಲಾಪಿನಃ ಕಲಾಪೋ ವಿಲಸತಿ ತಸ್ಯ ಕಲೇಽಷ್ಟಮೀಂದುಖಂಡಮ್ ।
ಕುವಲಯಯುಗಲಂ ತತೋ ವಿಲೋಲಂ ತಿಲಕುಸುಮಂ ತದಧಃಪ್ರವಾಲಮಸ್ಮಾನ್ ॥

ಅತ್ರ ಕಾಂತಾಕೇಶಪಾಶಾದೇರ್ಮಯೂರಕಲಾಪಾದಿಭಿರಭೇದೇನ ಅಧ್ಯವಸಾಯಃ. ಯಥಾ ವಾ "ವಿಶ್ಲೇಷದುಃಖಾದಿವ ಬದ್ಧಮೌನಮ್." ಅತ್ರ ಚೇತನಗತಂ ಮೌನಿತ್ವ ಮನ್ಯತ್, ಅಚೇತನಗತಂ ಚ ಅನ್ಯತ್ ಇತಿ ದ್ವಯೋರ್ಭೇದೇಽಪ್ಯಭೇದಃ.

ಏವಮ್—'ಸಹಾಧರದಲೇನಾಸ್ಯಾ ಯೌವನೇ ರಾಗಭಾಕ್ ಪ್ರಿಯಃ.

ಅತ್ರ ಅಧರಸ್ಯ ರಾಗೋ ಲೌಹಿತ್ಯಮ್, ಪ್ರಿಯಸ್ಯ ರಾಗಃ ಪ್ರೇಮ, ದ್ವಯೋರ ಭೇದಃ. ಅಭೇದೇ ಭೇದೋ ಯಥಾ—

ಅನ್ಯದೇವಾಂಗಲಾವಣ್ಯಾಮನ್ಯಾಃ ಸೌರಭಸಂಪದಃ ।
ತಸ್ಯಾಃ ಪದ್ಮಪಲಾಶಾಕ್ಷ್ಯಾಃ ಸರಸತ್ವಮಲೌಕಿಕಮ್ ॥

ಸಂಬಂಧೇ ಅಸಂಬಂಧೋ ಯಥಾ—

ಅಸ್ಯಾಃ ಸರ್ಗವಿಧೌ ಪ್ರಜಾಪತಿರಭೂತ್ ಚಂದ್ರೋ ನು ಕಾಂತಿಪ್ರದಃ
ಶೃಂಗಾರೈಕರಸಃ ಸ್ವಯಂ ನು ಮದನೋ ಮಾಸೋ ನು ಪುಷ್ಪಾಕರಃ ।
ವೇದಾಭ್ಯಾಸಜಡಃ ಕಥಂ ನು ವಿಷಯವ್ಯಾವೃತ್ತಕೌತೂಹಲೋ
ನಿರ್ಮಾತುಂ ಪ್ರಭವೇನ್ಮನೋಹರಮಿದಂ ರೂಪಂ ಪುರಾಣೋ ಮುನಿಃ ॥

ಅತ್ರ ಪುರಾಣಪ್ರಜಾಪತಿನಿರ್ಮಾಣಸಂಬಂಧೇಽಪ್ಯಸಂಬಂಧಃ—

ಅಸಂಬಂಧೇ ಸಂಬಂಧೋ ಯಥಾ—

ಯದಿ ಸ್ಯಾನ್ಮಂಡಲೇ ಸಕ್ತಮಿಂದೋರಿಂದೀವರದ್ವಯಮ್ ।
ತದೋಪಮೀಯತೇ ತಸ್ಯಾ ವದನಂ ಚಾರುಲೋಚನಮ್ ॥

ಅತ್ರ ಯದ್ಯರ್ಥಬಲಾದಾಹೃತೇನ ಸಂಬಂಧೇನ ಸಂಭಾವನಯಾ ಸಂಬಂಧಃ.

ಕಾರ್ಯಕಾರಣಯೋಃ ಪೌರ್ವಾಪರ್ಯವಿಪರ್ಯಯಶ್ಚ ದ್ವಿಧಾ ಭವತಿ, ಕಾರಣಾತ್ ಪ್ರಥಮಂ ಕಾರ್ಯಸ್ಯ ಸತ್ತ್ವೇ, ದ್ವಯೋಃ ಸಮಕಾಲತ್ವೇನ ಚ. ಕ್ರಮೇಣ ಯಥಾ— ಪ್ರಾಗೇವ ಹರಿಣಾಕ್ಷೀಣಾಂ ಚಿತ್ತಮುತ್ಕಲಿಕಾಕುಲಮ್ ।
ಪಶ್ಚಾದುದ್ಭಿನ್ನವಕುಲರಸಾಲಮುಕುಲಶ್ರಿಯಃ ॥
ಸಮಮೇವ ಸಮಾಕ್ರಾಂತಂ ದ್ವಯಂ ದ್ವಿರದಗಾಮಿನಾ ।
ತೇನ ಸಿಂಹಾಸನಂ ಪಿತ್ರ್ಯಂ ಮಂಡಲಂ ಚ ಮಹೀಕ್ಷಿತಾಮ್ ॥

ಇಹ ಕೇಚಿದಾಹುಃ "ಕೇಶಪಾಶಾದಿಗತೋ ಲೌಕಿಕೋಽತಿಶಯೋಽಲೌಕಿಕತ್ವೇನಾಧ್ಯವಸೀಯತೇ, ಕೇಶಪಾಶಾದೀನಾಂ ಕಲಾಪಾದಿಭಿರಧ್ಯವಸಾಯೇ 'ಅನ್ಯದೇವಾಂಗಲಾವಣ್ಯಮ್' ಇತ್ಯಾದಿಪ್ರಕಾರೇಷ್ವವ್ಯಾಪ್ತಿರ್ಲಕ್ಷಣಸ್ಯೇತಿ" ತನ್ನ, ತತ್ರಾಪಿ ಹ್ಯನ್ಯದಂಗಲಾವಣ್ಯಮನ್ಯತ್ವೇನಾಧ್ಯವಸೀಯತೇ. ತಥಾಹಿ 'ಅನ್ಯದೇವ' ಇತಿ ಸ್ಥಾನೇ 'ಅನ್ಯದಿವ' ಇತಿ ಪಾಠೇ ಅಧ್ಯವಸಾಯಸ್ಯ ಸಾಧ್ಯತ್ವಮೇವೇತಿ ಉತ್ಪ್ರೇಕ್ಷಾ ಅಂಗೀಕ್ರಿಯತೇ. 'ಪ್ರಾಗೇವ ಹರಿಣಾಕ್ಷೀಣಾಮ್' ಇತ್ಯತ್ರ ವಕುಲಾದಿಶ್ರೀಣಾಂ ಪ್ರಥಮಭಾವಿತಾಪಿ ಪಶ್ಚಾದ್ಭಾವಿತ್ವೇನ ಅಧ್ಯವಸಿತಾ. ಅತ ಏವಾತ್ರಾಪಿ ಇವಶಬ್ದಯೋಗೇ ಉತ್ಪ್ರೇಕ್ಷಾ ಏವಮನ್ಯತ್ರ.

ಸಂಭಾವನೆ ಎನಿಸಿದ ಉತ್ಪ್ರೇಕ್ಷೆಯನ್ನು ತಿಳಿಸಿ ಅದೇ ಸಂಭಾವನೆಯ ಬೇರೊಂದು ಬಗೆ ಎನಿಸಿದ ಅತಿಶಯೋಕ್ತಿಯನ್ನು ಈಗ ತಿಳಿಸುತ್ತಾನೆ. ಯಥಾರ್ಥವಾಗಿರುವ ಪದಾರ್ಥವನ್ನು ಯಥಾರ್ಥವಲ್ಲದ ವಸ್ತುವೆಂದು ಸಂಭವಿಸುವುದಕ್ಕೆ ಸಾಧ್ಯವಿದ್ದರೂ ಕವಿಯು ಪ್ರೌಢೋಕ್ತಿಯಿಂದ ಅದನ್ನು ಯಥಾರ್ಥವೆಂದೇ ನಿಶ್ಚಯಿಸುವುದಾದರೆ ಅದು ಅತಿಶಯೋಕ್ತಿ ಎನಿಸುವುದು. ಸಂಭವಕ್ಕಿಂತಲೂ, ಯೋಗ್ಯತೆಗಿಂತಲೂ ಮೀರಿದ ರೀತಿಯಲ್ಲಿ ತಿಳಿಸುವುದೇ ಅತಿಶಯೋಕ್ತಿ. ಉಪಮೇಯವನ್ನು ತಿರಸ್ಕರಿಸಿ

ಅಂದರೆ ಹೇಗಾದರೂ ಪ್ರಧಾನವಲ್ಲವೆಂದು ಮಾಡಿ ಅದನ್ನು ಉಪಮಾನವೆಂದು ನಿಶ್ಚಯಿಸಿ ಅದರ ಅಭೇದವನ್ನು ಭಾವಿಸುವುದೇ ಅಧ್ಯವಸಾಯವೆನಿಸುವುದು. ತಿರಸ್ಕೃತವಾದ ಯಥಾರ್ಥವಸ್ತುವಿನೊಡನೆ ಅಯಥಾರ್ಥವಾದ ವಸ್ತುವಿನ ಅಭೇದವನ್ನು ತಿಳಿಯುವುದೇ ಅಧ್ಯವಸಾಯವೆನಿಸುವುದು. ಇದಕ್ಕೂ ಸಂಭಾವನೆಗೂ ಭೇದವನ್ನು ತಿಳಿಸುತ್ತಾನೆ. ಸಂಭಾವನೆಯಲ್ಲಿ ಉಪಮಾನವನ್ನು ನಿಶ್ಚಿತವೆಂದು ತಿಳಿಸದೇ ಇರುವ ಪ್ರಯುಕ್ತ ಅಧ್ಯವಸಾಯವು ಅಲ್ಲಿ ಸಿದ್ಧವಾಗಿಲ್ಲದೆ ಸಾಧ್ಯವೆನಿಸಿರುತ್ತದೆ. ಅಧ್ಯವಸಾಯವನ್ನು ಅಲ್ಲಿ ಸಾಧಿಸಬೇಕಾಗಿರುವ ಪ್ರಯುಕ್ತ ಸಿದ್ಧವಾಗಿರುವುದಿಲ್ಲ. ಅತಿಶಯೋಕ್ತಿಯಲ್ಲಾದರೋ ಉಪಮಾನವಿಂತಹದೆಂಬುದು ನಿಶ್ಚಿತವಾಗಿಯೇ ತಿಳಿದು ಬರುವುದರಿಂದ ಅಧ್ಯವಸಾಯವು ಸಿದ್ಧವೆನಿಸಿರುತ್ತದೆ. ಸಂಭಾವನೆಯಲ್ಲಿ ವಿಷಯನಿಗರಣವೆಂದರೆ ಅದನ್ನು ತಿರಸ್ಕರಿಸುವುದಷ್ಟೇ ಎನಿಸುತ್ತದೆ. ಇಲ್ಲಿಯೂ ಸಹ 'ಮುಖವು ಎರಡನೆಯ ಚಂದ್ರನೆನಿಸಿದೆ, ಎಂಬಲ್ಲಿಯೂ ವಿಷಯನಿಗರಣವು ಅದರ ತಿರಸ್ಕಾರದಲ್ಲಿಯೇ ಕೊನೆಗಾಣುತ್ತದೆ. ವಿಷಯವನ್ನು ಶಬ್ದದಿಂದ ತಿಳಿಸಲಿ ಅಥವಾ ತಿಳಿಸದೇ ಇರಲಿ ಅದರ ತಿರಸ್ಕಾರವಿದ್ದರೆ ಅಷ್ಟನ್ನೇ ಅದರ ನಿಗರಣವೆಂದು ಪಂಡಿತರು ಹೇಳುತ್ತಾರೆ.

ಯಥಾರ್ಥವಲ್ಲದ ವಸ್ತುವಿಗೆ ಯಥಾರ್ಥವಾದ ವಸ್ತುವಿನಿಂದ ಭೇದವಿದ್ದರೂ ಭೇದವಿಲ್ಲವೆಂದು ಊಹಿಸುವುದು ಒಂದು ಬಗೆಯ ಅತಿಶಯೋಕ್ತಿ. ಯಥಾರ್ಥ ವಸ್ತುವಿನ ಸಂಬಂಧವಿದ್ದರೂ ಸಂಬಂಧವಿಲ್ಲವೆಂದು ಊಹಿಸುವುದು ಎರಡನೆಯ ಬಗೆ. ಇವುಗಳಿಗೆ ವಿರುದ್ಧವಾದ ಎರಡು ಬಗೆಗಳಿವೆ. ಯಥಾರ್ಥ ಮತ್ತು ಅಯಥಾರ್ಥವೆನಿಸಿದ ವಸ್ತುಗಳಿಗೆ ಅಭೇದವಿದ್ದರೂ ಭೇದವನ್ನೂ, ಸಂಬಂಧವಿಲ್ಲದಿದ್ದರೂ ಸಂಬಂಧವನ್ನೂ ಊಹಿಸುವ ಮೂಲಕ ಎರಡು ಬಗೆಗಳು, ಹಾಗೆಯೇ ಕಾರ್ಯಕಾರಣಗಳು ವಿಪರೀತವಾಗಿರುವುದು. ಕಾರಣವು ಮೊದಲಿದ್ದು ಕಾರ್ಯವು ಅನಂತರ ಇರಬೇಕೆಂಬ ನಿಯಮವಿದ್ದರೂ ಕಾರಣಕ್ಕಿಂತಲೂ ಕಾರ್ಯವು ಮೊದಲು ಇರುವುದೆಂದಾಗಲೀ, ಕಾರಣದೊಡನೆಯೇ ಇರುವುದೆಂದಾಗಲೀ ನಿಶ್ಚಯಿಸುವುದೇ ವಿಪರೀತವೆನಿಸುವುದು. ಹೀಗೆ ಅತಿಶಯೋಕ್ತಿಯು ಐದು ಬಗೆ ಎನಿಸಿದೆ. ಭೇದೇ ಅಭೇದಃ, ಅಭೇದೇ ಭೇದಃ, ಸಂಬಂಧೇ ಅಸಂಬಂಧಃ, ಅಸಂಬಂಧೇ ಸಂಬಂಧಃ, ಕಾರ್ಯಕಾರಣಯೋಃ ಪೌರ್ವಾಪರ್ಯ ವ್ಯತ್ಯಾಸಃ ಹೀಗೆ ಇವು ಐದು ಬಗೆಗಳು.

ಭೇದವಿದ್ದರೂ ಅಭೇದವನ್ನು ನಿಶ್ಚಯಿಸುವುದಕ್ಕೆ ವಿವರಣವನ್ನು ಕೊಡುತ್ತಾನೆ. ಒಬ್ಬ ನಾಯಿಕೆಯ ಕೇಶ ಮೊದಲಾದವನ್ನು ಇಲ್ಲಿ ವರ್ಣಿಸಲಾಗಿದೆ. "ತಲೆಯಲ್ಲಿ ನವಿಲುಗರಿ ಹೇಗೆ ಬಂದೀತು ? ಕೇಶಪಾಶವನ್ನೇ ನವಿಲುಗರಿ ಎಂದು ಊಹಿಸುತ್ತೇನೆ. ಆ ನವಿಲುಗರಿಯ ಕೆಳಭಾಗದಲ್ಲಿ ಅಷ್ಟಮಿಯ ಚಂದ್ರನ ಅರ್ಧಭಾಗವು ಹೇಗೆ ಶೋಭಿಸೀತು ? ಆದ್ದರಿಂದ ಹಣೆಯನ್ನೇ ಅರ್ಧಚಂದ್ರನೆಂದು ಊಹಿಸುತ್ತೇನೆ. ಅದರ ಕೆಳಭಾಗದಲ್ಲಿ ಅಲುಗಾಡುತ್ತಿರುವ ಕನ್ನೈದಿಲೆಗಳೆರಡು ಹೇಗೆ ಶೋಭಿಸಿಯಾವು ? ಕಣ್ಣುಗಳೆರಡನ್ನು ಕನ್ನೈದಿಲೆಗಳೆಂದೇ ಊಹಿಸುತ್ತೇನೆ. ಆ ಕನ್ನೈದಿಲೆಗಳೆರಡರ ಕೆಳಗಡೆ ತಿಲ

ಪುಷ್ಪವು ಹೇಗೆ ಸಂಭವಿಸೀತು ? ಮೂಗನ್ನು ತಿಲಪುಷ್ಪವೆಂದೇ ಊಹಿಸುತ್ತೇನೆ. ಆ ತಿಲಪುಷ್ಪದ ಕೆಳಗಡೆ ಹವಳವು ಹೇಗೆ ಇದ್ದೀತು? ಆದ್ದರಿಂದ ತುಟಿಯನ್ನು ಹವಳವೆಂದೇ ಊಹಿಸುತ್ತೇನೆ." ಇಲ್ಲಿ ನಾಯಿಕೆಯ ಕೇಶಪಾಶ ಮೊದಲಾದವು ಯಥಾರ್ಥವೇ ಆಗಿದ್ದರೂ ನವಿಲುಗರಿ ಮೊದಲಾದ ರೂಪದಿಂದ ಅಪ್ರತ್ಯಕ್ಷವಾದ ಪ್ರಯುಕ್ತ ಇದು ಅತಿಶಯೋಕ್ತಿ ಎನಿಸಿದೆ. ಕೇಶಪಾಶದೊಡನೆ ನವಿಲುಗರಿಗೆ ಭೇದವಿದ್ದರೂ ಅಭೇದವನ್ನು ನಿಶ್ಚಯಿಸಿರುವುದರಿಂದ ಇದು ಭೇದೇ ಅಭೇದಾಧ್ಯವಸಾಯವೆಂಬ ಅತಿಶಯೋಕ್ತಿ ಎನಿಸಿದೆ. "ವಿಶ್ಲೇಷದುಃಖಾದಿವ ಬದ್ಧಮೌನಂ" ಎಂಬಲ್ಲಿ ಮನುಷ್ಯರೆಂಬ ಚೇತನದಲ್ಲಿರುವ ಮೌನವೇ ಬೇರೆ; ನೂಪುರ ಮೊದಲಾದ ಅಚೇತನದಲ್ಲಿರುವ ಮೌನವೇ ಬೇರೆ. ಒಂದು ವಾಕ್‌ಶೂನ್ಯವೆನಿಸಿದ್ದು ಅಭಿಧೆಯಿಂದ ತಿಳಿದುಬಂದರೆ ಮತ್ತೊಂದು ಯಾವ ಶಬ್ದವೂ ಇಲ್ಲದಂತಿಪ್ಪು ಲಕ್ಷಣೆಯಿಂದ ತಿಳಿದುಬರುವುದು. ಇಲ್ಲಿ ಶಬ್ದಬೋಧ್ಯವಾದ ನಿಶ್ಶಬ್ದತೆ ಎಂಬ ಯಥಾರ್ಥವಾದ ಮೌನವನ್ನು ಶಬ್ದಬೋಧ್ಯವೂ ಅಯಥಾರ್ಥವೂ ಆದ ವಾಕ್ಯಶೂನ್ಯತೆ ಎಂಬ ಮೌನವೆಂದು ಊಹಿಸುವುದರಿಂದ ಇಲ್ಲಿ ಅಧ್ಯವಸಾಯವಿರುವ ಪ್ರಯುಕ್ತ ಇದು ಭೇದೇಽಪ್ಯಭೇದರೂಪವಾದ ಅತಿಶಯೋಕ್ತಿ ಎನಿಸಿದೆ. ಹೀಗೆಯೇ "ಪ್ರಿಯನು ಯೌವನಕಾಲದಲ್ಲಿ ಈ ನಾಯಿಕೆಯ ತುಟಿಯ ಸಂಪರ್ಕದಿಂದ ಕೆಂಪನ್ನು (ಪ್ರೇಮವನ್ನು' ಪಡೆವನು. ತುಟಿ ಕೆಂಪಗಿರುವಂತೆ ಪ್ರಿಯನೂ ಅನುರಕ್ತನಾದನು" ಇಲ್ಲಿ ಅಧರದ ರಾಗವು ಅನುರಾಗವೆನಿಸಿದೆ. ಎಂದು ಇವೆರಡಕ್ಕೂ ಅಭೇದವನ್ನು ಕಲ್ಪಿಸಲಾಗಿದೆ.

ಅಭೇದವಿದ್ದ ಕಡೆ ಭೇದವನ್ನು ಕಲ್ಪಿಸುವುದಕ್ಕೆ ಸೂಕ್ತವಿವರಣವು ಹೀಗಿದೆ. "ಪದ್ಮದ ದಳಗಳಂತೆ ಕಣ್ಣುಗಳಿರುವ ಆಕೆಯ ಶರೀರದ ಸೌಂದರ್ಯವೇ ಬೇರೆ ರೀತಿ ಎನಿಸಿದೆ. ಆಕೆಯ ರಸಿಕತೆಯು ಮರ್ತ್ಯಲೋಕವನ್ನೇ ಮೀರಿಸಿದೆ." ಇಲ್ಲಿ ಬೇರೆ ನಾಯಿಕೆಯರಲ್ಲಿ ಯಾವ ಬಗೆಯ ಲಾವಣ್ಯ ಮೊದಲಾದವು ಇರುವುವೋ ಅಂತವೇ ಈ ನಾಯಿಕೆಯಲ್ಲೂ ಇರುವ ಪ್ರಯುಕ್ತ ಅವೆರಡಕ್ಕೂ ಅಭೇದವಿದ್ದರೂ ಸಹ ಈಕೆಯಲ್ಲಿರುವ ಲಾವಣ್ಯ ಮೊದಲಾದವನ್ನು ಅಸಾಧಾರಣವೆಂದು ಭಾವಿಸಿರುವ ಪ್ರಯುಕ್ತ ಭೇದವಿದೆ ಎಂದು ನಿಶ್ಚಯಿಸಲಾಗಿದೆ. ಆದ್ದರಿಂದ ಇದು ಒಂದು ಬಗೆಯ ಅತಿಶಯೋಕ್ತಿ ಎನಿಸಿದೆ.

ಸಂಬಂಧವಿರುವಕಡೆ ಸಂಬಂಧವಿಲ್ಲವೆಂದು ನಿಶ್ಚಯಿಸುವುದಕ್ಕೆ ವಿವರಣವು ಹೀಗಿದೆ. ವಿಕ್ರಮೋರ್ವಶೀಯ ನಾಟಕದಲ್ಲಿ ಊರ್ವಶಿಯನ್ನು ನೋಡಿ ಪುರೂರವನು ಆಲೋಚಿಸುವ ಈ ಪದ್ಯದಲ್ಲಿ ಈ ಬಗೆಯ ಅತಿಶಯೋಕ್ತಿ ಇದೆ. ".ಈ ಊರ್ವಶಿಯನ್ನು ಸೃಷ್ಟಿಸುವಾಗ ಸೌಂದರ್ಯವನ್ನು ದೊರಕಿಸಿದ ಚಂದ್ರನೇ ಸೃಷ್ಟಿಕರ್ತನಾದನೋ ? ಅಥವಾ ಶೃಂಗಾರ ಒಂದರಲ್ಲಿಯೇ ಆಸಕ್ತನಾದ ಕಾಮದೇವನೇ ಸೃಷ್ಟಿಕರ್ತನಾದನೋ ? ಇಲ್ಲವಾದರೆ ಈಕೆಗೆ ಇಷ್ಟೊಂದು ಶೃಂಗಾರಪ್ರಕಾಶವೆಲ್ಲಿಂದ ಬಂದೀತು ? ಅಥವಾ ವಸಂತಮಾಸವೇ ಸೃಷ್ಟಿಕರ್ತನಾಗಿರಬಹುದೆ ? ಇಲ್ಲವಾದರೆ ಈಕೆಯ ಅವ

ಯವಗಳಿಗೆ ಪುಷ್ಪದಂತೆ ಶೋಭೆ ಎಲ್ಲಿಂದ ಬಂದೀತು ? ಪ್ರಾಚೀನ ಋಷಿ ಎನಿಸಿದ ನಾರಾಯಣನೇ ತನ್ನ ತೊಡೆಯಿಂದ ಈಕೆಯನ್ನು ಸೃಷ್ಟಿಸಿದನೆಂದು ಪುರಾಣದಲ್ಲಿ ಪ್ರಸಿದ್ಧಿ ಇರುವಾಗ ಇಂತಹ ಊಹೆಗೆ ಅವಕಾಶವೆಲ್ಲಿದ್ದೀತೆಂದರೆ ಅದನ್ನು ನಿಷೇಧಿಸುತ್ತಾನೆ. ಯಾವಾಗಲೂ ವೇದಗಳನ್ನು ಅಭ್ಯಾಸ ಮಾಡುತ್ತ ಬೇರೆ ವಿಷಯಗಳನ್ನೇ ಅರಿಯದಷ್ಟು ಮೂರ್ಖನೆನಿಸಿ ಭೋಗ್ಯವಿಷಯಗಳಲ್ಲಿ ಕುತೂಹಲವೇ ಇಲ್ಲದ ಹಳೆಯ ಆ ನಾರಾಯಣ ಮುನಿಯು ಇಂತಹ ಮನೋಹರವಾದ ರೂಪವನ್ನು ಹೇಗೆ ನಿರ್ಮಿಸಬಲ್ಲನು ? ಗುಣವನ್ನು ಅರಿಯದವನು ರಸಾನುಭವಶಕ್ತಿಯನ್ನೇ ಕಳೆದುಕೊಂಡಿರುವುದರಿಂದ ಗುಣವುಳ್ಳ ವಸ್ತುವನ್ನು ಹೇಗೆ ನಿರ್ಮಿಸಿಯಾನು ?" ಇಲ್ಲಿ ಹಳೆಯವನೆನಿಸಿವ ನಾರಾಯಣನಿಗೆ ಸ್ತ್ರೀಯರನ್ನು ಸೃಷ್ಟಿಸುವ ಸಂಬಂಧವು ಯಥಾರ್ಥವಾಗಿದ್ದರೂ ಆಕೆಯನ್ನು ಸೃಷ್ಟಿಸುವ ಸಂಬಂಧವಿಲ್ಲವೆಂದು ಹೇಳಿರುವ ಪ್ರಯುಕ್ತ ಇದೂ ಒಂದು ಬಗೆಯ ಅತಿಶಯೋಕ್ತಿ ಎನಿಸಿದೆ. ಸಂಬಂಧವಿಲ್ಲದಕಡೆ ಸಂಬಂಧವುಂಟೆಂದು ನಿಶ್ಚಯಿಸುವುದನ್ನು ವಿವರಿಸುತ್ತಾನೆ. "ಚಂದ್ರ ಮಂಡಲದಲ್ಲಿ ಕನ್ನೈದಿಲೆ ಪುಷ್ಪಗಳೆರಡು ಯಾವ ಕಾರಣದಿಂದಾದರೂ ಅಂಟಿ ಕೊಂಡಿದ್ದರೆ, ಆಗ ಆಕೆಯ ಸುಂದರವಾದ ಕಣ್ಣುಗಳಿರುವ ಆಕೆಯ ಮುಖವನ್ನು ಆ ಚಂದ್ರಮಂಡಲದೊಡನೆ ಹೋಲಿಸ ಬಹುದು ? ಇಲ್ಲವಾದರೆ ಸಾಧ್ಯವಿಲ್ಲ." ಚಂದ್ರ ಮಂಡಲದಲ್ಲಿ ಕನ್ನೈದಿಲೆಗಳೆರಡು ಅಂಟಿಕೊಂಡಿಲ್ಲವೆಂಬ ಜ್ಞಾನವು ಯಾವಾಗಲೂ ಇರುವ ಪ್ರಯುಕ್ತ ಅವಕ್ಕೆ ಅಲ್ಲಿ ಸಂಬಂಧವೆಲ್ಲಿದ್ದೀತು ? ಹಾಗೆ ಸಂಬಂಧವಿಲ್ಲವೆಂಬುದು ಯಥಾರ್ಥವೆನಿಸಿದ್ದರೂ ಯದಿ ಶಬ್ದಾರ್ಥದ ಬಲದಿಂದ ಇಲ್ಲಿ ಸಂಬಂಧವನ್ನು ಕಲ್ಪಿಸಲಾಗಿದೆ. ಆದ್ದರಿಂದ ಇದು ಸಂಬಂಧವಿಲ್ಲದ ಕಡೆ ಸಂಬಧವನ್ನು ನಿಶ್ಚಯಿಸುವುದಕ್ಕೆ ಸೂಕ್ತ ವಿವರಣವೆನಿಸಿದೆ.

ಕಾರ್ಯಕಾರಣಗಳು ಹಿಂದು ಮುಂದಾಗಿರುವ ಬಗೆಯು ಎರಡು ತರಹ ಇರುತ್ತದೆ. ಕಾರಣವಿರುವುದಕ್ಕಿಂತ ಮೊದಲು ಕಾರ್ಯವಿರುವುದು ಒಂದು ಬಗೆ. ಕಾರ್ಯಕಾರಣಗಳೆರಡೂ ಒಂದೇ . ಕಾಲದಲ್ಲಿ ಇರುವುದು ಮತ್ತೊಂದು ಬಗೆ. ಇವುಗಳನ್ನು ಈಗ ಕ್ರಮವಾಗಿ ವಿವರಣಮಾಡುತ್ತಾನೆ. "ತರುಣಿಯರ ಚಿತ್ತವು ಮೊದಲೇ ಸುರತೋತ್ಕಂಠೆಯಿಂದ ವ್ಯಾಕುಲಗೊಳ್ಳುವುದು. ಅನಂತರ ವಿಕಸಿತವಾದ ಬಕುಲ ಮತ್ತು ಆಮ್ರವೃಕ್ಷಗಳ ಮೊಗ್ಗುಗಳ ಕಾಂತಿಗಳು ವ್ಯಾಪಿಸುತ್ತವೆ." ಬಕುಲ ಮತ್ತು ಆಮ್ರ (ಮಾವು) ಈ ಮರಗಳ ಮೊಗ್ಗುಗಳನ್ನು ನೋಡಿದ್ದರಿಂದ ಕಾಮಿನಿಯರ ಚಿತ್ತದಲ್ಲಿ ಸುರತದ ಬಯಕೆ ಹುಟ್ಟುತ್ತದೆಯಾದ್ದರಿಂದ ಅಂತಹ ಮೊಗ್ಗುಗಳ ಕಾಂತಿಗಳು ಕಾರಣವೆನಿಸಿದ್ದು ಮೊದಲು ಇರುಬೇಕೆಂಬುದು ಯಥಾರ್ಥವೆನಿಸಿದೆ. ಸುರತದ ಬಯಕೆಯು ಕಾರ್ಯವೆನಿಸಿದ್ದರಿಂದ ಅದು ಅನಂತರ ಹುಟ್ಟಬೇಕೆಂಬುದು ಯಥಾರ್ಥವೇ ಆಗಿದೆ. ಹೀಗೆ ಸ್ವಾಭಾವಿಕವೆನಿಸಿದ ಕಾರ್ಯಕಾರಣಭಾವವನ್ನು ಕವಿಯು ತನ್ನ ಪ್ರತಿಭೆಯಿಂದ ಬದಲಾಯಿಸಿರುವನು. ಕಾರ್ಯವನ್ನು ಮೊದಲು ತಿಳಿಸಿ ಅನಂತರ ಕಾರಣವನ್ನು ತಿಳಿಸಿರುವುದೇ ಈ ಬಗೆಯ ವೈಪರೀತ್ಯವೆನಿಸಿದ್ದರಿಂದ ಇದೂ ಒಂದು ಬಗೆಯ ಅತಿಶಯೋಕ್ತಿ ಎನಿಸಿದೆ.

ಕಾರ್ಯ ಕಾರಣಗಳೆರಡೂ ಒಂದೇ ಸಮಯದಲ್ಲಿ ಇರುವುದನ್ನು ಉದಾಹರಿಸುತ್ತಾನೆ. "ಆನೆಯಂತೆ ಲೀಲೆಯಿಂದ ನಿಧಾನವಾಗಿ ವ್ಯವಹರಿಸುವ ಸ್ವಭಾವವುಳ್ಳ ಆ ರಘುವು ತಂದೆಯಿಂದ ಬಂದ ಸಿಂಹಾಸನವನ್ನೂ ರಾಜರ ಸಮೂಹವನ್ನೂ ಏಕಕಾಲದಲ್ಲಿ ತನಗೆ ಸ್ವಾಧೀನಪಡಿಸಿಕೊಂಡನು." ರಾಜರು ತಂದೆಯಿಂದ ಬರಬೇಕಾದ ಸಿಂಹಾಸನವನ್ನು ಮೊದಲು ಸ್ವೀಕರಿಸಿ ಅನಂತರ ಶತ್ರುಗಳನ್ನು ತಮಗೆ ಅಧೀನಪಡಿಸಿಕೊಳ್ಳುವರು. ಇದರಿಂದ ತಂದೆಯ ಸಿಂಹಾಸನವನ್ನು ಸ್ವೀಕರಿಸುವುದು ಕಾರಣವೆನಿಸಿದ್ದರಿಂದ ಮೊದಲು ಆಗಬೇಕು. ಶತ್ರುಗಳನ್ನು ವಶಪಡಿಸಿಕೊಳ್ಳುವುದು ಕಾರ್ಯವೆನಿಸಿದ್ದರಿಂದ ಅನಂತರವೇ ಆಗಬೇಕು. ಇವೆರಡು ಒಂದಾದಮೇಲೆ ಒಂದರಂತೆ ಸಂಭವಿಸಬೇಕಾದ್ದು ಯಥಾರ್ಥವೆನಿಸಿದ್ದರೂ ಕವಿಯು ತನ್ನ ಪ್ರೌಢೋಕ್ತಿಯಿಂದ ಇವನ್ನು ಒಟ್ಟಿಗೆ ಒಂದೇ ಕಾಲದಲ್ಲಿ ಸಂಭವಿಸುವಂತೆ ನಿಶ್ಚಯಿಸಿರುವನು. ಆದ್ದರಿಂದ ಇದು ಕಾರ್ಯಕಾರಣಗಳ ವೈಪರೀತ್ಯಕ್ಕೆ ಉದಾಹರಣವೆನಿಸಿದೆ. "ಕಥಮುಪರಿ ಕಲಾಪಿನಃ ಕಲಾಪಃ" ಎಂಬ ಶ್ಲೋಕದಲ್ಲಿ ಕೇಶಪಾಶವಲ್ಲಿರುವ ಸಾಧಾರಣವಾದ ಸೌಂದರ್ಯವನ್ನು ಅಲೌಕಿಕವೆಂದು (ಸ್ವರ್ಗೀಯವೆಂದು) ನಿಶ್ಚಯಿಸಲಾಗಿದೆ. ಆದ್ದರಿಂದ ಅಭೇದವಿದ್ದರೂ ಭೇದವನ್ನು ಕಲ್ಪಿಸುವುದಕ್ಕೆ ಇದು ಉದಾಹರಣವಾಗಲಿ ; ಆದರೆ ಭೇದವಿದ್ದರೂ ಅಭೇದವನ್ನು ಕಲ್ಪಿಸುವುದಕ್ಕೆ ಇದು ಉದಾಹರಣವಾಗಲಾರದು. ಹಾಗೆ ಕೇಶಪಾಶಗಳಿಗೆ ನವಿಲುಗರಿಗಳೊಡನೆ ಅಭೇದಾಧ್ಯವಸಾಯವೇ ಅಭಿಮತವೆನಿಸದಿದ್ದರೆ ಅತಿಶಯೋಕ್ತಿಯ ಲಕ್ಷಣವೇ ಅಲ್ಲಿ ಅನ್ವಯಿಸದೇ ಹೋಗುತ್ತದೆ. ಆ ನಾಯಿಕೆಯ ಲಾವಣ್ಯಕ್ಕೂ ಬೇರೆಯವರ ಲಾವಣ್ಯಕ್ಕೂ ಭೇದವೇ ಇರುವುದರಿಂದ ಅಭೇದವಿಲ್ಲದ ಪ್ರಯುಕ್ತ ಅಭೇದವಿರುವ ಕಡೆ ಭೇದವನ್ನು ನಿಶ್ಚಯಿಸಲಿಕ್ಕೆ ಸಾಧ್ಯವಾಗದೆಹೋಗುತ್ತದೆ. ಆದರೆ ಲೌಕಿಕವಾದ್ದರಿಂದ ಬೇರೆಯಲ್ಲದ ಆ ನಾಯಿಕೆಯ ಸೌಂದರ್ಯವನ್ನು ಅಲೌಕಿಕವಾದ್ದರಿಂದ ಬೇರೆ ಎನಿಸಿದ ಲಾವಣ್ಯವೆಂದು ನಿಶ್ಚಯಿಸುವುದಾದರೆ ಆಗ ಲಕ್ಷಣವು ಅನ್ವಯಿಸಬಲ್ಲದು. ಆದ್ದರಿಂದ ಭೇದವಿದ್ದರೂ ಅಭೇದವನ್ನು ನಿಶ್ಚಯಿಸುವ ಕಡೆ ಒಂದು ಲೌಕಿಕ; ಮತ್ತೊಂದು ಅಲೌಕಿಕವೆಂದು ಭಾವಿಸಿ ಭೇದಾಭೇದಗಳನ್ನು ಪರಿಗ್ರಹಿಸಬೇಕು" ಎಂದು ಕೆಲವರು ಹೇಳುತ್ತಾರೆ. ಇದು ಸರಿಯಲ್ಲ. ಆದ್ದರಿಂದ ಅಲ್ಲಿಯೂ ಸಹ 'ಅನ್ಯದೇವಾಂಗಲಾವಣ್ಯಂ' ಎಂಬಲ್ಲಿರುವಂತೆ ಅಭೇದವಿದ್ದರೂ ಭೇದವನ್ನು ನಿಶ್ಚಯಿಸುವ ಬಗೆ ಎಂದು ಹೇಳುವುದೇ ಯುಕ್ತ; ಯಾಕೆಂದರೆ 'ಅನ್ಯದೇವಾಂಗಲಾವಣ್ಯಂ' ಎಂಬಲ್ಲಿ ಆಕೆಯ ಲಾವಣ್ಯವು ಬೇರೆ ನಾಯಿಕೆಯರಿಗೆ ಸಮಾನವೆನಿಸಿದ್ದರೂ ಅವಳೊಬ್ಬಳಲ್ಲಿಯೇ ಇದ್ದು ಅಸಾಧಾರಣವೆನಿಸಿದ್ದ ಪ್ರಯುಕ್ತ ಅಲ್ಲಿ ಬೇರೆಯವರ ಸೌಂದರ್ಯದೊಡನೆ ಭೇದವಿದ್ದರೂ ಆಕೆಯ ಸೌಂದರ್ಯವೇ ಬೇರೆ ಎಂದು ಅಭೇದವನ್ನು ನಿಶ್ಚಯಿಸಿರುವ ಪ್ರಯುಕ್ತ ಲಕ್ಷಣವು ಅನ್ವಯಿಸುತ್ತದೆ. ಆದ್ದರಿಂದ ಅವ್ಯಾಪ್ತಿದೋಷಕ್ಕೆ ಅವಕಾಶವಿಲ್ಲ. ಆದರೆ 'ಅನ್ಯದೇವ' ಎಂಬುದರ ಬದಲು 'ಅನ್ಯದಿವ' ಎಂದು ಇವ ಶಬ್ದವನ್ನು ಪ್ರಯೋಗಿಸಿದರೆ ಆಗ ಅಧ್ಯವಸಾಯವು ಸಿದ್ಧವಾಗದೇ ಇರುವ ಪ್ರಯುಕ್ತ ಅಲ್ಲಿ ಉತ್ಪ್ರೇಕ್ಷೆಯನ್ನೇ ಹೇಳಬೇಕಾಗು

ವುದು. ಅನ್ಯಡಿವ ಎಂಬುದಕ್ಕೆ ಅಲೌಕಿಕವಿವ ಎಂದು ಅರ್ಥವನ್ನು ಹೇಳಬೇಕಾದ್ದರಿಂದ ಅದು ಉತ್ಪ್ರೇಕ್ಷೆಯೇ ಆದೀತು ಆದರೆ 'ಉಪರಿ ಕಲಾಪಿನಃ ಕಲಾಪ ಏವ' ಎಂಬಲ್ಲಿ ಯಾದರೋ ಅಲೌಕಿಕ ಇವ' ಎಂಬ ಅರ್ಥವೇ ಇಲ್ಲದ್ದರಿಂದ ಉತ್ಪ್ರೇಕ್ಷೆಯನ್ನು ಹೇಳಲಿಕ್ಕೆ ಬರುವಂತಿಲ್ಲ. ಹೀಗೆ ಉತ್ಪ್ರೇಕ್ಷೆ ಮತ್ತು ಅತಿಶಯೋಕ್ತಿ ಇವೆರಡಕ್ಕೂ ಭೇದವಿರುವುದರಿಂದ ಅಲ್ಲಿ ಅತಿಶಯೋಕ್ತಿಯನ್ನೇ ಹೇಳಬೇಕು. 'ಪ್ರಾಗೇವ ಹರಿಣಾಕ್ಷೀಣಾಮ್' ಎಂಬಲ್ಲಿಯಾದರೋ ಬಕುಲ ಮತ್ತು ಆಮ್ರ ವೃಕ್ಷಗಳಲ್ಲಿ ಮೊಗ್ಗುಗಳ ಸಮೃದ್ಧಿಯು ಮೊದಲೇ ಕಾಣಿಸಿಕೊಳ್ಳುವುದಾದರೂ ಸ್ತ್ರೀಯರಿಗೆ ಸುರತದ ಬಯಕೆಯಾದ ಮೇಲೆ ಕಾಣಿಸಿತೆಂದು ನಿಶ್ಚಯಿಸಲಾಗಿದೆ. ಆದ್ದರಿಂದ ಅಲ್ಲಿ ಅತಿಶಯೋಕ್ತಿಯನ್ನೇ ಹೇಳಬೇಕು. ಅಲ್ಲಿಯೂ ಇವ ಎಂಬ ಶಬ್ದವನ್ನು ಪ್ರಯೋಗಿಸಿದರೆ ಉತ್ಪ್ರೇಕ್ಷೆಯನ್ನು ಹೇಳಬಹುದು. ಹೀಗೆಯೇ 'ಸಮಮೇವ ಸಮಾಕ್ರಾಂತಂ' ಎಂಬಲ್ಲಿಯೂ ಸಹ 'ಸಮಮಿವ' ಎಂದು ಹೇಳುವುದಾದರೆ ಅಲ್ಲಿಯೂ ಉತ್ಪ್ರೇಕ್ಷೆಯನ್ನೇ ಹೇಳಬೇಕು.

ಪದಾರ್ಥಾನಾಂ ಪ್ರಸ್ತುತಾನಾಂ ಅನ್ಯೇಷಾಂ ವಾ ಯದಾ ಭವೇತ್ ।
ಏಕಧರ್ಮಾಭಿಸಂಬಂಧಃ ಸ್ಯಾತ್ತದಾ ತುಲ್ಯಯೋಗಿತಾ ॥

ಅನ್ಯೇಷಾಮಪ್ರಸ್ತುತಾನಾಮ್. ಧರ್ಮೋ ಗುಣಕ್ರಿಯಾರೂಪಃ. ಉದಾಹರಣಮ್.

ಅನುಲೇಪನಾನಿ ಕುಸುಮಾನ್ಯಬಲಾಃ ಕೃತಮನ್ಯವಃ ಪತಿಷು ದೀಪದಶಾಃ ।
ಸಮಯೇನ ತೇನ ಸುಚಿರಂ ಶಯಿತಪ್ರತಿಬೋಧಿತಸ್ಮರಮಬೋಧಿಷತ ॥

ಅತ್ರ ಸಂಧ್ಯಾವರ್ಣನಸ್ಯ ಪ್ರಸ್ತುತತ್ವಾತ್ ಪ್ರಸ್ತುತಾನಾಂ ಅನುಲೇಪನಾದೀನಾಂ ಏಕಬೋಧನಕ್ರಿಯಾಭಿಸಂಬಂಧಃ.

ತ್ವದಂಗಮಾರ್ದವಂ ದ್ರಷ್ಟುಃ ಕಸ್ಯ ಚಿತ್ತೇ ನ ಭಾಸತೇ ।
ಮಾಲತೀಶಶಭೃಲ್ಲೇಖಾಕದಳೀನಾಂ ಕಠೋರತಾ ॥

ಇತ್ಯತ್ರ ಮಾಲತ್ಯಾದೀನಾಮಪ್ರಸ್ತುತಾನಾಂ ಕಠೋರತಾರೂಪೈಕಗುಣಸಂಬಂಧಃ.

ಏವಮ್—ದಾನಂ ವಿತ್ತಾದೃತಂ ವಾಚಃ ಕೀರ್ತಿಧರ್ಮೌ ತಥಾಯುಷಃ ।
ಪರೋಪಕರಣಂ ಕಾಯಾದಸಾರಾತ್ ಸಾರಮಾಹರೇತ್ ॥

ಅತ್ರ ದಾನಾದೀನಾಂ ಕರ್ಮಭೂತಾನಾಂ ಸಾರತಾರೂಪೈಕಗುಣಸಂಬಂಧೇ ಏಕಾಹರಣಕ್ರಿಯಾಸಂಬಂಧಃ.

ಅಪ್ರಸ್ತುತಪ್ರಸ್ತುತಯೋರ್ದೀಪಕಂ ತು ನಿಗದ್ಯತೇ ।
ಅಥ ಕಾರಕಮೇಕಂ ಸ್ಯಾದನೇಕಾಸು ಕ್ರಿಯಾಸು ಚೇತ್ ॥

ಬಲಾವಲೇಪಾದಧುನಾಪಿ ಪೂರ್ವವತ್ಪ್ರಬಾಧ್ಯತೇ ತೇನ ಜಗಜ್ಜಿಗೀಷುಣಾ ।
ಸತೀ ಚ ಯೋಷಿತ್ಪ್ರಕೃತಿಸ್ಸನಿಶ್ಚಲಾ ಪುಮಾಂಸಮಭ್ಯೇತಿ ಭವಾಂತರೇಷ್ವಪಿ॥

ಅತ್ರ ಪ್ರಸ್ತುತಾಯಾಃ ನಿಶ್ಚಲಾಯಾಃ ಪ್ರಕೃತೇರಪ್ರಸ್ತುತಾಯಾಶ್ಚ ಸತ್ಯಾ ಯೋಷಿತಃ ಏಕಾನುಗಮನಕ್ರಿಯಾಸಂಬಂಧಃ.

ದೂರಂ ಸಮಾಗತವತಿ ತ್ವಯಿ ಜೀವನಾಥೇ ಭಿನ್ನಾ ಮನೋಭವಶರೇಣ ತಪಸ್ವಿನೀ ಸಾ

ಉತ್ತಿಷ್ಠತಿ ಸ್ವಪಿತಿ ವಾಸಗೃಹಂ ತ್ವದೀಯಮಾಯಾತಿ ಯಾತಿ ಹಸತಿ ಶ್ವಸಿತಿ ಕ್ಷಣೇನ॥

ಅತ್ರೈಕಸ್ಯಾ ನಾಯಿಕಾಯಾ ಉತ್ಥಾನಾದ್ಯನೇಕಕ್ರಿಯಾಸಂಬಂಧಃ.

ಅತ್ರ ಚ ಗುಣಕ್ರಿಯಯೋಃ ಆದಿಮಧ್ಯಾವಸಾನಸದ್ಭಾವೇನ ತ್ರೈವಿಧ್ಯಂ ನ ಲಕ್ಷಿತಂ, ತಥಾವಿಧವೈಚಿತ್ರ್ಯಸ್ಯ ಸರ್ವತ್ರಾಪಿ ಸಹಸ್ರಧಾ ಸಂಭವಾತ್.

ಪ್ರತಿವಸ್ತೂಪಮಾ ಸಾ ಸ್ಯಾದ್ವಾಕ್ಯಯೋರ್ಗಮ್ಯಸಾಮ್ಯಯೋಃ।
ಏಕೋಽಪಿ ಧರ್ಮಃ ಸಾಮಾನ್ಯೋ ಯತ್ರ ನಿರ್ದಿಶ್ಯತೇ ಪೃಥಕ್॥

ಯಥಾ—ಧನ್ಯಾಸಿ ವೈದರ್ಭಿ! ಗುಣೈರುದಾರೈರ್ಯಥಾ ಸಮಾಕೃಷ್ಯತ ನೈಷಧೋಽಪಿ।
ಇತಃ ಸ್ತುತಿಃ ಕಾ ಖಲುಃ ಚಂದ್ರಿಕಾಯಾ ಯದಬ್ಧಿಮಪ್ಯುತ್ತರಲೀಕರೋತಿ॥

ಅತ್ರ ಸಮಾಕರ್ಷಣಮುತ್ತರಲೀಕರಣಂ ಚ ಕ್ರಿಯಾ. ಏಕೈವ ಪೌನರುಕ್ತ್ಯನಿರಾಸಾಯ ಭಿನ್ನವಾಚಕತಯಾ ನಿರ್ದಿಷ್ಟಾ. ಇಯಂ ಚ ಮಾಲಯಾಪಿ ದೃಶ್ಯತೇ. ಯಥಾ—

ವಿಮಲ ಏವ ರವಿರ್ವಿಶದಃ ಶಶೀ ಪ್ರಕೃತಿಶೋಭನ ಏವ ಹಿ ದರ್ಪಣಃ।
ಶಿವಗಿರಿಃ ಶಿವಹಾಸಸಹೋದರಃ ಸಹಜಸುಂದರ ಏವ ಹಿ ಸಜ್ಜನಃ॥

ಅತ್ರ ವಿಮಲವಿಶದಾದಿರರ್ಥತ ಏವ, ವೈಧರ್ಮ್ಯೇ ಯಥಾ—

ಚಕೋರ್ಯ ಏವ ಚತುರಾಶ್ಚಂದ್ರಿಕಾಪಾನಕರ್ಮಣಿ।
ವಿನಾವಂತೀರ್ನ ನಿಪುಣಾಃ ಸುದೃಶೋ ರತನರ್ಮಣಿ॥

ದೃಷ್ಟಾಂತಸ್ತು ಸಧರ್ಮಸ್ಯ ವಸ್ತುನಃ ಪ್ರತಿಬಿಂಬನಮ್।

ಸಧರ್ಮಸ್ಯೇತಿ ಪ್ರತಿವಸ್ತೂಪಮಾವ್ಯವಚ್ಛೇದಃ.

ಅಯಮಪಿ ಸಾಧರ್ಮ್ಯವೈಧರ್ಮ್ಯಾಭ್ಯಾಂ ದ್ವಿಧಾ. ಕ್ರಮೇಣೋದಾಹರಣಮ್

ಅವಿದಿತಗುಣಾಪಿ ಸತ್ಕವಿಭಣಿತಿಃ ಕರ್ಣೇಷು ವಮತಿ ಮಧುಧಾರಾಮ್।
ಅನಧಿಗತಪರಿಮಲಾಪಿ ಹಿ ಹರತಿ ದೃಶಂ ಮಾಲತೀಮಾಲಾ॥

ತ್ವಯಿ ದೃಷ್ಟೇ ಕುರಂಗಾಕ್ಷ್ಯಾಃ ಸ್ರಂಸತೇ ಮದನವ್ಯಥಾ।
ದೃಷ್ಟಾನುದಯಭಾಜೀಂದೌ ಗ್ಲಾನಿಃ ಕುಮುದಸಂಹತೇಃ॥

ವಸಂತಲೇಖೈಕನಿಬದ್ಧಭಾವಂ ಪರಾಸು ಕಾಂತಾಸು ಮನಃ ಕುತೋ ನಃ?।
ಪ್ರಫುಲ್ಲಮಲ್ಲೀಮಧುಲಂಪಟಃ ಕಿಂ ಮಧುವ್ರತಃ ಕಾಂಕ್ಷತಿ ವಲ್ಲಿಮನ್ಯಾಮ್?॥

ಅತ್ರ 'ಮನಃ ಕುತೋ ನಃ' ಇತ್ಯತ್ರ 'ಕಾಂಕ್ಷತಿ ವಲ್ಲಿಮನ್ಯಾಮ್' ಇತ್ಯಸ್ಯ ಚ ಏಕರೂಪತಯೈವ ಪರ್ಯವಸಾನಾನ್ ಪ್ರತಿವಸ್ತೂಪಮೈವ. ಇಹ ತು ಕರ್ಣೇ ಮಧುಧಾರಾವಮನಸ್ಯ ನೇತ್ರಹರಣಸ್ಯ ಚ ಸಾಮ್ಯಮೇವ ನ ತ್ವೈಕರೂಪ್ಯಮ್. ಅತ್ರ ಸಮರ್ಥ್ಯಸಮರ್ಥಕವಾಕ್ಯಯೋಃ ಸಾಮಾನ್ಯವಿಶೇಷಭಾವೋಽರ್ಥಾಂತರನ್ಯಾಸೇ ; ಪ್ರತಿವಸ್ತೂಪಮಾದೃಷ್ಟಾಂತಯೋಸ್ತು ನ ತಥೇತಿ ಭೇದಃ.

ಪ್ರಕೃತಸಂದರ್ಭಕ್ಕೆ ಅನ್ವಯಿಸುವ ಪದಾರ್ಥಗಳಿಗೂ ಅಪ್ರಕೃತವಾದ ಪದಾರ್ಥಗಳಿಗೂ ಒಂದೇ ಗುಣ ಅಥವಾ ಕ್ರಿಯೆ ಎಂಬ ಧರ್ಮದ ಮೂಲಕ ಸಂಬಂಧವನ್ನು ಏರ್ಪಡಿಸುವುದೇ ತುಲ್ಯಯೋಗಿತೆ ಎನಿಸುವುದು. ಪ್ರಕೃತವಸ್ತುಗಳಿಗೆ ಪ್ರಕೃತವಸ್ತು

ಗಳೊಡನೆ ಒಂದೇ ಬಗೆಯ ಕ್ರಿಯೆಯ ಸಂಬಂಧವನ್ನು ಉದಾಹರಿಸುತ್ತಾನೆ. "ಆ ಸಂಧ್ಯಾಕಾಲವು ಮೈಗೆ ಹಚ್ಚುವ ಲೇಪನಗಳನ್ನೂ, ಪುಷ್ಪಗಳನ್ನೂ, ಪತಿಯರಲ್ಲಿ ಪ್ರಣಯಕೋಪವನ್ನು ತೋರಿಸುವ ಸ್ತ್ರೀಯರನ್ನೂ ಹಾಗೆಯೇ ದೀಪದ ಬತ್ತಿಗಳನ್ನೂ ಮೊದಲು ಮಲಗಿದ್ದು ವ್ಯವಹಾರಗಳನ್ನು ತೊರೆದು ಆಮೇಲೆ ವ್ಯವಹರಿಸಲಾರಂಭಿಸಿದ ಮನ್ಮಥನಂತೆ ಎಚ್ಚರಗೊಳಿಸಿತು." ಸಂಧ್ಯಾಕಾಲದ ವರ್ಣನವು ಪ್ರಕೃತವೇ ಆದ್ದರಿಂದ ಇಲ್ಲಿ ತಿಳಿಸಿರುವ ಅನುಲೇಪನ ಮೊದಲಾದವೆಲ್ಲವೂ ಪ್ರಕೃತವೇ ಎನಿಸಿದ್ದು ಅವೆಲ್ಲಕ್ಕೂ ಬೋಧನವೆಂಬ ಒಂದೇ ಕ್ರಿಯೆಯಲ್ಲಿ ಸಂಬಂಧವನ್ನು ಏರ್ಪಡಿಸಲಾಗಿದೆ. ಅಪ್ರಕೃತವಾದ ವಸ್ತುಗಳಿಗೆ ಒಂದೇ ಗುಣದಲ್ಲಿ ಸಂಬಂಧವನ್ನು ಕಲ್ಪಿಸುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ನಿನ್ನ ಅವಯವಗಳ ಮಾರ್ದವವನ್ನು ಕಂಡವನು ಯಾವನೇ ಆಗಲಿ ಅಂತಹ ಯಾವನ ಮನಸ್ಸಿನಲ್ಲಿ ತಾನೆಂ ಮಾಲತೀಪುಷ್ಪ, ಚಂದ್ರಲೇಖೆ, ಬಾಳೆಯಗಿಡ ಇವು ಕಠಿಣವೆಂಬುದು ತಿಳಿಯದೇ ಇದ್ದೀತು ?" ಇಲ್ಲಿ ತಿಳಿಸಿರುವ ಮಾಲತೀ ಮೊದಲಾದವೆಲ್ಲವೂ ಅಪ್ರಕೃತವೇ ಆದ್ದರಿಂದ ಅವೆಲ್ಲವೂ ಕಠೋರತೆ ಎಂಬ ಒಂದೇ ಗುಣದಿಂದ ಸಂಬಂಧಿಸಿರುವುದಾಗಿ ತಿಳಿಸಲಾಗಿದೆ. ಹೀಗೆಯೇ ಗುಣಕ್ರಿಯೆಗಳೆರಡರಿಂದಲೂ ಸಂಬಂಧಪಟ್ಟಿರುವ ವಸ್ತುಗಳನ್ನು ಉದಾಹರಿಸುತ್ತಾನೆ. "ದಾನ ಮಾಡಲಿಕ್ಕೆ ಕೊಂಚ ಅನುಕೂಲವಿದ್ದು ಸ್ವಲ್ಪವೇ ಸಾರವಿರುವ ಹಣದಿಂದ ಹೆಚ್ಚು ಸಾರವಿರುವ ದಾನವನ್ನೂ, ಹೆಚ್ಚು ಸಾರವಿಲ್ಲದೆಮಾತಿನಿಂದ ಸಾರವತ್ತಾಗಿರುವ ಸತ್ಯವನ್ನೂ, ಅದರಂತೆಯೇ ಹೆಚ್ಚು ಸಾರವಿಲ್ಲದ ಆಯುಷ್ಯದಿಂದ ಕೀರ್ತಿಧರ್ಮಗಳನ್ನೂ, ಹಾಗೆಯೇ ಅಸಾರವಾದ ಶರೀರದಿಂದ ಪರೋಪಕಾರವನ್ನೂ ಬದ್ಧಿವಂತನು ಸಾಧಿಸಬೇಕು." ಇಲ್ಲಿ ದಾನ ಮೊದಲಾದ ಪದಾರ್ಥಗಳಿಗೆ ಸಾರತೆ ಎಂಬ ಒಂದೇ ಗುಣದಿಂದಲೂ, ಸಂಪಾದಿಸುವಿಕೆ ಎಂಬ ಒಂದೇ ಕ್ರಿಯೆಯಿಂದಲೂ ಸಂಬಂಧವನ್ನು ಕಲ್ಪಿಸಲಾಗಿದೆ.

ಅಪ್ರಕೃತವೂ ಪ್ರಕೃತವೂ ಆದ ಪದಾರ್ಥಗಳಿಗೆ ಸಾಧರ್ಮ್ಯವೈಧರ್ಮ್ಯಗಳಿಲ್ಲದಾಗ ಒಂದೇ ಧರ್ಮದಿಂದ ಸಂಬಂಧವನ್ನು ಏರ್ಪಡಿಸುವುದೇ ದೀಪಕವೆನಿಸುವುದು. ಇಲ್ಲಿ 'ತು' ಎಂಬ ನಿಪಾತವು 'ಸಾಧರ್ಮ್ಯವೈಧರ್ಮ್ಯಗಳಿಲ್ಲದಿರುವಾಗ' ಎಂಬ ಅರ್ಥವನ್ನು ಸೂಚಿಸುತ್ತದೆ. ಅಪ್ರಕೃತವಸ್ತುವಿನೊಡನೆ ಪ್ರಕೃತವಸ್ತುವಿಗೂ, ಪ್ರಕೃತವಸ್ತುವಿನೊಡನೆ ಅಪ್ರಕೃತವಸ್ತುವಿಗೂ ಸಾಧರ್ಮ್ಯವನ್ನು ತಿಳಿಸುವ ಪದವಾಗಲೀ ವೈಧರ್ಮ್ಯವಾಗಲೀ ಇಲ್ಲದಿರುವಾಗ ಒಂದೇ ಧರ್ಮದಲ್ಲಿ ಅನ್ವಯವನ್ನು ತಿಳಿಸುವುದೇ ದೀಪಕವೆನಿಸುವುದು. ಪ್ರಕೃತವಸ್ತುಗಳೊಡನೆ ಪ್ರಕೃತವಸ್ತುಗಳಿಗೂ, ಅಪ್ರಕೃತವಸ್ತುಗಳೊಡನೆ ಅಪ್ರಕೃತವಸ್ತುಗಳಿಗೂ ಒಂದೇ ಧರ್ಮದಿಂದ ಸಂಬಂಧವನ್ನು ಕಲ್ಪಿಸುವುದೇ ತುಲ್ಯಯೋಗಿತೆ ಎನಿಸುವ ಪ್ರಯುಕ್ತ 'ಕಮಲಮಿವ ಮುಖಂ ಮನೋಜ್ಞಂ' ಎಂಬಲ್ಲಿ ಪ್ರಕೃತ ಮುಖಕ್ಕೂ ಅಪ್ರಕೃತವಾದ ಕಮಲಕ್ಕೂ ಮನೋಜ್ಞತೆ ಎಂಬ ಗುಣದ ಸಂಬಂಧವಿದ್ದರೂ ಸಾಮ್ಯವನ್ನು ತಿಳಿಸುವ ಇವ ಶಬ್ದವಿರುವುದರಿಂದ ಅಲ್ಲಿ ದೀಪಕದ ಲಕ್ಷಣವು ಅನ್ವಯಿಸುವುದಿಲ್ಲ. ಅನೇಕ ಕ್ರಿಯೆಗಳಲ್ಲಿ ಅನ್ವಯಿಸುವ ಒಂದೇ ಕಾರಕವಿದ್ದರೆ ಅದೂ

ಸಹ ದೀಪಕವೇ ಆಗುವುದು. ಇವಕ್ಕೆ ಕ್ರಮವಾಗಿ ಉದಾಹರಣಗಳನ್ನು ಕೊಡುತ್ತಾನೆ. "ಜಯಿಸಲಿಚ್ಛಿಸುವ ಆ ಶಿಶುಪಾಲನು ತನ್ನ ಸಾಮರ್ಥ್ಯದ ಗರ್ವದಿಂದ ಹಿಂದಿನಂತೆ ಈಗಿನ ಜನ್ಮದಲ್ಲೂ ಸಹ ಜಗತ್ತೆಲ್ಲವನ್ನು ಬಹಳವಾಗಿ ಬಾಧಿಸುತ್ತಾನೆ.: ಪತಿವ್ರತಾ ಸ್ತ್ರೀಯಳು ಮತ್ತು ನಿಶ್ಚಲವಾದ ಸ್ವಭಾವ ಇವೆರಡು ಬೇರೆ ಜನ್ಮಗಳಲ್ಲೂ ಸಹ ಪುರುಷನಿಗೆ ದೊರಕುತ್ತವೆ" ಇಲ್ಲಿ ನಿಶ್ಚಲಪ್ರಕೃತಿಯೇ ಪ್ರಕೃತವೆನಿಸಿದ್ದು ಪತಿವ್ರತಾ ಸ್ತ್ರೀಯಳು ಅಪ್ರಕೃತಳೆನಿಸಿರುವಳು. ಇವರಿಬ್ಬರೂ ಒಬ್ಬ ವ್ಯಕ್ತಿಯನ್ನು ಅನುಸರಿಸಿ ಕೊಂಡು ಹೋಗುವರೆಂದು ಇಬ್ಬರಿಗೂ ಒಂದೇ ಕ್ರಿಯೆಯ ಮೂಲಕ ಸಂಬಂಧವನ್ನು ಕಲ್ಪಿಸಲಾಗಿದೆ. ದೀಪಕದ ಎರಡನೆಯ ಬಗೆಯನ್ನು ಈಗ ಉದಾಹರಿಸುತ್ತಾನೆ. ಪತಿಯ ಸಮೀಪದಲ್ಲಿ ನಾಯಿಕೆಯ ದೂತಿಯು ಹೇಳುವ ಮಾತಿದು. "ಪ್ರಾಣಪತಿ ಎನಿಸಿದ ನೀನು ದೂರದೇಶಕ್ಕೆ ಹೋಗಲು ದುಃಖದಲ್ಲಿರುವ ನಿನ್ನ ಪತ್ನಿಯು ಮನ್ಮಥನ ಬಾಣಕ್ಕೆ ಸಿಲುಕಿ ಒಂದು ಕ್ಷಣಕಾಲ ದಂಡದಂತೆ ಎದ್ದು ನಿಲ್ಲುವಳು, ಮತ್ತೊಂದು ಕ್ಷಣದಲ್ಲಿ ಮಲಗುವಳು, ಒಂದು ಕ್ಷಣದಲ್ಲಿ ನಿನ್ನ ವಾಸದ ಮನೆಗೆ ಬರುವಳು, ಮತ್ತೊಂದು ಕ್ಷಣದಲ್ಲಿ ಅಲ್ಲಿಂದ ಹೊರಡುವಳು." ಇಲ್ಲಿ ಒಬ್ಬ ನಾಯಿಕೆಯಲ್ಲಿಯೇ ಮೇಲಕ್ಕೆ ಏಳು ವಿಕೆ ಮಲಗುವಿಕೆ ಮೊದಲಾದ ಅನೇಕ ಕ್ರಿಯೆಗಳ ಸಂಬಂಧವನ್ನು ಕಲ್ಪಿಸಿರುವುದರಿಂದ ಇದು ದೀಪಕದ ಎರಡನೆಯ ಬಗೆ ಎನಿಸಿದೆ. ಇಲ್ಲಿ ಗುಣಕ್ರಿಯೆಗಳಲ್ಲಿ ಆದಿಮಧ್ಯ ಅವಸಾನಗಳಿರುವುದರಿಂದ ದೀಪಕದಲ್ಲಿ ಮತ್ತೆ ಮೂರು ಬಗೆಗಳಾಗುತ್ತವೆ. ಆ ಬಗೆಯ ವೈಚಿತ್ರ್ಯವು ಎಲ್ಲಾ ಕಡೆಗಳಲ್ಲೂ ಸಾವಿರಾರು ರೀತಿಗಳಲ್ಲಿ ಸಂಭವಿಸುವ ಪ್ರಯುಕ್ತ ಅದನ್ನು ಇಲ್ಲಿ ತಿಳಿಸಿಲ್ಲ.

ಸಾದೃಶ್ಯದ ಮೂಲಕ ತೋರುವ ಅಲಂಕಾರಗಳನ್ನು ನಿರೂಪಿಸುವ ಪ್ರಕರಣವೇ ಪ್ರಕೃತವೆನಿಸಿದ್ದರಿಂದ ಬೇರೊಂದು ರೀತಿಯ ಸಾದೃಶ್ಯದ ಮೂಲಕ ತೋರುವ ಪ್ರತಿ ವಸ್ತೂಪಮೆಯನ್ನು ಈಗ ತಿಳಿಸುತ್ತಾನೆ. ತಾತ್ಪರ್ಯಪರ್ಯಾಲೋಚನೆಯಿಂದಲೇ ಸಾಮ್ಯವನ್ನು ತಿಳಿಸುವ ವಾಕ್ಯಗಳಿಗೆ ಯಾವುದಾದರೊಂದು ಗುಣದಿಂದಲೋ ಕ್ರಿಯೆ ಯಿಂದಲೋ ಸಾಮಾನ್ಯಧರ್ಮವನ್ನು ಬೇರೆಯಾಗಿ ನಿರ್ದೇಶಿಸುವುದೇ ಪ್ರತಿವಸ್ತೂ ಪಮೆ ಎನಿಸುವುದು. ಪ್ರತಿಯೊಂದು ವಸ್ತುವಿನಲ್ಲೂ ಸಾದೃಶ್ಯವನ್ನು ತಿಳಿಸುವುದೇ ಪ್ರತಿ ವಸ್ತೂಪಮೆ. "ಎಲೈ ದಮಯಂತಿ ! ನಿನ್ನ ಸೌಂದರ್ಯವೇ ಮೊದಲಾದ ಗುಣಗಳು ನಳನನ್ನೂ ಸಹ ಆಕರ್ಷಿಸಿದ್ದರಿಂದ ನೀನೇ ಧನ್ಯಳು. ಚಂದ್ರಿಕೆಯು ಸಮುದ್ರವನ್ನೂ ಸಹ ಚಂಚಲಗೊಳಿಸುವುದೆಂಬುದಕ್ಕಿಂತಲೂ ಬೇರೆ ಸ್ತೋತ್ರವು ಯಾವುದಿದ್ದೀತು ?" ಇಲ್ಲಿ ನಳನನ್ನು ಆಕರ್ಷಿಸುವುದೆಂದರೆ ಅವನಿಗೆ ಕಾಮವನ್ನು ಹುಟ್ಟಿಸಿ ಚಂಚಲಗೊಳಿ ಸುವುದು. ಸಮುದ್ರವನ್ನು ಚಂಚಲಗೊಳಿಸುವುದೆಂದರೆ ಅದರಲ್ಲಿ ಪ್ರವಾಹವನ್ನು ಹೆಚ್ಚಿಸಿ ಅಹ್ಲಾದುವಂತೆ ಮಾಡುವುದು. ಇವೆರಡು ಕ್ರಿಯೆಗಳೂ ಒಂದೇ ಬಗೆ ಎನಿಸಿವೆ. ಪುನ ರುಕ್ತಿ ದೋಷವು ಸಂಭವಿಸಿದ್ದರಿಂದಲೇ ಬೇರೆ ಬೇರೆ ಪದಗಳಿಂದ ಅವನ್ನು ತಿಳಿಸಲಾಗಿದೆ. ದಮಯಂತೀಚಂದ್ರಿಕೆಯರಿಗೂ ಹಾಗೆ ನಳಸಮುದ್ರಗಳಿಗೂ ಸಾಮ್ಯವು ತಾತ್ಪರ್ಯ

ಪರ್ಯಾಲೋಚನೆಯಿಂದ ತಿಳಿದುಬರುವುದು. ಇದು ಮಾಲೆಯ ರೂಪದಲ್ಲೂ ಕಂಡು ಬರುವುದು. ಹೀಗೆ ಒಂದು ಕಡೆಯಲ್ಲೂ ಅನೇಕ ಕಡೆಯಲ್ಲೂ ಸಂಭವಿಸುವುದರಿಂದ ದ್ವಯೋಃ ಎಂಬಲ್ಲಿ ದ್ವಿವಚನವು ಅನೇಕವೆಂಬ ಅರ್ಥವನ್ನು ಸೂಚಿಸುತ್ತದೆ. "ಸೂರ್ಯನು ತೇಜೋಮಯನಾದ್ದರಿಂದ ನಿರ್ಮಲನೇ ಆಗಿರುವನು. ಚಂದ್ರನೂ ಹಾಗೆಯೇ ಶುದ್ಧನೇ ಆಗಿರುವನು. ಕನ್ನಡಿಯು ಹಾಗೆಯೇ ಹೆಚ್ಚು ಪ್ರಕಾಶದಿಂದ ನಿರ್ಮಲವೇ ಆಗಿರುವುದು. ಕೈಲಾಸಪರ್ವತವು ಮಹಾದೇವನ ಹಾಸ್ಯಕ್ಕೆ ಸದೃಶವಾದ್ದ ರಿಂದಲೇ ನಿರ್ಮಲವಾಗಿದೆ. ಹಾಗೆಯೇ ಸತ್ಪುರುಷನೂ ಸಹ ಸಹಜಸುಂದರನಾ ಗಿಯೇ ನಿರ್ಮಲನಾಗಿರುವನು" ಇಲ್ಲಿ ಪ್ರತಿಯೊಂದು ವಾಕ್ಯದಲ್ಲಿಯೂ ಬೇರೆ ಬೇರೆ ಧರ್ಮಗಳಿರುವುದರಿಂದ ಹೇಗೆ ಲಕ್ಷಣವು ಅನ್ವಯಿಸುವುದೆಂದರೆ ವಿಮಲ ವಿಶದ ಮೊದ ಲಾದ ಶಬ್ದಗಳಿಂದ ತಾತ್ಪರ್ಯದ ಮೂಲಕ ನೈರ್ಮಲ್ಯವೆಂಬ ಧರ್ಮವನ್ನು ತಿಳಿಸಲಾ ಗಿದೆ. ಬೇರೆ ಬೇರೆ ವಾಕ್ಯಗಳಿಗೆ ಪರಸ್ಪರ ಸಾಮರ್ಥ್ಯವಿಲ್ಲದಿದ್ದರೂ ಇದೇ ಅಲಂಕಾರವು ಸಂಭವಿಸುತ್ತದೆ. "ಚಂದ್ರಿಕೆಯನ್ನು ಪಾನಮಾಡುವುದರಲ್ಲಿ ಚಕೋರಪಕ್ಷಿಗಳೇ ಸಮರ್ಥ ವೆನಿಸಿವೆ. ಹಾಗೆಯೇ ಅವಂತೀದೇಶದಲ್ಲಿ ಹುಟ್ಟಿದ ರಮಣಿಯರನ್ನು ಬಿಟ್ಟರೆ ಬೇರೆ ಸ್ತ್ರೀಯರು ರತಿಲೀಲೆಯಲ್ಲಿ ಅಷ್ಟು ಸಮರ್ಥರಲ್ಲ." ಇಲ್ಲಿ ಚಾತುರ್ಯನೈಪುಣ್ಯವೆನಿ ಸಿದ ಧರ್ಮವು ಒಂದೇ ಆಗಿದೆ. ಆದರೂ ಅವನ್ನು ಬೇರೆ ಶಬ್ದಗಳಿಂದ ತಿಳಿಸಲಾಗಿದೆ. ಒಂದು ವಾಕ್ಯದಲ್ಲಿ ಚಾತುರ್ಯವನ್ನು ತಿಳಿಸಿ ಮತ್ತೊಂದು ವಾಕ್ಯದಲ್ಲಿ 'ನ ನಿಪುಣಾಃ' ಎಂದು ಅನೈಪುಣ್ಯವನ್ನು ತಿಳಿಸಿದ್ದರಿಂದ ವೈಧರ್ಮ್ಯವಿದೆ. ವಾಚ್ಯವಾಗದೆ ತಾತ್ಪರ್ಯ ಪರ್ಯಾಲೋಚನೆಯಿಂದಲೇ ಚಕೋರಪಕ್ಷಿಗಳಿಗೂ ಅವಂತಿದೇಶದ ಸ್ತ್ರೀಯರಿಗೂ ಸಾಮ್ಯವುದೊರಕುವುದರಿಂದ ಇದು ಪ್ರತಿವಸ್ತೂಪಮೆ ಎನಿಸಿದೆ.

ದೃಷ್ಟಾಂತವೂ ಸಹ ಪ್ರಕೃತವೆನಿಸಿದ ವಸ್ತುವನ್ನು ಸಮರ್ಥನಮಾಡುವುದರಿಂದ ಪ್ರತಿವಸ್ತೂಪಮೆಯ ಜಾತಿಗೆ ಸೇರಿರುವುದರಿಂದ ಪ್ರತಿವಸ್ತೂಪಮೆಯನ್ನು ತಿಳಿಸಿಯಾದ ಮೇಲೆ ದೃಷ್ಟಾಂತವನ್ನು ತಿಳಿಸುತ್ತಾನೆ. ಸದೃಶವಾದ ಪದಾರ್ಥವನ್ನು ಪ್ರಕೃತವಸ್ತು ವಿನ ಸಮರ್ಥನೆಗಾಗಿ ಬೇರೊಂದು ವಾಕ್ಯದಲ್ಲಿ ತಿಳಿಸುವುದೇ ದೃಷ್ಟಾಂತವೆನಿಸುವುದು. ಹೀಗೆ ತಿಳಿಸುವುದೇ ಪ್ರತಿಬಿಂಬರೂಪವಾಗಿ ಪ್ರಕೃತಾರ್ಥವನ್ನು ನೆಲೆಗೊಳಿಸುವಿಕೆ ಎನಿಸುವುದು. ಪ್ರತಿವಸ್ತೂಪಮೆಯಲ್ಲಿ ಸಮರ್ಥನೀಯವಾದ ವಾಕ್ಯ,ಸಮರ್ಥಿಸುವ ವಾಕ್ಯ ಇವೆರಡಕ್ಕೂ ಒಂದೇ ಧರ್ಮವಿರುತ್ತದೆ. ಇಲ್ಲಿಯಾದರೋ ಸದೃಶವಾದ ಧರ್ಮ ವಿರುತ್ತದೆ. ಇದೇ ಇವೆರಡಕ್ಕೂ ಇರುವ ಭೇದ. ಇದೂ ಸಹ ಸಾಧರ್ಮ್ಯ, ವೈಧರ್ಮ್ಯ ಇವೆರಡರ ಮೂಲಕ ಎರಡು ಬಗೆ ಎನಿಸಿದೆ. "ಸತ್ಕವಿಗಳ ಮಾತಿನಲ್ಲಿ ಅಡಗಿರುವ ಗುಣ ವನ್ನು ತಿಳಿಯದೇ ಇದ್ದರೂ ಅದನ್ನು ಕೇಳಿದೊಡನೆಯೇ ಕಿವಿಗಳು ಅಮೃತದ ಧಾರೆ ಯನ್ನು ಸುರಿಸುತ್ತವೆ. ಹಾಗೆಯೇ ಮಾಲತೀಪುಷ್ಪಮಾಲೆ ಸುಗಂಧವನ್ನು ಪಡೆಯದೆ ಇದ್ದರೂ ನೇತ್ರವನ್ನು ಆಕರ್ಷಿಸುತ್ತದೆ" ಇಲ್ಲಿ ನೇತ್ರಗಳನ್ನು ಆಕರ್ಷಿಸುವಿಕೆ ಎಂಬ ಧರ್ಮಕ್ಕೆ ಸಮಾನವಾದ ಧರ್ಮವಿರುವ ಮಾಲತೀಮಾಲೆಯೊಡನೆ ಸತ್ಕವಿ

ವಾಕ್ಯಕ್ಕೆ ಸಾಮ್ಯವನ್ನು ತಿಳಿಸುವ ಪದವಿಲ್ಲದ್ದರಿಂದ ಸಾಮ್ಯವು ವ್ಯಂಗ್ಯವಾಗಿ ತೋರುವ ಪ್ರಯುಕ್ತ ಇದು ದೃಷ್ಟಾಂತವೆನಿಸಿದೆ. ಇಲ್ಲಿ ಪನಸ ಹರಣ ಇವೆರಡೂ ಸಹ ಭಾವ ಪದಾರ್ಥಗಳಾದ್ದರಿಂದ ಇವಕ್ಕೆ ಸಾಧರ್ಮ್ಯನಿದೆ, ಪೂರ್ವಾರ್ಧವು ಸಮರ್ಥನೀಯ ವೆನಿಸಿ ಉತ್ತರಾರ್ಧವು ಸಮರ್ಥಕವೆನಿಸಿ ಎರಡು ವಾಕ್ಯಗಳೂ ವಿಶೇಷವೆನಿಸಿವೆ. ವೈಧರ್ಮ್ಯದಿಂದ ತೋರುವ ಅಲಂಕಾರವನ್ನು ಉದಾಹರಿಸುತ್ತಾನೆ. ನಾಯಕನಿಗೆ ನಾಯಿಕೆಯ ದೂತಿಯು ಹೇಳುವ ಮಾತಿದು. "ನಿನ್ನನ್ನು ನೋಡಿದಮೇಲೆ ಕಾಂತೆಯ ಮನೋವ್ಯಥೆಯು ತೊಲಗುತ್ತದೆ. ಹಾಗೆಯೇ ಚಂದ್ರನು ಉದಯಿಸದೇ ಇರಲು ಕನ್ನೈದಿಲೆಗಳ ಸಮೂಹಕ್ಕೆ ವಿಕಾಸವು ತೊಲಗುತ್ತದೆ (ಗ್ಲಾನಿಯುಂಟಾಗುವುದು)" ಇಲ್ಲಿಯೂ ಸಹ ನಾಯಕನನ್ನು ಕಂಡದ್ದರಿಂದ ವಿಕಾಸಗೊಂಡ ಪ್ರಯುಕ್ತವೇ ಸಮಾನ ವಾದ ಧರ್ಮವುಳ್ಳ ಪುಷ್ಪಸಮೂಹದೊಡನೆ ಸಾಮ್ಯವನ್ನು ತಿಳಿಸುವ ಪದವಿಲ್ಲದ್ದರಿಂದ ಸಾಮ್ಯವು ವ್ಯಂಗ್ಯವಾಗಿ ತಿಳಿದುಬರುವ ಪ್ರಯುಕ್ತ ಇದು ದೃಷ್ಟಾಂತವೆನಿಸಿದೆ. ಪೂರ್ವಾರ್ಧದಲ್ಲಿ ಮದನವ್ಯಥೆ ತೊಲಗುವುದನ್ನೂ, ಉತ್ತರಾರ್ಧದಲ್ಲಿ ಗ್ಲಾನಿಯನ್ನೂ ಹೇಳಿರುವುದರಿಂದ ಒಂದು ಭಾವವೂ ಮತ್ತೊಂದು ಅಭಾವವೂ ಆದ ಪ್ರಯುಕ್ತ ಇಲ್ಲಿ ವೈಧರ್ಮ್ಯವಿದೆ. ಬೇರೊಂದು ಸ್ಥಲದಲ್ಲಿ ದೃಷ್ಟಾಂತಪ್ರತಿವಸ್ತೂಪಮೆಗಳಿಗೆ ಸಂದೇಹ ವನ್ನು ತೊಲಗಿಸಲಿಕ್ಕಾಗಿ ಉದಾಹರಿಸುತ್ತಾನೆ. "ವಸಂತಲೇಖೆ ಎಂಬ ನಾಯಿಕೆ ಯಲ್ಲಿಯೇ ಮನಸ್ಸನ್ನು ಅಂಟಿಸಿಕೊಂಡಿರುವ ನಮ್ಮ ಮನಸ್ಸು ಆಕೆಗಿಂತ ಬೇರೆ ಸ್ತ್ರೀಯ ರಲ್ಲಿ ಹೇಗೆ ಅಂಟೀತು? ವಿಕಸಿತವಾದ ಮಲ್ಲಿಗೆಹೂವಿನ ಮಧುವನ್ನು ಕುಡಿಯುವುದರಲ್ಲಿಯೇ ಆಸಕ್ತವಾದ ಭ್ರಮರವು ಬೇರೊಂದು ಲತೆಯನ್ನು ಹೇಗೆ ಬಯಸೀತು ?" ಇಲ್ಲಿ "ಮನಃ ಕುತೋ ನ ?' ಎಂಬುದೂ 'ಕಾಂಕ್ಷತಿ ವಲ್ಲೀಮನ್ಯಾಮ್' ಎಂಬುದೂ ಅಭಾವವೆಂಬ ಒಂದೇ ಅರ್ಥದಲ್ಲಿಯೇ ಕೊನೆಯಾಗುವುದರಿಂದ ಅದು ಪ್ರತಿವಸ್ತೂಪಮೆ ಎನಿಸುವುದು. ಇಲ್ಲಿಯಾದರೋ ಕಿವಿಯಲ್ಲಿ ಅಮೃತಧಾರೆಯನ್ನು ಸುರಿಸುವುದಕ್ಕೂ, ದೃಷ್ಟಿಯನ್ನು ಅಪಹರಿಸುವುದಕ್ಕೂ ಸಾಮ್ಯವಿದೆಯೇ ಹೊರತು ಅಭೇದವಿಲ್ಲ. ಕಾರಕಗಳಿಗೂ, ಕ್ರಿಯೆ ಗಳಿಗೂ ಭೇದವಿರುವುದರಿಂದ ಇಲ್ಲಿ ಕರ್ಮಗಳೂ ಬೇರೆ ಬೇರೆಯೇ ಆಗಿರುವ ಪ್ರಯುಕ್ತ ಸಾಮ್ಯವೇ ಹೊರತು ಅಭೇದವಿಲ್ಲ. ಪ್ರತಿವಸ್ತೂಪಮೆ, ದೃಷ್ಟಾಂತಗಳಂತೆ ಅರ್ಥಾಂತರ ನ್ಯಾಸದಲ್ಲೂ ಪ್ರಥಮವಾಕ್ಯವನ್ನು ದ್ವಿತೀಯವಾಕ್ಯವು ಸಮರ್ಥನಮಾಡುವುದರಿಂದ ಪ್ರತಿವಸ್ತೂಪಮೆ ಮತ್ತು ದೃಷ್ಟಾಂತಗಳಿಗೆ ಭೇದವೇನೆಂಬುದನ್ನು ಈಗ ತಿಳಿಸುತ್ತಾನೆ. ಯುಕ್ತಿಯನ್ನು ತೋರಿಸಿ ಬೇರೊಂದು ವಾಕ್ಯದಿಂದ ದೃಢಪಡಿಸುವ ವಾಕ್ಯವೇ ಸಮರ್ಥ ನೀಯವಾದ ವಾಕ್ಯ. ಯುಕ್ತಿಯ ಮೂಲಕ ಬೇರೊಂದು ವಾಕ್ಯವನ್ನು ದೃಢಪಡಿಸುವ ವಾಕ್ಯವೇ ಸಮರ್ಥಕವಾಕ್ಯ. ಅರ್ಥಾಂತರನ್ಯಾಸದಲ್ಲಿ ಸಮರ್ಥನೀಯವಾದ ವಾಕ್ಯವು ಸಾಮಾನ್ಯವೆನಿಸಿದ್ದು ಬೇರೊಂದು ವಾಕ್ಯವು ವಿಶೇಷವೆನಿಸಿರುವುದು. ಅಥವಾ ಸಮರ್ಥಕ ವಾಕ್ಯವು ಸಾಮಾನ್ಯವೆನಿಸಿದ್ದರೆ ಮತ್ತೊಂದು ವಾಕ್ಯವು ವಿಶೇಷವೆನಿಸಿರುವುದು. ದೃಷ್ಟಾಂತ ಮತ್ತು ಪ್ರತಿವಸ್ತೂಪಮೆಗಳಲ್ಲಿ ಸಮರ್ಥ್ಯಸಮರ್ಥಕವಾಕ್ಯಗಳಿಗೆ ಇಂತಹ

ಸಾಮಾನ್ಯವಿಶೇಷಭಾವವಿಲ್ಲ. ಅರ್ಥಾಂತರನ್ಯಾಸಂದಂತೆ ಇಲ್ಲಿಯೂ ಸಮರ್ಥ್ಯ ಸಮರ್ಥಕಭಾವವಿದ್ದರೂ ವಾಕ್ಯಗಳಲ್ಲಿ ಮೊದಲನೆಯದು ಸಾಮಾನ್ಯವಾದರೆ ಎರಡನೆ ಯದು ವಿಶೇಷವೆಂದಾಗಲೀ, ಮೊದಲನೆಯದು ವಿಶೇಷವಾದರೆ ಎರಡನೆಯದು ಸಾಮಾನ್ಯವೆಂದಾಗಲೀ ನಿಯಮವಿಲ್ಲ; ಆವರೆ ಎರಡು ವಾಕ್ಯಗಳೂ ಸಾಮಾನ್ಯವೋ ಅಥವಾ ವಿಶೇಷವೋ ಆಗಿರುತ್ತವೆ. ಇದೇ ಇವೆರಡು ಅಲಂಕಾರಗಳಿಗೂ ಅರ್ಥಾಂತರ ನ್ಯಾಸಕ್ಕೂ ಇರುವ ಭೇದವೆನಿಸಿದೆ.

ಸಂಭವನ್ ವಸ್ತುಸಂಬಂಧೋಽಸಂಭವನ್ ವಾಪಿ ಕುತ್ರಚಿತ್ ।
ಯತ್ರ ಬಿಂಬಾನುಬಿಂಬತ್ವಂ ಬೋಧಯೇತ್ಸಾ ನಿರ್ದರ್ಶನಾ ॥

ತತ್ರ ಸಂಭವದ್ವಸ್ತುಸಂಬಂಧನಿದರ್ಶನಾ ಯಥಾ—

ಕೋಽತ್ರ ಭೂಮಿವಲಯೇ ಜನಾನ್ಮುಧಾ ತಾಪಯನ್ ಸುಚಿರಮೇತಿ ಸಂಪದಮ್ ।
ವೇದಯನ್ನಿತಿ ದಿನೇನ ಭಾನುಮಾನ್ ಆಸಸಾದ ಚರಮಾಚಲಂ ತತಃ ॥

ಅತ್ರ ರವೇರೀದೃಶಾರ್ಥವೇದನಕ್ರಿಯಾಯಾಂ ಕರ್ತೃತ್ವೇನಾನ್ವಯಃ ಸಂಭವ ತ್ಯೇವ, ಈದೃಶಾರ್ಥಜ್ಞಾಪನಸಮರ್ಥಚರಮಾಚಲಪ್ರಾಪ್ತಿರೂಪಧರ್ಮವತ್ತ್ವಾತ್. ಸ ಚ ರವೇರಸ್ತಾಚಲಗಮನಸ್ಯ ಪರತಾಪಿನಾಂ ವಿಪತ್ಪ್ರಾಪ್ತೇಶ್ಚ ಬಿಂಬಪ್ರತಿಬಿಂಬಭಾವಂ ಬೋಧಯತಿ.

ಅಸಂಭವದ್ವಸ್ತುಸಂಬಂಧನಿದರ್ಶನಾ ತ್ವೇಕವಾಕ್ಯಾನೇಕವಾಕ್ಯಗತತ್ವೇನ ದ್ವಿವಿಧಾ. ತತ್ರೈಕವಾಕ್ಯಗಾ ಯಥಾ—

ಕಲಯತಿ ಕುವಲಯಮಾಲಾ ಲಲಿತಂ ಕುಟಿಲಃ ಕಟಾಕ್ಷವಿಕ್ಷೇಪಃ ।
ಅಧರಃ ಕಿಸಲಯಲೀಲಾಮಾನನಮಸ್ಯಾಃ ಕಲಾನಿಧೇರ್ವಿಲಾಸಮ್ ॥

ಅತ್ರ ಅನ್ಯಸ್ಯ ಧರ್ಮಂ ಕಥಮನ್ಯೋ ವಹತ್ವಿತಿ ಕಟಾಕ್ಷವಿಕ್ಷೇಪಾದೀನಾಂ ಕುವಲಯಮಾಲಾದಿಗತಲಲಿತಾದೀನಾಂ ಕಲನಮಸಂಭವತ್ ತಲ್ಲಲಿತಾದಿಸದೃಶಂ ಲಲಿತಾದಿಕಮವಗಮಯತ್ ಕಟಾಕ್ಷವಿಕ್ಷೇಪಾದೇಃ ಕುವಲಯಮಾಲಾದೇಶ್ಚ ಬಿಂಬ ಪ್ರತಿಬಿಂಬಭಾವಂ ಬೋಧಯತಿ. ಯಥಾ ವಾ—

ಪ್ರಯಾಣೇ ತವ ರಾಜೇಂದ್ರ ! ಮುಕ್ತಾ ವೈರಿಮೃಗೀದೃಶಾಮ್ ॥
ರಾಜಹಂಸಗತಿಃ ಪದ್ಭ್ಯಾಮಾನನೇನ ಶಶಿದ್ಯುತಿಃ ॥

ಅತ್ರ ಪಾದಾಭ್ಯಾಂ ಅಸಂಬದ್ಧರಾಜಹಂಸಗತೇಸ್ತ್ಯಾಗೋಽನುಪಪನ್ನ ಇತಿ ತಯೋಸ್ತತ್ಸಂಬಂಧಃ ಕಲ್ಪ್ಯತೇ. ಸ ಚ ಅಸಂಭವನ್ ರಾಜಹಂಸಗತಿಮಿವ ಗತಿಂ ಬೋಧಯತಿ. ಅನೇಕವಾಕ್ಯಗಾ ಯಥಾ—

ಇದಂ ಕಿಲಾವ್ಯಾಜಮನೋಹರಂ ವಪುಸ್ತಪಃಕ್ಷಮಂ ಸಾಧಯಿತುಂ ಯ ಇಚ್ಛತಿ ।
ಧ್ರುವಂ ಸ ನೀಲೋತ್ಪಲಪತ್ರಧಾರಯಾ ಶಮೀಲತಾಂ ಛೇತ್ತುಮೃಷಿರ್ವ್ಯವಸ್ಯತಿ ॥

ಅತ್ರ ಯತ್ತಚ್ಛಬ್ದನಿರ್ದಿಷ್ಟವಾಕ್ಯಾರ್ಥಯೋರಭೇದೇನಾನ್ವಯೋಽನುಪಪದ್ಯ ಮಾನಸ್ತಾದೃಶವಪುಷಸ್ತಪಃಕ್ಷಮತ್ವಸಾಧನೇಚ್ಛಾ ನೀಲೋತ್ಪಲಪತ್ರಧಾರಯಾ ಶಮೀ

ಬತಾಚ್ಛೇದನೇಚ್ಛೇವೇತಿ ಬಿಂಬಪ್ರತಿಬಿಂಬಭಾವೇ ಪರ್ಯವಸ್ಯತಿ. ಯಥಾ ವಾ—

ಜನ್ಮೇದಂ ವಂಧ್ಯತಾಂ ನೀತಂ ಭವಭೋಗೋಪಲಿಪ್ಸಯಾ ।
ಕಾಚಮೂಲ್ಯೇನ ವಿಕ್ರೀತೋ ಹಂತ ಚಿಂತಾಮಣಿರ್ಯಥಾ ॥

ಅತ್ರ ಭವಭೋಗಲೋಭೇನ ಜನ್ಮನೋ ವ್ಯರ್ಥತಾನಯನಂ ಕಾಚಮೂಲ್ಯೇನ ಚಿಂತಾಮಣಿವಿಕ್ರಯ ಇವೇತಿ ಪರ್ಯವಸಾನಮ್. ಏವಮ್—

ಕ್ವ ಸೂರ್ಯಪ್ರಭವೋ ವಂಶಃ ಕ್ವ ಚಾಲ್ಪವಿಷಯಾ ಮತಿಃ ।
ತಿತೀರ್ಷುರ್ದುಸ್ತರಂ ಮೋಹಾದುಡುಪೇನಾಸ್ಮಿ ಸಾಗರಮ್ ॥

ಅತ್ರ ಮನ್ಮತ್ಯಾ ಸೂರ್ಯವಂಶವರ್ಣನಮುಡುಪೇನ ಸಾಗರತರಣಮಿವೇತಿ ಪರ್ಯವಸಾನಮ್.

ಇಯಂ ಕ್ವಚಿದುಪಮೇಯವೃತ್ತ್ಯೋಪಮಾನೇ ಅಸಂಭವೇಽಪಿ ಭವತಿ ಯಥಾ.

ಯೋಽನುಭೂತಃ ಕುರಂಗಾಕ್ಷ್ಯಾಸ್ತಸ್ಯಾ ಮಧುರಿಮಾಧರೇ ।
ಸಮಾಸ್ವಾದಿ ಸ ಮೃದ್ವೀಕಾ ರಸೇ ರಸವಿಶಾರದೈಃ ।

ಅತ್ರ ಪ್ರಕೃತಸ್ಯಾಧರಸ್ಯ ಮಧುರಿಮಧರ್ಮಸ್ಯ ದ್ರಾಕ್ಷಾರಸೇ ಅಸಂಭವಾತ್ ಪೂರ್ವವತ್ ಸಾಮ್ಯೇ ಪರ್ಯವಸಾನಮ್. ಮಾಲಾರೂಪಾಪಿ ಯಥಾ—

ಕ್ಷಿಪಸಿ ಶುಕಂ ವೃಕ್ಷದಂಶಕವದನೇ ಮೃಗಮರ್ಪಯಸಿ ಮೃಗಾದನರದನೇ ।
ವಿತರಸಿ ತುರಗಂ ಮಹಿಷವಿಷಾಣೇ ನಿದಧಚ್ಚೇತೋ ಭೋಗವಿತಾನೇ ॥

ಇಹ ಬಿಂಬಪ್ರತಿಬಿಂಬತಾಕ್ಷೇಪಂ ವಿನಾ ವಾಕ್ಯಾರ್ಥಾಪರ್ಯವಸಾನಮ್, ದೃಷ್ಟಾಂತೇ ತು ಪರ್ಯವಸಿತೇನ ವಾಕ್ಯಾರ್ಥೇನ ಸಾಮರ್ಥ್ಯಾತ್ ಪ್ರತಿಬಿಂಬತಾಪ್ರತ್ಯಾಯನಮ್. ನಾಪೀಯಮರ್ಥಾಪತ್ತಿಃ. ತತ್ರ 'ಹಾರೋಽಯಂ ಹರಿಣಾಕ್ಷೀಣಾಮ್' ಇತ್ಯಾದೌ ಸಾದೃಶ್ಯಪರ್ಯವಸಾನಾಭಾವಾತ್.

ಪ್ರಕೃತ ಸಂದರ್ಭಕ್ಕೆ ಅನುಗುಣವೆನಿಸಿದ ನಿದರ್ಶನಾಲಂಕಾರವನ್ನು ವಿವರಿಸುತ್ತಾನೆ. ಪದಾರ್ಥಗಳಿಗೆ ಯಾವ ಬಾಧೆಯೂ ಇಲ್ಲದೆ ಎಲ್ಲಿಯಾದರೊಂದು ಕಡೆ ಅನ್ವಯ ಉಂಟಾದರೂ ಅಥವಾ ಆಗದೇ ಇದ್ದರೂ ಅವುಗಳಿಗೆ ಉಪಮಾನೋಪಮೇಯಭಾವವನ್ನು ತಿಳಿಸುವುದೇ ನಿದರ್ಶನೆ ಎನಿಸುವುದು. ಹೀಗೆ ಸಾದೃಶ್ಯವನ್ನು ಕಲ್ಪಿಸುವುದರಲ್ಲಿ ಕೊನೆಯಾಗುವ ವಾಕ್ಯಾರ್ಥವೇ ನಿದರ್ಶನೆ ಎಂದು ಹೇಳಿದಂತಾಯಿತು. ಸಂಭವದ್ವಸ್ತುಸಂಬಂಧ ಮತ್ತು ಅಸಂಭವದ್ವಸ್ತುಸಂಬಂಧವೆಂದು ಇದು ಎರಡು ಬಗೆಯಾಗಿದೆ. ದೃಷ್ಟಾಂತಾಲಂಕಾರದಲ್ಲಿ ವಾಕ್ಯಗಳೆರಡಕ್ಕೆ ಸಾಮಾನ್ಯವಿಶೇಷಭಾವವಿಲ್ಲ. ಸಂಭವದ್ವಸ್ತುಸಂಬಂಧನಿದರ್ಶನೆಯಲ್ಲೂ ಅರ್ಥಾಂತರನ್ಯಾಸದಲ್ಲೂ ವಾಕ್ಯಗಳಿಗೆ ಸಾಮಾನ್ಯವಿಶೇಷಭಾವವಿದೆ. ಅರ್ಥಾಂತರನ್ಯಾಸವಲ್ಲಿ ಎರಡನೆಯ ವಾಕ್ಯವು ಮೊದಲನೆಯ ವಾಕ್ಯವನ್ನು ಸಮರ್ಥನಮಾಡುತ್ತದೆ. ಸಂಭವದ್ವಸ್ತುಸಂಬಂಧನಿದರ್ಶನೆಯಲ್ಲಿ ಹಾಗೆ ಸಮರ್ಥನಮಾಡುವುದಿಲ್ಲ. ಅಸಂಭವದ್ವಸ್ತುಸಂಬಂಧನಿದರ್ಶನೆಯಲ್ಲಾದರೋ ವಾಕ್ಯಾರ್ಥಗಳಿಗೆ ಹೊಂದಿಕೆ ಇರುವುದಿಲ್ಲ ; ದೃಷ್ಟಾಂತ

ಅರ್ಥಾಂತರ ನಿದರ್ಶನೆಗಳಲ್ಲಾದರೋ ಹಾಗೆ ಇರುವುದಿಲ್ಲ. ಇವುಗಳಲ್ಲಿ ಸಂಭವದ್ವಸ್ತು ನಿದರ್ಶನೆಯನ್ನು ಉದಾಹರಿಸುತ್ತಾನೆ. "ಈ ಭೂಮಂಡಲದಲ್ಲಿ ನಿರರ್ಥಕವಾಗಿ ಜನರಿಗೆ ತಾಪವನ್ನು ಕೊಡುತ್ತ ಯಾವನು ತಾನೆ ಬಹುಕಾಲ ಸಂತೋಷಸಮೃದ್ಧಿಗಳನ್ನು ಪಡೆದಾನು ? ಸೂರ್ಯನು ಹಗಲಿನಿಂದ ಹೀಗೆ ಬೋಧಿಸುತ್ತಲೇ ಸಾಯಂಕಾಲದಲ್ಲಿ ಅಸ್ತನಾದನು"ಇಲ್ಲಿ ರವಿಗೆ ಇಂತಹ ಅರ್ಥವನ್ನು ತಿಳಿಸುವ ಕಾರ್ಯದಲ್ಲಿ ಕರ್ತೃವಾಗಿ ಅನ್ವಯವು ಸಂಭವಿಸುತ್ತದೆ. ಇಂತಹ ಅರ್ಥವನ್ನು ಬೋಧಿಸಲು ಸಮರ್ಥವೆನಿಸಿದಂತೆಯೇ ಅವನಲ್ಲಿ ಅಸ್ತನಾಗುವ ಧರ್ಮವೂ ಇರುವುದರಿಂದ ಅವನು ಬೋಧನಕ್ರಿಯೆಗೆ ಕರ್ತನಾಗಿರುವನು. ಆ ಬಗೆಯ ಅನ್ವಯವೇ ಅವನು ಅಸ್ತಾಚಲಕ್ಕೆ ಹೋಗುವುದಕ್ಕೂ ಬೇರೆಯವರನ್ನು ನೋಯಿಸುವವರಿಗೆ ವಿಪತ್ತು ಬದಗುವುದಕ್ಕೂ ಉಪಮಾನೋಪಮೇಯಭಾವವನ್ನು ಬೋಧಿಸುತ್ತದೆ. "ರವಿಯು ಹೇಗೆ ಬೇರೆಯವರನ್ನು ವ್ಯರ್ಥವಾಗಿ ಗೋಳಾಡಿಸುತ್ತ ಅಸ್ತನಾಗುವನೋ ಹಾಗೆ ಬೇರೊಬ್ಬನೂ ಸಹ ಇತರರನ್ನು ನಿರರ್ಥವಾಗಿ ಸಂತಾಪಗೊಳಿಸುತ್ತ ವಿಪತ್ತನ್ನು ಹೊಂದುವನು ಈ ಬಗೆಯ ಉಪಮಾನೋಪಮೇಯಭಾವವನ್ನು ಬೋಧನಕ್ರಿಯೆಯಲ್ಲಿ ರವಿಗೆ ಇರುವ ಕರ್ತೃತ್ವಸಂಬಂಧವು ಸೂಚಿಸುತ್ತದೆ.

ಅಸಂಭವದ್ವಸ್ತುಸಂಬಂಧನಿದರ್ಶನೆಯು ಏಕ ವಾಕ್ಯದಲ್ಲೂ ಅನೇಕ ವಾಕ್ಯಗಳಲ್ಲೂ ಸಂಭವಿಸುವುದರಿಂದ ಎರಡು ಬಗೆಯಾಗುತ್ತದೆ. ಅವುಗಳಲ್ಲಿ ಏಕವಾಕ್ಯಗತವಾದ ನಿದರ್ಶನೆ ಹೀಗಿದೆ. "ಈ ನಾಯಿಕೆಯ ವಕ್ರವಾದ ಓರೆನೋಟವು ಕನ್ನೈದಿಲೆಗಳ ಮಾಲೆಯ ಸೌಂದರ್ಯವನ್ನೂ, ತುಟಿಯು ಚಿಗುರಿನ ವಿಲಾಸವನ್ನೂ ಹಾಗೆಯೇ ಮುಖವು ಚಂದ್ರನ ಶೋಭೆಯನ್ನೂ ಪಡೆದಿವೆ" ಇಲ್ಲಿ ಒಂದು ವಸ್ತುವಿನ ಧರ್ಮವನ್ನು ಮತ್ತೊಂದು ವಸ್ತುವು ಹೇಗೆ ಪಡೆದೀತು ? ಎಂಬ ಬಾಧವಿರುವ ಪ್ರಯುಕ್ತ ಓರೆನೋಟ ಮೊದಲಾದವು ಕನ್ನೈದಿಲೆಗಳ ಮಾಲೆಯ ಸೌಂದರ್ಯ ಮೊದಲಾದವುಗಳನ್ನು ಧರಿಸುತ್ತವೆ ಎಂಬುದು ಸಂಭವಿಸದೆ ಇರುವುದರಿಂದ ಅವುಗಳ ಸೌಂದರ್ಯಕ್ಕೆ ಸದೃಶವಾದ ಸೌಂದರ್ಯವು ಅಲ್ಲಿ ಇತ್ತೆಂದು ತಿಳಿಸುವ ಪ್ರಯುಕ್ತ ಓರೆನೋಟ ಮೊದಲಾದವುಗಳಿಗೂ ಕನ್ನೈದಿಲೆಗಳ ಮಾಲೆ ಮೊದಲಾದವುಗಳಿಗೂ ಉಪಮಾನೋಪಮೇಯಭಾವದ ಮೂಲಕ ಸಾದೃಶ್ಯವನ್ನು ಇಲ್ಲಿ ಸೂಚಿಸಲಾಗಿದೆ. ಇದಕ್ಕೆ ಬೇರೊಂದು ಉದಾಹರಣವನ್ನು ತಿಳಿಸುತ್ತಾನೆ. "ಎಲೈರಾಜೇಂದ್ರನೇ, ನೀನು ಶತ್ರುಗಳ ಆಕ್ರಮಣಕ್ಕೆ ಹೊರಡಲು ಶತ್ರುಸ್ತ್ರೀಯರ ಪಾದಗಳು ರಾಜಹಂಸಗಳ ಗಮನವನ್ನೂ, ಮುಖವು ಚಂದ್ರನ ಕಾಂತಿಯನ್ನೂ ತೊರೆದವು. ಭಯದಿಂದ ಶತ್ರುಸ್ತ್ರೀಯರು ಮೆಲ್ಲಗೆ ನಡೆಯಲಾರಂಭಿಸಿದರು. ಮುಖದ ಪ್ರಕಾಶವು ನಷ್ಟವಾಯಿತು." ಇಲ್ಲಿ ಪಾದಗಳಿಗೆ ಸಂಬಂಧಿಸದೇ ಇರುವ ರಾಜಹಂಸಗಳ ಗಮನವನ್ನು ಅವು ತೊರೆದವೆಂಬುದು ಹೊಂದದೆ ಇರುವುದರಿಂದ ಅವುಗಳಿಗೆ ಅದರ ಸಂಬಂಧವನ್ನು ಕಲ್ಪಿಸಲಾಗಿದೆ. ಆ ಬಗೆಯ ಕಲ್ಪನೆಯು ಸಂಭವಿಸದೇ ಇದ್ದರೂ ರಾಜಹಂಸಗಳ ಗಮನದಂತೆ ಶತ್ರುಸ್ತ್ರೀಯರ ಗಮನವಿತ್ತೆಂಬುದನ್ನು ಬೋಧಿಸುತ್ತದೆ.

ಅನೇಕ ವಾಕ್ಯಗಳಲ್ಲಿರುವ ನಿದರ್ಶನೆಯನ್ನು ಉದಾಹರಿಸುತ್ತಾನೆ. "ಸಹಜವಾಗಿ ಸುಂದರವಾಗಿರುವ ಈ ಶರೀರದಿಂದ ತಪಸ್ಸಿನ ಕ್ಲೇಶವನ್ನು ಸಾಧಿಸಲು ಯಾವನು ಇಚ್ಛಿಸುವನೋ ಅಂತಹ ಋಷಿಯು ನಿಜವಾಗಿಯೂ ಕನ್ನೈದಿಲೆಯ ದಳದಿಂದ ಶಮೀಲತೆಯನ್ನು ಛೇದಿಸಲು ಏರ್ಪಡಿಸುತ್ತಾನೆ." ಇಲ್ಲಿ ಯತ್ ತತ್ ಪದಗಳಿಂದ ತಿಳಿಸಲ್ಪಟ್ಟಿರುವ ವಾಕ್ಯಾರ್ಥಗಳಿಗೆ ಅಭೇದಸಂಬಂಧದಿಂದ ಅನ್ವಯವು ಹೊಂದದೇ ಇದ್ದು ಅಂತಹ ಶರೀರದಿಂದ ಕಠಿಣವಾದ ತಪಸ್ಸನ್ನು ಸಾಧಿಸಬೇಕೆಂಬ ಇಚ್ಛೆಯು ಕನ್ನೈದಿಲೆಯ ದಳದಿಂದ ಶಮೀಲತೆಯನ್ನು ಕತ್ತರಿಸಬೇಕೆಂಬ ಇಚ್ಛೆಯಂತೆ ಇದೆ ಎಂಬ ಉಪಮಾನೋಪಮೇಯಭಾವವನ್ನು ಸೂಚಿಸುತ್ತದೆ. ಬೇರೊಂದು ರೀತಿಯಿಂದ ವಸ್ತುಸಂಬಂಧವು ಸಂಭವಿಸದೇ ಇರುವುದನ್ನು ಶಾಂತಿಶತಕದ ಈ ಪದ್ಯದಲ್ಲಿ ಉದಾಹರಿಸುತ್ತಾನೆ. "ತುಚ್ಛವಾದ ಸಾಂಸಾರಿಕಸುಖವನ್ನು ಭೋಗಿಸಬೇಕೆಂಬ ಆಶೆಯಿಂದ ಈ ಜನ್ಮವನ್ನು ನಿಷ್ಫಲಗೊಳಿಸಿದ್ದಾಯಿತು. ಅಯ್ಯೋ! ದುರ್ಲಭವಾದ ಮಹಾರತ್ನವನ್ನು ಗಾಜಿನ ಚೂರಿಗೆ ಮಾರಿದ್ದಾಯಿತು." ಇಲ್ಲಿ ಸಂಸಾರದ ಭೋಗವನ್ನು ಅನುಭವಿಸಬೇಕೆಂಬ ಆಶೆಯಿಂದ ಜನ್ಮವನ್ನು ವ್ಯರ್ಥಗೊಳಿಸಿದ್ದು ಗಾಜಿನ ಚೂರಿಗೆ ಚಿಂತಾಮಣಿಯನ್ನು ವಿಕ್ರಯಿಸಿದಂತಾಯಿತೆಂಬ ಅರ್ಥದಲ್ಲಿ ಕೊನೆಗಾಣುವುದು. ಬೇರೆ ರೀತಿಯಲ್ಲಿ ಇದನ್ನೇ ಉದಾಹರಿಸುತ್ತಾನೆ. "ಸೂರ್ಯವಂಶವೆಲ್ಲಿ? ಅಲ್ಪವಿಷಯವೆನಿಸಿದ ಈ ಮತಿ ಎಲ್ಲಿ? ಚಿತ್ತವೈಕಲ್ಯದಿಂದ ಭೀಕರವಾದ ಸಾಗರವನ್ನು ಸಣ್ಣ ದೋಣಿಯಿಂದ ದಾಟಲು ಇಚ್ಛಿಸಿದ್ದೇನೆ" ಇಲ್ಲಿ ದೋಣಿಯನ್ನು ತೆಗೆದುಕೊಂಡು ಸಾಗರವನ್ನು ದಾಟಬೇಕೆಂಬ ಇಚ್ಛೆ ಕಾಳಿದಾಸನಿಗೆ ಇರಲಿಲ್ಲವಾದರೂ, ತಿತೀರ್ಷುಃ ಎಂಬುವಕ್ಕೆ ಅಸ್ಮಿ ಎಂಬುದರೊಡನೆ ಕರ್ತೃತ್ವಸಂಬಂಧವು ಸಂಭವಿಸದೆ ಇದ್ದರೂ "ನನ್ನ ಈ ಅಲ್ಪಮತಿಯಿಂದ ಸೂರ್ಯವಂಶವನ್ನು ವರ್ಣಿಸುವುದು ದೋಣಿಯಿಂದ ಸಾಗರವನ್ನು ದಾಟಿದಂತಾಯಿತು." ಎಂಬ ಸಾದೃಶ್ಯವನ್ನು ಬೋಧಿಸುತ್ತದೆ. ಉಪಮೇಯದ ಸ್ಥಾನದಲ್ಲಿರುವ ಉಪಮಾನವು ಅಸಂಭವವೆನಿಸಿದ್ದರೂ ಅಲ್ಲಿ ಸಂಭವದ್ವಸ್ತುಸಂಬಂಧನಿದರ್ಶನೆಯನ್ನೇ ಹೇಳಬೇಕು. "ಆ ನಾಯಿಕೆಯ ಕೆಳತುಟಿಯಲ್ಲಿ ಯಾವ ಮಾಧುರ್ಯವನ್ನು ರಸಿಕರುಬಗೆಯ ಅನುಭವಿಸಿದರೋ ಅದನ್ನೇ ದ್ರಾಕ್ಷಾರಸದಲ್ಲೂ ಚೆನ್ನಾಗಿ ಅನುಭವಿಸಿದರು" ಇಲ್ಲಿ ಪ್ರಕೃತ ಉಪಮೇಯವೆನಿಸಿದ ಅಧರದಲ್ಲಿ ಇರುವ ಮಾಧುರ್ಯವು ಉಪಮಾನವೆನಿಸಿದ ದ್ರಾಕ್ಷಾರಸದಲ್ಲಿ ಇಲ್ಲದೇ ಇರುವ ಪ್ರಯುಕ್ತ ಸಾಮ್ಯದಲ್ಲಿ ಕೊನೆಯಾಗುವುದು. ದ್ರಾಕ್ಷಾರಸದಲ್ಲಿ ತುಟಿಯ ಮಾಧುರ್ಯವಿತ್ತೆಂದು ಅಭೇದಸಂಬಂಧವು ಅಸಂಭವವೆನಿಸಿದ್ದರಿಂದ ತುಟಿಯ ಮಾಧುರ್ಯಕ್ಕೆ ಸದೃಶವಾದ ಮಾಧುರ್ಯವಿತ್ತೆಂದು ಸಾಮ್ಯದಲ್ಲಿ ಕೊನೆಯಾಗುತ್ತದೆ. ಒಂದೇ ಕಡೆಯಲ್ಲಿ ಅನೇಕ ಬಗೆಯಾಗಿಯೂ ಈ ನಿದರ್ಶನೆಯು ಸಂಭವಿಸುವುದು. ಒಬ್ಬ ಜ್ಞಾನಿಯು ಸಂಸಾರದಲ್ಲಿ ಆಸಕ್ತರಾದ ಜನರನ್ನು ಕುರಿತು ಹೇಳುವ ಮಾತಿದು. 'ಸಾಂಸಾರಿಕಸುಖವನ್ನು ವಿಶೇಷವಾಗಿ ಅನುಭವಿಸುವುದರಲ್ಲಿಯೆ ಮನಸ್ಸನ್ನು ನೆಲೆಗೊಳಿಸಿದ ನೀನು ಬೆಕ್ಕಿನ ಬಾಯಲ್ಲಿ ಗಿಳಿಯನ್ನು ಇರಿಸುವೆ; ಹುಲಿಯ

ಬಾಯಲ್ಲಿ ಜಿಂಕೆಯನ್ನು ಇರಿಸುವೆ; ಎಮ್ಮೆಯ ಕೊಂಬಿನಲ್ಲಿ ಕುದುರೆಯನ್ನು ಇರಿಸುವೆ."
ಇಲ್ಲಿ ಭೋಗದಲ್ಲಿ ನೆಲಸಿದವನು ಬೆಕ್ಕಿನ ಬಾಯಲ್ಲಿ ಗಿಳಿಯನ್ನು ಅರ್ಪಿಸುವನೆಂದು ಅಭೇದಸಂಬಂಧವು ಸಂಭವಿಸದೇ ಇದ್ದರೂ ಇಂತಹ ನಿದರ್ಶನೆಯು ಬೆಕ್ಕಿನ ಬಾಯಲ್ಲಿ ಗಿಳಿಯನ್ನು ಇರಿಸಿದಂತೆ ಅನರ್ಥಕ್ಕೆ ಮೂಲವೆನಿಸುವುದೆಂದು ಉಪಮಾನೋಪಮೇಯ ಭಾವವನ್ನು ತಿಳಿಸುತ್ತದೆ. ಹೀಗೆ ತಿಳಿಸುವುದು ಅನೇಕ ಬಗೆಯಾದ್ದರಿಂದ ಈ ನಿದರ್ಶನೆಯು ಮಾಲೆ ಎನಿಸಿದೆ. ದೃಷ್ಟಾಂತದಂತೆ ಇಲ್ಲಿಯೂ ಸಾದೃಶ್ಯವು ಬೇರೆಯಾಗಿ ತಿಳಿದುಬರುವ ಪ್ರಯುಕ್ತ ಇವೆರಡಕ್ಕೂ ಭೇದವೇನೆಂಬುದನ್ನು ತಿಳಿಸುತ್ತಾನೆ. ಅಸಂಭವ ದ್ವಸ್ತುಸಂಬಂಧವೆನಿಸಿದ ನಿದರ್ಶನೆಯಲ್ಲಿ ಉಪಮಾನೋಪಮೇಯಭಾವವನ್ನು ಕಲ್ಪಿಸದೇ ಇದ್ದರೆ ವಾಕ್ಯಾರ್ಥವೇ ಕೊನೆಯಾಗುವುದಿಲ್ಲ. ದೃಷ್ಟಾಂತದಲ್ಲಾದರೋ ಯುಕ್ತವೆನಿಸಿದ್ದರಿಂದ ತಾನಾಗಿಯೇ ಕೊನೆಗಾಣುವ ವಾಕ್ಯಾರ್ಥವೇ ಯೋಗ್ಯತೆಯಿಂದ ಉಪಮಾನೋಪಮೇಯಭಾವವನ್ನು ತಿಳಿಸುತ್ತದೆ. ನಿದರ್ಶನೆಯಲ್ಲಿ ಸ್ವತಃ ತೋರುವ ಅನುಪಪತ್ತಿಯಿಂದ ಉಪಮಾನೋಪಮೇಯಭಾವದ ಕಲ್ಪನೆಯಿಂದಲೇ ವಾಕ್ಯಾರ್ಥವು ಹೊಂದಿಕೆಯಾಗುತ್ತದೆ. ದೃಷ್ಟಾಂತದಲ್ಲಾದರೋ ಅಂತಹ ಅನುಪಪತ್ತಿ ಇಲ್ಲದ್ದರಿಂದ ತಾನಾಗಿಯೇ ಹೊಂದಿಕೆಯಾಗುವ ವಾಕ್ಯಾರ್ಥವೇ ಯೋಗ್ಯತೆಯಿಂದ ಉಪಮಾನೋಪಮೇಯಭಾವವನ್ನು ಕಲ್ಪಿಸುತ್ತದೆ. ಹೀಗೆ ಉಪಮಾನೋಪಮೇಯ ಭಾವದ ಕಲ್ಪನೆಯು ಹಿಂದು ಮುಂದಾಗುವ ಪ್ರಯುಕ್ತ ಇವೆರಡಕ್ಕೂ ಭೇದವಿದೆ.

ಆಧಿಕ್ಯಮುಪಮೇಯಸ್ಯೋಪಮಾನಾನ್ನ್ಯೂನತಾಽಥವಾ ।
ವ್ಯತಿರೇಕ ಏಕ ಉಕ್ತೇ ಹೇತೌ ನೋಕ್ತೇ ಸ ಚ ತ್ರಿಧಾ ॥
ಚತುರ್ವಿಧೋಽಪಿ ಸಾಮ್ಯಬೋಧನಾಚ್ಛಬ್ದತೋಽರ್ಥತಃ ।
ಆಕ್ಷೇಪಾಚ್ಚ ದ್ವಾದಶಧಾ ಶ್ಲೇಷೇಽಪೀತಿ ತ್ರಿರಷ್ಟಧಾ ॥
ಪ್ರತ್ಯೇಕಂ ಸ್ಯಾನ್ಮಿಲಿತ್ವಾಷ್ಟಚತ್ವಾರಿಂಶದ್ವಿಧಃ ಪುನಃ

ಉಪಮೇಯಸ್ಯ ಉಪಮಾನಾದಾಧಿಕ್ಯೇ ಹೇತುರುಪಮೇಯಗತಂ ಉತ್ಕರ್ಷಕಾರಣಂ, ಉಪಮಾನಗತಂ ನಿಕರ್ಷಕಾರಣಂ ಚ ತಯೋರ್ದ್ವಯೋರಪ್ಯುಕ್ತಾವೇಕಃ ಪ್ರತ್ಯೇಕಂ ಸಮುದಾಯೇನ ವಾ ಅನುಕ್ತೌ ತ್ರಿವಿಧ ಇತಿ ಚತುರ್ವಿಧೋಽಪಿ ಅಸ್ಮಿನ್ನುಪಮಾನೋಪಮೇಯಸ್ಯ ನಿವೇದನಂ ಶಬ್ದೇನ ಅರ್ಥೇನಾಕ್ಷೇಪೇಣ ಚೇತಿ ದ್ವಾದಶ ಪ್ರಕಾರೋಽಪಿ ಶ್ಲೇಷೇ ಅಪಿಶಬ್ದಾದಶ್ಲೇಷೇಽಪಿ ಚತುರ್ವಿಂಶತಿಪ್ರಕಾರಃ. ಉಪಮಾನಾನ್ನ್ಯೂನತಾಯಾಮಪ್ಯನಯೈವ ಭಂಗ್ಯಾ ಚತುರ್ವಿಂಶತಿಪ್ರಕಾರತೇತಿ ಮಿಳಿತ್ವಾ ಅಷ್ಟಾಚತ್ವಾರಿಂಶತ್ಪ್ರಕಾರೋ ವ್ಯತಿರೇಕಃ. ಉದಾಹರಣಮ್—

ಅಕಳಂಕಂ ಮುಖಂ ತಸ್ಯಾ ನ ಕಳಂಕೀ ವಿಧುರ್ಯಥಾ ।

ಅತ್ರೋಪಮೇಯಗತಮಕಳಂಕತ್ವಮುಪಮಾನಗತಂ ಚ ಕಳಂಕಿತ್ವಂ ಹೇತುದ್ವಯಮಪ್ಯುಕ್ತಮ್. ಯಥಾಶಬ್ದಪ್ರತಿಪಾದನಾಚ್ಚ ಶಾಬ್ದಮೌಪಮ್ಯಮ್. ಅತ್ರೈವ 'ನ ಕಳಂಕಿವಿಧೂಪಮಮ್' ಇತಿ ಪಾಠೇ ಆರ್ಥಮ್. ಜಯತೀಂದುಂ

ಕಳಂಕಿನಂ' ಇತಿ ಪಾಠೇ ತು ಇವಾದಿವತ್ತ್ಯಾದಿಪದವಿರಹಾತ್ ಆಕ್ಷಿಪ್ತಮ್. ಅತ್ರೈವ ಅಕಳಂಕಪದತ್ಯಾಗೇ ಚ ಉಪಮೇಯೋತ್ಕರ್ಷಕಾರಣಾನುಕ್ತಿಃ, ಕಳಂಕಿಪದತ್ಯಾಗೇ ಚ ಉಪಮಾನಗತನಿಷ್ಕರ್ಷಕಾರಣಾನುಕ್ತಿಃ, ದ್ವಯೋರನುಕ್ತೌ ದ್ವಯೋರನುಕ್ತಿಃ. ಶ್ಲೇಷೇ ಯಥಾ–'ಅತಿ ಗಾಢಗುಣಾಯಾಶ್ಚ ನಾಬ್ಜವದ್ಭಂಗುರಾ ಗುಣಾಃ'. ಅತ್ರೇವಾರ್ಥೇ ವತಿರಿತಿ ಶಾಬ್ದಾಮೌಪಮ್ಯಮ್. ಉತ್ಕರ್ಷನಿಕರ್ಷ ಕಾರಣಯೋರ್ದ್ವಯೋರಪ್ಯುಕ್ತಿಃ. ಗುಣಶಬ್ದಃ ಶ್ಲಿಷ್ಟಃ. ಅನ್ಯೇ ಭೇದಾಃ ಪೂರ್ವವ ದೂಹ್ಯಾಃ. ಏತಾನಿ ಚೋಪಮೇಯಸ್ಯೋಪಮಾನಾದಾಧಿಕ್ಯೇ ಉದಾಹರಣಾನಿ.

ನ್ಯೂನತ್ವೇ ದಿಙ್ಮಾತ್ರಂ ಯಥಾ—

ಕ್ಷೀಣಃ ಕ್ಷೀಣೋಽಪಿ ಶಶೀ ಭೂಯೋಽಭಿವರ್ಧತೇ ನಿತ್ಯಮ್ ।
ವಿರಮ ಪ್ರಸೀದ ಸುಂದರಿ ಯೌವನಮನಿವರ್ತಿ ಯಾತಂ ತು ॥

ಅತ್ರೋಪಮೇಯಭೂತಯೌವನಾಸ್ಥೈರ್ಯಸ್ಯ ಆಧಿಕ್ಯಮ್. ತೇನಾತ್ರ 'ಉಪಮಾನಾದುಪಮೇಯಸ್ಯ ಆಧಿಕ್ಯೇ ವಿಪರ್ಯಯೇ ವಾ ವ್ಯತಿರೇಕಃ' ಇತಿ ಕೇಷಾಂಚಿಲ್ಲಕ್ಷಣೇ ವಿಪರ್ಯಯೇ ವೇತಿ ಪದಮನರ್ಥಕಮ್ ಇತಿ ಯತ್ ಕೇಚಿದಾಹುಃ ತನ್ನ ವಿಚಾರಸಹಮ್. ತಥಾ ಹಿ ಆಧಿಕನ್ಯೂನತ್ವೇ ಸತ್ತ್ವಾಸತ್ತ್ವೇ ಏವ ವಿವಕ್ಷಿತೇ. ಅತ್ರ ಚ ಚಂದ್ರಾಪೇಕ್ಷಯಾ ಯೌವನಸ್ಯ ಅಸತ್ತ್ವಂ ಸ್ಫುಟಮೇವ. ಅಸ್ತು ವಾ ಅತ್ರೋದಾಹರಣೇ ಯಥಾಕಥಂಚಿದ್ಗತಿಃ.

ಹನೂಮದಾದ್ಯೈರ್ಯಶಸಾ ಮಯಾ ಪುನರ್ದ್ವಿಷಾಂ ಹಸೈರ್ದೂತಪಥಃ ಸಿತೀಕೃತಃ ॥

ಇತ್ಯಾದಿಷು ಕಾ ಗತಿಃ ? ಇತಿ ಸುಷ್ಠೂಕ್ತಂ "ನ್ಯೂನತಾ ವಾ" ಇತಿ.

ಉಪಮಾನಕ್ಕಿಂತಲೂ ಉಪಮೇಯವು ಯಾವ ರೀತಿಯಿಂದಾದರೂ ಹೆಚ್ಚೆಂದೂ ಅಥವಾ ಕನಿಷ್ಟವೆಂದೂ ತಿಳಿಸುವುದೇ ವ್ಯತಿರೇಕವೆನಿಸುವುದು. ಉಪಮಾನೋಪಮೇಯಗಳಲ್ಲಿ ಕೊಂಚ ವೈಧರ್ಮ್ಯವಿದ್ದರೂ ಅದು ವ್ಯತಿರೇಕವೆನಿಸುವುದು. ಈ ವೈಧರ್ಮ್ಯವು ಉಪಮಾನಕ್ಕಿಂತ ಉಪಮೇಯದಲ್ಲಿ ಉತ್ಕರ್ಷವೋ ಅಪಕರ್ಷವೋ ಇರುವುದೇ ಆಗಿದೆ. ಉಪಮಾಲಂಕಾರದಲ್ಲಿ ಇಂತಹ ವೈಧರ್ಮ್ಯವಿರುವುದಿಲ್ಲ. ಇಲ್ಲಿ ಮಾತ್ರವೇ ಅದು ಇರುತ್ತದೆ. ಉಪಮಾನದಿಂದ ಉಪಮೇಯವು ಕೊಂಚ ವಿಷಮವಾಗಿ ಕಂಡು ಬರುವುದೇ ವ್ಯತಿರೇಕ. ಉಪಮಾನಕ್ಕಿಂತ ಉಪಮೇಯವು ಉತ್ಕೃಷ್ಟವೆಂಬುದು ಒಂದು ಬಗೆ. ಉಪಮಾನಕ್ಕಿಂತ ಉಪಮೇಯವು ಕನಿಷ್ಟವೆಂಬುದು ಒಂದು ಬಗೆ. ಹೀಗೆ ಇದರಲ್ಲಿ ಎರಡು ಬಗೆಗಳಿವೆ. ಉಪಮೇಯವು ಉತ್ಕೃಷ್ಟವೆಂಬುದಕ್ಕೆ ಹೇತುವನ್ನು ಶಬ್ದದಿಂದ ತಿಳಿಸಿರುವುದು ಒಂದು ಬಗೆ, ಅದು ಕನಿಷ್ಟವೆಂಬುದಕ್ಕೆ ಹೇತುವನ್ನು ತಿಳಿಸದೇ ಇರುವುದು ಮೂರು ಬಗೆ ಎನಿಸುತ್ತದೆ. ಉಪಮೇಯದ ಉತ್ಕರ್ಷಕ್ಕೆ ಕಾರಣವನ್ನು ತಿಳಿಸದೇ ಇರುವುದು, ಹಾಗೆಯೇ ಅದರ ಅಪಕರ್ಷಕ್ಕೆ ಕಾರಣವನ್ನು ತಿಳಿಸದೇ ಇರುವುದು, ಮತ್ತು ಆವೆರಡು ಕಾರಣಗಳನ್ನು ತಿಳಿಸದೇ ಇರುವುದು ಹೀಗೆ ಅದು ಮೂರು ಬಗೆಯಾಗುವುದು. ಹೇತುವನ್ನು ತಿಳಿಸಿರುವ ಒಂದು ಬಗೆಯೊಡನೆ ಈ ಮೂರು ಬಗೆಗಳೂ

ಸೇರಿ ಒಟ್ಟು ನಾಲ್ಕು ಬಗೆಗಳಾಗುತ್ತವೆ. ಈ ನಾಲ್ಕು ಬಗೆಯ ವ್ಯತಿರೇಕಗಳಲ್ಲೂ ಸಾದೃಶ್ಯವನ್ನು ಶಬ್ದದಿಂದಲೂ ಅರ್ಥದಿಂದಲೂ ವ್ಯಂಜನೆಯಿಂದಲೂ ತಿಳಿಸುವುದರಿಂದ ಒಟ್ಟು ಹನ್ನೆರಡು ಬಗೆಗಳಾಗುತ್ತವೆ. ಈ ಹನ್ನೆರಡು ಬಗೆಗಳಲ್ಲೂ ಶ್ಲೇಷದಿಂದಲೂ ಶ್ಲೇಷವಿಲ್ಲದೆಯೂ ವ್ಯತಿರೇಕವು ಇಪ್ಪತ್ತನಾಲ್ಕು ಬಗೆಗಳಾಗುತ್ತದೆ. ಉಪಮಾನಕ್ಕಿಂತ ಉಪಮೇಯವು ಕನಿಷ್ಠವೆನಿಸಿದ ಕಡೆಯೂ ಇದೇ ರೀತಿಯಿಂದ ಆಗುವ ಇಪ್ಪತ್ತನಾಲ್ಕು ಬಗೆಗಳೊಡನೆ ವ್ಯತಿರೇಕದಲ್ಲಿ ಒಟ್ಟು ನಲ್ವತ್ತೆಂಟು ಬಗೆಗಳಾಗುತ್ತವೆ. "ಆಕೆಯ ನಿಷ್ಕಳಂಕವಾದ ಮುಖವು ಕಳಂಕಿ ಎನಿಸಿದ ಚಂದ್ರನಂತೆ ಇದೆ" ಇಲ್ಲಿ ಉಪಮೇಯವೆನಿಸಿದ ಮುಖದಲ್ಲಿ ಕಳಂಕವಿಲ್ಲವೆಂದೂ ಉಪಮಾನವೆನಿಸಿದ ಚಂದ್ರನಲ್ಲಿ ಕಳಂಕವಿದೆ ಎಂದೂ ಎರಡು ಹೇತುಗಳನ್ನು ಶಬ್ದದಿಂದಲೇ ತಿಳಿಸಿದೆ. ಯಥಾಶಬ್ದದಿಂದ ಸಾದೃಶ್ಯವನ್ನು ತಿಳಿಸಿರುವ ಪ್ರಯುಕ್ತ ಇದು ಶಾಬ್ದವೆನಿಸಿದೆ. ಇಲ್ಲಿಯೇ "ಮುಖವು ಕಳಂಕಿಯಾದ ಚಂದ್ರನಂತೆ ಇಲ್ಲ" ಎಂದು ಹೇಳುವುದಾದರೆ ಸಾಮ್ಯವು ಅರ್ಥದಿಂದ ತೋರುವ ಪ್ರಯುಕ್ತ ವ್ಯತಿರೇಕಾಲಂಕಾರವು ಆರ್ಥವೆನಿಸುವುದು. ಇಲ್ಲಿಯೇ 'ಕಳಂಕವುಳ್ಳ ಚಂದ್ರನನ್ನು ಮುಖವು ಜಯಿಸುತ್ತದೆ.' ಎಂದು ಹೇಳುವುದಾದರೆ ಇವ ಮೊದಲಾದ ಪದಗಳಂತೆ ತುಲ್ಯ ಮೊದಲಾದ ಪದಗಳಿಲ್ಲದ ಪ್ರಯುಕ್ತ ವ್ಯತಿರೇಕವು ವ್ಯಂಗ್ಯವಾಗಿ ತೋರುವುದು. ಇಲ್ಲಿಯೇ 'ಅಕಳಂಕ' ಎಂಬ ಪದವನ್ನು ತೊರೆದರೆ ಉಪಮೇಯದಲ್ಲಿರುವ ಉತ್ಕರ್ಷಕ್ಕೆ ಕಾರಣವನ್ನು ತಿಳಿಸದೇ ಇದ್ದಂತಾಗುವುದು, ಇಲ್ಲಿ 'ಕಳಂಕಿ' ಎಂಬ ಪದವನ್ನು ತೊರೆದರೆ ಉಪಮಾನದಲ್ಲಿರುವ ಅಪಕರ್ಷಕ್ಕೆ ಕಾರಣವನ್ನು ತಿಳಿಸದೇ ಇದ್ದಂತಾಗುವುದು. ಇವೆರಡು ಪದಗಳನ್ನು ತೊರೆದರೆ ಉಪಮೇಯದಲ್ಲಿರುವ ಉತ್ಕರ್ಷಕ್ಕೆ ಕಾರಣವನ್ನೂ, ಉಪಮಾನದಲ್ಲಿರುವ ನಿಕೃಷ್ಟತೆಯ ಕಾರಣವನ್ನೂ ತಿಳಿಸಿದಂತಾಗುವುದು. 'ಚಿರಸ್ಥಾಯಿ ಎನಿಸಿದ ಸೌಂದರ್ಯ, ವಿನಯ ಮೊದಲಾದ ಗುಣಗಳೂ, ಸೂತ್ರಗಳೂ ಇರುವ ನಾಯಿಕೆಯ ಗುಣಗಳು ಕಮಲದಂತೆ ಕಿತ್ತುಹೋಗುವಂತಹವಲ್ಲ'' ಇಲ್ಲಿ ಇವ ಎಂಬ ಪದದ ಅರ್ಥದಲ್ಲಿ ವತಿಪ್ರತ್ಯಯವು ಬಂದಿರುವುದರಿಂದ ಔಪಮ್ಯವು ಶಾಬ್ದವೆನಿಸಿದೆ. ಉಪಮೇಯವೆನಿಸಿದ ನಾಯಿಕೆಯ ಉತ್ಕರ್ಷಕ್ಕೆ ಕಾರಣವೆನಿಸಿದ ಚಿರಸ್ಥಾಯಿ ಎಂಬುದನ್ನೂ, ಉಪಮಾನವೆನಿಸಿದ ಕಮಲದ ನಿಕೃಷ್ಟತೆಗೆ ಕಾರಣವೆನಿಸಿದ ಭಂಗುರತ್ವವನ್ನೂ ಶಬ್ದದಿಂದಲೇ ತಿಳಿಸಲಾಗಿದೆ. ಇಲ್ಲಿ ಗುಣಶಬ್ದವನ್ನು ಶ್ಲೇಷದಿಂದ ಪ್ರಯೋಗಿಸಲಾಗಿದೆ. ಉಳಿದ ಭೇದಗಳನ್ನು ಹಿಂದಿನಂತೆ ಊಹಿಸಿಕೊಳ್ಳಬೇಕು. ಉಪಮಾನಕ್ಕಿಂತಲೂ ಉಪಮೇಯವು ಅಧಿಕವೆಂಬುದಕ್ಕೆ ಇವೆಲ್ಲವೂ ಉದಾಹರಣಗಳೆನಿಸಿವೆ.

ಉಪಮಾನಕ್ಕಿಂತ ಉಪಮೇಯವು ಕನಿಷ್ಟವೆಂಬುದಕ್ಕೆ ಒಂದು ಉದಾಹರಣವನ್ನು ಮಾತ್ರ ಸೂಚಿಸಲಾಗುವುದು. ಪ್ರಣಯಕೋಪದಿಂದ ಪರಾಙ್ಮುಖಿಯಾದ ಪ್ರಿಯೆಗೆ ಪತಿ ಹೇಳುವ ಮಾತಿದು. "ಎಲೈ ಸುಂದರಿ, ಚಂದ್ರನು ಕೃಷ್ಣಪಕ್ಷದಲ್ಲಿ ಪ್ರತಿದಿನವೂ ಕ್ಷೀಣನಾದರೂ ಶುಕ್ಲಪಕ್ಷದಲ್ಲಿ ಮತ್ತೆ ಮತ್ತೆ ವೃದ್ಧಿ ಹೊಂದುತ್ತಾನೆ. ಆದರೆ ಯೌವನವು ಕಳೆದುಹೋಗಿ ಮತ್ತೆ ಹಿಂತಿರುಗಿ ಬರುವಂತಿಲ್ಲ. ಆದ್ದರಿಂದ ಪ್ರಣಯಕೋಪವನ್ನು ಬಿಟ್ಟು

ನನಗೆ ಪ್ರಸನ್ನಳಾಗು" ಇಲ್ಲಿ ಉಪಮಾನವೆನಿಸಿದ ಚಂದ್ರನು ಮತ್ತೆ ಮತ್ತೆ ವೃದ್ಧಿ ಹೊಂದುವುದನ್ನು ಆಧಿಕ್ಯದ ಹೇತುವೆಂದೂ, ಉಪಮೇಯವೆನಿಸಿದ ಯೌವನವು ತೊಲ ಗುವುದನ್ನು ನ್ಯೂನತೆಯ ಹೇತುವೆಂದೂ ಎರಡನ್ನೂ ತಿಳಿಸಲಾಗಿದೆ. "ಇಲ್ಲಿ ಉಪಮಾನ ವೆನಿಸಿದ ಚಂದ್ರನ ಅಸ್ಥೈರ್ಯಕ್ಕಿಂತಲೂ ಉಪಮೇಯವೆನಿಸಿದ ಯೌವನದ ಅಸ್ಥೈ ರ್ಯವು ಹೆಚ್ಚುಕಾಲ ಇರುವಂತಹದು. ಆದ್ದರಿಂದ ಉಪಮಾನಕ್ಕಿಂತ ಉಪಮೇಯವು ಅಧಿಕವೆನಿಸಿದರೂ ಅಥವಾ ಅದಕ್ಕೆ ವಿರುದ್ಧವಾಗಿ ನ್ಯೂನವೆನಿಸಿದ್ದರೂ ವ್ಯತಿರೇಕಾ ಲಂಕಾರವೇ ಆಗುವುದು ಎಂದು ಅಲಂಕಾರಸರ್ವಸ್ವಕಾರನೇ ಮೊದಲಾದವರು 'ವಿಪರ್ಯ ಯೇ ವಾ' ಎಂಬ ಪದವನ್ನು ಲಕ್ಷಣದಲ್ಲಿ ಸೇರಿಸಿದ್ದು ಅರ್ಥವಿಲ್ಲವೆಂದು ಅಲಂಕಾರಕೌಸ್ತು ಭಕಾರರೇ ಮೊದಲಾದವರು ಹೇಳುತ್ತಾರೆ. ಇದು ಯುಕ್ತವಲ್ಲ; ಯಾಕೆಂದರೆ ವ್ಯತಿರೇಕದ ಲಕ್ಷಣದಲ್ಲಿ ಆಧಿಕ್ಯ ನ್ಯೂನತ್ವ ಇವು ಇರಬೇಕೆಂಬುದೇ ಅಲಂಕಾರಸರ್ವಸ್ವಕಾರನಿಗೂ ಗ್ರಂಥಕಾರನಿಗೂ ಸಮ್ಮತವೆನಿಸಿದೆ. ಚಂದ್ರನಿಗಿಂತಲೂ ಯೌವನವು ಮತ್ತೆ ವೃದ್ಧಿ ಯಾಗದೆ ಕ್ಷೀಣಸ್ಥಿತಿಗೆ ಬರುವುದರಿಂದ ನಿಕೃಷ್ಟವೆಂಬುದು ಸ್ಪಷ್ಟವೇ ಆಗಿದೆ. ಕ್ಷೀಣಃ ಕ್ಷೀಣಃ ಎಂಬ ಉದಾಹರಣದಲ್ಲಿ ಯೌವನವು ಸ್ಥಿರವಲ್ಲದ್ದರಿಂದ ಅದನ್ನು ಉತ್ಕೃಷ್ಟ ವೆಂದು ತಿಳಿಸುವ ಮೂಲಕ ಲಕ್ಷಣವನ್ನು ಹೇಗೋ ಕಷ್ಟದಿಂದ ಅನ್ವಯಿಸಿಕೊಳ್ಳ ಬಹುದು; ಆದರೆ ಮುಂದಿನ ಪದ್ಯದಲ್ಲಿ ವ್ಯತಿರೇಕವನ್ನು ಹೇಗೆ ಹೇಳಲಿಕ್ಕಾದೀತು? "ಹನುಮಂತನೇ ಮೊದಲಾದವರು ತಮ್ಮ ದೂತವೃತ್ತಿಯನ್ನು ನಿರ್ಮಲಗೊಳಿಸಿ ಕೊಂಡರು. ನಾನಾದರೋ ನನ್ನ ದೂತವೃತ್ತಿಯಲ್ಲಿ ಶತ್ರುಗಳಿಗೆ ನಗುವಂತೆ ಮಾಡಿ ಕೊಂಡೆನು" ಹೀಗೆ ನಳನು ದಮಯಂತಿಯ ಎದುರಿಗೆ ತನ್ನನ್ನು ಪ್ರಕಾಶಪಡಿಸುತ್ತ ದೈನ್ಯದಿಂದ ತಿಳಿಸುವನು. ಇಲ್ಲಿ ಉಪಮಾನವೆನಿಸಿದ ಹನುಮಂತನಿಗಿಂತಲೂ ಉಪ ಮೇಯವೆನಿಸಿದ ನಳನಲ್ಲಿ ಅಪಕರ್ಷವು ತೋರುವುದರಿಂದ ವ್ಯತಿರೇಕವನ್ನೇ ಹೇಳ ಬೇಕು. ಆದರೆ ಅದು 'ವಿಪರ್ಯಯೇ ವಾ' ಎಂಬುವನ್ನು ಲಕ್ಷಣದಲ್ಲಿ ಸೇರಿಸದೇ ಇದ್ದರೆ ಸಂಭವಿಸುವುದೇ ಇಲ್ಲ. ಇದಕ್ಕಾಗಿಯೇ 'ವಿಪರ್ಯಯೇ ವಾ' ಎಂಬುದನ್ನು ಅಲ್ಲಿ ಸೇರಿ ಸಿದ್ದು ಯುಕ್ತಿಯುಕ್ತವೆನಿಸಿದೆ.

ಸಹಾರ್ಥಸ್ಯ ಬಲಾದೇಕಂ ಯತ್ರ ಸ್ಯಾದ್ವಾಚಕಂ ದ್ವಯೋಃ।
ಸಾ ಸಹೋಕ್ತಿರ್ಮೂಲಭೂತಾತಿಶಯೋಕ್ತಿರ್ಯದಾ ಭವೇತ್॥

ಅತಿಶಯೋಕ್ತಿರಪ್ಯತ್ರ ಅಭೇದಾಧ್ಯವಸಾಯಮೂಲಾ ಕಾರ್ಯಕಾರಣಪೌರ್ವಾ ಪರ್ಯವಿಪರ್ಯಯರೂಪಾ ಚ. ಅಭೇದಾಧ್ಯವಸಾಯಮೂಲಾಪಿ ಶ್ಲೇಷಭಿತ್ತಿಕಾ ಅನ್ಯಥಾ ಚ. ಕ್ರಮೇಣೋದಾಹರಣಮ್.

ಸಹಾಧರದಲೇನಾಸ್ಯಾ ಯೌವನೇ ರಾಗಭಾಕ್ ಪ್ರಿಯಃ। ಅತ್ರ ರಾಗಪದೇ ಶ್ಲೇಷಃ.

ಸಹ ಕುಮುದಕದಂಬೈಃ ಕಾಮಮುಲ್ಲಾಸಯಂತಃ
ಸಹ ಘನತಿಮಿರೌಘೈರ್ಧೈರ್ಯಮುತ್ಸಾರಯಂತಃ।
ಸಹ ಸರಸಿಜಷಂಡೈಃ ಸ್ವಾಂತಮಾಮೀಲಯಂತಃ

ಪ್ರತಿದಿಶಮನುಸೃತಾಂಶೋರಂಶವಃ ಸಂಚರಂತಿ॥

ಅತ್ರೋಲ್ಲಾಸಾದೀನಾಂ ಸಂಬಂಧಿಭೇದಾದೇವ ಭೇದಃ ನ ತು ಶ್ಲಿಷ್ಟತಯಾ.

ಸಮಮೇವ ನರಾಧಿಪೇನ ಸಾ ಗುರುಸಂಮೋಹವಿಲುಪ್ತಚೇತನಾ।
ಅಗಮತ್ಸಹ ತೈಲಬಿಂದುನಾ ತನುದೀಪಾರ್ಚಿರಿವ ಕ್ಷಿತೇಸ್ತಲಮ್॥

ಇಯಂ ಚ ಮಾಲಯಾಪಿ ಸಂಭವತಿ, ಯಥೋದಾಹೃತೇ 'ಸಹ ಕುಮುದ ಕದಂಬೈಃ' ಇತ್ಯಾದೌ. 'ಲಕ್ಷ್ಮಣೇನ ಸಮಂ ರಾಮಃ ಕಾನನಂ ಗಹನಂ ಯಯೌ' ಇತ್ಯಾದೌ ಚ ಅತಿಶಯೋಕ್ತಿಮೂಲತ್ವಾಭಾವಾತ್ ನಾಯಮಲಂಕಾರಃ.

ವಿನೋಕ್ತಿರ್ಯದ್ವಿನಾಽನ್ಯೇನ ನಾಸಾಧ್ವನ್ಯದಸಾಧು ವಾ॥

ನ ಸಾಧು ಅಶೋಭನಂ ನ ಭವತಿ. ಏವಂ ಚ ಯದ್ಯಪಿ ಶೋಭನತ್ವ ಏವ ಪರ್ಯವಸಾನಮ್, ತಥಾಪಿ ಅಶೋಭನತ್ವಭಾನಮುಖೇನ ಶೋಭನವಚನಸ್ಯಾಯಮಭಿಪ್ರಾಯೋ ಯತ್ಕಸ್ಯಚಿತ್ವರ್ಣನೀಯಸ್ಯ ಅಶೋಭನತ್ವಂ ತತ್ ಪರಸನ್ನಿಧೇರೇವ ದೋಷಃ, ತಸ್ಯ ಪುನಃ ಸ್ವಭಾವತಃ ಶೋಭನತ್ವಮೇವೇತಿ. ಯಥಾ—

ವಿನಾ ಜಲದಕಾಲೇನ ಚಂದ್ರೋ ನಿಸ್ತಂದ್ರತಾಂ ಗತಃ ?।
ವಿನಾ ಗ್ರೀಷ್ಮೋಷ್ಮಣಾ ಮಂಜುರ್ವನರಾಜಿರಜಾಯತ॥ ಅಸಾಧು ಅಶೋಭನಮ್

ಯಥಾ—ಅನುಯಾಂತ್ಯಾ ಜನಾತೀತಂ ಕಾಂತಂ ಸಾಧು ತ್ವಯಾ ಕೃತಮ್।
ಕಾ ದಿನಶ್ರೀರ್ವಿನಾರ್ಕೇಣ ಕಾ ನಿಶಾ ಶಶಿನಾ ವಿನಾ॥
ನಿರರ್ಥಕಂ ಜನ್ಮ ಗತಂ ನಳಿನ್ಯಾ ಯಯಾ ನ ದೃಷ್ಟಂ ತುಹಿನಾಂಶುಬಿಂಬಮ್।
ಉತ್ಪತ್ತಿರಿಂದೋರಪಿ ನಿಷ್ಫಲೈವ ದೃಷ್ಟಾ ವಿನಿದ್ರಾ ನಳಿನೀ ನ ಯೇನಃ॥

ಅತ್ರ ಪರಸ್ಪರವಿನೋಕ್ತಿಭಂಗ್ಯಾ ಚಮತ್ಕಾರಾತಿಶಯಃ. ವಿನಾಶಬ್ದಪ್ರಯೋಗಾಭಾವೇಽಪಿ ವಿನಾರ್ಥವಿವಕ್ಷಯಾ ವಿನೋಕ್ತಿರೇವೇಯಮ್. ಏವಂ ಸಹೋಕ್ತಿರಪಿ ಸಹಶಬ್ದಪ್ರಯೋಗಾಭಾವೇಽಪಿ ಸಹಾರ್ಥವಿವಕ್ಷಯಾ ಭವತೀತಿ ಬೋಧ್ಯಮ್.

ಸಮಾಸೋಕ್ತಿಃ ಸಮೈರ್ಯತ್ರ ಕಾರ್ಯಲಿಂಗವಿಶೇಷಣೈಃ।
ವ್ಯವಹಾರಸಮಾರೋಪಃ ಪ್ರಸ್ತುತೇಽನ್ಯಸ್ಯ ವಸ್ತುನಃ॥

ಅತ್ರ ಸಮೇನ ಕಾರ್ಯೇಣ ಪ್ರಸ್ತುತೇ ಅಪ್ರಸ್ತುತವ್ಯವಹಾರಸಮಾರೋಪೋ ಯಥಾ—

ವ್ಯಾಧೂಯ ಯದ್ವಸನಮಂಬುಜಲೋಚನಾಯಾಃ
ವಕ್ಷೋಜಯೋಃ ಕನಕಕುಂಭವಿಲಾಸಭಾಜೋಃ।
ಆಲಿಂಗಸಿ ಪ್ರಸಭಮಂಗಮಶೇಷಮಸ್ಯಾಃ
ಧನ್ಯಸ್ತ್ವಮೇವ ಮಲಯಾಚಲಗಂಧವಾಹ !॥

ಅತ್ರ ಗಂಧವಾಹೇ ಹಠಕಾಮುಕವ್ಯವಹಾರಸಮಾರೋಪಃ. ಲಿಂಗಸಾಮ್ಯೇನ

ಯಥಾ— ಅಸಮಾಪ್ತಜಿಗೀಷಸ್ಯ ಸ್ತ್ರೀಚಿಂತಾ ಕಾ ಮನಸ್ವಿನಃ ?।
ಅನಾಕ್ರಮ್ಯ ಜಗತ್ ಕೃತ್ಸ್ನಂ ನೋ ಸಂಧ್ಯಾಂ ಭಜತೇ ರವಿಃ॥

ಅತ್ರ ಪುಂಸ್ತ್ರೀಲಿಂಗಮಾತ್ರೇಣ ರವಿಸಂಧ್ಯಯೋರ್ನಾಯಕನಾಯಿಕಾವ್ಯವಹಾರಃ. ವಿಶೇಷಣಸಾಮ್ಯಂ ತು ಶ್ಲಿಷ್ಟತಯಾ, ಸಾಧಾರಣ್ಯೇನ, ಔಪಮ್ಯಗರ್ಭತ್ವೇನ ಚ ತ್ರಿಧಾ. ತತ್ರ ಶ್ಲಿಷ್ಟತಯಾ ಯಥಾ–

ವಿಕಸಿತಮುಖೀಂ ರಾಗಾಸಂಗಾದ್ಗಲತ್ತಿಮಿರಾವೃತಿಂ
ದಿನಕರಕರಸ್ಪೃಷ್ಟಾಮೈಂದ್ರೀಂ ನಿರೀಕ್ಷ್ಯ ದಿಶಂ ಪುರಃ ।
ಜರಠಲವಲೀಪಾಂಡುಚ್ಛಾಯೋ ಭೃಶಂ ಕಲುಷಾಂತರಃ
ಶ್ರಯತಿ ಹರಿತಂ ಹಂತ ಪ್ರಾಚೇತಸೀಂ ತುಹಿನದ್ಯುತಿಃ ॥

ಅತ್ರ ಮುಖರಾಗಾದಿಶಬ್ದಾನಾಂ ಶ್ಲಿಷ್ಟತಾ. ಅತ್ರೈವ ಹಿ 'ತಿಮಿರಾವೃತಿಮ್' ಇತ್ಯತ್ರ 'ತಿಮಿರಾಂಶುಕಾಮ್' ಇತಿ ಪಾಠೇ ಏಕದೇಶಸ್ಯ ರೂಪಣೇಽಪಿ ಸಮಾಸೋಕ್ತಿರೇವ, ನ ತು ಏಕದೇಶವಿವರ್ತಿರೂಪಕಮ್. ತತ್ರ ಹಿ ತಿಮಿರಾಂಶುಕಯೋಃ ರೂಪ್ಯರೂಪಕಭಾವೋ ದ್ವಯೋರಾವರಕತ್ವೇನ ಸ್ಫುಟಸಾದೃಶ್ಯತಯಾ ಪರಸಾಚಿವ್ಯಮನಪೇಕ್ಷ್ಯೈಪಿ ಸ್ವಮಾತ್ರವಿಶ್ರಾಂತ ಇತಿ ನ ಸಮಾಸೋಕ್ತಿಬುದ್ಧಿಂ ವ್ಯಾಹಂತುಮೀಶಃ. ಯತ್ರ ತು ರೂಪ್ಯರೂಪಕಯೋಃ ಸಾದೃಶ್ಯಮಸ್ಫುಟಮ್, ತತ್ರೈಕದೇಶಾಂತರರೂಪಣಂ ವಿನಾ ತದಸಂಗತಂ ಸ್ಯಾದಿತ್ಯಶಾಬ್ದಮಪ್ಯೇಕದೇಶಾಂತರರೂಪಣಮಾರ್ಥಮಪೇಕ್ಷತ ಏವೇತಿ ತತ್ರೈಕದೇಶವಿವರ್ತಿರೂಪಕಮೇವ. ಯಥಾ—

ಯಸ್ಯ ರಣಾಂತಃಪುರಕೇ ಕರೇ ಕುರ್ವಾಣಸ್ಯ ಮಂಡಲಾಗ್ರಲತಾಮ್ ।
ರಸಸಮ್ಮುಖೀ ಅಪಿ ಸಹಸಾ ಪರಾಙ್ಮುಖೀ ಭವತಿ ರಿಪುಸೇನಾ ॥

ಅತ್ರ ರಣಾಂತಃಪುರಯೋಃ ಸಾದೃಶ್ಯಮಸ್ಫುಟಮೇವ. ಕ್ವಚಿಚ್ಚ ತತ್ರ ಸ್ಫುಟಸಾದೃಶ್ಯಾನಾಮಪಿ ಬಹೂನಾಂ ರೂಪಣಂ ಶಾಬ್ದಮ್. ಏಕದೇಶಸ್ಯ ಚ ಆರ್ಥಮ್, ತತ್ರೈಕದೇಶವಿವರ್ತಿರೂಪಕಮೇವ, ರೂಪಕಪ್ರತೀತೇರ್ವ್ಯಾಪಿತಯಾ ಸಮಾಸೋಕ್ತಿಪ್ರತೀತಿತಿರೋಧಾಯಕತ್ವಾತ್. ನನ್ವಸ್ತಿ ರಣಾಂತಃಪುರಯೋರಪಿ ಸುಖಸಂಚಾರತಯಾ ಸ್ಫುಟಸಾದೃಶ್ಯಮಿತಿ ಚೇತ್, ಸತ್ಯಮುಕ್ತಮ್; ಅಸ್ತ್ಯೇವ; ಕಿಂತು ವಾಕ್ಯಾರ್ಥಪರ್ಯಾಲೋಚನಸಾಪೇಕ್ಷಮ್, ನ ಖಲು ನಿರಪೇಕ್ಷಮ್, ಮುಖಚಂದ್ರಾದೇರ್ಮನೋಹರತ್ವಾದಿವತ್ ರಣಾಂತಃಪುರಯೋಃ ಸ್ವತಃ ಸುಖಸಂಚಾರತ್ವಾಭಾವಾತ್.

ಅತಿಶಯೋಕ್ತಿಯು ಪ್ರಧಾನವಾಗಿ ವ್ಯಾಪಿಸಿರುವಾಗ ಸಹ, ಸಾಕಂ ಮೊದಲಾದ ಪದಗಳ ಬಲದಿಂದ ಒಂದೇ ವಸ್ತು ಎರಡು ವಸ್ತುಗಳಿಗೆ ಏಕಕಾಲದಲ್ಲಿ ಅನ್ವಯಿಸುವುದಾದರೆ ಅಂತಹ ಹೇಳಿಕೆಯು ಸಹೋಕ್ತಿ ಎಂಬ ಅಲಂಕಾರವೆನಿಸುವುದು. ಕಾರ್ಯಕಾರಣಗಳಲ್ಲಿ ಕಾಲವ್ಯತ್ಯಾಸವನ್ನು ತಿಳಿಸುವಾಗಲೂ, ಭೇದವಿರುವಕಡೆ ಅಭೇದವನ್ನು ನಿಶ್ಚಯಿಸುವಾಗಲೂ ಸಂಭವಿಸುವ ಅತಿಶಯೋಕ್ತಿಯೇ ಇಲ್ಲಿ ವಿವಕ್ಷಿತವಾಗಿದೆ. ಉಳಿದ ಬಗೆಗಳು ಇಲ್ಲಿ ಹೊಂದುವುದಿಲ್ಲ. ಅಭೇದಾಧ್ಯವಸಾಯಮೂಲವಾದ ಅತಿಶಯೋಕ್ತಿಯು ಕೆಲವುವೇಳೆ ಶ್ಲೇಷದಿಂದ ತೋರುವ ಭೇದವನ್ನು ಅವಲಂಬಿಸಿರುವುದು; ಕೆಲವುವೇಳೆ ಶ್ಲೇಷವಿಲ್ಲದೆಯೇ ತೋರುವ ಭೇದವನ್ನು ಅವಲಂಬಿಸಿರುವುದು. ಇವಕ್ಕೆ ಉದಾಹರಣ

ಗಳನ್ನು ತಿಳಿಸುತ್ತಾನೆ. "ಈಕೆಯ ಯೌವನಕಾಲದಲ್ಲಿ ಚಿಗುರಿನಂತಿರುವ ಕೆಳತುಟಿಯೊಡನೆ ಪ್ರಿಯನು ಅನುರುಕ್ತನಾಗಿರುವನು" ಇಲ್ಲಿ ರಾಗಪದವು ತುಟಿಯ ಕೆಂಪುಬಣ್ಣವನ್ನೂ ಪ್ರಿಯನ ಅನುರಾಗವನ್ನೂ ಸೂಚಿಸುತ್ತದೆ. ಹೀಗೆ ಕೆಂಪುಬಣ್ಣ ಮತ್ತು ಪ್ರೇಮ ಇವೆರಡಕ್ಕೂ ಭೇದವಿದ್ದರೂ ಅಭೇದಾಧ್ಯವಸಾಯದಿಂದ ಅತಿಶಯೋಕ್ತಿ ಇದೆ. ಅದರ ಮೂಲಕವೂ ಸಹಶಬ್ದದ ಬಲದಿಂದಲೂ ರಾಗಭಾಕ್ ಎಂಬ ಪದದ ಅರ್ಥವು ಅಧರದಳದೊಡನೆಯೂ ಪ್ರಿಯನೊಡನೆಯೂ ಏಕಕಾಲದಲ್ಲಿ ಅನ್ವಯಿಸುತ್ತದೆ. ಆದ್ದರಿಂದ ಇದು ಶ್ಲೇಷದಿಂದ ತೋರುವ ಅಭೇದಾಧ್ಯವಸಾಯವೆಂಬ ಅತಿಶಯೋಕ್ತಿಯನ್ನು ಅವಲಂಬಿಸಿದ ಸಹೋಕ್ತಿ ಎನಿಸಿದೆ. ಶ್ಲೇಷವಿಲ್ಲದಕಡೆ ಭೇದವಿದ್ದರೂ ಅಭೇದವನ್ನು ನಿಶ್ಚಯಿಸುವ ಅತಿಶಯೋಕ್ತಿಯನ್ನು ಅವಲಂಬಿಸಿದ ಸಹೋಕ್ತಿ ಹೀಗಿದೆ. "ಮೊಗ್ಗುಗಳ ಸಮೂಹದೊಡನೆ ಮನ್ಮಥನನ್ನು ಪ್ರಕಾಶಗೊಳಿಸುತ್ತ ನಿಬಿಡವಾದ ಅಂಧಕಾರಸಮೂಹಗಳೊಡನೆ ಧೈರ್ಯವನ್ನು ಹೊರದೂಡುತ್ತ, ಕಮಲಸಮೂಹದೊಡನೆ ಚಿತ್ತವನ್ನು ಸಂಕೋಚಗೊಳಿಸುತ್ತ ಚಂದ್ರನ ಕಿರಣಗಳು ಪ್ರತಿದಿನವೂ ಎಲ್ಲಾ ದಿಕ್ಕುಗಳಲ್ಲೂ ವ್ಯಾಪಿಸುತ್ತವೆ." ಇಲ್ಲಿ ಉಲ್ಲಾಸ ಮೊದಲಾದವುಗಳಿಗೂ ಅವಕ್ಕೆ ಸಂಬಂಧಿಸಿದ ಕನ್ನೈದಿಲೆಗಳ ಸಮೂಹ, ಕಾಮ ಮೊದಲಾದವಕ್ಕೂ ಸಹಜವಾಗಿ ಭೇದವಿದೆಯೇ ಹೊರತು ಶ್ಲೇಷದಿಂದ ಭೇದವು ತೋರುವುದಿಲ್ಲ. ಕನ್ನೈದಿಲೆಗಳ ಉಲ್ಲಾಸವೆಂದರೆ ಪ್ರಕಾಶ, ಕಾಮನ ಉಲ್ಲಾಸವೆಂದರೆ ಆವಿರ್ಭಾವ. ಹೀಗೆ ಸಂಬಂಧಿಭೇದದಿಂದಲೇ ಉಲ್ಲಾಸಗಳಲ್ಲಿ ಭೇದವಿದೆ. ಹಾಗಿದ್ದರೂ ಅವೆರಡು ಅರ್ಥಗಳನ್ನು ಉಲ್ಲಾಸವೆಂಬ ಒಂದೇ ಪದದಿಂದ ತಿಳಿಸಿರುವ ಪ್ರಯುಕ್ತ ಶಬ್ದಸಾದೃಶ್ಯದಿಂದ ಅಭೇದವನ್ನು ನಿಶ್ಚಯಿಸಲಾಗಿದೆ. ಅದರಿಂದಲೂ, ಸಹಶಬ್ದದಿಂದಲೂ ಉಲ್ಲಾಸವು ಕನ್ನೈದಿಲೆಗಳೊಡನೆಯೂ ಕಾಮನೊಡನೆಯೂ ಅನ್ವಯಿಸುತ್ತದೆ. ಆದ್ದರಿಂದ ಇಲ್ಲಿ ಶ್ಲೇಷವಿಲ್ಲದೆ ಅಭೇದಧ್ಯಾವಸಾಯವನ್ನು ತಿಳಿಸುವ ಅತಿಶಯೋಕ್ತಿಯ ಆಧಾರದಮೇಲೆ ಸಹೋಕ್ತಿ ಇದೆ. ಹೀಗೆಯೇ ಕತ್ತಲೆಗಳ ಉತ್ಸಾರಣವೆಂದರೆ ಅಲ್ಲಿಂದ ತೊಲಗುವುದು, ಧೈರ್ಯದ ಉತ್ಸಾರಣವೆಂದರೆ ನಾಶ. ಕಮಲಗಳ ಆಮೀಲನವೆಂದರೆ ಸಂಕೋಚಗೊಳಿಸುವಿಕೆ, ಹೃದಯದ ಆಮೀಲನವೆಂದರೆ ಒಂದೇಕಡೆ ಕಾಮಪ್ರವೃತ್ತಿಯನ್ನು ಹುಟ್ಟಿಸುವುದು. ಹೀಗೆ ಭೇದವಿದ್ದರೂ ಒಂದೇ ಶಬ್ದದ ಅರ್ಥದಿಂದಲೂ ಸಹೋಕ್ತಿಯು ತೋರುವುದು.

ಕಾರ್ಯಕಾರಣಗಳು ಹಿಂದುಮುಂದಾಗಿರುವುದನ್ನು ತಿಳಿಸುವ ಅತಿಶಯೋಕ್ತಿಯ ಆಧಾರದಮೇಲೆ ತೋರುವ ಸಹೋಕ್ತಿಯನ್ನು ಉದಾಹರಿಸುತ್ತಾನೆ. "ಆ ಇಂದುಮತಿಯು ವಿಶೇಷವಾದ ಮೂರ್ಛೆಯಿಂದ ಚೈತನ್ಯವಿಲ್ಲದವಳಾಗಿ ಎಣ್ಣೆಯ ಹನಿಯೊಡನೆ ಸೂಕ್ಷ್ಮವಾದ ದೀಪದ ಜ್ವಾಲೆಯಂತೆ ಅಜಮಹಾರಾಜನೊಡಗೂಡಿಯೇ ನೆಲದಮೇಲೆ ಬಿದ್ದಳು." ಇಲ್ಲಿ ಇಂದುಮತಿ ಕೆಳಗೆ ಬಿದ್ದುದನ್ನು ನೋಡಿದೊಡನೆಯೇ ಅಜನು ಬಿದ್ದನಾದ್ದರಿಂದ ಇಂದುಮತಿ ಕೆಳಗೆ ಬೀಳುವುದೇ ಕಾರಣವೆನಿಸಿದೆ. ಅಜನು ಕೆಳಕ್ಕೆ ಬಿದುದೇ ಕಾರ್ಯವೆನಿಸಿದ್ದೆ. ಅವೆರಡೂ ಒಂದಾದಮೇಲೆ ಒಂದು ಸಂಭವಿಸ

ಬೇಕಾದ್ದು ನಿಯಮ. ಆದರೆ ಆಕೆ ಬಿದ್ದೊಡನೆಯೇ ಅಜನೂ ಕೆಳಕ್ಕೆ ಬಿದ್ದನೆಂಬು ದನ್ನು ಸೂಚಿಸಲು ಸಮಮೇವ ಎಂದು ಹೇಳಿದೆ. ಆದ್ದರಿಂದ ಕಾರ್ಯಕಾರಣಗಳ ಕಾಲ ದಲ್ಲಿ ವ್ಯತ್ಯಾಸವನ್ನು ಇಲ್ಲಿ ತಿಳಿಸಲಾಗಿದೆ. ಈ ಬಗೆಯ ಅತಿಶಯೋಕ್ತಿಯಿಂದಲೂ, ಸಹ ಶಬ್ದದ ಯೋಗದಿಂದಲೂ ಅಗಮತ್ ಎಂಬ ಪದದ ಅರ್ಥವು ಇಂದುಮತಿಯೊಡನೆಯೂ ರಾಜನೊಡಯೂ ಏಕಕಾಲದಲ್ಲಿ ಅನ್ವಯಿಸುತ್ತದೆ. ಆದ್ದರಿಂದ ಇದು ಸಹೋಕ್ತಿ ಎನಿಸಿದೆ. ಇದು ಒಂದೆ ಕಡೆ ಅನೇಕ ಬಗೆಯಾಗಿಯೂ ತೋರುತ್ತದೆ. 'ಸಹ ಕುಮುದ ಕದಂಬೈಃ' ಎಂಬಲ್ಲಿಯೇ ಈ ಬಗೆಯನ್ನು ಕಾಣಬಹುದು. 'ಲಕ್ಷ್ಮಣನೊಡನೆ ರಾಮನು ಅರಣ್ಯಕ್ಕೆ ಹೋದನು' ಎಂಬಲ್ಲಿ ಅತಿಶಯೋಕ್ತಿ ಇಲ್ಲದ್ದರಿಂದ ಸಹೋಕ್ತಿಯೂ ಇಲ್ಲ.

ಸಹೋಕ್ತಿಯನ್ನು ತಿಳಿಸಿಯಾದಮೇಲೆ ಅದಕ್ಕೆ ವಿರುದ್ಧವೆನಿಸಿದ್ದರೂ ಅದ ರಂತೆಯೇ ಪ್ರವರ್ತಿಸುವ ವಿನೋಕ್ತಿಯನ್ನು ವಿವರಿಸುತ್ತಾನೆ. ಬೇರೊಂದು ವಸ್ತುವಿಲ್ಲ ದಿದ್ದರೆ ಯಾವ ವಸ್ತುವು ಶೋಭಿಸಲಾರದೋ ಅಥವಾ ಶೋಭಿಸಬಲ್ಲದೋ ಅಂತಹ ಸ್ಥಿತಿಯನ್ನು ತಿಳಿಸುವುದೇ ವಿನೋಕ್ತಿ ಎನಿಸುವುದು. ಒಂದು ವಸ್ತುವಿಲ್ಲದಿದ್ದರೆ ಮತ್ತೊಂದು ವಸ್ತುವು ಶೋಭಿಸುವುದೋ ಅಥವಾ ಶೋಭಿಸದಿರುವುದೋ ವಿನೋಕ್ತಿ ಎಂದು ಹೇಳಿದಂತಾಯಿತು. ವಿನಾ ಎಂಬ ಅರ್ಥವನ್ನು ತಿಳಿಸುವ ಪದದಿಂದಲೇ ಒಂದು ವಸ್ತುವಿಲ್ಲವೆಂಬುದನ್ನು ತಿಳಿಸಬೇಕು. ಆದ್ದರಿಂದ ಋತೇ, ನಿರ್, ನಿಸ್, ರಹಿತ, ವರ್ಜಿತ, ಶೂನ್ಯ, ನಕಾರ ಈ ಬಗೆಯ ಶಬ್ದದಿಂದ ವಸ್ತುವಿಲ್ಲವೆಂಬುದನ್ನು ತಿಳಿಸಿ ದರೂ ವಿನೋಕ್ತಿಯೇ ಆಗುತ್ತದೆ. ಹೀಗೆ ವಿನಾ ಎಂಬ ಅರ್ಥವನ್ನು ಸೂಚಿಸುವ ಪದ ವನ್ನು ಪ್ರಯೋಗಿಸುವುದೇ ವಿನೋಕ್ತಿ. ಇಲ್ಲಿ ಅಸಾಧುವಲ್ಲ ಎಂಬುದು ಸಾಧುವೆಂಬ ಅರ್ಥದಲ್ಲಿಯೇ ಕೊನೆಗಾಣುವುದು ; ಆದರೂ ಅಸಾಧುವಲ್ಲವೆಂದು ಹೇಳಿ ಸಾಧುವೆಂಬ ಅರ್ಥವನ್ನು ತಿಳಿಸಿದ್ದರ ಅಭಿಪ್ರಾಯವಿಷ್ಟೇ. ಯಾವುದೋ ಒಂದು ವರ್ಣಿಸಬೇಕಾದ ವಸ್ತುವನ್ನು ಸಾಧುವಲ್ಲವೆಂದು ತಿಳಿಸಿದ್ದು ಬೇರೊಂದು ವಸ್ತುವಿನ ಜೊತೆಯಲ್ಲಿದ್ದಾಗ ಅವಕ್ಕೆ ಅನ್ವಯಿಸುವುದೇ ಹೊರತು ಅದು ಸಹಜವಾಗಿ ಸಾಧುವೇ ಆಗಿರುವುದೆಂದು ಭಾವಿಸಬೇಕೆಂಬುದೇ ಇಲ್ಲಿಯ ಅಭಿಪ್ರಾಯ. ಅಸಾಧುತ್ವವಿಲ್ಲದ ಕಡೆ ವಿನೋಕ್ತಿ ಯನ್ನು ಉದಾಹರಿಸುತ್ತಾನೆ. "ವರ್ಷಾಕಾಲವಿಲ್ಲದಿದ್ದರೂ ಚಂದ್ರನು ನೈರ್ಮಲ್ಯವನ್ನು ಹೊಂದಿದನು. ಗ್ರೀಷ್ಮಕಾಲದ ಸಂತಾಪವಿಲ್ಲದಿದ್ದರೂ ವನಶ್ರೇಣಿಯು ಶೋಭಿಸಿತು" ಇಲ್ಲಿ ಸಹಜವಾಗಿ ಶೋಭಿಸುವ ಚಂದ್ರನಿಗೆ ವರ್ಷಾಕಾಲದಲ್ಲಿ ಉಂಟಾಗುವ ಕಲ್ಮಷವು ಆ ವರ್ಷಾಕಾಲವು ಕಳೆದಮೇಲೆ ತೊಲಗಿತು. ಆದ್ದರಿಂದ ಅವನಲ್ಲಿ ನೈರ್ಮಲ್ಯವು ಮತ್ತೆ ಬಂದಿತು. ಹಾಗೆ ಸ್ವಭಾವದಿಂದಲೇ ಶೋಭಿಸುತ್ತಿದ್ದ ವನರಾಜಿಗೆ ಬೇಸಿಗೆಯ ಬಿಸಿಲಿ ನಿಂದ ಉಂಟಾಗಿದ್ದ ಕಲ್ಮಷವು ಬೇಸಿಗೆಯ ಬಿಸಿಲು ತೊಲಗಿದ ಮೇಲೆ ತೊಲಗಿ ಅದಕ್ಕೆ ಸ್ವಭಾವಿಕವಾದ ಕಾಂತಿಯು ಲಭಿಸಿತು." ಆದ್ದರಿಂದಲೇ ಇಲ್ಲಿ ವರ್ಷಾಕಾಲ ಮತ್ತು ವನರಾಜಿಗೂ ಕಲ್ಮಷವಿಲ್ಲದಿರುವ ಪ್ರಯುಕ್ತ ಇದು ವಿನೋಕ್ತಿ ಎನಿಸಿದೆ. ಇವೆರಡಕ್ಕೂ ಉಪಮಾನೋಪಮೇಯಭಾವವು ಇಲ್ಲಿ ವ್ಯಂಗ್ಯವಾಗಿ ತೋರುತ್ತದೆ.

ಒಂದು ವಸ್ತುವಿಲ್ಲದಿದ್ದರೆ ಮತ್ತೊಂದು ವಸ್ತು ಶೋಭಿಸದೇ ಇರುವುದನ್ನು ಈಗ ಉದಾಹರಿಸುತ್ತಾನೆ. ವನವಾಸಕಾಲದಲ್ಲಿ ಸೀತೆಗೆ ಋಷಿಪತ್ನಿಯರು ಹೇಳುವ ಮಾತಿನಲ್ಲಿ ಇದನ್ನು ಕಾಣಬಹುದು. "ಎಲೈ ಸೀತೆಯೇ, ಸರ್ವೋತ್ಕೃಷ್ಟವೆನಿಸಿದ ರಾಮನಂತಹ ಪತಿಯನ್ನು ಅನುಸರಿಸಿಕೊಂಡು ಬಂದ ನೀನು ಯುಕ್ತವಾದದ್ದನ್ನೇ ಮಾಡಿರುವೆ. ಸೂರ್ಯನಿಲ್ಲದೆ ಹಗಲಿಗೆ ಕಾಂತಿ ಎಲ್ಲಿಂದ ಬಂದೀತು? ಚಂದ್ರನಿಲ್ಲದೆ ರಾತ್ರಿ ಹೇಗೆ ಶೋಭಿಸೀತು?" ಇಲ್ಲಿ ಸೂರ್ಯನಿಲ್ಲದೆ ಹಗಲು, ಚಂದ್ರನಿಲ್ಲದೆ ರಾತ್ರಿ ಶೋಭಿಸದಿರುವುದರಿಂದ ಇದು ವಿನೋಕ್ತಿ ಎನಿಸಿದೆ. ದಿನಶ್ರೀಯೊಡನೆಯೂ ರಾತ್ರಿಯೊಡನೆಯೂ ಸೀತೆಗೆ ವ್ಯತಿರೇಕದಿಂದ ಉಪಮಾನೋಪಮೇಯಭಾವವನ್ನು ಇಲ್ಲಿ ಸೂಚಿಸಲಾಗಿದೆ.

ವಿನಾ ಎಂಬ ಅರ್ಥವನ್ನು ತಿಳಿಸುವ ಬೇರೆ ಪದಗಳಿರುವುದನ್ನು ಈಗ ಉದಾಹರಿಸುತ್ತಾನೆ. ಇಲ್ಲಿ ಪೂರ್ವಾರ್ಧದಲ್ಲಿ ಬಿಲ್ಹಣರಾಜನೂ ಉತ್ತರಾರ್ಧದಲ್ಲಿ ರಾಜಕುಮಾರಿಯೂ ಹೇಳುವ ಮಾತಿದೆ. "ಪದ್ಮಿನಿಯ ಜನ್ಮವೇ ನಿರರ್ಥಕವಾಯಿತು, ಯಾಕೆಂದರೆ ಅದ ಚಂದ್ರಮಂಡಲವನ್ನೇ ಕಾಣಲಿಲ್ಲ. ಚಂದ್ರೋದಯಕಾಲದಲ್ಲಿ ರಾತ್ರಿಯವೇಳೆ ಅದು ಮೊಗ್ಗಾಗುತ್ತದೆ. ಹಗಲಿನಲ್ಲಿಯೂ, ಅದು ಪ್ರಕಾಶಿಸುವಾಗಲೂ ಚಂದ್ರನು ಉದಯಿಸಿರುವುದಿಲ್ಲ. ಹಾಗೆಯೇ ಚಂದ್ರನ ಉತ್ಪತ್ತಿಯೂ ನಿಷ್ಫಲವೇ ಆಯಿತು; ಏಕೆಂದರೆ ಚಂದ್ರನು ಅರಳಿವ ಪದ್ಮಿನಿಯನ್ನು ನೋಡುವಂತೆಯೇ ಇಲ್ಲ; ಪದ್ಮಿನಿಯು ಪ್ರಕಾಶಿಸುವಾಗ ಹಗಲಿನಲ್ಲಿ ಚಂದ್ರನು ಉದಯಿಸುವಂತಿಲ್ಲ. ಅವನು ಉದಯಿಸಿದಾಗಲೂ, ರಾತ್ರಿಯಲ್ಲೂ ಪದ್ಮಿನಿಯು ಅರಳುವಂತಿಲ್ಲ" ಇಲ್ಲಿ ಚಂದ್ರಮಂಡಲವನ್ನು ಕಾಣದೇ ಇದ್ದರೆ ಪದ್ಮಿನಿಗೆ ಶೋಭೆ ಇಲ್ಲದ್ದರಿಂದ ವಿಕಸಿತವಾದ ಪದ್ಮಿನಿಯನ್ನು ಕಾಣದೆ ಇದ್ದರೆ ಚಂದ್ರನಿಗೂ ಶೋಭೆ ಇಲ್ಲವೆಂದು ತಿಳಿಸಿದ್ದರಿಂದ ಇದು ವಿನೋಕ್ತಿ ಎನಿಸಿದೆ. ನಳಿನೀಚಂದ್ರರಿಗೆ ಜನ್ಮವೇ ನಿಷ್ಫಲವಾಯಿತೆಂಬಲ್ಲಿ ಸಾದೃಶ್ಯವು ವ್ಯಂಗ್ಯವಾಗಿ ತೋರುತ್ತದೆ.

ಇಲ್ಲಿ ನಳಿನೀಚಂದ್ರರಿಗೆ ಪರಸ್ಪರವಾಗಿ ವಿನಾಶಬ್ದವನ್ನು ಪ್ರಯೋಗಿಸದೆ ನಕಾರವನ್ನು ಪ್ರಯೋಗಿಸಿದ್ದರೂ ಹೆಚ್ಚಿನ ಚಮತ್ಕಾರವಿದೆ. ವಿನಾ ಎಂಬ ಅರ್ಥವನ್ನು ತಿಳಿಸಲು ಇಚ್ಛೆಯಿಂದಲೇ ಇದು ವಿನೋಕ್ತಿ ಎನಿಸುವುದು. ಹೀಗೆಯೇ ಸಹೋಕ್ತಿಯೂ ಸಹ ಶಬ್ದವನ್ನು ಪ್ರಯೋಗಿಸದೆ ಆ ಅರ್ಥವನ್ನು ತಿಳಿಸುವ ಇಚ್ಛೆಯಿಂದಲೂ ಸಂಭವಿಸುತ್ತದೆ ಎಂದು ತಿಳಿಯಬೇಕು.

ಸಾದೃಶ್ಯಮೂಲವಾದ್ದರಿಂದಲೂ, ಕೊನೆಯಲ್ಲಿ ಉಕ್ತಿ ಎಂಬ ಪದವು ಬಂದಿರುವುದರಿಂದಲೂ ವಿನೋಕ್ತಿಯನ್ನು ತಿಳಿಸಿಯಾದಮೇಲೆ ಸಮಾಸೋಕ್ತಿಯನ್ನು ತಿಳಿಸುತ್ತಾನೆ. ಪ್ರಕೃತಾಪ್ರಕೃತವಸ್ತುಗಳಿಗೆ ಸಮಾನವೆನಿಸಿದ ಕಾರ್ಯಗಳಿಂದಲೂ, ಸ್ತ್ರೀ ಪುಂನ್ನಪುಂಸಕಲಿಂಗಗಳಿಂದಲೂ ಒಂದನ್ನು ಮತ್ತೊಂದರಿಂದ ಭೇದಿಸುವ ವಿಶೇಷಣಗಳಿಂದಲೂ ಪ್ರಕೃತವಸ್ತುವಿನಲ್ಲಿ ಅಪ್ರಕೃತವಸ್ತುವಿನ ವ್ಯವಹಾರವನ್ನು ಆರೋಪಿಸು

ವುದೇ ಸಮಾಸೋಕ್ತಿ ಎನಿಸುವುದು. ಸಮಾಸದಿಂದ ಅಂದರೆ ಒಂದೇಸಾರಿ ಉಚ್ಚರಿಸು ವಿಕೆ ಎಂಬ ಸಂಕ್ಷೇಪದಿಂದ ಪ್ರಕೃತ ಮತ್ತು ಅಪ್ರಕೃತಗಳೆರಡರ ಉಕ್ತಿಯೇ ಸಮಾಸೋಕ್ತಿ ಎನಿಸುವುದು. "ಎಲೈ ಮಂದಮಾರುತವೇ, ಇಲ್ಲಿ ಕಾಣುತ್ತಿರುವ ರಮಣಿಯ ಸ್ವರ್ಣಕಲಶಗಳ ವಿಲಾಸವನ್ನು ಹೊಂದಿರುವ ಕುಚಗಳ ವಸ್ತ್ರವನ್ನು ಬಲತ್ಕಾರದಿಂದ ತೊಲಗಿಸಿ ಅವಯವವೆಲ್ಲವನ್ನೂ ಆಲಿಂಗಿಸುತ್ತಿರುವೆ. ಆದ್ದರಿಂದ ನೀನೆ ಧನ್ಯ. ಇಂತವಳ ಆಲಿಂಗನವು ಪುಣ್ಯವಿಲ್ಲದೆಯೇ ದೊರೆಯುವಂತಿಲ್ಲ" ಇಲ್ಲಿ ಪ್ರಕೃತವೆನಿಸಿದ ವಾಯುವಿನಲ್ಲಿ ಅಪ್ರಕೃತವೆನಿಸಿದ ಪುರುಷನೊಬ್ಬನು ಬಲತ್ಕಾರದಿಂದ ರಮಣಿಯೊಬ್ಬಳಲ್ಲಿ ಸಮಾಗಮಸುಖವನ್ನು ಅನುಭವಿಸುವನೆಂಬ ವ್ಯವಹಾರವನ್ನು ಆರೋಪಿಸಲಾಗಿದೆ. ಇದು ಕರ್ಮಸಾಮ್ಯದಿಂದ ತೋರುವ ಸಮಾಸೋಕ್ತಿ. ಹಾಗೆಯೇ ಲಿಂಗಸಾಮ್ಯದಿಂದಲೂ ಇದು ತೋರುತ್ತದೆ. ರಾಜತರಂಗಿಣಿಯ ಈ ಪದ್ಯದಲ್ಲಿ ಇವನ್ನು ಕಾಣಬಹುದು. "ಜಯಿಸಬೇಕೆಂಬ ಇಚ್ಛೆಯು ತೊಲಗದೇ ಇರುವ ಬುದ್ಧಿವಂತನಿಗೆ ಸ್ತ್ರೀಚಿಂತೆಯು ಹೇಗೆ ನೆಲಸೀತು ? ಸೂರ್ಯನು ಸಮಸ್ತ ಜಗತ್ತನ್ನೂ ಅತಿಕ್ರಮಿಸದೆಯೇ ಸಂಧ್ಯೆಯೊಡನೆ ಸೇರುವುದಿಲ್ಲ" ಇಲ್ಲಿ ಪುಂಸ್ತ್ರೀಲಿಂಗವಷ್ಟರಿಂದಲೇ ರವಿ ಸಂಧ್ಯೆ ಇವುಗಳಲ್ಲಿ ನಾಯಕ ನಾಯಿಕೆಯರ ವ್ಯವಹಾರವನ್ನು ಆರೋಪಿಸಲಾಗಿದೆ. ವಿಶೇಷಣಸಾಮ್ಯವು ಶ್ಲೇಷದ ಮೂಲಕವೂ, ಸಾಧಾರಣವೆನಿಸುವ ಮೂಲಕವೂ, ಸಾದೃಶ್ಯದ ಮೂಲಕವೂ ಸಂಭವಿಸುವುದರಿಂದ ಮೂರುಬಗೆಯಾಗುತ್ತದೆ. ಶ್ಲಿಷ್ಟವಿಶೇಷಣದಿಂದ ತೋರುವ ಸಮಾಸೋಕ್ತಿಯನ್ನು ಉದಾಹರಿಸುತ್ತಾನೆ. "ಚಂದ್ರನು ಮುಂದೆಡೆಯಲ್ಲಿ ಕೆಂಪುಬಣ್ಣದ (ಅನುರಾಗದ) ಸಂಪರ್ಕದಿಂದ ಮೊದಲನೆಯ ಭಾಗವನ್ನು ಪ್ರಕಾಶಿಸುತ್ತಲೂ (ವಿಕಸಿತವಾದ ಮುಖವಿರುವ) ಅಂಧಕಾರದ ಆವರಣವನ್ನು ತೊಲಗಿಸಿಕೊಂಡೂ ಇರುವ ಪೂರ್ವದಿಕ್ಕನ್ನು ಸೂರ್ಯನ (ಬೇರೊಬ್ಬ ಪುರುಷನ) ಕಿರಣದಿಂದ (ಹಸ್ತದಿಂದ) ಕೂಡಿದ್ದನ್ನಾಗಿ (ಮುಟ್ಟಲ್ಪಟ್ಟದ್ದನ್ನಾಗಿ) ಕಂಡು ತನ್ನೊಳಗೆ ಮೊಲದ ಗುರುತಿನಿಂದ ಕಲ್ಮಷಗೊಂಡು (ಅಸೂಯೆಯಿಂದ ಮನಸ್ಸಿನ ಪ್ರಸನ್ನತೆಯನ್ನು ಕಳೆದುಕೊಂಡು) ಪಕ್ವವಾದ ಲವಲೀಫಲದಂತೆ ಹಳದಿಯ ಬಣ್ಣದಿಂದ ಶೋಭಿಸುತ್ತಲೇ ಪಶ್ಚಿಮದಿಕ್ಕನ್ನು ಆಶ್ರಯಿಸುತ್ತಾನೆ." ಇಲ್ಲಿ ಪ್ರಭಾತವರ್ಣನೆಯೇ ಪ್ರಕೃತವೆನಿಸಿದ್ದು ಆದರ ಅಂಗವಾದ್ದರಿಂದಲೇ ಪ್ರಕೃತವೆನಿಸಿದ ಪೂರ್ವದಿಕ್ಕಿನಲ್ಲಿ ಮುಖರಾಗ ಮೊದಲಾದ ಶ್ಲಿಷ್ಟವಿಶೇಷಣಸಾಮ್ಯದಿಂದ ಅಪ್ರಕೃತಳಾದ ವ್ಯಭಿಚಾರಿಣಿನಾಯಿಕೆಯೊಬ್ಬಳ ವ್ಯವಹಾರವನ್ನು ಆರೋಪಿಸಲಾಗಿದೆ. ಹಾಗೆಯೇ ಪ್ರಕೃತವೆನಿಸಿದ ಸೂರ್ಯ ಚಂದ್ರರಲ್ಲಿ ಶ್ಲಿಷ್ಟವಿಶೇಷಣಗಳ ಸಾಮ್ಯದಿಂದ ಅಪ್ರಕೃತವೆನಿಸಿದ ಇಬ್ಬರು ಉಪಪತಿಗಳ ವ್ಯವಹಾರವನ್ನು ಆರೋಪಿಸಲಾಗಿದೆ. ಇಲ್ಲಿಯೇ 'ತಿಮಿರಾವೃತಿಮ್' ಎಂಬಲ್ಲಿ 'ತಿಮಿರಾಂಶುಕಾಮ್' ಎಂದು ಹೇಳಿದೆ. ಕೇವಲ ಒಂದು ಅಂಶವೆನಿಸಿದ ಕತ್ತಲೆ ಎಂಬ ಉಪಮೇಯದಲ್ಲಿ ಅಂಶುಕವೆಂಬ ಉಪಮಾನವಷ್ಟನ್ನು ಆರೋಪಿಸಿದರೂ ಸಹ ಇದು ಸಮಾಸೋಕ್ತಿಯಾಗುವುದು ; ಏಕದೇಶವಿವರ್ತಿರೂಪಕವಾಗುವುದಿಲ್ಲ. ಇಲ್ಲಿ ತಿಮಿರ ಮತ್ತು ಅಂಶುಕ ಇವೆರಡಕ್ಕೂ ಆರೋಪ

ಸ್ಥಲದಲ್ಲಿರುವಂತೆ ಉಪಮೇಯೋಪಮಾನಭಾವವಿದೆ. ಇವೆರಡಕ್ಕೂ ಆಚ್ಛಾದಕತ್ವ ವೆಂಬ ಸಾಮಾನ್ಯಧರ್ಮದಿಂದ ಸ್ಪಷ್ಟವಾಗಿ ಸಾದೃಶ್ಯವಿರುವ ಪ್ರಯುಕ್ತ ಪೂರ್ವದಿಕ್ಕಿನಲ್ಲಿ ನಾಯಿಕೆ ಎಂಬ ಆರೋಪವನ್ನು ಅಪೇಕ್ಷಿಸದೆಯೇ ಉಪಮಾನೋಪಮೇಯಭಾವವು ಇವೆರಡರಲ್ಲೂ ಸಹಜವಾಗಿ ಸಿದ್ಧಿಸುತ್ತದೆ. ಆದ್ದರಿಂದ ಇಲ್ಲಿ ಸಮಾಸೋಕ್ತಿಯುಂಟೆಂಬುದನ್ನು ತಡೆಯಲಿಕ್ಕೆ ಯಾರಿಗೂ ಶಕ್ಯವಿಲ್ಲ. ಶಾಬ್ದಬೋಧದಿಂದ ರೂಪಕಕ್ಕೆ ಸಂಬಂಧಿಸಿದ ಆರೋಪವೇ ಇಲ್ಲಿ ಅಪೇಕ್ಷಿತವಾಗುವುದಿಲ್ಲ. ಎಲ್ಲಿ ಉಪಮೇಯೋಪಮಾನಗಳಿಗೆ ಸಾದೃಶ್ಯವು ಸ್ಪಷ್ಟವಾಗಿ ತೋರುವುದಿಲ್ಲವೋ ಅಲ್ಲಿ ಯಾವುದಾದರೊಂದು ಕಡೆ ಆರೋಪಿಸದೇ ಇದ್ದರೂ ಸಹ ಆ ವಾಕ್ಯವು ಅಸಂಗತವೇ ಆಗುವುದು. ಆದ್ದರಿಂದ ಯಾವುದಾದರೊಂದು ಕಡೆ ಆರೋಪಿಸುವುದನ್ನು ಶಬ್ದದಿಂದ ತಿಳಿಸದೆ ಅರ್ಥದಿಂದ ತಿಳಿಸಿದ್ದರೂ ಇದ್ದೇ ಇರುವುದು. ಶಾಬ್ದಬೋಧದಿಂದ ಅಲ್ಲಿ ರೂಪಕಕ್ಕೆ ಸಂಬಂಧಿಸಿದ ಆರೋಪವೇ ಆವಶ್ಯಕವೆನಿಸುವುದು. ಅಂತಹ ಕಡೆಗಳಲ್ಲಿ ಏಕದೇಶವಿವರ್ತಿ ರೂಪಕವನ್ನು ಹೇಳಬೇಕೇ ಹೊರತು ಸಮಾಸೋಕ್ತಿಯನ್ನು ಹೇಳಬೇಕಾಗಿಲ್ಲ. ಇದನ್ನು ಉದಾಹರಿಸುತ್ತಾನೆ. 'ರಣಾಂಗಣವೆಂಬ ಅಂತಃಪುರದಲ್ಲಿ ಹರಿತವಾದಕತ್ತಿ ಎಂಬ ಲತೆಯನ್ನು (ಕಾಮಿನಿಯನ್ನು) ಕೈಯಲ್ಲಿ ಹಿಡಿದಿರುವ ರಾಜನಿಗೆ ಯುದ್ಧಾನುರಾಗದಿಂದ (ಸುರತಪ್ರೇಮದಿಂದ) ಎದುರಿಗೆ ನಿಂತಿರುವ ಶತ್ರುಸೈನ್ಯವು (ಬೇರೊಬ್ಬ ಕಾಮಿನಿಯು) ತತ್‌ಕ್ಷಣವೇ ಭಯದಿಂದಲೂ, ಅಸೂಯೆಯಿಂದಲೂ ಹಿಮ್ಮೆಟ್ಟುವುದು" ಇಲ್ಲಿ ರಣಾಂಗಣವು ಭಯಂಕರವಾದ ಸ್ಥಾನವಾದ್ದರಿಂದಲೂ ಅಂತಃಪುರವು ಸುಖವಾಗಿವ್ಯವಹರಿಸುವ ಸ್ಥಲವಾದ್ದರಿಂದಲೂ ಅವೆರಡಕ್ಕೂ ಭೇದವಿರುವ ಪ್ರಯುಕ್ತ ಸಾದೃಶ್ಯವು ಸ್ಫುಟವಾಗಿಲ್ಲ; ಆದರೆ ಪ್ರಕೃತರಾಜನಲ್ಲಿ ಅಪ್ರಕೃತ ನಾಯಕನ ವ್ಯವಹಾರವನ್ನು ಆರೋಪಿಸಲಾಗಿದೆ. ಹಾಗೆಯೇ ಪ್ರಕೃತವೆನಿಸಿದ ಕತ್ತಿ ಎಂಬ ಲತೆಯಲ್ಲಿ ಅಪ್ರಕೃತರಾದ ಶತ್ರುಸೈನ್ಯದ ಮತ್ತು ನಾಯಿಕೆಯ ವ್ಯವಹಾರವನ್ನು ಲಿಂಗಸಾಮ್ಯದಿಂದ ಆರೋಪಿಸಲಾಗಿದೆ. ಆದ್ದರಿಂದ ಇಲ್ಲಿ ಸಮಾಸೋಕ್ತಿಯನ್ನು ಹೇಳಬೇಕೇ ಅಥವಾ ರಣದಲ್ಲಿ ಅಂತಃಪುರದ ಆರೋಪವು ಶಬ್ದದಿಂದ ತೋರಿ ರಾಜನಲ್ಲಿ ನಾಯಕನ ಆರೋಪವೂ, ಕತ್ತಿ ಎಂಬ ಲತೆಯಲ್ಲೂ ಶತ್ರುಸೇನೆ [illegible] ಇಬ್ಬರು ನಾಯಿಕೆಯರ ಆರೋಪವೂ ಅರ್ಥದಿಂದ ತೋರುವ ಪ್ರ[illegible]ಕ್ತ ಏಕದೇಶವಿವರ್ತಿರೂಪಕವನ್ನು ಹೇಳಬೇಕೇ ಎಂದು ಸಂದೇಹವುಂಟಾಗಲು ರಣ ಮತ್ತು ಅಂತಃಪುರಗಳಲ್ಲಿ ಸಾದೃಶ್ಯವು ಸ್ಫುಟವಾಗಿ ತೋರದೇ ಇರುವ ಪ್ರಯುಕ್ತ ಬಹಳ ಕಷ್ಟದಿಂದ ಅದನ್ನು ಕಲ್ಪಿಸಲಾಗುವುದು. ಆದ್ದರಿಂದ ರಣಾಂಗಣದಲ್ಲಿ ಅಂತಃಪುರವೆಂದು ಆರೋಪಿಸದೆಹೋದರೆ ವಾಕ್ಯಾರ್ಥವೇ ಹೊಂದಿಕೆಯಾಗುವುದಿಲ್ಲ. ಇಲ್ಲಿ ಆ ಬಗೆಯ ಆರೋಪವು ಆವಶ್ಯಕವೆನಿಸಿದ್ದರಿಂದ ಏಕದೇಶವಿವರ್ತಿರೂಪಕವನ್ನೇ ಹೇಳಬೇಕು. ಸಾದೃಶ್ಯವು ಸ್ಪಷ್ಟವಾಗಿ ತೋರುವ ಕಡೆಗಳಲ್ಲಿ ಶಬ್ದದಿಂದಲೇ ಅನೇಕ ಆರೋಪಗಳನ್ನು ತಿಳಿಸಿ ಯಾವುದೋ ಒಂದು ಅಂಶದಲ್ಲಿ ಆರೋಪವನ್ನು ಅರ್ಥದಿಂದ ತಿಳಿಸಿದ್ದರೂ ಅಲ್ಲಿಯೂ ಏಕದೇಶವಿವರ್ತಿರೂಪಕವೇ ಆಗುವುದು. ಅಂತಹಕಡೆ ರೂಪಕವೇ ವಿಶೇಷವಾಗಿ ತೋರುವ

ಪ್ರಯುಕ್ತ ಸಮಾಸೋಕ್ತಿಯುಂಟೆಂಬ ಜ್ಞಾನವು ಮುಚ್ಚಿಹೋಗುತ್ತದೆ. ರಣರಂಗ ಮತ್ತು ಅಂತಃಪುರಗಳೆರಡರಲ್ಲಿ ಸುಖದಿಂದ ಸಂಚರಿಸಬಹುದೆಂಬ ಸಾದೃಶ್ಯವು ಸ್ಫುಟವಾಗಿ ತೋರುವುದೆಂದು ಹೇಳುವುದಾದರೆ ಅದಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ರಾಜನು ವೀರನಾದ್ದರಿಂದ ರಣದಲ್ಲಿ ಶತ್ರುಗಳಿಗೆ ಸುಲಭವಾಗಿ ದೊರೆಯದೇ ಇರುವುದರಿಂದಲೂ, ಅಂತಃಪುರವು ತನ್ನ ವಿಲಾಸಗಳಿಗೆ ಆಶ್ರಯವಾದ್ದರಿಂದಲೂ ಅವೆರಡಕ್ಕೂ ಸ್ಪಷ್ಟವಾಗಿಯೇ ಸಾದೃಶ್ಯವು ಸಂಭವಿಸುತ್ತದೆ. ಆದ್ದರಿಂದ ಇಲ್ಲಿ ಸಮಾಸೋಕ್ತಿಯನ್ನೇ ಹೇಳೋಣವೆಂದು ಆಕ್ಷೇಪಿಸಬಹುದು. ಆದರೆ ಈ ಸಾದೃಶ್ಯವು ಮೊದಲು ತೋರುವುದಿಲ್ಲ. 'ಯಸ್ಯ ರಣಾಂತಃಪುರಕೇ' ಎಂಬ ಪದ್ಯದ ವಾಕ್ಯಾರ್ಥವನ್ನು ಸಂಪೂರ್ಣವಾಗಿ ತಿಳಿದಮೇಲೆಯೇ ಅದು ತೋರುವುದು. ತಿಮಿರಾಂಶುಕಾಂ ಎಂಬಲ್ಲಿರುವಂತೆ ವಾಕ್ಯಾರ್ಥವನ್ನು ಪೂರ್ತಿಯಾಗಿ ತಿಳಿಯುವ ಮುನ್ನ ಸಾದೃಶ್ಯವು ಸ್ಫುಟವಾಗಿ ತೋರುವುದಿಲ್ಲ. ಶತ್ರುಸೇನೆ ಪರಾಙ್ಮುಖವಾಯಿತೆಂಬ ಜ್ಞಾನವಾಗುವವರೆಗೂ ರಣರಂಗದಲ್ಲಿ ಸುಖವಾಗಿ ಸಂಚರಿಸಬಹುದೆಂಬ ಜ್ಞಾನವೇ ಹುಟ್ಟುವುದಿಲ್ಲ. 'ಮುಖಚಂದ್ರಃ' ಎಂಬಲ್ಲಿ ಮನೋಹರತ್ವವೆಂಬ ಸಾದೃಶ್ಯವಿರುವಂತೆ ರಣರಂಗದಲ್ಲೂ, ಅಂತಃಪುರದಲ್ಲೂ ಯಾರೊಬ್ಬರಿಗೂ ಸುಖಸಂಚಾರಕ್ಕೆ ಅವಕಾಶವಿರುವುದಿಲ್ಲ.

ಸಾಧಾರಣ್ಯೇನ ಯಥಾ—ನಿಸರ್ಗಸೌರಭೋದ್ಭ್ರಾಂತಭೃಂಗಸಂಗೀತಶಾಲಿನೀ ।
ಉದಿತೇ ವಾಸರಾಧೀಶೇ ಸ್ಮೇರಾಜನಿ ಸರೋಜಿನೀ ॥

ಅತ್ರ ನಿಸರ್ಗೇತ್ಯಾದಿವಿಶೇಷಣಸಾಮ್ಯಾತ್ ಸರೋಜಿನ್ಯಾಃ ನಾಯಿಕಾವ್ಯವಹಾರಪ್ರತೀತೌ ಸ್ತ್ರೀಮಾತ್ರಗಾಮಿನಃ ಸ್ಮೇರತ್ವಧರ್ಮಸ್ಯ ಸಮಾರೋಪಃ ಕಾರಣಮ್. ತೇನ ವಿನಾ ವಿಶೇಷಣಸಾಮ್ಯಮಾತ್ರೇಣ ನಾಯಿಕಾವ್ಯವಹಾರಪ್ರತೀತೇರಸಂಭವಾತ್.

ಔಪಮ್ಯಗರ್ಭತ್ವಂ ಪುನಸ್ತ್ರಿಧಾ ಸಂಭವತಿ- ಉಪಮಾರೂಪಕಸಂಕರಗರ್ಭತ್ವಾತ್. ತತ್ರ ಉಪಮಾಗರ್ಭತ್ವೇ ಯಥಾ—

ದಂತಪ್ರಭಾಪುಷ್ಪಚಿತಾ ಪಾಣಿಪಲ್ಲವಶೋಭಿನೀ ।
ಕೇಶಪಾಶಾಲಿವೃಂದೇನ ಸುವೇಶಾ ಹರಿಣೇಕ್ಷಣಾ ॥

ಅತ್ರ ಸುವೇಶತ್ವವಶಾತ್ ಪ್ರಥಮಂ ದಂತಪ್ರಭಾ ಪುಷ್ಪಾಣೀವ ಇತ್ಯುಪಮಾಗರ್ಭತ್ವೇನ ಸಮಾಸಃ. ಅನಂತರಂ ಚ ದಂತಪ್ರಭಾಸದೃಶೈಃ ಪುಷ್ಪೈಶ್ಚಿತಾ ಇತ್ಯಾದಿಸಮಾಸಾಂತರಾಶ್ರಯೇಣ ಸಮಾನವಿಶೇಷಣಮಾಹಾತ್ಮ್ಯಾತ್ ಹರಿಣೇಕ್ಷಣಾಯಾಂ ಲತಾವ್ಯವಹಾರಪ್ರತೀತಿಃ.

ರೂಪಕಗರ್ಭತ್ವೇ ಯಥಾ 'ಲಾವಣ್ಯಮಧುಭಿಃ ಪೂರ್ಣಮ್' ಇತ್ಯಾದಿ. ಸಂಕರಗರ್ಭತ್ವೇ ಯಥಾ 'ದಂತಪ್ರಭಾ ಪುಷ್ಪಚಿತಾ' ಇತ್ಯಾದೌ 'ಸುವೇಶಾ' ಇತ್ಯತ್ರ 'ಪರೀತಾ' ಇತಿ ಪಾಠೇ ಹಿ ಉಪಮಾರೂಪಕಸಾಧಕಾಭಾವಾತ್ ಸಂಕರಸಮಾಶ್ರಯಣಮ್. ಸಮಾಸಾಂತರಂ ಪೂರ್ವವತ್. ಸಮಾಸಾಂತರಮಹಿಮ್ನಾ ಲತಾಪ್ರತೀತಿಃ. ಏಷು ಚ ಯೇಷಾಂ ಮತೇ ಉಪಮಾಸಂಕರಯೋಃ ಏಕದೇಶವಿವರ್ತಿತಾ

ನಾಸ್ತಿ ತನ್ಮತೇ ಆದ್ಯತೃತೀಯಯೋಃ ಸಮಾಸೋಕ್ತಿಃ. ದ್ವಿತೀಯಸ್ತು ಪ್ರಕಾರಃ ಏಕದೇಶವಿವರ್ತಿರೂಪಕವಿಷಯ ಏವ. ಪರ್ಯಾಲೋಚನೇ ತು ಆದ್ಯೇ ಪ್ರಕಾರೇ ಏಕದೇಶವಿವರ್ತಿನ್ಯುಪಮೈವ ಅಂಗೀಕರ್ತುಮುಚಿತಾ. ಅನ್ಯಥಾ—

ಐಂದ್ರಂ ಧನುಃ ಪಾಂಡುಪಯೋಧರೇಣ ಶರದ್ದಧಾನಾರ್ದ್ರನಖಕ್ಷತಾಭಮ್ ।
ಪ್ರಮೋದಯಂತೀ ಸಕಳಂಕಮಿಂದುಂ ತಾಪಂ ರವೇರಪ್ಯಧಿಕಂ ಚಕಾರ ॥

ಇತ್ಯತ್ರ ಕಥಂ ಶರದಿ ನಾಯಿಕಾವ್ಯವಹಾರಪ್ರತೀತಿಃ, ನಾಯಿಕಾಪಯೋಧರೇಣ ಆದ್ರ್ರನಖಕ್ಷತಶಕ್ರಚಾಪಧಾರಣಾಸಂಭವಾತ್. ನನು 'ಆರ್ದ್ರನಖಕ್ಷತಾಭಂ' ಇತ್ಯತ್ರ ಸ್ಥಿತಮಪ್ಯುಪಮಾನತ್ವಂ ವಸ್ತುಪರ್ಯಾಲೋಚನಯಾ ಐಂದ್ರೇ ಧನುಷಿ ಸಂಚಾರಣೀಯಮ್. ಯಥಾ 'ದಧ್ನಾ ಜುಹೋತಿ' ಇತ್ಯಾದೌ ಹವನಸ್ಯ ಅನ್ಯಥಾಸಿದ್ಧೇರ್ದಧ್ನಿ ಸಂಚಾರ್ಯತೇ ವಿಧಿಃ. ಏವಂ ಚ ಇಂದ್ರಚಾಪಾಭಮಾರ್ದ್ರನಖಕ್ಷತಂ ದಧಾನೇತಿ ಪ್ರತೀತಿರ್ಭವಿಷ್ಯತಿ ಇತಿ ಚೇನ್ನ; ಏವಂವಿಧನಿರ್ವಾಹೇ ಕಷ್ಟಸೃಷ್ಟಿಕಲ್ಪನಾದೇಕದೇಶವಿವರ್ತ್ಯುಪಮಾಂಗೀಕಾರಸ್ಯೈವ ಜ್ಯಾಯಸ್ತ್ವಾತ್. ಅಸ್ತು ವಾ ಅತ್ರ ಯಥಾಕಥಂಚಿತ್ಸಮಾಸೋಕ್ತಿಃ. 'ನೇತ್ರೈರಿವೋತ್ಪಲೈಃ ಪದ್ಮೈಃ' ಇತ್ಯಾದೌ ಚ ಅನ್ಯಗತ್ಯಸಂಭವಾತ್. ಕಿಂಚ ಉಪಮಾಯಾಂ ವ್ಯವಹಾರಪ್ರತೀತೇರಭಾವಾತ್ ಕಥಂ ತದುಪಜೀವಿಕಾಯಾಃ ಸಮಾಸೋಕ್ತೇಃ ಪ್ರವೇಶಃ ? ಯದಾಹುಃ.

ವ್ಯವಹಾರೋಽಥವಾ ತತ್ತ್ವಮೌಪಮ್ಯೇ ಯತ್ರ ತೀಯತೇ ।
ತತ್ರೌಪಮ್ಯಂ ಸಮಾಸೋಕ್ತಿರೇಕದೇಶೋಪಮಾ ಸ್ಫುಟಾ ।

ಏವಂ ಚ ಉಪಮಾರೂಪಕಯೋರೇಕದೇಶವಿವರ್ತಿತಾಂಗೀಕಾರೇ ತನ್ಮೂಲಸಂಕರೇಽಪಿ ಸಮಾಸೋಕ್ತೇರಪ್ರವೇಶೋ ನ್ಯಾಯಸಿದ್ಧ ಏವ. ತೇನ ಔಪಮ್ಯಗರ್ಭವಿಶೇಷಣೋತ್ಥಾಪಿತತ್ವಂ ನಾಸ್ಯಾ ವಿಷಯ ಇತಿ ವಿಶೇಷಣಸಾಮ್ಯೇ ಶ್ಲಿಷ್ಟವಿಶೇಷಣೋತ್ಥಾಪಿತಾ ಸಾಧಾರಣವಿಶೇಷಣೋತ್ಥಾಪಿತಾ ಚೇತಿ ದ್ವಿಧಾ' ಕಾರ್ಯಲಿಂಗಯೋಸ್ತುಲ್ಯತ್ವೇ ಚ ದ್ವಿವಿಧೇತಿ ಚತುಃಪ್ರಕಾರಾ ಸಮಾಸೋಕ್ತಿಃ. ಸರ್ವತ್ರೈವಾತ್ರ ವ್ಯವಹಾರಸಮಾರೋಪಃ ಕಾರಣಮ್. ಸ ಚ ಕ್ವಚಿಲ್ಲೌಕಿಕೇ ವಸ್ತುನಿ ಲೌಕಿಕವಸ್ತುವ್ಯವಹಾರಸಮಾರೋಪಃ, ಶಾಸ್ತ್ರೀಯೇವಸ್ತುನಿ ಶಾಸ್ತ್ರೀಯವಸ್ತುವ್ಯವಹಾರಸಮಾರೋಪಃ, ಲೌಕಿಕೇವಾ ಶಾಸ್ತ್ರೀಯವಸ್ತುವ್ಯವಹಾರಸಮಾರೋಪಃ, ಶಾಸ್ತ್ರೀಯೇ ವಾ ಲೌಕಿಕವಸ್ತುವ್ಯವಹಾರಸಮಾರೋಪಃ ಇತಿ ಚತುರ್ಧಾ. ತತ್ರ ಲೌಕಿಕವಸ್ತ್ವಪಿ ರಸಾದಿಭೇದಾದನೇಕಧಮ್. ಶಾಸ್ತ್ರೀಯಮಪಿ ತರ್ಕಾಯುರ್ವೇದಜ್ಯೋತಿಃಶಾಸ್ತ್ರಾದಿಪ್ರಸಿದ್ಧತಯೇತಿ ಬಹುಪ್ರಕಾರಾ ಸಮಾಸೋಕ್ತಿಃ. ದಿಙ್ಮಾತ್ರಂ ಯಥಾ 'ವ್ಯಾಧೂಯ ಯದ್ವಸನಂ, ಇತ್ಯಾದೌ ಲೌಕಿಕೇ ವಸ್ತುನಿ ಲೌಕಿಕಸ್ಯ ಹಠಕಾಮುಕತ್ವವ್ಯವಹಾರಾದೇಃ ಸಮಾರೋಪಃ.

ಯೈರೇಕರೂಪಮಖಿಲಾಸ್ವಪಿ ವೃತ್ತಿಷು ತ್ವಾಂ
ಪಶ್ಯದ್ಭಿರವ್ಯಯಮಸಂಖ್ಯತಯಾ ಪ್ರವೃತ್ತಮ್ ।

ಲೋಪಃ ಕೃತಃ ಕಾಲಪರತ್ವಜುಷೋರ್ವಿ ಭಕ್ತೇಃ
ತೈರ್ಲಕ್ಷಣಂ ತವ ಕೃತಂ ಧ್ರುವಮೇವ ಮನ್ಯೇ ||

ಅತ್ರ ಆಗಮಶಾಸ್ತ್ರಪ್ರಸಿದ್ಧೇ ವಸ್ತುನಿ ವ್ಯಾಕರಣಪ್ರಸಿದ್ಧವಸ್ತುವ್ಯವಹಾರ ಸಮಾರೋಪಃ. ಏವಮನ್ಯತ್ರ.

ರೂಪಕೇ ಅಪ್ರಕೃತಮಾತ್ಮಸ್ವರೂಪಸನ್ನಿವೇಶೇನ ಪ್ರಕೃತಸ್ಯ ರೂಪಮವಚ್ಛಾದಯತಿ, ಇಹ ತು ಸ್ವಾವಸ್ಥಾ ಸಮಾರೋಪೇಣ ಅನಚ್ಛಾದಿತಸ್ವರೂಪಮೇವ ತಂ ಪೂರ್ವಾವಸ್ಥಾತೋ ವಿಶೇಷಯತಿ. ಅತ ಏವ 'ಅತ್ರ ವ್ಯವಹಾರಸಮಾರೊಪೋ ನ ಸ್ವರೂಪ ಸಮಾರೋಪಃ' ಇತಿ ವದಂತಿ. ಉಪಮಾಧ್ವನೌ ಶ್ಲೇಷೇ ಚ ವಿಶೇಷ್ಯಸ್ಯಾಪಿ ಸಾಮ್ಯಮ್, ಇಹ ತು ವಿಶೇಷಣಮಾತ್ರಸ್ಯ. ಅಪ್ರಸ್ತುತಪ್ರಶಂಸಾಯಾಂ ಪ್ರಸ್ತುತಸ್ಯ ಗಮ್ಯತ್ವಮ್, ಇಹ ತು ಅಪ್ರಸ್ತುತಸ್ಯೇತಿ ಭೇದಃ.

ವಿಶೇಷಣಸಾಮ್ಯದ ಎರಡನೆಯ ಬಗೆ ಎನಿಸಿದ ಸಾಧಾರಣ್ಯವನ್ನು ವಿವರಿಸುತ್ತಾನೆ. ವಿಶೇಷಣವು ಶ್ಲಿಷ್ಟಪದವಲ್ಲದಿದ್ದರೂ ಪ್ರಕೃತ ಮತ್ತು ಅಪ್ರಕೃತಗಳೆರಡರಲ್ಲೂ ಅನ್ವಯಿಸುವುದಾದರೆ ಅದು ಸಾಧಾರಣವೆನಿಸುತ್ತದೆ. ಅದರಿಂದ ಸಮಾಸೋಕ್ತಿಯು ತೋರುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ಸಹಜಸಿದ್ಧವಾದ ಸುಗಂಧದಲ್ಲಿ ಮೋಹಗೊಂಡ ದುಂಬಿಗಳ ಸಂಗೀತದಿಂದ ಕೂಡಿದ ಪದ್ಮಲತೆಯು (ಪದ್ಮಿನಿ ಎಂಬ ನಾಯಿಕೆಯು) ಸೂರ್ಯನು (ತನ್ನ ನಾಯಕನು) ಉದಯಾಚಲಕ್ಕೆ ಬರಲು (ತನ್ನ ಬಳಿಯಲ್ಲಿರಲು) ವಿಕಾಸಗೊಂಡಿತು (ಆನಂದದಿಂದ ಕೂಡಿದ ನಗುಮುಖವುಳ್ಳವಳಾದಳು) ಇದು ಪ್ರಭಾತದ ವರ್ಣನೆ ಎನಿಸಿದೆ. ಇಲ್ಲಿ ನಿಸರ್ಗತ್ವ ಮೊದಲಾದ ವಿಶೇಷಣಗಳು ಪ್ರಕೃತವೆನಿಸಿದ ಪದ್ಮಿನಿಗೂ, ಅಪ್ರಕೃತವೆನಿಸಿದ ನಾಯಿಕೆಗೂ ಅನ್ವಯಿಸುವಷ್ಟು ಸಮಾನವೆನಿಸಿವೆ. ಈ ಸಾಮ್ಯವೇ ಇಲ್ಲಿ ನಾಯಿಕಾವ್ಯವಹಾರವು ತೋರಲಿಕ್ಕೆ ಮುಖ್ಯ ಕಾರಣವೆನಿಸಿದೆ. ಹಾಗೆ ತೋರಲಿಕ್ಕೂ (ಸ್ತ್ರೀಯರಲ್ಲಿ ಮಾತ್ರವೇ ಇರುವ) ಸ್ತ್ರೈರತ್ವವೆಂಬ ಧರ್ಮವನ್ನು (ಸರೋಜಿನಿಯಲ್ಲಿ) ಆರೋಪಿಸಿದ್ದೇ ಕಾರಣವೆನಿಸಿದೆ. ಈ ಧರ್ಮವನ್ನು ಅದರಲ್ಲಿ ಆರೋಪಿಸದೇ ಇದ್ದರೆ ಕೇವಲ ವಿಶೇಷಣಗಳ ಸಾಮ್ಯವಷ್ಟರಿಂದಲೇ ಸರೋಜಿನೀಲತೆಯಲ್ಲಿ ನಾಯಿಕೆಯ ವ್ಯವಹಾರವು ತೋರುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ.

ವಿಶೇಷಣಸಾಮ್ಯದ ಮೂರನೆಯ ಬಗೆಯನ್ನು ತಿಳಿಸುತ್ತಾನೆ. ವಿಶೇಷಣವೊಳಗೆ ಸಾದೃಶ್ಯವು ನೆಲೆಸಿರುವುದೇ ಈ ಬಗೆ. ಇದು ಔಪಮ್ಯಗರ್ಭವಿಶೇಷಣವೆನಿಸಿದೆ. ಉಪಮೆ ರೂಪಕ ಸಂಕರಗಳು ಮಧ್ಯವಲ್ಲಿ ಸೇರಿಕೊಳ್ಳಬಹುದಾದ್ದರಿಂದ ಇದರಲ್ಲಿ ಮೂರು ವಿಧಗಳಿವೆ. ಉಪಮೆಯನ್ನೊಳಗೊಂಡದ್ದು, ರೂಪಕವನ್ನೊಳಗೊಂಡದ್ದು, ಉಪಮಾರೂಪಕಗಳ ಸಂದೇಹಸಂಕರವನ್ನೊಳಗೊಂಡದ್ದು ಹೀಗೆ ಇದು ಮೂರುಬಗೆಯಾಗಿದೆ. ಅವುಗಳಲ್ಲಿ ಉಪಮಾಗರ್ಭವೆನಿಸಿದ ವಿಶೇಷಣ ಸಾಮ್ಯವನ್ನು ಉದಾಹರಿಸುತ್ತಾನೆ. "ಪುಷ್ಪಗಳಂತಿರುವ ಹಲ್ಲಿನ ಪ್ರಭೆಯಿಂದ (ಹಲ್ಲಿನ ಕಾಂತಿಯಂತಿರುವ ಪುಷ್ಪ

ಗಳಿಂದ) ವ್ಯಾಪಿಸಿ, ಚಿಗುರಿನಂತಿರುವ ಹಸ್ತದೊಡನೆ (ಹಸ್ತದಂತಿರುವ ಚಿಗುರಿನಿಂದ, ಶೋಭಿಸುತ್ತಲೂ, ದುಂಬಿಗಳ ಸಮುಹದಂತಿರುವ ಕೂದಲಿನಿಂದ (ಕೂದಲಿನಂತಿರುವ ದುಂಬಿಗಳಿಂದ) ಕೂಡಿಕೊಂಡು ಸುಂದರವಾಗಿ ಅಲಂಕರಿಸಿಕೊಂಡಿರುವ ಪ್ರೇಯಸಿಯು ಶೋಭಿಸುತ್ತಿರುವಳು." ಇಲ್ಲಿ ಸುವೇಶಾ ಎಂಬ ಪದವು ಉಪಮೆಯನ್ನು ಸಾಧಿಸುವ ಪ್ರಯುಕ್ತ ಮೊದಲು ಪುಷ್ಪದಂತಿರುವ ದಂತಪ್ರಭೆಯು ಎಂದು ಉಪಮೆಯನ್ನೊಳ ಗೊಳ್ಳುವ ರೀತಿಯಲ್ಲಿ ಉಪಮಿತಸಮೂಸವನ್ನು ಹೇಳಲಾಗಿದೆ. ದಂತಪ್ರಭೆಯಂತೆ ಪುಷ್ಪಗಳು ಎಂದು ಆಮೇಲೆ ಅದೇ ಉಪಮಿತಸಮಾಸವನ್ನು ಮತ್ತೆ ಹೇಳಲಾಗಿದೆ. ಹೀಗೆ ಸಮಾಸದಿಂದ ವಿಶೇಷಣಗಳನ್ನು ತಿಳಿಸಿದ್ದರಿಂದ ಪರಿಣೀಕ್ಷಣೆ ಎನಿಸಿದ ಪ್ರೇಯಸಿ ಯಲ್ಲಿ ಲತಾವ್ಯವಹಾರವು ತೋರುತ್ತದೆ. ರೂಪಕವನ್ನೊಳಗೊಂಡ ವಿಶೇಷಣ ಸಾಮ್ಯವನ್ನು ಉದಾಹರಿಸುತ್ತಾನೆ. 'ಲಾವಣ್ಯಮಧುಭಿಃ ಪೂರ್ಣಂ' ಎಂಬಲ್ಲಿ ಲಾವಣ್ಯಗಳೆಂಬ ಮಧುಗಳು, ಲೋಕಲೋಚನಗಳೆಂಬ ರೋಲಂಬಗಳು ಹೀಗೆ ವಿಶೇಷಣಪೂರ್ವಪದಕರ್ಮಧಾರಯಸಮಾಸವನ್ನು ಅಲ್ಲಿ ಹೇಳಹೇಕು. ಹೀಗೆ ವಿಶೇಷಣ ಸಾಮ್ಯಲ್ಲದಿಂದ ರೂಪಕಾಲಂಕಾರವನ್ನೊಳಗೊಂಡ ಸಮಾಸೋಕ್ತಿಯೋ ತೋರು ತ್ತದೆ. 'ದಂತಪ್ರಭಾಪುಷ್ಪಚಿತಾ' ಎಂಬಲ್ಲಿ 'ಸುವೇಶಾ' ಎಂಬುದಕ್ಕೆ ಬದಲು ಪರೀತಾ (ವ್ಯಾಪಿಸಿದ್ದು) ಎಂದು ಹೇಳುವುದಾದರೆ ಉಪಮೆ ಮತ್ತು ರೂಪಕಗಳೆರಡರದಲ್ಲಿ ಒಂದನ್ನು ತಿಳಿಸುವ ಪದವೇ ಇಲ್ಲದಿರುವುದರಿಂದ ಅದು ಸಂದೇಹಸಂಕರವೆನಿಸುವುದು. 'ಪರೀತಾ' ಎಂದು ಹೇಳಿದರೆ ಪೂರ್ವಾರ್ಧದಲ್ಲಿ ಉಪಮಿತಸಮಾಸ ಮತ್ತು ಕರ್ಮಧಾರಯ ಸಮಾಸ ಇವೆರಡಕ್ಕೂ ಬಾಧವಿಲ್ಲದ್ದರಿಂದ ಎರಡೂ ಸಂಭವಿಸುತ್ತವೆ. ಕೇಶಪಾಶಾ ಲವೃಂದೇನ ಎಂಬಲ್ಲಿ ಅಲಿವೃಂದಕ್ಕೆ ಸದೃಶ್ಯಾವಾದ ಕೇಶಪಾಶದಿಂದ ನಾಯಿಕೆಗೆ ವ್ಯಾಪ್ತಿಯು ಸಂಭವಿಸುವುದಕ್ಕೆ ಅಲಿವೃಂದದಂತೆ ಕೇಶಪಾಶವಿದೆ ಎಂದು ಉಪಮಿತ ಸಮಾಸವು ಬರುತ್ತದೆ. ಕೇಶಪಾಶವೆಂಬ ಅಲಿವೃಂದದಿಂದ ಲತೆಗೆ ವ್ಯಾಪ್ತಿಯು ಸಂಭವಿ ಸುವ ಪ್ರಯುಕ್ತ ಕೇಶಪಾಶ ಏವ ಅಲಿವೃಂದಂ ಎಂದು (ರೂಪಕ) ಕರ್ಮಧಾರಯ ಸಮಾಸವೂ ಸಂಭವಿಸುತ್ತದೆ. ಇದರಿಂದ ಉಪಮೆ ಮತ್ತು ರೂಪಕ ಇವುಗಳಲ್ಲಿ ಯಾವು ದಾದರೊಂದನ್ನು ಮಾತ್ರವೇ ಸಾಧಿಸಲಿಕ್ಕೆ ಆಗುವುದಿಲ್ಲ. ಆದ್ದರಿಂದ ಇದು ಸಂದೇಹ ಸಂಕರನ್ನೊಳಗೊಂಡ ಮೂರನೆಯ ಬಗೆಯ ವಿಶೇಷಣಸಾಮ್ಯವೆನಿಸಿದೆ. ಇದರಿಂದ ಇಲ್ಲಿ ಲತೆಯ ವ್ಯವಹಾರವು ತೋರುವ ಪ್ರಯುಕ್ತ ಇದು ಸಮಾಸೋಕ್ತಿ ಎನಿಸಿದೆ. ದಂತಪ್ರಭಾ ಮೊದಲಾದ ವಿಶೇಷಣಗಳಲ್ಲಿ ಉಪಮೆ ಮತ್ತು ರೂಪಕಗಳ ಸಾಂಕರ್ಯವಿ ವಾಗ ಅವುಗಳಲ್ಲಿ ಒಂದನ್ನು ಒಪ್ಪಲಿಕ್ಕಾಗದ ಪ್ರಯುಕ್ತ ಅವೆರಡನ್ನು ಒಪ್ಪುವುದೇ ಯುಕ್ತವೆಂದು ಹೇಳುವವರ ಮತದಲ್ಲಿ ದಂತಪ್ರಭಾ ಎಂಬ ಮೊದಲನೆಯ ಉದಾ ಹರಣದಲ್ಲೂ, ಪರೀತಾ ಎಂಬ ಪಾಠದೊಡಗೂಡಿದ 'ದಂತಪ್ರಭಾ' ಎಂಬ ಮೂರನೆಯ ಉದಾಹರಣದಲ್ಲಿಯೂ ಸಮಾಸೋಕ್ತಿಯೇ ಆಗುತ್ತದೆ. ಮುಖದಲ್ಲಿ ಪದ್ಮದ ಸ್ವರೂಪ ವನ್ನು ಆರೋಪಿಸುವುದರಿಂದ ಆ ಪದ್ಮದ ವ್ಯವಹಾರವನ್ನು ಆರೋಪಿಸಲಿಕ್ಕೆ ಆಗದೇ

ಇರುವ ಪ್ರಯುಕ್ತ ಸಮಾಸೋಕ್ತಿಯೇ ಆಗದ್ದರಿಂದ ಅಲ್ಲಿ ಏಕದೇಶವಿವರ್ತಿರೂಪಕ ವನ್ನೇ ಹೇಳಬೇಕೆಂಬುದು ಗ್ರಂಥಕಾರನ ಅಭಿಪ್ರಾಯ. ಇದರಲ್ಲಿ ಸೂಕ್ಷ್ಮವಾಗಿ ವಿಮರ್ಶಿಸಿ ನೋಡಿದರೆ ಇಲ್ಲಿ ಏಕದೇಶವಿವರ್ತಿ ಉಪಮಾಲಂಕಾರವನ್ನು ಹೇಳುವುದೇ ಯುಕ್ತವೆನಿಸುತ್ತದೆ. ಹಾಗೆ ಹೇಳದೇ ಇದ್ದರೆ ಐಂದ್ರಂ ಧನುಃ ಎಂಬ ಪದ್ಯದಲ್ಲಿ ಶರತ್ಕಾಲ ದಲ್ಲಿ ನಾಯಿಕೆಯ ವ್ಯವಹಾರವು ಹೇಗೆ ತೋರೀತು ? "ನೀರೆಲ್ಲವನ್ನು ಸುರಿಸಿ ಶುಭ್ರವಾದ ಮೇಘದಿಂದ (ಸ್ತನದಿಂದ) ಆಗ ತಾನೆ ಉಂಟಾಗಿರುವ ಉಗುರಿನ ಗಾಯಕ್ಕೆ ಸದೃಶ ವಾದ ಇಂದ್ರನ ಧನುಸ್ಸನ್ನು ಧರಿಸಿದ ಶರತ್ಕಾಲವು (ಒಬ್ಬ ಸಂಸಾರಿಸ್ತ್ರೀಯು) ಮೊಲದ ಗುರುತೆಂಬ ಕಳಂಕದಿಂದ (ಪರಸ್ತ್ರೀಸಂಸರ್ಗದ ದೋಷದಿಂದ) ಕೂಡಿರುವ ಚಂದ್ರ ನನ್ನು (ಉಪಪತಿಯನ್ನು) ನಿರ್ಮಲಗೊಳಿಸುತ್ತ (ತನ್ನ ಸಮಾಗಮದಿಂದ ಸಂತೋಷ ಗೊಳಿಸುತ್ತ, ಸೂರ್ಯನಿಗೆ (ಪತಿಗೆ) ಹೆಚ್ಚು ಮನಸ್ತಾಪವನ್ನುಂಟುಮಾಡಿದಳು." ಇಲ್ಲಿ ಐಂದ್ರಧನುಸ್ಸಿನಲ್ಲಿ ನಖಕ್ಷತಸಾಮ್ಯವೂ ಮೇಘದಲ್ಲಿ ಸ್ತನಸಾಮ್ಯವೂ ವಾಚ್ಯವಾಗಿವೆ. ಆದರೆ ಶರತ್ಕಾಲದಲ್ಲಿ ನಾಯಿಕೆಯ ಸಾಮ್ಯವೂ, ರವಿಯಲ್ಲಿ ಪತಿಯ ಸಾಮ್ಯವೂ ವ್ಯಂಗ್ಯ ವಾಗಿವೆ. ಆದ್ದರಿಂದ ಇಲ್ಲಿ ಏಕದೇಶವಿವರ್ತಿನೀ ಉಪಮೆಯನ್ನೇ ಹೇಳಬೇಕೆಂಬುದು ಗ್ರಂಥಕಾರನ ಆಶಯ. ಬೇರೆಯವರು ಉಪಮೆಯಿಂದೊಡಗೂಡಿದ ವಿಶೇಷಣಗಳ ಸಾಮ್ಯದಿಂದ ನಾಯಿಕೆಯ ವ್ಯವಹಾರವನ್ನು ಆರೋಪಿಸುವುದರಿಂದ ಇಲ್ಲಿ ಸಮಾ ಸೋಕ್ತಿಯೇ ಇದೆ ಎಂದು ಹೇಳುತ್ತಾರೆ. ಗ್ರಂಥಕಾರನಿಗೆ ಇದು ಸಮ್ಮತವಿಲ್ಲ. ಯಾವ ವ್ಯವಹಾರವನ್ನು ಎಲ್ಲಿ ಆರೋಪಿಸಬೇಕೋ ಅಲ್ಲಿಯೇ ವಿಶೇಷಣಗಳು ಸಂಭವಿಸುವುದು ಆವಶ್ಯಕ. ಹಾಗೆ ಇಲ್ಲದಿದ್ದರೆ ನೀರಿನಲ್ಲೂ ಬೆಂಕಿ ಎಂಬ ವ್ಯವಹಾರವನ್ನು ಆರೋಪಿಸ ಬೇಕಾದೀತು ? ಆದ್ದರಿಂದ ಭೂಮಿಯಲ್ಲಿರುವ ನಾಯಿಕೆಯ ಸ್ತನವು ದೂರದ ಆಕಾಶ ದಲ್ಲಿರುವ ಇಂದ್ರನ ಧನುಸ್ಸನ್ನು ಧರಿಸಿದೆ ಎಂಬುದು ಸಂಭವಿಸದೇ ಇರುವುದರಿಂದ 'ಪಾಂಡುಪಯೋಧರೇಣ ಆರ್ದ್ರನಖಕ್ಷತಾಭಂ ಐಂದ್ರಂ ಧನುಃ ದಧಾನಾ' ಎಂಬ ವಿಶೇ ಷಣವು ನಾಯಿಕೆಯ ಪಕ್ಷದಲ್ಲಿ ಅತ್ಯಂತ ಅಸಂಭವವೆನಿಸಿದ್ದರಿಂದ ಶರತ್ಕಾಲವಲ್ಲಿ ನಾಯಿಕೆಯ ವ್ಯವಹಾರವನ್ನು ಆರೋಪಿಸಲಿಕ್ಕೆ ಆಗದೇ ಇರುವಾಗ ಹೇಗೆ ಇಲ್ಲಿ ಸಮಾ ಸೋಕ್ತಿಯನ್ನು ಹೇಳಲಿಕ್ಕೆ ಆದೀತು ? ಹೇಳುವವನ ಅಭಿಪ್ರಾಯವನ್ನು ಚೆನ್ನಾಗಿ ಪರ್ಯಾಲೋಚನಮಾಡಿದರೆ ಆರ್ದ್ರನಖಕ್ಷತಾಭಂ ಎಂಬಲ್ಲಿರುವ ಉಪಮಾನವನ್ನು ಇಂದ್ರಧನುಸ್ಸಿನಲ್ಲಿ ಹೊಂದಿಸಬಹುದು. ಈ ಬಗ್ಗೆ ಮೀಮಾಂಸಕರ ದಧ್ನಾ ಜುಹೋತಿ ಎಂಬ ದೃಷ್ಟಾಂತವೂ ಇದೆ. 'ಅಗ್ನಿಹೋತ್ರಂ ಜುಹೋತಿ' ಎಂಬಲ್ಲಿ ಅಗ್ನಿಹೋತ್ರ ವೆಂಬ ಹೋಮದಲ್ಲಿ ಮೊಸರು ಮೊದಲಾದ ಹವಿಸ್ಸನ್ನು ಅರ್ಪಿಸಬೇಕೆಂಬುದು ತಾನಾ ಗಿಯೇ ಸಿದ್ಧಿಸುವಾಗ ಮತ್ತೆ 'ದಧ್ನಾ ಜುಹೋತಿ' ಎಂದು ಮೊಸರಿಂದ ಹೋಮಮಾಡು ತ್ತಾನೆ ಎಂದು ಮೊಸರಿನ ಬಗ್ಗೆ ಮತ್ತೆ ವಿಧಿಸಲಾಗಿದೆ ಹಿಂದಿನ ವಿಧಿಯಿಂದಲೇ ಹಾಲು ಮೊಸರು ಎಲ್ಲವನ್ನೂ ಹೋಮಮಾಡಲು ಸಾಧ್ಯವಿರುವಾಗ ಮೊಸರಿಗೆ ಮಾತ್ರ ವಿಧಿಯು ಬೇಕಾಗಿಲ್ಲವಾದರೂ ಹೊರಟಿದೆ. ಹೀಗೆಯೇ 'ಆರ್ದ್ರನಖಕ್ಷತಾಭಂ' ಎಂಬಲ್ಲಿ

ರುವ ಉಪಮಾನವು ಐಂದ್ರಧನುಸ್ಸಿನಲ್ಲೂ ಅನ್ವಯಿಸುತ್ತದೆ. ಇಂದ್ರಧನುಸ್ಸನ್ನು ಹಿಡಿದಿರುವ ನಾಯಿಕೆ ಎಂದು ಇಲ್ಲಿ ಭಾವಿಸಬೇಕು. ಹೀಗೆ ಇಂದ್ರಧನುಸ್ಸಿಗೆ ಸದೃಶ ವಾದ ಆರ್ದ್ರನಖಕ್ಷತವನ್ನು ಧರಿಸಿರುವ ನಾಯಿಕೆ ಎಂಬ ಅರ್ಥದಲ್ಲಿ ಕೊನೆಗಾಣುವ ವಿಶೇಷಣವು ನಾಯಿಕೆಯ ಪಕ್ಷದಲ್ಲೂ ಸಂಭವಿಸುವುದರಿಂದ ಇಲ್ಲಿ ಸಮಾಸೋಕ್ತಿಯನ್ನು ಹೇಳಬಹುದೆಂದು ಅವರ ಅಭಿಪ್ರಾಯ. ಇದನ್ನು ಗ್ರಂಥಕಾರನು ಖಂಡಿಸುತ್ತಾನೆ. ಇಂತಹ ವೇದವಾಕ್ಯವು ಕಾವ್ಯದಲ್ಲಿ ಸಂಭವಿಸುವುದಿಲ್ಲ. ಬೇರೆಕಡೆ ಇರುವ ವಸ್ತುವನ್ನು ಬೇರೊಂದರಲ್ಲಿ ಆರೋಪಿಸಲಿಕ್ಕೆ ಸಾಧ್ಯವಾಗುವುದಿಲ್ಲ. ಹೀಗೆ ಮಾಡುವುದಾದರೆ ಕಷ್ಟ ಸೃಷ್ಟಿಯನ್ನು ಕಲ್ಪಿಸಿದಂತಾಗುವುದು. ಇಷ್ಟೊಂದು ಪ್ರಯಾಸದಿಂದ ಸಮಾಸೋಕ್ತಿ ಯನ್ನು ಕಲ್ಪಿಸುವುದಕ್ಕಿಂತ ಏಕದೇಶವಿವರ್ತಿನೀ ಉಪಮಾಲಂಕಾರವನ್ನು ಹೇಳುವುದೇ ಯುಕ್ತವಾಗುವುದು. ಐಂದ್ರಂ ಧನುಃ ಎಂಬಲ್ಲಿ ಹೇಗಾದರೂ ಶ್ರಮಪಟ್ಟು ಸಮಾಸೋಕ್ತಿ ಯನ್ನು ಹೇಳಬಹುದಾದರೂ 'ನೇತ್ರೈರಿವೋತ್ಪಲೈಃ ಪದ್ಮೈಃ' ಎಂಬಲ್ಲಿ ಬೇರೆ ಉಪಾ ಯವೇ ಇಲ್ಲದ್ದರಿಂದ ಏಕದೇಶವಿವರ್ತಿನೀ ಉಪಮೆಯನ್ನೇ ಹೇಳಬೇಕಾಗುತ್ತದೆ. ಇದನ್ನು ಬಿಟ್ಟರೆ ಬೇರೆ ವೈಚಿತ್ರ್ಯವೇ ಸಂಭವಿಸುವುದಿಲ್ಲ. ಇದೂ ಅಲ್ಲದೆ ಇವ ಮೊದ ಲಾದ ಶಬ್ದಗಳಿಂದ ತೋರುವ ಉಪಮಾಲಂಕಾರದಲ್ಲಿ ನಾಯಿಕೆಯ ವ್ಯವಹಾರವೇ ತೋರುವ ಸಂಭವವಿಲ್ಲದ್ದರಿಂದ ಅದನ್ನಾಶ್ರಯಿಸಿಕೊಂಡಿರುವ ಸಮಾಸೋಕ್ತಿಯು ಹೇಗೆ ತೋರೀತು ? ಇಲ್ಲಿ ಇವ ಶಬ್ದವು ಸಾದೃಶ್ಯವನ್ನೇ ತಿಳಿಸುವುದರಿಂದ ನಾಯಿಕೆಯ ಸಾದೃಶ್ಯವೇ ಸಹಜವಾಗಿ ತೋರುವುದು; ಆದರೆ ನಾಯಿಕೆಯ ವ್ಯವಹಾರವು ತೋರು ವುದಿಲ್ಲ. ಸಾದೃಶ್ಯಕ್ಕೂ ವ್ಯವಹಾರಕ್ಕೂ ಹೆಚ್ಚು ವ್ಯತ್ಯಾಸವಿದೆ. ಆದ್ದರಿಂದ 'ನೇತ್ರೈ ರಿವ' ಎಂಬ ಪದ್ಯದಲ್ಲಿ ಏಕದೇಶವಿವರ್ತಿನೀ ಉಪಮೆಯನ್ನು ಹೇಳಲೇಬೇಕು. ಹಾಗೆಯೇ 'ಐಂದ್ರಂ ಧನುಃ' ಎಂಬ ಪದ್ಯದಲ್ಲೂ ಏಕದೇಶವಿವರ್ತಿನೀ ಉಪಮೆಯನ್ನು ಹೇಳುವುದೇ ನ್ಯಾಯ. ಈ ಬಗ್ಗೆ ಪ್ರಾಚೀನರ ಸಮ್ಮತಿಯೂ ಇದೆ. ಸಾದೃಶ್ಯದಿಂದ ಕೂಡಿದ ವಿಶೇಷಣವಿರುವ ಕಡೆ ವ್ಯವಹಾರವಾಗಲೀ ಸ್ವರೂಪವಾಗಲೀ ಸಾದೃಶ್ಯದಲ್ಲಿ ಕೊನೆಗಾಣು ವುದಾದರೆ ಅದು ಸಮಾಸೋಕ್ತಿ ಎನಿಸುವುದಿಲ್ಲ. ಆದರೆ ಅದು ಏಕದೇಶವಿವರ್ತಿನೀ ಉಪಮೆ ಎನಿಸುವುದು." ಹೀಗೆ ಉಪಮೆ ಮತ್ತು ರೂಪಕ ಇವುಗಳೆರಡರಲ್ಲೂ ಏಕ ದೇಶವಿವರ್ತಿ ಎಂಬ ಅಂಶವನ್ನು ಅಂಗೀಕರಿಸಿದರೆ ಅವುಗಳನ್ನವಲಂಬಿಸಿದ ಸಂಕರದಲ್ಲೂ ಸಮಾಸೋಕ್ತಿಯನ್ನು ಸೇರಿಸುವುದು ನ್ಯಾಯವಲ್ಲ. ಹೀಗೆ ಗ್ರಂಥಕಾರನ ಅಭಿಪ್ರಾ ಯಕ್ಕೆ ಪ್ರಾಚೀನರ ಸಮ್ಮತಿ ಇರುವುದರಿಂದ ಏಕದೇಶವಿವರ್ತಿ ಎನಿಸಿದ ಉಪಮಾ ರೂಪಕಸಂದೇಹಸಂಕರದಲ್ಲಿ ವ್ಯವಹಾರವನ್ನು ಆರೋಪಿಸಲಿಕ್ಕಾಗದ್ದರಿಂದ ಸಮಾ ಸೋಕ್ತಿಗೆ ಪ್ರವೇಶವಿಲ್ಲ. ಆದ್ದರಿಂದ 'ದಂತಪ್ರಭಾ' ಎಂಬಲ್ಲಿ ಹೇಳಿದ ಮೂರು ಉದಾ ಹರಣಗಳಲ್ಲೂ ಸಮಾಸೋಕ್ತಿಯಿಲ್ಲವೆಂದು ತಿಳಿಯಬೇಕು. ಹೀಗೆ ವಿಶೇಷಣಸಾಮ್ಯ ದಲ್ಲಿ ಶ್ಲಿಷ್ಟವಿಶೇಷಣದಿಂದಲೂ ಸಾಧಾರಣವಿಶೇಷಣದಿಂದಲೂ ಸಮಾಸೋಕ್ತಿ ಎರಡು ಬಗೆ ಎನಿಸುವುದು. ಇವುಗಳ ಜೊತೆಗೆ ಕಾರ್ಯಸಾಮ್ಯದಿಂದಲೂ ಲಿಂಗಸಾಮ್ಯದಿಂದಲೂ

ತೋರುವ ಸಮಾಸೋಕ್ತಿ ಎರಡು ಬಗೆಯಾಗುವ ಪ್ರಯುಕ್ತ ಅದರಲ್ಲಿ ಒಟ್ಟು ನಾಲ್ಕು ಬಗೆಗಳಾಗುತ್ತವೆ. ಇಲ್ಲಿ ಎಲ್ಲಾ ಕಡೆಗಳಲ್ಲೂ ವ್ಯವಹಾರಸಮಾರೋಪವೇ ಮುಖ್ಯ ಕಾರಣವೆನಿಸಿದೆ. ಕೆಲವುಕಡೆ ಲೋಕಪ್ರಸಿದ್ಧವಾದ ವಸ್ತುವಿನಲ್ಲಿ ಲೌಕಿಕವಸ್ತುವಿನ ವ್ಯವಹಾರವನ್ನೂ ಶಾಸ್ತ್ರಸಿದ್ಧವಾದವಸ್ತುನಲ್ಲಿ ಶಾಸ್ತ್ರೀಯವಸ್ತುವಿನ ವ್ಯವಹಾರವನ್ನೂ, ಶಾಸ್ತ್ರೀಯವಸ್ತುವಿನಲ್ಲಿ ಲೌಕಿಕವಸ್ತುವಿನ ವ್ಯವಹಾರವನ್ನೂ ಆರೋಪಿಸುವ ಪ್ರಯುಕ್ತ ಒಂದೊಂದೂ ನಾಲ್ಕುಬಗೆಯಾಗಿ ಸಮಾಸೋಕ್ತಿಯು ಒಟ್ಟು ಹದಿನಾರು ಬಗೆಯಾಗುತ್ತದೆ. ಅದರಲ್ಲಿ ಲೌಕಿಕವಸ್ತುವೂ ಸಹ ಶೃಂಗಾರವೇ ಮೊದಲಾದ ರಸಭೇದೂ, ಗಡಿಗೆ ಮೊದಲಾದ ರೂಪದಿಂದಲೂ ಅನೇಕ ಬಗೆಯಾಗಿದೆ. ಶಾಸ್ತ್ರೀಯವಸ್ತುವೂ ಸಹ ತರ್ಕ, ಆಯುರ್ವೇದ, ಜ್ಯೋತಿಶ್ಶಾಸ್ತ್ರ ಮೊದಲಾದ ಅನೇಕ ಶಾಸ್ತ್ರಗಳಲ್ಲಿ ಪ್ರಸಿದ್ಧವೆನಿಸಿದ್ದರಿಂದ ಸಮಾಸೋಕ್ತಿಯು ಅನೇಕ ಬಗೆಯಾಗಿದೆ. ಇವುಗಳಲ್ಲಿ ಒಂದನ್ನು ಸೂಚನೆಗಾಗಿ ಉದಾಹರಿಸಿದೆ. 'ವ್ಯಾಧೂಯ ಯದ್ವದನಂ' ಎಂಬಲ್ಲಿ ಲೌಕಿಕವಸ್ತುವಿನಲ್ಲಿ ಲೌಕಿಕವೇ ಆದ ಹಠಕಾಮುಕನ ವ್ಯವಹಾರವನ್ನು ಆರೋಪಿಸಲಾಗಿದೆ. ಮುಂದಿನ ಪದ್ಯದಲ್ಲಿ ಆಗಮಶಾಸ್ತ್ರದಲ್ಲಿ ಸಿದ್ಧವಾದ ವಸ್ತುವಿನಲ್ಲಿ ವ್ಯಾಕರಣಶಾಸ್ತ್ರಪ್ರಸಿದ್ಧವಾದ ವಸ್ತುವಿನ ವ್ಯವಹಾರವನ್ನು ಆರೋಪಿಸಲಾಗಿದೆ. "ಎಲೈ ಪರಮಾತ್ಮನೇ, ಜಗತ್ತಿನ ಸೃಷ್ಟಿಸ್ಥಿತಿ ಸಂಹಾರವೇ ಮೊದಲಾದ ಎಲ್ಲಾ ವ್ಯವಹಾರಗಳಲ್ಲೂ ನಿರ್ವಿಕಾರನೆನಿಸಿದ (ಪ್ರತ್ಯಯವನ್ನು ಹಚ್ಚಿದಾಗಲೂ ಸಮಾಸದಲ್ಲೂ ಒಂದೇ ಬಗೆಯಾಗಿದ್ದು) ನಾಶವಾಗದೇ ಇದ್ದು (ಅವ್ಯಯವೆನಿಸಿ) ಅಷ್ಟಿಷ್ಟೆಂಬ ಪರಿಮಿತಿ ಇಲ್ಲದೆ ಪ್ರವರ್ತಿಸುವ ನಿನ್ನನ್ನು ತಿಳಿದವರು ನಿನಗಿಂತ ಬೇರೆ ಇರುವರೆಂಬ ವಿಭಾಗವೇ ತೋಲಗುವುದೆಂದು ಯಾರು ಭಾವಿಸುವರೋ ಅವರೇ ನಿಜವಾಗಿಯೂ ನಿನ್ನ ಸ್ವರೂಪವನ್ನು ತಿಳಿಯಬಲ್ಲರೆಂದು ಭಾವಿಸುತ್ತೇನೆ." ಹೀಗೆ ಆಗಮಶಾಸ್ತ್ರದಲ್ಲಿಯೇ ಪ್ರಸಿದ್ಧವೆನಿಸಿದ ಪರಮಾತ್ಮನೆಂಬ ವಸ್ತುವಿನಲ್ಲಿ 'ಸ್ವರಾದಿನಿಪಾತಮವ್ಯಯಮ್' ಎಂದು ವ್ಯಾಕರಣಶಾಸ್ತ್ರಪ್ರಸಿದ್ಧವಾದ ಅವ್ಯಯವೆಂಬ ವಸ್ತುವಿನ ವ್ಯವಹಾರವನ್ನು ಆರೋಪಿಸಲಾಗಿದೆ. ಅವ್ಯಯವು ಎಲ್ಲಾ ಲಿಂಗಗಳಲ್ಲೂ ಎಲ್ಲಾ ವಚನಗಳಲ್ಲೂ ವ್ಯತ್ಯಾಸವನ್ನು ಹೊಂದದೆ ಒಂದೇ ಬಗೆಯಾಗಿರುತ್ತದೆ.ಹಾಗೆ ಪರಮಾತ್ಮನೂ ಅವ್ಯಯವವೆನಿಸಿರುವನೆಂದು ಅವನಲ್ಲಿ ಅವ್ಯಯ ವ್ಯವಹಾರವನ್ನು ಆರೋಪಿಸಿದ್ದರಿಂದ ಇದು ಶಾಸ್ತ್ರಸಿದ್ಧವಸ್ತುವಿನಲ್ಲಿ ಶಾಸ್ತ್ರಸಿದ್ಧವಸ್ತುವಿನ ವ್ಯವಹಾರಸಮಾರೋಪಕ್ಕೆ ಉದಾಹರಣವೆನಿಸಿದೆ. ಹೀಗೆಯೇ ಬೇರೆ ಅಲಂಕಾರಗಳಿಗೂ ಸಮಾಸೋಕ್ತಿಗೂ ಭೇದವನ್ನು ತಿಳಿಸುತ್ತಾನೆ. ರೂಪಕಾಲಂಕರದಲ್ಲಿ (ಅಪ್ರಕೃತ) ಉಪಮಾನವೆನಿಸಿದ ವಸ್ತುವು ಉಪಮೇಯದಲ್ಲಿ ತನ್ನ ರೂಪವನ್ನು ಆರೋಪಿಸಿ ಉಪಮೇಯದ ಸ್ವಭಾವವನ್ನು ಮರೆಮಾಚುತ್ತದೆ. ಉಪಮೇಯವನ್ನು ಅಪ್ರಧಾನವನ್ನಾಗಿ ಮಾಡಿ ಉಪಮಾನವೇ ಪ್ರಧಾನವೆನಿಸುತ್ತದೆ. ಸಮಾಸೋಕ್ತಿಯಲ್ಲಾದರೋ ಅದೇ ಅಪ್ರಕೃತವಾದ ವಸ್ತುವು ಪ್ರಕೃತವಸ್ತುವಿನಲ್ಲಿ ತನ್ನ ವ್ಯವಹಾರವನ್ನು ಆರೋಪಿಸುವ ಮೂಲಕ ಅದರ ಸ್ವಭಾವವನ್ನು ಮರೆಮಾಚುತ್ತದೆ. ಅಂದರೆ ಉಪಮೇಯವನ್ನು

ಹಿಂದಿನ ಅವಸ್ಥೆಗಿಂತಲೂ ಉತ್ಕರ್ಷಗೊಳಿಸುವುದರಲ್ಲಿಯೇ ಸಮಾಸೋಕ್ತಿಯ ವೈಚಿತ್ರ್ಯವು ಅಡಗಿದೆ. ಆದ್ದರಿಂದಲೇ ಸಮಾಸೋಕ್ತಿಯಲ್ಲಿ ವ್ಯವಹಾರವನ್ನು ಆರೋಪಿಸಬೇಕೇ ಹೊರತು ಸ್ವರೂಪವನ್ನು ಆರೋಪಿಸುವುದಿಲ್ಲವೆಂದು ಅನುಭವಿಗಳು ಹೇಳಿದ್ದಾರೆ. ಹಿಮಮುಕ್ತಚಂದ್ರರುಚಿರಃ ಎಂಬಲ್ಲಿರುವ ಉಪಮಾಧ್ವನಿಯಲ್ಲೂ 'ಪ್ರವರ್ತಯನ್ ಕ್ರಿಯಾಃ ಸಾಧ್ವೀಃ' ಎಂಬಲ್ಲಿರುವ ಶ್ಲೇಷದಲ್ಲೂ ವಿಶೇಷಣವಷ್ಟೇ ಅಲ್ಲದೆ ವಿಶೇಷ್ಯವೂ ಪ್ರಧಾನವೆನಿಸಿದ್ದರಿಂದ ವಿಶೇಷ್ಯದ ಸಾಮ್ಯವನ್ನೂ ಗಮನಿಸಲಾಗುವುದು. ಅಪ್ರಸ್ತುತಪ್ರಶಂಸೆಯಲ್ಲಿ ಪ್ರಕೃತವೆನಿಸಿದ ಅಂಶವು ವಾಚ್ಯವಾಗಿಲ್ಲದೆ ವ್ಯಂಜನೆಯಿಂದ ತೋರುತ್ತದೆ. ಸಮಾಸೋಕ್ತಿಯಲ್ಲಾದರೋ ಅಪ್ರಕೃತವಾದ ಅಂಶವೇ ವ್ಯಂಜನೆಯಿಂದ ತೋರುವುದು. ಇಷ್ಟೇ ಇವೆರಡಕ್ಕೂ ಇರುವ ಭೇದ.

ಉಕ್ತಿರ್ವಿಶೇಷಣೈಃ ಸಾಭಿಪ್ರಾಯೈಃ ಪರಿಕರೋ ಮತಃ ।

ಯಥಾ "ಅಂಗರಾಜ! ಸೇನಾಪತೇ! ದ್ರೋಣಾಪಹಾಸಿನ್! ಕರ್ಣ! ರಕ್ಷೈನಂ ಭೀಮಾದ್ದುಃಶಾಸನಮ್."

ಶಬ್ದೈಃ ಸ್ವಭಾವಾದೇಕಾರ್ಥೈಃ ಶ್ಲೇಷೋಽನೇಕಾರ್ಥವಾಚನಮ್। 'ಸ್ವಭಾವಾದೇಕಾರ್ಥೈಃ' ಇತಿ ಶಬ್ದಶ್ಲೇಷಾದ್ವ್ಯವಚ್ಛೇದಃ. 'ವಾಚನಮ್' ಇತಿ ಚ ಧ್ವನೇಃ.

ಪ್ರವರ್ತಯನ್ ಕ್ರಿಯಾಃ ಸಾಧ್ವೀರ್ಮಾಲಿನ್ಯಂ ಹರಿತಾಂ ಹರನ್ ।
ಮಹಸಾ ಭೂಯಸಾ ದೀಪ್ತೋ ವಿರಾಜತಿ ವಿಭಾಕರಃ ॥

ಅತ್ರ ಪ್ರಕರಣಾದಿನಿಯಮಾಭಾವಾತ್ ದ್ವಾವಪಿ ರಾಜಸೂರ್ಯೌ ವಾಚ್ಯೌ.

ಕ್ವಚಿದ್ವಿಶೇಷಃ ಸಾಮಾನ್ಯಾತ್ ಸಾಮಾನ್ಯಂ ವಾ ವಿಶೇಷತಃ ।
ಕಾರ್ಯಾನ್ನಿಮಿತ್ತಂ ಕಾರ್ಯಂ ಚ ಹೇತೋರಥ ಸಮಾತ್ಸಮಮ್ ॥
ಅಪ್ರಸ್ತುತಾತ್ ಪ್ರಸ್ತುತಂ ಚೇತ್ ಗಮ್ಯತೇ ಪಂಚಧಾ ತತಃ ।
ಅಪ್ರಸ್ತುತಪ್ರಶಂಸಾ ಸ್ಯಾತ್ ಉಕ್ತಾ ವ್ಯಾಜಸ್ತುತಿಃ ಪುನಃ ॥

ಪಾದಾಹತಂ ಯದುತ್ಥಾಯ ಮೂರ್ಧಾನಮಧಿರೋಹತಿ ।
ಸ್ವಸ್ಥಾದೇವಾಪಮಾನೇಽಪಿ ದೇಹಿನಸ್ತದ್ವರಂ ರಜಃ ॥

ಅತ್ರ ಅಸ್ಮದಪೇಕ್ಷಯಾ ರಜೋಽಪಿ ವರಮಿತಿ ವಿಶೇಷೇ ಪ್ರಸ್ತುತೇ ಸಾಮಾನ್ಯಮಭಿಹಿತಮ್.

ಸ್ರಗಿಯಂ ಯದಿ ಜೀವಿತಾಪಹಾ ಹೃದಯೇ ಕಿಂ ನಿಹಿತಾ ನ ಹಂತಿ ಮಾಮ್।
ವಿಷಮಪ್ಯಮೃತಂ ಕ್ವಚಿದ್ಭವೇದಮೃತಂ ವಾ ವಿಷಮೀಶ್ವರೇಚ್ಛಯಾ ॥

ಅಥ ಈಶ್ವರೇಚ್ಛಯಾ ಕ್ವಚಿದಹಿತಕಾರಿಣೋಽಪಿ ಹಿತಕಾರಿತ್ವಂ ಹಿತಕಾರಿಣೋಽಪ್ಯಹಿತಕಾರಿತ್ವಮಿತಿ ಸಾಮಾನ್ಯೇ ಪ್ರಸ್ತುತೇ ವಿಶೇಷೋಽಪ್ಯಭಿಹಿತಃ. ಏವಂ ಚಾತ್ರ ಅಪ್ರಸ್ತುತಪ್ರಶಂಸಾಮೂಲೋಽರ್ಥಾಂತರನ್ಯಾಸಃ. ದೃಷ್ಟಾಂತೇ ಪ್ರಖ್ಯಾತಮೇವ ವಸ್ತು ಪ್ರತಿಬಿಂಬತ್ವೇನೋಪಾದೀಯತೇ ಇಹ ತು ವಿಷಾಮೃತಯೋರಮೃತವಿಷೀಭಾವಸ್ಯ ಅಪ್ರಸಿದ್ಧೇರ್ನ ತಸ್ಯ ಸದ್ಭಾವಃ.

ಇಂದುರ್ಲಿಪ್ತ ಇವಾಂಜನೇನ ಜಡತಾ ದೃಷ್ಟಿರ್ಮೃಗೀಣಾಮಿವ
ಪ್ರಮ್ಲಾನಾರುಣಿಮೇವ ವಿದ್ರುಮದಳಂ ಶ್ಯಾಮೇವ ಹೇಮಪ್ರಭಾ ।
ಕಾರ್ಕಶ್ಯಂ ಕಲಯಾ ಚ ಕೋಕಿಲವಧೂಕಂಠೇಷ್ವಿವ ಪ್ರಸ್ತುತಂ
ಸೀತಾಯಾಃ ಪುರತಶ್ಚ ಹಂತ ಶಿಖಿನಾಂ ಬರ್ಹಾಃ ಸಗರ್ಹಾ ಇವ ॥

ಅತ್ರ ಸಂಭಾವ್ಯಮಾನೇಭ್ಯಃ ಇಂದ್ವಾದಿಗತಾಂಜನಲಿಪ್ತತ್ವಾದಿಭ್ಯಃ ಕಾರ್ಯೇಭ್ಯೋ ವದನಾದಿಗತಸೌಂದರ್ಯವಿಶೇಷರೂಪಂ ಪ್ರಸ್ತುತಂ ಕಾರಣಂ ಪ್ರತೀಯತೇ.

ಗಚ್ಛಾಮೀತಿ ಮಯೋಕ್ತಯಾ ಮೃಗದೃಶಾ ನಿಶ್ವಾಸಮುದ್ರೇಕಿಣಂ
ತ್ಯಕ್ತ್ವಾ ತಿರ್ಯಗವೇಕ್ಷ್ಯ ಬಾಷ್ಪಕಲುಷೇಣೈಕೇನ ಮಾಂ ಚಕ್ಷುಷಾ ।
ಅದ್ಯ ಪ್ರೇಮ ಮದರ್ಪಿತಂ ಪ್ರಿಯಸಖೀವೃಂದೇ ತ್ವಯಾ ಬಧ್ಯತಾಂ
ಇತ್ಥಂ ಸ್ನೇಹವಿವರ್ಧಿತೋ ಮೃಗಶಿಶುಃ ಸೋತ್ಪ್ರಾಸಮಾಭಾಷಿತಃ ॥

ಅತ್ರ ಕಸ್ಯಚಿದಾಗಮನರೂಪೇ ಕಾರ್ಯೇ ಕಾರಣಮಭಿಹಿತಮ್. ತುಲ್ಯೇ ಪ್ರಸ್ತುತೇ ತುಲ್ಯಾಭಿಧಾನೇ ಚ ದ್ವಿಧಾ ಶ್ಲೇಷಮೂಲಾ ಸಾದೃಶ್ಯಮಾತ್ರಮೂಲಾ ಚ. ಶ್ಲೇಷಮೂಲಾಪಿ ಸಮಾಸೋಕ್ತಿವದ್ವಿಶೇಷಣಮಾತ್ರಶ್ಲೇಷೇ ಶ್ಲೇಷವದ್ವಿಶೇಷ್ಯಸ್ಯಾಪಿ ಶ್ಲೇಷೇ ಭವತೀತಿ ದ್ವಿಧಾ. ಕ್ರಮೇಣ ಯಥಾ—

ಸಹಕಾರಃ ಸಹಮೋದಃ ವಸಂತಶ್ರೀಸಮನ್ವಿತಃ ।
ಸಮುಜ್ಜ್ವಲರುಚಿಃ ಶ್ರೀಮಾನ್ ಪ್ರಭೂತೋತ್ಕಲಿಕಾಕುಲಃ ॥

ಅತ್ರ ವಿಶೇಷಣಮಾತ್ರಶ್ಲೇಷವಶಾದಪ್ರಸ್ತುತಾತ್ ಸಹಕಾರಾತ್ ಕಸ್ಯಚಿತ್ ಪ್ರಸ್ತುತಸ್ಯ ನಾಯಕಸ್ಯ ಪ್ರತೀತಿಃ.

ಪುಂಸ್ತ್ವಾದಪಿ ಪ್ರವಿಚಲೇದ್ಯದಿ ಯದ್ಯಧೋಽಪಿ
ಯಾಯಾದ್ಯದಿ ಪ್ರಣಯನೇ ನ ಮಹಾನಪಿ ಸ್ಯಾತ್ ।
ಅಭ್ಯುದ್ಧರೇತ್ತದಪಿ ವಿಶ್ವಮಿತೀದೃಶೀಯಂ
ಕೇನಾಪಿ ದಿಕ್ ಪ್ರಕಟಿತಾ ಪುರುಷೋತ್ತಮೇನ ॥

ಅತ್ರ ಪುರುಷೋತ್ತಮಪದೇನ ವಿಶೇಷ್ಯೇಣಾಪಿ ಶ್ಲೇಷೇನ ಪ್ರಚುರಪ್ರಸಿದ್ಧ್ಯಾ ಪ್ರಥಮಂ ವಿಷ್ಣುರೇವ ಬೋಧ್ಯತೇ. ತೇನ ವರ್ಣನೀಯಃ ಕಶ್ಚಿತ್ ಪುರುಷಃ ಪ್ರತೀಯತೇ.

ಸಾದೃಶ್ಯಮಾತ್ರಮೂಲಾ-ಏಕಃ ಕಪೋತಪೋತಃ ಶತಶಃ ಶ್ಯೇನಾಃ ಕ್ಷುಧಾಭಿಧಾವಂತಿ
ಅಂಬರಮಾವೃತಿಶೂನ್ಯಂ ಹರ ಹರ! ಶರಣಂ ವಿಧೇಃ ಕರುಣಾ ॥

ಅತ್ರ ಕಪೋತಾದಪ್ರಸ್ತುತಾತ್ ಕಶ್ಚಿತ್ ಪ್ರಸ್ತುತಃ ಪ್ರತೀಯತೇ.

ಇಯಂ ಚ ಕ್ವಚಿತ್ ವೈಧರ್ಮ್ಯೇಣಾಪಿ ಭವತಿ. ಯಥಾ ।

ಧನ್ಯಾಃ ಖಲು ವನೇ ವಾತಾಃ ಕಲ್ಹಾರಸ್ಪರ್ಶಶೀತಲಾಃ ।
ರಾಮಮಿಂದೀವರಶ್ಯಾಮಂ ಯೇ ಸ್ಪೃಶಂತ್ಯನಿವಾರಿತಾಃ ॥

ಅತ್ರ ವಾತಾ ಧನ್ಯಾಃ ಅಹಮಧನ್ಯ ಇತಿ ವೈಧರ್ಮ್ಯೇಣ ಪ್ರಸ್ತುತಃ ಪ್ರತೀಯತೇ. ವಾಚ್ಯಸ್ಯ ಸಂಭವಾಸಂಭವೋಭಯರೂಪತಯಾ ತ್ರಿಪ್ರಕಾರೇಯಮ್.

ತತ್ರ ಸಂಭವೇ ಉಕ್ತೋದಾಹರಣಾನ್ಯೇವ. ಅಸಂಭವೇ ಯಥಾ—

ಕೋಕಿಲೋಽಹಂ ಭವಾನ್ ಕಾಕಃ ಸಮಾನಃ ಕಾಲಿಮಾವಯೋಃ |
ಅಂತರಂ ಕಥಯಿಷ್ಯಂತಿ ಕಾಕಲೀಕೋವಿದಾಃ ಪುನಃ ||

ಅತ್ರ ಕಾಕಕೋಕಿಲಯೋರ್ವಾಕ್ಯೋಪವಾಕ್ಯಂ ಪ್ರಸ್ತುತಾಧ್ಯಾರೋಪಣಂ ವಿನಾ ಅಸಂಭವಿ. ಉಭಯರೂಪತ್ವೇ ಯಥಾ—

ಅಂತಶ್ಛಿದ್ರಾಣಿ ಭೂಯಾಂಸಿ ಕಂಟಕಾ ಬಹವೋ ಬಹಿಃ ||
ಕಥಂ ಕಮಲನಾಳಸ್ಯ ಮಾ ಭೂವನ್ ಭಂಗುರಾ ಗುಣಾಃ ||

ಅತ್ರ ಪ್ರಸ್ತುತಸ್ಯ ಕಸ್ಯಚಿದಧ್ಯಾರೋಪಣಂ ವಿನಾ ಕಮಲನಾಲಾಂತಶ್ಛಿದ್ರಾಣಾಂ ಗುಣಭಂಗುರೀಕರಣೇ ಹೇತುತ್ವಮಸಂಭವಿ, ಅನ್ಯೇಷಾಂ ತು ಸಂಭವೀತ್ಯುಭಯ ವತ್ವಮ್.

ಅಸ್ಯಾಶ್ಚ ಸಮಾಸೋಕ್ತಿವತ್ ವ್ಯವಹಾರಸಮಾರೋಪಪ್ರಾಣತ್ವಾತ್ ಶಬ್ದ ಶಕ್ತಿಮೂಲಾದ್ವಸ್ತುಧ್ವನೇರ್ಭೇದಃ. ಉಪಮಾಧ್ವನಾವಪ್ರಸ್ತುತಸ್ಯ ವ್ಯಂಗ್ಯತ್ವಮ್. ಏವಂ ಸಮಾಸೋಕ್ತೌ. ಶ್ಲೇಷೇಽಪಿ ದ್ವಯೋರಪಿ ವಾಚ್ಯತ್ವಮ್.

ನಿಂದಯಾ ಸ್ತುತೇರ್ಗಮ್ಯತ್ವೇ ವ್ಯಾಜೇನ ಸ್ತುತಿರಿತಿ ವ್ಯುತ್ಪತ್ತ್ಯಾ ವ್ಯಾಜಸ್ತುತಿಃ, ಸ್ತುತ್ಯಾ ನಿಂದಾಯಾ ಗಮ್ಯತ್ವೇ ವ್ಯಾಜರೂಪಾ ಸ್ತುತಿಃ.

ಕ್ರಮೇಣ ಯಥಾ–ಸ್ತನಯುಗಮುಕ್ತಾಭರಣಾಃ ಕಂಟಕಕಲ್ಪಿತಾಂಗಯಷ್ಟಯೋ ದೇವ |
ತ್ವಯಿ ಕುಪಿತೇಽಪಿ ಪ್ರಾಗಿವ ವಿಶ್ವಸ್ತಾ ರಿಪುಸ್ತ್ರಿಯೋ ಜಾತಾಃ ||

ವ್ಯಾಜಸ್ತುತಿಸ್ತವ ಪಯೋದ ಮಯೋದಿತೇಯಂ
ಯಜ್ಜೀವನಾಯ ಜಗ ತಸ್ತವ ಜೀವನಾನಿ
ಸ್ತೋತ್ರಂ ತು ತೇ ಮಹದಿದಂ ಘನ ಧರ್ಮರಾಜ
ಸಾಹಾಯ್ಯಮರ್ಜಯಸಿ ಯತ್ಪಥಿಕಾನ್ನಿಹತ್ಯ ||

ಪರಿಕರಾಲಂಕಾರದ ಲಕ್ಷಣವನ್ನು ತಿಳಿಸುತ್ತಾನೆ. ಅರ್ಥಗರ್ಭಿತವಾದ ವಿಶೇಷಣ ಗಳನ್ನು ಪ್ರಯೋಗಿಸುವುದೇ ಪರಿಕರಾಲಂಕಾರವೆನಿಸುವುದು. ದ್ರೋಣನಿಗೆ ಹಾಸ್ಯ ಮಾಡಿ ಸೇನಾಪತಿ ಎನಿಸಿದ ಅಂಗರಾಜನಾದ ಕರ್ಣನೇ, ಈ ದುಶ್ಶಾಸನನನ್ನು ಭೀಮ ನಿಂದ ರಕ್ಷಿಸು" ಇಲ್ಲಿ ಭೀಮನಿಂದ ಕೊಲೆಯಾಗುತ್ತಿರುವ ದುಶ್ಶಾಸನನನ್ನು ನೋಡಿ ಕರ್ಣನಿಗೆ ಅಶ್ವತ್ಥಾಮನು ಸಿಟ್ಟಿನಿಂದ ಹಾಸ್ಯಮಾಡುತ್ತಾನೆ. "ನೀನು ಸಾಧಾರಣವಾದ ಮನುಷ್ಯನಲ್ಲ; ಆದರೆ ಅಂಗದೇಶದ ರಾಜನಿರುವೆ. ಹೀಗೆ ಹೆಚ್ಚು ಶಕ್ತಿಯಿರುವ ನಿನಗೆ ದುರ್ಬಲನಾದ ದುಶ್ಶಾಸನನ ರಕ್ಷಣವು ಅತ್ಯಂತ ಯುಕ್ತವೆನಿಸಿದೆ" ಎಂಬ ಅಭಿಪ್ರಾಯವು ಅಂಗರಾಜ ಎಂಬುದರಿಂದ ವ್ಯಕ್ತವಾಗುವುದು. "ಸೇನಾಪತಿಯ ಪಟ್ಟವನ್ನು ನನಗೆ ತಪ್ಪಿಸಿ ನಿನಗೆ ದುರ್ಯೋಧನನು ಕೊಟ್ಟಿರುವನು. ಆದ್ದರಿಂದ ಅವನ ತಮ್ಮನಾಗಿರುವ ದುಶ್ಶಾಸನನನ್ನು ರಕ್ಷಿಸುವುದು ನಿನ್ನ ಧರ್ಮವೆಂಬ ಅಭಿಪ್ರಾಯವು ಸೇನಾಪತೇ ಎಂಬುದರಿಂದ ಸೂಚಿತವಾಗುವುದು. "ಈ ಕಾರ್ಯವನ್ನು ಮಾಡಲು ನಾನು ಸಮರ್ಥ

ನಲ್ಲ. ಹಾಗೆ ನಾನು ಸಮರ್ಥನಾಗಿದ್ದರೆ ಅರ್ಜುನನಿಂದ ಕೊಲೆಯಾಗುತ್ತಿದ್ದ ಜಯದ್ರಥನನ್ನು ರಕ್ಷಿಸಲಿಕ್ಕೆ ಆಗದೇ ಇದ್ದ ನನ್ನ ತಂದೆಯಾದ ದ್ರೋಣನನ್ನು ನೀನು ಹೇಗೆ ಹಾಸ್ಯಮಾಡುತ್ತಿದ್ದೆ. ಆದ್ದರಿಂದ ದುಶ್ಶಾಸನನನ್ನು ಭೀಮನಿಂದ ನೀನೇ ರಕ್ಷಿಸಬೇಕು" ಈ ಅಭಿಪ್ರಾಯವು ದ್ರೋಣೋಪಹಾಸಿನ್ ಎಂಬುದರಿಂದ ತಿಳಿದುಬರುತ್ತದೆ. ಹೀಗೆ ಇಲ್ಲಿ ಒಂದೊಂದು ವಿಶೇಷಣವನ್ನೂ ಬೇರೆ ಬೇರೆ ಅಭಿಪ್ರಾಯದಿಂದಲೇ ಪ್ರಯೋಗಿಸಿದ್ದರಿಂದ ಇದು ಪರಿಕರಾಲಂಕಾರವೆನಿಸಿದೆ.

ಸಮಾಸೋಕ್ತಿಗೆ ಅನುಕೂಲವೆನಿಸಿದ ವಿಶೇಷಣಗಳ ಸಾರ್ಥಕತೆಯನ್ನು ತಿಳಿಸುವ ಈ ಸಂದರ್ಭದಲ್ಲಿ ಶಬ್ದಶ್ಲೇಷವನ್ನು ಹಿಂದೆ ತಿಳಿಸಿರುವ ಪ್ರಯುಕ್ತ ಉಳಿದ ಅರ್ಥಶ್ಲೇಷದ ಬಗ್ಗೆ ಈಗ ತಿಳಿಸುತ್ತಾನೆ. ಸ್ವಾಭಾವಿಕವಾಗಿ ಪ್ರವರ್ತಿಸುವ ಅಭಿಧಾಶಕ್ತಿಯನ್ನು ಆಶ್ರಯಿಸಿ ಒಂದೇ ಅರ್ಥವನ್ನು ತಿಳಿಸುವ ಶಬ್ದಗಳಿಂದ ಅನೇಕ ಅರ್ಥಗಳನ್ನು ತಿಳಿಸುವುದೇ ಅರ್ಥಶ್ಲೇಷಾಲಂಕಾರವೆನಿಸುವುದು. ಅಭಿಧೆಯಿಂದ ಒಂದೇ ಒಂದು ಅರ್ಥವನ್ನು ತಿಳಿಸುವ ಶಬ್ದದಿಂದ ಅನೇಕ ಅರ್ಥಗಳನ್ನು ಬೋಧಿಸುವುದೇ ಅರ್ಥಶ್ಲೇಷ. ಅನೇಕ ಅರ್ಥಗಳನ್ನು ತಿಳಿಸುವ ಶಬ್ದಗಳಿಂದ ಅನೇಕ ಅರ್ಥಗಳನ್ನು ತಿಳಿಸುವುದು ಶಬ್ದಶ್ಲೇಷವಾಗುತ್ತದೆ. ಒಂದೇ ಅರ್ಥವನ್ನು ತಿಳಿಸುವ ಶಬ್ದದಿಂದ ಶಬ್ದವೈಚಿತ್ರ್ಯದ ಮೂಲಕ ಅನೇಕ ಅರ್ಥಗಳನ್ನು ತಿಳಿಸುವುದು ಅರ್ಥಶ್ಲೇಷವೆಂಬ ಅಲಂಕಾರವೆನಿಸುವುದು. ಇದರಿಂದ ಶಬ್ದಶ್ಲೇಷವೇ ಬೇರೆ ಎಂಬುದನ್ನು ಸೂಚಿಸಲು 'ಸ್ವಭಾವಾದೇಕಾರ್ಥೈಃ' ಎಂಬ ಪದವನ್ನು ಲಕ್ಷಣದಲ್ಲಿ ಕೊಡಲಾಗಿದೆ. ವಾಚನಂ ಎಂದು ಹೇಳಿದ್ದರಿಂದ ಎರಡನೆಯ ಅರ್ಥವೂ ಸಹ ಅಭಿಧೆಯಿಂದಲೇ ತಿಳಿದುಬರುವ ಪ್ರಯುಕ್ತ ವ್ಯಂಜನೆಗೆ ಇಲ್ಲಿ ಅವಕಾಶವಿಲ್ಲವೆಂಬುದು ಸ್ಪಷ್ಟವಾಗುತ್ತದೆ. "ವಿಭಾಕರನೆಂಬ ಒಬ್ಬ ರಾಜನು ಸರ್ವರಹಿತವನ್ನು ಆಚರಿಸುವನೂ೦ಕ ಪವಿತ್ರವಾದ ಸೇತುವೆ ಬಾವಿಗಳ ರಚನೆ ಮೊದಲಾದ ಕ್ರಿಯೆಗಳನ್ನು ರಾಜ್ಯದಲ್ಲಿ ನಡೆಸುತ್ತ, ಪ್ರಜೆಗಳ ದೈನ್ಯದಾರಿದ್ರ್ಯಗಳನ್ನು ಅನ್ನವಸ್ತ್ರಗಳ ದಾನದಿಂದ ತೊಲಗಿಸುತ್ತ ಹೆಚ್ಚಿನ ಪ್ರಭಾವದಿಂದ ಎಲ್ಲೆಲ್ಲೂ ಶೋಭಿಸುತ್ತಿರುವನು." "ಸೂರ್ಯನು ತನ್ನ ಉದಯದಿಂದ ಸಾಧುವಿನ ಯಜ್ಞ ಮೊದಲಾದ ಕ್ರಿಯೆಗಳಿಗೆ ಅನುಕೂಲಪಡಿಸುತ್ತ, ಕತ್ತಲೆಯನ್ನು ತೊಲಗಿಸಿ ದಿಕ್ಕುಗಳನ್ನು ಪ್ರಕಾಶಪಡಿಸುತ್ತ ಹೆಚ್ಚು ಕಾಂತಿಯಿಂದ ಉರಿಯುತ್ತ ಆಕಾಶದಲ್ಲಿ ಶೋಭಿಸುತ್ತಿದ್ದಾನೆ" ಇಲ್ಲಿ ಪ್ರಕರಣವೇ ಮೊದಲಾದ ನಿಯಮಗಳು ಯಾವುವೂ ಇಲ್ಲದ್ದರಿಂದ ರಾಜ, ಮತ್ತು ಸೂರ್ಯ ಇವರಿಬ್ಬರನ್ನೂ ಇಲ್ಲಿಯ ಪದಗಳು ಅಭಿಧೆಯಿಂದಲೇ ಬೋಧಿಸುತ್ತವೆ. ಆದ್ದರಿಂದ ಇದು ಅರ್ಥಶ್ಲೇಷವೆನಿಸಿದೆ.

ಪ್ರಕೃತವಾದ ಅರ್ಥವನ್ನು ತಿಳಿಸಿದ್ದರಿಂದ ಅಪ್ರಕೃತವಾದ ಅರ್ಥವು ತಿಳಿದು ಬಂದರೆ ಸಮಾಸೋಕ್ತಿಯಾಗುವುದು. ಅದಕ್ಕೆ ವಿಪರೀತವಾಗಿ ಅಪ್ರಕೃತವಾದ ಅಂಶದಿಂದ ಪ್ರಕೃತವಾದ ಅಂಶವು ತಿಳಿಯುವುದಾದರೆ ಅದರಲ್ಲೂ ಒಂದು ಬಗೆಯ ಚಮತ್ಕಾರವಿರುವುದರಿಂದ ಅದು ಅಪ್ರಸ್ತುತಪ್ರಶಂಸೆ ಎನಿಸುವುದು. ಅಪ್ರಕೃತವಾದ

ಸಾಮಾನ್ಯದಿಂದ ಪ್ರಕೃತವಾದ ವಿಶೇಷವನ್ನು ಸೂಚಿಸುವುದು ಒಂದು ಬಗೆ. ಅಪ್ರಕೃತ ವಾದ ವಿಶೇಷದಿಂದ ಪ್ರಕೃತವಾದ ಸಾಮಾನ್ಯವನ್ನು ತಿಳಿಸುವುದು ಎರಡನೆಯ ಬಗೆ. ಅಪ್ರಕೃತವಾದ ಕಾರ್ಯದಿಂದ ಪ್ರಕೃತವಾದ ಕಾರಣವನ್ನು ತಿಳಿಸುವುದು ಮೂರನೆಯ ಬಗೆ. ಅಪ್ರಕೃತವಾದ ಕಾರಣದಿಂದ ಪ್ರಕೃತವಾದ ಕಾರ್ಯವನ್ನು ತಿಳಿಸುವುದು ನಾಲ್ಕನೆಯ ಬಗೆ. ಸಮಾನವೂ ಅಪ್ರಕೃತವೂ ಆದ ವಸ್ತುವಿನಿಂದ ಅಂತಹ ಪ್ರಕೃತ ವಸ್ತುವನ್ನು ತಿಳಿಸುವುದು ಐದನೆಯ ಬಗೆ. ಹೀಗೆ ಇದರಲ್ಲಿ ಐದು ಬಗೆಗಳಿವೆ. ಕ್ರಮ ವಾಗಿ ಇವನ್ನು ಉದಾಹರಿಸಲಾಗುವುದು. "ಧೂಳು ಕಾಲಿನ ತುಳಿತಕ್ಕೆ ಸಿಲುಕಿದ್ದರೂ ನೆಲದಿಂದ ಮೇಲಕ್ಕೆ ಎದ್ದು ತುಳಿವವನ ಮುಖವನ್ನು ಮುಚ್ಚಿಸಿ ಅವನ ತಲೆಯ ಮೇಲೆ ಕುಳಿತುಕೊಳ್ಳುವುದು. ಅದು ಜಡವಸ್ತುವಾದರೂ ಅವಮಾನವನ್ನು ಸಹಿಸಿಕೊಂಡು ಬಾಳುವ ಚೇತನಮನುಷ್ಯನಿಗಿಂತಲೂ ಎಷ್ಟೋ ಉತ್ತಮ" ಎಂದು ಬಲರಾಮನು ಕೃಷ್ಣನನ್ನು ಮೂದಲಿಸುತ್ತಾನೆ. ಇಲ್ಲಿ 'ಪಾದಾಹತಂ' ಎಂದು ಶಿಶುಪಾಲನ ಹೊಡೆತಕ್ಕೆ ಸಿಕ್ಕಿರುವ ಯಾದವರು ನಿರುದ್ಯೋಗಿಗಳಾಗಿರುವುದನ್ನು ಕಂಡು ನೊಂದು ಬಲರಾಮನು ಹೇಳುತ್ತಿರುವುದರಿಂದ ಯಾದವರು ಪ್ರಕೃತರೆನಿಸುವರು. ಆಗಾಗ ಒದಗುವ ಅಪ ಮಾನಗಳನ್ನು ಸಹಿಸಿಕೊಂಡು ಬಾಳುತ್ತಿರುವ ಸಾಮಾನ್ಯಜನರು ಅಪ್ರಕೃತರೆನಿ ಸಿರುವರು. ಹೀಗೆ ಅಪ್ರಕೃತರೆನಿಸಿದ ಸಾಮಾನ್ಯದೇಹಿಗಳಿಂದ ಪ್ರಕೃತವಿಶೇಷವೆನಿಸಿದ ಯಾದವರ ಬಗ್ಗೆ ಸೂಚನೆ ಇರುವುದರಿಂದ ಇದು ಅಪ್ರಸ್ತುತಪ್ರಶಂಸೆ ಎನಿಸಿದೆ. ಪ್ರಕೃತವಿಶೇಷರೆನಿಸಿದ ಯಾದವರನ್ನು ಹೀಯಾಳಿಸಬೇಕಾದ ಪ್ರಯುಕ್ತ ಅವರಿಗಿಂತಲೂ ಧೂಳು ಎಷ್ಟೋ ಉತ್ತಮವೆಂದು ಅಪ್ರಕೃತಸಾಮಾನ್ಯವನ್ನು ತಿಳಿಸಲಾಗಿದೆ. ಆದ್ದರಿಂದ ಇದು ಅಪ್ರಕೃತಸಾಮಾನ್ಯದಿಂದ ಪ್ರಕೃತವಿಶೇಷವನ್ನು ತಿಳಿಸುವುದಕ್ಕೆ ಉದಾಹರಣ ವೆನಿಸಿದೆ. ಮುಂದೆ ಅಪ್ರಕೃತವಿಶೇಷದಿಂದ ಪ್ರಕೃತಸಾಮಾನ್ಯವನ್ನು ತಿಳಸಲಿಕ್ಕೆ ಉದಾಹರಣವನ್ನು ಕೊಡುತ್ತಾನೆ. 'ಈ ಪುಷ್ಪಮಾಲೆಯು ಪ್ರಾಣವನ್ನು ಅಪಹರಿಸುವು ದಾದರೆ ನನ್ನ ಹೃದಯದಲ್ಲಿ ಇದನ್ನು ಇಟ್ಟುಕೊಂಡರೂ ಇದು ನನ್ನನ್ನು ಏಕೆ ಕೊಲ್ಲು ವುದಿಲ್ಲ? ಆದ್ದರಿಂದ ಈಶ್ವರನ ಇಚ್ಛೆಯಂತೆ ವಿಷವು ಕೆಲವು ವೇಳೆ ಅಮೃತವೂ, ಅಮೃತವು ವಿಷವೂ ಆದೀತು. ಈಶ್ವರನ ಇಚ್ಛೆಯಂತೆ ಈ ಹೂಮಾಲೆಯ ಸ್ಪರ್ಶದಿಂದ ಇಂದುಮತಿಯ ಕೊಲೆಯಾಯಿತು. ಆದರೆ ಈ ಮಾಲೆಯೇ ಇವಳನ್ನು ಕೊಂದಿ ತೆಂಬುದು ಸಹಜವಲ್ಲ." ಇಲ್ಲಿ ಈಶ್ವರೇಚ್ಛೆಯಿಂದ ಕೆಲವುವೇಳೆ ಕೆಟ್ಟದ್ದನ್ನು ಮಾಡಿದವ ನಿಗೂ ಒಳ್ಳೆಯದಾಗುವುದು; ಒಳ್ಳೆಯದನ್ನು ಮಾಡಿದವನಿಗೂ ಕೆಡುಕಾಗುವುದು ಎಂಬ ಸಾಮಾನ್ಯವಿಷಯವು ಪ್ರಕೃತವೆನಿಸಿದ್ದು ಅದರಿಂದ ಅಪ್ರಕೃತವಿಶೇಷವನ್ನು ತಿಳಿಸಲಾಗಿದೆ. ಸಾಮಾನ್ಯವಾಕ್ಯದಿಂದ ವಿಶೇಷವಾಕ್ಯವನ್ನು ಸಮರ್ಥನಮಾಡುವ ಅರ್ಥಾಂತರನ್ಯಾಸವೂ ಇಲ್ಲಿ ಸೇರಿಕೊಂಡಿದೆ. ಇವೆರಡಕ್ಕೂ ಇಲ್ಲಿ ಅಂಗಾಂಗಿಭಾವದ ಸಾಂಕರ್ಯವಿದೆ. ಹೀಗೆ ಅಪ್ರಸ್ತುತಪ್ರಶಂಸೆಯನ್ನು ಅವಲಂಬಿಸಿದ ಅರ್ಥಾಂತರ ನ್ಯಾಸಕ್ಕೂ ಇದು ಉದಾಹರಣವೆನಿಸಿದೆ. ದೃಷ್ಟಾಂತಾಕಾಲಂಕಾರದಲ್ಲಿ ಪ್ರಸಿದ್ಧವಾದ

ವಸ್ತುವನ್ನು ಪ್ರತಿಬಿಂಬವನ್ನಾಗಿ ತಿಳಿಸಲಾಗುವುದು. ಇಲ್ಲಿಯಾದರೋ ವಿಷವು ಅಮೃತ ವಾಗುವುವಕ್ಕೂ ಅಮೃತವು ವಿಷವಾಗುವುದಕ್ಕೂ ಲೋಕದಲ್ಲಿ ಎಲ್ಲಿಯೂ ಪ್ರಸಿದ್ಧಿ ಯಿಲ್ಲ. ಆದ್ದರಿಂದ ಇದು ದೃಷ್ಟಾಂತಕ್ಕಿಂತ ಬೇರೆ ಎನಿಸಿದೆ.

ಅಪ್ರಕೃತಕಾರ್ಯವನ್ನು ತಿಳಿಸಿದ್ದರಿಂದ ಪ್ರಕೃತಕಾರಣವನ್ನು ಸೂಚಿಸುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. ಸೀತೆಯ ಸೌಂದರ್ಯವನ್ನು ವರ್ಣಿಸುವ ಪದ್ಯ ವಿದು. "ಸೀತೆಯ ಮುಂದೆ ಚಂದ್ರನು ಕಾಡಿಗೆಯನ್ನು ಬಳಿದುಕೊಂಡಂತೆ ಕಾಣುವನು. (ಇದು ಮುಖಸೌಂದರ್ಯದ ವರ್ಣನ) ಹಾಗೆಯೇ ಜಿಂಕೆಗಳ ಕಣ್ಣುಗಳು ಈಕೆಯ ಕಣ್ಣುಗಳ ಮುಂದೆ ಜಡವೆನಿಸಿವೆ. (ಇದು ಕಣ್ಣಿನ ಶೋಭೆಯ ವರ್ಣನ) ಈಕೆಯ ತುಟಿಯ ಮುಂದೆ ಹವಳದ ಚೂರು ಮಲಿನವೆನಿಸುವುದು. ಶರೀರದ ಮುಂದೆ ಸುವರ್ಣದ ಕಾಂತಿಯು ಸಪ್ಪೆ ಎನಿಸುವುದು. ಈಕೆಯ ಕಂಠಧ್ವನಿಯ ಮುಂದೆ ಕೋಗಿಲೆಗಳ ಸ್ವರ ಗಳಲ್ಲಿ ಕಾಠಿನ್ಯವು ಕಂಡುಬರುವುದು. ಈಕೆಯ ಕೂದಲುಗಳ ಮುಂದೆ ನವಿಲುಗಳ ಗರಿ ಗಳು ತುಚ್ಛವೆನಿಸುತ್ತವೆ" ಇಲ್ಲಿ ಚಂದ್ರನು ಕಾಡಿಗೆಯನ್ನು ಬಳಿದುಕೊಂಡಂತಾಗಿದೆ ಎಂಬುದೇ ಮೊದಲಾದ ಕಾರ್ಯಗಳನ್ನು ಉತ್ಪ್ರೇಕ್ಷಿಸಲಾಗಿದೆ. ಇವುಗಳಿಂದ ಸೀತೆಯ ಮುಖ ಮೊದಲಾದ ಅವಯುವಗಳಲ್ಲಿ ಸೌಂದರ್ಯಾತಿಶಯವಿತ್ತೆಂದು ಪ್ರಕೃತಕಾರಣವು ತೋರಿಬರುತ್ತದೆ.

ಅಪ್ರಕೃತಕಾರಣದಿಂದ ಪ್ರಕೃತಕಾರ್ಯವು ತಿಳಿದುಬರುವುದನ್ನು ಈಗ ಉದಾಹರಿ ಸುತ್ತಾನೆ. ಪರದೇಶಕ್ಕೆ ಏಕೆ ಹೊರಡಲಿಲ್ಲವೆಂದು ಕೇಳಿದ ಸ್ನೆಹಿತನಿಗೆ ಒಬ್ಬನು ಹೇಳುವ ಮಾತಿದು. "ನಾನು ಹೊರಡುವೆನೆಂದು ಹೇಳಿದಾಗ ಪರದೇಶಕ್ಕೆ ಹೋಗಲು ಅನು ಮತಿಯನ್ನು ಕೊಟ್ಟ ನನ್ನ ಪ್ರಿಯೆಯು ಬಹಳ ವ್ಯಸನದಿಂದ ನಿಟ್ಟುಸಿರನ್ನು ಬಿಟ್ಟು ಕಣ್ಣೀರನ್ನು ಸುರಿಸುತ್ತ ಒಂದೇ ಕಣ್ಣಿನಿಂದ ನನ್ನನ್ನು ವಕ್ರವಾಗಿ ನೋಡಿ 'ಎಲೈ ಜಿಂಕೆಯೇ, ನೀನು ನನ್ನಲ್ಲಿ ಈವರಿವಿಗೆ ಇಟ್ಟಿದ್ದ ಪ್ರೇಮವನ್ನು ಈ ಪ್ರಿಯಸಖಿಯ ರಲ್ಲಿ ಇರಿಸುವೆಯಾ ?' ಹೀಗೆ ಸ್ನೇಹದಿಂದ ಬೆಳೆಸಿದ್ದ ಜಿಂಕೆಗೆ ಕೊಂಚ ಹಾಸ್ಯದಿಂದ ತಿಳಿಸಿದಳು." ಇಲ್ಲಿ ಪತಿಯು ಮನೆಯಿಂದ ಎಲ್ಲಿಗೂ ಹೊರಡದೆ ಅಲ್ಲಿಯೇ ಇರಬೇ ಕೆಂಬುದೇ ಕಾರ್ಯ. ಇದನ್ನು ಸೂಚಿಸಲು ಕಾರಣವನ್ನು ತಿಳಿಸಲಾಗಿದೆ. "ನೀನು ಹೊರಟರೆ ನಾನು ಸಾಯುವುದು ನಿಶ್ಚಿತ" ವೆಂಬುದೇ ಇಲ್ಲಿ ಕಾರಣವೆನಿಸಿದೆ. ಸಮಾನ ವಾದ ಅಪ್ರಕೃತಾಂಶದಿಂದ ಪ್ರಕೃತಾಂಶವು ತೋರುವುದನ್ನು ವಿವರಿಸುತ್ತಾನೆ. ಇದರಲ್ಲಿ ಶ್ಲೇಷಮೂಲ, ಸಾದೃಶ್ಯಮೂಲವೆಂದು ಎರಡು ಬಗೆಗಳಿವೆ. ಶ್ಲೇಷಮೂಲದಲ್ಲೂ ಸಹ ಸಮಾಸೋಕ್ತಿಯಂತೆ ವಿಶೇಷಣವಪ್ಪರಲ್ಲಿಯೇ ಶ್ಲೇಷವಿರುವುದೊಂದು ಬಗೆ; ಶ್ಲೇಷದಂತೆ ವಿಶೇಷ್ಯದಲ್ಲೂ ಶ್ಲೇಷವಿರುವುದೊಂದು ಬಗೆ ಹೀಗೆ ಎರಡು ಬಗೆಗಳಾಗುತ್ತವೆ. ಇವಕ್ಕೆ ಕ್ರಮವಾಗಿ ಉದಾಹರಣಗಳನ್ನು ಕೊಡುತ್ತಾನೆ. ವಿಶೇಷಣವಪ್ಪರಲ್ಲಿ ಶ್ಲೇಷವಿರುವುದನ್ನು ಮೊದಲು ತಿಳಿಸುತ್ತಾನೆ. ವರನ ಅವಸ್ಥೆಯನ್ನು ಕೇಳಿದ ನಾಯಿಕೆಗೆ ಅವಳ ಸಖಿಯು ಮಾವಿನ ಮರವನ್ನು ವರ್ಣಿಸುವ ನೆಪದದಿಂದ ವರನನ್ನು ವರ್ಣಿಸುತ್ತಾಳೆ. "ಯಾವಾ

ಗಲೂ ಸುಗಂಧದಿಂದ ಕೂಡಿ, ವಸಂತಕಾಲಕ್ಕೆ ಅನುಗುಣವಾಗಿ ಹುಟ್ಟಿದ ಹೊಸ ಚಿಗುರು ಮೊದಲಾದವುಗಳ ಶೋಭೆಯಿಂದ ಕೂಡಿ, (ವಸಂತನಂತೆ ಸ್ವಾಭಾವಿಕವಾದ ಸೌಂದರ್ಯದಿಂದ ಕೂಡಿ) ಅನೇಕ ಬಗೆಯ ಕಾಂತಿಯಿದ್ದು (ಚೆನ್ನಾಗಿ ಶೋಭಿಸುವ ಶೃಂಗಾರವಲ್ಲಿಯೇ ಆಶೆಯಿದ್ದು) ಪುಷ್ಪಸಮೃದ್ಧಿಯುಳ್ಳ, ಹೆಚ್ಚು ಮೊಗ್ಗುಗಳಿಂದ ವ್ಯಾಪಿಸಿರುವ (ಸುರತೋತ್ಕಂಠೆಯಿಂದ ನರಳುತ್ತಿರುವ) ಮಾವಿನಮರವಿದು ಶೋಭಿಸುತ್ತಲಿದೆ'' ಇಲ್ಲಿ ವಿಶೇಷಣಗಳಷ್ಟರಲ್ಲಿಯೇ ಶ್ಲೇಷವಿರುವುದರಿಂದ ಸಹಕಾರಃ ಎಂಬ ವಿಶೇಷ್ಯದಲ್ಲಿ ಶ್ಲೇಷವಿಲ್ಲವೆಂಬುದು ಸೂಚಿತವಾಯಿತು. ಇಲ್ಲಿ ಅಪ್ರಕೃತವಾದ ಮಾವಿನ ಮರದಿಂದ ಪ್ರಕೃತನಾಯಕನ ವಿಷಯವು ತೋರುವುದು.

ವಿಶೇಷ್ಯದಲ್ಲಿ ಶ್ಲೇಷವಿರುವುದನ್ನು ಉದಾಹರಿಸುತ್ತಾನೆ. ಭಲ್ಲಟಶತಕದಲ್ಲಿ ರಾಜನನ್ನು ವರ್ಣಿಸುವಾಗ ಈ ಪದ್ಯವು ಬರುತ್ತದೆ. "ಒಬ್ಬನು ಪೌರುಷವಿಲ್ಲದವನಾಗಬಹುದು. ರಾಕ್ಷಸರ ಕೊಲೆಗಾಗಿ ಅವರನ್ನು ಮೋಹಗೊಳಿಸಲು ಸ್ತ್ರೀರೂಪವನ್ನು ಧರಿಸಿದ್ದರಿಂದ ಪುರುಷಭಾವವನ್ನು ತೊರೆದು ಸ್ತ್ರೀಯೇ ಆಗಬಹುದು. ಭೂಮಿಯನ್ನು ನೀರಿನಿಂದ ಮೇಲಕ್ಕೆ ಎತ್ತಿ ತರಲಿಕ್ಕಾಗಿ ಪಾತಾಳಕ್ಕೂ ಹೋಗಬಹುದು(ಕೆಳಮಟ್ಟದಲ್ಲಿ ಬಾಳಬಹುದು). ಬೇರೆಯವರಲ್ಲಿ ಪ್ರಾರ್ಥಿಸಿದ್ದರಿಂದ ದೊಡ್ಡವನೆನಿಸಿಕೊಳ್ಳದೇ ಇರಬಹುದು. ಹೀಗೆಯೇ ಭೂಮಿಯನ್ನು ನೀರಿನಿಂದ ಉದ್ಧರಿಸಬಹುದು(ಶತ್ರುವಿನ ಕೈಯಿಂದರಾಜ್ಯವನ್ನು ರಕ್ಷಿಸಬಹುದು).ಆದ್ದರಿಂದಲೇ ಈ ಬಗೆಯ ದೃಢಪ್ರತಿಜ್ಞತೆ ಎನಿಸುವ ರೀತಿಯು ಯಾವನೋ ಒಬ್ಬ ಪುರುಷೋತ್ತಮನಿಂದ(ರಾಜನಿಂದ) ಪ್ರಕಟವಾಯಿತು" ಇಲ್ಲಿ ಪುಂಸ್ತ್ವ ಮೊದಲಾದ ವಿಶೇಷಣಗಳಲ್ಲೂ ಶ್ಲೇಷವಿದೆಯಾದರೂ ಪುರುಷೋತ್ತಮನೆಂಬ ವಿಶೇಷ್ಯದಲ್ಲೂ ಶ್ಲೇಷವಿದೆ. ಈ ಪದವನ್ನು ವಿಶೇಷಣವಾಗಿ ವಿಷ್ಣುವಿನಲ್ಲಿಯೇ ಪ್ರಯೋಗಿಸುವುದರಿಂದ ವಿಷ್ಣುವೇ ಅಪ್ರಕೃತವೆನಿಸಿರುವನು. ಈ ಪ್ರಕೃತವಾದ ಅಂಶದಿಂದ ಪ್ರಕೃತವರ್ಣನೀಯನಾದ ರಾಜನ ಬಗ್ಗೆ ವಿಷಯವು ಸೂಚಿತವಾಗುವುದು. ಇಲ್ಲಿ ರಾಜನ ವಿಷಯವು ವ್ಯಂಗ್ಯವಾಗಿ ತೋರುವುದರಿಂದಲೂ, ಆ ರಾಜನನ್ನು ಉಪಮಾನವೆಂದು ತಿಳಿಸಿಲ್ಲವಾದ್ದರಿಂದಲೂ ಇದು ಉಪಮಾಧ್ವನಿಯಾಗುವುದಿಲ್ಲ. ವಿಷ್ಣು ಮತ್ತು ರಾಜ ಇಬ್ಬರೂ ಪ್ರಕೃತವೆನಿಸಿಲ್ಲವಾದ್ದರಿಂದ ಇಲ್ಲಿ ಶ್ಲೇಷವು ಪ್ರವರ್ತಿಸುವಂತಿಲ್ಲ.

ಸಾದೃಶ್ಯಮೂಲವಾದಅಪ್ರಸ್ತುತ ಪ್ರಶಂಸೆಯನ್ನು ಈಗ ಉದಾಹರಿಸುತ್ತಾನೆ. ಅನೇಕ ಶತ್ರುಗಳಿಂದ ಆಕ್ರಮಿಸಲ್ಪಟ್ಟು ಬೇರೆ ಸಹಾಯವಿಲ್ಲದ ಒಬ್ಬ ರಾಜಕುಮಾರನನ್ನು ನೋಡಿ ನಿರಾಶನಾದವನೊಬ್ಬನು ಹೇಳುತ್ತಾನೆ. "ಒಂದು ಪಾರಿವಾಳದ ಮರಿಯು ಸಹಾಯವಿಲ್ಲದೆ ನರಳುತ್ತಿರುವುದು. ನೂರಾರು ಗಿಡಗಗಳು ಹಸಿವಿನಿಂದ ಆ ಕಡೆಗೇ ತಿನ್ನಲಿಕ್ಕೆ ಬರುತ್ತಿವೆ. ಆಕಾಶದಲ್ಲಿ ಇದು ಎಲ್ಲಿಗಾದರೊಂದುಕಡೆಗೆ ಹೋಗಲಿಕ್ಕೂ ಅವಕಾಶವಿಲ್ಲ.ಆಕಾಶದಲ್ಲಿ ಆವರಣವೇ ಇಲ್ಲದ್ದರಿಂದ ಇದಕ್ಕೆ ಓಡಿಹೋಗಲಿಕ್ಕೆ ಸಾಧ್ಯವೂ ಇಲ್ಲ. ಹರಹರ! ವಿಧಿಯ ಕರುಣೆಯೊಂದೇ ಈಗ ಈ ಪಾರಿವಾಳದ ಮರಿಯನ್ನು ರಕ್ಷಿಸಬೇಕು"

ಇಲ್ಲಿ ಅಪ್ರಕೃತವಾದ ಕಪೋತದಿಂದ ಪ್ರಕೃತನೆನಿಸಿದ ನಿರ್ಗತಿಕಬಾಲಕನೊಬ್ಬನ ವಿಷಯವು ತಿಳಿದುಬರುತ್ತದೆ.

ಇದು ಕೆಲವುವೇಳೆ ಸಾಧಾರಣಧರ್ಮವಿಲ್ಲದೇ ಇದ್ದು ವೈಧರ್ಮ್ಯದಿಂದಲೂ ತಿಳಿದು ಬರುವುದು. "ಸಹಜವಾಗಿ ಶೀತವೆನಿಸಿದ ಕನ್ನೈದಿಲೆಗಳನ್ನು ಮುಟ್ಟಿದ್ದರಿಂದ ಶೀತವಾದ ಈ ಗಾಳಿಗಳೇ ಧನ್ಯ. ಇವಕ್ಕೆ ಯಾವ ತಡೆಯೂ ಇಲ್ಲದ್ದರಿಂದ ಇವು ಅನಾಯಾಸವಾಗಿ ಕನ್ನೈದಿಲೆಯಂತೆ ಸುಂದರನಾಗಿರುವ ರಾಮನನ್ನು ಮುಟ್ಟುತ್ತವೆ." ಇಲ್ಲಿ "ಗಾಳಿಯೇ ಧನ್ಯವೆನಿಸಿದೆ; ನಾನು ಅಂತಹ ಧನ್ಯನಲ್ಲ"ವೆಂಬ ಅಪ್ರಕೃತಾಂಶವು ವೈಧರ್ಮ್ಯದಿಂದ ತೋರುತ್ತದೆ. ಗಾಳಿಯಲ್ಲಿ ಧನ್ಯತೆ ಇದ್ದು ನನ್ನಲ್ಲಿ ಅದಕ್ಕೆ ವಿರುದ್ಧವಾಗಿ ಅಧನ್ಯತೆ ಇದೆ ಎಂದು ರಾಮನ ವಿಯೋಗದಿಂದ ತನ್ನನ್ನು ಅಧನ್ಯನೆಂದು ತಿಳಿದ ದಶರಥನ ಮಾತಿದು. ಅಪ್ರಕೃತವಾದ ಸಮವಸ್ತುವಿನಿಂದ ಪ್ರಕೃತಸಮವಸ್ತುವು ಇಲ್ಲಿ ತೋರುವ ಪ್ರಯುಕ್ತ ಇದು ಅಪ್ರಸ್ತುತಪ್ರಶಂಸೆ ಎನಿಸಿದೆ.

ಈ ಅಪ್ರಸ್ತುತಪ್ರಶಂಸೆಯ ಎಲ್ಲಾ ಬಗೆಗಳೂ ಮತ್ತೆ ಮೂರು ಬಗೆಗಳಾಗುತ್ತವೆ. ವಾಚ್ಯಾರ್ಥವು ಮಾತಿನಿಂದ ಸಂಭವಿಸುವುದೊಂದು ಬಗೆ, ಸಂಭವಿಸದೇ ಇರುವುದೊಂದು ಬಗೆ, ಮಾತಿನಿಂದ ಕೊಂಚ ಸಂಭವಿಸಿಯೂ,ಕೊಂಚ ಸಂಭವಿಸದೆಯೂ ಇರುವುದೊಂದು ಬಗೆ ಹೀಗೆ ಮೂರು ಬಗೆಗಳಾಗುತ್ತವೆ. ವಾಕ್ಯಾರ್ಥವು ಮಾತಿನಿಂದ ಸಂಭವಿಸುವುದಕ್ಕೆ 'ಪಾದಾಹತಂ' ಮೊದಲಾದವೇ ಉದಾಹರಣಗಳಾಗುತ್ತವೆ. ವಾಕ್ಯಾರ್ಥವು ಮಾತಿನಿಂದ ಸಂಭವಿಸದೇ ಇರುವುದನ್ನು ಉದಾಹರಿಸುತ್ತಾನೆ. ತನಗೆ ಸಮಾನನಾಗಬೇಕೆಂದು ಸ್ಪರ್ಧೆಮಾಡುವವನೊಬ್ಬನಿಗೆ ಮತ್ತೊಬ್ಬನು ಹೇಳುವ ಮಾತಿದು. "ನಾನು ಕೋಗಿಲೆ, ನೀನು ಕಾಗೆ; ನಮಗೆ ಕಪ್ಪುಬಣ್ಣವು ಸಮಾನವೇ ಆಗಿದೆ. ಮಧುರವೂ ಸ್ಫುಟವೂ ಸೂಕ್ಷ್ಮವೂ ಆದ ಧ್ವನಿಯನ್ನು ತಿಳಿದಿರುವವರು ಕಠಿಣವಾಗಿ ಶಬ್ದಮಾಡುವ ನಿನ್ನೊಡನೆ ನನಗೆ ವೈಷಮ್ಯವುಂಟೆಂದು ಹೇಳುತ್ತಾರೆ." ಹೆಚ್ಚು ಮಧುರವಾಗಿ ಶಬ್ದಮಾಡುತ್ತಿರುವ ನನ್ನೊಡನೆ ಕಠಿಣವಾಗಿ ಮಾತನಾಡುವ ನಿನಗೆ ಹೆಚ್ಚು ಅಂತರವಿದೆ. ಆದ್ದರಿಂದ ನೀನು ನನ್ನೊಡನೆ ಹೇಗೆ ಸ್ಪರ್ಧೆಮಾಡುವೆ?" ಇಲ್ಲಿ ಕೋಗಿಲೆ ಕಾಗೆಗಳ ರೂಪಸಾಮ್ಯವೆಂಬುದು ಅಪ್ರಕೃತವಾದದ್ದು. ಇದರಿಂದ ಉತ್ಕೃಷ್ಟ ಅಪಕೃಷ್ಟರಿಬ್ಬರೂ ಸಮವೆಂಬ ಅಪ್ರಕೃತಾಂಶವು ತೋರುವುದು. ಆದರೆ ಇಂತಹ ವಾಕ್ಯಾರ್ಥವು ಬಾಯಿಂದ ಶಬ್ದದ ಮೂಲಕ ಹೇಳಲಿಕ್ಕೆ ಅರ್ಹವೆನಿಸಿಲ್ಲ. ಇಂತಹ ಮಾತನ್ನು ಹೇಳುವವನಿಗೆ ಅಪ್ರಕೃತವಾದ ಕೋಗಿಲೆಯಲ್ಲಿ ಆರೋಪವಿಲ್ಲದೆಯೇ ಹೀಗೆ ವಾದಪ್ರತಿವಾದಗಳನ್ನು ಪ್ರಯೋಗಿಸುವ ಸಂಭವವಿಲ್ಲ. ಕೆಲವುಕಡೆ ವಾಕ್ಯಾರ್ಥವು ಸಂಭವಿಸಿಯೂ ಸಂಭವಿಸದೆಯೂ ಇರುವುದನ್ನು ಉದಾಹರಿಸುತ್ತಾನೆ. ಆತ್ಮದೋಷದಿಂದಲೂ, ಶತ್ರುವಿನೊಡನೆ ವ್ಯವಹರಿಸುವುದರಿಂದಲೂ ಯಶಸ್ಸನ್ನು ಕಳೆದುಕೊಂಡಿರುವವನಿಗೆ ಮತ್ತೊಬ್ಬನು ಹೀಗೆ ಹೇಳುತ್ತಾನೆ. "ಒಳಗಡೆ ಕಾಮ ಕ್ರೋಧ ಮೊದಲಾದ ಅನೇಕ ಬಗೆಯ ಲೋಪದೋಷಗಳು ತುಂಬಿಕೊಂಡಿವೆ. ಹೊರಗಡೆ ತೀಕ್ಷ್ಣವಾದ ಮುಳ್ಳುಗಳಿವೆ (ನೀಚಶತ್ರುಗಳಿರುವರು). ಆದ್ದ

ರಿಂದ ಕಮಲದ ಕೆಳಗಿನ ದಂಡದ ಒಳಗಡೆ ಇರುವ ದಾರಗಳು (ದಯೆ ಧರ್ಮಮೊದಲಾದ ಗುಣದಿಂದ ಹುಟ್ಟಿದ ಯಶಸ್ಸುಗಳು) ಹೇಗೆ ಕಿತ್ತು ಹೋಗದೆ ಇದ್ದಾವು ? (ಹೇಗೆ ನಾಶವಾಗದೆ ಇರಲಾರವು ?)'' ಇಲ್ಲಿಯೂ ಅಪ್ರಕೃತವಾದ ಕಮಲನಾಳದಿಂದ ಬೇರೊಂದು ಸಮವಾದ ಪ್ರಕೃತವಸ್ತುವಿನ ಬಗ್ಗೆ ಹೇಳಿರುವುದರಿಂದ ವಾಕ್ಯಾರ್ಥವು ಸಂಭವಿಸಿಯೂ ಸಂಭವಿಸದಂತೆಯೂ ಇರುವುದೆಂಬುದನ್ನು ತೋರಿಸುತ್ತಾನೆ. ಕಾಮಕ್ರೋಧ ಮೊದಲಾದ ದುರಭಿಸಂಧಿಯಿಂದ ಕೂಡಿರುವವನೊಬ್ಬನಿಗೆ ಕಮಲನಾಳದಲ್ಲಿ ಆರೋಪವಿಲ್ಲದೆಯೇ ಆ ಕಮಲನಾಳದೊಳಗಿರುವ ರಂಧ್ರಗಳು ಕಮಲಗಳೊಳಗಿನ ದಾರವನ್ನು ಕೀಳಲಿಕ್ಕೆ ಕಾರಣವೆನಿಸಿವೆ ಎಂದು ಹೇಳಿದೆ. ಇಲ್ಲಿ ಇದು ಹೀಗೆ ಕಾರಣವೆನಿಸಿದ್ದನ್ನು ತಾತ್ಪರ್ಯದಿಂದ ತಿಳಿಯಬೇಕೇ ಹೊರತು ಸಹಜವಾಗಿ ಇದು ಸಂಭವಿಸುವಂತಹದಲ್ಲ. ರಂಧ್ರಗಳಲ್ಲಿ ಯಾವ ಕೆಲಸವೂ ಆಗದೇ ಇರುವುದರಿಂದ ದಾರವನ್ನು ಕೀಳಲಿಕ್ಕೆ ಅವಕ್ಕೆ ಸಾಕಷ್ಟು ಯೋಗ್ಯತೆ ಇಲ್ಲ. ಕಂಟಕಗಳು ಗುಣಗಳನ್ನು ಕೆಡಿಸುತ್ತವೆ ಎಂಬಲ್ಲಿ ಕಾರಣವೇನೋ ಸಹಜವಾಗಿ ಸಂಭವಿಸುವಂತಹದು. ಹೀಗೆ ಇಲ್ಲಿ ಕೆಲವಂಶಗಳಲ್ಲಿ ವಾಕ್ಯಾರ್ಥವು ಸಂಭವಿಸಿ ಬೇರೆ ಕೆಲವು ಅಂಶಗಳಲ್ಲಿ ಸಂಭವಿಸದೇ ಇರುವ ಪ್ರಯುಕ್ತ ಇದು ಉಭಯರೂಪವೆನಿಸಿದೆ.

ಶ್ಲೇಷದಿಂದ ಅಪ್ರಸ್ತುತವಾದ ಸಮವಸ್ತುವಿನಿಂದ ಪ್ರಸ್ತುತಸಮವಸ್ತುವು ತೋರುವ ಪ್ರಯುಕ್ತ ಈ ಅಪ್ರಸ್ತುತಪ್ರಶಂಸೆಯು ಸಮಾಸೋಕ್ತಿಯಂತೆ ಒಂದು ವ್ಯವಹಾರವನ್ನು ಮತ್ತೊಂದರಲ್ಲಿ ಆರೋಪಿಸುವುದರಲ್ಲಿಯೇ ಕೊನೆಗಾಣುತ್ತದೆ. ಆದ್ದರಿಂದ ಇದು ಶಬ್ದಶಕ್ತಿಮೂಲಧ್ವನಿಗಿಂತ ಬೇರೆಯಾಗಿದೆ.ಅಲ್ಲಿ ವ್ಯವಹಾರಸಮಾರೋಪಕ್ಕೆ ಅವಕಾಶವಿಲ್ಲ. ಇಲ್ಲಿಯಾದರೂ 'ಸಹಕಾರಃ ಸದಾಮೋದಃ' ಎಂಬಲ್ಲಿ ತಿಳಿಸಿರುವಂತೆ ವ್ಯವಹಾರಸಮಾರೋಪಕ್ಕೆ ಅವಕಾಶವಿಲ್ಲ. ಇಲ್ಲಿಯಾದರೋ 'ಸಹಕಾರಃ ಸದಾಮೋದಃ' ಎಂಬಲ್ಲಿ ತಿಳಿಸಿರುವಂತೆ ವ್ಯವಹಾರಸಮಾರೋಪವಿದೆ. ಉಪಮಾಧ್ವನಿಯಲ್ಲಿ ವ್ಯವಹಾರ ಸಮಾರೋಪಕ್ಕೆ ಅವಕಾಶವಿರುವ ಪ್ರಯುಕ್ತ ಅದಕ್ಕೂ ಇದಕ್ಕೂ ಭೇದವೇನೆಂದರೆ ಅಲ್ಲಿ ಅಪ್ರಕೃತವಾದ ವಸ್ತುವು ವ್ಯಂಗ್ಯವಾಗಿ ತೋರುವುದು. ಇಲ್ಲಿಯಾದರೋ ಪ್ರಕೃತವೆನಿಸಿದ ನಾಯಕನು ಮಾತ್ರವೇ ವ್ಯಂಗ್ಯವಾಗಿ ತೋರುವನು. ಹೀಗೆ ಇವೆರಡಕ್ಕೂ ಭೇದವಿದೆ. ಸಮಾಸೋಕ್ತಿಯಲ್ಲಿ ಉಪಮಾಧ್ವನಿಯಂತೆಯೇ ಅಪ್ರಕೃತವಾದದ್ದು ವ್ಯಂಗ್ಯವಾಗಿ ತೋರುವುದು. ಇಲ್ಲಿಯಾದರೋ ಪ್ರಕೃತವಾದದ್ದು ವ್ಯಂಗ್ಯವಾಗಿ ತೋರುವುದು. ಹೀಗೆ ಇವೆರಡಕ್ಕೂ ಭೇದವಿದೆ. ಶ್ಲೇಷದಲ್ಲೂ ವ್ಯವಹಾರಸಮಾರೋಪವಿದ್ದರೂ ಸಹ ಅಲ್ಲಿ ತೋರುವ ಎರಡು ಅರ್ಥಗಳು ವಾಚ್ಯವೇ ಆಗಿರುತ್ತವೆ. ಇಲ್ಲಿಯಾದರೋ ಪ್ರಕೃತವಾದ ಅರ್ಥವು ಮಾತ್ರವೇ ವ್ಯಂಗ್ಯವಾಗಿರುವುದು. ಹೀಗೆ ಇವೆರಡು ಅಲಂಕಾರಗಳಿಗೂ ಭೇದವಿದೆ. ಅಪ್ರಕೃತವಿಶೇಷದಿಂದ ಅಪ್ರಕೃತವಾದದ್ದನ್ನು ತಿಳಿಸಿದ್ದರಿಂದ ಪ್ರಕೃತವಾದದ್ದು ವ್ಯಂಗ್ಯವಾಗಿ ತೋರಿದರೆ ಅಪ್ರಸ್ತುತಪ್ರಶಂಸೆಯಾಗುವಂತೆ ಒಂದನ್ನು ತಿಳಿಸಿದ್ದರಿಂದ ಮತ್ತೊಂದು ವ್ಯಂಗ್ಯವಾಗಿ ತೋರುವಕಡೆ ವ್ಯಾಜಸ್ತುತಿಯೂ ಸಂಭವಿಸ

ಬಹುದಾದ್ದರಿಂದ ಅದನ್ನು ಈಗ ವಿವರಿಸುತ್ತಾನೆ. ವಾಚ್ಯಾರ್ಥದಂತೆ ಶಬ್ದವನ್ನು ಕೇಳಿದೊಡನೆ ತಿಳಿದುಬರುವ ನಿಂದಾಸ್ತುತಿಗಳಿಂದ ಸ್ತುತಿನಿಂದೆಗಳು ವ್ಯಂಗ್ಯವಾಗಿ ತೋರುವುದೇ ವ್ಯಾಜಸ್ತುತಿ ಎನಿಸುವುದು. ಸ್ಪಷ್ಟವಾದ ನಿಂದೆಯಿಂದ ಪ್ರಶಂಸೆಯೂ, ಸ್ಪಷ್ಟವಾದ ಪ್ರಶಂಸೆಯಿಂದ ನಿಂದೆಯೂ ತೋರಿಬರುವುದೇ ವ್ಯಾಜಸ್ತುತಿ. ನಿಂದೆಯಿಂದ ಸ್ತುತಿಯು ತೋರುವುದೇ ವ್ಯಾಜರೂಪವಾದ ಸ್ತುತಿ. ಸ್ತುತಿಯಿಂದ ನಿಂದೆ ತೋರುವುದೂ ವ್ಯಾಜರೂಪವಾದ ಸ್ತುತಿಯೇ ಆಗುವುದು. ಯಾವುದೋ ನೆಪದಿಂದ ಸ್ತುತಿಸುವಿಕೆ ಎಂಬುದೇ ಈ ಪದದ ಅರ್ಥ. ನಿಂದೆಯ ನೆಪದಿಂದ ಸ್ತುತಿಸುವುದು ವಾಸ್ತವವಾದ ಪ್ರಶಂಸೆ. ವ್ಯಾಜರೂಪವಾದ ಪ್ರಶಂಸೆ ವಾಸ್ತವವಾದದ್ದಲ್ಲ. ನಿಂದೆಯಿಂದ ಪ್ರಶಂಸೆಯು ತೋರುವುದನ್ನು ಈಗ ಉದಾಹರಿಸುತ್ತಾನೆ. ವ್ಯಾಜದಿಂದ ರಾಜನನ್ನು ಇಲ್ಲಿ ಪ್ರಶಂಸಿಸಲಾಗಿದೆ. "ಎಲೈ ರಾಜನೇ, ನೀನು ಕೋಪಗೊಂಡಿರಲಾಗಿ ನಿನ್ನ ಶತ್ರುಸ್ತ್ರೀಯರ ಸ್ತನಗಳಿಂದ ಆಭರಣಗಳು ಉದುರುವುವು. ಭಯದಿಂದ ರೋಮಾಂಚವುಂಟಾಗಿ ಅವರ ದೇಹಗಳು ನಡುಗತೊಡಗುವುವು. ಪತಿಯ ಮರಣಕ್ಕಿಂತ ಮುಂಚೆಯೇ ಆಭರಣವನ್ನು ತೊರೆದದ್ದರಿಂದ ಅವರು ವಿಧವೆಯರಂತೆ ಆಗುವರು" ಇಲ್ಲಿ ನಿರಪರಾಧಿಗಳಾದ ಅಬಲೆಯರಿಗೆ ನಿರರ್ಥಕವಾಗಿ ದುಃಖವನ್ನು ಕೊಡುವುದರಿಂದ ಕೇಳಿದಕೂಡಲೇ ರಾಜನ ನಿಂದೆಯು ತೋರುತ್ತದೆ. ಅದರಿಂದ ಅವನು ಮಹಾವೀರನೆಂಬ ಪ್ರಶಂಸೆಯು ತೋರುತ್ತದೆ. ನಿಂದೆಯ ವ್ಯಾಜದಿಂದ ರಾಜನ ಸ್ತುತಿ ಬಂದಿರುವುದರಿಂದ ಇದು ವ್ಯಾಜಸ್ತುತಿ ಎನಿಸಿದೆ.

ಪ್ರಶಂಸೆಯಿಂದ ನಿಂದೆಯು ವ್ಯಂಗ್ಯವಾಗಿ ತೋರುವುವನ್ನು ಉದಾಹರಿಸುತ್ತಾನೆ. "ಎಲೈ ಮೇಘವೇ, ಜಗತ್ತನ್ನು ರಕ್ಷಿಸಲಿಕ್ಕಾಗಿ ನಿನ್ನಲ್ಲಿ ನೀರು ಹುಟ್ಟುತ್ತದೆ ಎಂದು ನಾನು ನಿನ್ನ ಬಗ್ಗೆ ಹೇಳುವುದು ತೋರಿಕೆಯ ಪ್ರಶಂಸೆಯೇ ಆಗಿದೆ. ಏಕೆಂದರೆ ನದಿಯ ನೀರೂ ಸಹ ಜಗತ್ತಿನ ಜೀವರನ್ನು ರಕ್ಷಿಸಬಲ್ಲದು. ಆದರೆ ಎಲೈ ಮೇಘವೇ ನಿನ್ನಲ್ಲಿ ಇದೊಂದು ಹೆಚ್ಚಿನ ಪ್ರಶಂಸೆ ಇದೆ. ನೀನು ವಿರಹಿಗಳಿಗೆ ಅನೇಕ ಬಗೆಯಾಗಿ ಯಾತನೆಯನ್ನು ಕೊಟ್ಟು ಅವರನ್ನು ಕೊಂದು ಧರ್ಮಾನುಗುಣವಾಗಿ ಪ್ರಾಣಗಳನ್ನು ಕೊಲ್ಲುವ ಯಮನಿಗೆ ಸಹಾಯವನ್ನು ಮಾಡುತ್ತಿರುವೆ." ಇಲ್ಲಿ ಯಮಧರ್ಮನಿಗೆ ಸಹಾಯವನ್ನು ಮಾಡುತ್ತಿರುವೆ ಎಂಬ ಈ ಮಾತನ್ನು ಕೇಳಿದೊಡನೆಯೇ ಪ್ರಶಂಸೆಯು ತೋರುತ್ತದೆ. ಆದರೆ ಅದರಿಂದ ನಿರಪರಾಧಿಗಳಾದ ವಿರಹಿಗಳನ್ನು ಕೊಲೆಮಾಡುತ್ತಿರುವೆಯಾದ್ದರಿಂದ ಮೇಘದ ನಿಂದೆಯು ವ್ಯಂಗ್ಯವಾಗಿ ತೋರುವುದು. ಹೀಗೆ ವ್ಯಾಜರೂಪವಾದ ಸ್ತುತಿಯಿಂದ ನಿಂದೆಯು ತೋರಿಬರುವ ಪ್ರಯುಕ್ತ ಇದು ವ್ಯಾಜಸ್ತುತಿ ಎನಿಸಿದೆ.

ಪರ್ಯಾಯೋಕ್ತಂ ಯದಾ ಭಂಗ್ಯಾ ಗಮ್ಯಮೇವಾಭಿಧೀಯತೇ ।

ಸ್ಪೃಷ್ಟಾಸ್ತಾ ನಂದನೇ ಶಚ್ಯಾಃ ಕೇಶಸಂಭೋಗಲಾಲಿತಾಃ ।<br>
ಸಾವಜ್ಞಂ ಪಾರಿಜಾತಸ್ಯ ಮಂಜರ್ಯೋ ಯಸ್ಯ ಸೈನಿಕೈಃ ॥

ಅತ್ರ ಹಯಗ್ರೀವೇಣ ಸ್ವರ್ಗೋ ವಿಜಿತ ಇತಿ ಪ್ರಸ್ತುತಮೇವ ಗಮ್ಯಂ ಕಾರಣಂ ವೈಚಿತ್ರ್ಯವಿಶೇಷಪ್ರತಿಪತ್ತಯೇ ಸೈನ್ಯಸ್ಯ ಪಾರಿಜಾತಮಂಜರೀಸಾವಜ್ಞಸ್ಪರ್ಶನರೂಪ ಕಾರ್ಯದ್ವಾರೇಣಾಭಿಹಿತಮ್.

ನ ಚೇದಂ ಕಾರ್ಯಾತ್ ಕಾರಣಪ್ರತೀತಿರೂಪಾ ಅಪ್ರಸ್ತುತತ್ವಾತ್. ಇಹ ಹಿ ವರ್ಣನೀಯಸ್ಯ ಪ್ರಭಾವಾತಿಶಯಬೋಧಕತ್ವೇನ ಕಾರ್ಯಮಪಿ ಕಾರಣವತ್ ಪ್ರಸ್ತುತಮ್. ಏವಂ ಚ—

ಅನೇನ ಪರ್ಯಾಸಯತಾಶ್ರುಬಿಂದೂನ್ ಮುಕ್ತಾಫಲಸ್ಥೂಲತಮಾನ್ ಸ್ತನೇಷು ।
ಪ್ರತ್ಯರ್ಪಿತಾಃ ಶತ್ರುವಿಲಾಸಿನೀನಾಮಾಕ್ಷೇಪಸೂತ್ರೇಣ ವಿನೈವ ಹಾರಾಃ ॥

ಅತ್ರ ವರ್ಣನೀಯಸ್ಯ ರಾಜ್ಞೋ ಗಮ್ಯಭೂತಶತ್ರುಮಾರಣರೂಪಕಾರಣವತ್ ಕಾರ್ಯಭೂತಂ ತಥಾವಿಧಶತ್ರುಸ್ತ್ರೀಕ್ರಂದನಜಲಮಪಿ ಪ್ರಭಾವಾತಿಶಯಬೋಧಕತ್ವೇನ ವರ್ಣನಾರ್ಹಮಿತಿ ಪರ್ಯಾಯೋಕ್ತಮೇವ.

ರಾಜನ್ ರಾಜಸುತಾ ನ ಪಾಠಯತಿ ಮಾಂ ದೇವ್ಯೋಽಪಿ ತೂಷ್ಣೀಂ ಸ್ಥಿತಾಃ
ಕುಬ್ಜೇ ಭೋಜಯ ಮಾಂ ಕುಮಾರಸಚಿವೈರ್ನಾದ್ಯಾಪಿ ಕಿಂ ಭುಜ್ಯತೇ ? ।
ಇತ್ಥಂ ರಾಜಶುಕಸ್ತವಾರಿಭವನೇ ಮುಕ್ತೋಽಧ್ವಗೈಃ ಪಂಜರಾತ್
ಚಿತ್ರಸ್ಥಾನವಲೋಕ್ಯ ಶೂನ್ಯವಡಭಾವಾದೇಕೈಕಮಾಭಾಷತೇ ॥

ಅತ್ರ "ಪ್ರಸ್ಥಾನೋದ್ಯತಂ ಭವಂತಂ ಶ್ರುತ್ವಾ ಸಹಸೈವಾರಯಃ ಪಲಾಯಿತಾ ಇತಿ ಕಾರಣಂ ಪ್ರಸ್ತುತಂ, ಕಾರ್ಯಮಪಿ ವರ್ಣನಾರ್ಹತ್ವೇನ ಪ್ರಸ್ತುತಮ್" ಇತಿ ಕೇಚಿತ್. ಅನ್ಯೇ ತು "ರಾಜಶುಕವೃತ್ತಾಂತೇನ ನ ಕೋಽಪಿ ಪ್ರಸ್ತುತಸ್ಯ ಪ್ರಭಾವೋ ಬೋಧ್ಯತ ಇತ್ಯಪ್ರಸ್ತುತಪ್ರಶಂಸೈವ" ಇತ್ಯಾಹುಃ.

ಸಾಮಾನ್ಯಂ ವಾ ವಿಶೇಷೇಣ ವಿಶೇಷಸ್ತೇನ ವಾ ಯದಿ ।
ಕಾರ್ಯಂ ಚ ಕಾರಣೇನೇದಂ ಕಾರ್ಯೇಣ ಚ ಸಮರ್ಥ್ಯತೇ ॥
ಸಾಧರ್ಮ್ಯೇಣೇತರೇಣಾರ್ಥಾಂತರನ್ಯಾಸೋಽಷ್ಟಧಾ ತತಃ ।

ಬೃಹತ್ಸಹಾಯಃ ಕಾರ್ಯಾಂತಂ ಕ್ಷೋದೀಯಾನಪಿ ಗಚ್ಛತಿ ।
ಸಂಭೂಯಾಂಭೋಧಿಮಭ್ಯೇತಿ ಮಹಾನದ್ಯಾ ನಗಾಪಗಾ ॥

ಅತ್ರ ದ್ವಿತೀಯಾರ್ಧಗತೇನ ವಿಶೇಷರೂಪೇಣಾರ್ಥೇನ ಪ್ರಥಮಾರ್ಧಗತಃ ಸಾಮಾನ್ಯೋಽರ್ಥಃ ಸೋಪಪತ್ತಿಕಃ ಕ್ರಿಯತೇ.

ಯಾವದರ್ಥಪದಾಂ ವಾಚಮೇವಮಾದಾಯ ಮಾಧವಃ ।
ವಿರರಾಮ ಮಹೀಯಾಂಸಃ ಪ್ರಕೃತ್ಯಾ ಮಿತಭಾಷಿಣಃ ॥

ಪೃಥ್ವಿ ! ಸ್ಥಿರಾ ಭವ ಭುಜಂಗಮ !ಧಾರಯೈನಾಂ
ತ್ವಂ ಕೂರ್ಮರಾಜ ! ತದಿದಂ ದ್ವಿತಯಂ ದಧೀಥಾಃ ।
ದಿಕ್ಕುಂಜರಾಃ ! ಕುರುತ ತತ್ತ್ರಿತಯೇ ದಿಧೀರ್ಷಾಂ ।

ಆರ್ಯಃ ಕರೋತಿ ಹರ ಕಾರ್ಮುಕಮಾತತಜ್ಯಮ್ ||

ಅತು ಕಾರಣೀಭೂತಂ ಹರ ಕಾರ್ಮುಕಾತತಜ್ಯೀಕರಣಂ ಪೃಥ್ವಿಸ್ಥೈರ್ಯಾದೇಃಕಾರ್ಯಸ್ಯ ಸಮರ್ಥಕಮ್.

'ಸಹಸಾ ವಿದಧೀತ ನ ಕ್ರಿಯಮ್' ಇತ್ಯಾದೌ ಸಂಪದ್ವರಣಂ ಕಾರ್ಯಂ ಸಹಸಾ ವಿಧಾನಾಭಾವಸ್ಯ ವಿಮೃಶ್ಯಕಾರಿತ್ವರೂಪಸ್ಯ ಕಾರಣಸ್ಯ ಸಮರ್ಥಕಮ್.

ಏತಾನಿ ಸಾಧರ್ಮ್ಯೇ ಉದಾಹರಣಾನಿ. ವೈಧರ್ಮ್ಯೇ ಯಥಾ—

ಇತ್ಥಮಾರಾಧ್ಯಮಾನೋऽಪಿ ಕ್ಲಿಶ್ನಾತಿ ಭುವನತ್ರಯಮ್ ।
ಶಾಮ್ಯೇತ್ಪ್ರತ್ಯಪಕಾರೇಣ ನೋಪಕಾರೇಣ ದುರ್ಜನಃ ||

ಅತ್ರ ಸಾಮಾನ್ಯಂ ವಿಶೇಷಸ್ಯ ಸಮರ್ಥಕಮ್. 'ಸಹಸಾ ವಿದಧೀತ' ಇತ್ಯತ್ರ ಸಹಸಾ ವಿಧಾನಾಭಾವಸ್ಯ ಆಪತ್ಪದತ್ವಂ ವಿರುದ್ಧಂ ಕಾರ್ಯಂ ಸಮರ್ಥಕಮ್. ಏವಮನ್ಯತ್—

ಹೇತೋರ್ವಾಕ್ಯಪದಾರ್ಥತ್ವೇ ಕಾವ್ಯಲಿಂಗಂ ನಿಗದ್ಯತೇ ।

ತತ್ರ ವಾಕ್ಯಾರ್ಥತಾ ಯಥಾ—

ಯತ್ ತ್ವನ್ನೇತ್ರಸಮಾನಕಾಂತಿ ಸಲಿಲೇ ಮಗ್ನಂ ತದಿಂದೀವರಂ
ಮೇಘೈರಂತರಿತಃ ಪ್ರಿಯೇ ! ತವ ಮುಖಚ್ಛಾಯಾನುಕಾರೀ ಶಶೀ ।
ಯೇऽಪಿ ತ್ವದ್ಗಮನಾನುಸಾರಿಗತಯಸ್ತೇ ರಾಜಹಂಸಾ ಗತಾಃ
ತ್ವತ್ಸಾದೃಶ್ಯವಿನೋದಮಾತ್ರಮಪಿ ಮೇ ದೈವೇನ ನ ಕ್ಷಮ್ಯತೇ ।

ಅತ್ರ ಚತುರ್ಥಪಾದೇ ಪಾದತ್ರಯವಾಕ್ಯಾನಿ ಹೇತವಃ. ಪದಾರ್ಥತಾ ಯಥಾ—

ತ್ವದ್ವಾಜಿರಾಜಿನಿರ್ಧೂತಧೂಲೀಪಟಲಪಂಕಿಲಾಮ್ ।
ನ ಧತ್ತೇ ಶಿರಸಾ ಗಂಗಾಂ ಭೂರಿಭಾರಭಿಯಾ ಹರಃ ||

ಅತ್ರ ದ್ವಿತೀಯಾರ್ಧೇ ಪ್ರಥಮಾರ್ಧಮೇಕಪದಂ ಹೇತುಃ. ಅನೇಕಪದಂ ಯಥಾ—

ಪಶ್ಯಂತ್ಯಸಂಖ್ಯಪಥಗಾಂ ತ್ವದ್ದಾನಜಲವಾಹಿನೀಮ್ ।
ದೇವ ತ್ರಿಪಥಗಾತ್ಮಾನಂ ಗೋಪಯತ್ಯುಗ್ರಮೂರ್ಧನಿ ||

ಇಹ ಕೇಚಿತ್ ವಾಕ್ಯಾರ್ಥಗತೇನ ಕಾವ್ಯಲಿಂಗೇನೈವ ಗತಾರ್ಥತಯಾ ಕಾರ್ಯಕಾರಣಭಾವೇ ಅರ್ಥಾಂತರನ್ಯಾಸಂ ನಾದ್ರಿಯಂತೇ ತದಯುಕ್ತಮ್. ತಥಾಹಿ ತತ್ರ ಹೇತುಸ್ತ್ರಿಧಾ ಭವತಿ-ಜ್ಞಾಪಕಃ ನಿಷ್ಪಾದಕಃ. ಸಮರ್ಥಕಶ್ಚೇತಿ. ತತ್ರ ಜ್ಞಾಪಕೋऽನುಮಾನಸ್ಯ ವಿಷಯಃ, ನಿಷ್ಪಾದಕಃ ಕಾವ್ಯಲಿಂಗಸ್ಯ, ಸಮರ್ಥಕೋऽರ್ಥಾಂತರನ್ಯಾಸಸ್ಯ ಇತಿ ಪೃಥಗೇವ ಕಾರ್ಯಕಾರಣಭಾವೇ ಅರ್ಥಾಂತರನ್ಯಾಸಃ ಕಾವ್ಯಲಿಂಗಾತ್. ತಥಾಹಿ 'ಯತ್ತ್ವನ್ನೇತ್ರ' ಇತ್ಯಾದೌ ಚತುರ್ಥಪಾದವಾಕ್ಯಮ್ ಅನ್ಯಥಾ ಸಾಕಂಕ್ಷತಯಾ ಅಸಮಂಜಸಮೇವ ಸ್ಯಾದಿತಿ ಪಾದತ್ರಯಗತವಾಕ್ಯಂ ನಿಷ್ಪಾದಕತ್ವೇ ನಾಪೇಕ್ಷ್ಯತೇ. 'ಸಹಸಾ ವಿದಧೀತ' ಇತ್ಯಾದೌ ತು

ಪರೋಪಕಾರನಿರತೈರ್ದುರ್ಜನೈಃ ಸಹ ಸಂಗತಿಃ ।
ವದಾಮಿ ಭವತಸ್ತತ್ತ್ವಂ ನ ವಿಧೇಯಾ ಕದಾಚನ ॥

ಇತ್ಯಾದಿವದುಪದೇಶಮಾತ್ರೇಣಾಪಿ ನಿರಾಕಾಂಕ್ಷತಯಾ ಸ್ವತೋಽಪಿ ಗತಾರ್ಥಂ ಸಹಸಾ ವಿಧಿನಾಭಾವಂ ಸೋಪಪತ್ತಿಕಮೇವ ಕರೋತೀತಿ ಪೃಥಗೇವ ಕಾರ್ಯ-ಕಾರಣಭಾವೇ ಅರ್ಥಾಂತರನ್ಯಾಸಃ ಕಾವ್ಯಲಿಂಗಾತ್.

ನ ಧತ್ತೇ ಶಿರಸಾ ಗಂಗಾಂ ಭೂರಿಭಾರಧಿಯಾ ಹರಃ ।
ತ್ವದ್ವಾಜಿರಾಜಿನಿರ್ಧೂತಧೂಲಿಭಿಃ ಪಂಕಿಲಾ ಹಿ ಸಾ ॥

ಇತ್ಯತ್ರ ಹಿ ಶಬ್ದೋಪಾದಾನೇನ 'ಪಂಕಿಲತ್ವಾತ್' ಇತಿವತ್ ಹೇತುತ್ವಸ್ಯ ಸ್ಫುಟತಯಾ ನಾಯಮಲಂಕಾರಃ, ವೈಚಿತ್ರ್ಯಸ್ಯೈವಾಲಂಕಾರತ್ವಾತ್.

ವ್ಯಾಜಸ್ತುತಿಯಲ್ಲಿ ವ್ಯಂಗ್ಯಾರ್ಥವೇ ಪ್ರಕೃತವೆನಿಸಿದ್ದರಿಂದ ಆ ವ್ಯಂಗ್ಯಾರ್ಥದೊಳಗಿನ ಒಂದು ಬಗೆಯನ್ನು ಅವಲಂಬಿಸಿಕೊಂಡು ಪರ್ಯಾಯೋಕ್ತವು ಹೊರಟಿರುವುದರಿಂದ ಅದರ ಸ್ವರೂಪವನ್ನು ಈಗ ವಿವರಿಸುತ್ತಾನೆ. ವ್ಯಂಗ್ಯಾರ್ಥವನ್ನು ಬೇರೊಂದು ರೀತಿಯಿಂದ ವಾಚ್ಯಾರ್ಥದಂತೆ ತಿಳಿಸುವುದೇ ಪರ್ಯಾಯೋಕ್ತವೆನಿಸುವುದು. ವಿಶೇಷವೆನಿಸಿ ತೋರುವ ವ್ಯಂಗ್ಯಾರ್ಥವನ್ನು ವಾಕ್ಚಾತುರ್ಯದಿಂದ ಸ್ಪಷ್ಟವಾಗಿ ಸೂಚಿಸುವುದರಲ್ಲೂ ಒಂದು ಬಗೆಯ ಚಮತ್ಕಾರವಿರುವುದರಿಂದ ಇದು ಪರ್ಯಾಯೋಕ್ತಾಲಂಕಾರವೆನಿಸುವುದು. "ಹಯಗ್ರೀವನ ಸೈನಿಕರು ಇಂದ್ರಾಣಿಯ ಕೇಶಪಾಶವನ್ನು ಹಿಡಿಯಲಿಕ್ಕಾಗಿ ಹೊರಟು ಉದ್ಯಾನಪಾಲಕರಿಂದ ಪೋಷಿಸಲ್ಪಡುತ್ತಿದ್ದ ಪಾರಿಜಾತವೃಕ್ಷದ ಹೂವಿನ ಗೊಂಚಲುಗಳನ್ನು ನಂದನವನದಲ್ಲಿ ಅವಮಾನಪಡುತ್ತಲೇ ಹಿಡಿದುಕೊಂಡರು'' ಇಲ್ಲಿ ಹಯಗ್ರೀವನು ಸ್ವರ್ಗವನ್ನು ಜಯಿಸಿದನು ಎಂಬ ಅಂಶವೇ ಪ್ರಕೃತವೆನಿಸಿದ ವ್ಯಂಗ್ಯಾರ್ಥ. ಅದನ್ನು ಇಲ್ಲಿ ವಾಚ್ಯದಂತೆ ಬೇರೆ ರೀತಿಯಲ್ಲಿ ಸೈನ್ಯವು ಅವಮಾನಗೊಂಡು ಪಾರಿಜಾತವೃಕ್ಷದ ಹೂವಿನ ಗೊಂಚಲನ್ನು ಹಿಡಿಯಿತೆಂದು ತಿಳಿಸಿದೆ. ಸೈನ್ಯವು ಸ್ವರ್ಗವನ್ನು ಜಯಿಸದಿದ್ದರೆ ನಂದನವನದಲ್ಲಿ ಪಾರಿಜಾತ ಪುಷ್ಪವನ್ನು ಮುಟ್ಟಲಿಕ್ಕೆ ಆಗುವುದಿಲ್ಲ. ಸ್ವರ್ಗವನ್ನು ಜಯಿಸಿದರೆ ನಂದನವನವನ್ನು ಆಕ್ರಮಿಸಿದಂತಾಗುವುದು. ಹೀಗೆ ಪಾರಿಜಾತವನ್ನು ಮುಟ್ಟಲಿಕ್ಕೆ ಸ್ವರ್ಗದ ಜಯವೇ ಕಾರಣವೆನಿಸಿದೆ. ವ್ಯಂಗ್ಯವೆನಿಸಿದ ಈ ಕಾರಣವನ್ನು ಕಾರ್ಯದ ಮೂಲಕ ವಾಚ್ಯವಾಗಿ ತಿಳಿಸಿದೆ. ಕಾರ್ಯದಿಂದ ಕಾರಣವು ತೋರುವುದೇ ಅಪ್ರಸ್ತುತಪ್ರಶಂಸೆಯ ಒಂದು ಬಗೆ.ಆದರೆ ಅದಕ್ಕೂ ಪರ್ಯಾಯೋಕ್ತಕ್ಕೂ ವೈಲಕ್ಷಣ್ಯವಿದೆ. ಅಲ್ಲಿ ಕಾರ್ಯವು ಅಪ್ರಕೃತವೆನಿಸಿದೆ. ಇಲ್ಲಿಯಾದರೋ ವರ್ಣಿಸಬೇಕಾಗಿರುವ ವಸ್ತುವಿನ ಹೆಚ್ಚಿನ ಪ್ರಭಾವವನ್ನು ತಿಳಿಸಬೇಕಾದ್ದರಿಂದ ಕಾರ್ಯವೂ ಸಹ ಕಾರಣದಂತೆ ಪ್ರಕೃತವೇ ಆಗಿರುವುದು. ಈ ರೀತಿಯಲ್ಲಿ ಹೇಳುವುದರಿಂದ ಮುಂದಿನ ಪದ್ಯದಲ್ಲಿ ಪರ್ಯಾಯೋಕ್ತವನ್ನೇ ಒಪ್ಪಬೇಕಾಗುವುದು. "ಅಂಗದೇಶದ ಈ ರಾಜನು ಶತ್ರುಸ್ತ್ರೀಯರ ಸ್ತನಗಳಲ್ಲಿ ಮುತ್ತಿನಂತೆ ದಪ್ಪವಾದ ಕಣ್ಣೀರುಗಳನ್ನು ಸುರಿಸುವಂತೆ ಮಾಡಿದ್ದರಿಂದ ದಾರವಿಲ್ಲದೆಯೇ ಮಣಿ-

ಗಳನ್ನು ಪೋಷಿಸಿದಂತಾಯಿತು.'' ಇಲ್ಲಿ ವರ್ಣಿಸಬೇಕಾಗಿರುವ ರಾಜನು ಶತ್ರುಗಳನ್ನು ಕೊಲೆಮಾಡಿದನು ಎಂಬುದು ವ್ಯಂಗ್ಯವೆನಿಸಿದೆ. ಇದೇ ಇಲ್ಲಿ ಮುಂದಿನ ಕಾರ್ಯಕ್ಕೆ ಕಾರಣವಾಗಿದೆ. ಇದರಿಂದ ಶತ್ರುಸ್ತ್ರೀಯರು ವಿಶೇಷವಾಗಿ ಗೋಳಾಡತೊಡಗಿದರು. ಅವರು ಸುರಿಸಿದ ಕಣ್ಣೀರಿನ ಹನಿಗಳು ರಾಜನ ಹೆಚ್ಚಿನ ವೈಭವವನ್ನು ತಿಳಿಸುವುದರಿಂದ ವರ್ಣನಾರ್ಹವೇ ಆಗಿವೆ. ಹೀಗೆ ಶತ್ರುಸ್ತ್ರೀಯರು ಕಣ್ಣೀರಿಟ್ಟರೆಂಬ ಕಾರ್ಯವೂ ಸಹ ಕಾರಣದಂತೆಯೇ ಪ್ರಕೃತವೆನಿಸಿದೆ. ಆದ್ದರಿಂದ ಇಲ್ಲಿಯೂ ಪರ್ಯಾಯೋಕ್ತ ವನ್ನೇ ಹೇಳಬೇಕು.

ಈ ಬಗ್ಗೆ ಸಂದೇಹಾಸ್ಪದವಾದ ಉದಾಹರಣವನ್ನು ತಿಳಿಸುತ್ತಾನೆ. ಆಕ್ರಮಿಸ ಬೇಕಾಗಿರುವ ಶತ್ರುವು ತನ್ನ ರಾಜಧಾನಿಯಲ್ಲಿ ಯಾವ ಭಾವದಿಂದ ಇರುವನೆಂಬು ದನ್ನು ತಿಳಿಯಲು ಹೊರಟಿದ್ದ ಗೂಢಚಾರನು ಅದನ್ನು ತಿಳಿದು ರಾಜನಿಗೆ ಹೀಗೆ ತಿಳಿಸುವನು. 'ಸ್ವಾಮಿ, ನಿನ್ನ ಶತ್ರುವಿನ ಮನೆಯಲ್ಲಿ ಪಥಿಕರು ಪಂಜರದಿಂದ ಹೊರಡಿ ಸಿದ ಗಿಳಿಯು ಜನರಿಲ್ಲದ ಚಂದ್ರಶಾಲೆಯಲ್ಲಿ ನೆಲೆಸಿದ್ದು ಚಿತ್ರದಲ್ಲಿಯೋ ಗೋಡೆ ಯಲ್ಲೋ ಬರೆದಿರುವ ರಾಜನೇ ಮೊದಲಾದವರನ್ನು ನೋಡಿ ಒಬ್ಬೊಬ್ಬರಿಗೂ "ಎಲೈ ರಾಜನೇ, ರಾಜಪುತ್ರಿಯು ನನಗೆ ಕೃಷ್ಣನ ಕಥೆ ಮೊದಲಾದ್ದನ್ನು ಹೇಳಿಕೊಡುವುದಿಲ್ಲ. ದೇವಿಯರೂ ಸಹ ಸುಮ್ಮನೆ ಇರುವರು. ನನ್ನ ರಕ್ಷಕಿಯಾದ ಎಲೈ ಕುಳ್ಳು ಸ್ತ್ರೀಯಳೇ ನನಗೆ ಊಟಕ್ಕೆ ಬಡಿಸು. ರಾಜಪುತ್ರರಂತೆ ಮಂತ್ರಿಗಳು ಈಗಲೂ ಊಟಮಾಡ, ಬಾರದೆ ? ಹೀಗೆ ತಿಳಿಸುತ್ತದೆ." ಇಲ್ಲಿ ರಾಜನು ಯುದ್ಧಕ್ಕೆ ಹೊರಡಲು ಉದ್ಯುಕ್ತನಾದ ನೆಂಬುದನ್ನು ಕೇಳಿದೊಡನೆ ಶತ್ರುಗಳು ಓಡಿಹೋದರು ಎಂಬುದೇ ಕಾರಣವೆನಿಸಿದೆ. ಇದು ವರ್ಣನೀಯವಾದ ಪ್ರಕೃತವಿಷಯ. ಇದರಿಂದ ಊಟದ ಕಾರ್ಯವೂ ಸಹ ಪ್ರಕೃತವೇ ಆಗಿದೆ. ಶುಕಭಾಷಣವೇ ಇಲ್ಲಿ ಪ್ರಕೃತಕಾರ್ಯ. ಶುಕಭಾಷಣವೆಂಬ ಈ ಪ್ರಕೃತಕಾರ್ಯ ದಿಂದ ಪ್ರಕೃತವೇ ಎನಿಸಿದ ಶತ್ರುಪಲಾಯನವೆಂಬ ಕಾರಣವು ತೋರುವುದರಿಂದ ಇದು ಪರ್ಯಾಯೋಕ್ತವೇ ಆಗಿದೆ ಎಂದು ಕೆಲವರು ಹೇಳುತ್ತಾರೆ. ಉಳಿದವರಾದರೋ (ಕಾವ್ಯಪ್ರಕಾಶಕಾರ) "ಗಿಳಿಯ ವೃತ್ತಾಂತದಿಂದ ಪ್ರಕೃತವೆನಿಸಿದ ಶತ್ರುವಿನಲ್ಲಿ ಯಾವ ಪ್ರಭಾವವೂ ಆಗಲಿಲ್ಲವೆಂಬುದನ್ನು ಕವಿಯೇ ತಿಳಿಸುತ್ತಾನೆ. ಅಪ್ರಕೃತವಾದ ಗಿಳಿಯ ವೃತ್ತಾಂತವೆಂಬ ಕಾರ್ಯದಿಂದ ಶತ್ರುಗಳ ಪಲಾಯನವೆಂಬ ಕಾರಣವು ತೋರುವುದ ರಿಂದ ಇದು ಅಪ್ರಸ್ತುತಪ್ರಶಂಸೆಯೇ ಆಗುವುದೆಂದು ಹೇಳುತ್ತಾರೆ. ಗ್ರಂಥಕಾರನು ನಿರ್ದಿಷ್ಟವಾದ ಯಾವ ಅಭಿಪ್ರಾಯವನ್ನೂ ತಿಳಿಸದೇ ಇರುವುದರಿಂದ ಇಲ್ಲಿ ಅಪ್ರಸ್ತುತ ಪ್ರಶಂಸೆ ಮತ್ತು ಪರ್ಯಾಯೋಕ್ತ ಇವೆರೆಡರ ಸಂದೇಹಸಂಕರಾಲಂಕಾರವಿದೆ ಎಂದು ತಿಳಿಯಬಹುದು.

ಕಾರ್ಯಕಾರಣಭಾವವು ತೋರುವಕಡೆ ಪರ್ಯಯೋಕ್ತದಂತೆ ಬೇರೆ ಅಲಂಕಾರವು ಇರುತ್ತದೆಯೇ ಇಲ್ಲವೇ ಎಂದು ಆಲೋಚಿಸಿ ಅಲ್ಲಿ ಅರ್ಥಾಂತರನ್ಯಾಸವೆಂಬುದೊಂದು ಉಂಟೆಂದು ಅದರ ಲಕ್ಷಣವನ್ನು ತಿಳಿಸುತ್ತಾನೆ. ವಿಶೇಷದಿಂದ ಸಾಮಾನ್ಯವನ್ನಾಗಲೀ

ಸಾಮಾನ್ಯದಿಂದ ವಿಶೇಷವನ್ನಾಗಲೀ, ಕಾರ್ಯದಿಂದ ಕಾರಣವನ್ನಾಗಲೀ ಕಾರಣದಿಂದ ಕಾರ್ಯವನ್ನಾಗಲೀ ಸಮರ್ಥನಮಾಡುವುದೇ ಅರ್ಥಾಂತರನ್ಯಾಸವೆನಿಸುವುದು. ಇದು ಸಾಧರ್ಮ್ಯದಿಂದಲೂ ವೈಧರ್ಮ್ಯದಿಂದಲೂ ಸಂಭವಿಸುವ ಪ್ರಯುಕ್ತ ಈ ನಾಲ್ಕು ಬಗೆಗಳಲ್ಲಿ ಒಂದೊಂದೂ ಎರಡು ಬಗೆಗಳಾಗಿ ಒಟ್ಟು ಹದಿನೆಂಟು ಬಗೆಗಳಾಗುತ್ತವೆ. ವಿಶೇಷದಿಂದ ಸಾಮಾನ್ಯವನ್ನು ಸಮರ್ಥಿಸುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ಹೆಚ್ಚು ನೀಚನಾದವನೂ ಸಹ ದೊಡ್ಡ ಸಹಾಯದಿಂದ ಕಾರ್ಯದ ಕೊನೆಯನ್ನು ಮುಟ್ಟಬಲ್ಲನು ; ದುಷ್ಕರವಾದ ಕಾರ್ಯವನ್ನೂ ಸಹ ಅವನು ಸಾಧಿಸಬಲ್ಲನು. ಪರ್ವತದಲ್ಲಿ ಹುಟ್ಟಿದ ಸಣ್ಣ ನದಿಯು ಗಂಗೆ ಮೊದಲಾದ ನದಿಯೊಡಗೂಡಿ ಸಮುದ್ರವನ್ನು ಸೇರುತ್ತದೆ." ಇಲ್ಲಿ ದ್ವಿತೀಯಾರ್ಥದಲ್ಲಿ ಸಣ್ಣ ನದಿಯು ದೊಡ್ಡವರೊಡನೆ ಸೇರಿ ಸಮುದ್ರವನ್ನು ಮುಟ್ಟುತ್ತದೆ ಎಂಬುದು ವಿಶೇಷರೂಪವಾದ ಅರ್ಥ. ಇದರಿಂದ ಪ್ರಥಮಾರ್ಥದಲ್ಲಿ ಹೇಳಿರುವ "ನೀಚನೂ ಸಹ ದೊಡ್ಡವರ ಸಹಾಯದಿಂದ ಕಾರ್ಯವನ್ನು ಸಾಧಿಸಬಲ್ಲನು" ಎಂಬ ಸಾಮಾನ್ಯವಾದ ಅರ್ಥವನ್ನು ಸಯುಕ್ತಿಕವಾಗಿ ಸಮರ್ಥನಮಾಡಲಾಗಿದೆ. ಸಾಮಾನ್ಯದಿಂದ ವಿಶೇಷವನ್ನು ಸಮರ್ಥನಮಾಡುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ಎಷ್ಟು ಬೇಕೋ ಅಷ್ಟು ಅರ್ಥದಿಂದ ಕೂಡಿದ ಪದಗಳಿರುವಂತೆ ತನ್ನ ಮಾತನ್ನು ಕೃಷ್ಣನು ತಿಳಿಸಿ ಸುಮ್ಮನಾದನು;ಯಾಕೆಂದರೆ ದೊಡ್ಡವರು ಸಹಜವಾಗಿಯೇ ಮಿತಭಾಷಿಗಳೆನಿಸಿರುವರು." ಇಲ್ಲಿ ಮೊದಲನೆಯ ವಾಕ್ಯದಲ್ಲಿ ಮಾಧವನು ಅರ್ಥಯುಕ್ತವಾದ ಮಾತನ್ನು ಹೇಳಿ ನಿಲ್ಲಿಸಿದನೆಂಬುದೇ ವಿಶೇಷವೆನಿಸಿದೆ. ಎರಡನೆಯ ವಾಕ್ಯದಲ್ಲಿ ದೊಡ್ಡವರು ಸಹಜವಾಗಿ ಮಿತಭಾಷಿಗಳು ಎಂಬುದೇ ಸಾಮಾನ್ಯವೆನಿಸಿದೆ. ಹೇಳಬೇಕಾದಷ್ಟನ್ನು ಹೇಳಿ ನಿಲ್ಲಿಸುವಿಕೆ ಮತ್ತು ಮಿತಭಾಷಿತ್ವ ಇವೆರಡೂ ವಾಸ್ತವವಾಗಿ ಒಂದೇ ಧರ್ಮವೆನಿಸಿವೆ. ಹೀಗೆ ಸಾಧರ್ಮ್ಯದಲ್ಲಿ ಸಾಮಾನ್ಯದಿಂದ ವಿಶೇಷವನ್ನು ಸಮರ್ಥನಮಾಡಲಾಗಿದೆ. ಕಾರಣದಿಂದ ಕಾರ್ಯವನ್ನು ಸಮರ್ಥಿಸಲು ಉದಾಹರಣವನ್ನು ತಿಳಿಸುತ್ತಾನೆ. ಬಾಲರಾಮಾಯಣವೆಂಬ ಮಹಾನಾಟಕದಲ್ಲಿ ಲಕ್ಷ್ಮಣನ ಹೇಳುವ ಮಾತಿದು. 'ಭೂಮಿಯೇ, ಸ್ಥಿರವಾಗಿರು. ಸರ್ಪವೇ, ಈ ಭೂಮಿಯನು ಹಿಡಿದಿರು. ಆಮೆಯೇ, ನೀನು ಇವೆರಡನ್ನೂ ಹಿಡಿದಿರು. ದಿಗ್ಗಜಗಳೇ, ನೀವೂ ಸಹ ಭೂಮಿ, ಆದಿಶೇಷ, ಆಮೆ ಈ ಮೂರನ್ನೂ ಹಿಡಿದಿರಲು ಇಚ್ಛಿಸಿರಿ. ಇಲ್ಲವಾದರೆ ಇವರೆಲ್ಲರೂ ತಮ್ಮ ತಮ್ಮ ಸ್ಥಾನಗಳಿಂದ ಉರುಳಬಹುದು. ಯಾಕೆಂದರೆ ಪೂಜ್ಯನಾದ ರಾಮನು ಶಿವನ ಧನುಸ್ಸಿಗೆ ಶಿಂಜಿನಿಯನ್ನು ಏರಿಸಿ ಕಟ್ಟುತ್ತಿರುವನು" ಇಲ್ಲಿ ಶಿವನ ಧನುಸ್ಸಿಗೆ ಹಗ್ಗವನ್ನು ಕಟ್ಟಿ ಬಾಣಪ್ರಯೋಗಕ್ಕೆ ಅನುಕೂಲವಾಗುವಂತೆ ಏರ್ಪಡಿಸುವುದೇ ಕಾರಣವೆನಿಸಿದೆ. ಇದರಿಂದ ಭೂಮಿ ಮೊದಲಾದವೆಲ್ಲವೂ ಸ್ಥಿರಗೊಳ್ಳುವವೆಂಬ ಕಾರ್ಯವನ್ನು ಸಮರ್ಥನಮಾಡಲಾಗಿದೆ. 'ಸಹಸಾ ವಿದಧೀತ ನ ಕ್ರಿಯಾಂ' ಎಂಬ ಪದ್ಯದಲ್ಲಿ ಕಾರ್ಯದಿಂದ ಕಾರಣವನ್ನು ಸಮರ್ಥಿಸಲಾಗಿದೆ. ವಿಚಾರಮಾಡಿ ಕಾರ್ಯ ಮಾಡುವವನನ್ನು ಸಂಪತ್ಸಮೃದ್ಧಿಗಳು ಆವರಿಸುತ್ತವೆ ಎಂಬುದೇ ಕಾರ್ಯವೆನಿಸಿದೆ.

ಆತುರದಿಂದ ಏನನ್ನೂ ಮಾಡದೆ ವಿಚಾರಮಾಡಿ ಕೆಲಸ ಮಾಡುವುದೇ ಕಾರಣವೆನಿಸಿದೆ. ಸಂಪದ್ವರಣವು ಕಾರಣವನ್ನು ಸಮರ್ಥಿಸುತ್ತದೆ. ಇವೆಲ್ಲವೂ ಸಾಧರ್ಮ್ಯಕ್ಕೆ ಉದಾಹರಣವೆನಿಸಿವೆ. ಮುಂದೆ ವೈಧರ್ಮ್ಯಕ್ಕೆ ಉದಾಹರಣವನ್ನು ಕೊಡುತ್ತಾನೆ. "ಹೀಗೆ ಸಂತೋಷಪಡಿಸಿದರೂ ಸಹ ತಾರಕಾಸುರನು ಮೂರುಲೋಕದ ಜನರಿಗೂ ಹಿಂಸೆಯನ್ನು ಕೊಡುತ್ತಾನೆ. ದುಷ್ಟನು ಪ್ರತ್ಯಪಕಾರದಿಂದ ಶಾಂತನಾಗಬೇಕೇ ಹೊರತು ಪ್ರತ್ಯುಪಕಾರದಿಂದ ಆಗಲಾರನು" ಇಲ್ಲಿ ಎರಡನೆಯ ವಾಕ್ಯದಲ್ಲಿ ಬಂದಿರುವ ಸಾಮಾನ್ಯ ವಾಕ್ಯವು ಮೊದಲನೆಯ ವಾಕ್ಯದಲ್ಲಿ ಹೇಳಿರುವ ವಿಶೇಷಾಂಶವನ್ನು ಸಮರ್ಥಿಸುತ್ತದೆ. ಆರಾಧನವೆಂದರೆ ಉಪಕಾರಮಾಡುವುದೆಂದು ಅರ್ಥ. ಇಲ್ಲಿ ಸಾಮಾನ್ಯವೆನಿಸಿದ ದುರ್ಜನನಿಗೆ ಅಪಕಾರದಿಂದ ಶಾಂತಿಯಾಗುವುದೆಂದೂ, ವಿಶೇಷವೆನಿಸಿದ ತಾರಕನಿಗೆ ಉಪಕಾರದಿಂದ ಸಂತೋಷವಾಯಿತೆಂದೂ ಹೇಳಿರುವುದರಿಂದ ಎರಡು ಕಡೆಯಲ್ಲೂ ವೈಧರ್ಮ್ಯವಿದೆ. ವೈಧರ್ಮ್ಯವಿದ್ದರೂ ಸಾಮಾನ್ಯವಿಶೇಷಗಳಿಗೆ ಸಮರ್ಥ್ಯಸಮರ್ಥಕ ಭಾವವಿದೆ. 'ಸಹಸಾ ವಿದಧೀತ' ಎಂಬಲ್ಲಿ ಆತುರದಿಂದ ಕೆಲಸಮಾಡುವುದು ಆಪತ್ತಿನ ಮೂಲವೆಂದೂ, ವಿಚಾರಮಾಡಿ ಕೆಲಸ ಮಾಡುವವನನ್ನು ಸಂಪತ್ತು ಆರಿಸಿಕೊಳ್ಳುವುದೆಂದೂ ಎರಡು ವಾಕ್ಯಗಳಲ್ಲೂ ವಿರುದ್ಧ ಧರ್ಮಗಳನ್ನು ಹೇಳಿರುವುದರಿಂದ ಇದು ವೈಧರ್ಮ್ಯಕ್ಕೆ ಉದಾಹರಣವೆನಿಸಿದೆ. ಹೀಗೆಯೇ ಬೇರೆ ಕಡೆಯಲ್ಲೂ ತಿಳಿಯುವುದು.

ಅರ್ಥಾಂತರನ್ಯಾಸದಲ್ಲಿ ಕಾರಣವನ್ನು ತಿಳಿಸಿದ್ದರಿಂದ ಅಂತಹ ಕಾರಣದಿಂದ ಕೂಡಿದ ಕಾವ್ಯಲಿಂಗವನ್ನು ಈಗ ತಿಳಿಸುತ್ತಾನೆ. ಯಾವುದೋ ಒಂದು ವಸ್ತುವಿಗೆ ಕಾರಣವೆನಿಸಿದ್ದು ವ್ಯಂಜನೆಯಿಂದ ಸಂಪೂರ್ಣವಾಕ್ಯದಿಂದಲೋ ಪದದಿಂದಲೋ ತಿಳಿದುಬರುವುದೇ ಕಾವ್ಯಲಿಂಗವೆನಿಸುವುದು. ಯಾವುದೋ ಒಂದು ಅರ್ಥವಿಶೇಷಕ್ಕೆ ವಾಕ್ಯದ ಅಥವಾ ಪದದ ಅರ್ಥವು ಹೇತುವೆನಿಸಿದರೆ ಆಗ ಅದು ಕಾವ್ಯಲಿಂಗವೆನಿಸುವುದು. ವಾಕ್ಯದ ಅರ್ಥವೇ ಹೇತುವೆನಿಸುವುದನ್ನು ಉದಾಹರಿಸುತ್ತಾನೆ. ಹನುಮನ್ನಾಟಕದಲ್ಲಿ ಸೀತೆಯನ್ನು ರಾವಣನು ಅಪಹರಿಸಿ ಕೊಂಡು ಹೋದಮೇಲೆ ವರ್ಷಾಕಾಲದಲ್ಲಿ ರಾಮನು ಹೇಳುವ ಮಾತಿದು. "ಎಲೈ ಪ್ರಿಯೆ, ನಿನ್ನ ಕಣ್ಣುಗಳಿಗೆ ಸಮಾನವಾದ ಕಾಂತಿ ಇರುವ ಆ ಕನ್ನೈದಿಲೆಯು ನೀರಿನಲ್ಲಿ ಮುಳುಗಿತು. ನಿನ್ನ ಮುಖದ ಛಾಯೆಗೆ ಸದೃಶವೆನಿಸಿದ ಚಂದ್ರನನ್ನು ಮೇಘಗಳು ಮುಚ್ಚಿದವು. ನಿನ್ನ ಗಮನಕ್ಕೆ ಸದೃಶವಾಗಿ ನಡೆಯುವಂತಹ ರಾಜಹಂಸಗಳೂ ಸಹ ಎಲ್ಲಿಯೋ ಹೋದವು. ಹೀಗೆ ನಿನಗೆ ಸದೃಶವಾದ ವಸ್ತುಗಳನ್ನಾದರೂ ನೋಡಿ ಸಂತೋಷಪಡುವ ಸ್ಥಿತಿಯನ್ನೂ ಸಹ ದೈವವು ಸಹಿಸದೆ ತಪ್ಪಿಸಿಬಿಟ್ಟಿದೆ" ಇಲ್ಲಿ ನಾಲ್ಕನೆಯ ಪದದಲ್ಲಿ ಹೇಳಿರುವ 'ನಿನಗೆ ಸದೃಶವಾದ ವಸ್ತುಗಳನ್ನು ನೋಡುವ ಸೌಭಾಗ್ಯವೂ ನನಗೆ ಇಲ್ಲ'ವೆಂಬ ಅರ್ಥಕ್ಕೆ ಹಿಂದಿನ ಮೂರು ಪಾದಗಳಲ್ಲಿ ಹೇಳಿರುವ ಅರ್ಥಗಳು ಹೇತುವೆನಿಸಿವೆ. ಹೀಗೆ ವಾಕ್ಯಾರ್ಥವೇ ಹೇತುವೆನಿಸಿದ ಕಾವ್ಯಲಿಂಗಕ್ಕೆ ಇದು ಉದಾಹರಣವೆನಿಸಿದೆ. ಪದಾರ್ಥವೇ ಹೇತುವೆನಿಸಿರುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ಎಲೈ ರಾಜನೆ, ನಿನ್ನ ಕುದುರೆಗಳ ಶ್ರೇಣಿಯ ತುಳಿತದಿಂದ ಮೇಲಕ್ಕೆ

ಎದ್ದ ಧೂಳಿನ ರಾಶಿಯಿಂದ ಗಂಗೆಯು ಕೊಳೆಯಾದ್ದರಿಂದ ಹೆಚ್ಚು ಭಾರವಾದೀತೆಂಬ ಭಯದಿಂದ ಮಹಾದೇವನು ಆ ಗಂಗೆಯನ್ನು ಶಿರಸ್ಸಿನಲ್ಲಿ ಧರಿಸುವುದಿಲ್ಲ." ಇಲ್ಲಿ ಶಿವನು ಜಡೆಯಲ್ಲಿ ಗಂಗೆಯನ್ನು ಧರಿಸದೇ ಇರುವುದಕ್ಕೆ ಹೇತುವನ್ನು ಪ್ರಥಮಾರ್ಧವು ತಿಳಿಸಿದೆ. ಅಲ್ಲಿ ಬಂದಿರುವ ಸಮಸ್ತಪದದ ಅರ್ಥವು ಕಾರಣವೆನಿಸಿದೆ. ಅನೇಕ ಪದಗಳ ಅರ್ಥವು ಕಾರಣವೆನಿಸಿರುವುದಕ್ಕೆ ಉದಾಹರಣವನ್ನು ತಿಳಿಸುತ್ತಾನೆ. "ಸ್ವಾಮಿ, ಸ್ವರ್ಗಮರ್ತ್ಯ ಪಾತಾಳವೆಂಬ ಮೂರು ಲೋಕಗಳಲ್ಲೂ ಸಂಚರಿಸುವ ಗಂಗೆಯು ನೀನು ಯಾಚಕರಿಗೆ ದಾನಮಾಡುವ ಕಾಲದಲ್ಲಿ ಸುರಿಸುವ ನೀರು ಅನೇಕ ರೀತಿಗಳಲ್ಲಿ ಹರಿಯುವುದನ್ನು ಕಂಡು ಲಜ್ಜೆಯಿಂದ ಮಹಾದೇವನ ಶಿರಸ್ಸಿನಲ್ಲಿ ತನ್ನನ್ನು ಮುಚ್ಚಿಕೊಳ್ಳುವಳು." ಇಲ್ಲಿ ತನ್ನನ್ನು ಮರೆಮಾಡಿಕೊಳ್ಳಲು ಅಸಂಖ್ಯಪಥಗಾಂ, ತ್ರಿಪಥಗಾ ಎಂಬ ಎರಡು ಪದಗಳಲ್ಲಿ ಹೇತುವನ್ನು ತಿಳಿಸಲಾಗಿದೆ: ಗಂಗೆಯು ಮೂರು ಮಾರ್ಗಗಳಲ್ಲಿ ಹರಿಯುತ್ತದೆ; ದಾನೋದಕಪ್ರವಾಹವು ಲೆಕ್ಕವಿಲ್ಲದಷ್ಟು ಮಾರ್ಗಗಳಲ್ಲಿ ಹರಿಯುತ್ತದೆ. ಇದರಿಂದಲೇ ಗಂಗೆಯು ತನ್ನನ್ನು ಮುಚ್ಚಿಕೊಳ್ಳಬೇಕಾಯಿತು. ಹೀಗೆ ಎರಡು ಪದಗಳಲ್ಲಿ ಹೇತುವನ್ನು ತಿಳಿಸಿದೆ. ಇಲ್ಲಿ ಕೆಲವರು (ಮಮ್ಮಟ) ಸಂಪೂರ್ಣವಾದ ಅರ್ಥವನ್ನು ಪ್ರಕಾಶಿಸುವ ವಾಕ್ಯಾರ್ಥವೇ ಹೇತುವೆನಿಸಿದ ಕಾವ್ಯಲಿಂಗವಿರುವಾಗ ಕಾರ್ಯಕಾರಣಭಾವವಿರುವ ಕಡೆ ಅರ್ಥಾಂತರನ್ಯಾಸವನ್ನು ಹೇಳಬೇಕಾದ ಆವಶ್ಯಕತೆ ಇಲ್ಲವೆಂದು ಹೇಳುತ್ತಾರೆ. ಇದು ಯುಕ್ತವಲ್ಲ. ಹೇಗೆಂದರೆ ಹೇತುವು ಸಾಮಾನ್ಯವಾಗಿ ಮೂರು ಬಗೆಯಾಗಿರುತ್ತದೆ. ಕೆಲವುಕಡೆ ಅದು ಅನುಮಿತಿ ಎಂಬ ಜ್ಞಾನವನ್ನು ಹುಟ್ಟಿಸುತ್ತದೆ; ಕೆಲವುಕಡೆ ಅಪೇಕ್ಷಿತವಾದ ಅರ್ಥವನ್ನು ಸಾಧಿಸುತ್ತದೆ; ಕೆಲವುಕಡೆ ಅಸಂಭವದೋಷವನ್ನು ತೊಲಗಿಸಿ ಅರ್ಥವನ್ನು ಸಮರ್ಥಿಸುತ್ತದೆ. ಜ್ಞಾಪಕಹೇತುವೆಂಬುದು ಅನುಮಾನಕ್ಕೆ ಅನ್ವಯಿಸುವುದು. ನಿಷ್ಪಾದಕಹೇತುವು ಅರ್ಥಾಂತರನ್ಯಾಸಕ್ಕೆ ಅನ್ವಯಿಸುತ್ತದೆ. ಸಮರ್ಥಕಹೇತುವು ಅರ್ಥಾಂತರನ್ಯಾಸಕ್ಕೆ ಅನ್ವಯಿಸುತ್ತದೆ. ಹೀಗೆ ಕಾರ್ಯಕಾರಣಭಾವವಿರುವ ಕಡೆ ಸಂಭವಿಸುವ ಅರ್ಥಾಂತರನ್ಯಾಸವು ಕಾವ್ಯಲಿಂಗಕ್ಕಿಂತ ಬೇರೆಯೇ ಆಗುತ್ತದೆ. ಹೀಗೆ ವ್ಯವಸ್ಥೆ ಇಲ್ಲದಿದ್ದರೆ 'ಯತ್ತ್ವನ್ನೇತ್ರ' ಎಂಬ ಪದ್ಯದಲ್ಲಿ ನಾಲ್ಕನೆಯ ಪಾದದಲ್ಲಿರುವ ವಾಕ್ಯವು ಹಿಂದಿನ ವಾಕ್ಯಗಳ ಅರ್ಥವನ್ನು ಅಪೇಕ್ಷಿಸುವುದರಿಂದ ಅಸಮಂಜಸವೇ ಆಗಬೇಕಾದೀತು. ಹೀಗೆ ಹಿಂದಿನ ಮೂರು ಪಾದಗಳಲ್ಲಿರುವ ವಾಕ್ಯಾರ್ಥವು ನಾಲ್ಕನೆಯ ಪಾದದ ವಾಕ್ಯಾರ್ಥವನ್ನು ಹುಟ್ಟಿಸುವುದರಿಂದ ಅಪೇಕ್ಷಿತವಾಗಿದೆ.

'ಸಹಸಾ ವಿದಧೀತ' ಎಂಬಲ್ಲಿ "ಯಾವಾಗಲೂ ಇತರರಿಗೆ ತೊಂದರೆಯನ್ನು ಕೊಡಲು ನಿರತರಾದ ದುಷ್ಟರೊಡನೆ ಎಂದೆಂದಿಗೂ ಸೇರಬಾರದು. ನಿನಗೆ ನಿಜಾಂಶವನ್ನು ತಿಳಿಸುವೆನು, ಕೇಳು "ಎಂಬಲ್ಲಿರುವಂತೆ 'ಕೆಲಸ ಮಾಡುವಾಗ ಯಾವನೂ ಆತುರಪಡಬಾರದು' ಎಂದು ಆತುರದಿಂದ ಕೆಲಸಮಾಡಬಾರದೆಂಬ ನಿಷೇಧವು ಯಾವ ಸಮರ್ಥನವನ್ನೂ ಅಪೇಕ್ಷಿಸುವುದಿಲ್ಲ. ಅದರ ಅರ್ಥವು ತಾನಾಗಿಯೇ ಎಲ್ಲರಿಗೂ

ತಿಳಿಯುವಷ್ಟು ಸುಲಭವೇ ಆಗಿದೆ. ಅರ್ಥವು ಅಲ್ಲಿಯೇ ಸಾಕಷ್ಟು ಪೂರ್ಣವಾಗಿದೆ, ಸಂಪತ್ತು ವಿವೇಕಿಯನ್ನು ಅನುಸರಿಸಿಕೊಂಡು ಹೋಗುತ್ತದೆ ಎಂಬಲ್ಲಿ ಹೇಳಿರುವ ಸನ್ನಿವೇಶವು ಅದಕ್ಕೆ ವಿರುದ್ಧವಾಗಿ ವರ್ತಿಸುವವನಿಗೆ ಆಪತ್ತು ಸಂಭವಿಸುವುದೆಂಬು ದನ್ನು ತಾನಾಗಿಯೇ ಸಮರ್ಥಿಸುತ್ತದೆ.ಅದಕ್ಕಾಗಿ ಬೇರೆ ಯಾವ ಉಪದೇಶವೂ ಆವಶ್ಯಕ ವೆನಿಸಿಲ್ಲ. ಆದ್ದರಿಂದ ಕಾರ್ಯಕಾರಣಭಾವವನ್ನು ಅವಲಂಬಿಸಿದ ಅರ್ಥಾಂತರನ್ಯಾಸವು ಕಾವ್ಯಲಿಂಗಕ್ಕಿಂತ ಬೇರೆಯೇ ಆಗಿದೆ ಎಂದು ತಿಳಿಯಬೇಕು.

"ಶಿವನು ಹೆಚ್ಚು ಹೊರೆಯಾದೀತೆಂಬ ಭಯದಿಂದ ಗಂಗೆಯನ್ನು ಶಿರಸ್ಸಿನಲ್ಲಿ ಧರಿಸಿಲ್ಲ; ಯಾಕೆಂದರೆ ರಾಜನ ಕುದುರೆಗಳು ಯುದ್ಧಕ್ಕೆ ಹೋಗುವಾಗ ನೆಲದಿಂದ ಮೇಲಕ್ಕೆ ಎದ್ದ ಧೂಳಿನಿಂದ ಆ ಗಂಗೆಯು ಮಲಿನವಾಗಿರುವಳು." ಎಂಬಲ್ಲಿ 'ಪಂಕಿಲಾ ಹಿ ಸಾ'ಎಂದು ಹಿ ಶಬ್ದವನ್ನು ಸೇರಿಸುವುದರಿಂದ 'ಪಂಕಿಲತ್ವಾತ್' ಎಂಬಂತೆ ಆಕೆಯು ಕಲ್ಮಶಗೊಂಡಿದ್ದು ಶಿವನು ಶಿರಸ್ಸಿನಲ್ಲಿ ಧರಿಸದೇ ಇರಲಿಕ್ಕೆ ಕಾರಣವೆನಿಸುವುದೆಂಬುದು ಸ್ಪಷ್ಟಪಡುತ್ತದೆ. ಪಂಚಮೀವಿಭಕ್ತಿಯಂತೆ ಹಿ ಶಬ್ದವು ಹೇತುವೆಂಬ ಅರ್ಥವನ್ನು ತಿಳಿಸುತ್ತದೆ. ಹೀಗೆ ಸ್ಫುಟವಾಗಿ ಹೇಳುವುದರಲ್ಲಿ ವೈಚಿತ್ರ್ಯವಿರುವುದಿಲ್ಲ. ವೈಚಿತ್ರ್ಯ ವನ್ನೇ ಅಲಂಕಾರವೆಂದು ಕರೆಯುವ ಪ್ರಯುಕ್ತ ಇದು ಅಲಂಕಾರವೆನಿಸುವುದಿಲ್ಲ.

ಅನುಮಾನಂ ತು ವಿಚ್ಛಿತ್ತ್ಯಾ ಜ್ಞಾನಂ ಸಾಧ್ಯಸ್ಯ ಸಾಧನಾತ್ ।

ಯಥಾ-ಜಾನೀಮಹೇಽಸ್ಯಾ ಹೃದಿ ಸಾರಸಾಕ್ಷ್ಯಾ ವಿರಾಜತೇಽಂಶಃ ಪ್ರಿಯವಕ್ತ್ರಚಂದ್ರಃ

ತತ್ಕಾಂತಿಜಾಲೈಃ ಪ್ರಸೃತೈಸ್ತದಂಗೇಷ್ವಾಪಾಂಡುತಾ ಕುಡ್ಮಲತಾಕ್ಷಿಪದ್ಮೇ ॥

ಅತ್ರ ರೂಪಕವಶಾದ್ವಿಚ್ಛಿತ್ತಿಃ- ಯಥಾ ವಾ-

ಯತ್ರ ಪತತ್ಯಬಲಾನಾಂ ದೃಷ್ಟಿರ್ನಿಶಿತಾಃ ಪತಂತಿ ತತ್ರ ಶರಾಃ ।

ತಚ್ಚಾಪರೋಪಿತಶರೋ ಧಾವತ್ಯಾಸಾಂ ಪುರಃ ಸ್ಮರೋ ಮನ್ಯೇ ॥

ಅತ್ರಕವಿಪ್ರೌಢೋಕ್ತಿವಶಾದ್ವಿಚ್ಛಿತ್ತಿಃ.

ಉತ್ಪ್ರೇಕ್ಷಾಯಾಮನಿಶ್ಚಿತತಯಾ ಪ್ರತೀತಿಃ ಇಹ ತು ನಿಶ್ಚಿತತಯೇತ್ಯುಭಯೋರ್ಭೇದಃ. ಅಭೇದೇನಾಭಿಧಾ ಹೇತುರ್ಹೇತೋರ್ಹೇತುಮತಾ ಸಹ ।

ಯಥಾ ಮಮ 'ತಾರುಣ್ಯಸ್ಯ ವಿಲಾಸಃ' ಇತ್ಯತ್ರ ವಶೀಕರಣಹೇತುರ್ನಾಯಿಕಾವಶೀಕರಣತ್ವೇನೋಕ್ತಾ. ವಿಲಾಸಹಾಸಯೋಸ್ತು ಅಧ್ಯವಸಾಯಮೂಲೋಽಯಮಲಂಕಾರಃ.

ಅನುಕೂಲಂ ಪ್ರಾತಿಕೂಲ್ಯಮನುಕೂಲಾನುಬಂಧಿ ಚೇತ್ ।

ಕುಪಿತಾಸಿ ಯದಾ ತನ್ವಿ ನಿಧಾಯ ಕರಜಕ್ಷತಾಮ್ ।

ಬಧಾನ ಭುಜಪಾಶಾಭ್ಯಾಂ ಕಂಠಮಸ್ಯ ದೃಢಂ ತದಾ ॥

ಅಸ್ಯ ಚ ವಿಚ್ಛಿತ್ತಿವಿಶೇಷಸ್ಯ ಸರ್ವಾಲಂಕಾರವಿಲಕ್ಷಣತ್ವೇನಸ್ಫುರಣಾತ್ ಪೃಥಗಲಂಕಾರತ್ವಮೇವ ನ್ಯಾಯ್ಯಮ್.

ವಸ್ತುನೋ ವಕ್ತುಮಿಷ್ಟಸ್ಯ ವಿಶೇಷಪ್ರತಿಪತ್ತಯೇ ।
ನಿಷೇಧಾಭಾಸ ಆಕ್ಷೇಪೋ ವಕ್ಷ್ಯಮಾಣೋಕ್ತಗೋ ದ್ವಿಧಾ ॥

ಅತ್ರ ವಕ್ಷ್ಯಮಾಣವಿಷಯೇ ಕ್ವಚಿತ್ಸರ್ವಸ್ಯಾಪಿ ಸಾಮಾನ್ಯತಃ ಸೂಚಿತಸ್ಯ ನಿಷೇಧಃ ಕ್ವಚಿದಂಶೋಕ್ತಾವಂಶಾಂತರೇ ನಿಷೇಧಃ ಇತಿ ದ್ವೌ ಭೇದೌ.ಉಕ್ತವಿಷಯೇ ಚ ಕ್ವಚಿತ್ ವಸ್ತುಸ್ವರೂಪಸ್ಯ ನಿಷೇಧಃ; ಕ್ವಚಿತ್ ವಸ್ತುಕಥನಸ್ಯೇತಿ ದ್ವೌ ಭೇದೌ. ಉಕ್ತವಿಷಯೇ ಚ ಕ್ವಚಿತ್ ವಸ್ತುಸ್ವರೂಪಸ್ಯ ನಿಷೇಧಃ, ಕ್ವಚಿತ್ ವಸ್ತುಕಥನಸ್ಯೇತಿ ದ್ವೌ. ಇತ್ಯಾಕ್ಷೇಪಸ್ಯ ಚತ್ವಾರೋ ಭೇದಾಃ. ಕ್ರಮೇಣ ಯಥಾ—

ಸ್ಮರಶತವಿಧುರಾಯಾಃ ಭಣಾಮಿ ಸಖ್ಯಾಃ ಕೃತೇ ಕಿಮಪಿ ।
ಕ್ಷಣಮಿಹ ವಿಶ್ರಾಮ್ಯ ಸಖೇ! ನಿರ್ದಯಹೃದಯಸ್ಯ ಕಿಂ ವದಾಮ್ಯಥವಾ ।

ಅತ್ರ ಸಖ್ಯಾ ವಿರಹಸ್ಯ ಸಾಮಾನ್ಯತಃ ಸೂಚಿತಸ್ಯ ವಕ್ಷ್ಯಮಾಣವಿಶೇಷೇ ನಿಷೇಧಃ.

ತವ ವಿರಹೇ ಹರಿಣಾಕ್ಷೀ ನಿರೀಕ್ಷ್ಯ ನವಮಲ್ಲಿಕಾಂ ದಲಿತಾಮ್ ।
ಹಂತ ನಿತಾಂತಮಿದಾನೀಮಾಃ ಕಿಂ ಹತಜಲ್ಪಿತೈರಥವಾ ॥

ಅತ್ರ ಮರಿಷ್ಯತೀತ್ಯಂಶೋ ನೋಕ್ತಃ.

ಬಾಲಕ ! ನಾಹಂ ದೂತೀ ತ್ವಂ ಪ್ರಿಯೋಽಸೀತಿ ನ ಮೇ ವ್ಯಾಪಾರಃ ।
ಸಾ ಮರಿಷ್ಯತಿ ತವ ಅಯಶೋ ಏತದ್ಧರ್ಮಾಕ್ಷರಂ ಭಣಾಮಿ ॥

ಅತ್ರ ದೂತೀತ್ವಸ್ಯ ವಸ್ತುನೋ ನಿಷೇಧಃ.

ವಿರಹೇ ತವ ತನ್ವಂಗೀ ಕಥಂ ಕ್ಷಪಯತು ಕ್ಷಪಾಮ್ ।
ದಾರುಣವ್ಯವಸಾಯಸ್ಯ ಪುರಸ್ತೇ ಭಣಿತೇನ ಕಿಮ್ ?॥

ಅತ್ರ ಕಥನಸ್ಯೋಕ್ತಸ್ಯೈವ ನಿಷೇಧಃ ಪ್ರಥಮೋದಾಹರಣೇ ಸಖ್ಯಾಃ ಅವಶ್ಯಂ ಭಾವಿ ಮರಣಮಿತಿ ವಿಶೇಷಃ ಪ್ರತೀಯತೇ. ದ್ವಿತೀಯೇಽಶಕ್ಯವಕ್ತವ್ಯತ್ವಾದಿ ತೃತೀಯೇ ದೂತೀತ್ವೇ ಯಥಾರ್ಥವಾದಿತ್ವಮ್. ಚತುರ್ಥೇ ದುಃಖಸ್ಯಾತಿಶಯಃ. ನ ಚಾಯಂ ವಿಹಿತನಿಷೇಧಃ, ಅತ್ರ ನಿಷೇಧಸ್ಯ ಆಭಾಸತ್ವಾತ್.

ಅನಿಷ್ಟಸ್ಯ ತಥಾರ್ಥಸ್ಯ ವಿಧ್ಯಾಭಾಸಃ ಪರೋ ಮತಃ ।

ತಥೇತಿ ಪೂರ್ವವದ್ವಿಶೇಷಪ್ರತಿಪತ್ತಯೇ. ಯಥಾ—

ಗಚ್ಛ ಗಚ್ಛಸಿ ಚೇತ್ಕಾಂತ ಪಂಥಾನಃ ಸಂತು ತೇ ಶಿವಾಃ ।
ಮಮಾಪಿ ಜನ್ಮ ತತ್ರೈವ ಭೂಯಾದ್ಯತ್ರ ಗತೋ ಭವಾನ್ ॥

ಅತ್ರ ಅನಿಷ್ಟತ್ವಾದ್ಗಮನಸ್ಯ ವಿಧಿಃ ಪ್ರಸ್ಖಲದ್ರೂಪೋ ನಿಷೇಧೇ ಪರ್ಯವಸ್ಯತಿ. ವಿಶೇಷಶ್ಚ ಗಮನಸ್ಯ ಅತ್ಯಂತಪರಿಹಾರ್ಯತ್ವರೂಪಃ ಪ್ರತೀಯತೇ.

ವಿಭಾವನಾ ವಿನಾ ಹೇತುಂ ಕಾರ್ಯೋತ್ಪತ್ತಿರ್ಯದುಚ್ಯತೇ ।
ಉಕ್ತಾನುಕ್ತನಿಮಿತ್ತತ್ವಾತ್ ದ್ವಿಧಾ ಸಾ ಪರಿಕೀರ್ತಿತಾ ॥

ವಿನಾ ಕಾರಣಂ ಉಪನಿಬಧ್ಯಮಾನೋऽಪಿ ಕಾರ್ಯೋದಯಃ ಕಿಂಚಿದನ್ಯತ್ಕಾರಣಮಪೇಕ್ಷ್ಯೈವ ಭವಿತುಂ ಯುಕ್ತಃ ತಚ್ಚ ಕಾರಣಾಂತರಂ ಕ್ವಚಿದುಕ್ತಂ ಕ್ವಚಿತ್ ಅನುಕ್ತಮಿತಿ ದ್ವಿಧಾ. ಯಥಾ—

ಅನಾಯಾಸಕೃಶಂ ಮಧ್ಯಮಶಂಕತರಲೇ ದೃಶೌ ।
ಅಭೂಷಣಮನೋಹಾರಿ ವಪುರ್ವಯಸಿ ಸುಭ್ರುವಃ ॥

ಅತ್ರ ವಯೋರೂಪನಿಮಿತ್ತಮುಕ್ತಮ್. ಅತ್ರೈವ 'ವಪುರ್ಭಾತಿ ಮೃಗೀದೃಶಃ' ಇತಿ ಪಾಠೇऽನುಕ್ತಮ್.

ಸತಿ ಹೇತೌ ಫಲಾಭಾವೋ ವಿಶೇಷೋಕ್ತಿಸ್ತಥಾ ದ್ವಿಧಾ ॥

ತಥೇತ್ಯುಕ್ತಾನುಕ್ತನಿಮಿತ್ತತ್ವಾತ್. ತತ್ರೋಕ್ತನಿಮಿತ್ತಾ ಯಥಾ—

ಧನಿನೋऽಪಿ ನಿರುನ್ಮಾದಾ ಯುವಾನೋऽಪಿ ನ ಚಂಚಲಾಃ ।
ಪ್ರಭವೋऽಪ್ಯಪ್ರಮತ್ತಾಸ್ತೇ ಮಹಾಮಹಿಮಶಾಲಿನಃ ॥

ಅತ್ರ ಮಹಾಮಹಿಮಶಾಲಿತ್ವಂ ನಿಮಿತ್ತಮುಕ್ತಮ್. ಅತ್ರೈವ ಚತುರ್ಥಪಾದೇ 'ಕಿಯಂತಃ ಸಂತಿ ಭೂತಲೇ' ಇತಿ ಪಾದೇ ತ್ವನುಕ್ತಮ್. ಅಚಿಂತ್ಯನಿಮಿತ್ತತ್ವಂ ಚಾನುಕ್ತನಿಮಿತ್ತಸ್ಯೈವ ಭೇದ ಇತಿ ಪೃಥಕ್ ನೋಕ್ತಮ್. ಯಥಾ—

ಸ ಏಕಸ್ತ್ರೀಣಿ ಜಯತಿ ಜಗಂತಿ ಕುಸುಮಾಯುಧಃ ।
ಹರತಾಪಿ ತನುಂ ಯಸ್ಯ ಶಂಭುನಾ ನ ಹೃತಂ ಬಲಮ್ ॥

ಅತ್ರ ತನೂಹರಣೇನಾಪಿ ಬಲಾಹರಣೇ ನಿಮಿತ್ತಮಚಿಂತ್ಯಮ್. ಇಹ ಚ ಕಾರ್ಯಾಭಾವಃ ಕಾರ್ಯವಿರುದ್ಧಸದ್ಭಾವಮುಖೇನಾಪಿ ನಿಬಧ್ಯತೇ. ವಿಭಾವನಾಯಾಮಪಿ ಕಾರಣಾಭಾವಃ ಕಾರಣವಿರುದ್ಧಸದ್ಭಾವಮುಖೇನ.ಏವಂ ಚ 'ಯಃ ಕೌಮಾರಹರಃ' ಇತ್ಯಾದೇರುತ್ಕಂಠಾಕಾರಣವಿರುದ್ಧಸ್ಯ ನಿಬಂಧನಾತ್ ವಿಭಾವನಾ. 'ಯಃ ಕೌಮಾರ' ಇತ್ಯಾದೇಃ ಕಾರಣಸ್ಯ ಚ ಕಾರ್ಯವಿರುದ್ಧಾಯಾಃ ಉತ್ಕಂಠಾಯಾಃ ನಿಬಂಧನಾದ್ವಿಶೇಷೋಕ್ತಿಃ. ಏವಂ ಚಾತ್ರ ವಿಭಾವನಾವಿಶೇಷೋಕ್ತ್ಯೋಃ ಸಂಕರಃ. ಶುದ್ಧೋದಾಹರಣಂ ತು ಮೃಗ್ಯಮ್.

ಹೇತುವಿನ ಪ್ರಕರಣವಾದ್ದರಿಂದ ಅದಕ್ಕೆ ಸಂಬಂಧಿಸಿದ ಅನುಮಾನಾಲಂಕಾರದ ಲಕ್ಷಣವನ್ನು ತಿಳಿಸುತ್ತಾನೆ. ವ್ಯಾಪ್ತಿಯೊಡಗೂಡಿದ ಹೇತುವಿನಿಂದ ಸಾಧಿಸಬೇಕಾದ ಅಂಶವು ಪಕ್ಷದಲ್ಲಿದೆ ಎಂಬ ಜ್ಞಾನವು ವೈಚಿತ್ರ್ಯದಿಂದ ಕೂಡಿದ್ದರೆ ಅನುಮಾನಾಲಂಕಾರವೆನಿಸುವುದು. ಒಂದು ಬಗೆಯ ವೈಚಿತ್ರ್ಯವಿದ್ದು ಹೇತುಜ್ಞಾನದಿಂದ ಹುಟ್ಟುವ ಸಾಧ್ಯಜ್ಞಾನವೇ ಅನುಮಾನವೆನಿಸುವುದು. ಇಲ್ಲಿ ವೈಚಿತ್ರ್ಯವಿರಬೇಕೆಂದು ಹೇಳಿದ್ದರಿಂದ ಪರ್ವತೋ ವಹ್ನಿಮಾನ್ ಧೂಮಾತ್ ಎಂಬಲ್ಲಿ ವೈಚಿತ್ರ್ಯವಿಲ್ಲದ ಪ್ರಯುಕ್ತ ಅದು ಅಲಂಕಾರವೆನಿಸುವುದಿಲ್ಲ.

ಒಬ್ಬ ವಿರಹಿಣಿಯನ್ನು ನೋಡಿ ಸ್ನೇಹಿತನ ಎದುರಿಗೆ ಒಬ್ಬನು ಹೇಳುವ ಮಾತಿದು- "ಈ ಪ್ರೇಯಸಿಯ ಹೃದಯದಲ್ಲಿ ಪ್ರಿಯನ ಮುಖವೆಂಬ ಚಂದ್ರನು ಪ್ರಕಾಶಿಸುತ್ತಿರು

ವನು. ಈಕೆಯು ಯಾವಾಗಲೂ ಪ್ರಿಯನ ಮುಖಚಂದ್ರನನ್ನೇ ಚಿಂತಿಸುತ್ತಿರುವಳು. ಹೀಗೆ ನಾವು ತಿಳಿಯುವೆವು. ಆ ಪ್ರಕಾಶದಿಂದ ಎಲ್ಲೆಡೆಯಲ್ಲೂ ಹೊರಟಿರುವ ಅವನ ಕಾಂತಿಸಮೂಹಗಳಿಂದಲೇ ಈ ಪ್ರೇಯಸಿಯ ಅವಯವಗಳಲ್ಲಿ ಹೆಚ್ಚು ಬಿಳುಪು ನೆಲಸಿದೆ. ಹಾಗೆಯೇ ಕಮಲದಂತಿರುವ ಕಣ್ಣಿನಲ್ಲಿ ಮೊಗ್ಗಾಗುವ ಸ್ಥಿತಿಯೂ ಉಂಟಾಗಿದೆ. ಹೀಗೆಂದು ಊಹಿಸುತ್ತೇವೆ." ಇಲ್ಲಿ ಪ್ರಿಯವಕ್ತ್ರಚಂದ್ರಃ ಎಂಬಲ್ಲಿ ರೂಪಕಾಲಂಕಾರ ವಿರುವುದರಿಂದ ಹೆಚ್ಚಿನ ಚಮತ್ಕಾರವುಂಟಾಗಿದೆ. ಅವಯವಗಳಲ್ಲಿ ಬಿಳುಪು ಇರುವುದ ರಿಂದಲೂ ಈ ನಾಯಿಕೆಯ ಹೃದಯದಲ್ಲಿ ಪ್ರಿಯನ ಮುಖಚಂದ್ರವು ನೆಲಸಿರುವುದೆಂಬ ಜ್ಞಾನವು ಇಲ್ಲಿ ನಮಗೆ ಉಂಟಾಗುವುದರಿಂದ ಇದು ಅನುಮಾನಾಲಂಕಾರವೆನಿಸಿದೆ. ಹೀಗೆ ಅನುಮಾನವನ್ನು ಕಲ್ಪಿಸಬೇಕಾದರೆ ಅಲ್ಲಿ ಯಾವುದಾದರೊಂದು ಬಗೆಯ ವೈಚಿತ್ರ್ಯವು ಅವಶ್ಯವಾಗಿ ನೆಲಸಿರಬೇಕು. ಈ ಪದ್ಯದಲ್ಲಿ ರೂಪಕಾಲಂಕಾರದ ವೈಚಿತ್ರ್ಯ ವಿದ್ದರೆ ಮುಂದಿನ ಪದ್ಯದಲ್ಲಿ ಕವಿಪ್ರೌಢೋಕ್ತಿಯ ಮೂಲಕ ವೈಚಿತ್ರ್ಯವು ನೆಲಸಿರುವು ದನ್ನು ಕಾಣಬಹುದು. "ಎಲ್ಲಿ ಸ್ತ್ರೀಯರ ದೃಷ್ಟಿಯು ಬೀಳುವುದೋ ಅಲ್ಲಿ ತೀಕ್ಷ್ಣ ವಾದ ಬಾಣಗಳು ಬೀಳುತ್ತವೆ. ಆದ್ದರಿಂದ ಮನ್ಮಥನು ಧನುಸ್ಸಿನಲ್ಲಿ ಶಿಂಜಿನಿಯನ್ನು ಹದವಾಗಿ ಸೇರಿಸಿಕೊಂಡು ಈ ಸ್ತ್ರೀಯರ ಎದುರಿಗೆ ಓಡುತ್ತಿರುವನೆಂದು ಭಾವಿಸುತ್ತೇನೆ." ಇಲ್ಲಿ ಕವಿಪ್ರೌಢೋಕ್ತಿಯಿಂದ ಒಂದು ಬಗೆಯ ಚಮತ್ಕಾರವು ತೋರುತ್ತಿರುವ ಪ್ರಯುಕ್ತ ಸ್ತ್ರೀಯರ ದೃಷ್ಟಿಯು ಬೀಳುವ ಕಡೆಗಳಲ್ಲೆಲ್ಲಾ ಮನ್ಮಥನ ಬಾಣಗಳು ಬೀಳುತ್ತಿರುವ ಪ್ರಯುಕ್ತ ಮನ್ಮಥನು ಸ್ತ್ರೀಯರ ಎದುರಿಗೆ ಬಿಲ್ಲು ಬಾಣಗಳೊಡನೆ ಓಡಾಡುತ್ತಿರುವನು ಎಂಬ ಜ್ಞಾನವು ನಮಗೆ ಆಗುತ್ತದೆ. ಇದನ್ನೇ ಅನುಮಾನಾಲಂಕಾರ ವೆಂದು ಕರೆಯಲಾಗಿದೆ.

ಈ ಬಗೆಯ ಜ್ಞಾನವು ಉತ್ಪ್ರೇಕ್ಷೆಯಲ್ಲೂ ಇರುವ ಪ್ರಯುಕ್ತ ಇದಕ್ಕೂ ಅನು ಮಾನಕ್ಕೂ ಭೇದವೇನೆಂಬುವವನ್ನು ಇಲ್ಲಿ ತಿಳಿಸುತ್ತಾನೆ. ಉತ್ಪ್ರೇಕ್ಷೆಯಲ್ಲಿ ಸಂಭಾವನೆಯು ಸಂಶಯದ ಒಂದು ಬಗೆ ಎನಿಸಿದ್ದರಿಂದ ಅಲ್ಲಿ ನಿಶ್ಚಯಜ್ಞಾನವಾಗುವುದಿಲ್ಲ. ಅನುಮಾನ ದಲ್ಲಿ ಆಗುವ ಜ್ಞಾನವು ನಿಶ್ಚಯವೆನಿಸಿರುವುದು. ಇದೇ ಇವೆರಡಕ್ಕೂ ಇರುವ ಭೇದ.

ಹೇತುವಿನ ಪ್ರಕರಣವಾದ್ದರಿಂದ ಹೇತ್ವಲಂಕಾರವನ್ನು ವಿವರಿಸುತ್ತಾನೆ. ಕಾರ್ಯ ದೊಡನೆ ಕಾರಣವು ಬೇರೆಯಲ್ಲವೆಂದು ಅಭೇದವನ್ನು ತಿಳಿಸುವುದೇ ಹೇತ್ವಲಂಕಾರ ವೆನಿಸುವುದು. ಕಾರ್ಯಕಾರಣಗಳ ಅಭೇದವನ್ನು ತಿಳಿಸುವುದೇ ಹೇತ್ವಲಂಕಾರ. 'ತಾರುಣ್ಯಸ್ಯ ವಿಲಾಸಃ' ಎಂಬಲ್ಲಿ ಯುವಕರ ಮನಸ್ಸನ್ನು ವಶಪಡಿಸಿಕೊಳ್ಳಲು ಕಾರಣ ವೆನಿಸಿದ ನಾಯಿಕೆಯು ವಶೀಕರಣಕ್ರಿಯೆಯೊಡನೆ ಬೇರೆಯಲ್ಲವೆಂದು ಕವಿಯು ತಿಳಿಸಿದ್ದಾನೆ. ವಶೀಕರಣಕ್ರಿಯೆಗೆ ನಾಯಿಕೆಯೇ ಕಾರಣವೆನಿಸಿದ್ದರಿಂದ ಆ ಕ್ರಿಯೆಗೂ ನಾಯಿಕೆಗೂ ಅಭೇದವನ್ನು ಹೇಳಿರುವ ಪ್ರಯುಕ್ತ ಇದು ಹೇತ್ವಲಂಕಾರವೇ ಆಗಲಿ, ಆದರೆ ಪೂರ್ವಾರ್ಧದಲ್ಲಿ ವಿಲಾಸ ಮತ್ತು ಹಾಸಗಳನ್ನು ಬ್ರಹ್ಮನಿಂದ ನಿರ್ಮಿತವಾದ ವೆಂದು ಹೇಳಿರುವ ಪ್ರಯುಕ್ತ ಅಲ್ಲಿ ನಾಯಿಕೆಯು ಕಾರಣವೆನಿಸಿಲ್ಲವಾದ್ದರಿಂದ ಇಲ್ಲಿ

ಹೇಗೆ ಹೇತ್ವಲಂಕಾರವನ್ನು ಹೇಳಲಿಕ್ಕಾದೀತು? ಅಲ್ಲಿ ಹೇಳಿರುವ ವಿಲಾಸ ಮತ್ತು ಹಾಸಗಳೆರಡೂ ಬ್ರಹ್ಮನಿಂದ ನಿರ್ಮಿತವೇ ಆಗಿದ್ದರೂ ನಾಯಿಕೆಯನ್ನು ಆಶ್ರಯಿಸಿರುವು ವೆಂದೇ ಕವಿಯು ಹೇಳಿರುವುದರಿಂದ ಅವೂ ಸಹ ಆಕೆಯಿಂದಲೇ ಉಂಟಾದವೆಂದು ಆರೋಪಿಸಿ ಅವಕ್ಕೂ ಆಕೆಗೂ ಅಭೇದವನ್ನು ನಿಶ್ಚಯಿಸಿ ಆ ಮೂಲಕ ಹೇತ್ವಲಂಕಾರ ವನ್ನು ಹೇಳಬೇಕು.

ಹೇತುವಿನ ಪ್ರಕರಣವಾದ್ದರಿಂದ ಅದಕ್ಕೆ ಅನುಗುಣವಾಗಿರುವ ಅನುಕೂಲವೆಂಬ ಅಲಂಕಾರವನ್ನು ನಿರೂಪಿಸುತ್ತಾನೆ. ವಿರುದ್ಧವಾದ ಸನ್ನಿವೇಶವು ಅನುಕೂಲವಾಗಿ ಪರಿಣಮಿಸುವುದೆಂದು ತಿಳಿಸುವುದೇ ಅನುಕೂಲವೆಂಬ ಅಲಂಕಾರವೆನಿಸುವುದು. "ಎಲೈ ಕೃಶಾಂಗಿಯೇ, ನೀನು ಕೋಪಗೊಂಡರೆ ನಿನ್ನ ಉಗುರುಗಳಿಂದ ಅವನಿಗೆ ಗಾಯವನ್ನು ಮಾಡಿ ಅವನ ಕುತ್ತಿಗೆಯನ್ನು ಬಿಗಿಯಾಗಿ ಹಿಡಿದು ನಿನ್ನ ಭುಜಗಳೆಂಬ ಹಗ್ಗದಿಂದ ಕಟ್ಟು" ಹೀಗೆ ಹೇಳುವುದರಲ್ಲಿ ಅಡಗಿರುವ ಚಮತ್ಕಾರವು ಬೇರೆ ಎಲ್ಲಾ ಅಲಂಕಾರ ಗಳಿಗಿಂತಲೂ ವಿಲಕ್ಷಣವೆನಿಸಿದ್ದರಿಂದ ಇಲ್ಲಿ ಇದನ್ನು ಬೇರೆ ಅಲಂಕಾರವೆಂದು ಭಾವಿಸಿರು ವುದು ನ್ಯಾಯವೇ ಆಗಿದೆ.

ಈಗ ಆಕ್ಷೇಪಾಲಂಕಾರದ ಸ್ವರೂಪವನ್ನು ತಿಳಿಸುತ್ತಾನೆ. ಹೇಳಲು ಇಷ್ಟ ವಾಗಿರುವ ಯಾವುದಾದರೊಂದು ಅಂಶದಿಂದ ಬೇರೊಂದು ವಿಶೇಷವನ್ನು ತಿಳಿಸಲಿಕ್ಕಾಗಿ ಅದನ್ನು ನಿಷೇಧಿಸುವಂತೆ ತೋರಿಸಿದರೆ ಅದು ಆಕ್ಷೇಪಾಲಂಕಾರವೆನಿಸುವುದು. ಇದು ಹೇಳಬೇಕಾಗಿರುವ ಅಂಶಕ್ಕೂ ಮತ್ತು ಹೇಳಿಯಾಗಿರುವ ಅಂಶಕ್ಕೂ ಸಂಬಂಧಪಡುವ ಪ್ರಯುಕ್ತ ಇದು ಎರಡು ಬಗೆಯಾಗುವುದು. ಇವುಗಳಲ್ಲಿ ಹೇಳಬೇಕಾಗಿರುವ ಅರ್ಥಕ್ಕೆ ಸಂಬಂಧಿಸಿದ ಆಕ್ಷೇಪವು ಎರಡು ಬಗೆಯಾಗುತ್ತದೆ. ಸಾಮಾನ್ಯವಾಗಿ ಸೂಚಿಸಿರುವ ಎಲ್ಲಾ ವಿಷಯವನ್ನು ನಿಷೇಧಿಸುವುದು ಒಂದು ಬಗೆ. ಕೊಂಚ ಭಾಗವನ್ನು ತಿಳಿಸಿ ಕೊಂಚಭಾಗವನ್ನು ನಿಷೇಧಿಸುವುದು ಮತ್ತೊಂದು ಬಗೆ. ಹೇಳಿಯಾಗಿರುವ ವಿಷಯಕ್ಕೆ ಸಂಬಂಧಿಸಿದ್ದರಲ್ಲೂ ಎರಡು ಬಗೆಗಳಿವೆ. ಕೆಲವು ಕಡೆಗಳಲ್ಲಿ ವಸ್ತುವಿನ ಸ್ವರೂಪವನ್ನು ನಿಷೇಧಿಸಲಾಗುವುದು. ಕೆಲವು ಕಡೆಗಳಲ್ಲಿ ವಸ್ತುವಿನ ಬಗ್ಗೆ ತಿಳಿಸುವು ದನ್ನೇ ವಕ್ತೃವು ನಿಷೇಧಿಸುವನು. ಹೀಗೆ ಇದರಲ್ಲಿ ನಾಲ್ಕು ಬಗೆಗಳಾಗುತ್ತವೆ. ಕ್ರಮ ವಾಗಿ ಇವಕ್ಕೆ ಉದಾಹರಣಗಳನ್ನು ಕೊಡುತ್ತಾನೆ. "ಮನ್ಮಥನ ನೂರಾರು ಬಾಣಗಳ ಇರಿತಕ್ಕೆ ಸಿಕ್ಕಿರುವ ಪ್ರೇಯಸಿಗೋಸ್ಕರ ನಾನು ಕೊಂಚ ಹೇಳುತ್ತೇನೆ. ಮಿತ್ರನೇ, ಕೇಳು. ನೀನು ಒಂದು ಕ್ಷಣಕಾಲ ಇಲ್ಲಿ ನಿಲ್ಲು. ಅಥವಾ ದಯೆಯಿಲ್ಲದವನಿಗೆ ಎಷ್ಟು ಹೇಳಿದರೆ ತಾನೆ ಫಲವೇನು?" ಹೀಗೆ ಕಾಮಬಾಧೆಗೆ ಸಿಲುಕಿರುವ ನಾಯಿಕೆಯ ಬಗ್ಗೆ ದಯೆಯನ್ನು ತೋರಿಸುವಂತೆ ಸಖಿಯು ನಾಯಕನನ್ನು ಕೇಳಿಕೊಳ್ಳುತ್ತಿರುವಳು. ಇಲ್ಲಿ ಹೇಳುವವಳು ನಾಯಿಕೆಯ ವಿರಹವ್ಯಥೆಯನ್ನು ಸಾಮಾನ್ಯವಾಗಿ ಸೂಚಿಸಿರುವಳು. ಆದರೆ ಮುಂದೆ ಹೇಳಬೇಕಾಗಿರುವ ವಿಶೇಷಾಂಶವನ್ನು ನಿಷೇಧಿಸಿರುವಳು. "ನಿನ್ನ ವಿರಹ ವನ್ನು ಸಹಿಸಲಾರದೆ ಪ್ರೇಯಸಿಯು ಮಲ್ಲಿಗೆ ಹೂವು ಅರಳುವುದನ್ನು ಕಂಡು ನಿಶ್ಚಯ

ವಾಗಿಯೂ ನಶಿಸಿಹೋಗುವಳು. ಅಯ್ಯೋ! ತುಚ್ಛವಾದ ಮಾತುಗಳಿಂದ ಫಲವೇನಾ ದೀತು?'' ಇಲ್ಲಿ ಆಕೆಯು ವಿರಹವ್ಯಥೆಯಿಂದ ಸಾಯುವಳು ಎಂಬ ಅಂಶವನ್ನು ತಿಳಿಸಿಲ್ಲ. ಆದ್ದರಿಂದ ಇದು ಆಕ್ಷೇಪದ ಎರಡನೆಯ ಬಗೆ ಎನಿಸಿದೆ. ಈಗ ವಸ್ತುವಿನ ಸ್ವರೂಪವನ್ನು ನಿಷೇಧಿಸುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ಎಲೈ ಬಾಲಕನೇ, ನಾನು ಮಧ್ಯಸ್ಥನಲ್ಲ. ನೀನು ಪ್ರಿಯನೆಂಬುದನ್ನು ತಿಳಿಸುವುದಷ್ಟೇ ನನ್ನ ಕರ್ತವ್ಯ. ಆಕೆಯಂತೂ ಸಾಯುವಳು. ನಿನಗೆ ಅವಮಾನವು ಕಾದಿರುವುದು. ನಾನು ಹೇಳಬೇಕಾಗಿರುವ ಈ ಮಾತುಗಳು ಸತ್ಯವೆನಿಸಿವೆ" ಇಲ್ಲಿ ಹೇಳುವವಳು ತಾನು ಮಧ್ಯಸ್ಥಳೆಂಬ ತನ್ನ ಸ್ವರೂಪವನ್ನು ನಿಷೇಧಿಸಿರುವಳು. "ನಿನ್ನ ವಿರಹದಲ್ಲಿ ಪ್ರೇಯಸಿಯು ಹೇಗೆ ರಾತ್ರಿಯನ್ನು ಕಳೆದಾಳು? ಭಯಂಕರವಾಗಿ ವ್ಯವಸಾಯವನ್ನು ಕೈಗೊಂಡಿರುವ ನಿನ್ನ ಮುಂದೆ ಮಾತನ್ನಾಡುವುದರಿಂದ ಆಗುವ ಫಲವಾದರೂ ಏನಿದ್ದೀತು'' ಇಲ್ಲಿ ಹೇಳಬೇಕಾದ್ದನ್ನೇ ಹೇಳದೇ ಇರುವುದರಿಂದ ಇದು ಆಕ್ಷೇಪದ ನಾಲ್ಕನೆಯ ಬಗೆ ಎನಿಸಿದೆ. ಮೊದಲನೆಯ ಉದಾಹರಣದಲ್ಲಿ ಸಖಿಗೆ ಮರಣವು ಅವಶ್ಯವಾಗಿ ಸಂಭವಿಸಲಿದೆ ಎಂಬ ವಿಶೇಷವು ವ್ಯಂಗ್ಯವಾಗಿ ತೋರುವುದು. ಎರಡನೆಯ ಉದಾಹರಣದಲ್ಲಿ ಮುಂದೆ ಹೇಳಬೇಕಾಗಿರುವ ಅಂಶವನ್ನು ಹೇಳಲಿಕ್ಕೆ ಅಶಕ್ಯವಾಗಿದೆ ಎಂಬ ಅರ್ಥವು ವ್ಯಂಗ್ಯವಾಗಿ ತೋರುವುದು. ಮೂರನೆಯ ಉದಾಹರಣದಲ್ಲಿ ಹೇಳುವವಳು ದೂತಿಯೇ ಆಗಿದ್ದರೂ ತಾನು ಯಥಾರ್ಥವಾದ ಅಂಶವನ್ನು ತಿಳಿಸುವವಳೆಂಬುದು ವ್ಯಂಗ್ಯವಾಗಿ ತೋರುವುದು. ನಾಲ್ಕನೆಯ ಉದಾಹರಣದಲ್ಲಿ ಪ್ರೇಯಸಿಯ ದುಃಖವು ವಿಶೇಷವಾಗಿದೆ ಎಂಬುದು ವ್ಯಂಗ್ಯವಾಗಿ ತೋರುವುದು. ಇರಬೇಕಾದ ಅಥವಾ ಹೇಳಬೇಕಾದ ಅಂಶವನ್ನು ನಿಷೇಧಿಸುವುದು ಈ ಅಲಂಕಾರದ ಉದ್ದೇಶವಲ್ಲ; ಆದರೆ ಹಾಗೆ ನಿಷೇಧಿಸುವಂತೆ ತೋರಿಸುವುದೇ ಇದರ ಉದ್ದೇಶವೆನಿಸಿದೆ. ಇದರಲ್ಲಿಯ ಚಮತ್ಕಾರವು ಅಡಗಿರ್ರುವುದರಿಂದ ಇದನ್ನು ಅಲಂಕಾರವೆಂದು ಕರೆಯಲಾಗಿದೆ.

ಈಗ ವಿಧ್ಯಾಭ್ಯಾಸವೆಂಬ ಅಲಂಕಾರವನ್ನು ವಿವರಿಸುತ್ತಾನೆ. ನಿಜವಾಗಿಯೂ ಅನಿಷ್ಟವೆನಿಸಿದ ಅಂಶವನ್ನು ಹಿಂದಿನ ಆಕ್ಷೇಪಾಲಂಕಾರದಂತೆ ಯಾವುದಾದರೊಂದು ವಿಶೇಷವನ್ನು ತಿಳಿಸಲಿಕ್ಕಾಗಿ ವಿಧಿಸುವುದೇ ವಿಧ್ಯಾಭ್ಯಾಸವೆಂಬ ಅಲಂಕಾರವಾಗುವುದು. ಆಕ್ಷೇಪದಲ್ಲಿ ಯಾವುದಾದರೊಂದು ಅರ್ಥದ ನಿಷೇಧವು ಮೇಲೆ ಮೇಲೆ ತೋರುವಂತೆ ಇಲ್ಲಿ ಅನಿಷ್ಟವಾದ ಅರ್ಥವನ್ನು ವಿಧಿಸಿರುವಂತೆ ತೋರಿಸಲಾಗುವುದು. "ಪ್ರಿಯನೇ, ನೀನು ಹೊರಡು. ಹಾಗೆ ಹೊರಡುವುದಾದರೆ ನಿನಗೆ ದಾರಿಯಲ್ಲಿ ಕ್ಷೇಮವುಂಟಾಗಲಿ. ನೀನು ಹೋಗುವ ಕಡೆಯೇ ನನಗೂ ಜನ್ಮ ಉಂಟಾಗಲಿ." ಇಲ್ಲಿ ಪ್ರವಾಸಕ್ಕೆ ಹೊರಟಿರುವ ಪತಿಗೆ ಹೆಂಡತಿಯು 'ಹೋಡು' ಎಂದು ಹೊರಡಲು ಅನುಮತಿಯನ್ನು ಕೊಟ್ಟದ್ದು ಅನಿಷ್ಟವಾದ ಅಂಶ. ಆದರೂ ಅದನ್ನು ಇಲ್ಲಿ ವಿಧಿಸಿದ್ದು ಯಥಾರ್ಥವಾಗಿ ನಡೆಯುವಂತಹದಲ್ಲ. ಆದ್ದರಿಂದ ಅದು ನಿಷೇಧದಲ್ಲಿ ಕೊನೆಯಾಗುತ್ತದೆ. "ನೀನು ಹೋಗಬೇಡ, ಹೋದರೆ ನಾನು ಸತ್ತು ನೀನಿರುವ ಕಡೆಯೇ ಮತ್ತೆ ಹುಟ್ಟಬೇಕಾಗು

ವುದು” ಎಂಬ ಅರ್ಥವು ಇಲ್ಲಿ ವಿಶೇಷವಾಗಿ ತೋರುವುದು. ‘ನೀನು ಹೋಗುವುದು ಸರ್ವಥಾ ಯುಕ್ತವಲ್ಲ’ ವೆಂಬ ಅಂಶವನ್ನು ತಿಳಿಸಲಿಕ್ಕಾಗಿ ‘ನೀನು ಹೊರಡು’ ಎಂಬ ಅನಿಷ್ಟಾರ್ಥವು ಇಲ್ಲಿ ವಿಧಿಸಿರುವಂತೆ ಕಾಣಬರುವುದು.

ಈಗ ವಿಭಾವನೆ ಎಂಬ ಅಲಂಕಾರದ ಸ್ವರೂಪವನ್ನು ತಿಳಿಸುತ್ತಾನೆ. ಕಾರಣವಿಲ್ಲದೆಯೇ ಕಾರ್ಯವು ಹುಟ್ಟುವುದೆಂದು ತಿಳಿಸುವುದೇ ವಿಭಾವನಾಲಂಕಾರವೆನಿಸುವುದು. ಇದರಲ್ಲಿ ಕಾರಣವನ್ನು ಶಬ್ದದಿಂದ ತಿಳಿಸುವುದು ಒಂದು ಬಗೆ, ಹಾಗೆ ಶಬ್ದದಿಂದ ತಿಳಿಸದೆಯೇ ಕಾರ್ಯವು ಹುಟ್ಟಿತೆಂದು ಹೇಳುವುದು ಮತ್ತೊಂದು ಬಗೆ. ಹೀಗೆ ಇದು ಎರಡು ಬಗೆಯಾಗುವುದು. ಕಾರಣವಿಲ್ಲದೆಯೇ ಕಾರ್ಯವು ಹುಟ್ಟಿತೆಂಬುದನ್ನು ಇಲ್ಲಿ ತಿಳಿಸಿದ್ದರೂ ಬೇರೆ ಯಾವುದಾದರೊಂದು ಕಾರಣವನ್ನು ಅವಲಂಬಿಸಿಕೊಂಡೇ ಆ ಕಾರ್ಯವು ಹುಟ್ಟುವುದೆಂದು ಭಾವಿಸುವುದೇ ಯುಕ್ತವಾದುದು. ಆ ಕಾರಣವನ್ನು ಕೆಲವುವೇಳೆ ಶಬ್ದದಿಂದ ತಿಳಿಸಿಸಬಹುದು; ಕೆಲವುವೇಳೆ ತಿಳಿಸದೆಯೇ ಇರಬಹುದು. ಹೀಗೆ ಇದರಲ್ಲಿ ಎರಡು ಬಗೆಗಳಿವೆ. “ಯೌವನದಲ್ಲಿ ಪ್ರೇಯಸಿಯ ಸೊಂಟವು ಯಾವ ಆಯಾಸವೂ ಇಲ್ಲದೆ ಇದ್ದರೂ ಕೃಶವಾಗಿದೆ. ಕಣ್ಣುಗಳು ಭಯವಿಲ್ಲದಿದ್ದರೂ ನಡುಗುತ್ತಿವೆ. ಶರೀರವು ಒಡವೆಗಳಿಲ್ಲದಿದ್ದರೂ ಮನೋಹರವಾಗಿದೆ.” ಇಲ್ಲಿ ಯೌವನವೆಂಬ ನಿಮಿತ್ತವನ್ನು ಶಬ್ದದಿಂದಲೇ ತಿಳಿಸಿದೆ. ಇಲ್ಲಿಯೇ “ಪ್ರೇಯಸಿಯ ಶರೀರವು ಶೋಭಿಸುತ್ತದೆ” ಎಂದು ಹೇಳಿದರೆ ಕಾರಣವನ್ನು ತಿಳಿಸಿದಂತಾಗುವುದಿಲ್ಲ.

ಕಾರ್ಯವನ್ನು ಹುಟ್ಟಿಸಲು ಸಮರ್ಥವೆನಿಸಿದ ಕಾರಣವನ್ನು ತಿಳಿಸಿದ್ದರೂ ಫಲವಾಗಲಿಲ್ಲವೆಂದು ತಿಳಿಸುವುದೇ ವಿಶೇಷೋಕ್ತಿ ಎನಿಸುವುದು. ಇದು ಉಕ್ತನಿಮಿತ್ತ, ಅನುಕ್ತನಿಮಿತ್ತ ಎಂದು ಎರಡು ಬಗೆ ಎನಿಸಿದೆ. ಇವುಗಳಲ್ಲಿ ನಿಮಿತ್ತವನ್ನು ಶಬ್ದದಿಂದ ತಿಳಿಸಿರುವ ಮೊದಲನೆಯ ಬಗೆಯನ್ನು ಉದಾಹರಿಸುತ್ತಾನೆ. “ಹೆಚ್ಚು ಮಹಿಮೆಯುಳ್ಳ ಜನರು ಧನಿಕರಾದರೂ ಅವರಿಗೆ ಅಹಂಕಾರವಿರುವುದಿಲ್ಲ. ಯುವಕರಾದರೂ ಅವರು ಚಂಚಲರಲ್ಲ. ಸಮರ್ಥರಾದರೂ ಅವರು ಪ್ರಮಾದವಿಲ್ಲದವರು” ಇಲ್ಲಿ ಮಹಾಮಹಿಮೆಯುಳ್ಳವರೆಂದು ನಿಮಿತ್ತವನ್ನು ಶಬ್ದದಿಂದ ತಿಳಿಸಲಾಗಿದೆ. ಆದರೆ ಇಲ್ಲಿಯೇ ನಾಲ್ಕನೆಯ ಪಾದದಲ್ಲಿ “ಈ ಭೂಮಿಯಲ್ಲಿ ಇಂತಹವರು ಎಷ್ಟು ಮಂದಿ ಇರುವರು” ಎಂದು ಹೇಳಿದರೆ ಕಾರಣವನ್ನು ತಿಳಿಸಿದಂತಾಗುವುದಿಲ್ಲ. ನಿಮಿತ್ತವನ್ನು ಆಲೋಚಿಸಲಿಕ್ಕೆ ಆಗದೇ ಇರುವುದೂ ಸಹ ಅನುಕ್ತನಿಮಿತ್ತದ ಒಂದು ಬಗೆಯೇ ಆದ್ದರಿಂದ ಅದನ್ನು ಬೇರೆಯಾಗಿ ತಿಳಿಸಿಲ್ಲ. “ಪುಷ್ಪವೇ ಬಾಣವಾಗಿರುವ ಆ ಮನ್ಮಥನು ಒಬ್ಬನೇ ಇದ್ದರೂ ಮೂರುಲೋಕಗಳನ್ನೂ ಜಯಿಸುತ್ತಾನೆ. ಅವನ ಶರೀರವನ್ನು ಶಂಭುವು ಸುಟ್ಟುಹಾಕಿದರೂ ಅವನ ಬಲವನ್ನು ಸುಡಲಿಲ್ಲ.” ಇಲ್ಲಿ ದೇಹವನ್ನು ನಾಶಮಾಡಿದರೂ ಸಹ ಬಲವನ್ನು ನಾಶಮಾಡದೇ ಇರಲಿಕ್ಕೆ ನಿಮಿತ್ತವನ್ನು ಚಿಂತಿಸಲಿಕ್ಕೇ ಆಗುವುದಿಲ್ಲ. ದೇಹವನ್ನು ಅಪಹರಿಸಿದ ಮೇಲೆ ಬಲವನ್ನೂ ಅಪಹರಿಸಬೇಕಾಗಿತ್ತು. ಆದರೆ ಬಲವು ಮಾತ್ರ ನಷ್ಟವಾಗದೆ ಉಳಿದಿದೆ. ಬಲವು ತೊಲಗುವುದೇ ಇಲ್ಲಿ ಕಾರ್ಯವೆನಿಸಿದೆ.

ಆ ಕಾರ್ಯವು ಆಗದೇ ಇರುವುದನ್ನು ಅದಕ್ಕೆ ವಿರುದ್ಧವಾದ ಕಾರ್ಯವಿರುವ ಮೂಲ ಕವೂ ತಿಳಿಸಲಾಗಿದೆ. ಇದರಂತೆ ವಿಭಾವನೆಯಲ್ಲೂ ಸಹ ಕಾರಣವಿಲ್ಲದೇ ಇರುವುದನ್ನು ಅದಕ್ಕೆ ವಿರುದ್ಧವಾದ ಕಾರಣವಿರುವುದರ ಮೂಲಕವೂ ತಿಳಿಸಬಹುದು. ಹೀಗೆ ಹೇಳು ವುದರಿಂದ 'ಯಃ ಕೌಮಾರಹರಃ' ಎಂಬಲ್ಲಿ ಪ್ರೇಯಸಿಗೆ ಉತ್ಕಂಠೆಯು ಹುಟ್ಟಲು ಯಾವ ಕಾರಣವಿರಬೇಕೋ ಅದು ಇಲ್ಲದಿದ್ದರೂ, ಅದಕ್ಕೆ ವಿರುದ್ಧವಾದ ಕಾರಣ ಸಾಮಾಗ್ರಿಗಳಿರುವುದರಿಂದಲೂ ಅಲ್ಲಿ ವಿಭಾವನಾಲಂಕಾರವೇ ಸಂಭವಿಸುತ್ತದೆ. ಹಾಗೆಯೇ ಆ ಪದ್ಯದಲ್ಲಿ ಕಾರ್ಯಕ್ಕೆ ವಿರುದ್ಧವಾದ ಉತ್ಕಂಠೆಯನ್ನು ಕಾರಣದೊಡ ನೆಯೇ ತಿಳಿಸಿರುವುದರಿಂದ ವಿಶೇಷೋಕ್ತಿಯೂ ಇದೆ. ಹೀಗೆ ಇಲ್ಲಿ ವಿಭಾವನೆ ಮತ್ತು ವಿಶೇಷೋಕ್ತಿ ಇವೆರಡಕ್ಕೂ ಸಾಂಕರ್ಯವಿದೆ. ಬೇರೆ ಯಾವ ಅಲಂಕಾರವೂ ಇಲ್ಲದೆ. ಶುದ್ಧವೆನಿಸಿದ ವಿಶೇಷೋಕ್ತಿಗೆ ಉದಾಹರಣವನ್ನು ಹುಡುಕಿ ತಿಳಿಯುವುದು.

ಜಾತಿಶ್ಚತುರ್ಭಿರ್ಜಾತ್ಯಾದ್ಯೈಃ ಗುಣೋ ಗುಣಾದಿಭಿಸ್ತ್ರಿಭಿಃ ।
ಕ್ರಿಯಾ ಕ್ರಿಯಾದ್ರವ್ಯಾಭ್ಯಾಂ ಯತ್ ದ್ರವ್ಯಂ ದ್ರವ್ಯೇಣ ವಾ ಮಿಥಃ ॥
ವಿರುದ್ಧಮಿವ ಭಾಸೇತ ವಿರೋಧೋಽಸೌ ದಶಾಕೃತಿಃ ।

ತವ ವಿರಹೇ ಮಲಯಮರುದ್ದವಾನಲಃ ಶಶಿರುಚೋಽಪಿ ಸೋಷ್ಮಾಣಃ ।
ಹೃದಯಮಲಿರುತಮಪಿ ಭಿಂತೇ ನಳಿನೀದಳಮಪಿ ನಿದಾಘರವಿರಸ್ಯಾಃ ॥
ಸಂತತಮುಸಲಾಸಂಗಾದ್ಬಹುತರಗೃಹಕರ್ಮಘಟನಯಾ ನೃಪತೇ ।
ದ್ವಿಜಪತ್ನೀನಾಂ ಕಠಿನಾಃ ಸತಿ ಭವತಿ ಕರಾಃ ಸರೋಜಸುಕುಮಾರಾಃ ॥

ಅಜಸ್ಯ ಗೃಹ್ಣತೋ ಜನ್ಮ ನಿರೀಹಸ್ಯ ಹೃತದ್ವಿಷಃ ।
ಸ್ವಪತೋ ಜಾಗರೂಕಸ್ಯ ಯಾಥಾರ್ಥ್ಯಂ ವೇದ ಕಸ್ತವ ॥
ವಲ್ಲಭೋತ್ಸಂಗಸಂಗೇನ ವಿನಾ ಹರಿಣಚಕ್ಷುಷಃ ।
ರಾಕಾವಿಭಾವರೀಜಾನಿಃ ವಿಷಜ್ವಾಲಾಕುಲೋಽಭವತ್ ॥
ನಯನಯುಗಾಸೇಚನಕಂ ಮಾನಸವೃತ್ತ್ಯಾಪಿ ದುಷ್ಪ್ರಾಪಮ್ ।
ರೂಪಮಿದಂ ಮದಿರಾಕ್ಷ್ಯಾ ಮುದಯತಿ ಹೃದಯಂ ದುನೋತಿ ಚ ಮೇ ॥

'ತ್ವದ್ವಾಜಿ' ಇತ್ಯಾದಿ. 'ವಲ್ಲಭೋತ್ಸಂಗ' ಇತ್ಯಾದಿ ಶ್ಲೋಕೇ ಚತುರ್ಥ ಪಾದೇ 'ಮಾಧ್ಯಂದಿನದಿನಾದಿಪಃ' ಇತಿ ಪಾದೇ ದ್ರವ್ಯಯೋರ್ವಿರೋಧಃ.

ಅತ್ರ 'ತವ ವಿರಹೇ' ಇತ್ಯಾದೌ ಪವನಾದೀನಾಂ ಬಹುವ್ಯಕ್ತಿವಾಚಕತ್ವಾತ್ ಜಾತಿಶಬ್ದಾನಾಂ ದವಾನಲೋಷ್ಮಹೃದಯಭೇದನಸೂರ್ಯೈಃ ಜಾತಿಗುಣಕ್ರಿಯಾದ್ರವ್ಯ ರೂಪೈರನ್ಯೋನ್ಯಂ ವಿರೋಧೋ ಮುಖತ ಆಭಾಸತೇ, ವಿರಹಹೇತುಕತ್ವಾತ್ ಸಮಾ ಧಾನಮ್. 'ಅಜಸ್ಯ' ಇತ್ಯಾದೌ ಅಜತ್ವಾದಿಗುಣಸ್ಯ ಜನ್ಮಾಗ್ರಹಣಾದಿಕ್ರಿಯಯಾ ವಿರೋಧಃ. ಭಗವತಃ ಪ್ರಭಾವಸ್ಯ ಅತಿಶಯತ್ವಾತ್ತು ಸಮಾಧಾನಮ್. 'ತ್ವದ್ವಾಜಿ' ಇತ್ಯಾದೌ 'ಹರೋಽಪಿ ಶಿರಸಾ ಗಂಗಾಂ ನ ಧತ್ತೇ' ಇತಿ ವಿರೋಧಃ, 'ತ್ವದ್ವಾಜಿ' ಇತ್ಯಾದಿ ಕವಿಪ್ರೌಢೋಕ್ತ್ಯಾ ತು ಸಮಾಧಾನಮ್. ಸ್ಪಷ್ಟಮನ್ಯತ್.

ವಿಭಾವನಾಯಾಂ ಕಾರಣಾಭಾವೇನ ಉಪನಿಬಧ್ಯಮಾನತ್ವಾತ್ ಕಾರ್ಯಮೇವ ಬಾಧ್ಯತ್ವೇನ ಪ್ರತೀಯತೇ, ವಿಶೇಷೋಕ್ತೌ ಚ ಕಾರ್ಯಾಭಾವೇನ ಬಾಧ್ಯತ್ವೇನ ಕಾರಣಮೇವ, ಇಹ ತು ಅನ್ಯೋನ್ಯಂ ದ್ವಯೋರಪಿ ಬಾಧ್ಯತ್ವಮಿತಿ ಭೇದಃ.

ಕಾರ್ಯಕಾರಣಯೋರ್ಭಿನ್ನದೇಶತಾಯಾಮಸಂಗತಿಃ ।

ಯಥಾ–ಸಾ ಬಾಲಾ ವಯಮಪ್ರಗಲ್ಭಮನಸಃ ಸಾ ಸ್ತ್ರೀ ವಯಂ ಕಾತರಾಃ

ಸಾ ಪೀನೋನ್ನತಿಮತ್ಪಯೋಧರಯುಗಂ ಧತ್ತೇ ಸಖೇದಾ ವಯಮ್ ॥

ಸಾಕ್ರಾಂತಾ ಜಘನಸ್ಥಲೇನ ಗುರುಣಾ ಗಂತುಂ ನ ಶಕ್ತಾ ವಯಂ

ದೋಷೈರನ್ಯಜನಾಶ್ರಿತೈಃರಪಟವೋ ಜಾತಾಃ ಸ್ಮ ಇತ್ಯದ್ಭುತಮ್ ॥

ಅಸ್ಯಾಶ್ಚ ಅಪವಾದತ್ವಾದೇಕದೇಶಸ್ಥಯೋರ್ವಿರೋಧೇ ವಿರೋಧಾಲಂಕಾರಃ.

ಗುಣೌ ಕ್ರಿಯೇ ವಾ ಯತ್ ಸ್ಯಾತಾಂ ವಿರುದ್ಧೇ ಹೇತುಕಾರ್ಯಯೋಃ ।

ಯದ್ವಾರಬ್ಧಸ್ಯ ವೈಫಲ್ಯಮನರ್ಥಸ್ಯ ಚ ಸಂಭವಃ ॥

ವಿರೂಪಯೋಃ ಸಂಘಟನಾ ಯಾ ಚ ತದ್ವಿಷಮಂ ಮತಮ್ ।

ಯಥಾ–ಸದ್ಯಃ ಕರಸ್ಪರ್ಶಮದ್ಯಾಪಿ ಚಿತ್ರಂ ರಣೇ ರಣೇ ಯಸ್ಯ ಕೃಪಾಣಲೇಖಾ ।

ತಮಾಲನೀಲಾ ಶರದಿಂದುಪಾಂಡು ಯಶಸ್ತ್ರಿಲೋಕಾಭರಣಂ ಪ್ರಸೂತೇ ॥

ಅತ್ರ ಕಾರಣರೂಪಾಸಿಲತಾಯಾಃ 'ಕಾರಣಗುಣಾ ಹಿ ಕಾರ್ಯಗುಣಮಾರಭಂತೇ' ಇತಿ ಸ್ಥಿತೇರ್ವಿರುದ್ಧಾ ಶುಕ್ಲಯಶಸ ಉತ್ಪತ್ತಿಃ.

ಆನಂದಮಮಂದಮಿಮಂ ಕುವಲಯದಳಲೋಚನೇ ದದಾಸಿ ತ್ವಮ್ ।

ವಿರಹಸ್ತ್ವಯ್ಯೈವ ಜನಿತಸ್ತಾಪಯತಿತರಾಂ ಶರೀರಂ ಮೇ ॥

ಅತ್ರ ಆನಂದಜನಕಸ್ತ್ರೀರೂಪಕಾರಣಾತ್ ತಾಪಜನಕವಿರಹೋತ್ಪತ್ತಿಃ

ಅಯಂ ರತ್ನಾಕರೋಽಂಭೋಧಿರಿತ್ಯಸೇವಿ ಧನಾಶಯಾ ।

ಧನಂ ದೂರೇಽಸ್ತು ವದನಂ ಅಪೂರಿ ಕ್ಷಾರವಾರಿಭಿಃ ॥

ಅತ್ರ ಕೇವಲಂ ಕಾಂಕ್ಷಿತಧನಲಾಭೋ ನಾಭೂತ್ ಪ್ರತ್ಯುತ ಕ್ಷಾರವಾರಿಭಿರ್ವದನಪೂರಣಮ್.

ಕ್ವ ವನಂ ತರುವಲ್ಕಭೂಷಣಂ ನೃಪಲಕ್ಷ್ಮೀಃ ಕ್ವ ಮಹೇಂದ್ರವಂದಿತಾ ।

ನಿಯತಂ ಪ್ರತಿಕೂಲವರ್ತಿನೋ ಬತ ಧಾತುಶ್ಚರಿತಂ ಸುದುಸ್ಸಹಮ್ ॥

ಅತ್ರ ವನರಾಜಶ್ರಿಯೋಃ ವಿರೂಪಯೋಃ ಸಂಘಟನಾ. ಯಥಾ ವಾ–

ವಿಪುಲೇನ ಸಾಗರಶಯಸ್ಯ ಕುಕ್ಷಿಣಾ ಭುವನಾನಿ ಯಸ್ಯ ಪಪಿರೇ ಯುಗಕ್ಷಯೇ ।

ಮದವಿಭ್ರಮಾಸಕಲಯಾ ಪಪೇ ಪುನಃ ಸ ಪುರಸ್ತ್ರಿಯೈಕತಮಯೈಕಯಾ ದೃಶಾ ॥

ಜಾತಿ, ಗುಣ, ಕ್ರಿಯೆ, ದ್ರವ್ಯಗಳೊಡನೆ ಜಾತಿಯೂ, ಗುಣ, ಕ್ರಿಯೆ, ದ್ರವ್ಯಗಳೊಡನೆ ಗುಣವೂ, ಕ್ರಿಯೆ, ದ್ರವ್ಯಗಳೊಡನೆ ದ್ರವ್ಯವೂ ಪರಸ್ಪರವಾಗಿ ವಿರುದ್ಧವಾಗಿರುವಂತೆ ತೋರುವುದೇ ವಿರೋಧಾಭಾಸವೆನಿಸುವುದು. ವಾಸ್ತವವಾಗಿ ವಿರೋಧವಿಲ್ಲದೆ

ಇದ್ದರೂ ತೋರಿಕೆಗೆ ವಿರೋಧವು ಕಂಡುಬರುವುದೇ ವಿರೋಧಾಭಾಸ. ಜಾತಿಯು ನಾಲ್ಕರೊಡನೆಯೂ, ಗುಣವು ಮೂರರೊಡನೆಯೂ, ಕ್ರಿಯೆಯು ಎರಡರೊಡನೆಯೂ, ದ್ರವ್ಯವು ಒಂದರೊಡನೆಯೂ ಸೇರಿ ವಿರುದ್ಧವಾದಂತೆ ಕಾಣುವ ಪ್ರಯುಕ್ತ ಇದರಲ್ಲಿ ಒಟ್ಟು ಹತ್ತು ಬಗೆಗಳಾಗುತ್ತವೆ. ಜಾತಿಯೊಡನೆ ಗುಣಕ್ಕೂ, ಕ್ರಿಯೆಗೂ, ದ್ರವ್ಯಕ್ಕೂ ಯಾವ ವಿರೋಧವುಂಟೋ ಅದು ಅವುಗಳೊಡನೆ ಜಾತಿಯ ವಿರೋಧವೇ ಆಗುವುದರಿಂದ ಹತ್ತಕ್ಕಿಂತ ಹೆಚ್ಚು ಬಗೆಗಳಾಗುವ ಸಂಭವವಿಲ್ಲ. ಜಾತಿ ಮೊದಲಾದ ನಾಲ್ಕರೊಡನೆ ಜಾತಿಯ ವಿರೋಧವನ್ನು ಉದಾಹರಿಸುತ್ತಾನೆ. ಪತಿಗೆ ವಿರಹಣಿಯ ದೂತಿ ಹೇಳುವ ಮಾತಿದು. "ಎಲೈ ನಾಯಕನೇ, ನಿನ್ನ ವಿರಹಕಾಲದಲ್ಲಿ ಈ ನಾಯಿಕೆಗೆ ಮಂದಮಾರುತವು ಕಾಡುಗಿಚ್ಚಾಯಿತು. ಸಹಜವಾಗಿ ತಂಪಾಗಿದ್ದ ಚಂದ್ರನ ಕಿರಣಗಳೂ ಸಹ ಉಷ್ಣವಾದವು. ಮನೋಹರವಾದ ದುಂಬಿಗಳ ಶಬ್ದವೂ ಸಹ ಹೃದಯವನ್ನು ಸೀಳತೊಡಗಿದೆ. ಹಾಗೆಯೇ ಕಮಲದ ದಳವೂ ಸಹ ಗ್ರೀಷ್ಮಕಾಲದ ಸೂರ್ಯನೇ ಆಗಿದೆ." ಇಲ್ಲಿ ಗಾಳಿ ಮೊದಲಾದವು ಒಂದೊಂದೂ ವೈಯುಕ್ತಿಕವಾಗಿ ಬೇರೆ ಬೇರೆಯಾಗಿದ್ದು ಸಮವಾಯಸಂಬಂಧದಿಂದ ಅಲ್ಲಲ್ಲಿಯೇ ಸೇರಿಕೊಂಡಿರುವುದರಿಂದ ಜಾತಿ ಗುಣ ಕ್ರಿಯಾ ದ್ರವ್ಯಗಳೆನಿಸಿದ ಕಾಡುಗಿಚ್ಚು, ಉಷ್ಣ, ಹೃದಯವೇದನೆ, ಸೂರ್ಯ ಇವುಗಳೊಡನೆ ಸೇರಿದ್ದು ವಿರುದ್ಧವಾದಂತೆ ಕಾಣುವುದು. ಇದು ವಿರೋಧದಿಂದ ಆಗಿರುವ ಪ್ರಯುಕ್ತ ಹೊಂದುತ್ತದೆ ಎಂಬುದೇ ಸಮಾಧಾನ. ಗುಣದೊಡನೆ ಗುಣದ ವಿರೋಧವನ್ನು ಈಗ ಉದಾಹರಿಸುತ್ತಾನೆ. "ಎಲೈ ರಾಜನೇ, ಯಾವಾಗಲೂ ಒನಕೆಯ ಹೊಡೆತದಿಂದಲೂ, ಅನೇಕ ಬಗೆಯ ಗೃಹಕೃತ್ಯಗಳನ್ನು ನಡೆಸುವುದರಿಂದಲೂ ಕಠಿಣವೆನಿಸಿದ ಬ್ರಾಹ್ಮಣಸ್ತ್ರೀಯರ ಕೈಗಳು ನೀನು ರಾಜನಾಗಿರುವಾಗ ಕಮಲಗಳಂತೆ ಕೋಮಲವಾದವು. ನೀನು ಕೊಟ್ಟ ಹಣದಿಂದ ದಾಸರ ಕೈಲಿ ಆಯಾ ಕೆಲಸಗಳನ್ನು ಮಾಡಿಸುತ್ತ ತಾವು ಮಾಡದೇ ಇರುವುದರಿಂದ ಅವರ ಕೈಗಳು ಕೋಮಲವಾಗಿವೆ." ಇಲ್ಲಿ ಕಠಿನತ್ವ ಕೋಮಲತ್ವವೆಂಬ ಗುಣಗಳೆರಡು ಒಂದೆಡೆಗೆ ಸೇರುವುದೇ ವಿರೋಧ. ಆದರೆ ಅವೆರಡು ಗುಣಗಳು ಕೈಗಳಲ್ಲಿ ಬೇರೆ ಬೇರೆ ಕಾಲವಲ್ಲಿ ಇರುವುದರಿಂದ ವಿರೋಧವು ತೊಲಗುತ್ತದೆ. ವಿರುದ್ಧಗುಣಗಳು ಬೇರೆ ಬೇರೆ ಕಾಲದಲ್ಲಿ ಒಂದೆಡೆಯಲ್ಲಿ ಸೇರುವುದರಲ್ಲಿ ದೋಷವಿಲ್ಲ. ಕ್ರಿಯೆಯೊಡನೆ ಗುಣದ ವಿರೋಧವನ್ನು ಉದಾಹರಿಸುತ್ತಾನೆ. "ಸ್ವಾಮಿ. ನೀನು ಜನ್ಮವಿಲ್ಲದವನಾದರೂ ಮತ್ಸ್ಯ ಕೂರ್ಮ ಮೊದಲಾದ ರೂಪದಲ್ಲಿ ಜನ್ಮವನ್ನು ಪಡೆದೆ. ನಿಷ್ಕ್ರಿಯನಾದರೂ ಶತ್ರುಗಳನ್ನು ನಾಶಮಾಡಿದೆ. ಚೈತನ್ಯರೂಪದಿಂದ ಯಾವಾಗಲೂ ಎಚ್ಚರಗೊಂಡಿದ್ದರೂ ಪ್ರಳಯಕಾಲದಲ್ಲಿ ನಿದ್ರೆ ಮಾಡುವೆ. ನಿನ್ನ ಸ್ವರೂಪವನ್ನು ಯಾರು ತಿಳಿಯಬಲ್ಲರು! ಯಾರಿಗೂ ತಿಳಿಯದೆಂದು ಅರ್ಥ" ಇಲ್ಲಿ ಅಜ, ಜಾಗರೂಕ ಎಂಬ ಗುಣಗಳಿಗೂ ಜನ್ಮಗ್ರಹಣ ಮೊದಲಾದ ಕ್ರಿಯೆಗಳಿಗೂ ಪರಸ್ಪರ ವಿರೋಧವು ತೋರುವುದು. ಹುಟ್ಟು ಇಲ್ಲದಿರುವವನು ಹುಟ್ಟಲೇಬಾರದು. ಭಗವಂತನು ಸ್ವತಂತ್ರನೂ ಶಕ್ತಿವಂತನೂ ಆದ್ದರಿಂದ ಅವನಲ್ಲಿ ವಿರೋಧವು ಹೊಂದು

ದಿಲ್ಲವೆಂಬುದೇ ಸಮಾಧಾನ. ದ್ರವ್ಯದೊಡನೆ ಗುಣಕ್ಕೆ ವಿರೋಧವನ್ನು ತಿಳಿಸುತ್ತಾನೆ. "ಪ್ರಿಯನ ತೊಡೆಯ ಮೇಲೆ ಕುಳಿತುಕೊಳ್ಳುವುದರಿಂದ ಜಿಂಕೆಯಂತೆ ಕಣ್ಣುಗಳಿರುವ ನಾಯಿಕೆಗೆ ಪೂರ್ಣಚಂದ್ರನು ವಿಷಜ್ವಾಲೆಯಿಂದ ತುಂಬಿರುವನು." ಇಲ್ಲಿ ಪೂರ್ಣ ಚಂದ್ರನು ಒಬ್ಬ ವ್ಯಕ್ತಿಯಾದ್ದರಿಂದ ದ್ರವ್ಯವೆನಿಸಿರುವನು. ಆಕುಲತ್ವವೆಂಬುದು ಗುಣವೆನಿಸಿದೆ. ಇವೆರಡಕ್ಕೂ ವಿರೋಧವಿದೆ. ವಿರಹಕಾಲದಲ್ಲಿ ಹೀಗೆ ವಿಚಿತ್ರವಾದ ಅವಸ್ಥೆ ಇರುವುದು ಸಹಜವಾದ್ದರಿಂದ ವಿರೋಧವು ತೊಲಗುತ್ತದೆ. ಕ್ರಿಯೆಯೊಡನೆ ಕ್ರಿಯೆಗೆ ವಿರೋಧವನ್ನು ತಿಳಿಸುತ್ತಾನೆ. ಒಬ್ಬ ಸುಂದರಿಯನ್ನು ನೋಡಿ ಒಬ್ಬ ಕಾಮುಕನು ಹೇಳುತ್ತಾನೆ. "ಕಣ್ಣುಗಳೆರಡಕ್ಕೂ ತೃಪ್ತಿಯೇ ಆಗದಂತಿದ್ದು, ಮನಸ್ಸಿನಿಂದಲೂ ಅನುಭವಿಸಲಿಕ್ಕೆ ಆಗದೆ ಇರುವ ಪ್ರೇಯಸಿಯ ಸೌಂದರ್ಯವು ನನ್ನ ಹೃದಯವನ್ನು ತಲ್ಲಣಿಸುತ್ತಿದೆ; ಸಂತಾಪಗೊಳಿಸುತ್ತಲೂ ಇದೆ." ಇಲ್ಲಿ ಸಂತೋಷಪಡಿಸುವುದು ಮತ್ತು ದುಃಖಪಡಿಸುವುದು ಇವೆರಡು ಕ್ರಿಯೆಗಳನ್ನು ಒಟ್ಟಿಗೆ ಸೇರಿಸುವುದರಿಂದ ವಿರೋಧವಿದೆ. ನೋಡಿದ್ದರಿಂದ ಸೌಂದರ್ಯವು ಸಂತೋಷಪಡಿಸುತ್ತದೆ; ಭೋಗಿಸಲಿಕ್ಕೆ ಸಿಕ್ಕದಿರುವುದರಿಂದ ದುಃಖಪಡಿಸುತ್ತದೆ. ಹೀಗೆ ಕಾರಣಗಳು ಬೇರೆ ಬೇರೆಯಾಗಿರುವುದರಿಂದ ವಿರೋಧವು ತೊಲಗುತ್ತದೆ. 'ತವ್ವತಿ' ಎಂಬ ಶ್ಲೋಕದಲ್ಲಿ 'ಹರನೂ ಸಹ ಶಿರಸ್ಸಿನಲ್ಲಿ ಗಂಗೆಯನ್ನು ಧರಿಸಿಲ್ಲ' ಎಂಬಲ್ಲಿ ಹರನು ಒಬ್ಬ ವ್ಯಕ್ತಿಯಾದ್ದರಿಂದ ದ್ರವ್ಯವೆನಿಸಿರುವನು. ಅವನು ಶಿರಸ್ಸಿನಲ್ಲಿ ಗಂಗೆಯನ್ನು ಧರಿಸಿರುವುದು ನಿಶ್ಚಿತವಾದ ಗುಣವೆನಿಸಿದೆ. ಯಾವಾಗಲೂ ಧರಿಸಿರುವವನಿಗೆ ಧರಿಸಿಲ್ಲವೆಂದು ಹೇಳಿದ್ದರಿಂದ ಗುಣಕ್ಕೆ ಕ್ರಿಯೆಯೊಡನೆ ವಿರೋಧವು ತೋರುತ್ತದೆ. ಆದರೆ 'ತ್ವದ್ವಜಿರಾಜಿ' ಎಂಬಲ್ಲಿ ರಾಜನ ಕುದುರೆಗಳ ಗೊರಸಿನಿಂದ ಮೇಲಕ್ಕೆ ಎದ್ದ ಧೂಳಿನ ರಾಶಿ ಗಂಗೆಯಲ್ಲಿ ಸೇರಿಕೊಂಡು ನೀರು ಕಲ್ಮಷಗೊಂಡಿತ್ತೆಂದು ಕವಿ ತನ್ನ ಪ್ರತಿಭೆಯಿಂದ ತಿಳಿಸಿರುವ ಪ್ರಯುಕ್ತ ಇಂತಹ ಅಪವಿತ್ರತೆ ಇದ್ದುದಕ್ಕಾಗಿ ಹರನು ಗಂಗೆಯನ್ನು ಶಿರಸ್ಸಿನಲ್ಲಿ ಧರಿಸಿಲ್ಲವೆಂಬುದು ಸಮಾಧಾನವಾಗುತ್ತದೆ. ವಲ್ಲಭೋತ್ಸಂಗ ಎಂಬ ಪದ್ಯದಲ್ಲಿ ದ್ರವ್ಯದೊಡನೆ ದ್ರವ್ಯದ ವಿರೋಧವನ್ನು ಉದಾಹರಿಸುತ್ತಾನೆ. ಅಲ್ಲಿ ನಾಲ್ಕನೆಯ ಪಾದದಲ್ಲಿ 'ಮಾಧ್ಯಂದಿನದಿನಾಧಿಪಃ' ಎಂದು ಬದಲಾಯಿಸಿದರೆ 'ಪೂರ್ಣಚಂದ್ರನು ಸಂತಾಪವನ್ನುಂಟುಮಾಡುತ್ತಿದ್ದುದರಿಂದ ಸೂರ್ಯನೆನಿಸಿದನು. ಹೀಗೆ ಹೇಳುವುದರಿಂದ ಸೂರ್ಯ ಚಂದ್ರರು ಒಬ್ಬೊಬ್ಬ ವ್ಯಕ್ತಿಗಳಾದ್ದರಿಂದ ದ್ರವ್ಯವೆನಿಸಿ ಬೇರೆಯಾಗಿದ್ದರೂ ಅವರಿಗೆ ಅಭೇದವನ್ನು ಹೇಳಿದ್ದರಿಂದ ವಿರೋಧವು ತೋರುತ್ತದೆ. ಇಲ್ಲಿ ವಿರಹಕಾಲದ ದುರವಸ್ಥೆಯನ್ನು ತಿಳಿಸಬೇಕಾಗಿರುವುದರಿಂದ ವಿರೋಧವು ತೊಲಗುವುದು. ಹೀಗೆಯೇ ಬೇರೆ ಕಡೆಗಳಲ್ಲೂ ವಿರೋಧವನ್ನೂ ಸಮಾಧಾನವನ್ನೂ ತಿಳಿಯುವುದು. ವಿಭಾವನಾಲಂಕಾರದಲ್ಲಿ ಕಾರಣವಿಲ್ಲದೆ ಕಾರ್ಯವು ಹುಟ್ಟುವುದೆಂದು ಹೇಳುವುದರಿಂದ ಕಾರ್ಯವೇ ಬಾಧಿತವಾಗುವುದೆಂದು ತಿಳಿಯಬರುತ್ತದೆ. ವಿಶೇಷೋಕ್ತಿಯಲ್ಲಿ ಕಾರಣವಿದ್ದರೂ ಕಾರ್ಯವು ಹುಟ್ಟದೇ ಇರುವುದರಿಂದ ಕಾರಣವೇ ಬಾಧಿತವೆಂದು ತೋರ

ವುದು. ಇಲ್ಲಿಯಾದರೋ ಕಾರ್ಯಕಾರಣಗಳೆರಡೂ ವಿರೋಧದಿಂದ ಪರಸ್ಪರವಾಗಿ ಬಾಧಿತವಾಗಿರುವಂತೆ ತೋರುತ್ತವೆ. ಇದೇ ಇವೆರಡಕ್ಕೂ ಇರುವ ವಿಶೇಷ.

ವಿರೋಧವನ್ನು ತಿಳಿಸುವ ಪ್ರಕರಣವಾದ್ದರಿಂದ ವಿರೋಧದ ಒಂದು ಬಗೆ ಎನಿಸಿದ ಅಸಂಗತ್ಯಲಂಕಾರವನ್ನು ತಿಳಿಸುತ್ತಾನೆ. ಕಾರ್ಯಕಾರಣಗಳು ಬೇರೆ ಬೇರೆ ಸ್ಥಳಗಲ್ಲಿರುವುದೇ ಅಸಂಗತಿ ಎನಿಸುವುದು. ಕಾರ್ಯಕಾರಣಗಳಿಗೆ ಸಾಮಾನಾಧಿಕರಣ್ಯ ವಿಲ್ಲದಿರುವುದೇ ಅಸಂಗತಿ. ಹೀಗೆ ಇದ್ದರೂ ಕಾರ್ಯವು ಹುಟ್ಟುವುದೇ ಅಯುಕ್ತವೆನಿಸಿದ್ದರಿಂದ ಈ ಅಲಂಕಾರದ ಹೆಸರು ಅನ್ವರ್ಥವೆನಿಸಿದೆ. ಅಮರುಶತಕದಲ್ಲಿ ಒಬ್ಬ ಸುಂದರಿಯನ್ನು ನೋಡಿ ಹೋಗುವ ಕಾಮುಕನೊಬ್ಬನು ಸ್ನೇಹಿತನಿಗೆ ತಿಳಿಸುತ್ತಾನೆ. "ಆ ಸುಂದರಿಯು ಬಾಲಿಕೆಯಾಗಿರುವಳು. ಆದರೆ ನಾವು ಗಟ್ಟಿಮನಸ್ಸಿಲ್ಲದವರು. ಆಗ ಏನು ಹೇಳಲಿಕ್ಕೂ ಆಗಲಿಲ್ಲ. ಆಕೆಗೆ ಭವ್ಯವಾದ ಸ್ತನಗಳಿವೆ. ನಮಗೆ ಕಾಮನ ಭಾಧೆಯಿದ್ದುದರಿಂದ ನಾವು ಕ್ಲೇಶಗೊಂಡಿದ್ದೆವು. ಆಕೆಗೆ ವಿಶಾಲವಾದ ಕಟಿಪಶ್ಚಾದ್ಭಾಗವಿದೆ. ನಮಗಾದರೂ ನಡೆದುಕೊಂಡು ಹೋಗಲಿಕ್ಕೂ ಶಕ್ಯವಿರಲಿಲ್ಲ. ಆಕೆಯನ್ನು ಬಿಡಲಿಕ್ಕೆ ನಮ್ಮ ಮನಸ್ಸಿಗೆ ಸಾಧ್ಯವೇ ಆಗಲಿಲ್ಲ. ಸಾಮಾನ್ಯಜನರನ್ನು ಆಶ್ರಯಿಸುವಂತಹ ದೋಷಗಳಿಂದ ನಮ್ಮ ಕರ್ತವ್ಯವನ್ನು ನೆರವೇರಿಸಲಿಕ್ಕಾಗದಷ್ಟು ದುರ್ಬಲರಾದೆವು. ಇದೇ ಇಲ್ಲಿ ತೋರುವ ಆಶ್ಚರ್ಯ" ಇಲ್ಲಿ ಕಾರಣವೆನಿಸಿದ ಬಾಲ್ಯ ಮೊದಲಾದವು ನಾಯಿಕೆಯಲ್ಲಿ ನೆಲಸಿವೆ. ಅವುಗಳ ಕಾರ್ಯವೆನಿಸಿದ ಮನಸ್ಥೈರ್ಯ ವಿಲ್ಲದಿರುವಿಕೆ ಮೊದಲಾದವು ವಕ್ತೃವಿನಲ್ಲಿ ನೆಲಸಿವೆ. ಹೀಗೆ ಕಾರಣವು ಒಂದೆಡೆ ಇದ್ದು ಕಾರ್ಯವು ಒಂದೆಡೆಯಲ್ಲಿ ಇರುವುದರಿಂದ ಇದು ಅಸಂಗತಿ ಎನಿಸಿದೆ. ಇಲ್ಲಿ ಹೇಳಿದ ಉದಾಹರಣದಲ್ಲಿ ಪರಸ್ಪರವಿರೋಧವಿರುವಂತೆ ತೋರುವುದರಿಂದ ಇದು ವಿರೋಧಾಲಂಕಾರವೇ ಏಕೆ ಆಗಬಾರದು ಎಂದು ಶಂಕಿಸಿದರೆ ಸಮಾಧಾನವನ್ನು ತಿಳಿಸುತ್ತಾನೆ. ಕಾರ್ಯಕಾರಣಗಳು ಬೇರೆ ಬೇರೆ ಅಧಿಕರಣಗಳಲ್ಲಿ ಇರುವುದಷ್ಟೇ ಅಸಂಗತ್ಯಲಂಕಾರಕ್ಕೆ ಸಂಬಂಧಿಸಿದ ಅಂಶವಾದ್ದರಿಂದ ಇದು ವಿರೋಧಾಭಾಸವನ್ನು ಬಾಧಿಸುತ್ತದೆ. ವಿರೋಧಾಲಂಕಾರವು ಕಾರ್ಯಕಾರಣಗಳ ಸಾಮಾನಾಧಿಕರಣ್ಯದಲ್ಲಿಯೇ ಸಂಭವಿಸುವ ಪ್ರಯುಕ್ತ ಇದಕ್ಕೂ ಅಸಂಗತಿಗೂ ವೈಲಕ್ಷಣ್ಯವಿದೆ.

ವಿರೋಧದ ಪ್ರಕರಣವನ್ನು ಅನುಸರಿಸಿಕೊಂಡು ಬರುವ ವಿಷಮಾಲಂಕಾರವನ್ನು ವಿವರಿಸುತ್ತಾನೆ. ಕಾರ್ಯಕಾರಣಗಳ ಗುಣಗಳಾಗಲೀ, ಕ್ರಿಯೆಗಳಾಗಲೀ ವಿರುದ್ಧವಾಗಿದ್ದರೆ ಅದು ವಿಷಮವೆನಿಸುವುದು. ಹಾಗೆಯೇ ಆರಂಭಿಸಿದ ಕರ್ಮವು ನಿಷ್ಫಲವಾಗುವುದಾದರೂ, ಅದರಿಂದ ಅನರ್ಥವು ಸಂಭವಿಸುವುದಾದರೂ ವಿಪರೀತವೆನಿಸಿದ ಪದಾರ್ಥಗಳ ಸಂಘಟನೆಯಾಗುವುದಾದರೂ ಇದೆಲ್ಲವೂ ವಿಷಮವೆನಿಸುವುದು. ಕಾರ್ಯದ ಗುಣಕ್ರಿಯೆಗಳು ಕಾರಣದ ಗುಣಕ್ರಿಯುಗಳಿಗಿಂತ ವಿರುದ್ಧವಾಗಿರುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ಎಲ್ಲಾ ಯುದ್ಧಗಳಲ್ಲೂ ಹೊಂಗೆಯ ಚಿಗುರಿನಂತೆ ಕಪ್ಪುಬಣ್ಣವಿರುವ ಕತ್ತಿಯು ರಾಜನ ಕೈಯಲ್ಲಿ ನೆಲೆಸಿ ಶರಚ್ಚಂದ್ರನಂತೆ ಬಿಳುಪಾಗಿ

ಮೂರು ಲೋಕಗಳನ್ನು ಅಲಂಕರಿಸಿದ ಯಶಸ್ಸನ್ನು ಶತ್ರುವಿಜಯದಿಂದ ಗಳಿಸುತ್ತದೆ. ಇದು ಆಶ್ಚರ್ಯರ್ಯವೇ ಸರಿ"ಕಾರಣದಲ್ಲಿರುವ ಗುಣಗಳು ಕಾರ್ಯದಲ್ಲೂ ಅವೇ ಗುಣಗಳನ್ನು ಹುಟ್ಟಿಸುತ್ತದೆ ಎಂಬುದು ಲೋಕದ ನಿಯಮ. ಕತ್ತಿಯಿಂದಲೇ ಕೀರ್ತಿ ಉಂಟಾಗುವ ಪ್ರಯುಕ್ತ ಕತ್ತಿಯೇ ಕಾರಣವೂ ಕೀರ್ತಿಯೇ ಕಾರ್ಯವೂ ಆಗಿವೆ. ಕತ್ತಿಯಲ್ಲಿ ನೀಲಗುಣವೇ ಇರಬೇಕಾದರೂ ಅದರ ಬದಲು ಬಿಳುಪು ಇರುವುದಾಗಿ ಇಲ್ಲಿ ಹೇಳಿದ್ದರಿಂದಇದು ವಿಷಮಾಲಂಕಾರವೆನಿಸಿದೆ.

ಕಾರ್ಯಕಾರಣಗಳ ಕ್ರಿಯೆಗಳಲ್ಲಿ ವಿರೋಧವಿರುವುದನ್ನು ಇಲ್ಲಿ ಉದಾಹರಿಸುತ್ತಾನೆ. "ಕನ್ನೈದಿಲೆಯಂತೆ ಕಣ್ಣುಗಳಿರುವ ಪ್ರೇಯಸಿಯೇ, ನೀನು ಇಷ್ಟೊಂದು ಹೆಚ್ಚು ಆನಂದವನ್ನು ಆಲಿಂಗನದಿಂದ ಕೊಡುತ್ತಿರುವೆ. ಆದರೆ ನಿನ್ನಿಂದಲೇ ಉಂಟಾಗುವ ಈ ವಿರಹವು ನನ್ನ ಶರೀರಕ್ಕೆ ಸಂತಾಪವನ್ನು ಕೊಡುತ್ತಿದೆ." ಇಲ್ಲಿ ವಿರಹವೇ ಕಾರ್ಯವೆನಿಸಿರುವುದು. ಆದರೆ ಇಲ್ಲಿ ಸ್ತ್ರೀಯಳ ಸಂಗದಿಂದ ಆನಂದ ಉಂಟಾಗದೆ ಸಂತಾಪವೇ ಉಂಟಾಗುವ ಪ್ರಯುಕ್ತ ಇದು ವಿಷಮಾಲಂಕಾರವೆನಿಸಿದೆ. ಆರಂಭಿಸಿದ ಕಾರ್ಯವು ವ್ಯರ್ಥವಾದುದಕ್ಕೂ, ಅನರ್ಥವು ಸಂಭವಿಸುವುದಕ್ಕೂ ಉದಾಹರಣವನ್ನು ತಿಳಿಸುತ್ತಾನೆ. ''ಈ ಸಮುದ್ರವನ್ನು ರತ್ನಗಳ ಗಣಿ ಎಂದು ತಿಳಿದು ಸೇವಿಸಿದೆವು. ಇಲ್ಲಿ ಹಣವು ಸಿಕ್ಕುವ ಪ್ರಶ್ನೆ ದೂರದಲ್ಲಿಯೇ ಇರಲಿ ; ಆದರೆ ಉಪ್ಪು ನೀರಿನಿಂದ ಬಾಯನ್ನು ತುಂಬಿಸಿದ್ದಾಯಿತು. ಅಯ್ಯೋ ! ಎಂತಹ ಕಷ್ಟವಿದು !" ಇಲ್ಲಿ ಅಪೇಕ್ಷಿಸಿದ ಹಣವು ಸಿಕ್ಕದೇ ಇರುವುದಷ್ಟೇ ಅಲ್ಲ ; ಆದರೆ ಉಪ್ಪು ನೀರಿನಿಂದ ಬಾಯನ್ನು ತುಂಬಿಸಿದ್ದಾಯಿತು ಎಂದು ಹೇಳಿದ್ದರಿಂದ ಸಮುದ್ರವನ್ನು ಆಶ್ರಯಿಸಿದ್ದು ನಿರರ್ಥಕವೆಂದೂ ಬಾಯಲ್ಲಿ ಉಪ್ಪುನೀರು ತುಂಬಿದ್ದಕ್ಕಾಗಿ ಅನಿಷ್ಟವು ಸಂಭವಿಸಿತೆಂದೂ ತಿಳಿಸಲಾಗಿದೆ, ವಿರುದ್ಧವಾದ ಕಾರ್ಯಗಳ ಸಂಘಟನೆಯನ್ನು ಉದಾಹರಿಸುತ್ತಾನೆ. ಶ್ರೀರಾಮನು ಅರಣ್ಯಕ್ಕೆ ಹೋಗಲು ದಶರಥನು ಹೀಗೆ ಗೋಳಾಡುವನು. "ಮರದ ತೊಗಟೆಯೇ ಬಟ್ಟೆಯಾಗಿರುವ ಅರಣ್ಯವಾಸವೆಲ್ಲಿ ? ದೇವರಾಜನಿಂದ ಪೂಜಿಸಲ್ಪಡುವ ರಾಜಲಕ್ಷ್ಮಿ ಎಲ್ಲಿ ? ಇವೆರಡಕ್ಕೂ ಪರಸ್ಪರ ವೈಷಮ್ಯವಿದೆ. ವಿರುದ್ಧವಾಗಿ ಆಚರಿಸುವ ಬಹ್ಮನ ವ್ಯವಹಾರವು ನಿಶ್ಚಯವಾಗಿಯೂ ಅಸಹ್ಯವಾದುದು. ರಾಜಲಕ್ಷ್ಮಿಯನ್ನು ಸಂಭೋಗಿಸಲು ಉದ್ಯುಕ್ತನಾದ ರಾಮನಿಗೆ ವನವಾಸವು ಬಂದದ್ದು ಅನುಚಿತವೇ ಸರಿ." ಇಲ್ಲಿ ವನವಾಸಕ್ಕೂ ರಾಜಸುಖಭೋಗಕ್ಕೂ ಪರಸ್ಪರ ಸಂಘಟನೆಯೇ ಇಲ್ಲ; ಆದರೂ ಇಲ್ಲಿ ಕವಿಯು ಕಲ್ಪಿಸಿರುವುದರಿಂದ ಇದು ವಿಷಮವೆನಿಸಿದೆ. "ಪ್ರಳಯಕಾಲದಲ್ಲಿ ಸಮುದ್ರದಲ್ಲಿ ಮಲಗಿರುವ ಯಾವ ಶ್ರೀ ಕೃಷ್ಣನ ವಿಶಾಲವಾದ ಹೊಟ್ಟೆಯು ಮೂರು ಲೋಕಗಳನ್ನು ಅಡಗಿಸಿಕೊಂಡಿತ್ತೋ ಅಂತಹ ಕೃಷ್ಣನನ್ನು ಮುಂದೆ ನಿಂತಿದ್ದ ಸ್ತ್ರೀಯೊಬ್ಬಳು ಕಾಮವಿಕಾರದಿಂದ ಕೂಡಿದ್ದು ಒಂದೇ ಕಡೆಗೆ ತಿರುಗಿಸಿ ನೋಡುವ ದೃಷ್ಟಿಯಿಂದಲೇ ಪೂರ್ತಿಯಾಗಿ ನೋಡಿದಳು" ಇಲ್ಲಿ ಭಗವಂತನು ಹೆಚ್ಚು ವಿಶಾಲನಾದವನೆಂದೂ ಕೇವಲ ಒಂದು ಕಣ್ಣಿನ ನೋಟದಿಂದ ಕಂಡ ಪ್ರಯುಕ್ತ ಬಹಳ ಚಿಕ್ಕವನೆಂದೂ ಹೇಳಿದ್ದು ವಿರುದ್ಧವಾದ ಘಟನೆ ಎನಿಸಿದೆ.

ಸಮಂ ಸ್ಯಾದಾನುರೂಪ್ಯೇಣ ಶ್ಲಾಘಾ ಯೋಗ್ಯಸ್ಯ ವಸ್ತುನಃ ।

ಯಥಾ- ಶಶಿನಮುಪಗತೇಯಂ ಕೌಮುದೀ ಮೇಘಮುಕ್ತಂ
ಜಲನಿಧಿಮನುರೂಪಂ ಜಹ್ನುಕನ್ಯಾಽವತೀರ್ಣಾ ।
ಇತಿ ಸಮಗುಣಯೋಗಪ್ರೀತಯಸ್ತತ್ರ ಪೌರಾಃ
ಶ್ರವಣಕಟು ನೃಪಾಣಾಮೇಕವಾಕ್ಯಂ ವಿವವ್ರುಃ ॥

ವಿಚಿತ್ರಂ ಯದ್ವಿರುದ್ಧಸ್ಯ ಕೃತಿರಿಷ್ಟಫಲಾಯ ಚೇತ್ ॥

ಪ್ರಣಮತ್ಯುನ್ನತಿಹೇತೋರ್ಜೀವಿತಹೇತೋರ್ವಿಮುಂಚತಿ ಪ್ರಾಣಾನ್ ।
ದುಃಖಯತಿ ಸುಖಹೇತೋಃ ಕೋ ಮೂಢಃ ಸೇವಕಾದನ್ಯಃ ?॥

ಆಶ್ರಯಾಶ್ರಯಿಣೋರೇಕಸ್ಯಾಧಿಕ್ಯೇಽಧಿಕಮುಚ್ಯತೇ ॥

ಆಶ್ರಯಾಧಿಕ್ಯೇ—ಕಿಮಧಿಕಮಸ್ಯ ಬ್ರೂಮೋ ಮಹಿಮಾನಂ ವಾರಿಧೇರ್ಹರಿರ್ಯತ್ರ ।
ಅಜ್ಞಾತ ಏವ ಶೇತೇ ಕುಕ್ಷೌ ನಿಕ್ಷಿಪ್ಯ ಭುವನಾನಿ ॥

ಆಶ್ರಿತಾಧಿಕ್ಯೇ ಯಥಾ-

ಯುಗಾಂತಕಾಲಪ್ರತಿಸಂಹೃತಾತ್ಮನೋ ಜಗಂತಿ ಯಸ್ಯಾಂ ಸವಿಕಾಸಮಾಸತ ।
ತನೌ ಮಮುಸ್ತತ್ರ ನ ಕೈಟಭದ್ವಿಷಸ್ತಪೋಧನಾಭ್ಯಾಗಮಸಂಭವಾ ಮುದಃ

ಅನ್ಯೋನ್ಯಮುಭಯೋರೇಕಕ್ರಿಯಾಯಾಃ ಕಾರಣಂ ಮಿಥಃ ॥

ಯಥಾ-ತ್ವಯಾಂ ಸಾ ಶೋಭತೇ ತನ್ವೀ ತಯಾ ತ್ವಮಪಿ ಶೋಭಸೇ॥
ರಜನ್ಯಾ ಶೋಭತೇ ಚಂದ್ರಶ್ಚಂದ್ರೇಣಾಪಿ ನಿಶೀಥಿನೀ ॥

ಯದಾಧೇಯಮನಾಧಾರಮೇಕಂ ಚಾನೇಕಗೋಚರಮ್ ।
ಕಿಂಚತ್ಪ್ರಕುರ್ವತಃ ಕಾರ್ಯಮಶಕ್ಯಸ್ಯೇತರಸ್ಯ ವಾ ॥
ಕಾರ್ಯಸ್ಯ ಕರಣಂ ದೈವಾದ್ವಿಶೇಷಸ್ತ್ರಿವಿಧಸ್ತತಃ।

ಕ್ರಮೇಣ ಯಥಾ- ದಿವಮಪ್ಯುಪಯಾತಾನಾಮಾಕಲ್ಪಮನಲ್ಪಗುಣಗಣಾ ಯೇಷಾಮ್
ರಮಯಂತಿ ಜಗಂತಿ ಗಿರಃ ಕಥಮಿವ ಕವಯೋ ನ ತೇ ವಂದ್ಯಾಃ॥

ಕಾನನೇ ಸರಿದುದ್ದೇಶೇ ಗಿರೀಣಾಮಪಿ ಕಂದರೇ ।
ಪಶ್ಯಂತ್ಯಂತರಸಂಕಾಶಂ ತ್ವಾಮೇಕಂ ರಿಪವಃ ಪುರಃ॥

ಗೃಹಿಣೀ ಸಚಿವಃ ಸಖೀ ಮಿಥಃ ಪ್ರಿಯಶಿಷ್ಯಾ ಲಲಿತೇ ಕಲಾವಿಧೌ ।
ಕರುಣಾವಿಮುಖೇನ ಮೃತ್ಯುನಾ ಹರತಾ ತ್ವಾಂ ವದ ಕಿಂ ನ ಮೇ ಹೃತಮ್॥

ವ್ಯಾಘಾತಃ ಸ ತು ಕೇನಾಪಿ ವಸ್ತು ಯೇನ ಯಥಾ ಕೃತಮ್ ।
ತೇನೈವ ಚೇದುಪಾಯೇನ ಕುರುತೇಽನ್ಯಸ್ತದನ್ಯಥಾ ॥

ಯಥಾ 'ದೃಶಾ ದಗ್ಧಂ ಮನಸಿಜಂ' ಇತ್ಯಾದಿ.

ಸೌಕರ್ಯೇಣ ಚ ಕಾರ್ಯಸ್ಯ ವಿರುದ್ಧಂ ಕ್ರಿಯತೇ ಯದಿ ।

ವ್ಯಾಘಾತ ಇತ್ಯೇವ. ಇಹೈವ ತ್ವಂ ತಿಷ್ಠ ದ್ರುತಮಹಮಹೋಭಿಃ ಕತಿಪಯೈಃ
ಸಮಾಗಂತಾ ಕಾಂತೇ ಮೃದುರಸಿ ನ ಚಾಯಾಸಸಹನಾ ।

ಮೃದುತ್ವಂ ಮೇ ಹೇತುಃ ಸುಭಗ ! ಭವತಾ ಗಂತುಮಧಿಕಂ ।
ನ ಮೃದ್ವೀ ಸೋಢಾ ಯದ್ವಿರಹಕೃತಮಾಯಾಸಮಸಮಮ್ ॥

ಅತ್ರ ನಾಯಕೇನ ನಾಯಿಕಾಯಾ ಮೃದುತ್ವಂ ಸಹಗಮನಾಭಾವಹೇತುತ್ವೇನ ಉಕ್ತಮ್, ನಾಯಿಕಯಾ ಚ ಪ್ರತ್ಯುತ ಸಹಗಮನೇ ತತೋಽಪಿ ಸೌಕರ್ಯೇಣ ಹೇತುತಯೋಽಪನ್ಯಸ್ತಮ್.

ಪರಂ ಪರಂ ಪ್ರತಿ ಯದಾ ಪೂರ್ವಪೂರ್ವಸ್ಯ ಹೇತುತಾ ॥
ತದಾ ಕಾರಣಮಾಲಾ ಸ್ಯಾತ್ ತನ್ಮಾಲಾದೀಪಕಂ ಪುನಃ।
ಧರ್ಮಿಣಾಮೇಕಧರ್ಮೇಣ ಸಂಬಂಧೋ ಯದ್ಯಥೋತ್ತರಮ್ ॥

ಯಥಾ-ಶ್ರುತಂ ಕೃತಧಿಯಾಂ ಸಂಗಾಜ್ಜಾಯತೇ ವಿನಯಃ ಶ್ರುತಾತ್ ।
ಲೋಕಾನುರಾಗೋ ವಿನಯಾತ್ ನ ಕಿಂ ಲೋಕಾನುರಾಗತಃ ?॥

ಯಥಾ—ತ್ವಯಿ ಸಂಗರಸಂಪ್ರಾಪ್ತೇ ಧನುಷಾಸಾದಿತಾಃ ಶರಾಃ ।
ಶರೈರರಿಶಿರಸ್ತೇನ ಭೂಸ್ತಯಾ ತ್ವಂ ತ್ವಯಾ ಯಶಃ ॥

ಅತ್ರ ಆಸಾದಾನಕ್ರಿಯಾ ಧರ್ಮಃ.

ಪೂರ್ವಂ ಪೂರ್ವಂ ಪ್ರತಿ ವಿಶೇಷಣತ್ವೇನ ಪರಂ ಪರಮ್ ।
ಸ್ಥಾಪ್ಯತೇಽಪೋಹ್ಯತೇ ಚೇತ್ ಸ್ಯಾತ್ತ್ರಥೈಕಾವಲೀ ದ್ವಿಧಾ ॥

ಕ್ರಮೇಣೋದಾಹರಣಮ್-ಸರೋ ವಿಕಸಿತಾಂಭೋಜಮಂಭೋಜಂ ಭೃಂಗಸಂಗತಮ್
ಭೃಂಗಾ ಯತ್ರ ಸಸಂಗೀತಾಃ ಸಂಗೀತಂ ಸಸ್ಮರೋದಯಮ್ ।

ನ ತಜ್ಜಲಂ ಯನ್ನ ಸುಚಾರುಪಂಕಜಂ ನ ಪಂಕಜಂ ತದ್ಯದಲೀನಷಟ್ಪದಮ್ ।
ನ ಷಟ್ಪದೋಽಸೌ ನ ಜುಗುಂಜ ಯಃ ಕಲಂ ನ ಗುಂಜಿತಮ್ ತನ್ನ ಜಹಾರ ಯನ್ಮನಃ॥

ಕ್ವಚಿದ್ವಿಶೇಷ್ಯಮಪಿ ಯಥೋತ್ತರವಿಶೇಷಣತಯಾ ಸ್ಥಾಪಿತಮಪೋಹಿತಂ ಚ ದೃಶ್ಯತೇ. ಯಥಾ—

ವಾಪ್ಯೋ ಭವಂತಿ ವಿಮಲಾಃ ಸ್ಫುಟಂತಿ ಕಮಲಾನಿ ವಾಪೀಷು ।
ಕಮಲೇಷು ಪತಂತ್ಯಲಯಃ ಕರೋತಿ ಸಂಗೀತಮಲಿಷು ಪದಮ್ ॥

ಏವಮಪೋಹನೇಽಪಿ.

ಉತ್ತರೋತ್ತರಮುತ್ಕರ್ಷೋ ವಸ್ತುನಃ ಸಾರ ಉಚ್ಯತೇ.

ಯಥಾ-ರಾಜ್ಯೇ ಸಾರಂ ವಸುಧಾ ವಸುಧಾಯಾಮಪಿ ಪುರಂ ಪುರೇ ಸೌಧಮ್ ।
ಸೌಧೇ ತಲ್ಪಂ ತಲ್ಪೇ ವರಾಂಗನಾಽನಂಗಸರ್ವಸ್ವಮ್ ॥

ವಿರೂಪವಾದ ವಸ್ತುಗಳ ಸಂಘಟನೆಯು ವಿಷಮಾಲಂಕಾರವೆನಿಸಿದಂತೆ ಅದಕ್ಕೆ ವಿಪರೀತವೆನಿಸಿದ ಸಮಾಲಂಕಾರವನ್ನು ಈಗ ವಿವರಿಸುತ್ತಾನೆ. ಪರಸ್ಪರ ಸಾದೃಶ್ಯ ವಿರುವ ಪ್ರಯುಕ್ತ ಅನುರೂಪವಾದ ವಸ್ತುವಿನೊಡನೆ ಅನುರೂಪವಾದ ವಸ್ತುವಿನ ಸಮಾಗಮವೇ ಸಮಾಲಂಕಾರವೆನಿಸುವುದು. ಎರಡು ವಸ್ತುಗಳಿಗೆ ಸಮಾನವೆಂಬ

ಜ್ಞಾನವು ಹುಟ್ಟುವುದೇ ಸಮವೆನಿಸುತ್ತದೆ. ಇದು ಸದ್ವಸ್ತುವಿನ ಯೋಗದಲ್ಲೂ ಅಸದ್ವಸ್ತುವಿನ ಯೋಗದಲ್ಲೂ ಸಂಭವಿಸುವುದರಿಂದ ಎರಡು ಬಗೆ ಎನಿಸಿದೆ. ಅಜನನ್ನು ಇಂದುಮತಿಯು ಪತಿಯನ್ನಾಗಿ ಆರಿಸಿದಾಗ ಜನರಾಡುವ ಮಾತುಗಳನ್ನು ಕವಿ ಇಲ್ಲಿ ತಿಳಿಸಿದ್ದಾನೆ. "ಸ್ವಯಂವರದಲ್ಲಿ ಸಮಾನವಾದ ಸೌಂದರ್ಯ ಮೊದಲಾದ ಗುಣವಿರುವ ಇಂದುಮತಿ ಅಜ ಇವರ ಸಮ್ಮೇಳನದಿಂದ ಸಂತೋಷಪಟ್ಟ ಜನರು "ಈ ಇಂದುಮತಿಯು ವರ್ಷಾಕಾಲದ ಮೇಘದಿಂದ ಬಿಡುಗಡೆಯಾದ ಚಂದ್ರನಲ್ಲಿ ಸೇರಿದ ಚಂದ್ರಿಕೆಯಂತೆ ಇರುವಳು ಹಾಗೆಯೇ ತನಗೆ ಅನುಗುಣವೆನಿಸಿದ ಸಮುದ್ರವನ್ನು ಪ್ರವೇಶಿಸಿದ ಗಂಗೆಯೇ ಆಗಿರುವಳು.'' ಹೀಗೆ ಇಂದುಮತಿಯನ್ನು ವರಿಸಲು ಬಂದಿದ್ದ ರಾಜರಿಗೆ ಕೇಳಿಸುವಂತೆ ಶ್ರುತಿಕಠೋರವಾದ ಒಂದೇ ಬಗೆಯ ವಾಕ್ಯವನ್ನು ಗಟ್ಟಿಯಾಗಿ ತಿಳಿಸಿದರು' ಇಲ್ಲಿ ಅನುಕೂಲವಾದ ವರನೆನಿಸಿದ ಅಜನೊಡನೆ ಇಂದುಮತಿಯ ಸಮ್ಮೇಳನವು ಸಾಧುವೆಂದು ತಿಳಿಸಿರುವುದರಿಂದ ಇದು ಸಮಾಲಂಕಾರವೆನಿಸಿದೆ. ಇದು ಸದ್ಯೋಗಕ್ಕೆ ಉದಾಹರಣವೆನಿಸಿದೆ. ಅಸದ್ಯೋಗವಿದ್ದರೂ ಅದನ್ನು ಸಾಧುವೆಂಡು ತಿಳಿಸುವುದೂ ಸಮಾಲಂಕಾರವೇ ಆಗುತ್ತದೆ. "ಬೇವಿನ ಗಿಡವನ್ನು ನಿರ್ಮಿಸಿದ ಬ್ರಹ್ಮನ ಚಾತುರ್ಯವೇ ವಿಚಿತ್ರವಾದುದು. ಆ ಗಿಡದ ಪಕ್ವವಾದ ಹಣ್ಣನ್ನು ತಿನ್ನಲಿಕ್ಕೆ ಯೋಗ್ಯವಾಗುವಂತೆ ನಿರ್ಮಿಸಿದ್ದೇ ಒಂದು ಆಶ್ಚರ್ಯ. ಅದರಲ್ಲೂ ಅದನ್ನು ತಿನ್ನಲಿಕ್ಕೆ ಯೋಗ್ಯವಾದ ಕಾಗೆಯನ್ನು ಸೃಷ್ಟಿಸಿದ್ದು ಮತ್ತೂ ಆಶ್ಚರ್ಯವೇ " ಇಲ್ಲಿ ಕಾಗೆಗೆ ಅನುಗುಣವಾದ ಬೇವಿನ ಹಣ್ಣನ್ನು ತಿನ್ನಲಿಕ್ಕೆ ಕಾಗೆಯೇ ಯೋಗ್ಯವೆಂದು ತಿಳಿಸಿದೆ. ಯೋಗ್ಯವಾದ ಹಣ್ಣಿಗೆ ಅಯೋಗ್ಯವಾದ ಪ್ರಾಣಿಯ ಸಂಘಟನೆಯು ಯುಕ್ತವೆನಿಸಿರುವ ಪ್ರಯುಕ್ತ ಇದು ಅಸದ್ಯೋಗದ ಸಮಾಲಂಕಾರವೆನಿಸಿದೆ.

ತನ್ನ ಇಷ್ಟಕ್ಕಿಂತಲೂ ವಿರುದ್ಧವಾದ್ದನ್ನು ಮಾಡುವುದರಿಂದ ಅಭಿಲಷಿತವಾದ ಫಲವು ದೊರೆಯುವುದಾದರೆ ಅದು ವಿಚಿತ್ರಾಲಂಕಾರವೆನಿಸುದು. ವಿರೋಧಾಭಾಸದಲ್ಲೂ ವಿಷಮದಲ್ಲೂ ವಿರೋಧವು ತಾನಾಗಿಯೇ ಸಂಭವಿಸುತ್ತದೆ. ಅಲ್ಲಿಯಾದರೋ ವಿರುದ್ಧವಾದ ಕಾರ್ಯವನ್ನು ಆಚರಿಸಲಾಗುದು. ವಿಪರೀತವಾದ ಫಲವನ್ನು ಪಡೆಯಲಿಕ್ಕಾಗಿ ವಿರುದ್ಧವಾದ ಕಾರ್ಯವನ್ನು ಮಾಡುವುದೇ ವಿಚಿತ್ರವೆನಿಸುವುದು. "ಸೇವಕನು ತನ್ನ ಅಭ್ಯುದಯಕ್ಕಾಗಿ ಸ್ವಾಮಿಗೆ ನಮಸ್ಕರಿಸುತ್ತಾನೆ. ಸಂಬಳವನ್ನು ಪಡೆದು ಪ್ರಾಣವನ್ನು ರಕ್ಷಿಸಿಕೊಳ್ಳಲಿಕ್ಕಾಗಿ ಯುದ್ಧದಲ್ಲಿ ಪ್ರಾಣವನ್ನು ಬಿಡುವನು ; ಹಾಗೆ ಸುಖಸಂಪಾದನೆಗಾಗಿ ಶ್ರಮಪಡಲು ತಯಾರಾಗಿ ದುಃಖವನ್ನು ಅನುಭವಿಸುತ್ತಾನೆ. ಆದ್ದರಿಂದಲೇ ಸೇವಕನಿಗಿಂತ ಬೇರೆ ಯಾವ ಮೂಢನಿದ್ದಾನು ? " ಇಲ್ಲಿ ಸೇವಕನು ಉನ್ನತಿ ಮೊದಲಾದ ಇಷ್ಟಫಲಕ್ಕಾಗಿ ಅದಕ್ಕೆ ವಿರುದ್ಧವಾದ ಪ್ರಾಣತ್ಯಾಗ ಮೊದಲಾದವನ್ನು ಮಾಡುವನೆಂದು ತಿಳಿಸಿದ್ದರಿಂದ ಇದು ವಿಚಿತ್ರವೆನಿಸಿದೆ.

ಆಧಾರ ಮತ್ತು ಆಧೇಯಗಳ ನಡುವೆ ಒಂದು ವಿಶಾಲವಾಗಿದ್ದರೆ ಅದು ಅಧಿಕಾಲಂಕಾರವೆನಿಸುವುದು. ಇವುಗಳಲ್ಲಿ ಆಧಾರವು ಅಧಿಕವೆನಿಸಿದ್ದರೆ ಉದಾಹರಣವು

ಹೀಗಿರುತ್ತದೆ. "ಕ್ಷೀರಸಮುದ್ರದ ಹೆಚ್ಚಿನ ಮಹಿಮೆಯನ್ನು ಏನು ಹೇಳೋಣ? ವಿಷ್ಣುವು ತನ್ನ ಉದರದಲ್ಲಿಯೇ ಮೂರು ಲೋಕಗಳನ್ನು ಅಡಗಿಸಿಕೊಂಡು ಎಲ್ಲಿ ನೆಲಸಿರುವನೆಂಬು ದನ್ನು ಯಾರಿಗೂ ತಿಳಿಸದಂತೆ ಕ್ಷೀರಸಮುದ್ರದಲ್ಲಿ ಪ್ರಳಯಕಾಲದಲ್ಲಿ ಮಲಗಿರುವನು." ಇಲ್ಲಿ ಆಧೇಯವೆನಿಸಿದ ನಾರಾಯಣನಿಗಿಂತಲೂ ಆಧಾರವೆನಿಸಿದ ಕ್ಷೀರಸಮುದ್ರವು ಹೆಚ್ಚೆಂದು ತಿಳಿಸಿದ್ದರಿಂದ ಇದು ಅಧಿಕಾಲಂಕಾರವೆನಿಸಿದೆ. ಆಶ್ರಿತವಾದ ವಸ್ತು (ಆಧೇಯವು) ಹೆಚ್ಚೆಂಬುದನ್ನು ಉದಾಹರಿಸುತ್ತಾನೆ. "ಪ್ರಳಯಕಾಲದಲ್ಲಿ ತನ್ನೊಳಗೆ ಎಲ್ಲಾ ಜೀವರನ್ನು ಅಡಗಿಸಿಕೊಳ್ಳುವ ಕೃಷ್ಣನ ಶರೀರದಲ್ಲಿ ಮೂರು ಜಗತ್ತುಗಳು ಹೇಗೆ ನೆಲೆಸಬಲ್ಲವೋ ಹಾಗೆ ಅವನಿಗೆ ನಾರದನನ್ನು ಕಂಡದ್ದರಿಂದ ಉಂಟಾದ ಸಂತೋಷವು ಆ ದೇಹದಲ್ಲಿ ಅಡಗಲಿಲ್ಲ. ನಾರದನ ಸಂದರ್ಶನದಿಂದ ಅಷ್ಟೊಂದು ಸಂತೋಷವು ಅವನಿಗೆ ಉಂಟಾಯಿತು." ಇಲ್ಲಿ ಆಧಾರವೆನಿಸಿದ ನಾರಾಯಣನ ಶರೀರಕ್ಕಿಂತಲೂ ಆಧೇಯವೆನಿಸಿದ ಸಂತೋಷವೇ ಅಧಿಕವೆನಿಸಿದ್ದರಿಂದ ಇದು ಅಧಿಕಾಲಂಕಾರವೆನಿಸಿದೆ.

ಎರಡು ವಸ್ತುಗಳಿಗೆ ಪರಸ್ಪರವಾಗಿ ಒಂದೇ ಕ್ರಿಯೆಯು ಅನ್ವಯಿಸುವುದೇ ಅನ್ಯೋನ್ಯಾಲಂಕಾರವೆನಿಸುವುದು. "ಎಲೈ ನಾಯಕನೇ, ಆ ಕೃಶಾಂಗಿಯು ನಿನ್ನೊಡನೆ ಶೋಭಿಸುತ್ತಾಳೆ. ನೀನೂ ಸಹ ಆಕೆಯೊಡನೆ ಶೋಭಿಸುತ್ತಿರುವೆ. ಚಂದ್ರನು ರಾತ್ರಿಯೊಡನೆ ಶೋಭಿಸುತ್ತಾನೆ. ಚಂದ್ರನೊಡನೆ ರಾತ್ರಿಯೂ ಶೋಭಿಸುತ್ತಿದೆ." ಇಲ್ಲಿ ನಾಯಕನಾಯಿಕೆಯರಿಗೂ ಚಂದ್ರರಾತ್ರಿಗಳಿಗೂ ಒಂದೇ ಶೋಭನಕ್ರಿಯೆಯನ್ನು ಪರಸ್ಪರವಾಗಿ ತಿಳಿಸಿರುವ ಪ್ರಯುಕ್ತ ಇದು ಅನ್ಯೋನ್ಯಾಲಂಕಾರವೆನಿಸಿದೆ. ಮುಂದೆ ವಿಶೇಷಾಲಂಕಾರವನ್ನು ತಿಳಿಸುತ್ತಾನೆ. ಆಧಾರವಿಲ್ಲದೆ ಆಧೇಯವಿರುವುದಾಗಲಿದ್ದ ಒಂದೇ ವಸ್ತು ಅನೇಕಸ್ಥಾನಗಳಲ್ಲಿ ಇರುವುದಾಗಲೀ, ಯಾವುದೋ ಒಂದು ಕಾರ್ಯ ವನ್ನು ಮಾಡುವವನು ತನ್ನಿಂದ ಮಾಡಲಿಕ್ಕಾಗದಿರುವ ಬೇರೊಂದು ಕಾರ್ಯವನ್ನು ಮಾಡುವುದಾಗಲೀ ವಿಶೇಷವೆಂಬ ಅಲಂಕಾರವೆನಿಸುತ್ತದೆ. ಈ ಮೂರು ಬಗೆಗಳಿಗೂ ಉದಾಹರಣಗಳು ಹೀಗಿವೆ. ಆಧಾರವಿಲ್ಲದೆ ಆಧೇಯವಿರುವುದನ್ನು ಇಲ್ಲಿ ಉದಾಹರಿಸ ತ್ತಾನೆ. "ಸ್ವರ್ಗಕ್ಕೆ ಹೋದ ಕವಿಗಳ ಮಾಧುರ್ಯವೇ ಮೊದಲಾದ ಗುಣಗಳಿರುವ ಕಾವ್ಯವೆಂಬ ವಾಕ್ಯಗಳು ಪ್ರಳಯಕಾಲದವರೆಗೂ ಜಗತ್ತಿನ ಜನರನ್ನು ಸಂತೋಷ ಪಡಿಸುತ್ತವೆ. ಅಂತಹ ಕವಿಗಳು ಯಾರಿಗೆ ವಂದ್ಯರೆನಿಸುವುದಿಲ್ಲ?" ಇಲ್ಲಿ ಕವನಕ್ಕೆ ಆಧಾರವೆನಿಸಿದ ಕವಿಗಳು ಇಲ್ಲದಿದ್ದರೂ ಆಧೇಯವೆನಿಸಿದ ಅವರ ಮಾತುಗಳು ಸ್ಥಿರ ವಾಗಿರುತ್ತವೆ ಎಂದು ಹೇಳಿರುವುದರಿಂದ ಇದು ವಿಚಿತ್ರವೆನಿಸಿದೆ. ಒಂದೇ ವಸ್ತು ಅನೇಕ ಕಡೆಗಳಲ್ಲಿ ಇರುವುದನ್ನು ಉದಾಹರಿಸುತ್ತಾನೆ. "ಶತ್ರುಗಳು ಅರಣ್ಯದಲ್ಲೂ, ತೀರದಲ್ಲೂ ಬೆಟ್ಟಗಳ ಗವಿಗಳ ಮುಂದೆಯೂ ಯಮನಿಗೆ ಸದೃಶನಾವ ನಿನ್ನೊಬ್ಬ ನನ್ನೇ ನೋಡುತ್ತಾರೆ. ನಿನ್ನ ಶತ್ರುಗಳು ಇಷ್ಟು ಹೆದರಿರುವರು. ಅವರು ಅಲ್ಲಲ್ಲಿ ಚದುರಿ ಓಡಿದರೂ ಭಯದಿಂದ ತಮ್ಮ ಹತ್ತಿರದಲ್ಲಿ ಏಕಕಾಲದಲ್ಲಿಯೇ ನಿನ್ನನ್ನು ಕಾಣುತ್ತಿರು ವರು." ಇಲ್ಲಿ ಒಬ್ಬ ರಾಜನೇ ಅರಣ್ಯ ಮೊದಲಾದ ಅನೇಕಸ್ಥಾನಗಳಲ್ಲಿ ಇರುವನೆಂದು

ತಿಳಿಸಿದೆಯಾದ್ದರಿಂದ ಇದು ವಿಶೇಷಾಲಂಕಾರವೆನಿಸಿದೆ. ಮೂರನೆಯ ಬಗೆಯನ್ನು ಈಗ ಉದಾಹರಿಸುತ್ತಾನೆ. "ಎಲೈ ಇಂದುಮತಿಯೇ, ನೀನು ಮನೆಯ ಯಜಮಾನಿ, ನೀನೇ ಎಲ್ಲಾ ಆಲೋಚನೆಗಳನ್ನೂ ಬಗೆಹರಿಸುವವಳು. ನೀನೇ ಗೋಪ್ಯವಾಗಿ ಆನಂದ ವನ್ನು ಕೊಡುವವಳು. ನೀನೇ ಲಲಿತಕಲೆಗಳನ್ನು ಆಚರಿಸಲು ಪ್ರಿಯಶಿಷ್ಯಳು ಹೀಗೆ ನನ್ನ ಪ್ರಾಣರೂಪಿಯಾದ ನಿನ್ನನ್ನು ಅಪಹರಿಸಿದ ದಯಾಹೀನಮೃತ್ಯುವು ನನ್ನ ಯಾವ ವಸ್ತುವನ್ನು ತಾನೇ ಆಪಹರಿಸಲಿಲ್ಲ! ನೀನೇ ಹೇಳು ; ಆದರೆ ಎಲ್ಲವನ್ನೂ ಅಪಹರಿಸಿತು" ಇಲ್ಲಿ ಇಂದುಮತಿಯನ್ನು ಕೊಲೆಮಾಡಿದ ಮೃತ್ಯುವು ಆಕೆಯಲ್ಲಿದ್ದ ಗೃಹಿಣೀತ್ವ ಮೊದಲಾದುವನ್ನು ಅಪಹರಿಸಿತೆಂದು ತಿಳಿಸಿರುವುದರಿಂದ ಇದು ವಿಶೇಷಾಲಂಕಾರ ವೆನಿಸಿದೆ. ಮೃತ್ಯುವು ದೈವಬಲದಿಂದ ಇಂದುಮತಿಯನ್ನು ಮಾತ್ರ ಅಪಹರಿಸಬಲ್ಲದು ; ಆದರೆ ಅವಳಲ್ಲಿದ್ದ ಗೃಹಿಣೀತ್ವ ಮೊದಲಾದ ಗುಣಗಳನ್ನು ಅದು ಅಪಹರಿಸಲಾರದು. ಅದಕ್ಕೆ ಅಷ್ಟೆಲ್ಲವನ್ನೂ ಆಪಹರಿಸುವ ಶಕ್ತಿ ಇರುವುದಿಲ್ಲ. ಆದರೆ ದೈವಬಲದಿಂದಲೇ ಅದಕ್ಕೆ ಅವೆಲ್ಲವನ್ನು ಅಪಹರಿಸುವ ಸ್ಥಿತಿ ಬಂದಿದೆಯಾದ್ದರಿಂದ ಇದು ವಿಶೇಷವೇ ಸರಿ.

ಯಾವನಾದರೊಬ್ಬನು ಯಾವ ಉಪಾಯದಿಂದಾದರೂ ಯಾವ ವಸ್ತುವನ್ನು ಹೇಗೆ ನಡೆಸುವನೋ ಬೇರೊಬ್ಬನು ಅದೇ ಉಪಾಯದಿಂದ ಆ ವಸ್ತುವನ್ನೇ ಬೇರೆ ರೀತಿ ಯಲ್ಲಿ ನಡೆಸುವುದಾದರೆ ಅದು ವ್ಯಾಘಾತಲಂಕಾರವೆನಿಸುವುದು. ದೃಶಾ ದಗ್ಧಂ ಮನಸಿಜಂ ಎಂಬ ಪದ್ಯದಲ್ಲಿ ಶಿವನು ಕಣ್ಣಿನಿಂದ ಸುಟ್ಟ ಮನ್ಮಥನನ್ನು ಹೆಂಗಸರು ಕಣ್ಣಿನಿಂದಲೇ ಮತ್ತೆ ಬದುಕಿಸುವರೆಂದು ಹೇಳಿದ್ದರಿಂದ ಇದು ವ್ಯಾಘಾತವೆನಿಸಿದೆ.

ಎದುರಾಳಿಗೆ ಇಷ್ಟವಾದ ವಿಷಯವನ್ನು ತನಗೆ ಅನುಕೂಲವಾಗುವಂತೆಯೂ ಅದನ್ನು ತಿಳಿಸಿದವನಿಗೆ ವಿರುದ್ಧವಾಗುವಂತೆಯೂ ಹೇಳುವುದೂ ಸಹ ವ್ಯಾಘಾತವೇ ಎನಿಸುವುದು. ಒಂದೇ ಹೇತುವನ್ನು ಅವಲಂಬಿಸಿ ತನಗೆ ಅನುಕೂಲವಾಗುವಂತೆ ಎದು ರಾಳಿಯು ಹೇಳುವವನ ಅಭಿಪ್ರಾಯಕ್ಕೆ ವಿಪರೀತವಾಗಿ ಪ್ರಕಾಶಪಡಿಸುವುದಾದರೆ ಅದೂ ಸಹ ವ್ಯಾಘಾತವೇ ಆಗುತ್ತದೆ. ಪರಸ್ಥಳಕ್ಕೆ ಹೋಗಲಿಚ್ಛಿಸುವ ನಾಯಕನಿಗೆ. ಅವನೊಡನೆ ಹೊರಡಲು ಇಚ್ಛಿಸುವ ನಾಯಿಕೆಗೂ ನಡೆದ ಉಕ್ತಿಪ್ರತ್ಯುಕ್ತಿಗಳನ್ನು ತಿಳಿಸುವ ಪದ್ಯವಿದು. "ಎಲೈ ಪ್ರಿಯೆ, ನೀನು ಇಲ್ಲಿಯೇ ಇರು, ನಾನು ಕೆಲವೇ ದಿನ ಗಳಲ್ಲಿ ಮತ್ತೆ ಬೇಗನೆ ಬರುವೆನು. ನೀನು ಮೃದುಸ್ವಭಾವದವಳಿರುವೆ. ಪ್ರವಾಸದ ಕ್ಲೇಶವನ್ನು ನೀನು ಸಹಿಸಲಾರೆ" ಹೀಗೆ ನಾಯಕನು ಹೇಳಿದನು. ಅದಕ್ಕೆ ಆಕೆಯ ಉತ್ತರವು ಹೀಗಿದೆ. "ಎಲೈ ಪ್ರಿಯನೇ, ನನ್ನ ಮಾರ್ದವವು ನಿನ್ನೊಡನೆ ಹೊರಡಲಿ ಕ್ಕಾಗಿಯೇ ಅನುಕೂಲವಾದ ಕಾರಣವೆನಿಸಿದೆ. ನಾನು ಮೃದುವಾದ್ದರಿಂದಲೇ ನಿನ್ನ ವಿರಹದಿಂದ ಉಂಟಾದ ನಿರತಿಶಯವಾದ ಕಷ್ಟವನ್ನು ಸಹಿಸಲಿಕ್ಕೆ ಆಗದಂತಾಗಿದೆ. ಆದ್ದರಿಂದ ನಾನು ನಿನ್ನೊಡನೆ ಹೊರಡುವುದೇ ಉತ್ತಮ" ಇಲ್ಲಿ ನಾಯಕನು ನಾಯಿ ಕೆಯ ಮಾರ್ದವವನ್ನು ತನ್ನ ಜೊತೆಯಲ್ಲಿ ಹೊರಡದೇ ಇರಲಿಕ್ಕೆ ಕಾರಣವೆಂದು ತಿಳಿಸಿ ದ್ದಾನೆ. ನಾಯಿಕೆಯಾದರೋ ಅವನ ಜೊತೆಯಲ್ಲಿ ತಾನು ಹೊರಡಲು ಆ ಮಾರ್ದವ ವನ್ನೇ ಅನುಕೂಲವಾದ ಕಾರಣವೆಂದು ತಿಳಿಸುತ್ತಾಳೆ.

ಮುಂದು ಮುಂದಿನ ಕಾರ್ಯಕ್ಕೆ ಹಿಂದು ಹಿಂದಿನದನ್ನು ಕಾರಣವೆಂದು ತಿಳಿಸು ವುದೇ ಕಾರಣಮಾಲೆ ಎನಿಸುವುದು. ಇಲ್ಲಿ ಕಾರ್ಯಗಳ ಮಾಲೆಯು ಇದ್ದರೂ ಸಹ ಅದಕ್ಕಿಂತಲೂ ಕಾರಣಗಳ ಮಾಲೆಯಲ್ಲಿಯೇ ಹೆಚ್ಚಿನ ಚಮತ್ಕಾರವಿರುವುದರಿಂದ ಪ್ರಾಚೀನಪರಂಪರೆಯನ್ನು ಅವಲಂಬಿಸಿ ಅಲಂಕಾರವನ್ನು ಕಾರಣಮಾಲೆ ಎಂದೇ ಕರೆಯಲಾಗಿದೆ. "ಬುದ್ಧಿ ಸಂಸ್ಕಾರವುಳ್ಳವರ ಸಂಗದಿಂದ ಶಾಸ್ತ್ರಜ್ಞಾನವು ಹುಟ್ಟುತ್ತದೆ. ಶಾಸ್ತ್ರಜ್ಞಾನದಿಂದ ವಿನಯವು ದೊರಕುತ್ತದೆ. ವಿನಯದಿಂದ ಜನರ ಅನುರಾಗವು ದೊರಕುವುದು. ಲೋಕಾನುರಾಗದಿಂದ ಏನು ತಾನೆ ಆಗಲಾರದು? ಎಲ್ಲವೂ ದೊರಕುವುದು." ಇಲ್ಲಿ ವಿನಯ ಮೊದಲಾದ ಮುಂದು ಮುಂದಿನದಕ್ಕೆ ಹಿಂದು ಹಿಂದೆ ತಿಳಿಸಿರುವ ಶಾಸ್ತ್ರಜ್ಞಾನ ಮೊದಲಾದವು ಹೇತುವೆನಿಸಿವೆ. ಆದ್ದರಿಂದ ಇದು ಕಾರಣಮಾಲೆ ಎನಿಸಿದೆ.

ಅನೇಕ ಧರ್ಮಗಳಿಗೆ ಒಂದು ಗುಣದಿಂದಲೋ ಅಥವಾ ಕ್ರಿಯೆಯಿಂದಲೋ ಮುಂದು ಮುಂದೆ ಸಂಬಂಧವನ್ನು ಏರ್ಪಡಿಸುವುದು ಮಾಲಾದೀಪಕವೆಂಬ ಅಲಂಕಾರ ವೆನಿಸುವುದು. ಅನೇಕ ಧರ್ಮಿಗಳಿಗೆ ಕ್ರಿಯೆ ಎಂಬ ಒಂದೇ ಧರ್ಮದ ಸಂಬಂಧವನ್ನು ಉದಾಹರಿಸುತ್ತಾನೆ. "ಎಲೈ ರಾಜನೇ, ನೀನು ಯುದ್ಧಕ್ಕೆ ಹೋದರೆ ನಿನ್ನ ಧನುಸ್ಸಿಗೆ ಬಾಣವೂ, ಆ ಬಾಣಕ್ಕೆ ಶತ್ರುವಿನ ಶಿರಸ್ಸೂ, ಆ ಶಿರಸ್ಸಿಗೆ ಭೂಮಿಯೂ, ಆ ಭೂಮಿಗೆ ನೀನೂ, ನಿನಗೆ ಕೀರ್ತಿಯೂ ಅಂಟಿಕೊಳ್ಳುತ್ತವೆ." ಇಲ್ಲಿ ಸಾಧನಕ್ರಿಯೆಯೇ ಧರ್ಮ ವೆನಿಸಿದೆ. ಅದು ಇಲ್ಲಿ ಬಾಣ ಮೊದಲಾದವುಗಳೊಡನೆ ಮುಂದು ಮುಂದೆ ಸಂಬಂಧ ಪಡುವುದರಿಂದ ಇದು ಮಾಲಾದೀಪಕವೆನಿಸುವುದು.

ಹಿಂದು ಹಿಂದಿನದಕ್ಕೆ ಮುಂದುಮುಂದಿನದನ್ನು ವಿಶೇಷಣವಾದ ತಿಳಿಸುವುದಾಗಲೀ ಅಥವಾ ನಿಷೇಧಿಸುವುದಾಗಲೀ ಏಕಾವಳಿ ಎನಿಸುವುದು. ಇಲ್ಲಿ ವಿಶೇಷಣವು ಸಮಾನಾಧಿ ಕರಣವೂ ವ್ಯಧಿಕರಣವೂ ಆಗಿರುವುದಾಗಿ ತಿಳಿಯಬೇಕು. ವಿಶೇಷಣಗಳನ್ನು ಮುಂದು ಮುಂದೆ ತಿಳಿಸುವುದಕ್ಕೆ ಉದಾಹರಣವು ಹೀಗಿದೆ. ಶರತ್ಕಾಲದವರ್ಣನವಿದು. "ಸರೋ ವರದಲ್ಲಿ ಆಗ ಕಮಲಗಳು ಅರಳಿರುತ್ತವೆ. ಕಮಲದಲ್ಲಿ ದುಂಬಿಗಳು ತುಂಬಿರುತ್ತವೆ. ಆ ದುಂಬಿಗಳು ಗಾನಮಾಡುತ್ತಿರುವುವು. ಆ ಸಂಗೀತವು ಕಾಮವಿಕಾರವನ್ನು ಹುಟ್ಟಿಸು ತ್ತಿರುವುದು " ಇಲ್ಲಿ ಸರಸ್ಸು ಮೊದಲಾದ ಹಿಂದು ಹಿಂದಿನ ವಿಶೇಷ್ಯಗಳಿಗೆ ಕಮಲ ಮೊದಲಾದ ವಿಶೇಷಣಗಳನ್ನು ಮುಂದು ಮುಂದೆ ತಿಳಿಸಿರುವುದರಿಂದ ಇದು ಏಕಾವಳಿ ಎನಿಸಿದೆ. ವಿಶೇಷಣಗಳನ್ನು ಮುಂದು ಮುಂದೆ ನಿಷೇಧಿಸುವುದಕ್ಕೆ ಭಟ್ಟಿಕಾವ್ಯದ ಈ ಪದ್ಯದಲ್ಲಿ ಉದಾಹರಣವು ಹೀಗಿದೆ. "ಎಲ್ಲಿ ಸುಂದರವಾದ ಕಮಲವಿಲ್ಲವೋ ಅಂತಹದು ನೀರೇ ಅಲ್ಲ. ಮಧುಪಾನಕ್ಕಾಗಿ ದುಂಬಿಗಳು ಅಡಗಿಲ್ಲದಿರುವಂತಹದು ಕಮಲವೇ ಅಲ್ಲ. ಮನೋಹರವಾಗಿ ಶಬ್ದವನ್ನು ಮಾಡದೇ ಇರುವುದು ದುಂಬಿಯೇ ಅಲ್ಲ. ಮನ ಸ್ಸನ್ನು ಅಪಹರಿಸದೇ ಇರುವಂತಹದು ಶಬ್ದವೇ ಅಲ್ಲ" ಇಲ್ಲಿ ಹಿಂದು ಹಿಂದೆ ತಿಳಿಸಿರುವ ನೀರು ಮೊದಲಾದ ವಿಶೇಷ್ಯಕ್ಕೆ ವಿಶೇಷಣವನ್ನಾಗಿ ಕಮಲ ಮೊದಲಾದವನ್ನು ಮುಂದೆ

ಮುಂದೆ ನಿಷೇಧಿಸಿರುವುದರಿಂದ ಇದೂ ಸಹ ಏಕಾವಳಿಯೇ ಆಗಿದೆ. ಕೆಲವು ಕಡೆ ವಿಶೇಷಣದಂತೆ ವಿಶೇಷ್ಯವನ್ನೂ ಸಹ ತಿಳಿಸುವುದಾದರೂ ಅಥವಾ ನಿಷೇಧಿಸುವುದಾದರೂ ಅದೂ ಏಕಾವಳಿಯೇ ಆಗುವುದು. ಹಿಂದಿನ ಏಕಾವಳಿಯಲ್ಲಿ ಮುಂದು ಮುಂದಿನ ವಿಶೇಷ್ಯವು ಹಿಂದು ಹಿಂದಿನ ವಿಶೇಷ್ಯಕ್ಕೆ ವಿಶೇಷಣವಾಗಿರುವುದು. ಇಲ್ಲಿಯಾದರೋ ಹಿಂದು ಹಿಂದಿನ ವಿಶೇಷ್ಯವು ಮುಂದು ಮುಂದಿನ ವಿಶೇಷ್ಯಕ್ಕೆ ವಿಶೇಷಣವಾಗಿರುವುದು. ಆದ್ದರಿಂದ ಇವೆರಡಕ್ಕೂ ಪೂರ್ತಿ ವೈಪರೀತ್ಯವಿರುತ್ತದೆ. ಹಿಂದು ಹಿಂದಿನ ವಿಶೇಷ್ಯವನ್ನು ಮುಂದು ಮುಂದಿನ ವಿಶೇಷ್ಯಕ್ಕೆ ವಿಶೇಷಣವಾಗಿ ತಿಳಿಸುವುದಕ್ಕೆ ಶರದ್ವರ್ಣನೆಯ ಈ ಪದ್ಯವು ಉದಾಹರಣವಾಗುತ್ತದೆ. "ಈ ಶರತ್ಕಾಲದಲ್ಲಿ ಬಾವಿಗಳು ನಿರ್ಮಲವಾಗುತ್ತವೆ. ಆ ಬಾವಿಗಳಲ್ಲಿ ಕಮಲಗಳು ಅರಳುತ್ತವೆ. ಆ ಕಮಲಗಳಲ್ಲಿ ದುಂಬಿಗಳು ಬಂದು ಬೀಳುತ್ತವೆ. ಆ ದುಂಬಿಗಳಲ್ಲಿ ಸಂಗೀತವು ನೆಲೆಸುತ್ತದೆ." ಇಲ್ಲಿ ಬಾವಿ ಮೊದಲಾದವು ಮೊದಲು ವಿಶೇಷ್ಯವಾಗಿವೆ. ಅದನ್ನು ಮುಂದಿನ ಕಮಲ ಮೊದಲಾದ ವಿಶೇಷ್ಯಗಳಿಗೆ ವಿಶೇಷಣಗಳನ್ನಾಗಿ ಕೊಡಲಾಗಿದೆ. ಹೀಗೆಯೇ ಹಿಂದಿನ ವಿಶೇಷ್ಯಗಳನ್ನು ಮುಂದಿನ ವಿಶೇಷ್ಯಗಳಿಗೆ ವಿಶೇಷಣಗಳಾಗಿ ಕೊಡದೇ ನಿಷೇದಿಸಿರುವುದಕ್ಕೆ ಉದಾಹರಣಗಳನ್ನು ಊಹಿಸಿಕೊಳ್ಳುವುದು.

ಜಲೇ ಜಲೇಽಸ್ತಿ ನೋ ಪದ್ಮಂ ಪದ್ಮೇ ನ ಚಾಪ್ಯಲೀ ।
ಅಲಿನ್ಯಲಿನಿ ನೋ ಗೀತಂ ಗೀತೇ ಗೀತೇ ನ ಮಾಧುರೀ ॥

ಇಲ್ಲಿ ಪದ್ಮ ಮೊದಲಾದವು ಮೊದಮೊದಲು ವಿಶೇಷ್ಯವಾಗಿವೆ. ಅವನ್ನು ಮುಂದು ಮುಂದಿನ ದುಂಬಿ ಮೊದಲಾದ ವಿಶೇಷ್ಯಗಳಿಗೆ ವಿಶೇಷಣವನ್ನಾಗಿ ಕೊಡದೆಯೇ ಅವನ್ನು ನಿಷೇಧಿಸಲಾಗಿದೆ.

ವಿಶೇಷ್ಯ ವಸ್ತುವನ್ನು ಹಿಂದಿನದಕ್ಕಿಂತ ಮುಂದು ಮುಂದೆ ಕ್ರಮವಾಗಿ ಉತ್ತಮವೆಂದು ತಿಳಿಸುವುದು ಸಾರಾಲಂಕಾರವೆನಿಸುವುದು. "ರಾಜ್ಯದಲ್ಲಿ ಭೂಮಿಯೇ ಶ್ರೇಷ್ಠವಾದ ವಸ್ತು. ಆ ಭೂಮಿಯಲ್ಲಿ ನಗರವೂ, ಆ ನಗರದಲ್ಲಿ ಉಪ್ಪರಿಗೆಮನೆಯೂ, ಅದರಲ್ಲೂ ಕಾಮದೇವನ ಪ್ರಾಣವೆನಿಸಿದ ಉತ್ತಮಸ್ತ್ರೀಯೂ ಶ್ರೇಷ್ಠರೆನಿಸಿರುವರು." ಇಲ್ಲಿ ಭೂಮಿ ಮೊದಲಾದುವನ್ನು ಮುಂದೆ ಮುಂದೆ ಉತ್ಕೃಷ್ಟವೆಂದು ತಿಳಿಸಿದ್ದರಿಂದ ಇದು ಸಾರಾಲಂಕಾರವೆನಿಸಿದೆ.

ಯಥಾಸಂಖ್ಯಮನುದ್ದೇಶಃ ಉದ್ದಿಷ್ಟಾನಾಂ ಕ್ರಮೇಣ ಯತ್ ।
ಯಥಾ—ಉನ್ಮಿಲಂತಿ ನಖೈರ್ಲುನೀಹಿ ವಹತಿ ಕ್ಷೌಮಾಂಚಲೇನಾವೃಣು ।
ಕ್ರೀಡಾಕಾನನಮಾವಿಶಂತಿ ವಲಯಕ್ವಾಣೈಃ ಸಮುತ್ತ್ರಾಸಯ ॥
ಇತ್ಥಂ ವಂಜುಲದಕ್ಷಿಣಾನಿಲಕುಹೂಕಂಠೇಷು ಸಾಂಕೇತಿಕ
ವ್ಯಾಹಾರಾಃ ಸುಭಗ ! ತ್ವದೀಯವಿರಹೇ ತಸ್ಯಾಃ ಸಖೀನಾಂ ಕ್ರಮಾತ್ ॥
ಕ್ವಚಿದೇಕಮನೇಕಸ್ಮಿನ್ನನೇಕಂ ಚೈಕಗಂ ಕ್ರಮಾತ್ ।

ಭವತಿ ಕ್ರಿಯತೇ ವಾ ಚೇತ್ತದಾ ಪರ್ಯಾಯ ಇಷ್ಯತೇ ॥ ಕ್ರಮೇಣ ಯಥಾ
ಸ್ಥಿತಾಃ ಕ್ಷಣಂ ಪಕ್ಷ್ಮಸು ತಾಡಿತಾಧರಾಃ ಪಯೋಧರೋತ್ಸೇಧನಿಪಾತಚೂರ್ಣಿತಾಃ!
ವಲೀಷು ತಸ್ಯಾಃ ಸ್ಖಲಿತಾಃ ಪ್ರಪೇದಿರೇ ಚಿರೇಣ ನಾಭಿಂ ಪ್ರಥಮೋದಬಿಂದವಃ॥
ವಿಚರಂತಿ ವಿಲಾಸಿನ್ಯೋ ಯತ್ರ ಶ್ರೋಣಿಭರಾಲಸಾಃ ।
ವೃಕಕಾಕಶಿವಾಸ್ತತ್ರ ಧಾವಂತ್ಯರಿಪುರೇ ತವ ॥
ವಿಸೃಷ್ಟರಾಗಾದಧರಾನ್ನಿವರ್ತಿತಃ ಸ್ತನಾಂಗರಾಗಾದರುಣಾಚ್ಚ ಕಂದುಕಾತ್ ।
ಕುಶಾಂಕುರಾದಾನಪರಿಕ್ಷತಾಂಗುಲಿಃ ಕೃತೋಽಕ್ಷಸೂತ್ರಪ್ರಣಯೀ ತಯೋಃ ಕರಃ॥
ಯಯೋರಾರೋಪಿತಸ್ತಾರೋ ಹಾರಸ್ತೇಽರಿವಧೂಜನೈಃ ।
ನಿಧೀಯಂತೇ ತಯೋಃ ಸ್ಥೂಲಾಃ ಸ್ತನಯೋರಶ್ರುಬಿಂದವಃ ॥
ಏಷು ಚ ಕ್ವಚಿದಾಧಾರಃ ಸಂಹತರೂಪಃ ಅಸಂಹತರೂಪಶ್ಚ. ಕ್ವಚಿದಾಧೇಯ
ಮಪಿ ಯಥಾ 'ಸ್ಥಿತಾಃ ಕ್ಷಣಂ' ಇತ್ಯತ್ರ ಉದಬಿಂದವಃ ಪಕ್ಷ್ಮಾದಾವಸಂಹತರೂಪೇ
ಆಧಾರೇ ಕ್ರಮೇಣ ಅಭವನ್. 'ವಿಚರಂತಿ' ಇತ್ಯತ್ರ ಆಧೇಯಭೂತಾ ವೃಕಾದಯಃ
ಸಂಹತರೂಪಾಃ ಅರಿಪುರೇ ಕ್ರಮೇಣ ಅಭವನ್-ಏವಮನ್ಯತ್.

ಅತ್ರ ಚ ಏಕಸ್ಯಾನೇಕತ್ರ ಕ್ರಮೇಣೈವ ವೃತ್ತೇರ್ವಿಶೇಷಾಲಂಕಾರಾದ್ಭೇದಃ,
ವಿನಿಮಯಾಭಾವಾತ್ ಪರಿವೃತ್ತೇಃ.

ಪರಿವೃತ್ತಿರ್ವಿನಿಮಯಃ ಸಮನ್ಯೂನಾಧಿಕೈರ್ಭವೇತ್ ।
ಕ್ರಮೇಣೋದಾಹರಣಮ್-ದತ್ತ್ವಾ ಕಟಾಕ್ಷಮೇಣಾಕ್ಷೀ ಜಗ್ರಾಹ ಹೃದಯಂ ಮಮ।
ಮಯಾ ತು ಹೃದಯಂ ದತ್ತ್ವಾ ಗೃಹೀತೋ ಮದನಜ್ವರಃ ॥
ಅತ್ರ ಪ್ರಥಮೇಽರ್ಧೇ ಸಮೇನ, ದ್ವಿತೀಯೇಽರ್ಧೇ ನ್ಯೂನೇನ.
ತಸ್ಯ ಚ ಪ್ರವಯಸೋ ಜಟಾಯುಷಃ ಸ್ವರ್ಗಿಣಃ ಕಿಮಿವ ಶೋಚ್ಯತೇಽಧುನಾ?
ಯೇನ ಜರ್ಜರಕಲೇವರವ್ಯಯಾತ್ ಕ್ರೀತಮಿಂದುಕಿರಣೋಜ್ಜ್ವಲಂ ಯಶಃ ॥
ಅತ್ರಾಧಿಕ್ಯೇನ—ಪ್ರಶ್ನಾದಪ್ರಶ್ನತೋ ವಾಪಿ ಕಥಿತಾದ್ವಸ್ತುನೋ ಭವೇತ್ ।
ತಾದೃಗನ್ಯವ್ಯಪೋಹಶ್ಚೇಚ್ಛಾಬ್ದ ಆರ್ಥೋಽಥವಾ ತದಾ ॥
ಪರಿಸಂಖ್ಯಾ ಉತ್ತರಂ ಪ್ರಶ್ನಸ್ಯೋತ್ತರಾದುನ್ನಯೋ ಯದಿ ।
ಯಚ್ಚಾಸಕೃದಸಂಭಾವ್ಯಂ ಸತ್ಯಪಿ ಪ್ರಶ್ನ ಉತ್ತರಮ್ ॥
ಕ್ರಮೇಣೋದಾಹರಣಮ್-ಕಿಂ ಭೂಷಣಂ ಸುದೃಢಮತ್ರ ? ಯಶೋ ನ ರತ್ನಮ್ ।
ಕಿಂ ಕಾರ್ಯಮಾರ್ಯಚರಿತಮ್ ? ಸುಕೃತಂ ನ ದೋಷಃ ॥
ಕಿಂ ಚಕ್ಷುರಪ್ರತಿಹತಮ್ ? ಧಿಷಣಾ ನ ನೇತ್ರಂ ।
ಜಾನಾತಿ ಕಸ್ತ್ವದಪರಃ ಸದಸದ್ವಿವೇಕಮ್?॥
ಅತ್ರ ವ್ಯವಚ್ಛೇದ್ಯಂ ರತ್ನಾದಿ ಶಾಬ್ದಮ್.
ಕಿಮಾರಬ್ಧಂ ಸದಾ ಪುಣ್ಯಂ ಕಶ್ಚ ಸೇವ್ಯಃ ಸದಾಗಮಃ ।
ಕೋ ಧ್ಯೇಯೋ ಭಗವಾನ್ವಿಷ್ಣುಃ ಕಿಂ ಕಾಮ್ಯಂ ಪರಮಂ ಪದಮ್ ॥

ಅತ್ರ ವ್ಯವಚ್ಛೇದ್ಯಂ ಪಾಪಾದಿ ಆರ್ಥಮ್. ಅನಯೋಃ ಪ್ರಶ್ನಪೂರ್ವಕತ್ವಮ್. ಅಪ್ರಶ್ನಪೂರ್ವಕತ್ವೇ ಯಥಾ—

ಭಕ್ತಿರ್ಭವೇ ನ ವಿಭವೇ ವ್ಯಸನಂ ನ ಯುವತಿಕಾಮಾಸ್ತ್ರೇ ।
ಚಿಂತಾ ಯಶಸಿ ನ ವಪುಷಿ ಪ್ರಾಯಃ ಪರಿದೃಶ್ಯತೇ ಮಹತಾಮ್ ॥
ಬಲಮಾರ್ತಭಯೋಪಶಾಂತಯೇ ವಿದುಷಾಂ ಸಮ್ಮತಯೇ ಬಹು ಶ್ರುತಮ್।
ವಸು ತಸ್ಯ ನ ಕೇವಲಂ ವಿಭೋರ್ಗುಣವತ್ತಾಪಿ ಪರಪ್ರಯೋಜನಮ್ ॥

ಶ್ಲೇಷಮೂಲತ್ವೇ ಚಾಸ್ಯ ವೈಚಿತ್ರ್ಯವಿಶೇಷೋ ಯಥಾ–'ಯಸ್ಮಿಂಶ್ಚ ರಾಜನಿ ಜಿತಜಗತಿ ಪಾಲಯತಿ ಮಹೀಂ ಚಿತ್ರಕರ್ಮಸು ವರ್ಣಸಂಕರಾಃ, ಚಾಪೇಷು ಗುಣಚ್ಛೇದಾಃ' ಇತ್ಯಾದಿ.

ಉತ್ತರಂ ಯಥಾ—ವೀಕ್ಷಿತುಂ ನ ಕ್ಷಮಾ ಶ್ವಶ್ರೂಃ ಸ್ವಾಮಿಾ ದೂರತಂ ಗತಃ ।
ಅಹಮೇಕಾಕಿನೀ ಬಾಲಾ ತವೇಹ ವಸತಿಃ ಕುತಃ ? ॥

ಅನೇನ ಪಥಿಕಸ್ಯ ವಸತಿಯಾಚನಂ ಪ್ರತೀಯತೇ.

ಕಾ ವಿಷಮಾ ? ದೈವಗತಿಃ. ಕಿಂ ಲಬ್ಧವ್ಯಮ್ ? ಜನೋ ಗುಣಗ್ರಾಹೀ ।
ಕಿಂ ಸೌಖ್ಯಮ್? ಸುಕಳತ್ರಮ್. ಕಿಂ ದುರ್ಗ್ರಾಹ್ಯಮ್ ? ಖಲೋ ಲೋಕಃ ॥

ಅತ್ರ ಅನ್ಯವ್ಯಪೋಹೇ ತಾತ್ಪರ್ಯಾಭಾವಾತ್ ಪರಿಸಂಖ್ಯಾತೋ ಭೇದಃ. ನ ಚೇದಮನುಮಾನಮ್, ಸಾಧ್ಯಸಾಧನಯೋರ್ದ್ವಯೋರ್ನಿರ್ದೇಶ ಏವ ತಸ್ಯಾಂಗೀಕಾರಾತ್. ನ ಚ ಕಾವ್ಯಲಿಂಗಂ ಉತ್ತರಸ್ಯ ಪ್ರಶ್ನಂ ಪ್ರತ್ಯಜನಕತ್ವಾತ್.

ಉದ್ದೇಶಕ್ರಮದಂತೆ ಮೊದಲು ತಿಳಿಸಿದ ಅಂಶಗಳಿಗೆ ಅನುಗುಣವಾದವನ್ನು ಅದೇ ಕ್ರಮದಲ್ಲಿ ತಿಳಿಸುವುದೇ ಯಥಾಸಂಖ್ಯವೆಂಬ ಅಲಂಕಾರವೆನಿಸುವುದು. ಕ್ರಮವಾಗಿ ಕೆಲವು ಅಂಶಗಳನ್ನು ತಿಳಿಸಿರುವಾಗ ಅದೇ ಕ್ರಮದಲ್ಲಿ ಅವಕ್ಕೆ ಸಂಬಂಧಿಸಿದುವನ್ನು ತಿಳಿಸುವುದೇ ಯಥಾಸಂಖ್ಯವೆನಿಸುತ್ತದೆ. ಪ್ರವಾಸಕ್ಕೆ ಹೊರಡುವಾಗ ನಾಯಕನಿಗೆ ನಾಯಿಕೆಯ ದೂತಿಯು ಹೇಳುವ ಮಾತಿದು. "ಎಲೈ ಪುಣ್ಯಾತ್ಮನೇ, ನಿನ್ನ ವಿರಹಕಾಲದಲ್ಲಿ ಸಖಿಯರಿಗೆ ಪರಸ್ಪರವಾಗಿ ಅಶೋಕವೃಕ್ಷದ ಚಿಗುರು, ಮಂದ ಮಾರುತ, ಕೋಗಿಲೆ ಇವುಗಳು ಹೆಸರಿಗೆ ಮಾತ್ರವೇ ಇದ್ದು ನಿರರ್ಥಕವೆನಿಸುತ್ತವೆ." ಹೀಗೆ ಒಬ್ಬಳು ಹೇಳಲು ಮತ್ತೊಬ್ಬಳು 'ಉಗುರಿನಿಂದ ಆ ಅಶೋಕವೃಕ್ಷದ ಮೊಗ್ಗುಗಳನ್ನು ಜಿಗುಟು; ಅವನ್ನು ಆಕೆಯು ನೋಡದೇ ಇರಲಿ. ಆದರೆ ಮಂದಮಾರುತವು ಬೀಸುತ್ತಿದೆ' ಹೀಗೆ ಹೇಳುವಳು. ಆಗ ಮತ್ತೊಬ್ಬಳು 'ಬಟ್ಟೆಯ ಚುೂನಿಂದ ಆ ಮಂದಮಾರುತವನ್ನು ತಡೆದುಕೋ. ಅದು ಆಕೆಯನ್ನು ಮುಟ್ಟದಿರಲಿ. ಆದರೆ ಕೋಗಿಲೆಗಳು ಉದ್ಯಾನವನಕ್ಕೆ ಬರುತ್ತವೆ.' ಹೀಗೆ ಹೇಳುವಳು. ಆಗ ಮತ್ತೊಬ್ಬಳು 'ಕೈಕಡಗಗಳ ಶಬ್ದಗಳಿಂದ ಆ ಕೋಗಿಲೆಗಳನ್ನು ಬೆದರಿಸಿ ಓಡಿಸು. ಅವು ಶಬ್ದವನ್ನು ಮಾಡದೇ ಇರಲಿ' ಎಂದು ಹೇಳುವಳು." ಹೀಗೆ ಅಶೋಕವೃಕ್ಷದ ಚಿಗುರು ಮೊದಲಾದವುಗಳ ಹೆಸರನ್ನು ಉಚ್ಚರಿ

ಸಿದರೂ ನಾಯಿಕೆಗೆ ಕಾಮಪೀಡೆಯುಂಟಾಗುತ್ತಲಿದೆ. ಆದ್ದರಿಂದ ಅವು ಕೇವಲ ಹೆಸರಿಗೆ ಮಾತ್ರವೇ ಇರುವಂತವು. ಇಲ್ಲಿ ಉನ್ಮೀಲಂತಿ ಮೊದಲಾದವನ್ನು ಉದ್ದೇಶಿಸಿರುವ ಕ್ರಮ ದಲ್ಲಿಯೇ ಅವಕ್ಕೆ ಸಂಬಂಧಿಸಿದ 'ಲುನೀಹಿ' ಮೊದಲಾದವನ್ನು ತಿಳಿಸಿರುವುದರಿಂದ ಇದು ಯಥಾಸಂಖ್ಯಾಲಂಕಾರವೆನಿಸಿದೆ.

ಕೆಲವು ಕಡೆ ಒಂದೇ ವಸ್ತು ಕ್ರಮವಾಗಿ ಅನೇಕ ಸ್ಥಾನಗಳಲ್ಲಿ ತಾನಾಗಿಯೇ ಇರುವುದಾದರೂ ಅಥವಾ ಬೇರೊಂದರಿಂದ ಇರುವುದಾಗಿ ವ್ಯವಸ್ಥೆಯಾದರೂ, ಕೆಲವುಕಡೆ ಅನೇಕ ವಸ್ತುಗಳು ಕ್ರಮವಾಗಿ ಒಂದೇ ಸ್ಥಾನದಲ್ಲಿ ತಾವಾಗಿಯೇ ಇರುವುದಾದರೂ ಅಥವಾ ಬೇರೊಂದರಿಂದ ಇರುವುದಾಗಿ ಏರ್ಪಟ್ಟರೂ ಆಗ ಅದು ಪರ್ಯಾಯಾಲಂಕಾರ ವೆನಿಸುವುದು. ಆದ್ದರಿಂದಲೇ ಇದರಲ್ಲಿ ನಾಲ್ಕು ಬಗೆಗಳಾಗುತ್ತವೆ. ಒಂದೇ ವಸ್ತು ಅನೇಕ ಸ್ಥಾನಗಳಲ್ಲಿ ತಾನಾಗಿಯೇ ಇರುವುದಕ್ಕೆ ಉದಾಹರಣವು ಹೀಗಿದೆ. "ಮೊದಲು ಬಿದ್ದ ಮಳೆಯ ನೀರಿನ ಹನಿಗಳು ಆ ಪಾರ್ವತಿಯ ಕಣ್ಣಿನ ರೆಪ್ಪೆಗಳಲ್ಲಿ ಬಂದು ಕ್ಷಣ ಕಾಲವಿದ್ದು ಅಲ್ಲಿಂದ ಬೀಳುವಾಗ ತುಟಿಗೆ ತಗಲಿ ಆಮೇಲೆ ಸ್ತನಗಳ ಮೇಲೆ ಬಿದ್ದದ್ದ ರಿಂದ ಪುಡಿಯಾಗಿ. ಅನಂತರ ಹೊಟ್ಟೆಯ ಮೇಲೆ ಇರುವ ಮೂರು ಗೆರೆಗಳಲ್ಲಿ ಬಿದ್ದು ಹೀಗೆ ಅನೇಕ ಅಡಚಣೆಗಳು ಇದ್ದುದರಿಂದ ಅವೆಲ್ಲವನ್ನು ಬಹಳ ಕ್ಲೇಶದಿಂದ ದಾಟಿ ಕೊಂಡು ಕೊನೆಗೆ ನಾಭಿಯನ್ನು ಪ್ರವೇಶಿಸಿದವು." ಇಲ್ಲಿ ರೆಪ್ಪೆಗಳು ಬಹಳ ದಪ್ಪನಾಗಿದ್ದ ವೆಂದೂ, ತುಟಿಯು ಕೋಮಲವಾಗಿತ್ತೆಂದೂ, ಸ್ತನಗಳು ಅತ್ಯಂತ ಕಠಿಣವಾಗಿದ್ದ ವೆಂದೂ, ತ್ರಿವಳಿಗಳು ತಗ್ಗು ಎತ್ತರಗಳಾಗಿದ್ದವೆಂದೂ ಸೂಚಿಸಲಾಗಿದೆ. ಇಲ್ಲಿ ನೀರಿನ ಬಿಂದುವೆಂಬ ಒಂದೇ ವಸ್ತುವು ಕ್ರಮವಾಗಿ ರೆಪ್ಪೆ ಮೊದಲಾದ ಸ್ಥಾನಗಳಲ್ಲಿ ತಾವಾ ಗಿಯೇ ನೆಲಸಿದ್ದುವೆಂದು ತಿಳಿಸಿರುವುದರಿಂದ ಇದು ಪರ್ಯಾಯಾಲಂಕಾರವೆನಿಸಿದೆ.

ಅನೇಕವಸ್ತುಗಳು ತಾವಾಗಿಯೇ ಒಂದು ಸ್ಥಾನದಲ್ಲಿ ನೆಲಸಿರುವುದನ್ನು ಉದಾ ಹರಿಸುತ್ತಾನೆ. "ಎಲೈ ರಾಜನೇ, ನಿನ್ನ ಯಾವ ಶತ್ರುರಾಜ್ಯದಲ್ಲಿ ಕುಂಡಿಗಳ ಭಾರದಿಂದ ಸ್ತ್ರೀಯರು ಮೆಲ್ಲಗೆ ತಿರುಗಾಡುತ್ತಿದ್ದರೋ ಅಲ್ಲಿ ಈಗ ಹುಲಿ, ಕಾಗೆ, ನರಿ ಇವು ಓಡಾಡು ತ್ತಿವೆ. ನಿನ್ನ ಭಯದಿಂದ ಶತ್ರುಗಳು ಓಡಿಹೋಗಲು ಅವರ ನಗರವು ಅರಣ್ಯವಾಗಿ ಪರಿ ಣಮಿಸಿದೆ." ಇಲ್ಲಿ ಅನೇಕ ಬಗೆಯ ಶತ್ರುಸ್ತ್ರೀಯರೂ ಹುಲಿ, ಕಾಗೆ, ನರಿಗಳೂ ಒಂದೇ ಶತ್ರುನಗರದಲ್ಲಿ ಕ್ರಮವಾಗಿ ಇದ್ದುವೆಂದು ತಿಳಿಸಿರುವುದರಿಂದ ಇದು ಪರ್ಯಾಯ ವೆನಿಸಿದೆ. ಒಂದೇ ವಸ್ತುವನ್ನು ಅನೇಕ ಕಡೆಗಳಲ್ಲಿ ವಿನಿಯೋಗಿಸುವುದನ್ನು ಉದಾಹರಿ ಸುತ್ತಾನೆ. "ಅಲಕ್ತಕರಸವನ್ನು ಹಚ್ಚಿಕೊಳ್ಳದೇ ಇರುವ ತುಟಿಯಿಂದ ಕೆಳಕ್ಕೆ ಬಿದ್ದು ಸ್ತನಗಳಲ್ಲಿ ಕುಂಕುಮವೇ ಮೊದಲಾದ ಲೇಪನದ್ರವ್ಯವನ್ನು ಹಚ್ಚದೇ ಇದ್ದು, ಸಹಜ ವಾಗಿ ಕೆಂಪಗಿರುವ ಚೆಂಡನ್ನು ತೊರೆದಿರುವ ಈ ಹಸ್ತವು ಈಗ ದರ್ಭೆಯ ಚಿಗುರು ಗಳನ್ನು ಯಜ್ಞಕ್ಕಾಗಿ ತರುವುದರಿಂದ ಬೆರಳುಗಳಿಗೆ ನೋವನ್ನು ಕೊಡುತ್ತಲಿದ್ದು ಜಪ ಮಾಲೆಯನ್ನು ಹಿಡಿಯುವಂತಾಯಿತು." ಇಲ್ಲಿ ಒಂದೇ ಹಸ್ತವು ತುಟಿಯಲ್ಲಿ, ಸ್ತನ ಗಳಲ್ಲಿ, ಚೆಂಡಿನಲ್ಲಿ, ದರ್ಭೆಯ ಚಿಗುರಿನಲ್ಲಿ, ಜಪಮಾಲೆಯಲ್ಲಿ ಕ್ರಮವಾಗಿ ಪಳಗ

ಬೇಕಾಯಿತೆಂದು ತಿಳಿಸಿರುವುದರಿಂದ ಇದು ಪರ್ಯಾಯಾಲಂಕಾರವೆನಿಸಿದೆ. ಅನೇಕ ವಸ್ತುಗಳನ್ನು ಒಂದೇ ಕಡೆ ವಿನಿಯೋಗಿಸುವುದನ್ನು ಉದಾಹರಿಸುತ್ತಾನೆ. "ಎಲೈ ರಾಜನೇ, ನಿನ್ನ ಶತ್ರುಸ್ತ್ರೀಯರ ಯಾವ ಸ್ತನಗಳಲ್ಲಿ ಮುತ್ತಿನಹಾರವು ಜೋತಾಡು ತ್ತಿದ್ದಿತೋ ಆ ಸ್ತನಗಳಲ್ಲಿ ಈಗ ಕಣ್ಣೀರಿನ ಹನಿಗಳು ನೆಲಸಿವೆ. ನೀನೇ ಅವರ ಪತಿಯ ರನ್ನು ಕೊಂದಿರುವುದರಿಂದ ಹೀಗೆಲ್ಲಾ ಆಗಿದೆ." ಇಲ್ಲಿ ಅನೇಕವೆನಿಸಿದ ಮುತ್ತಿನಹಾರ ವನ್ನೂ ಕಣ್ಣೀರಿನ ಸಮೂಹವನ್ನೂ ಕ್ರಮವಾಗಿ ಒಂದೇ ಸ್ತನದಲ್ಲಿ ವಿನಿಯೋಗಮಾಡಿರು ವುದರಿಂದ ಇದು ಪರ್ಯಾಲಂಕಾರವೆನಿಸಿದೆ. 'ಸ್ಥಿತಾಃ ಕ್ಷಣಂ' ಎಂಬಲ್ಲಿ ನೀರಿನ ಹನಿಗಳು ಹೆಚ್ಚಾಗಿ ಬಿದ್ದುದರಿಂದಲೂ 'ವಿಚರಂತಿ' ಎಂಬಲ್ಲಿ ಉದ್ಯಾನ, ಜಲಾಶಯ ಮೊದಲಾದ ಭೇದದಿಂದ ಶತ್ರುನಗರವು ಅನೇಕವಾದ್ದರಿಂದಲೂ, ಸ್ತನಗಳು ಎರಡೇ ಇರುವುದ ರಿಂದಲೂ 'ಏಕಮೇಕಸ್ಮಿನ್ ಅನೇಕಂ ಚೈಕಗಂ' ಎಂಬ ಲಕ್ಷಣವು ಹೇಗೆ ಹೊಂದುತ್ತದೆ? ಎಂಬುದನ್ನು ತಿಳಿಸುತ್ತಾನೆ. ಇಲ್ಲಿ ಕೆಲವು ಕಡೆಗಳಲ್ಲಿ ಆಧಾರವು ಅನೇಕ ಬಗೆಯಾಗಿ ದ್ದರೂ ಒಟ್ಟಿಗೆ ಕೂಡಿರುವುದರಿಂದ ಒಂದೇ ಬಗೆ ಎಂದೂ, ಕೆಲವು ಕಡೆಗಳಲ್ಲಿ ಬೇರೆ ಬೇರೆಯಾಗಿರುವುದರಿಂದ ಅನೇಕ ಬಗೆ ಎಂದೂ ತಿಳಿಯಬೇಕು. ಆಧೇಯವೂ ಸಹ ಆಧಾರದಂತೆಯೇ ಒಟ್ಟಿಗೆ ಕೂಡಿಯೂ, ಬೇರೆ ಬೇರೆಯೂ ಆಗಿರುವುದು. ಎಲ್ಲಾ ಕಡೆ ಗಳಲ್ಲೂ ಈ ಬಗೆಯ ವಿವಕ್ಷೆಯಿಂದ ಲಕ್ಷಣವನ್ನು ಅನ್ವಯಿಸಬೇಕು. ಸ್ಥಿತಾಃ ಕ್ಷಣಮ್ ಎಂಬಲ್ಲಿ ನೀರಿನ ಹನಿಗಳು ಪರಸ್ಪರ ಕೂಡದೆ ಇರುವ ರೆಪ್ಪೆ ಮೊದಲಾದ ಆಧಾರಗಳಲ್ಲಿ ಕ್ರಮವಾಗಿ ಬಿದ್ದುದರಿಂದ ಆಧಾರಗಳು ಅನೇಕವೆಂದೂ, ಆಧೇಯವೆನಿಸಿದ ನೀರಿನ ಹನಿಗಳು ಒಟ್ಟಿಗೆ ಇದ್ದುದರಿಂದ ಒಂದೇಬಗೆ ಎಂದೂ ಸೂಚಿತವಾಗುತ್ತದೆ. ಆದ್ದರಿಂದ ಏಕಮನೇಕಸ್ಮಿನ್ ಎಂಬ ಲಕ್ಷಣವು ಇಲ್ಲಿ ಹೊಂದಿಕೆಯಾಗುತ್ತದೆ. ಹುಲಿ ಮೊದಲಾದವು ಅನೇಕವಾಗಿದ್ದುದರಿಂದಲೇ ಅವನ್ನುಅನೇಕವೆಂದು ತಿಳಿಸಿದೆ. ಒಟ್ಟಿಗೆ ಕೂಡಿರುವ ಶತ್ರು ನಗರದಲ್ಲಿ ಉದ್ಯಾನ, ಮಡುವು ಮೊದಲಾದವುಗಳಿಂದ ಭೇದವಿದ್ದರೂ ರಸ್ತೆ ಮೊದಲಾದ ವುಗಳಿಂದ ಒಟ್ಟಿಗೆ ಸೇರಿದ್ದರಿಂದಲೂ, ಅದು ಒಂದೇ ಬಗೆ ಎನಿಸಿದ್ದರಿಂದಲೂ ಅಲ್ಲಿಯೂ ಅನೇಕಂ ಚೈಕಗಂ ಎಂಬ ಲಕ್ಷಣವು ಹೊಂದಿಕೆಯಾಗುತ್ತದೆ. ಹೀಗೆಯೇ 'ಯಯೋಃ' ಎಂಬಲ್ಲಿ ಆಧೇಯವೆನಿಸಿದ ಕಣ್ಣೀರುಗಳು ಒಟ್ಟಿಗೆ ಕೂಡಿಲ್ಲದೇ ಇದ್ದುದರಿಂದ ಅನೇಕ ವಾಗಿದ್ದವು. ಆಧಾರವೆನಿಸಿದ ಸ್ತನಗಳು ಒಟ್ಟಿಗೆ ಸೇರಿಕೊಂಡಿದ್ದರಿಂದ ಒಂದೇ ಬಗೆ ಯಾಗಿದ್ದವು. ಆದ್ದರಿಂದ ಅಲ್ಲಿಯೂ ಲಕ್ಷಣವು ಹೊಂದಿಕೆಯಾಗುತ್ತದೆ. ಹಿಂದೆ 'ಏಕಂ ಚ ಅನೇಕಗೋಚರಂ' ಎಂಬ ಎರಡನೆಯ ಬಗೆಯ ವಿಶೇಷಾಲಂಕಾರಕ್ಕೂ, 'ಏಕಮನೇಕ ಸ್ಮಿನ್' ಎಂಬ ಮೊದಲನೆಯ ಬಗೆಯ ಪರ್ಯಾಯಾಲಂಕಾರಕ್ಕೂ ಭೇದವೇನೆಂಬುದನ್ನು ಇಲ್ಲಿ ತಿಳಿಸುತ್ತಾನೆ. ಪರ್ಯಾಯದಲ್ಲಿ ಒಂದೇ ವಸ್ತು ಅನೇಕ ಕಡೆಗಳಲ್ಲಿ ಕ್ರಮವಾಗಿ ನೆಲಸಿರುವುದರಿಂದ ಅದು ವಿಶೇಷಾಲಂಕಾರದಿಂದ ಬೇರೆ ಎನಿಸಿದೆ. ಇಲ್ಲಿ ಒಂದೇ ವಸ್ತು ಅನೇಕ ಕಡೆಗಳಲ್ಲಿ ಒಟ್ಟಿಗೆ ನೆಲಸಿರುವುದಾಗಿ ಏರ್ಪಡಿಸಲಾಗುವುದು. ಪರ್ಯಾಯಕ್ಕೂ ಪರಿವೃತ್ತ್ಯಲಂಕಾರಕ್ಕೂ ಭೇದವನ್ನು ಇಲ್ಲಿ ತಿಳಿಸುತ್ತಾನೆ. ಪರಿವೃತ್ತಿಯಲ್ಲಿ ಒಂದನು

ಕೊಟ್ಟು ಮತ್ತೊಂದನ್ನು ತೆಗೆದುಕೊಳ್ಳುವ ವಿನಿಮಯವಿರುತ್ತದೆ. ಇಂತಹ ವಿನಿಮಯವು ಪರ್ಯಾಯದಲ್ಲಿ ಇಲ್ಲದ್ದರಿಂದ ಇದು ಪರಿವೃತ್ತಿಗಿಂತ ಬೇರೆ ಎನಿಸಿದೆ.

ಇಲ್ಲಿ ಪರಿವೃತ್ತಿಯ ಪ್ರಸ್ತಾಪವು ಬಂದದ್ದರಿಂದ ಆ ಪರಿವೃತ್ತಿ ಎಂಬ ಅಲಂಕಾರವನ್ನು ವಿವೇಚನೆ ಮಾಡುತ್ತಾನೆ. ಕೊಂಚ ಭಾಗವನ್ನು ತೊರೆದು ಬೇರೊಂದು ಅಂಶವನ್ನು ಸ್ವೀಕರಿಸುವುದೇ ಪರಿವೃತ್ತಿ ಎನಿಸುವುದು. ಸಮವಾದ ವಸ್ತುವನ್ನು ಕೊಟ್ಟು ಸಮವಸ್ತುವನ್ನು ಪಡೆಯುವುದು ಒಂದು ಬಗೆ, ಹೆಚ್ಚು ಕೊಟ್ಟು ಸ್ವಲ್ಪವನ್ನು ಪಡೆಯುವುದು ಎರಡನೆಯ ಬಗೆ. ಕಡಮೆಯಾಗಿ ಕೊಟ್ಟು ಹೆಚ್ಚನ್ನು ಪಡೆಯುವುದು ಮೂರನೆಯ ಬಗೆ. ಇವನ್ನು ಕ್ರಮವಾಗಿ ಉದಾಹರಿಸುತ್ತಾನೆ. ಸಮವಸ್ತುವಿನೊಡನೆಯೂ ನ್ಯೂನವಸ್ತುವಿನೊಡನೆಯೂ ಆಗುವ ವಿನಿಮಯವನ್ನು ಉದಾಹರಿಸುತ್ತಾನೆ. ಒಬ್ಬ ಸುಂದರಿಯನ್ನು ನೋಡಿ ಬಂದು ಮಿತ್ರನ ಎದುರಿಗೆ ಒಬ್ಬನು ಹೇಳುತ್ತಾನೆ. "ಜಿಂಕೆಯಂತೆ ಕಣ್ಣುಗಳಿರುವ ಆ ನಾಯಿಕೆಯು ಓರೆನೋಟವನ್ನು ನೀಡುತ್ತಲೇ ನನ್ನ ಹೃದಯವನ್ನು ಪ್ರವೇಶಿಸಿದಳು. ನಾನಾದರೋ ಹೃದಯವನ್ನು ಕೊಟ್ಟು ಕಾಮಸಂತಾಪವನ್ನು ಪಡೆದೆನು." ಇಲ್ಲಿ ಪ್ರಥಮಾರ್ಧದಲ್ಲಿ ವಕ್ರದೃಷ್ಟಿ ಮತ್ತು ಹೃದಯಪ್ರವೇಶ ಇವೆರಡೂ ಸಹ ಇಂದ್ರಿಯಗಳ ವರ್ತನವೆನಿಸಿದ್ದರಿಂದ ಸಮಾನವೆನಿಸಿವೆ. ಆದ್ದರಿಂದ ಅಲ್ಲಿ ಸಮವಸ್ತುವನ್ನು ಕೊಟ್ಟು ಸಮವಸ್ತುವನ್ನು ಪಡೆಯಲಾಗಿದೆ. ದ್ವಿತೀಯಾರ್ಧದಲ್ಲಿ ಅಧಿಕವಸ್ತುವನ್ನು ಕೊಟ್ಟು ನ್ಯೂನವಸ್ತುವನ್ನು ಪಡೆಯಲಾಗಿದೆ. ಹೃದಯಪ್ರವೇಶಕ್ಕಿಂತಲೂ ಮದನಜ್ವರವು ದುಃಖಕರವಾದ್ದರಿಂದ ನ್ಯೂನವೆನಿಸಿದೆ. ಕೆಲವು ಕಡೆ ನ್ಯೂನವಸ್ತುವನ್ನು ಕೊಟ್ಟು ಅಧಿಕವಸ್ತುವನ್ನು ಪಡೆಯಲಾಗುವುದು. 'ಮುದಿ ಜಟಾಯುವು ಯುದ್ಧದಲ್ಲಿ ಹೋರಾಡಿ ಪ್ರಾಣವನ್ನು ತೆತ್ತು ಸ್ವರ್ಗದಲ್ಲಿರುವಾಗ ಅದಕ್ಕಾಗಿ ಏಕೆ ದುಃಖಿಸಬೇಕು? ಅವನು ಮುದಿ ಶರೀರವನ್ನು ತೊರೆದು ಚಂದ್ರಕಿರಣದಂತೆ ಪ್ರಜ್ವಲಿಸುವ ಯಶಸ್ಸನ್ನು ಸಂಪಾದಿಸಿದನು' ಇಲ್ಲಿ ತುಚ್ಛವಾದ ದೇಹವನ್ನು ಕೊಟ್ಟು ಅಧಿಕವಾದ ಯಶಸ್ಸನ್ನು ಪಡೆದನೆಂದು ಹೇಳುವುದರಿಂದ ಇದು ಪರಿವೃತ್ತ್ಯಲಂಕಾರವೆನಿಸುವುದು.

ಈಗ ಒಂದೇ ಮಾತಿನಲ್ಲಿ ಮತ್ತೊಂದು ಅರ್ಥವು ತೋರುವ ಪ್ರಕರಣವನ್ನು ಆರಂಭಿಸುತ್ತ ಅದರಲ್ಲಿ ಪ್ರಧಾನವೆನಿಸಿದ ಪರಿಸಂಖ್ಯಾಲಂಕಾರವನ್ನು ವಿವರಿಸುತ್ತಾನೆ. ಒಬ್ಬನಿಗೆ ಕೇಳಬೇಕೆಂಬ ಇಚ್ಛೆ ಇರಲಿ ಅಥವಾ ಇಲ್ಲದಿರಲಿ ಒಬ್ಬನು ಹೇಳಿದ ವಸ್ತುವಿನಿಂದ, ಶಬ್ದದಿಂದಾಗಲೀ ಅಥವಾ ಅರ್ಥದಿಂದಾಗಲೀ ಅದಕ್ಕೆ ಸದೃಶವಾದ ಮತ್ತೊಂದು ವಸ್ತುವನ್ನು ನಿಷೇಧಿಸುವುದಾದರೆ ಅದು ಪರಿಸಂಖ್ಯಾಲಂಕಾರವೆನಿಸುವುದು. ಪ್ರಶ್ನೆ ಮಾಡುವವನಿಗೆ ಶಬ್ದದಿಂದ ಒಂದು ವಸ್ತುವನ್ನು ನಿಷೇಧಿಸುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ಈ ಜಗತ್ತಿನಲ್ಲಿ ಬಹುಕಾಲ ಇರುವಂತಹ ಆಭರಣ ಯಾವುದು? ಹೀಗೆ ಒಬ್ಬನು ಪ್ರಶ್ನೆ ಮಾಡಲು 'ಯಶಸ್ಸೇ ಅಂತಹ ಒಡವೆ; ರತ್ನವಲ್ಲ. ಯಾಕೆಂದರೆ ಇದು ನಾಶವಾಗತಕ್ಕದ್ದು' ಎಂದು ಮತ್ತೊಬ್ಬನು ಉತ್ತರಿಸುವನು. 'ಸನ್ಮಾನ್ಯರು ಹೇಳಿರುವ

ಕಾರ್ಯವು ಯಾವುದು ?' ಎಂಬ ಪ್ರಶ್ನೆಗೆ 'ಪುಣ್ಯವೇ ಅಂತಹ ಕಾರ್ಯ; ಪಾಪವಲ್ಲ' ಎಂದು ಮತ್ತೊಬ್ಬನು ಹೇಳುವನು. "ಎಲ್ಲೆಡೆಯಲ್ಲೂ ವ್ಯಾಪಿಸುವ ಕಣ್ಣು ಯಾವುದು ?" ಎಂಬ ಪ್ರಶ್ನೆಗೆ ಬುದ್ಧಿಯೇ ಹೊರತು ಕಣ್ಣು ಅಲ್ಲ. ಯಾಕೆಂದರೆ ಇದಕ್ಕೆ ಗೋಡೆ ಮೊದಲಾದವುಗಳಿಂದ ತಡೆಯುಂಟಾಗುವುದು' ಎಂದು ಮತ್ತೊಬ್ಬನು ಉತ್ತರವನ್ನು ಕೊಡುವನು. ಈ ಸದುತ್ತರವನ್ನು ಕೇಳಿ ಪ್ರಶ್ನಕರ್ತನು ಉತ್ತರವನ್ನು ಹೇಳುವವನಿಗೆ ನಿನಗಿಂತ ಬೇರೆ ಯಾರು ಸತ್ಯ ಅಸತ್ಯಗಳ ಭೇದವನ್ನು ತಿಳಿಯಬಲ್ಲರು' ಎಂದು ಪ್ರಶಂಸಿಸುತ್ತಾನೆ. ಇಲ್ಲಿ ರತ್ನ ಮೊದಲಾದವನ್ನು ಶಬ್ದದಿಂದ ನಿಷೇಧಿಸಿ ಸೂಕ್ತವಾದ ಉತ್ತರವನ್ನು ,ಯಶಸ್ಸು' ಮೊದಲಾದ ಪದಗಳಲ್ಲಿ ತಿಳಿಸಲಾಗಿದೆ. ಪ್ರಶ್ನೆ ಮಾಡಿದ ಮೇಲೆ ಹೀಗೆ ಒಂದನ್ನು ನಿಷೇಧಿಸಿ ಯುಕ್ತವಾದ ಉತ್ತರವನ್ನು ಶಬ್ದದಿಂದಲೇ ತಿಳಿಸಿರುವ ಪ್ರಯುಕ್ತ ಇದು ಶಬ್ದಪರಿಸಂಖ್ಯೆ ಎನಿಸಿದೆ. ಈಗ ಅದೇ ಪರಿಸಂಖ್ಯೆಯನ್ನು ತಿಳಿಸುತ್ತಾನೆ. 'ಯಾವಾಗಲೂ ಯಾವ ಕೆಲಸವನ್ನು ಸಾಧಿಸಬೇಕು?' ಹೀಗೆ ಒಬ್ಬನು ಪ್ರಶ್ನೆಮಾಡಲು 'ಪುಣ್ಯವನ್ನೇ ಸಾಧಿಸಬೇಕು' ಎಂದು ಉತ್ತರವು ಬರುವುದು. 'ಇಲ್ಲಿ ಸಾಧಿಸಬೇಕಾದ್ದು ಪಾಪವಲ್ಲ' ಎಂಬುದು ಅರ್ಥದಿಂದ ತಿಳಿದು ಬರುತ್ತದೆ. 'ಯಾರನ್ನು ಆಶ್ರಯಿಸಬೇಕು? ಎಂಬ ಪ್ರಶ್ನೆಗೆ 'ಸಾಧುಶಾಸ್ತ್ರವನ್ನು ಆಶ್ರಯಿಸಬೇಕು' ಎಂದು ಉತ್ತರವು ಶಬ್ದದಿಂದ ಬಂದು 'ವಾತ್ಸ್ಯಾಯನಸೂತ್ರ ಮೊದಲಾದ ಕಾಮಶಾಸ್ತ್ರವನ್ನಾಶ್ರಯಿಸಬಾರದು' ಎಂಬ ನಿಷೇಧವು ಅರ್ಥದಿಂದ ತೋರುವುದು. 'ಧ್ಯಾನಿಸಬೇಕಾದ ವಸ್ತು ಯಾವುದು ?' ಎಂಬ ಪ್ರಶ್ನೆಗೆ 'ಪೂಜ್ಯವಿಷ್ಣುವೇ ಧ್ಯೇಯವೆನಿಸಿರುವನು' ಎಂದು ಉತ್ತರವು ಶಬ್ದದಿಂದ ಹೊರಟು 'ಹಣವಲ್ಲ' ಎಂಬುದು ಅರ್ಥದಿಂದ ತೋರುವುದು. 'ಜೀವನದಲ್ಲಿ ಬಯಸುವಂತಹ ವಸ್ತು ಯಾವುದು ?' ಎಂಬ ಪ್ರಶ್ನೆಗೆ ,ಉತ್ಕೃಷ್ಟವಾದ ನಿರ್ವಾಣ ಸ್ಥಾನವೇ ಅಂತಹದು' ಎಂಬ ಉತ್ತರವು ಹೊರಟು 'ರಾಜಪದವಿ ಮುಂತಾದ್ದಲ್ಲ" ಎಂಬ ನಿಷೇಧವು ಅರ್ಥದಿಂದ ತೋರುವುದು. ಇಲ್ಲಿ ಪಾಪ ಮೊದಲಾದುವನ್ನು ಅರ್ಥದಿಂದ ನಿಷೇಧಿಸಲಾಗಿದೆ. ಇಲ್ಲಿ ಹೇಳಿದ ಎರಡು ಉದಾಹರಣಗಳೂ ಪ್ರಶ್ನೆಮಾಡಿದವನಿಗೆ ಉತ್ತರವನ್ನು ತಿಳಿಸುವಂತವು. ಈಗ ಪ್ರಶ್ನೆಮಾಡದೆ ಇರುವವನಿಗೆ ಉತ್ತರವನ್ನು ಹೇಳುವಾಗ ಒಂದು ವಸ್ತುವನ್ನು ನಿಷೇಧಿಸುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ಸಾಮಾನ್ಯವಾಗಿ ಮಹಾತ್ಮರಿಗೆ ಮಹಾದೇವನಲ್ಲಿ ಭಕ್ತಿ ಇರುವುದಾಗಿ ಕಂಡುಬರುವುದು, ಆದರೆ ಧನಸಂಪತ್ತಿನಲ್ಲಿ ಇರುವುದಿಲ್ಲ. ಅವರಿಗೆ ಶಾಸ್ತ್ರದಲ್ಲಿ ವ್ಯಸನವಿರುವುದಾಗಿ ಕಂಡುಬರುವುದು; ಆದರೆ ಯುವತಿ ಎಂಬ ಕಾಮನ ಬಾಣದಲ್ಲಿ ಆಸಕ್ತಿ ಇರುವುದಿಲ್ಲ. ಹಾಗೆಯೇ ಯಶಸ್ಸನ್ನು ಹೊಂದುವ ಇಚ್ಛೆ ಇದೆಯೇ ಹೊರತು ದೇಹವನ್ನು ಮತ್ತೆ ಪಡೆಯಬೇಕೆಂಬ ಇಚ್ಛೆ ಅವರಿಗೆ ಇರುವುದಿಲ್ಲ." ಇಲ್ಲಿ ಪ್ರಶ್ನೆ ಮಾಡದೇ ಇರುವವನಿಗೆ ತಿಳಿಸುವಾಗ ಐಶ್ವರ್ಯ ಮೊದಲಾದುವನ್ನು ಶಬ್ದದಿಂದಲೇ ನಿಷೇಧಿಸಿ ಸೂಕ್ತವಾದ ಉತ್ತರವನ್ನು ತಿಳಿಸಿರುವ ಪ್ರಯುಕ್ತ ಇದು ಶಾಬ್ದೀ ಪರಿಸಂಖ್ಯೆ ಎನಿಸಿದೆ. "ಆ ಅಜನ ಬಲವು ಪೀಡಿತರ ಭಯವನ್ನು ತೊಲಗಿಸಲಿಕ್ಕಾಗಿಯೇ ಇತ್ತು; ಆದರೆ ದುರ್ಬಲರನ್ನು ಪೀಡಿಸಲಿಕ್ಕಾಗಿ

ಇರಲಿಲ್ಲ. ಅವನ ಶಾಸ್ತ್ರಜ್ಞಾನವು ವಿದ್ವಾಂಸರನ್ನು ಆದರಿಸಲಿಕ್ಕಾಗಿಯೇ ಇತ್ತು; ಆದರೆ ವಿವಾದಕ್ಕಾಗಿ ಇರಲಿಲ್ಲ. ಹಾಗೆಯೇ ಹಣವೇ ಅವನಿಗೆ ಪರಾರ್ಥವಾಗಿ ಇತ್ತೆಂಬುದಲ್ಲ; ಆದರೆ ಗುಣವೂ ಸಹ ತನಗಾಗಿಯೇ ಅಲ್ಲದೆ ಪರಾರ್ಥವಾಗಿಯೇ ಇತ್ತು." ಇಲ್ಲಿ ಯಾರೂ ಪ್ರಶ್ನೆ ಮಾಡದೆ ಇದ್ದರೂ 'ಪೀಡಿತರ ಭಯವನ್ನು ತೊಲಗಿಸಲಿಕ್ಕಾಗಿ ಅವನ ಬಲವು ಕಾದಿತ್ತು' ಎಂದು ಹೇಳಿರುವುದರಿಂದ 'ದುರ್ಬಲರನ್ನು ಪೀಡಿಸಲಿಕ್ಕಾಗಿ ಬಲವಿರಲಿಲ್ಲ'ವೆಂಬ ನಿಷೇಧವು ಅರ್ಥದಿಂದ ತೋರುವುದು. ಆದ್ದರಿಂದ ಇದು ಆರ್ಥೀ ಪರಿಸಂಖ್ಯೆ ಎನಿಸಿದೆ. ಇದು ಶ್ಲಿಷ್ಟಶಬ್ದದ ಪ್ರಯೋಗದಿಂದ ಸಂಭವಿಸಿದರೆ ಅದರಲ್ಲಿ ಹೆಚ್ಚು ಚಮತ್ಕಾರವಿರುತ್ತದೆ. "ಶೂದ್ರಕರಾಜನು ಜಗತ್ತನ್ನು ಜಯಿಸಿ ಭೂಮಿಯನ್ನು ಆಳುತ್ತಿರಲು ಚಿತ್ರವನ್ನು ಬರೆಯುವುದರಲ್ಲಿಯೇ ನೀಲ, ಪೀತ ಮೊದಲಾದ ವರ್ಣಗಳ ಮಿಶ್ರಣವಿತ್ತು; ಆದರೆ ಮಾನವರಲ್ಲಿ ವರ್ಣಸಾಂಕರ್ಯವಿರಲಿಲ್ಲ. ಧನುಸ್ಸಿನಲ್ಲಿಯೇ ಶಿಂಜಿನಿಯನ್ನು ಕತ್ತರಿಸಬೇಕಾಗಿತ್ತು. ಜನರಲ್ಲಿ ದಯೆ ದಾಕ್ಷಿಣ್ಯ ಮೊದಲಾದ ಗುಣಗಳ ಲೋಪವಿರಲಿಲ್ಲ." ಇಲ್ಲಿ ಹೇಳಿರುವ ಪ್ರಕಾರ ಬೇರೊಂದು ಅರ್ಥದ ನಿಷೇಧವು ಅರ್ಥದ ಮೂಲಕವೇ ತಿಳಿದುಬರುತ್ತದೆಯಾದ್ದರಿಂದ ಇದು ಆರ್ಥೀ ಪರಿಸಂಖ್ಯೆ ಎನಿಸಿದೆ.

ಒಬ್ಬನು ಪ್ರಶ್ನೆಯನ್ನು ಕೇಳದಿದ್ದರೂ ಉತ್ತರದಿಂದ ಪ್ರಶ್ನೆಯನ್ನು ಊಹಿಸುವುದಾದರೆ ಅದು ಉತ್ತರವೆಂಬ ಅಲಂಕಾರವೆನಿಸುವುದು. ಹಾಗೆಯೆ ಅನೇಕ ಪ್ರಶ್ನೆಗಳನ್ನು ಕೇಳಿದ್ದರೂ ಉತ್ತರವನ್ನು ಅಸಾಧಾರಣವಾದ ರೀತಿಯಲ್ಲಿ ಅನೇಕ ಬಗೆಯಾಗಿ ತಿಳಿಸುವುದೂ ಸಹ ಉತ್ತರಾಲಂಕಾರವೇ ಆಗುವುದು. ಹೀಗೆ ಇದು ಎರಡು ಬಗೆಯಾಗುವುದು. "ನೀನು ಯಾರು ? ಚೈತ್ರನು" ಎಂಬಲ್ಲಿ ಪ್ರಶ್ನವೂ ಉತ್ತರವೂ ಅನೇಕ ಬಗೆಯಾಗಿಲ್ಲದ್ದರಿಂದ ವೈಚಿತ್ರ್ಯವಿಲ್ಲದ ಪ್ರಯುಕ್ತ ಇದು ಅಲಂಕಾರವಾಗಲಾರದು. ಇದರಲ್ಲಿ ಉತ್ತರವಿರುವ ಪ್ರಯುಕ್ತ ಇದು ಉತ್ತರವೆನಿಸಿದೆ. ಈಗ ಮೊದಲನೆಯ ಬಗೆಯ ಉತ್ತರವನ್ನು ಉದಾಹರಿಸುತ್ತಾನೆ. "ಅತ್ತೆಯು ಹೊರಗಿನ ಜನರನ್ನು ನೋಡಲಿಕ್ಕೆ ಆಗದಷ್ಟು ಕುರುಡಿಯಾಗಿರುವಳು. ಆದ್ದರಿಂದ ಆ ಬಗ್ಗೆ ಶಂಕಿಸಬೇಕಾಗಿಲ್ಲ. ನನ್ನ ಪತಿಯಾದರೋ ದೂರದ ದೇಶಕ್ಕೆ ಹೋಗಿರುವನು. ಅವನು ಬರುವ ಸಂಭವವಿಲ್ಲ. ನಾನು ಒಬ್ಬಳೇ ಬಾಲೆ ಇರುವೆನು. ಅದ್ದರಿಂದಲೇ ಇಲ್ಲಿ ನಿನಗೆ ಹೇಗೆ ಇರಲಿಕ್ಕೆ ಆದೀತು ? ಇರಲಿಕ್ಕೆ ಆಗುವುದಿಲ್ಲ" ಎಂದು ವಾಚ್ಯಾರ್ಥವು ಶಬ್ದದಿಂದ ತೋರಿದರೆ "ಇಲ್ಲಿಯೇ ಇದ್ದು ಯಥೇಚ್ಛವಾಗಿ ರಮಿಸು" ಎಂಬುದು ವ್ಯಂಗ್ಯವಾಗಿ ತಿಳಿದುಬರುತ್ತದೆ. ಇದರಿಂದ ಪಥಿಕನೊಬ್ಬನು ಮನೆಯಲ್ಲಿ ನೆಲಸಲಿಕ್ಕೆ ಸ್ಥಳವನ್ನು ಕೇಳಿದುವಾಗಿ ತಿಳಿದುಬರುತ್ತದೆ. ಇಲ್ಲಿ ಕೊಡುವ ಉತ್ತರದಿಂದ ಪ್ರಶ್ನೆಯನ್ನು ಊಹಿಸಬಹುದಾಗಿದೆ. "ಹಿಂದುಮುಂದು ಸಂಬಂಧವಿಲ್ಲದೆ ಭಯಂಕರವಾದದ್ದು ಯಾವುದು ? ದೈವಗತಿಯೇ ಅಂತಹದು. "ಹೊಂದಬೇಕಾದ ವಸ್ತು ಯಾವುದು? ಗುಣಗ್ರಾಹಿಯಾದ ಜನ. "ಸೌಖ್ಯವು ಯಾವುದು? ಒಳ್ಳೆಯ ಹೆಂಡತಿ." "ವಶಪಡಿಸಲಿಕ್ಕೆ ಆಗದೇ ಇರುವುದು ಯಾವುದು ? ನೀಚ." ಹೀಗೆ ಅನೇಕ ಪ್ರಶ್ನೆಗಳಿಗೆ ಸಾಧಾರಣವಾಗಿ ಊಹಿಸಲಿಕ್ಕೆ ಆಗದಿರುವ ಅನೇಕ ಉತ್ತರಗಳನ್ನು ತಿಳಿಸುವ ಪ್ರಯುಕ್ತ

ಇದು ಉತ್ತರಾಲಂಕಾರವೆನಿಸುವುದು. ಇಲ್ಲಿ 'ಕಿಮಾರಾಧ್ಯಮ್' ಎಂಬಂತೆ ಕಾ ವಿಷಮಾ ಎಂಬಲ್ಲಿಯೂ ಪ್ರಶ್ನವನ್ನು ಕೇಳಿ 'ದೇವಗತಿಃ' ಎಂದು ಉತ್ತರವನ್ನು ತಿಳಿಸಿರುವುದ ರಿಂದ 'ಮಾನವರ ವರ್ತನವಲ್ಲ' ಎಂದು ಬೇರೊಂದು ನಿಷೇಧವೂ ಇರುವ ಪ್ರಯುಕ್ತ ಇದು ಆರ್ಥೀ ಪರಿಸಂಖ್ಯೆಯೇ ಆಗುತ್ತದೆ. ಆದ್ದರಿಂದ ಅದಕ್ಕೂ ಉತ್ತರಾಲಂಕಾರದ ಎರ ಡನೆಯ ಬಗೆಗೂ ಭೇದವೇನು ? ಎಂದರೆ ಅದನ್ನು ಇಲ್ಲಿ ತಿಳಿಸುತ್ತಾನೆ. ಇಲ್ಲಿ ಬೇರೊಂ ದನ್ನು ನಿಷೇಧಿಸುವುದರಲ್ಲಿ ತಾತ್ಪರ್ಯವಿಲ್ಲ. ಆದರೆ ಸೂಕ್ತವಾದ ಉತ್ತರವನ್ನು ಕೊಡು ವುದೇ ಮುಖ್ಯವಾದ ಅಂಶ. ಪರಿಸಂಖ್ಯೆಯಲ್ಲಿ ಬೇರೊಂದನ್ನು ನಿಷೇಧಿಸುವುದೇ ಮುಖ್ಯ ವಾದ ಅಂಶ. 'ಯಾವಾಗಲೂ ಮಾಡಬೇಕಾದ ಕಾರ್ಯವು ಯಾವುದು ?' ಎಂಬ ಪ್ರಶ್ನೆಗೆ ಪುಣ್ಯವೆಂದು ಉತ್ತರವನ್ನು ಕೊಡುವವನಿಗೆ ಪಾಪವಲ್ಲವೆಂದು ನಿಷೇಧವು ಇಷ್ಟವೇ ಆಗಿದೆ. ಕಾ ವಿಷಮಾ? ಎಂಬ ಪ್ರಶ್ನೆಗೆ ದೈವಗತಿಃ ಎಂದು ಉತ್ತರವನ್ನು ತಿಳಿಸ.ವವನಿ ಗಾದರೋ ಹಾಗೆ ಉತ್ತರವನ್ನು ತಿಳಿಸುವುದಷ್ಟೇ ಇಷ್ಟವಾದುದು 'ಮಾನವರ ವರ್ತನೆ ಯಲ್ಲ' ವೆಂದು ನಿಷೇಧಿಸುವುದು ಇಷ್ಟವಲ್ಲ. ಇದೇ ಇವೆರಡಕ್ಕೂ ಇರುವ ಭೇದ. ಹಾಗಾ ದರೂ 'ಅತ್ತೆಯು ಯಾವುದನ್ನೂ ನೋಡುವ ಸ್ಥಿತಿಯಲ್ಲಿಲ್ಲ' ಎಂದು ಹೇಳಿದಾಗ ಅಂತಹ ಉತ್ತರದಿಂದ ಪಥಿಕನು ವಸತಿಗೆ ಸ್ಥಳವನ್ನು ಕೇಳಿರುವನೆಂಬುದನ್ನು ಅನು ಮಾನಾಲಂಕಾರದಲ್ಲಿಯೇ ಸೇರಿಸಬಹುದೆಂದರೆ ಅದಕ್ಕೆ ಸಮಾಧಾನವನ್ನು ತಿಳಿಸುತ್ತಾನೆ ಸಾಧ್ಯ (ಸಾಧಿಸಬೇಕಾಗಿರುವ ವಸ್ತು) ಸಾಧನ (ಹೇತು) ಇವೆರಡನ್ನು ಶಬ್ದದಿಂದ ತಿಳಿಸಿ ರುವ ಕಡೆಯೇ ಅನುಮಾನಾಲಂಕಾರವನ್ನು ಹೇಳಬೇಕು. ಇಲ್ಲಿ ಹೇಳಿರುವ ಉದಾಹರ ಣದಲ್ಲಿ ಅಂತಹ ಪಥಿಕನ ಪ್ರಶ್ನವನ್ನು ಶಬ್ದದಿಂದ ತಿಳಿಸದೇ ಇರುವ ಪ್ರಯುಕ್ತ ಇದು ಅನುಮಾನವಾಗಲಾರದು. ಆ ಬಗೆಯ ಪಥಿಕನ ಪ್ರಶ್ನವನ್ನು ತಿಳಿಯಲು 'ವೀಕ್ಷಿತುಂ ನ ಕ್ಷಮಾ ಶ್ವಶ್ರೂಃ' ಎಂಬ ವಾಕ್ಯಾರ್ಥವೇ ಹೇತುವೆನಿಸಿದ್ದರಿಂದ ಇದು ವಾಕ್ಯಾರ್ಥ ಹೇತುಕಕಾವ್ಯಲಿಂಗವೇ ಆಗಲಿ ಎಂದರೆ ಅದು ಸರಿಯಲ್ಲವೆಂದು ತಿಳಿಸುತ್ತಾನೆ. ಆ ಬಗೆಯ ಪ್ರಶ್ನೆಯು ತೋರಲಿಕ್ಕೆ ಈ ವಾಕ್ಯಾರ್ಥವು ಹೇತುವಾಗಬಹುದೇ ಹೊರತು ಅಂತಹ ಪ್ರಶ್ನೆ ಹುಟ್ಟಲಿಕ್ಕೆ ಇದು ಹೇತುವಾಗಿಲ್ಲ. ಆದ್ದರಿಂದ ಇದನ್ನು ಕಾವ್ಯಲಿಂಗ ದಲ್ಲಿ ಸೇರಿಸಲಿಕ್ಕಾಗುವುದಿಲ್ಲ. ಸಾಧಿಸಬೇಕಾಗಿರುವ ಅಂಶ, ಸಾಧಿಸಿಕೊಡುವ ಅಂಶ ಇವೆರಡನ್ನು ಶಬ್ದದಿಂದ ತಿಳಿಸಿರುವ ಕಡೆಯಲ್ಲಿಯೇ ಕಾವ್ಯಲಿಂಗವು ಇರುತ್ತದೆ; ಆದರೆ ಸಾಧಿಸಬೇಕಾಗಿರುವ ಅಂಶವನ್ನು ಶಬ್ದದಿಂದ ತಿಳಿಸದೇ ಇರುವಾಗ ಕಾವ್ಯಲಿಂಗವು ಬರು ವಂತಿಲ್ಲ. ಹೀಗೆ ಉತ್ತರಾಲಂಕಾರವು ಬೇರೆ ಅಲಂಕಾರಗಳಿಗಿಂತ ವಿಲಕ್ಷಣವಾಗಿದೆ.

ದಂಡಾಪೂಪಿಕಯಾಽನ್ಯಾರ್ಥಾಗಮೋಽರ್ಥಾಪತ್ತಿರಿಷ್ಯತೇ ।

'ಮೂಷಿಕೇಣ ದಂಡೋ ಭಕ್ಷಿತಃ' ಇತ್ಯನೇನ ತತ್ಸಹಚರಿತಮಪೂಪಭಕ್ಷಣ ಮರ್ಥಾದಾಯಾತಂ ಭವತೀತಿ ನಿಯತಸಮಾನನ್ಯಾಯಾದರ್ಥಾಂತರಮಾಪತತೀ ತ್ಯೇಷ ನ್ಯಾಯೋ ದಂಡಾಪೂಪಿಕಾ. ಅತ್ರ ಚ ಕ್ವಚಿತ್ ಪ್ರಾಕರಣಿಕಾತ್ ಅರ್ಥಾತ್ ಅಪ್ರಾಕರಣಿಕಸ್ಯಾರ್ಥಸ್ಯ ಆಪತನಮ್, ಕ್ವಚಿದಪ್ರಾಕರಣಿಕಾರ್ಥಾತ್ ಪ್ರಾಕರಣಿ

ಕಾರ್ಥಸ್ಯೇತಿ ದ್ವೌ ಭೇದೌ. ಕ್ರಮೇಣೋದಾಹರಣಮ್—

ಹಾರೋಽಯಂ ಹರಿಣಾಕ್ಷೀಣಾಂ ಲುಠತಿ ಸ್ತನಮಂಡಲೇ ।
ಮುಕ್ತಾನಾಮಪ್ಯವಸ್ಥೇಯಂ ಕೇ ವಯಂ ಸ್ಮರಕಿಂಕರಾಃ ॥
ವಿಲಲಾಪ ಸ ಬಾಷ್ಪಗದ್ಗದಂ ಸಹಜಾಮಪ್ಯಪಹಾಯ ಧೀರತಾಮ್ ।
ಅಭಿತಪ್ತಮಯೋಽಪಿ ಮಾರ್ದವಂ ಭಜತೇ ಕೈವ ಕಥಾ ಶರೀರಿಷು?॥

ಅತ್ರ ಚ ಸಮಾನನ್ಯಾಯಸ್ಯ ಶ್ಲೇಷಮೂಲತ್ವೇ ವೈಚಿತ್ರ್ಯವಿಶೇಷೋ ಯಥೋದಾಹೃತೇ 'ಹಾರೋಽಯಮ್' ಇತ್ಯಾದೌ. ನ ಚೇದಮನುಮಾನಂ ಸಮಾನನ್ಯಾಯಸ್ಯ ಸಂಬಂಧರೂಪತ್ವಾಭಾವಾತ್.

ವಿಕಲ್ಪಸ್ತುಲ್ಯಬಲಯೋರ್ವಿರೋಧಶ್ಚಾತುರೀಯುತಃ ।

ಯಥಾ—"ನಮ್ಯಂತಾಂ ಶಿರಾಂಸಿ ಧನೂಂಷಿ ವಾ ಕರ್ಣಪೂರೀಕ್ರಿಯಂತಾಂ ಆಜ್ಞಾ ಮೌರ್ವ್ಯೋ ವಾ" ಅತ್ರ ಶಿರಸಾಂ ಧನುಷಾಂ ಚ ನಮನಯೋಃ ಸಂಧಿವಿಗ್ರಹೋಪಲಕ್ಷಣತ್ವಾತ್ ಸಂಧಿವಿಗ್ರಹಯೋಶ್ಚೈಕದಾ ಕರ್ತುಮಶಕ್ಯತ್ವಾದ್ವಿರೋಧಃ. ಸ ಚ ಏಕಪಕ್ಷಾಶ್ರಯಣಪರ್ಯವಸಾನಃ. ತುಲ್ಯಬಲತ್ವಂ ಚಾತ್ರ ಧನುಶ್ಶಿರೋನಮನಯೋರ್ದ್ವಯೋರಪಿ ಸ್ಪರ್ಧಯಾ ಸಂಭಾವ್ಯಮಾನತ್ವಾತ್. ಚಾತುರ್ಯಂ ಚಾತ್ರ ಔಪಮ್ಯಗರ್ಭತ್ವೇನ. ಏವಂ 'ಕರ್ಣಪೂರೀಕ್ರಿಯಂತಾಮ್' ಇತ್ಯತ್ರಾಪಿ. ಏವಮ್—"ಯುಷ್ಮಾಕಂ ಕುರುತಾಂ ಭವಾರ್ತಿಶಮನಂ ನೇತ್ರೇ ತನುರ್ವಾ ಹರೇಃ" ಅತ್ರ ಶ್ಲೇಷಾವಷ್ಟಂಭೇನ ಚಾರುತ್ವಮ್, 'ದೀಯತಾಮರ್ಜಿತಂ ವಿತ್ತಂ ದೇವಾಯ ಬ್ರಾಹ್ಮಣಾಯ ವಾ' ಇತ್ಯತ್ರ ಚಾತುರ್ಯಾಭಾವಾತ್ ನಾಯಮಲಂಕಾರಃ.

ಸಮುಚ್ಚಯೋಽಯಮೇಕಸ್ಮಿನ್ ಸತಿ ಕಾರ್ಯಸ್ಯ ಸಾಧಕೇ ।
ಖಲೇಕಪೋತಿಕಾನ್ಯಾಯಾತ್ ತತ್ಕರಃ ಸ್ಯಾತ್ಪರೋಽಪಿ ಚೇತ್ ॥
ಗುಣೌ ಕ್ರಿಯೇ ವಾ ಯುಗಪತ್ ಸ್ಯಾತಾಂ ಯದ್ವಾ ಗುಣಕ್ರಿಯೇ ।

ಯಥಾ—ಹಂಹೋ ಧೀರಸಮೀರ! ಹಂತ ಜನನಂ ತೇ ಚಂದನಕ್ಷ್ಮಾಭೃತೋ
ದಾಕ್ಷಿಣ್ಯಂ ಜಗದುತ್ತರಂ ಪರಿಚಯೋ ಗೋದಾವರೀವಾರಿಭಿಃ ।
ಪ್ರತ್ಯಂಗಂ ದಹಸೀಹ ಮೇ ತ್ವಮಪಿ ಚೇದುದ್ದಾಮದಾವಾಗ್ನಿವತ್ ।
ಮತ್ತೋಽಯಂ ಮಲಿನಾತ್ಮಕೋ ವನಚರಃ ಕಿಂ ವಕ್ಷ್ಯತೇ ಕೋಕಿಲಃ ॥

ಅತ್ರ ದಾಹೇ ಏಕಸ್ಮಿನ್ ಚಂದನಕ್ಷ್ಮಾಭೃಜ್ಜನ್ಮರೂಪೇ ಕಾರಣೇ ಸತ್ಯಪಿ ದಾಕ್ಷಿಣ್ಯಾದೀನಾಂ ಹೇತ್ವಂತರಾಣಾಮುಪಾದಾನಮ್. ಅತ್ರ ಸರ್ವೇಷಾಮಪಿ ಹೇತೂನಾಂ ಶೋಭನತ್ವಾತ್ ಸದ್ಯೋಗಃ. ಅತ್ರೈವ ಚತುರ್ಥಪಾದೇ ಮತ್ತಾದೀನಾಂ ಅಶೋಭನಾನಾಂ ಯೋಗಾತ್ ಅಸದ್ಯೋಗಃ. ಸದಸದ್ಯೋಗೋ ಯಥಾ—

ಶಶೀ ದಿವಸಧೂಸರೋ ಗಲಿತಯೌವನಾ ಕಾಮಿನೀ
ಸರೋ ವಿಗತವಾರಿಜಂ ಮುಖಮನಕ್ಷರಂ ಸ್ವಾಕೃತೇಃ ।

ಪ್ರಭುರ್ಧನಪರಾಯಣಃ ಸತತದುರ್ಗತಃ ಸಜ್ಜನೋ
ನೃಪಾಂಗನಗತಃ ಖಲೋ ಮನಸಿ ಸಪ್ತ ಶಲ್ಯಾನಿ ಮೇ ||

ಇಹ ಕೇಚಿದಾಹುಃ "ಶಶಿಪ್ರಭೃತೀನಾಂ ಶೋಭನತ್ವಂ ಖಲಸ್ಯ ಅಶೋಭನತ್ವಮಿತಿ ಸದಸದ್ಯೋಗಃ" ಇತಿ. ಅನ್ಯೇ ತು 'ಶಶಿಪ್ರಭೃತೀನಾಂ ಸ್ವತಃ ಶೋಭನತ್ವಂ, ಧೂಸರತ್ವಾದೀನಾಂ ತ್ವಶೋಭನತ್ವಮಿತಿ ಸದಸದ್ಯೋಗಃ.' ಅತ್ರ ಹಿ ಶಶಿಪ್ರಭೃತಿಷು ಧೂಸರತ್ವಾದೇರತ್ಯಂತಮನುಚಿತತ್ವಮಿತಿ ವಿಚ್ಛಿತ್ತಿವಿಶೇಷಸ್ಯೈವ ಚಮತ್ಕಾರವಿಧಾಯಿತ್ವಮ್. 'ಮನಸಿ ಸಪ್ತ ಶಲ್ಯಾನಿ' ಇತಿ ಸಪ್ತಾನಾಮಪಿ ಶಲ್ಯತ್ವೇನೋಪಸಂಹಾರಶ್ಚ. 'ನೃಪಾಂಗನಗತಃ ಖಲಃ' ಇತಿ ಪ್ರಸ್ತುತಕ್ರಮಭೇದಾತ್ ದುಷ್ಟತ್ವಮಾವಹತಿ, ಸರ್ವತ್ರ ವಿಶೇಷ್ಯಸ್ಯೈವ ಶೋಭನತ್ವೇನ ಪ್ರಕ್ರಮಾತ್ ಇತಿ.

ಇಹ ಚ ಖಲೇ ಕಪೋತವತ್ ಸರ್ವೇಷಾಂ ಕಾರಣಾನಾಂ ಸಾಹಿತ್ಯೇನಾವತಾರಃ, ಸಮಾಧ್ಯಲಂಕಾರೇ ತ್ವೇಕಕಾರ್ಯಂ ಪ್ರತಿ ಸಾಧಕೇ ಸಮಗ್ರೇಽಪ್ಯನ್ಯಸ್ಯ ಕಾಕತಾಳೀಯನ್ಯಾಯೇನ ಆಪತನಮಿತಿ ಭೇದಃ.

ಅರುಣೇ ಚ ತರುಣಿ! ನಯನೇ ತವ ಮಲಿನಂ ಚ ಪ್ರಿಯಸ್ಯ ಮುಖಮ್ ।
ಮುಖಮಾನತಂ ಚ ಸಖಿ ! ತೇ ಜ್ವಲಿತಶ್ಚಾಸ್ಯಾಂತರೇ ಸ್ಮರಜ್ವಲನಃ ||

ಅತ್ರ ಆದ್ಯೇ ಅರ್ಧೇ ಗುಣಯೋರ್ಯೌಗಪದ್ಯಮ್, ದ್ವಿತೀಯೇ ಕ್ರಿಯಯೋಃ ಉಭಯೋರ್ಯೌಗಪದ್ಯೇ ಯಥಾ—

ಕಲುಷಂ ಚ ತವಾಹಿತೇಷ್ವಕಸ್ಮಾತ್ ಸಿತಪಂಕೇರುಹಸೋದರಶ್ರಿ ಚಕ್ಷುಃ।
ಪತಿತಂ ಚ ಮಹೀಪತೀಂದ್ರ ತೇಷಾಂ ವಪುಷಿ ಪ್ರಸ್ಫುಟಮಾಪದಾಂ ಕಟಾಕ್ಷೈಃ||

'ಧುನೋತಿ ಚಾಸಿಂ ತನುತೇ ಚ ಕೀರ್ತಿಮ್' ಇತ್ಯಾದೌ ಏಕಾಧಿಕರಣೇಽಪ್ಯೇಷ ದೃಶ್ಯತೇ. ನ ಚಾತ್ರ ದೀಪಕಮ್. ಏತೇ ಹಿ ಗುಣಕ್ರಿಯಾಯೌಗಪದ್ಯೇ ಸಮುಚ್ಚಯಪ್ರಕಾರಾ ನಿಯಮೇನ ಕಾರ್ಯಕಾರಣಕಾಲನಿಯಮವಿಪರ್ಯಯರೂಪಾತಿಶಯೋಕ್ತಿಮೂಲಾಃ, ದೀಪಕಸ್ಯ ಚಾತಿಶಯೋಕ್ತಿಮೂಲತ್ವಾಭಾವಃ—

'ಇಲಿಯು ದೊಣ್ಣೆಯನ್ನು ನುಂಗಿತು' ಎಂದು ಹೇಳಿದ್ದರಿಂದ ಆ ದೊಣ್ಣೆಗೆ ಕಟ್ಟಿದ್ದ ದೋಸೆಯನ್ನು ಅದು ನುಂಗಿತು ಎಂಬುದು ಅರ್ಥದಿಂದಲೇ ಸಹಜವಾಗಿ ಸಿದ್ಧಿಸುತ್ತದೆ. ಈ ಬಗೆಯ ನಿಯಮದಿಂದ ಒಂದು ಅರ್ಥವನ್ನು ಕೇಳಿದ ಮೇಲೆ ಸಂಬಂಧಿಸಿದ ಬೇರೊಂದು ಅರ್ಥವು ತಾನಾಗಿಯೇ ತಿಳಿದು ಬರುವುದು. ಇದೇ ದಂಡಾಪೂಪಿಕಾನ್ಯಾಯವೆನಿಸಿದೆ. ಒಂದು ಮನೆಯಲ್ಲಿ ಹೆಂಡತಿಯು ರಾತ್ರಿ ಉಪಯೋಗಿಸಿ ಉಳಿದ ದೋಸೆಗಳನ್ನು ಪತಿಯ ಬಳಿಯಲ್ಲಿ ಕೋಲಿನಮೇಲೆ ಪಾತ್ರೆಯಲ್ಲಿಟ್ಟು ನಿದ್ರಿಸುತ್ತಿದ್ದಳು. ಪತಿಯೂ ನಿದ್ರಿಸುತ್ತಿದ್ದನು. ಪ್ರಾತಃಕಾಲದಲ್ಲಿ ದೋಸೆ ಇಲ್ಲದ್ದನ್ನು ಕಂಡ ಹೆಂಡತಿ 'ಇಲಿಯು ದೊಣ್ಣೆಯನ್ನು ನುಂಗಿತು' ಎಂದು ಹೇಳುವಳು. ಅದನ್ನು ಕೇಳಿದ ಪತಿಯು 'ಯಾವ ಇಲಿಯು ದೊಣ್ಣೆಯನ್ನು ನುಂಗಿತೋ ಅದೇ ದೋಸೆಯನ್ನೂ ನುಂಗಿತು' ಎಂದು ತಿಳಿಯುವನು. ದೊಣ್ಣೆಯನ್ನು ನುಂಗುವುದಕ್ಕಿಂತಲೂ ದೋಸೆಯನ್ನು ನುಂಗು

ವುದು ಸುಲಭ ಮತ್ತು ಇಷ್ಟ. ಒಂದು ಸಿದ್ಧಿಸಿತೆಂದು ತಿಳಿದರೆ ಅದಕ್ಕೆ ಸದೃಶವಾದ ಮತ್ತೊಂದೂ ಸಿದ್ಧಿಸಿತೆಂಬ ಬುದ್ಧಿಯೇ ದಂಡಾಪೂಪಿಕೆ ಎನಿಸುವುದು. ಈ ನ್ಯಾಯದಂತೆ ಒಂದರಿಂದ ಬೇರೊಂದು ಅರ್ಥವು ತೋರುವುದಾದರೆ ಅದು ಅರ್ಥಾಪತ್ತಿ ಎನಿಸುವುದು. ಕೆಲವು ಕಡೆ ಪ್ರಕೃತಾರ್ಥದಿಂದ ಅಪ್ರಕೃತವಾದ ಅರ್ಥವು ತೋರುವುದು ಮತ್ತೆ ಕೆಲವು ಕಡೆ ಅಪ್ರಕೃತವಾದ ಅರ್ಥದಿಂದ ಪ್ರಕೃತಾರ್ಥವು ತೋರುವುದು. ಹೀಗೆ ಇಲ್ಲಿ ಎರಡು ಬಗೆಗಳಾಗುತ್ತವೆ. ಇವುಗಳಲ್ಲಿ ಮೊದಲನೆಯದನ್ನು ಉದಾಹರಿಸುತ್ತಾನೆ. ಕಾಮಿನಿಯ ಕುಚಗಳನ್ನು ಭೋಗಿಸಲು ಆಸಕ್ತನಾದವನೊಬ್ಬನು ಸ್ನೇಹಿತನಲ್ಲಿ ತಾನು ನಿರ್ದೋಷಿ ಎಂಬುದನ್ನು ತಿಳಿಸಲಿಕ್ಕಾಗಿ ಹೀಗೆ ಹೇಳುವನು. "ಮುತ್ತಿನ ಹಾರವು ತರುಣಿಯರ ಸ್ತನಗಳಲ್ಲಿ ಯಾವಾಗಲೂ ನೆಲಸಿದೆ. ಮುತ್ತಿನ ಸರಗಳಿಗೂ ಮುಕ್ತಿಯನ್ನು ಹೊಂದಿದವರಿಗೂ ಇದೇ ಅವಸ್ಥೆಯು ಸಹಜ. ಮನ್ಮಥನಿಗೆ ಅಧೀನರಾದ ನಮ್ಮ ಬಗ್ಗೆ ಇನ್ನು ಹೇಳುವುದೇನಿದೆ?' ಇಲ್ಲಿ ಮುಕ್ತರ ಬಗ್ಗೆ ತಿಳಿಸಬೇಕಾಗಿರುವುದರಿಂದ ಅವರೇ ಪ್ರಕೃತರು; ವಯಂ ಎಂಬಲ್ಲಿ ತಿಳಿಸಿರುವ ಅಮುಕ್ತರೇ (ಬದ್ಧ ಜೀವಿಗಳೇ) ಅಪ್ರಕೃತರು. ಮುಕ್ತಿಯನ್ನು ಹೊಂದಿರುವವರು ಅತ್ಯಂತ ವಿರಕ್ತರಾದ್ದರಿಂದ ಅವರು ಸ್ತ್ರೀಯ ಕುಚಗಳಲ್ಲಿ ಹೊರಳಾಡುವರೆಂಬುದೇ ಅಸಂಭವ. ಅದೂ ಸಂಭವಿಸುವುದಾದರೆ ಬದ್ಧಜೀವಿಗಳು ಕಾಮನಿಗೆ ಅಧೀನರಾಗಿ ಅನುರಾಗವೆಂಬ ಸಾಗರದಲ್ಲಿ ಮುಳುಗಿರುವುದರಿಂದ ಸ್ತನಗಳಲ್ಲಿ ಹೊರಳಾಡುವರೆಂಬುದೂ ಸಹ ಸಂಭವಿಸಬಹುದು. ಹೀಗ ಪ್ರಕೃತಾರ್ಥದಿಂದ ಅಪ್ರಕೃತಾರ್ಥವು ತಿಳಿದುಬರುವುದರಿಂದಲೇ ಇದು ಅರ್ಥಾಪತ್ತ್ಯಲಂಕಾರವೆನಿಸುವುದು. ಇಲ್ಲಿ ಪುರುಷರೆಂಬ ಸಾಮಾನ್ಯಾಂಶವು ಮುಕ್ತ, ಅಮುಕ್ತ ಇಬ್ಬರಲ್ಲೂ ಸದೃಶವೆಂದು ತಿಳಿದು ಬರುವುದು. ಈಗ ಅರ್ಥಾಪತ್ತಿಯ ಎರಡನೆಯ ಬಗೆಯನ್ನು ಉದಾಹರಿಸುತ್ತಾನೆ. "ಆ ಅಜನು ಸಹಜವಾಗಿದ್ದ ಧೈರ್ಯವನ್ನು ತೊರೆದು ಕಣ್ಣೀರಿನಿಂದ ಬಿಕ್ಕಳಿಸುತ್ತ ಅತ್ತನು. ಎಲ್ಲಾ ಕಡೆಯಲ್ಲೂ ಸುಡುತ್ತಿರುವ ಲೋಹವೂ ಸಹ ಕೋಮಲವಾಗುತ್ತದೆ. ಇನ್ನು ಸಹಜವಾಗಿ ಕೋಮಲವಾದ ದೇಹವುಳ್ಳವರು ಮೃದುವಾಗುವ ಬಗ್ಗೆ ಹೇಳುವುದೇನಿದೆ? ಈ ಬಗ್ಗೆ ಪ್ರತಿಯಾಗಿ ಹೇಳಬೇಕಾದ್ದೇನೂ ಇಲ್ಲ." ಇಲ್ಲಿ ಶರೀರಗಳಲ್ಲಿ ಮಾರ್ದವ ವುಂಟಾಗುವುದನ್ನೇ ವರ್ಣಿಸಬೇಕಾಗಿರುವುದರಿಂದ ಇದು ಪ್ರಕೃತವೆನಿಸಿದೆ. ಲೋಹವು ಮೃದುವಾಗುವುದೆಂಬುದನ್ನು ವರ್ಣಿಸಬೇಕಾಗಿಲ್ಲದ್ದರಿಂದ ಅದು ಅಪ್ರಕೃತವೆನಿಸಿದೆ. ಲೋಹವು ಮೃದುವಾಗುವುದೆಂಬ ಅಪ್ರಕೃತವಾದ ಅರ್ಥದಿಂದ ಮನುಷ್ಯರ ದೇಹಗಳು ಮೃದುವಾದುವೆಂಬ ಪ್ರಕೃತಾರ್ಥವು ತೋರುವುದರಿಂದ ಇದು ಅರ್ಥಾಪತ್ತಿಯ ಎರಡನೆಯ ಬಗೆ ಎನಿಸಿದೆ. ಇಲ್ಲಿ ಸಂತಪ್ತತ್ವ ಎಂಬ ಸಾಮಾನ್ಯಧರ್ಮದಿಂದ ಲೋಹ ಮತ್ತು ಶರೀರ ಇವುಗಳಿಗೆ ಸಾದೃಶ್ಯವುಂಟೆಂದು ತಿಳಿಯಬೇಕು, ಇಲ್ಲಿ ದಂಡಾಪೂಪಿಕೆ ಎಂಬ ನೀತಿಯು ಶ್ಲೇಷಮೂಲವಾಗಿದ್ದರೆ. ಹೆಚ್ಚು ವೈಚಿತ್ರ್ಯವುಂಟೆಂದು ತಿಳಿಯಬೇಕು. ಸ್ತನಮಂಡಲದಲ್ಲಿ ಮುತ್ತಿನ ಸರಗಳು ಹೊರಳಾಡುವುದನ್ನು ಕಂಡು ಬದ್ಧ ಜೀವರೂ ಅಲ್ಲಿ ಹೊರಳಾಡುವರೆಂಬ ಜ್ಞಾನವು ಹುಟ್ಟುವುದರಿಂದಲೂ, ಕಾದ ಕಬ್ಬಿಣದಲ್ಲಿ

ಮಾರ್ದವವನ್ನು ಕಂಡದ್ದರಿಂದ ಉರಿಯುವ ದೇಹದಲ್ಲೂ ಮಾರ್ದವವುಂಟೆಂಬ ಜ್ಞಾನವು ಸಂಭವಿಸುವುದರಿಂದಲೂ ಇಲ್ಲಿ ಅನುಮಾನಾಲಂಕಾರವೇ ಆಗಲಿ, ಅರ್ಥಾಪತ್ತಿ ಏಕೆ ಬೇಕು ? ಎಂದರೆ ಇಲ್ಲಿ ಒಂದು ಅರ್ಥವು ಸಿದ್ಧಿಸಿದರೆ ಅದಕ್ಕೆ ಸದೃಶವಾದ ಬೇರೊಂದು ಅರ್ಥವು ಸಹಜವಾಗಿ ಸಿದ್ಧಿಸುವುದೆಂಬ ದಂಡಾಪೂಪಿಕಾನ್ಯಾಯದಲ್ಲಿ ವ್ಯಾಪ್ತಿಯೇ ಸಂಭವಿಸದೇ ಇರುವ ಪ್ರಯುಕ್ತ ಇಲ್ಲಿ ಅನುಮಾನಾಲಂಕಾರವು ಸಂಭವಿಸುವಂತಿಲ್ಲ. ಹೀಗೆ ವ್ಯಾಪ್ತಿಪ್ರಧಾನವಾದ ಅನುಮಾನಕ್ಕಿಂತಲೂ ಇದು ಬೇರೆ ಎನಿಸಿದೆ.

ಸಮಬಲವುಳ್ಳ ವಸ್ತುಗಳೆರಡಕ್ಕೆ ವಿರೋಧವನ್ನು ಕವಿಯು ತನ್ನ ಪ್ರತಿಭೆಯಿಂದ ಕಲ್ಪಿಸುವುದೇ ವಿಕಲ್ಪಾಲಂಕಾರವೆನಿಸುವುದು. ವಿರೋಧಾಭಾಸದಲ್ಲಿ ವಿರೋಧವು ವಾಸ್ತವವಲ್ಲದ್ದರಿಂದ ಮೇಲೆ ಮೇಲೆ ತೋರುವುದು; ಹಾಗೆಯೇ ಯಾವುದಾದರೊಂದು ರೀತಿಯಲ್ಲಿ ಸಮಾಧಾನವೂ ಇರುವುದು. ಇಲ್ಲಿಯಾದರೋ ವಿರೋಧವು ವಾಸ್ತವವೆನಿಸಿದ್ದರಿಂದ ಯಾವಾಗಲೂ ತೋರುತ್ತಿರುವುದು; ಒಂದು ಪಕ್ಷವನ್ನು ಆಶ್ರಯಿಸುವುದರಿಂದಲೇ ಸಮಾಧಾನವೂ ಆಗುವುದು. ಆದ್ದರಿಂದಲೇ ಇದಕ್ಕೆ ವಿಕಲ್ಪವೆಂಬ ಹೆಸರು ಬಂದಿದೆ. ಇಲ್ಲಿ ವಿರುದ್ಧವಾದ ಎರಡು ಪಕ್ಷಗಳಿದ್ದು ಒಂದನ್ನು ಒಪ್ಪಲಾಗುವುದು. ಸೋತವನಿಗೆ ಗೆದ್ದವನು ಗರ್ವದಿಂದ ಆಡುವ ಮಾತಿದು. "ಯುದ್ಧದಲ್ಲಿ ಸೋಲು ನಿಶ್ಚಯವೆಂದು ನಂಬಿ ನನ್ನ ಬಳಿಯಲ್ಲಿ ತಲೆಯನ್ನು ತಗ್ಗಿಸಿರಿ. ಇಲ್ಲವೇ ಶಕ್ತಿ ಇದ್ದಲ್ಲಿ ಧನುಸ್ಸನ್ನು ಹಿಡಿಯಿರಿ. ನನ್ನ ಆಜ್ಞೆಯನ್ನು ಕಿವಿಗಳಿಂದ ನಡೆಸಿರಿ; ಇಲ್ಲವಾದರೆ ಧನುಸ್ಸಿನಲ್ಲಿ ಹಗ್ಗವನ್ನು ಕಟ್ಟಿ ಕಿವಿಯವರೆಗೂ ಎಳೆಯಿರಿ" ಇಲ್ಲಿ ಶಿರಸ್ಸು ಧನಸ್ಸು ಇವೆರಡನ್ನು ಬಗ್ಗಿಸುವುದು ಸಂಧಿವಿಗ್ರಹಗಳಿಗೆ ಸಂಬಂಧಿಸಿದ ಪ್ರಯುಕ್ತ ಅವೆರಡನ್ನು ಒಂದೇ ಕಾಲದಲ್ಲಿ ನಡೆಸಲಿಕ್ಕೆ ಆಗದ್ದರಿಂದ ಇಲ್ಲಿ ವಿರೋಧವಿದೆ. ಸಂಧಿಯನ್ನು ಮಾಡಿಕೊಂಡರೆ ವಿಗ್ರಹದ ಆವಶ್ಯಕತೆ ಇರುವುದಿಲ್ಲ. ವಿಗ್ರಹ (ಯುದ್ಧ) ವನ್ನು ಮಾಡುವುದಾದರೆ ಸಂಧಿಯೇ ಬೇಕಾಗಿಲ್ಲ. ಹೀಗೆ ಇವೆರಡಕ್ಕೂ ವಿರೋಧವಿದೆ. ಈ ವಿರೋಧವು ಇವೆರಡರಲ್ಲಿ ಒಂದು ಪಕ್ಷವನ್ನು ಆಶ್ರಯಿಸುವುದರಿಂದ ಕೊನೆಯಾಗುತ್ತದೆ. ಇಲ್ಲಿ ಧನುಸ್ಸು ಮತ್ತು ಶಿರಸ್ಸು ಇವುಗಳನ್ನು ಬಗ್ಗಿಸಬೇಕೆಂದು ಹೇಳಿದ್ದರಿಂದ ಇವೆರಡು ಕ್ರಿಯೆಗಳೂ ಸ್ಪರ್ಧೆಯಿಂದ ಸಂಭವಿಸುವ ಪ್ರಯುಕ್ತ ಸಮಬಲವೆನಿಸಿವೆ. ಇಲ್ಲಿ ಶಿರೋನಮನವನ್ನೇ ಸ್ಪರ್ಧೆಯಿಂದ ತಿಳಿಸಿರುವ ಪ್ರಯುಕ್ತ ಇದು ಉಪಮೇಯವೆನಿಸಿದೆ; ಧನುರ್ನಮನವೇ ಉಪಮಾನವೆನಿಸಿದೆ. 'ಬಲಿಷ್ಠರು ಧನುಸ್ಸನ್ನು ಬಗ್ಗಿಸುವಂತೆ ದುರ್ಬಲರಾದ ನೀವು ಶಿರಸ್ಸನ್ನು ಬಗ್ಗಿಸಿರಿ' ಎಂದು ಇಲ್ಲಿ ಇವೆರಡಕ್ಕೂ ಸಾದೃಶ್ಯವಿರುವ ಪ್ರಯುಕ್ತ ಇದು ಒಂದು ಬಗೆಯ ವೈಚಿತ್ರ್ಯವೆನಿಸಿದೆ. ಹೀಗೆಯೇ ಕರ್ಣಪೂರೀಕ್ರಿಯಂತಾಂ ಎಂಬಲ್ಲಿಯೂ ಸಾದೃಶ್ಯವು ನೆಲೆಸಿದೆ. ಹೀಗೆಯೇ "ವಿಷ್ಣುವಿನ ಕಣ್ಣುಗಳೆರಡೋ ಅಥವಾ ಶರೀರವೋ ಭಕ್ತರಾದ ನಿಮ್ಮ ಸಾಂಸಾರಿಕದುಃಖವನ್ನು ತೊಲಗಿಸಲಿ" ಇಲ್ಲಿ ನೇತ್ರೇ ಕುರುತಾಂ ಎಂಬಲ್ಲಿ ಲೋಟ್ ಪರಸ್ಮೈಪದ ಪ್ರಥಮಪುರುಷದ್ವಿವಚನದ ರೂಪವೆಂದೂ, ತನುಃ ಕುರುತಾಂ ಎಂಬಲ್ಲಿ ಆತ್ಮನೇಪದಪ್ರಥಮಪುರುಷದಲ್ಲಿ ಏಕವಚನದ ರೂಪವೆಂದೂ ತಿಳಿಯುವುದು. ಇಲ್ಲಿ

ಶ್ಲೇಷದ ಮೂಲಕ ಚಾತುರ್ಯವು ನೆಲಸಿದೆ. ನೇತ್ರಗಳಿಂದ ಭವರೋಗವು ತೊಲಗಿವರೆ ದೇಹಕ್ಕೆ ಅದು ಸಂಭವಿಸದೇ ಇರುವ ಪ್ರಯುಕ್ತ ವಿರೋಧವಿದೆ. ಇವೆರಡರಲ್ಲಿ ಒಂದು ಪಕ್ಷವನ್ನು ಆಶ್ರಯಿಸುವುದರಿಂದ ವಿರೋಧವು ತೊಲಗುವುದು. ಅವೆರಡಕ್ಕೂ ಭವರೋಗ ವನ್ನು ತೊಲಗಿಸುವ ಸಾಮರ್ಥ್ಯವಿರುವ ಪ್ರಯುಕ್ತ ಅವು ಸಮಬಲವೆನಿಸಿವೆ. ಸಂಪಾದಿಸಿದ ಹಣವನ್ನು ದೇವನಿಗೋ ಬ್ರಾಹ್ಮಣನಿಗೋ ಕೊಡಿ" ಇಲ್ಲಿ ದೇವ ಬ್ರಾಹ್ಮಣರಿಬ್ಬರೂ ಉತ್ತಮಪಾತ್ರರಾದ್ದರಿಂದ ಸಮಬಲರೆನಿಸಿರುವರು. ಒಬ್ಬನಿಗೆ ಕೊಟ್ಟರೆ ಮತ್ತೊಬ್ಬನಿಗೆ ಕೊಡುವ ಸಂಭವವಿರುವುದಿಲ್ಲವಾದ್ದರಿಂದ ವಿರೋಧವಿದೆ. ಇವರಲ್ಲಿ ಒಬ್ಬನಿಗೆ ಮಾತ್ರವೇ ದಾನಮಾಡಬೇಕೆಂಬುದೇ ಇಷ್ಟವೆಂಬುದು ಇಲ್ಲಿ ಸಮಾಧಾನವೆನಿಸಿದೆ. ಆದರೆ ಇಲ್ಲಿ ಯಾವ ಚಾತುರ್ಯವೂ ಇಲ್ಲದ್ದರಿಂದ ಇದು ಅಲಂಕಾರವಾಗುವುದಿಲ್ಲ.

ವಿರುದ್ಧವಸ್ತುಗಳನ್ನು ಒಟ್ಟಿಗೆ ತಿಳಿಸುವುದು ವಿಕಲ್ಪವೆನಿಸುವಂತೆ ವಿರೋಧವಿಲ್ಲದ ವಸ್ತುಗಳನ್ನು ಒಟ್ಟಿಗೆ ತಿಳಿಸುವುದೇ ಸಮುಚ್ಚಯವೆನಿಸುತ್ತವೆ. ಕಣಡಲ್ಲಿ ಧಾನ್ಯವನ್ನು ಆಯಿದುಕೊಳ್ಳಲು ಮೊದಲು ಒಂದು ಪಾರಿವಾಳವು ಬಂದರೆ ಅದರ ಹಿಂದೆ ಉಳಿದವು ಒಂದೊಂದಾಗಿ ಬರುತ್ತವೆ. ಹಾಗೆ ಒಂದು ಕಾರ್ಯವನ್ನು ಸಾಧಿಸುವ ಪದಾರ್ಥವಿರು ವಾಗ ಬೇರೊಂದು ಪದಾರ್ಥವೂ ಆ ಕಾರ್ಯವನ್ನು ಸಾಧಿಸುವುದಾದರೆ ಅದು ಸಮುಚ್ಚಯವೆನಿಸುವುದು. ಇದು ಒಂದು ಬಗೆ; ಅಥವಾ ಯಾವುದಾದರೂ ಗುಣ ಗಳೆರಡೋ ಕ್ರಿಯೆಗಳೆರಡೋ ಅಥವಾ ಒಂದು ಗುಣ ಮತ್ತು ಒಂದು ಕ್ರಿಯೆ ಹೀಗೆ ಇವೆರಡೂ ಒಟ್ಟಿಗೆ ಸಂಭವಿಸುವುದಾದರೆ ಇದೂ ಒಂದು ಬಗೆಯ ಸಮುಚ್ಚಯವೆನಿಸು ತ್ತದೆ. ಹೀಗೆ ಇಲ್ಲಿ ಒಟ್ಟು ನಾಲ್ಕು ಬಗೆಗಳಾಗುತ್ತವೆ. ಇವುಗಳಲ್ಲಿ ಮೊದಲನೆಯ ಬಗೆಯನ್ನು ಉದಾಹರಿಸುತ್ತಾನೆ. ಪ್ರಿಯೆಯನ್ನು ಕಳೆದುಕೊಂಡವನು ಹೇಳುವ ಮಾತಿದು. ''ಅಯ್ಯೋ ಮಂದಮಾರುತವೇ! ನೀನು ಮಲಯಪರ್ವತದಲ್ಲಿ ಹುಟ್ಟಿರುವೆ; ದಕ್ಷಿಣದಿಕ್ಕಿನಲ್ಲಿ ಸಂಚರಿಸುವೆ ಎಂಬುದು ಲೋಕದಲ್ಲಿ ಪ್ರಸಿದ್ಧವಾಗಿದೆ. ಗೋದಾವರಿಯ ನೀರಿನೊಡನೆ ನಿನಗೆ ಸಂಪರ್ಕವಿದೆ. ಹೀಗಿದ್ದರೂ ನೀನು ಕಾಡುಗಿಚ್ಚಿನಂತೆ ನನ್ನ ದೇಹವನ್ನು ಸುಡುತ್ತಿರುವೆ. ನಿನ್ನದೇ ಹೀಗಾದ ಮೇಲೆ ಮದಿಸಿ ಮನಸ್ಸನ್ನು ಕೆಡಿಸಿ ಕೊಂಡು ಯಾವಾಗಲೂ ಕಾಡಿನಲ್ಲಿ ಅಲೆಯುತ್ತಿರುವ ಈ ಕೋಗಿಲೆಯು ಪಂಚಮಸ್ವರ ದಿಂದ ಪೀಡಿಸುತ್ತಿರುವುದನ್ನು ಏಕೆ ನಿಂದಿಸಬೇಕು? ಉತ್ತಮನಾದವನೇ ಬೇರೆಯವ ರನ್ನು ಪೀಡಿಸುತ್ತಿರುವಾಗ ನೀಚನಾದವನು ಪೀಡಿಸುತ್ತಿರುವುದನ್ನು ನಿಂದಿಸಿ ಫಲ ವೇನು?'' ಇಲ್ಲಿ ಗಾಳಿಯು ಮಲಯಪರ್ವತದಲ್ಲಿ ಹುಟ್ಟಿರುವುದೆಂಬ ಕಾರಣವಿದ್ದರೂ ಅದು ಸುಡುತ್ತಿರುವುದಕ್ಕೆ ದಾಕ್ಷಿಣ್ಯ ಮೊದಲಾದ ಬೇರೆ ಕಾರಣಗಳನ್ನು ತಿಳಿಸಲಾಗಿದೆ. ಇಲ್ಲಿ ಹೇಳಿರುವ ಎಲ್ಲಾ ಕಾರಣಗಳೂ ಶೋಭನವೆನಿಸಿದ್ದರಿಂದ ಇದೆಲ್ಲವೂ ಸದ್ಯೋಗ ವೆನಿಸಿವೆ. ಇಲ್ಲಿಯೇ ನಾಲ್ಕನೆಯ ಪಾದದಲ್ಲಿ ಮತ್ತಃ ಎಂದು ಮುಂತಾದ ದುಷ್ಟ ಹೇತುಗಳ ಸಂಬಂಧವನ್ನು ತಿಳಿಸಿರುವ ಪ್ರಯುಕ್ತ ಅಲ್ಲಿ ಅಸದ್ಯೋಗವೂ ಇದೆ.

ಒಳ್ಳೆಯ ಮತ್ತು ಕೆಟ್ಟ ಹೇತುಗಳ ಯೋಗವನ್ನು ಉದಾಹರಿಸುತ್ತಾನೆ. ಒಳ್ಳೆಯವು ಮತ್ತು ಕೆಟ್ಟವು ಇಂತವೆರಡು ಬಗೆಯ ಹೇತುಗಳೂ ಒಂದೆಡೆಗೆ ಸೇರಿರುವುದನ್ನು ಇಲ್ಲಿ ಕಾಣಬಹುದು. "ಹಗಲಿನಲ್ಲಿ ಕಾಂತಿಹೀನನಾದ ಚಂದ್ರನು, ಯೌವನವನ್ನು ಕಳೆದು ಕೊಂಡ ಹೆಂಡತಿ, ಕಮಲಗಳಿಲ್ಲದ ಸರೋವರ, ಮಾತನಾಡಲಿಕ್ಕಾಗದಿರುವ ಸುಂದರ ಪುರುಷನ ಬಾಯಿ, ಹಣದಲ್ಲಿ ಆತುರನಾದ ಪ್ರಭು, ಯಾವಾಗಲೂ ದರಿದ್ರ ನಾಗಿರುವ ಸತ್ಪುರುಷ, ರಾಜಸಭೆಯಲ್ಲಿರುವ ನೀಚ, ಈ ಏಳು ಅಂಶಗಳು ನನ್ನ ಮನಸ್ಸಿನಲ್ಲಿ ಮುಳ್ಳಿನಂತೆ ಚುಚ್ಚುತ್ತವೆ." ಇಲ್ಲಿ ಮನಸ್ಸಿನ ವ್ಯಥೆಗೆ ಹಗಲಿನ ಕಾಂತಿ ಹೀನ ಚಂದ್ರನೊಬ್ಬನೇ ಕಾರಣನೆನಿಸಿದ್ದರೂ ಯೌವನವನ್ನು ಕಳೆದುಕೊಂಡ ನಾರಿ ಮೊದಲಾದ ಅನೇಕ ಕಾರಣಗಳನ್ನು ಹೇಳಿರುವುದರಿಂದ ಇದು ಸಮುಚ್ಚಯವೆನಿಸಿದೆ. ಇಲ್ಲಿ "ಚಂದ್ರ, ಕಾಮಿನಿ, ಸರೋವರ, ಸುಂದರವಾದ ಆಕಾಶ, ಪ್ರಭು, ಸತ್ಪುರುಷ ಇವ ರೆಲ್ಲರೂ ಒಳ್ಳೆಯ ಹೇತುವೆನಿಸಿರುವರು; ನೀಚನು ದುಷ್ಟಹೇತುವೆನಿಸಿರುವನು. ಆದ್ದ ರಿಂದ ಇದು ಸದಸದ್ಯೋಗದ ಉದಾಹರಣವೆನಿಸಿದೆ.'' ಎಂದು ಕೆಲವರು ಹೇಳುತ್ತಾರೆ. ಉಳಿದವರಾದರೋ "ಚಂದ್ರ ಮೊದಲಾದವರು ಸಹಜವಾಗಿ ಯೋಗ್ಯಹೇತುವೆನಿಸಿರು ವರು. ಅವರಿಗೆ ಒದಗಿರುವ ಕಾಂತಿಹೀನತೆ ಮೊದಲಾದವು ಅಯೋಗ್ಯವಾದ ಹೇತು ಗಳೆನಿಸಿವೆ. ಆದ್ದರಿಂದ ಇಲ್ಲಿ ಸದಸದ್ಯೋಗವು ಸಂಭವಿಸಿದೆ'' ಎಂದು ಹೇಳುತ್ತಾರೆ. ಇಲ್ಲಿ ಚಂದ್ರ ಮೊದಲಾದವರಲ್ಲಿ ಇರುವ ಕಾಂತಿಹೀನತೆ ಮೊದಲಾದವು ಅತ್ಯಂತ ಅಯುಕ್ತವೆನಿಸಿರುವ ಪ್ರಯುಕ್ತ ಇಲ್ಲಿ ಚಮತ್ಕಾರವೇನೂ ಕಾಣುವುದಿಲ್ಲ. ಎಲ್ಲಿ ವೈಚಿತ್ರ್ಯವಿರುವುದೋ ಅದು ಮಾತ್ರವೇ ಚಮತ್ಕಾರವನ್ನುಂಟುಮಾಡಬಲ್ಲದು. 'ಮನಸಿ ಸಪ್ತ ಶಲ್ಯಾನಿ' ಎಂದು ಏಳನ್ನೂ ಒಟ್ಟಿಗೆ ಮುಳ್ಳುಗಳೆಂದು ಕೊನೆಯಲ್ಲಿ ಉಪ ಸಂಹಾರಮಾಡಲಾಗಿದೆ. 'ರಾಜಸಭೆಯಲ್ಲಿರುವ ನೀಚ' ನೆಂದು ಹೇಳಿದ್ದರಲ್ಲಿ ಕ್ರಮ ಭಂಗದೋಷವೂ ಇದೆ. ಮೊದಲಿಂದಲೂ 'ಶಶೀ ದಿವಸಧೂಸರಃ' ಎಂದು ವಿಶೇಷವನ್ನು ಪ್ರಾರಂಭದಲ್ಲಿ ತಿಳಿಸುತ್ತಬಂದು ಕೊನೆಯಲ್ಲಿ 'ನೃಪಾಂಗಣ್ಯಗತಃ' ಎಂಬ ವಿಶೇಷ್ಯಣ ವನ್ನು ತಿಳಿಸಿಯಾದಮೇಲೆ ಖಲಃ ಎಂಬ ವಿಶೇಷ್ಯವನ್ನು ತಿಳಿಸಿದ್ದು ಕ್ರಮಭೇದವೆನಿ ಸಿದೆ. ಇಲ್ಲಿ ಖಲೇಕಪೋತನ್ಯಾಯದಿಂದ ಎಲ್ಲಾ ಕಾರಣಗಳೂ ಒಟ್ಟಿಗೆ ಸಂಭವಿಸು ತ್ತವೆ. ಸಮಾಧ್ಯಲಂಕಾರದಲ್ಲಾದರೋ ಒಂದು ಕಾರ್ಯವನ್ನು ಸಾಧಿಸಲು ಸಮಗ್ರ ವಾದ ಕಾರಣವಿದ್ದರೂ ಕಾಕತಾಳೀಯ ನ್ಯಾಯದಂತೆ ಮತ್ತೊಂದು ಕಾರಣವು ಆಕಸ್ಮಿಕ ವಾಗಿ ಸಂಭವಿಸುತ್ತದೆ. ಇದೇ ಇವೆರಡಕ್ಕೂ ಇರುವ ಭೇದವೆಂದು ತಿಳಿಯಬೇಕು.

ಗುಣಗಳೆರಡು ಮತ್ತು ಕ್ರಿಯೆಗಳೆರಡು ಒಟ್ಟಿಗೆ ಸೇರಿರುವುದಕ್ಕೆ ಒಂದೇ ಉದಾ ಹರಣವನ್ನು ತಿಳಿಸುತ್ತಾನೆ. ಕೋಪಗೊಂಡಿರುವ ನಾಯಿಕೆಗೆ ಅವಳ ಸಖಿಯು ಹೇಳುವ ಮಾತಿದು. "ಎಲೈ ತರುಣಿ, ನಿನ್ನ ಕಣ್ಣುಗಳೆರಡೂ ಕೆಂಪಗಿವೆ. ನಿನ್ನ ಪ್ರಿಯನ ಮುಖವು ಮಲಿನಗೊಂಡಿದೆ. ಎಲೈ ಸಖಿಯೇ, ನಿನ್ನ ಮುಖವೂ ಹಾಗೆಯೇ ಬಗ್ಗಿ ಕೊಂಡಿದೆ. ಈ ನಿನ್ನ ಪತಿಯ ಹೃದಯದಲ್ಲಿ ಕಾಮಾಗ್ನಿಯು ಉರಿಯುತ್ತಿದೆ." ಇಲ್ಲಿ

ಮೊದಲನೆಯ ಅರ್ಥದಲ್ಲಿ ತರುಣತ್ವ ಮಲಿನತ್ವವೆಂಬ ಎರಡು ಗುಣಗಳು ಒಟ್ಟಿಗೆ ಸೇರಿವೆ. ಆದ್ದರಿಂದ ಅಲ್ಲಿ ಗುಣಸಮುಚ್ಚಯವಿದೆ. ದ್ವಿತೀಯಾರ್ಥದಲ್ಲಿ ಆನಮನ ಜ್ವಲನವೆಂಬ ಎರಡು ಕ್ರಿಯೆಗಳು ಒಟ್ಟಿಗೆ ಸೇರಿವೆ. ಆದ್ದರಿಂದ ಇಲ್ಲಿ ಕ್ರಿಯಾಸಮುಚ್ಚಯವಿದೆ. ಎರಡೂ ಒಟ್ಟಿಗೆ ಸೇರಿರುವುದನ್ನು ಈಗ ಉದಾಹರಿಸುತ್ತಾನೆ. ಒಬ್ಬ ರಾಜನ ಗುಣವನ್ನು ಇಲ್ಲಿ ವರ್ಣಿಸಿದೆ. "ಎಲೈ ರಾಜಶ್ರೇಷ್ಠನೇ, ಬಲಿಯಕಮಲಕ್ಕೆ ಸದೃಶವಾದ ಕಾಂತಿಯುಳ್ಳ ನಿನ್ನ ಕಣ್ಣುಗಳು ಶತ್ರುಗಳ ಬಗ್ಗೆ ಸಿಟ್ಟಿನಿಂದ ಕೆಂಪಾಗಿವೆ. ಆಕಸ್ಮಿಕವಾಗಿ ಆ ಶತ್ರುಗಳ ಶರೀರದಲ್ಲಿ ವಿಪತ್ತುಗಳ ವಕ್ರದೃಷ್ಟಿಗಳು ಬಿದ್ದವು." ಕಲುಷತ್ವವು ಗುಣವೆನಿಸಿದೆ. ಪತನವೆಂಬುದು ಕ್ರಿಯೆ ಎನಿಸಿದೆ. ಇವೆರಡನ್ನೂ ಒಟ್ಟಿಗೆ ಸೇರಿಸಿರುವುದರಿಂದ ಇದು ಸಮುಚ್ಚಯವೆನಿಸಿದೆ. ಇಲ್ಲಿ ಪತನಕ್ರಿಯೆಯು ಕಟಾಕ್ಷಗಳಲ್ಲೂ ಕಾಲುಷ್ಯಗುಣವು ಕಣ್ಣಿನಲ್ಲೂ ಇರುವ ಪ್ರಯುಕ್ತ ಗುಣಕ್ರಿಯೆಗಳಿಗೆ ಸಾಮಾನಾಧಿಕರಣ್ಯವಿಲ್ಲ. "ಈ ರಾಜನು ಖಡ್ಗವನ್ನು ಅಲ್ಲಾಡಿಸುತ್ತಾನೆ; ಹಾಗೆಯೇ ಕೀರ್ತಿಯನ್ನು ವಿಸ್ತರಿಸುತ್ತಾನೆ." ಇಲ್ಲಿ ಒಬ್ಬನಲ್ಲಿಯೇ ಕ್ರಿಯಾಸಮುಚ್ಚಯವನ್ನು ತಿಳಿಸಲಾಗಿದೆ. ಇಲ್ಲಿ ಅನೇಕ ಕ್ರಿಯೆಗಳಿಗೆ ಒಬ್ಬನೇ ಕರ್ತೃಕಾರಕನಿರುವನಾದರೂ ಇದನ್ನು ದೀಪಕವೆಂದು ಹೇಳಲಿಕ್ಕೆ ಬರುವಂತಿಲ್ಲ. ಗುಣಗಳು ಮತ್ತು ಕ್ರಿಯೆಗಳು ಒಟ್ಟುಗೂಡುವುದರಿಂದ ಏರ್ಪಡುವ ಸಮುಚ್ಚಯದ ಬಗೆಗಳು ನಿಯತವಾಗಿ ಕಾರ್ಯಕಾರಣಗಳಿಗೆ ಇರುವ ಕಾಲನಿಯಮ ಮತ್ತು ವಿಪರ್ಯಯ ಇವನ್ನು ಅವಲಂಬಿಸಿದ ಅತಿಶಯೋಕ್ತಿಯ ಆಧಾರದಮೇಲೆಯೇ ಇಲ್ಲಿ ಸಂಭವಿಸುತ್ತವೆ. ದೀಪಕದಲ್ಲಿ ಇಂತಹ ಅತಿಶಯೋಕ್ತಿಯ ಅವಶ್ಯಕತೆಯೇ ಇಲ್ಲ. ಇದೇ ಇವೆರಡು ಅಲಂಕಾರಗಳಿಗೂ ಇರುವ ವೈಲಕ್ಷಣ್ಯ. ಒಂದೇ ಕಾರಣಕ್ಕೆ ಅನೇಕ ಕ್ರಿಯೆಗಳೊಡನೆ ಯೋಗವಿದ್ದರೂ ಎಲ್ಲಿ ಅತಿಶಯೋಕ್ತಿ ಇರುವುದೋ ಅಲ್ಲಿಯೇ ಕ್ರಿಯಾಸಮುಚ್ಚಯವನ್ನು ಹೇಳಬೇಕು. ಅತಿಶಯೋಕ್ತಿ ಇಲ್ಲದ ಕಡೆಯೇ ದೀಪಕವನ್ನು ಹೇಳಬೇಕು.

> ಪ್ರಮಾಧಿಃ ಪುಕರೇ ಕಾರ್ಯೇ ದೈವಾದ್ವಸ್ತ್ವಂತರಾಗಮಾತ್ ।
>
> ನಿನಾನಸ್ಯಾ ನಿರಾಕರ್ತುಂ ಪಾದಯೋರ್ಮೇ ಪತಿಷ್ಯತಃ ।
>
> ಉಪಕಾರಾಯ ದಿಷ್ಟ್ಯೇದಂ ಉದೀರ್ಣಂ ಘನಗರ್ಜಿತಮ್ ॥
>
> ಪ್ರತ್ಯನೀಕಮಶಕ್ತೇನ ಪ್ರತೀಕಾರೋ ರಿಪೋರ್ಯದಿ ।
>
> ತದೀಯಸ್ಯ ತಿರಸ್ಕಾರಸ್ತಸ್ಯೈವೋತ್ಕರ್ಷಸಾಧಕಃ ॥

ತಸ್ಯೈವೇತಿ ರಿಪೋರೇವ. ಯಥಾ ಮಮ—

> ಮಧ್ಯೇನ ತನುಮಧ್ಯಾ ಮೇ ಮಧ್ಯಂ ಜಿತವತೀತ್ಯಯಮ್ ।
>
> ಇಭಕುಂಭೌ ಭಿನತ್ತ್ಯಸ್ಯಾಃ ಕುಚಕುಂಭನಿಭೌ ಹರಿಃ ॥
>
> ಪ್ರಸಿದ್ಧಸ್ಯೋಪಮಾನಸ್ಯೋಪಮೇಯತ್ವಪ್ರಕಲ್ಪನಮ್ ।
>
> ನಿಷ್ಫಲತ್ವಾಭಿಧಾನಂ ವಾ ಪ್ರತೀಪಮಿತಿ ಕಥ್ಯತೇ ॥

ಪ್ರತೀಪಮ್ ಯಥಾ— ಯತ್ರ ನೇತ್ರಸಮಾನಕಾಂತಿ ಸಲಿಲೇ ಮಗ್ನಂ ತದಿಂದೀವರಮ್ .

ತದ್ವಕ್ತ್ರಂ ಯದಿ, ಮುದ್ರಿತಾ ಶಶಿಕಲಾ ; ಹಾ ಹೇಮ, ಸಾ ಚೇದ್ದ್ಯುತಿಃ ;
ತಚ್ಚಕ್ಷುರ್ಯದಿ, ಹಾರಿತಂ ಕುವಲಯೈಃ ; ತಚ್ಚೇತ್ಸ್ಮಿತಂ, ಕಾ ಸುಧಾ ?।
ಧಿಕ್ಕಂದರ್ಪಧನುಃ ; ಭ್ರುವೌ ಯದಿ ಚ ತೇ ; ಕಿಂ ವಾ ಬಹು ಬ್ರೂಮಹೇ
ಯತ್ಸತ್ಯಂ ಪುನರುಕ್ತವಸ್ತುವಿಮುಖಃ ಸರ್ಗಕ್ರಮೋ ವೇಧಸಃ ॥

ಅತ್ರ ವಕ್ತ್ರಾದಿಭಿರೇವ ಚಂದ್ರಾದೀನಾಂ ಶೋಭಾತಿಶಯಹನನಾತ್ತೇಷಾಂ ನಿಷ್ಫಲತ್ವಮ್.

ಉಕ್ತ್ವಾ ಚಾತ್ಯಂತಮುತ್ಕರ್ಷಮತ್ಯುತ್ಕೃಷ್ಟಸ್ಯ ವಸ್ತುನಃ ।
ಕಲ್ಪಿತೇಽಪ್ಯುಪಮಾನತ್ವೇ ಪ್ರತೀಪಂ ಕೇಚಿದೂಚಿರೇ ॥

ಯಥಾ—ಅಹಮೇವ ಗುರುಃ ಸುದಾರುಣಾನಾಮಿತಿ ಹಾಲಾಹಲ! ತಾತ ಮಾ ಸ್ಮ ದೃಪ್ಯಃ ।
ನನು ಸಂತಿ ಭವಾದೃಶಾನಿ ಭೂಯೋ ಭುವನೇಽಸ್ಮಿನ್ ವಚನಾನಿ ದುರ್ಜನಾನಾಮ್ ॥

ಅತ್ರ ಪ್ರಥಮಪಾದೇ ಉತ್ಕರ್ಷಾತಿಶಯ ಉಕ್ತಃ : ತದನುಕ್ತೌ ತು ನಾಯಮಲಂಕಾರಃ. ಯಥಾ 'ಬ್ರಹ್ಮೇವ ಬ್ರಾಹ್ಮಣೋ ವದತಿ' ಇತ್ಯಾದಿ.

ಮೀಲಿತಂ ವಸ್ತುನೋ ಗುಪ್ತಿಃ ಕೇನಚಿತ್ತುಲ್ಯಲಕ್ಷ್ಮಣಾ ।

ಅತ್ರ ಸಮಾನಲಕ್ಷಣಂ ವಸ್ತು ಕ್ವಚಿತ್ಸಹಜಂ, ಕ್ವಚಿದಾಗಂತುಕಮ್. ಕ್ರಮೇಣ ಯಥಾ—ಲಕ್ಷ್ಮೀವಕ್ಷೋಜಕಸ್ತೂರೀಲಕ್ಷ್ಮ ವಕ್ಷಃಸ್ಥಲೇ ಹರೇಃ ।
ಗ್ರಸ್ತಂ ನಾಲಕ್ಷಿ ಭಾಽತ್ಯಾ ಭಾಸಾ ನೀಲೋತ್ಪಲಾಭಯಾ ॥

ಅತ್ರ ಭಗವತಃ ಶ್ಯಾಮಾ ಕಾಂತಿಃ ಸಹಜಾ.

ಸದೇವ ಶೋಣೋಪಲಕುಂಡಲಸ್ಯ ಯಸ್ಯಾಂ ಮಯೂಖೈರರುಣೀಕೃತಾನಿ ।
ಕೋಪೋಪರಕ್ತಾನ್ಯಪಿ ಕಾಮಿನೀನಾಂ ಮುಖಾನಿ ಶಂಕಾಂ ವಿದಧುರ್ನ ಯೂನಾಮ್ ॥

ಅತ್ರ ಮಾಣಿಕ್ಯಕುಂಡಲಸ್ಯ ಅರುಣಿಮಾ [illegible] ಆಗಂತುಕಃ.

ಸಾಮಾನ್ಯಂ ಪ್ರಕೃತಸ್ಯಾನ್ಯತಾದಾತ್ಮ್ಯಂ ಸದೃಶೈರ್ಗುಣೈಃ ।

ಯಥಾ—ಮಲ್ಲಿಕಾಚಿತಧಮ್ಮಿಲ್ಲಾಶ್ಚಾರುಚಂದನಚರ್ಚಿತಾಃ ।
ಅವಿಭಾವ್ಯಾ ಸುಖಂ ಯಾಂತಿ ಚಂದ್ರಿಕಾಸ್ವಭಿಸಾರಿಕಾಃ ॥

ಮೀಲಿತೇ ಉತ್ಕೃಷ್ಟಗುಣೇನ ನಿಕೃಷ್ಟಗುಣಸ್ಯ ತಿರೋಧಾನಮ್, ಇಹ ತು ಉಭಯೋಸ್ತುಲ್ಯಗುಣತಯಾ ಭೇದಾಗ್ರಹಃ.

ತದ್ಗುಣಃ ಸ್ವಗುಣತ್ಯಾಗಾದತ್ಯುತ್ಕೃಷ್ಟಗುಣಗ್ರಹಃ ।

ಯಥಾ—ಜಗಾದ ವದನಚ್ಛದ್ಮಪದ್ಮಪರ್ಯಂತಪಾತಿನಃ ।
ನಯನ್ಮಧುಲಿಹಃ ಶ್ವೈತ್ಯಮುದಗ್ರದಶನಾಂಶುಭಿಃ ॥

ಮೀಲಿತೇ ಪ್ರಕೃತಸ್ಯ ವಸ್ತುನೋ ವಸ್ತ್ವಂತರೇಣಾಚ್ಛಾದನಮ್, ಇಹ ತು ವಸ್ತ್ವಂತರಗುಣೇನ ಆಕ್ರಾಂತತಾ ಪ್ರತೀಯತ ಇತಿ ಭೇದಃ.

ತದ್ರೂಪಾನನುಹಾರಸ್ತು ಹೇತೌ ಸತ್ಯಪ್ಯತದ್ಗುಣಃ ॥

ಯಥಾ—ಹಂತ ! ಸಾಂದ್ರೇಣ ರಾಗೇಣ ಭೃತೇಽಪಿ ಹೃದಯೇ ಮಮ ।
ಗುಣಗೌರ ! ನಿಷಣ್ಣೋಽಪಿ ಕಥಂ ನಾಮ ನ ರಜ್ಯಸಿ ॥

ಯಥಾ ವಾ—ಗಾಂಗಮಂಬು ಸಿತಮಂಬು ಯಾಮುನಂ ಕಜ್ಜಲಾಭಮುಭಯತ್ರ ಮಜ್ಜತಃ ।
ರಾಜಹಂಸ! ತವ ಸೈವ ಶುಭ್ರತಾ ಚೀಯತೇ ನ ಚ ನ ಚಾಪಚೀಯತೇ॥

ಪೂರ್ವತ್ರ ಪಶೀಕೃತಹೃದಯಸಂಪರ್ಕಾತ್ ಪ್ರಾಪ್ತವಪಿ ಗುಣಗೌರಶಬ್ದವಾಚ್ಯಸ್ಯ ನಾಯಕಸ್ಯ ರಕ್ತತ್ವಂ ನ ನಿಷ್ಪನ್ನಮ್, ಉತ್ತರತ್ರ ಅಪ್ರಸ್ತುತಪ್ರಶಂಸಯಾ ವಿದ್ಯಮಾನಾಯಾಮಪಿ ಗಂಗಾಯಮುನಾಪೇಕ್ಷಯಾ ಪ್ರಕೃತಸ್ಯ ಹಂಸಸ್ಯ ಗಂಗಾಯಮುನಯೋಃ ಸಂಪರ್ಕೇಽಪಿ ನ ತದ್ರೂಪತಾ.

ಅತ್ರ ಚ ಗುಣಗ್ರಹಣರೂಪವಿಚ್ಛಿತ್ತಿವಿಶೇಷಾಶ್ರಯಾದ್ವಿಶೇಷೋಕ್ತೇರ್ಭೇದಃ. ವರ್ಣಾಂತರೋತ್ಪತ್ತ್ಯಭಾವಾಚ್ಚ ಪಿಷಮಾತ್.

ಸಂಲಕ್ಷಿತಸ್ತು ಸೂಕ್ಷ್ಮೋಽರ್ಥ ಆಕಾರೇಣೇಂಗಿತೇನ ವಾ ।
ಕಯಾಪಿ ಸೂಚ್ಯತೇ ಭಂಗ್ಯಾ ಯತ್ರ ಸೂಕ್ಷ್ಮಂ ತದುಚ್ಯತೇ ॥

ಸೂಕ್ಷ್ಮಃ ಸ್ಥೂಲಮತಿಭಿರಸಂಲಕ್ಷ್ಯಃ. ಅತ್ರ ಆಕಾರೇಣ ಯಥಾ—

ವಕ್ತ್ರಸ್ಯಂದಿಸ್ವೇದಬಿಂದುಪ್ರಬಂಧೈರ್ದೃಷ್ಟ್ವಾ ಭಿನ್ನಂ ಕುಂಕುಮಂ ಕಾಪಿ ಕಂಠೇ ।
ಪುಂಸ್ತ್ವಂ ತನ್ವ್ಯಾ ವ್ಯಂಜಯಂತೀ ವಯಸ್ಯಾ ಸ್ಮಿತ್ವಾ ಪಾಣೌ ಖಡ್ಗಲೇಖಾ ಲಿಲೇಖ॥

ಅತ್ರ ಕಯಾಚಿತ್ ಕುಂಕುಮಭೇದೇನ ಸಂಲಕ್ಷಿತಂ ಕಸ್ಯಾಶ್ಚಿತ್ ಪುರುಷಾಯಿತಂ ಪಾಣೌ ಪುರುಷಚಿಹ್ನಖಡ್ಗಲೇಖಾಲಿಖನೇನ ಸೂಚಿತಮ್. ಇಂಗಿತೇನ ಯಥಾ—

ಸಂಕೇತಕಾಲಮನಸಂ ವಿಟಂ ಜ್ಞಾತ್ವಾ ವಿದಗ್ಧಯಾ ।
ಹಸನ್ನೇತ್ರಾರ್ಪಿತಾಕೂತಂ ಲೀಲಾಪದ್ಮಂ ನಿಮೀಲಿತಮ್ ॥

ಅತ್ರ ವಿಟಸ್ಯ ಭ್ರೂಕ್ಷೇಪಾದಿನಾ ಲಕ್ಷಿತಃ ಸಂಕೇತಕಾಲಾಭಿಪ್ರಾಯಃ ರಜನೀಕಾಲಭಾವಿನಾ ಪದ್ಮನಿಮೀಲನೇನ ಪ್ರಕಾಶಿತಃ.

ವ್ಯಾಜೋಕ್ತಿರ್ಗೋಪನಂ ವ್ಯಾಜಾದುದ್ಭಿನ್ನಸ್ಯಾಪಿ ವಸ್ತುನಃ ।

ಯಥಾ—ಶೈಲೇಂದ್ರಪ್ರತಿಪಾದ್ಯಮಾನಗಿರಿಜಾಹಸ್ತೋಪಗೂಢೋಲ್ಲಸ
ದ್ರೋಮಾಂಚಾದಿವಿಸಂಷ್ಠುಲಾಖಿಲವಿಧಿವ್ಯಾಸಂಗಭಂಗಾಕುಲಃ ।
ಆಃ! ಶೈತ್ಯಂ ತುಹಿನಾಚಲಸ್ಯ ಕರಯೋರಿತ್ಯೂಚಿವಾನ್ ಸಸ್ಮಿತಂ ॥
ಶೈಲಾಂತಃಪುರಮಾತೃಮಂಡಲಗಣೈರ್ದೃಷ್ಟೋಽವತಾದ್ವಃ ಶಿವಃ ।

ನೇಯಂ ಪ್ರಥಮಾಪಹ್ನುತಿಃ ಅಪಹ್ನವಕಾರಿಣೋ ವಿಷಯಸ್ಯಾನಭಿಧಾನಾತ್. ದ್ವಿತೀಯಾಪಹ್ನುತೇರ್ಭೇದಸ್ತು ತತ್ರೈವ ದರ್ಶಿತಃ.

ಈಶ್ವರನ ಇಚ್ಛೆಯಂತೆ ಬೇರೆ ಕಾರಣಗಳು ಒದಗಿ ಕಾರ್ಯವು ಅನಾಯಾಸದಿಂದ ನೆರವೇರುವುದಾದರೆ ಅದು ಸಮಾಧ್ಯಲಂಕಾರವೆನಿಸುವುದು. ಸ್ವಾಭಾವಿಕವಾದ ಕಾರಣದಿಂದ ಕಾರ್ಯವು ನಡೆಯುವಂತಿದ್ದು ಆಕಸ್ಮಿಕವಾಗಿ ಒದಗಿದ ಕಾರಣದಿಂದ ಅದು ಸುಗಮವಾಗಿ ನೆರವೇರುವುದೇ ಸಮಾಧಿ ಎಂದು ಹೇಳಿದಂತಾಯಿತು. ಸಖಿಯ ಎದುರಿಗೆ ಒಬ್ಬನು ಪ್ರೇಯಸಿಯ ಕೋಪವನ್ನು ತೊಲಗಿಸಲು ಹೇಳುವ ಮಾತಿದು.

"ಈ ಪ್ರೇಯಸಿಯ ಕೋಪವನ್ನು ತೊಲಗಿಸಲು ಆಕೆಯ ಪಾದಗಳಲ್ಲಿ ಬಿದ್ದ ನನಗೆ ಅನುಕೂಲವಾಗುವಂತೆ ಮೇಘದ ಗರ್ಜನೆಯುಂಟಾಯಿತು. ಕಾಲಿಗೆ ಬಿದ್ದದ್ದರಿಂದಲೇ ಆಕೆಯ ಮಾನಭಂಗವು ಅಸಾಧ್ಯವಾಗುತ್ತಿತ್ತು ; ಆದರೆ ಮೇಘದ ಧ್ವನಿಯನ್ನು ಕೇಳಿದ್ದರಿಂದ ಆಕೆಗೆ ಪ್ರೇಮವು ಹುಟ್ಟಿದ ಪ್ರಯುಕ್ತ ಕೋಪವು ತೊಲಗಲು ಅನುಕೂಲವಾಯಿತು " ಹೀಗೆ ಕಾಲಿಗೆ ಬಿದ್ದದ್ದರಿಂದ ಆಗದೇ ಇದ್ದ ಮಾನಭಂಗವೆಂಬ ಕಾರ್ಯವು ಈಶ್ವರನ ಸಂಕಲ್ಪದಂತೆ ಒದಗಿದ ಮೇಘದ ಗರ್ಜನೆಯಿಂದ ಸುಗಮವಾಯಿತಾದ್ದರಿಂದ ಇದು ಸಮಾಧ್ಯಲಂಕಾರವೆನಿಸಿದೆ.

ಶತ್ರುವನ್ನು ತಡೆಗಟ್ಟುವುದು ಇಷ್ಟವೆನಿಸಿದ್ದರೂ ಸಾಧಿಸಲಿಕ್ಕೆ ಅಸಾಧ್ಯವಾಗಿರಲು ಅವನ ಕಡೆಯ ಜನರಲ್ಲಿ ಯಾವನಾದರೊಬ್ಬನನ್ನು ತಿರಸ್ಕರಿಸುವುದರಿಂದ ಆ ಶತ್ರುವಿಗೇ ಅವಮಾನವಾಗುವುದಾದರೆ ಅದು ಪ್ರತ್ಯನೀಕವೆಂಬ ಅಲಂಕಾರವೆನಿಸುವುದು. "ಕೃಶವಾದ ಸೊಂಟವಿರುವ ನಾಯಿಕೆಯು ಮಧ್ಯಪ್ರದೇಶದಿಂದ ಸಿಂಹವೆನಿಸಿದ ಸನ್ನ ಸೊಂಟವನ್ನು ಜಯಿಸಿರುವಳೆಂಬ ಕಾರಣದಿಂದ ಈ ಸಿಂಹವು ಆಕೆಯ ಕುಚಕುಂಭಗಳಿಗೆ ಸದೃಶವಾದ ಆನೆಯ ಕುಂಭಸ್ಥಳಗಳನ್ನು ಉಗುರಿನಿಂದ ಸೀಳುತ್ತದೆ." ಇಲ್ಲಿ ಸಿಂಹದ ಸೊಂಟವನ್ನು ಜಯಿಸಿದ್ದರಿಂದ ನಾಯಿಕೆಯು ಸಿಂಹದ ಶತ್ರುವೆನಿಸಿರುವಳು. ಆದರೆ ಆ ಸಿಂಹವು ನಾಯಿಕೆಗೆ ಯಾವ ಪ್ರತೀಕಾರವನ್ನು ಮಾಡಲಿಕ್ಕೂ ಸಮರ್ಥವೆನಿಸಿಲ್ಲ. ಆನೆಯ ಕುಂಭಸ್ಥಳಗಳು ಆ ನಾಯಿಕೆಯ ಸ್ತನಕುಂಭಗಳಿಗೆ ಸದೃಶವಾಗಿದ್ದುದರಿಂದ ಸಿಂಹವು ಅವನ್ನು ಭೇದಿಸಿತು. ಇದರಿಂದ ನಾಯಿಕೆಯ ಸ್ತನಕುಂಭಗಳನ್ನೇ ಭೇದಿಸಿದಂತಾಯಿತು. ಸ್ತನಕುಂಭಗಳಿಗೆ ಆನೆಯ ಕುಂಭಸ್ಥಳಗಳು ಸದೃಶವೆನಿಸಿದ್ದರಿಂದ ಪ್ರತೀಪಾಲಂಕಾರವೂ ಇಲ್ಲಿ ಇರುವ ಪ್ರಯುಕ್ತ ಇದರೊಡನೆ ಸಮಾಧ್ಯಲಂಕಾರವೂ ಸೇರಿಕೊಂಡಿದೆ.

ಈಗ ಪ್ರತೀಪಾಲಂಕಾರವನ್ನು ವಿವರಿಸುತ್ತಾನೆ. ಪ್ರಸಿದ್ಧವಾದ ಉಪಮಾನವನ್ನು ಉಪಮೇಯವೆಂದು ಕಲ್ಪಿಸುವುದೇ ಪ್ರತೀಪವೆನಿಸುವುದು ಅಥವಾ ಆ ಉಪಮಾನವೇ ನಿಷ್ಫಲವೆಂದು ತಿಳಿಸುವುದೇ ಪ್ರತೀಪವೆನಿಸುವುದು. ಯತ್ತ್ವನ್ನೇತ್ರಸಮಾನಕಾಂತಿ ಎಂಬ ಪದ್ಯದಲ್ಲಿ ನೇತ್ರ, ಮುಖ, ಗಮನ ಇವುಗಳಿಗೆ ಉಪಮಾನವೆಂದು ಪ್ರಸಿದ್ಧವಾದ ಕನ್ನೈದಿಲೆ, ಚಂದ್ರ, ರಾಜಹಂಸ ಇವನ್ನು ಅವಕ್ಕೆ ಉಪಮೇಯವೆಂದು ಕಲ್ಪಿಸಿದ್ದರಿಂದ ಇದು ಪ್ರತೀಪದ ಮೊದಲನೆಯ ಬಗೆ ಎನಿಸಿದೆ. ಉಪಮಾನವೇ ನಿಷ್ಫಲವೆಂದು ತಿಳಿಸುವುದನ್ನು ಉದಾಹರಿಸುತ್ತಾನೆ. ಆ ಕುವಲಯಮಾಲೆ ಎಂಬ ನಾಯಿಕೆಯ ಮುಖವಿದ್ದ ಪಕ್ಷದಲ್ಲಿ ಆಗ ಚಂದ್ರನ ಸೌಂದರ್ಯದ ಪ್ರಶಂಸೆಯೇ ಬೇಕಾಗಿಲ್ಲ. ಆಕೆಯ ದೇಹದ ಶೋಭೆ ಇದ್ದಲ್ಲಿ ಸುವರ್ಣವೇ ಕಾಂತಿಹೀನವೆನಿಸಿತು. ಆಕೆಯ ಕಣ್ಣನ್ನು ನೋಡಿದಮೇಲೆ ಕನ್ನೈದಿಲೆಗಳು ನಿಸ್ತೇಜವಾದಂತಾಯಿತು. ಆಕೆಯ ಮಂದಹಾಸವನ್ನು ಗಮನಿಸಿದಮೇಲೆ ಅಮೃತವೇಕೆ ಬೇಕು ? ಆಕೆಯ ಸ್ತನಗಳ ಮುಂದೆ ಮನ್ಮಥನ ಧನುಸ್ಸಿಗೆ ಧಿಕ್ಕಾರವಿರಲಿ. ಇನ್ನು ಹೆಚ್ಚು ಏಕೆ ಹೇಳಬೇಕು ? ಬ್ರಹ್ಮನ ಸೃಷ್ಟಿಚಕ್ರವು

ಒಂದೇ ರೀತಿಯ ಎರಡನೆಯ ಪದಾರ್ಥವನ್ನು ನಿರ್ಮಿಸಲು ಹಿಂದೆಗೆದರೆ ಅದೇ ನಿಜವೆನಿಸುವುದು. ಬ್ರಹ್ಮನು ಒಂದೆ ಬಗೆಯ ಎರಡು ವಸ್ತುಗಳನ್ನು ಸೃಷ್ಟಿಸಲಾರನೆಂಬ ಮಾತು ಸತ್ಯವೇ ಆದೀತು. ಚಂದ್ರ ಮೊದಲಾದ ಉಪಮಾನಗಳಿಗಿಂತಲೂ ಆಕೆಯ ಮುಖ ಮೊದಲಾದವು ಅತ್ಯುತ್ತಮವೆನಿಸಿದ್ದರಿಂದ ಅವು ಇವು ಒಂದೇ ಬಗೆ ಎನಿಸಿಲ್ಲ." ಇಲ್ಲಿ ಮುಖ ಮೊದಲಾದ ಉಪಮೇಯಗಳಿಂದಲೇ ಚಂದ್ರ ಮೊದಲಾದ ಉಪಮಾನಗಳಿಗೆ ಹೆಚ್ಚಿನ ಕಾಂತಿಯುಂಟಾಗುವ ಪ್ರಯುಕ್ತ ಈ ಉಪಮಾನಗಳೇ ನಿಷ್ಫಲವೆಂದು ತಿಳಿಸಿರುವುದರಿಂದ ಇದು ಪ್ರತೀಪದ ಎರಡನೆಯ ಬಗೆ ಎನಿಸಿದೆ. ಹೆಚ್ಚು ಪ್ರಧಾನವಾದ ವಸ್ತುವನ್ನು ಉತ್ಕೃಷ್ಟವೆಂದು ತಿಳಿಸಿ ಉಪಮೇಯವನ್ನಾಗಿ ಕಲ್ಪಿಸುವುದೂ ಸಹ ಪ್ರತೀಪವೆಂದು ಕೆಲವು ಆಲಂಕಾರಿಕರು ತಿಳಿಸಿದ್ದಾರೆ. ದುಷ್ಟರ ಕೈಗೆ ಸಿಕ್ಕಿರುವವನೊಬ್ಬನು ಹೇಳುವ ಮಾತಿನಲ್ಲಿ ಇದು ಕಂಡುಬರುವುದು. "ಎಲೈ ವಿಷವೇ, ಭೀಕರ ವಸ್ತುಗಳಲ್ಲೆಲ್ಲಾ ನೀನೇ ಶ್ರೇಷ್ಠವೆಂದು ಭಾವಿಸಿ ಗರ್ವಪಡಬೇಡ. ನಿನ್ನಂತೆಯೇ ಭೀಕರವೆನಿಸಿದ ದುಷ್ಟರ ಮಾತುಗಳು ವಿಶೇಷವಾಗಿ ಈ ಭೂಮಿಯಲ್ಲಿ ನೆಲೆಸಿವೆ." ಇಲ್ಲಿ ಪ್ರಥಮಪಾದದಲ್ಲಿ ವಿಷದ ಉತ್ಕರ್ಷವನ್ನು "ಸುದಾರುಣಾನಾಂ ಗುರುಃ" ಎಂದು ತಿಳಿಸಿ 'ಭವಾದೃಶಾನಿ' ಎಂಬಲ್ಲಿ ಅದನ್ನು ಉಪಮೇಯವೆಂದು ಕಲ್ಪಿಸಿರುವುದರಿಂದ ಇದ ಪ್ರತೀಪವೆನಿಸಿದೆ. ಹಾಗೆ ಅದರ ಉತ್ಕರ್ಷವನ್ನು ಮೊದಲು ತಿಳಿಸದೆ ಇದ್ದರೆ ಇದು ಪ್ರತೀಪವೇ ಆಗದೇಹೋದೀತು ! 'ಬ್ರಹ್ಮನಂತೆ ಬ್ರಾಹ್ಮಣನು ಹೇಳುತ್ತಾನೆ' ಎಂಬಲ್ಲಿ ಉಪಮಾನವೆನಿಸಿದ ಬ್ರಹ್ಮನ ಉತ್ಕರ್ಷಾತಿಶಯವನ್ನು ತಿಳಿಸದೇ ಇರುವುದರಿಂದ ಇದು ಪ್ರತೀಪವೆನಿಸಿಲ್ಲ.

ಅನುರೂಪವಾದ ಯಾವುದಾದರೊಂದು ವಸ್ತುವಿನಿಂದ ಸಮಾನವೆನಿಸಿದ ಬೇರೊಂದು ವಸ್ತುವನ್ನು ತಿರಸ್ಕರಿಸುವುದೇ ಮೀಲಿತವೆಂಬ ಅಲಂಕಾರವೆನಿಸುವುದು. ಉತ್ಕೃಷ್ಟಗುಣದಿಂದ ನಿಕೃಷ್ಟಗುಣವನ್ನು ಮುಚ್ಚುವುದೇ ಮೀಲಿತವೆನಿಸಿದೆ. ಆದುದರಿಂದ ಇದು ಸಾಮಾನ್ಯಾಲಂಕಾರಕ್ಕಿಂತ ಬೇರೆ ಎನಿಸಿದೆ. ವ್ಯಾಜೋಕ್ತಿಯಲ್ಲಿ ವಸ್ತು ಒಂದನ್ನು ಕಪಟದಿಂದ ಮುಚ್ಚಲಾಗುವುದು; ಇಲ್ಲಿಯಾದರೋ ಕಪಟವಿಲ್ಲದೆಯೇ ಒಂದು ವಸ್ತುವನ್ನು ಮುಚ್ಚಲಾಗುವುದು. ಇದೇ ಇವೆರಡಕ್ಕೂ ಇರುವ ಭೇದವು. ಮುಚ್ಚಿದ ವಸ್ತು ಒಂದನ್ನು ಬೇರೊಂದು ವಸ್ತುವಿನಿಂದ ತಿರಸ್ಕರಿಸುವುದೇ ಮೀಲಿತವೆಂದು ಹೇಳಿದಂತಾಯಿತು. ಸಮಾನವೆನಿಸಿದ ವಸ್ತುವು ಕೆಲವು ವೇಳೆ ಸ್ವಾಭಾವಿಕವಾಗಿಯೂ ಕೆಲವು ವೇಳೆ ಆಕಸ್ಮಿಕವಾಗಿ ತೋರುವುದು. ಇವುಗಳಲ್ಲಿ ಸ್ವಾಭಾವಿಕವಸ್ತುವಿನಿಂದ ಬೇರೊಂದು ವಸ್ತುವಿನ ತಿರಸ್ಕಾರವನ್ನು ಉದಾಹರಿಸುತ್ತಾನೆ. "ಲಕ್ಷ್ಮಿಯ ಸ್ತನಗಳನ್ನು ಆಲಂಗಿಸಿದ್ದರಿಂದ ಅಂಟಿಕೊಂಡ ಕಸ್ತೂರಿಯ ಗುರುತು ಕನ್ನೈದಿಲೆಗೆ ಸಮಾನವಾದ ಕೃಷ್ಣನ ದೇಹಕಾಂತಿಯಿಂದ ತಿರಸ್ಕೃತವಾಯಿತೆಂಬುದು ಲಕ್ಷ್ಮಿಯ ಸವತಿ ಎನಿಸಿದ ಸರಸ್ವತಿಯು ಗಮನಿಸಲಿಲ್ಲ. ಆದ್ದರಿಂದಲೇ ಆಕೆಗೆ ಕೋಪವು ಹುಟ್ಟಲಿಲ್ಲ." ಇಲ್ಲಿ ಕೃಷ್ಣನಲ್ಲಿ ಕಪ್ಪು ಬಣ್ಣವು ಸ್ವಾಭಾವಿಕವೆನಿಸಿದೆ. ಕಸ್ತೂರಿಯ ಕಪ್ಪು ಬಣ್ಣಕ್ಕಿಂತಲೂ

ಉತ್ಕೃಷ್ಟವೆನಿಸಿದ ಕೃಷ್ಣನಲ್ಲಿ ಸಹಜವಾಗಿರುವ ಕಪ್ಪು ಬಣ್ಣವು ದೇಹಪ್ರಭೆಯಿಂದ ಕಸ್ತೂರಿಯ ಗುರುತನ್ನು ತಿರಸ್ಕರಿಸಿದ್ದರಿಂದ ಇದು ಮೀಲಿತವೆನಿಸಿದೆ. ಕೃಷ್ಣನು ಲಕ್ಷ್ಮಿಯನ್ನು ಆಲಿಂಗಿಸಿದಾಗ ಆಕೆಯ ಸ್ತನಗಳಲ್ಲಿ ಹಚ್ಚಿದ್ದ ಕಸ್ತೂರಿಯ ಗುರುತು ಅವನ ದೇಹದಲ್ಲಿ ಅಂಟಿತ್ತು. ಆದರೂ ದೇಹಪ್ರಭೆಯು ಆ ಗುರುತನ್ನು ತಿರಸ್ಕರಿಸಿತ್ತೆಂದು ಇಲ್ಲಿ ಹೇಳಿದರಿಂದ ಇದು ಮೀಲಿತವೆನಿಸಿದೆ. ಈಗ ಇದರ ಎರಡನೆಯ ಬಗೆಯನ್ನು ತಿಳಿಸುತ್ತಾನೆ. "ಯಾವ ನಗರದಲ್ಲಿ ಕೆಂಪುಬಣ್ಣದ ಮಣಿಯಿಂದ ನಿರ್ಮಿತವಾದ ಕರ್ಣಾಭರಣದ ಪ್ರಭೆಗಳಿಂದ ಯಾವಾಗಲೂ ಕೆಂಪಾಗಿದ್ದ ಕಾಮಿನಿಯರ ಮುಖಗಳು ಪ್ರಣಯಕೋಪದಿಂದ ಕೆಂಪಾಗಿದ್ದರೂ ಯುವಕರಿಗೆ ಭಯವನ್ನು ಹುಟ್ಟಿಸಲಿಲ್ಲ. ಅಂತಹ ಕರ್ಣಾಭರಣದಿಂದಲೇ ಅದರಲ್ಲಿ ಹೀಗೆ ಕೆಂಪುಬಣ್ಣವಿತ್ತೆಂದು ಯುವಕರು ನಿಶ್ಚಯಿಸಿದರು" ಇಲ್ಲಿ ಮುಖದಲ್ಲಿ ಕರ್ಣಕುಂಡಲದಿಂದ ಆಗಂತುಕವಾಗಿ ಬಂದಿರುವ ಕೆಂಪು ಪ್ರಣಯಕೋಪದಿಂದ ಬರುವ ಕೆಂಪಿಗಿಂತಲೂ ಉತ್ಕೃಷ್ಟವೆನಿಸಿದ್ದು ಅದನ್ನು ತಿರಸ್ಕರಿಸಿತೆಂದು ಹೇಳಿರುವ ಪ್ರಯುಕ್ತ ಇದು ಮೀಲಿತವೆನಿಸಿದೆ.

ಸಮಾನವಾದ ಗುಣಗಳಿರುವುದರಿಂದ ಅಪ್ರಕೃತವಸ್ತು ಒಂದನ್ನು ಬೇರೆಯಲ್ಲವೆಂದು ತಿಳಿಯುವುದೇ ಸಮಾನವೆಂಬ ಅಲಂಕಾರವೆನಿಸುವುದು. ಸಮಾನಗುಣದ ಮೂಲಕ ಪ್ರಕೃತಾಪ್ರಕೃತವಸ್ತುಗಳಿಗೆ ಅಭೇದವನ್ನು ತಿಳಿಯುವುದೇ ಸಾಮಾನ್ಯವೆಂದು ಹೇಳಿದಂತಾಯಿತು. "ಮಲ್ಲಿಗೆ ಹೂವುಗಳನ್ನು ಕೂದಲಿಗೆ ಮುಡಿದುಕೊಂಡು ಶ್ರೀಗಂಧವನ್ನು ಮೈಗೆ ಹಚ್ಚಿಕೊಂಡು ಬೆಳದಿಂಗಳಿನಂತೆ ಇರುವುದರಿಂದ ಜನರಿಗೆ ಗುರ್ತಿಸಲಿಕ್ಕೆ ಆಗದೆ ಇರುವ ಅಭಿಸಾರಿಕೆಯರು (ಪತಿಯನ್ನು ಹುಡುಕಿಕೊಂಡು ಹೋಗುವ ಸ್ತ್ರೀಯರು) ಬೆಳದಿಂಗಳಿನಲ್ಲಿ ಅನಾಯಾಸವಾಗಿ ಪತಿಯ ಬಳಿಗೆ ಹೋಗುವರು." ಇಲ್ಲಿ ಪ್ರಕೃತರೆನಿಸಿದ ಅಭಿಸಾರಿಕೆಯರಿಗೂ ಅಪ್ರಕೃತವಾದ ಬೆಳದಿಂಗಳಿಗೂ ಬಿಳಿಯ ಬಣ್ಣವು ಸಹಜವಾಗಿರುವುದರಿಂದ ಇವೆರಡಕ್ಕೂ ಅಭೇದವು ತೋರುವ ಪ್ರಯುಕ್ತ ಇದು ಸಾಮಾನ್ಯಾಲಂಕಾರವೆನಿಸಿದೆ. ಮೀಲಿತದಲ್ಲಿ ಉತ್ಕೃಷ್ಟವಾದ ಗುಣವು ನಿಕೃಷ್ಟವಾದ ಗುಣವನ್ನು ಮುಚ್ಚುತ್ತದೆ. ಇಲ್ಲಿಯಾದರೋ ಎರಡು ವಸ್ತುಗಳಲ್ಲೂ ಸಮಾನವಾದ ಗುಣವೇ ಇರುವುದರಿಂದ ಅವೆರಡಕ್ಕೂ ಭೇದವು ಕಂಡು ಬರುವುದಿಲ್ಲ.

ಒಂದು ವಸ್ತುವು ತನ್ನಲ್ಲಿರುವ ಗುಣವನ್ನು ತೊರೆದು ಅತ್ಯುತ್ಕೃಷ್ಟವಾದ ಗುಣವನ್ನು ಪಡೆಯುವುದಾದರೆ ಅದು ತದ್ಗುಣಾಲಂಕಾರವೆನಿಸುವುದು. "ಉನ್ನತವಾದ ದಂತಗಳ ಕಾಂತಿಗಳಿಂದ ಮುಖವೆಂಬ ನೆಪವಿರುವ ಕಮಲದ ಪಕ್ಕದಲ್ಲಿಯೇ ಹೋಗಿ ಬೀಳುತ್ತಿರುವ ದುಂಬಿಗಳನ್ನು ಬೆಳ್ಳಗೆ ಮಾಡುತ್ತಲೇ ಬಲರಾಮನು ಮಾತನಾಡ ಲಾರಂಭಿಸಿದನು" ಇಲ್ಲಿ ದುಂಬಿಗಳು ತಮ್ಮ ಕಪ್ಪುಬಣ್ಣವನ್ನು ತೊರೆದು ಅದಕ್ಕಿಂತಲೂ ಉತ್ಕೃಷ್ಟವಾದ ಬಿಳಿಯ ಬಣ್ಣವನ್ನು ಪಡೆದದ್ದರಿಂದ ಇದು ತದ್ಗುಣವೆನಿಸಿದ ಮೀಲಿತದಲ್ಲಿ ಪ್ರಕೃತವಸ್ತುವನ್ನು ಬೇರೊಂದು ವಸ್ತುವು ಮುಚ್ಚಲಾಗುವುದು.

ಇಲ್ಲಿಯಾದರೋ ಬೇರೊಂದು ವಸ್ತುವಿನ ಗುಣವು ಪ್ರಕೃತವಸ್ತುವನ್ನು ಆಶ್ರಯಿಸುವುದು. ಮುಂಬಗಳು ಸ್ವಗುಣವನ್ನು ತೋರಿಯದೆ ಇದ್ದರೂ ಹಲ್ಲಿನ ಗುಣವು ಅವುಗಳ ಮೇಲೆ ಬಿದ್ದಿರುವ ಪ್ರಯುಕ್ತ ಅವು ತಮ್ಮ ಗುಣವನ್ನು ತೋರಿದಂತೆ ಕಂಡು ಬರುತ್ತದೆ. ಇದೇ ಇವೆರಡಕ್ಕೂ ಇರುವ ಭೇದ.

ಬೇರೊಂದು ವಸ್ತುವಿನ ಗುಣವನ್ನು ಗ್ರಹಿಸಲು ಸಾನ್ನಿಧ್ಯವೇ ಮೊದಲಾದ ಕಾರಣವಿದ್ದರೂ ಆ ವಸ್ತುವಿನ ಗುಣವನ್ನು ಪಡೆಯದೇ ಇರುವುದು ಅತದ್ಗುಣವೆಂದು ಹೇಳಿದಂತಾಯಿತು. ಪ್ರಕೃತವಸ್ತು ಪ್ರಕೃತವಸ್ತುವಿನ ಗುಣವನ್ನು ಗ್ರಹಿಸದೇ ಇರುವುದನ್ನು ಉದಾಹರಿಸುತ್ತಾನೆ. ಪ್ರೇಮವಿಲ್ಲದ ಪತಿಯಲ್ಲಿ ಅನುರಕ್ತಳಾಗಿರುವವಳೊಬ್ಬಳು ಹೇಳುವ ಮಾತಿದು. "ವಿದ್ಯೆ, ವಿನಯ ಮೊದಲಾದ ಗುಣಗಳಿಂದ ಶೋಭಿಸುವವಳೇ! ನನ್ನ ಹೃದಯವು ಪೂರ್ಣಪ್ರೇಮದಿಂದ ತುಂಬಿಕೊಂಡಿದ್ದರೂ, ಅಲ್ಲಿ ನೀನು ನೆಲಸಿದ್ದರೂ ನನ್ನನ್ನು ಏಕೆ ಪ್ರೀತಿಸುತ್ತಿಲ್ಲ?" ಇಲ್ಲಿ ಅನುರಾಗದಿಂದ ತುಂಬಿರುವ ಹೃದಯದಲ್ಲಿ ಪತಿಯು ನೆಲೆಸಿರುವುದೇ ಕಾರಣವೆನಿಸಿದೆ. ಅದು ಇದ್ದರೂ ಅವನ ಅನುರಾಗವು ಅಲ್ಲಿ ನೆಲಸದೇ ಇರುವುದರಿಂದ ಇದು ಅತದ್ಗುಣವೆನಿಸಿದೆ. ಹೃದಯವೇ ಪ್ರಕೃತವಸ್ತು. ಅದು ಪ್ರಕೃತಗುಣವೆನಿಸಿದ ಅನುರಾಗವನ್ನು ಪಡೆಯಲಿಲ್ಲವೆಂದು ಇಲ್ಲಿ ತಿಳಿಸಿದೆ. ಈಗ ಪ್ರಕೃತವಸ್ತು ಬೇರೆ ಅಪ್ರಕೃತವಸ್ತುವಿನ ಗುಣವನ್ನು ಪಡೆಯದೆ ಇರುವುದಕ್ಕೆ ಉದಾಹರಣೆಯನ್ನು ಕೊಡುತ್ತಾನೆ. ಋಷಿಗಳ ಮತ್ತು ವೇಶ್ಯೆಯರ ಮನೆಯಲ್ಲೂ ಭಿಕ್ಷೆಯನ್ನು ಮಾಡುತ್ತಿರುವ ಸಾಧುವಿಗೆ ಒಬ್ಬನು ಹೇಳುವ ಮಾತಿದು. "ಎಲೈ ರಾಜಹಂಸವೇ, ಗಂಗೆಯ ನೀರು ಬಿಳುಪಾಗಿದೆ. ಯಮುನೆಯ ನೀರು ಕಪ್ಪು ಬಣ್ಣದಿಂದ ಕೂಡಿದೆ. ಎರಡರಲ್ಲೂ ಮುಳುಗಿದ ನಿನಗೆ ದೇಹದಲ್ಲಿರುವ ಬಿಳುಪು ಗಂಗೆಯ ನೀರಿನ ಸಂಬಂಧದಿಂದ ಹೆಚ್ಚುತ್ತಿಲ್ಲ; ಯಮುನಾನದಿಯ ನೀರಿನ ಸಂಪರ್ಕದಿಂದ ತಗ್ಗುತ್ತಿಲ್ಲ. ಇದೇ ಆಶ್ಚರ್ಯ." ಇಲ್ಲಿ ಮಜ್ಜನವೆಂಬ ಕಾರಣವಿದ್ದರೂ ಗಂಗೆಯಲ್ಲಿರುವ ಬಿಳಿಪೂ, ಯಮುನೆಯಲ್ಲಿರುವ ಕಪ್ಪು ಬಣ್ಣವೂ ದೇಹಕ್ಕೆ ಬಾರದೇ ಇರುವುದರಿಂದ ಇದು ಅತದ್ಗುಣವೆನಿಸಿದೆ. ಹಿಂದಿನ ಪದ್ಯದಲ್ಲಿ ಗುಣಗೌರವ ಎಂಬಲ್ಲಿ ತೋರುವ ನಾಯಕನಿಗೆ ತನಗಿಂತ ಬೇರೆಯಾದ ಹೃದಯದ ಸಂಪರ್ಕವಿದ್ದು ಅವನಲ್ಲಿ ಅನುರಾಗವು ಹುಟ್ಟಬೇಕಾಗಿದ್ದರೂ ಅಲ್ಲಿ ಹುಟ್ಟಲಿಲ್ಲವೆಂದು ತಿಳಿಸಲಾಗಿದೆ. 'ಗಾಂಗಮಂಬು' ಎಂಬ ಎರಡನೇ ಪದ್ಯದಲ್ಲಿ ಅಪ್ರಸ್ತುತಪ್ರಶಂಸೆ ಇದ್ದರೂ ಸಹ ಅಪ್ರಕೃತವೆನಿಸಿದ ಗಂಗೆ ಮತ್ತು ಯಮುನೆ ಇವುಗಳಿಗಿಂತಲೂ ರಾಜಹಂಸವು ವಾಸ್ತವವಾಗಿ ಪ್ರಕೃತವೆನಿಸಿದ ಬಿಕ್ಷುವಿನ ದೃಷ್ಟಿಯಿಂದ ಅಪ್ರಕೃತವೇ ಆಗಿದ್ದರೂ ಅದರ ಬಗ್ಗೆ ಹೆಚ್ಚು ಹೇಳಬೇಕಾಗಿರುವ ಪ್ರಯುಕ್ತ ಪ್ರಕೃತವೆನಿಸಿದೆ. ಆದರೂ ಅದರಲ್ಲಿ ಗಂಗೆಯ ಬಿಳುಪಾಗಲೀ ಯಮುನೆಯ ಕಪ್ಪು ಬಣ್ಣವಾಗಲೀ ಬಾರದೇ ಇರುವುದರಿಂದ ಇದು ಅತದ್ಗುಣವೆನಿಸಿದೆ. ಇದರಲ್ಲಿ ಬೇರೊಂದು ವಸ್ತುವಿನ ಗುಣವು ಒಂದು ವಸ್ತುವಿನಲ್ಲಿ ಸಂಭವಿಸದೇ ಇರುವುದೇ ಒಂದು ವೈಚಿತ್ರ್ಯವೆನಿಸಿದೆ. ಇಂತಹ ವೈಚಿತ್ರ್ಯವನ್ನು ವಿಶೇಷೋಕ್ತಿಯಲ್ಲಿ ಕಾಣ

ಲಿಕ್ಕಾಗುವುದಿಲ್ಲ. ರಾಗಕ್ಕಿಂತಲೂ ಬೇರೊಂದು ಗುಣವು ಹೃದಯದಲ್ಲಿ ಹುಟ್ಟದೇ ಇರುವ ಪ್ರಯುಕ್ತ ಇದು ವಿಷಮಾಲಂಕಾರಕ್ಕಿಂತ ಬೇರೆ ಎನಿಸಿವೆ. ವಿಷಮಾಲಂಕಾರ ದಲ್ಲಿ ಒಂದು ವಸ್ತುವಿನಲ್ಲಿ ತನ್ನಲ್ಲಿರುವ ಗುಣಕ್ಕಿಂತ ಬೇರೊಂದು ಗುಣವು ಹುಟ್ಟುತ್ತದೆ. ಇಲ್ಲಿಯಾದರೋ ನಾಯಕನಲ್ಲಿರುವ ಗೌರವರ್ಣವು ಹುಟ್ಟಿದ್ದಲ್ಲ ಅದರ ಸಹಜವಾಗಿ ಇರುವಂತಹದು. ವಿಷಮಾಲಂಕಾರದಲ್ಲಿ ಕಾರ್ಯಕ್ಕಿಂತ ವಿರುದ್ಧವಾದ ಗುಣವೇ ಹುಟ್ಟುವುದು. ಇದೇ ಇವೆರಡು ಅಲಂಕಾರಗಳಿಗೂ ಇರುವ ಭೇದ.

ಗುಣಗಳಿಂದ ಕೂಡಿದ ಅಲಂಕಾರಗಳನ್ನು ತಿಳಿಸಿ ಈಗ ತಿಳಿಯಲಿಕ್ಕಾಗದಷ್ಟು ಗಹನವಾದ ಅರ್ಥದಿಂದ ಕೂಡಿರುವ ಅಲಂಕಾರಗಳನ್ನು ತಿಳಿಸಲಿಕ್ಕಾಗಿ ಅವುಗಳಲ್ಲಿ ಪ್ರಧಾನವೆನಿಸಿದ ಸೂಕ್ಷ್ಮವೆಂಬ ಅಲಂಕಾರವನ್ನು ಈಗ ವಿವರಿಸುತ್ತಾನೆ. ಚಿತ್ರ ಮೊದಲಾದ ಆಕಾರಗಳಿಂದಲೂ, ಹುಬ್ಬು ಕಣ್ಣು ಇವುಗಳ ಚಲನದಿಂದಲೂ ಕಂಡು ಬಂದು ಸೂಕ್ಷ್ಮ ಬುದ್ಧಿಯಿಂದಲೇ ತಿಳಿಯಬೇಕಾದ ವಿಷಯವನ್ನು ನಿಪುಣೋಕ್ತಿಯಿಂದ ತಿಳಿದು ಬೇರೊಬ್ಬನಿಗೆ ತಿಳಿಸುವುದೇ ಸೂಕ್ಷ್ಮಾಲಂಕಾರವೆನಿಸುವುದು. ಸೂಕ್ಷ್ಮಬುದ್ಧಿ ಯುಳ್ಳವರಲ್ಲದೇ ಇರುವ ಸ್ಥೂಲಮತಿಗಳಿಗೆ ಇದನ್ನು ತಿಳಿಯಲಿಕ್ಕಾಗುವುದಿಲ್ಲ. ಆಕಾರದಿಂದ ತಿಳಿಯಬಹುದಾದ ಅರ್ಥಕ್ಕೆ ಉದಾಹರಣವನ್ನು ಕೊಡುತ್ತಾನೆ. "ಒಬ್ಬ ಸಖಿಯು ಕೃಶಾಂಗಿಯಾದ ಮತ್ತೊಬ್ಬ ಸಖಿಯ ಮುಖದಿಂದ ಉದುರುತ್ತಿರುವ ಬೆವರಿನ ಹನಿ ಗಳಿಂದ ಕಂಠದಲ್ಲಿ ಕುಂಕುಮಲೇಪವು ಅಳಿಸಿದ್ದುದನ್ನು ಕಂಡು ಪುರುಷನಂತೆ ಸುರತ ಕಾಲದಲ್ಲಿ ಮೇಲ್ಭಾಗದಲ್ಲಿ ಮಲಗಿದ್ದುದರಿಂದ ಆಕೆಯನ್ನು ಪುರುಷನೆಂದು ಭಾವಿಸುತ್ತ ಮುಗುಳನಗೆಯಿಂದ ಆಕೆಯ ಕೈಯಲ್ಲಿ ಖಡ್ಗದ ಚಿತ್ರವನ್ನು ಬರೆದಳು" ಇಲ್ಲಿ ಒಬ್ಬಳು ಮತ್ತೊಬ್ಬಳಲ್ಲಿ ಕುಂಕುಮವೆಲ್ಲವೂ ಅಳಿಸಿದ್ದುದನ್ನು ಕಂಡು ಆಕೆಯು ಪುರುಷನಂತೆ ವರ್ತಿಸಲು ಯೋಗ್ಯಳೆಂಬುದನ್ನು ಆಕೆಯ ಕೈಯಲ್ಲಿ ಪುರುಷನ ಗುರುತೆನಿಸಿದ ಖಡ್ಗ ಲೇಖೆಯನ್ನು ಬರೆದದ್ದರಿಂದ ಸೂಚಿಸುತ್ತಾಳೆ. ನಾಯಕನ ಮೇಲೆ ಮಲಗಿದ್ದು ಆಕೆಯು ಭೋಗಿಸಿದ್ದರಿಂದ ಆಕೆಯ ಕಂಠದಲ್ಲಿ ಕುಂಕುಮಲೇಪವು ಅಳಿಸಿತ್ತು. ಆದ್ದರಿಂದ ಆಕೆಯು ಪುರುಷನೆನಿಸಲರ್ಹಳು. ಆದರೆ ಪುರುಷನಿಗೆ ಬೇಕಾದ ಆಕಾರವು ಅವಳ ಕೈಯಲ್ಲಿ ಇರಬೇಕಾಗಿತ್ತು. ಅದಕ್ಕಾಗಿ ಕೈಯಲ್ಲಿ ಖಡ್ಗದ ಗುರುತನ್ನು ಆಕೆ ಬರೆದಳು. ಹೀಗೆ ಇದು ಆಕಾರದಿಂದ ತಿಳಿಯಬಹುದಾದ ಪುಂಸ್ತ್ವವೆಂಬ ಅರ್ಥವನ್ನು ತಿಳಿಸುವ ಪ್ರಯುಕ್ತ ಸೂಕ್ಷ್ಮಾಲಂಕಾರವೆನಿಸಿದೆ. ಅಂಗಚೇಷ್ಟೆಯಿಂದ ತಿಳಿಯಬಹುದಾದ ಅರ್ಥವನ್ನು ತಿಳಿಸುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ವಿಟನು ಸಂಕೇತಕಾಲವನ್ನು ತಿಳಿಯಲಿಚ್ಛಿಸುವನೆಂಬುದನ್ನು ತಿಳಿದು ನಿಪುಣೆಯಾದ ಸ್ತ್ರೀಯು ಮಂದಹಾಸದಿಂದ ಕಣ್ಣುಗಳನ್ನು ಕೆರಳಿಸುವ ಮೂಲಕ ತನ್ನ ಅಭಿಪ್ರಾಯವನ್ನು ಸೂಚಿಸಲು ವಿನೋದಕ್ಕಾಗಿ ಕೈಯಲ್ಲಿ ಹಿಡಿದಿದ್ದ ಕಮಲದ ದಳಗಳನ್ನು ಮುಚ್ಚಿದಳು" ಇಲ್ಲಿ ವಿಟನು ಹುಬ್ಬು ಹಾರಿಸುವುದೇ ಮೊದಲಾದ ಚಿಹ್ನೆಗಳಿಂದ ತನಗೆ ಆಕೆಯನ್ನು ಸಂಧಿಸಲು ಯುಕ್ತವಾದ ಸಮಯವು ಯಾವುದೆಂಬುದನ್ನು ತಿಳಿಯಲು ಇಚ್ಛಿಸಿದನು. ಆದನ್ನು ಅವನಿಗೆ ತಿಳಿಸ

ಲಿಕ್ಕಾಗಿ ಆಕೆಯು ಕಣ್ಣನ್ನು ಮುಚ್ಚುವ ಮೂಲಕ ತನ್ನ ಕೈಯಲ್ಲಿದ್ದ ಪದ್ಮವನ್ನು ಮೊಗ್ಗಿನಂತೆ ಮುಚ್ಚಿದಳು. ರಾತ್ರಿಯ ವೇಳೆಯೇ ಕಮಲವು ಮೊಗ್ಗಾಗುವ ಸಮಯ ಅದೇ ಸಂಕೇತಕಾಲವೆಂಬುದನ್ನು ಇಲ್ಲಿ ಆಕೆಯು ಅವನಿಗೆ ಸೂಚಿಸಿದಳು. ಆ ರಾತ್ರಿ ತನ್ನನ್ನು ಸೇರಲು ಸಮಯವೆಂಬುದನ್ನು ಈ ಬಗೆಯ ಚೇಷ್ಟೆಯಿಂದ ಇಲ್ಲಿ ತಿಳಿಸಿರುವ ಪ್ರಯುಕ್ತ ಇದು ಸೂಕ್ಷ್ಮಾಲಂಕಾರವೆನಿಸಿದೆ.

ಒಂದು ಅರ್ಥವು ಕಾರ್ಯದ ಮೂಲಕ ಪ್ರಕಾಶಿತವಾದರೂ ಅದರ ಪ್ರಕಾಶಕ್ಕೆ ಯೋಗ್ಯವಾದ ಕಾರಣವನ್ನು ಹೇಳುವ ನೆಪದಿಂದ ಅದನ್ನು ಮುಚ್ಚುವುದೇ ವ್ಯಾಜೋಕ್ತಿ ಎನಿಸುವುದು. ವಾಸ್ತವವಾಗಿಲ್ಲದ ಕಾರಣವನ್ನು ತಿಳಿಸುವುದರಿಂದ ಕಾರ್ಯದ ವಾಸ್ತವವಾದ ಕಾರಣವನ್ನು ಮುಚ್ಚುವುದೇ ವ್ಯಾಜೋಕ್ತಿ ಎನಿಸುವುದು. "ಹಿಮವಂತನು ಮದುವೆಯಲ್ಲಿ ಒಪ್ಪಿಸಲಿರುವ ಪಾರ್ವತಿಯ ಹಸ್ತದ ಸಂಪರ್ಕದಿಂದ ಹುಟ್ಟಿದ ರೋಮಾಂಚಗಳಿಂದ ಸಹಜವಾಗಿ ನಡೆಯಬೇಕಾದ ವೈವಾಹಿಕಕರ್ಮಗಳಿಗೆ ತಡೆಯಾದೀತೆಂಬ ಭಯದಿಂದ ವ್ಯಾಕುಲಗೊಂಡಿದ್ದು, ವಿವಾಹಕಾಲದಲ್ಲಿ ಹಿಮವಂತನ ಕೈಗಳಲ್ಲಿ ಶೈತ್ಯವಿದೆ ಎಂದು ತಿಳಿದು, ಹಿಮವಂತನ ಅಂತಃಪುರದಲ್ಲಿ ಮಂಡಲಾಕಾರದಲ್ಲಿ ಕುಳಿತಿದ್ದ ಬ್ರಾಹ್ಮೀ ಮಹೇಶ್ವರೀ ಮೊದಲಾದ ಪರಿಚಾರಿಕೆಯರಿಗೆ ನಗಮೊಗದಿಂದ ಕಾಣಿಸಿಕೊಂಡ ಶಿವನು ನಿಮ್ಮನ್ನು ಕಾಪಾಡಲಿ" 'ಅಹಾ! ಹಿಮವಂತನ ಕೈಗಳಲ್ಲಿ ಶೈತ್ಯವಿದೆ' ಎಂದು ಸ್ಪಷ್ಟವಾದ ಕಾರಣವನ್ನು ತಿಳಿಸುವ ನೆಪದಿಂದ ಶಿವನು "ಈ ಶೀತಲಸ್ಪರ್ಶದಿಂದಲೇ ನನಗೆ ಹೀಗೆ ರೋಮಾಂಚ ಉಂಟಾಗಿದೆ" ಎಂದು ಸೂಚಿಸಲಿಕ್ಕಾಗಿ ರೋಮಾಂಚಕಾರ್ಯದ ಮೂಲಕ ಸ್ಪಷ್ಟವಾಗಿ ತನ್ನಲ್ಲಿ ಕಂಡುಬರುವ ಕಾಮೋದ್ರೇಕವೆಂಬ ಕಾರಣವನ್ನು ಮುಚ್ಚುತ್ತಿರುವನು. ಆದ್ದರಿಂದ ಇದು ವ್ಯಾಜೋಕ್ತಿ ಎನಿಸಿದೆ. ಅಥವಾ ಹಿಮವಂತನ ಕರಸ್ಪರ್ಶದಿಂದಲೇ ನನಗೆ ಹೀಗೆ ರೋಮಾಂಚ ಉಂಟಾಗಿದೆ ಎಂದು ಸೂಚಿಸುವ ಶಿವನು ರೋಮಾಂಚವೆಂಬ ಕಾರ್ಯಸಿದ್ಧಿಗೆ ಶೀತಸ್ಪರ್ಶವೆಂಬ ಪ್ರಕೃತಕಾರಣವನ್ನು ತಿಳಿಸುತ್ತಲೇ ಕಾಮೋದ್ರೇಕವೆಂಬ ಅಪ್ರಕೃತಕಾರಣವನ್ನು ಮುಚ್ಚಿದ್ದರಿಂದಲೂ ಇದು ವ್ಯಾಜೋಕ್ತಿ ಎನಿಸುತ್ತದೆ. ಇಲ್ಲಿ ಪ್ರಕೃತಕಾರಣವನ್ನು ನಿಷೇಧಿಸಿ ಅಪ್ರಕೃತಕಾರಣವನ್ನು ಸ್ಥಾಪಿಸಿದ್ದರಿಂದ ಇದು ಅಪಹ್ನುತಿ ಏಕೆ ಆಗಬಾರದೆಂದರೆ ಅದಕ್ಕೂ ಇದಕ್ಕೂ ಇರುವ ಭೇದವನ್ನು ತಿಳಿಸುತ್ತಾನೆ. ಪ್ರಕೃತಕಾರಣವನ್ನು ಮುಚ್ಚುವ ಶಿವನು ಅಪ್ರಕೃತಕಾರಣವನ್ನು ತಿಳಿಸದೇ ಇರುವುದರಿಂದ ಇದು ಅಪಹ್ನುತಿಯ ಮೊದಲನೆಯ ಬಗೆ ಎನಿಸುವುದು. ಪ್ರಕೃತಕಾರಣವನ್ನು ನೆಲೆಗೊಳಿಸುವುದೇ ಅಪಹ್ನುತಿಯ ಮೊದಲನೆಯ ಬಗೆ. ಇಲ್ಲಿಯಾದರೋ ಪ್ರಕೃತಕಾರಣವನ್ನು ತಿಳಿಸದೇ ಅದರ ನಿಷೇಧವನ್ನು ಸೂಚಿಸುತ್ತ ಅಪ್ರಕೃತಕಾರಣವನ್ನು ನೆಲೆಗೊಳಿಸಲಾಗುವುದು. ರೋಮಾಂಚದಿಂದ ಕಾಮೋದ್ರೇಕವನ್ನು ಪ್ರಕಾಶಪಡಿಸಿ ಶೀತಲಸ್ಪರ್ಶವೆಂಬ ಕಾರಣದಿಂದ ಕಾಮೋದ್ರೇಕವನ್ನು ಮುಚ್ಚಿದ್ದರಿಂದ ಇದು ಅಪಹ್ನುತಿಯ ಎರಡನೆಯ ಬಗೆಯಾಗಲೆಂದರೆ ಅದು ಸಂಭವಿಸುವುದಿಲ್ಲವೆಂದು ಇಲ್ಲಿಯೇ ತಿಳಿಸಲಾಗಿದೆ.

ಸ್ವಭಾವೋಕ್ತಿರ್ದುರೂಹಾರ್ಥಸ್ವಕ್ರಿಯಾರೂಪವರ್ಣನಮ್ ।

ದುರೂಹಯೋಃ ಕವಿಮಾತ್ರವೇದ್ಯಯೋಃ, ಅರ್ಥಸ್ಯ ಡಿಂಭಾದೇಃ. ಸ್ವಕ್ರಿಯಾರೂಪಯೋಃ ತದೇಕಾಶ್ರಯಯೋಶ್ಚೇಷ್ಟಾಸ್ವರೂಪಯೋಃ.

ಲಾಂಗೂಲೇನಾಭಿಹತ್ಯ ಕ್ಷಿತಿತಲಮಸಕೃದ್ದಾರಯನ್ನಗ್ರಪದ್ಭ್ಯಾಮ್
ಆತ್ಮನ್ಯೇವಾವಲೀಯ ದ್ರುತಮಥ ಗಗನಂ ಪ್ರೋತ್ಪತನ್ವಿಕ್ರಮೇಣ ।
ಸ್ಫೂರ್ಜದ್ಭೃಂಗಾರಘೋಷಃ ಪ್ರತಿದಿಶಮಖಿಲಾನ್ ದ್ರಾವಯನ್ನೇಷ ಜಂತೂನ್
ಕೋಪಾವಿಷ್ಟಃ ಪ್ರವಿಷ್ಟಃ ಪ್ರತಿವನಮರುಣೋಚ್ಛೂನಚಕ್ಷುಸ್ತರಕ್ಷುಃ ।

ಅದ್ಭುತಸ್ಯ ಪದಾರ್ಥಸ್ಯ ಭೂತಸ್ಯಾಥ ಭವಿಷ್ಯತಃ ।
ಯತ್ ಪ್ರತ್ಯಕ್ಷಾಯಮಾಣತ್ವಂ ತದ್ಭಾವಿಕಮುದಾಹೃತಮ್.

ಯಥಾ—ಮುನಿರ್ಜಯತಿ ಯೋಗೀಂದ್ರೋ ಮಹಾತ್ಮಾ ಕುಂಭಸಂಭವಃ ।
ಯೇನೈಕಚುಲುಕೇ ದೃಷ್ಟೌ ದಿವ್ಯೌ ತೌ ಮತ್ಸ್ಯಕಚ್ಛಪೌ ।

ಯಥಾ ವಾ—ಆಸೀದಂಜನಮತ್ರೇತಿ ಪಶ್ಯಾಮಿ ತವ ಲೋಚನೇ ।
ಭಾವಿಭೂಷಣಸಂಭಾರಾಂ ಸಾಕ್ಷಾತ್ಕುರ್ವೇ ತವಾಕೃತಿಮ್ ॥

ನ ಚಾಯಂ ಪ್ರಸಾದಾಖ್ಯೋ ಗುಣಃ, ಭೂತಭಾವಿನೋಃ ಪ್ರತ್ಯಕ್ಷಾಯಮಾಣತ್ವೇ ತಸ್ಯ ಅಹೇತುತ್ವಾತ್. ನ ಚಾದ್ಭುತೋ ರಸಃ. ವಿಸ್ಮಯಂ ಪ್ರತಿ ಅಸ್ಯಾಹೇತುತ್ವಾತ್. ನ ಚ ಅತಿಶಯೋಕ್ತಿರಲಂಕಾರಃ ಅಧ್ಯವಸಾಯಾಭಾವಾತ್. ನ ಚ ಭ್ರಾಂತಿಮಾನ್ ಭೂತಭಾವಿತಯೈವ ಪ್ರಕಾಶನಾತ್. ನ ಚ ಸ್ವಭಾವೋಕ್ತಿಃ ತಸ್ಯ ಲೌಕಿಕವಸ್ತುಗತಸೂಕ್ಷ್ಮಧರ್ಮಸ್ವಭಾವಸ್ಯೈವ ಯಥಾವದ್ವರ್ಣನಂ ಸ್ವರೂಪಮ್, ಅಸ್ಯ ತು ವಸ್ತುನಃ ಪ್ರತ್ಯಕ್ಷಾಯಮಾಣತ್ವರೂಪೋ ವಿಚ್ಛಿತ್ತಿವಿಶೇಷೋಽಸ್ತೀತಿ. ಯದಾ ಪುನರ್ವಸ್ತುನಃ ಕ್ವಚಿತ್ ಸ್ವಭಾವೋಕ್ತಾವಪಿ ಅಸ್ಯಾ ವಿಚ್ಛಿತ್ತೇಃ ಸಂಭವಃ ತದೋಭಯೋಃ ಸಂಕರಃ.

ಅನಾತಪತ್ರೋಽಪ್ಯಯಮತ್ರ ಲಕ್ಷ್ಯತೇ ಸಿತಾತಪತ್ರೈರಿವ ಸರ್ವತೋ ವೃತಃ ।
ಅಚಾಮರೋಽಪ್ಯೇಷ ಸದೈವ ವೀಜ್ಯತೇ ವಿಲಾಸಬಾಲವ್ಯಜನೇನ ಕೋಽಪ್ಯಯಮ್ ।

ಅತ್ರ ಪ್ರತ್ಯಕ್ಷಾಯಮಾಣಸ್ಯೈವ ವರ್ಣನಾನ್ನಾಯಮಲಂಕಾರಃ. ವರ್ಣನಾವಶೇನ ಪ್ರತ್ಯಕ್ಷಾಯಮಾಣತ್ವಸ್ಯೈವ ಅಸ್ಯ ಸ್ವರೂಪತ್ವಾತ್.

ಯತ್ಪುನಃ ಪ್ರತ್ಯಕ್ಷಾಯಮಾಣಸ್ಯಾಪಿ ವರ್ಣನೇ ಪ್ರತ್ಯಕ್ಷಾಯಮಾಣತ್ವಂ ತತ್ರಾಯಮಲಂಕಾರೋ ಭವಿತುಂ ಯುಕ್ತಃ. ಯಥೋದಾಹೃತೇ 'ಆಸೀದಂಜನಮ್' ಇತ್ಯಾದೌ.

ಲೋಕಾತಿಶಯಸಂಪತ್ತಿವರ್ಣನೋದಾತ್ತಮುಚ್ಯತೇ ।
ಯದ್ವಾಪಿ ಪ್ರಸ್ತುತಸ್ಯಾಂಗಂ ಮಹತಾಂ ಚರಿತಂ ಭವೇತ್ ॥

ಅಧಃಕೃತಾಂಭೋಧರಮಂಡಲಾನಾಂ ಯಸ್ಯಾಂ ಶಶಾಂಕೋಪಲಕುಟ್ಟಿಮಾನಾಮ್ ।
ಜ್ಯೋತ್ಸ್ನಾನಿಪಾತಾತ್ಕ್ಷರತಾಂ ಪಯೋಭಿಃ ಕೇಲೀವನಂ ವೃದ್ಧಿಮುರೀಕರೋತಿ ॥

ನಾಭಿಪ್ರಭಿನ್ನಾಂಬುರುಹಾಸನೇನ ಸಂಸ್ತೂಯಮಾನಃ ಪ್ರಥಮೇನ ಧಾತ್ರಾ ।
ಅಮುಂ ಯುಗಾಂತೋಚಿತಯೋಗನಿದ್ರಃ ಸಂಹೃತ್ಯ ಲೋಕಾನ್ ಪುರುಷೋಽಧಿಶೇತೇ ॥

ರಸಭಾವೌ ತದಾಭಾಸೌ ಭಾವಸ್ಯ ಪ್ರಶಮಸ್ತಥಾ ।
ಗುಣೀಭೂತತ್ವಮಾಯಾಂತಿ ಯದಾಲಂಕೃತಯಸ್ತದಾ ॥
ರಸವತ್ ಪ್ರೇಯ ಊರ್ಜಸ್ವಿ ಸಮಾಹಿತಮಿತಿ ಕ್ರಮಾತ್ ।

ತದಾಭಾಸೋ ರಸಾಭಾಸೋ ಭಾವಾಭಾಸಶ್ಚ.

ತತ್ರ ರಸಯೋಗಾದ್ರಸವದಲಂಕಾರೋ ಯಥಾ—'ಅಯಂ ಸ ರಶನೋತ್ಕರ್ಷೀ' ಇತ್ಯಾದಿ. ತತ್ರ ಶೃಂಗಾರಃ ಕರುಣಸ್ಯಾಂಗಮ್. ಏವಮನ್ಯತ್ರಾಪಿ. ಪ್ರಕೃಷ್ಟಪ್ರಿಯತ್ವಾತ್ಪ್ರೇಯೋ ಯಥಾ—

ಆಮೀಲಿತಾಲಸವಿವರ್ತಿತತಾರಕಾಕ್ಷೀಂ ಮತ್ಕಂಠಬಂಧನದರಶ್ಲಥಬಾಹುವಲ್ಲೀಮ್ ।
ಪ್ರಸ್ವೇದವಾರಿಕಣಿಕಾಚಿತಗಂಡಬಿಂಬಾಂ ಸಂಸ್ಮೃತ್ಯ ತಾಮನಿಶಮೇತಿ ನ ಶಾಂತಿಮಂತ್ರ

ಅತ್ರ ಸಂಭೋಗಶೃಂಗಾರಃ ಸ್ಮರಣಾಖ್ಯಭಾವಸ್ಯಾಂಗಮ್, ನ ಚ ವಿಪ್ರಲಂಭಸ್ಯ ಊರ್ಜೋ ಬಲಮ್, ಅನೌಚಿತ್ಯಪ್ರವೃತ್ತೌ ತದತ್ರಾಸ್ತೀತ್ಯೂರ್ಜಸ್ವಿ. ಯಥಾ—

ವನೇಽಖಿಲಕಲಾಸಕ್ತಾಃ ಪರಿಹೃತ್ಯ ನಿಜಸ್ತ್ರಿಯಃ ।
ತ್ವದ್ವೈರಿವನಿತಾವೃಂದೇ ಪುಲಿಂದಾಃ ಕುರ್ವತೇ ರತಿಮ್ ।

ಅತ್ರ ಶೃಂಗಾರಾಭಾಸೋ ರಾಜವಿಷಯರತಿಭಾವಸ್ಯಾಂಗಮ್. ಏವಂ ಭಾವಾಭಾಸೋಽಪಿ. ಸಮಾಹಿತಂ ಪರಿಹಾರಃ. ಯಥಾ—

ಅವಿರಳಕರಬಾಲಕಂಪನೈರ್ಭ್ರುಕುಟಿತರ್ಜನಗರ್ಜನೈರ್ಮುಹುಃ
ದದೃಶೇ ತವ ವೈರಿಣಾಂ ಮದಃ ಸ ಗತಃ ಕ್ವಾಪಿ ತವೇಕ್ಷಣೇ ಕ್ಷಣಾತ್ ।

ಅತ್ರ ಮದಾಖ್ಯಭಾವಸ್ಯ ಪ್ರಶಮೋ ರಾಜವಿಷಯರತಿಭಾವಸ್ಯಾಂಗಮ್ ।

ಭಾವಸ್ಯ ಚೋದಯೇ ಸಂಧೌ ಮಿಶ್ರತ್ವೇ ಚ ತದಾಖ್ಯಕಾಃ ।

ತದಾಖ್ಯಕಾಃ— ಭಾವೋದಯಭಾವಸಂಧಿಭಾವಶಬಲನಾಮಾನೋಽಲಂಕಾರಾಃ ।
ಕ್ರಮೇಣೋದಾಹರಣಮ್— ಮಧುಪಾನಪ್ರವೃತ್ತಿಸ್ತೇ ಸುಹೃದ್ಭಿಃ ಸಹ ವೈರಿಣಃ ।
ಶ್ರುತ್ವಾ ಕುತೋಽಪಿ ತ್ವನ್ನಾಮ ಲೇಭಿರೇ ವಿಷಮಾಂ ದಶಾಮ್ ॥

ಅತ್ರ ತ್ರಾಸೋದಯಃ ರಾಜವಿಷಯರತಿಭಾವಸ್ಯಾಂಗಮ್.

ಜನ್ಮಾಂತರೀಣರಮಣಸ್ಯಾಂಗಸಂಗಸಮುತ್ಸುಕಾ ।
ಸಲಜ್ಜಾ ಚಾಂತಿಕೇ ಸಖ್ಯಾಃ ಪಾತು ನಃ ಪಾರ್ವತೀ ಸದಾ ॥

ಅತ್ರೌತ್ಸುಕ್ಯಲಜ್ಜಯೋಶ್ಚ ಸಂಧಿರ್ದೇವತಾವಿಷಯರತಿಭಾವಸ್ಯಾಂಗಮ್.

ಪಶ್ಯೇತ್ಕಶ್ಚಿಚ್ಚಲ ಚಪಲ ರೇ ! ಕಾ ತ್ವರಾಹಂ ಕುಮಾರೀ
ಹಸ್ತಾಲಂಬಂ ವಿತರ ಹಹಹಾ ! ವ್ಯುತ್ಕ್ರಮಃ ಕ್ವಾಸಿ ಯಾಸಿ ।
ಇತ್ಥಂ ಪೃಥ್ವೀಪರಿವೃಢ ! ಭವದ್ವಿದ್ವಿಷೋಽರಣ್ಯವೃತ್ತೇಃ
ಕನ್ಯಾ ಕಂಚಿತ್ಫಲಕಿಸಲಯಾನ್ಯಾದದಾನಾಽಭಿಧತ್ತೇ ॥

ಅತ್ರ ಶಂಕಾಸೂಯಾಧೃತಿಸ್ಮೃತಿಶ್ರಮದೈನ್ಯವಿಬೋಧೌತ್ಸುಕ್ಯಾನಾಂ ಶಬಲತಾ ರಾಜವಿಷಯರತಿಭಾವಸ್ಯಾಂಗಮ್. ಇಹ ಕೇಚಿದಾಹುಃ "ವಾಚ್ಯವಾಚಕರೂಪಾಲಂಕರಣಮುಖೇನ ರಸಾದ್ಯುಪಕಾರಕಾ ಏವಾಲಂಕಾರಾಃ; ರಸಾದಯಸ್ತು ವಾಚ್ಯವಾಚಕಾಭ್ಯಾಮುಪಕಾರ್ಯಾ ಏವೇತಿ ನ ತೇಷಾಮಲಂಕಾರತಾ ಭವಿತುಂ ಯುಕ್ತಾ" ಇತಿ. ಅನ್ಯೇ ಚ ರಸಾದ್ಯುಪಕಾರಮಾತ್ರೇಣ ಅಲಂಕಾರತ್ವಂ ಮುಖ್ಯತಃ, ರೂಪಕಾದೌ ತು ವಾಚ್ಯಾದ್ಯುಪಧಾನಮ್ ಅಜಾಗಲಸ್ತನನ್ಯಾಯೇನ" ಇತಿ. ಅಭಿಯುಕ್ತಾಸ್ತು "ಸ್ವವ್ಯಂಜಕವಾಚ್ಯವಾಚಕಾದ್ಯುಪಸ್ಕೃತೇರಂಗಭೂತೈಃ ರಸಾದಿಭಿರಂಗಿನೋ ರಸಾದೇರ್ವಾಚ್ಯವಾಚಕೋಪಸ್ಕಾರದ್ವಾರೇಣ ಉಪಕುರ್ವದ್ಭಿರಲಂಕೃತಿವ್ಯಪದೇಶೋ ಲಭ್ಯತೇ-ಸಮಾಸೋಕ್ತೌ ತು ನಾಯಿಕಾದಿವ್ಯವಹಾರಮಾತ್ರಸ್ಯೈವ ಅಲಂಕೃತಿತಾ ನ ತ್ವಾಸ್ವಾದಸ್ಯ, ತಸ್ಯೋಕ್ತರೀತಿವಿರಹಾತ್" ಇತಿ ಮನ್ಯಂತೇ. ಅತ ಏವ ಧ್ವನಿಕಾರೇಣೋಕ್ತಮ್.

ಪ್ರಧಾನೇಽನ್ಯತ್ರ ವಾಕ್ಯಾರ್ಥೇ ಯತ್ರಾಂಗಂ ತು ರಸಾದಯಃ ।
ಕಾವ್ಯೇ ತಸ್ಮಿನ್ನಲಂಕಾರೋ ರಸಾದಿರಿತಿ ಮೇ ಮತಿಃ ॥

ಯದಿ ಚ ರಸಾದ್ಯುಪಕಾರಮಾತ್ರೇಣಾಲಂಕೃತಿತ್ವಮ್, ತದಾ ವಾಚಕಾದಿಷ್ವಪಿ ತಥಾ ಪ್ರಸಜ್ಯೇತ. ಏವಂ ಚ ಯತ್ರ ಕೈಶ್ಚಿದುಕ್ತಮ್ "ರಸದೀನಾಮಂಗಿತ್ವೇ ರಸವದಾದ್ಯಲಂಕಾರಃ; ಅಂಗತ್ವೇ ತು ದ್ವಿತೀಯೋದಾತ್ತಾಲಂಕಾರಃ." ತದಪಿ ಪರಾಸ್ತಮ್.

ಹೆಚ್ಚು ನಿಪುಣರಾದವರಿಗೆ ಮಾತ್ರವೇ ತಿಳಿಯುವಂತಿದ್ದು ಸ್ಥೂಲಮತಿಗಳಿಗೆ ತಿಳಿಯಲಿಕ್ಕೆ ಆಗದಿರುವ ಪಶು ಪಕ್ಷಿ ಮೊದಲಾದ ಪ್ರಾಪಂಚಿಕವಸ್ತುಗಳನ್ನೂ ಮತ್ತು ಅವುಗಳಲ್ಲಿ ಸಹಜವಾಗಿರುವ ಚೇಷ್ಟೆಗಳನ್ನು ವರ್ಣಿಸುವುದೇ ಸ್ವಭಾವೋಕ್ತಿ ಎಂಬ ಅಲಂಕಾರವೆನಿಸುವುದು. ಗೋರಪತ್ಯಂ ಬಲೀವರ್ದೋ ಘಾಸಮತ್ತಿ ಮುಖೇನ ಸಃ ।
ಲಾಂಗೂಲಂ ವಿದ್ಯತೇ ತಸ್ಯ ಶಂಖಂ ಚಾಪಿ ಚ ವಿದ್ಯತೇ ॥

ಎಂಬಲ್ಲಿ ತಿಳಿಸಿರುವ ವೃಷಭದ ಸಹಜವಾದ ಚೇಷ್ಟೆಯು ಸಾಮಾನ್ಯಜನರಿಗೆ ತಿಳಿಯುವಂತಿದ್ದು ಗಹನವಲ್ಲದ್ದರಿಂದ ಇದರಲ್ಲಿ ಅಲಂಕಾರವಿಲ್ಲ. ಗಹನವಾದ ಪದಾರ್ಥಗಳನ್ನೂ ಅವಕ್ಕೆ ಸಂಬಂಧಿಸಿದ ಕ್ರಿಯೆಯನ್ನೂ ತಿಳಿಸುವುದರಲ್ಲಿಯೇ ಚಮತ್ಕಾರವಿರುವ ಪ್ರಯುಕ್ತ, ಅಂತವು ಮಾತ್ರವೇ ಅಲಂಕಾರವೆನಿಸುತ್ತವೆ. "ಕೋಪದಿಂದ ಕೂಡಿ ಕಣ್ಣನ್ನು ಕೆಂಪಗೆ ಅರಳಿಸಿಕೊಂಡಿರುವ ಈ ಹುಲಿಯು ಬಾಲದಿಂದ ಭೂಮಿಯನ್ನು ಬಡಿಯುತ್ತ ಕಾಲಿನ ತುದಿಯಿಂದ ಬಾರಿಬಾರಿಗೂ ನೆಲವನ್ನೇ ಬಗಿಯುತ್ತ ದೇಹವನ್ನು ಕುಗ್ಗಿಸಿಕೊಂಡು ಆ ಕೂಡಲೇ ಬೇಗನೆ ಸಾಹಸದಿಂದ ಆಕಾಶಕ್ಕೆ ಆಡರುತ್ತ ಗಟ್ಟಿಯಾಗಿ ಹುಂಕರಿಸುತ್ತ ಎಲ್ಲಾ ದಿಕ್ಕುಗಳಲ್ಲೂ ಪ್ರಾಣಿಗಳನ್ನು ಭಯಪಡಿಸಿ ಓಡಿಸುತ್ತ ಪ್ರತಿಯೊಂದು ಕಾಡಿಗೂ ಪ್ರವೇಶಿಸಿತು." ಇಲ್ಲಿ ಕೋಪಗೊಂಡ ಹುಲಿಯ ಸ್ವಾಭಾವಿಕವಾದ ಕ್ರಿಯೆ ಮತ್ತು ಆಕಾರಗಳನ್ನು ವರ್ಣಿಸಿರುವುದರಿಂದಲೂ, ಅಂತಹ ವರ್ತನೆ ಬೇರೆ ಪ್ರಾಣಿಗಳಲ್ಲಿ ಇಲ್ಲದಿರುವುದರಿಂದಲೂ, ಇಂತಹ ಕ್ರಿಯೆ ಸಿಂಹದಲ್ಲಿ ಮಾತ್ರವೇ ಇರುವುದರಿಂದಲೂ ಹೀಗೆ ವರ್ಣಿಸಿದ್ದು ಸ್ವಭಾವೋಕ್ತಿ ಎನಿಸಿದೆ. ಇಲ್ಲಿ ಬಂದು ಕ್ರೌರ್ಯವನ್ನು ಗಡ

ಸ್ವಭಾವವನ್ನು ವರ್ಣಿಸಿದೆ. ಹಾಗೆಯೇ ಮಗು-ಯುವಕ-ಮುದುಕ ಇವರೆಲ್ಲರ ಸ್ವಭಾವವನ್ನೂ ವರ್ಣಿಸಬಹುದು.

ಆಶ್ಚರ್ಯಕರವಾದ ವಿಷಯವು ಹಿಂದೆ ಕಳೆದದ್ದಾಗಲೀ ಅಥವಾ ಮುಂದೆ ಬರುವಂತಹದಾಗಲೀ ಅದನ್ನು ವರ್ಣನೆಯ ನೈಪುಣ್ಯದಿಂದ ಪ್ರತ್ಯಕ್ಷವಾಗಿ ಕಾಣುವಂತೆ ಪ್ರಕಾಶಪಡಿಸುವುದೇ ಭಾವಿಕವೆಂಬ ಅಲಂಕಾರವೆನಿಸುವುದು. "ಯಾವ ನಾರಾಯಣನ ದಿವ್ಯವಾದ ಮತ್ಸ್ಯ ಕೂರ್ಮವೆಂಬ ಅವತಾರಗಳೆರಡನ್ನು ಸಮುದ್ರಪಾನಕಾಲದಲ್ಲಿ ಪ್ರತ್ಯಕ್ಷವಾಗಿ ಕಂಡನೋ ಅಂತಹ ಯೋಗಿಶ್ರೇಷ್ಠನಾದ ಅಗಸ್ತ್ಯಮಹರ್ಷಿಯು ಶೋಭಿಸುತ್ತಿರುವನು." ಇಲ್ಲಿ ಭಗವಂತನ ಎರಡು ಅವತಾರಗಳನ್ನು ತನ್ನೊಳಗೆ ಅಗಸ್ತ್ಯನು ಅಡಗಿಸಿಕೊಂಡಿದ್ದುದು ಅದ್ಭುತವೆನಿಸಿದೆ. ಹಿಂದೆ ಕಳೆದುಹೋಗಿದ್ದ ಇಂತಹ ಅದ್ಭುತವನ್ನು ವರ್ತಮಾನಕಾಲದಲ್ಲಿ ತಿಳಿಸಿದ್ದರಿಂದ ಕೇಳುವವರಿಗೆ ಅವನ್ನು ಪ್ರತ್ಯಕ್ಷವಾಗಿ ಕಂಡಂತಾಯಿತು. ಆದ್ದರಿಂದ ಇದು ಭಾವಿಕಾಲಂಕಾರವೆನಿಸಿದೆ. ಹಿಂದೆ ಕಳೆದುಹೋದ ಮತ್ತು ಮುಂದೆ ಆಗಬೇಕಾಗಿರುವ ಅದ್ಭುತವಿಷಯ ಇವೆರಡನ್ನು ತಿಳಿಸಲಿಕ್ಕೆ ಉದಾಹರಣವನ್ನು ಕೊಡುತ್ತಾನೆ. ಹತ್ತುವರ್ಷ ವಯಸ್ಸಿನ ಒಬ್ಬ ಹುಡುಗಿಯನ್ನು ನೋಡಿ ಒಬ್ಬ ತರುಣನು ಹೀಗೆ ಹೇಳುತ್ತಾನೆ. "ಇಲ್ಲಿ ಹಿಂದೆ ಕಾಡಿಗೆ ಇತ್ತೆಂಬ ಜ್ಞಾನದಿಂದ ನಿನ್ನ ಕಣ್ಣುಗಳೆರಡನ್ನು ನೋಡುತ್ತೇನೆ. ಮೊದಲು ಯಾವಾಗಲೂ ಇಲ್ಲಿ ಅಂಜನವನ್ನು ಕಾಣುತ್ತಿದ್ದುದರಿಂದ ಈಗಲೂ ಹಾಗೆಯೇ ಸಂಸ್ಕಾರವು ಉಳಿದಿದೆ. ಹಾಗೆಯೇ ಮುಂದೆ ಅಲಂಕಾರಗಳನ್ನು ಧರಿಸುವಂತಹ ನಿನ್ನ ದೇಹವನ್ನು ಈಗಲೇ ಪ್ರತ್ಯಕ್ಷವಾಗಿ ನೋಡುತ್ತೇನೆ. ಈ ನಿನ್ನ ಆಕಾರವು ಅತ್ಯಂತ ಸುಂದರವಾದ್ದರಿಂದ ಧನಿಕನೊಡನೆ ನಿನ್ನ ಮದುವೆಯಾಗುವ ಸಂಭವವಿರುವುದರಿಂದ ಹೀಗೆ ಊಹಿಸುತ್ತೇನೆ" ಇಲ್ಲಿ ಪೂರ್ವಾರ್ಧದಲ್ಲಿ ಹಿಂದೆ ಆಕೆಯು ಕಣ್ಣುಗಳಿಗೆ ಹಚ್ಚುತ್ತಿದ್ದ ಅಂಜನವನ್ನು ಈಗಲೂ ನೋಡುವುದಾಗಿ ತಿಳಿಸಿದೆ. ಉತ್ತರಾರ್ಧದಲ್ಲಿ ಮುಂದೆ ಧರಿಸಬಹುದಾದ ಒಡವೆ ವಸ್ತ್ರಗಳನ್ನು ಈಗ ಕಾಣುವುದಾಗಿ ತಿಳಿಸಲಾಗಿದೆ. ಹೀಗೆ ಇಲ್ಲಿ ಹಿಂದಿನ ಮುಂದಿನ ಎರಡು ಅಂಶಗಳನ್ನು ಪ್ರತ್ಯಕ್ಷಗೋಚರವಾಗುವಂತೆ ತಿಳಿಸಿರುವುದರಿಂದ ಇದು ಭಾವಿಕಾಲಂಕಾರವೆನಿಸಿದೆ. ಇದನ್ನು ಪ್ರಸಾದವೆಂಬ ಗುಣವೆಂದು ಭಾವಿಸಲಿಕ್ಕಾಗುವುದಿಲ್ಲ. ಅದರಲ್ಲಿ ಹಿಂದೆ ಕಳೆದುಹೋದ ಮತ್ತು ಮುಂದೆ ಆಗಬಹುದಾದ ವಿಷಯಗಳನ್ನು ಪ್ರತ್ಯಕ್ಷಗೋಚರವಾಗುವಂತೆ ತಿಳಿಸಲಿಕ್ಕೆ ಅವಕಾಶವಿರುವುದಿಲ್ಲ. ಇಂತಹ ಅವಕಾಶವಿರುವುದರಿಂದಲೇ ಈ ಅದ್ಭುತವಿಷಯವು ಭಾವಿಕಾಲಂಕಾರವೆನಿಸಿದೆ. ಇದನ್ನು ಅದ್ಭುತರಸವೆಂದೂ ಕರೆಯಲಿಕ್ಕಾಗುವುದಿಲ್ಲ. ಅದ್ಭುತರಸವು ಶ್ರೋತೃಗಳಿಗೆ ವಿಸ್ಮಯವನ್ನುಂಟುಮಾಡುವಂತಹದು. ಭಾವಿಕಾಲಂಕಾರವಲ್ಲಾದರೋ ಹಾಗೆ ವಿಸ್ಮಯವನ್ನು ಉಂಟುಮಾಡುವ ಕಾರಣವಿರುವುದಿಲ್ಲ. ಅದ್ಭುತವಾದದ್ದನ್ನು ಪ್ರತ್ಯಕ್ಷಪಡಿಸುವ ಪ್ರಯುಕ್ತ ಇದನ್ನು ಅತಿಶಯೋಕ್ತಿಯಲ್ಲಿ ಏಕೆ ಸೇರಿಸಬಾರದು? ಅಂದರೆ ಇಲ್ಲಿ ಅತಿಶಯೋಕ್ತಿಯಲ್ಲಿರುವಂತೆ ಅಧ್ಯವಸಾಯವಿಲ್ಲದಿರುವುದರಿಂದ ಪ್ರತ್ಯೇಕವೆನ್ನಿಸಿದೆ.

ಅಪ್ರತ್ಯಕ್ಷವಾದವನ್ನು ಪ್ರತ್ಯಕ್ಷದಂತೆ ಕಾಣುವುದರಿಂದ ಇದು ಭ್ರಾಂತಿಮದಲಂಕಾರವಾಗ ಬಾರದೇ? ಅಂದರೆ ಹಿಂದೆ ಕಳೆದುಹೋದ ವಸ್ತುವನ್ನು ಹಿಂದೆ ಇದ್ದ ಹಾಗೆಯೂ, ಮುಂದೆ ಆಗಬೇಕಾದ್ದನ್ನು ಮುಂದೆ ಆಗುವ ರೀತಿಯಲ್ಲಿಯೂ ಈಗ ಪ್ರಕಾಶಪಡಿಸುವ ಪ್ರಯುಕ್ತ ಇದು ಭ್ರಾಂತಿಮದಲಂಕಾರಕ್ಕಿಂತ ಬೇರೆ ಎನಿಸಿದೆ. ಇದು ಸ್ವಭಾವೋಕ್ತಿಯೂ ಆಗ ಲಾರದು. ಅದರಲ್ಲಿ ಲೌಕಿಕವಸ್ತುವಿನ ಸೂಕ್ಷ್ಮಸ್ವಭಾವವನ್ನು ಇದ್ದದ್ದನ್ನು ಇದ್ದ ಹಾಗೆ ವರ್ಣಿಸಲಾಗುವುದು. ಇಲ್ಲಿಯಾದರೋ ಅಂತಹ ವಸ್ತುವನ್ನು ಪ್ರತ್ಯಕ್ಷವಾಗುವಂತೆ ವರ್ಣಿಸುವ ಪ್ರಯುಕ್ತ ಇದು ಅದಕ್ಕಿಂತ ಬೇರೆಯಾಗಿದೆ. ಹೀಗೆ ಅವೆಲ್ಲಕ್ಕಿಂತಲೂ ವಿಲಕ್ಷಣವಾದ ಚಮತ್ಕಾರವಿರುವುದರಿಂದ ಇದು ಸ್ವತಂತ್ರವಾಗಿ ಶೋಭಿಸುತ್ತಲಿದೆ. ಸ್ವಭಾವೋಕ್ತಿಯಲ್ಲಿರುವ ಚಮತ್ಕಾರವು ಭಾವಿಕಾಲಂಕಾರದಲ್ಲೂ ಸಂಭವಿಸಿದರೆ ಆಗ ಇವೆರಡು ಅಲಂಕಾರಗಳೂ ಸೇರುವ ಪ್ರಯುಕ್ತ ಅದನ್ನು ಸಂಕರವೆಂದು ಕರೆಯಲಾಗು ವುದು. ಮುಂದಿನ ಪದ್ಯದಲ್ಲಿ ಇದನ್ನು ಕಾಣಬಹುದು. "ಛತ್ರವಿಲ್ಲದಿದ್ದರೂ ಈ ರಾಜನು ಶ್ವೇತಛತ್ರಗಳಿಂದ ಆವೃತನಾಗಿರುವಂತೆ ಕಾಣುತ್ತಾನೆ. ಚಾಮರವಿಲ್ಲದಿದ್ದರೂ ಯಾವಾ ಗಲೂ ಶ್ವೇತಚಾಮರದಿಂದ ಇವನಿಗೆ ಶುಶ್ರೂಷೆಯಾಗುತ್ತಿರುವಂತೆ ಕಾಣುತ್ತದೆ. ಹೀಗೆ ಇವನ ಯಶೋರಾಶಿಯು ವ್ಯಾಪಿಸಿದೆ. ಆದ್ದರಿಂದಲೇ ಇವನೊಬ್ಬ ಮಹಾಪುರುಷನೆನಿ ಸಿರುವನು" ಇಲ್ಲಿ ಶ್ವೇತಛತ್ರದ ಆವರಣವಿರುವಂತೆ ಉತ್ಪ್ರೇಕ್ಷಿಸಿರುವುದರಿಂದ ಸಂಭಾವ ನೆಯ ಮೂಲಕ ಇದು ಪ್ರತ್ಯಕ್ಷದಂತೆ ಕಾಣುತ್ತದೆ. ಆದ್ದರಿಂದ ಇದು ಭಾವಿಕವೆನಿಸ ಲಾರದು. ಸಹಜವರ್ಣನೆಯ ಮೂಲಕ ಯಾವ ವಸ್ತುವು ಪ್ರತ್ಯಕ್ಷವಾಗಿ ಗೋಚರ ವಾಗುವುದೋ ಅಲ್ಲಿಯೇ ಭಾವಿಕಾಲಂಕಾರಕ್ಕೆ ಅವಕಾಶವಿರುತ್ತದೆ. ಅಂದರೆ ಪ್ರತ್ಯಕ್ಷ ದಂತೆ ತೋರುವ ವಸ್ತುವನ್ನು ವರ್ಣಿಸುವ ಕಡೆಯಲ್ಲಿ ಭಾವಿಕವಿರಲಾರದು. ಆದರೆ ಉತ್ಪ್ರೇಕ್ಷೆಯನ್ನು ಬಿಟ್ಟು ಬೇರೆ ಬಗೆಯ ವರ್ಣನದಿಂದ ಒಂದು ವಸ್ತುವನ್ನು ಪ್ರತ್ಯಕ್ಷ ಗೊಳಿಸುವುದೇ ಭಾವಿಕವೆನಿಸುತ್ತದೆ. ಆದ್ದರಿಂದ 'ಅನಾತಪತ್ರಃ' ಎಂಬ ಪದ್ಯದಲ್ಲಿ ಉತ್ಪ್ರೇಕ್ಷೆಯಿಂದಲೇ ಪ್ರತ್ಯಕ್ಷವೆನಿಸುವ ಒಂದು ವಸ್ತುವನ್ನು ವರ್ಣಿಸಿರುವುದರಿಂದ ಅದು ಭಾವಿಕವಾಗುವುದಿಲ್ಲ. 'ಆಸೀದಂಜನಂ' ಎಂಬ ಪದ್ಯದಲ್ಲಿಯಾದರೋ ಉತ್ಪ್ರೇಕ್ಷೆಯಿಲ್ಲದೆ ಸಹಜವಾದ ವರ್ಣನೆಯಿಂದ ವಸ್ತುವನ್ನು ಪ್ರತ್ಯಕ್ಷಗೊಳಿಸುವ ಪ್ರಯುಕ್ತ ಅದು ಭಾವಿಕವೆನಿಸುತ್ತದೆ.

ಇದ್ದದ್ದನ್ನು ಇದ್ದಹಾಗೆ ವರ್ಣಿಸುವುದು ಸ್ವಭಾವೋಕ್ತಿ; ಇದ್ದದ್ದನ್ನು ಹೇಗಾ ದರೂ ಪ್ರಯಾಸದಿಂದ ವರ್ಣಿಸುವುದು ಭಾವಿಕ; ಆದರೆ ಲೋಕದಲ್ಲಿ ಯಾರಲ್ಲೂ ಇಲ್ಲದ ರೀತಿಯಲ್ಲಿ ಒಬ್ಬನ ವೈಭವವನ್ನು ವರ್ಣಿಸುವುದು ಉದಾತ್ತಾಲಂಕಾರವೆನಿಸು ತ್ತದೆ. ಯಾರಲ್ಲೂ ಇಲ್ಲದಷ್ಟು ಧನಸಮೃದ್ಧಿ ಮೊದಲಾದವು ಒಬ್ಬನಲ್ಲಿ ಇರುವುದಾಗಿ ವರ್ಣಿಸುವುದರಲ್ಲಿ ಒಂದು ಬಗೆಯ ಚಮತ್ಕಾರವಿರುವುದರಿಂದ ಅದು ಉದಾತ್ತವೆನಿಸು ತ್ತದೆ. ಅಥವಾ ಮಹಾತ್ಮರ ಚರಿತ್ರೆಯನ್ನು ವರ್ಣಿಸುವಾಗ ಅದು ಪ್ರಕೃತವರ್ಣನಕ್ಕೆ ಸಾಧಕವಾಗುವುದಾದರೆ ಅದೂ ಉದಾತ್ತವೆನಿಸುವುದು. ಇದನ್ನು ಕ್ರಮವಾಗಿ ಉದಾ

ಹರಿಸುತ್ತಾನೆ. "ಯಾವ ನಗರದಲ್ಲಿ ಕ್ರೀಡಾವನವು ಮೇಘಮಂಡಲವನ್ನು ಧಿಕ್ಕರಿಸಿಯೂ, ಚಂದ್ರಿಕೆಯ ಸಂಪರ್ಕದಿಂದ ದ್ರವಿಸುತ್ತಲೂ ಇರುವ ಚಂದ್ರಕಾಂತಶಿಲೆಗಳಿಂದ ನಿರ್ಮಿಸಿದ ನೆಲಗಳ ಮೇಲೆ ಸುರಿಯುತ್ತಿರುವ ನೀರಿನಿಂದ ವಿಕಾಸಗೊಳ್ಳುತ್ತಿದೆಯೋ." ಇಲ್ಲಿ ನೀರಿನಿಂದ ಕ್ರೀಡಾವನವು ವಿಕಾಸಗೊಳ್ಳುತ್ತಿರುವುದು ಪ್ರತ್ಯಕ್ಷಗೋಚರವಾಗಿದೆ. ಲೋಕದಲ್ಲಿ ಒಂದು ಚಂದ್ರಕಾಂತಮಣಿ ಸಿಕ್ಕುವುದೂ ದುರ್ಲಭವೇ! ಆ ನಗರದಲ್ಲಿ ಮನೆಯ ನೆಲಗಳೆಲ್ಲಕ್ಕೂ ಚಂದ್ರಕಾಂತಮಣಿಗಳನ್ನು ನೆಡಲಾಗಿದೆ ಎಂದು ಲೋಕಾತೀತವಾದ ಸಮೃದ್ಧಿಯನ್ನು ತಿಳಿಸಿದ ಪ್ರಯುಕ್ತ ಇದು ಉದಾತ್ತವೆನಿಸಿದೆ. ಈಗ ಉದಾತ್ತದ ಎರಡನೆಯ ಬಗೆಯನ್ನು ಉದಾಹರಿಸುತ್ತಾನೆ. ನಾಭಿಯಿಂದ ಹುಟ್ಟಿದ ಕಮಲವೇ ಆಸನವಾಗಿರುವ ಆದ್ಯಬ್ರಹ್ಮನ ಸ್ತುತಿಗೆ ಪಾತ್ರನಾಗಿದ್ದು, ಪ್ರಳಯಕಾಲವಲ್ಲಿ ಯೋಗನಿದ್ರೆಯಲ್ಲಿ ನಿರತನಾಗಿರುವ ನಾರಾಯಣನ ಚರಿತವನ್ನು ವರ್ಣಿಸುವುದೇ ಪ್ರಕೃತವಾದ ಸಮುದ್ರವರ್ಣನಕ್ಕೆ ಅಂಗವೆನಿಸಿರುವುದರಿಂದ ಇದು ಉದ್ಭ್ರಾಂತವೆನಿಸಿದೆ.

ಈವರೆವಿಗೂ ಶಬ್ದಕ್ಕೂ ಅರ್ಥಕ್ಕೂ ಸಂಬಂಧಿಸಿದ ಅಲಂಕಾರಗಳನ್ನು ನಿರೂಪಿಸಿ ಈಗ ರಸ ಭಾವ ಮೊದಲಾದವುಗಳಿಗೆ ಸಂಬಂಧಿಸಿದ ಅಲಂಕಾರಗಳನ್ನು ನಿರೂಪಿಸಲಿಕ್ಕಾಗಿ ಮೊದಲು ಪ್ರಧಾನವೆನಿಸಿದ್ದರಿಂದ ರಸವತ್, ಪ್ರೇಯಸ್ಸು, ಊರ್ಜಸ್ವಿ, ಸಮಾಹಿತ ಎಂಬ ನಾಲ್ಕು ಅಲಂಕಾರಗಳನ್ನು ವಿವರಿಸುತ್ತಾನೆ. ರಸಭಾವಗಳೂ, ರಸಾಭಾಸಭಾವಾಭಾಸಗಳೂ, ಭಾವಶಾಂತಿಯೂ ಬೇರೊಂದು ರಸದ ದೃಷ್ಟಿಯಿಂದ ಅಪ್ರಧಾನವಾಗಿದ್ದುವಾದರೆ ಆಗ ರಸವತ್, ಪ್ರೇಯಸ್ಸು, ಊರ್ಜಸ್ವಿ, ಸಮಾಹಿತವೆಂಬ ನಾಲ್ಕು ಅಲಂಕಾರಗಳು ಕ್ರಮವಾಗಿ ಆಗುತ್ತವೆ. ಒಂದು ರಸವು ಮತ್ತೊಂದು ರಸಕ್ಕೋ ಭಾವಕ್ಕೋ ಅಂಗವಾಗಿರುವುದೇ ರಸವದಲಂಕಾರವೆನಿಸುವುದು. ಒಂದು ಭಾವವು ಮತ್ತೊಂದು ಭಾವಕ್ಕೋ ರಸಕ್ಕೋ ಅಂಗವಾಗಿರುವುದೇ ಪ್ರೇಯೋಲಂಕಾರವೆನಿಸುವುದು. ರಸಾಭಾಸವಾಗಲೀ ಭಾವಾಭಾಸವಾಗಲೀ ಒಂದು ರಸಕ್ಕೋ ಭಾವಕ್ಕೋ ಅಂಗವಾಗಿರುವುದೇ ಊರ್ಜಸ್ವಿ ಎಂಬ ಅಲಂಕಾರವೆನಿಸುವುದು. ಒಂದು ಭಾವದ ಶಮನವು ಬೇರೊಂದು ಭಾವಕ್ಕಾಗಲೀ ರಸಕ್ಕಾಗಲೀ ಅಂಗವಾಗಿರುವುದೇ ಸಮಾಹಿತವೆಂಬ ಅಲಂಕಾರವೆನಿಸುವುದು. ಇವುಗಳಲ್ಲಿ ಒಂದು ರಸವು ಮತ್ತೊಂದು ರಸಕ್ಕೆ ಅಂಗವಾಗಿರುವುದಕ್ಕೆ 'ಅಯಂಸ ರಶನೋತ್ಕರ್ಷೀ' ಎಂಬುದು ಉದಾಹರಣವಾಗುತ್ತದೆ. ಇಲ್ಲಿ ಶೃಂಗಾರರಸವು ಕರುಣರಸಕ್ಕೆ ಅಂಗವಾಗಿರುವುದರಿಂದ ಇದು ರಸವದಲಂಕಾರವೆನಿಸಿದೆ. ಒಂದು ಭಾವವು ಬೇರೊಂದು ಭಾವಕ್ಕೆ ಅಂಗವಾಗಿರುವುದರಿಂದ ಪ್ರೇಯೋಲಂಕಾರವೆನಿಸುವುದು. ಸಖಿಯು ಸಮೀಪದಲ್ಲಿ ವಿರಹಿಯು ಹೇಳುವ ಮಾತಿದು. "ಕಣ್ಣುಗುಡ್ಡೆಗಳನ್ನು ಕೊಂಚ ಮುಚ್ಚಿಕೊಂಡು ಮೆಲ್ಲಮೆಲ್ಲಗೆ ತೆರೆಯುತ್ತಿದ್ದು, ನನ್ನ ಕುತ್ತಿಗೆಯನ್ನು ಆಲಿಂಗಿಸುವುದರಲ್ಲಿ ತೋಳುಗಳು ಕೊಂಚ ಶಿಥಿಲವಾಗಿದ್ದು, ಸುರತಪರಿಶ್ರಮದಿಂದ ಹುಟ್ಟಿದ ಬೆವರಿನ ಹನಿಗಳಿಂದ ಕೆನ್ನೆಗಳೆರಡೂ ತುಂಬಿಕೊಂಡಿರಲು ಆ ಪ್ರಿಯತಮೆಯನ್ನು ಸ್ಮರಿಸುತ್ತಿರುವ ನನ್ನ ಅಂತಃಕರಣವು ಶಾಂತಿಯನ್ನು ಹೊಂದುವುದಿಲ್ಲ." ಇಲ್ಲಿ ಸಂಭೋಗ

ಶೃಂಗಾರವು ಸ್ಮರಣವೆಂಬ ಭಾವಕ್ಕೆ ಅಂಗವೆನಿಸಿದೆ. ಆ ಸ್ಮರಣವೂ ಸಹ ಪ್ರವಾಸವೆಂಬ ವಿಪ್ರಲಂಭಶೃಂಗಾರಕ್ಕೆ ಅಂಗವೆನಿಸಿದೆ. ಹೀಗೆ ಭಾವವು ರಸಕ್ಕೆ ಅಂಗವಾಗಿರುವುದರಿಂದ ಇಲ್ಲಿ ಪ್ರೇಯೋಽಲಂಕಾರವಿದೆ. ಸಂಭೋಗಶೃಂಗಾರವು ಕರುಣಭಾವಕ್ಕೆ ಅಂಗವಾಗಿರುವುದರಿಂದ ಇಲ್ಲಿ ರಸವದಲಂಕಾರವೂ ಇದೆ. ಇವೆರಡಕ್ಕೂ ಅಂಗಾಂಗಿಭಾವದಿಂದ ಸಾಂಕರ್ಯವಿದೆ.

ರಸಾಭಾಸಭಾವಾಭಾಸಗಳು ಬೇರೊಂದು ರಸಕ್ಕೋ ಭಾವಕ್ಕೋ ಅಂಗವಾಗಿದ್ದರೆ ಆಗ ತೋರುವ ಊರ್ಜಸ್ವಿ ಎಂಬ ಅಲಂಕಾರವನ್ನು ವಿವರಿಸುತ್ತಾನೆ. ರಸಭಾವಗಳು ಅನುಚಿತಪ್ರಸಂಗದಲ್ಲಿ ಪ್ರವರ್ತಿಸಿದಾಗಲೂ ಚಮತ್ಕಾರವಿರುವುದಾದರೆ ಅದರಲ್ಲೂ ಒಂದು ಬಗೆಯ ಬಲವಿರುವ ಪ್ರಯುಕ್ತ ಅದು ಊರ್ಜಸ್ವಿ ಎಂಬ ಅಲಂಕಾರವೆನಿಸುವುದು. "ಎಲೈ ರಾಜನೇ, ಕಾಡಿನಲ್ಲಿ ಬೇಡರು ನೃತ್ಯಗೀತಾದಿಕಲೆಗಳಲ್ಲಿ ಆಸಕ್ತರಾಗಿದ್ದರೂ ತಮ್ಮ ಸ್ತ್ರೀಯರನ್ನು ತೊರೆದು ನಿನ್ನ ಶತ್ರುಸ್ತ್ರೀಯರಲ್ಲಿ ಸುರತವನ್ನಾಚರಿಸುತ್ತಾರೆ." ಇಲ್ಲಿ ಶೃಂಗಾರರಸವು ಪರಸ್ತ್ರೀವಿಷಯಕವಾದ್ದರಿಂದ ಆಭಾಸವೆನಿಸಿದ್ದು ರಾಜವಿಷಯಕವಾದ ರತಿಗೆ ಅಂಗವಾಗಿದೆ. ಹೀಗೆಯೇ ಭಾವಾಭಾಸವು ಬೇರೊಂದು ರಸಕ್ಕೆ ಅಂಗವಾಗಿದ್ದರೂ ಊರ್ಜಸ್ವಿ ಎಂಬ ಅಲಂಕಾರವಾಗುವುದು.

ಒಂದು ಭಾವವು ಕೊನೆಗೊಳ್ಳುವುದೇ ಭಾವಪ್ರಶಮವೆನಿಸುವುದು. ಅದು ಬೇರೊಂದು ಭಾವಕ್ಕೆ ಅಂಗವಾಗಿದ್ದರೆ ಸಮಾಹಿತವೆನಿಸುವುದು. ಸಮಾಹಿತವೆಂದರೆ ಭಾವಸಮಾಪ್ತಿ ಎಂದು ತಿಳಿಯಬೇಕು. ಇದನ್ನು ಉದಾಹರಿಸುತ್ತಾನೆ. "ಎಲೈ ರಾಜನೇ, ನಿನ್ನ ಶತ್ರುಗಳಿಗೆ ನಿರಂತರವೂ ಕತ್ತಿಗಳನ್ನು ಅಲ್ಲಾಡಿಸುವುದರಿಂದಲೂ, ಹುಬ್ಬುಗಂಟುಗಳಿಂದಲೂ ನಿನ್ನ ಪಕ್ಷವನ್ನು ಉದ್ದೇಶಿಸಿ ಗರ್ಜಿಸುವುದರಿಂದಲೂ ಮದವು ಬಾರಿ ಬಾರಿಗೂ ಕಂಡುಬರುತ್ತದೆ; ಆದರೆ ಅವರು ನಿನ್ನ ಎದುರಿಗೆ ನಿಂತಾಗ ಆ ಮದವು ಒಂದು ಕ್ಷಣಕಾಲದಲ್ಲಿಯೇ ಕಣ್ಮರೆಯಾಗುತ್ತದೆ." ಇಲ್ಲಿ ಮದವೆಂಬ ಭಾವವು ಕೊನೆಗೊಳ್ಳುವುದರಿಂದ ಇದು ಭಾವಪ್ರಶಮವೆನಿಸಿದೆ. ಇದು ರಾಜವಿಷಯಕವಾದ ರತಿಭಾವಕ್ಕೆ ಅಂಗವೆನಿಸಿದೆ. ಅದ್ದರಿಂದಲೇ ಇದು ಸಮಾಹಿತಾಲಂಕಾರವೆನಿಸಿದೆ.

ಯಾವುದಾದರೊಂದು ಭಾವವು ಆವಿರ್ಭವಿಸಿ ಬೇರೊಂದು ಭಾವಕ್ಕೆ ಅಂಗವಾಗಿರುವುದೇ ಭಾವೋದಯವೆನಿಸುವುದು. ಎರಡು ಭಾವಗಳು ಪರಸ್ಪರವಾಗಿ ಸೇರಿ ಬೇರೊಂದು ಭಾವಕ್ಕೆ ಅಂಗವಾಗಿದ್ದರೆ ಭಾವಸಂಧ್ಯಲಂಕಾರವೆನಿಸುವುದು. ಕೆಲವು ಭಾವಗಳು ಸೇರಿಕೊಂಡು ಬೇರೊಂದು ಭಾವಕ್ಕೆ ಅಂಗವಾಗಿದ್ದರೆ ಭಾವಶಬಲಾಲಂಕಾರವೆನಿಸುವುದು. "ಎಲೈ ರಾಜನೇ, ಸ್ನೇಹಿತರೊಡನೆ ಮಧುಪಾನದಲ್ಲಿ ಪ್ರವರ್ತಿಸಿದ ನಿನ್ನ ಶತ್ರುಗಳು ಯಾರಿಂದಲೋ ನಿನ್ನ ಹೆಸರನ್ನು ಕೇಳಿ ಭಯವಿಹ್ವಲವಾದ ಅವಸ್ಥೆಯನ್ನು ಹೊಂದಿದರು." ಇಲ್ಲಿ ತ್ರಾಸವೆಂಬ ವ್ಯಭಿಚಾರಿಭಾವವು ವೈರಿಪ್ರಪಂಚದಲ್ಲಿ ಆವಿರ್ಭವಿಸಿ ರಾಜವಿಷಯಕವಾದ ರತಿಭಾವಕ್ಕೆ ಅಂಗವೆನಿಸಿರುವುದರಿಂದ ಇದು ಭಾವೋದಯವೆನಿಸಿದೆ. ಈಗ ಭಾವಸಂಧಿಯನ್ನು ಉದಾಹರಿಸುತ್ತಾನೆ. "ಮುಂದಿನ ಜನ್ಮದಲ್ಲಿ ಪತಿ

ಯುವ ಪತಿಯ (ಶಿವನ) ಆಲಿಂಗನದಲ್ಲಿ ಉತ್ಸುಕಿಯಾಗಿದ್ದು, ಸಖಿಯು ಎದುರಿಗೆ ಇದ್ದುದರಿಂದ ಲಜ್ಜೆಗೊಂಡ ಪಾರ್ವತಿಯು ನಮ್ಮನ್ನು ರಕ್ಷಿಸಲಿ" ಇಲ್ಲಿ ಔತ್ಸುಕ್ಯಲಜ್ಜೆಗಳೆರಡೂ ಸೇರಿರುವ ಪ್ರಯುಕ್ತ ಇದು ಭಾವಸಂಧಿ ಎನಿಸಿದೆ. ಇದು ದೇವತಾವಿಷಯಕವಾದ ರತಿಗೆ ಅಂಗವಾಗಿರುವುದರಿಂದ ಭಾವಸಂಧ್ಯಲಂಕಾರವೆನಿಸಿದೆ. ಯುದ್ಧದಲ್ಲಿ ಸೋತು ಕಾಡಿಗೆ ಹೋಗಿರುವ ಶತ್ರುರಾಜನ ಮಗಳೊಡನೆ ಒಬ್ಬ ವನೇಚರಯುವಕನ ಸಂವಾದವನ್ನು ತೋರಿಸಿ ಒಬ್ಬ ಆತ್ಮೀಯನಾದ ರಾಜನನ್ನು ಇಲ್ಲಿ ಸ್ತುತಿಸಲಾಗಿದೆ. "ಎಲೈ ಚಪಲಸ್ವಭಾವದವನೇ, ನಾವಿಬ್ಬರೂ ಹೀಗೆ ನಿರ್ಜನಸ್ಥಾನದಲ್ಲಿ ಸೇರಿರುವುದನ್ನು ಯಾರಾದರೂ ಕಾಣಬಹುದು, ಕಂಡರೆ ದುಷ್ಪ್ರವೃತ್ತಿಯನ್ನು ಊಹಿಸಿಯಾರು" ಹೀಗೆ ಕನ್ಯೆ ಹೇಳುವಳು. ಇಲ್ಲಿ ಕನ್ಯೆಯ ಶಂಕೆ ತೋರುವುದು. 'ಎಲೈ ಚಪಲನೇ, ನನ್ನೊಡನೆ ತಂದೆಯ ಮನೆಗೆ ಹೋಗು" ಹೀಗೆ ಕನ್ಯೆಯೇ ಹೇಳುವಳು. ಇಲ್ಲಿ ಚಪಲ ಎಂದು ನಿಕೃಷ್ಟವಾಗಿ ಸಂಬೋಧಿಸಿರುವುದರಿಂದ ಕನ್ಯೆಯ ಔದ್ಧತ್ಯವು ತೋರುವ ಪ್ರಯುಕ್ತ ಅವಳ ಮೇಲೆ ವನೇಚರನ ಅಸೂಯೆ ತೋರುವುದು. "ಇಲ್ಲಿಂದ ಹೊರಗೆ ಹೋಗಲು ನಿನಗೆ ಏಕೆ ಇಷ್ಟು ಸಂಭ್ರಮ ? ಇಲ್ಲಿ ನೋಡಲು ಯಾರೊಬ್ಬರೂ ಬರುವಂತಿಲ್ಲ" ಎಂದು ವನೇಚರನು ಹೇಳುವನು. ಇಲ್ಲಿ ವನೇಚರನ ಧೃತಿಭಾವವು ವ್ಯಕ್ತವಾಗುವುದು. "ನಾನು ಇನ್ನೂ ಋತುಮತಿಯಾಗದ ಹುಡುಗಿ. ಆದ್ದರಿಂದ ಜನರು ನನ್ನ ಬಗ್ಗೆ ಸಂಶಯ ಪಡುವುದು ಸಹಜ." ಇಲ್ಲಿ ಕನ್ಯೆಗೆ ತಾನು ಕುಮಾರಿ ಎಂಬ ಸ್ಮೃತಿಯು ತೋರುವುದು. "ಹಣ್ಣು ಹೂವುಗಳನ್ನು ಕೊಯ್ಯಲು ಬಹಳ ಬಳಲಿರುವುದಾದರೆ ನನ್ನ ಶರೀರದಲ್ಲಿ ನಿನ್ನ ಹಸ್ತದ ಹೊರೆಯನ್ನು ಇಳಿಸು" ಎಂದು ವನೇಚರನು ಹೇಳುವನು. ಇಲ್ಲಿ ರಾಜಕನ್ಯೆಯ ಶ್ರಮವು ತೋರುವುದು. ಹೆ ಹೆ ಹಾ ಎಂಬಲ್ಲಿ ಕನ್ಯೆಯ ದೈನ್ಯವು ತೋರುತ್ತದೆ. ನಾನು ಉಚ್ಚಜಾತಿಯ ರಾಜಕನ್ಯೆಯಾಗಿದ್ದು ಈಗ ಹೇಗೆ ವ್ಯವಹರಿಸಲೆಂದು ಹೇಳಿದ್ದರಿಂದ ಇಲ್ಲಿ ದೈನ್ಯವು ತೋರುವುದು. "ರಾಜಕನ್ಯೆಯೊಡನೆ ವನೇಚರನ ಸಮಾಗಮವು ನಿರುದ್ಧವೇ ಆಗಿದೆ ಎಂದು ವನೇಚರನು ಹೇಳುವ ಮಾತಿನಿಂದ ವಿರೋಧವು ತೋರುತ್ತದೆ. ಹೀಗೆ ಹೇಳಿ ವನೇಚರನು ಗುಪ್ತವಾಗಿ ಹೊರಡಲು ಕನ್ಯೆ "ಎಲೈ ವನೇಚರನೇ ಎಲ್ಲಿರುವೆ. ಎಲ್ಲಿಗೆ ಹೋದೆ" ಎಂದು ಹೇಳುತ್ತಾಳೆ. ಇದರಿಂದ ಕನ್ಯೆಯ ಔತ್ಸುಕ್ಯವು ತೋರುವುದು. "ಎಲೈ ಮಹಾರಾಜನೇ, ಅರಣ್ಯದಲ್ಲಿ ವಾಸಿಸುವ ನಿನ್ನ ಶತ್ರುವಿನ ಕನ್ಯೆಯು ಹಣ್ಣು ಚಿಗುರುಗಳನ್ನು ತರುತ್ತ ಒಬ್ಬ ವನೇಚರ ಯುವಕನಿಗೆ ಹೀಗೆ ಹೇಳುತ್ತಾಳೆ" ಎಂಬಲ್ಲಿ ಶಂಕೆ, ಅಸೂಯೆ, ಧೃತಿ, ಸ್ಮೃತಿ, ಶ್ರಮ, ದೈನ್ಯ, ವಿರೋಧ, ಔತ್ಸುಕ್ಯ ಎಂಬ ಭಾವಗಳು ಸೇರಿಕೊಂಡು ರಾಜವಿಷಯಕವಾದ ರತಿಗೆ ಅಂಗವೆನಿಸಿದ್ದರಿಂದ ಇದು ಭಾವಶಬಲಾಲಂಕಾರವೆನಿಸುವುದು.

ಇಲ್ಲಿ ಕೆಲವರು "ಶಬ್ದವನ್ನೂ ಅರ್ಥವನ್ನೂ ಅಲಂಕರಿಸುವಾಗ ರಸಭಾವಾದಿಗಳು ಪೋಷಕವಾಗುತ್ತವೆ. ಹೀಗೆ ಇವು ಶಬ್ದ ಮತ್ತು ಅರ್ಥಗಳಲ್ಲಿರುವ ವೈಚಿತ್ರ್ಯಗಳೇ ಹೊರತು ಅಲಂಕಾರಗಳೇ ಅಲ್ಲವೆನ್ನಲು" ಎಂದು ಹೇಳುತ್ತಾರೆ. ಪ್ರಾಚೀನರಾದರು "ಪ್ರಧಾನ

ವೆನಿಸಿದ ರಸಭಾವಗಳಿಗೆ ಹೇಗಾದರೂ ಪುಷ್ಟಿಯನ್ನುಂಟುಮಾಡುವುದರಿಂದ ರಸವದಲಂಕಾರವೇ ಮೊದಲಾದವುಗಳಿಗೆ ಅಲಂಕಾರವೆಂಬ ಹೆಸರು ಗೌಣವಾಗಿ ಬಂದಿದೆ. ಇದಕ್ಕೆ ಪ್ರಾಚೀನರ ಸಮ್ಮತಿಯೂ ಇದೆ" ಎಂದು ಹೇಳುತ್ತಾರೆ. ಬೇರೆಯವರು "ರಸಭಾವಗಳಿಗೆ ಪೋಷಕವಾಗಿರುವುದರಿಂದ ಇವನ್ನು ಮುಖ್ಯವಾಗಿಯೇ ರಸವದಾದ್ಯಲಂಕಾರವೆಂದು ಕರೆಯಲಾಗಿದೆ. ರೂಪಕ ಮೊದಲಾದ ಕಡೆಗಳಲ್ಲಿ ಇವು ಇದ್ದರೆ ಇವಕ್ಕೆ ರೂಪಕ ಮೊದಲಾದವು ಅಂಗವೆನಿಸಿರುತ್ತವೆ. ಇವು ಅರ್ಥವನ್ನು ಪೋಷಿಸಿಸತಕ್ಕನ್ತು ಅಜಾಗಲಸ್ತನನಂತೆ ವ್ಯರ್ಥವೆನಿಸುವುದು." ಎಂದು ಹೇಳುತ್ತಾರೆ. ಅಭಿಯುಕ್ತರಾದರೋ "ಅಂಗವೆನಿಸಿದ ರಸಭಾವಗಳನ್ನು ಪ್ರಕಾಶಪಡಿಸುವ ಶಬ್ದ ಅರ್ಥಗಳಿಗೆ ಪೋಷಕವಾಗಿರುವ ರಸಾದ್ಯಲಂಕಾರಗಳು ಪ್ರಧಾನವಾದ ರಸಭಾವಗಳಿಗೆ ಶಬ್ದಾರ್ಥಗಳ ಮೂಲಕವೇ ಪೋಷಕವಾಗುವ ಪ್ರಯುಕ್ತ ಅವಕ್ಕೆ ಅಲಂಕಾರವೆಂಬ ಹೆಸರು ಸಲ್ಲುತ್ತದೆ" ಎಂದು ಹೇಳುತ್ತಾರೆ. ಸಮಾಸೋಕ್ತಿಯಲ್ಲಿ ನಾಯಿಕಾದಿಗಳ ವ್ಯವಹಾರವಷ್ಟೇ ಅಲಂಕಾರಕ್ಕೆ ವಿಷಯವೆನಿಸಿರುವುದು. ಆಸ್ವಾದರೂಪವಾದ ರಸವು ಬೇರೊಂದು ರಸಕ್ಕೆ ಪೋಷಕವಾಗಿಲ್ಲದ್ದರಿಂದ ಅದು ಅಲಂಕಾರಕ್ಕೆ ವಿಷಯವೆನಿಸಲಾರದು. ಇದರಿಂದ ಪ್ರಧಾನವೆನಿಸಿದ ರಸಾದಿಗಳು ಪೋಷಕವೆನಿಸಿದ್ದರಿಂದ ಅವು ಅಲಂಕಾರವೆನಿಸಬಲ್ಲವೆಂದು ಹೇಳಿದಂತಾಯಿತು. ಆದ್ದರಿಂದಲೇ ಧ್ವನಿಕಾರನು "ಒಂದು ಕಾವ್ಯದಲ್ಲಿ ರಸವಾಗಲೀ ವಾಕ್ಯಾರ್ಥವಾಗಲೀ ಪ್ರಧಾನವಾಗಿದ್ದರೆ ಅಲ್ಲಿ ರಸಾದ್ಯಲಂಕಾರಗಳಿರುತ್ತವೆ" ಎಂದು ಹೇಳಿರುವನು. ಆದ್ದರಿಂದ ಧ್ವನಿಕಾರನ ಮತದಲ್ಲೂ ರಸವದಾದ್ಯಲಂಕಾರಗಳಿಗೆ ಆ ಹೆಸರು ಸಲ್ಲುವುದೆಂದು ಸೂಚಿತವಾಯಿತು. ರಸಾದಿಗಳಿಗೆ ಶೋಭೆಯನ್ನುಂಟುಮಾಡದೆ ಪೋಷಕವಾಗಿರುವುದರಿಂದಲೇ ಅವನ್ನು ಅಲಂಕಾರವೆಂದು ಒಪ್ಪುವುದಾದರೆ ಆಗ ಅಭಿಧೆ ಮೊದಲಾದ ಶಕ್ತಿಗಳಿಂದ ರಸಭಾವಗಳನ್ನು ತಿಳಿಸುವಾಗಲೂ ಇವನ್ನು ಅಲಂಕಾರವೆಂದು ಭಾವಿಸಬೇಕಾದೀತು. ಇದರಿಂದ "ರಸಾದಿಗಳು ಪ್ರಧಾನವಾಗಿದ್ದರೆ ರಸವದಾದ್ಯಲಂಕಾರಗಳೆನಿಸುತ್ತವೆ. ಅವು ಪೋಷಕವಾಗಿದ್ದರೆ ಉದಾತ್ತಲಂಕಾರದ ಎರಡನೆಯ ಬಗೆ ಎನಿಸುತ್ತವೆ" ಎಂದು ಕೆಲವರು ಹೇಳಿದ್ದು ತಿರಸ್ಕೃತವಾಯಿತು.

ಯದ್ಯೇತ ಏವಾಲಂಕಾರಾಃ ಪರಸ್ಪರವಿಮಿಶ್ರಿತಾಃ ।
ತದಾ ಪೃಥಗಲಂಕಾರೌ ಸಂಸೃಷ್ಟಿಸ್ಸಂಕರಸ್ತಥಾ ॥

ಯಥಾ ಲೌಕಿಕಾಲಂಕಾರಾಣಾಮಪಿ ಪರಸ್ಪರಮಿಶ್ರಣೇ ಪೃಥಕ್ ಚಾರುತ್ವೇನ ಪೃಥಗಲಂಕಾರತ್ವಮ್. ತಥೋಕ್ತರೂಪಾಣಾಂ ಕಾವ್ಯಾಲಂಕಾರಾಣಾಮಪಿ ಪರಸ್ಪರಮಿಶ್ರತ್ವೇ ಸಂಸೃಷ್ಟಿಸಂಕರಾಖ್ಯೌ ಪೃಥಗಲಂಕಾರೌ. ತತ್ರ—

ಮಿಥೋಽನಪೇಕ್ಷಯೈತೇಷಾಂ ಸ್ಥಿತಿಃ ಸಂಸೃಷ್ಟಿರುಚ್ಯತೇ ।

ಏತೇಷಾಂ ಶಬ್ದಾರ್ಥಾಲಂಕಾರಾಣಾಮ್. ಯಥಾ—

ದೇವಃ ಪಾಯಾದಪಾಯಾನ್ನಃ ಸ್ಮೇರೇಂದೀವರಲೋಚನಃ ।
ಸಂಸಾರಧ್ವಾಂತವಿಧ್ವಂಸಹಂಸಃ ಕಂಸನಿಷೂದನಃ ॥

ಅತ್ರ ಪಾಯಾದಪಾಯಾತ್, ಇತಿ ಯಮಕಮ್. ಸಂಸಾರ ಇತ್ಯಾದೌ ಛಾನುಪ್ರಾಸ ಇತಿ ಶಬ್ದಾಲಂಕಾರಯೋಃ ಸಂಸೃಷ್ಟಿಃ. ದ್ವಿತೀಯೇ ಪಾದೇ ಉಪಮಾ, ದ್ವಿತೀಯಾರ್ಧೇ ರೂಪಕಮಿತ್ಯರ್ಥಾಲಂಕಾರಯೋಃ ಸಂಸೃಷ್ಟಿಃ. ಏವಮುಭಯೋಃ ಸ್ಥಿತತ್ವಾತ್ ಶಬ್ದಾರ್ಥಾಲಂಕಾರಸಂಸೃಷ್ಟಿಃ.

ಅಂಗಾಂಗಿತ್ವೇಽಲಂಕೃತೀನಾಂ ತದ್ವದೇಕಾಶ್ರಯಸ್ಥಿತೌ ।
ಸಂದಿಗ್ಧತ್ವೇ ಚ ಭವತಿ ಸಂಕರಸ್ತ್ರಿವಿಧಃ ಪುನಃ ॥

ಅಂಗಾಂಗಿಭಾವೋ ಯಥಾ—ಆಕೃಷ್ಟಿವೇಗವಿಗಲದ್ಭುಜಗೇಂದ್ರಭೋಗ
ನಿರ್ಮೋಕಪಟ್ಟಪರಿವೇಷ್ಟನಯಾಂಬುರಾಶೇಃ ।
ಮಂಥವ್ಯಥಾವ್ಯುಪಶಮಾರ್ಥಮಿವಾಶು ಯಸ್ಯ ॥
ಮಂದಾಕಿನೀ ಚಿರಮವೇಷ್ಟತ ಪಾದಮೂಲೇ ॥

ಅತ್ರ ನಿರ್ಮೋಕಪಟ್ಟಾಪಹ್ನವೇನ ಮಂದಾಕಿನ್ಯಾ ಆರೋಪ ಇತ್ಯಪಹ್ನುತಿಃ ಸಾ ಚ ಮಂದಾಕಿನ್ಯಾ ವಸ್ತುವೃತ್ತೇನ ಯತ್ ಪಾದಮೂಲವೇಷ್ಟನಂ ತಚ್ಚರಣವೇಷ್ಟನಮಿತಿ ಶ್ಲೇಷಮುತ್ಥಾಪಯತೀತಿ ತಸ್ಯಾಂಗಮ್. ಶ್ಲೇಷಶ್ಚ ಪಾದಮೂಲವೇಷ್ಟನಮೇವ ಚರಣಮೂಲವೇಷ್ಟನಮಿತ್ಯತಿಶಯೋಕ್ತೇರಂಗಮ್. ಅತಿಶಯೋಕ್ತೇಶ್ಚ 'ಮಂಥವ್ಯಥಾವ್ಯುಪಶಮಾರ್ಥಮಿವ' ಇತ್ಯುತ್ಪ್ರೇಕ್ಷಾಯಾ ಅಂಗಮ್. ಉತ್ಪ್ರೇಕ್ಷಾ ಚ ಅಂಬುರಾಶಿಮಂದಾಕಿನ್ಯೋರ್ನಾಯಕನಾಯಿಕಾವ್ಯವಹಾರಂ ಗಮಯತೀತಿ ಸಮಾಸೋಕ್ತೇರಂಗಮ್.

ಯಥಾ ವಾ—ಅನುರಾಗವತೀ ಸಂಧ್ಯಾ ದಿವಸಸ್ತತ್ಪುರಸ್ಸರಃ ।
ಅಹೋ ದೈವಗತಿಶ್ಚಿತ್ರಾ ತಥಾಪಿ ನ ಸಮಾಗಮಃ ॥

ಅತ್ರ ಸಮಾಸೋಕ್ತಿರ್ವಿಶೇಷೋಕ್ತೇರಂಗಮ್. ಸಂದೇಹಸಂಕರೋ ಯಥಾ—
ಇದಮಾಭಾತಿ ಗಗನೇ ಭಿಂದಾನಂ ಸಂತತಂ ತಮಃ ।
ಅಮಂದನಯನಾನಂದಕರಂ ಮಂಡಲಮೈಂದವಮ್ ॥

ಅತ್ರ ಕಿಂ ಮುಖಸ್ಯ ಚಂದ್ರತಯಾಧ್ಯವಸಾನಾತ್ ಅತಿಶಯೋಕ್ತಿಃ? ಉತ ಇದಮಿತಿ ಮುಖಂ ನಿರ್ದಿಶ್ಯ ಚಂದ್ರತ್ವಾರೋಪಾದ್ರೂಪಕಮ್ ? ಅಥವಾ ಇದಮಿತಿ ಮುಖಸ್ಯ ಚಂದ್ರಮಂಡಲಸ್ಯ ಚ ದ್ವಯೋರಪಿ ಪ್ರಕೃತಯೋರೇಕಧರ್ಮಾಭಿಸಂಬಂಧಾತ್ತುಲ್ಯಯೋಗಿತಾ ? ಅಹೋಸ್ವಿತ್ ಚಂದ್ರಸ್ಯಾಪ್ರಕೃತತ್ವಾದ್ದೀಪಕಮ್ ? ಕಿಂ ವಾ ವಿಶೇಷಣಸಾಮ್ಯಾದಪ್ರಸ್ತುತಸ್ಯ ಮುಖಸ್ಯ ಗಮ್ಯತ್ವಾತ್ ಸಮಾಸೋಕ್ತಿಃ? ಯದ್ವಾ ಅಪ್ರಸ್ತುತಚಂದ್ರವರ್ಣನಯಾ ಪ್ರಸ್ತುತಸ್ಯ ಮುಖಸ್ಯ ಅವಗತಿರಿತ್ಯಪ್ರಸ್ತುತಪ್ರಶಂಸಾ? ಯದ್ವಾ ಮನ್ಮಥೋದ್ದೀಪನಃ ಕಾಲಃ ಸ್ವಕಾರ್ಯಭೂತಚಂದ್ರವರ್ಣನಾಮುಖೇನ ವರ್ಣಿತ ಇತಿ ಪರ್ಯಾಯೋಕ್ತಿರಿತಿ ಬಹೂನಾಮಲಂಕಾರಾಣಾಂ ಸಂದೇಹಸಂಕರಃ.

ಯಥಾ ವಾ 'ಮುಖಚಂದ್ರಂ ಪಶ್ಯಾಮಿ' ಇತ್ಯತ್ರ ಕಿಂ ಮುಖಂ ಚಂದ್ರ ಇವ ಇತ್ಯುಪಮಾ ? ಉತ ಚಂದ್ರ ಏವೇತಿ ರೂಪಕಮ್ ? ಇತಿ ಸಂದೇಹಃ. ಸಾಧಕ

ಬಾಧಕಯೋರ್ದ್ವಯೋರೇಕತರಸ್ಯ ಸದ್ಭಾವೇನ ಪುನಃ ಸಂದೇಹಃ. ಯಥಾ "ಮುಖ-
ಚಂದ್ರಂ ಚುಂಬತಿ" ಇತ್ಯತ್ರ ಚುಂಬನಂ ಮುಖಸ್ಯಾನುಕೂಲಮಿತ್ಯುಪಮಾಯಾಃ
ಸಾಧಕಮ್, ಚಂದ್ರಸ್ಯ ತು ಪ್ರತಿಕೂಲಮಿತಿ ರೂಪಕಸ್ಯ ಬಾಧಕಮ್. "ಮುಖ
ಚಂದ್ರಃ ಪ್ರಕಾಶತೇ" ಇತ್ಯತ್ರ ಪ್ರಕಾಶಾಖ್ಯೋ ಧರ್ಮೋ ರೂಪಕಸ್ಯ ಸಾಧಕೋ
ಮುಖೇ ಉಪಚರಿತತ್ವೇನ ಸಂಭವತೀತಿ ನೋಪಮಾಬಾಧಕಃ.

ರಾಜನಾರಾಯಣಂ ಲಕ್ಷ್ಮೀಸ್ತ್ವಾಮಾಲಿಂಗತಿ ನಿರ್ಭರಮ್ ।

ಅತ್ರ ಯೋಷಿತ ಆಲಿಂಗನಂ ನಾಯಕಸ್ಯ ಸದೃಶೇ ನೋಚಿತಮಿತಿ ಲಕ್ಷ್ಮ್ಯಾ ಆ-
ಲಿಂಗನಸ್ಯ ರಾಜನ್ಯಸಂಭವಾತ್ ಉಪಮಾಬಾಧಕಮ್, ನಾರಾಯಣೇ ಸಂಭವಾ-
ದ್ರೂಪಕಮ್. ಏವಂ-ವದನಾಂಬುಜಮೇಣಾಕ್ಷ್ಯಾ ಭಾತಿ ಚಂಚಲಲೋಚನಮ್।

ಅತ್ರ ವದನೇ ಲೋಚನಸ್ಯ ಸಂಭವಾತ್ ಉಪಮಾಯಾಃ ಸಾಧಕತಾ, ಅಂಬುಜೇ
ಚಾಸಂಭವಾತ್ ರೂಪಕಸ್ಯ ಬಾಧಕತಾ.

"ಏವಂ ಸುಂದರಂ ವದನಾಂಬುಜಮ್" ಇತ್ಯಾದೌ ಸಾಧಾರಣಧರ್ಮಪ್ರಯೋಗೇ
'ಉಪಮಿತಂ ವ್ಯಾಘ್ರಾದಿಭಿಃ ಸಾಮಾನ್ಯಾಪ್ರಯೋಗೇ' ಇತಿ ವಚನಾದುಪಮಾ-
ಸಮಾಸೋ ನ ಸಂಭವತೀತಿ ಉಪಮಾಯಾಃ ಬಾಧಕಃ. ಏವಂ ಚಾತ್ರ ಮಯೂರ-
ವ್ಯಂಸಕಾದಿತ್ವಾತ್ ರೂಪಕಸಮಾಸ ಏವ. ಏಕಾಶ್ರಯಾನುಪ್ರವೇಶೋ ಯಥಾ ಮಮ-

ಕಟಾಕ್ಷೇಣಾಪೀಷತ್ ಕ್ಷಣಮಪಿ ನಿರೀಕ್ಷೇತ ಯದಿ ಸಾ
ತದಾನಂದಃ ಸಾಂದ್ರಃ ಸ್ಫುರತಿ ಪಿಹಿತಾಶೇಷವಿಷಯಃ ।
ಸರೋಮಾಂಚೋದಂಚತ್ಕುಚಕಲಶನಿರ್ಭಿನ್ನವಸನಃ
ಪರೀರಂಭಾರಂಭಃ ಕ ಇವ ಭವಿತಾಽಂಭೋರುಹದೃಶಃ ॥

ಅತ್ರ 'ಕಟಾಕ್ಷೇಣಾಪೀಷತ್ ಕ್ಷಣಮಪಿ' ಇತ್ಯತ್ರ ಛೇಕಾನುಪ್ರಾಸಸ್ಯ 'ನಿರೀ-
ಕ್ಷೇತ' ಇತ್ಯತ್ರ ಕ್ಷಕಾರಮಾದಾಯ ವೃತ್ತ್ಯನುಪ್ರಾಸಸ್ಯ ಚೈಕಾಶ್ರಯೇಽನು-
ಪ್ರವೇಶಃ. ಏವಂ ಚಾತ್ರೈವಾನುಪ್ರಾಸಾರ್ಥಾಪತ್ತ್ಯಲಂಕಾರಯೋಃ.

ಯಥಾ ವಾ 'ಸಂಸಾರಧ್ವಾಂತವಿಧ್ವಂಸ' ಇತ್ಯತ್ರ ರೂಪಕಾನುಪ್ರಾಸಯೋಃ.
ಯಥಾ ವಾ 'ಕುರಂಗಕಾ ರವಕಾರಣತಾಂ ಯಯುಃ' ಇತ್ಯತ್ರ 'ರಂಗಕಾ ರವಕಾ'
ಇತ್ಯೇಕಸ್ಯ, 'ವಕಾರ ವಕಾರ' ಇತ್ಯೇಕಸ್ಮಿನ್ ಯಮಕಯೋಃ. ಯಥಾ ವಾ—

ಅಭಿನವಪಯೋಧರಸಿತೇಷು ಪಥಿಕಶ್ಯಾಮಾಯಿತೇಷು ದಿವಸೇಷು ।
ಸ್ಫುಟತಿ ಪ್ರಸಾರಿತಗ್ರೀವಾಣಾಂ ನೃತ್ಯಂ ಮಯೂರವೃಂದಾನಾಮ್ ॥

ಅತ್ರ 'ಪಥಿಕಶ್ಯಾಮಾಯಿತೇಷು' ಇತ್ಯೇಕಾಶ್ರಯೇ ಪಥಿಕಶ್ಯಾಮಾಯಿತೇಷ್ವಿ-
ತ್ಯುಪಮಾ ಪಥಿಕಸಾಮಾಜಿಕೇಷ್ವಿತಿ ರೂಪಕಂ ಪ್ರವಿಷ್ಟಮಿತಿ.

ಇತಿ ಶ್ರೀವಿಶ್ವನಾಥಕವಿರಾಜಕೃತೌ ಸಾಹಿತ್ಯದರ್ಪಣೇ ದಶಮಃ ಪರಿಚ್ಛೇದಃ.

ಈವರೆವಿಗೂ ಹೇಳಿರುವ ಈ ಅಲಂಕಾರಗಳೇ ಪರಸ್ಪರ ಕಲೆತುಕೊಂಡಿದ್ದರೆ ಆಗ
ಸಂಸೃಷ್ಟಿಸಂಕರಗಳೆಂಬ ಬೇರೆ ಎರಡು ಅಲಂಕಾರಗಳಾಗುತ್ತವೆ. ಇಟಕ ಕುಂತಲ

ಮೊದಲಾದ ಅಲಂಕಾರಗಳು ಪರಸ್ಪರವಾಗಿ ಸೇರಿದರೆ ಒಂದು ಬಗೆಯ ಸೌಂದರ್ಯ ಹಿರುವ ಪ್ರಯುಕ್ತ ಅದೇ ಒಂದು ಹೊಸ ಬಗೆಯ ಅಲಂಕಾರವೆನಿಸುವುದು. ಹಾಗೆಯೇ ಕಾವ್ಯದಲ್ಲಿ ತಿಳಿಸಿರುವ ಅಲಂಕಾರಗಳು ಪರಸ್ಪರ ಸೇರಿದರೆ ಸಂಸೃಷ್ಟಿಸಂಕರಗಳೆನಿಸುತ್ತವೆ. ಎರಡಾಗಲೀ ಅನೇಕವಾಗಲೀ ಅಲಂಕಾರಗಳು ಪರಸ್ಪರ ಅವಲಂಬನವಿಲ್ಲದೆ ಒಂದೇ ಪದ್ಯದಲ್ಲಿ ಸೇರುವುದೇ ಸಂಸೃಷ್ಟಿ ಎನಿಸುವುದು. "ವಿಕಸಿತವಾದ ಕಮಲದಂತೆ ನೇತ್ರಗಳಿದ್ದು ಸಂಸಾರವೆಂಬ ಕತ್ತಲೆಯನ್ನು ತೊಲಗಿಸುವುದರಲ್ಲಿ ಸೂರ್ಯನೆನಿಸಿ, ಕಂಸನನ್ನು ಕೊಂದ ಶ್ರೀಕೃಷ್ಣನು ನಮ್ಮನ್ನು ಕಾಪಾಡಲಿ"ಇಲ್ಲಿ ಪಾಯಾದಪಾಯಾತ್' ಪಾಯಾ ಎಂಬುದನ್ನು ಎರಡುವೇಳೆ ಹೇಳಿರುವುದರಿಂದ ಎಂದು ಯಮಕವೆನಿಸಿದೆ. ಸಂಸಾರಧ್ವಾಂತವಿಧ್ವಂಸ ಎಂಬಲ್ಲಿ ಧ್ವಕಾರವನ್ನು ಎರಡುಸಾರಿ ಪ್ರಯೋಗಿಸಿದ್ದರಿಂದ ಛೇಕಾನುಪ್ರಾಸವಿದೆ. ಇವೆರಡೂ ಇಲ್ಲಿ ಸೇರಿರುವುದರಿಂದ ಇದು ಸಂಸೃಷ್ಟ್ಯಲಂಕಾರವೆನಿಸಿದೆ. ಎರಡನೆಯ ಪಾದದಲ್ಲಿ ಉಪಮೆಯೂ, ದ್ವಿತೀಯಾರ್ಧದಲ್ಲಿ ರೂಪಕವೂ ಇರುವುದರಿಂದ ಅಲ್ಲಿ ಅರ್ಥಾಲಂಕಾರಗಳ ಸಂಸೃಷ್ಟಿ ಇದೆ. ಹೀಗೆ ಎರಡೂ ಇಲ್ಲಿ ಸೇರಿರುವುದರಿಂದ ಇದು ಶಬ್ದಾಲಂಕಾರಗಳ ಸಂಸೃಷ್ಟಿ ಎನಿಸಿದೆ.

ಈಗ ಸಂಕರಾಲಂಕಾರದ ಸ್ವರೂಪವನ್ನು ತಿಳಿಸುತ್ತಾನೆ. ಎರಡು ಮೂರು ಅಲಂಕಾರಗಳಿಗೆ ಪರಸ್ಪರ ಅಪೇಕ್ಷೆಯಿಂದ ಅಂಗಾಗಿಭಾವವಿದ್ದರೂ (ಒಂದು ಅಂಗಿ ಎನಿಸಿ ಮತ್ತೊಂದು ಅದಕ್ಕೆ ಅಂಗವಾಗಿದರೂ) ಅದರಂತೆಯೇ ಅವು ಒಂದೇ ಪಾದ ಅಥವಾ ಪದ ಹೀಗೆ ಒಂದೇ ಆಶ್ರಯದಲ್ಲಿದ್ದರೂ. ಹಾಗೆಯೇ ಇಲ್ಲಿಯ ಅಲಂಕಾರವು ಅದೋ ಇದೋ ಎಂಬ ಸಂಶಯಕ್ಕೆ ಅವು ವಿಷಯವಾಗಿದ್ದರೂ ಅಂತಹ ಕಡೆಯಲ್ಲಿ ಅವುಗಳ ಸಂಯೋಗವು ಸಂಕರಾಲಂಕಾರವೆನಿಸುವುದು. ಇದರಿಂದ ಸಂಕರವೂ ಸಹ ಸಂಸೃಷ್ಟಿಯಂತೆಯೇ ಮೂರು ಬಗೆಯಾಗುವುದೆಂದು ತಿಳಿಯಬರುತ್ತದೆ. ಅಂಗಾಂಗಿಭಾವದಿಂದ ತೋರುವ ಸಂಕರವನ್ನು ಉದಾಹರಿಸುತ್ತಾನೆ. ಸಮುದ್ರವನ್ನು ಇಲ್ಲಿ ವರ್ಣಿಸಲಾಗಿದೆ. "ದೇವತೆಗಳು ಸಮುದ್ರವನ್ನು ಕಡೆಯುವ ವೇಗದಿಂದ ಹೊರಗೆ ಬಿದ್ದ ಸರ್ಪಶರೀರದ ಪೊರೆ ಎಂಬ ಒಟ್ಟೆಯನ್ನು ಸುತ್ತಿಕೊಳ್ಳುವ ನೆಪದಿಂದ ಗಂಗಾ ನದಿಯು ಸಮುದ್ರಮಥನಕಾಲದಲ್ಲಿ ಹುಟ್ಟಿದ ವ್ಯಥೆಯನ್ನು ಪರಿಹರಿಸಲಿಕ್ಕೋ ಏನೋ ಎಂಬಂತೆ ಬೇಗನೆ ಸಮುದ್ರದ ಒಂದು ಪ್ರದೇಶದಲ್ಲಿ ಪ್ರವೇಶಿಸಿ ಅದನ್ನು ಅಲೆಗಳೆಂಬ ಕೈಗಳಿಂದ ಗಟ್ಟಿಯಾಗಿ ಹಿಡಿದುಕೊಂಡಳು" ಇಲ್ಲಿ ಗಂಗೆಯಲ್ಲಿ ಹಾವಿನ ಪೊರೆ ಎಂಬ ವಸ್ತ್ರದ ನೆಪದಿಂದ ಆರೋಪಮಾಡಿರುವ ಪ್ರಯುಕ್ತ ಇದು ಅಪಹ್ನುತ್ಯಲಂಕಾರವೆನಿಸಿದೆ. ಇಲ್ಲಿ ಅಪಹ್ನುತಿಯನ್ನು ತಿಳಿಸುವ ಪದವಿಲ್ಲದ್ದರಿಂದ ಇದು ಅಪಹ್ನುತಿಧ್ವನಿ ಎನಿಸಿದೆ. ಅದೂ ಸಹ ಇಲ್ಲಿ ಶ್ಲೇಷವನ್ನು ಪ್ರಕಾಶಪಡಿಸುತ್ತ ಅದಕ್ಕೆ ಅಂಗವಾಗಿದೆ. ಗಂಗೆಯು ವಾಸ್ತವವಾಗಿ ಸಮುದ್ರದ ತಳವನ್ನು ಪ್ರವೇಶಿಸುವಳು. ಅದರಿಂದ ಇಲ್ಲಿ ಪತಿವ್ರತೆಯೊಬ್ಬಳು ಪತಿಯ ಪಾದವನ್ನು ಹಿಡಿಯುವಳೆಂಬ ಅರ್ಥವು ಶ್ಲೇಷದಿಂದ ತೋರುತ್ತದೆ. ಗಂಗೆಯು ಸಮುದ್ರದ ಒಳಭಾಗವನ್ನು ಪ್ರವೇಶಿಸುವುದೇ ಪತಿವ್ರತೆಯು ಪತಿಯ ಪಾದ

ಗಳೆಲ್ಲ ಸಮಸ್ಮರೀಡಂಭರಾಯಿತು ಎಂಬ ಅತಿಶಯೋಕ್ತಿಯು ಇಲ್ಲಿ ತೋರಿ ಅದಕ್ಕೆ ಕ್ಷೇಪವು ಅಂಗವೆನಿಸಿದೆ. ಈ ಅತಿಶಯೋಕ್ತಿಯೂ ಸಹ "ಸಮುದ್ರಕ್ಕೆ ಮಥನದಿಂದ ಉಂಟಾದ ವ್ಯಥೆಯನ್ನು ಪರಿಹರಿಸಲಿಕ್ಕೋ ಏನೋ ಎಂಬಂತೆ" ಎಂಬಲ್ಲಿ ತೋರುವ ಫಲೋತ್ಪ್ರೇಕ್ಷೆಗೆ ಅಂಗವೆನಿಸಿದೆ. ಈ ಉತ್ಪ್ರೇಕ್ಷೆಯೂ ಸಹ ಸಮುದ್ರ ಮತ್ತು ಗಂಗೆ ಇವರಲ್ಲಿ ನಾಯಿಕಾನಾಯಕವ್ಯವಹಾರವನ್ನು ವ್ಯಂಗ್ಯವಾಗಿ ತಿಳಿಸುವ ಸಮಾಸೋಕ್ತಿಗೆ ಅಂಗವಾಗಿದೆ. ಹೀಗೆ ಅನೇಕ ಅಲಂಕಾರಗಳಿಗೆ ಪರಸ್ಪರವಾಗಿ ಅಂಗಾಂಗಿಭಾವವಿರುವ ಪ್ರಯುಕ್ತ ಇದು ಸಂಕರವೆನಿಸಿದೆ.

ಬೇರೊಂದು ಉದಾಹರಣವನ್ನು ತಿಳಿಸುತ್ತಾನೆ. "ಸಾಯಂಕಾಲವು (ನಾಯಿಕೆಯೊಬ್ಬಳು) ಕನ್ನೈದಿಲೆಯಂತೆ ಕೆಂಪು ಬಣ್ಣದಿಂದ ಕೂಡಿದೆ. (ಸಂಭೋಗದ ಇಚ್ಛೆಯುಳ್ಳವಳಿರುವಳು). ದಿವಸವೂ ಸಹ (ನಾಯಕನೂ ಸಹ) ಸಾಯಂಕಾಲಕ್ಕೆ (ನಾಯಿಕೆಗೆ ಅನುಕೂಲವಾಗಿ ಅನುಸರಿಸಿಕೊಂಡು ಹೋಗುತ್ತಿದೆ. (ಸಮೀಪದಲ್ಲಿಯೇ ಇರುವನು) ಆವೆರಡಕ್ಕೂ ಸಮಾಗಮವಾಗದೇ ಇರುವುದೇ ಆಶ್ಚರ್ಯ. ಬ್ರಹ್ಮನ ವ್ಯವಹಾರವೇ ಹೀಗೆ ವಿಚಿತ್ರವಾದುದು." ಸಂಭೋಗಕ್ಕಾಗಿ ನಾಯಕನು ನಾಯಿಕೆಯ ಬಳಿಯಲ್ಲಿ ಇರುವುದೇ ಇಲ್ಲಿ ಕಾರಣವೆನಿಸಿದೆ. ಇದು ಸಾಕಷ್ಟು ಇದ್ದರೂ ಸಹ ಸಮಾಗಮವೆಂಬ ಕಾರ್ಯವು ಆಗದೇ ಇರುವ ಪ್ರಯುಕ್ತ ಇದು ವಿಶೇಷೋಕ್ತಿ ಎನಿಸಿದೆ. ಸಂಧ್ಯೆ ದಿವಸ ಇವುಗಳಲ್ಲಿರುವ ಸ್ತ್ರೀಲಿಂಗ ಪುಲ್ಲಿಂಗಗಳ ಸಾಮ್ಯದಿಂದ ನಾಯಿಕಾನಾಯಕರ ವ್ಯವಹಾರವು ತೋರುವ ಪ್ರಯುಕ್ತ ಸಮಾಸೋಕ್ತಿಯೂ ಇದೆ. ಇದು ವಿಶೇಷೋಕ್ತಿಯನ್ನು ಪ್ರಕಾಶಪಡಿಸುವುದರಿಂದ ಅದಕ್ಕೆ ಅಂಗವೆನಿಸಿದೆ. ಈಗ ಸಂದೇಹಸಂಕರಾಲಂಕಾರವನ್ನು ಉದಾಹರಿಸುತ್ತಾನೆ. "ಯಾವಾಗಲೂ ಕತ್ತಲೆಯನ್ನು ತೊಲಗಿಸುತ್ತಲೂ ಹಾಗೆಯೇ ಕಣ್ಣುಗಳಿಗೆ ಹೆಚ್ಚು ಆನಂದವನ್ನು ಹುಟ್ಟಿಸುತ್ತಲೂ ಇಲ್ಲಿ ಕಾಣುತ್ತಿರುವ ಈ ಚಂದ್ರಮಂಡಲವು ಭೂತಲದಲ್ಲಿ ಶೋಭಿಸುತ್ತಿದೆ" ಇಲ್ಲಿ ಮುಖವನ್ನು ಚಂದ್ರನೆಂದು ನಿಶ್ಚಯಿಸಿ ತಿಳಿಸಿರುವ ಪ್ರಯುಕ್ತ ಇದು ಅತಿಶಯೋಕ್ತಿಯೋ? ಅಥವಾ ಇದಂ ಎಂಬುವ ಪದದಿಂದ ಮುಖವನ್ನು ತಿಳಿಸಿ ಅದರಲ್ಲಿಯೇ ಚಂದ್ರನನ್ನು ಆರೋಪಿಸುವುದರಿಂದ ಇದು ರೂಪಕವೋ? ಅಥವಾ ಇದಂ ಎಂಬಲ್ಲಿ ಮುಖ ಮತ್ತು ಚಂದ್ರಮಂಡಲ ಎಂಬ ಎರಡು ಪ್ರಕೃತವಸ್ತುಗಳಿಗೆ ಒಂದೇ ಧರ್ಮದ ಸಂಬಂಧವನ್ನು ತಿಳಿಸಿರುವುದರಿಂದ ಇದು ತುಲ್ಯಯೋಗಿತೆಯೋ? ಅಥವಾ ಚಂದ್ರನು ಇಲ್ಲಿ ಅಪ್ರಕೃತನೆನಿಸಿದ್ದರಿಂದ ಪ್ರಕೃತವೆನಿಸಿದ ಮುಖಕ್ಕೂ ಅಪ್ರಕೃತಚಂದ್ರನಿಗೂ ಏಕಧರ್ಮಾನ್ವಯವಿರುವ ಪ್ರಯುಕ್ತ ಇದು ದೀಪಕವಾಗಬಹುದೋ? ಅಥವಾ ವಿಶೇಷಣಸಾಮ್ಯದಿಂದ ಚಂದ್ರಮಂಡಲದಲ್ಲಿ ಮುಖದ ವ್ಯವಹಾರವು ವ್ಯಂಗ್ಯವಾಗಿ ತೋರುವುದರಿಂದ ಇದು ಸಮಾಸೋಕ್ತಿಯೋ? ಅಪ್ರಕೃತವಾದ ಚಂದ್ರನ ವರ್ಣನೆಯಿಂದ ಪ್ರಕೃತವೆನಿಸಿದ ಮುಖವು ತಿಳಿಯಬರುವ ಪ್ರಯುಕ್ತ ಇದು ಅಪ್ರಸ್ತುತಪ್ರಶಂಸೆಯೋ? ಅಥವಾ ಕಾಮವನ್ನು ಹೆಚ್ಚಿಸುವ ಕಾರಣ [illegible] ಅದರ ಕಾರ್ಯವೇ ಆದ ಚಂದ್ರನನ್ನು ವರ್ಣಿಸುವ

ಮೂಲಕ ಇಲ್ಲಿ ತಿಳಿಸಿರುವ ಪ್ರಯುಕ್ತ ಇದು ಪರ್ಯಾಯೋಕ್ತಿ ಇರಬಹುದೋ? ಹೀಗೆ ಅನೇಕ ಅಲಂಕಾರಗಳು ಇಲ್ಲಿ ತೋರುತ್ತಿರುವಾಗ ಯಾವುದೊಂದನ್ನು ನಿರ್ಧರಿಸಲಿಕ್ಕೂ ಆಗದೆ ಸಂದೇಹವಿರುವುದರಿಂದ ಇದು ಸಂದೇಹಸಂಕರಾಲಂಕಾರವೆನಿಸಿದೆ. 'ಮುಖಚಂದ್ರಂ ಪಶ್ಯಾಮಿ' ಎಂಬಲ್ಲಿ ಮುಖವು ಚಂದ್ರನಂತೆ ಇದೆ ಎಂದು ಹೇಳಬಹುದಾದ ಪ್ರಯುಕ್ತ ಇದು ಉಪಮೆಯಾಗುತ್ತದೆಯೋ ಅಥವಾ ಮುಖವು ಚಂದ್ರನೇ ಆಗಿದೆ ಎಂದು ಹೇಳಬಹುದಾದ್ದರಿಂದ ಇದು ರೂಪಕವೇ ಆಗುತ್ತದೆಯೋ ಎಂಬ ಸಂದೇಹ ಉಂಟಾಗುತ್ತದೆ. ಹೀಗೆ ಸಮಾಸವಿರುವ ಕಡೆ ಮಾತ್ರ ಉಪಮಾರೂಪಕಗಳಿಗೆ ಸಂದೇಹಸಂಕರವಿರುತ್ತದೆಯೋ ಅಥವಾ ಬೇರೆ ಕಡೆಗಳಲ್ಲೂ ಇರಬಹುದೋ ಎಂದರೆ ಬೇರೆ ಕಡೆಯಲ್ಲೂ ಉಂಟೆಂಬುದನ್ನು ತಿಳಿಸುತ್ತಾನೆ. ಎರಡು ಅಲಂಕಾರಗಳಲ್ಲಿ ಒಂದು ಮತ್ತೊಂದನ್ನು ಪ್ರತಿಪಾದಿಸಿದರೂ ಅಥವಾ ಬಾಧಿಸಿದರೂ ಇವೆರಡರಲ್ಲಿ ಒಂದು ಅಂಶ ವಿದ್ದರೂ ಅಲ್ಲಿ ಸಂದೇಹಸಂಕರವನ್ನು ಹೇಳಲಿಕ್ಕೂ ಸಾಧ್ಯವಾಗುತ್ತದೆ. 'ಮುಖಚಂದ್ರಂ ಚುಂಬತಿ' ಮುಖಚಂದ್ರನನ್ನು ಚುಂಬಿಸುತ್ತಾನೆ ಎಂಬಲ್ಲಿ ಚುಂಬನವು ಮುಖಕ್ಕೆ ಅನುಕೂಲವಾಗಿರುವ ಪ್ರಯುಕ್ತ ಉಪಮೆಗೆ ಸಾಧಕವಾಗಿದೆ; ಆದರೆ ಚಂದ್ರನಲ್ಲಿ ಚುಂಬನವು ಸಂಭವಿಸದೇ ಇರುವ ಪ್ರಯುಕ್ತ ಅವನಿಗೆ ಪ್ರತಿಕೂಲವಾಗಿದೆ. ಚಂದ್ರನು ಆಕಾಶದಲ್ಲಿ ಬಹುದೂರದಲ್ಲಿರುವುದರಿಂದ ಭೂಮಿಯಲ್ಲಿರುವವನಿಗೆ ಚಂದ್ರನನ್ನು ಚುಂಬಿಸಲಿಕ್ಕಾಗುವುದಿಲ್ಲ. ಆದ್ದರಿಂದ ಇಲ್ಲಿ ಚುಂಬನವು ರೂಪಕಕ್ಕೆ ಬಾಧಕವೆನಿಸಿದೆ. ಮುಖಚಂದ್ರನು ಪ್ರಕಾಶಿಸುತ್ತಾನೆ ಎಂಬಲ್ಲಿ ಪ್ರಕಾಶವೆಂಬ ಧರ್ಮವು ರೂಪಕಕ್ಕೆ ಸಾಧಕವಾಗಿದೆ. ಅದು ಚಂದ್ರನಲ್ಲಿ ಪ್ರಧಾನವಾಗಿ ಸಂಭವಿಸಿದರೂ ಮುಖದಲ್ಲಿ ಉಪಚಾರದ ಮೂಲಕ ತೋರುವುದರಿಂದ ಉಪಮೆಗೆ ಬಾಧಕವಾಗಿಲ್ಲ. ಹೀಗೆ ಮುಖಚಂದ್ರಂ ಎಂಬಲ್ಲಿ ಸಾಧಕಬಾಧಕಗಳೆರಡೂ ಇವೆ. ಇವೆರಡರಲ್ಲಿ ಒಂದು ಮಾತ್ರವೇ ಇರುವುದಕ್ಕೆ ಮುಖಚಂದ್ರ ಎಂಬುದು ಉದಾಹರಣವಾಗುತ್ತದೆ. "ರಾಜನಾರಾಯಣನೆನಿಸಿದ ನಿನ್ನನ್ನು ಲಕ್ಷ್ಮಿಯು ಗಾಢವಾಗಿ ಆಲಿಂಗಿಸುತ್ತಾಳೆ" ಇಲ್ಲಿ ನಾಯಿಕೆಯು ಆಲಿಂಗನವು ನಾಯಕನಿಗೆ ಸ್ಥಾನಮಾನಗಳಲ್ಲಿ ಸದೃಶನೆನಿಸಿದ ಪರಪುರುಷನೊಡನೆ ಸಂಭವಿಸಬಹುದು. ಆದರೆ ಲಕ್ಷ್ಮಿಯ ಆಲಿಂಗನವು ಉಪಮೆಗೆ ಬಾಧಕವಾಗಿದೆ. ನಾರಾಯಣನಲ್ಲಿ ಅಂತಹ ಆಲಿಂಗನವು ಸಂಭವಿಸುವುದರಿಂದ ಇದು ರೂಪಕವಾಗುತ್ತದೆ. "ಚಂಚಲವಾದ ನೇತ್ರಗಳಿರುವ ನಾಯಿಕೆಯ ಮುಖಕಮಲವು ಪ್ರಕಾಶಿಸುತ್ತದೆ" ಎಂಬಲ್ಲಿ ಮುಖದಲ್ಲಿ ನೇತ್ರಗಳಿವೆ ಎಂಬುದು ಸಂಭವಿಸುವುದರಿಂದ ಇದು ಉಪಮೆಗೆ ಸಾಧಕವಾಗಿದೆ. ಕಮಲದಲ್ಲಿ ನೇತ್ರಗಳಿರುವ ಸಂಭವವಿಲ್ಲದ್ದರಿಂದ ಇದು ರೂಪಕಕ್ಕೆ ಬಾಧಕವಾಗಿದೆ. 'ಸುಂದರವಾದ ಮುಖಕಮಲ' ಎಂಬಲ್ಲಿ 'ಸುಂದರ' ಎಂಬ ಸಾಧಾರಣ ಧರ್ಮವನ್ನು ಪ್ರಯೋಗಿಸಿರುವುದರಿಂದ 'ಉಪಮಿತಂ ವ್ಯಾಘ್ರಾದಿಭಿಃ ಸಾಮಾನ್ಯಾಪ್ರಯೋಗೇ' ಎಂಬಲ್ಲಿ ವಿಧಿಸಿರುವ ಉಪಮಿತಸಮಾಸವು [illegible] ಇದು ಉಪಮೆಗೆ ಬಾಧಕವೆನಿಸಿದೆ. ಆದ್ದರಿಂದ ಇಲ್ಲಿ [illegible] ನಾ [illegible] ದಿಂದ ರೂಪಕವನ್ನೇ ಹೇಳಬೇಕು.

ಒಂದೇ ಬಗೆಯ ಪದ ಅಥವಾ ಪಾದದ ಆಶ್ರಯದಲ್ಲಿ ಅನೇಕ ಅಲಂಕಾರಗಳಿರು ವುದೇ ಏಕಾಶ್ರಯಾನುಪ್ರವೇಶಸಂಕರವೆನಿಸುವುದು. ಅದನ್ನು ಇಲ್ಲಿ ಉದಾಹರಿಸುತ್ತಾನೆ. ಒಬ್ಬ ಕುಮಾರಿಯನ್ನು ನೋಡಿ ಒಬ್ಬನು ಪ್ರೀತಿಸಿ ಹೇಳುತ್ತಾನೆ. "ಆ ನಾಯಿಕೆಯು ಓರೆನೋಟದಿಂದ ಒಂದೇ ಕ್ಷಣಕಾಲ ನೋಡಿದರೂ ಆಗ ಮನಸ್ಸಿಗೆ ಹಿರಿದೂ ವಿಶೇಷವೂ ಆದ ಆನಂದವುಂಟಾಗುತ್ತದೆ. ಆದರೆ ಕಾಮಾವೇಶದಿಂದ ರೋಮಾಂಚಗೊಂಡು ದಪ್ಪವಾಗಿರುವ ಕಮಲಾಕ್ಷಿಯ ಕುಚಗಳಿಂದ ಸೀರೆಯ ಸೆರಗು ಕೆಳಗೆ ಬಿದ್ದಾಗ ಆಲಿಂಗನ ವನ್ನು ಮಾಡಿದರೆ ಆಗ ಎಂತಹ ಆನಂದವಾಗುವುದೋ ಕಾಣೆ!" ಇಲ್ಲಿ 'ಕಟಾಕ್ಷೇಣಾ ಪೀಷತ್ ಕ್ಷಣಮಪಿ' ಎಂಬಲ್ಲಿ ಛೇಕಾನುಪ್ರಾಸವೂ, 'ನಿರೀಕ್ಷೇತ' ಎಂಬಲ್ಲಿ ಕ್ಷಕಾರ ವನ್ನು ಗಮನಿಸಿದರೆ ವೃತ್ತ್ಯನುಪ್ರಾಸವೂ, ಒಂದೇ ಪಾದದ ಆಶ್ರಯದಲ್ಲಿರುವ ಪ್ರಯುಕ್ತ ಇದು ಏಕಾಶ್ರಯಾನುಪ್ರವೇಶಸಂಕರವೆನಿಸಿದೆ. ಇಲ್ಲಿಯೇ ಅನುಪ್ರಾಸ ಗಳೆರಡರ ಜೊತೆಗೆ ಅರ್ಥಾಪತ್ತ್ಯಲಂಕಾರವೂ ಇದೆ. ಕಟಾಕ್ಷದಿಂದ ಒಂದು ಕ್ಷಣಕಾಲ ನೋಡಿದರೇ ಎಷ್ಟೊಂದು ಆನಂದವಾಗುತ್ತದೆ' ಎಂಬುದರಿಂದ 'ಆಕೆಯು ಪೂರ್ಣದೃಷ್ಟಿ ಯಿಂದ ನೋಡಿದರೆ ಎಂತಹ ಆನಂದ ಉಂಟಾದೀತೋ' ಎಂಬ ಅರ್ಥವು ತೋರಿ ಬರುವುದರಿಂದ ಇಲ್ಲಿ ಅರ್ಥಾಪತ್ತಿಯೂ ಇದೆ. ಅದಕ್ಕೂ ಅನುಪ್ರಾಸಕ್ಕೂ ಇಲ್ಲಿ ಏಕಾ ಶ್ರಯಾನುಪ್ರವೇಶಸಾಂಕರ್ಯವನ್ನು ಹೇಳಬಹುದು ಸಂಸಾರಧ್ವಾಂತವಿಧ್ವಂಸ ಎಂಬಲ್ಲಿ ರೂಪಕ ಅನುಪ್ರಾಸಗಳಿಗೆ ಸಾಂಕರ್ಯವಿದೆ. ಒಂದೇ ಪದವೆಂಬ ಒಂದೇ ಆಶ್ರಯವಲ್ಲಿ ಒಂದೇ ಬಗೆಯ ಅನೇಕ ಅಲಂಕಾರಗಳು ಸೇರಿರುವುದನ್ನು ಉದಾಹರಿಸು ತ್ತಾನೆ. "ಕುರಬಕವೆಂಬ ಪುಷ್ಪಗಳು ದುಂಬಿಗಳಿಗೆ ಶಬ್ದ ಮಾಡಲಿಕ್ಕೆ ಅವಕಾಶವನ್ನು ಕಲ್ಪಿಸಿದವು" ಎಂಬಲ್ಲಿ ರವಕಾ, ರವಕಾ, ಎಂಬಲ್ಲಿ ಒಂದು ಯಮಕವೂ, ವಕಾರ ವಕಾರ ಎಂಬಲ್ಲಿ ಬೇರೊಂದು ಯಮಕವೂ ಒಂದೇ ಪಾದದಲ್ಲಿ ಸೇರಿವೆ. ಗಾಥಾಸಪ್ತ ಶತಿಯ ಪದ್ಯ ಒಂದರಲ್ಲಿ ಉಪಮೆ ಮತ್ತು ರೂಪಕಗಳೆರಡು ಸೇರಿರುವುದನ್ನು ಉದಾ ಹರಿಸುತ್ತಾನೆ: "ಹೊಸದಾಗಿ ಕಾಣುವ ಮೇಘಗಳ ಗರ್ಜನೆಯಿಂದ ಕೂಡಿದ್ದು, ಪಥಿ ಕರಿಗೆ ಕಾಮವೇದನೆಯಿಂದ ಕತ್ತಲೆಯಾಗಿ ಕಾಣುವ ವರ್ಷಾಕಾಲದ ದಿವಸಗಳಲ್ಲಿ ಕುತ್ತಿಗೆಯನ್ನು ಮುಂದಕ್ಕೆ ಚಾಚಿಕೊಂಡು ನವಿಲುಗಳ ಸಮೂಹಗಳು ಮಾಡುತ್ತಿರುವ ನರ್ತನವು ಉತ್ಸವವಂತೆ ಕಾಣುತ್ತದೆ." ಇಲ್ಲಿ 'ಪಥಿಕಶ್ಯಾಮಾಯಿತೇಷು' ಎಂಬಲ್ಲಿ ಪಥಿಕ ರಂತೆ ಕಲುಷಿತವಾಗಿರುವ ದಿವಸಗಳು ಎಂದು ಹೇಳಬಹುದಾದ್ದರಿಂದ ಉಪಮೆಯೂ, ದಿವಸಗಳು ಪಥಿಕರೆಂಬ ಸಾಮಾಜಿಕರಿಂದ ಕಲುಷಿತವಾಗಿದ್ದುವೆಂದು ಹೇಳಬಹುದಾದ್ದ ರಿಂದ ರೂಪಕವೂ ಒಂದೇ ಪದದ ಆಶ್ರಯದಲ್ಲಿ ಪ್ರವೇಶಿಸಿರುವ ಪ್ರಯುಕ್ತ ಇಲ್ಲಿಯೂ ಏಕಾಶ್ರಯಾನುಪ್ರವೇಶ ಸಾಂಕರ್ಯವನ್ನೇ ಹೇಳಬೇಕು.

ಇಲ್ಲಿಗೆ ಸಾಹಿತ್ಯದರ್ಪಣದ ಅನುವಾದವು ಮುಗಿಯಿತು.

## ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯರ
## ಇತರ ಗ್ರಂಥಗಳು

---

1. ಶಕ್ತಿವಿಶಿಷ್ಟಾದ್ವೈತದರ್ಶನಂ (ಸಂಸ್ಕೃತ)
2. ಶಕ್ತಿವಿಶಿಷ್ಟಾದ್ವೈತದರ್ಶನ (ಕನ್ನಡ)
3. ಶ್ರೀಕರಭಾಷ್ಯ I ಭಾಗ
4. ಶ್ರೀಕರಭಾಷ್ಯ II ಭಾಗ
5. ಕನ್ನಡ ಕ್ರಿಯಾಸಾರ (ವಿಚಾರಭಾಗ)
6. ರೇಣುಕಪರಂಜ್ಯೋತಿ
7. ಶ್ರಿ ಗುರುಸಾರ್ವಾಡೇಶ್ವರಸ್ವಾಮಿ
8. ಕನ್ನಡ ರಸಗಂಗಾಧರ
9. ಶ್ವೇತಾಶ್ವತರೋಪನಿಷದ್ವೀರಶೈವಭಾಷ್ಯಂ
10. ಶರಣಗೀತಾ
11. ಕನ್ನಡ ಅರ್ಥಶಾಸ್ತ್ರ (ವಿಶ್ವವಿದ್ಯಾನಿಲಯಪ್ರಕಟನೆ)
12. ಭಗವದ್ಗೀತಾವೀರಶೈವಭಾಷ್ಯಂ (ಸಂಸ್ಕೃತ)
13. ಭಗವದ್ಗೀತಾವೀರಶೈವಭಾಷ್ಯ (ಕನ್ನಡ)
14. ಕುವಲಯಾನಂದ
15. ಬಸವಗೀತಾ (ಬಸವವಚನಗಳ ಸಂಸ್ಕೃತಪದ್ಯ ಆಂಗ್ಲಾನುವಾದ)
16. ವೀರಶೈವಧರ್ಮ
17. ಶೂನ್ಯಪೀಠದ ಪ್ರಭಾವ
18. ಪ್ರಸಾದಜೀವನ

### ಪ್ರಸಾರಂಗಪ್ರಕಟನೆಗಳು

ಶಕ್ತಿವಿಶಿಷ್ಟಾದ್ವೈತವೇದಾಂತ
ಅಣ್ಣನಆದರ್ಶ
ಮಾನವ ಮತ್ತು ಪ್ರಕೃತಿ
ಶಕ್ತಿವಿಕಾಸ
ಷಟ್ಸ್ಥಲಸಿದ್ಧಾಂತ
ಅಲ್ಲಮಪ್ರಭು
ಗೀತಾಮಾತೆ